

ಮೈಸೂರು ವಿಶ್ವವಿದ್ಯಾನಿಲಯ



ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ



ಮೊದಲನೆಯ ಸಂಪುಟ

ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ನಿರೂಪಿಸುವ ಹಲವು ಗ್ರಂಥಗಳು ಈವರೆಗೆ ಪ್ರಕಟವಾಗಿದ್ದರೂ, ಅವುಗಳಿಗೆ ಬಗೆಬಗೆಯ ಸೀಮಿತಗಳಿವೆ. ಮುಖ್ಯವಾಗಿ ಸಾಹಿತ್ಯದ ಪ್ರಾಚೀನತೆ ಹರವುಗಳ ಎದುರಿನಲ್ಲಿ ಈ ಚರಿತ್ರೆಗಳು ಸಂಕ್ಷೇಪವಾದವು; ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ ಒದಗುವ ತೊಡಕುಗಳ ಕಾರಣದಿಂದ ಅಪರಿಪೂರ್ಣವಾದವು. ಆದುದರಿಂದ ಸಮಗ್ರವಾದ ಒಂದು ಸಾಹಿತ್ಯ ಚರಿತ್ರೆ ಕನ್ನಡದ ಬಹುದಿನಗಳ ಅಗತ್ಯವಾಗಿತ್ತು. ಇಂಥದೊಂದು ಕೃತಿಯ ನಿರ್ಮಾಣಕ್ಕೆ ಸಾಂಸ್ಥಿಕ ಪ್ರಯತ್ನವೂ ಆವಶ್ಯಕವಾಗಿತ್ತು. ಕನ್ನಡ ಸಾಹಿತ್ಯದ ವ್ಯಾಪ್ತಿ ವೈವಿಧ್ಯಗಳನ್ನು ಗಮನಿಸಿದಾಗಲೆಲ್ಲ ಈ ಮಹಾಸಾಹಿತ್ಯದ ಚರಿತ್ರೆಯ ರಚನೆಗೆ ಅನೇಕ ಕೈಗಳು ಕೂಡಬೇಕಾದುದರ ಅಗತ್ಯ ಸ್ಪಷ್ಟವಾಗುತ್ತಿತ್ತು.

ಇದನ್ನು ಗಮನಿಸಿದ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಹತ್ತು ವರ್ಷಗಳ ಹಿಂದೆಯೇ ಸಮಗ್ರವಾದ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಗೆ ಒಂದು ಯೋಜನೆ ಹಾಕಿತು. ಆ ಯೋಜನೆಯಂತೆ ಪ್ರಕಟವಾಗುವ ಹತ್ತು ಸಂಪುಟಗಳಲ್ಲಿ ಇದು ಮೊದಲನೆಯದು.



ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ – ೨೧೯

ಸಾಮಾನ್ಯಮಾಲೆ – ೧೩

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

ಮೊದಲನೆಯ ಸಂಪುಟ

ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

ಮೊದಲನೆಯ ಸಂಪುಟ

ಡಾ. ಹಾ. ಮಾ. ನಾಯಕ, ಪ್ರಧಾನ ಸಂಪಾದಕ
ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಸಂಪಾದಕ






ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೪

*Kannaḍa Adhyayana Samstheya Kannaḍa Sāhitya Caritre* (Modalaneya Sampuṭa), being the first volume of a 10-volume History of Kannada Literature, prepared and published by the Institute of Kannada Studies, University of Mysore, Mysore. Chief Editor: Dr. H. M. Nayak; Editor: Dr. T. V. Venkatachala Sastry. First edition: October, 1974; pp. 763. Price Rs. 27/-





ಬೆಲೆ : ಇಪ್ಪತ್ತೇಳು ರೂಪಾಯಿಗಳು

ಮಾರಾಟಗಾರರು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಮುದ್ರಕರು : ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

ಕನ್ನಡದ ಕಾರಣಪುರುಷರಲ್ಲಿ ಒಬ್ಬರೂ

ಇಂದಿಗೆ ಒಂದು ನೂರು ವರ್ಷಗಳ ಹಿಂದೆ (ಅಕ್ಟೋಬರ್, ೧೮೭೪)

ಇಂಗ್ಲಿಷಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ

ಪ್ರಥಮ ಸಮೀಕ್ಷೆಯನ್ನು ಪ್ರಕಟಿಸಿದವರೂ ಆದ

**ರೆವೆರೆಂಡ್ ಫರ್ಡಿನೆಂಡ್ ಕಿಟ್ಟೆಲ್ ಡಿ.ಫಿಲ್.**

(೧೮೩೨–೧೯೦೩)

ಅವರ ನೆನಪಿಗೆ



# ಪರಿವಿಡಿ



## ಅಧ್ಯಾಯ ಒಂದು



## ಅಧ್ಯಾಯ ಎರಡು



## ಅಧ್ಯಾಯ ಮೂರು



## ಅಧ್ಯಾಯ ನಾಲ್ಕು

## ಅಧ್ಯಾಯ ಐದು



## ಅಧ್ಯಾಯ ಆರು



## ಅಧ್ಯಾಯ ಏಳು



## ಅಧ್ಯಾಯ ಎಂಟು

# ಮುನ್ನುಡಿ

ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ನಿರೂಪಿಸುವ ಹಲವು ಗ್ರಂಥಗಳು ಈವರೆಗೆ ಪ್ರಕಟವಾಗಿದ್ದರೂ, ಅವುಗಳಿಗೆ ಬಗೆಬಗೆಯ ಸೀಮಿತ ಗಳಿವೆ. ಮುಖ್ಯವಾಗಿ, ಸಾಹಿತ್ಯದ ಪ್ರಾಚೀನತೆ ಹರವುಗಳ ಎದುರಿನಲ್ಲಿ ಈ ಚರಿತ್ರೆಗಳು ಸಂಕ್ಷೇಪವಾದವು; ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ ಒದಗುವ ತೊಡಕುಗಳ ಕಾರಣದಿಂದ ಅಪರಿಪೂರ್ಣವಾದವು. ಆದುದರಿಂದ ಸಮಗ್ರವಾದ ಒಂದು ಸಾಹಿತ್ಯ ಚರಿತ್ರೆ ಕನ್ನಡದ ಬಹುದಿನಗಳ ಅಗತ್ಯವಾಗಿತ್ತು. ಇಂಥದೊಂದು ಕೃತಿಯ ನಿರ್ಮಾಣಕ್ಕೆ ಸಾಂಸ್ಥಿಕ ಪ್ರಯತ್ನವೂ ತುಂಬ ಆವಶ್ಯಕವಾಗಿತ್ತು. ಕನ್ನಡ ಸಾಹಿತ್ಯದ ವ್ಯಾಪ್ತಿ ವೈವಿಧ್ಯ ಗಳನ್ನು ಗಮನಿಸಿದಾಗಲೆಲ್ಲ ಈ ಮಹಾಸಾಹಿತ್ಯದ ಚರಿತ್ರೆಯ ರಚನೆಗೆ ಅನೇಕ ಕೈಗಳು ಕೂಡಬೇಕಾದುದರ ಅಗತ್ಯ ಸ್ಪಷ್ಟವಾಗುತ್ತಿತ್ತು. ಇದನ್ನು ಬಲ್ಲವರಾಗಿದ್ದ ದಿವಂಗತ ಪ್ರೊ. ತೀ. ನಂ. ಶ್ರೀಕಂಠಯ್ಯನವರು ೧೯೫೩ರಷ್ಟು ಹಿಂದೆಯೇ ತಾವು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾಗ, ವಿಶ್ವವಿದ್ಯಾಲಯದ ಆಶ್ರಯ ದಲ್ಲಿ ಕನ್ನಡ ನಾಡಿನ ವಿದ್ವಾಂಸರೆಲ್ಲರ ನೆರವಿನಿಂದ 'ಕನ್ನಡ ಸಾಹಿತ್ಯದ ಇತಿಹಾಸ' ವೊಂದನ್ನು ದೊಡ್ಡ ಪ್ರಮಾಣದಲ್ಲಿ ಸಿದ್ಧಪಡಿಸುವ ಯೋಜನೆಯನ್ನು ಕೈಗೊಂಡಿದ್ದರು. ಆದರೆ, ದುರದೃಷ್ಟದಿಂದ, ಆ ಯೋಜನೆ ಇತಿಹಾಸ ರಚನೆಯ ಸಾಮಾನ್ಯ ರೂಪರೇಖೆ ಗಳನ್ನು ವಿವರಿಸುವ ಕಿರುಹೊತ್ತಗೆಯ ಪ್ರಕಟಣೆ ಹಂಚಿಕೆಗಳಲ್ಲಿಯೇ ನಿಂತುಹೋಯಿತು. ಪ್ರೊ. ಶ್ರೀಕಂಠಯ್ಯನವರು ನಮಗೆ ಬೇಕಾದ ಸಮರ್ಪಕವಾದ ಸಾಹಿತ್ಯ ಇತಿಹಾಸದ ಸಾಮಾನ್ಯ ರೂಪರೇಖೆಗಳನ್ನೇನೋ ಗೊತ್ತುಮಾಡಿದರು. ಆದರೆ ಅವರು ಬಯಸಿದಂಥ ಇತಿಹಾಸದ ನಿರ್ಮಾಣ, ಪ್ರಕಟಣೆಗಳು ಮಾತ್ರ ಇಪ್ಪತ್ತು ವರ್ಷ ತಡವಾಗಿವೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈಗ ಕುಲಪತಿಗಳಾಗಿರುವ ಪ್ರೊ. ದೇ. ಜವರೇ ಗೌಡರು ತಾವು ಕನ್ನಡ ಪ್ರಾಧ್ಯಾಪಕರಾದ ಆರಂಭದಲ್ಲಿಯೇ (ಅಕ್ಟೋಬರ್, ೧೯೬೪) ಕನ್ನಡ ವಿಭಾಗದ ಆಶ್ರಯದಲ್ಲಿ ಸಮಗ್ರವಾದ ಸಾಹಿತ್ಯ ಚರಿತ್ರೆಯ ರಚನೆಗೆ ಒಂದು ಯೋಜನೆ ಹಾಕಿದರು. ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಾಪಕರು, ಸಂಶೋಧಕರ ನೆರವಿ ನಿಂದ ಹಲವು ಸಂಪುಟಗಳಲ್ಲಿ ವಿವರಣಾತ್ಮಕವೂ, ಅಧಿಕೃತವೂ ಆದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಿದ್ಧಗೊಳಿಸಿ ಪ್ರಕಟಿಸಬೇಕೆಂದು ತೀರ್ಮಾನಿಸಿ, ರೂಪರೇಖೆಗಳನ್ನು ಕೂಲಂಕಷವಾಗಿ ಚರ್ಚಿಸಿ ಸಿದ್ಧಪಡಿಸಿ, ಬರೆಯಬೇಕಾದ ಲೇಖನಗಳ ಸ್ವರೂಪ ವ್ಯಾಪ್ತಿ ಗಳನ್ನು ಗೊತ್ತುಪಡಿಸಿ, ಲೇಖಕರಿಗೆ ವಿಷಯಗಳನ್ನು ಹಂಚಿ, ಕಾರ್ಯವನ್ನು ಆಗಲೇ ಆರಂಭಿಸಲಾಯಿತು. ಕೆಲವರು ತಮ್ಮ ಪಾಲಿನ ಲೇಖನಗಳನ್ನೂ ಬರೆದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ೧೯೬೬ರಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಾಗಿ

ಮೂರ್ಪಟ್ಟು, ವಿಶ್ವವಿದ್ಯಾನಿಲಯದ ಕನ್ನಡ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸಿಕೊಂಡು ಹಲವು ಯೋಜನೆಗಳಿಗೆ ಕೈಹಾಕಿತು. ವಿಶ್ವಕೋಶ, ವಿಷಯ ವಿಶ್ವಕೋಶ, ಗ್ರಂಥ ಸಂಪಾದನೆ, ಭಾಷಾಂತರ ಮತ್ತು ಪಠ್ಯಪುಸ್ತಕಗಳ ನಿರ್ಮಾಣ, ಜಾನಪದ ವಸ್ತು ಸಂಗ್ರಹಾಲಯ, ಹರಿದಾಸ ಸಾಹಿತ್ಯ ಸಂಗ್ರಹ–ಸಂಪಾದನೆ, ವೃತ್ತಿಪದಕೋಶ ಸಿದ್ಧತೆ, ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕರಣ ಪುನರ್ಮುದ್ರಣ—ಮೊದಲಾದ ಹತ್ತು ಹಲವು ಯೋಜನೆಗಳಲ್ಲಿ ಸಂಸ್ಥೆ ಮಗ್ನವಾಯಿತು. ಇದರಿಂದಾಗಿ ಸಾಹಿತ್ಯ ಚರಿತ್ರೆಯ ಯೋಜನೆ ಕುಂಟಿತು, ಸಾಯಲಿಲ್ಲ. ಪ್ರತಿ ವರ್ಷ ವಿಶ್ವವಿದ್ಯಾನಿಲಯದ ವರದಿಗಳಲ್ಲಿ ಇದರ ಉಲ್ಲೇಖ ಇರುತ್ತಿತ್ತು. ೧೯೬೯ ಮತ್ತು ೧೯೭೨ರಲ್ಲಿ ಪ್ರಕಟವಾದ ಕನ್ನಡ ಅಧ್ಯಯನ ಸಂಸ್ಥೆಯ ಪರಿಚಯ ಪುಸ್ತಕಗಳಲ್ಲಿ ಯೋಜನೆಯ ಸ್ವರೂಪ ಪ್ರಗತಿಗಳನ್ನು ಸಾಕಷ್ಟು ವಿವರವಾಗಿ ಸೂಚಿಸಲಾಗಿತ್ತು. ಅನೇಕರು ಇದರ ಬಗೆಗೆ ಆಗಾಗ ವಿಚಾರಿಸುತ್ತಿದ್ದರು. ಆದರೂ ಗ್ರಂಥದ ಪ್ರಕಟಣೆಗೆ ಕಾಲ ಕೂಡಿಬರಲಿಲ್ಲ. ಪ್ರೊ. ಜವರೇಗೌಡರು ಯೋಜಿಸಿದ ಒಂದು ದಶಕದ ಅನಂತರ ಈಗ 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಮೊದಲ ಸಂಪುಟ ಪ್ರಕಟವಾಗುತ್ತಿದೆ.

ಹತ್ತು ಸಂಪುಟಗಳಲ್ಲಿ ಪೂರ್ಣಗೊಳ್ಳುವ ಈ ಸಾಹಿತ್ಯ ಚರಿತ್ರೆಯ ಮುಂದಿನ ಸಂಪುಟಗಳು ಪ್ರತಿ ಆರೆಂಟು ತಿಂಗಳಿಗೆ ಒಂದೊಂದರಂತೆ ಪ್ರಕಟವಾಗುವ ಹಾಗೆ ನೋಡಿಕೊಳ್ಳಲಾಗುವುದು. ಇದರ ಸಿದ್ಧತೆಯಲ್ಲಿ ನಾವು ಪ್ರೊ. ತೀ. ನಂ. ಶ್ರೀಕಂಠಯ್ಯನವರು ಸಿದ್ಧಪಡಿಸಿದ್ದ ರೂಪರೇಷೆಗಳ ಅನೇಕ ಅಂಶಗಳನ್ನು ಯಥಾವತ್ತಾಗಿ ಸ್ವೀಕರಿಸಿದ್ದೇವೆ; ನಮಗೆ ಅಗತ್ಯವೆನಿಸಿದ ಅನೇಕ ಬದಲಾವಣೆಗಳನ್ನೂ ಮಾಡಿಕೊಂಡಿದ್ದೇವೆ. ಈಗ ನಾವು ಯೋಜಿಸಿರುವಂತೆ ಒಟ್ಟು ಯೋಜನೆಯ ಸ್ಥೂಲ ಸ್ವರೂಪ ಹೀಗಿರುತ್ತದೆ:

ಸಂಪುಟ ೧ : ಹಿನ್ನೆಲೆ
ಸಂಪುಟ ೨ : ಆದಿಕಾಲದಿಂದ ಕ್ರಿ.ಶ. ಸು. ೮೫೦
ಸಂಪುಟ ೩ : ಕ್ರಿ.ಶ. ಸು. ೮೫೦ ಕ್ರಿ.ಶ. ಸು. ೧೧೫೦
ಸಂಪುಟ ೪ : ಕ್ರಿ.ಶ. ಸು. ೧೧೫೦–ಕ್ರಿ.ಶ. ಸು. ೧೩೫೦
ಸಂಪುಟ ೫ : ಕ್ರಿ.ಶ. ಸು. ೧೩೫೦–ಕ್ರಿ.ಶ. ಸು. ೧೬೫೦
ಸಂಪುಟ ೬ : ಕ್ರಿ.ಶ. ಸು. ೧೬೫೦–ಕ್ರಿ.ಶ. ಸು. ೧೮೫೦
ಸಂಪುಟ ೭–೮ : ಕ್ರಿ.ಶ. ಸು. ೧೮೫೦–ಕ್ರಿ.ಶ. ಸು. ೧೯೭೦
ಸಂಪುಟ ೯ : ಕೆಲವು ವಿಶೇಷ ರೂಪಗಳು, ವಿಷಯಗಳು
ಸಂಪುಟ ೧೦ : ಅನುಬಂಧಗಳು

ಹಿನ್ನೆಲೆಯ ಸಂಪುಟದಲ್ಲಿ ಸಾಹಿತ್ಯ ಚರಿತ್ರೆಯ ಸ್ವರೂಪ: ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪ, ಸಮೀಕ್ಷೆ, ವಿಸ್ತಾರ, ಪರಿಮಿತಿ, ರಚನೆಗೆ ಇರುವ ಸಾಧನಗಳು, ವಿಭಜನಕ್ರಮ; ಕವಿಕಾಲ ನಿರ್ಣಯದ ಆಧಾರಗಳು, ತೊಡಕುಗಳು; ಭಾರತೀಯ ಹಿನ್ನೆಲೆ; ಕನ್ನಡ ನಾಡು ನುಡಿ ಜನತೆ; ಕರ್ನಾಟಕ ಚರಿತ್ರೆಯ ಅವಲೋಕನ, ಸಾಂಸ್ಕೃತಿಕ ಧಾರ್ಮಿಕ ಸಾಮಾಜಿಕ ಜನಜೀವನ; ಕನ್ನಡ ಹಾಗೂ ಇತರ ಭಾಷೆಗಳ ಪರಸ್ಪರ ಸಂಬಂಧ,

ಪ್ರಭಾವ—ಮೊದಲಾದ ಸಾಮಾನ್ಯ ವಿಷಯಗಳಿರುತ್ತವೆ. ಎರಡರಿಂದ ಎಂಟನೆಯ ಸಂಪುಟಗಳ ವರೆಗೆ ಪ್ರತಿಯೊಂದು ಸಂಪುಟದಲ್ಲಿಯೂ ಆಯಾ ಅವಧಿಯ ಕವಿಕೃತಿಗಳ ವಿವರವಾದ ಪರಿಚಯ ಮಾತ್ರವಲ್ಲದೆ, ಭಾರತೀಯ ಹಿನ್ನೆಲೆ, ಜನಜೀವನ ಮತ್ತು ಸಾಹಿತ್ಯ; ದಕ್ಷಿಣ ಭಾರತದ ಇತರ ಭಾಷಾಸಾಹಿತ್ಯಗಳ ಸ್ಥಿತಿಗತಿಗಳು; ರಾಜಕೀಯ ಚರಿತ್ರೆ, ರಾಜಾಶ್ರಯ, ಕನ್ನಡ ನಾಡಿನ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಜನಜೀವನ; ಭಾಷೆಯ ಸ್ವರೂಪ–ಮೊದಲಾದ ವಿಷಯಗಳ ವ್ಯಾಪಕ ಚರ್ಚೆಯೂ ಇರುತ್ತದೆ. ಆಯಾ ಸಂದರ್ಭಗಳಲ್ಲಿ ಪ್ರತಿಯೊಂದು ಸಾಹಿತ್ಯ ಪ್ರಕಾರದ ಉಗಮ ವಿಕಾಸಗಳ ನಿರೂಪಣೆಯನ್ನೂ ಸೇರಿಸಲಾಗುವುದು ಗೊತ್ತಾದ ಅವಧಿಯ ಸಾಹಿತ್ಯದ ವೈಶಿಷ್ಟ್ಯ ಸಿದ್ಧಿಗಳನ್ನು ಪ್ರತಿ ಸಂಪುಟದಲ್ಲಿಯೂ ಗುರುತಿಸಲಾಗುವುದು. ಏಳು ಎಂಟನೆಯ ಸಂಪುಟಗಳು ಆಧುನಿಕ ಸಾಹಿತ್ಯಕ್ಕೆ ಸಂಬಂಧಿಸಿದ್ದು, ಮೊದಲನೆಯದರಲ್ಲಿ ಕಾದಂಬರಿ, ಸಣ್ಣ ಕತೆ, ಕಾವ್ಯಪ್ರಕಾರಗಳು ಸೇರುತ್ತವೆ. ಮಿಕ್ಕ ಸಾಹಿತ್ಯಪ್ರಕಾರಗಳು, ಶಾಸ್ತ್ರಗಳು ಎರಡನೆಯದರಲ್ಲಿ ಸಮಾವೇಶಗೊಳ್ಳುತ್ತವೆ. ಒಂಬತ್ತನೆಯ ಸಂಪುಟದಲ್ಲಿ ಒಟ್ಟು ಸಾಹಿತ್ಯದ ದೃಷ್ಟಿಯಿಂದ ಜನಪದ ಸಾಹಿತ್ಯ, ಶಾಸನ ಸಾಹಿತ್ಯ, ಗದ್ಯ ಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯಗಳನ್ನು ಕುರಿತು ವಿಚಾರ ಮಾಡುವುದಲ್ಲದೆ, ಕನ್ನಡ ಸಾಹಿತ್ಯಕ್ಕೆ ದೊರೆತ ರಾಜಾಶ್ರಯ, ಜನಾಶ್ರಯ; ಸಾಹಿತ್ಯಿಕ ಸಂಘ ಸಂಸ್ಥೆಗಳು, ಅವುಗಳ ಸಾಧನೆ; ಇತರ ಭಾಷೆಗಳಲ್ಲಿ ಕನ್ನಡಿಗರ ಕೃತಿಗಳು; ಕನ್ನಡದಲ್ಲಿ ಇತರ ಭಾಷೆಗಳ ಕೃತಿಗಳು; ಕನ್ನಡ ಸಾಹಿತ್ಯದ ಮಹತ್ವ, ಪರಿಮಿತಿ; ಭಾರತೀಯ ಸಾಹಿತ್ಯದಲ್ಲಿ ಕನ್ನಡದ ನೆಲೆಬೆಲೆ; ವಿಶ್ವ ಸಾಹಿತ್ಯಕ್ಕೆ ಕನ್ನಡದ ಕೊಡುಗೆ—ಮೊದಲಾದ ವಿಚಾರಗಳನ್ನು ಚರ್ಚಿಸಲಾಗುತ್ತದೆ. ಕೊನೆಯ ಸಂಪುಟದಲ್ಲಿ ನಾನಾ ಬಗೆಯ ಉಪಯುಕ್ತ ಅನುಬಂಧಗಳಿರುತ್ತವೆ. ಪ್ರತಿಯೊಂದು ಸಂಪುಟವೂ ಡೆಮಿ ಆಕಾರದ ಸುಮಾರು ೭೫೦ ಪುಟಗಳನ್ನು ಹೊಂದಿರುತ್ತದೆ.

ಕನ್ನಡ ಅಧ್ಯಯನ ಸಂಸ್ಥೆಯ ಬೋಧನ ಸಂಶೋಧನ ವಿಭಾಗಗಳ ಸದಸ್ಯರಿಂದ, ಬೇಕಾದಾಗ ವಿಶ್ವವಿದ್ಯಾನಿಲಯದ ಇತರ ವಿಭಾಗಗಳ ಸದಸ್ಯರಿಂದ, ಬರೆಸಿದ ಲೇಖನಗಳಿಂದ ಪ್ರಕೃತ ಸಾಹಿತ್ಯ ಚರಿತ್ರೆ ಸಿದ್ಧಗೊಳ್ಳುತ್ತಿದೆ. ಇದು ಕನ್ನಡಕ್ಕೆ ಅಗತ್ಯವಾದ ಸಮಗ್ರವೂ ಅಧಿಕೃತವೂ ಆದ ಸಾಹಿತ್ಯ ಚರಿತ್ರೆಯಾಗಬೇಕೆಂಬುದು ನಮ್ಮ ಉದ್ದೇಶ. ಈ ಯೋಜನೆಗೆ ಸಂಬಂಧಿಸಿದವರೆಲ್ಲರ ದುಡಿಮೆ ಅದೇ ದಿಕ್ಕಿನಲ್ಲಿ. ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಅಗತ್ಯವಾದ ಮೂಲ ಆಕರಗಳ ಕೊರತೆ ಬಹುವಾಗಿರುವ ಕನ್ನಡದಂಥ ಸಾಹಿತ್ಯದ ಚರಿತ್ರೆಯ ಬರವಣಿಗೆ ಎಷ್ಟು ಶ್ರಮಸಾಧ್ಯವಾದದ್ದು, ಯಾವ ಬಗೆಯ ಸೀಮಿತಗಳನ್ನು ಒಳಗೊಂಡದ್ದು ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಕನ್ನಡ ಅಧ್ಯಯನ ಸಂಸ್ಥೆ ತನ್ನಲ್ಲಿರುವ ಅನುಕೂಲಗಳನ್ನೆಲ್ಲ ಬಳಸಿಕೊಂಡು ಸ್ವಲ್ಪಮಟ್ಟಿಗಾದರೂ ಕನ್ನಡ ಸಾಹಿತ್ಯ ಚರಿತ್ರೆಯ ನಿರೂಪಣೆಯ ಹಾದಿಯಲ್ಲಿ ಮುಂದುವರಿಯಬೇಕೆಂದು ನಿರ್ಧರಿಸಿ ಈ ಮಹಾಸಾಹಸವನ್ನು ಕೈಗೊಂಡಿದೆ.

ಇದುವರೆಗೆ ಗಮನಿಸಲಾಗಿರುವ ಪ್ರತಿಯೊಬ್ಬ ಕವಿಯ ಕಾಲ ದೇಶ ಜೀವನ ಸಾಧನೆ

ಮೊದಲಾದ ವಿಷಯಗಳನ್ನು ಚರ್ಚಿಸುವುದು; ಸಮಯೋಚಿತ ಉದ್ಧರಣಗಳೊಡನೆ ಪ್ರತಿಯೊಂದು ಕೃತಿಯನ್ನೂ ಪರಿಚಯ ಮಾಡಿಕೊಡುವುದು; ಕವಿಕೃತಿಗಳ ವಿಷಯದಲ್ಲಿ ಇದುವರೆಗೆ ನಡೆದಿರುವ ಚರ್ಚೆಯೆಲ್ಲವನ್ನೂ ಇರಬಹುದಾದ ಹೊಸ ಸಂಶೋಧನೆಗಳೊಡನೆ ಸಂಕ್ಷಿಪ್ತವಾಗಿ ನಿರೂಪಿಸುವುದು; ಸಾಧ್ಯವಾದ ಮಟ್ಟಿಗೂ ವಿಮರ್ಶಾತ್ಮಕವಾಗಿ ಕೃತಿಗಳ ಮೌಲ್ಯವನ್ನು ನಿರ್ಧರಿಸುವುದು—ಈ ಸಾಹಿತ್ಯ ಚರಿತ್ರೆಯ ಮುಖ್ಯ ಉದ್ದೇಶ. ಈ ಉದ್ದೇಶವನ್ನು ಈಡೇರಿಸುವಾಗ ಅತ್ಯುತ್ತಮ ಇತಿಹಾಸಕಾರನ, ಲೇಖಕನ, ವಿಮರ್ಶಕನ ಆದರ್ಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸಮಾಡಲಾಗುವುದು. ಪ್ರತಿಯೊಂದು ಸಂದರ್ಭದಲ್ಲಿಯೂ ಭಾವನಾತ್ಮಕವಾದ ಅತಿರೇಕದ ಅಭಿಪ್ರಾಯಗಳಿಗಾಗಲಿ, ವ್ಯಕ್ತಿ ಸಂಸ್ಥೆ ಮತಧರ್ಮಗಳಿಗೆ ಸಂಬಂಧಿಸಿದಂತೆ ವ್ಯಂಗ್ಯ ನಿಂದನೆಗಳಿಗಾಗಲಿ ಆಸ್ಪದಕೊಡದೆ ವಸ್ತುನಿಷ್ಠ ನಿಷ್ಪಕ್ಷಪಾತ ದೃಷ್ಟಿಗೇ ಆದ್ಯಗಮನ ಕೊಡಲಾಗುವುದು.

ಸಾಹಿತ್ಯ ಚರಿತ್ರೆಯ ಮಹತ್ವವನ್ನು ಬಲ್ಲವರಾದ ನಮಗೆ ಪ್ರಕೃತ ಗ್ರಂಥದ ಸೀಮಿತಗಳೂ ಚೆನ್ನಾಗಿ ತಿಳಿದಿವೆ. ಕೊರತೆಗಳನ್ನು ತುಂಬಲು, ಸೀಮಿತಗಳನ್ನು ದಾಟಲು ನಾವು ಶಕ್ತಿಮೀರಿ ಶ್ರಮಿಸುತ್ತೇವೆ; ಅಲ್ಲದೆ ಕನ್ನಡ ವಿದ್ವಾಂಸರ ಹಾಗೂ ಇತರರ ರಚನಾತ್ಮಕವಾದ ಸಲಹೆ ಸೂಚನೆ ವಿಮರ್ಶೆಗಳನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ. ಇದರಿಂದ ಮುಂದಿನ ಸಂಪುಟಗಳು ಇನ್ನೂ ಉತ್ತಮಗೊಳ್ಳಬಹುದೆಂದು ಆಶಿಸುತ್ತೇವೆ.

ಈ ಚರಿತ್ರೆಯ ಪ್ರಕಟಣೆಯಿಂದ ಕನ್ನಡದ ಬಹುದಿನಗಳ ಕೊರತೆಯೊಂದು ತಕ್ಕಮಟ್ಟಿಗೆ ತುಂಬಿದಂತಾಗುತ್ತದೆಂದು ಭಾವಿಸುತ್ತೇವೆ. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಕ್ಷೇತ್ರದಲ್ಲಿ ಆಗಬೇಕಾಗಿರುವ ಕೆಲಸಗಳು ಇನ್ನೂ ಅಗಾಧವಾಗಿವೆ. ವಿಶ್ವವಿದ್ಯಾನಿಲಯಗಳು. ಸರ್ಕಾರ, ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳು ನೂರಾರು ಉಪಯುಕ್ತ ಯೋಜನೆಗಳನ್ನು ಕೈಗೊಂಡು ಕೆಲಸಮಾಡಲು ಅವಕಾಶ ಬೇಕಾದಷ್ಟಿದೆ. ಆಗಿರುವ ಕೆಲಸ ಏನೇನೂ ಸಾಲದು. ಇಂಥ ಸಂದರ್ಭದಲ್ಲಿ, ಸಂಬಂಧಿಸಿದವರೆಲ್ಲ ಪರಸ್ಪರ ಸಮಾಲೋಚಿಸಿ ಹೊಸ ಹೊಸ ಯೋಜನೆಗಳಲ್ಲಿ ತೊಡಗುವುದು ನಾಡಿನ ಹಿತದೃಷ್ಟಿಯಿಂದ ಒಳ್ಳೆಯದು. ಯೋಜಕರು ಕಲ್ಪನೆ ದೂರದೃಷ್ಟಿಗಳನ್ನು ಹೊಂದಿದ್ದು, ಸ್ಪರ್ಧೆಯ ಮನೋಭಾವ ತಾಳದೆ, ಯೋಜನೆಗಳ ಉಪಯುಕ್ತತೆಯನ್ನು ಗಮನದಲ್ಲಿಟ್ಟುಕೊಳ್ಳುವುದು ಎಂದಿಗಿಂತ ಈಗ ಅಗತ್ಯವಾಗಿದೆ. ದುಪ್ರತಿ ಕೆಲಸಮಾಡಲು, ನಮಗೆಲ್ಲರಿಗಿರುವ ಆರ್ಥಿಕ ನೆರವಿನ ಮೂಲ ಒಂದೇ; ಅದೂ ದುರ್ಬಲವಾದುದು; ಆದುದರಿಂದ ನಮ್ಮ ಹೊಣೆ ದೊಡ್ಡದಾಗಿದೆ ಯೆಂಬುದನ್ನು ನಾವು ಮರೆಯಬಾರದು. ಇದನ್ನು ಮರೆಯದೆಯೆ ಕನ್ನಡ ಅಧ್ಯಯನ ಸಂಸ್ಥೆ ಹತ್ತು ವರ್ಷಗಳ ಹಿಂದಿನ ತನ್ನ ಯೋಜನೆಯೊಂದನ್ನು ಕಾರ್ಯರೂಪಕ್ಕೆ ತರುತ್ತಿದೆ. ಇದು ಸಂಸ್ಥೆಯ ಚಟುವಟಿಕೆಗಳ ಹಾಗೂ ಕನ್ನಡ ಸಾಹಿತ್ಯ ಚರಿತ್ರೆಯ ಬರಹಗಳ ಇತಿಹಾಸದಲ್ಲಿ ಒಂದು ಮಹತ್ವದ ಘಟನೆಯಾಗಿದೆ.

ಇಂಥದೊಂದು ಸಾಹಸದ ಯೋಜನೆಯಲ್ಲಿ ನೆರವಾಗುತ್ತಿರುವ ಕನ್ನಡ ಅಧ್ಯಯನ ಸಂಸ್ಥೆಯ ನನ್ನ ಸಹೋದ್ಯೋಗಿಗಳ ಬೆಂಬಲ ಸಹಕಾರಗಳನ್ನು ನಾನು ಕೃತಜ್ಞತೆಯಿಂದ

ನೆನೆಸುತ್ತೇನೆ. ಈ ಯೋಜನೆಯನ್ನು ಆರಂಭಿಸಿದ ಪ್ರೊ. ಜವರೇಗೌಡರು ಈಗ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾರೆ. ಆದರೂ ಈ ಯೋಜನೆ ಅವರದೇ. ಅವರೇ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಿದ್ದರೆ ಯೋಜನೆ ಇದಕ್ಕೂ ಮೊದಲೇ ಕಾರ್ಯ ರೂಪಕ್ಕೆ ಬರುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಅವರು ಈ ವಿಳಂಬವನ್ನು ಮನ್ನಿಸಿಯಾರು ಎಂದುಕೊಂಡಿದ್ದೇನೆ. ಇದರ ಪ್ರಕಟಣೆಯಲ್ಲಿ ವಿಶ್ವವಿದ್ಯಾನಿಲಯದ ಅಧಿಕಾರಿಗಳು ಔದಾರ್ಯದಿಂದ ವರ್ತಿಸಿದ್ದಾರೆ. ಎಂದಿನಂತೆ ಸಂಸ್ಥೆಯ ಮೇಲಿನ ಪ್ರೀತಿ ಅಭಿಮಾನಗಳಿಂದ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಶ್ರೀ ಜಿ. ಎಚ್. ರಾಮರಾವ್ ಮತ್ತು ಶ್ರೀ ಜಿ. ಎಚ್. ಕೃಷ್ಣಮೂರ್ತಿ ಮುದ್ರಣಕಾರ್ಯವನ್ನು, ಅವಸರವಸರವಾಗಿ ಯಾದರೂ, ಸೊಗಸಾಗಿ ನಿರ್ವಹಿಸಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಕೊನೆಯದಾಗಿಯಾದರೂ, ಮುಖ್ಯವಾಗಿ, ನಾನು ಸಂಪಾದಕರಾದ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳನ್ನು ವಿಶೇಷವಾಗಿ ಸ್ಮರಿಸಬೇಕು. ಈ ಯೋಜನೆಯ ಕಾರ್ಯ ನಿರ್ವಹಣೆಯಲ್ಲಿ, ಅದರಲ್ಲೂ ಈ ಸಂಪುಟದ ಸಿದ್ಧತೆಯಲ್ಲಿ, ಅವರು ಎಷ್ಟು ಶ್ರಮಪಟ್ಟು ದುಡಿದಿದ್ದಾರೆ, ಸಹನೆಯಿಂದ ವರ್ತಿಸಿದ್ದಾರೆ ಎಂಬುದನ್ನು ನಾನು ಬಲ್ಲೆ; ಅವರ ಕೆಲಸ ವನ್ನು ಹತ್ತಿರದಿಂದ ನೋಡಿದವರೆಲ್ಲ ಬಲ್ಲರು. ತರುಣ ಪೀಳಿಗೆಯ ವಿದ್ವಾಂಸರಲ್ಲಿ ಗಣ್ಯ ರಾಗಿರುವ ಅವರ ಪಾಂಡಿತ್ಯ ದುಡಿಮೆಗಳು 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಸಿದ್ಧತೆಗೆ ದೊರಕಿರುವುದು ನನಗೆ ತುಂಬ ಸಂತೋಷ ನೆಮ್ಮದಿ ಗಳನ್ನು ತಂದಿದೆ. ಅವರ ಬತ್ತದ ಉತ್ಸಾಹದಿಂದ ಮುಂದಿನ ಸಂಪುಟಗಳೆಲ್ಲ ಯೋಜನೆ ಯಂತೆ ಸಿದ್ಧಗೊಳ್ಳುತ್ತವೆಂಬುದರಲ್ಲಿ ನನಗೆ ಭರವಸೆಯಿದೆ.

ಕನ್ನಡ ಅಧ್ಯಯನ ಸಂಸ್ಥೆ
ಅಕ್ಟೋಬರ್ ೨೫, ೧೯೭೪
ವಿಜಯದಶಮಿ

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ



# ಸಂಪಾದಕರ ಮಾತು

ಬಹು ಜನರ ಬಹು ದಿನದ ಬಯಕೆಯಾಗಿದ್ದ ವಿಸ್ತಾರವೂ ಪ್ರಾಮಾಣಿಕವೂ ಆದ ಒಂದು ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಅಗತ್ಯವನ್ನು ಮೈಸೂರು ವಿಶ್ವವಿದ್ಯಾನಿಲಯ ಈಗ ಕೆಲವು ವರ್ಷಗಳ ಹಿಂದೆಯೇ ಮನಗಂಡಿತು. ಸೂಕ್ತವಾದ ಒಂದು ಯೋಜನೆಯನ್ನು ರೂಪಿಸಿತು. ತನ್ನ ಬೋಧಕ ಮತ್ತು ಸಂಶೋಧಕ ಸದಸ್ಯರನ್ನು ಅದರಲ್ಲಿ ತೊಡಗಿಸಿತು. ಅದರ ಫಲವಾಗಿ ಈಗ ಹೊರಬರುತ್ತಿರುವುದು ಕನ್ನಡ ಸಾಹಿತ್ಯ ಚರಿತ್ರೆಯ ಮೊದಲ ಸಂಪುಟ. ಉಳಿದವೂ ಶೀಘ್ರವಾಗಿ ಹೊರಬರುವಂತೆ ವ್ಯವಸ್ಥೆಯಾಗಿದೆ.

ಈ ಮೊದಲನೆಯ ಸಂಪುಟದಲ್ಲಿಯೂ ಮುಂದಿನ ಸಂಪುಟಗಳಲ್ಲಿಯೂ ಸಮಾವೇಶಗೊಳ್ಳುವ ಸಾಮಾನ್ಯ ವಿಷಯಗಳು ಯಾವುವು ಎನ್ನುವುದು 'ಮುನ್ನುಡಿ'ಯಲ್ಲಿ ನಿವೇದಿತವಾಗಿದೆ. ಪ್ರಸ್ತುತ, ಕನ್ನಡ ಸಾಹಿತ್ಯದ ಇತಿಹಾಸವನ್ನು ಆದಷ್ಟು ವಿವರವಾಗಿ ತಿಳಿಯಬೇಕೆಂಬ ಅಪೇಕ್ಷೆಯುಳ್ಳ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಆಸಕ್ತರಾದ ಇತರರಿಗೂ ಸಮಾನವಾಗಿ ಉಪಯುಕ್ತವಾಗಿರಬೇಕೆಂಬುದು ಈ ಶ್ರೇಣಿಯ ಉದ್ದೇಶ. ಅದಕ್ಕೆ ಅನುಗುಣವಾಗಿ ವಿಷಯ, ವಿಷಯವಿನ್ಯಾಸ, ಭಾಷೆ ಮತ್ತು ಶೈಲಿಗಳು ತಕ್ಕ ಹದ ಹಂಚಿಕೆಗಳಲ್ಲಿರುವಂತೆ ಯೋಜಿಸಿದೆ. ಇದು ಎಷ್ಟರಮಟ್ಟಿಗೆ ಈಗ ಪ್ರಕಟವಾಗುತ್ತಿರುವ ಸಂಪುಟದಲ್ಲಿ ನೆರವೇರಿದೆಯೆಂದು ಹೇಳುವುದು ಕಷ್ಟ. ಕೆಲವು ಕುಂದು ಕೊರತೆಗಳು ಉಳಿದುಕೊಂಡಿವೆ. ಅಧ್ಯಾಯಗಳಲ್ಲಿ ಅಲ್ಲಿ ಇಲ್ಲಿ ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಸೇರಬೇಕಾಗಿದ್ದ ಎಲ್ಲ ವಿಷಯಗಳೂ ಸೇರುವುದಾಗಿಲ್ಲ. ಅಷ್ಟು ಅಗತ್ಯವೆನ್ನಿಸದ ವಿಷಯಗಳು ಒಳಸೇರಿರಬಹುದು; ಪ್ರಮಾಣದ ಔಚಿತ್ಯ ಅಲ್ಲಿ ಇಲ್ಲಿ ಏರುಪೇರಾಗಿರಬಹುದು; ಜಿಜ್ಞಾಸೆಗೆ ತಕ್ಕ ಹರಿತ ಹರವುಗಳು ಸಮನಿಸದೆ ಹೋಗಿರಬಹುದು. ಹೀಗೆ ಇವು ಏನಿದ್ದರೂ, ಆಯಾ ಭಾಗಗಳನ್ನು ಬರೆದಿರುವ ಲೇಖಕರು ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ವಿವಿಧ ಮೂಲಗಳಲ್ಲಿ ಬಂದಿರುವ ಮುಖ್ಯವಾದ ವಿವರಗಳನ್ನೂ ವಿವೇಚನೆಗಳನ್ನೂ ಗಮನಿಸಿದ್ದಾರೆ, ಸಾರವನ್ನು ಸಂಗ್ರಹಿಸಿದ್ದಾರೆ — ಎಂಬ ನಂಬುಗೆ ನಮಗಿದೆ.

ಗ್ರಂಥದ ಕರಡಚ್ಚುಗಳನ್ನು ಎಚ್ಚರಿಕೆಯಿಂದ ಓದಿದ್ದರೂ, ಎಚ್ಚರದ ಕಣ್ಣನ್ನು ತಪ್ಪಿಸಿ ಅಲ್ಲಿ ಇಲ್ಲಿ ಕೆಲವು ಅಚ್ಚಿನ ತಪ್ಪುಗಳು ಉಳಿಯುವಂತಾದುದಕ್ಕೆ ವಿಷಾದಿಸಬೇಕಾಗಿದೆ. ಮುಖ್ಯವಾದ ಒಂದು: ಪು. ೪೮೭ರಲ್ಲಿ ಕೆಲವು ಕೃತಿಭಾಗಗಳು (ಸಾಲು ೯–೧೨) ಒಟ್ಟಿಗೆ ಅಚ್ಚಾಗಿವೆ. ಆ ಉದ್ಧೃತಿಗೆ ಅಡಿಟಿಪ್ಪಣಿಯಲ್ಲಿ ನಮೂದಿಸಿರುವ ಆಕರಗಳನ್ನು ನೋಡಿಕೊಂಡು ಅವನ್ನು ಪ್ರತ್ಯೇಕಿಸಿಕೊಳ್ಳಬೇಕು.

ಸಂಪುಟ ರಚನೆಯಲ್ಲಿ ಅನುಸರಿಸಿದ ಕೆಲವು ಸಾಮಾನ್ಯ ಸಂಗತಿಗಳು ಹೀಗಿವೆ :

೧. ಯಾವುದಾದರೂ ವಿಷಯದ ಮಂಡನೆ ಖಂಡನೆಗಳಲ್ಲಿ ಬಹುಜನ ಸಮ್ಮತವಾದ ವಿದ್ವದಭಿಪ್ರಾಯಗಳನ್ನೇ ಸಾಮಾನ್ಯವಾಗಿ ಮಾನ್ಯಮಾಡಿದೆ. ಆದರೆ ಕೆಲವೊಮ್ಮೆ ಪ್ರಬಲವಾದ ಆಧಾರಗಳ ಮೇಲೆ ಲೇಖಕರು ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದರೆ, ಸ್ವೀಕೃತವಾದ ಸಾಮಾನ್ಯಾಭಿಪ್ರಾಯಗಳ ಜೊತೆಗೆ ಅವನ್ನೂ ಒಪ್ಪಿ ಹಾಗೆಯೇ ಉಳಿಸಿಕೊಂಡಿದೆ. ಇಂಥ ಸಂದರ್ಭಗಳಲ್ಲಿಯೂ ಅನ್ಯತ್ರವೂ ವಿಷಯದ ಮಂಡನೆ ಖಂಡನೆಗಳಲ್ಲಿ, ಸ್ವಾಭಿಪ್ರಾಯ ನಿವೇದನೆಯಲ್ಲಿ ಉತ್ತರವಾದಿತ್ವ ಆಯಾ ಭಾಗವನ್ನು ಬರೆದ ಲೇಖಕರವೇ ಆಗಿರುತ್ತವೆ; ಕನ್ನಡ ಅಧ್ಯಯನ ಸಂಸ್ಥೆಯದಾಗಲಿ, ಸಂಪಾದಕರದಾಗಲಿ ಅಲ್ಲ.

೨. ವಾಕ್ಯವೇಷ್ಟನಗಳನ್ನೂ ಉದ್ಧೃತ ಗದ್ಯಪದ್ಯಗಳನ್ನೂ ಅವುಗಳ ಭಾಗಗಳನ್ನೂ ಸಾಧ್ಯವಿದ್ದ ಮಟ್ಟಿಗೆ ಅವುಗಳ ಮೂಲಗಳನ್ನು ನೋಡಿಕೊಂಡು ಶೋಧಿಸಿದೆ.

೩. ಮೂಲಗಳಲ್ಲಿ ಆಕಸ್ಮಿಕವಾಗಿ ಆಗಿರುವ ಅಚ್ಚಿನ ತಪ್ಪುಗಳನ್ನೂ ಕಾಗುಣಿತದ ತಪ್ಪುಗಳನ್ನೂ ಸರಿಪಡಿಸಿ ಉದ್ಧೃತರೂಪಗಳನ್ನಿಟ್ಟಿದೆ.

೪. ಪ್ರಾಚೀನ ಗದ್ಯಪದ್ಯಗಳನ್ನೂ ಅವುಗಳ ಭಾಗಗಳನ್ನೂ ಉದ್ಧರಿಸುವಾಗ ಅವುಗಳು ಅಸಂಪಾದಿತವಾಗಿದ್ದರೆ, ಸಂಪಾದಿತವಾಗಿಯೂ ತುಂಬ ಸಂದಿಗ್ಧವಾಗಿದ್ದರೆ ಅಥವಾ ಈಚೆಗೆ ಖಚಿತವಾದ ತಿದ್ದುಪಡಿಗಳಿಗೆ ಒಳಗಾಗಿದ್ದರೆ ಅರ್ಥವಿಶದತೆಯ ದೃಷ್ಟಿ ಸಣ್ಣಪುಟ್ಟ ಸಂಪಾದಕೀಯ ಮಾರ್ಪಾಡುಗಳನ್ನು ಮಾಡಿದೆ.

೫. ಪ್ರಾಚೀನ ಗದ್ಯಪದ್ಯಗಳಿಗೆ, ಅವುಗಳ ಭಾಗಗಳಿಗೆ ಅರ್ಥ ತಾತ್ಪರ್ಯಗಳನ್ನು ಇತರ ಕಡೆಗಳಿಂದ ಉದ್ಧರಿಸಿ ಕೊಡುವಾಗ ಆಯಾ ಲೇಖಕರು ಅನುಸರಿಸುವ ಮೂಲದಲ್ಲಿರುವಂತೆಯೇ ಅಥವಾ ಲೇಖಕರು ತಮ್ಮ ತಿಳಿವಳಿಕೆಗೆ ಸರಿಯೆಂದು ತೋರಿ ಬರೆದಿರುವಂತೆಯೇ ಅವನ್ನು ಉಳಿಸಿಕೊಂಡಿದೆ.

೬. ಅನ್ಯ ಮೂಲದಿಂದ ಎತ್ತಿದವು ಹೊರತು, ಉಳಿದ ಕಡೆಗಳಲ್ಲಿ ಸ್ಥಳ, ವ್ಯಕ್ತಿ, ಕೃತಿ ಮುಂತಾದವುಗಳನ್ನು ಹೇಳುವ ಶಬ್ದರೂಪಗಳನ್ನು ವಿಶೇಷವಾಗಿ ಜನರೂಢಿಯಲ್ಲಿರುವಂತೆಯೇ ಇಟ್ಟುಕೊಂಡಿದೆ. ಹೀಗೆ ಮಾಡುವಾಗ ಇಡಿಯ ಗ್ರಂಥದಲ್ಲಿ, ಕನಿಷ್ಠಪಕ್ಷ ಆಯಾ ಅಧ್ಯಾಯದಲ್ಲಿ ಒಂದೇ ರೂಪದ ಬಳಕೆಯಿರುವಂತೆ ಯತ್ನಿಸಿದೆ.

* * *

೧೦ ಸಂಪುಟಗಳ ಕನ್ನಡ ಸಾಹಿತ್ಯ ಚರಿತ್ರೆಯ ಸಿದ್ಧತೆಗೆ ತಕ್ಕ ರೂಪರೇಷೆಗಳು ರೂಪುಗೊಂಡದ್ದು, ಕೆಲಸ ಮೊದಲಾದ್ದು ಈಗ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರುವ ಪ್ರೊ. ದೇ. ಜವರೇಗೌಡ ಅವರು ಕನ್ನಡ ಇಲಾಖೆಯ ಪ್ರಾಧ್ಯಾಪಕರಾಗಿದ್ದಾಗ (೧೯೬೪). ಅವರ ನುಡಿಯೊಲುಮೆ ಮುನ್ನೋಟಗಳ ಫಲವಾಗಿ ವ್ಯವಸ್ಥೆಯಂತೆ ಕೆಲಸ ತೃಪ್ತಿಕರವಾಗಿ ನಡೆದರೂ ಕಾರಣಾಂತರಗಳಿಂದ ಈ ಮೊದಲನೆಯ ಸಂಪುಟ ಪೂರ್ತಿಯಾಗಲು ಕೆಲವು ಅಧ್ಯಾಯ ಭಾಗಗಳು ಬರೆಯುಬರದೆ ಪ್ರಕಟಣೆ

ಈವರೆಗೆ ತಡೆದಿತ್ತು. ಅವರು ಕುಲಪತಿಗಳಾದ ಮೇಲೆ, ಅವರ ಸ್ಥಾನದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರೂ ಕನ್ನಡ ಪ್ರಾಧ್ಯಾಪಕರೂ ಆಗಿ ಅಧಿಕಾರ ವಹಿಸಿದ ಡಾ. ಹಾ. ಮಾ. ನಾಯಕ ಅವರು ಈ ಕೆಲಸಕ್ಕೆ ಸೂಕ್ತವಾದ ಹಾಗೂ ಉಚಿತವಾದ ನಿರ್ದೇಶನವನ್ನು ಕೊಟ್ಟು ಪ್ರಕಟಣೆಯನ್ನು ತ್ವರೆಗೊಳಿಸಿದರು. ಸಹೋದ್ಯೋಗಿಗಳ ವಿಷಯದಲ್ಲಿ ಅವರಿಗಿರುವ ಪ್ರೀತ್ಯಾದರಗಳಿಂದಾಗಿ, ದೊಡ್ಡ ಯೋಜನೆಗಳನ್ನು ಕೈಗೂಡಿಸುವುದರಲ್ಲಿ ಅವರಿಗಿರುವ ಸಾಮರ್ಥ್ಯ ಕೌಶಲಗಳಿಂದಾಗಿ ಈಗ ಈ ಸಾಹಿತ್ಯ ಚರಿತ್ರೆಯ ಯೋಜನೆಯೂ ತನ್ನ ಹಾದಿಯಲ್ಲಿ ಮೊದಲ ಹೆಜ್ಜೆಯನ್ನಿಟ್ಟಿದೆ; ಮೊದಲ ಸಂಪುಟ ಪ್ರಕಟವಾಗುತ್ತಿದೆ. ಈ ಮಹನೀಯರಿಬ್ಬರಿಗೂ ಕನ್ನಡದ ಮೇಲ್ಮೆಯನ್ನು ಬಯಸುವ ಎಲ್ಲರ ಪರವಾಗಿ ನನ್ನ ವಂದನೆಗಳು; ಈ ಸಂಪುಟದ ಸಂಪಾದನ ಕಾರ್ಯವನ್ನು ನನಗೆ ಒಪ್ಪಿಸಿದ ಅವರ ವಾತ್ಸಲ್ಯಕ್ಕೆ ನನ್ನ ಕೃತಜ್ಞತೆಗಳು.

ಸಂಪುಟದ ಸಿದ್ಧತೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಬೇರೆ ಬೇರೆ ವಿಭಾಗಗಳ ಹಲವರು ಮಿತ್ರರೂ ವಿದ್ಯಾರ್ಥಿಗಳೂ ನನಗೆ ನೆರವಾಗಿದ್ದಾರೆ. ಅಲ್ಲದೆ ಭಾರತ ಸರ್ಕಾರದ ಮುಖ್ಯ ಶಾಸನತಜ್ಞರ ಕಛೇರಿಯ ಡಾ. ಕೆ. ವಿ. ರಮೇಶ್ ಅವರೂ ಭಾರತೀಯ ಭಾಷಾ ಸಂಸ್ಥಾನದ ಡಾ. ಬಿ. ಬಿ. ರಾಜಪುರೋಹಿತ್ ಅವರೂ ನನಗೆ ಸಹಾಯ ಮಾಡಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು, ವಂದನೆಗಳು. ಮುದ್ರಣದ ವಿವಿಧ ಹಂತಗಳಲ್ಲಿ ನನ್ನಿಂದಾದ ತಡೆ ತೊಂದರೆಗಳನ್ನೆಲ್ಲ ತಾಳ್ಮೆಯಿಂದ ಸಹಿಸಿಕೊಂಡು ಪ್ರೀತಿಯಿಂದ ಸಹಕರಿಸಿದ ಮಿತ್ರರಾದ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರಿಗೆ ನನ್ನ ಹಾರ್ದಿಕವಾದ ಕೃತಜ್ಞತೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ **ಟಿ. ವಿ. ವೆಂಕಟಾಚಲ ಶಾಸ್ತ್ರೀ**
ಅಕ್ಟೋಬರ್ ೨೫, ೧೯೭೪

# ಸಂಕ್ಷಿಪ್ತ ಸೂಚಿ

ABORI. Annals of Bhandarkar Oriental Research Institute
BKI. Bomb y Karnatak Inscriptions
BSOAS. Bulletin of the School of Oriental and African Studies
CGDL. Comparative Grammar of the Dravidian Languages
EC. Epigraphia Carnatica
EI. Epigraphia Indica
HJMU. Half yearly Journal of the Mysore University
HKL. History of Kannada Language
IA. Indian Antiquary
IHQ. Indian Historical Quarterly
JAHRS. Journal of Andhra Historical Research Society
JBBRAS. Journal of the Bombay Branch of the Royal Asiatic Society
JKU. Journal of the Karnatak University
JRAS. Journal of Royal Asiatic Society of Great Britain and Ireland
KI. Karnatak Inscriptions
MAR. Mysore Archaeological Report
QJMS. Quarterly Journal of the Mythic Society
SII. South Indian Inscriptions
YIC. Yaśastilaka and Indian Culture
ZDMG. Zeitschrift der Deutschen Morgenländischen Gesselschaft

ಕಕಚ. ಕರ್ಣಾಟಕ ಕವಿಚರಿತೆ
ಕಸಾಪ. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ
ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ
ಜಯಕ. ಜಯಕರ್ನಾಟಕ
ಪ್ರಕ. ಪ್ರಬುದ್ಧ ಕರ್ಣಾಟಕ

# ಲೇಖನದಾರರು

ಹಾ. ಮಾ. ನಾಯಕ (ಡಾ.) : ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ

ಡಿ. ಕೆ. ರಾಜೇಂದ್ರ (ಡಾ.) : ಕನ್ನಡ ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಬಿ. ಎಸ್. ಸಣ್ಣಯ್ಯ : ಸಹಾಯಕ ನಿರ್ದೇಶಕ, ಸಂಪಾದನ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಎಚ್. ತಿಪ್ಪೇರುದ್ರಸ್ವಾಮಿ (ಡಾ.) : ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ನಿರ್ದೇಶಕ

ಟಿ. ವಿ. ವೆಂಕಟಾಚಲ ಶಾಸ್ತ್ರೀ (ಡಾ.) : ಕನ್ನಡ ರೀಡರ್ ; 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ' ಸಂಪಾದಕ

ಕೆ. ಕೆಂಪೇಗೌಡ : ಭಾಷಾವಿಜ್ಞಾನ ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಡಿ. ವಿಜಯ : ಕನ್ನಡ ಅಧ್ಯಾಪಕಿ, ಕನ್ನಡ ಅಧ್ಯಯನ ಸಂಸ್ಥೆ

ಕೆ. ಅನಂತರಾಮು : ಕನ್ನಡ ಅಧ್ಯಾಪಕ, ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜು

ಎಸ್. ಎಸ್. ಯದುರಾಜನ್ : ಸಂಶೋಧನ ವಿದ್ಯಾರ್ಥಿ, ಭಾಷಾಶಾಸ್ತ್ರ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಎಸ್. ನಾಗರಾಜು : ಉಪಸಂಪಾದಕ, ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ

ಎಚ್. ಎಂ. ಚನ್ನಯ್ಯ : ಕನ್ನಡ ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಬಾ. ರಾ. ಗೋಪಾಲ (ಡಾ.) : ಶಾಸನತಜ್ಞ, ಕನ್ನಡ ಅಧ್ಯಯನ ಸಂಸ್ಥೆ

ಸೀತಾರಾಮ್ ಎಸ್. ಜಾಗೀರ್‌ದಾರ್ : ಶಾಸನ ಸಹಾಯಕ, ಕನ್ನಡ ಅಧ್ಯಯನ ಸಂಸ್ಥೆ

ಎಂ. ಹನುಮಂತರಾವ್ : ಉಪ ಶಾಸನತಜ್ಞ, ಕನ್ನಡ ಅಧ್ಯಯನ ಸಂಸ್ಥೆ

ಆರ್. ವಿ. ಎಸ್. ಸುಂದರಂ (ಡಾ.) : ತೆಲುಗು ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಜಿ. ಜಿ. ಮಂಜುನಾಥನ್ : ಸಂಶೋಧನ ಸಹಾಯಕ, ಸಂಪಾದನ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಎಡ್ವರ್ಡ್ ನೊರೋನ್ಹಾ : ಕನ್ನಡ ಅಧ್ಯಾಪಕ, ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜು

ಎಸ್. ಲಕ್ಷ್ಮೀನಾರಾಯಣ ಅರೋರಾ : ಅಧ್ಯಾಪಕ, ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಸಿ. ಪಿ. ಕೃಷ್ಣಕುಮಾರ್ : ಕನ್ನಡ ರೀಡರ್, ಕನ್ನಡ ಅಧ್ಯಯನ ಸಂಸ್ಥೆ

ಎಚ್. ಎಸ್. ಹರಿಶಂಕರ್ : ಅಧ್ಯಾಪಕ, ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಅಧ್ಯಾಯ ಒಂದು

# ಕನ್ನಡ ಸಾಹಿತ್ಯ ಚರಿತ್ರೆ: ಸ್ವರೂಪ, ಸಮೀಕ್ಷೆ

## ಸಾಹಿತ್ಯ ಚರಿತ್ರೆಯ ಸ್ವರೂಪ

ಸಾಹಿತ್ಯ ಎಂದರೆ ವಿಶಾಲವಾದ ಅರ್ಥದಲ್ಲಿ ಒಂದು ಭಾಷೆಯಲ್ಲಿರುವ ಗ್ರಂಥಗಳ ಸಮೂಹ, ವಿಶಿಷ್ಟ ಅರ್ಥದಲ್ಲಿ ಭಾಷಾಮಾಧ್ಯಮದ ಮೂಲಕ ಸೃಷ್ಟಿಯಾಗುವ ಕಲಾ ಕೃತಿ. ಎರಡನೆಯದು ಮೊದಲನೆಯದರ ಒಂದು ಭಾಗವೂ ಹೌದು; ಎಂದರೆ ಒಂದು ಭಾಷೆಯ ಗ್ರಂಥಗಳನ್ನು ಶುದ್ಧಸಾಹಿತ್ಯ ಕೃತಿಗಳೆಂದೂ ಶಾಸ್ತ್ರಸಾಹಿತ್ಯ ಕೃತಿಗಳೆಂದೂ ಎರಡು ಭಾಗ ಮಾಡಬಹುದು. ಶುದ್ಧಸಾಹಿತ್ಯ, ಮಾತಿನ ಕಲೆ. ಶಾಸ್ತ್ರಸಾಹಿತ್ಯ, ವೈಜ್ಞಾನಿಕ ನಿರೂಪಣೆ. ಸಾಮಾನ್ಯವಾಗಿ ಸಾಹಿತ್ಯ ಹೃದಯ ಸಂಬಂಧಿಯಾದದ್ದು; ಶಾಸ್ತ್ರ ಬುದ್ಧಿಪ್ರಧಾನವಾದದ್ದು. ಒಂದರ ಗುರಿ ಆನಂದಾನುಭೂತಿ; ಇನ್ನೊಂದರ ಉದ್ದೇಶ ಜ್ಞಾನಪ್ರಸಾರ. ಆದರೆ ಇವೆರಡನ್ನೂ ಪರಸ್ಪರ ಸಂಬಂಧವಿಲ್ಲದವೆಂದು ಪರಿಗಣಿಸಲು ಸಾಧ್ಯವಿಲ್ಲ. ಶಾಸ್ತ್ರಗ್ರಂಥಗಳಲ್ಲಿ ಸಾಹಿತ್ಯದ ಗುಣ ಕಾಣಿಸಬಹುದು; ಸಾಹಿತ್ಯದ ವೇಷದಲ್ಲಿ ಶಾಸ್ತ್ರ ಮೈದೋರಬಹುದು. ಬುದ್ಧಿ ಹೃದಯಗಳ ಒಟ್ಟು ವಿಕಸನದಿಂದ ಒಂದು ವ್ಯಕ್ತಿತ್ವದ ಹಿರಿಮೆ ಹೆಚ್ಚುವಂತೆ, ಒಂದು ಭಾಷೆಯ, ವಿಶಾಲ ಅರ್ಥದ ಸಾಹಿತ್ಯದಲ್ಲಿ, ಸೃಜನಾತ್ಮಕ ಸಾಹಿತ್ಯ ಹಾಗೂ ಜ್ಞಾನಸಾಹಿತ್ಯಗಳು ಸಮನಾಗಿ ಬೆಳೆದಾಗಲೆ ಆ ಭಾಷೆಯ ಮಹತ್ತ್ವ ಹೆಚ್ಚಾಗುತ್ತದೆ.

ಮನುಷ್ಯನ ಪ್ರತಿಯೊಂದು ಅನುಭವಕ್ಕೂ ಚಟುವಟಿಕೆಗೂ ಒಂದು ಚರಿತ್ರೆ ಇದ್ದೇ ಇರುತ್ತದೆ. ಹಾಗೆಯೇ ಸಾಹಿತ್ಯಕ್ಕೂ ಒಂದು ಚರಿತ್ರೆ ಇರುತ್ತದೆ. ಯಾವ ಸಾಹಿತ್ಯವಾದರೂ ಕೇವಲ ಸಮಕಾಲೀನ ಸಾಹಿತ್ಯವಾಗಿ ಇರಲಾರದು. ಕೆಲವು ಸಾಹಿತ್ಯಗಳ ಚರಿತ್ರೆಯನ್ನು ತಿಳಿಯಲು ಅಗತ್ಯವಾದ ಆಧಾರಗಳು ಇರುತ್ತವೆ. ಇನ್ನು ಕೆಲವು ಸಾಹಿತ್ಯಗಳ ಚರಿತ್ರೆಗೆ ಬೇಕಾದ ಆಧಾರಗಳು ದೊರೆಯುವುದಿಲ್ಲ. ಆಧಾರಗಳು ಇಲ್ಲದ ಮಾತ್ರಕ್ಕೆ ಚರಿತ್ರೆಯೇ ಇಲ್ಲವೆಂದು ಅರ್ಥವಲ್ಲ. ಮಾತು ಕಾಲದೇಶಗಳ ಕಟ್ಟಿಗೆ ಒಳಗಾದದ್ದು. ಆಡಿದಾಗಲೆ ಅದರ ಅಸ್ತಿತ್ವ ಮುಗಿದುಹೋಗುತ್ತದೆ. ಅದನ್ನು ಉಳಿಸಿಕೊಳ್ಳುವ ಮಾರ್ಗ ಇದುವರೆಗೆ ಇದ್ದದ್ದು ಎರಡೇ: ಒಂದು ನೆನಪು; ಇನ್ನೊಂದು ಬರವಣಿಗೆ. ಮಾತಿನ ಮಾಧ್ಯಮದಲ್ಲಿ ಸೃಷ್ಟಿಗೊಳ್ಳುವ ಕಲಾಕೃತಿಯಾಗಲಿ, ಶಾಸ್ತ್ರನಿರೂಪಣೆಯಾಗಲಿ ಹೀಗೆಯೇ ಉಳಿದುಬರಬೇಕು. ಕೇವಲ ತಲೆಮಾರುಗಳ ನೆನಪಿನಲ್ಲಿ ಉಳಿದು

ಬಂದ ಸಾಹಿತ್ಯದ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸುವುದು ಸಾಧ್ಯವಿಲ್ಲ. ಬರವಣಿಗೆಯಲ್ಲಿ ಬಂದ ಸಾಹಿತ್ಯದ ಬೆಳವಣಿಗೆಯನ್ನು ಹಂತಹಂತವಾಗಿ ಗುರುತಿಸುವುದು ಸುಲಭವಾಗುತ್ತದೆ. ಆದುದರಿಂದ ಸಾಹಿತ್ಯಚರಿತ್ರೆಗೆ ಮುಖ್ಯ ಆಧಾರ ಒಂದು ಭಾಷೆಯಲ್ಲಿರುವ ಗ್ರಂಥಸಮುದಾಯ. ಇಂಥ ಒಂದು ಗ್ರಂಥ ಸಮುದಾಯದ ಚರಿತ್ರೆಯ ನಿರೂಪಣೆಯೇ ಸಾಹಿತ್ಯಚರಿತ್ರೆ.

ಒಂದು ಸಾಹಿತ್ಯವನ್ನು ಅಭ್ಯಾಸಮಾಡುವವರು ಅದರ ಬೆಳವಣಿಗೆಯ ಕ್ರಮವನ್ನು ಅನುಸರಿಸುವುದು ಅಗತ್ಯವಾಗುತ್ತದೆ; ಅದರ ಉಗಮವಿಕಾಸದ ವಿವಿಧ ಮಜಲುಗಳನ್ನು ಗಮನಿಸಬೇಕಾಗುತ್ತದೆ. ಸಾಹಿತ್ಯಚರಿತ್ರೆ ಭಾಷಾಚರಿತ್ರೆ, ಸಾಹಿತ್ಯವಿಮರ್ಶೆ, ಗ್ರಂಥ ಸಂಪಾದನೆಗಳಿಂದ ಬೇರೆಯಾದುದು. ಈ ಮೂರೂ ಒಂದಲ್ಲ ಒಂದು ರೀತಿಯಿಂದ ಸಾಹಿತ್ಯಚರಿತ್ರೆಯ ನಿರ್ಮಾಣಕ್ಕೆ ಅಗತ್ಯವಾದರೂ ಅವುಗಳ ಉದ್ದೇಶ ಸ್ವರೂಪ ಭಿನ್ನವಾದುವು. ರಾಬರ್ಟ್ ಸ್ಪಿಲ್ಲರ್ ಹೇಳುವಂತೆ ಸಾಹಿತ್ಯ ಚರಿತ್ರಕಾರ ಹೆಚ್ಚುಕಡಿಮೆ ಪರಿಣತನಾದ ಭಾಷಾಶಾಸ್ತ್ರಜ್ಞ, ಗ್ರಂಥಸಂಪಾದಕ, ವಿಮರ್ಶಕ ಆಗಿರಲೇಬೇಕಾಗಿದ್ದರೂ ಸಾಹಿತ್ಯಚರಿತ್ರಕಾರನಾಗಿ ಅವನು ನಿರ್ವಹಿಸಬೇಕಾದ ಹೊಣೆಯೇ ಪ್ರತ್ಯೇಕವಾದುದು; ವಿಶಿಷ್ಟವಾದುದು.[1] ,

ಸಾಹಿತ್ಯ ಚರಿತ್ರಕಾರನೂ ಮಿಕ್ಕ ಚರಿತ್ರಕಾರರಂತೆ ಒಬ್ಬ ಚರಿತ್ರಕಾರ. ಚರಿತ್ರೆಯ ನಿರ್ಮಾಣದಲ್ಲಿ ಎದುರಾಗುವ ಅಡೆತಡೆಗಳನ್ನೆಲ್ಲ ಇತರರಂತೆಯೇ ಅವನೂ ಎದುರಿಸಬೇಕಾಗುತ್ತದೆ. ಎಲ್ಲ ಚರಿತ್ರಕಾರರೂ ತಮ್ಮ ತಮ್ಮ ವಿಷಯಗಳ ಚರಿತ್ರೆಯನ್ನು ಬರೆಯುವಾಗ ಆ ವಿಷಯಗಳಲ್ಲಿ ಅಭಿವ್ಯಕ್ತಗೊಳ್ಳುವ ಒಂದು ಸಮಾಜದ, ಜನಾಂಗದ ಚರಿತ್ರೆಯನ್ನೇ ಹೇಳುತ್ತಾರೆ. ಹಾಗೆಯೇ ಸಾಹಿತ್ಯಚರಿತ್ರೆಯಲ್ಲಿಯೂ ಆಯಾ ಸಾಹಿತ್ಯದಲ್ಲಿ ಪ್ರಕಟಗೊಳ್ಳುವ ಸಮಾಜ ಜೀವನದ, ರಾಷ್ಟ್ರಜೀವನದ ಚರಿತ್ರೆ ರೂಪುಗೊಳ್ಳುತ್ತದೆ. ಸಾಹಿತ್ಯಚರಿತ್ರಕಾರನ ಆದ್ಯಕರ್ತವ್ಯ ತಾನು ಆಯ್ದುಕೊಂಡ ಕಾಲ, ದೇಶದ ಸಾಹಿತ್ಯ ಕೃತಿಗಳನ್ನು ಕಂಡುಹಿಡಿದು ಅವುಗಳ ಸ್ವರೂಪವನ್ನು ವರ್ಣಿಸುವುದು. ಹಾಗೆಂದು ಕಾಲದ ದಾರದಲ್ಲಿ ಕೃತಿಮಣಿಗಳನ್ನು ಪೋಣಿಸುವುದಷ್ಟೇ ಅವನ ಕೆಲಸವಲ್ಲ. ಪ್ರತಿಯೊಂದು ಕೃತಿಯ ಮೂಲಸಾಮಗ್ರಿಯನ್ನು ಶೋಧಿಸುವುದೂ ಆಧಾರವನ್ನು ಹುಡುಕುವುದೂ ಆ ಕೃತಿಯ ಪ್ರಭಾವವನ್ನು ಅಳೆಯುವುದೂ ಅವನ ಜವಾಬ್ದಾರಿಯಾಗಿರುತ್ತದೆ. ಕೃತಿಯನ್ನು ಕಂಡುಹಿಡಿಯುವುದು ಎಷ್ಟು ಮುಖ್ಯವೋ ಅದರ ಪ್ರಭಾವವನ್ನು ಗುರುತಿಸುವುದೂ ಅಷ್ಟೇ ಮಹತ್ವದ್ದು. ಸಾಹಿತ್ಯಕೃತಿಯೊಂದರ ನಿರ್ಮಾಣದಲ್ಲಿ ಕೃತಿಕಾರನ ಅನುಭವದ ಸ್ವರೂಪ ಯಾವ ಬಗೆಯದೆಂಬುದನ್ನು ಗಮನಿಸುವುದಲ್ಲದೆ, ಈ ಅನುಭವಕ್ಕೆ ಅವನ ಸಾಮಾಜಿಕ ಸಾಂಸ್ಕೃತಿಕ ಪರಿಸರ ಎಷ್ಟರಮಟ್ಟಿಗೆ ಕಾರಣವಾಗಿದೆ ಎಂಬುದನ್ನು ಪರಿಶೀಲಿಸುವುದು ಕೂಡ ಸಾಹಿತ್ಯಚರಿತ್ರಕಾರನ ಹೊಣೆಯೇ. ಹೀಗೆ ನೋಡುವಾಗ ಅವನು ಕಾಲಧರ್ಮಕ್ಕನುಗುಣವಾದ ವ್ಯತ್ಯಾಸಗಳನ್ನೂ ಅವುಗಳಿಗೆ ಕಾರಣವನ್ನೂ ಹುಡುಕಬೇಕಾಗುತ್ತದೆ. ಒಂದು ಸಾಹಿತ್ಯಕೃತಿ ತನ್ನದೇ ಒಂದು ಲಕ್ಷಣವನ್ನು ಹೊಂದಿರುತ್ತದೆ. ಜೊತೆಗೆ ಒಟ್ಟು

ಸಾಹಿತ್ಯದ ದೃಷ್ಟಿಯಿಂದ ಕಾಣುವ ಇನ್ನೊಂದು ಲಕ್ಷಣವನ್ನೂ ಪಡೆದಿರುತ್ತದೆ. ಆದುದರಿಂದ ಸಾಹಿತ್ಯಚರಿತ್ರಕಾರ ಪ್ರತಿಯೊಂದು ಕೃತಿಯನ್ನೂ ಎರಡು ಮಜಲುಗಳಲ್ಲಿ ಸೂಕ್ಷ್ಮವಾಗಿ ನಿರೀಕ್ಷಿಸಿ, ತನ್ನ ಚರಿತ್ರೆಯಲ್ಲಿ ಅದರ ಸ್ಥಾನವನ್ನು ನಿರ್ದೇಶಿಸಬೇಕಾಗುತ್ತದೆ.

ಪ್ರತಿಯೊಂದು ಕೃತಿಯೂ ಒಂದು ಗೊತ್ತಾದ ಕಾಲದಲ್ಲಿ, ಗೊತ್ತಾದ ಜಾಗದಲ್ಲಿ ಲೇಖಕನ ಪರಿಸರ ಪ್ರಜ್ಞೆಗಳಿಗೆ ಅನುಗುಣವಾಗಿ ಸಿದ್ಧಗೊಂಡಿರುತ್ತದೆ. ಸಾಹಿತ್ಯ ಮತ್ತು ಸಮಾಜ—ಸಂಸ್ಕೃತಿಗಳ ನಡುವಿನ ಸಂಬಂಧ ಸಂಕೀರ್ಣವಾದುದು. ಸಾಹಿತ್ಯಚರಿತ್ರಕಾರ ದ್ವಿಮುಖ ಸಂಚಾರವನ್ನು ಬಲ್ಲವನಾಗಿರಬೇಕು. ಇಲ್ಲಿ ಅವನಿಗೆ ಸಾಹಿತ್ಯವಷ್ಟೇ ಅಲ್ಲದೆ ಇನ್ನೂ ಅನೇಕ ವಿಷಯಗಳ ಪರಿಜ್ಞಾನ ಅಗತ್ಯವಾಗುತ್ತದೆ. ಭಾಷೆ ಸಾಹಿತ್ಯಗಳಲ್ಲದೆ, ಧರ್ಮ, ಮನಶ್ಶಾಸ್ತ್ರ, ತತ್ತ್ವಶಾಸ್ತ್ರ, ಸಮಾಜಶಾಸ್ತ್ರ, ರಾಜಕೀಯ, ರಂಗಭೂಮಿ, ಪ್ರಾಕ್ತನಶಾಸ್ತ್ರ ಮುಂತಾದ ನಾನಾ ವಿಷಯಗಳಲ್ಲಿ ಅವನು ಪರಿಚಯ ಪಡೆದಿರಬೇಕಾಗುತ್ತದೆ. ಏಕೆಂದರೆ ಒಂದು ಸಾಹಿತ್ಯಕೃತಿಯ ಚರಿತ್ರೆ ಒಂದು ಸಮಾಜದ ಚರಿತ್ರೆಯೇ ಆಗಿರುತ್ತದೆ. ಸಮಾಜದ ವಿವಿಧ ಚಟುವಟಿಕೆಗಳ ಪರಿಚಯದಿಂದ ಸಾಹಿತ್ಯಕೃತಿಯ ಪರಿಚಯ ನಿಕಟಗೊಳ್ಳುತ್ತದೆ; ಅರ್ಥವತ್ತಾಗುತ್ತದೆ.

ಸಾಹಿತ್ಯ ಸೃಷ್ಟಿಯ ಆಧಾರಗಳನ್ನು ಸಾಹಿತ್ಯಚರಿತ್ರಕಾರ ವಿಶೇಷವಾಗಿ ಲಕ್ಷಿಸಬೇಕು. ಭಾವನೆಗಳೂ ವಿಚಾರಗಳೂ ಲೋಕವನ್ನು ಆಳುತ್ತವೆ. ಲೇಖಕ ಈ ಲೋಕದ ಪ್ರಜೆಯಾಗಿರುವುದರಿಂದ ಅವನು ಒಂದಲ್ಲ ಒಂದು ವಿಚಾರದ ಪ್ರಭಾವಕ್ಕೆ ಒಳಗಾಗಿಯೇ ಇರುತ್ತಾನೆ. ಧಾರ್ಮಿಕ ಹಾಗೂ ರಾಜಕೀಯ ವಿಚಾರಗಳು ಲೇಖಕರ ಮೇಲೆ ಅಥವಾ ಸಾಹಿತ್ಯದ ಮೇಲೆ ಮಿಕ್ಕ ವಿಚಾರಗಳಿಗಿಂತ ಹೆಚ್ಚಿನ ಪ್ರಭಾವ ಬೀರುತ್ತವೆ. ಇವೆರಡೂ ದೈನಂದಿನ ಜೀವನದಲ್ಲಿ ವಿಶೇಷ ಪಾತ್ರವಹಿಸುವುದೇ ಇದಕ್ಕೆ ಕಾರಣ. ಸಾಹಿತ್ಯಕೃತಿಗಳಲ್ಲಿ ಅವುಗಳ ಲೇಖಕರು ಒಪ್ಪಿಕೊಂಡ ಮತತತ್ತ್ವಗಳೂ ಜೀವನಸಿದ್ಧಾಂತಗಳೂ ಪ್ರಕಟಗೊಳ್ಳುವುದು ಅನಿವಾರ್ಯ. ಹೊಸ ಹೊಸ ವಿಚಾರಗಳು ಒಂದು ಸಮಾಜದಲ್ಲಿ ನೆಲೆಯೂರಬೇಕಾದರೆ ಅವುಗಳನ್ನು ಪ್ರತಿಪಾದಿಸುವ ಹೊಣೆಯನ್ನು ಯಾರಾದರೂ ಹೊರಬೇಕಾಗುತ್ತದೆ. ಈ ಪ್ರತಿಪಾದನೆ ಸಾಹಿತ್ಯದ ಮೂಲಕ ನಡೆದರೆ, ಕಲೆಯ ಮಾಧ್ಯಮದ ಮೂಲಕ ಹರಡಿದರೆ ಜನರ ಮನಸ್ಸನ್ನು ಮುಟ್ಟುವುದು ಸುಲಭ. ಆರಂಭದಲ್ಲಿ ಇದು ಕೇವಲ ಪ್ರಚಾರ ಸಾಹಿತ್ಯವಾಗಬಹುದು. ಆದರೆ ಶಕ್ತರ ಕೈಯಲ್ಲಿ ಘನ ವಿಚಾರಗಳೂ ರಸಲೇಪನಕ್ಕೊಳಗಾಗುತ್ತವೆ. ಹೊಸ ವಿಚಾರಧಾರೆ ಎಚ್ಚೆತ್ತ ಸಮಾಜವನ್ನು ಸದಾ ಆಕರ್ಷಿಸುತ್ತಲೇ ಇರುತ್ತದೆ. ಜೀವಂತವಾದ ಸಮಾಜದಲ್ಲಿ ವಿವಿಧ ರೀತಿಯ ಹೋರಾಟಗಳು ನಡೆಯುತ್ತಿರುತ್ತವೆ. ಲೇಖಕನ ಹೃದಯ ಬುದ್ಧಿಗಳು ಇವುಗಳಿಂದ ತಪ್ಪಿಸಿಕೊಳ್ಳುವುದಿಲ್ಲ. ಕೆಲವು ಸಲ ಮಹಾಲೇಖಕನೊಬ್ಬನ ಹೊಸ ವಿಚಾರಗಳೇ ಸಮಾಜದ ಎಲ್ಲ ಚಟುವಟಿಕೆಗಳಿಗೂ ರಾಷ್ಟ್ರಜೀವನದ ಕ್ರಾಂತಿಗೂ ಇಂಬಾಗಬಹುದು.

ಗೊತ್ತಾದ ಕಾಲದ, ನಿರ್ದಿಷ್ಟ ಸಮಾಜದ ವಿನ್ಯಾಸವನ್ನು ಪರಂಪರಾಗತವಾದ

ಅನೇಕ ವಿಷಯಗಳು ರೂಪಿಸಿರುತ್ತವೆ. ಸಾಂದರ್ಭಿಕ ಜೀವನವ್ಯವಸ್ಥೆ, ಒಪ್ಪಿರುವ ಮೌಲ್ಯಗಳು, ಆಚಾರ ವ್ಯವಹಾರಗಳು, ವಿಧಿ ವಿಧಾನಗಳು ಮುಖ್ಯವೆನ್ನಿಸುತ್ತವೆ. ಒಂದು ಅರ್ಥದಲ್ಲಿ ಇವುಗಳ ಸಮೂಹವನ್ನು ನಾವು ಸಂಸ್ಕೃತಿ ಎಂದು ನಿರ್ದೇಶಿಸಬಹುದು. ಇದು ಕಲಾಕೃತಿಗಳಲ್ಲಿ ಹೊರಹೊಮ್ಮುತ್ತದೆ, ಹಾಗೆಯೇ ಸಾಹಿತ್ಯದಲ್ಲಿ ಕೂಡ. ಸಾಹಿತ್ಯ ಚರಿತ್ರಕಾರ ಈ ಸಾಹಿತ್ಯ ಸಂಸ್ಕೃತಿಗಳ ನಡುವಿನ ಸಂಬಂಧದ ಬಗೆಯನ್ನು ಗುರುತಿಸಬೇಕಾಗುತ್ತದೆ. ಹಾಗೆ ಮಾಡುವಾಗ ಅವನು ಇತರ ಅನೇಕ ವಿಷಯಗಳ ನೆರವನ್ನು ಪಡೆಯುವುದು ಅವಶ್ಯವಾಗುತ್ತದೆ. ಅದರಿಂದ ಆಯಾ ಕಾಲದ ಜೀವನ ಸಾಹಿತ್ಯ ಕೃತಿಗಳಲ್ಲಿ ಹೇಗೆ ಅಭಿವ್ಯಕ್ತವಾಗಿದೆ? ಹಾಗಾಗಲು ಅಂದಂದಿನ ಸಂಸ್ಕೃತಿ ಎಷ್ಟರಮಟ್ಟಿಗೆ ಕಾರಣವಾಗಿದೆ—ಎನ್ನುವುದನ್ನು ಸುಲಭವಾಗಿ ಗುರುತಿಸಬಹುದು.

ಪ್ರತಿಯೊಂದು ಸಂಸ್ಕೃತಿಗೂ ಅದರವೇ ಆದ ಪುರಾಣಪ್ರಪಂಚವಿರುತ್ತದೆ. ಇದು ಒಂದು ಗುಂಪಿನ ಜೀವನವಿಧಾನವನ್ನು ರೂಪಿಸುವುದರಲ್ಲಿ ಮಹತ್ವದ ಸ್ಥಾನ ಪಡೆದಿರುತ್ತದೆ. ಜೊತೆಗೆ ಸಾಹಿತ್ಯದ ಒಂದು ಮೂಲಾಧಾರವೂ ಆಗಿರುತ್ತದೆ. ಪುರಾಣದ ವ್ಯಕ್ತಿಗಳೂ ಪ್ರಸಂಗಗಳೂ ಸಾಹಿತ್ಯಕೃತಿಗಳಲ್ಲಿ ಕಾಲಕಾಲಕ್ಕೆ ಹೊಸ ರೂಪವನ್ನು ಧರಿಸುತ್ತಲೇ ಇರುತ್ತವೆ. ಹಳೆಯದರ ಪರಿಚಯವಿಲ್ಲದಿದ್ದರೆ ಹೊಸದರ ಔಚಿತ್ಯವನ್ನಾಗಲಿ ವೈಶಿಷ್ಟ್ಯವನ್ನಾಗಲಿ ಕಂಡುಕೊಳ್ಳುವುದು ಸಾಧ್ಯವಿಲ್ಲ. ಆದುದರಿಂದ ಸಾಹಿತ್ಯಚರಿತ್ರಕಾರ ಆ ಸಾಹಿತ್ಯದ ಹಿನ್ನೆಲೆಯಲ್ಲಿರುವ ಪುರಾಣಗಳನ್ನೂ ಅದರೊಂದಿಗೇ ಬೆಳೆದುಬಂದ ಸಂಪ್ರದಾಯಗಳನ್ನೂ ಅರಿತು ವ್ಯಾಖ್ಯಾನಿಸುವುದು ಅಗತ್ಯವಾಗುತ್ತದೆ.

ಒಂದು ಸಮಾಜದ ಸಾಂಸ್ಥಿಕ ವ್ಯವಸ್ಥೆಯೂ ಸಾಹಿತ್ಯದಲ್ಲಿ ಪ್ರತಿಫಲಿತವಾಗುತ್ತದೆ. ಇದು ಸಾಮೂಹಿಕ ವರ್ತನೆಯ ಫಲ. ಶಾಲೆ ಕಾಲೇಜುಗಳಿಂದ ಹಿಡಿದು ಸೆರೆಮನೆ ಸರ್ಕಾರಗಳವರೆಗೂ ಇದರ ಹರವು ಇರುತ್ತದೆ. ರಾಜಕೀಯ ಹಾಗೂ ಸಾಮಾಜಿಕ ಸಂಸ್ಥೆಗಳು ತಮ್ಮ ಪ್ರಭಾವವನ್ನು ಭದ್ರಪಡಿಸಲು ಸತತವಾಗಿ ಹೆಣಗುತ್ತಲೇ ಇರುತ್ತವೆ. ಇವು ಕಲಾವಿದನ ಅಭಿವ್ಯಕ್ತಿಯನ್ನು ಕುಂಠಿತಗೊಳಿಸಬಹುದು; ಅವನಿಗೆ ಬೇಕಾದ ಸ್ವಾತಂತ್ರ್ಯವನ್ನು ನೀಡದೆ ಹೋಗಬಹುದು. ಇಂಥ ಪರಿಸ್ಥಿತಿ ಸಾಹಿತ್ಯಜೀವನದ ಮೇಲೆ ಮಹತ್ತ್ವದ ಪರಿಣಾಮವನ್ನುಂಟುಮಾಡುತ್ತದೆ. ಸಾಹಿತ್ಯಚರಿತ್ರಕಾರ ಈ ಪರಿಣಾಮವನ್ನು ಅಳೆಯುವ ಸಾಮರ್ಥ್ಯ ಹೊಂದಿರಬೇಕಾಗುತ್ತದೆ.

ಲೇಖಕನ ಜೀವನಚರಿತ್ರೆ ಸಾಹಿತ್ಯಚರಿತ್ರಕಾರ ಗಮನಿಸಬೇಕಾದ ಮತ್ತೊಂದು ಮುಖ್ಯ ವಿಚಾರ. ಈ ಚರಿತ್ರೆ ಕೇವಲ ಘಟನೆಗಳ ಪಟ್ಟಿಯಲ್ಲ. ಅದು ಒಬ್ಬ ಲೇಖಕನ ಅಥವಾ ಒಂದು ಅವಧಿಯ ಲೇಖಕರ ಜೀವನಾನುಭವ ಸಾರ. ಈ ಅನುಭವ ಅವರ ಕ್ರಿಯಾಶೀಲತೆಯ ಲಕ್ಷಣಗಳನ್ನು ರೂಪಿಸುತ್ತದೆ; ಸ್ವರೂಪವನ್ನು ನಿರ್ಧರಿಸುತ್ತದೆ. ವಿಚಾರಗಳು, ಸಂಸ್ಕೃತಿ, ಪುರಾಣ, ಸಾಂಸ್ಥಿಕ ವ್ಯವಸ್ಥೆ, ಲೇಖಕನ ಅನುಭವ ಇವು ಒಟ್ಟಾಗಿ ಒಂದು ಸಾಹಿತ್ಯದ ಆಧಾರವಾಗುತ್ತವೆ. ಇವುಗಳ ಬೆಳೆವಣಿಗೆ ಏಕ ಪ್ರಕಾರವಾದುದಲ್ಲ. ಈ ಎಲ್ಲ ಆಧಾರಗಳನ್ನೂ ಬಳಸಿಕೊಂಡು ಸಿದ್ಧವಾದ ಸಾಹಿತ್ಯದ ಸ್ವರೂಪವೇ ಕಾಲಕಾಲಕ್ಕೆ ಬದಲಾಗು

ತ್ತಿರುತ್ತದೆ. ಈ ಬದಲಾವಣೆಗೂ ಕಾರಣಗಳನ್ನು ಆಧಾರಗಳಲ್ಲಿಯೇ ಹುಡುಕಬಹುದಾದರೂ, ಸಾಹಿತ್ಯಚರಿತ್ರಕಾರ ಬದಲಾವಣೆಯ ಅಂಶಗಳ ನಿರೂಪಣೆಗೆ ಗಮನ ಕೊಡುತ್ತಾನೆ. ಸಾಹಿತ್ಯದ ಮಾಧ್ಯಮ ಭಾಷೆ. ಇದು ಒಂದೇ ಬಗೆಯಾಗಿರುವುದಿಲ್ಲ. ಕಾಲ ದೇಶ ಸಮಾಜಗಳಿಗೆ ಅನುಗುಣವಾಗಿ ಕಾಲಕಾಲಕ್ಕೆ ಬದಲಾಗುತ್ತಿರುತ್ತದೆ. ಭಾಷೆಯೊಂದಿಗೇ ಬೆರೆತುಕೊಂಡ ಇನ್ನೊಂದು ಅಂಶ ಪ್ರಕಾರಗಳದು. ಒಂದು ಸಾಹಿತ್ಯ ಯಾವಾಗಲೂ ಒಂದು ಪ್ರಕಾರದಲ್ಲಿಯೇ ರೂಪುಗೊಳ್ಳುವುದಿಲ್ಲ. ಬೇರೆಬೇರೆ ಕಾಲಗಳಲ್ಲಿ ಸಾಹಿತ್ಯ ಪ್ರಕಾರಗಳು ಬೇರೆಬೇರೆಯಾಗಿ ಬರಬಹುದು. ಈ ಬದಲಾವಣೆಯ ಹಿನ್ನೆಲೆಯಲ್ಲಿ ಒಂದು ಜನತೆಯ ಜೀವನದ ಚರಿತ್ರೆಯ ನಾನಾ ಘಟ್ಟಗಳು ಕಾಣಿಸಿಕೊಳ್ಳುತ್ತವೆ; ಅಭಿರುಚಿಯ ಮಾರ್ಪಾಡು ವ್ಯಕ್ತವಾಗುತ್ತದೆ. ಸಾಹಿತ್ಯಕ ಚಳುವಳಿಗಳೂ ಸಾಹಿತ್ಯಸ್ವರೂಪದ ಬದಲಾವಣೆಯಲ್ಲಿ ಮಹತ್ತ್ವದ ಪಾತ್ರವಹಿಸುತ್ತವೆ. ವಿಚಾರಪ್ರತಿಪಾದನೆ, ರೂಪಪರಿವರ್ತನೆ ಇವುಗಳಿಗೆ ಆಯಾ ಕಾಲದ ನಂಬಿಕೆ ಶ್ರದ್ಧೆಗಳು ಕಾರಣವಾಗುತ್ತವೆ. ತಾವು ನಂಬಿದುದೇ ಶ್ರೇಷ್ಠವೆಂದು ಭಾವಿಸುವ ಲೇಖಕರ ಗುಂಪುಗಳು ಎಲ್ಲ ಕಾಲದಲ್ಲೂ ಎಲ್ಲ ಸಾಹಿತ್ಯಗಳಲ್ಲೂ ಇರುತ್ತವೆ. ತಮ್ಮ ನಂಬಿಕೆಯ ಪ್ರಚಾರದಲ್ಲಿ ತೊಡಗುವ ಈ ಗುಂಪುಗಳೇ ಚಳವಳಿಯನ್ನೂ ನಡಸುತ್ತವೆ. ಈ ಚಳವಳಿಯ ಏರಿಳಿತಗಳು ಸಾಹಿತ್ಯದ ಏರಿಳಿತಗಳನ್ನೂ ಪ್ರತಿನಿಧಿಸುತ್ತವೆ. ಭಾಷೆ, ಪ್ರಕಾರ, ಚಳವಳಿಗಳು ಸಾಹಿತ್ಯಚರಿತ್ರಕಾರನಿಗೆ ವಿಶೇಷ ಸಾಮಗ್ರಿಗಳನ್ನೊದಗಿಸುತ್ತವೆ. ಈ ಸಾಮಗ್ರಿಗಳನ್ನು ಬಳಸಿಕೊಳ್ಳುವುದು ಅವನ ಜವಾಬ್ದಾರಿಯಾಗುತ್ತದೆ. ಒಂದು ಸಾಹಿತ್ಯ ಇನ್ನೊಂದು ಸಾಹಿತ್ಯದ ಸಂಪರ್ಕ ಪಡೆದಾಗ ತನ್ನ ರೂಪಸ್ವರೂಪಗಳನ್ನೇ ಮಾರ್ಪಡಿಸಿಕೊಳ್ಳಬಹುದು. ಯಾವೊಂದು ಸಾಹಿತ್ಯವಾದರೂ ತನ್ನಷ್ಟಕ್ಕೆ ತಾನೇ ಸ್ವಸಂಪೂರ್ಣವಾಗಿರುವುದಿಲ್ಲ. ಹೊಸ ವಿಚಾರ ವಸ್ತು ರೂಪಗಳನ್ನು ಅದು ಸ್ವಾಗತಿಸುತ್ತಲೇ ಇರುತ್ತದೆ. ಈ ಸಾಹಿತ್ಯ ಸಂಪರ್ಕವೂ ಚರಿತ್ರೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

ಅತ್ಯುತ್ತಮ ಸಾಹಿತ್ಯಚರಿತ್ರೆಯಲ್ಲಿ ಸಾಹಿತ್ಯ ಸಂಶೋಧನೆಗಳೆರಡೂ ಮೇಳವಿಸಿರುತ್ತವೆ. ಆದುದರಿಂದ ಅತ್ಯುತ್ತಮ ಸಾಹಿತ್ಯಚರಿತ್ರಕಾರ ಏಕಕಾಲದಲ್ಲಿ ಸಂಶೋಧಕನೂ ವಿಮರ್ಶಕನೂ ಆಗಿರಬೇಕಾಗುತ್ತದೆ. ಸಂಶೋಧಕನಾಗಿ ಅವನು ವಿಷಯಗಳನ್ನು ಹುಡುಕಿ ಸಂಗ್ರಹಿಸುತ್ತಾನೆ; ಅವುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುತ್ತಾನೆ; ತನ್ನ ವಿಚಾರಗಳನ್ನು ಸ್ಥಾಪಿಸುತ್ತಾನೆ. ಹೀಗೆ ಮಾಡುವಲ್ಲಿ ಅವನು ನಿರ್ವಿಕಾರ ದೃಷ್ಟಿಯಿಂದ ವಸ್ತುನಿಷ್ಠಮನಸ್ಕನಾಗಿ ವಿಜ್ಞಾನಿಯ ಮಾರ್ಗದಲ್ಲಿ ನಡೆಯುತ್ತಾನೆ. ವಿಮರ್ಶಕನಾಗಿ ಅವನು ತನ್ನ ವಿಚಾರಗಳ ಪ್ರತಿಪಾದನೆಯ ಕ್ರಮದಲ್ಲಿಯೇ ಕಲಾವಿದನ ಮನೋಧರ್ಮವನ್ನು ಪ್ರಕಟಿಸುತ್ತಾನೆ. ತನ್ನ ಚರಿತ್ರೆ ಒಳಗೊಳ್ಳುವ ಕೃತಿಗಳ ವಿಮರ್ಶೆಯನ್ನು ನೀಡುವಲ್ಲಿ ತನ್ನ ಸ್ವೋಪಜ್ಞತೆಯನ್ನೂ, ಸೌಂದರ್ಯ ಪ್ರಜ್ಞೆಯನ್ನೂ, ಪ್ರತಿಭಾಶಕ್ತಿಯನ್ನೂ ತೋರ್ಪಡಿಸುತ್ತಾನೆ; ಕವಿಯ ಆಶಯಗಳನ್ನು ವಿವರಿಸುವಲ್ಲಿ, ವ್ಯಾಖ್ಯಾನಿಸುವಲ್ಲಿ ತಾನೇ ಕಲಾವಿದನೂ ಆಗುತ್ತಾನೆ.

ಸಾಹಿತ್ಯಚರಿತ್ರೆ ಕೇವಲ ಸಾಹಿತ್ಯಕೃತಿಗಳನ್ನು ಮಾತ್ರ ತನ್ನ ತೆಕ್ಕೆಗೆ ತೆಗೆದುಕೊಳ್ಳಬೇಕೆ, ಶಾಸ್ತ್ರಗ್ರಂಥಗಳನ್ನೂ ಪರಿಶೀಲನೆಗೆ ಒಳಪಡಿಸಿಕೊಳ್ಳಬೇಕೆ ಎನ್ನುವುದು ಒಂದು ಚರ್ಚೆಯ ವಿಷಯ. ಮುಖ್ಯವಾಗಿ ಇದು ಒಂದೊಂದು ಸಾಹಿತ್ಯದ ಬೆಳೆವಣಿಗೆಯ ರೀತಿ ನೀತಿಗಳನ್ನು ಅವಲಂಬಿಸಿರುತ್ತದೆ. ಪ್ರಾಚೀನಸಾಹಿತ್ಯವನ್ನು ಗಮನಿಸಿದರೆ ಶಾಸ್ತ್ರಸಾಹಿತ್ಯಕೃತಿಗಳ ಸಂಖ್ಯೆ ದೊಡ್ಡದಾಗಿರುವುದಿಲ್ಲ. ಅಲ್ಲದೆ ಅವುಗಳು ಸಾಹಿತ್ಯಚರಿತ್ರೆಗೆ ಸಂಬಂಧಿಸಿದ ಬಗೆಬಗೆಯ ಅಂಶಗಳನ್ನು ಒಳಗೊಂಡಿರುವ ಸಾಧ್ಯತೆಯೂ ಇರುತ್ತದೆ. ಆಗ ಅವನ್ನು ವರ್ಜಿಸಲು ಬರುವುದಿಲ್ಲ. ಶಾಸ್ತ್ರಸಾಹಿತ್ಯಕೃತಿಗಳು ಹೇರಳವಾಗಿರುವ ಆಧುನಿಕ ಕಾಲಕ್ಕೆ ಬಂದಾಗಲೂ, ಭಾಷೆಯಲ್ಲಿನ ಚಟುವಟಿಕೆಗಳು ಅನೇಕ ಇಂಥ ಕೃತಿಗಳ ಮೂಲಕ ಶುದ್ಧಸಾಹಿತ್ಯದ ಮೇಲೆ ಪ್ರಭಾವವನ್ನು ಬೀರುತ್ತವೆ. ತತ್ತ್ವಶಾಸ್ತ್ರ, ಮನಶ್ಶಾಸ್ತ್ರ, ಅರ್ಥಶಾಸ್ತ್ರ, ವಿಜ್ಞಾನ ಮುಂತಾದ ಕ್ಷೇತ್ರಗಳ ಕೃತಿಗಳು ಕೋಲಾಹಲವನ್ನೇ ಉಂಟುಮಾಡಬಹುದು. ಆಗಲೂ ಶಾಸ್ತ್ರಗ್ರಂಥಗಳ ಪರಿಶೀಲನೆಯನ್ನು ಕೈಬಿಡಲಾಗುವುದಿಲ್ಲ. ಸಾಹಿತ್ಯಚರಿತ್ರೆ ಎಲ್ಲ ದೃಷ್ಟಿಗಳಿಂದಲೂ ಶುದ್ಧ ಸಾಹಿತ್ಯಕೃತಿಗಳ ಚರಿತ್ರೆ ಎಂಬುದೇನೋ ನಿಜ. ಆದರೆ ಸಾಹಿತ್ಯದ ಮಾಧ್ಯಮ ಭಾಷೆಯಾಗಿರುವುದರಿಂದ, ಭಾಷೆಯ ಮಾಧ್ಯಮದಲ್ಲಿಯೇ ಶಾಸ್ತ್ರಗ್ರಂಥಗಳೂ ಕೃತಿರೂಪ ತಾಳಿರುವುದರಿಂದ, ಅನೇಕ ಸಂದರ್ಭಗಳಲ್ಲಿ ಒಬ್ಬ ಲೇಖಕನೇ ಎರಡೂ ಬಗೆಯ ಕೃತಿಗಳನ್ನು ರಚಿಸಿರುವುದರಿಂದ ಶಾಸ್ತ್ರಗ್ರಂಥಗಳನ್ನು ಸಂಪೂರ್ಣವಾಗಿ ಕಡೆಗಾಣುವುದು ಉಚಿತವಾಗುವುದಿಲ್ಲ. ಆದುದರಿಂದ ಸಾಹಿತ್ಯಚರಿತ್ರಕಾರ ತನ್ನ ಚರಿತ್ರೆಗೆ ಬೇಕಾದ ಕಟ್ಟುಪಾಡುಗಳನ್ನು ತಾನೇ ಹಾಕಿಕೊಳ್ಳುವುದು ಆವಶ್ಯಕವಾಗುತ್ತದೆ. ಅದು ಅವನ ಗುರಿ ಉದ್ದೇಶಗಳನ್ನು ಅವಲಂಬಿಸಿರುತ್ತದೆ.

## ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪ

ಎಲ್ಲ ಸಾಹಿತ್ಯಗಳ ಆರಂಭದಂತೆ ಕನ್ನಡ ಸಾಹಿತ್ಯದ ಆರಂಭವೂ ಅಸ್ಪಷ್ಟವಾಗಿದೆ. ಕ್ರಿ.ಶ. ಸು. ೫ನೆಯ ಶತಮಾನದ ಹಲ್ಮಿಡಿ ಶಾಸನವನ್ನು ಸದ್ಯಕ್ಕೆ ಕನ್ನಡ ಭಾಷೆಯ ಮೊದಲ ದಾಖಲೆಯೆಂದು ಬಹುಮಟ್ಟಿಗೆ ಎಲ್ಲರೂ ಒಪ್ಪಿಕೊಂಡಿದ್ದಾರೆ. ಅದು ಅಂದಿನ ಸಾಹಿತ್ಯದ ಸ್ವರೂಪವನ್ನೇನೂ ತೋರಿಸುವುದಿಲ್ಲ. ಭಾಷೆಯ ಉಗಮದೊಂದಿಗೇ ಒಂದಲ್ಲ ಒಂದು ಬಗೆಯ ಸಾಹಿತ್ಯವೂ ರೂಪುಗೊಳ್ಳುವುದೇನೋ ನಿಜ. ಆದರೆ ಭಾಷೆಯ ದಾಖಲೆ ಸಾಹಿತ್ಯದ ದಾಖಲೆಯಾಗುವುದಿಲ್ಲ.

ಕನ್ನಡ ಸಾಹಿತ್ಯದ ಆರಂಭದ ಹೆಜ್ಜೆಗಳನ್ನು ಖಚಿತವಾದ ಆಧಾರಗಳಿಂದ ಗುರುತಿಸುವುದು ಸಾಧ್ಯವಿಲ್ಲ. ಕ್ರಿ.ಶ. ೯ನೆಯ ಶತಮಾನದ 'ಕವಿರಾಜಮಾರ್ಗ' ಗ್ರಂಥವು ಈಗ ನಮಗೆ ದೊರಕಿರುವ ಮೊದಲ ಗ್ರಂಥವಾದರೂ, ಅದಕ್ಕಿಂತ ಮೊದಲೇ ಕನ್ನಡದಲ್ಲಿ ಸಾಹಿತ್ಯಕೃತಿಗಳಿದ್ದುವೆಂಬುದಕ್ಕೆ ನಾನಾ ಆಧಾರಗಳನ್ನು ಕೊಡಬಹುದು. ಇಂಥ ಕೆಲವು ಆಧಾರಗಳು 'ಕವಿರಾಜಮಾರ್ಗ'ದಲ್ಲಿಯೇ ದೊರೆಯುತ್ತವೆ. 'ಕವಿರಾಜಮಾರ್ಗ'

ಸಾಹಿತ್ಯಕೃತಿ ಏನಲ್ಲ, ಒಂದು ಅಲಂಕಾರ ಗ್ರಂಥ. ಆದರೆ ಅದು ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಆಧಾರಸ್ತಂಭಗಳಲ್ಲಿ ಮುಖ್ಯವಾದುದಾಗಿದೆ. ಸಾವಿರ ವರ್ಷಗಳಿಗೂ ಮೀರಿದ ಕನ್ನಡ ಸಾಹಿತ್ಯದಲ್ಲಿ ವಿಪುಲವೂ ವೈವಿಧ್ಯಪೂರ್ಣವೂ ಆದ ಗ್ರಂಥ ಸಮುದಾಯವಿದೆ. ಆದರೆ ಈ ದೀರ್ಘ ಅವಧಿಯ ಚರಿತ್ರೆಯನ್ನು ನಿರೂಪಿಸಲು ಬಗೆಬಗೆಯಾದ ಅಡಚಣೆಗಳಿವೆ. ಸಾಹಿತ್ಯರಚನೆಗೆ ಅತ್ಯಗತ್ಯವಾಗಿ ಲೇಖಕನ ಚರಿತ್ರೆ ತಿಳಿದಿರಬೇಕು. ಅವನ ಕಾಲದ ಚರಿತ್ರೆ, ಅವನ ವ್ಯಕ್ತಿತ್ವವನ್ನು ರೂಪಿಸಿದ ಸಂದರ್ಭಗಳು, ಪ್ರಸಂಗಗಳು, ಅಂದಿನ ಧಾರ್ಮಿಕ, ರಾಜಕೀಯ, ಸಾಮಾಜಿಕ ಸನ್ನಿವೇಶಗಳು, ಸಮಕಾಲೀನ ಪರಿಸರ ಪ್ರಭಾವಗಳು ಖಚಿತವಾಗಿ ಗೊತ್ತಾಗಬೇಕು.

ಆದರೆ ನಮ್ಮ ಸಾಹಿತ್ಯದಲ್ಲಿ ಇಂಥ ವಿವರಗಳು ಅಷ್ಟಾಗಿ ದೊರೆಯುವುದಿಲ್ಲ. ನಮ್ಮ ಪ್ರಾಚೀನ ಸಾಹಿತ್ಯ ಚರಿತ್ರೆಯಲ್ಲಿ, ನಮ್ಮ ಇತರ ಚರಿತ್ರೆಯಂತೆಯೇ, ಬಿಡಿಸಲಾಗದ ಕಗ್ಗಂಟುಗಳು ಅನೇಕ. ಸಾಮಾನ್ಯವಾಗಿ ಹಿಂದಿನ ಭಾರತೀಯರ ದೃಷ್ಟಿಯಲ್ಲಿ ಕೆಲಸವೊಂದೇ ಕರ್ತವ್ಯ; ತಾವು ಮಾಡುವ ಕೆಲಸವನ್ನು ಮಾಡಿ ಮುಗಿಸಬೇಕು ಎಂಬುದಷ್ಟೇ ಅವರ ಆಶಯ. ಕೆಲವರು ಅಲ್ಪಸ್ವಲ್ಪವಾಗಿ ತಮ್ಮ ವಿಚಾರಗಳನ್ನು ಹೇಳಿಕೊಂಡಿರಬಹುದು; ಇನ್ನು ಕೆಲವರು ತಮ್ಮ ಹೆಸರನ್ನು ಮಾತ್ರ ಉಳಿಸಿರಬಹುದು. ಭಾಸನಂತೆ ಹೆಸರನ್ನು ಹೇಳಿಕೊಳ್ಳಲೂ ಇಷ್ಟಪಡದ ಲೇಖಕರೂ ಇದ್ದಾರೆ. ತಮ್ಮ ಶಕ್ತಿಯ ಬಗೆಗೆ ನಾಚಿಕೆಬಿಟ್ಟು ಅಭಿಮಾನದಿಂದ ಆಡಿಕೊಂಡಿರುವ ಲೇಖಕರೂ ತಮ್ಮ ಜೀವನವೃತ್ತಾಂತವನ್ನು ಹೇಳಲು ಸಂಕೋಚಪಟ್ಟಿರುವ ಉದಾಹರಣೆಗಳು ಇವೆ. ಮುಗಳಿಯವರು ಹೇಳುವಂತೆ ಕನ್ನಡ ಕವಿಗಳ "ಆತ್ಮಪ್ರಶಂಸೆ ಬೇಕಾದಷ್ಟು ಇದ್ದರೂ ಆತ್ಮಚರಿತ್ರೆ ಸ್ವಲ್ಪವಾಗಿದೆ. ಅದು ಅವರ ಆತ್ಮದ ಜೀವಾಳದ ಚರಿತ್ರೆಯಾಗಿ ಇರುವುದಂತೂ ಇನ್ನೂ ವಿರಳ"[೨] ಕೆಲವು ಸಂದರ್ಭಗಳಲ್ಲಿ ಪ್ರಸಿದ್ಧಕವಿಗಳ ಜೀವನ ಕಾರ್ಯಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳು ಸೃಷ್ಟಿಯಾಗುತ್ತವೆ; ತಲೆಮಾರಿನಿಂದ ತಲೆಮಾರಿಗೆ ಕಟ್ಟುಕಥೆಗಳು ಹರಡಿಕೊಳ್ಳುತ್ತವೆ. ಇವು ಗ್ರಂಥಸ್ಥವಾದಾಗ ಚರಿತ್ರೆಯ ಸೋಗುಹಾಕುವುದೂ ಉಂಟು. ದೇವಚಂದ್ರನ 'ರಾಜಾವಳೀ ಕಥೆ'ಯ ಪ್ರಸಂಗಗಳು ಇದಕ್ಕೆ ಉದಾಹರಣೆ. ಇಂಥ ಕೃತಿಗಳಲ್ಲಿ ನಿಜವಾದ ಚರಿತ್ರೆಯ ಅಂಶ ಯಾವುದು, ಜನಪ್ರತೀತಿಯ ಅಂಶ ಯಾವುದು ಎಂಬುದನ್ನು ಶೋಧಿಸುವುದು ಕೆಲವು ಸಲ ಅಗತ್ಯವಾದರೂ ಅಸಾಧ್ಯವಾಗುತ್ತದೆ.

ಕನ್ನಡ ಸಾಹಿತ್ಯಚರಿತ್ರಕಾರನಿಗೆ ಎದುರಾಗುವ ದೊಡ್ಡ ಸಮಸ್ಯೆ ಮೂಲಸಾಮಗ್ರಿಗಳ ಕೊರತೆ. ಈ ಕೊರತೆಯಿಂದ ಯಾವ ಚರಿತ್ರೆಯನ್ನೂ ಅಧಿಕೃತವಾಗಿ ನಿರೂಪಿಸಲು ಬರುವುದಿಲ್ಲ. ಅನೇಕ ಕವಿಗಳು ಕೇವಲ ಹೆಸರಿನಿಂದಷ್ಟೇ ಉಳಿದಿದ್ದಾರೆ. ಅನೇಕ ಕಾವ್ಯಗಳೂ ಹಾಗೆಯೇ. ಇಷ್ಟು ಕಾಲ ಕಳೆದಿದ್ದರೂ ಶೋಧನೆ ಸಂಶೋಧನೆಗಳು ಮುಂದುವರಿದಿದ್ದರೂ 'ಕವಿರಾಜಮಾರ್ಗ'ಕ್ಕೆ ಹಿಂದಿನ ಕೃತಿ ಒಂದೂ ಲಭ್ಯವಾಗಿಲ್ಲ. ನಾಗವರ್ಮ ರಚಿತ 'ವರ್ಧಮಾನಪುರಾಣ' ಮೊನ್ನೆ ಮೊನ್ನೆ ಬೆಳಕಿಗೆ ಬಂತು. ಜನತೆಯ ಅವಿದ್ಯೆ, ಅಜ್ಞಾನಗಳಿಂದಾಗಿ ಎಷ್ಟೋ ಕೃತಿಗಳ ಹಸ್ತಪ್ರತಿಗಳು ನಾಶವಾಗಿ ಹೋಗಿವೆ; ಈಗಲೂ

ನಾಶಗೊಳ್ಳುತ್ತಿವೆ. ಉಲ್ಲೇಖಗೊಂಡಿರುವ ಹೆಸರುಗಳಷ್ಟರಿಂದಲೇ ನಮ್ಮ ಸಾಹಿತ್ಯ ಸಂಪತ್ತು ಅಲ್ಪಸ್ವಲ್ಪವಾಗಿಯಾದರೂ ನಮಗೆ ಪರಿಚಯವಾಗಿದೆ. ಉಲ್ಲೇಖಗೊಳ್ಳದೆ ನಾಶವಾಗಿರುವ ಕೃತಿಗಳನ್ನು ಕುರಿತು ನಾವು ಯೋಚಿಸಬೇಕಾಗಿಯೆ ಇಲ್ಲ. ಈ ಪರಿಸ್ಥಿತಿ ನಮ್ಮ ಸಾಹಿತ್ಯ ಚರಿತ್ರೆಯನ್ನು ಅನಿವಾರ್ಯವಾಗಿ ಅಪೂರ್ಣಗೊಳಿಸುತ್ತದೆ.

ನಮಗೆ ದೊರೆತಿರುವ ಕೃತಿಗಳಾದರೂ ಎಲ್ಲವೂ ಪ್ರಕಟವಾಗಿಲ್ಲ. ಅನೇಕ ಹಸ್ತಪ್ರತಿಗಳು ಸುಲಭವಾಗಿ ಎಲ್ಲರಿಗೂ ಕಾಣಲು ದೊರೆಯುವುದಿಲ್ಲ. ಕೃತಿಗಳ ಹಸ್ತಪ್ರತಿಗಳನ್ನೇ ಸಮಗ್ರವಾಗಿ ಅಧ್ಯಯನ ಮಾಡಿ ಸಾಹಿತ್ಯಚರಿತ್ರೆಯಲ್ಲಿ ಚರ್ಚಿಸಿ ಮೌಲ್ಯಮಾಪನ ಮಾಡುವುದು ಸುಲಭಸಾಧ್ಯವಲ್ಲ. ಇಂಥ ಅಪ್ರಕಟಿತ ಹಸ್ತಪ್ರತಿಗಳಲ್ಲಿ ಹಲವು ಸಾಹಿತ್ಯದೃಷ್ಟಿಯಿಂದ ಮುಖ್ಯವಾಗಿಲ್ಲದಿದ್ದರೂ, ಸಾಹಿತ್ಯಚರಿತ್ರೆಯ ದೃಷ್ಟಿಯಿಂದ ಮಹತ್ವದವಾಗಿವೆ. ಪ್ರತಿಯೊಂದು ಚಿಕ್ಕ ಅಂಶವೂ ಚರಿತ್ರೆಯ ಅಧಿಕೃತತೆಗೆ ಸಹಾಯವಾಗುತ್ತದೆಂಬುದನ್ನು ನಾವು ಮರೆಯಬಾರದು.

ಅಚ್ಚಾಗಿರುವ ಗ್ರಂಥಗಳಲ್ಲಿಯೂ ಅಧಿಕೃತ ಪಾಠಗಳ ಕೊರತೆ ಸಾಹಿತ್ಯಚರಿತ್ರಕಾರನನ್ನು ಬಾಧಿಸುತ್ತದೆ. ಒಂದೇ ಕೃತಿಯ ಅನೇಕ ಹಸ್ತಪ್ರತಿಗಳು ದೊರೆಯದಿರುವುದು, ದೊರೆತ ಹಸ್ತಪ್ರತಿಗಳು ಅಸಮಗ್ರವಾಗಿರುವುದು ಇದಕ್ಕೆ ಮುಖ್ಯ ಕಾರಣ. ಸಂಪಾದಕನ ವೈಯಕ್ತಿಕ ಇಷ್ಟಾನಿಷ್ಟಗಳೂ ಅಜ್ಞಾನ, ಅಸಾಮರ್ಥ್ಯಗಳೂ ಕೆಲವೊಮ್ಮೆ ಪಾಠಗಳನ್ನು ಕೆಡಿಸುವುದೂ ಉಂಟು. ಅತ್ಯುತ್ತಮ ಸಂಪಾದನಕಾರ್ಯ ಸಾಹಿತ್ಯಚರಿತ್ರಕಾರನ ಭಾರವನ್ನು ಬಹುಮಟ್ಟಿಗೆ ಇಳಿಸುತ್ತದೆ.

ಸಾಹಿತ್ಯಚರಿತ್ರಕಾರನಿಗೆ ಒದಗುವ ಸಾಧನಗಳು ಸಾಮಾನ್ಯವಾಗಿ ಎರಡು ಬಗೆಯವಾಗಿರುತ್ತವೆ: ಒಂದು ಆಂತರಿಕ, ಇನ್ನೊಂದು ಬಾಹ್ಯ. ಆಂತರಿಕ ಸಾಧನ ಒಂದು ಪಠ್ಯದಲ್ಲಿಯೇ ದೊರೆಯುವ ಅಂಶಗಳನ್ನು ಆಧರಿಸಿರುತ್ತದೆ. ಬಾಹ್ಯ ಸಾಧನ ಹೊರಗಿನ ಹಲವು ಅಂಶಗಳನ್ನು ಅವಲಂಬಿಸಿರುತ್ತದೆ. ಕವಿಯ ಕಾಲ ದೇಶ ಜೀವನ ಸಾಧನೆಗಳನ್ನು ನಿರ್ಣಯಿಸುವಲ್ಲಿ ನಮಗೆ ಪ್ರತಿಯೊಂದು ಸಾಧನವೂ ಅಗತ್ಯವಾಗುತ್ತದೆ.

ಚರಿತ್ರೆ, ಶಾಸನಗಳಲ್ಲಿನ ಉಲ್ಲೇಖ, ಅನ್ಯಕೃತಿಗಳಿಂದ ಉದ್ಧರಣ, ಅನುಕರಣ, ಪೂರ್ವಕವಿ ಪ್ರಶಂಸೆ, ಜನಪ್ರತೀತಿ—ಮೊದಲಾದವು ಬಾಹ್ಯ ಸಾಧನಗಳು. ಇವುಗಳನ್ನು ಉಪಯೋಗಿಸುವಾಗ ಎಷ್ಟು ಎಚ್ಚರಿಕೆಯಿಂದ ಇದ್ದರೂ ಸಾಲದು. ಬುದ್ಧಿವಂತರು ದೊರೆತ ಆಧಾರಗಳನ್ನು ತಮ್ಮ ವಾದಪುಷ್ಟಿಗೆ ಬೇಕಾದಂತೆ ಬಳಸಿಕೊಳ್ಳುವ ಅಪಾಯಗಳು, ಆಧಾರಗಳ ಸ್ವರೂಪ ಅಸ್ಪಷ್ಟವಾಗಿದ್ದಾಗ, ಇದ್ದೇ ಇರುತ್ತದೆ. "ಕವಿಗಳು ತಾವೇ ತಮ್ಮ ವಿಷಯವಾಗಿ ಏನಾದರೂ ಹೇಳಿದ್ದರೆ ಅದು ನಂಬತಕ್ಕದ್ದಾಗಿದೆ. ಆದರೆ ಕೆಲವರು ಉದಾಸೀನಪುರುಷರು ತಮ್ಮ ಹೆಸರನ್ನೇ ಹೇಳುವುದಿಲ್ಲ. ಮತ್ತೆ ಕೆಲವರು ತಮ್ಮ ಹೆಸರನ್ನು ಗಂಭೀರವಾದ ಸಂಸ್ಕೃತದಲ್ಲಿ ಅರ್ಥ ಮುಚ್ಚಿರುತ್ತಾರೆ. ಪೊನ್ನನೆಂದು ಹೆತ್ತತಾಯಿ ಕರೆದರೆ ಕಾವ್ಯಗೌರವವು ಪುನ್ನಮಾರ್ಯನೆಂದು ಕೂಗುತ್ತದೆ; ಬೊಮ್ಮನು ಕಮಲಭವನಾಗಿ ಮಾರ್ಪಡುತ್ತಾನೆ; ಸುಮನೋಬಾಣನಿಗೆ ಬಿರುದಿನಲ್ಲೇ

ಪರ್ಯವಸಾನ; ಲಕ್ಷ್ಮೀಶನು ಲಕ್ಷ್ಮೀಪತಿಯಾಗಿರಬಹುದು; ಲಕ್ಷ್ಮೀಕಾಂತನೂ ಆಗಬಹುದು. ಕೆಲವರು ತಮ್ಮ ತಂದೆ, ತಾಯಿ, ಅಣ್ಣತಮ್ಮಂದಿರು, ಹೆಂಡತಿ ಮಕ್ಕಳು, ಗುರುಗಳು ಮುಂತಾದವರ ಹೆಸರನ್ನು ತಿಳಿಸಿದ್ದಾರೆ; ತಮ್ಮ ರೂಪು, ಪಾಂಡಿತ್ಯ, ಒಬ್ಬರು ಕೊಟ್ಟದ್ದೋ ತಾವೆ ಇಟ್ಟುಕೊಂಡದ್ದೋ ಬಾಯಿತುಂಬ ಬಿರುದು, ಶೌರ್ಯ, ಐಶ್ವರ್ಯ ಇವನ್ನು ಯಥೇಷ್ಟವಾಗಿ ಹೊಗಳಿಕೊಂಡಿದ್ದಾರೆ. ಚರಿತ್ರಕಾರನಿಗೆ ಈ ಸಂಗತಿಗಳಿಂದ ಹೆಚ್ಚು ಪ್ರಯೋಜನವಿಲ್ಲ"[3] ಎಂದು ಬಿ. ಎಂ. ಶ್ರೀಕಂಠಯ್ಯನವರು ಹೇಳಿರುವುದು ಆಂತರಿಕ ಸಾಕ್ಷ್ಯಗಳೂ ನಮ್ಮನ್ನು ಎಂಥ ಪೇಚಿಗೆ ಸಿಕ್ಕಿಸುತ್ತವೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಸ್ವರೂಪದ ಸಾಧನಗಳ "ವಿವೇಚನೆಯಲ್ಲಿ ಊಹೆಗಳು ಕೆಲವು ಸಲ ಅಭಿಪ್ರಾಯಗಳೆಂದು ಮೆರೆಯಬಹುದು, ಅನುಮಾನಗಳು ನಿರ್ಣಯಗಳ ಸೋಗುಹಾಕಬಹುದು."[4]

ಪ್ರಾಚೀನ ಕನ್ನಡ ಸಾಹಿತ್ಯ ಮತಪ್ರಧಾನವಾದುದರಿಂದ ಕನ್ನಡ ಸಾಹಿತ್ಯ ಚರಿತ್ರಕಾರನ ಸಮಸ್ಯೆ ಇನ್ನೂ ಬೆಳೆಯುತ್ತದೆ. ಪ್ರತಿಯೊಬ್ಬ ಲೇಖಕನೂ ಮತೀಯ ಚೌಕಟ್ಟಿನೊಳಗೇ ಕೆಲಸಮಾಡಬೇಕಾಗಿರುವುದರಿಂದ ಅವರ ದೃಷ್ಟಿ ಧೋರಣೆಗಳು ಎಷ್ಟರ ಮಟ್ಟಿಗೆ ವಿಶಾಲವಾದುವೆಂಬುದನ್ನೂ ಹೇಳಿಕೆಗಳು ಎಷ್ಟರ ಮಟ್ಟಿಗೆ ಉತ್ಪ್ರೇಕ್ಷೆಯವಾಗಿಲ್ಲವೆಂಬುದನ್ನೂ ಪರೀಕ್ಷಿಸುವ ಹೆಚ್ಚಿನ ಹೊಣೆಗಾರಿಕೆಗೆ ಕನ್ನಡ ಸಾಹಿತ್ಯ ಚರಿತ್ರಕಾರ ಹೆಗಲು ಕೊಡಬೇಕಾಗುತ್ತದೆ. ಇಂದೂ ಮತಪ್ರಧಾನವಾಗಿರುವ ಈ ದೇಶದಲ್ಲಿ ಈ ಮತೀಯ ಅಂಶಗಳ ಬಳಕೆ ವ್ಯಾಖ್ಯಾನಗಳಲ್ಲಿ ಅವನು ಹೆಚ್ಚಿನ ಎಚ್ಚರ ವಹಿಸಬೇಕಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಅನೇಕ ಚರ್ಚೆಗಳಲ್ಲಿ ಮತೀಯ ದೃಷ್ಟಿಯೆ ಪ್ರಧಾನವಾಗಿರುವುದನ್ನು ನಾವು ಗಮನಿಸಬಹುದು. ಒಬ್ಬ ಕವಿಯನ್ನು ಮತೀಯ ದೃಷ್ಟಿಯಿಂದ ಅಳೆಯುವುದರಿಂದ ಅವನ ಕಾವ್ಯ ಮಹತ್ತ್ವವನ್ನು ಕಂಡಂತಾಗುವುದಿಲ್ಲ. ಕವಿಯ ಜೀವನ ದರ್ಶನ ಅವನ ಅನುಭವದ ಆಧಾರದ ಮೇಲೆ ನಿಂತಿರುತ್ತದೆ. ಆ ದರ್ಶನದ ನೈಜತೆಯನ್ನು ಕಾಣುವ ಸಮತೋಲನ ದೃಷ್ಟಿಯು ಚರಿತ್ರಕಾರನಿಗೆ ಅಗತ್ಯವಾಗುತ್ತದೆ.

ಹೀಗೆ ಮೂಲಸಾಮಗ್ರಿಯ ಕೊರತೆಗಳಿಂದ ನರಳುತ್ತಿರುವ ನಮ್ಮ ಸಾಹಿತ್ಯಗಳಿಗೆ ಯಾವಾಗಲೂ ಪರಿಪೂರ್ಣವಾದ ಚರಿತ್ರೆಗಳನ್ನು ಪಡೆಯುವುದು ಸಾಧ್ಯವಾಗಲಾರದು. ಇರುವ ಸಾಮಗ್ರಿಗಳನ್ನೇ ಹೇಗೆ ಸಮಗ್ರವಾಗಿ ಸಮರ್ಪಕವಾಗಿ ಬಳಸಿಕೊಳ್ಳುತ್ತೇವೆ ಎಂಬುದರ ಮೇಲೆ ಸಾಹಿತ್ಯ ಚರಿತ್ರೆಯ ಯಶಸ್ಸನ್ನು ಲೆಕ್ಕಹಾಕಬಹುದು. ಅನೇಕ ಆಧುನಿಕ ಐರೋಪ್ಯ ಸಾಹಿತ್ಯಗಳ ಚರಿತ್ರೆಗೆ ದೊರೆಯುವ ಸಾಕ್ಷ್ಯಾಧಾರಗಳು ನಮಗೆ ದೊರೆಯುವುದಿಲ್ಲವಲ್ಲ ಎಂಬ ವ್ಯಥೆ ನಿರಾಶೆಗಳು ನಮ್ಮನ್ನು ಕಾಡುತ್ತವೆ. ಇದು ಅಪರಿಹಾರ್ಯವಾದ ದಾರಿದ್ರ್ಯ. ಆದರೆ ಮುಂದಿನ ಚರಿತ್ರಕಾರರಿಗೆ ಇಂದಿನ ಸಾಹಿತ್ಯದ ಬಗೆಗೆ ಅಗತ್ಯವಾದ ಮಾಹಿತಿಗಳ ಸಿದ್ಧತೆ ರಕ್ಷಣೆಗಳು ನಮ್ಮ ಪಾಲಿನ ಜವಾಬ್ದಾರಿಯಾಗಿವೆ ಎಂಬುದನ್ನು ನಾವು ಮರೆಯಬಾರದು. ಇದುವರೆಗೂ ನಮ್ಮ ಪಾಲಿಗೆ ಇಲ್ಲವಾದ ಚಾರಿತ್ರಿಕ ದೃಷ್ಟಿಯನ್ನು ನಾವು ಇನ್ನಾದರೂ ಬೆಳಸಿಕೊಳ್ಳಬೇಕು.

ಸಾಹಿತ್ಯ ಚರಿತ್ರಕಾರನಿಗೆ ಹಳತು ಹೊಸತು ಎಂಬ ಭೇದವಿಲ್ಲ. ಹಳೆಯ ಸಾಹಿತ್ಯದ ಚರಿತ್ರೆಯ ರಚನೆಯಲ್ಲಿ ಎದುರಾಗುವ ಸಮಸ್ಯೆಗಳಲ್ಲಿ ಬಹುಪಾಲು ಹೊಸ ಸಾಹಿತ್ಯ ಚರಿತ್ರೆಯ ರಚನೆಯಲ್ಲಿಯೂ ಉಳಿದಿವೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಓಲೆಗ್ರಂಥಗಳ ಸ್ಥಿತಿಯೇ ಎಷ್ಟೋ ಅಚ್ಚಾದ ಗ್ರಂಥಗಳ ಪಾಲಿಗೂ ಒದಗಿದೆ ಎಂದರೆ ಅತಿಶಯೋಕ್ತಿಯಲ್ಲ. ಕಳೆದ ಶತಮಾನದ ಕೊನೆಯ ಭಾಗದಲ್ಲಿ ಮಾತ್ರವಲ್ಲ, ಈ ಶತಮಾನದಲ್ಲಿಯೇ ಪ್ರಕಟವಾದ ಅನೇಕ ಕೃತಿಗಳು ಈಗ ಸಿಕ್ಕುವುದಿಲ್ಲ. ಇಂದು ಬದುಕಿರುವ ಅನೇಕ ಲೇಖಕರಲ್ಲಿಯೇ ಅವರ ಎಲ್ಲ ಕೃತಿಗಳ ಮಾಹಿತಿಯೂ ದೊರೆಯುವುದಿಲ್ಲ. ಈಗ ಪ್ರಕಟವಾಗುತ್ತಿರುವ ಕೆಲವು ಕೃತಿಗಳಲ್ಲಿ ಪ್ರಕಟಣೆಯ ವರ್ಷವೇ ಇರುವುದಿಲ್ಲ. ಈ ಪರಿಸ್ಥಿತಿ ನಮ್ಮ ಸಾಹಿತ್ಯ ಚರಿತ್ರೆಯ ರಚನೆಗಿರುವ ಪರಿಮಿತಿಗಳನ್ನು ಸ್ಥೂಲವಾಗಿ ಪರಿಚಯಿಸುತ್ತದೆ.

ಇಂಥ ಪರಿಮಿತಿಗಳಲ್ಲಿಯೇ ನಮ್ಮ ಸಾಹಿತ್ಯಚರಿತ್ರಕಾರ ಕೆಲಸಮಾಡಬೇಕಾಗಿದೆ. ಆದರೆ ಸಾಹಿತ್ಯ ಚರಿತ್ರೆ ಒಮ್ಮೆಗೇ ಬರೆದು ಮುಗಿಸಿಬಿಡುವಂಥದಲ್ಲ. ಅದು ಸತತ ಪ್ರಯತ್ನವಾಗಿ ಮುಂದುವರಿಯುತ್ತಲೇ ಇರಬೇಕಾಗುತ್ತದೆ. "ಎಲ್ಲ ದೃಷ್ಟಿಗಳಿಂದಲೂ ತುಂಬಿ ಪರಿಪುಷ್ಟವಾಗಿರುವ ಸಾಹಿತ್ಯಚರಿತ್ರೆಯ ನಿರ್ಮಾಣ ಸ್ಪೃಹಣೀಯವಾದರೂ ಎಷ್ಟೋ ವೇಳೆ ಮೂಲ ಸಾಮಗ್ರಿಗಳ ಅಭಾವದಿಂದ ಆದರ್ಶ ಸಾಧನೆ ಅಸಾಧ್ಯವಾಗುತ್ತದೆ. ಇಂಥ ಸಂದರ್ಭಗಳಲ್ಲಿ ಆದಷ್ಟು ಸಮಗ್ರತೆಯನ್ನು ಸಾಧಿಸುವ ಪ್ರಯತ್ನವನ್ನು ಮಾತ್ರ ಬಿಡದೆ ಮಾಡಲೇಬೇಕು. ಇದಕ್ಕೆ ಸಾಹಿತ್ಯ ಸಂಶೋಧಕರು ಸತತತವಾಗಿ ದುಡಿದು ಕಾಲಪುರುಷನು ಅಡಗಿಸಿಟ್ಟುಕೊಂಡಿರುವ ಅನೇಕ ಸಂಗತಿಗಳನ್ನು ಹೊರಕ್ಕೆಳೆದು ಹಾಕಬೇಕು. ಸಾಹಿತ್ಯ ಚರಿತ್ರಕಾರನಿಗೆ ಬೇಕಾಗಿರುವ ಮೂಲ ಸಾಮಗ್ರಿ ಈ ರೀತಿ ಕಾಲ ಕಾಲಕ್ಕೆ ಒದಗುತ್ತಲೇ ಇರಬೇಕು. ಹೀಗಾದರೆ ಎಂದಾದರೂ ಒಂದು ಕಾಲದಲ್ಲಿ ಆದರ್ಶವನ್ನು ಸಾಧಿಸಬಹುದು ; ಅದು ಕಷ್ಟಸಾಧ್ಯವಾದರೂ ಆದರ್ಶದಲ್ಲೇ ದತ್ತದೃಷ್ಟಿಗಳಾಗಿ ಅದರ ಹತ್ತಿರಹತ್ತಿರಕ್ಕೆ ಪ್ರಯಾಣಮಾಡಿ ಸೇರಬಹುದು."[5]

## ಕನ್ನಡ ಸಾಹಿತ್ಯ ಚರಿತ್ರೆಗಳು

ಸ್ಥೂಲವಾಗಿಯಾದರೂ, ಕನ್ನಡ ಸಾಹಿತ್ಯ ಚರಿತ್ರೆಯನ್ನು ಒಂದೆಡೆ ನಿರೂಪಿಸುವ ಪ್ರಯತ್ನ ಮೊದಲ ಬಾರಿಗೆ ನಡೆದದ್ದು ಸರಿಯಾಗಿ ಒಂದು ನೂರು ವರ್ಷಗಳ ಹಿಂದೆ. ರೆವರೆಂಡ್ ಎಫ್. ಕಿಟ್ಟೆಲ್ ಅವರು ೧೮೭೫ರಲ್ಲಿ ಪ್ರಕಟಿಸಿದ 'ನಾಗವರ್ಮನ ಕನ್ನಡ ಛಂದಸ್ಸು' ಎಂಬ ಗ್ರಂಥದಲ್ಲಿ, ೧೮೭೪ರ ಅಕ್ಟೋಬರ್ ತಿಂಗಳಿನಲ್ಲಿ ತಾವು ಸಿದ್ಧಪಡಿಸಿದ್ದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತು ಸಮೀಕ್ಷಾಪ್ರಬಂಧವನ್ನು ಸೇರಿಸಿದ್ದರು. ಸುಮಾರು ೬೦ ಪುಟಗಳ ತಮ್ಮ ಪ್ರಬಂಧವನ್ನು ಅವರು An Essay on Canarese Literature ಎಂದು ಕರೆದಿದ್ದಾರೆ. ತಮ್ಮ ಕೈಯಲ್ಲಿರುವ ಸಾಮಗ್ರಿಯನ್ನು ಆಧರಿಸಿ, ತಾವು ಪ್ರಬಂಧವನ್ನು ಸಿದ್ಧಗೊಳಿಸಿರುವುದಾಗಿ ಹೇಳಿಕೊಂಡಿದ್ದಾರೆ. ಅಲ್ಲದೆ ಈ ಬರಹವು

ಕನ್ನಡ ಸಾಹಿತ್ಯಚರಿತ್ರೆಯ ನಿರ್ಮಾಣಕ್ಕೆ ಸಣ್ಣ ಕೊಡುಗೆಯಾಗಿರಲೆಂದೂ ಹಾರೈಸಿದ್ದಾರೆ.[6] ಸಮಗ್ರ ಕನ್ನಡ ಸಾಹಿತ್ಯವನ್ನು ಸಮೀಕ್ಷಿಸಿದ ಕಿಟ್ಟೆಲ್ ತಮ್ಮ ಪ್ರಬಂಧದ ಕೊನೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯ ಮಹತ್ತ್ವದ್ದು. ಸಂಸ್ಕೃತದ ಅನುಕರಣೆ ತುಂಬರದ ಭಾರತದ ಸಾಹಿತ್ಯ ಎಂದರೆ ತಮಿಳು ಒಂದೇ ಎಂಬುದಾಗಿ ಡಾ. ಕಾಲ್ಡ್‌ವೆಲ್ ಅಭಿಪ್ರಾಯಪಟ್ಟದ್ದನ್ನು ಉಲ್ಲೇಖಿಸಿ, ಕನ್ನಡ ಸಾಹಿತ್ಯ ಹೆಚ್ಚುಹೆಚ್ಚಾಗಿ ಪ್ರಸಿದ್ಧಿಗೆ ಬಂದ ಹಾಗೆಲ್ಲ ಅದು ಮಿಕ್ಕ ದಕ್ಷಿಣದ ಸಾಹಿತ್ಯಗಳಿಗೆ ಸರಿದೊರೆಯಾಗಿರುವುದು ಸ್ಪಷ್ಟವಾಗುತ್ತದೆ ಎಂಬುದು ತಮ್ಮ ಸ್ವಂತ ಭಾವನೆಯಾಗಿದೆ ಎಂದು ಕಿಟ್ಟೆಲ್ ಹೇಳುತ್ತಾರೆ. ಈ ಅಭಿಪ್ರಾಯದ ಹಿಂದೆ ಅವರ ಆಳವಾದ ಅಧ್ಯಯನ ಪರಿಶೀಲನೆಗಳೂ ಕನ್ನಡ ಸಾಹಿತ್ಯವನ್ನು ಒಟ್ಟಾಗಿ ನೋಡಿದ್ದರ ಪ್ರತಿಫಲನವೂ ಕಂಡುಬರುತ್ತವೆ.

ಚಾರಿತ್ರಿಕವಾಗಿ ನೋಡಿದರೆ ಒಂದು ದೃಷ್ಟಿಯಿಂದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಪ್ರಸ್ತಾಪಿಸಿದವರಲ್ಲಿ ಕಿಟ್ಟೆಲ್ ಮೊದಲಿಗರೇನಲ್ಲ. ಅವರಿಗಿಂತಲೂ ಸುಮಾರು ಕಾಲು ಶತಮಾನಕ್ಕೆ ಮೊದಲೇ, ವೇಯ್‌ಗ್ಲೆ ಎಂಬ ವಿದ್ವಾಂಸ *ZDMG* ಪಂಡಿತ ಪತ್ರಿಕೆಯಲ್ಲಿ (ಸಂಪುಟ ೨, ೧೮೪೮), ಜರ್ಮನ್ ಭಾಷೆಯಲ್ಲಿ ಬರೆದ Canares Sprache U. Literatur ಎಂಬ ಲೇಖನದಲ್ಲಿ ಕನ್ನಡ ಸಾಹಿತ್ಯವನ್ನು ಬಹು ಸ್ಥೂಲವಾಗಿ ಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದ.[7] ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ಬೇರೆ ಬೇರೆ ವಿಷಯಗಳೂ ಇಲ್ಲಿ ಸೇರಿಕೊಂಡಿರುವುದರಿಂದ ಇದನ್ನು ಸಾಹಿತ್ಯಚರಿತ್ರೆಯ ಸಮೀಕ್ಷೆ ಎನ್ನಲು ಬರುವುದಿಲ್ಲ. ಅಲ್ಲದೆ ಅದಕ್ಕೆ ಕಿಟ್ಟೆಲ್ ಅವರ ಸಮೀಕ್ಷೆಯೊಡನೆ ಯಾವುದೇ ದೃಷ್ಟಿಯಿಂದಲೂ ಸ್ಪರ್ಧಿಸುವ ಶಕ್ತಿ ಇಲ್ಲ. ಅದಕ್ಕೆ ಚಾರಿತ್ರಿಕ ಮಹತ್ತ್ವ ಇದೆಯೆಂಬುವನ್ನು ಮಾತ್ರ ನಾವು ಗಮನಿಸಬೇಕು.

ಬಿ. ಎಂ. ಶ್ರೀಕಂಠಯ್ಯನವರು ಹೇಳುವಂತೆ ಕಿಟ್ಟೆಲ್ ಅವರ ಪ್ರಬಂಧವೇ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಸಾಧಿಸುವುದಕ್ಕೆ ಮೊದಲ ಆಯುಧಪ್ರಾಜೆ.[8] ಕಿಟ್ಟೆಲರೇ ೧೮೭೫ರಲ್ಲಿ ಹಳೆಯ ಕನ್ನಡ ಸಾಹಿತ್ಯವನ್ನು ಕುರಿತು ಚಿಕ್ಕ ಸಮೀಕ್ಷೆಯೊಂದನ್ನು ಪ್ರಕಟಿಸಿದರು. 'ಇಂಡಿಯನ್ ಆ್ಯಂಟಿಕ್ವರಿ' ಪತ್ರಿಕೆಯಲ್ಲಿ ಪ್ರಕಟವಾದ ಈ ಲೇಖನ ಇನ್ನೊಂದು ಪತ್ರಿಕೆಯಿಂದ ಎತ್ತಿಕೊಂಡಿರುವುದಾಗಿರುವುದರಿಂದ ಅದನ್ನು ಅವರು ಇನ್ನೂ ಒಂದೆರಡು ವರ್ಷ ಮೊದಲೇ ಬರೆದಿದ್ದಿರಬಹುದು. ಅವರ ದೊಡ್ಡ ಪ್ರಬಂಧದ ಸಾಮಗ್ರಿಯೇ ಅಲ್ಲೂ ಇದೆ. ಈ ಲೇಖನದಲ್ಲಿ ಅವರು ಕನ್ನಡ ಸಾಹಿತ್ಯವನ್ನು ಕುರಿತ ತಿಳಿವಳಿಕೆಯನ್ನು ಹೆಚ್ಚುಮಾಡುವಲ್ಲಿ ಇತರರೂ ಕೈಹಾಕಿಯಾರೆಂದು ಭರವಸೆ ತಾಳಿದ್ದಾರೆ.[9]

ಕನ್ನಡ ಸಾಹಿತ್ಯ ಚರಿತ್ರೆಯ ರಚನೆಗೆ ಆರಂಭದ ಇಟ್ಟಿಗೆಗಳನ್ನಿಟ್ಟ ಇನ್ನೊಬ್ಬ ಗಣ್ಯರೆಂದರೆ ಬಿ. ಎಲ್. ರೈಸ್ ಅವರು. ೧೮೭೬ರಲ್ಲಿ ಅವರು ಪ್ರಕಟಿಸಿದ 'ಮೈಸೂರು ಗೆಜೆಟಿಯರ್‌'ನ ಮೊದಲ ಸಂಪುಟದಲ್ಲಿ ಕನ್ನಡಭಾಷೆಗೆ ಸಂಬಂಧಿಸಿದ ಚಿಕ್ಕ ಅಧ್ಯಾಯವೊಂದನ್ನು ಸೇರಿಸಿ ಸಾಹಿತ್ಯವನ್ನೂ ಪ್ರಸ್ತಾಪಿಸಿದರು. ೧೮೮೪ರಲ್ಲಿ ಪ್ರಕಟವಾದ ಅವರ ನಾಗವರ್ಮಕೃತ 'ಕರ್ಣಾಟಕ ಭಾಷಾಭೂಷಣ' ಗ್ರಂಥದ ಪೀಠಿಕೆಯಲ್ಲಿ ಕನ್ನಡಸಾಹಿತ್ಯ

ಚರಿತ್ರೆಯ ಕಿರುಪರಿಚಯವನ್ನೂ ಸೇರಿಸಿದರು. ೧೮೮೪ರಲ್ಲಿ ಬರೆಯಲಾದ ಈ ಸಮೀಕ್ಷೆಯಲ್ಲಿ ರೈಸರು ಇಷ್ಟು ಸಂಪೂರ್ಣವಾದ ಬರಹ ಈ ಮೊದಲು ಪ್ರಕಟವಾದುದಿಲ್ಲ ಎಂದು ಹೇಳಿಕೊಂಡಿರುವುದು ಗಮನಾರ್ಹವಾಗಿದೆ.[10] ೧೮೯೦ರಲ್ಲಿ ಪ್ರಕಟಿಸಿದ ತಮ್ಮ 'ಕರ್ಣಾಟಕ ಶಬ್ದಾನುಶಾಸನಂ' ಎಂಬ ಗ್ರಂಥದ ಪೀಠಿಕೆಯಲ್ಲಿಯೂ ಅವರು ಸಾಕಷ್ಟು ದೀರ್ಘವಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಪರಿಚಯ ನೀಡಿದ್ದಾರೆ. The Literature of Karnataka ಎಂಬ ಈ ಪ್ರಬಂಧಕ್ಕೆ ಕೃತಿಗಳ ಹಾಗೂ ಕೃತಿಕಾರರ ಪಟ್ಟಿಗಳನ್ನು ಅನುಬಂಧಿಸಿದ್ದಾರೆ. ಅದೇವರ್ಷ ಅವರು *JRAS* ಪತ್ರಿಕೆಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಕುರಿತು ಒಂದು ಪ್ರಬಂಧವನ್ನು ಪ್ರಕಟಿಸಿದರು. ಕನ್ನಡ ಸಾಹಿತ್ಯ ತುಂಬ ಪ್ರಾಚೀನವಾದುದಾದರೂ ತಮಿಳು ತೆಲುಗುಗಳಂತೆ ಅದು ವಿದ್ವಾಂಸರ ಗಮನವನ್ನು ಹೆಚ್ಚಾಗಿ ಸೆಳೆಯದಿರುವುದನ್ನು ಗಮನಿಸಿ ಅದಕ್ಕೆ ಕಾರಣವನ್ನೂ ಹೇಳಿದ್ದಾರೆ. ಕನ್ನಡ ಪ್ರಧಾನವಾಗಿ ಆಶ್ರಿತ ಸಂಸ್ಥಾನವೊಂದರ ಭಾಷೆಯಾಗಿದ್ದು ಹೊರಗಿನವರೊಡನೆ ಅಷ್ಟಾಗಿ ಸಂಪರ್ಕ ಸಾಧಿಸಲಿಲ್ಲ. ಪರಿಣಾಮವಾಗಿ ತಮಿಳು ತೆಲುಗುಗಳು ಶ್ರೇಷ್ಠವಾದವು, ಸಮೃದ್ಧವಾದವು ಎಂಬ ಭಾವನೆ ಬೆಳೆಯಿತು. ಇದಕ್ಕೆ ಆಧಾರವಿಲ್ಲವೆಂದು ರೈಸ್ ಹೇಳುತ್ತಾರೆ.[11] ನಿರ್ಲಕ್ಷ್ಯಕ್ಕೊಳಗಾದ ಸಾಹಿತ್ಯವೊಂದರ ಶ್ರೇಷ್ಠತೆಯನ್ನು ಪರಿಚಯ ಮಾಡಿಕೊಡುವುದೇ ರೈಸ್ ಅವರ ಸಮೀಕ್ಷೆಗಳ ಮುಖ್ಯ ಉದ್ದೇಶ. ೧೯೦೯ರಲ್ಲಿ ತಾವು ಪ್ರಕಟಿಸಿದ 'Mysore and Coorg from the Inscriptions' ಎಂಬ ಗ್ರಂಥದಲ್ಲಿಯೂ ರೈಸರು ಕನ್ನಡಸಾಹಿತ್ಯಕ್ಕೆ ಸಂಬಂಧಿಸಿದ ಚಿಕ್ಕ ಅಧ್ಯಾಯವೊಂದನ್ನು ಸೇರಿಸಿದ್ದಾರೆ. ಕಿಟ್ಟೆಲ್ ಮತ್ತು ರೈಸರು ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಅಗತ್ಯವಾಗಿದ್ದ ನೀಲನಕಾಶೆಯನ್ನು ಸಿದ್ಧಗೊಳಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಅವರ ಕೆಲಸದೊಡನೆ ಸಾಹಿತ್ಯಚರಿತ್ರೆಯ ರಚನೆಯ ಒಂದು ಹಂತ ಮುಗಿಯಿತು.

ಕನ್ನಡ ಸಾಹಿತ್ಯ ಚರಿತ್ರೆಯ ಕೆಲಸದಲ್ಲಿ ಪಂಚಾಂಗ ಹಾಕಿದ ಯಶಸ್ಸು ಆರ್. ನರಸಿಂಹಾಚಾರ್ಯರದು. ಅವರು ಪ್ರಕಟಿಸಿದ 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳು (೧೯೦೭, ೧೯೧೯, ೧೯೨೯) ಸಾಹಿತ್ಯಚರಿತ್ರೆಯ ವಿದ್ಯಾರ್ಥಿಗೆ ಅನಿವಾರ್ಯ ಆಕರಗಳಾಗಿವೆ. ಇದು ಹೆಸರೇ ಹೇಳುವ ಹಾಗೆ ಕವಿಚರಿತೆ. ಕವಿಗಳ ಕಾಲ ದೇಶ ಜೀವನ ಕೃತಿಗಳಿಗೆ ಸಂಬಂಧಿಸಿದ ವಿವರಗಳ ಪಟ್ಟಿಯೂ ಕೃತಿಪರಿಚಯಕ್ಕೆ ಅನುಕೂಲವಾಗುವ ದೃಷ್ಟಿಯಿಂದ ಆಯ್ದ ಉದಾಹರಣೆಯ ಭಾಗಗಳೂ ಈ ಸಂಪುಟಗಳಿಗೆ ವಿವರಣಾತ್ಮಕ ಗ್ರಂಥಸೂಚಿಯ ಸ್ವರೂಪವನ್ನು ಕೊಟ್ಟಿವೆ. ನರಸಿಂಹಾಚಾರ್ಯರ ಅಗಾಧ ಪಾಂಡಿತ್ಯವೂ ವ್ಯಾಪಕವಾದ ಕನ್ನಡ ಸಾಹಿತ್ಯ ಪರಿಚಯವೂ ಸ್ಮರಣೀಯ. ಈ ಮೂರು ಸಂಪುಟಗಳಲ್ಲಿ ಮೊದಲನೆಯದು ೧೪ನೆಯ ಶತಮಾನದ ಕೊನೆಯವರೆಗೆ ಸುಮಾರು ೨೩೦ ಜನ ಕವಿಗಳನ್ನು ಪರಿಚಯಿಸುತ್ತದೆ (ಎರಡನೆಯ ಮುದ್ರಣದಲ್ಲಿನ ಕವಿಗಳ ಸಂಖ್ಯೆ ಸುಮಾರು ೨೮೦); ಎರಡನೆಯ ಸಂಪುಟ ೧೫, ೧೬, ೧೭ನೆಯ ಶತಮಾನಗಳ ಸುಮಾರು ೩೫೦

ಕವಿಗಳ ಚರಿತೆಯನ್ನೂ ಕೊನೆಯ ಸಂಪುಟ ೧೮, ೧೯ನೆಯ ಶತಮಾನಗಳ ೫೬೭ ಕವಿಗಳ ಚರಿತೆಯನ್ನೂ ಒಳಗೊಂಡಿವೆ. ಈ ಸಂಪುಟಗಳಲ್ಲಿ ಯಾರನ್ನಾದರೂ ದಂಗು ಪಡಿಸಬಹುದಾದಷ್ಟು ವಿಷಯಗಳನ್ನು ಕಲೆಹಾಕಲಾಗಿದೆ. ಇದೆಲ್ಲವೂ ಒಬ್ಬ ವ್ಯಕ್ತಿಯ ಕೆಲಸ ಎಂದುಕೊಂಡಾಗಲಂತೂ ಹೆಚ್ಚಿನ ಆಶ್ಚರ್ಯಕ್ಕೆ ಕಾರಣವಾಗುತ್ತದೆ. ಸಾಹಿತ್ಯ ಚರಿತ್ರೆಯಿಂದ ಕವಿಚರಿತ್ರೆ ಹೇಗೆ ಬೇರೆಯಾಗಿರಬಹುದೆಂಬುದಕ್ಕೆ ಇಲ್ಲಿ ಒಳ್ಳೆಯ ಉದಾಹರಣೆಯಿದೆ. ನರಸಿಂಹಾಚಾರ್ಯರ 'ಕವಿಚರಿತೆ'ಯೊಂದೇ ಸಾಹಿತ್ಯಚರಿತ್ರೆಯ ರಚನೆಯ ಇನ್ನೊಂದು ಹಂತವನ್ನು ಪ್ರತಿನಿಧಿಸುತ್ತದೆ.

ಇ. ಪಿ. ರೈಸರು ೧೯೧೫ರಲ್ಲಿ ಪ್ರಕಟಿಸಿದ 'A History of Kanarese Literature' ಎಂಬ ಪುಸ್ತಕ ಕೆಲವು ದೃಷ್ಟಿಗಳಿಂದ ಕನ್ನಡದ ಮೊದಲ ಸಾಹಿತ್ಯ ಚರಿತ್ರೆ ಎಂದರೆ ತಪ್ಪಾಗುವುದಿಲ್ಲ. ತಮ್ಮ ಕಾಲದವರೆಗೆ ನಡೆದಿದ್ದ ಶೋಧನೆಗಳನ್ನೆಲ್ಲ ಕ್ರೋಡೀಕರಿಸಿ ಕನ್ನಡ ಸಾಹಿತ್ಯದ ಬೆಳೆವಣಿಗೆಯ ಒಂದು ಸಂಬಂಧಿತ ನಿರೂಪಣೆಯನ್ನು ಕೊಡಲು ರೈಸರು ಇಲ್ಲಿ ಪ್ರಯತ್ನಿಸಿದ್ದಾರೆ; ತಮ್ಮ ಉದ್ದೇಶದಲ್ಲಿ ತಕ್ಕಷ್ಟು ಯಶಸ್ಸನ್ನೂ ಗಳಿಸಿದ್ದಾರೆ. ೧೯೩೪ರಲ್ಲಿ ಕೆ. ವೆಂಕಟರಾಮಪ್ಪ ('ಕನ್ನಡ ಸಾಹಿತ್ಯ') ಮತ್ತು ಎನ್. ಕೆ. ಕುಲಕರ್ಣಿ ('ಕನ್ನಡ ಸಾಹಿತ್ಯ ವಾಹಿನಿ') ಕನ್ನಡ ಸಾಹಿತ್ಯ ಚರಿತ್ರೆಯನ್ನು ಪರಿಚಯ ಮಾಡಿಕೊಡುವ ಕಿರುಹೊತ್ತಗೆಗಳನ್ನು ಪ್ರಕಟಿಸಿದರು. ಮೊದಲನೆಯದು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನೀಡಿದ ಐದು ಪ್ರಚಾರೋಪನ್ಯಾಸಗಳ ಸಾರಸಂಗ್ರಹ; ಎರಡನೆಯದು ವಿದ್ಯಾರ್ಥಿಗಳ ಉಪಯೋಗಕ್ಕಾಗಿಯೇ ಸಿದ್ಧಗೊಂಡ ಟಿಪ್ಪಣಿಗಳ ಸಂಗ್ರಹ. ಎರಡೂ ಕೃತಿಗಳಲ್ಲಿ ಕನ್ನಡ ಸಾಹಿತ್ಯದ ಬೆಳೆವಣಿಗೆಯ ಮರಿಹಕ್ಕಿನೋಟ ಇದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆರ್. ನರಸಿಂಹಾಚಾರ್ಯರು ನೀಡಿದ ಭಾಷಣಗಳು 'History of Kannada Literature' ಎಂಬ ಹೆಸರಿನಲ್ಲಿ, ಗ್ರಂಥರೂಪದಲ್ಲಿ ಪ್ರಕಟವಾಗಿವೆ (೧೯೪೦). ಕನ್ನಡ ಸಾಹಿತ್ಯ ಸಮುದ್ರದಲ್ಲಿ ಈಜಾಡಿದ ನರಸಿಂಹಾಚಾರ್ಯರು ಚರಿತ್ರೆಯ ರಚನೆಗಿಂತ ಹೆಚ್ಚಾಗಿ, ತಮ್ಮ 'ಕವಿಚರಿತೆ'ಯ ವಿಮರ್ಶಕರಿಗೆ ಉತ್ತರ ನೀಡುವುದಕ್ಕಾಗಿಯೇ ಈ ಅವಕಾಶವನ್ನು ಉಪಯೋಗಿಸಿಕೊಂಡಿರುವುದು ಒಂದು ನಷ್ಟವೇ ಸರಿ.

ಬಿ. ಎಂ. ಶ್ರೀಕಂಠಯ್ಯನವರು ಬರೆಯಲಾಶಿಸಿದ್ದ ಕನ್ನಡ ಸಾಹಿತ್ಯ ಚರಿತ್ರೆಯ ಆರಂಭದ ಭಾಗ 'ಕನ್ನಡ ಕೈಪಿಡಿ'ಯ ಎರಡನೆಯ ಭಾಗವಾಗಿ ಪ್ರಕಟವಾಗಿದೆ. ಇದು ೧೯೪೭ರಲ್ಲಿ ಪ್ರಕಟವಾಗಿದ್ದರೂ, ಶ್ರೀಕಂಠಯ್ಯನವರು ಇದನ್ನು ೧೯೩೦ ಕ್ಕಿಂತ ಮೊದಲೇ ಬರೆಯಲಾರಂಭಿಸಿದ್ದರೆಂದು ಹೇಳಬಹುದು[12]. ಕನ್ನಡ ಸಾಹಿತ್ಯವನ್ನಷ್ಟೇ ಅಲ್ಲದೆ ಅನೇಕ ಸಾಹಿತ್ಯಗಳನ್ನು ಚೆನ್ನಾಗಿ ಬಲ್ಲವರಾಗಿದ್ದ ಅವರು ಶ್ರೇಷ್ಠ ಸಾಹಿತ್ಯ ಚರಿತ್ರೆಯನ್ನು ರಚಿಸಬಲ್ಲ ಸಮರ್ಥರಾಗಿದ್ದರು. ಆದರೆ ಉದಾಹರಣೆಗಳ ಭಾರದಿಂದ ಕುಸಿದಿರುವ ಪ್ರಕಟಿತ ಭಾಗ ಮಾತ್ರ ಈ ಸಾಹಿತ್ಯ ಚರಿತ್ರೆ ಅತ್ಯುತ್ತಮವಾಗಿರುತ್ತಿತ್ತೆಂಬುದನ್ನೇನೂ ತೋರಿಸುವುದಿಲ್ಲ.

೧೯೫೩ರಲ್ಲಿ ಪ್ರಕಟವಾದ ರಂ. ಶ್ರೀ. ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ'

ಅನೇಕ ರೀತಿಗಳಿಂದ ಗಮನಾರ್ಹವಾಗಿದೆ. ಗಾತ್ರ, ವ್ಯಾಪ್ತಿ, ದೃಷ್ಟಿ, ನಿರೂಪಣೆ, ಮೌಲಿಕತೆ ಮೊದಲಾದ ಕಾರಣಗಳಿಗಾಗಿ ಅದು ಮಹತ್ತ್ವದ ಕೃತಿಯೂ ಆಗಿದೆ. ಆದರೆ ವ್ಯಕ್ತಿಯೊಬ್ಬ ಮೂಲಾಧಾರಗಳ ಕೊರತೆಯ ಮಹಾ ಸಾಹಿತ್ಯದ ಇತಿಹಾಸವನ್ನು ಬರೆಯುವಾಗ ಎದುರಾಗುವ ಅನೇಕ ಸಹಜ ಅಡ್ಡಿಗಳಿಂದ ಈ ಕೃತಿ ಮುಕ್ತವಾಗಿಲ್ಲ. ಎಂ. ಮರಿಯಪ್ಪಭಟ್ಟ ಅವರ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' (೧೯೬೦), ರಂ. ಶ್ರೀ. ಮುಗಳಿ ಅವರ 'ಕನ್ನಡ ಸಾಹಿತ್ಯದ ಇತಿಹಾಸ' (೧೯೬೩), ತ. ಸು. ಶಾಮರಾಯ ಮತ್ತು ಮೇ. ರಾಜೇಶ್ವರಯ್ಯ ಅವರ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ' (೧೯೬೪), ತ. ಸು. ಶಾಮರಾಯರ 'ಕನ್ನಡ ಸಾಹಿತ್ಯ ಚರಿತ್ರೆ: ಒಂದು ಸಮೀಕ್ಷೆ' (೧೯೭೨), ಕೆ. ವೆಂಕಟರಾಮಪ್ಪನವರ 'ಕನ್ನಡ ಸಾಹಿತ್ಯ ಚರಿತ್ರೆ' (೧೯೭೪)—ಮೊದಲಾದ ಗ್ರಂಥಗಳಲ್ಲಿ ಮುಗಳಿಯವರ ಗ್ರಂಥವೊಂದನ್ನುಳಿದು ಮಿಕ್ಕವು ಮುಖ್ಯವಾಗಿ ವಿವಿಧ ವಿದ್ಯಾರ್ಥಿಗಳ ಅವಶ್ಯಕತೆಗಳನ್ನು ಪೂರೈಸಲು ಸಿದ್ಧವಾದವು. ಮುಗಳಿಯವರ ಗ್ರಂಥ ಹೊಸಗನ್ನಡ ಸಾಹಿತ್ಯವನ್ನು ಕುರಿತ ಭಾಗವನ್ನು ಒಳಗೊಂಡಂತೆ, ಅವರ ಮೊದಲ ಸಾಹಿತ್ಯ ಚರಿತ್ರೆಯ ಸಂಗ್ರಹರೂಪ.

ಹೀಗೆ ಗ್ರಂಥರೂಪದಲ್ಲಿ ಪ್ರಕಟವಾದ ಸಾಹಿತ್ಯಚರಿತ್ರೆಗಳಲ್ಲದೆ, ಸಾಹಿತ್ಯ ಚರಿತ್ರೆಯ ವಿವಿಧ ಮುಖಗಳಿಗೆ ಸಂಬಂಧಿಸಿದ ಬಗೆ ಬಗೆಯ ಪುಸ್ತಕಗಳು ಅನೇಕ ಪ್ರಕಟವಾಗಿವೆ. ಕವಿ ಕಾವ್ಯಗಳನ್ನು ಕುರಿತ ಪ್ರತ್ಯೇಕ ಗ್ರಂಥಗಳೂ ಲೇಖನ ಸಂಗ್ರಹಗಳೂ ಬಿಡಿಲೇಖನಗಳೂ ತುಂಬ ಪ್ರಕಟವಾಗಿವೆ. ಅನೇಕ ಗ್ರಂಥಗಳ ಮುನ್ನುಡಿ, ಪೀಠಿಕೆಗಳಲ್ಲಿ ಕವಿಚರಿತ್ರೆಯ ಅಂಶಗಳನ್ನು ವಿವರವಾಗಿ ಪರಿಶೀಲಿಸಲಾಗಿದೆ. ಅನೇಕ ವಿದ್ವಾಂಸರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ತಮ್ಮ ಬರಹಗಳಲ್ಲಿ ಸಾಹಿತ್ಯ ಚರಿತ್ರೆಗೆ ಸಂಬಂಧಪಟ್ಟ ನಾನಾ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಹೊಸ ಸಾಹಿತ್ಯ ಚರಿತ್ರೆ ಚದುರಿದ ಈ ವಿಪುಲ ಸಾಹಿತ್ಯವನ್ನೆಲ್ಲ ಗಮನಿಸಿ, ಚೆಲ್ಲಿದ ಮಹತ್ತ್ವದ ಸಂಶೋಧನೆಗಳ ಸಾರವನ್ನೆಲ್ಲ ಹೀರಿ ಸಿದ್ಧಗೊಳ್ಳಬೇಕಾಗಿದೆ.

## ಕನ್ನಡ ಸಾಹಿತ್ಯ ಚರಿತ್ರೆಯ ವಿಭಜನಕ್ರಮಗಳು

ಕನ್ನಡ ಸಾಹಿತ್ಯಕ್ಕೆ ೧೫೦೦ ವರ್ಷಗಳಿಗೆ ಮೇಲ್ಪಟ್ಟ ಇತಿಹಾಸವಿದೆ. ವಿವಿಧ ಧಾರ್ಮಿಕಪಂಥಗಳಿಗೆ ಸೇರಿದ ನೂರಾರು ಮಂದಿ ಕವಿಗಳು ಬಗೆಬಗೆಯ ವಸ್ತುವಿರಚನೆಯನ್ನು ಒಳಕೊಂಡ ಗ್ರಂಥರಾಶಿಯನ್ನು ಈ ಅವಧಿಯಲ್ಲಿ ನಿರ್ಮಾಣ ಮಾಡಿದ್ದಾರೆ. ಕವಿಗಳಲ್ಲಿ ಪ್ರತಿಭಾವಂತರಿದ್ದಾರೆ, ಸಾಮಾನ್ಯರಿದ್ದಾರೆ; ಒಂದೇ ಕೃತಿಯನ್ನು ಬರೆದು ಖ್ಯಾತರಾದವರಿದ್ದಾರೆ, ಒಂದಕ್ಕಿಂತ ಹೆಚ್ಚು ಬರೆದವರೂ ಇದ್ದಾರೆ. ಕಾಲದಿಂದ ಕಾಲಕ್ಕೆ ಕನ್ನಡ ಭಾಷೆಯ ಗತಿಯೊಡನೆ ಸಾಹಿತ್ಯವೂ ವಿವಿಧ ಅವಸ್ಥಾಂತರಗಳಿಗೆ ಸಿಕ್ಕು, ಪ್ರಕಾರಗಳನ್ನು ಹೊಕ್ಕು, ಶ್ರೀಮಂತವಾದ ಒಂದು ಕವಿಕಾವ್ಯಪರಂಪರೆ ನಿರ್ಮಾಣಗೊಂಡಿದೆ.

ಆ ಪರಂಪರೆಯ ಸ್ವರೂಪವನ್ನೂ ಸಾಧನೆಯನ್ನೂ ವಿಶದವಾಗಿ ತಿಳಿಯುವುದರಲ್ಲಿ ಕನ್ನಡಿಗನು ತನ್ನ ಬುದ್ಧಿಗೆ ಸಂಸ್ಕಾರವನ್ನೂ ಭಾವಕ್ಕೆ ಹದವನ್ನೂ ತನಗೆ, ತನ್ನ ತಾಯಿ ನುಡಿಗೆ ಪುಷ್ಟಿತುಷ್ಟಿಗಳನ್ನೂ ಪಡೆಯುವ ಪ್ರಯೋಜನವಿದೆ. ಈವರೆಗೆ ನಡೆದ ಸಾಧನೆ ಏನು, ಎಷ್ಟು ಎಂಬುದರ ಪರಿಶೀಲನೆಯಿಂದ ತನ್ನ ಭಾಷೆಯ ಹಾಗೂ ಸಾಹಿತ್ಯದ ವ್ಯಾಪ್ತಿ ವೈಶಾಲ್ಯಗಳ ಸಾಮರ್ಥ್ಯ ದೌರ್ಬಲ್ಯಗಳೂ ಶ್ರೀಮಂತಿಕೆ ದಾರಿದ್ರ್ಯಗಳೂ ಮನಮುಟ್ಟುವಂತಾಗಿ, ತತ್ಕಾಲದಲ್ಲಿ ನಿಂತ ನೆಲೆ ಯಾವುದು, ಮುಟ್ಟುವ ಗುರಿಗೆ ಗತಿ ಹೇಗೆ—ಎಂಬ ತಿಳಿವಳಿಕೆ ಸ್ಪಷ್ಟವಾಗುತ್ತದೆ. ಭಾಷೆ ಸಾಹಿತ್ಯಗಳ ಸಾಧನೆಗಳು ಜನಾಂಗದ ಸಾಂಸ್ಕೃತಿಕಜೀವನದ ಹಿರಿಮೆಕಿರಿಮೆಗಳ ಕೈಗನ್ನಡಿ. ಆದ್ದರಿಂದ ಸಾಹಿತ್ಯಿಕ ಪರಂಪರೆಯನ್ನು ಈ ನಿಟ್ಟಿನಲ್ಲಿ ನಿರುಕಿಸಲು ಸಾಹಿತ್ಯಚರಿತ್ರೆಯ ಅಭ್ಯಾಸ ಅವಶ್ಯ.

ಕನ್ನಡ ಸಾಹಿತ್ಯ ಚರಿತ್ರೆಯ ಅಭ್ಯಾಸವನ್ನು ಹೇಗೆ ಕೈಗೊಳ್ಳಬೇಕು? ಕಾಲಗತಿ ಭಾಷಾಗತಿಗಳಿಗನುಗುಣವಾದ ವೈಜ್ಞಾನಿಕವಿಭಜನೆಗಳಿಂದ ತಾತ್ತ್ವಿಕ ಸಾಮಂಜಸ್ಯವುಳ್ಳದ್ದಾಗಿಯೂ ಅಭ್ಯಾಸಕ್ಕೆ ಸುಕರವಾಗಿಯೂ ಇರುವಂತಹ ಯಾವುದಾದರೂ ಕೆಲವು ಸೂತ್ರಗಳನ್ನು ಹಿಡಿದು ಮುನ್ನಡೆಯುವುದು ಅಪೇಕ್ಷಣೀಯ. ಇಲ್ಲವಾದರೆ ಅಭ್ಯಾಸ ಹಿಡಿತಕ್ಕೆ ಸಿಕ್ಕದಂತಾಗಿ ಹಲವು ತೊಡಕುಗಳು ಹುಟ್ಟಿಕೊಳ್ಳಬಹುದು; ಸಂಸ್ಕೃತಿ ಸಾಹಿತ್ಯಗಳ ಕ್ರಮಿಕ ವಿಕಾಸದ ಹಾಗೂ ವೈಶಿಷ್ಟ್ಯಯುತ ಸಾಧನೆಯ ವಿವಿಧ ಹಂತಗಳೂ ಸಾಹಿತ್ಯನಿರ್ಮಾಣದ ಹಿನ್ನೆಲೆಯ ಧ್ಯೇಯಧೋರಣೆಗಳೂ ಆ ಪರಿಣಾಮವಾಗಿ ಸಾಧ್ಯವಾದ ಕವಿಕಾವ್ಯ ಸಿದ್ಧಿಗಳೂ ಸರಿಯಾಗಿ ಅರ್ಥವಾಗದೆ ಹೋಗುವ ಸಾಧ್ಯತೆಯಿರುತ್ತದೆ. ವಸ್ತುವನ್ನೋ ರೂಪವನ್ನೋ ಪ್ರೇರಕಶಕ್ತಿಗಳನ್ನೋ ಭಾಷೆ ಶೈಲಿಗಳನ್ನೋ ದೃಷ್ಟಿಯಲ್ಲಿಟ್ಟುಕೊಂಡು, ವಿಪುಲತೆ ವೈವಿಧ್ಯಗಳ ಸಾಹಿತ್ಯರಾಶಿಯನ್ನು ಹಲಕೆಲವು ಗುಂಪುಗಳಾಗಿ ವಿಭಾಗಿಸಿಕೊಂಡು, ಅಭ್ಯಾಸ ಮಾಡುವುದು ಫಲಕಾರಿಯಾದ್ದು. ಅದ್ದರಿಂದ ಯಾವುದೇ ಒಂದು ವ್ಯವಸ್ಥೆ ಕ್ರಮಬದ್ಧವಾಗಿದ್ದಾಗ ಅನುಕೂಲ ಹೆಚ್ಚು. ಕ್ರಮವೆಂದ ಮೇಲೆ ಅದಕ್ಕೊಂದು ತತ್ತ್ವ, ಸೂತ್ರ ಬೇಕಾಗುತ್ತದೆ. ಕನ್ನಡದಲ್ಲಿ ಸಾಹಿತ್ಯಚರಿತ್ರೆಯ ಅಭ್ಯಾಸ ಆರಂಭವಾದ ಕಾಲದಿಂದ ಅಭ್ಯಾಸದ ವ್ಯವಸ್ಥಿತಕ್ರಮಕ್ಕಾಗಿ ಯಾವ ತತ್ತ್ವ ಅಥವಾ ಸೂತ್ರ ಸಮ್ಮತವಾದ್ದು—ಎಂಬುದನ್ನು ವಿದ್ವಾಂಸರು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಲೇ ಇದ್ದಾರೆ. ನಮ್ಮ ಸಾಹಿತ್ಯರಚನೆಗಳ ಹಾಗೂ ರಚಯಿತರ ಸಂಕೀರ್ಣ ಸ್ವರೂಪದ ದೆಸೆಯಿಂದ ಯಾವ ಒಂದು ತತ್ತ್ವವಾಗಲಿ, ಸೂತ್ರವಾಗಲಿ ಪೂರ್ತಿಯಾಗಿ ಸರಿಹೊಂದದಿರುವುದು ಅಭಿಪ್ರಾಯಭೇದಗಳಿಗೆ ಎಡೆಗೊಟ್ಟಿದೆ. ಆಯಾ ವಿದ್ವಾಂಸರು ಸ್ವತಂತ್ರವಾಗಿ ರಚಿಸಿದ ಕನ್ನಡ ಸಾಹಿತ್ಯ ಚರಿತ್ರೆಗಳ ಆರಂಭಗಳಲ್ಲಿಯೋ ಪ್ರತ್ಯೇಕವಾಗಿ ಬರೆದ ಲೇಖನಗಳಲ್ಲಿಯೋ ಈ ಸಂಬಂಧವಾದ ವಿಚಾರವಿಮರ್ಶೆಯನ್ನು ಕಾಣಬಹುದು. ಇವುಗಳ ಫಲವಾಗಿ ಈವರೆಗೆ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಗೆ ತೊಡಗಿರುವವರು, ತಮಗೆ ತರ್ಕಬದ್ಧವೆಂದು ತೋರಿದ ವಿಭಜನಕ್ರಮವನ್ನು ಅಂಗೀಕಾರಮಾಡಿ, ತಮ್ಮ ವಿವೇಚನೆಯಲ್ಲಿ ಅದನ್ನು ಅನುಸರಿಸುತ್ತ ಬಂದಿದ್ದಾರೆ. ಇದರಿಂದ ಕನ್ನಡ ಸಾಹಿತ್ಯದ

ಬೆಳೆವಣಿಗೆಗೆ ಕಾರಣವಾದ ಪ್ರೇರಕಶಕ್ತಿಗಳಲ್ಲಿ ಯಾವುದಾದರೊಂದು ಅಂಶದ ಮೇಲೆ ಸಹಜವಾಗಿಯೇ ಅವರು ಒತ್ತುಕೊಟ್ಟಿರುವುದು ಕಾಣುತ್ತದೆ.

ಈವರೆಗೆ ಮುಂದೊಡ್ಡಿರುವ ವಿವಿಧ ವಿಭಜನೆಯ ಕ್ರಮಗಳು ಮತಪ್ರಾಬಲ್ಯ, ಭಾಷೆಯ ಅವಸ್ಥೆಗಳು, ಪ್ರಮುಖಕವಿಗಳು, ಸಾಹಿತ್ಯರೂಪಗಳು, ಶತಮಾನಾನುಪೂರ್ವಿ, ಪ್ರೇರಕಶಕ್ತಿ, ಬೇರೆ ಬೇರೆಯ ಸಮ್ಮಿಶ್ರ ಅಂಶಗಳು ಮುಂತಾದವನ್ನು ಅವಲಂಬಿಸಿ ಮಾಡಿರುವಂತಹವಾಗಿವೆ. ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯನ್ನು ಮೊತ್ತಮೊದಲು ಕೈಗೊಂಡ (೧೮೭೪–೭೫) ರೆವೆರೆಂಡ್ ಎಫ್. ಕಿಟ್ಟೆಲ್, ಅಭ್ಯಾಸದ ಕ್ರಮ ಮತ ಮತ್ತು ಭಾಷೆಗಳಿಗೆ ಅನುಸಾರವಾಗಿ ಇರಬಹುದೆಂದು ಮೊದಲು ಸೂಚಿಸಿದರು; ತಮ್ಮ ಮಟ್ಟಿಗೆ ಅದನ್ನು ಅನುಸರಿಸಿದರು. ಬಳಿಕ ಬಿ. ಲೂಯಿ ರೈಸ್, ಆರ್. ನರಸಿಂಹಾಚಾರ್ ಮುಂತಾಗಿ ಇತರರು ಕೆಲವು ಹೊಂದಾಣಿಕೆಗಳನ್ನು ಮಾಡಿಕೊಂಡು ಈ ಕ್ರಮವನ್ನು ಮುಂದುವರಿಸಿದರು; ವಿಚಾರವಿಮರ್ಶೆಯಿಂದ ಹೊಸ ವಿಭಜನಕ್ರಮಗಳೂ ಅವರಿಂದ ಸೂಚಿತವಾದವು. ಕೆಲವರ ಅಭಿಪ್ರಾಯಗಳನ್ನು ಹೊರತುಪಡಿಸಿದರೆ, ಸಾಧಾರಣವಾಗಿ ಎಲ್ಲರೂ ಒಂದಲ್ಲ ಒಂದು ತಾತ್ತ್ವಿಕ ನೆಲೆಗಟ್ಟಿನ ಮೇಲೆ ರೂಪತಳೆದ ತರ್ಕಬದ್ಧವಾದ ಮಾರ್ಗವನ್ನು ಅನುಸರಿಸಿದ್ದಾರೆ. ಮೊದಲು ಈ ಕ್ರಮಗಳ ಒಂದು ಒಟ್ಟುನೋಟವನ್ನೂ ಬಳಿಕ ವಿವರವಾಗಿ ಅವುಗಳ ಪ್ರತಿಪಾದನೆ ಮತ್ತು ಔಚಿತ್ಯಗಳನ್ನೂ ನೋಡಬಹುದು.

## ವಿವಿಧ ಕಾಲವಿಭಾಗಗಳು

(೧) ಎಫ್. ಕಿಟ್ಟೆಲ್ (೧೮೭೫) ಆರಂಭಕಾಲ (ಕ್ರಿ.ಶ. ಸು. ೮೦೦–೧೩೦೦); ಅನಂತರ ಕಾಲ: ಲಿಂಗಾಯತ ಮತ್ತು ಶೈವಕಾಲ (ಕ್ರಿ.ಶ. ಸು. ೧೩೦೦–೧೫೦೦), ವೈಷ್ಣವ, ಲಿಂಗಾಯತ ಮತ್ತು ಶೈವಕಾಲ (ಕ್ರಿ.ಶ. ಸು. ೧೫೦೦–೧೮೭೪)[13]

(೨) ಬಿ. ಎಲ್. ರೈಸ್ (೧೮೮೪) ಪೂರ್ವದ ಹಳಗನ್ನಡ (ಆದಿಕಾಲದಿಂದ ಕ್ರಿ.ಶ. ೭ನೆಯ ಶತಮಾನ), ಹಳಗನ್ನಡ (ಕ್ರಿ.ಶ. ೮ನೆಯ ಶತಮಾನದಿಂದ ೧೪ನೆಯ ಶತಮಾನ), ಹೊಸಗನ್ನಡ (ಕ್ರಿ.ಶ. ೧೪ನೆಯ ಶತಮಾನದಿಂದ ಮುಂದಕ್ಕೆ); ಆದಿಕಾಲದಿಂದ ಕ್ರಿ.ಶ. ಸು. ೧೩೦೦ರ ವರೆಗೆ ಜೈನರು, ಕ್ರಿ. ಶ. ಸು. ೧೩೦೦ರಿಂದ ೧೫೦೦ರ ವರೆಗೆ ಲಿಂಗಾಯತ ಮತ್ತು ಶೈವರು, ಕ್ರಿ.ಶ. ಸು. ೧೫೦೦ರಿಂದ ಬ್ರಾಹ್ಮಣರು ಮತ್ತು ವೈಷ್ಣವರು.[14]

(೩) ಎಫ್. ಕಿಟ್ಟೆಲ್ (೧೮೯೪) ಹಳಗನ್ನಡ–ಜೈನಕವಿಗಳು (ಕ್ರಿ.ಶ. ೧–೧೩ ನೆಯ ಶತಮಾನ), ನಡುಗನ್ನಡ—ಶೈವ ಮತ್ತು ಲಿಂಗಾಯತ ಕವಿಗಳು (ಕ್ರಿ.ಶ. ೧೩ನೆಯ ಶತಮಾನ-೧೫ನೆಯ ಶತಮಾನದ ಅಂತ್ಯ), ಹೊಸಗನ್ನಡ—ವೈಷ್ಣವ ಕವಿಗಳು (ಸು. ೧೬ ನೆಯ ಶತಮಾನದಿಂದ ಮುಂದಕ್ಕೆ)[15]

೪) ಆರ್. ನರಸಿಂಹಾಚಾರ್ (೧೯೦೭) ಜೈನಕವಿಗಳು (ಆರಂಭಕಾಲದಿಂದ ೧೨ನೆಯ ಶತಮಾನದವರೆಗೆ), ವೀರಶೈವ ಕವಿಗಳು (೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ), ವೈಷ್ಣವ (ಬ್ರಾಹ್ಮಣ) ಕವಿಗಳು (೧೫ನೆಯ ಶತಮಾನದಿಂದ ಮುಂದಕ್ಕೆ).[16]

(೫) ಇ. ಪಿ. ರೈಸ್ (೧೯೧೫–೧೯೨೧) ಜೈನ (ಆದಿಕಾಲದಿಂದ ೧೨ನೆಯ ಶತಮಾನದ ವರೆಗೆ), ಲಿಂಗಾಯತ ಅಥವಾ ವೀರಶೈವ (೧೩ನೆಯ ಶತಮಾನದಿಂದ ೧೬ನೆಯ ಶತ ಮಾನದವರೆಗೆ), ವೈಷ್ಣವ (ಕ್ರಿ. ಶ. ೧೬ನೆಯ ಶತಮಾನದಿಂದ ೧೯ನೆಯ ಶತಮಾನದ ವರೆಗೆ), ಆಧುನಿಕ ಕಾಲ (೨೦ನೆಯ ಶತಮಾನದಿಂದ ಮುಂದಕ್ಕೆ).[17]

(೬) ಕನ್ನಡಪಕ್ಕಿ (೧೯೨೫–೨೬ ?) ಕ್ಷಾತ್ರಯುಗ (೧೦ರಿಂದ ೧೨ನೆಯ ಶತಮಾನದ ವರೆಗೆ), ಮತಪ್ರಚಾರಕಯುಗ (೧೨ನೆಯ ಶತಮಾನದಿಂದ ೧೬ನೆಯ ಶತಮಾನದ ವರೆಗೆ), ಸಾರ್ವಜನಿಕಯುಗ (೧೬ನೆಯ ಶತಮಾನದಿಂದ ೧೯ನೆಯ ಶತಮಾನದವರೆಗೆ), ಆಧುನಿಕಯುಗ (೧೯ನೆಯ ಶತಮಾನದಿಂದ ಮುಂದೆ).[18]

(೭) ಎಂ. ಎ. ದೊರೆಸ್ವಾಮಯ್ಯಂಗಾರ್ (೧೯೨೮) ಮೂಲಗನ್ನಡ ಕಾಲ (ಕ್ರಿ. ಶ. ೭೫೦ರ ವರೆಗೆ), ಹಳಗನ್ನಡಕಾಲ (ಕ್ರಿ. ಶ. ೭೫೦–೧೧೫೦), ಮಧ್ಯಗನ್ನಡಕಾಲ (ಸು. ೧೧೫೦–೧೫೦೦), ಹೊಸಗನ್ನಡ ಕಾಲ (ಸು. ೧೫೦೦–೧೮೫೦), ನವಗನ್ನಡಕಾಲ (ಸು. ೧೮೫೦ರಿಂದ ಮುಂದೆ)[19]

(೮) ಬಿ. ಎಂ. ಶ್ರೀಕಂಠಯ್ಯ (೧೯೨೯/೪೭) ಆರಂಭಕಾಲ (೧೦ನೆಯ ಶತಮಾನದ ವರೆಗೆ), ಮತಪ್ರಾಬಲ್ಯ ಕಾಲ ೧೦–೧೯ ಶತಮಾನಗಳು (ಜೈನಕವಿಗಳು—೧೦ನೆಯ ಶತಮಾನದಿಂದ; ವೀರಶೈವ ಕವಿಗಳು ೧೨ನೆಯ ಶತಮಾನದಿಂದ; ಬ್ರಾಹ್ಮಣ ಕವಿಗಳು (ಮುಖ್ಯವಾಗಿ) ೧೫ನೆಯ ಶತಮಾನದಿಂದ), ನವೀನಕಾಲ (೧೯ನೆಯ ಶತಮಾನ ದಿಂದ)[20]

(೯) ಎಸ್. ಕೆ. ಕುಲಕರ್ಣಿ (೧೯೩೯) ಕಾವ್ಯಗಳು (ಚಂಪೂಕಾವ್ಯ, ರಗಳೆಗಳು, ಷಟ್ಪದಿಗಳು, ತ್ರಿಪದಿ ಹಾಗೂ ಸಾಂಗತ್ಯ, ಶತಕಗಳು, ಗದ್ಯಕಾವ್ಯಗಳು), ನಾಟಕಗಳು, ವಚನಸಾಹಿತ್ಯ, ಕೀರ್ತನೆಗಳು, ಯಕ್ಷಗಾನಗಳು, ಲಕ್ಷಣಗ್ರಂಥಗಳು, ಶಾಸ್ತ್ರಗಳು.[21]

(೧೦) ಕೆ. ವೆಂಕಟರಾಮಪ್ಪ (೧೯೩೯) ಆರಂಭಕಾಲ (ಆರಂಭಕಾಲದಿಂದ ೯೦೦ರ ವರೆಗೆ), ಪಂಪಯುಗ (ಕ್ರಿ.ಶ. ೧೦ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ), ಸ್ವಾತಂತ್ರ್ಯಯುಗ (ಕ್ರಿ. ಶ. ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ), ಚಿಕ್ಕದೇವರಾಯರ ಕಾಲ (೧೭ನೆಯ ಶತಮಾನದಿಂದ ೧೮ನೆಯ ಶತಮಾನ), ಸಂಧಿಕಾಲ (೧೮ನೆಯ ಶತಮಾನದಿಂದ ೧೯ನೆಯ ಶತಮಾನ), ಆಧುನಿಕ ಕಾಲ (೧೯ನೆಯ ಶತಮಾನ ದಿಂದ ಮುಂದಕ್ಕೆ).[22]

(೧೧) ರಂ. ಶ್ರೀ. ಮುಗಳಿ (೧೯೫೩) ಪಂಪಯುಗ (ಆರಂಭಕಾಲದಿಂದ ೧೦ನೆಯ ಶತಮಾನದವರೆಗೆ), ಬಸವಯುಗ (೧೨ರಿಂದ ೧೫ನೆಯ ಶತಮಾನ), ಕುಮಾರವ್ಯಾಸ ಯುಗ (೧೫ರಿಂದ ೧೯ನೆಯ ಶತಮಾನ).

ಸೂಚಿತವಾದ ಅನ್ಯಕ್ರಮಗಳು : (i) ಜೈನ ಪ್ರಾರಂಭಯುಗ, ವೀರಶೈವ ಪ್ರಾರಂಭ ಯುಗ, ಬ್ರಾಹ್ಮಣ ಪ್ರಾರಂಭಯುಗ; (ii) ಪಂಪಯುಗ, ಬಸವಯುಗ, ಕುಮಾರವ್ಯಾಸ ಯುಗ, ತಿರುಮಲಾರ್ಯ ಯುಗ; (iii) ಪಂಪ-ರನ್ನರ ಕಾಲ, ಬಸವ–ಹರಿಹರರಕಾಲ,

ಕುಮಾರವ್ಯಾಸ–ಪುರಂದರದಾಸರ ಕಾಲ, ತಿರುಮಲಾರ್ಯ–ಷಡಕ್ಷರಿಗಳ ಕಾಲ; (iv) ಮಾರ್ಗಯುಗ, ಸಂಕ್ರಮಣಯುಗ, ದೇಸಿಯುಗ.[23]

(೧೨) ಎಂ. ಮರಿಯಪ್ಪಭಟ್ಟ (೧೯೬೦) ಪೂರ್ವದ ಹಳಗನ್ನಡ–ಹಳಗನ್ನಡ–ಗದ್ಯ ಸಾಹಿತ್ಯ, ಚಂಪೂ ಕಾವ್ಯಗಳು, ಶಾಸನಸಾಹಿತ್ಯ, ಶತಕಸಾಹಿತ್ಯ, ಲಕ್ಷಣಸಾಹಿತ್ಯ, ಶಾಸ್ತ್ರೀಯ ಸಾಹಿತ್ಯ, ನಡುಗನ್ನಡ ಸಾಹಿತ್ಯ, ಜಾನಪದವಾಙ್ಮಯ, ಹೊಸಗನ್ನಡ ಸಾಹಿತ್ಯ.[24]

(೧೩) ತ. ಸು. ಶಾಮರಾಯ, ಮೋ. ರಾಜೇಶ್ವರಯ್ಯ (೧೯೬೪) ಪಂಪಪೂರ್ವಯುಗ, ಪಂಪಯುಗ ಅಥವಾ ಸ್ವರ್ಣಯುಗ, ಹರಿಹರಯುಗ ಅಥವಾ ಸ್ವಾತಂತ್ರ್ಯಯುಗ, ಕುಮಾರವ್ಯಾಸಯುಗ ಅಥವಾ ಷಟ್ಪದೀಯುಗ.[25]

(೧೪) ತ. ಸು. ಶಾಮರಾಯ (೧೯೭೨) ಪಂಪಪೂರ್ವಯುಗ (ಆದಿಕಾಲದಿಂದ ೧೦ನೆಯ ಶತಮಾನದವರೆಗೆ), ಪಂಪಯುಗ (೧೦–೧೨ ಶತಮಾನ) ಹರಿಹರಯುಗ (೧೨-೧೪ ಶತಮಾನ) ಕುಮಾರವ್ಯಾಸಯುಗ (೧೫ನೆಯ ಶತಮಾನದಿಂದ ಮುಂದಕ್ಕೆ)[26]

(೧೫) ಕೆ ವೆಂಕಟರಾಮಪ್ಪ (೧೯೭೪) ಆರಂಭಕಾಲ, ಶತಮಾನಾನುಪೂರ್ವಿಯಾಗಿ ಕ್ರಿ.ಶ. ೯ನೆಯ ಶತಮಾನದಿಂದ ೧೯ನೆಯ ಶತಮಾನದವರೆಗೆ, ಆಧುನಿಕಕಾಲ.[27]

## ಮತೀಯ ಕಾಲವಿಭಾಗ

ಈ ಕೆಲವು ವಿಭಜನಕ್ರಮಗಳ ಹಿನ್ನೆಲೆಯ ತತ್ತ್ವಗಳು ಸ್ಪಷ್ಟವಾಗಿಯೇ ಇದ್ದು, ಅವುಗಳಲ್ಲೆಲ್ಲ ಮೊದಮೊದಲು ಮತಧರ್ಮ ಮೂಲವಾದ ವಿಭಜನಕ್ರಮವನ್ನೇ ವಿದ್ವಾಂಸರು ವಿಶೇಷವಾಗಿ ಪುರಸ್ಕರಿಸಿದರೆಂದು ತಿಳಿಯುತ್ತದೆ. ಕನ್ನಡಸಾಹಿತ್ಯ ಚರಿತ್ರೆಯ ರಚನೆಗೆ ನಾಂದಿಯನ್ನು ಹಾಡಿದ ಡಾ. ಕಿಟ್ಟೆಲ್ ನಾಗವರ್ಮನ 'ಛಂದೋಂಬುಧಿ'ಯ ಪ್ರಥಮ ಪರಿಷ್ಕರಣಕ್ಕೆ (೧೮೭೫) ತಾವು ಬರೆದ ಇಂಗ್ಲಿಷ್ ಉಪೋದ್ಘಾತದಲ್ಲಿ ಮೊದಲು ಈ ಬಗೆಯ ವಿಭಜನೆಯನ್ನು ಮಂಡಿಸಿದರು. ಆರಂಭಕಾಲ ಕನ್ನಡ ಸಾಹಿತ್ಯ ಕೃಷಿಯ ದೃಷ್ಟಿಯಿಂದ ಆರಂಭಕಾಲವೇ; ಮತೀಯದೃಷ್ಟಿಯಿಂದ ಆ ಕಾಲದ ಬಗ್ಗೆ ಏನನ್ನಾದರೂ ಹೇಳುವುದು ಊಹೆಯೇ ಆದೀತು. ಆದರೆ ಕಿಟ್ಟೆಲ್ ಜೈನಮತದ ಕವಿಗಳು ವಿಪುಲವಾಗಿ ಕೃತಿರಚನೆ ಮಾಡಿದ ೧೦ರಿಂದ ೧೨ನೆಯ ಶತಮಾನದ ಮಧ್ಯಕಾಲವನ್ನು ಆರಂಭಕಾಲವೆಂದು ಹೇಳಿರುವುದು ಸೂಕ್ತವಿವೇಚನೆಯಾಗದು. ಅವರು ತಮ್ಮ ಕನ್ನಡ-ಇಂಗ್ಲಿಷ್ ನಿಘಂಟಿಗೆ ಬರೆದ ಇಂಗ್ಲಿಷ್ ಮುನ್ನುಡಿಯಲ್ಲಿ ಈ ಅಂಶವನ್ನು ಸಮರ್ಪಡಿಸಿರುವಂತೆ ತೋರುತ್ತದೆ. ಅಲ್ಲಿ ಜೈನ, ಶೈವ ಮತ್ತು ಲಿಂಗಾಯತ, ವೈಷ್ಣವ ಎಂಬ ವಿಭಜನೆಯನ್ನು ಪ್ರಾಸ್ತಾವಿಕವಾಗಿ ಸೂಚಿಸಿದ್ದಾರೆ. ಆಯಾ ಅವಧಿಯಲ್ಲಿ ಭಾಷೆಯ ಅವಸ್ಥಾಂತರಗಳಿಗೆ ಹೊಂದಿಕೊಂಡು ಆಯಾ ಮತದ ಕವಿಗಳು ಅಧಿಕವಾಗಿ ಕೃತಿರಚನೆ ಮಾಡಿರುವರೆಂಬುದನ್ನು ಅವರು ಗುರುತಿಸುವ ಪ್ರಯತ್ನಮಾಡಿದ್ದಾರೆ. ಒಂದು ದೃಷ್ಟಿಯಲ್ಲಿ ಇದು ಸರಿಯಾಗಿಯೇ ಇದೆ. ಆದರೆ ಶೈವ ಮತ್ತು ಲಿಂಗಾಯತ ಎಂಬ ಸೂಚನೆಗೆ ಬಹುಶಃ

ಆಧಾರವಿಲ್ಲ. ಕಿಟ್ಟೆಲರ ಸೂಚನೆಯನ್ನು ಪ್ರಾಯಃ ಗಮನಿಸಿಯೇ, ರೈಸ್ ಭಾಷೆ ಮತ್ತು ಮತಪರವಾದ ವಿಭಜನಕ್ರಮವನ್ನು ಇನ್ನಷ್ಟು ನಿಖರಗೊಳಿಸಿದ್ದಾರೆಂದು ಹೇಳಬಹುದು. ಮತದೃಷ್ಟಿಯಿಂದ ಹೇಳುವುದಾದರೆ, ಜೈನರು, ಲಿಂಗಾಯತರು–ಶೈವರು, ಬ್ರಾಹ್ಮಣರು–ವೈಷ್ಣವರು ಎಂದು ಉಲ್ಲೇಖಿಸಿರುವುದರಲ್ಲಿ ಅದನ್ನು ನಾವು ಮನಗಾಣಬಹುದು. ಆದರೆ ಇಲ್ಲಿಯೂ ಕಿಟ್ಟೆಲರ ಸೂಚನೆಯ ಪ್ರತಿಧ್ವನಿ 'ಲಿಂಗಾಯತ–ಶೈವ' ಎಂಬ ವಿಭಜನೆ.

ಮತಪರ ವಿವೇಚನೆಗೆ ಸ್ಪಷ್ಟರೂಪ ಮತ್ತು ಪ್ರಾಚುರ್ಯಗಳು ಉಂಟಾದ್ದು ಆರ್. ನರಸಿಂಹಾಚಾರ್ಯರ ಮೂಲಕವಾಗಿ. ಅವರು ಎಸ್. ಜಿ. ನರಸಿಂಹಾಚಾರ್ಯರ ಜೊತೆಗೂಡಿ ೧೯೦೭ರಲ್ಲಿ ಪ್ರಕಟಿಸಿದ 'ಕರ್ಣಾಟಕ ಕವಿಚರಿತೆ'ಯ ಪ್ರಥಮ ಸಂಪುಟದ ಇಂಗ್ಲಿಷ್ ಕನ್ನಡ ಅವತರಣಿಕೆಗಳಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. ಕನ್ನಡ ಅವತರಣಿಕೆಯಲ್ಲಿ ಅದು ಹೀಗಿದೆ : "ಕನ್ನಡದಲ್ಲಿ ಗ್ರಂಥರಚನೆಮಾಡಿರುವ ಕವಿಗಳನ್ನು ಸ್ಥೂಲವಾಗಿ ಜೈನರು, ವೀರಶೈವರು, ವೈಷ್ಣವರು ಎಂಬ ಮೂರು ಪಂಗಡಗಳಾಗಿ ವಿಂಗಡಿಸಬಹುದು.ಈ ಮೂರು ಪಂಗಡದವರಲ್ಲದೆ ಇತರರೂ ಕೂಡ ಕನ್ನಡದಲ್ಲಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಅವರ ಸಂಖ್ಯೆ ಕಡಮೆ. ಈ ಕವಿಗಳಲ್ಲಿ ಜೈನರೇ ಕನ್ನಡ ಭಾಷೆಗೆ ಆದಿಕವಿಗಳು. ೧೨ನೆಯ ಶತಮಾನದವರೆಗೆ ಜೈನಕವಿರಚಿತವಾದ ಗ್ರಂಥಗಳೇ ವಿಶೇಷವಾಗಿ ದೊರೆಯುತ್ತವೆ....೧೨ನೆಯ ಶತಮಾನದಿಂದೀಚೆಗೆ ೧೫ನೆಯ ಶತಮಾನದವರೆಗೆ ವೀರಶೈವ ಕವಿಗಳು ಕನ್ನಡ ಭಾಷೆಯಲ್ಲಿ ವಿಶೇಷವಾಗಿ ಗ್ರಂಥಗಳನ್ನು ಬರೆಯಲಾರಂಭಿಸಿದಂತೆ ಕಾಣುತ್ತದೆ. ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ವೀರಶೈವರು ಮತಗ್ರಂಥಗಳನ್ನು ಕನ್ನಡದಲ್ಲಿಯೇ ಬರೆದುದರಿಂದ ಈ ಭಾಷೆಯ ಅಭಿವೃದ್ಧಿಗೆ ಹೆಚ್ಚು ಅವಕಾಶವುಂಟಾಯಿತು....ತರುವಾಯ ವೈಷ್ಣವ ಕವಿಗಳು ಕನ್ನಡದಲ್ಲಿ ಹೇರಳವಾಗಿ ಗ್ರಂಥಗಳನ್ನು ಬರೆಯಲಾರಂಭಿಸಿದರು.[28]

ಆರ್. ನರಸಿಂಹಾಚಾರ್ಯರು ಮತದ ಪ್ರಭಾವ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಹೇಗೆ ತನ್ನ ಮುದ್ರೆಯನ್ನೊತ್ತಿದೆ ಎಂಬುದನ್ನು ತಿಳಿಸಿದರೂ, ಈ ಬಗೆಯ ಕಾಲವಿಭಾಗದ ಮಿತಿಯನ್ನು ಕೂಡ ಅದೇ ಅವತರಣಿಕೆಯ ಕೊನೆಗೆ ಹೀಗೆ ಸ್ಪಷ್ಟಪಡಿಸಿದರು : "ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಮತದ ಕವಿಗಳು ವಿಶೇಷವಾಗಿ ಗ್ರಂಥರಚನೆ ಮಾಡಿದ್ದಾರೆ ಎಂಬ ಅಂಶವನ್ನು ಸ್ಥೂಲವಾಗಿ ತಿಳಿಸುವುದಕ್ಕೋಸ್ಕರ ಈ ರೀತಿಯಾಗಿ ಕಾಲವಿಭಾಗ ಮಾಡಿದೆ. ಇದರಿಂದ ಜೈನರ ಕಾಲದಲ್ಲಿ ಶೈವ ವೈಷ್ಣವ ಗ್ರಂಥಗಳೂ ಶೈವರ ಕಾಲದಲ್ಲಿ ವೈಷ್ಣವ ಜೈನ ಗ್ರಂಥಗಳೂ ವೈಷ್ಣವರ ಕಾಲದಲ್ಲಿ ಶೈವ ಜೈನ ಗ್ರಂಥಗಳೂ ಹುಟ್ಟಲಿಲ್ಲವೆಂದು ತಿಳಿಯಬಾರದು."[29]

ಕವಿಚರಿತೆಕಾರರು ಹಿಂದಿನ ವಿದ್ವಾಂಸರ ವಿಭಜನಕ್ರಮಗಳನ್ನು ಲಕ್ಷಿಸಿದ್ದರೂ, ಹೊಸ ಸಾಮಗ್ರಿಯ ಸ್ವಂತ ಪರಿಶೀಲನೆಯ ಫಲವಾಗಿ ಮತ ಮತ್ತು ಕಾಲದೃಷ್ಟಿಯಿಂದ ಹಿರಿಯ ವಿದ್ವಾಂಸರ ಆಶಯಗಳ ಲೋಪದೋಷಗಳನ್ನು ಸರಿಪಡಿಸಿರುವುದು ಕಾಣುತ್ತದೆ. ಹೀಗಾಗಿ ಅವರು ಆಯಾ ಮತದ ಕವಿಗಳ ಪ್ರಾಬಲ್ಯಕಾಲವನ್ನು ವಸ್ತುಸ್ಥಿತಿಯನ್ನು

ಹಿಡಿದು ಬಹುಮಟ್ಟಿಗೆ ಸರಿಯಾಗಿಯೇ ನಿಗದಿಗೊಳಿಸಿದ್ದಾರೆ; ಇಲ್ಲಿ ಕಂಡುಬರುವ ಪರಸ್ಪರಪ್ರಸರಣವನ್ನು ಪ್ರಾಯಃ ಮೊದಲಬಾರಿಗೆ ಮುಕ್ತಮನಸ್ಸಿನಿಂದ ಒಪ್ಪಿ ಸೂಚಿಸಿದ್ದಾರೆ. ಮೇಲಾಗಿ ಮಧ್ಯಕಾಲದ ಅಥವಾ ನಡುಗನ್ನಡ ಕಾಲದ ಕವಿಗಳಲ್ಲಿ ವಸ್ತುಸ್ಥಿತಿಗೆ ಪ್ರಾಯಃ ಒಪ್ಪದ 'ಲಿಂಗಾಯತ-ಶೈವ' ಎಂಬ ಅನಾವಶ್ಯಕ ಪೃಥಕ್ಕರಣವನ್ನು ಕೈಬಿಟ್ಟು, ವೀರಶೈವ (ಲಿಂಗಾಯತ)ವನ್ನು ಮಾತ್ರ ಗ್ರಹಿಸಿದ್ದಾರೆ. ಹೀಗಿದ್ದೂ ತಮ್ಮ ಮಟ್ಟಿಗೆ ತಮ್ಮ ಗ್ರಂಥವಾದ 'ಕರ್ಣಾಟಕ ಕವಿಚರಿತೆ'ಯಲ್ಲಿಯೂ History of Kannada Literature' ಎಂಬ ಉಪನ್ಯಾಸಗ್ರಂಥದಲ್ಲಿಯೂ ಶತಮಾನಾನುಪೂರ್ವಿಯಲ್ಲಿ ವಿಷಯ ವಿವೇಚನೆ ಮಾಡಿದ್ದಾರೆ. ಇತರ ವಿವೇಚನೆಗಳಲ್ಲಿ ಅಸಾಮಂಜಸ್ಯಗಳು ಅನಿವಾರ್ಯವೆಂಬುದನ್ನು ಅವರು ಮನಗಂಡು ಈ ಕ್ರಮವನ್ನು ಅನುಸರಿಸಿರುವ ಸಾಧ್ಯತೆಯಿದೆ.

ಆರ್. ನರಸಿಂಹಾಚಾರ್ಯರ ಬಳಿಕ, ಇಂಗ್ಲಿಷ್ ಭಾಷೆಯಲ್ಲಿ 'A History of Kanarese Literature' ಎಂಬ ಹೆಸರಿನ ಸಾಹಿತ್ಯ ಚರಿತ್ರೆಯನ್ನು ಬರೆದು ಪ್ರಕಟಿಸಿದ (೧೯೧೫) ಇ. ಪಿ. ರೈಸ್ ಹಳೆಯ ವಿದ್ವಾಂಸರನ್ನು ಅನುಸರಿಸಿ, ಕಾಲಕಾಲಕ್ಕೆ ಪ್ರಾಬಲ್ಯಕ್ಕೆ ಬಂದ ಮತಗಳ ಉತ್ಕರ್ಷದ ಕಾಲಮಾನಾವಧಿಯನ್ನು ಹಿಡಿದು ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿಭಜಿಸುವುದೇ ಸೂಕ್ತವಾದ ಮಾರ್ಗ ಎಂದು ಆರಂಭಿಸಿ, ಅದಕ್ಕೆ ಅನುಗುಣವಾಗಿ ತಮ್ಮ ವಿಭಜನೆಯನ್ನು ಕೊಟ್ಟಿದ್ದಾರೆ. ಈ ವಿಭಜನೆಯ ರೂಪರೇಷೆಗಳನ್ನು ಪರಿಶೀಲಿಸಿದಾಗ, ಶ್ರೀಯುತರು ಆರ್. ನರಸಿಂಹಾಚಾರ್ಯರ 'ಕರ್ಣಾಟಕ ಕವಿಚರಿತೆ' ಯಲ್ಲಿ ಉಕ್ತವಾದ ಕವಿಗಳ ಚರಿತೆಯನ್ನು ಗಮನಿಸಿ, ಅವರಿಗೆ ಕವಿಚರಿತೆಕಾರರು ನಿಗದಿ ಮಾಡಿರುವ ಜೀವಿತಾವಧಿಯನ್ನು ಲಕ್ಷಿಸಿ, ತಮ್ಮ ವಿಭಜನೆಯನ್ನು ನಿಷ್ಕೃಷ್ಟಗೊಳಿಸಿರುವುದು ಕಾಣುತ್ತದೆ. ವೀರಶೈವ ಕವಿಗಳ ಕಾಲವನ್ನು ಕ್ರಿ. ಶ. ೧೧೬೦ರಿಂದ ಮೊದಲು ಮಾಡುವಲ್ಲಿಯೂ ವೈಷ್ಣವ ಕವಿಗಳ ಕಾಲವನ್ನು ಕ್ರಿ.ಶ. ೧೪೪೦ರಿಂದ ಮೊದಲುಮಾಡುವಲ್ಲಿಯೂ ಇದನ್ನು ಗಮನಿಸಬಹುದು. ಜೈನ, ಲಿಂಗಾಯತ, ವೈಷ್ಣವ ಎಂಬ ಭೇದಗಳನ್ನು ಹಿಂದಿನವರನ್ನು ಅನುಸರಿಸಿ ಬಳಸಿಕೊಂಡರೂ ಇವಕ್ಕೆ ಆಧುನಿಕಕಾಲವೊಂದನ್ನು ಸ್ಪಷ್ಟವಾಗಿ ಇವರು ಜತೆಗೂಡಿಸಿದ್ದಾರೆ. ಅದರ ಆರಂಭಕಾಲವನ್ನು ಖಚಿತವಾಗಿ ಉಲ್ಲೇಖಿಸದಿದ್ದರೂ ಪ್ರಾಯಃ ೧೯ನೆಯ ಶತಮಾನದಿಂದ ಎಂದು ಅವರು ಅದನ್ನು ಗ್ರಹಿಸಿರುವಂತಿದೆ.

> "A Modern period is now in its early stages which has been brought into being by the impact of western thought and the influence of English Literature"

—ಎಂಬುದಾಗಿ ಅವರು ಅದರ ಸೂಚನೆ ಮಾಡಿದ್ದಾರೆ.

ಶ್ರೀಯುತರು ಹೀಗೆ ಮತಪರವಾದ ವಿಧಾನಕ್ರಮವನ್ನು ಅನುಮೋದಿಸಿದ್ದಲ್ಲದೆ, ಒಟ್ಟಿನಲ್ಲಿ ಆ ಕ್ರಮವನ್ನು ಇಟ್ಟುಕೊಂಡು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದಿದ್ದಾರೆ. ಆಯಾ ಮತದ ಕವಿಗಳನ್ನೆಲ್ಲ ಒಟ್ಟಿಗೆ ಒಂದೇ ಕಡೆ ತರುವ ಪ್ರಯತ್ನ

ಇಲ್ಲಿ ಕಾಣುತ್ತದೆ. ಈ ಬಗೆಯ ಪ್ರಯತ್ನಗಳಲ್ಲಿ ಪ್ರಾಯಃ ಇದೇ ಮೊದಲನೆಯದು ಹಾಗೂ ಕೊನೆಯದು. ಆದರೆ ಇಲ್ಲಿ ಮೆಚ್ಚತಕ್ಕ ಒಂದು ಸಂಗತಿಯೆಂದರೆ, ರೈಸ್ ಕನ್ನಡ ಸಾಹಿತ್ಯದ ಬೆಳೆವಣಿಗೆಯನ್ನು ಶಾಖೋಪಶಾಖೆಗಳನ್ನು ಕೂಡಿಕೊಂಡು ಹರಿಯುವ ಒಂದು ಜೀವನದಿಗೆ ಹೋಲಿಸಿರುವುದು.

ಅದು ಈ ರೀತಿಯಾಗಿದೆ :

"The whole course of the history may be compared to a river receiving tributaries. During the first millennium of its course it is an unmingled stream of Jaina thought. In the twelfth century this is joined by the stream of Virasaivism; and the two streams, like the Rhone and Saone at Lyons, flow side by side without mingling. In the beginning of the sixteenth century these two are joined by a Vaishnava affluent; and the united stream flows on until in the nineteenth century it is broadened and much modified by a great inrush of Western thought."[30]

ಈ ಹೋಲಿಕೆಗೆ ಪ್ರೇರಣೆ ಪ್ರಾಯಃ ಆರ್. ನರಸಿಂಹಾಚಾರ್ಯರು ಮತಪರ ವಿವೇಚನೆಯ ಬಗ್ಗೆ ಹೇಳುತ್ತ "ಯಾವುದೇ ಒಂದು ಕಾಲದಲ್ಲಿ ಒಂದೇ ಮತದವರು ಕೃತಿ ರಚನೆ ಮಾಡಿದರು ಎಂದು ಹೇಳಲಾಗದು" ಎಂಬ ಅರ್ಥದ ಮಾತನ್ನು ಬರೆದಿರುವುದೇ ಆಗಿದೆ ಎಂದು ತೋರುತ್ತದೆ. ಇದು ಕನ್ನಡ ಸಾಹಿತ್ಯದ ಬೆಳೆವಣಿಗೆಯ ಸ್ವರೂಪದಲ್ಲಿ ಕಂಡುಬರುವ ಸಂಕೀರ್ಣತೆಯನ್ನು ಹೇಳುವಂತೆಯೇ ಕನ್ನಡ ಸಾಹಿತ್ಯ ಚರಿತ್ರಕಾರರು ಎದುರಿಸಬೇಕಾದ ಸಮಸ್ಯೆಯನ್ನೂ ಇಂಗಿತಮಾಡುತ್ತದೆ.

ಮೊದಲಸಲ ಮತಾನುಸಾರವಾದ ಕಾಲವಿಭಾಗವನ್ನು ಪ್ರತಿಭಟಿಸಿದವರು 'ಕನ್ನಡ ವಕ್ಕಿ' ಎಂಬ ಲೇಖಕರು. ಅವರು 'ಕರ್ಣಾಟಕದ ಕೈಪಿಡಿ' ಎಂಬ ಗ್ರಂಥದ (೧೯೩೫–೩೬?) 'ಕರ್ಣಾಟಕ ಸಾಹಿತ್ಯ' ಎಂಬ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದ ಕಾಲವಿಭಾಗಗಳ ಬಗ್ಗೆ ಬರೆಯುತ್ತ, ತಮ್ಮ ಅಭಿಪ್ರಾಯವನ್ನು ಹೀಗೆ ಮುಂಡಿಸಿದ್ದಾರೆ :

"ಪಂಪನೆ ಕನ್ನಡಕ್ಕಾದಿಕವಿ. ವಿಕ್ರಮಾರ್ಜುನ ವಿಜಯವೆ ಕನ್ನಡಕ್ಕಾದಿಕಾವ್ಯ. ಅಂದರೆ ನಿಜವಾಗಿಯೂ ಕರ್ಣಾಟಕ ವಾಙ್ಮಯದ ಇತಿಹಾಸವು ಕ್ರಿ.ಶ. ೧೦ನೆಯ ಶತಮಾನದಿಂದ ಆರಂಭವಾಗುತ್ತದೆ. ಅಂದಿನಿಂದ ಎಡಬಲಗಳಿಂದ ಬಂದು ಸೇರುವ ಉಪನದಿಗಳಿಂದೊಡಗೂಡಿ ಅವಿಚ್ಛಿನ್ನವಾಗಿಯೂ ಗಂಭೀರವಾಗಿಯೂ ಕರ್ಣಾಟಕ ಸಾಹಿತ್ಯ ರಸಪ್ರಪೂರ್ಣಪ್ರವಾಹವು ಹರಿಯುತ್ತಲಿದೆ. ಪ್ರವಾಹದಿಕ್ಕೆಲದಲ್ಲಿ ನಿಂತು ವಿಹಂಗಮ ದೃಷ್ಟಿಯಿಂದ ಆ ಸಾಹಿತ್ಯಲಹರಿಯ ಕುರುಹನ್ನು ವಾಚಕರಿಗೆ ಪರಿಚಯ ಮಾಡಿಕೊಡಲು ಪ್ರಯತ್ನಿಸುವೆವು.

ಸಾಧಾರಣವಾಗಿ ಕರ್ಣಾಟಕ ವಾಙ್ಮಯೇತಿಹಾಸಕ್ಕೆ ಕೈಯಿಕ್ಕಿದನರೆಲ್ಲರೂ ಜೈನ, ವೀರಶೈವ, ವೈಷ್ಣವ ಮುಂತಾದ ಮತಗಳನ್ನು ಅನುಸರಿಸಿ ಸಾಹಿತ್ಯ ಚರಿತ್ರೆಯಲ್ಲಿ ಕಾಲ

ವಿಭಾಗ ಮಾಡಿರುವರು. ಈ ವಿಭಾಗಕ್ರಮವು ಅಸಮಂಜಸವಲ್ಲವಾದರೂ ಶುದ್ಧ ಸಾಹಿತ್ಯ ದೃಷ್ಟಿಯಿಂದ ಅಷ್ಟು ಸಮರ್ಪಕವಾಗಿಲ್ಲ. ನಾವೀಗ ಎಲ್ಲರಿಗೂ ವಿಶ್ವಸನೀಯವಾದ ಮಾರ್ಗವನ್ನು ಹಿಡಿದು ಕಾಲವಿಭಾಗ ಮಾಡುವೆವೆಂದು ನಂಬಿಲ್ಲ. ಆದರೂ ಕಾಲ, ದೇಶ, ಕಾರಣ, ನಿಮಿತ್ತಗಳನ್ನು ಲೆಕ್ಕಿಸಿ, ಕವಿಕರ್ಮಕ್ಕೆ ಮೂಲಕಾರಣವಾದ ಸ್ಫೂರ್ತಿವಿಶೇಷವನ್ನು ಗಮನಿಸಿ, ಕಾವ್ಯಕ್ಕೆ ರಸವೇ ಆತ್ಮವೆಂಬುದನ್ನು ಜ್ಞಾಪಕದಲ್ಲಿಟ್ಟು, ಕರ್ಣಾಟಕ ವಾಙ್ಮಯೇತಿಹಾಸವೆಲ್ಲವನ್ನೂ (ಕ್ರಿ.ಶ. ೧೦ನೆಯ ಶತಮಾನದಿಂದ) ಕ್ಷಾತ್ರ ಯುಗ, ಮತಪ್ರಚಾರಕ ಯುಗ, ಸಾರ್ವಜನಿಕ ಯುಗ ಮತ್ತು ಆಧುನಿಕ (ವೈಜ್ಞಾನಿಕ) ಯುಗವೆಂಬುದಾಗಿ ನಾಲ್ಕು ವಿಭಾಗಮಾಡುತ್ತೇವೆ."[31]

ಕನ್ನಡ ಸಾಹಿತ್ಯದ ಬೆಳವಣಿಗೆಗೆ ಇ. ಪಿ. ರೈಸ್ ಕೊಟ್ಟಿರುವ ನದಿಯ ದೃಷ್ಟಾಂತದ ಸೊಗಸಿಗೆ ಈ ಲೇಖಕರು ಮನಸೋತಿರುವುದು ಸ್ಪಷ್ಟ; ಆದರೆ ಅದರ ಅಂತರಂಗದ ಮುಖ್ಯಾಂಶವನ್ನು ಮುಂದಿನ ವಾಕ್ಯಪುಂಜದಲ್ಲಿ ಅಲ್ಲಗಳೆಯುವಂತೆ ತೋರುತ್ತದೆ. ಮುಂದಿನ ವಿವೇಚನೆಯಲ್ಲಿ ಅವರು ಕ್ಷಾತ್ರ ಯುಗ (೧೦–೧೧ನೆಯ ಶತಮಾನ), ಮತ ಪ್ರಚಾರಕ ಯುಗ (೧೨ರಿಂದ ೧೬ನೆಯ ಶತಮಾನದವರೆಗೆ) ಸಾರ್ವಜನಿಕ ಯುಗ (೧೬ರಿಂದ ೧೯ನೆಯ ಶತಮಾನದವರೆಗೆ), ಆಧುನಿಕ (ವೈಜ್ಞಾನಿಕ) ಯುಗ (೧೯ನೆಯ ಶತಮಾನದಿಂದ)—ಎಂಬುದಾಗಿ ಕ್ರಮವನ್ನೂ ಕಾಲವನ್ನೂ ನಿಗದಿಪಡಿಸಿಕೊಂಡು ತಮ್ಮ ಲೇಖನದಲ್ಲಿ ಸ್ಥೂಲವಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಮುಖ್ಯಾಂಶಗಳನ್ನು ಸಂಗ್ರಹಿಸಿದ್ದಾರೆ.

ಸ್ವಲ್ಪ ಈಚೆಗೆ, 'ರನ್ನಕವಿ ಪ್ರಶಸ್ತಿ' (೧೯೩೮)ಯೊಳಗಿನ 'ರನ್ನನ ಯುಗ'ವೆಂಬೊಂದು ಲೇಖನದಲ್ಲಿ, ಎಂ. ಎ. ದೊರೆಸ್ವಾಮಯ್ಯಂಗಾರ್ ಅವರು ಭಾಷಿಕವಾಗಿ ಕಾಲವಿಭಾಗವನ್ನು ಸೂಚಿಸಿದ್ದರೂ ಕಿಟ್ಟೆಲ್ ಮೊದಲಾದವರನ್ನು ಅನುಸರಿಸಿ ಜೈನರು (ಕ್ರಿ.ಶ. ೭೫೦-೧೧೫೦), ವೀರಶೈವರು ಮತ್ತು ಬ್ರಾಹ್ಮಣರು (ಕ್ರಿ.ಶ. ೧೧೫೦–೧೫೦೦) ಬ್ರಾಹ್ಮಣರು (ಕ್ರಿ.ಶ. ೧೫೦೦–೧೮೫೦) ಎಂಬುದಾಗಿ ಆಯಾ ಕಾಲದಲ್ಲಿ ಯಾವ ಮತದವರು ವಿಶೇಷವಾಗಿ ಕೃತಿರಚನೆಮಾಡಿದ್ದಾರೆ ಎಂಬ ಬಗೆಗೆ ಸೂಚನೆಯನ್ನು ನೀಡಿದ್ದಾರೆ.[32]

ಬಿ. ಎಂ. ಶ್ರೀಕಂಠಯ್ಯನವರು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತ "ಪಂಪನಿಂದೀಚೆಗೆ ಸುಮಾರು ಒಂದು ಸಾವಿರ ವರ್ಷಗಳ ಕನ್ನಡ ಸಾಹಿತ್ಯವನ್ನು ಎರಡು ಬಗೆಯಾಗಿ ವಿಭಾಗಮಾಡಬಹುದು. ಕಾಲಕ್ಕನುಸಾರವಾಗಿ, ಮತಕ್ಕನುಸಾರವಾಗಿ"–ಎಂದು ಮೊದಲು ಮಾಡಿ, "ಕಾಲಕ್ರಮವನ್ನು ಕುರಿತು ವಿಭಾಗಮಾಡುವುದಾದರೆ, ಭಾಷೆ, ಕಾವ್ಯದ ರೂಪ, ರಾಜವಂಶಗಳು, ಪ್ರಧಾನ ಕವಿಯ ಹೆಸರು ಮುಂತಾದುವನ್ನು ಅನುಸರಿಸಿ, ಹಳಗನ್ನಡದ ಕಾಲ, ಹೊಸಗನ್ನಡದ ಕಾಲ, ಚಂಪುಗಳ ಕಾಲ, ಷಟ್ಪದಿ ಸಾಂಗತ್ಯಗಳ ಕಾಲ, ಯಕ್ಷಗಾನದ ಕಾಲ; ರಾಷ್ಟ್ರಕೂಟ–ಚಾಳುಕ್ಯ–ಗಂಗರ ಕಾಲ, ಹೊಯ್ಸಳ–ಬಿಜ್ಜಳರ ಕಾಲ, ವಿಜಯನಗರದ ರಾಜರ ಕಾಲ, ಮೈಸೂರು ರಾಜರ ಕಾಲ; ಪಂಪನ ಕಾಲ, ನಾಗಚಂದ್ರನ ಕಾಲ, ಕುಮಾರವ್ಯಾಸನ ಕಾಲ, ಷಡ

ಕ್ಷರಿಯ ಕಾಲ, ಇವೇ ಮುಂತಾದ ಕಾಲಭಾಗಗಳನ್ನು ಏರ್ಪಡಿಸಿಕೊಳ್ಳಬೇಕಾಗುತ್ತದೆ. ಈ ವಿಭಾಗದಲ್ಲಿ ಸೌಕರ್ಯವಾಗಲಿ, ಸಾಹಿತ್ಯದೃಷ್ಟಿಯಿಂದ ಒಂದು ಲಕ್ಷಣಸಮನ್ವಯವಾಗಲಿ, ವಿಶೇಷ ಪ್ರಯೋಜನವಾಗಲಿ ಕಾಣಬರುವುದಿಲ್ಲ. ಕನ್ನಡ ಸಾಹಿತ್ಯವೆಲ್ಲಾ ಪ್ರಾಯಶಃ ಸಂಸ್ಕೃತ ಸಾಹಿತ್ಯವನ್ನು ಅವಲಂಬಿಸಿ, ಸಂಪ್ರದಾಯ ಮಾರ್ಗವನ್ನೇ ಹಿಡಿದು ರಚಿತವಾಗಿರುವುದರಿಂದಲೂ, ಬಹುಮಟ್ಟಿಗೆ ಸಮಾಜದಲ್ಲಿ ಕೂಡ ಕಾಲಕಾಲಕ್ಕೆ ಕಾಲ ಗುಣ ಬದಲಾಯಿಸದೆ ಒಂದೇ ರೀತಿಯಲ್ಲಿರುವುದರಿಂದಲೂ, ಕಾಲಕ್ಕನುಸಾರವಾಗಿ ಸಾಹಿತ್ಯವಿಭಾಗಮಾಡುವುದರಲ್ಲಿ ಅಷ್ಟು ಔಚಿತ್ಯ ತೋರುವುದಿಲ್ಲ.

ಮತವನ್ನು ಪ್ರಧಾನವಾಗಿಟ್ಟುಕೊಂಡು ನೋಡಿದರೆ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೂರುನಾಲ್ಕು ಘಟ್ಟಗಳು ಅಥವಾ ಚಳವಳಿಗಳು ಚೆನ್ನಾಗಿ ಮೇಲಕ್ಕೆದ್ದು ಕಣ್ಣಿಗೆ ಕಾಣುತ್ತವೆ. ಮೊದಲು ಜೈನಮತಪ್ರಚಾರಣೆ, ಇದು ಮೊದಲನೆಯ ಘಟ್ಟ. ಕನ್ನಡ ಕಾವ್ಯಗಳು ನಮ್ಮ ಕಣ್ಣಿಗೆ ಬೀಳುವುದಕ್ಕೆ ಮುಂಚೆಯೇ ಈ ಜೈನಮತದ ಪ್ರಚಾರಣೆ ಕನ್ನಡ ದೇಶದಲ್ಲಿ ನಡೆದು, ಅನೇಕ ರಾಜವಂಶಗಳ ಆಶ್ರಯದಲ್ಲಿ ಜೈನಕವಿಗಳು ಉತ್ತಮ ಕಾವ್ಯಗಳನ್ನು ರಚಿಸಿರುತ್ತಾರೆ. ತೀರ್ಥಂಕರಚರಿತ್ರೆ, ಪ್ರಸಿದ್ಧ ಪುರುಷರ ಇತಿಹಾಸಗಳು, ಜೈನತತ್ತ್ವಗಳು ಇವೇ ಮುಂತಾದ ಜೈನಮತ ಸಂಬಂಧವಾದ ವಿಷಯಗಳನ್ನು ಪ್ರೌಢವಾದ ಹಳಗನ್ನಡ ಶೈಲಿಯಲ್ಲಿ ಚಂಪೂಗ್ರಂಥಗಳಲ್ಲಿ ವಿಸ್ತಾರವಾಗಿ ಬರೆದಿರುತ್ತಾರೆ. ಈ ಘಟ್ಟ ೯ರಿಂದ ೧೨ನೆಯ ಶತಮಾನದವರೆಗೆ ಚಾಚಿರುತ್ತದೆ. ಆ ಶತಮಾನದ ಮಧ್ಯದಲ್ಲಿ ಎರಡನೆಯ ಘಟ್ಟ ಅಥವಾ ಚಳವಳಿಯನ್ನು ಸೇರುವೆವು. ಅದು ವೀರಶೈವ ಮತಪ್ರಚಾರಣೆ. ಪ್ರಜಾಸಾಮಾನ್ಯರಲ್ಲಿ ಹೆಚ್ಚಾಗಿ ವ್ಯಾಪಿಸಿದ ಈ ಮಹಾ ಮಹಾಚಲನದ ಪ್ರಭಾವದಿಂದ ಕನ್ನಡಸಾಹಿತ್ಯದಲ್ಲಿ ದೊಡ್ಡ ದೊಡ್ಡ ಬದಲಾವಣೆಗಳು ಉಂಟಾದುವು. ಹಳಗನ್ನಡವನ್ನು ಹಿಮ್ಮೆಟ್ಟಿಸಿ, ಆಗ್ಗೆ ಬಳಕೆಯಲ್ಲಿದ್ದ ಹೊಸಗನ್ನಡದಲ್ಲಿ ಗ್ರಂಥರಚನೆ ಆರಂಭವಾಯಿತು. ಸಂಸ್ಕೃತ ಛಂದಸ್ಸಿನ, ಚಂಪೂಗ್ರಂಥಗಳ ಪ್ರಾಧಾನ್ಯ ತಗ್ಗಿ, ದೇಶ್ಯವೃತ್ತಗಳು ಮತ್ತು ಹಾಡುಗಬ್ಬಗಳು ಮುಂದಕ್ಕೆ ಬಂದುವು. ಆದರೂ ಹಳಗನ್ನಡ ಭಾಷೆಯೂ, ಚಂಪೂಗ್ರಂಥಗಳೂ ನಿಂತುಹೋಗಲಿಲ್ಲ; ಪ್ರೌಢಕವಿಗಳು ಜೈನ ಕವಿಗಳ ಸಮಾನ ಗೌರವಕ್ಕೆ ಪಾತ್ರರಾಗಬೇಕೆಂದು ಅವರ ಕ್ರಮವನ್ನೇ ಹಿಡಿದರು. ಜೈನ ಕವಿಗಳೂ ಈ ವೀರಶೈವ ಕವಿಗಳ ಪ್ರಾಬಲ್ಯಕ್ಕೆ ಒಳಪಟ್ಟು ಅವರ ಭಾಷೆಯನ್ನೂ, ಕಾವ್ಯ ರೂಪವನ್ನೂ, ಸಾಹಿತ್ಯ ಲಕ್ಷಣಗಳನ್ನೂ ಸ್ವೀಕರಿಸಿದರು. ಮೂರನೆಯದಾಗಿ ೧೫ನೆಯ ಶತಮಾನದಲ್ಲಿ ವೈಷ್ಣವ ಭಕ್ತಿಮಾರ್ಗ ಪ್ರಚಾರಣೆಯ ಘಟ್ಟಕ್ಕೆ ಬರುವೆವು. ಇದು ಭಾಷೆಯಲ್ಲಿಯೂ ಕಾವ್ಯಸ್ವರೂಪದಲ್ಲಿಯೂ ವೀರಶೈವರ ಮೇಲುಪಙ್ಕ್ತಿಯನ್ನು ಹಿಂಬಾಲಿಸಿತೇ ಹೊರತು ಬೇರೆ ವ್ಯತ್ಯಾಸವನ್ನೇನೂ ಮಾಡಲಿಲ್ಲ. ಮತವಿಷಯದಲ್ಲಿ ಮಾತ್ರ ಜಿನಭಕ್ತಿ, ಶಿವಭಕ್ತಿಯನ್ನು ಸಾರಿದ ಕಡೆ ವಿಷ್ಣುಭಕ್ತಿಯನ್ನು ಸಾರಿ, ವೈದಿಕ ಮತಾನುಸಾರವಾಗಿ ವೇದಾಂತ, ಇತಿಹಾಸ, ಪುರಾಣಗಳನ್ನು ಪ್ರತಿಪಾದಿಸಿತು. ಹೊಳೆ ಬಂದು, ಹೊಳೆ ಇಳಿದು ಹೋದಂತೆ, ಕನ್ನಡ ಸಾಹಿತ್ಯದಲ್ಲಿ ಈ ರೀತಿ ಜೈನ ವೀರಶೈವ ಬ್ರಾಹ್ಮಣ ಸಾಹಿತ್ಯಗಳು

ಒಮ್ಮೆ ಅಭ್ಯುದಯಸ್ಥಿತಿಯಲ್ಲಿಯೂ ಒಮ್ಮೆ ಕ್ಷೀಣದಶೆಯಲ್ಲಿಯೂ ಇರುತ್ತ ಹಳೆಯ ನೀರೂ ಹೊಸ ನೀರೂ ಬೆರೆದುಕೊಂಡೇ ಬರುತ್ತಿರುವುವು.

ಈಗ ೧೯ನೆಯ ಶತಮಾನದಲ್ಲಿ ಇಂಗ್ಲಿಷರ ಆಳಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ, ಐಹಿಕ ಸಾಧನಸಂಪತ್ತು, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದುವುಗಳಿಗೆ ಸಂಬಂಧಪಟ್ಟ ನವೀನಜ್ಞಾನದ ಸೆಳೆತಕ್ಕೆ ಮಿಕ್ಕ ದೇಶಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ಅಭಿಮಾನವನ್ನೂ ಹೊಸ ಅಭಿರುಚಿಯನ್ನೂ ಕಲಿತು, ಹೊಸ ರೀತಿಗಳಲ್ಲಿ ಕಾವ್ಯಸೃಷ್ಟಿಯನ್ನು ಅಭ್ಯಾಸ ಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತ ಕವಿತೆಗಳೂ, ಹೊಸ ಕಾವ್ಯರೂಪಗಳೂ, ಹೊಸ ಛಂದಸ್ಸುಗಳೂ, ಹೊಸ ಅಭಿಪ್ರಾಯಗಳೂ, ಸಂಪ್ರದಾಯಮಾರ್ಗವನ್ನು ಲಕ್ಷ್ಯಕ್ಕೆ ತಾರದೆ ಸ್ವಾತಂತ್ರ್ಯಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿವೆ. ಮತಸಂಬಂಧವಾದ ವಿಷಯಗಳು ಈಗ ಅಷ್ಟು ಪ್ರಧಾನವಲ್ಲ; ಅವುಗಳಲ್ಲಿ ಸಾಹಿತ್ಯಕಾರರಿಗೆ ಅಷ್ಟು ವಿಶ್ವಾಸವಿಲ್ಲವೆಂದೇ ಹೇಳಬಹುದು....”[33]

ಈ ತಮ್ಮ ವಿವೇಚನೆಯನ್ನು ಉಪಸಂಹರಿಸುತ್ತ, ಇ. ಪಿ. ರೈಸ್ ಅವರಂತೆಯೇ ಶ್ರೀಯವರೂ ನದಿಯ ದೃಷ್ಟಾಂತವನ್ನೇ ಇನ್ನೂ ಹೆಚ್ಚು ವಿಶದವಾಗಿ ಮನವರಿಕೆಯಾಗುವಂತೆ ಕೊಟ್ಟಿರುತ್ತಾರೆ: “ಈ ನಾಲ್ಕು ಘಟ್ಟಗಳಲ್ಲಿ ಹರಿದುಬಂದಿರುವ ನಮ್ಮ ಕನ್ನಡ ಸಾಹಿತ್ಯವನ್ನು, ನಮ್ಮ ಕನ್ನಡ ನಾಡಿನ ಏರುತಗ್ಗಿನ ಘಟ್ಟಗಳಲ್ಲಿ ನುಗ್ಗಿ ಬರುವ ಕಾವೇರಿ ನದಿಗೆ ಹೋಲಿಸಬಹುದು. ಅದರಂತೆಯೇ, ನಮ್ಮ ಸಾಹಿತ್ಯದ ಮೂಲವೂ ಕಾಡಿನಲ್ಲಿ ಅಡಗಿಹೋಗಿದೆ. ಆ ಬಳಿಕ ಉಪನದಿಗಳು ಒಂದೊಂದಾಗಿ ಸೇರುವಂತೆ, ಜೈನ ಸಾಹಿತ್ಯ ಪ್ರವಾಹವೂ, ವೀರಶೈವ ಸಾಹಿತ್ಯಪ್ರವಾಹವೂ, ಬ್ರಾಹ್ಮಣ ಸಾಹಿತ್ಯಪ್ರವಾಹವೂ, ಒಂದಾದಮೇಲೊಂದು, ಒಂದರ ಕೂಡ ಮತ್ತೊಂದು ಬಂದು ಮಿಳಿತವಾಗಿ ಮೂರು ಬಣ್ಣದ ನೀರುಳ್ಳ ದೊಡ್ಡ ಹೊಳೆಯಾಗಿದೆ. ಕಡೆಗೆ ಈಗ ಇಂಗ್ಲಿಷ್ ಸಾಹಿತ್ಯವೃಷ್ಟಿಯಿಂದ ಹುಚ್ಚುಹೊಳೆಯಾಗಿ ಮೊರೆಯುತ್ತ, ಬಂಡೆಗಳ ನಡುವೆ ನೂರು ಕವಲಾಗಿ ಒಡೆಯುತ್ತ, ಜನ್ಮಭೂಮಿಯ ಘಟ್ಟಗಳನ್ನು ತೊರೆದು ದಿವ್ಯವೇಗದೊಡನೆ ಕೆಳಕ್ಕೆ ಧುಮುಕಿ, ಸ್ವತಂತ್ರವಾಗಿ, ವಿಸ್ತಾರವಾಗಿ, ಬಯಲು ನಾಡಿನಲ್ಲಿ ಪಯಿರ ಸಮೃದ್ಧಿಯನ್ನು ಪಡೆದು ವಿಹಾರ ಮಾಡಲು ತವಕಿಸುತ್ತಿದೆ.”[34]

‘ಶ್ರೀ’ ಅವರ ಈ ಸಾಹಿತ್ಯವಿಭಾಗ ವಿಮರ್ಶೆಯಿಂದ ಎರಡು ಮೂರು ಸಂಗತಿಗಳು ನಮಗೆ ಸ್ಪಷ್ಟವಾಗುತ್ತವೆ: (i) ಮತ, ಭಾಷೆ ಈ ತತ್ತ್ವಗಳ ಮೇಲೆ ಮಾತ್ರವಲ್ಲದೆ ಸಾಹಿತ್ಯರೂಪಗಳು, ರಾಜವಂಶಗಳು, ಪ್ರಮುಖ ಕವಿಗಳು ಈ ತತ್ತ್ವಗಳ ಮೇಲೆ ಕೂಡ ಕಾಲವಿಭಾಗ ಮಾಡಬಹುದು. (ii) ಮತಪ್ರಾಬಲ್ಯಮೂಲಕವಾಗಿ ಕನ್ನಡ ಸಾಹಿತ್ಯದಲ್ಲಿ ಪರಿವರ್ತನೆಯ ಘಟ್ಟಗಳು ನಿಚ್ಚಟವಾಗಿ ತೋರುವುದರಿಂದ ಮತಪರವಾದ ಕಾಲವಿಭಜನೆಯೇ ಸೂಕ್ತವೆಂದಿಟ್ಟುಕೊಳ್ಳಬೇಕು. (iii) ಕನ್ನಡ ಸಾಹಿತ್ಯದ ಬೆಳೆವಣಿಗೆಯಲ್ಲಿ ಮತೀಯ ಘಟ್ಟಗಳಲ್ಲಿ ಪೃಥಕ್ತ್ವಕ್ಕಿಂತ ಸಂಕೀರ್ಣತೆಯನ್ನು ಲಕ್ಷಿಸಬೇಕು.

ಈ ಮೊದಲು ಕಿಟ್ಟೆಲ್ ಮೊದಲಾದವರು ಸೂಚಿಸಿರುವ, ವಿಮರ್ಶಿಸಿರುವ ಅಂಶಗಳೇ ಇಲ್ಲಿ ಸ್ಪಷ್ಟರೂಪದಲ್ಲಿ ಮಂಡಿಸಲ್ಪಟ್ಟಿವೆಯೆಂದು ಹೇಳಬಹುದು. ಬಹುಶಃ ಪ್ರಮುಖ ಕವಿಯ ಹೆಸರನ್ನು ಹಿಡಿದು ಕಾಲವಿಭಜನೆ ಮಾಡಬಹುದೆಂಬುದು ಇಲ್ಲಿಯ ಹೊಸ ಅಂಶ.

ತಮ್ಮ ವಿಮರ್ಶೆಯ ಬೆಳಕಿನಲ್ಲಿ ಶ್ರೀಕಂಠಯ್ಯನವರು ಹೀಗೆ ಕಾಲವಿಭಾಗಗಳನ್ನು ಸಲಹೆಮಾಡಿದ್ದಾರೆ; ಅದನ್ನೇ ಅನುಸರಿಸಿ 'ಕನ್ನಡ ಸಾಹಿತ್ಯ ಚರಿತ್ರೆ'ಯನ್ನು ಬರೆಯ ತೊಡಗಿದ್ದಂತೆಯೂ ತೋರುತ್ತದೆ. (೧) ಆರಂಭಕಾಲ : ೧೦ನೆಯ ಶತಮಾನದವರೆಗೆ ; (೨) ಮತಪ್ರಾಬಲ್ಯಕಾಲ : ೧೦–೧೯ ಶತಮಾನಗಳು (ಜೈನಕವಿಗಳು : ೧೦ನೆಯ ಶತಮಾನದಿಂದ; ವೀರಶೈವಕವಿಗಳು : ೧೨ನೆಯ ಶತಮಾನದಿಂದ; ಬ್ರಾಹ್ಮಣ ಕವಿಗಳು : (ಮುಖ್ಯವಾಗಿ) ೧೫ನೆಯ ಶತಮಾನದಿಂದ) ; (೩) ನವೀನಕಾಲ : ೧೯ನೆಯ ಶತಮಾನದಿಂದ.

ಕಿಟ್ಟೆಲ್, ಬಿ. ಎಲ್. ರೈಸ್, ಆರ್. ನರಸಿಂಹಾಚಾರ್ ಇವರು ನೀಡಿದ ಸಲಹೆ ಸೂಚನೆಗಳನ್ನು ಹಿಡಿದು ಇ. ಪಿ. ರೈಸ್ ಅವರೂ ಪ್ರಾಯಃ ಅವರನ್ನನುಸರಿಸಿ ಅಥವಾ ಸ್ವಂತ ವಿಮರ್ಶೆಯ ಫಲವಾಗಿ 'ಶ್ರೀ'ಯವರೂ ಕನ್ನಡ ಸಾಹಿತ್ಯರಚನೆಗೆ ಮತಪ್ರಾಬಲ್ಯದ ಘಟ್ಟಗಳನ್ನು ಅಳವಡಿಸಿಕೊಂಡಿದ್ದು ಈವರೆಗಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿಂದ ಮುಂದಕ್ಕೆ ಈಗಾಗಲೇ ವ್ಯಕ್ತವಾಗಿದ್ದ ಪ್ರತಿಕೂಲವಾದ ಧ್ವನಿಗಳು ಪ್ರಬಲವಾಗಿ, ಮೊದಲು 'ಕನ್ನಡಪಕ್ಕಿ' ಎಂಬವರು ಶುದ್ಧಸಾಹಿತ್ಯ ದೃಷ್ಟಿಗನುಗುಣವಾಗಿ ವ್ಯಕ್ತಮಾಡಿದ್ದ ಸಮ್ಮಿಶ್ರ ವಿಭಜನೆಯನ್ನು ಲಕ್ಷ್ಯಕ್ಕೆ ತಂದುಕೊಂಡು ಹೊಸದೃಷ್ಟಿಯ ಬೇರೆ ಬೇರೆ ವಿಭಾಗಕ್ರಮಗಳು ಸೂಚಿತವಾದವು; ವಿಭಾಗಕ್ರಮಗಳ ಪುನರ್ವಿಮರ್ಶೆಗಳು ನಡೆದುವು. ಇವನ್ನು ಸಂಕ್ಷೇಪವಾಗಿ ನೋಡೋಣ :

'ಕನ್ನಡ ಸಾಹಿತ್ಯ' ಎಂಬ ಕಿರುಹೊತ್ತಿಗೆಯನ್ನು ಪ್ರಕಟಿಸಿದ ಕೆ. ವೆಂಕಟರಾಮಪ್ಪನವರು "ಸಾಮಾನ್ಯವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಜೈನಕಾಲ, ವೀರಶೈವಕಾಲ, ಬ್ರಾಹ್ಮಣಕಾಲ ಎಂದು ವಿಭಾಗಮಾಡುವುದು ವಾಡಿಕೆಯಾಗಿದೆ. ಆದರೆ ಯಾವ ಒಂದು ಕಾಲದಲ್ಲಿಯೂ ಒಂದೇ ಮತದವರು ಗ್ರಂಥರಚನೆ ಮಾಡಿಲ್ಲ. ಆದ್ದರಿಂದ ಆ ವಿಭಾಗಕ್ರಮವನ್ನು ಬಿಟ್ಟು ಆಯಾ ಕಾಲದಲ್ಲಿ ಪ್ರಧಾನರಾದ ಕವಿಗಳ ಹೆಸರನ್ನು ಅಥವಾ ಆಯಾ ಕಾಲದ ಕಾವ್ಯಗಳ ವೈಶಿಷ್ಟ್ಯವನ್ನು ಸೂಚಿಸುವ ಒಂದು ಹೆಸರನ್ನು ಕೊಡಲು ಇಲ್ಲಿ ಯತ್ನಿಸಿದೆ"—ಎಂದರು.[35] ಬಳಿಕ ಡಾ. ರಂ. ಶ್ರೀ. ಮುಗಳಿಯವರು ಈ ವಿಷಯದಲ್ಲಿ ತಮ್ಮ ಜಿಜ್ಞಾಸೆಯನ್ನು ಹೀಗೆ ಮಂಡಿಸಿದರು : "....ಮತಾನುಸಾರವಾದ ವಿಭಾಗಕ್ರಮವು ಒಂದಿಲ್ಲೊಂದು ಬಗೆಯಲ್ಲಿ ಅನೇಕರ ಒಪ್ಪಿಗೆಯನ್ನು ಪಡೆದದ್ದು ತಿಳಿಯ ಬರುತ್ತದೆ. ಕನ್ನಡ ಸಾಹಿತ್ಯ ಬಹುಭಾಗದಲ್ಲಿ ಮತೀಯ, ಮತಪ್ರಚಾರಕವೆಂಬ ಅಭಿಪ್ರಾಯವು ಪ್ರಚಲಿತವಾಗಿದೆ. ನಿಜವಾಗಿ ನೋಡಿದರೆ, ದೊರೆತ ಆಧಾರಗಳ ಸೂಕ್ಷ್ಮ ವ್ಯಾಸಂಗದಿಂದ ತಿಳಿಯಬೇಕಾದ ಹಿಂದಿನ ಜನಜೀವನ ಹಾಗೂ ಕವಿಜೀವನ ಇವುಗಳ ಸಂಪೂರ್ಣ ಚರಿತ್ರೆ ನಮಗೆ ತಿಳಿದಿಲ್ಲ. ಅಲ್ಲದೆ ಆಧಾರಗಳು ಅಪೇಕ್ಷಿಸಿದಷ್ಟು ಸಮಗ್ರವಾಗಿ

ದೊರೆತಿಲ್ಲ ಇಲ್ಲವೆ ದೊರೆಯುವುದು ಸಾಧ್ಯವಿಲ್ಲ ಎಂಬ ಕೊರತೆಯೂ ಕಣ್ಣೊತ್ತಾಗಿದೆ. ಇದ್ದುದರಲ್ಲಿ ಸ್ಥೂಲ ವಿಶಾಲ ಸಂಗತಿಗಳೇ ನಮಗೆ ಸರ್ವಸ್ವವಾಗಿರುತ್ತವೆ. ಅವುಗಳ ಬಲದಿಂದ ಯಾರೇ ಆಗಲಿ ತಮತಮಗೆ ತೋರಿದಂತೆ ಅನುಮಾನಮಾಡದೆ ಗತಿಯಿಲ್ಲ. ಆದರೆ ಇದು ಎಂಥ ಪರಿಸ್ಥಿತಿಯಲ್ಲಿಯ 'ಅನುಮಾನ' ಎಂಬ ಅರಿವು ಅಳಿಯಕೂಡದು. ಹಾಗೂ ಇಂದಿನ ಅಪೇಕ್ಷೆಗಳನ್ನೂ ಮೌಲ್ಯಗಳನ್ನೂ ಹಿಂದಿನ ಜೀವನದ ಮೇಲೆ ಆರೋಪಿಸಬಾರದು. ಈ ದೃಷ್ಟಿಯಿಂದ ಪರೀಕ್ಷಿಸಲಾಗಿ, ಮತಾನುಸಾರವಾದ ವಿಭಾಗಕ್ರಮವು ಸರಿಯಾದ ತಿಳಿವಳಿಕೆಯೊಡನೆ ಅರಿತುಕೊಂಡರೆ ತ್ಯಾಜ್ಯವಲ್ಲ. ಹಳಗಾಲದ ಜೀವನದಲ್ಲಿ ಮತಧರ್ಮಕ್ಕೆ ಮೇಲಾದ ಸ್ಥಾನವಿತ್ತು. ಅಂತೆಯೆ ಕವಿಯ ಹಾಗೂ ಕಾವ್ಯದ ಮೇಲೆ ಅದರ ಪ್ರಭಾವವು ಗಾಢವಾಗಿತ್ತು. ಕಾವ್ಯವಿಷಯ, ವಸ್ತುರಚನೆ, ರಸನಿಷ್ಪತ್ತಿ, ತತ್ವಬೋಧೆ ಈ ಮುಂತಾದ ಅಂಶಗಳಲ್ಲಿ ಕನ್ನಡ ಕವಿಗಳು ಸರ್ವಸಾಮಾನ್ಯವಾಗಿ ತಾವು ಸ್ವೀಕರಿಸಿದ ಮತಧರ್ಮದ ಪ್ರಭಾವಳಿಯದಲ್ಲಿ ಬೆಳೆದಿದ್ದಾರೆ. ಇದನ್ನರಿಯದೆ ಅವರ ಕೃತಿವಿಮರ್ಶೆಯನ್ನು ಮಾಡಲಾಗದು. ಆದರೆ ಈ ಮಾತನ್ನು ಹೆಚ್ಚು ಎಳೆಯುವುದು ತರವಲ್ಲ. ಕನ್ನಡ ಸಾಹಿತ್ಯ ಹೆಚ್ಚಾಗಿ ಮತೀಯ ಇಲ್ಲವೆ ಮತಪ್ರಚಾರಕವಾಗಿದೆ ಎಂದರೆ ಸಾಹಿತ್ಯ ಸತ್ವಕ್ಕಿಂತ ಮತೀಯ ಇಲ್ಲವೆ ಮತಪ್ರಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿವೆ ಎಂದಿದ್ದರೆ ಅದು ಸತ್ಯನಿದರ್ಶಕವಾಗದು. ಹಲಕೆಲವರ ರೀತಿ ಇಲ್ಲವೆ ಸಾಹಿತ್ಯಭಾಗಗಳ ಸರಣಿ ಇದರಿಂದ ಒಟ್ಟು ತೀರ್ಮಾನ ಮಾಡಿದಂತಾಗುತ್ತದೆ. ಮತ ಇಲ್ಲವೆ ಧರ್ಮ ಇದನ್ನು ಕಾವ್ಯಧರ್ಮದೊಡನೆ ಮೇಳವಿಸುವ ಅಂದರೆ ಎರಡಕ್ಕೂ ಅಷ್ಟೆ ಬೆಲೆ ಕೊಡುವ ದೃಷ್ಟಿ ಇದು ಇತರ ಭಾರತೀಯ ಸಾಹಿತ್ಯದಂತೆ ಕನ್ನಡ ಸಾಹಿತ್ಯದಲ್ಲಿಯೂ ಪ್ರಚುರವಾಗಿದೆ ಎನ್ನಲು ಅಡ್ಡಿಯಿಲ್ಲ. ಇದಲ್ಲದೆ ಹುಟ್ಟಿಬಂದ ಮತವು ಕವಿಮತವನ್ನು ಯಾವಾಗಲೂ ತಿಳಿಸುತ್ತದೆ—ಎಂದಾಗಲಿ ಕವಿಮತವು ಮರ್ಯಾದಿತವಾದ ಒಂದು ತತ್ವಪದ್ಧತಿಯಾಗಿದೆ ಎಂದಾಗಲಿ ತಿಳಿಯಬಾರದು. ಕನ್ನಡದ ಹಲವು ಹಿರಿಯ ಕವಿಗಳಲ್ಲಿ ಅವರ ಮತವು ಕಾಲೋಚಿತವಾದ ಹೆಸರು–ವೇಷಗಳನ್ನು ಪಡೆದಿದ್ದರೂ ಅದು ವಿಶಾಲವಾದ ಜೀವನದರ್ಶನದಿಂದ ಪುನೀತವಾಗಿ ಅದು ತನ್ನ ಬಗೆಯಲ್ಲಿ ಒಂದು ಅಚ್ಚರಿಯ ಸಮನ್ವಯವನ್ನು ತೋರಿದೆ ಎಂಬುದನ್ನೂ ಮರೆಯಕೂಡದು. ಇಂಥ ಸಂದರ್ಭಗಳಲ್ಲಿ ಆಯಾ ಕವಿಗಳನ್ನು ಜೈನ, ವೀರಶೈವ, ಬ್ರಾಹ್ಮಣ ಎಂದು ಮಾತ್ರ ಕರೆದು ನಾವು ಅವರಿಗೆ ಅನ್ಯಾಯಮಾಡುತ್ತೇವೆ.

ಕನ್ನಡ ಸಾಹಿತ್ಯ ಚರಿತ್ರೆ ಬರಬರುತ್ತ ವಿವಿಧವೂ ಸಂಕೀರ್ಣವೂ ಆಗುತ್ತ ಹೋಗಿದೆ. ಆದ್ದರಿಂದ ಮತಾನುಸಾರಿಯಾದ ವಿಭಾಗಕ್ರಮದಲ್ಲಿ ಜೈನಯುಗ ಎಂಬುದು ಒಪ್ಪುವಂತೆ ಉಳಿದುವು ಸರಿಹೋಗುವುದಿಲ್ಲ. ಜೈನಯುಗದಲ್ಲಿ ಜೈನಕವಿಗಳೇ ಹೆಚ್ಚಾಗಿದ್ದಾರೆ. ಜೈನತತ್ವವೇ ಪ್ರಮುಖವಾಗಿದೆ : ಚಂಪೂರೂಪ, ಹಳಗನ್ನಡ ಶೈಲಿಗಳು ಪ್ರಧಾನ ಪಟ್ಟ ಪಡೆದಿವೆ. ಅದೇ ವೀರಶೈವಯುಗದಲ್ಲಿ ಹೀಗೆ ಹೇಳಲು ಬರುವಂತಿಲ್ಲ. ಜೈನ, ಶೈವ ಎರಡೂ ಸಮಪ್ರಧಾನವಾಗಿವೆ; ಇಲ್ಲವೆ ಒಂದೊಂದು ಕಾಲಾವಧಿಯಲ್ಲಿ, ಒಂದೊಂದು ಸೀಮೆಯಲ್ಲಿ ಎರಡೂ ಹೆಚ್ಚಳವನ್ನು ಹೊಂದಿವೆ. ಬ್ರಾಹ್ಮಣವೆನ್ನಬಹುದಾದ ಯುಗದಲ್ಲಿಯಂತೂ

ತ್ರಿವೇಣೀಸಂಗಮವಾಗಿದೆ. ಸಂಕೀರ್ಣತೆ ಪರಾಕೋಟಿಯನ್ನು ಮುಟ್ಟಿದೆ. ಈ ಸಂದರ್ಭದಲ್ಲಿ ಸಾಹಿತ್ಯಚರಿತ್ರೆಯನ್ನು ಒಂದು ನದಿಯ ಪ್ರವಾಹಕ್ಕೆ ಹೋಲಿಸಿ ಇ. ಪಿ. ರಾಯಿಸರು ಮಾಡಿದ ವಿವರಣೆ, ಅದೇ ಸಾದೃಶ್ಯವನ್ನು ಇನ್ನೂ ಸುಂದರವಾಗಿ ವರ್ಣಿಸಿದ ಶ್ರೀಕಂಠಯ್ಯನವರ ವಿವೇಚನೆ ತುಂಬ ಸಮಂಜಸವಾಗಿರುತ್ತದೆ. ಜೈನ, ವೀರಶೈವ, ಬ್ರಾಹ್ಮಣ ಇವು ತಮ್ಮ ತಮ್ಮ ಕಾಲಕ್ಕೆ ಒಂದೊಂದು ಉಪನದಿಯಂತೆ ಕನ್ನಡ ಸಾಹಿತ್ಯದ ಮಹಾನದಿಯನ್ನು ಸೇರಿ ಒಂದರ ಹೊರತು ಇನ್ನೊಂದು ಎಂದಾಗದೆ ಒಂದರೊಡನೆ ಇನ್ನೊಂದು ಎಂಬಂತೆ ಸಮ್ಮಿಶ್ರಪ್ರವಾಹವಾಗಿ ಹರಿದಿವೆ. ಈ ದೃಷ್ಟಿಯಿಂದ ಜೈನಯುಗ, ವೀರಶೈವ ಯುಗ, ಬ್ರಾಹ್ಮಣ ಯುಗ ಎನ್ನುವುದಕ್ಕಿಂತ ಈ ಮೂರು ಯುಗಗಳನ್ನು ಜೈನ ಪ್ರಾರಂಭಯುಗ, ವೀರಶೈವ ಪ್ರಾರಂಭ ಯುಗ, ಬ್ರಾಹ್ಮಣ ಪ್ರಾರಂಭಯುಗ ಎಂದು ಕರೆದರೆ ಹೆಚ್ಚು ವಸ್ತುಸ್ಥಿತಿಯ ನಿದರ್ಶಕವಾದೀತು. ಇದರಿಂದ ಉಪಲಬ್ಧ ವಾಙ್ಮಯದ ಚರಿತ್ರೆಯಲ್ಲಿ ಮತಪ್ರವಾಹ ಮತ್ತು ಕಾಲನಿರ್ದೇಶ ಎರಡೂ ಸರಿಹೊಂದುತ್ತವೆ. ಬ್ರಾಹ್ಮಣ ಪ್ರಾರಂಭ ಎಂಬುದಕ್ಕೆ ಕೆಲಮಟ್ಟಿಗೆ ಆಕ್ಷೇಪವೆತ್ತಬಹುದು. ಯಾಕೆಂದರೆ ೧೫ನೆಯ ಶತಮಾನಕ್ಕಿಂತ ಹಿಂದಿನಿಂದಲೇ ಬ್ರಾಹ್ಮಣ ಗ್ರಂಥಕಾರರು ದೊರೆತಿದ್ದಾರೆ. ಇದು ಒಪ್ಪತಕ್ಕ ಮಾತಾದರೂ ೧೫ನೆಯ ಶತಮಾನದಿಂದಲೇ ಬ್ರಾಹ್ಮಣ ವಾಙ್ಮಯವು ಒತ್ತಾಸೆಯಿಂದಲೂ ವಿಪುಲತೆಯಿಂದಲೂ ನಿರ್ಮಾಣವಾಗಿದೆ ಎಂಬುದನ್ನು ಗಮನಿಸಬೇಕು. ಪ್ರಾರಂಭ ಪದದಿಂದ ಆಯಾ ಪ್ರವಾಹಗಳು ನೆರೆಯಾಗಿ ಬಂದು ಮೂಲಪ್ರವಾಹವನ್ನು ಕೂಡಿದ ಕಾಲ ಎಂಬುದಾಗಿ ಅರಿತಿರಬೇಕು. ಪ್ರಾರಂಭದ ಸ್ಥಳದಲ್ಲಿ ಪ್ರವಾಹ ಎಂಬುದನ್ನು ಪ್ರಯೋಗಿಸಿದರೂ ಅಡ್ಡಿಯಿಲ್ಲ."[36]

ಆಯಾ ಯುಗದಲ್ಲಿ ಪ್ರಭಾವಶಾಲಿಯಾದ ಧರ್ಮಕ್ಕನುಸರಿಸಿ ಕಾಲವಿಭಾಗವನ್ನು ಮಾಡಬೇಕೆಂಬ ತತ್ತ್ವದ ಅನ್ವಯದಲ್ಲಿ ಕಂಡುಬರುವ ಗುಣದೋಷಗಳನ್ನು ಈ ಜಿಜ್ಞಾಸೆಯು ಕೆಲಮಟ್ಟಿಗೆ ಸಂಗ್ರಹಿಸಿಕೊಟ್ಟಿದೆ. "ಜೈನ ಪ್ರಾರಂಭಯುಗ, ವೀರಶೈವ ಪ್ರಾರಂಭ ಯುಗ, ಬ್ರಾಹ್ಮಣ ಪ್ರಾರಂಭಯುಗ ಎಂದು ಕರೆದರೆ ಹೆಚ್ಚು ವಸ್ತುಸ್ಥಿತಿಯ ನಿದರ್ಶಕವಾದೀತು"–ಎಂದು ಸಲಹೆ ಮಾಡುವಲ್ಲಿ ಈ ತತ್ತ್ವವನ್ನು ಪೂರ್ತಿಯಾಗಿ ಬಿಟ್ಟುಕೊಡದೆ ಸಮಂಜಸವಾದ ಒಂದು ರೀತಿಯಲ್ಲಿ ಗ್ರಹಿಸುವುದು ಸಾಧ್ಯವಿದೆಯೇ ಎಂಬ ಚಿಂತನೆಯಿದೆ. ಅವರು ಕಾವ್ಯರೂಪಗಳ ಭಾಷಾಶೈಲಿಗಳ ಅವಸ್ಥಾಂತರಗಳೂ ಪ್ರಮುಖ ಕವಿಗಳೂ ಜೈನ, ವೀರಶೈವ, ಬ್ರಾಹ್ಮಣ ಕಾಲಗಳೆಂಬ ಮತಪ್ರಾಬಲ್ಯ ಘಟ್ಟಗಳ ಜತೆಗೆ ಹೊಂದಿಕೆಯಾಗುವುದನ್ನು ತೋರಿಸಿ, ಮತಪರವಿವೇಚನೆ ಅತಾರ್ಕಿಕವಾದ್ದಲ್ಲ ಎಂಬುದನ್ನು ಒಪ್ಪಿಕೊಂಡಿದ್ದಾರೆ. ಕೊನೆಗೆ, ತಮ್ಮ ವಿಮರ್ಶೆಯ ಫಲಿತವನ್ನು ಹೇಳುವಾಗ "ಮತಾನುಸಾರವಾದ ವಿಭಾಗಕ್ರಮವು ವಿಶೇಷ ಪದದೊಡನೆ ಸೇರಿಕೊಂಡರೆ ಅದನ್ನು ಅಂಗೀಕರಿಸಲು ಅಡ್ಡಿಯಿಲ್ಲ ಎಂಬ ನಮ್ಮ ಅಭಿಪ್ರಾಯವನ್ನು ಸೂಚಿಸಿದ್ದೇವೆ. ಆದರೂ ಸಾಹಿತ್ಯ ಚರಿತ್ರೆಯಲ್ಲಿ ಮತತತ್ತ್ವಕ್ಕಿಂತ ಕವಿವ್ಯಕ್ತಿ ಹೆಚ್ಚು ಗಣ್ಯಾನು, ಕವಿಕೃತಿ ಹೆಚ್ಚು ಬೆಲೆಯುಳ್ಳುದು...."ಎಂಬ ಗ್ರಹಿಕೆಯನ್ನು ಅವಲಂಬಿಸಿ[37] ಪ್ರಧಾನ ಕವಿಗಳ ಹೆಸರಿನಲ್ಲಿ

ಮಾಡುವ ಕಾಲವಿಭಾಗವನ್ನು ಒಪ್ಪಿ ಅನುಸರಿಸಿದ್ದಾರೆ.

'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ'ಯ ಸಹರಚಕರೂ 'ಕನ್ನಡ ಸಾಹಿತ್ಯ ಚರಿತ್ರೆ: ಒಂದು ಸಮೀಕ್ಷೆ' ಗ್ರಂಥದ ಕರ್ತೃಗಳೂ ಆದ ತ. ಸು. ಶಾಮರಾಯರು ಈ ಹಿಂದಿನ ವಿಭಾಗಕ್ರಮಗಳನ್ನು ಸಂಕ್ಷೇಪವಾಗಿ ಕ್ರೋಢೀಕರಿಸಿ ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ಎರಡನೆಯ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ :

"ಮತಧರ್ಮದ ಆಧಾರದಿಂದ ವಿಭಾಗಿಸುವುದೇ ನಮ್ಮ ಸಾಹಿತ್ಯೇತಿಹಾಸಕಾರರಲ್ಲಿ ಬಹು ಜನಕ್ಕೆ ಸಮ್ಮತವಾಗಿರುವಂತೆ ಕಂಡುಬರುತ್ತದೆ. ನಿಜ, ಭರತಖಂಡದ ಇತರ ಸಾಹಿತ್ಯಗಳಂತೆ ಕನ್ನಡ ಸಾಹಿತ್ಯಕ್ಕೂ ಪ್ರೇರಕ, ಪ್ರಚೋದಕ, ಪ್ರಬೋಧಕ, ಪೋಷಕ ವಸ್ತು ಧರ್ಮವೇ. ಆದರೆ ಮತಧರ್ಮ ಸಾಹಿತ್ಯಗಳು ಒಂದೇ ಎಂಬ ನಿಲುವು ಆಧುನಿಕ ರಿಗೆ ಹಿಡಿಸುವುದಿಲ್ಲ. ಸಾಹಿತ್ಯದಲ್ಲಿ ನಾವು ಮೆಚ್ಚುವುದು ವಿಶ್ವಧರ್ಮವನ್ನೇ ಹೊರತು ಬೇರೆಬೇರೆ ಮತಧರ್ಮವನ್ನಲ್ಲ. ಮತಧರ್ಮ ನಮ್ಮನ್ನು ಒಂದುಗೂಡಿಸುವುದಕ್ಕಿಂತ ವಿಭಜಿಸುವುದೆ ಹೆಚ್ಚು. ಅಲ್ಲದೆ, ಯಾವ ಒಂದು ಕಾಲದಲ್ಲಿಯೆ ತೆಗೆದುಕೊಂಡರೂ ಆಯಾ ಕಾಲದ ಒಂದೇ ಮತದವರು ಮಾತ್ರ ಕಾವ್ಯಸೃಷ್ಟಿಗೆ ಕೈಹಾಕಿರುವಂತೆಯೇನೂ ಕಂಡುಬರುವುದಿಲ್ಲ. ಆದ್ದರಿಂದ ನಮ್ಮ ಸಾಹಿತ್ಯದ ಇತಿಹಾಸವನ್ನು ಮತಧರ್ಮದ ಆಧಾರದ ಮೇಲೆ ವಿಭಾಗಿಸ ಹೊರಡುವುದು ಆಧುನಿಕರ ದೃಷ್ಟಿಯಲ್ಲಿ ಸರ್ವಸಮ್ಮತವಾಗಲಾರದು"[೨೮]

ಈ ಮೊದಲು ಶ್ರೀಯುತರು ಪ್ರಮುಖಕವಿ, ಪ್ರವೃತ್ತಿ, ಮತ, ಕಾವ್ಯರೂಪ, ಅರಸುಮನೆತನ–ಇವನ್ನು ಬೆರಸಿಯೂ ಬಳಿಕ ಪ್ರವೃತ್ತಿಯ ಅಂಶವನ್ನು ಮಾತ್ರ ಬಿಟ್ಟು ಉಳಿದುವನ್ನಿಟ್ಟುಕೊಂಡೂ ತಮ್ಮ ಸಾಹಿತ್ಯ ಚರಿತ್ರೆಗಳನ್ನು ರಚಿಸಿದ್ದಾರೆ. ಒಟ್ಟಿನಲ್ಲಿ ಅವರಿಗೆ ಮುಗಳಿಯವರ ಪ್ರಮುಖಕವಿ ತತ್ತ್ವ ಸಮ್ಮತವಿದೆ, ಉಳಿದಂಶಗಳನ್ನು ಸಮನ್ವಯಗೊಳಿಸಿದೆ. ಹೀಗೆ ಮತ, ಮತಪ್ರಾಬಲ್ಯ ಘಟ್ಟಗಳನ್ನು ಹಿಡಿದು ಸಾಹಿತ್ಯ ಚರಿತ್ರೆಯ ರಚನೆಯನ್ನೂ ಅಭ್ಯಾಸವನ್ನೂ ಕೈಗೊಳ್ಳುವ ಪ್ರಯತ್ನಗಳು ಕಾಲದಿಂದ ಕಾಲಕ್ಕೆ ತಗ್ಗಿಯೂ ತಗ್ಗದಂತೆ ನಡೆದುಕೊಂಡೇ ಬಂದಿರುವುದು ಗಮನಿಸತಕ್ಕದ್ದಾಗಿದೆ. ಕನ್ನಡ ಸಾಹಿತ್ಯ ರಚನೆಯ ಆರಂಭದಲ್ಲಿ ಎಫ್. ಕಿಟ್ಟೆಲ್, ಬಿ. ಎಲ್. ರೈಸ್, ಆರ್. ನರಸಿಂಹಾಚಾರ್ ಇವರು ಕನ್ನಡ ಸಾಹಿತ್ಯದ ನಿರ್ಮಾಣದಲ್ಲಿ ಪ್ರೇರಕಶಕ್ತಿಯಾಗಿ ಮತಧರ್ಮ ಕೆಲಸ ಮಾಡಿರುವುದನ್ನೂ ತಿರುಳಿನಲ್ಲಿ ಬಹ್ವಂಶ ಅದು ಮತೀಯ ವಾಸನೆಯಿಂದ ಕೂಡಿರುವುದನ್ನೂ ಲಕ್ಷ್ಯಕ್ಕೆ ತೆಗೆದುಕೊಂಡು ಮತಾನುಸಾರವಾದ ಕಾಲವಿಭಾಗಗಳನ್ನು ಸೂಚಿಸಿದರೆಂಬುದು ನಿಜ : ಆದರೆ ಭಾಷೆ ಮುಂತಾದ ಇತರ ವಿಭಾಗ ಕ್ರಮಗಳೊಡನೆ ಅದನ್ನು ಸಮನ್ವಯಿಸಿಯೂ ಇದ್ದರು. ಅಲ್ಲದೆ ಅವರು ಅದಕ್ಕೆ ಪ್ರಾಯಃ ವಿಶೇಷ ಮಹತ್ತ್ವವನ್ನು ಕೊಡದೆ ತಾವು ಬರೆದ ಸಾಹಿತ್ಯ ಚರಿತ್ರೆಗಳಲ್ಲಿ ಶತಮಾನಾನುಪೂರ್ವಿಯನ್ನೇ ಇಟ್ಟುಕೊಂಡರು. ಈಚೆಗೆ ಇ. ಪಿ. ರೈಸ್ ಮತ್ತು ಬಿ. ಎಂ. ಶ್ರೀಕಂಠಯ್ಯನವರು ಮತಾನುಸಾರವಾದ ಕಾಲವಿಭಾಗಕ್ಕೆ ಕೊಂಚ ಹೆಚ್ಚು ಮಹತ್ತ್ವವನ್ನು ಕೊಟ್ಟರಲ್ಲದೆ, ತಮ್ಮ ಸಾಹಿತ್ಯ ಚರಿತ್ರೆಗಳಲ್ಲಿ ಆ ಕಾಲವಿಭಾಗವನ್ನೇ ಇಟ್ಟುಕೊಂಡು ರಚನೆಗೆ

ತೊಡಗಿದರು. ಇದು ಸ್ವಲ್ಪ ಹೆಚ್ಚಾಯಿತೆಂದೂ ಕವಿ, ಕಾವ್ಯರೂಪ, ಭಾಷೆ ಮತ್ತು ಇತರ ತತ್ತ್ವಗಳು ಕಡೆಗಣಿಸಲ್ಪಟ್ಟವೆಂದೂ ಈಚಿನವರಿಗೆ ಸಹಜವಾಗಿಯೇ ತೋರಿ ಅವರು ಆಕ್ಷೇಪಿಸುವಂತಾಯಿತು. ಹೀಗಿದ್ದೂ, ಕ್ವಚಿತ್ತಾದ ಅಪವಾದದ ಹೊರತು ಯಾರೂ ಮತಾನುಸಾರವಾದ ವಿವೇಚನೆಯನ್ನು ಪೂರ್ತಿ ಕೈಬಿಡಲಿಲ್ಲ ; ಬಿಡುವಂತೆಯೂ ಇರಲಿಲ್ಲ. ಅದು ತಾತ್ತ್ವಿಕ ನೆಲೆಗಟ್ಟಿನ ಮೇಲೆ ಪ್ರಬಲವಾಗಿ ನಿಂತಿತ್ತು, ಪ್ರಾಯಃ ಅಪೇಕ್ಷಣೀಯವೂ ಆಗಿತ್ತು,

ಈ ಎರಡು ಅವತರಣಿಕೆಗಳನ್ನಿಲ್ಲಿ ನೋಡಬಹುದು :

"ನಮ್ಮ ದೇಶದಲ್ಲಿ ರಾಜ್ಯಕ್ರಾಂತಿಗಳು ಜನತೆಯ ಮೇಲೆ ಅಷ್ಟೊಂದು ಪರಿಣಾಮವನ್ನುಂಟುಮಾಡಿಲ್ಲ. ಅಂದರೆ ರಾಜ್ಯಕ್ರಾಂತಿಗಳ ಪರಿಣಾಮಗಳಿಂದ ಸಾಹಿತ್ಯಕ್ಷೇತ್ರವು ಕದಡಿಲ್ಲ. ಆದರೆ ಇದು ಧರ್ಮಕ್ರಾಂತಿಯ ವೀರಭೂಮಿ. ಜೈನ, ವೀರಶೈವ, ಶಂಕರ, ರಾಮಾನುಜ, ಮಧ್ವರಿಂದ ಮತಗಳ ಕ್ರಾಂತಿಗಳು ಎಡೆಬಿಡದೆ ನಡೆದುವು. ಧರ್ಮಕ್ರಾಂತಿಗೆ ಸಾಮಾನ್ಯ ಜನತೆಯ ಮನಸ್ಸೇ ಸಾಧನ. ಆದುದರಿಂದ ಈ ಧರ್ಮಕ್ರಾಂತಿಗಳ ಪರಿಣಾಮವು ಸಾಹಿತ್ಯದ ಮೇಲೆ ಆಗುವುದು ಸ್ವಾಭಾವಿಕ."[39]

ಭಾರತದ ಸಾಹಿತ್ಯವೇ ಒಟ್ಟಿನಲ್ಲಿ ಮತಪ್ರಚೋದಿತವೆಂದು ಬಲ್ಲವರು ಹೇಳುತ್ತಿರುವಾಗ ಕನ್ನಡ ಸಾಹಿತ್ಯವು ಅದಕ್ಕೆ ಅಪವಾದವೆಂದು ಹೇಳಲಾಗುವುದಿಲ್ಲ. ಈ ಮಾತು ಜೈನ, ವೀರಶೈವ, ಬ್ರಾಹ್ಮಣ—ಎಲ್ಲ ಮತಗಳ ಸಾಹಿತ್ಯಕ್ಕೂ ಅನ್ವಯಿಸುವುದೆಂಬುದರಲ್ಲಿ ಸಂದೇಹವಿಲ್ಲ. ಆದರೂ ಆಯಾ ಮತಗಳಲ್ಲಿ ಕಂಡುಬರುವ ಸ್ಥೂಲ–ಸೂಕ್ಷ್ಮ ಭೇದಗಳು ಅವರವರ ಸಾಹಿತ್ಯಗಳ ಧ್ಯೇಯ ಧೋರಣೆಗಳಲ್ಲಿ ವ್ಯತ್ಯಾಸವನ್ನೂ ಉಂಟುಮಾಡಿವೆ ಯೆಂಬುದನ್ನು ನಾವು ಮರೆಯಬಾರದು."[40]

ಭಾರತೀಯ ಸಾಹಿತ್ಯವನ್ನು ಪೂರ್ಣದೃಷ್ಟಿಯಿಂದ ಗಮನಿಸಿದ ಯಾರಿಗೆ ಆದರೂ ಅದರ ಮೂಲ ಪ್ರೇರಕ, ಪೋಷಕ ಮತ್ತು ಪ್ರಚೋದಕ ಶಕ್ತಿ ಧರ್ಮ ಎಂಬ ಅಂಶ ಮೊದಲ ನೋಟಕ್ಕೇ ಅನುಭವಕ್ಕೆ ಬರುವಂಥದು. "ಭಾರತೀಯ ಭಾಷೆಗಳು ಹಲವು, ಸಾಹಿತ್ಯ ಒಂದು" ಎಂಬ ವಿದ್ವಾಂಸರ ಅಭಿಪ್ರಾಯ ಕೂಡ ಈ ಹಿನ್ನೆಲೆಯಲ್ಲಿಯೇ ಬಂದದ್ದು. ಆದರೆ ಕರ್ಣಾಟಕದಲ್ಲಿ ಕಾಲಕಾಲಕ್ಕೆ ಕಾಣಿಸಿಕೊಂಡ ಮತಪ್ರಾಬಲ್ಯ ಘಟ್ಟಗಳಿಗೆ ಅನುಗುಣವಾಗಿಯೇ ಕನ್ನಡ ಸಾಹಿತ್ಯದ ನಿರ್ಮಾಣವಾಗಿದೆಯೆಂದು ಪೂರ್ತಿಯಾಗಿ ಗ್ರಹಿಸಲಾಗದು ; ಹಾಗೆಯೇ ಅವುಗಳ ಪ್ರಭಾವದಿಂದ ಅದು ಮುಕ್ತವಾಗಿದೆಯೆಂದೂ ಹೇಳುವಂತಿಲ್ಲ. ಹಲವು ಪ್ರವೃತ್ತಿಗಳ ಜತೆಗೆ ಇದೂ ಒಂದು ; ಬಹುಮಟ್ಟಿಗೆ ಪ್ರಬಲವಾದ್ದು. ಈ ಮಿತಿಯನ್ನು ಅರಿತುಕೊಂಡರೆ, ಅಭ್ಯಾಸಕ್ರಮದಲ್ಲಿ ಮತಪರವಾದ ಕಾಲವಿಭಾಗವನ್ನು ಯಥೋಚಿತವಾಗಿ ಉಲ್ಲೇಖಿಸುವುದೂ ಬಳಸುವುದೂ ತಪ್ಪೇನಲ್ಲ ; ಅಪೇಕ್ಷಣೀಯವೇ ಆಗಬಹುದು.

## ಭಾಷಿಕ ಕಾಲವಿಭಾಗ

ಮತಾನುಸಾರವಾದ ವಿಭಾಗಕ್ರಮದಂತೆಯೇ ಭಾಷಾನುಸಾರವಾದ ವಿಭಾಗಕ್ರಮವೂ ಪ್ರಮುಖವಾದ್ದು, ಆರಂಭದಿಂದಲೇ ಪ್ರತಿಪಾದಿತವಾದ್ದು. ಕನ್ನಡ ಸಾಹಿತ್ಯದ ಬೆಳೆವಣಿಗೆಯ ಘಟ್ಟಘಟ್ಟಗಳಲ್ಲಿ ಉಂಟಾದ ಪರಿವರ್ತನೆಗೆ ಒಂದೊಂದು ಮತಧರ್ಮದ ಪ್ರಾಬಲ್ಯ ಹೇಗೆ ಪ್ರಚೋದಕಶಕ್ತಿಯಾಗಿ ಕೆಲಸಮಾಡಿತು ಎಂಬುದರ ಮೇಲೆ ಜೈನ, ವೀರಶೈವ, ಮತ್ತು ಬ್ರಾಹ್ಮಣ ಎಂಬ ಸ್ಥೂಲವಾದ ಮತೀಯ ವಿಭಾಗಗಳನ್ನು ಮಾಡಿಕೊಂಡಂತೆ ಸಾಹಿತ್ಯ ಕೃತಿಗಳ ಭಾಷೆ ಗಮನಾರ್ಹವಾದ ಹಾಗೂ ಸುಸ್ಥಿರವಾದ ಘಟ್ಟಗಳನ್ನು ತಲುಪಿದ ಸ್ಥಿತ್ಯಂತರಗಳನ್ನು ಗಮನಿಸಿ, ಅವನ್ನೇ ವಿಭಾಗದ ಮೇರೆಗಳಾಗಿ ಕಲ್ಪಿಸಿಕೊಂಡಿರುವುದುಂಟು. ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬವೇ ಆ ಸ್ಥಿತ್ಯಂತರಗಳು. ಶಬ್ದರಚನೆಯ ದೃಷ್ಟಿಯಿಂದ ಕನ್ನಡ ಭಾಷೆ ಒಂದೇ ಬಗೆಯಾಗಿದ್ದರೂ ಶಬ್ದರೂಪಗಳಲ್ಲಿ ಕಾಲಕಾಲಕ್ಕೆ ವ್ಯತ್ಯಾಸಗಳು ತಲೆದೋರಿದ್ದು, ಈ ಪ್ರಭೇದಗಳು ನೇರ್ಪಟ್ಟವೆ. ಆಯಾ ಕಾಲಗಳನ್ನು ಸ್ಥೂಲವಾಗಿ ಗುರುತಿಸಿ, ಕಿಟ್ಟೆಲ್ ಮುಂತಾದವರು ಭಾಷಿಕ ಕಾಲವಿಭಾಗದ ವಿಭಜನಕ್ರಮವೊಂದನ್ನು ಸೂಚಿಸಿದರು. ಬಿ. ಎಲ್. ರೈಸ್ ಪೂರ್ವದ ಹಳಗನ್ನಡ (ಆದಿಕಾಲದಿಂದ ೭ನೆಯ ಶತಮಾನದ ಕೊನೆಯವರೆಗೆ), ಹಳಗನ್ನಡ (೮ರಿಂದ ೧೪ ಶತಮಾನದವರೆಗೆ), ಹೊಸಗನ್ನಡ (೧೪ನೆಯ ಶತಮಾನದಿಂದ ಮುಂದಕ್ಕೆ), ಎಫ್. ಕಿಟ್ಟೆಲ್ ಹಳಗನ್ನಡ (ಸು. ೧೦ರಿಂದ ೧೩ನೆಯ ಶತಮಾನದ ಮಧ್ಯಭಾಗ), ನಡುಗನ್ನಡ (ಸು. ೧೩ನೆಯ ಶತಮಾನದ ಮಧ್ಯಭಾಗದಿಂದ ೧೫ನೆಯ ಶತಮಾನದ ಕೊನೆಯ ಭಾಗದವರೆಗೆ), ಹೊಸಗನ್ನಡ (ಸು. ೧೬ರಿಂದ ಮುಂದಕ್ಕೆ) ಎಂಬುದಾಗಿಟ್ಟುಕೊಂಡು ಕ್ರಮವಾಗಿ ಈ ಕಾಲಗಳಲ್ಲಿ ಜೈನ, ವೀರಶೈವ ಹಾಗೂ ವೈಷ್ಣವ ಕವಿಗಳು ಬಾಳಿದರೆಂದಿದ್ದಾರೆ. ಆರ್. ನರಸಿಂಹಾಚಾರ್ಯರು ಒಟ್ಟಿನಲ್ಲಿ ಬಿ. ಎಲ್. ರೈಸ್ ಅವರನ್ನು ಅನುಸರಿಸಿ, ಭಾಷೆಯ ಅವಸ್ಥಾಭೇದಗಳನ್ನು ತಿಳಿಸಿದ್ದಾರೆ. ಈ ವಿಷಯದಲ್ಲಿ ಅವರೇ "ಈ ಅವಸ್ಥಾಭೇದಗಳು ಇಂಥಿಂಥ ಕಾಲದಲ್ಲಿಯೇ ಆರಂಭವಾಗಿ ಇಂಥಿಂಥ ಕಾಲದಲ್ಲಿಯೇ ಮುಗಿದುವೆಂದು ಹೇಳಲಿಕ್ಕಾಗುವುದಿಲ್ಲ. ಆ ಆ ಕಾಲಗಳಲ್ಲಿ ಭಾಷೆಯಲ್ಲಿ ವಿಶೇಷವಾಗಿ ಕಾಣಬರುವ ರೂಪಭೇದಗಳಿಂದ ಅವಸ್ಥಾಭೇದಗಳನ್ನು ಸ್ಥೂಲಸ್ಥೂಲವಾಗಿ ಹೀಗೆ ನಿರೂಪಿಸಬೇಕಾಗಿದೆ" ಎಂದಿದ್ದಾರೆ.[41]

ಅದ್ದರಿಂದ ಕನ್ನಡ ಭಾಷೆಯ ಅವಸ್ಥಾಭೇದಗಳನ್ನು ಗೆರೆಯೆಳೆದು ತೋರಿಸುವುದು ಕಷ್ಟ. "ಭಾಷಾವಸ್ಥೆಗಳ ಸ್ವರೂಪವು ಕಾಲ ಮರ್ಯಾದೆಯೊಡನೆ ಯಾವಾಗಲೂ ಹೊಂದಲಾರದೆಂಬುದನ್ನು ನೆನೆದಿರಬೇಕು"–ಎನ್ನುವ ಮಾತು ನಿಜ.[42] ಎಂ. ಎ. ದೊರೆಸ್ವಾಮಿಯ್ಯಂಗಾರ್ ಅವರು ಮೂಲಗನ್ನಡ ಮುಂತಾಗಿ ಕನ್ನಡದ ಐದು ಅವಸ್ಥೆಗಳನ್ನು ವಿಂಗಡಿಸಿರುವುದನ್ನು ಗಮನಿಸಿದರೆ, ಕಾಲಮಿತಿಯೂ ಅವಸ್ಥೆಯೂ ಕೂಡಿಯೇ ಜಿಜ್ಞಾಸೆಯ ವಿಷಯಗಳಾಗಿವೆಯೆಂಬುದು ಮನವರಿಕೆಯಾಗುತ್ತದೆ. ಇವುಗಳನ್ನು ಹೇಗೋ ಸಮನ್ವಯಿಸಿಕೊಳ್ಳಬಹುದು. ಆದರೆ ಮುಖ್ಯವಾದ ತೊಡಕು ಎಂದರೆ, ಮುಂದುಮುಂದಿನ

ಯುಗಗಳಲ್ಲಿ, ಮತದ ವಿಷಯದಲ್ಲಿ ಹೇಗೋ ಹಾಗೆ, ಭಾಷೆಯ ವಿಷಯದಲ್ಲಿ ಕೂಡ ಸಮ್ಮಿಶ್ರತೆ ಹೆಚ್ಚುತ್ತ ಹೋಗುತ್ತದೆ ಎನ್ನುವುದು. ಹಳಗನ್ನಡದ ಕಾಲದಲ್ಲಿ ಪೂರ್ವದ ಹಳಗನ್ನಡದ ರೂಪರೇಖೆಗಳು ಕೂಡಿದ ಕೃತಿಗಳು ಹುಟ್ಟಿರಬಹುದು; ನಡುಗನ್ನಡ ಕಾಲದಲ್ಲಿ ಹಳಗನ್ನಡದಲ್ಲಿ ಕಾವ್ಯರಚನೆಯಾಗಿದೆ; ಹಾಗೂ ಹೊಸಗನ್ನಡ ಕಾಲದಲ್ಲಿ ಹಳಗನ್ನಡ ನಡುಗನ್ನಡಗಳಲ್ಲಿ ಕಾವ್ಯರಚನೆಯಾಗಿದೆ; ಇದು ಕವಿಯ ಪಾಂಡಿತ್ಯ, ಪರಿಸರ, ಮನೋಧರ್ಮ ಮುಂತಾದುವನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಆದ್ದರಿಂದ ಯಾವುದೇ ಕವಿ ಯಾವುದೇ ಒಂದು ನಿರ್ದಿಷ್ಟವಾದ ಭಾಷಾವಸ್ಥೆಯ ಕಾಲಕ್ಕೆ ಸೇರಿದವನೆಂದು ತಿಳಿದು ವಿಂಗಡಿಸಿಕೊಂಡು ಅಭ್ಯಾಸಮಾಡುವ ಕ್ರಮದಲ್ಲಿ ಕೆಲವು ತೊಂದರೆಗಳಿವೆ. ಕೃತಿರಚನೆಯ ಸಂದರ್ಭ ಸನ್ನಿವೇಶಗಳ ಸರಿಯಾದ ಹಿನ್ನೆಲೆ ಮುನ್ನೆಲೆಗಳು ಗೊತ್ತುಹತ್ತದೆಹೋಗಿ ಸಾಹಿತ್ಯ ವಿಮರ್ಶೆಯ ಮೌಲ್ಯಮಾಪನ ಏರುಪೇರಾಗುವ ಸಂಭವವಿರುತ್ತದೆ. ಭಾಷೆಯ ಬಳಕೆಯಿಂದ ಕವಿಯ ಕಾಲ ಶಕ್ತಿಗಳನ್ನು ತಿಳಿಯುವುದು ವಿಶ್ವಸನೀಯ ಪ್ರಮಾಣವಾಗದು. ಹೀಗಾಗಿ ಕನ್ನಡ ಸಾಹಿತ್ಯದ ಅನುಸ್ಯೂತವಾದ ಅಭ್ಯಾಸಕ್ಕೆ ಈ ಕ್ರಮ ಸರಿಹೊಂದಲಾರದು; ಬಿಡಿಬಿಡಿಯಾಗಿ ಸಾಹಿತ್ಯ ಸಾಧನೆಗಳನ್ನು ಗುರುತಿಸುವಾಗ, ಹಳಗನ್ನಡ ಸಾಹಿತ್ಯ, ನಡುಗನ್ನಡ ಸಾಹಿತ್ಯ ಅಥವಾ ಹೊಸಗನ್ನಡ ಸಾಹಿತ್ಯ ಎಂಬುದಾಗಿ ವಿಭಾಗಗಳನ್ನು ಮಾಡಿಕೊಳ್ಳಬಹುದು. ಅಂಥ ಪ್ರಯತ್ನಗಳೂ ಈಗಾಗಲೇ ಕೆಲವು ನಡೆದಿವೆ.

## ಸಾಹಿತ್ಯರೂಪ ವಿಭಜನೆ

ಇ. ಪಿ. ರೈಸ್ ಅವರು ಮುಖ್ಯವಾಗಿ ಮತೀಯ ಕಾಲಮಾನಕ್ಕೆ ಆದ್ಯತೆ ಕೊಟ್ಟಿದ್ದರೂ ಕನ್ನಡ ಸಾಹಿತ್ಯದ ವಿವಿಧ ಶಾಖೆಗಳು ಮತೀಯ ಹಿನ್ನೆಲೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಾಹಿತ್ಯರೂಪಗಳಿಂದಲೂ ವಿಭಿನ್ನವಾಗಿದೆಯೆಂದು ತಿಳಿಸಿ, ಜೈನಯುಗದಲ್ಲಿ ಚಂಪೂ ಗ್ರಂಥಗಳೂ ವೀರಶೈವ ಯುಗದಲ್ಲಿ ಗದ್ಯ ಹೆಚ್ಚಾಗಿದ್ದು, ಷಟ್ಪದಿ, ತ್ರಿಪದಿ, ಅಥವಾ ರಗಳೆಗಳೂ ಬ್ರಾಹ್ಮಣ ಯುಗದಲ್ಲಿ ದೀರ್ಘಕೃತಿಗಳು ಷಟ್ಪದಿಯಲ್ಲಿಯೂ ಉಳಿದವು ಜನಪ್ರಿಯ ಹಾಡಿನಂಥ ಧಾಟಿಗಳಲ್ಲಿಯೂ ಕಂಡುಬರುತ್ತವೆ ಎಂದಿದ್ದಾರೆ. ಮೇಲೆ ಅವರು ಗದ್ಯವೆಂದಿರುವುದು ವಚನವೆಂದೇ ತೋರುತ್ತದೆ; ಜನಪ್ರಿಯ ಹಾಡಿನಂಥ ಧಾಟಿಗಳು ಪ್ರಾಯಃ ಹರಿದಾಸರ ಕೀರ್ತನೆಗಳು. ಹೀಗಾದರೆ ಚಂಪೂ, ವಚನ—ಷಟ್ಪದಿ—ತ್ರಿಪದಿ—ರಗಳೆ, ಷಟ್ಪದಿ—ಕೀರ್ತನೆಗಳು ಹೀಗೆ ಅವರು ಸಾಹಿತ್ಯರೂಪರೂಪಗಳನ್ನು ಪೃಥಕ್ಕರಿಸಿದ್ದಾರೆ. ಬಿ.ಎಂ.ಶ್ರೀ.ಯವರು ಚಂಪುಗಳ ಕಾಲ, ಷಟ್ಪದಿ—ಸಾಂಗತ್ಯಗಳ ಕಾಲ, ಯಕ್ಷಗಾನದ ಕಾಲ ಎಂದು ವಿಭಜನೆಯನ್ನು ಸೂಚಿಸಿದ್ದಾರೆ. ಎನ್. ಕೆ. ಕುಲಕರ್ಣಿ ಅವರು ಸಾಹಿತ್ಯರೂಪಗಳನ್ನೇ ಪ್ರಕರಣಗಳನ್ನಾಗಿ ಮಾಡಿಕೊಂಡು 'ಕನ್ನಡ ಸಾಹಿತ್ಯ ವಾಹಿನಿ'ಯನ್ನು ರಚಿಸಿದ್ದಾರೆ. ನಿರೂಪಣೆ ಬಹು ಸಂಕ್ಷೇಪ ಎಂಬುದು ನಿಶ್ಚಯವಾದರೂ ಹಿಡಿದ ದಾರಿಯಲ್ಲಿ ಹೊಸತನವಿದೆ. ಸಾಹಿತ್ಯರೂಪಗಳಿಗೆ ಆದ್ಯತೆಕೊಟ್ಟು ಬರೆದ ಕನ್ನಡ

ಸಾಹಿತ್ಯ ಚರಿತ್ರೆಗಳಲ್ಲಿ ಪ್ರಾಯಃ ಇದೇ ಮೊದಲನೆಯದು. ಈಚೆಗೆ ಪಂಪಯುಗವನ್ನು ಚಂಪೂಯುಗ ಎಂದು 'ಕನ್ನಡ ಸಾಹಿತ್ಯ'ದಲ್ಲಿಯೂ ಕುಮಾರವ್ಯಾಸಯುಗವನ್ನು ಷಟ್ಪದೀಯುಗ ಎಂದು 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿಯೂ ಕರೆಯುವ ಮೂಲಕ ಆ ವಿಭಾಗಕ್ರಮಕ್ಕೆ ಕೊಂಚ ಒಲವು ತೋರಿದೆ. ಆದರೆ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' ಎಂಬ ಗ್ರಂಥದಲ್ಲಿ ಅದರ ಕರ್ತೃ ಎಂ. ಮರಿಯಪ್ಪಭಟ್ಟ ಅವರು ಪೂರ್ವದ ಹಳಗನ್ನಡ—ಹಳಗನ್ನಡ—ಗದ್ಯಸಾಹಿತ್ಯ, ಚಂಪೂಕಾವ್ಯಗಳು, ಶಾಸನ ಸಾಹಿತ್ಯ, ಶತಕ ಸಾಹಿತ್ಯ, ಲಕ್ಷಣ ಸಾಹಿತ್ಯ, ಶಾಸ್ತ್ರೀಯ ಸಾಹಿತ್ಯ, ನಡುಗನ್ನಡ ಸಾಹಿತ್ಯ, ಜಾನಪದ ವಾಙ್ಮಯ, ಹೊಸಗನ್ನಡ ಸಾಹಿತ್ಯ—ಎಂಬುದಾಗಿ ವಿಭಾಗ ಕ್ರಮವನ್ನು ಅನುಸರಿಸಿ ಅದಕ್ಕೆ ಆದ್ಯತೆ ಕೊಟ್ಟಿದ್ದಾರೆ. ಇದರಲ್ಲಿ ಆಯಾ ಸಾಹಿತ್ಯದ ಕವಿಗಳನ್ನೂ ಕೃತಿಗಳನ್ನೂ ಕಾಲಾನುಕ್ರಮವಾಗಿ ಪರಿಚಯಮಾಡಿಕೊಡುವ ಪ್ರಯತ್ನ ಮಾಡಿದೆ. ಆಯಾ ಸಾಹಿತ್ಯರೂಪದ ಕವಿಗಳನ್ನೂ ಅವರ ಕೃತಿಗಳನ್ನೂ ಒಗ್ಗೂಡಿಸಿ ಬರೆದ ಸ್ವತಂತ್ರ ಪ್ರಬಂಧಗಳ ಸಮನ್ವಯದಂತೆ ತೋರುವ ಈ ಗ್ರಂಥ ತನ್ನ ಮಟ್ಟಿಗೆ 'ಕನ್ನಡ ಸಾಹಿತ್ಯವಾಹಿನಿ'ಯ ಹಾಗೆಯೇ ಒಂದು ವಿಶಿಷ್ಟ ಮಾದರಿ. ಆದರೆ ಇಂಥ ಪ್ರಯತ್ನಗಳಲ್ಲಿ ಕನ್ನಡ ಸಾಹಿತ್ಯದ ಅನುಸ್ಯೂತವಾದ ಬೆಳೆವಣಿಗೆಯ ಮಜಲುಗಳೂ ಅವುಗಳ ಪೂರ್ವಾಪರ ಸಂಬಂಧಗಳೂ ಸಾಹಿತ್ಯದ ಒಟ್ಟು ನೋಟದಿಂದ ದೊರೆಯುವ ಒಂದು ವ್ಯಾಪಕಚಿತ್ರವೂ ದೊರೆಯದೇ ಹೋಗುವುದು; ಕನ್ನಡ ಸಾಹಿತ್ಯದ ಗುಣಗಾತ್ರಗಳ ಅರಿವು ಮೂಡದು. ಚಂಪು, ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಕೀರ್ತನೆ, ಯಕ್ಷಗಾನ, ಆಧುನಿಕ ಛಂದಸ್ಸು ಹೀಗೆ ವಿಭಾಗಗಳನ್ನು ಮಾಡಿಸಿಕೊಂಡು ಅಭ್ಯಾಸ ಮಾಡುವುದು ಸುಕರವಾದ ವಿಧಾನವಾದರೂ ಇಲ್ಲಿಯೂ ಇತರ ವಿಭಾಗಗಳಲ್ಲಿ ಕಂಡುಬರುವಂತೆ ಬರುಬರುತ್ತ ಸಮ್ಮಿಶ್ರತೆ, ಪರಸ್ಪರಪ್ರಸರಣ, ವ್ಯಾಪ್ತಿವೈವಿಧ್ಯಗಳು ಹೆಚ್ಚುತ್ತಬಂದು ವಿಭಜನಕ್ರಮ ಹೆಚ್ಚು ನಿರ್ದಿಷ್ಟವಾದ ಹಾಗೂ ಉಪಯುಕ್ತವಾದ ತತ್ತ್ವವನ್ನು ಹಿಡಿದು ನಡೆದಂತೆ ಆಗುವುದಿಲ್ಲ. ಆದರೆ ಈ ವಿಭಾಗಕ್ರಮದ ಅನ್ವಯದಿಂದ ಒಂದು ವಿಶೇಷ ಪ್ರಯೋಜನವಿದೆ. ಆಯಾ ಸಾಹಿತ್ಯ ಪ್ರಕಾರದಲ್ಲಿ ಸೃಷ್ಟಿಯಾದ ಕವಿಕೃತಿಗಳನ್ನೆಲ್ಲ ಒಗ್ಗೂಡಿಸಿ, ಕಾಲಾನುಕ್ರಮದಲ್ಲಿ ಅವುಗಳ ಅಭ್ಯಾಸವನ್ನು ಕೈಗೊಂಡರೆ ಲಕ್ಷಣ ದೃಷ್ಟಿಯಿಂದ ಆ ಸಾಹಿತ್ಯರೂಪದಲ್ಲಿ ಉಂಟಾದ ಬದಲಾವಣೆಗಳೂ ಬೆಳೆವಣಿಗೆಗಳೂ ತಿಳಿಯುವಂತಾಗಿ ಆಯಾ ಛಂದೋರೂಪದ ಅಥವಾ ಛಂದಸ್ಸಿನ ಚರಿತ್ರೆಗೆ ತುಂಬ ಉಪಕಾರವಾಗುವುದು; ಅವನ್ನು ಬಳಸಿದ ಕವಿಯ ಸಾಮರ್ಥ್ಯ ದೌರ್ಬಲ್ಯಗಳೂ ತಿಳಿಯುವಂತಾಗಿ ಕನ್ನಡ ಸಾಹಿತ್ಯದಲ್ಲಿ ಆತನ ನೆಲೆಬೆಲೆಗಳನ್ನು ನಿರ್ಧರಿಸಲು ಅನುವು ದೊರೆಯಬಹುದು.

## ರಾಜವಂಶ ಕಾಲವಿಭಾಗ

ಇ. ಪಿ. ರೈಸ್ ಅವರ ಗ್ರಂಥದಲ್ಲಿ ಮೊದಲು ಈ ವಿಭಾಗಕ್ರಮವನ್ನು ಅಲ್ಲಲ್ಲಿ

ಪ್ರಾಸಂಗಿಕವಾಗಿ ತೋರಿಸಲಾಗಿತ್ತು. ಬಳಿಕ ಬಿ.ಎಂ.ಶ್ರೀ.ಯವರು ರಾಷ್ಟ್ರಕೂಟ-ಚಾಳುಕ್ಯ-ಗಂಗರ ಕಾಲ, ಹೊಯ್ಸಳ-ಬಿಜ್ಜಲರ ಕಾಲ, ವಿಜಯನಗರದ ರಾಜರ ಕಾಲ, ಮೈಸೂರರಸರ ಕಾಲ ಎಂದು ಪರ್ಯಾಯವಾಗಿ ಸೂಚಿಸಿದರು. ಈ ದೃಷ್ಟಿಯಿಂದ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸಮಾಡುವುದು ರಾಜಕೀಯ ಚರಿತ್ರೆಯ ರಚನೆಗೆ ಹೆಚ್ಚು ಲಾಭದಾಯಕವಾದ್ದು; ಚರಿತ್ರೆಯ ಸರ್ವಾಂಗೀಣ ರಚನೆಗೆ ಬೇಕಾದ್ದು. ಇಲ್ಲಿ ರಾಜಪೋಷಣೆಗೆ ಒಳಪಟ್ಟ ಕವಿಗಳ ವಿಚಾರ ಅವಶ್ಯವಾಗಿ ಬರುತ್ತದೆ. ಪೋಷಣೆಗೆ ಒಳಪಡದೆ ಇರುವ ಕವಿಗಳ ವಿಚಾರವನ್ನು ಹೇಳುವಾಗ, ರಾಜವಂಶ ಮತ್ತು ಕವಿವ್ಯಕ್ತಿ ಇವರ ಸಂಬಂಧಗಳ ಹೊಂದಿಕೆಗೆ ಅಂತಹ ಔಚಿತ್ಯವೇನೂ ಕಾಣುವುದಿಲ್ಲ. ಅಲ್ಲದೆ, ಒಂದೇ ಕಾಲಮಾನದಲ್ಲಿ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಚಿಕ್ಕವೂ ದೊಡ್ಡವೂ ಆದ ಹಲವು ಅರಸು ಮನೆತನಗಳು ಆಳುತ್ತಿದ್ದುದು ತಿಳಿದ ವಿಷಯವಾದ್ದರಿಂದ, ನೇರ ಪೋಷಣೆಗೆ ಒಳಪಡುವ ಕವಿಗಳನ್ನು ಹೊರತುಪಡಿಸಿದರೆ ಉಳಿದ ಕವಿಗಳನ್ನು ಯಾವ ಮನೆತನದ ಕೆಳಗೆ ಸೇರಿಸುವುದೆಂಬುದು ಸಮಸ್ಯೆಯಾಗುತ್ತದೆ; ಏಕೆಂದರೆ ಕವಿಗಳ ಜೀವಮಾನದ ಅವಧಿಯೂ ಅವರ ವಾಸದ ಊರುಕೇರಿಗಳೂ ಅನಿಶ್ಚಿತವಾಗಿರುವ ಸಂದರ್ಭಗಳೇ ಹೆಚ್ಚು. ಹೀಗಿದ್ದೂ, ಆಯಾ ಅರಸುಮನೆತನದ ಕಾಲದಲ್ಲಿ ಸಾಹಿತ್ಯ ಪಡೆದ ಪೋಷಣೆಯನ್ನು ತಿಳಿಯಲೂ ಆ ಮೂಲಕವಾಗಿ ಆಯಾ ಮನೆತನ ಆಳುತ್ತಿದ್ದ ಕಾಲದ ಸಾಂಸ್ಕೃತಿಕ ಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲೂ ಬಿಡಿಬಿಡಿಯಾದ ಇಂಥ ಪ್ರಯತ್ನಗಳು ಅವಶ್ಯವಾದ್ದು, ಅಪೇಕ್ಷಣೀಯವಾದ್ದು. ಅಂಥ ಕೆಲವು ಪ್ರಯತ್ನಗಳು ಸಮರ್ಪಕವಾಗಿ ನಡೆದಿರುವುದು ಕೂಡ ಕಂಡುಬರುತ್ತದೆ. ಚರಿತ್ರೆಯ ಗ್ರಂಥಗಳಲ್ಲಿ ಆ ಅರಸು ಮನೆತನಗಳ ಆಡಳಿತಾವಧಿಗೆ ಸಂಬಂಧಿಸಿದಂತೆ ಸಾಹಿತ್ಯದ ಬೆಳವಣಿಗೆಯನ್ನು ಕೂಡ ಉದ್ದಕ್ಕೆ ಗಮನಿಸಿರುವುದೂ ಉಂಟು.

## ಪ್ರಮುಖಕವಿ ಕಾಲವಿಭಾಗ

ಈ ಕಾಲ ವಿಭಾಗದ ಸಾಧ್ಯತೆಯನ್ನು ಮೊದಲು ಮನಗಂಡವರು ಬಿ. ಎಂ. ಶ್ರೀಕಂಠಯ್ಯನವರು. ಪಂಪನ ಕಾಲ, ನಾಗಚಂದ್ರನ ಕಾಲ, ಕುಮಾರವ್ಯಾಸನ ಕಾಲ, ಷಡಕ್ಷರಿಯ ಕಾಲ ಎಂಬುದಾಗಿ ಪ್ರಮುಖಕವಿಯ ಹೆಸರನ್ನು ಹಿಡಿದು ಕಾಲವಿಭಾಗಗಳನ್ನು ಮಾಡಿಕೊಳ್ಳುವುದೂ ಹಲವು ಬಗೆಯ ಕಾಲವಿಭಾಗಗಳಲ್ಲಿ ಒಂದು ಎಂಬುದು ಅವರ ಸೂಚನೆಯಾಗಿತ್ತು. ಆದರೆ ಅವರು ಒಟ್ಟಿನಲ್ಲಿ ಅಂಗೀಕಾರಮಾಡಿದ್ದು ಮತೀಯ ಕಾಲ ವಿಭಾಗವನ್ನು. ಈಚೆಗೆ ಕೆ. ವೆಂಕಟರಾಮಪ್ಪನವರು ತಮ್ಮ 'ಕನ್ನಡ ಸಾಹಿತ್ಯ' ಎಂಬ ಕಿರುಹೊತ್ತಿಗೆಯಲ್ಲಿ 'ಪಂಪನ ಯುಗ' ಎಂಬುದಾಗಿ ಒಂದಂಶದ ಮಟ್ಟಿಗೆ ಈ ಕ್ರಮವನ್ನು ಸ್ವೀಕಾರಮಾಡಿದರು. ಈ ಬಗೆಯ ವಿಭಾಗಕ್ರಮ ಡಾ. ರಂ. ಶ್ರೀ. ಮುಗಳಿಯವರಿಗೆ ಹೆಚ್ಚು ಸಮರ್ಪಕವೆಂದು ತೋರಿ, ಅವರು 'ಕನ್ನಡ ಸಾಹಿತ್ಯ ಚರಿತ್ರೆ' ಎಂಬ ತಮ್ಮ ಗ್ರಂಥದ ರಚನೆಯಲ್ಲಿ ಅದನ್ನು ಪ್ರಮುಖವಾಗಿಟ್ಟುಕೊಂಡರು. ನಿರೂಪಣೆಯ

ಘಟ್ಟಗಳಿಗೆ ಪಂಪಪೂರ್ವ ಯುಗ, ಪಂಪ ಯುಗ, ಬಸವ ಯುಗ, ಕುಮಾರವ್ಯಾಸ ಯುಗ ಎಂಬುದಾಗಿ ಶೀರ್ಷಿಕೆಗಳನ್ನು ಕೊಟ್ಟರು. ಶ್ರೀಯುತರು ಈ ಬಗ್ಗೆ ತಮ್ಮ ಸಮರ್ಥನೆಯನ್ನು ಹೀಗೆ ಮುಂದಿಟ್ಟಿದ್ದಾರೆ: "ಸಾಹಿತ್ಯ ಚರಿತ್ರೆಯಲ್ಲಿ ಮತತತ್ತ್ವಕ್ಕಿಂತ ಕವಿವ್ಯಕ್ತಿ ಹೆಚ್ಚು ಗಣ್ಯನು, ಕವಿಕೃತಿ ಹೆಚ್ಚು ಬೆಲೆಯುಳ್ಳುದು. ಒಂದೊಂದು ಕಾಲದಲ್ಲಿ ಅಂಥ ಕವಿವ್ಯಕ್ತಿಗಳೂ ಕೃತಿಗಳೂ ಜನ್ಮತಾಳಿ ಬಹುಮಟ್ಟಿಗೆ ಸಮಾನವಾದ ಒಂದು ಸಾಹಿತ್ಯಿಕ ಬಾಂಧವ್ಯಕ್ಕೆ ಒಳಗಾಗಿರುತ್ತವೆ. ಈ ಬಳಗಕ್ಕೆ ಹಿರಿಯನಾದ ಒಬ್ಬ ಮಾರ್ಗ ಕವಿ ಇಲ್ಲವೆ ಭಕ್ತಕವಿ ಹಳೆಯದರ ತಿರುಳನ್ನು ತನ್ನಲ್ಲಿ ಅಳವಡಿಸಿಕೊಂಡು ಹೊಸ ದಾರಿಯನ್ನೆ ಬೆಳಗಿದ್ದಾನೆ. ಆ ಬೆಳಕಿನಲ್ಲಿ ಕೆಲವು ಕವಿಗಳೂ ಭಕ್ತರೂ ನಡೆದಿದ್ದಾರೆ...."[೪೩]

ಅಲ್ಲದೆ ಅವರು ಇದರ ಮಿತಿಗಳನ್ನು ಕೆಲಮಟ್ಟಿಗೆ ಸೂಚಿಸಿದ್ದಾರೆ. ಈ ವಿಭಾಗ ವಿಶಾಲವಾದ್ದು, ಎಂದರೆ ವ್ಯಾಪ್ತಿಗಿಂತ ಹೆಚ್ಚು ದೂರ ಹರಡಿಕೊಳ್ಳುವಂತಹದು; ಮುಂದು ಮುಂದಿನ ಯುಗಕ್ಕೆ ಕಾಲಿಟ್ಟಂತೆ ಸಮ್ಮಿಶ್ರತೆ ಹೆಚ್ಚುವ ಸಾಧ್ಯತೆಯಿರುವಂತಹದು, ಎಂದರೆ ಯುಗದ ಪ್ರಮುಖಕವಿಯೆಂದು ಹೇಳುವವನ ಪ್ರಭಾವ ಆ ನಿರ್ದಿಷ್ಟವಾದ ಅವಧಿಯ ಕವಿಗಳ ಮೇಲೆ ಮಾತ್ರವಲ್ಲದೆ ಆ ಶತಮಾನಕ್ಕೆ ಮುಂದಿನ ಅವಧಿಯ ಕವಿಗಳ ಮೇಲೆಯೂ ಕಾಣುವ ಸಾಧ್ಯತೆಯಿರುವಂತಹದು. ಹೀಗಾಗಿ ವ್ಯಕ್ತಿಪರವಾದ ಈ ಯುಗ ನಿರ್ದೇಶನದೊಂದಿಗೆ ಬೇರೆಯ ವಿಭಾಗಕ್ರಮವನ್ನು ವಿವೇಚನೆಗೆ ಕೂಡಿಸಿಕೊಳ್ಳುವುದಾಗಿ ಅವರು ಹೇಳುತ್ತಾರೆ.

ಈ ವಿವೇಚನೆಗೆ ಪೂರ್ವದಲ್ಲಿ ಕೊಂಚಮಟ್ಟಿನ ಜಿಜ್ಞಾಸೆಯನ್ನು ಅವರು ಮಾಡಿದ್ದಾರೆ: "ಪ್ರಧಾನಕವಿಯೆಂಬುದೊಂದನ್ನೇ ತಳಹದಿಯಾಗಿಟ್ಟುಕೊಂಡು ಪಂಪ ಯುಗ, ಬಸವ ಯುಗ, ಕುಮಾರವ್ಯಾಸ ಯುಗ, ತಿರುಮಲಾರ್ಯ ಯುಗ ಎಂದು ವಿಭಾಗ ಮಾಡಬಹುದು. ಆಯಾ ಯುಗದ ಮಾರ್ಗ ಕವಿ ಇಲ್ಲವೆ ಭಕ್ತಕವಿಗಳಲ್ಲಿ ಹಿರಿಯರಾಗಿ, ಆಯಾ ಯುಗಕ್ಕೆ ಮೊದಲಿಗರಾಗಿ ಅವರವರು ಕನ್ನಡ ಸಾಹಿತ್ಯಕ್ಕೆ ಅಪೂರ್ವ ಹಾಗೂ ಉಜ್ವಲವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ತಮ್ಮತಮ್ಮ ಯುಗದ ಮೇಲೆ ಕೆಲಮಟ್ಟಿನ ಪ್ರಭಾವ ಬೀರಿದ್ದಾರೆ. ಅವರು ಆಯಾ ಮತಧರ್ಮಗಳ ಶ್ರೇಷ್ಠ ಪ್ರತಿನಿಧಿಗಳಾಗಿ ಜೈನ, ವೀರಶೈವ, ವೈಷ್ಣವ, ಶ್ರೀವೈಷ್ಣವ ತತ್ತ್ವಪ್ರಣಾಲಿಗಳನ್ನು ತಮ್ಮ ಸಾಹಿತ್ಯರೂಪದಲ್ಲಿ ಪ್ರತಿಪಾದಿಸಿದ್ದಾರೆ. ಈ ರೀತಿಯಲ್ಲಿ ಮುಂದುವರಿದು ಪಂಪ-ರನ್ನ, ಬಸವ-ಹರಿಹರ, ಕುಮಾರವ್ಯಾಸ-ಪುರಂದರದಾಸ, ತಿರುಮಲಾರ್ಯ-ಷಡಕ್ಷರಿ ಹೀಗೆ ಕವಿದ್ವಯರ ಹೆಸರಿನಲ್ಲಿ ಯುಗಗಳನ್ನು ಹೆಸರಿಸಿ ಸಾಹಿತ್ಯಿಕ ಹಾಗೂ ಇತರ ಪ್ರಭಾವಗಳನ್ನು ಸೂಚಿಸಬಹುದು. ಆಯಾ ಯುಗದಲ್ಲಿ ಆಯಾ ಮಹಾವ್ಯಕ್ತಿಗಳ ಪ್ರಭಾವ ಸಾರ್ವತ್ರಿಕವಾಗಿಲ್ಲ. ಅತ್ಯಂತ ಸಂಕೀರ್ಣವಾದ ಮೂರನೆಯ ಯುಗದಲ್ಲಿಯಂತೂ ಯಾರೊಬ್ಬರ ಪ್ರಭಾವವು ಉಳಿದೆಲ್ಲರ ಮೇಲೆ ಅಥವಾ ಬಹುಜನ ಕವಿಗಳ ಮೇಲೆ ಆಗಿದೆ ಎಂದು ಹೇಳುವಂತಿಲ್ಲ. ಆದರೆ ಒಟ್ಟಿನಲ್ಲಿ ಅವರವರ ಜೀವನ ದೃಷ್ಟಿ-ಸಾಹಿತ್ಯ ದೃಷ್ಟಿಗಳ ವರ್ಚಸ್ಸು ಇಲ್ಲವೆ ಸಾನ್ನಿಧ್ಯ ಬಹುಶಃ ಆಯಾ ಯುಗದಲ್ಲಿ ಕಾಣಬರುತ್ತದೆ ಎಂಬುದನ್ನು ಗಮನಿಸಬೇಕು."[೪೪]

ಈ ಜಿಜ್ಞಾಸೆಯಲ್ಲಿ ಈ ಯುಗದ ಬಲ ದೌರ್ಬಲ್ಯಗಳೆರಡನ್ನೂ ಹೇಳಿದಂತಾಗಿದೆ. ಯುಗಕವಿಪ್ರಭಾವದ ಸಾರ್ವತ್ರಿಕತೆಯ ಅಭಾವ, ಉತ್ತರೋತ್ತರ ಕಾಲದಲ್ಲಿ ಕಂಡು ಬರುವ ಪ್ರಭಾವಸಮ್ಮಿಶ್ರತೆ ಇವು ದೋಷಗಳು. ವಿವಿಧ ಹಾಗೂ ದೀರ್ಘ ಕಾಲಾವಧಿಯ ಬಹುಸಂಖ್ಯೆಯ ಕವಿಗಳಲ್ಲಿ ಭಾಷೆ, ಶೈಲಿ, ವಸ್ತು ಮುಂತಾದ ಅಂಶಗಳಲ್ಲಿ ನಿಚ್ಚಟವಾಗಿ ಕಂಡುಬರುವ ಯುಗಕವಿಯ ಗಾಢ ಅಥವಾ ಅಲ್ಪ ಪ್ರಮಾಣದ ಪ್ರಭಾವಮುದ್ರೆ ಇಲ್ಲಿಯ ಗುಣ. ಕನ್ನಡ ಸಾಹಿತ್ಯದ ಇತಿಹಾಸವನ್ನು ತೌಲನಿಕವಾಗಿ ಪರಿಶೀಲಿಸಿ ಮೌಲ್ಯ ಮಾಪನ ಮಾಡುವುದಾದರೆ, ಈ ವಿಭಾಗಕ್ರಮದಲ್ಲಿ ಪ್ರಾಯಃ ದೌರ್ಬಲ್ಯಕ್ಕಿಂತ ಬಲದ ಪಾಲು ಹೆಚ್ಚೆಂದು ತೋರುವಂತಿದೆ. ಆದ್ದರಿಂದ ಈ ಬಗೆಯ ವಿಭಾಗ ಗ್ರಾಹ್ಯವಾಗಲು ಹೆಚ್ಚು ಅಡ್ಡಿಯಿರಲಾರದು. ಪರೋಕ್ಷವಾಗಿ ಇದು ಒಂದು ದೃಷ್ಟಿಯಲ್ಲಿ ವಿಶೇಷಗ್ರಾಹ್ಯ ವಾದ ಮತೀಯ ಕಾಲವಿಭಾಗದ ಇನ್ನೊಂದು ರೂಪವೂ ಆಗಬಹುದು.

ಈಚೆಗೆ ತ. ಸು. ಶಾಮರಾಯರು ತಮ್ಮ ಎರಡು ಸಾಹಿತ್ಯ ಚರಿತ್ರೆಗಳಲ್ಲಿಯೂ ಈ ವಿಭಾಗ ಕ್ರಮಕ್ಕೆ ಆದ್ಯತೆಕೊಟ್ಟಿದ್ದಾರೆ. ಇವರು ಪ್ರಮುಖಕವಿ ಕಾಲವಿಭಾಗಕ್ರಮ ದೊಳಗೆ ಮತೀಯ ಮತ್ತು ಇತರ ವಿಭಾಗ ಕ್ರಮಗಳನ್ನು ಯಥೋಚಿತವಾಗಿ ಹೊಂದಿಸುವ ಪ್ರಯತ್ನಮಾಡಿದ್ದಾರೆ. ಮುಖ್ಯಾಂಶದಲ್ಲಿ ಅವರು ಮುಗಳಿಯವರ ಕಾಲವಿಭಾಗವನ್ನು ಅನುಮೋದಿಸುವುದು ಕಾಣುತ್ತದೆ. ಆದರೆ ಒಂದಂಶದಲ್ಲಿ ಬೇರೆಯಾಗಿದ್ದಾರೆ. ತಮ್ಮ ವಿಚಾರವನ್ನು ಅವರು ಹೀಗೆ ಮಂಡಿಸಿದ್ದಾರೆ: "ಶ್ರೀ ರಂ. ಶ್ರೀ ಮುಗಳಿಯವರ ವಿಭಾಗ ಕ್ರಮ ನಿಜವಾಗಿಯೂ ಸ್ವೀಕಾರಾರ್ಹವಾದುದು. ಆದರೆ ಅವರು 'ಬಸವ ಯುಗ' ಎಂದು ಕರೆದಿರುವುದು ಸರಿಯೆ? ಬಸವಣ್ಣನವರನ್ನು ಕೇವಲ ಕವಿಯೆಂದೂ ಸಾಹಿತಿಯೆಂದೂ ಸ್ವೀಕರಿಸುವುದು ನಮಗೆ ಒಪ್ಪಿಗೆಯಾಗುತ್ತಿಲ್ಲ. ಆತನೊಬ್ಬ ದೊಡ್ಡ ಸಂತ. 'ನೂರು ಕಾವ್ಯದ ಸಾರ ಒಂದು ಸಾಕ್ಷಾತ್ಕಾರ.' ಆದ್ದರಿಂದ 'ಸಂತನಾಗಲು ಬಲ್ಲ ಅವನು, ಸುಧೀರ ಮತಿ, ಕವಿಯಾಗಲೊಲ್ಲ'. ಆತನೂ ಇತರ ವಚನಕಾರರೂ ಮುಂದಿನ ಕವಿಗಳಿಗೆಲ್ಲ ಪ್ರಚೋದನೆ ಪ್ರೇರಣೆಗಳನ್ನು ನೀಡಿರುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ದಾರ್ಶನಿಕರಾದ ಅವರನ್ನು ಕೇವಲ ಕವಿಗಳ ಸಾಲಿನಲ್ಲಿ ಕುಳ್ಳಿರಿಸಲು ನಾವು ಒಪ್ಪು ವುದಿಲ್ಲ. ಆದ್ದರಿಂದ ನಾವು ಆ ಕಾಲಮಾನವನ್ನು 'ಹರಿಹರನ ಯುಗ' ಎಂದು ಕರೆ ದಿದ್ದೇವೆ. 'ಪಂಪಪೂರ್ವ ಯುಗ', 'ಪಂಪಯುಗ', 'ಹರಿಹರ ಯುಗ', 'ಕುಮಾರವ್ಯಾಸ ಯುಗ' ಎಂಬುದು ನಮ್ಮ ವಿಭಾಗ ಕ್ರಮ."[45]

ಕನ್ನಡ ಸಾಹಿತ್ಯ ಚರಿತ್ರಕಾರರು ಒಬ್ಬೊಬ್ಬ ಯುಗಕವಿಯ ಅಥವಾ ಪ್ರಮುಖ ಕವಿಯ ಪ್ರಭಾವ ಆಯಾ ಯುಗದ ಇತರ ಕವಿಗಳ ಮೇಲೆ ಯಾವ ಯಾವ ವಿಧದಲ್ಲಿ ಮತ್ತು ಯಾವ ಯಾವ ಪ್ರಮಾಣದಲ್ಲಿ ಬಿದ್ದಿದೆಯೆಂಬುದನ್ನು ತಮ್ಮ ತೌಲನಿಕ ಪರಿ ಶೀಲನದಿಂದ ಎಷ್ಟೆಷ್ಟು ವ್ಯಾಪಕವಾಗಿ ತೋರಿಸಲು ಸಮರ್ಥರಾಗುವರೊ ಅಷ್ಟಷ್ಟು ಮಟ್ಟಿಗೆ ಆಯಾ ಯುಗಕ್ಕೆ ಇಟ್ಟ ಆಯಾ ಕವಿಯ ಹೆಸರು ಹೆಚ್ಚು ಅರ್ಥವತ್ತಾಗುತ್ತದೆ, ಔಚಿತ್ಯ ಪೂರ್ಣವಾಗುತ್ತದೆ. ಆ ಕೆಲಸ ಇನ್ನೂ ನಡೆಯಬೇಕಾಗಿದೆ.

## ಸಮ್ಮಿಶ್ರ ಕಾಲವಿಭಾಗ

ಎಫ್. ಕಿಟ್ಟೆಲ್, ಬಿ. ಎಲ್. ರೈಸ್ ಮತ್ತು ಆರ್. ನರಸಿಂಹಾಚಾರ್, ಇ. ಪಿ. ರೈಸ್ ಅವರು ಲಕ್ಷಿಸಿದ ಮತೀಯ ಕಾಲವಿಭಾಗವನ್ನು 'ಶುದ್ಧ ಸಾಹಿತ್ಯ ದೃಷ್ಟಿಯಿಂದ', ಮತ್ತು 'ಕವಿಕರ್ಮಕ್ಕೆ ಮೂಲ ಕಾರಣವಾದ ಸ್ಫೂರ್ತಿ ವಿಶೇಷವನ್ನು ಗಮನಿಸಿ', ಮೊದಲ ಸಲ 'ಕನ್ನಡನಕ್ಕಿ' ಎಂಬ ಉಪನಾಮದ ಲೇಖಕರು ಕ್ಷಾತ್ರ ಯುಗ, ಮತಪ್ರಚಾರಕ ಯುಗ, ಸಾರ್ವಜನಿಕ ಯುಗ, ಆಧುನಿಕ (ವೈಜ್ಞಾನಿಕ) ಯುಗ ಎಂಬುದಾಗಿ ವಿಭಜಿಸುವುದರ ಮೂಲಕ ಅಲಕ್ಷಿಸಿದರು. ಈ ವಿಭಾಗ ಕ್ರಮವನ್ನು ಅವರು ಹೀಗೆ ಸಮರ್ಥಿಸಿದರು: "ಮೊದಲ ಯುಗದಲ್ಲಿ (ಕ್ರಿ.ಶ. ೧೦-೧೧ನೆಯ ಶತಮಾನ) ಕರ್ಣಾಟಕ ಕ್ಷಾತ್ರಪ್ರವೃತ್ತಿಗಳ ಕ್ಷೇತ್ರವಾಯಿತು. ಆದ್ದರಿಂದ ಆಗಿನ ಆಸ್ಥಾನಗಳಲ್ಲಿ ಬಹುಮಟ್ಟಿಗೆ ಹಲವು ಅರಸು ಮನೆತನಗಳ ನಡುವಣ ನಿರಂತರ ಹೋರಾಟಗಳಿಂದ "ಕವಿಕರ್ಮಕ್ಕೆ ವೀರರಸವೇ ಪ್ರಧಾನ ರಸವಾಯಿತು. ಆ ಕಾಲದ ಕವಿಗಳನೇಕರು ತಾವರಿಯದೆಯೇ ತಮ್ಮ ಗ್ರಂಥಗಳಲ್ಲಿ ವೀರರಸವನ್ನು ಹೆಚ್ಚಾಗಿ ಪೋಷಿಸಿದರು."[46] ಎರಡನೆಯ ಯುಗದಲ್ಲಿ (೧೨ರಿಂದ ೧೬ನೆಯ ಶತಮಾನದ ವರೆಗೆ) "ಜೈನರೂ, ವೀರಶೈವರೂ, ಬ್ರಾಹ್ಮಣರೂ ತಮ್ಮ ತಮ್ಮ ಮತದ ಮೇಲ್ಮೆಯನ್ನು ತೋರ್ಪಡಿಸುವುದಕ್ಕಾಗಿಯೂ, ಮತತತ್ತ್ವಗಳನ್ನು ಜನರಿಗೆ ಬೋಧಿಸಿ ಪ್ರಚಾರಪಡಿಸುವುದಕ್ಕಾಗಿಯೂ ಅನೇಕ ಪುರಾಣಗಳನ್ನೂ ಕಾವ್ಯಗಳನ್ನೂ ಬರೆದರು; ಈ ಕಾಲದ ಗ್ರಂಥಗಳಲ್ಲಿ ಒಂದು ಮತದ ಉತ್ಕೃಷ್ಟತೆಯನ್ನು ತೋರಿಸುವುದು ಮಾತ್ರವೇ ಅಲ್ಲದೆ ಪರಮತದೂಷಣವನ್ನು ಮಾಡುವುದೂ ಒಂದು ಲಕ್ಷಣವಾಗಿದೆ...."[47] ಮೂರನೆಯ ಯುಗದಲ್ಲಿ (೧೬ರಿಂದ ೧೯ನೆಯ ಶತಮಾನದವರೆಗೆ) "ನೂರಾರು ಕವಿಗಳು, ರಾಜರಿಗಲ್ಲ, ತಮ್ಮ ಪೋಷಕರಿಗಲ್ಲ, ಸಮಾಜಕ್ಕೆ, ದೇಶಕ್ಕೆ ನೂರಾರು ಗ್ರಂಥಗಳನ್ನು ಬರೆದರು. ಜನಸಾಮಾನ್ಯಕ್ಕಾಗಿ ಈ ಕಾಲದ ಕವಿಗಳು ಬರೆದುದಾದ ಕಾರಣ ಸುಲಭವಾದ, ಸರಳವಾದ ಸರಣಿಯನ್ನನುಸರಿಸಿದರು....; ಜನಸಾಮಾನ್ಯರಲ್ಲಿ ಜ್ಞಾನವನ್ನು ಹೆಚ್ಚಿಸುವುದೇ ಈ ಕಾಲದ ಮುಖ್ಯ ಆಶಯವಾದುದರಿಂದ ಶಾಸ್ತ್ರ, ಇತಿಹಾಸ, ಜೀವನ ಚರಿತ್ರೆ, ವಿಡಂಬನ, ಕಥೆ ಮುಂತಾದ ಗದ್ಯ ಪದ್ಯ ಗ್ರಂಥಗಳ ರಚನೆಯಾಯಿತು....; ಹರಿದಾಸರ ಪದಗಳೊಂದಿಗೆ ವೀರಶೈವ ಕವಿಗಳ ರಗಳೆಗಳೂ ವಚನಗಳೂ ಸೇರಿ ಸಾರ್ವಜನಿಕರ ಸಾಹಿತ್ಯಾಭಿರುಚಿಯನ್ನು ಹೆಚ್ಚಿಸಿದುವು. ಹೆಚ್ಚಿಸುವುದಕ್ಕಿಂತಲೂ ಅಧಿಕವಾಗಿ ಸಾರ್ವಜನಿಕರ ಸಾಹಿತ್ಯಾಭಿರುಚಿಯನ್ನು ಪರಿಶುದ್ಧಪಡಿಸಿದುವು"[48]. ನಾಲ್ಕನೆಯ ಯುಗದಲ್ಲಿ (೧೯ನೆಯ ಶತಮಾನದಿಂದ)...."ಕನ್ನಡ ಸಾಹಿತ್ಯವು ಒಂದು ನವೀನ ಬೆಳವಳಿಕೆಗೆ ಒಳಗಾಯಿತು. ಇಸ್ಲಾಮಿ ಮತ್ತು ಈಸಾಯಿ ಸಂಸ್ಕೃತಿಯ ಸಂಬಂಧದಿಂದ ಸಾಹಿತ್ಯ ರೂಪಗಳೇ ಬದಲಾಯಿಸಿದುವು; ಸರಣಿಯ ಮಾರ್ಗವೇ ಬೇರೆಯಾಯಿತು. ಕವಿಗಳ ಆಶಯಗಳೇ ಬದಲಾದುವು....".[49]

ಈ ಹೊಸ ವಿಭಾಗ ಕ್ರಮ ಮುಂದಿನ ಸಾಹಿತ್ಯ ಚರಿತ್ರಕಾರರಲ್ಲಿ ಕೆಲವರಿಗೆ ಹಿಡಿಸಿತು. ಕೆಲವರ ಉದಾರ ಮೆಚ್ಚುಗೆಯನ್ನೂ ಗಳಿಸಿತು.[50] ಕೆ. ವೆಂಕಟರಾಮಪ್ಪನವರು 'ಕನ್ನಡ

ಸಾಹಿತ್ಯ'ದಲ್ಲಿ ಪ್ರತ್ಯೇಕವಾದ ಇನ್ನೊಂದು ಸಮ್ಮಿಶ್ರ ವಿಭಾಗವನ್ನು ಸೂಚಿಸಿ, "ಯಾವ ಒಂದು ಕಾಲದಲ್ಲಿಯೂ ಒಂದೇ ಮತದವರು ಗ್ರಂಥರಚನೆ ಮಾಡಿಲ್ಲ. ಆದ್ದರಿಂದ ಈ ವಿಭಾಗಕ್ರಮವನ್ನು ಬಿಟ್ಟು ಆಯಾ ಕಾಲದಲ್ಲಿ ಪ್ರಧಾನವಾದ ಕವಿಗಳ ಹೆಸರನ್ನು ಅಥವಾ ಆಯಾ ಕಾಲದ ಕಾವ್ಯಗಳ ವೈಶಿಷ್ಟ್ಯವನ್ನು ಸೂಚಿಸುವ ಒಂದು ಹೆಸರನ್ನು ಕೊಡಲು ಇಲ್ಲಿ ಯತ್ನಿಸಿದೆ"—ಎಂದು ಅದಕ್ಕೆ ತಮ್ಮ ಸಮಾಧಾನವನ್ನು ಕೊಟ್ಟರು.[51] ಇದರ ಸಮರ್ಥನೆಯನ್ನು ಅವರು ಹೀಗೆ ಮಾಡಿದ್ದಾರೆ: ಮೊದಲ ಯುಗದಲ್ಲಿ: "ಪಂಪನೇ ಈಚಿನ ಎಲ್ಲ ಕವಿಗಳಿಗೂ ಮೇಲ್ಪಂಕ್ತಿಯಾಗಿದ್ದಾನೆ. ಸುಮಾರು ೧೨೦೦ರ ವರೆಗೆ ಕನ್ನಡ ದಲ್ಲಿ ಅನೇಕ ಚಂಪೂ ಗ್ರಂಥಗಳು ಹುಟ್ಟಿದುವು. ಅವೆಲ್ಲ ಬಹಳ ಮಟ್ಟಿಗೆ ಪಂಪನ ಮಾರ್ಗ ವನ್ನು ಅನುಸರಿಸಿ ಬರೆದಂಥವು. ಎರಡನೆಯ ಯುಗದಲ್ಲಿ: "ಸುಮಾರು ಕ್ರಿಸ್ತಶಕ ೧೧೬೦ರ ವೇಳೆಗೆ ಪ್ರಸಿದ್ಧಿಗೆ ಬಂದ ಬಸವಣ್ಣನು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಹಾದಿಯನ್ನು ಹಾಕಿಕೊಟ್ಟನು." ಮೂರನೆಯ ಯುಗದಲ್ಲಿ: "ಹೀನಸ್ಥಿತಿಯಲ್ಲಿದ್ದ ಕನ್ನಡ ಸಾಹಿತ್ಯವು ಪುನಃ ತಲೆಯೆತ್ತಿದುದು ಮೈಸೂರರಸರ ಕಾಲದಲ್ಲಿಯೇ." ಹೀಗೆಯೇ ಸಂಧಿ ಕಾಲವೆಂಬ ನಾಲ್ಕನೆಯ ಯುಗದಲ್ಲಿ "ರಾಜಾಶ್ರಯದಿಂದ ಜನಾಶ್ರಯಕ್ಕೂ ಹಳೆಯ ಶೈಲಿ ಯಿಂದ ಹೊಸ ಶೈಲಿಗೂ ಸಂಕ್ರಮಣ ನಡೆಯಿತು." ಆ ಮುಂದಿನದು ಆಧುನಿಕಕಾಲ.[52]

ತ. ಸು. ಶಾಮರಾಯರು ಮೊದಲ ಸಾಹಿತ್ಯ ಚರಿತ್ರೆಯಲ್ಲಿ ಒಟ್ಟಿನಲ್ಲಿ ಪ್ರಮುಖ ಕವಿ ತತ್ತ್ವವನ್ನು ಗ್ರಾಹ್ಯಮಾಡಿದರೂ ಮೂರನೆಯದನ್ನು ಸ್ವಾತಂತ್ರ್ಯ ಯುಗವೆಂದೂ ನಾಲ್ಕನೆಯದನ್ನು ಷಟ್ಪದೀ ಯುಗವೆಂದೂ ಮುಂತಾಗಿ ಕರೆಯುವಲ್ಲಿ ಈ ಬಗೆಯ ಕಾಲ ವಿಭಾಗಕ್ಕೆ ಎಡೆಮಾಡಿದರು.

ರಂ. ಶ್ರೀ. ಮುಗಳಿಯವರು ಈ ಬಗೆಯ ಕಾಲವಿಭಾಗದಲ್ಲಿ ಆಯಾ ಸಾಹಿತ್ಯ ಚರಿತ್ರ ಕಾರರು ಇಟ್ಟುಕೊಂಡಿರುವ ಯುಗಗಳ 'ಬೇರಿತನ'ವು ಅಷ್ಟೇನೂ ಅನಿವಾರ್ಯವಾಗಿಲ್ಲ ಎಂಬುದನ್ನು ಸಕಾರಣವಾಗಿ ವಾದಿಸಿ ತೋರಿಸಲಾಗಿ, ಈಚಿನ ಸಾಹಿತ್ಯ ಚರಿತ್ರೆಗಳಲ್ಲಿ ಈ ಬಗೆಯ ಕಾಲವಿಭಾಗಗಳ ಪ್ರಾಮುಖ್ಯ ಹೋಗಿರುವಂತೆ ಕಾಣುತ್ತದೆ.

'ಕನ್ನಡವಕ್ಕಿ'ಗಳ ವಿಭಜನ ಕ್ರಮವನ್ನು ತಾವು ಒಪ್ಪದಿರುವುದಕ್ಕೆ ಮುಗಳಿಯವರು ಕೊಡುವ ಕಾರಣ ಹೀಗೆ: "ಮತಪರವಾದ ವಿಭಾಗಕ್ರಮಕ್ಕೆ ಪರ್ಯಾಯವಾಗಿ ಶುದ್ಧ ಸಾಹಿತ್ಯ ದೃಷ್ಟಿಯ ಕ್ರಮವಿರುವುದು ಯುಕ್ತವೇ ಆಗಿದೆ. ಆದರೆ ಅದು ಕೊನೆಯ ವರೆಗೆ ಶುದ್ಧವಾಗಿ ಉಳಿಯಬೇಕು. 'ಕನ್ನಡವಕ್ಕಿ'ಗಳ ವಿಭಜನೆಯಲ್ಲಿ ಗ್ರಾಹ್ಯ ಅಂಶ ಗಳಿದ್ದರೂ ಅದು ತನ್ನ ಮೂಲದೃಷ್ಟಿಗೆ ಎರವಾಗಿದೆ. ವೀರರಸ ಪ್ರಧಾನವಾದ ಕ್ಷಾತ್ರ ಯುಗ ಎಂದು ಮೊದಲನೆಯ ಯುಗವನ್ನು ಕರೆಯುವಾಗ ವೀರರಸದಷ್ಟೇ ಶಾಂತರಸವು ಈ ಯುಗದ ಕೃತಿಗಳಲ್ಲಿ ತನಿಗೊಂಡಿದೆ ಎಂಬುದನ್ನೂ ಮತಧರ್ಮದ ಆವೇಶವು ಕವಿ ಕರ್ಮಕ್ಕೆ ಸ್ಫೂರ್ತಿ ಕೊಟ್ಟಿದೆ ಎಂಬುದನ್ನೂ ಧ್ಯಾನಿಸಬೇಕು. ಎರಡನೆಯದನ್ನು 'ಮತ ಪ್ರಚಾರಕ ಯುಗ' ಎಂದು ಕರೆದದ್ದರಲ್ಲಿ ಶುದ್ಧ ಸಾಹಿತ್ಯ ದೃಷ್ಟಿ ಎಲ್ಲಿದೆ? ಈ ಮೊದಲಿ ಗಿಂತ ಎರಡನೆಯ ಯುಗದಲ್ಲಿ ಮತಪ್ರಚಾರವು ಹೆಚ್ಚಾಗಿ ನಡೆದಿರಬಹುದು ಎಂದು

ಒಪ್ಪಿದರೂ ಕವಿಕರ್ಮಕ್ಕೆ ಅದೇ ಮುಖ್ಯವಾಗಿ ಸ್ಫೂರ್ತಿಕೊಟ್ಟಿತೆ? ಶರಣರ ವಚನಗಳು, ಹರಿಹರನ ರಗಳೆಗಳು, ರಾಘವಾಂಕನ ಕಾವ್ಯಗಳು ಇವುಗಳ ಸಾರವತ್ತಾದ ಭಾಗವೆಲ್ಲ ಮತಪ್ರಚಾರಕವೇ? ಹಾಗಿದ್ದರೆ ಪಂಪನನ್ನರೂ ಅದನ್ನೇ ಮಾಡಿಲ್ಲವೇ? ಯಾರೋ ಕೆಲವರಲ್ಲಿ, ಯಾವುದೋ ಕೆಲವು ಭಾಗದಲ್ಲಿ ಮತಪ್ರಚಾರದ ಅತಿರೇಕಾಂಶಗಳು ತೋರಿದ್ದರ ಮೇಲಿಂದ ಇಡೀ ಯುಗವನ್ನು ಮತಪ್ರಚಾರಕ ಎನ್ನಬಹುದೆ? ಈ ಕಾಲದಲ್ಲಿ ಭೋಗಾಸಕ್ತಿ ಹೆಚ್ಚಿ ಶೃಂಗಾರರಸವು ಪ್ರಧಾನವಾಯಿತೆಂಬುದು ಇನ್ನೂ ಅರ್ಥವಾಗದ ಮಾತು. ಮತಪ್ರಚಾರಕ ಯುಗದಲ್ಲಿ ಶೃಂಗಾರರಸಕ್ಕೆ ಪ್ರಾಧಾನ್ಯ ಬಂದಿತೆಂಬುದು ಆಭಾಸವಾಗಿ ತೋರುತ್ತದೆ. ವೀರಶೈವ ಸಾಹಿತ್ಯ ಈ ಕಾಲದಲ್ಲಿ ಸಂಪನ್ನವೂ ಸಮೃದ್ಧವೂ ಆಗಿದೆ. ಅದರ ಜೀವಾಳ ಶೃಂಗಾರರಸ ಎನ್ನಬಹುದೆ? ಮೂರನೆಯದಾದ ಸಾರ್ವಜನಿಕ ಯುಗವೆಂಬ ಹೆಸರು ಅತಿವ್ಯಾಪ್ತಿ ದೋಷದಿಂದ ಕೂಡಿದೆ. ಎರಡನೆಯ ಯುಗದಿಂದಲೇ ಸಾಹಿತ್ಯಕ್ಕೂ ಜನಸಾಮಾನ್ಯಕ್ಕೂ ನೇರವಾದ ಸಂಬಂಧವುಂಟಾಗಿದೆ. ಭಕ್ತಿರಸವು ಪ್ರಧಾನ ರಸವಾಗಿದೆ. ದಾಸವಾಙ್ಮಯದಿಂದ ಮೂರನೆಯ ಯುಗದಲ್ಲಿ ಸಾಹಿತ್ಯದ 'ಸಾರ್ವಜನಿಕತೆ' ಹೆಚ್ಚಿತು. 'ನೂರಾರು ಕವಿಗಳು' ತಮ್ಮ ಆಶ್ರಯದಾತರಿಗಾಗಿ ಬರೆಯದೆ ಸಮಾಜಕ್ಕಾಗಿ 'ನೂರಾರು ಗ್ರಂಥ'ಗಳನ್ನು ಬರೆದರೆನ್ನುವದು ಈ ಯುಗದ ಕೇವಲ ವೈಶಿಷ್ಟ್ಯವೆಂದಾಗದು.[53] ಮುಂದುವರಿದು 'ಕನ್ನಡ ಸಾಹಿತ್ಯ' ಗ್ರಂಥಕರ್ತೃಗಳ ವಿಭಾಗಕ್ರಮವನ್ನೂ ಅವರು "ಒಂದು ಯುಗದಲ್ಲಿ ಪ್ರಧಾನ ಕವಿ, ಇನ್ನೊಂದರಲ್ಲಿ ಪ್ರಮುಖ ಲಕ್ಷಣ ಇಲ್ಲವೆ ಸಾಹಿತ್ಯ ದೃಷ್ಟಿ, ಮೂರನೆಯದರಲ್ಲಿ ಪ್ರಧಾನ ಲೇಖಕ ಹೀಗೆ ವಿಭಾಗಕ್ರಮದ ತಳಹದಿ ಬೇರೆ ಬೇರೆಯಾಗಿದೆ. ಈ ಬೇರೆತನವು ಅಷ್ಟೇನೂ ಅನಿವಾರ್ಯವಾಗಿಲ್ಲ"— ಎಂದು ತಿರಸ್ಕರಿಸಿದ್ದಾರೆ;[54] ಈಚೆಗೆ ಆ ಗ್ರಂಥಕರ್ತೃಗಳೂ ಅದನ್ನು ಒಪ್ಪಿಕೊಂಡಿದ್ದಾರೆ.[55]

ಮುಗಳಿಯವರ ವಾದಸರಣಿಯಲ್ಲಿ ತಿರುಳಿದೆ. ಅಭ್ಯಾಸಕ್ಕೆ ಏಕಸೂತ್ರತೆಯಿರುವ ಯಾವುದಾದರೂ ತತ್ತ್ವವನ್ನಿಟ್ಟುಕೊಳ್ಳುವುದೇ ಸಮಂಜಸವಾದ್ದು; ಪ್ರವೃತ್ತಿ, ಭಾಷೆ, ಮತಧರ್ಮ, ಪೋಷಕ ಪ್ರಭು, ಸಾಹಿತ್ಯರೂಪ ಇವುಗಳು ಅಂಥ ಕೆಲವು ತತ್ತ್ವಘಟಕಗಳು ಎಂದು ಈಗಾಗಲೇ ನಾವು ಕಂಡಿದ್ದೇವೆ.

## ಶತಮಾನಾನುಪೂರ್ವಿ ಕಾಲವಿಭಾಗ

ಕಿಟ್ಟೆಲ್ ಮತ್ತು ಲೂಯಿ ರೈಸ್ ಮತೀಯ ಮತ್ತು ಭಾಷಿಕ ಕಾಲವಿಭಾಗಗಳ ಸೂಚನೆಯನ್ನು ಮಾಡಿದರೂ ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಬಂಧಗಳಲ್ಲಿ ಅನುಸರಿಸಿದ್ದು ಶತಮಾನಾನುಪೂರ್ವಿಯನ್ನು. ಆರ್. ನರಸಿಂಹಾಚಾರ್ಯರು ಕೂಡ ಇದೇ ಕಾಲವಿಭಾಗವನ್ನು ಅನುಸರಿಸಿ 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳನ್ನೂ History of Kannada Literature ಎಂಬ ಗ್ರಂಥವನ್ನೂ ಬರೆದಿದ್ದಾರೆ. ಈಚೆಗೆ ಕೆ. ವೆಂಕಟರಾಮಪ್ಪನವರು ಪ್ರಕಟಿಸಿದ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿಯೂ ಇದೇ ಕ್ರಮವಿದೆ.

ಕನ್ನಡ ಸಾಹಿತ್ಯದಲ್ಲಿ ಕವಿಗಳೂ ಕೃತಿಗಳೂ ಕಾಣಿಸಿಕೊಳ್ಳುವ ವರ್ಷಮಾನವನ್ನು, ಎಂದರೆ ಕಾಲಾನುಪೂರ್ವಿಯನ್ನು ಅನುಸರಿಸಿ ಕನ್ನಡ ಸಾಹಿತ್ಯವನ್ನು ಅಭ್ಯಾಸಮಾಡು ವುದು ಮತ್ತು ರಚಿಸುವುದು ಈ ವಿಭಾಗದ ಕ್ರಮ. ಮತೀಯ ಮತ್ತು ಭಾಷಿಕ ಕಾಲ ವಿಭಾಗಗಳಿಗೆ ಇ. ಪಿ. ರೈಸ್ ಮತ್ತು ಬಿ. ಎಂ. ಶ್ರೀಕಂಠಯ್ಯನವರು ಕೊಟ್ಟ ಪ್ರಾಮುಖ್ಯ ದಿಂದಲೋ ಮತ್ತಾವ ಕಾರಣದಿಂದಲೋ ಶತಮಾನುಪೂರ್ವಿಯ ಈ ಕಾಲವಿಭಾಗಕ್ಕೆ ಪ್ರಾಶಸ್ತ್ಯ ದೊರೆಯಲಿಲ್ಲ.

ಒಂದು ಶತಮಾನದಲ್ಲಿ ಕಾಲಾನುಪೂರ್ವಿಯನ್ನು ಹಿಡಿದು ಕಾಣಿಸಿಕೊಳ್ಳುವ ಕವಿಗಳ ನ್ನೆಲ್ಲಾ ಅನುಕ್ರಮವಾಗಿ ಅಭ್ಯಾಸಮಾಡುವಾಗ, ಮೊದಲು ಆ ಶತಮಾನದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜನಜೀವನಗಳ ರೂಪರೇಷೆಗಳನ್ನು ಸ್ಥೂಲವಾಗಿಯೂ ಸಂಗ್ರಹವಾಗಿಯೂ ತಿಳಿದುಕೊಂಡು, ಆ ಹಿನ್ನೆಲೆಯಲ್ಲಿ ಕವಿಕಾವ್ಯ ವಿಚಾರವನ್ನು ತಿಳಿಯುವ ಕ್ರಮ ಉಪಯುಕ್ತವಾದ್ದು. ಈ ಕ್ರಮವನ್ನು ಅನುಸರಿಸುವುದ ರಿಂದ ಒಂದು ಗೊತ್ತಾದ ಕಾಲ ಮತ್ತು ಆ ಕಾಲದ ಕವಿಗಳ ಮೇಲೆ ಪ್ರಭಾವ ಬೀರಿದ ಅನೇಕ ಗಮನಾರ್ಹವಾದ ಅಂಶಗಳನ್ನು ನಾವು ತಿಳಿದಂತಾಗುತ್ತದೆ. ಅಲ್ಲದೆ ಕವಿಯ ಮನೋಧರ್ಮ ಮತ್ತು ಆತನ ಕೃತಿಯ ವಸ್ತುರಚನೆಯಲ್ಲಿ ಕಂಡುಬರುವ ಅನೇಕ ರಾಜಕೀಯ ಸಾಮಾಜಿಕ ಆದಿಯಾದ ಸಂಗತಿಗಳ, ಸನ್ನಿವೇಶಗಳ ಸರಿಯಾದ ತಿಳಿವಳಿಕೆಗೆ ಅವಕಾಶ ದೊರೆಯುತ್ತದೆ. ಏಕೆಂದರೆ ಒಂದು ಕಾಲದ ರಾಜಕೀಯ ಸಾಮಾಜಿಕ ಮುಂತಾದ ಸ್ಥಿತಿಗತಿಗಳು ಆ ಕಾಲದಲ್ಲಿ ಬಾಳಿದ ಕವಿಯ ಮೇಲೆ ಕೂಡ ತಮ್ಮ ಪ್ರಭಾವ ವನ್ನು ಅಂಕಿಸಿಯೇ ಇರುತ್ತವೆ, ಕನ್ನಡ ಸಾಹಿತ್ಯ ಚರಿತ್ರೆಯ ರಚನೆ ಅಭ್ಯಾಸಗಳಿಗೆ ಶತಮಾನುಪೂರ್ವಿಯಾದ ಕಾಲವಿಭಾಗವನ್ನು ಅನುಸರಿಸುವುದೇ ಹಲವು ದೃಷ್ಟಿಗಳಿಂದ ಸೂಕ್ತವಾದ್ದು, ಅತ್ಯಂತ ಉಪಯುಕ್ತವಾದ್ದು ಎಂದು ತೋರುತ್ತದೆ.

## ಪ್ರಕೃತ ಗ್ರಂಥದಲ್ಲಿ ಅನುಸರಿಸಿರುವ ಕಾಲವಿಭಾಗ

ಆದಿಕಾಲದಿಂದ ಸು. ೮೫೦ರ ವರೆಗೆ; ಕ್ರಿ.ಶ. ಸು. ೮೫೦—ಸು. ೧೧೫೦, ಕ್ರಿ.ಶ. ಸು. ೧೧೫೦—ಸು. ೧೩೫೦ ; ಕ್ರಿ.ಶ. ಸು. ೧೩೫೦—ಸು. ೧೬೫೦ ; ಕ್ರಿ.ಶ.ಸು. ೧೬೫೦ —ಸು. ೧೮೫೦ ; ಕ್ರಿ.ಶ.ಸು. ೧೮೫೦—ಸು. ೧೯೭೦ ಎಂಬುದಾಗಿ ಕಾಲಮಾನವನ್ನು ವಿಭಜಿಸಿಕೊಂಡು ಆಯಾ ಅವಧಿಯಲ್ಲಿ ಕಾಣಿಸಿಕೊಳ್ಳುವ ಕವಿಗಳ ವಿಚಾರವನ್ನೂ ರಚಿತ ವಾದ ಗ್ರಂಥಗಳ ವಿಚಾರವನ್ನೂ ಯಥೋಚಿತ ಪ್ರಮಾಣದಲ್ಲಿ ಪರಿಶೀಲಿಸುವುದು ಇಲ್ಲಿಯ ವಿಭಾಗಕ್ರಮ ಮತ್ತು ನಿರೂಪಣ ವಿಧಾನ. ಜೊತೆಗೆ ಮೊದಲಲ್ಲಿ ಹಿನ್ನೆಲೆ, ಕೊನೆಯಲ್ಲಿ ಕೆಲವು ವಿಶೇಷರೂಪಗಳ ಮತ್ತು ವಿಷಯಗಳ ಪ್ರತ್ಯೇಕ ಪರಿಶೀಲನೆ ಇವುಗಳೂ ಸೇರಿರು ತ್ತವೆ.

ಮತಧರ್ಮ, ಭಾಷೆ, ಸಾಹಿತ್ಯರೂಪ, ರಾಜವಂಶ ಈ ಮುಂತಾದ ಕೆಲವು ತತ್ತ್ವ ಗಳನ್ನು ಅನ್ವಯಿಸಿದರೆ ಒಟ್ಟಿನಲ್ಲಿ ಎಲ್ಲಕ್ಕೂ ಹೊಂದಿಕೊಳ್ಳುವಂತಿರಬೇಕು; ಆದರೆ ಶತ

ಶತ ವರ್ಷಗಳ ಕನ್ನಡ ಸಾಹಿತ್ಯದ ಪ್ರವಾಹರೂಪಿಯಾದ ಇತಿಹಾಸವನ್ನು ಅನುಸ್ಯೂತವಾಗಿ ನಿರೂಪಿಸುವ ಒಂದು ತರ್ಕಶುದ್ಧವಾದ ಮಾರ್ಗವೂ ಆಗಿರಬೇಕು; ಪೂರ್ವಾಪರ ಸಂಬಂಧಗಳೊಡನೆ, ಪ್ರವೃತ್ತಿಗಳೊಡನೆ ಕೂಡಿಸಿಕೊಂಡು ಪ್ರತಿಯೊಬ್ಬ ಕವಿಯನ್ನೂ ಪ್ರತಿಯೊಂದು 'ಕೃತಿಯನ್ನೂ ಪರಿಚಯ ಮಾಡಿಕೊಳ್ಳುವ, ಮೌಲ್ಯಮಾಪನಮಾಡುವ ಸೌಕರ್ಯವಿರಬೇಕು. ಈ ಮುಂತಾದ ಕೆಲವಂಶಗಳು ಇಲ್ಲಿ ಈ ವಿಭಾಗಕ್ರಮದ ಆಯ್ಕೆಗೆ ಕಾರಣವಾಗಿವೆ.

ಭಾರತೀಯ ಜನಜೀವನ ಮತ್ತು ಸಾಹಿತ್ಯಿಕ ಹಿನ್ನೆಲೆ, ದಕ್ಷಿಣ ಭಾರತದ ಇತರ ಭಾಷಾಸಾಹಿತ್ಯಗಳ ಸಾಮಾನ್ಯ ಸ್ಥಿತಿಗತಿಗಳು, ಕರ್ನಾಟಕದ ಜನತೆಯ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿದ್ಯಮಾನಗಳು, ಭಾಷಾಗತಿ—ಇವನ್ನು ಹಿನ್ನೆಲೆಯಾಗಿಟ್ಟುಕೊಂಡು ಇವುಗಳ ಬೆಳಕಿನಲ್ಲಿ ಕನ್ನಡ ಸಾಹಿತ್ಯದ ಚಟುವಟಿಕೆಗಳನ್ನು ಹೆಚ್ಚು ವಿಶದವಾಗಿ ತಿಳಿದುಕೊಳ್ಳುವುದು ಉಪಯುಕ್ತವೆಂದು ಭಾವಿಸಿ, ಒಳವಿವರಗಳಲ್ಲಿ ಅವನ್ನೂ ಯಥೋಚಿತವಾದ ಪ್ರಮಾಣದಲ್ಲಿ ನಿರೂಪಿಸಲಾಗುವುದು. ಬಿಡಿಬಿಡಿಯಾಗಿ ಆಯಾ ಕಾಲಮಾನದಲ್ಲಿ ಹುಟ್ಟಿದ ಸಾಹಿತ್ಯ ಗುಣದ ಶಾಸನಗಳು ಮತ್ತು ಕವಿಗಳು, ಸಾಹಿತ್ಯ ಪ್ರಕಾರಗಳ ಉಗಮ ಮತ್ತು ವಿಕಾಸ ಈ ಸಂಬಂಧವಾದ ಸಂಗತಿಗಳನ್ನೂ ಸಂದರ್ಭೋಚಿತವಾದ ಇತರ ವಿಷಯಗಳನ್ನೂ ವಿವರಿಸಲಾಗುವುದು. ನಿರ್ದಿಷ್ಟ ಕಾಲಮಾನದಲ್ಲಿ ಹುಟ್ಟಿದ ಕನ್ನಡ ಸಾಹಿತ್ಯದ ವೈಶಿಷ್ಟ್ಯ ಮತ್ತು ಸಿದ್ಧಿಗಳನ್ನು ಗುರುತಿಸಿ ಆಯಾ ಅವಧಿಯ ಪರಿಶೀಲನೆಯನ್ನು ಮುಗಿಸಲಾಗುವುದು.

## ಅಡಿಟಿಪ್ಪಣಿಗಳು

1 Robert E. Spiller : Literary History, *The Aims and Methods of Scholarship in Modern Languages and Literatures*, p. 43.

2 ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ (ಕೆಲವು ಸಮಸ್ಯೆಗಳು), 'ಸಮರ್ಪಣೆ', ಪು. ೨೨೩.

3 ಬಿ. ಎಂ. ಶ್ರೀಕಂಠಯ್ಯ, 'ಕನ್ನಡ ಕೈಪಿಡಿ', ಸಂ. ೨, ಪು. ೪೦೩.

4 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮುನ್ನುಡಿ, ಪು. iii.

5 ಡಿ. ಎಲ್. ನರಸಿಂಹಾಚಾರ್, ಸಾಹಿತ್ಯ ಚರಿತ್ರೆಯ ಸ್ವರೂಪ, 'ಪೀಠಿಕೆಗಳು ಲೇಖನಗಳು', ಪು. ೧೦೦೧.

6 ಎಫ್. ಕಿಟ್ಟೆಲ್, 'ನಾಗವರ್ಮನ ಕನ್ನಡ ಛಂದಸ್ಸು', p. lxxxi "May the present volume form a small contribution towards a History of Canarese Literature!"

7 Weigle, 'Canares Sprache U. Literatur', *Zeitschrift der Deutschen Morgenlandischen Gesselschaft*, II, pp. 257–84.

8 ಬಿ. ಎಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೩೯೬.

9 ಎಫ್. ಕಿಟ್ಟೆಲ್, Old Kanarese Literature, *IA.*, IV, pp. 15–21.

10 ಬಿ. ಎಲ್. ರೈಸ್, *Nagavarmma's Karnataka Bhasha-Bhushana*, p. xxxvii, "No such complete statement has ever before been made public".

11 ಬಿ. ಎಲ್. ರೈಸ್, Early History of Kannada Literature, *JRAS.*, 1890, pp. 245–62.

12 'ಕನ್ನಡ ಕೈಪಿಡಿ' (ಭಾಗ-೨)ಯ ೩೯೯ನೆಯ ಪುಟದಲ್ಲಿ, 'ಕವಿಚರಿತೆ'ಯನ್ನು ಉಲ್ಲೇಖಿಸುವಾಗ "ಮೂರನೆಯ ಭಾಗವನ್ನೂ ಪ್ರಕಟಿಸಿ ಕವಿಚರಿತೆಯನ್ನು ಪೂರ್ಣಗೊಳಿಸುವುದರಲ್ಲಿದ್ದಾರೆ" ಎನ್ನುತ್ತಾರೆ. 'ಕವಿಚರಿತೆ'ಯ ಮೂರನೆಯ ಭಾಗ ಪ್ರಕಟವಾದದ್ದು ೧೯೨೯ರಲ್ಲಿ.

13 Rev. F. Kittel, B.M.S., An Essay on Canarese Literature, *Nagavarma's Canarese Prosody*, Mangalore, 1875, pp. XXIV, XLVIII, LIX.

14 Lewis Rice, M.R.A.S., (i) The Kannada Language ; Kannada Literature ; *Nagavarmma's Karnataka Bhasha-Bhushana*, Bangalore, 1884, pp. vi; X. (ii) The Literature of Karnataka, *Bhattakalanka Deva's Karnataka-Sabdanusasanam*, Bangalore, 1890, pp. 12–13.

15 *Kittel's Kannada-English Dictionary*, Madras, 1968, Intro. pp. XVIII-XIX.

16 ಆರ್. ನರಸಿಂಹಾಚಾರ್ಯ, 'ಕರ್ಣಾಟಕ ಕವಿಚರಿತೆ', ಬೆಂಗಳೂರು, ೧೯೬೧, ಅವತರಣಿಕೆ, ಪು. ೧೨–೧೩ ; *HKL.*, p. 17.

17 E. P. Rice, *A History of Kanarese Literature*, Calcutta, 1921, pp. 15-16.

18 ಕನ್ನಡವಕ್ಕಿ, ಕರ್ಣಾಟಕ ಸಾಹಿತ್ಯ, 'ಕರ್ಣಾಟಕದ ಕೈಪಿಡಿ', ೧೯೨೫-೨೬ (?) ಪು. ೨೦೯–೨೨೧.

19 ಎಂ. ಎ. ದೊರೆಸ್ವಾಮಯ್ಯಂಗಾರ್ಯ, ರನ್ನನ ಯುಗ, 'ರನ್ನಕವಿ ಪ್ರಶಸ್ತಿ' ಮೈಸೂರು, ೧೯೨೮, ಪು. ೨೮.

20 ಬಿ. ಎಂ. ಶ್ರೀಕಂಠಯ್ಯ, 'ಕನ್ನಡ ಕೈಪಿಡಿ', ಸಂ. ೨, ಮೈಸೂರು, ೧೯೭೦, ಪು. ೨೪.

21 ಎನ್. ಕೆ. ಕುಲಕರ್ಣಿ, 'ಕನ್ನಡ ಸಾಹಿತ್ಯ ವಾಹಿನಿ', ಬೆಳಗಾವಿ, ೧೯೪೭, ಪು. ೩೯ ಮುಂ.

22 ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ', ಮೈಸೂರು, ೧೯೭೨, ಪು. vii–viii.

23 ರಂ.ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೧, ಪು. ೩೨-೪೦.

24 ಎಂ. ಮರಿಯಪ್ಪಭಟ್ಟ, 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೬೦, ಮುನ್ನುಡಿ, ಪು. ೮.

25 ತ. ಸು. ಶಾಮರಾಯ ಮೇ. ರಾಜೇಶ್ವರಯ್ಯ, 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೬೪, ಪು. IX—XV

26 ತ. ಸು. ಶಾಮರಾಯ, 'ಕನ್ನಡ ಸಾಹಿತ್ಯ ಚರಿತ್ರೆ : ಒಂದು ಸಮೀಕ್ಷೆ', ಮೈಸೂರು, ೧೯೭೨, ಪು. ೫-೯.

27 ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೪, ಪು. ೫–೬.

28–9 ಕಕಚ., ಸಂ. ೧, ಅವತರಣಿಕೆ, ಪು. ೧೨–೧೩.

30 E. P. Rice, ibid., p. 16.

31 ಕನ್ನಡವಕ್ಕಿ, ಪೂರ್ವೋಕ್ತ, ಪು. ೨೦೮-೦೯.

32 ಎಂ. ಎ. ದೊರೆಸ್ವಾಮಯ್ಯಂಗಾರ್ಯ, ಪೂರ್ವೋಕ್ತ, ಪು. ೨೮–೨೯.

33–4 ಬಿ. ಎಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೨೨–೨೩ ; ೨೩–೨೪.

35 ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ', ಪು. ೮.

36–7 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೩೬ ; ೪೦.
38 ತ. ಸು. ಶಾಮರಾಯ, ಪೂರ್ವೋಕ್ತ, ಪು. ೮.
39 ಎನ್. ಕೆ. ಕುಲಕರ್ಣಿ, ಪೂರ್ವೋಕ್ತ, ಪು. ೩೫–೩೬.
40 ಸಂ. ಶಿ. ಶಿ. ಬಸವನಾಳ, 'ಶಬರಶಂಕರವಿಳಾಸಂ', ಧಾರವಾಡ, ೧೯೩೯, ಪೀಠಿಕೆ, ಪು. ೮.
41 ಆರ್. ನರಸಿಂಹಾಚಾರ್, ಪೂರ್ವೋಕ್ತ, ಅವತರಣಿಕೆ, ಪು. ೧೦–೧೧.
42–4 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೩೮ ; ೪೦ ; ೩೯.
45 ತ. ಸು. ಶಾಮರಾಯ, ಪೂರ್ವೋಕ್ತ, ಪು. ೯.
46–9 ಕನ್ನಡವಕ್ಕಿ, ಪೂರ್ವೋಕ್ತ, ಪು. ೨೧೦ ; ೨೦೪ ; ೨೧೯–೨೦ ; ೨೨೧.
50 ವಾಙ್ಮಯ ಸೇವಕ, ಕರ್ನಾಟಕ ವಾಙ್ಮಯ ಕಾಲವಿಭಾಗಗಳು, ಕಸಾಪ., ಏಪ್ರಿಲ್ ೧೯೨೬, ಪು. ೫೯.
51–52 ಕೆ. ವೆಂಕಟರಾಮಪ್ಪ, ಪೂರ್ವೋಕ್ತ, ಪು. ೮.
53–54 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೩೮–೩೯ ; ೩೯.
55 ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ ಚರಿತ್ರೆ', ಪು. ೬.

ಅಧ್ಯಾಯ ಎರಡು

# ಕವಿಗಳ ಕಾಲನಿರ್ಣಯ: ಆಧಾರಗಳು, ತೊಡಕುಗಳು

## ಪೀಠಿಕೆ

ಚರಿತ್ರೆಯ ರೂಪದಲ್ಲಿ ಸಾಹಿತ್ಯದ ಬೆಳವಣಿಗೆಯನ್ನು ಹಂತಹಂತವಾಗಿ ನಿರೂಪಿಸುವಾಗ, ನಿರ್ದಿಷ್ಟ ಕಾಲಕ್ರಮವನ್ನು ಅನುಸರಿಸುವುದು ಅಗತ್ಯವಾಗುತ್ತದೆ. ಕವಿಯ ಮತ್ತು ಆತ ಕೃತಿರಚನೆಮಾಡಿದ ಕಾಲ ಇವುಗಳ ಪರಿಜ್ಞಾನ ಎಷ್ಟೆಷ್ಟು ನಿಖರವಾಗಿ ನಮಗೆ ತಿಳಿದರೆ, ಅಷ್ಟಷ್ಟು ಸ್ಪಷ್ಟವಾಗಿ ಕವಿಯ ಕಾವ್ಯಶಕ್ತಿಯ ಸಾಮರ್ಥ್ಯ ದೌರ್ಬಲ್ಯಗಳೂ ಕೃತಿವಸ್ತುವಿನ ಮಹತ್ತ್ವ ಪ್ರಯೋಜನಗಳೂ ನಮಗೆ ಮನವರಿಕೆಯಾಗುವುದು ಸಾಧ್ಯ. ಈ ಕಾರಣಕ್ಕಾಗಿ, ಕವಿಯ ಮತ್ತು ಕವಿಕೃತಿಯ ಕಾಲದ ಪರಿಜ್ಞಾನ ಅಪೇಕ್ಷಣೀಯ. ಕವಿಯ ಮನಸ್ಸಿನ ಮೇಲೆ ಆಯಾ ಕಾಲದ ಸಂದರ್ಭ ಸನ್ನಿವೇಶಗಳು ಕಾರಣವಾಗಿ ಆಗಿರುವ ನಾನಾ ಪ್ರಭಾವ ಪರಿಣಾಮಗಳೂ ರಾಜಕೀಯ, ಸಾಮಾಜಿಕ ಮುಂತಾದ ಶಕ್ತಿ ಸಂಘರ್ಷಗಳೂ ಹೆಚ್ಚು ಹೆಚ್ಚು ವಿವರಗಳಲ್ಲಿ ತಿಳಿದುಬಂದ ಹಾಗೆಲ್ಲ ಕವಿಕೃತಿಯ ಮೌಲ್ಯಮಾಪನಕ್ಕೆ ಸರಿಯಾದ ಸೂತ್ರಗಳು ಸಿದ್ಧವಾಗುತ್ತವೆ. ಒಂದೊಂದು ಕಾಲದ ಜನಜೀವನದಲ್ಲಿ ಒಂದೊಂದು ಬಗೆಯ ಒಲವು ಒತ್ತಡಗಳು ಪ್ರಧಾನವಾಗಿದ್ದು, ಅವು ಸಮಾಜವನ್ನೂ ಆ ಸಾಮಾಜಿಕ ವರ್ತುಲದ ಒಳಗೆ ಬರುವ ಕವಿವ್ಯಕ್ತಿಯನ್ನೂ ಪೂರ್ಣವಾಗಿ ಅಥವಾ ಅಂಶತಃ ಒಳಕೊಳ್ಳುತ್ತವೆ. ಆ ಹಿನ್ನೆಲೆಯಲ್ಲಿ ಆತನನ್ನೂ ಆತನ ಕೃತಿಯನ್ನೂ ಇರಿಸಿ ಮೌಲ್ಯಗಳನ್ನು ವಿವೇಚಿಸುವುದೇ ಸೂಕ್ತವಾದ ಕ್ರಮ. ಇಲ್ಲವಾದರೆ ಹಳತು–ಹೊಸತು ಎಂಬ ದೃಷ್ಟಿಭೇದಗಳು ತೀವ್ರವಾದ ವ್ಯಕ್ತಿನಿಷ್ಠ ಮೌಲ್ಯಮಾಪನ ನಡೆಯುವಂತಾಗಿ, ಸಂಬಂಧಪಟ್ಟ ಕವಿಗೋ ಕೃತಿಗೋ ಅನ್ಯಾಯವಾಗುವ ಸಂಭವವಿರುತ್ತದೆ. ಈ ಕಾರಣಕ್ಕಾಗಿಯೂ ಕವಿಗಳ ಮತ್ತು ಅವರ ಕೃತಿಗಳ ಕಾಲವನ್ನು ನಿರ್ಣಯಿಸುವುದು ಅವಶ್ಯ.

ಕವಿಕಾಲನಿರ್ಣಯ ಸಂಬಂಧವಾಗಿ ಇರುವ ಆಧಾರಗಳು ಮತ್ತು ಕಂಡುಬರುವ ತೊಡಕುಗಳು ಯಾವ ರೀತಿಯಲ್ಲಿರುತ್ತವೆ ಎಂಬುದನ್ನು ತಿಳಿಯಲು ಬೇರೆ ಬೇರೆ ಭಾಷಾ ಸಾಹಿತ್ಯಗಳ ಚರಿತ್ರೆಯನ್ನು ಪರಿಶೀಲಿಸಬಹುದು; ಆದರೆ ಪ್ರಸ್ತುತ ಕನ್ನಡ ಸಾಹಿತ್ಯದಿಂದಲೇ ನಿದರ್ಶನಗಳನ್ನು ಎತ್ತಿಕೊಂಡು ವಿಚಾರಮಾಡುವ ಕ್ರಮವನ್ನು ಸಂದ

ಥೋಚಿತವೆಂಬ ಕಾರಣದಿಂದಲೂ ಸೌಲಭ್ಯದೃಷ್ಟಿಯಿಂದಲೂ ಇಲ್ಲಿ ಅನುಸರಿಸಿದೆ.

ಕವಿಗಳ ಮತ್ತು ಅವರ ಕೃತಿಗಳ ಕಾಲನಿರ್ಣಯ ಸಾಹಿತ್ಯ ಚರಿತ್ರೆಗೆ ಮೂಲಾಧಾರ. ಈ ವಿಷಯದಲ್ಲಿ ಕನ್ನಡ ಸಾಹಿತ್ಯದಮಟ್ಟಿಗೆ ಹೇಳುವುದಾದರೆ ತೊಡಕುಗಳೇ ಹೆಚ್ಚಾಗಿವೆ. ಪಾಶ್ಚಾತ್ಯ ದೇಶಗಳಲ್ಲಿ ಕವಿಗಳಿಗೆ, ಕೃತಿಗಳಿಗೆ ಸಂಬಂಧಿಸಿದಂತೆ ಅನೇಕ ವಿವರಗಳು ದೊರೆಯುತ್ತವೆ. ಕವಿಯ ಜೀವನ ಚರಿತ್ರೆ, ಆತ್ಮಕಥನ, ದಿನಚರಿ, ಪತ್ರಸಾಹಿತ್ಯ, ಪ್ರವಾಸಕಥನ, ಸಮಕಾಲೀನ ಹೇಳಿಕೆಗಳು, ಕೃತಿಸಂಬಂಧವಾದ ವಿಮರ್ಶೆ, ಪ್ರಶಸ್ತಿಗಳು, ಕವಿ ಬದುಕಿ ಬಾಳಿದ ಕಾಲದ ಚರಿತ್ರೆ. ರಾಜನೈತಿಕ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಕಲಾಪಗಳು, ಶಿಕ್ಷಣ ಸಂಸ್ಕೃತಿ ಮುಂತಾದ ವಿವರಗಳಿಗೆ ಸಂಬಂಧಪಟ್ಟ ದಾಖಲೆಗಳು—ಇವುಗಳೆಲ್ಲ ಆಯಾ ಭಾಷಾಸಾಹಿತ್ಯಗಳ ಇತಿಹಾಸ ರಚನೆಗೆ ಹೇರಳವಾಗಿ ದೊರೆಯುತ್ತವೆ. ಆದರೆ ನಮ್ಮ ದುರದೃಷ್ಟದಿಂದ ನಮ್ಮ ಭಾಷೆಯ ಪ್ರಾಚೀನ ಕವಿಗಳ ವಿಷಯಕ್ಕೆ ಸಂಬಂಧಪಟ್ಟ ಹಾಗೆ ತಿಳಿದುಬರುವ ಸಂಗತಿಗಳು ತೀರ ಕಡಮೆ. ಕೃತಿಕಾರನ ಹೆಸರು ತಿಳಿದರೆ ಅಷ್ಟಕ್ಕೇ ನಾವು ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ. ಎಷ್ಟೋ ವೇಳೆ ಕೃತಿಕಾರನ ಹೆಸರು, ಕಾಲ, ದೇಶ, ಮತ ಮುಂತಾದ ವಿವರಗಳು, ಆತನ ಕೃತಿ ಎಲ್ಲವೂ ಒಮ್ಮೊಮ್ಮೆ ಸಮಸ್ಯೆಯ ವಿಷಯಗಳಾಗಿರುತ್ತವೆ. ಒಂದೇ ಹೆಸರಿನ ಹಲವರು ಕವಿಗಳು, ಒಂದೇ ಹೆಸರಿನ ಹಲವರು ರಾಜರು, ತೇದಿಗಳಿಲ್ಲದ ಶಾಸನಗಳು, ಕೃತಕ ಶಾಸನಗಳು, ಕವಿಗಳ ಮತ್ತು ಕೃತಿಗಳ ವಿಷಯದಲ್ಲಿ ಬೆಳೆದುಬಂದಿರುವ ದಂತಕಥೆಗಳು—ಇಂತಹ ಹಲವು ಸಂಗತಿಗಳು ಕವಿಗಳ ಕೃತಿಗಳ ವಿಷಯದಲ್ಲಿ ನಿಜಾಂಶವನ್ನು ತಿಳಿಯಲು ಸರಿಸರಿಯಾಗಿ ತೊಡಕುಗಳನ್ನು ತಂದೊಡ್ಡುತ್ತವೆ. ಕವಿಯ ಜನ್ಮದಿನ ಅಥವಾ ಕೃತಿರಚನೆಯ ಕಾಲ ಇವುಗಳ ಸ್ಪಷ್ಟವಾದ ಉಲ್ಲೇಖ ಯಾವಾಗಲೂ ಅಪೇಕ್ಷಣೀಯವಾದ್ದು. ಆದರೆ ಇವು ದೊರೆಯುವುದು ವಿರಳ. ಹೋಗಲಿ, ಆತನು ಯಾವ ಶತಮಾನದಲ್ಲಿ, ಶತಮಾನದ ಯಾವ ದಶಕದಲ್ಲಿ ಜೀವಿಸಿದ್ದ ಎಂಬುದಾದರೂ ಸ್ಥೂಲವಾಗಿ ಗೊತ್ತಾಗುವ ಹಾಗಿದ್ದರೆ ಅದರಿಂದ ಕೃತಿಯ ವಸ್ತುವಿಮರ್ಶೆ ಮೌಲ್ಯಮಾಪನಗಳಿಗೆ ಎಷ್ಟೋ ಸಹಾಯವಾಗುತ್ತದೆ. ಇವು ಕೂಡ ಎಷ್ಟೋ ವೇಳೆ ಗೊತ್ತುಹತ್ತದೆ ಹೋಗುವುದುಂಟು; ವಿದ್ವಾಂಸರ ಶೋಧನೆಗಳು ಭಿನ್ನಮತಗಳಿಗೆ ಆಸ್ಪದಮಾಡಿ, ಬಹುಜನಸಮ್ಮತವಾದ ಒಂದು ಗ್ರಹಿಕೆಯೇ ಕಷ್ಟವಾಗುವುದುಂಟು; ಇದರಿಂದಾಗಿ ಕೃತಿಯ ವಸ್ತುವಿಮರ್ಶೆ ಮೌಲ್ಯಮಾಪನಗಳು ಏರುಪೇರಾಗುವುದೂ ಉಂಟು.

ಕವಿಗಳ, ಕೃತಿಗಳ ಕಾಲನಿರ್ಣಯದಲ್ಲಿ ಒದಗಿಬರುವ ಹಲವು ಆಧಾರಗಳನ್ನೂ ಅವುಗಳಲ್ಲಿ ಕಂಡುಬರುವ ವಿವಿಧವಾದ ತೊಡಕುಗಳ ಸ್ವರೂಪವನ್ನೂ ಉದಾಹರಣೆಗಳ ಮೂಲಕ ಇನ್ನು ಮುಂದೆ ವಿಶದಪಡಿಸಬಹುದಾಗಿದೆ.

ಕನ್ನಡದ ಸುದೈವದಿಂದ ಈ ಶತಮಾನದ ಆರಂಭದ ದಶಕಗಳಲ್ಲಿ ಈ ಬಗೆಯ ಕೆಲಸಕ್ಕೆ ಪಾಶ್ಚಾತ್ಯ ವಿದ್ವಾಂಸರಾದ ಎಫ್. ಕಿಟ್ಟೆಲ್ ಮತ್ತು ಬಿ. ಎಲ್. ರೈಸ್ ಇವರು

ಪ್ರಾಚೀನ ಗ್ರಂಥಗಳ ಪ್ರಕಟನೆಗಳ ಮೂಲಕವಾಗಿ ತೀವ್ರವಾದ ಚಾಲನೆಯನ್ನು ಕೊಟ್ಟರು. ಕಿಟ್ಟೆಲ್ ನಾಗವರ್ಮನ 'ಛಂದೋಂಬುಧಿ'ಗೆ (೧೮೭೫), ರೈಸ್ 'ಕರ್ಣಾಟಕ ಶಬ್ದಾನುಶಾಸನ'ಕ್ಕೆ (೧೮೯೦) ಬರೆದ ಕನ್ನಡ ಸಾಹಿತ್ಯೇತಿಹಾಸದ ಪ್ರಥಮ ಮೂಲ ರೇಖೆಗಳು, ಕನ್ನಡ ನಾಡಿನ ಮೂಲೆಮೂಲೆಗಳ ಮನೆಮಠಗಳ ಅಟ್ಟಗಳಲ್ಲಿ, ಕೊಠಡಿ ಗಳಲ್ಲಿ ಬಹಳ ಕಾಲದಿಂದ ಹುದುಗಿಕೊಂಡಿದ್ದು ಬೆಳಕು ಕಾಣದೆ ಇದ್ದ ಗ್ರಂಥಗಳ ಸ್ವರೂಪವನ್ನು ವಿವರದಲ್ಲಿ ತಿಳಿದುಕೊಳ್ಳಬೇಕು, ನಾಡಜನಕ್ಕೆ ತಿಳಿಯುವಂತೆ ಮಾಡ ಬೇಕು—ಎಂಬ ಪ್ರೇರಣೆಯನ್ನು ಸಹಜವಾಗಿಯೇ ಕೆಲವು ದೇಶೀಯ ವಿದ್ವಾಂಸರಲ್ಲಿ ಉಂಟುಮಾಡಿದುವು. ರೈಸ್ ಅವರ ಮಾರ್ಗದರ್ಶನದಲ್ಲಿ ವೈಜ್ಞಾನಿಕವಾಗಿಯೂ ವ್ಯವಸ್ಥಿತವಾಗಿಯೂ ಕೆಲಸಮಾಡುವ ರೀತಿಯನ್ನು ಅಭ್ಯಾಸಮಾಡಿ, ಅವರ ನಂತರದಲ್ಲಿ ಅಂದಿನ ಮೈಸೂರು ಪುರಾತತ್ತ್ವ ಇಲಾಖೆಯಲ್ಲಿ ನಿರ್ದೇಶಕರಾಗಿ ಕೆಲಸಮಾಡಿದ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ರಾಮಾನುಜಪುರಂ ನರಸಿಂಹಾಚಾರ್ಯರು ಕನ್ನಡ ಭಾಷಾಸಾಹಿತ್ಯಗಳ ಬಹುಸಂಖ್ಯೆಯ ಹಸ್ತಪ್ರತಿಗಳನ್ನು ಸ್ವಂತ ಪರಿಶ್ರಮದಿಂದ ಹುಡುಕಿ ತೆಗೆದರು. ಸ್ವಲ್ಪ ಕಾಲ ಶ್ರೀ ಎಸ್. ಜಿ. ನರಸಿಂಹಾಚಾರ್ಯರು ಅವರಿಗೆ ಸಹಾಯವಾದರು. ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳನ್ನು ದೊಡ್ಡ ಪ್ರಮಾಣದಲ್ಲಿ ಸಿದ್ಧಗೊಳಿಸಿದರು. (೧೯೦೭, ೧೯೧೯, ೧೯೨೯) ಇಲ್ಲಿ ವಿವಿಧ ಪ್ರಮಾಣಗಳನ್ನು ಅವಲಂಬಿಸಿ ಕವಿಗಳ ಕಾಲನಿರ್ಣಯವನ್ನು ಸಾಧ್ಯವಿದ್ದೆಡೆಯಲ್ಲೆಲ್ಲ ಸಮರ್ಪಕವಾಗಿ ಅವರು ಮಾಡಿದರು; ಪ್ರಮಾಣಗಳ ಕೊರತೆಯಿದ್ದೆಡೆ ಸ್ಥೂಲವಾದ ಕಾಲಮಿತಿಯನ್ನು ತಾತ್ಕಾಲಿಕವಾಗಿ ಸೂಚಿಸಿದರು. ಕವಿಚರಿತೆಯ ಸಂಪುಟಗಳು ಪ್ರಕಟವಾಗುತ್ತಿದ್ದಂತೆ ವಸ್ತುಸ್ಥಿತಿಯನ್ನು ತಿಳಿಯುವ ದೃಷ್ಟಿಯಿಂದ ಅವರ ಸೂಚನೆ ಗಳೂ ನಿರ್ಣಯಗಳೂ ವಿದ್ವಾಂಸರಿಂದ ಪರಿಶೀಲನೆ ಮರುಪರಿಶೀಲನೆಗಳಿಗೆ ಒಳಪಟ್ಟು ವಿಚಾರಮಥನಗಳು ನಡೆಯತೊಡಗಿದವು. ಇವರಲ್ಲಿ ದಿ. ಡಾ. ಎ. ವೆಂಕಟಸುಬ್ಬಯ್ಯ ನವರು ಪ್ರಮುಖಪಾತ್ರ ವಹಿಸಿದರು. 'ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ', ಮತ್ತು ಅದರ ಅನುಬಂಧವಾದ 'ಆಕ್ಷೇಪಗಳಿಗೆ ಪ್ರತ್ಯುಕ್ತಿ' ಇವು ಹಾಗೆ ಪರೀಕ್ಷೆಗಾಗಿ ಹುಟ್ಟಿದ ಲೇಖನಗಳ ಸಮುಚ್ಚಯಗ್ರಂಥ, ಗ್ರಂಥಭಾಗ. ಇಂಥ ಚರ್ಚೆಗಳಲ್ಲಿ ಪಾಲ್ಗೊಂಡ ಇತರರು ಎಂದರೆ ಎಂ. ಗೋವಿಂದಪೈ, ಎನ್. ಎಸ್. ರಾಜಪುರೋಹಿತ, ಟಿ. ಎಸ್. ವೆಂಕಣ್ಣಯ್ಯ, ಎಚ್. ಶೇಷ ಅಯ್ಯಂಗಾರ್, ಡಿ. ಎಲ್. ನರಸಿಂಹಾ ಚಾರ್ ಮುಂತಾದವರು.

ಪ್ರಸ್ತುತ ಕವಿಕಾಲನಿರ್ದೇಶನ ಸಂಬಂಧವಾದ ಆಧಾರಗಳನ್ನೂ ತೊಡಕುಗಳ ಸ್ವರೂಪ ಮತ್ತು ಪರಿಹಾರ ವಿಧಾನಗಳನ್ನೂ ಮುಂದೆ ಪ್ರಸ್ತಾಪಿಸಬಹುದು :

## ಕವಿಕೃತಿ ಸಾಕ್ಷ್ಯ : ಸಂಖ್ಯೆ ಮತ್ತು ಸಂಕೇತಗಳಲ್ಲಿ

ಕವಿಗಳು ತಾವು ಬರೆದ ಗ್ರಂಥಗಳಲ್ಲಿ ತಮ್ಮ ಕೃತಿರಚನೆಯ ಕಾಲವನ್ನು ನೇರವಾಗಿ

ಹೇಳಿರುವುದಾದರೆ, ಅದು ಒಳ್ಳೆಯ ಆಧಾರವಾಗಿ ಗ್ರಾಹ್ಯವಾಗುತ್ತದೆ. ಇವುಗಳಲ್ಲಿ ಸಂಖ್ಯೆಯ ಮೂಲಕ ಕಾಲಸೂಚನೆಯಿರುವುದು ಒಂದು ಕ್ರಮ; ಸಂಕೇತಗಳ ಮೂಲಕ ಕಾಲ ಸೂಚನೆಯಿರುವುದು ಇನ್ನೊಂದು ಕ್ರಮ. ಈಗ ಇವುಗಳಲ್ಲಿ ಒಂದೊಂದು ಕ್ರಮ ವನ್ನೂ ಪ್ರತ್ಯೇಕವಾಗಿ ಗಮನಿಸೋಣ.

ಕನ್ನಡದ ಮೊದಲನೆಯ ಪುರಾಣಕಾವ್ಯವನ್ನು ಇಲ್ಲಿ ಉದಾಹರಣೆಗೆ ಎತ್ತಿಕೊಳ್ಳ ಬಹುದು. ಪಂಪಕವಿ 'ಆದಿಪುರಾಣ'ದ ಆದಿಯಲ್ಲಿ ತಾನು ದುಂದುಭಿ ಸಂವತ್ಸರದಲ್ಲಿ ಹುಟ್ಟಿರುವುದಾಗಿ ಹೇಳಿಕೊಂಡಿದ್ದಾನೆ. ಈ ಸಂವತ್ಸರ ೬೦ ವರ್ಷಗಳಿಗೊಮ್ಮೆ ಆವೃತ್ತಿ ಗೊಳ್ಳುತ್ತದೆಯಾದ್ದರಿಂದ, ಯಾವ ದುಂದುಭಿಯೆಂಬುದು ನಿರ್ಣಯವಾಗುವುದಿಲ್ಲ. ಆದರೆ ಅದೇ ಗ್ರಂಥದ ಕೊನೆಯಲ್ಲಿ ಶಕವರ್ಷ ೮೦೦ಕ್ಕೆ ಕಡೆಯಲ್ಲಿ ೬೩ ಸಂದಾಗ ಬಂದ ಪ್ಲವಸಂವತ್ಸರದ ಕಾರ್ತಿಕಮಾಸದ ಶುಕ್ಲಪಕ್ಷದ ಪಂಚಮೀ ದಿನದಂದು ನಂದೀಶ್ವರ ದಲ್ಲಿ ತನ್ನ ಗ್ರಂಥವನ್ನು ಕವಿ ಬರೆದು ಪೂರೈಸಿದುದಾಗಿ ಸ್ಪಷ್ಟವಾಗಿ ಹೇಳಿರುವುದರಿಂದ ಅದು ಕ್ರಿ.ಶ. ೯೪೧ರಲ್ಲಿ (ಗುಣಿಸಿದ ಲೆಕ್ಕದಂತೆ ೧೬-೧೦-೯೪೨) ರಚಿತವಾಯಿತೆಂದು ಸ್ಪಷ್ಟವಾಗುತ್ತದೆ. ಇದರಿಂದ ಕವಿ ಹುಟ್ಟಿದ ದುಂದುಭಿ ಸಂವತ್ಸರವಾವುದೆಂಬುದೂ ನಿರ್ಣಯವಾಗಿ, ಕ್ರಿ.ಶ. ೯೦೨-೩ರಲ್ಲಿ ಕವಿ ಹುಟ್ಟಿದನೆಂಬುದು ತಿಳಿಯುತ್ತದೆ.

ಇನ್ನೊಂದು ಉದಾಹರಣೆ ಗಮನಿಸೋಣ: 'ತ್ರಿಷಷ್ಟಿಲಕ್ಷಣ ಮಹಾಪುರಾಣ' ಅಥವಾ 'ಚಾವುಂಡರಾಯ ಪುರಾಣ' ಎಂಬ ಪ್ರಾಚೀನ ಕನ್ನಡ ಗದ್ಯಕಾವ್ಯದ ಕರ್ತೃ ಚಾವುಂಡರಾಯ. ಈತ ತನ್ನ ಗ್ರಂಥರಚನೆ ಎಂದು ಮುಗಿಯಿತೆಂದು ತಿಳಿಸುವಲ್ಲಿ ಹೀಗೆ ಬರೆದಿದ್ದಾನೆ:

> ನವಶತಸಂಖ್ಯೆಯಾಗೆ ಶಕಕಾಲಕಮಂ ನೆಗಜ್ದೀಶ್ವರಾಬ್ದಮು
> ತ್ಸವಕರಮಾಗೆ ಫಾಲ್ಗುಣ ಸಿತಾಷ್ಟಮಿ ರೋಹಿಣಿ ಸೋಮವಾರಮೆಂ
> ಬಿವು ಶುಭದಂಗಳಾಗೆ ಪರಮೋತ್ಸವದಿಂ ಗುಣರತ್ನಭೂಷಣಂ
> ಕವಿಜನಶೇಖರಂ ಬರೆದು ಪುಸ್ತಕಕೇಱಿಸಿದಂ ಪುರಾಣಮಂ ॥

ಶಕ ೯೦೦ನೆಯ ಈಶ್ವರನಾಮ ಸಂವತ್ಸರದಲ್ಲಿ, ಫಾಲ್ಗುಣಮಾಸದ ಶುಕ್ಲಪಕ್ಷದ ಅಷ್ಟಮೀ ದಿನ ರೋಹಿಣೀ ನಕ್ಷತ್ರವಿರುತ್ತಿರಲು, ಸೋಮವಾರದಲ್ಲಿ 'ಚಾವುಂಡರಾಯ ಪುರಾಣ'ವನ್ನು ಬರೆದು ಮುಗಿಸಿತೆಂದು ಇಲ್ಲಿಯ ಹೇಳಿಕೆ. ಇತರ ತತ್ಕಾಲೀನ ಐತಿಹಾಸಿಕ ಸಾಕ್ಷ್ಯಗಳು ಜತೆಗೂಡಿ, ಚಾವುಂಡರಾಯನ ಕಾಲ ಇನ್ನೂ ನಿಖರಗೊಳ್ಳು ತ್ತದೆ. ರನ್ನ, ದುರ್ಗಸಿಂಹ, ಬಾಹುಬಲಿಪಂಡಿತ ಮುಂತಾದ ಕವಿಗಳ ಜೀವಿತಕಾಲ ಮತ್ತು ಕೃತಿರಚನಾಕಾಲಗಳ ವಿಚಾರದಲ್ಲೂ ಇಂಥ ನಿಸ್ಪೃಷ್ಟ ಸಾಕ್ಷ್ಯಗಳುಂಟು.

ಇಲ್ಲಿ ಒಮ್ಮೊಮ್ಮೆ ತೊಡಕುಗಳು ತಲೆದೋರುವ ಸಂಭವವಿರುವುದಕ್ಕೆ ನಿದರ್ಶನ ಗಳುಂಟು. ಸಂಬಂಧಿಸಿದ ಪದ್ಯ ಅಥವಾ ಗದ್ಯಭಾಗಗಳಲ್ಲಿ ಅಪಲಿಖಿತಗಳು ತಲೆ ದೋರುವುದರಿಂದಲೋ ಮತ್ತಾವ ಕಾರಣಗಳಿಂದಲೋ ಅಲ್ಲಿಯ ಆಶಯ ಸ್ಪಷ್ಟವಾಗದೆ

ಉಳಿಯಬಹುದು, ಸಂದಿಗ್ಧತೆ ತಲೆದೋರಬಹುದು. ಉದಾಹರಣೆಗೆ ಸೋಮರಾಜನ 'ಉದ್ಭಟಕಾವ್ಯ' ಶಕ ೧೧೪೪ನೆಯ ಚಿತ್ರಭಾನು ಸಂವತ್ಸರದಲ್ಲಿ ಬರೆಯಲ್ಪಟ್ಟಿತೆಂದು ಆ ಕಾವ್ಯದ "ಜನನಾಥೋತ್ತಮ ಸೋಮರಾಜನುಸಿರ್ದೀ ಕಾವ್ಯಂ...." ಎಂಬ (೧೨-೧೪೬) ಪದ್ಯದಿಂದ ತಿಳಿಯುತ್ತದೆ ಎಂದು ಕವಿಚರಿತೆಕಾರರು ಹೇಳಿದರೆ, ಇದನ್ನು ಆಕ್ಷೇಪಿಸುತ್ತ ಅಲ್ಲಿಯ 'ಸಾಸಿರದ ನೂಱುಂ ಸಂದ' ಎಂಬ ಭಾಗದ ಭಾಷಾರೂಪದ ಸೌಷ್ಠವವನ್ನು ವಿಮರ್ಶಿಸುತ್ತ ಡಾ. ಎ. ವೆಂಕಟಸುಬ್ಬಯ್ಯನವರೂ ಎಂ. ಗೋವಿಂದ ಪೈ ಅವರೂ ಗ್ರಂಥಕರ್ತೃವಿನ ಕಾಲವನ್ನು ೧೬ನೆಯ ಶತಮಾನಕ್ಕೆ ತಂದಿದ್ದಾರೆ.

'ತ್ರಿಪುರದಹನ ಸಾಂಗತ್ಯ'ದ ಕರ್ತೃ ಶಿಶುಮಾಯಣನ ಕಾಲದ ವಿಚಾರದಲ್ಲೂ "ಶಕವರ್ಷದ ಸಾವಿರದ ನೂಱಱುತೊಳುತ್ಸಕಲವಾದಾಱು ವತ್ಸರದ ಪ್ರಕಟಿತ ಪುತ್ರ ವರ್ಷದ...." ಎಂಬ ಉಕ್ತಭಾಗದಲ್ಲಿ 'ಪುತ್ರವರ್ಷ', 'ಉತ್ಸಕಲ' ಎಂಬ ಪದಗಳು ಹೀಗೆಯೇ ವಿಚಾರಕ್ಕೆ ವಿಷಯಗಳಾಗಿದ್ದು, ಇವುಗಳ ಅರ್ಥವು "ಇಂಥದೇ ಎಂದು ನಿರ್ಧರಿಸಲಾಗುವುದಿಲ್ಲವಾದ್ದರಿಂದ ಆ ಪದ್ಯದ ಆಧಾರಬಲದಿಂದ ಕವಿಯು ಜೀವಿಸಿದ್ದ ಕಾಲವನ್ನು ಗೊತ್ತುಮಾಡುವುದು ಅಸಾಧ್ಯವೆಂದೇ ಹೇಳಬೇಕು"—ಎಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ ಎ. ವೆಂಕಟಸುಬ್ಬಯ್ಯನವರು. ಈ ಕಾಲವಾಚಕ ಪದ್ಯವು ಇನ್ನೊಂದು ಹಸ್ತಪ್ರತಿಯಲ್ಲಿ "ಶಕವರ್ಷದ ಸಾವಿರದ ನಾನೂಱಱುತೊಳ್ವಿಕಲ ವಾದಾಱು ವತ್ಸರದ। ಪ್ರಕಟಿತ ಪುತ್ರವರ್ಷದ...." ಮುಂತಾಗಿ ಇದೆಯೆಂದು ಎಂ. ಗೋವಿಂದ ಪೈ ತೋರಿಸಿ, ಅದಕ್ಕೆ ಅನುಗುಣವಾಗಿ ಆ ಕವಿಯ ಕಾಲವನ್ನು ಕ್ರಿ.ಶ. ೧೪೭೨ ಎಂದು ನಿರ್ಣಯಿಸಿದ್ದಾರೆ. ಈ ಬಗೆಯ ಪಾಠಕ್ಲೇಶಗಳು ರನ್ನನ 'ಗದಾಯುದ್ಧ' ಮುಂತಾದ ಕೃತಿಗಳ ರಚನೆಯ ಕಾಲವಿಚಾರದಲ್ಲೂ ಕಂಡುಬರುತ್ತವೆ. ಇಂಥ ಸಂದರ್ಭಗಳಲ್ಲಿ ಒಮ್ಮೊಮ್ಮೆ, ರನ್ನನ ಕಾಲಸೂಚನೆಯ ಪದ್ಯದ ವಿಷಯದಲ್ಲಿ ಕಾಣುವಂತೆ ಆ ಬಗೆಯ ಉಲ್ಲೇಖಗಳು ಚಾರಿತ್ರಿಕ ಸಂಗತಿಗಳೊಡನೆ ತಾಳೆಯಾಗದೆ ಕ್ಲೇಶಗಳನ್ನು ಉಂಟುಮಾಡುತ್ತವೆ. ಆಗ್ಗೆ ಕೃತಿಯಲ್ಲಿ ಕಂಡುಬರುವ ಸ್ಪಷ್ಟ ಚಾರಿತ್ರಿಕ ಸಾಕ್ಷ್ಯಗಳನ್ನು ಸರಿಯಾಗಿ ವಿಶ್ಲೇಷಿಸಿ, ಕೃತಿರಚನೆಯ ಕಾಲವನ್ನು ಗುರುತಿಸುವುದು ಉತ್ತಮ ಪಕ್ಷ. ರನ್ನನ 'ಗದಾಯುದ್ಧ' ರಚಿತವಾದ ಕಾಲದ ವಿಷಯದಲ್ಲಿ ಈ ಕ್ರಮವನ್ನು ವಿದ್ವಾಂಸರು ಅನುಸರಿಸಿದ್ದಾರೆ.

ನೇರವಾಗಿ ಕಾಲನಿರ್ದೇಶನ ಮಾಡುವುದರಲ್ಲಿ, ಒಮ್ಮೊಮ್ಮೆ ಕವಿಗಳು ಪಾಂಡಿತ್ಯ ದೃಷ್ಟಿಯಿಂದಲೋ ಪ್ರಾಸಚ್ಛಂದೋನ್ವಯ ಸೌಕರ್ಯಕ್ಕಾಗಿಯೋ ಸುತ್ತುಬಳಸಿನ ಕ್ರಮಗಳನ್ನು ಅನುಸರಿಸುವುದೂ ಉಂಟು. ಉದಾಹರಣೆಗೆ ಬಾಹುಬಲಿ ಪಂಡಿತನು 'ಧರ್ಮನಾಥಪುರಾಣ'ವೆಂಬ ತನ್ನ ಕೃತಿಯನ್ನು ಬರೆದು ಮುಗಿಸಿದ ಕಾಲವನ್ನು ಈ ಪದ್ಯದಲ್ಲಿ ಹೀಗೆ ಸೂಚಿಸಿದ್ದಾನೆ:

ಸ್ವಸ್ತಿ ಶ್ರೀಶಕವತ್ಸರಂ ಸಲೆ ಚತುಸ್ಸಪ್ತಪ್ತಯೈಕಾಂಕವಿ
ನ್ಯಸ್ತಂ ಸಂದಸವರ್ಷದಲ್ಲಿ ಮಧುಮಾಸಶ್ವೇತಪಕ್ಷಾಷ್ಟಮೀ

ವಿಸ್ತಾರೀಕೃತ ಸೋಪಮಾರದೊಳಿದಂ ಸಂಪೂರ್ಣಮಂ ಮಾಡಿದಂ
ಪ್ರಸ್ತುತ್ಯಪ್ರತಿಭಾಪರಂ ಭುಜಬಲಿಪ್ರಖ್ಯಾತಯೋಗೀಶ್ವರಂ ॥

ಇಲ್ಲಿ "ಅಂಕಾನಾಂ ವಾಮತೋ ಗತಿಃ" ಎಂಬ ಸೂತ್ರಾನುಸಾರವಾಗಿ ಎಡಗಡೆಯಿಂದ ಏಕ, ದ್ವಯ, ಸಪ್ತ, ಚತುರ್ ಎಂಬ ಸಂಖ್ಯೆಗಳನ್ನು ಓದಿಕೊಂಡು ಶಕ ೧೨೭೪, ಎಂದರೆ ಕ್ರಿ.ಶ. ೧೩೫೨ರ ನಂದನವರ್ಷದಲ್ಲಿ ಗ್ರಂಥವನ್ನು ಪೂರೈಸಿತೆಂದು ತಿಳಿಯಬೇಕಾಗುವುದು.

ಇನ್ನೂ ಒಂದು ಈಚಿನ ಉದಾಹರಣೆ: ರಾಮರಸ ವಿರೂಪಾಕ್ಷನೆಂಬೊಬ್ಬ ಕವಿ 'ಹರಿಶ್ಚಂದ್ರ ಸಾಂಗತ್ಯ' ಎಂಬ ಕೃತಿಯನ್ನು

ಶಾಲಿವಾಹನ ಬಂದು ಬಾಳಿದ ಕಲಿಯೊಳ
ಗಾಳಿದ ಶಕವರ್ಷಗಳು
ಏಳರ ಇಮ್ಮಡಿ ತಾಳಿದ ಶತಕದ
ಮೇಲಾದ ಅಱುವತ್ತು ವರುಷ ॥

ಆಗಿದ್ದಾಗ ರಚಿಸಿದಂತೆ ಹೇಳಿಕೊಂಡಿದ್ದಾನೆ. ಇದರ ಆಶಯ ೭ × ೨=೧೪ × ೧೦೦ = ೧೪೦೦ + ೬೦ = ೧೪೬೦ ಎಂದಾಗಿ, ಕ್ರಿ.ಶ. ೧೫೩೮ಕ್ಕೆ ಅದು ಸರಿಯಾಗುತ್ತದೆ.

ಇನ್ನೀಗ ಸಂಕೇತಗಳಲ್ಲಿ ಕಾಲನಿರ್ಣಯ ಮಾಡುವ ವಿಧಾನವನ್ನು ಕುರಿತಂತೆ ಕೆಲವು ನಿದರ್ಶನಗಳನ್ನು ಗಮನಿಸಬಹುದು. ಇದು ಎರಡು ಬಗೆ: (೧) ವರ್ಣಮಾಲೆಯ ಅಕ್ಷರಗಳ ಒಂದು ವಿಶಿಷ್ಟ ಅನುಕ್ರಮವನ್ನು ಹಿಡಿದು ಅನುಸರಿಸುವ ಕಟಪಯ ಪದ್ಧತಿ; (೨) ಸಂಖ್ಯಾವಿಶಿಷ್ಟ ಸಂಜ್ಞೆಗಳ ಪ್ರಯೋಗಪದ್ಧತಿ. ಈ ಎರಡನೆಯ ಪದ್ಧತಿಯಲ್ಲಿ ಸಂಜ್ಞೆಗಳು ಮತಸಿದ್ಧಾಂತ, ಜ್ಯೋತಿಷ, ನಿಘಂಟು, ಕಾವ್ಯಪುರಾಣಗಳಲ್ಲಿ ಮಿತವ್ಯಯ ಕಾರಣವಾಗಿ ಬಳಕೆಯಾಗುತ್ತಿರುತ್ತವೆ. ಅವು ಸಾಧಾರಣವಾಗಿ ಸರ್ವವಿದಿತವಾದ ಸಂಕೇತಗಳಾಗಿರುವುದರಿಂದ ಅವುಗಳನ್ನು ಸಂಖ್ಯೆಗಳಿಗೆ ಪರ್ಯಾಯಗಳಾಗಿ ಬಳಸಿ ಕವಿಗಳು ತಮ್ಮ ಕೃತಿರಚನೆಯ ಕಾಲ, ತನ್ಮೂಲಕವಾಗಿ ತಮ್ಮ ಜೀವಿತಕಾಲವನ್ನು ಸೂಚಿಸುವುದುಂಟು.

**ಕಟಪಯ ಪದ್ಧತಿಗೆ:** ಕಲ್ಯಾಣಕೀರ್ತಿ "ಶಕನೃಪನ ರತಿಲೋಕ ಸಂಖ್ಯೆಯಿಂ ವಿದಿತ ಸಿದ್ಧಾರ್ಥಿ" ವರ್ಷದಲ್ಲಿ 'ಜ್ಞಾನಚಂದ್ರಾಭ್ಯುದಯ'ವನ್ನು ಬರೆದ ಹಾಗೆ ಹೇಳಿಕೊಂಡಿದ್ದಾನೆ. ಕ = ೧, ಲೋ = ೩ (ಯ ದಿಂದ ೩ನೆಯ ಅಕ್ಷರ), ತಿ = ೬ (ಟದಿಂದ ೬ನೆಯ ಅಕ್ಷರ), ರ = ೨ (ಯದಿಂದ ೨ನೆಯ ಅಕ್ಷರ) ಎಂಬುದಾಗಿ ಸಂಖ್ಯೆಗಳನ್ನು ವಿಲೋಮಕ್ರಮದಲ್ಲಿ ಕಂಡುಕೊಂಡರೆ ಶಕ ೧೩೬೨ ಎಂಬ ವರ್ಷ ಸಿಕ್ಕುತ್ತದೆ; ಅದು ಕ್ರಿ.ಶ. ೧೪೩೯–೪೦ಕ್ಕೆ ಸರಿಹೋಗುತ್ತದೆ.

**ಸಂಖ್ಯಾವಿಶಿಷ್ಟ ಸಂಜ್ಞೆಗಳಿಗೆ:** ಉದಾಹರಣೆಗೆ, ಶ್ರೀಧರಾಚಾರ್ಯನೆಂಬ ಶಾಸ್ತ್ರಕವಿ, 'ಜಾತಕತಿಲಕ' ಎಂಬ ಜ್ಯೋತಿಷಗ್ರಂಥದ ರಚನೆಯನ್ನು ಕುರಿತು ಹೇಳುವಾಗ

ಧರಣಿ ಗಿರಿ ನಿಧಿಶಕಾಬ್ದಂ
ವಿರೋಧಿವತ್ಸರದ ಮಾರ್ಗಶೀರ್ಷದ ಶುಕ್ಲೇ
ತರದ ಚತುರ್ಥೀ ದಿವಸದ
ಗುರು ಪುಷ್ಯದೊಳೆಸೆದುದಿಳೆಗೆ ಜಾತಕತಿಲಕಂ ॥

—ಎಂಬುದಾಗಿ ಬರೆದಿದ್ದಾನೆ.

ಇಲ್ಲಿ ಕ್ರಮವಾಗಿ ಧರಣಿ, ಗಿರಿ ಮತ್ತು ನಿಧಿ ಎಂಬ ಸಂಕೇತಗಳು ೧, ೭ ಮತ್ತು ೯ ಎಂಬ ಸಂಖ್ಯೆಗಳಿಗೆ ಪ್ರತಿಯಾಗಿ ಬಂದಿದ್ದು, ಅನುಲೋಮಕ್ರಮದಲ್ಲಿ ೧೭೯ ಎಂದಾಗುತ್ತದೆ. ಶಕ ೧೭೯ ಕನ್ನಡ ಕೃತಿರಚನೆಯ ಕಾಲವಾಗಿರುವುದು ಅಸಂಭಾವ್ಯ; ಇಲ್ಲಿಯೂ "ಅಂಕಾನಾಂ ವಾಮತೋ ಗತಿಃ" ಪ್ರಕಾರವಾಗಿ ಶಕ ೯೭೧ ಎಂದಾಗಿ, ಇದು ಗುಣಿಸಿದ ಲೆಕ್ಕದಂತೆ ಕ್ರಿ.ಶ. ೧೦೪೯ ನವೆಂಬರ್ ೧೬ನೆಯ ತಾರೀಖು ಗುರು ವಾರಕ್ಕೆ ಸರಿಹೋಗುತ್ತದೆ.

ಇಲ್ಲಿ ಕೆಲವು ಸಣ್ಣಪುಟ್ಟ ತೊಡಕುಗಳು ಎದುರಾಗುವುದುಂಟು. ಉದಾಹರಣೆಗೆ ನಯಸೇನನ 'ಧರ್ಮಾಮೃತ'ದಲ್ಲಿ ಉಕ್ತವಾದ

ಗಿರಿ ಶಿಖಿ ವಾಯು ಮಾರ್ಗ ಶಶಿ ಸಂಖ್ಯೆಯೊಳಾವಗಮೊಂದಿ ವರ್ತಿಸು
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ
ಬೆರಸೆಸೆದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್
ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕವಾರದೊಳ್ ॥ (೧೪-೧೬೪)

—ಎಂಬ ಪದ್ಯದಲ್ಲಿ ಬರುವ ನಾಲ್ಕು ಸಂಕೇತಗಳು ಕ್ರಮವಾಗಿ ೧೦೩೭ ಎಂಬ ಸಂಖ್ಯೆ ಯನ್ನು ತೋರಿಸುತ್ತವೆ. ಆದರೆ ಅವು ಅದೇ ಪದ್ಯದಲ್ಲಿ ಹೇಳಲಾದ ನಂದನ ವತ್ಸರ ದೊಡನೆ ಸರಿಬರುವುದಿಲ್ಲ. ಆದ್ದರಿಂದ ಗಿರಿ = ೪ ಎಂಬುದು ಜೈನಪರಿಭಾಷೆಯಲ್ಲಿದ್ದಿರ ಬಹುದು ಎಂದು ಊಹೆ ಮಾಡಬೇಕಾಗುತ್ತದೆ. ಹೀಗಾದಲ್ಲಿ ಗ್ರಂಥರಚನೆಯ ಕಾಲ ಕ್ರಿ.ಶ. ೧೧೧೨. ಹೀಗೆ ಸಂಕೇತಗಳಿಗೆ ಗೊತ್ತಾದ ಪ್ರಸಿದ್ಧಾರ್ಥವು ಇತರ ವಿವರ ಗಳೊಡನೆ ಸರಿಹೊಂದದೆ ಹೋಗುವ ಪಕ್ಷದಲ್ಲಿ ಕಾಲನಿರ್ಣಯ ಸಂದಿಗ್ಧವಾಗುತ್ತದೆ.

ಇನ್ನೊಂದು ಉದಾಹರಣೆ ಇಮ್ಮಡಿ ನಾಗವರ್ಮನ 'ವರ್ಧಮಾನ ಪುರಾಣ' ರಚನಕಾಲ ಸಂಬಂಧವಾದ್ದು. ಈ ಕುರಿತ ಪದ್ಯ :

ವಸುವರ್ಗಾಂಕಮಿ[ರಲ್ಕತೀತಶ]ಕಭೂಭೃದ್ವತ್ಸರಂ ಚಿತ್ರಭಾ
ನು ಸಮಾಖ್ಯಾಬ್ದಕಮಾಶ್ವಯುಗ್ಬಹುಳ ಷಷ್ಠೀವಾಸರಂ ತಾಂ ಪುನ
ರ್ವಸು ರುಕ್ಷಂ ಸುರಮಂತ್ರಿವಾರಮಭಿಜಿಲ್ಲಗ್ನೋದಯಂ ಕೂಡೆ ವ
ರ್ತಿಸೆ [ಪೇಳ್ದಂ] ಕವಿತಾಗುಣೋದಯನಿದಂ ಚೆಲ್ವಾಗೆ ತಾತ್ಪರ್ಯದಿಂ ॥ (೧೬-೪೭)

ಈ ಕವಿಯ ಇತರ ಕೃತಿಗಳಲ್ಲಿ ಕಾಲಸೂಚಕ ಪದ್ಯಗಳಿಲ್ಲ. ಇಲ್ಲಿಯ ವಿವರಗಳ ಪ್ರಕಾರ ಚಿತ್ರಭಾನು ಸಂವತ್ಸರದ ಆಶ್ವಯುಜ ಬಹಳ ಷಷ್ಠಿಯ ತಿಥಿಯಲ್ಲಿ ಪುನರ್ವಸು ನಕ್ಷತ್ರವಿರುತ್ತಿರಲು, ಗುರುವಾರದ ದಿನ, ಅಭಿಜಿಲ್ಲಗ್ನದಲ್ಲಿ ಕೃತಿರಚನೆ

ಯಾಯಿತು. ಇದು ಶಾಲಿವಾಹನ ಶಕ ೯೬೪ ಮತ್ತು ಕ್ರಿ.ಶ. ೧೦೪೨ ಅಕ್ಟೋಬರ್ ೭ನೆಯ ತಾರೀಖಿಗೆ ಸರಿಹೋಗುತ್ತದೆ. ವಸ್ತು, ವರ್ಗ ಮತ್ತು ಅಂಕ ಎಂಬ ಸಂಕೇತಗಳಿಗೆ ಕ್ರಮವಾಗಿ ೮, ೬ ಮತ್ತು ೯ ಎಂದಿಟ್ಟು ಹಿಂದಿನಿಂದ ಓದಿದಾಗ ೯೬೮ ಎಂಬ ಶಕ ಸಂಖ್ಯೆ ಬರುತ್ತದೆ. ಆದರೆ ಈ ಸಂಖ್ಯೆ ಆದೇ ವರ್ಷದ ಸಂವತ್ಸರಾದಿ ವಿವರಗಳಿಗೆ ಸರಿ ಹೋಗದು. ಸರಿಹೋಗಬೇಕಾದರೆ ೯೬೪ ಎಂದಾಗಬೇಕು. ಆಗ ವಸುವಿನ ವರ್ಗ ಎಂದರೆ ೮×೮=೬೪ ಎಂದು ಮಾಡಿಕೊಂಡು, ಅದರ ಆದಿಗೆ ಅಂಕ ಎಂದರೆ ೯ ಎಂಬ ಸಂಖ್ಯೆಯನ್ನು ಕೂಡಿಸಿ, ೯೬೪ ಎಂಬ ಶಕವರ್ಷವನ್ನು ಪಡೆಯಬೇಕು.

ಸಂಕೇತಾಕ್ಷರಗಳನ್ನು ಬಳಸುವ ಹಾಗೂ ಅವನ್ನು ವಿಚಿತ್ರವಾದ ವಿಧಾನಗಳಿಂದ ಯೋಜಿಸುವ ಈ ಪರಿಪಾಠ ಪ್ರಾಯಃ ಪಾಂಡಿತ್ಯದೃಷ್ಟಿಮೂಲವಾಗಿದ್ದು, ಕಾಲ ನಿರ್ದೇಶನದಲ್ಲಿ ಇವು ಕೆಲವು ತೊಡಕುಗಳನ್ನು ಉಂಟುಮಾಡುತ್ತವೆಯೆನ್ನದೆ ವಿಧಿಯಿಲ್ಲ. ಇಂಥ ಸಂದರ್ಭಗಳಲ್ಲಿ ಸಾಹಿತ್ಯಚರಿತ್ರಕಾರರು ಬೇರೆ ಬೇರೆ ಪ್ರಮಾಣಗಳನ್ನು ಅವ ಲಂಬಿಸಿ, ಕಾಲಸೂಚಕ ಪದ್ಯ ಅವುಗಳೊಡನೆ ತಾಳೆಯಾಗುತ್ತದೋ ಇಲ್ಲವೋ, ಆ ಪ್ರಮಾಣಗಳು ಕಾಲಸೂಚಕ ಪದ್ಯದ ಆಶಯವನ್ನು ಪುಷ್ಟೀಕರಿಸಬಹುದೇ ಕ್ಲೇಶ ಗಳನ್ನು ತಿದ್ದಬಹುದೇ ಮುಂತಾಗಿ ನೋಡಬೇಕಾಗುತ್ತದೆ. ತಾಳೆಯಾದರೆ ಕಾಲ ನಿರ್ಣಯ ಗ್ರಾಹ್ಯ; ಇಲ್ಲವೆ ಅದು ತಾತ್ಪೂರ್ತಿಕ. ಪಾಠಕ್ಲೇಶಗಳೂ ಅನ್ವಯಕ್ಲೇಶ ಗಳೂ ಗ್ರಂಥಪಾತಗಳೂ ಇರುವೆಡೆ ಸಂದಿಗ್ಧತೆಯ ಅಂಶ ಇನ್ನೂ ಹೆಚ್ಚಾಗಿ ಉಳಿದಿರು ತ್ತದೆ; ದುರ್ಗಸಿಂಹನ 'ಪಂಚತಂತ್ರ'ದ ವಿಷಯದಲ್ಲಿ ಆದಂತೆ ಸ್ಪಷ್ಟ ಕಾಲಸೂಚನೆಯ ಸಾಕ್ಷ್ಯವಿರುವ ಹಸ್ತಪ್ರತಿ ದೊರೆಯುವವರೆಗೆ ನಿರ್ಣಯ ಒಮ್ಮೊಮ್ಮೆ ತಾತ್ಪೂರ್ತಿಕ ವಾಗಿಯೇ ಉಳಿಯುತ್ತದೆ.

ಇಲ್ಲಿಯೇ ಇನ್ನೊಂದು ಬಗೆಯ ಸಮಸ್ಯೆಯನ್ನೂ ಗಮನಿಸಬೇಕು. ಕಾಲನಿರ್ಣಯದ ಪದ್ಯಗಳಲ್ಲಿ ಶಾಲಿವಾಹನಶಕ ಎಂದಿದ್ದರೆ ಕ್ರಿ.ಶ.ದ ತೇದಿಯನ್ನು ತಿಳಿಯಲು, ಶಕ ಸಂಖ್ಯೆಗೆ ೭೮ ವರ್ಷಗಳನ್ನು ಕೂಡಿಸಿದರೆ ಸಾಕು (ಸಂವತ್ಸರಾದಿ ವಿವರಗಳನ್ನು ಆಧುನಿಕ ಪಂಚಾಂಗ ರೀತ್ಯಾ ಗುಣಿಸಿ ನೋಡಿದಾಗ ಒಮ್ಮೊಮ್ಮೆ ಸಣ್ಣಪುಟ್ಟ ಹೊಂದಾಣಿಕೆಗಳು ಆಗಬಹುದು). ಶಕ ಎಂದಷ್ಟೇ ಇದ್ದಾಗ ಕೂಡ ಶಾಲಿವಾಹನಶಕ ವೆಂದೇ ವಿವಕ್ಷೆ. ಆದರೆ ಈ ಯಾವ ಸೂಚನೆಯೂ ಇಲ್ಲದಿದ್ದಾಗ ಶಾಲಿವಾಹನವೋ ವಿಕ್ರಮವೋ ಯಾವ ಶಕೆ ಎಂಬುದು ತಿಳಿಯದೆ ಸಂಶಯಕ್ಕೆ ಆಸ್ಪದವಾಗುತ್ತದೆ. ಆಂತರ ಅಥವಾ ಬಾಹ್ಯ ಪ್ರಮಾಣಗಳ ಪರಿಶೀಲನೆಯಿಂದ ಉಕ್ತಕಾಲವನ್ನು ನಿರ್ಧರಿಸ ಬೇಕಾಗುತ್ತದೆ. ಇದಕ್ಕೆ ಸಂಸ್ಕೃತ ಮತ್ತು ಕನ್ನಡ ಎರಡು ಭಾಷೆಗಳಲ್ಲೂ ಗ್ರಂಥರಚನೆ ಮಾಡಿದ ಅಸಗನೆಂಬ ಪ್ರಾಚೀನ ಕವಿಯ ಕಾಲ ಒಂದು ಉದಾಹರಣೆ ಆಗಬಲ್ಲುದು. ಈತನ ಸಂಸ್ಕೃತ 'ವರ್ಧಮಾನಪುರಾಣ'ದಲ್ಲಿ ಈತ ಹಲವು ಗ್ರಂಥಗಳನ್ನು ರಚಿಸಿದ ಸಂದರ್ಭವನ್ನು ವಿವರಿಸುವಾಗ "ಸಂವತ್ಸರೇ ದಶನವೋತ್ತರವರ್ಷಯುಕ್ತೇ" ಎಂದು ಕಾಲಸೂಚನೆ ಮಾಡಿದೆ. ಈ ಸಂವತ್ಸರ ಶಾಲಿವಾಹನಶಕವಾದರೆ ಶಕ ೯೧೦ ಎಂದಾಗಿ,

ಕ್ರಿ.ಶ. ೯೮೮ರಲ್ಲಿ ಅಸಗನು ಗ್ರಂಥಗಳನ್ನು ಬರೆದಂತೆ ಅಭಿಪ್ರಾಯವಾಗುತ್ತದೆ. ಆದರೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ (ಕ್ರಿ.ಶ. ೯೩೯–೬೮) ಅವಧಿಯಲ್ಲಿದ್ದ ಪೊನ್ನ ಕವಿ ಈತನನ್ನು 'ಶಾಂತಿಪುರಾಣ'ದಲ್ಲಿ ಹೆಸರಿಸುವುದರಿಂದ ಈ ಕಾಲನಿರ್ಣಯ ಸರಿಯಾಗದು. ವಿಕ್ರಮ ಶಕೆಯೆಂಬುದಾಗಿ ಇಟ್ಟುಕೊಂಡರೆ, ಆಗ ಅದು ಕ್ರಿ.ಶ. ೮೫೩ (೯೧೦–೫೭ = ೮೫೩) ಎಂದಾಗಿ ಬಾಹ್ಯಸಾಕ್ಷ್ಯವಾದ ಪೊನ್ನನ ಉಲ್ಲೇಖದೊಡನೆ ಹೊಂದಿಕೊಳ್ಳುತ್ತದೆ.

## ಕವಿಕೃತಿ ಸಾಕ್ಷ್ಯ : ಕಥಾಂಶಗಳಿಂದ

ಕವಿ ತನ್ನ ಕೃತಿಯಲ್ಲಿ ಉದ್ದೇಶಪೂರ್ವಕವಾಗಿ ಅಥವಾ ಅಂತಹ ಉದ್ದೇಶವೇನೂ ಇಲ್ಲದೆಯೂ ಕೆಲವೊಮ್ಮೆ ಕಥಾಂಶದಲ್ಲಿ ಒಂದು ಬಗೆಯಾಗಿ ಕಾಲಸೂಚನೆಯನ್ನು ಮಾಡಿರುವುದುಂಟು. ಕಥೆಯಲ್ಲಿ ಬರುವ ಯಾವುದಾದರೂ ಒಂದು ಪಾತ್ರ ಯಾವುದಾದರೊಂದು ಕೆಲಸವನ್ನು ನಿರ್ದಿಷ್ಟವಾದೊಂದು ದಿನದಲ್ಲಿ ಮಾಡಿದಹಾಗೆ ಹೇಳಿರುವುದು ಕವಿಯ ಕಾಲನಿರ್ಣಯಕ್ಕೆ ಪರೋಕ್ಷವಾಗಿ ಸಹಾಯಮಾಡಬಲ್ಲುದು.

ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು : 'ಮೋಹನತರಂಗಿಣಿ'ಯಲ್ಲಿ ರತಿಪ್ರದ್ಯುಮ್ನರ ಗೃಹಪ್ರವೇಶ ಮಾಘ ಶುದ್ಧ ಪಂಚಮೀ ಬೃಹಸ್ಪತಿವಾರದಲ್ಲಿ ನಡೆಯಿತೆಂದೂ ಅನಿರುದ್ಧನ ಜನನ ಆನಂದ ಸಂವತ್ಸರದ ಮಾಘ ಶುದ್ಧ ಪಂಚಮೀ ಆದಿವಾರದಲ್ಲಿ ಆಯಿತೆಂದೂ ಕನಕದಾಸರು ಹೇಳಿದ್ದಾರೆ. ಈ ಸಂವತ್ಸರಾದಿ ವಿವರಗಳು ಶಾಲಿವಾಹನ ಶಕ ೧೪೭೬ಕ್ಕೆ ಎಂದರೆ ಕ್ರಿ.ಶ. ೧೫೫೪ಕ್ಕೆ ಸರಿಹೋಗುವವಾಗಿದ್ದು, ಕನಕದಾಸರ ಕಾಲ ಒಂದು ರೀತಿಯಲ್ಲಿ ಇತ್ಯರ್ಥವಾಗುತ್ತದೆ.

ಇನ್ನೊಂದು ಉದಾಹರಣೆ : ಲಕ್ಷ್ಮಯ್ಯನ 'ಮದನಮೋಹಿನಿಯ ಕಥೆ'ಯಲ್ಲಿ ರಾಜಕುಮಾರನೊಬ್ಬನ ಪ್ರಯಾಣ ಸಂದರ್ಭವನ್ನು

ಈಶ್ವರಸಂವತ್ಸರ ವೈಶಾಖದಿ
ಭೂಸುರರುಗಳು ಲಗ್ನವನಿಕ್ಕೆ
ಆ ಶುದ್ಧದ ಪುನರ್ವಸು ಲಗ್ನ ಗುರುವಾರ
ವಾಸುಕುಮಾರ ತೆರಳಿದನು ॥ (೧೧.೪೦)

ಎಂಬುದಾಗಿ ಹೇಳಿರುವುದು ಕಾಣುತ್ತದೆ. ಈ ವಿವರಗಳು ಕ್ರಿ.ಶ. ೧೬೩೭ರ ಏಪ್ರಿಲ್ ೨೪ನೆಯ ತಾರೀಖಿಗೆ ಸರಿಹೋಗುವುದನ್ನು ಗಮನಿಸಿದರೆ, ಈ ಕವಿಯ ಕಾಲ ಕವಿಚರಿತೆಕಾರರು ಈ ಕೃತಿಗೆ ಊಹಿಸಿರುವ ಕಾಲಕ್ಕೆ (ಸು. ೧೬೫೦) ಹತ್ತಿರವಾಗಿಯೇ ಇರುವುದು ಕಾಣುತ್ತದೆ.

## ಕವಿಕೃತಿ ಸಾಕ್ಷ್ಯ : ಕುಟುಂಬ ವಿವರಗಳ ಮೂಲಕ

ಕುಟುಂಬದ ಸದಸ್ಯರಲ್ಲಿ ಯಾರಾದರೊಬ್ಬರ ಕಾಲ ತಿಳಿದಿದ್ದರೆ ಕವಿಯ ಕಾಲವನ್ನು ಗೊತ್ತುಮಾಡಲು ಸುಲಭವಾಗುತ್ತದೆ. ಇದಕ್ಕೆ ಕವಿ ಸುಮನೋಬಾಣನ ಕಾಲ ಒಂದು

ಒಳ್ಳೆಯ ಉದಾಹರಣೆ. ಸುಮನೋಬಾಣನು ಜನ್ನ, ಮಲ್ಲಿಕಾರ್ಜುನ ಮೊದಲಾದವರಿಂದ ಸ್ತುತವಾಗಿರುವ ಒಬ್ಬ ಕವಿ, ಪುರಾಣ ಕರ್ತೃ. ಈತನ ಕೃತಿ ಯಾವುದೂ ದೊರೆತಿಲ್ಲ. ದೊರೆತಿದ್ದರೆ ಅಲ್ಲಿಯೇ ಏನಾದರೂ ಕಾಲಸೂಚನೆ ದೊರೆಯುತ್ತಿದ್ದಿರಬಹುದು. ಈಗ ಅನ್ಯಪ್ರಮಾಣಗಳಿಂದ ಕಾಲವನ್ನೂಹಿಸಬೇಕಾಗಿದೆ. ಸುಮನೋಬಾಣನು ಜನ್ನಕವಿಯ ತಂದೆಯೆಂಬುದು 'ಯಶೋಧರ ಚರಿತೆ'ಯಿಂದ ಸ್ಪಷ್ಟವಾಗುತ್ತದೆ. ಜನ್ನಕವಿ ಕ್ರಿ.ಶ. ೧೨೦೯ರಲ್ಲಿ 'ಯಶೋಧರ ಚರಿತೆ'ಯನ್ನು ಬರೆದದ್ದು ನೇರ ಉಲ್ಲೇಖದಿಂದ ತಿಳಿದಿದೆ; ಈತನೇ ಕ್ರಿ.ಶ. ೧೧೯೭ರಲ್ಲಿ ಹುಟ್ಟಿದ ಒಂದು ಶಾಸನದ ಕರ್ತೃವೆಂದೂ ತಿಳಿದಿದೆ. ಆದ್ದರಿಂದ ಈ ಎರಡು ತೇದಿಗಳ ಕಾಲದಲ್ಲಿಯೋ ಅದಕ್ಕೆ ಸ್ವಲ್ಪ ಮೊದಲಲ್ಲಿಯೋ ಸುಮನೋಬಾಣನ ಕಾಲವನ್ನಿರಿಸಬಹುದು. ಕವಿಚರಿತೆಕಾರರು ಸು. ೧೧೭೫ ಎಂದು ಸೂಚಿಸಿರುವುದು ಇದೇ ಆಧಾರದಮೇಲೆ (ಡಾ. ವೆಂಕಟಸುಬ್ಬಯ್ಯನವರು ಸುಮನೋಬಾಣನ ಕಾಲವಿಚಾರದಲ್ಲಿ ವ್ಯಕ್ತಮಾಡಿರುವ ಭಿನ್ನಮತವನ್ನು ಪ್ರಸ್ತುತಕ್ಕೆ ಗಮನಿಸಿಲ್ಲ).

ಹೀಗೆಯೇ ದೇವರಾಜನೆಂಬ ಕವಿಯ ಕಾಲನಿರ್ಣಯದಲ್ಲಿಯೂ ಈ ಕುಟುಂಬದ ವಿವರಗಳನ್ನಾಶ್ರಯಿಸಿದೆ. ಈತನು 'ಸೊಬಗಿನ ಸೋನೆ' ಎಂಬ ಗ್ರಂಥದಲ್ಲಿ ಸ್ವವಿಚಾರವನ್ನು ಪ್ರಸ್ತಾಪಿಸುತ್ತ, "ಸಂಗಮೇಂದ್ರಕುಲದಿಂಗಡಲಿಗೆ ನೆಱೆದಿಂಗಳೆನಿಪ ಕಂಪಸುತನು" ಎಂದೂ "ಕಂಪಮಹೀಪತಿಕುಲರತ್ನಾಲಯಸಾಕಾನ್ಯತರುಚಿ" ಎಂದೂ ಹೇಳಿರುವುದು ಕಾಣುತ್ತದೆ. ವಿಜಯನಗರದ ರಾಜರ ಮೂಲಪುರುಷನಾದ ಸಂಗಮನ ಮಗ ಕಂಪ, ಕಂಪನ ತಮ್ಮ ಬುಕ್ಕರಾಯ, ಬುಕ್ಕರಾಯನ ಮಗ ಎರಡನೆಯ ಕಂಪ. ದೇವರಾಜ ಈ ಎರಡನೆಯ ಕಂಪನ ಮಗನಿರಬಹುದು. ಹಾಗಿದ್ದ ಪಕ್ಷದಲ್ಲಿ, ವಿಜಯನಗರದ ಬುಕ್ಕರಾಯನ ಕಾಲ ೧೩೫೭-೭೭ ಎಂಬುದರಿಂದ ಈತನ ಕಾಲ ಸು. ೧೪೧೦ ಎಂದು ಆಗಬಹುದು. ಇದು ಕವಿಚರಿತೆಕಾರರ ಸೂಚನೆ. ಆದರೆ ಇಂಥ ಕಡೆಗಳಲ್ಲಿ ರಾಜರ ಆಳ್ವಿಕೆಯ ಕಾಲಾನುಕ್ರಮ ಮೊದಲೇ ಸರಿಯಾಗಿ ನಿರ್ಧರಿತವಾಗಿರದಿದ್ದರೆ, ಒಂದೇ ಹೆಸರಿನ ರಾಜರು ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದರೆ, ಕವಿಕಾಲನಿರ್ಣಯ ನಿಸ್ಸಂದಿಗ್ಧವಾಗಿರುವುದು ಸಾಧ್ಯವಿಲ್ಲ.

### ಕವಿಕೃತಿ ಸಾಕ್ಷ್ಯ: ಪೂರ್ವಕವಿಗಳು ಮುಂತಾದವರ ಉಲ್ಲೇಖಗಳ ಮೂಲಕ

ಇಮ್ಮಡಿ ನಾಗವರ್ಮ ಕವಿಯು 'ವರ್ಧಮಾನ ಪುರಾಣ'ದ ರಚನೆಯ ಕಾಲವನ್ನು ಕ್ರಿ.ಶ. ೧೦೪೨ ಎಂಬುದಾಗಿ ಆ ಗ್ರಂಥದ ಕಾಲಸೂಚಕ ಪದ್ಯದಿಂದ ತಿಳಿಯಲು ಈಗ ಸಾಧ್ಯವಾಗಿದೆ. 'ಶೋಧಿಸಿದರ್ ಸಲೆ ವಾದಿರಾಜಪಂಡಿತರ್' ಎಂಬುದಾಗಿ ಅದೇ ಗ್ರಂಥದ ಪದ್ಯವೊಂದರಲ್ಲಿ (೧-೨೧) ಹೇಳಿಕೊಂಡಿರುವುದನ್ನು ಲಕ್ಷಿಸಿ, ಆ ವಾದಿರಾಜ ಪಂಡಿತರು ಯಾರೆಂದು ಕಂಡುಹಿಡಿಯಲು ಯತ್ನಿಸಿದರೆ ಈತ ಕ್ರಿ.ಶ. ೧೦೧೮-೪೨ರಲ್ಲಿ ಆಳಿದ, ಇದೇ ನಾಗವರ್ಮನ ಆಶ್ರಯದಾತನಾದ ಚಾಲುಕ್ಯ ಜಗದೇಕಮಲ್ಲ ಜಯಸಿಂಹನ ಆಸ್ಥಾನ

ವಿದ್ವಾಂಸನಾಗಿದ್ದ ಒಬ್ಬ ಜೈನ ಪಂಡಿತನೆಂಬುದು ತಿಳಿಯುತ್ತದೆ. ಆಗ ಪೂರ್ವೋಕ್ತ ಕಾಲಸೂಚನೆಯನ್ನು ಈಯಂಶವೂ ಪೋಷಿಸುವ ಆಧಾರವಾಗಿ ಪರಿಣಮಿಸುತ್ತದೆ. 'ಕಾವ್ಯಾವಲೋಕನ'ದ ೪೨ನೆಯ ಸೂತ್ರದ ವಾದಿರಾಜಸ್ತುತಿಪರ ಪದ್ಯ ಕೂಡ ಇವರ ಬೆಂಬಲಕ್ಕೆ ಕೈಗೂಡಿಸಬಹುದು.

ಪೂರ್ವಪ್ರಸಿದ್ಧರಾದ ಆಚಾರ್ಯರು ಗುರುಗಳು ಮೊದಲಾದವರ ಸ್ಮರಣೆ ಸ್ತುತಿಗಳಿಂದಲೂ ಕವಿಕಾಲನಿರ್ಣಯಕ್ಕೆ ನೆರವು ದೊರೆಯುವುದು ಸಾಧ್ಯವಿದೆ. ನಾಗಚಂದ್ರನ ಕಾಲನಿರ್ಣಯಕ್ಕೆ ಆತ ಕೃತಿಯ ನಾಂದೀಮುಖದಲ್ಲಿ ಸ್ತುತಿಸುವ ಗುರುಪರಂಪರೆಯ ಬಾಲಚಂದ್ರ, ಶ್ರುತಕೀರ್ತಿ ತ್ರೈವಿದ್ಯ ಈ ಕೆಲವು ಯತಿಗಳ ಪ್ರಸ್ತಾಪ ಶ್ರವಣಬೆಳ್ಗೊಳದ ಶಾಸನಗಳಲ್ಲಿ ಬರುವುದು ಕೂಡ ಸಹಾಯಕಸಾಕ್ಷ್ಯವಾಗಿದೆ. ಇನ್ನೊಂದು ಉದಾಹರಣೆ: ಸುಜನೋತ್ತಂಸನೆಂಬ ಬಿರುದಿನ ಬೊಪ್ಪಣಪಂಡಿತನು ಅಧ್ಯಾತ್ಮಿ ಬಾಳಚಂದ್ರನ ನಿಯೋಗದಿಂದ ಬೆಳ್ಗೊಳದ ಗೊಮ್ಮಟೇಶ್ವರನನ್ನು ೨೭ ವೃತ್ತಗಳಿಂದ ಸ್ತುತಿಸಿದ್ದಾನೆ. ಈ ಗೊಮ್ಮಟಸ್ತುತಿಯಿರುವ ಶಾಸನದ ಕಾಲ ಸು. ೧೧೮೦ ಎಂದು ತೋರುವುದರಿಂದ ಕವಿಯೂ ಆ ಕಾಲಕ್ಕೇ ಸೇರಿದವನಾಗಿರಬೇಕು ಎಂದು ಕವಿಚರಿತೆಕಾರರು ಭಾವಿಸಿದ್ದಾರೆ. ಆದರೆ ಆತ ಹೇಳುವ ಅಧ್ಯಾತ್ಮಿ ಬಾಳಚಂದ್ರನ ಕಾಲ ೧೧೮೧ ಎಂಬುದಾಗಿ ಶ್ರವಣಬೆಳ್ಗೊಳದ ೩೨೭ನೆಯ ಶಾಸನದಿಂದ ತಿಳಿಯುವುದರಿಂದ ಕವಿ ಆತನ ಸಮಕಾಲದವನಾಗಿರಬೇಕು ಎಂಬುದಾಗಿ ಇನ್ನೊಂದು ಪೋಷಕ ಸಾಕ್ಷ್ಯವನ್ನೂ ನೀಡಿದ್ದಾರೆ. ಡಾ. ಎ. ವೆಂಕಟಸುಬ್ಬಯ್ಯನವರು ಇದೇ ಸಾಕ್ಷ್ಯವನ್ನು ಆಧರಿಸಿ, ಈ ಯತಿ ಕ್ರಿ.ಶ. ೧೨೦೦, ೧೨೩೧ ಈ ವರ್ಷಗಳಲ್ಲಿದ್ದನೆಂದೂ ಬೊಪ್ಪಣಪಂಡಿತ ಕೂಡ ಸು. ಇದೇ ಕಾಲದಲ್ಲಿಯೇ ಎಂದರೆ ಕ್ರಿ.ಶ. ೧೧೯೫–೧೨೦೦ರಲ್ಲಿಯೇ 'ಗೊಮ್ಮಟಸ್ತುತಿ' ಮೊದಲಾದ ತನ್ನ ಕೃತಿಗಳನ್ನು ರಚಿಸಿದನೆಂದೂ ಭಾವಿಸಿದ್ದಾರೆ. ಈ ಬಗೆಯ ಸಾಕ್ಷ್ಯಗಳ ಅವಲಂಬನದಲ್ಲಿ ಇರುವ ಒಂದು ತೊಡಕು ಎಂದರೆ, ಒಂದೇ ಹೆಸರಿನ ಹಲವರು ಯತಿಗಳು ಕಾಣಿಸಿಕೊಳ್ಳುವುದು. ಇಂಥ ಸಂದರ್ಭಗಳಲ್ಲಿ ಗುರುವಿನ ಪೂರ್ವಾಪರದವರ ಹೆಸರುಗಳು ಅವರ, ಗಣ ಗಚ್ಛ ಮೊದಲಾದ ಸಾಂಪ್ರದಾಯಿಕ ವಿವರಗಳು ಇವನ್ನೆಲ್ಲ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಇಂಥ ತೊಡಕು ಹಿಂದೆ ಹೇಳಿದ ನಾಗಚಂದ್ರಕವಿಯ ಕಾಲದ ವಿಷಯದಲ್ಲೇ ಕಾಣಿಸಿಕೊಂಡಿರುವುದನ್ನು ಇಲ್ಲಿ ನೆನೆಯಬಹುದು.

ಕನ್ನಡ ಕವಿಗಳು ಪೂರ್ವಕವಿಗಳನ್ನು ಗೌರವಭಾವದಿಂದ ಸ್ಮರಿಸುವುದೂ ಅವರ ಭಾವಗಳನ್ನೂ ಉಕ್ತಿಗಳನ್ನೂ ಆಗಾಗ್ಗೆ ಅನುವಾದಿಸುವುದೂ ಉಂಟು. ಇದರಿಂದ ಅವರು ಸ್ಮರಿಸುವ ಕವಿಗಳ ಇತ್ತೀಚಿನವರ ಕಾಲ ಅಥವಾ ಅದಕ್ಕೆ ಹಿಂದಿನವರ ಕಾಲ ನಿರ್ಧರಿತವಾಗಿದ್ದ ಪಕ್ಷದಲ್ಲಿ ಆ ಕವಿಗಳಿಗಿಂತ ಪ್ರಸ್ತುತನಾದ ಕವಿ ಈಚೆಗೆ ಇದ್ದವನೆಂದು ಹೇಳಲು ಸಾಧ್ಯವಾಗುತ್ತದೆ. ಹೀಗೆಯೇ ಉತ್ತರಕಾಲೀನ ಕವಿಗಳು ಪ್ರಸ್ತುತ ಕವಿಯನ್ನು ಸ್ಮರಿಸುವುದೂ ಅನುವಾದಿಸುವುದೂ ಮಾಡಿದ್ದರೆ ಅವರಲ್ಲಿ ಸಮೀಪದವರ ಅಥವಾ ಅವರಾದ ಬಳಿಕ ಬರುವವರ ಕಾಲ ನಿರ್ಧರಿತವಾಗಿದ್ದ ಪಕ್ಷದಲ್ಲಿ ಈ ಪೂರ್ವ ಮತ್ತು ಉತ್ತರ

ಕಾಲೀನ ಕವಿಗಳ ನಡುವೆ ಪ್ರಸ್ತುತನಾದ ಕವಿ ಜೀವಿಸಿದ್ದನೆಂದು ಹೇಳಬಹುದಾಗಿದೆ.

"ಅದ್ಯತನನಾಗಿಯುಂ ನೆಗಬ್ದಾದ್ಯರ ದೊರೆಯೆನಿಸಿ ನೆಱೆದು" ಎಂದು ಮುಂತಾಗಿ ನಾಗಚಂದ್ರನನ್ನು ನೆನೆಯುವ ಕರ್ಣಪಾರ್ಯ (೧-೨೨), "ಬುಧ ನೇಮಿಚಂದ್ರನ ಜಗನ್ನುತ ಜನ್ನನ ರಂಜಿಪಗ್ಗಳಯ್ಯನ" ಎಂದು ಮುಂತಾಗಿ ಪೂರ್ವಕವಿಗಳನ್ನು ಸ್ಮರಿಸುವಲ್ಲಿ ಈಚೆಯವನಾದ ಜನ್ನನನ್ನು ಸೇರಿಸಿರುವ ಕಮಲಭವ (೧-೬೨), "ಭಗವದ್ವಿಷ್ಣು ಕಥಾವತಾರ ರಚಿತ ಶ್ರೀಭದ್ರನಂ ರುದ್ರನಂ" ಎಂದು ರುದ್ರಭಟ್ಟನನ್ನು ಸ್ಮರಿಸುವ ಚೌಂಡರಸ, "ಸರಸವರ್ಣಕ ಕವಿಗಳೊಳು ಭಾ। ಸುರ ಕುಮಾರವ್ಯಾಸನೊಬ್ಬನು। ಪರಿಕಿಸುವೊಡಾನೊಬ್ಬ...." ಎಂದು ಕುಮಾರವ್ಯಾಸನನ್ನು ಹೆಸರಿಸುವ 'ತೊರವೆ ರಾಮಾಯಣ'ದ ಕವಿ ಕುಮಾರವಾಲ್ಮೀಕಿ—ಈ ಮುಂತಾದ ಕವಿಗಳು ತಾವು ಹೆಸರಿಸುವ ಆಯಾ ಪೂರ್ವಕವಿಯ ಕಾಲದಿಂದ ಈಚೆಗೆ ಇದ್ದು ಕೃತಿರಚನೆ ಮಾಡಿದರು ಎಂಬುದು ಬಹುಮಟ್ಟಿಗೆ ಸ್ಪಷ್ಟ. ಹೀಗಾಗಿ ಈ ಕವಿಗಳ ಕಾಲನಿರ್ಣಯದಲ್ಲಿ ಆ ಬಗೆಯ ಪೂರ್ವೋಲ್ಲೇಖಗಳು ಕೆಳಗಡುವಾಗಿ ನೆರವೀಯುತ್ತವೆ.

ಹೀಗೆಯೇ ಕವಿರಾಜಮಾರ್ಗೋಕ್ತರಾದ ವಿಮಲೋದಯಾದಿ ಗದ್ಯಕವಿಗಳೂ ಶ್ರೀವಿಜಯಾದಿ ಪದ್ಯಕವಿಗಳೂ 'ಪಂಚತಂತ್ರ'ದ ಕರ್ತೃ ದುರ್ಗಸಿಂಹನಿಂದ (೧೦೩೧) "ವಿಜಿತಾರಿದಂಡನಾಯಕ ಗಜಾಂಕುಶಂ" ಎಂದು ಸ್ಮೃತನಾದ ಗಜಾಂಕುಶ, 'ಶಾಂತೀಶ್ವರ ಪುರಾಣ'ದ ಕರ್ತೃ ಕಮಲಭವನಿಂದ (ಸು. ೧೨೩೫) "ಸಂದ ಬಂಧುವರ್ಮನ" ಎಂದು ಸ್ಮೃತನಾದ ಬಂಧುವರ್ಮ ಈ ಮುಂತಾದ ಕವಿಗಳೂ ಹಾಗೆ ಸ್ಮರಿಸಿದ ಕವಿಗಳಿಗಿಂತ ಹಿಂದೆ ಇದ್ದರೆಂದು ತಿಳಿಯುವುದಷ್ಟೇ. ಹೀಗಾಗಿ ಈ ಕವಿಗಳ ಕಾಲನಿರ್ಣಯದಲ್ಲಿ ಆ ಬಗೆಯ ಉಲ್ಲೇಖಗಳು ಮೇಲ್ಗಡುವಾಗಿ ಸಹಾಯಕ್ಕೆ ಬರುತ್ತವೆ.

ಯಾವನಾದರೊಬ್ಬ ಕವಿಯ ನಾಮೋಲ್ಲೇಖವನ್ನು ಕುರಿತಂತೆ ಈ ಕೆಳಗಡು ಮತ್ತು ಮೇಲ್ಗಡುಗಳು ಒಟ್ಟಿಗೆ ಸಿಕ್ಕುವಂತಿದ್ದರೆ ಕಾಲನಿರ್ಣಯಕ್ಕೆ ತಕ್ಕ ಅನುವು ದೊರೆಯುತ್ತದೆ. ನಾಗಚಂದ್ರ (ಸು. ೧೧೪೦) ರುದ್ರಭಟ್ಟರ (ಸು. ೧೧೮೫) ನಡುವೆ ಬರುವುದರಿಂದ ಕರ್ಣಪಾರ್ಯನ, ಜನ್ನ (ಕ್ರಿ.ಶ. ೧೨೩೦) ಮಲ್ಲಿಕಾರ್ಜುನರ (ಸು. ೧೨೪೫) ನಡುವೆ ಬರುವುದರಿಂದ ಕಮಲಭವನ ಕಾಲವನ್ನು ಒಂದು ರೀತಿಯಲ್ಲಿ ನಿಗದಿಪಡಿಸುವುದು ಸಾಧ್ಯವಾಗಿದೆ. ಆದರೆ ಇವೇ ಉದಾಹರಣೆಗಳಲ್ಲಿ ಕಾಣುವಂತೆ ಆಧಾರವಾಗುವ ಕವಿಗಳ ಕಾಲವೇ ಅನಿಶ್ಚಿತತೆಯ ಮಡಿಲಿನಲ್ಲಿದ್ದಾಗ ನಿರ್ಧಾರ ತಾತ್ಪೂರ್ತಿಕವಾಗಿದ್ದು, ಗಟ್ಟಿಯಾದ ಇತರ ಆಧಾರಗಳು ದೊರೆತಾಗ ವ್ಯತ್ಯಾಸಗೊಳ್ಳುವ ಸಂಭವವಿರುತ್ತದೆ.

ಕೆಲವೊಮ್ಮೆ ತತ್ಕಾಲೀನ ಸಾಕ್ಷ್ಯಗಳು ಕೂಡ ಹೀಗೆಯೇ ಕೆಲಸಕ್ಕೆ ಬರಬಹುದು. 'ಕರ್ಣಾಟಕ ಕಲ್ಯಾಣಕಾರಕ'ವನ್ನು ಬರೆದ ಕವಿ ಜಗದ್ದಳ ಸೋಮನಾಥನು ತನ್ನ ಕೃತಿಯನ್ನು "ಸುಮನೋಬಾಣ ಕವೀಂದ್ರಪ್ರಮುಖಂ ಬೆರಸಭಯಚಂದ್ರಸಿದ್ಧಾಂತಿಗಳು" ತಿದ್ದಿದರೆಂದು ಹೇಳಿಕೊಂಡಿರುವುದರಿಂದ, ಸುಮನೋಬಾಣನಿಗೆ ಕೊಟ್ಟ ಸು. ೧೧೭೫ ಎಂಬ ಕಾಲವನ್ನೇ ಈತನಿಗೆ ಕೂಡ ಕೊಡಬಹುದೆಂಬುದು ಕವಿಚರಿತೆಕಾರರ ಮತ.

'ಸಮಯ ಪರೀಕ್ಷೆ'ಯ ಕರ್ತೃ ಬ್ರಹ್ಮಶಿವನೆಂಬ ಕವಿಯ ಕಾಲ ಅನಿಶ್ಚಿತ. ಆದರೆ ಈತ ತನ್ನನ್ನು 'ಅಗ್ಗಳದೇವನ ಕೆಳೆಯಂ' ಎಂದು ಹೇಳಿಕೊಂಡಿರುವುದನ್ನು ಗಮನಿಸಿ, ಈ ಅಗ್ಗಳನೂ 'ಚಂದ್ರಪ್ರಭ ಪುರಾಣ' ಕರ್ತೃ ಅಗ್ಗಳನೂ ಅಭಿನ್ನರೆಂದು ಕೆಲವರು ತಿಳಿಯುವುದರಿಂದ, 'ಚಂದ್ರಪ್ರಭ ಪುರಾಣ'ವನ್ನು ಕ್ರಿ.ಶ. ೧೧೮೯ರಲ್ಲಿ ಬರೆದ ಅಗ್ಗಳನ ಕಾಲದಲ್ಲಿಯೇ ಈತನೂ ಇದ್ದಿರಬೇಕೆಂದು ಸಹಜವಾಗಿ ನಿರ್ಣಯಿಸಬಹುದು.

ಇನ್ನೊಂದು ಉದಾಹರಣೆ ನೋಡಿ : "ಕವಿಕಮಳಸೂಕ್ತಿಸುಧಾರ್ಣವಸೋಮಂ ದೇವಕವಿ ದಲ್" ಎಂದು ಶ್ಲೇಷೆ ತೋರುನಂತೆ ಬರುವ ಪದ್ಯಭಾಗವನ್ನು ಗಮನಿಸಿ, 'ಶಾಂತೀಶ್ವರ ಪುರಾಣ'ವನ್ನು ಬರೆಯಲು ಕಮಲಭವನಿಗೆ 'ಕುಸುಮಾವಳಿ' ಕರ್ತೃ ದೇವಕವಿ ಪ್ರೋತ್ಸಾಹಿಸಿದನೆಂಬುದಾಗಿ ಕವಿಚರಿತೆಕಾರರು ಊಹಿಸಿದ್ದಾರೆ; ಅದನ್ನು ಪೋಷಿಸುವ ಹಾಗೆ ಉಭಯಕಾವ್ಯಗಳಲ್ಲೂ ಸಮಾನವಾದ ಪ್ರಕೃತಿವರ್ಣನಾಭಾಗಗಳು ಕಂಡುಬರುತ್ತಿರುವುದನ್ನು ಗುರುತಿಸಿದ್ದಾರೆ. ಇದು ಆ ಇಬ್ಬರು ಕವಿಗಳ ಕಾಲವನ್ನೂ ಕೆಲಮಟ್ಟಿಗೆ ಹತ್ತಿರ ತರುತ್ತದೆ.

## ಲಕ್ಷಣ ಗ್ರಂಥಗಳ ಮತ್ತು ಸಂಕಲಿತ ಗ್ರಂಥಗಳ ಸಾಕ್ಷ್ಯ

ಯಾವನಾದರೊಬ್ಬ ಕವಿಯ ಒಂದೋ ಹಲವೋ ಕೃತಿಗಳಿಂದ ಪದ್ಯಗಳೋ ಪದ್ಯಭಾಗಗಳೋ ನಿರ್ದಿಷ್ಟಕಾಲ ತಿಳಿದ ಅಥವಾ ಬಹುಮಟ್ಟಿಗೆ ಗ್ರಾಹ್ಯವೆಂದು ಹೆಚ್ಚುಮಂದಿ ವಿದ್ವಾಂಸರು ಒಮ್ಮತದಿಂದ ಒಪ್ಪಿದ ಕಾಲಮಾನದ ಲಕ್ಷಣಗ್ರಂಥಗಳಲ್ಲಿ ಅಥವಾ ಸಂಕಲಿತ ಗ್ರಂಥಗಳಲ್ಲಿ ಉದ್ಧೃತವಾಗಿದ್ದರೆ, ಆಯಾ ಲಕ್ಷಣ ಅಥವಾ ಸಂಕಲನ ಗ್ರಂಥಕ್ಕಿಂತ ಹಿಂದೆ ಉದ್ಧೃತಪದ್ಯ ಅಥವಾ ಪದ್ಯಭಾಗದ ಲೇಖಕನು ಇದ್ದನೆಂದು ತಿಳಿಯುವುದು ಸುಲಭ. ಎಂದರೆ ಈ ಲಕ್ಷಣ ಅಥವಾ ಸಂಕಲನ ಗ್ರಂಥಗಳು ಕವಿಕಾಲ ನಿರ್ಣಯದಲ್ಲಿ ಮೇಲ್ಗಡುವಾಗಿ, ಗಡಿಗಲ್ಲುಗಳಾಗಿ ಸಹಾಯಕ್ಕೆ ಬರುತ್ತವೆ ಎಂದು ಹೇಳಬಹುದು.

ಕನ್ನಡದಲ್ಲಿ ಇಮ್ಮಡಿ ನಾಗವರ್ಮನ 'ಕಾವ್ಯಾವಲೋಕನ' 'ಕರ್ಣಾಟಕ ಭಾಷಾಭೂಷಣಗಳು', ಕೇಶಿರಾಜನ 'ಶಬ್ದಮಣಿದರ್ಪಣ'—ಇವುಗಳಲ್ಲಿ ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಗಳ ಪ್ರಕ್ರಿಯೆಗಳ ವಿಶದೀಕರಣಕ್ಕೆ ಎಂದು ಬಂದಿರುವ ಪೂರ್ವಕವಿ ಪ್ರಯೋಗಗಳೂ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ', ಅಭಿನವ ವಾದಿವಿದ್ಯಾನಂದನ 'ಕಾವ್ಯಸಾರ' ಇವುಗಳಲ್ಲಿ ನಗರಾರ್ಣವಾದಿ ವರ್ಣನೆಗಳಿಗೆ ಮತ್ತು ಇತರ ಉದ್ದೇಶಗಳಿಗೆ ಎಂದು ಸಂಕಲಿತಗೊಂಡ ಪದ್ಯಗಳೂ ಹಲವಾರುಂಟು. ಅನಿರ್ದಿಷ್ಟಕಾಲಮಾನದ ಕವಿಯ ಒಂದೋ ಹಲವೋ ಪದ್ಯಗಳು ಈ ಬಗೆಯ ಗ್ರಂಥಗಳಲ್ಲಿ ಕಂಡುಬಂದಿದ್ದರೆ, ಆಯಾ ಲಕ್ಷಣಗ್ರಂಥದ ಅಥವಾ ಸಂಕಲಿತ ಗ್ರಂಥದ ಕವಿಯ ಕಾಲಕ್ಕಿಂತ ಹಿಂದೆ ಆ ಕವಿಯಿದ್ದು ಕೃತಿರಚನೆ ಮಾಡಿದನೆಂದು ಸಾಹಿತ್ಯ ಚರಿತ್ರಕಾರರು ನಿರ್ಣಯಿಸಿದ್ದಾರೆ.

ಒಂದೆರಡು ನಿದರ್ಶನಗಳನ್ನು ಇಲ್ಲಿ ಕೊಡಬಹುದು : 'ಕಾವ್ಯಾವಲೋಕನ'ದ

"ಪ್ರಣುತಗುಣರೆನಿಪ ವಿಬುಧಾಗ್ರಣಿಗಳ್...." ಎಂಬೊಂದು ಪದ್ಯದ ಮೂಲಕ ಆತನಿಗೆ ಹಿಂದೆ ಶಂಖವರ್ಮ, ಹರಿಪಾಲ, ಹಂಸರಾಜರೆಂಬ ಕವಿಗಳೂ 'ಭಾಷಾಭೂಷಣ'ದೊಳಗಿನ 'ದೀರ್ಘೋಕ್ತಿರ್ನಯಸೇನಸ್ಯ' ಎಂಬ ಸೂತ್ರದ ಮೂಲಕ ನಯಸೇನನೆಂಬ ಕವಿ (ಧರ್ಮಾಮೃತಕಾರನಿಗಿಂತ ಭಿನ್ನನಿರಬಹುದು), 'ಶಬ್ದಮಣಿದರ್ಪಣ'ದ "ಅಹಿಂಸಾಪರಮೋ ಧರ್ಮಮೆಂಬುದಂ...." ಎಂಬ ಪ್ರಯೋಗದಿಂದ ಬ್ರಹ್ಮಶಿವ ಕವಿ, "ಎಣ್ಣೆಯೊಳರನೇಱುಲ ತನಿವಣ್ಣಂ...." ಎಂಬ ಪ್ರಯೋಗದಿಂದ ಹರಿಹರ ಕವಿ—ಈ ಕವಿಗಳೂ ಆ ಲಕ್ಷಣಕಾರಂಗೆ ಹಿಂದೆ ಇದ್ದವರೆಂಬುದು ಖಚಿತವಾಗುತ್ತದೆ. ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ದ ಕಾಲ ಸು. ೧೨೪೫ ಎಂದು ಈಗ ಸಾಧಾರಣ ಗೃಹೀತವಾದ ಕಾಲವಾಗಿದ್ದು, ಗುಣನಂದಿ, ಕವಿಕಾಮ, ಇಮ್ಮಡಿ ಗುಣವರ್ಮ, ಕಮಲಭವ ಮುಂತಾದ ಕವಿಗಳ ಗ್ರಂಥಗಳಿಂದ ಪದ್ಯಗಳನುದ್ಧರಿಸಿ ಆತ ಬರೆಯುವುದರಿಂದ ಅವರೆಲ್ಲ ಸು. ೧೨೪೫ಕ್ಕಿಂತ ಹಿಂದೆ ಇದ್ದವರೆಂದು ತಿಳಿಯಬಹುದು. ಹಾಗೆಯೇ ಅಭಿನವ ವಾದಿ ವಿದ್ಯಾನಂದನ 'ಕಾವ್ಯಸಾರ' ಕ್ರಿ.ಶ. ೧೫೩೩ರಲ್ಲಿ ರಚಿತವಾದ ಗ್ರಂಥವಾಗಿದ್ದು, ಇದರಲ್ಲಿ ಗುಣವರ್ಮನಿಂದ ಹಿಡಿದು ಮಧುರ, ಚಂದ್ರಕವಿಗಳವರೆಗೆ ಕೆಲವರ ಪದ್ಯಗಳು ಆಕರಗಳೊಡನೆ ಉದ್ಧೃತವಾಗಿರುವುದರಿಂದ ಆಯಾ ಕವಿ ಈ ಸಂಕಲನ ಕರ್ತೃವಿಗಿಂತ ಹಿಂದೆ ಇದ್ದವನೆಂಬುದು ನಿರ್ಣಯವಾಗುತ್ತದೆ.

ಆದರೆ ಇಲ್ಲಿ ಎದುರಿಸಬೇಕಾದ ತೊಡಕುಗಳೂ ಕೆಲವು ಉಂಟು. ಈ ಸಾಕ್ಷ್ಯಗ್ರಂಥಗಳ ಕೆಲವು ಪ್ರತಿಗಳಲ್ಲಿ ಕೆಲವೊಮ್ಮೆ ಉತ್ತರಕಾಲೀನ ಕವಿಗಳ ರಚನೆಗಳೂ ಪ್ರತಿಕಾರರ ಕೈವಾಡದಿಂದ ಸೇರಿಬಿಟ್ಟು ಭ್ರಾಂತಿಗೆ ಅವಕಾಶವಾಗಿದೆ. ಉದಾ: 'ಸೂಕ್ತಿಸುಧಾರ್ಣವ'ದ ಕೆಲವು ಪ್ರತಿಗಳಲ್ಲಿ, ಆ ಗ್ರಂಥ ರಚಿತವಾದ ೧೪೦ ವರ್ಷಗಳ ಅನಂತರ ಸು. ೧೩೮೫ರಲ್ಲಿ ಬಂದ ಮಧುರನು ಬರೆದ 'ಧರ್ಮನಾಥ ಪುರಾಣ'ದಿಂದ ತೆಗೆದ ಪದ್ಯಗಳು ಹಲವು ಕಂಡುಬರುತ್ತವೆ. ಆಗ್ಗೆ ಗ್ರಂಥಸಂಪಾದನ ನಿಯಮಗಳನ್ನು ಅನ್ವಯಿಸಿ ಪ್ರಕ್ಷೇಪಗಳನ್ನು ಬೇರ್ಪಡಿಸಿಕೊಳ್ಳಬೇಕಾಗುತ್ತದೆ.

ಅಧ್ಯಾಯ ಮೂರು

# ಭಾರತೀಯ ಹಿನ್ನೆಲೆ

## ಸಿಂಧು ಸಂಸ್ಕೃತಿ

ಜನಜೀವನದಲ್ಲಿ ಸಾರಭೂತವೂ ಸತ್ತ್ವಯುತವೂ ಆದ ಭಾಗ ಅದರ ಸಾಹಿತ್ಯದಲ್ಲಿ ಮೂಡಿಬರುತ್ತದೆ. ಕಾಲಕಾಲಕ್ಕೆ ತಾನು ಕಂಡ ಭಾವನೆಗಳನ್ನೂ ಉಂಡ ಅನುಭವಗಳನ್ನೂ ಅಭಿವ್ಯಕ್ತಗೊಳಿಸುವುದಕ್ಕೆ ಇರುವ ಅನೇಕ ಮಾರ್ಗಗಳಲ್ಲಿ ಭಾಷೆಯೂ ಒಂದು. ಇತರ ಸಾಧನಗಳಿಗಿಂತ ಅದು ಪ್ರಮುಖವೂ ವ್ಯಾಪಕವೂ ನಿಸ್ಪಷ್ಟವೂ ಆದುದೆಂದು ಹೇಳಬಹುದು. ತನ್ನ ಭಾವನೆಗಳನ್ನು ಭಾಷೆಯ ರೂಪದಲ್ಲಿ ಹಿಡಿದಿಡುವುದನ್ನು ಮನುಷ್ಯ ಕಂಡುಕೊಂಡುದು ಆತನ ವಿಕಾಸಮಾರ್ಗದಲ್ಲಿ ಅತ್ಯಂತ ಪ್ರಮುಖವಾದ ಹೆಜ್ಜೆ. ಅವನ ಸುತ್ತಮುತ್ತಲಿನ ಪರಿಸರ ಪ್ರಭಾವ ಮತ್ತು ಸ್ವಭಾವಗಳಿಗನುಗುಣವಾಗಿ ಬೇರೆ ಬೇರೆ ಭಾಷೆಗಳು ರೂಪುಗೊಂಡುವು. ಪ್ರಾರಂಭದ ಆ ದೆಸೆಯಲ್ಲಿ ಅವನು ಆಡಿದುದೆಲ್ಲ ಕಾವ್ಯವಾಯಿತು, ನುಡಿದುದೆಲ್ಲ ಸಾಹಿತ್ಯವಾಯಿತು. ಆದರೆ ಕ್ರಮೇಣ ಅವನ ಭಾವನೆಗಳು ಮತ್ತು ವಿಚಾರ ವಿಮರ್ಶೆಯ ಬುದ್ಧಿಶಕ್ತಿಗಳು ಬೆಳೆದಂತೆಲ್ಲಾ ಅವುಗಳಿಂದ ಉಂಟಾದ ತನ್ನ ಅನುಭವಗಳನ್ನು ಅಭಿವ್ಯಕ್ತಗೊಳಿಸುವುದರಲ್ಲಿಯೂ ಅನೇಕ ಪ್ರಯತ್ನಗಳು ನಡೆದುವು. ಪ್ರಾಚೀನ ಪ್ರಪಂಚದ ಇತಿಹಾಸವನ್ನು ನೋಡುವಾಗ ಈ ಅನೇಕ ಭಾಷೆಗಳ ಮತ್ತು ಅವುಗಳ ಸಾಹಿತ್ಯರೂಪಗಳ ಶೈಶವಾವಸ್ಥೆಯಲ್ಲಿ ಇದನ್ನು ನೋಡಬಹುದು.

ಪ್ರಪಂಚದ ಅತ್ಯಂತ ಪ್ರಾಚೀನವಾದ ಭಾಷೆಗಳಲ್ಲಿ ಸಂಸ್ಕೃತವೂ ಒಂದು. ಅದು ಭರತಖಂಡಕ್ಕೆ ಕಾಲಿಟ್ಟ ಕಾಲದ ವಿಚಾರದಲ್ಲಿ, ಮತ್ತು ಆ ಕಾಲದಲ್ಲಿ ಇಲ್ಲಿದ್ದ ಜನಾಂಗಗಳು ಮತ್ತು ಅವರ ಭಾಷೆಗಳ ಮೇಲೆ ಅದು ಬೀರಿದ ಪ್ರಭಾವವನ್ನು ನಿರೂಪಿಸುವಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಆದರೆ ಆ ಕಾಲದ ಸಂಸ್ಕೃತಿಯೆಲ್ಲವನ್ನೂ ಅರಗಿಸಿಕೊಂಡು ಅತ್ಯಂತ ವ್ಯಾಪಕವಾದ ಭಾರತೀಯ ಆದರ್ಶವೊಂದನ್ನು ಹಾಕಿಕೊಡಲು ಅದು ಸಮರ್ಥವಾಯಿತೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರಲು ಕಾರಣವಿಲ್ಲ. ಎಲ್ಲ ವೈವಿಧ್ಯಗಳನ್ನೂ ಏಕತೆಯ ಸೂತ್ರದಲ್ಲಿ ಹಿಡಿದು ಬೆಸೆಯಬಲ್ಲ ಜೀವಂತಶಕ್ತಿಯಾಗಿ ಸಂಸ್ಕೃತ ಪರಿಣಮಿಸಿತು. ಇಲ್ಲಿನ ಜನಜೀವನ ಮತ್ತು ಸಂಸ್ಕೃತಿಯ ಪ್ರವಾಹ ಹರಿಯಬೇಕಾದ ದಿಕ್ಕನ್ನು ನಿರ್ದೇಶಿಸಿತು, ನಿರ್ದಿಷ್ಟಗೊಳಿಸಿತು. ದೇಶದ ವಿಸ್ತಾರಕ್ಕನುಗುಣವಾಗಿ, ಭರತಖಂಡದಲ್ಲಿ ಹಲವಾರು ಭಾಷೆಗಳು, ಆಚಾರ ವ್ಯವಹಾರಗಳು, ತಲೆದೋರಿದುದು ನಿಜ. ಆದರೆ ಈ

ತೋರಿಕೆಯ ತೆರೆಗಳ ಹಿಂದೆ ಇವುಗಳಿಗೆಲ್ಲಾ ಆಶ್ರಯಭೂತವಾದ ಮಹಾಸಂಸ್ಕೃ ಸಾಗರ ರೂಪಿತವಾಯಿತು. ಪ್ರಾದೇಶಿಕವಾದ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಅದ ಬೇರೆ ಬೇರೆ ರೂಪವನ್ನು ಧರಿಸಿ ವ್ಯಕ್ತವಾಯಿತಾದರೂ ಅದರ ಅಂತರಂಗದಲ್ಲಿ ಹರಿ ಅದನ್ನು ಜೀವಂತಗೊಳಿಸಿರುವ ಚೈತನ್ಯಶಕ್ತಿ ಒಂದೇ. ಅದು ಭಾರತೀಯಶಕ್ತಿ, ಉತ್ತರದ ಹಿಮಾಲಯದ ಉತ್ತುಂಗ ಶಿಖರಗಳಿಂದ ಹಿಡಿದು ದಕ್ಷಿಣದಲ್ಲಿ ವಿಸ್ತಾರವಾದ ಹಿಂದೂ ಸಾಗರದವರೆಗೆ ಭರತಖಂಡವನ್ನು ಓತಪ್ರೋತವಾಗಿ ವ್ಯಾಪಿಸಿರುವ ಆಧ್ಯಾತ್ಮಿಕ ಸಂಸ್ಕೃ ಶಕ್ತಿ. ಕನ್ನಡ ಸಾಹಿತ್ಯವನ್ನು ಅವಲೋಕಿಸುವಾಗಲೂ ಈ ಮಾತನ್ನು ನಾವು ಮರೆಯ ವಂತಿಲ್ಲ. ಆದುದರಿಂದಲೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ನೋಡುವುದಕ್ಕೆ ಮೊದಲ ಭಾರತೀಯ ಸಂಸ್ಕೃತಿ ಮತ್ತು ಧಾರ್ಮಿಕ ಸ್ವರೂಪವನ್ನು ಅದಕ್ಕೆ ಹಿನ್ನೆಲೆಯಾಗಿ ಸ್ವಲ್ ಮಟ್ಟಿಗಾದರೂ ನೋಡಬೇಕಾಗುತ್ತದೆ.

ಭರತಖಂಡದ ಸಂಸ್ಕೃತಿ, ಪ್ರಾಚೀನ ಅರ್ವಾಚೀನಗಳೆರಡನ್ನೂ ಸೇರಿಸುವ ಸಾವ ರಸ್ಯದ ಶಕ್ತಿಯಾಗಿ ಪರಿಣಮಿಸಿದೆ. ಪ್ರಾಚೀನಯುಗದಲ್ಲಿ ಬೆಳೆದು ಬಾಳಿದ ಎಷ್ಟೊ ಸಂಸ್ಕೃತಿ ಮತ್ತು ನಾಗರಿಕತೆಗಳು ಇಂದು ಇತಿಹಾಸದ ಪುಟಗಳಲ್ಲಿ ಮಾತ್ರ ಉಳಿದ ಕೊಂಡಿವೆ. ಆದರೆ ಈ ಸಂಸ್ಕೃತಿ, ಇತಿಹಾಸಕ್ಕೆ ಅಸ್ಪಷ್ಟವಾದ ಪ್ರಾಚೀನತೆಯಿಂದ ಹಿಡಿದ ಇಲ್ಲಿಯವರೆಗೂ ನಿರಂತರವಾಗಿ ಹರಿದುಬಂದಿದೆ. ಸತತ ಪರಿವರ್ತನಶೀಲವಾದ ಈ ಜೀವನದ ಹಿನ್ನೆಲೆಯಾಗಿರುವ ಶಾಶ್ವತವಾದ ಮೌಲ್ಯಗಳನ್ನು ಅದು ಆ ಕಾಲದಲ್ಲಿಯೇ ಕಂಡ ಕೊಂಡುದು ಅದರ ಈ ಚಿರಂತನತೆಗೆ ಪ್ರಮುಖ ಕಾರಣವೆಂದು ತೋರುತ್ತದೆ. ಕಂಡ ಕೊಂಡುದು ಮಾತ್ರವಲ್ಲ, ಆ ಮೌಲ್ಯಗಳನ್ನು ಜೀವನದಲ್ಲಿ ಹಾಸುಹೊಕ್ಕಾಗಿ ಅಳವಡಿ ಕೊಳ್ಳುವಂತಹ ಮಾರ್ಗಗಳನ್ನು ಅದು ರೂಪಿಸಿಕೊಟ್ಟಿತು. ತಾತ್ವಿಕ ಜಿಜ್ಞಾಸೆ ಮತ್ ಧಾರ್ಮಿಕ ಆಚರಣೆಗಳ ಸಮನ್ವಯವೇ ಭರತಖಂಡದ ಸಂಸ್ಕೃತಿಯ ವೈಶಿಷ್ಟ್ಯ: ಮತ್ ಅದರ ನಿತ್ಯನೂತನತೆಯ ರಹಸ್ಯ.

ಮೊಹೆಂಜೊದಾರೋ ಮತ್ತು ಹರಪ್ಪಾಗಳಲ್ಲಿನ ಪ್ರಾಚೀನ ಅವಶೇಷಗಳು ದೊರೆಯ ವುದಕ್ಕೆ ಮೊದಲು ಭರತಖಂಡದ ಸಂಸ್ಕೃತಿಯ ಪ್ರಾಚೀನತೆಯನ್ನು ಕುರಿತ ಸ್ಪಷ್ಟವಾ ಕಲ್ಪನೆ ಇರಲಿಲ್ಲ. ಅತ್ಯಂತ ಪ್ರಾಚೀನವಾದ ನಾಗರಿಕತೆಗಳನ್ನುಳ್ಳ ದೇಶಗಳ ಸಾಲಿನ ಬಹುಶಃ ಆಗ ಭರತಖಂಡದ ಹೆಸರು ಬರುತ್ತಿರಲಿಲ್ಲ. ಆದರೆ ಸಿಂಧು ಸಂಸ್ಕೃತಿಯ ಅವಶೇ ಗಳು ಬೆಳಕಿಗೆ ಬಂದಮೇಲೆ ಪ್ರಾಚೀನ ನಾಗರಿಕತೆಗಳ ಅಭ್ಯಾಸಕ್ಕೆ ಒಂದು ಉಜ್ವಲವಾ ಹೊಸ ಅಧ್ಯಾಯ ಸೇರಿದಂತಾಯಿತು. ಭರತಖಂಡದ ಸಂಸ್ಕೃತಿಯ ಇತಿಹಾಸವನ ಸಾವಿರಾರು ವರ್ಷಗಳಷ್ಟು ಹಿಂದಕ್ಕೆ ಈ ಸಂಶೋಧನೆಗಳು ಕೊಂಡೊಯ್ದುವು.

ಸಿಂಧು ಸಂಸ್ಕೃತಿಯ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಇನ್ನೂ ಸಾಧ್ಯವಾಗಿ ಈಗಿರುವ ಆಧಾರಗಳಿಂದ ಸುಮಾರು ಕ್ರಿ.ಪೂ. ೩೫೦೦ರಿಂದ ೧೫೦೦ರವರೆಗೆ ಈ ಸಂಸ್ ಬಾಳಿ ಬೆಳಗಿತೆಂದು ಹೇಳಬಹುದು. ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಭರತಖಂಡ ಸಂಸ್ಕೃತಿಯ ವಿಕಾಸಕ್ಕೆ ಕಾರಣವಾದ ಹಿನ್ನೆಲೆಯನ್ನು ನಿರ್ಮಿಸಿದ ಪ್ರಭಾವದ ದೃ

ಂದಲೂ ಸಿಂಧು ಸಂಸ್ಕೃತಿ ಗಮನಾರ್ಹವಾದುದು. ಆ ದೃಷ್ಟಿಯಿಂದ ಅದರ ಸ್ವರೂಪ ನ್ನು ಒಂದೆರಡು ಮಾತುಗಳಲ್ಲಿ ಇಲ್ಲಿ ನೋಡಬಹುದು.

ತನ್ನ ಸಮಕಾಲೀನ ಸಂಸ್ಕೃತಿಗಳೆಲ್ಲವುಗಳಿಗಿಂತಲೂ ಅನೇಕ ವಿಚಾರಗಳಲ್ಲಿ ಬಹಳ ಂದಿತ್ತು ಮೊಹೆಂಜೊದಾರೋ ಹರಪ್ಪಾಗಳ ಸಂಸ್ಕೃತಿ. ಸಮಾಜದ ಜನಸಾಮಾನ್ಯರೂ ವನದ ಎಲ್ಲ ಅನುಕೂಲತೆಗಳನ್ನೂ ಪಡೆದು ನೆಮ್ಮದಿಯಿಂದ ಬಾಳಲು ಸಹಾಯಕವಾದ ವಸ್ಥೆಯನ್ನು ಆ ಪ್ರಾಚೀನಯುಗದಲ್ಲಿಯೇ ರೂಪಿಸಿಕೊಂಡುದು ಇದರ ವೈಶಿಷ್ಟ್ಯವೆನ್ನ ಹುದು. ನಗರ ನಿರ್ಮಾಣದ ಕುಶಲತೆ, ಮನೆಗಳ ರಚನೆಯಲ್ಲಿ ಕಂಡುಬರುವ ಅಚ್ಚು ಟ್ಟು, ಮತ್ತು ಒಳಚರಂಡಿ ವ್ಯವಸ್ಥೆ ಇವು ಮೆಚ್ಚತಕ್ಕವು. ಅಲ್ಲಿನ ರಸ್ತೆಗಳು ಬೆರಗು ಾಳಿಸುವಂತಿವೆ. ಮುಖ್ಯಬೀದಿ ವಿಶಾಲವಾಗಿದೆ. ಬಹುಶಃ ಆ ಕಾಲದಲ್ಲಿ ಇದ್ದಿರಬಹು ಾದ ವಾಹನಗಳಿಗೂ ಪಾದಚಾರಿಗಳಿಗೂ ಓಡಾಟಕ್ಕೆ ಅದು ಅನುಕೂಲವಾಗಿದೆ. ುಖ್ಯಬೀದಿಗೆ ಬಂದು ಸೇರುವ ಇನ್ನೂ ಅನೇಕ ಚಿಕ್ಕ ಚಿಕ್ಕ ಬೀದಿಗಳೂ ಕಾಣು ವೆ.

ಮನೆಗಳನ್ನು ಕಟ್ಟುವುದರಲ್ಲಿ ಅವರು ತೋರಿರುವ ಕುಶಲತೆ ಮತ್ತು ಅನುಕೂಲತೆಯು ಷ್ಟಿ ಗಮನಾರ್ಹವಾಗಿವೆ. ತೆರೆದ ಅಂಗಳ (open courtyard) ಅಲ್ಲಿನ ಮನೆಗಳಲ್ಲಿ ಾಣುವ ಮುಖ್ಯ ಲಕ್ಷಣ. ಅಂಗಳದ ಸುತ್ತಲೂ ಅನೇಕ ಕೋಣೆಗಳಿರುತ್ತಿದ್ದುವು; ತ್ತು ಅವುಗಳ ಮೇಲೆ ಮಹಡಿಯೂ ಇರುತ್ತಿತ್ತು. ಮಹಡಿಯ ಕೋಣೆಗಳು ಹೆಚ್ಚಾಗಿ ್ಯನ ಮತ್ತು ವಾಸಕ್ಕಾಗಿ ಉಪಯೋಗವಾಗುತ್ತಿದ್ದಂತೆ ತೋರುತ್ತದೆ. ಕೆಳಗಿನ ಕೋಣೆ ು ಸಾಮಾನ್ಯವಾಗಿ ಅಡುಗೆ ಮನೆ ಮತ್ತು ಉಗ್ರಾಣಗಳಾಗಿರುತ್ತಿದ್ದುವು. ಸ್ನಾನಮಾಡಿ ಿದ ನೀರನ್ನು ಮೇಲ್ಮಟ್ಟದಿಂದ ಕೆಳಗೆ ಸಾಗಿಸಲು ಮಣ್ಣಿನ ಕೊಳವೆಗಳನ್ನು ಬಳಸು ದ್ದರು. ಅನಂತರ ಅದು ನಗರದ ಒಳಚರಂಡಿಗೆ ಹೋಗಿ ಸೇರುವಂತಿತ್ತು. ಚರಂಡಿಗಳ ರು ಭೂಮಿಯಲ್ಲಿ ಇಂಗಿಹೋಗದಂತೆ ಸುಡಕೆಯ ಚೂರುಗಳಿಂದ ಅವುಗಳನ್ನು ಕಟ್ಟು ದ್ದರು. ಇಂತಹ ಚರಂಡಿಗಳ ನಿರ್ಮಾಣ ಪ್ರಾಚೀನ ಪ್ರಪಂಚದಲ್ಲಿ ಕಂಡುಬಂದಿರು ದು ಸಿಂಧು ಸಂಸ್ಕೃತಿಯಲ್ಲಿ ಮಾತ್ರ.

ಮನೆಗಳಲ್ಲಿ ಸ್ನಾನಗೃಹಗಳಿದ್ದಂತೆ ಸಾರ್ವಜನಿಕ ಸ್ನಾನದ ತೊಟ್ಟಿಗಳೂ ಅಲ್ಲಲ್ಲಿ ಇದ್ದುವು. ಂತಹ ಒಂದು ಸ್ನಾನದ ಕೊಳ (great bath) ಮೊಹೆಂಜೊದಾರೋದಲ್ಲಿ ಸಿಕ್ಕಿದೆ. × ೨೩ ಚದರಡಿ ವಿಸ್ತಾರವಾಗಿದೆ ಆ ಈಜುಕೊಳ. ಅದರ ಸುತ್ತ ೧೮೦ × ೧೦೮ ದರಡಿ ವಿಸ್ತಾರವಾದ ಕಟ್ಟಡ ನಿರ್ಮಿತವಾಗಿದೆ. ಇದರ ಒಳ ಅಂಗಳದ ನಾಲ್ಕು ಕಡೆ ಂದಲೂ ಕೆಳಕ್ಕೆ ಬರಲು ಅನುಕೂಲವಾದ ಮಾರ್ಗವಿದೆ. ಈ ಸ್ನಾನದ ಕೊಳಕ್ಕೆ ಹೊಸ ರನ್ನು ತುಂಬುವ ಮತ್ತು ಹಳೆಯ ನೀರನ್ನು ಹೊರಕ್ಕೆ ಹಾಕುವ ವ್ಯವಸ್ಥೆಯೂ ಸಮರ್ಪಕ ಗಿದೆ. ಈ ಬಗೆಯ ಈಜುವ ಕೊಳ ಮತ್ತು ಅದರ ಸುತ್ತುಕಟ್ಟಡ ಇನ್ನಾವ ಪ್ರಾಚೀನ ಗರಿಕತೆಯಲ್ಲಿಯೂ ಕಂಡುಬಂದಿಲ್ಲವೆಂಬುದು ಡಾ. ಮೆಕ್ಕೆಯವರ ಅಭಿಪ್ರಾಯ.

ಇಂತಹದೇ ಇನ್ನೊಂದು ಆಶ್ಚರ್ಯಕರವಾದ ಕಟ್ಟಡವೆಂದರೆ ಹರಪ್ಪಾದ ದೊಡ್ಡ ಕಣಜ.

ಉತ್ತರ ದಕ್ಷಿಣವಾಗಿ ಇದರ ಉದ್ದ ೧೬೯ ಅಡಿಗಳೂ ಪೂರ್ವ ಪಶ್ಚಿಮವಾಗಿ ಇದರ ಅಗಲ ೧೩೫ ಅಡಿಗಳೂ ಇವೆ. ಇದರ ಮಧ್ಯದಲ್ಲಿ ೨೩ ಅಡಿಗಳ ಒಂದು ಓಣಿ ಇದನ್ನು ಸಮವಾದ ಎರಡು ಭಾಗಗಳನ್ನಾಗಿ ಬೇರ್ಪಡಿಸುತ್ತದೆ. ಒಂದೊಂದರಲ್ಲಿಯೂ ಆರು ಕೋಣೆಗಳಿವೆ. ಅವುಗಳಲ್ಲಿ ಒಂದೊಂದನ್ನೂ ನಾಲ್ಕು ಚಿಕ್ಕ ಭಾಗಗಳನ್ನಾಗಿ ವಿಭಾಗಿಸಲಾಗಿದೆ. ನಾಣ್ಯಗಳ ವ್ಯವಸ್ಥೆ ಇಲ್ಲದಿರುವಾಗ ಜನರು ಸರ್ಕಾರಕ್ಕೆ ಸಲ್ಲಿಸುವ ತೆರಿಗೆಯನ್ನು ಧಾನ್ಯ ರೂಪದಲ್ಲಿಯೇ ಕೊಡಬೇಕಾಗಿತ್ತು. ಅಂತಹ ಧಾನ್ಯದ ಶೇಖರಣೆಗಾಗಿ ಈ ಕಣಜ ನಿರ್ಮಿತವಾದುದೆನ್ನಬಹುದು. ಮೊಹೆಂಜೊದಾರೋದಲ್ಲಿಯೂ ಇದನ್ನೇ ಹೋಲುವ ಒಂದು ಕಣಜ ದೊರೆತಿದೆ. ಕ್ರೀಟ್ (Crete) ನಾಸಸ್ (Cnossus) ಮೊದಲಾದ ಕೆಲವು ಪ್ರಾಚೀನ ನಾಗರಿಕತೆಗಳಲ್ಲಿಯೂ ಇಂತಹ ಕಣಜವನ್ನು ಹೋಲುವ ಕಟ್ಟಡಗಳು ಕಂಡು ಬರುತ್ತವೆ.

ವ್ಯವಸಾಯವೇ ಈ ಜನರ ಮುಖ್ಯ ಕಸುಬಾಗಿತ್ತು. ಗೋಧಿ ಅವರ ಮುಖ್ಯ ಬೆಳೆ. ಜೊತೆಗೆ ಬತ್ತ, ಬಾರ್ಲಿ ಮೊದಲಾದುವುಗಳನ್ನು ಬೆಳೆಯುತ್ತಿದ್ದರು. ಹತ್ತಿಯನ್ನು ಬೆಳೆಯುವುದನ್ನೂ ಮತ್ತು ಅದರಿಂದ ಬಟ್ಟೆಯನ್ನು ನೆಯ್ಯುವುದನ್ನೂ ಈ ಜನ ಕಲಿತಿದ್ದರು. ಬಣ್ಣ ಹಾಕಿರುವ ಹತ್ತಿಬಟ್ಟೆಯ ಚೂರೊಂದು ಅಲ್ಲಿನ ಪ್ರಾಚೀನ ಅವಶೇಷಗಳಲ್ಲಿ ದೊರೆತಿದೆ; ಅಲ್ಲದೆ ನೂಲನ್ನು ತೆಗೆಯಲು ಉಪಯೋಗಿಸುತ್ತಿದ್ದ ಅನೇಕ ಕದಿರುಗಳೂ ಸಿಕ್ಕಿವೆ. ಹತ್ತಿ ಮತ್ತು ಉಣ್ಣೆಯ ನೂಲನ್ನು ಕದಿರಿನಿಂದ ತೆಗೆದು ಅದರಿಂದ ಬಟ್ಟೆಯನ್ನು ಮಾಡುವುದು ಇವರಿಗೆ ಕರಗತವಾಗಿತ್ತು. ಇಲ್ಲಿಂದ ಹತ್ತಿಯ ಬಟ್ಟೆ ಮೆಸಪಟೋಮಿಯ ಮೊದಲಾದ ಕಡೆಗಳಿಗೆ ರಫ್ತಾಗುತ್ತಿದ್ದಂತೆ ತೋರುತ್ತದೆ. ಅಫ್ಘಾನಿಸ್ಥಾನ ಪರ್ಶಿಯ ಮುಂತಾದ ದೇಶಗಳೊಡನೆಯೂ ಇವರು ವ್ಯಾಪಾರಸಂಬಂಧವನ್ನಿಟ್ಟುಕೊಂಡಿದ್ದರು. ದಕ್ಷಿಣ ಇಂಡಿಯಾದೊಡನೆಯೂ ವಿಶೇಷ ಸಂಬಂಧವಿದ್ದುದಕ್ಕೆ ನಿದರ್ಶನಗಳಿವೆ.[1]

ಉಡುಗೆಗಳನ್ನು ಉಡುತ್ತಿದ್ದಂತೆಯೇ ಆಭರಣಗಳನ್ನೂ ಅವರು ಧರಿಸುತ್ತಿದ್ದರು. ಅಲ್ಲಿ ದೊರೆತ ಅನೇಕ ಆಭರಣಗಳು, ಅವುಗಳಲ್ಲಿ ಅವರಿಗೆ ವಿಶೇಷ ಒಲವಿತ್ತೆಂಬುದನ್ನು ತೋರಿಸುತ್ತವೆ. ಚಿನ್ನ ಬೆಳ್ಳಿ ತಾಮ್ರ ಮೊದಲಾದ ಅನೇಕ ಲೋಹಗಳಿಂದಲೂ ಫಯಾನ್ಸ್ ಮತ್ತು ಜೇಡಿಮಣ್ಣುಗಳಿಂದಲೂ ಅನೇಕ ಬಗೆಯ ಆಭರಣಗಳನ್ನು ಅವರು ಮಾಡುತ್ತಿದ್ದರು. ಕೊರಳಹಾರ, ಡಾಬು, ಉಂಗುರ, ಕಾಲಂದಿಗೆ, ಕೈಕಡಗ ಮೊದಲಾದ ಆಭರಣಗಳನ್ನು ಸ್ತ್ರೀಯರು ಧರಿಸುತ್ತಿದ್ದರು.

ಅನೇಕ ಪ್ರಾಣಿಗಳನ್ನು ಪಳಗಿಸಿ ಅವುಗಳಿಂದ ಉಪಯೋಗವನ್ನು ಪಡೆಯುತ್ತಿದ್ದರು. ಹಸು, ಗೂಳಿ, ಎಮ್ಮೆ, ಕುರಿ, ಹಂದಿ, ನಾಯಿ, ಬೆಕ್ಕು—ಮೊದಲಾದುವು ಪ್ರಮುಖವಾದ ಸಾಕುಪ್ರಾಣಿಗಳಾಗಿದ್ದುವು. ಹಸುಗಳ ಸಂಖ್ಯೆಯಂತೂ ಅತ್ಯಧಿಕವಾಗಿದ್ದಿತೆನ್ನಬಹುದು. ಅವುಗಳ ಹಾಲು ಅವರ ಆಹಾರದ ಒಂದು ಮುಖ್ಯಭಾಗವಾಗಿದ್ದಿರಬೇಕು. ಕುದುರೆಗಳನ್ನು ಇವರು ಸಾಕುತ್ತಿದ್ದರೇ ಎಂಬ ವಿಚಾರ ಸಂದೇಹಾಸ್ಪದವಾಗಿ ಉಳಿದಿದೆ. ಕಾಡುಕೋಣ, ಹುಲಿ, ಕರಡಿ, ಘೇಂಡಾಮೃಗ ಮತ್ತು ಕಪಿಗಳನ್ನು ಇವರು ಬಲ್ಲವರಾಗಿದ್ದ

ರೆಂಬುದಕ್ಕೆ ಅವರು ಜೇಡಿಮಣ್ಣಿನಿಂದ ಮಾಡಿದ ಆಟದ ಸಾಮಾನುಗಳೇ ಸಾಕ್ಷಿಗಳಾಗಿವೆ.

ಅವರು ದಿನಬಳಕೆಯಲ್ಲಿ ಬಳಸುತ್ತಿದ್ದ ಕೆಲವು ಉಪಕರಣಗಳ ಪರಿಚಯವೂ ಅಲ್ಲಿ ದೊರೆತಿರುವ ಅವಶೇಷಗಳಿಂದ ನಮಗಾಗುತ್ತದೆ. ತಾಮ್ರ ಮತ್ತು ಕಂಚಿನ ಉಪಕರಣಗಳಲ್ಲದೆ ಕೆಲವು ಕಲ್ಲಿನ ಆಯುಧಗಳೂ ದೊರೆತಿವೆ. ಈ ಯುಗಕ್ಕಿಂತ ಹಿಂದಿನ ಶಿಲಾಯುಗದ ನಾಗರಿಕತೆಯೂ ಇಲ್ಲಿದ್ದಿರಬಹುದೆಂಬುದಕ್ಕೆ ಇದು ಪುಷ್ಟಿಯನ್ನು ಕೊಡುತ್ತದೆ. ಭರ್ಜಿ, ಶೂಲ, ಬಾಣ, ಕತ್ತಿ ಮೊದಲಾದ ಯುದ್ಧೋಪಕರಣಗಳೂ ಚಾಕು ಗರಗಸ ಮೊದಲಾದ ಗೃಹೋಪಕರಣಗಳೂ ಇಲ್ಲಿ ದೊರೆತಿವೆ. ಬಾಚಿ, ತಾಮ್ರದ ಕಾವಲಿಗಳು, ತಟ್ಟೆಗಳು, ಬೀಸುವ ಕಲ್ಲು, ಚಿಪ್ಪಿನ ಸೌಟು, ಬೆಳ್ಳಿಯ ಪಾತ್ರೆ—ಇವೇ ಮೊದಲಾದುವು ಇಲ್ಲಿ ಸಿಕ್ಕಿರುವ ಇತರ ಉಪಕರಣಗಳು.

ಅವರು ಉಪಯೋಗಿಸುತ್ತಿದ್ದ ಮಡಕೆಗಳಂತೂ ವಿಶೇಷ ಪರಿಶೀಲನೆಗೆ ಅರ್ಹವಾಗಿವೆ. ಪ್ರಾಚೀನ ನಾಗರಿಕತೆಗಳ ಅಧ್ಯಯನದಲ್ಲಿ ಇವುಗಳ ಪಾತ್ರ ಬಹಳ ಮಹತ್ತ್ವದ್ದೆಂಬುದು ವಿದ್ವಾಂಸರ ಅಭಿಪ್ರಾಯ. ಏಕೆಂದರೆ ಭೂಮಿಯ ಆಳದಲ್ಲಿ ಬಹಳ ಕಾಲ ಉಳಿಯುವ ಶಕ್ತಿಯನ್ನು ಇವು ಪಡೆದಿರುತ್ತವೆ. ಮೊಹೆಂಜೊದಾರೋ ಮತ್ತು ಹರಪ್ಪಾಗಳಲ್ಲಿ ದೊರಕುವ ಮಡಕೆಗಳು ಹೆಚ್ಚಾಗಿ ಜೇಡಿಮಣ್ಣಿನಿಂದ ನಿರ್ಮಿತವಾದವುಗಳು. ಅನೇಕ ಬಣ್ಣದ ಜಾಡಿಗಳನ್ನೂ ವಿವಿಧ ರೀತಿಯ ಮಡಕೆಗಳನ್ನೂ ಮಾಡುವುದರಲ್ಲಿ ಅವರು ಕುಶಲರಾಗಿದ್ದರು. ಅನೇಕ ಮಡಕೆಗಳ ಮೇಲೆ ವರ್ಣಾಲಂಕಾರವೂ ಉಂಟು. ಹೀಗೆ ಮಡಕೆಗಳ ಮೇಲೆ ನಿರ್ಮಿತವಾದ ಚಿತ್ರಗಳೂ ಕೆಲವು ಆಭರಣಗಳೂ ಅವರ ಕಲಾಕೌಶಲಕ್ಕೆ ಒಳ್ಳೆಯ ಸಾಕ್ಷಿಗಳಾಗಿವೆ.

ಶಿಲ್ಪಕಲೆಯಲ್ಲಿ ಅವರ ಪರಿಣತಿ ಅಚ್ಚರಿಯನ್ನುಂಟುಮಾಡುವಂತಹದು. ಸುಣ್ಣದ ಕಲ್ಲು, ಸಾಬೂನುಗಲ್ಲು (Steatite) ಮೊದಲಾದ ಮೃದುವಾದ ಶಿಲೆಗಳಿಂದ ನಿರ್ಮಿತವಾದ ಮೂರ್ತಿಗಳು ಆ ಕಾಲದ ಶಿಲ್ಪಕಲೆಗೆ ಶಾಶ್ವತ ಸ್ಮಾರಕಗಳಾಗಿವೆ. ಆ ಶಿಲ್ಪಗಳಲ್ಲಿ ಕೆಲವು ಪ್ರಾಣಿಗಳ ಆಕೃತಿಗಳೂ ಇವೆ. ಇನ್ನು ಕೆಲವು ಕುಳಿತಿರುವ ಭಂಗಿಯಲ್ಲಿರುವ ಕೆಲವು ಮಾನವ ವಿಗ್ರಹಗಳು. ಆ ಮಾನವಾಕೃತಿ ಅವರ ದೈವತ್ವದ ಕಲ್ಪನೆಗೆ ಸಂಕೇತವೆಂದು ಹೇಳಬಹುದು. ಈ ಶಿಲಾಮೂರ್ತಿಗಳಂತೆಯೇ ಕಂಚಿನ ಪ್ರತಿಮೆಗಳೂ ಜೇಡಿಮಣ್ಣಿನ ಕಲಾಕೃತಿಗಳೂ ಇಲ್ಲಿ ದೊರೆಯುತ್ತವೆ.

ಇನ್ನೂ ಬಹಳ ಮುಖ್ಯವಾದುವುಗಳೆಂದರೆ ಇಲ್ಲಿ ಸಿಕ್ಕಿರುವ ಮುದ್ರೆಗಳು (seals). ಸಂಸ್ಕೃತಿಯ ದೃಷ್ಟಿಯಿಂದ ಇವು ಮಹತ್ವಪೂರ್ಣವಾದುವುಗಳು. ಸಿಂಧೂ ನಾಗರಿಕತೆಯ ಉದ್ಯೋಗಶೀಲ ಕಾರ್ಯಕೌಶಲಕ್ಕೂ ಆ ಜನರ ಕಲೋಪಾಸನೆ ಧರ್ಮವೃತ್ತಿಗಳಿಗೂ ಇವು ಉಜ್ವಲವಾಗಿ ಸಾಕ್ಷಿಯನ್ನು ನುಡಿಯುತ್ತಿವೆ. ಅಂತಹ ಮುದ್ರೆಗಳು ಸುಮಾರು ೧೨೦೦ ಸಿಕ್ಕಿವೆ ಎಂಬುದು ಆ ಕಾಲದಲ್ಲಿ ಅವುಗಳಿಗಿದ್ದ ಜನಪ್ರಿಯತೆಯನ್ನೂ ಮಹತ್ವವನ್ನೂ ತೋರಿಸುತ್ತವೆನ್ನಬಹುದು.[2] ಈ ಮುದ್ರೆಗಳಲ್ಲಿ ಮುಖ್ಯವಾಗಿ ಮೂರು ಭಾಗಗಳನ್ನು ಮಾಡಬಹುದು :

ಸಾಬೂನುಗಲ್ಲಿನಿಂದಾಗಲಿ ಅಥವಾ ಜೇಡಿಮಣ್ಣಿನಿಂದಾಗಲಿ ಮಾಡಿ ಅದರ ಮೇಲೆ ಚಿತ್ರವನ್ನು ಕೊರೆದು, ಆ ಆಕೃತಿಗಳನ್ನು ಇತರ ವಸ್ತುಗಳ ಮೇಲೆ ಒತ್ತುವುದಕ್ಕಾಗಿ ನಿರ್ಮಿಸಿದ ಮುದ್ರೆಗಳು ಒಂದು ಬಗೆಯವು. ಎರಡನೆಯ ಬಗೆಯವು ಸಾಬೂನುಗಲ್ಲಿನಿಂದ ಮಾಡಿದ ಚಿಕ್ಕಚಿಕ್ಕ ಮುದ್ರೆಗಳು ಅಥವಾ 'ತಾಯಿತಿ'ಗಳು. ಜೇಡಿ ಅಥವಾ ಪಿಂಗಾಣಿಯಿಂದ ಉಬ್ಬು ಚಿತ್ರಗಳೂ ಮತ್ತು ಲಿಪಿಗಳೂ ನಿರ್ಮಾಣವಾಗುವಂತೆ ಎರಕಹೊಯ್ದು ತೆಗೆದ ಮುದ್ರೆಗಳು ಮೂರನೆಯ ರೀತಿಯವು. ಇವುಗಳಲ್ಲಿ ಎರಡನೆಯ ಬಗೆಯವು, ಒತ್ತುವುದಕ್ಕಾಗಿ ನಿರ್ಮಿತವಾದವುಗಳಲ್ಲ; ಅವುಗಳನ್ನು ದೇಹದಮೇಲೆ ಕಟ್ಟಿಕೊಳ್ಳುವ 'ತಾಯಿತಿ'ಗಳನ್ನಾಗಿ ಉಪಯೋಗಿಸುತ್ತಿದ್ದಿರಬಹುದು. ಇನ್ನುಳಿದ ಎರಡು ರೀತಿಯ ಮುದ್ರೆಗಳಿಗೆ ಒತ್ತುವುದಕ್ಕೆ ಸಹಾಯಕವಾಗುವಂತಹ ಹಿಡಿಗಳೂ ಮತ್ತು ತೂಗುಹಾಕುವುದಕ್ಕೆ ಅನುಕೂಲವಾಗುವಂತಹ ರಂಧ್ರಗಳೂ ಇವೆ. ಈ ಮುದ್ರೆಗಳು ವರ್ತುಲ, ಚೌಕ ಮೊದಲಾದ ಅನೇಕ ಆಕೃತಿಗಳನ್ನೂ ಬೇರೆ ಬೇರೆ ಆಕಾರಗಳನ್ನೂ ಗಾತ್ರಗಳನ್ನೂ ಪಡೆದಿವೆ. ಇವುಗಳ ಮೇಲಿರುವ ಲಿಪಿಗಳನ್ನು ಓದುವುದು ಇಂದಿಗೂ ವಿದ್ವಾಂಸರಿಗೆ ಒಂದು ಸಮಸ್ಯೆಯೆ ಆಗಿ ಉಳಿದಿದೆ. ಆದರೆ ಅವುಗಳ ಮೇಲಿರುವ ಆಕೃತಿಗಳು ಅವರ ಸಂಸ್ಕೃತಿಯ ಪರಿಚಯವನ್ನು ಸ್ವಲ್ಪಮಟ್ಟಿಗೆ ಮಾಡಿಕೊಡುತ್ತವೆ, ಮತ್ತು ಅವರ ಧಾರ್ಮಿಕ ಜೀವನಕ್ಕೆ ಕಿಟಕಿಯನ್ನು ತೆರೆಯುತ್ತವೆ.

ಸಿಂಧು ಸಂಸ್ಕೃತಿಯಲ್ಲಿ ಇದುವರೆಗೆ ದೊರೆತ ಅವಶೇಷಗಳಿಂದ ಅವರ ಧರ್ಮದ ಸ್ವರೂಪವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವಂತಿಲ್ಲ. ದೇವಾಲಯವೆಂದು ಹೇಳಬಹುದಾದ ಕಟ್ಟಡಗಳ ಅವಶೇಷಗಳು ಅಲ್ಲಿ ದೊರೆತಿಲ್ಲ. ದೇವಾಲಯಗಳಿಗೆ ಪ್ರಮುಖ ಸ್ಥಾನ ಅವರ ಧರ್ಮದಲ್ಲಿ ಇದ್ದಂತಿಲ್ಲ. ಮುದ್ರೆಗಳ ಮೇಲೆ ದೊರೆತಿರುವ ವಿಗ್ರಹಗಳೇ ಅಲ್ಲಿನ ಧರ್ಮದ ಸ್ವರೂಪವನ್ನು ನಿರ್ಧರಿಸಲು ಇರುವ ಪ್ರಮುಖವಾದ ಆಧಾರಗಳು. ಇವಲ್ಲದೆ ಲೋಹದ, ಜೇಡಿ ಮತ್ತು ಪಿಂಗಾಣಿ ಮಣ್ಣಿನ ವಿಗ್ರಹಗಳು ಮತ್ತು ಶಿಲೆಯ ಕೆಲವು ಶಿಲ್ಪಗಳು—ಇವುಗಳನ್ನೂ ಪರಿಗಣಿಸಬೇಕಾಗುತ್ತದೆ.

ಹರಪ್ಪಾ ಮೊಹೆಂಜೊದಾರೋಗಳೆರಡರಲ್ಲಿಯೂ ಜೇಡಿಮಣ್ಣಿನ ನಗ್ನ ಸ್ತ್ರೀವಿಗ್ರಹಗಳು ದೊರೆತಿವೆ. ಶಿರೋವಸ್ತ್ರ, ಕೇಶಾಲಂಕಾರ, ಸೊಂಟದ ಪಟ್ಟಿ, ಕೊರಳ ಪಟ್ಟಿ ಇವುಗಳಿಂದ ಅವು ಅಲಂಕೃತವಾಗಿವೆ. ಅವು ಬಹುಶಃ ಮಾತೃದೇವತೆಯ ವಿಗ್ರಹಗಳಾಗಿರಬಹುದು. ಮಾತೃದೇವತೆಯ ಉಪಾಸನೆ ಇಲ್ಲಿ ಪ್ರಮುಖಸ್ಥಾನವನ್ನು ಪಡೆದಿದ್ದಂತೆ ತೋರುತ್ತದೆ. ಮೆಸಪಟೋಮಿಯ, ಸಿರಿಯ, ಈಜಿಪ್ಟ್ ಮೊದಲಾದ ಕಡೆಗಳಲ್ಲಿಯೂ ಇಂತಹ ವಿಗ್ರಹಗಳು ದೊರೆತಿರುವುದರಿಂದ ಸಾಮಾನ್ಯವಾಗಿ ಪ್ರಾಚೀನ ನಾಗರಿಕತೆಗಳಲ್ಲಿ ಮಾತೃದೇವತೆಯ ಪೂಜೆ ಪ್ರಚಾರದಲ್ಲಿತ್ತೆಂದು ಊಹಿಸಬಹುದು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಈ ಮಾತೃದೇವತೆಗಳ ವಿಗ್ರಹಗಳು ಸಿಂಧು ಸಂಸ್ಕೃತಿಯ ಪ್ರಧಾನ ಶಿಲ್ಪಗಳಲ್ಲಾಗಲಿ ಅಥವಾ ಮುದ್ರೆಗಳ ಮೇಲಾಗಲಿ ಕಾಣಸಿಗುವುದಿಲ್ಲ. ಆದುದರಿಂದ ಇವುಗಳ ಉಪಾಸನೆ ರಾಜ್ಯದ ಪ್ರಧಾನ ಧರ್ಮವಾಗಿದ್ದಂತೆ ತೋರುವುದಿಲ್ಲ; ವೈಯಕ್ತಿಕವಾದ ಉಪಾಸನೆಯ ಮಿತಿಯಲ್ಲಿತ್ತೆಂದು ಊಹಿಸಬಹುದು.[3]

ಶಿವನ ಉಪಾಸನೆ ಇಲ್ಲಿ ವಿಶೇಷವಾಗಿ ಪ್ರಚಲಿತವಾಗಿದ್ದಿತೆಂದು ಹೇಳಲು ಅವಕಾಶವಿದೆ. ಶಿವನ ಮೂಲರೂಪವೆಂದು ಗುರುತಿಸಲಾಗಿರುವ ಒಂದು ವಿಗ್ರಹವು ಮುದ್ರೆಯೊಂದರ ಮೇಲೆ ಚಿತ್ರಿತವಾಗಿದೆ. ತಗ್ಗಾದ ಒಂದು ಪೀಠದ ಮೇಲೆ ವಿಶಿಷ್ಟವಾದ ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ಕೈಗಳನ್ನು ಹೊರಗೆ ಚಾಚಿ ಮಂಡಿಗಳ ಮೇಲೂರಿದ್ದಾನೆ. ತ್ರಿಶೂಲವನ್ನು ಹೋಲುವಂತಹ ಶಿರೋಭೂಷಣದಿಂದ ತಲೆಯನ್ನು ಸಿಂಗರಿಸಲಾಗಿದೆ. ಈತನ ಬಲಭಾಗದಲ್ಲಿ ಆನೆ ಮತ್ತು ಹುಲಿ; ಎಡಭಾಗದಲ್ಲಿ ಘೇಂಡಾಮೃಗ ಮತ್ತು ಎಮ್ಮೆಗಳಿವೆ. ಮುಂಭಾಗದಲ್ಲಿ ಸಿಂಹಾಸನದ ಕೆಳಗೆ ಎರಡು ಜಿಂಕೆಗಳಿವೆ. ಹೀಗೆ ಶಿವನನ್ನು ಇಲ್ಲಿ ಮಹಾಯೋಗಿಯನ್ನಾಗಿಯೂ ಪಶುಪತಿಯನ್ನಾಗಿಯೂ ಚಿತ್ರಿಸಲಾಗಿದೆ.

ಶಿವನನ್ನು ಈ ರೂಪದಲ್ಲಲ್ಲದೆ ಲಿಂಗದ ರೂಪದಲ್ಲಿಯೂ ಪೂಜಿಸುತ್ತಿದ್ದುದಕ್ಕೆ ಆಧಾರಗಳಿವೆ. ಶಿಲೆ ಮತ್ತು ಮಣ್ಣಿನಿಂದ ನಿರ್ಮಿತವಾದ ಅನೇಕ ಲಿಂಗಗಳು ಮೊಹೆಂಜೊದಾರೋ ಮತ್ತು ಹರಪ್ಪಾಗಳಲ್ಲಿ ದೊರೆತಿವೆ. ಶಿವ ಮತ್ತು ಲಿಂಗಗಳ ಉಪಾಸನೆಗೆ ಇನ್ನೂ ಹೆಚ್ಚಿನ ಸಮರ್ಥನೆಯನ್ನು ಕೊಡುವಂತೆ ಕೆಲವು ಮುದ್ರೆಗಳ ಮೇಲೆ ನಂದಿಯದೆಂದು ಹೇಳಬಹುದಾದ ವಿಗ್ರಹಗಳೂ ಇವೆ. ಭಾರತೀಯ ಸಂಸ್ಕೃತಿಯ ಮೇಲೆ ಸಿಂಧು ಸಂಸ್ಕೃತಿಯು ಬೀರಿದ ಪ್ರಭಾವವೇನೆಂಬುದು ಇಲ್ಲಿ ನಮಗೆ ಗೋಚರಿಸುತ್ತದೆ. ಶಿವ ಮತ್ತು ಲಿಂಗಗಳ ಉಪಾಸನೆ ಆರ್ಯರು ಭಾರತಕ್ಕೆ ಬರುವುದಕ್ಕೆ ಮೊದಲೇ ಇಲ್ಲಿ ಪ್ರಚಲಿತವಾಗಿದ್ದು ಅನಂತರ ಆರ್ಯರೂ ಅದನ್ನು ಅಂಗೀಕರಿಸಿದರೆಂದು ಹೇಳಲು ಅವಕಾಶವಿದೆ.

ಸಿಂಧು ಸಂಸ್ಕೃತಿಯಲ್ಲಿ ಮರಗಳ ಮತ್ತು ಪ್ರಾಣಿಗಳ ಉಪಾಸನೆಯೂ ರೂಢಿಯಲ್ಲಿದ್ದಂತೆ ತೋರುತ್ತದೆ. ಅಶ್ವತ್ಥ ವೃಕ್ಷ, ಜಾಲಿಯ ಮರ ಮೊದಲಾದುವುಗಳ ಚಿತ್ರಗಳು ಕೆಲವು ಮುದ್ರೆಗಳ ಮೇಲೆ ಕಂಡುಬರುತ್ತವೆ. ಪ್ರಾಣಿಗಳಲ್ಲಿ ಮುಖ್ಯವಾಗಿ ಕಾಡುಕೋಣ, ಘೇಂಡಾಮೃಗ, ಹುಲಿ, ಎಮ್ಮೆ ಮೊದಲಾದುವು ಮುದ್ರೆಗಳ ಮೇಲೆ ಕಂಡುಬರುತ್ತವೆ. ಶಿಲೆ, ಮಣ್ಣು ಮತ್ತು ಮುದ್ರೆಗಳ ಮೇಲೆ ಚಿತ್ರಿತವಾದ ಪ್ರಾಣಿಗಳನ್ನೆಲ್ಲಾ ನೋಡಿದರೆ ಅವುಗಳಲ್ಲಿ ಕೆಲವು ಕಲ್ಪನೆಯ ಪ್ರಾಣಿಗಳಾಗಿದ್ದಂತೆ ತೋರುತ್ತವೆ. ಅರ್ಧಗೂಳಿ ಮತ್ತು ಅರ್ಧ ಮನುಷ್ಯನ ಆಕೃತಿಯನ್ನುಳ್ಳ ಪ್ರಾಣಿಗಳನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಇನ್ನು ಅನೇಕವು ಸಹಜವಾದ ಪ್ರಾಣಿಗಳು. ಬಹುಶಃ ತಾವು ಪೂಜಿಸುತ್ತಿದ್ದ ದೇವತೆಗಳ ವಾಹನಗಳೆಂದು ಅವುಗಳು ದೇವತ್ವಕ್ಕೇರಿರಬಹುದು. ಅಂತೂ ಒಟ್ಟಿನಲ್ಲಿ ಸಿಂಧು ಸಂಸ್ಕೃತಿಯ ಧರ್ಮದಲ್ಲಿ ಒಂದು ಕಡೆ ಮಾತೃದೇವತೆ, ವೃಕ್ಷಗಳು, ಪ್ರಾಣಿಗಳು—ಎಂದರೆ ಪ್ರಕೃತಿಯ ಪೂಜೆಯನ್ನು—ಕಂಡರೆ, ಇನ್ನೊಂದು ಕಡೆ ಆ ಪ್ರಕೃತಿಯನ್ನು ಅಂತರ್ಗತಗೊಳಿಸಿಕೊಂಡ ಶಿವನ ಮತ್ತು ಅವನ ಸ್ವರೂಪದ ಸಂಕೇತವಾದ ಲಿಂಗದ ಅನುಸಂಧಾನವನ್ನು ಕಾಣುತ್ತೇವೆ.

ಮರಣದ ಆಚೆಯ ಜೀವನದ ವಿಚಾರದಲ್ಲಿ ಈ ಜನರ ಕಲ್ಪನೆ ಏನಿತ್ತೆಂಬುದನ್ನು ಹೇಳುವುದು ಕಷ್ಟ. ಇತರ ಪ್ರಾಚೀನ ನಾಗರಿಕತೆಗಳಲ್ಲಿ ದೊರಕುವಂತೆ ಅದಕ್ಕೆ ಸಹಾಯಕವಾದ ಅಂಶಗಳು ಇಲ್ಲಿ ಅಷ್ಟಾಗಿ ದೊರಕುವುದಿಲ್ಲ. ಸತ್ತ ನಂತರದ ಶವಸಂಸ್ಕಾರಗಳ

ವಿಚಾರವೂ ಅಷ್ಟೇ ಅಸ್ಪಷ್ಟವಾಗಿ ಉಳಿದಿದೆ. ತಲೆಯನ್ನು ಉತ್ತರ ದಿಕ್ಕಿನ ಕಡೆಗಿರುವಂತೆ ಮಲಗಿಸಿ ಶವವನ್ನು ಹುಗಿಯುತ್ತಿದ್ದುದು ಹೆಚ್ಚಾಗಿ ರೂಢಿಯಲ್ಲಿದ್ದಂತೆ ತೋರುತ್ತದೆ. ಸಮಾಧಿಯಲ್ಲಿ ಅನೇಕ ಮಡಕೆಗಳೂ ಅಲಂಕಾರದ ಸಾಮಗ್ರಿಗಳೂ ಇರುವುದು ಕಂಡು ಬಂದಿದೆ. ಕೆಲವು ವೇಳೆ ಮರದ ಪೆಟ್ಟಿಗೆಗಳಲ್ಲಿ ದೇಹವನ್ನಿಟ್ಟು ಹುಗಿದಿರುವುದೂ ಉಂಟು. ಇವಲ್ಲದೆ ಹರಪ್ಪಾ ಮೊಹೆಂಜೊದಾರೋಗಳೆರಡರಲ್ಲಿಯೂ ದಹನಾನಂತರದ ಭಸ್ಮವನ್ನು ಪಾತ್ರೆಯಲ್ಲಿ ತುಂಬಿ ಹುಗಿಯುವ ಪದ್ಧತಿಯೂ ರೂಢಿಯಲ್ಲಿತ್ತೆಂಬುದು, ಅಂತಹ ಕೆಲವು ಭಸ್ಮಪಾತ್ರೆಗಳು ದೊರಕಿರುವುದರಿಂದ, ತಿಳಿಯಬರುತ್ತದೆ. ಇನ್ನೂ ಕೆಲವು ವೇಳೆ ಸತ್ತವರ ದೇಹಗಳನ್ನು ಪಕ್ಷಿಪ್ರಾಣಿಗಳಿಗೆ ಕೆಲವು ಕಾಲ ತೆರೆದಿಟ್ಟು ಉಳಿದ ಕೆಲವಂಶಗಳನ್ನು ಸಂಗ್ರಹಿಸಿ ಹುಗಿಯುತ್ತಿದ್ದಂತಹ 'ಅಸಮಗ್ರ ಹುಗಿತ'ಗಳೂ ಇದ್ದುವಂತೆ. ಹೀಗೆ ಇವರ ಶವಸಂಸ್ಕಾರದಲ್ಲಿ ಏಕರೂಪತೆ ಇಲ್ಲ. ಆದರೆ ಮರಣಾನಂತರದ ಪುನರ್ಜನ್ಮ ಮೊದಲಾದ ವಿಚಾರಗಳಲ್ಲಿ ಶ್ರದ್ಧೆಯಿದ್ದಿತೆಂಬುದರಲ್ಲಿ ಸಂದೇಹವಿಲ್ಲ.

ಸಿಂಧು ಸಂಸ್ಕೃತಿಯ ಅವಶೇಷಗಳಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆದರೆ ಅನೇಕ ಹೊಸ ವಿಚಾರಗಳು ಬೆಳಕಿಗೆ ಬರುವುದರಲ್ಲಿ ಸಂದೇಹವಿಲ್ಲ. ಇದೇ ಸಂಸ್ಕೃತಿಯ ವಲಯಕ್ಕೆ ಸೇರಿದ ಚನ್ಹುದಾರೋದಲ್ಲಿ ಈಚೆಗೆ ಮತ್ತೆ ಸಂಶೋಧನೆಗಳು ನಡೆದುವು. ಅವುಗಳಿಂದ ಈ ಸಂಸ್ಕೃತಿಯ ನಾಲ್ಕು ಘಟ್ಟಗಳನ್ನು ಕಾಣುವುದು ಸಾಧ್ಯವಾಗಿದೆ. ಅತ್ಯಂತ ಪ್ರಾಚೀನವಾದುವೆಂದು ಹೇಳಬಹುದಾದ ಅವಶೇಷಗಳಲ್ಲಿ ಮಡಕೆಗಳೇ ಹೆಚ್ಚಾಗಿವೆ. ಆ ಕಾಲದಲ್ಲಿ ಹೇಳಿಕೊಳ್ಳುವಂತಹ ಕಟ್ಟಡಗಳಿಲ್ಲ, ಮತ್ತು ಲೋಹದ ಉಪಯೋಗ ಅಷ್ಟಾಗಿ ಅವರಿಗೆ ತಿಳಿದಂತಿಲ್ಲ. ಅನಂತರ ಎರಡನೆಯ ಘಟ್ಟದ ಅವಶೇಷಗಳು ಮೊಹೆಂಜೊದಾರೋ ಹರಪ್ಪಾಗಳಲ್ಲಿ ಸಿಕ್ಕಿರುವ ನಗರ ನಾಗರಿಕತೆಯ ಅಂಶಗಳನ್ನೆಲ್ಲಾ ಒಳಗೊಂಡಿವೆ. ಮೂರನೆಯ ಮಟ್ಟದಲ್ಲಿ ಶಿಲ್ಪಕಲೆಗಳ ಇಳಿಮುಖವನ್ನೂ ಮಡಕೆಗಳ ನಿರ್ಮಾಣದಲ್ಲಿ ಆದ ಬದಲಾವಣೆಗಳನ್ನೂ ಕಾಣುತ್ತೇವೆ. ಕೊನೆಯ ಘಟ್ಟಕ್ಕೆ ಬರುವ ವೇಳೆಗೆ ಆ ಸಂಸ್ಕೃತಿಯ ಸಂಪೂರ್ಣ ನಾಶ ಇದ್ದಕ್ಕಿದ್ದಂತೆಯೇ ಸಂಭವಿಸಿದುದರ ಸೂಚನೆಯಿದೆ. ಹೀಗೆ ಚನ್ಹುದಾರೋದಲ್ಲಿ ಈ ಸಂಸ್ಕೃತಿ ಬಾಳಿ ಬೆಳಗಿದ ಎಲ್ಲ ಹಂತಗಳನ್ನೂ ಸೂಚಿಸುವ ಅವಶೇಷಗಳು ಸಿಕ್ಕಿವೆ.

ಈ ಸಂಸ್ಕೃತಿಯನ್ನು ರೂಪಿಸಿ ಪೋಷಿಸಿದ ಜನಾಂಗ ಅಥವಾ ಜನಾಂಗಗಳು ಯಾವುವು—ಎಂದರೆ ಇಲ್ಲಿ ವಾಸಿಸುತ್ತಿದ್ದವರು ಯಾರು—ಎಂಬ ಪ್ರಶ್ನೆಯನ್ನು ಬಿಡಿಸಲು ವಿದ್ವಾಂಸರು ಪ್ರಯತ್ನಪಟ್ಟಿದ್ದಾರೆ. ಅದರಲ್ಲಿ ಒಮ್ಮತಕ್ಕೆ ಬರಲು ಇನ್ನೂ ಸಾಧ್ಯವಾಗಿಲ್ಲ. ಅಲ್ಲಿ ದೊರೆತಿರುವ ಕೆಲವು ತಲೆಬುರುಡೆಗಳಿಂದ ನಾಲ್ಕು ಬಗೆಯ ಜನಾಂಗಗಳು ಅಲ್ಲಿ ವಾಸವಾಗಿದ್ದಿರಬಹುದೆಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ.[೪] ಅವು ಯಾವುವೆಂದರೆ: ಆಸ್ಟ್ರಲಾಯಿಡ್, ಮೆಡಿಟರೇನಿಯನ್, ಮಂಗೋಲಿಯನ್, ಮತ್ತು ಅಲ್ಪೈನ್ ಎಂಬುವು. ಇವುಗಳಲ್ಲಿ ಕೊನೆಯ ಎರಡು ಜನಾಂಗಗಳದೆಂದು ಹೇಳಬಹುದಾದ ಒಂದೊಂದು ತಲೆಬುರುಡೆ ಮಾತ್ರ ದೊರೆತಿದೆಯಂತೆ! ಇದಲ್ಲದೆ ಮಾನವ ಶಾಸ್ತ್ರದ

ಬಗೆಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಡಾ. ಜೆ. ಎಚ್. ಹಟ್ಟನ್ ಅವರ ಅಭಿಪ್ರಾಯ ಇನ್ನೊಂದು ರೀತಿಯಾಗಿದೆ. ಸಿಂಧು ಸಂಸ್ಕೃತಿಯ ನಿರ್ಮಾಪಕರು ದ್ರಾವಿಡರೆಂದು ಹೇಳಬಹುದೆಂಬುದು ಅವರ ಅಭಿಪ್ರಾಯ. ಅವರ ಪ್ರಕಾರ ಮೆಡಿಟರೇನಿಯನ್ ಮತ್ತು ಅರ್ಮೆನಾಯಿಡ್ (Armenoid) ಈ ಜನಾಂಗಗಳ ಒಂದು ಸಮ್ಮಿಶ್ರ ಸ್ವರೂಪವೇ ದ್ರಾವಿಡ ಜನಾಂಗ. ಋಗ್ವೇದಗಳು ಹೇಳುವ ಅನಾರ್ಯ ಎಂಬ ಮಾತು ದ್ರಾವಿಡರನ್ನೇ ಕುರಿತದ್ದು ಎಂದು ಹೇಳುತ್ತಾರೆ ಹಟ್ಟನ್. ಅವರನ್ನು ದಸ್ಯುಗಳು ಎಂದೂ ಆರ್ಯರು ಕರೆದಿದ್ದಾರೆ. ಅಲ್ಲದೆ 'ಕೃಷ್ಣತ್ವಕ್' 'ಕೃಷ್ಣಗರ್ಭ' 'ಅನಾಸ' (noseless or snub nosed) ಎಂದು ಮುಂತಾಗಿ ವೇದದಲ್ಲಿ ಬರುವ ಮಾತುಗಳು ಪ್ರೋಟೋ ಆಸ್ಟ್ರಲಾಯಿಡ್ ಜನಾಂಗವನ್ನು—ಭಿಲ್ಲರು, ಕೋಲರು, ಮುಂಡರು, ನಿಷಾದರು ಕಿರಾತರನ್ನು—ಕುರಿತಿರಬೇಕು. ಮತ್ತು 'ಶಿಶ್ನದೇವಾಃ' ಎಂಬ ಮಾತು ಸಿಂಧು ಸಂಸ್ಕೃತಿಯಲ್ಲಿ ಕಾಣುವ ಲಿಂಗೋಪಾಸಕರನ್ನು ಕುರಿತು ಹೇಳಿದ ಮಾತಾಗಿರಬೇಕು—ಎಂದು ಊಹಿಸಬಹುದು. ಈ ಅನಾರ್ಯ ಜನಾಂಗ, ಪಟ್ಟಣಗಳನ್ನೂ ಕೋಟೆಗಳನ್ನೂ ಕಟ್ಟಿ ಅವುಗಳನ್ನು 'ಪುರ್' ಎಂದು ಕರೆಯುತ್ತಿದ್ದರು. ಈ ಪುರಗಳನ್ನು ನಾಶಮಾಡುವ ತಮ್ಮ ದೇವತೆಗಳ ನಾಯಕ ಇಂದ್ರನನ್ನು ಆರ್ಯರು ಪುರಂದರ—ಅಂದರೆ ಪುರಗಳನ್ನು ನಾಶಮಾಡುವವನು—ಎಂದು ಹೊಗಳಿರುವುದನ್ನು ನೋಡಿದರೆ ಈ ಎರಡು ಜನಾಂಗಗಳಿಗೆ ನಡೆದ ಹೋರಾಟದ ಕಲ್ಪನೆ ಸ್ವಲ್ಪಮಟ್ಟಿಗೆ ಆಗುತ್ತದೆ.

ಆರ್ಯರಿಗಿಂತ ಪೂರ್ವದಲ್ಲಿದ್ದ ಜನಾಂಗಗಳಲ್ಲಿ ದ್ರಾವಿಡರೇ ಅತ್ಯಂತ ಪ್ರಮುಖರಾದವರೆಂದು ಹೇಳಬಹುದು. ಅವರ ಮೂಲಸ್ಥಾನದ ವಿಚಾರದಲ್ಲಿಯೂ ಅನೇಕ ಭಿನ್ನಾಭಿಪ್ರಾಯಗಳಿವೆ. ಕೆಲವರ ಅಭಿಪ್ರಾಯ ಅವರು ಕೋಲರು ಭಿಲ್ಲರಂತೆ ಪ್ರಾಚೀನ ಶಿಲಾಯುಗದ ಕಾಲದಿಂದಲೂ ಮೂಲತಃ ಇಲ್ಲಿಯೇ ಹುಟ್ಟಿ ಬೆಳೆದು ಬಂದವರು ಎಂಬುದು. ಕೆಲವು ವಿದ್ವಾಂಸರು ಇದನ್ನು ಒಪ್ಪುವುದಿಲ್ಲ. ದಕ್ಷಿಣ ಇಂಡಿಯ ಮತ್ತು ಆಫ್ರಿಕ ಖಂಡಗಳನ್ನು ಒಟ್ಟಾಗಿ ಸೇರಿಸಿದ್ದು ಈಗ ಸಮುದ್ರವಾಗಿ ಪರಿಣಮಿಸಿರುವ ಭೂಭಾಗದಿಂದ ಇವರು ಬಂದರೆಂದೂ ಆಫ್ರಿಕದ ನೀಗ್ರೋ ಗುಂಪಿಗೆ ಇವರು ಸೇರಿದವರೆಂದೂ ಅಭಿಪ್ರಾಯಪಡುತ್ತಾರೆ. ಆದರೆ ನೀಗ್ರೋಗಳಿಗೂ ದ್ರಾವಿಡರಿಗೂ ಇರುವ ಅಂತರಗಳನ್ನು ಗಮನಿಸಿದವರು ಈ ಅಭಿಪ್ರಾಯಗಳನ್ನು ಒಪ್ಪಲಾರರು. ಅನೇಕ ವಲಸೆಗಾರರಂತೆ ಇವರೂ ಸಹ ವಾಯುವ್ಯದ ಕಣಿವೆಗಳ ಮೂಲಕವೇ ಭರತಖಂಡವನ್ನು ಪ್ರವೇಶಿಸಿದರು. ಆರ್ಯರಿಗಿಂತಲೂ ಬಹಳ ಹಿಂದೆಯೇ ಬಂದ ಇವರು ಸಿಂಧುನದಿಯ ಬಯಲಿನಲ್ಲಿಯೇ ಮೊದಲು ನೆಲಸಿರಬೇಕು. ದಕ್ಷಿಣ ಬೆಲುಚಿಸ್ಥಾನದ ಕಿರ್‌ಥಾರ್ ಬೆಟ್ಟಗಳಲ್ಲಿ ವಾಸಿಸುವ ಬ್ರಾಹೂಈ (Brahui) ಜನಾಂಗದ ಭಾಷೆಗೂ ದ್ರಾವಿಡ ಭಾಷೆಗಳಿಗೂ ಬಹು ಹತ್ತಿರದ ಹೋಲಿಕೆ ಇರುವುದನ್ನು ಇದಕ್ಕೆ ಸಮರ್ಥನೆಯಾಗಿ ಹೇಳಬಹುದು.[5] ಆದರೆ ಈ ಸಂಬಂಧ ಇಷ್ಟು ಮಾತ್ರ. ಜನಾಂಗದ ಲಕ್ಷಣಗಳಲ್ಲಾಗಲಿ ಇತರ ಅಂಶಗಳಲ್ಲಾಗಲಿ ಬ್ರಾಹೂಈಗಳಿಗೂ ದ್ರಾವಿಡರಿಗೂ ಯಾವ ಹೋಲಿಕೆಯೂ ಇಲ್ಲ. ಹೀಗೆ ದ್ರಾವಿಡರ ಮೂಲಸ್ಥಾನವನ್ನು

ನಿರ್ದೇಶಿಸುವುದು ಕಷ್ಟಕರವಾಗಿ ಪರಿಣಮಿಸಿದೆ. ಆದರೆ ಒಟ್ಟಿನಲ್ಲಿ ಇಷ್ಟನ್ನು ಹೇಳಬಹುದು : ಆ ಕಾಲದಲ್ಲಿ ಭರತಖಂಡದಲ್ಲಿದ್ದ ಜನಾಂಗಗಳಲ್ಲೆಲ್ಲಾ ನಾಗರಿಕತೆ ಮತ್ತು ಸಂಸ್ಕೃತಿಗಳಲ್ಲಿ ಅತ್ಯಂತ ಮುಂದುವರಿದಿದ್ದವರೆಂದರೆ ದ್ರಾವಿಡರೇ. ಆದುದರಿಂದ ಇವರೇ ಸಿಂಧು ಸಂಸ್ಕೃತಿಯ ಜನಕರಾಗಿರಬೇಕೆಂಬುದು ಅನೇಕರ ಅಭಿಪ್ರಾಯ. ಇದನ್ನು ಇತ್ಯರ್ಥಗೊಳಿಸಿ ನಿರ್ಧಾರವಾಗಿ ಹೇಳುವುದು ಸದ್ಯಕ್ಕೆ ಇರುವ ಆಧಾರಗಳಿಂದ ಸಾಧ್ಯವಿಲ್ಲವಾಗಿದೆ.

ಆ ಕಾಲಕ್ಕೆ ಸರ್ವಾಂಗ ಸುಪುಷ್ಟವಾದ ಇಂತಹ ಸಂಸ್ಕೃತಿಯೊಂದು ಇದ್ದಕ್ಕಿದ್ದಂತೆಯೇ ಕುಸಿದುಬಿದ್ದು ಅದೃಶ್ಯವಾದುದು ಹೇಗೆ ಎಂಬ ಅಂಶ ಕುತೂಹಲಕರವಾದುದು. ಬಹುಶಃ ಹೊಸದಾಗಿ ಬಂದ ಆರ್ಯರೊಡನೆ ನಡೆದ ಸಂಘರ್ಷಣೆಯೇ ಸಿಂಧು ಸಂಸ್ಕೃತಿಯ ನಾಶಕ್ಕೆ ಪ್ರಮುಖ ಕಾರಣವಾಗಿ ಪರಿಣಮಿಸಿತು. ಪ್ರವಾಹದ ಹಾವಳಿ ಮೊದಲಾದ ಪ್ರಕೃತಿ ವಿಕೋಪಗಳೂ ಅವರ ಆರ್ಥಿಕ ಸಾಮಾಜಿಕ ರಾಜಕೀಯ ವ್ಯವಸ್ಥೆಗಳು ಶಿಥಿಲಗೊಂಡುದೂ ಇದಕ್ಕೆ ಕಾರಣವೆಂದು ಹೇಳುವುದುಂಟು. ಆದರೆ ಇವಿಷ್ಟೇ ಕಾರಣಗಳಿಂದ ಇಂತಹ ಸಂಸ್ಕೃತಿ ನಾಮಾವಶೇಷವಾಗಲಾರದು. ಹೊರಗಡೆಯಿಂದ ಬಂದ ಪ್ರಬಲವಾದ ಶತ್ರುಗಳ ದಾಳಿಯೂ ಅದಕ್ಕೆ ಕಾರಣವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯವನ್ನು ಸಮರ್ಥಿಸುವ ಅವಶೇಷಗಳೂ ಇಲ್ಲಿ ವಿಶೇಷವಾಗಿ ದೊರಕಿವೆ. ಗಂಡಸರು, ಹೆಂಗಸರು ಮತ್ತು ಮಕ್ಕಳು ನಿಷ್ಕರುಣೆಯ ಕ್ರೋಧಹಸ್ತಕ್ಕೆ ಸಿಕ್ಕು ರಸ್ತೆಗಳಲ್ಲಿ ಕೋಣೆಗಳಲ್ಲಿ ಕೊಲೆಯಾಗಿ ಬಿದ್ದಿರುವುದನ್ನು ತೋರಿಸುವ ಅಸ್ಥಿಪಂಜರಗಳು ಅಲ್ಲಲ್ಲಿ ಸಿಕ್ಕಿವೆ.

ಮೊಹೆಂಜೊದಾರೋದ ಒಂದು ಕೋಣೆಯಲ್ಲಿ ಹದಿಮೂರು ಜನ ಸ್ತ್ರೀಪುರುಷರು ಮತ್ತು ಒಂದು ಮಗು ಕೊಲೆಯಾಗಿ ಬಿದ್ದಿರುವ ದೃಶ್ಯ ಗೋಚರಿಸಿತು. ಅವರಲ್ಲಿ ಕೆಲವರು ಕಡಗ ಉಂಗುರ ಮಣಿ ಮೊದಲಾದುವುಗಳನ್ನು ಧರಿಸಿದ್ದರು. ಅಸ್ಥಿಪಂಜರಗಳು ಬಿದ್ದಿರುವ ರೀತಿಯನ್ನು ನೋಡಿದರೆ ಸಾಮೂಹಿಕವಾದ ಕೊಲೆಗೆ ಅವು ಗುರಿಯಾಗಿರಬೇಕೆಂಬುದನ್ನು ನಿಸ್ಸಂದೇಹವಾಗಿ ಊಹಿಸಬಹುದಾಗಿದೆ. ಇನ್ನೊಂದು ಕಡೆಯಲ್ಲಿ ಒಂಬತ್ತು ಅಸ್ಥಿಪಂಜರಗಳು ದೊರಕಿವೆ. ಅವುಗಳಲ್ಲಿ ಐದು ಮಕ್ಕಳವು. ವಿಚಿತ್ರವಾದ ರೀತಿಯಲ್ಲಿ ಅವುಗಳನ್ನು ತಿರುಚಿ ಎಳೆದುಹಾಕಲಾಗಿದೆ. ಅವರ ಬಳಿಯಲ್ಲಿ ಆನೆಯ ಎರಡು ದಂತಗಳು ಬಿದ್ದಿವೆ. ಧಾಳಿಕಾರರು ಇಡಿ ಸಂಸಾರವನ್ನೇ ಕೊಂದು ಎಲ್ಲವನ್ನೂ ಕೊಳ್ಳೆ ಹೊಡೆದುಕೊಂಡು ಹೋಗಿರಬೇಕು. ತಮಗೆ ಬೇಡವಾದ ಆ ದಂತಗಳನ್ನು ಅಲ್ಲಿಯೇ ಎಸೆದು ಹೋಗಿರಬೇಕೆಂದು ಭಾವಿಸಬಹುದು. ನಗರದ ಇನ್ನೊಂದು ಕಡೆಯಲ್ಲಿ ಒಂದು ತಗ್ಗಾದ ಕೋಣೆ ದುರಂತ ಹೋರಾಟದ ರಂಗಸ್ಥಳವಾಗಿ ಪರಿಣಮಿಸಿದೆ. ನಾಲ್ಕು ಅಸ್ಥಿಪಂಜರಗಳು ಅಲ್ಲಿ ಉರುಳಿ ಬಿದ್ದಿವೆ. ಮೆಟ್ಟಿಲುಗಳನ್ನು ಹತ್ತಿ ಪಾರಾಗಲು ಯತ್ನಿಸಿ ಆ ಪ್ರಯತ್ನದಲ್ಲಿ ವಿಫಲವಾಗಿ ಸತ್ತುಬಿದ್ದಿರುವಂತಿದೆ.

ಇವೆಲ್ಲವುಗಳನ್ನು ನೋಡಿದರೆ ಅತ್ಯಂತ ಬಲಿಷ್ಠರಾದ ಶತ್ರುಗಳ ಕೈಗೆ ಆ ಸಂಸ್ಕೃತಿ ಸಿಕ್ಕುಬಿದ್ದಿರಬೇಕೆಂದು ಊಹಿಸಬಹುದು. ಈ ವೇಳೆಗೆ ಭರತಖಂಡವನ್ನು ಪ್ರವೇಶಿಸಿ

ಕ್ರಮೇಣ ಮುಂದೆ ನುಗ್ಗುತ್ತಿದ್ದ ಆರ್ಯರೇ ಈ ಶತ್ರುಗಳೆಂಬುದು ಅನೇಕರ ಅಭಿಪ್ರಾಯ. ಈ ಆರ್ಯ ಮತ್ತು ದ್ರಾವಿಡ ಸಂಘರ್ಷದಲ್ಲಿ ಆರ್ಯರ ಕೈಮೇಲಾಗಿ ದ್ರಾವಿಡರು ದಕ್ಷಿಣದ ಕಡೆಗೆ ಸರಿಯಬೇಕಾಯಿತೆಂಬಂತೆ ತೋರುತ್ತದೆ. ಉಚ್ಛ್ರಾಯಸ್ಥಿತಿಯಲ್ಲಿದ್ದ ಅವರ ಸಂಸ್ಕೃತಿ ಶಿಥಿಲಗೊಂಡಿತು. ಹರಪ್ಪಾ ಮೊಹೆಂಜೊದಾರೋಗಳು ಸಂಪೂರ್ಣವಾಗಿ ನಾಶವಾದುವು.

ಆರ್ಯರು ಈ ಸಂಸ್ಕೃತಿಯನ್ನು ನಾಶಗೊಳಿಸಿದರೂ ಇದರಿಂದ ಅನೇಕ ಅಂಶಗಳನ್ನು ತಾವು ತೆಗೆದುಕೊಂಡರು. ವಾಸ್ತವವಾಗಿ ಸಿಂಧು ಸಂಸ್ಕೃತಿ ಇನ್ನೊಂದು ಹೊಸ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣವಾಯಿತು. ಇನ್ನೂ ಅಲೆಮಾರಿ ಸ್ಥಿತಿಯಲ್ಲಿದ್ದ ಆರ್ಯರು ಇದರಿಂದ ನಾಗರಿಕತೆಯ ಅನೇಕ ಅಂಶಗಳನ್ನು ತೆಗೆದುಕೊಂಡಿರಬೇಕು. ಅದಕ್ಕಿಂತ ಮುಖ್ಯವಾದುದು ಆರ್ಯರ ಮೇಲೆ ಬೀರಿದ ಸಾಂಸ್ಕೃತಿಕ ಪ್ರಭಾವ. ಮಾತೃದೇವತೆಯ ಉಪಾಸನೆ, ಗಿಡ ಮರಗಳ—ಎಂದರೆ ಪ್ರಕೃತಿಯ ಆರಾಧನೆ—ಇವುಗಳನ್ನು ಆರ್ಯರು ಇಲ್ಲಿ ಕಲಿತರು. ಮುಖ್ಯವಾಗಿ ಶಿವ ಮತ್ತು ಅವನ ಸಂಕೇತವಾದ ಲಿಂಗ ಇವುಗಳನ್ನು ಅಂಗೀಕರಿಸಿ ತಮ್ಮ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡರು. ಆರ್ಯರ ಯಜ್ಞಯಾಗಾದಿಗಳ ಜೊತೆಗೆ ದ್ರಾವಿಡರ ಪೂಜೆಯೂ ಸೇರಿತು. ಸರ್ ಜಾನ್ ಮಾರ್ಷಲ್ ಅವರು ಹೇಳುವ ಈ ಮಾತುಗಳನ್ನು ಇಲ್ಲಿ ಗಮನಿಸಬಹುದು : ..."This religion of Indian people was the lineal progenitor of Hinduism". ಹೀಗೆ ಸಿಂಧು ಸಂಸ್ಕೃತಿ ತನ್ನ ಅನುಭವದ ಬೆಳಕನ್ನು ಮುಂದಿನ ಜನಾಂಗಕ್ಕಿತ್ತು ತಾನು ಮರೆಯಾಯಿತು. ಸಾಮಾಜಿಕವಾಗಿಯೂ ಇದು ಆರ್ಯರ ಮೇಲೆ ಪ್ರಭಾವವನ್ನು ಬೀರಿತೆನ್ನಬಹುದು. ಮಾತೃಪ್ರಧಾನವಾದ ಸಮಾಜ ಪದ್ಧತಿ ದ್ರಾವಿಡರದಾಗಿದ್ದರೆ, ಆರ್ಯರದು ಪಿತೃಪ್ರಧಾನವಾದ ಪದ್ಧತಿಯಾಗಿತ್ತು. ಅಲ್ಲದೆ ದ್ರಾವಿಡರು ಆರ್ಯರಂತೆ ವರ್ಣಾಶ್ರಮಗಳನ್ನು ಪುರಸ್ಕರಿಸಿದವರಾಗಿರಲಿಲ್ಲ.

ಈ ಎರಡು ಸಂಸ್ಕೃತಿಗಳ ಸಂಘರ್ಷ ನಡೆದು ಹೊಸದೊಂದು ಸಂಸ್ಕೃತಿ ರೂಪುಗೊಳ್ಳುವುದಕ್ಕೆ ಕಾರಣವಾಯಿತು. ಅವನ್ನೇ ಭಾರತೀಯ ಸಂಸ್ಕೃತಿ ಅಥವಾ ಹಿಂದೂ ಸಂಸ್ಕೃತಿ ಎಂದು ನಿರ್ದೇಶಿಸಬಹುದು. ಎಲ್ಲರಿಗೂ ಮತ್ತು ಎಲ್ಲ ಕಾಲಕ್ಕೂ ಅನ್ವಯಿಸುವ ತತ್ತ್ವ ಅನೇಕ ರೂಪಗಳಲ್ಲಿ ವ್ಯಕ್ತವಾಗಲು ಹವಣಿಸಿತು. ಅದರಲ್ಲಿಯೂ ಅನೇಕ ಜನಾಂಗಗಳ ಪ್ರದರ್ಶನರಂಗವಾಗಿದ್ದ ಭಾರತದಂತಹ ವಿಸ್ತಾರವಾದ ದೇಶದಲ್ಲಿ ಎಲ್ಲರನ್ನೂ ಒಂದೇ ಧರ್ಮದ ಕಟ್ಟಿನಿಂದ ಬಂಧಿಸಿ, ಜನಜೀವನದ ಒಂದು ಸಮಾನ ಸಂಸ್ಕೃತಿಯ ಆದರ್ಶದೊಳಗೆ ಅಡಕಗೊಳಿಸುವುದು ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ. ಆದರೆ ಹಿಂದೂ ಧರ್ಮ ಅದನ್ನು ಸಾಧಿಸುವ ಸಾಹಸದಲ್ಲಿ ತೊಡಗಿತು. ಅದಕ್ಕಾಗಿ ಅತ್ಯಂತ ವ್ಯಾಪಕವಾದ ತತ್ತ್ವಗಳನ್ನು ಅದು ಅಂಗೀಕರಿಸಿತು. ಸಮನ್ವಯ ಮಾರ್ಗವನ್ನು ರೂಪಿಸಿಕೊಳ್ಳುವ ಸತತ ಪ್ರಯತ್ನದಲ್ಲಿ ಮುನ್ನಡೆಯಿತು. ವೇದ ಉಪನಿಷತ್ತುಗಳು, ಪುರಾಣ ಇತಿಹಾಸಗಳು, ಸಾಹಿತ್ಯ ಕಲೆಗಳು—ಇವುಗಳೆಲ್ಲಾ ಈ ಪ್ರಯತ್ನ ಕ್ರಮೇಣ ವಿಕಾಸಗೊಳ್ಳುತ್ತಾ ನಡೆದಿರುವುದನ್ನು ಕಾಣುತ್ತೇವೆ.

ಭರತಖಂಡ ತನ್ನದೇ ಆದ ಒಂದು ಸಂಸ್ಕೃತಿಯನ್ನು ರೂಪಿಸಿಕೊಳ್ಳುವ ಈ ಪ್ರಯತ್ನದಲ್ಲಿ ಅದರ ಭೌಗೋಳಿಕ ಸನ್ನಿವೇಶಗಳೂ ಸಹಾಯಕಗಳಾದುವು. ಉತ್ತರದಲ್ಲಿ ಹಿಮಾಲಯದಿಂದ ಹಿಡಿದು ದಕ್ಷಿಣದಲ್ಲಿ ಹಿಂದೂ ಸಾಗರದವರೆಗೆ ಹಬ್ಬಿರುವ ವಿಸ್ತಾರವಾದ ಈ ದೇಶ ಅನೇಕ ವೈವಿಧ್ಯಗಳನ್ನೂ ವೈಪರೀತ್ಯಗಳನ್ನೂ ಪಡೆದಿದೆ. ಇಡೀ ಪ್ರಪಂಚದ ವೈವಿಧ್ಯಗಳ ಒಂದು ಸಂಕ್ಷಿಪ್ತರೂಪ ಎಂದು ಭಾರತವನ್ನು ಕರೆಯಬಹುದು.[6] ಮನುಷ್ಯನು ಹೆಜ್ಜೆಯನ್ನಿಡುವುದಕ್ಕೇ ಸಾಧ್ಯವಿಲ್ಲದ ಉರಿಬಿಸಿಲಿನ ಮರುಭೂಮಿಯಿಂದ ಹಿಡಿದು ಅತ್ಯಂತ ಫಲವತ್ತಾದ ನದಿಯ ಬಯಲುಗಳವರೆಗೆ ಎಲ್ಲ ಬಗೆಯ ವಾಯುಗುಣ ಮತ್ತು ಭೂಗುಣಗಳನ್ನು ಇಲ್ಲಿ ಕಾಣಬಹುದಾಗಿದೆ. ಇಡೀ ವರ್ಷಕ್ಕೆಲ್ಲಾ ಮೂರು ಅಂಗುಲಕ್ಕಿಂತ ಕಡಮೆ ಮಳೆಯಾಗುವ ಸ್ಥಳ ಒಂದು ಕಡೆ; ಇನ್ನೊಂದು ಕಡೆ ಹಿಡಿದ ಮಳೆ ಬಿಡದೆ ಧಾರಾಕಾರವಾಗಿ ವರ್ಷಕ್ಕೆ ೪೬೦ ಇಂಚುಗಳಷ್ಟು ಸುರಿಯುವ ಚಿರಾಪುಂಜಿ: ಪ್ರಕೃತಿಯ ಈ ಸನ್ನಿವೇಶಗಳಿಗನುಗುಣವಾಗಿ ಅದನ್ನು ಅವಲಂಬಿಸಿ ಬಾಳುವ ಜನರ ಜೀವನದ ಆಚಾರ ವಿಚಾರಗಳು, ಉಡುಗೆ ತೊಡುಗೆಗಳು, ನಡೆನುಡಿಗಳು ವೈವಿಧ್ಯವನ್ನು ಪಡೆಯುವುದು ಅನಿವಾರ್ಯವಾಯಿತು. ಸಾಲದುದಕ್ಕೆ ಇಲ್ಲಿದ್ದ ಜನಾಂಗಗಳು ಒಂದಲ್ಲ ಎರಡಲ್ಲ; ಬಹುಶಃ ಶಿಲಾಯುಗದ ಪರಂಪರೆಯಿಂದ ಬಂದ ಅನಾಗರಿಕ ಜನಾಂಗಗಳಿಂದ ಹಿಡಿದು ದ್ರಾವಿಡರು ಆರ್ಯರವರೆಗೆ ಎಲ್ಲ ಮಟ್ಟದ, ಎಲ್ಲ ಸಂಸ್ಕಾರಗಳ, ಎಲ್ಲ ಅನುಭವಗಳ ಜನಾಂಗಗಳೂ ಇಲ್ಲಿದ್ದುವು. ಇವು ಎಲ್ಲ ದೃಷ್ಟಿಯಿಂದಲೂ ವೈವಿಧ್ಯಕ್ಕೆ ಸಮೃದ್ಧವಾದ ಅವಕಾಶವನ್ನು ಒದಗಿಸಿದುವು. ಇದು ಒಂದು ದೇಶ ಎಂದು ಹೇಳುವುದಕ್ಕಿಂತ ಒಂದು ಖಂಡ ಎಂದು ಹೇಳಬಹುದಾದ ವೈಲಕ್ಷಣ್ಯಗಳನ್ನು ಪಡೆಯಿತು.

ಈ ವೈವಿಧ್ಯಕ್ಕೆ ಕಾರಣವಾದ ಭೌಗೋಳಿಕ ಸನ್ನಿವೇಶವೇ ಭಾರತದ ಏಕತೆಯ ಕಲ್ಪನೆಗೂ ಸಹಾಯಕವಾಯಿತು. ಉತ್ತರದಲ್ಲಿ ಗಗನಚುಂಬಿಯಾದ ಹಿಮಾಲಯ ಪರ್ವತ, ಪ್ರಕೃತಿನಿರ್ಮಿತವಾದ ಅಡ್ಡಗೋಡೆಯಾಗಿ ಉಳಿದ ಜಗತ್ತಿನಿಂದ ಇದನ್ನು ಬೇರ್ಪಡಿಸಿತು. ಉಳಿದ ಮೂರು ದಿಕ್ಕುಗಳಲ್ಲಿ ಅಪಾರವಾದ ಸಾಗರ ಇತರ ಭೂಭಾಗವನ್ನು ಹಿಂದೆ ತಳ್ಳಿ ಇದನ್ನೊಂದು ದೇಶವನ್ನಾಗಿ ತನ್ನ ಅಲೆಗಳ ಕಟ್ಟಿನಿಂದ ಬಂಧಿಸಿತು. ಆಸೇತು ಹಿಮಾಚಲ ಪರ್ಯಂತ ಇದು ಒಂದು ದೇಶ—ಎಂಬ ಭಾವನೆ ಬೆಳೆಯುವುದಕ್ಕೆ ಪ್ರಕೃತಿ ನಿರ್ಮಿತವಾದ ಈ ವಿಭಜನೆ ಸಹಾಯಕವಾಯಿತು. ಇಲ್ಲಿ ಎಷ್ಟೇ ಜನಾಂಗಗಳಿದ್ದರೂ, ಎಷ್ಟೇ ವೈವಿಧ್ಯ ವೈಶಿಷ್ಟ್ಯಗಳಿದ್ದರೂ ಅವೆಲ್ಲಾ ಒಂದು ಸಮಾನತೆಯ ಸೂತ್ರದಲ್ಲಿ ಅಡಕವಾಗಿದ್ದು ಬಾಳಬೇಕೆಂಬ ಐಕ್ಯದ ಕಂಕಣವನ್ನು ಪ್ರಕೃತಿಯೇ ನಿರ್ಮಿಸಿಕೊಟ್ಟಿತು:

> ಉತ್ತರಂ ಯತ್ ಸಮುದ್ರಸ್ಯ । ಹಿಮಾದ್ರೇಶ್ಚೈವ ದಕ್ಷಿಣಾಂ ।
> ವರ್ಷಂ ತತ್ ಭಾರತಂ ನಾಮಾ ಭಾರತೀ ಯತ್ರ ಸಂತತಿಃ ॥

ಸಮುದ್ರದ ಉತ್ತರಕ್ಕೆ, ಹಿಮಾದ್ರಿಯ ದಕ್ಷಿಣಕ್ಕೆ ಇರುವ ಈ ದೇಶ ಭಾರತದೇಶ—ಎಂಬ ಈ ಮಾತು, ಪ್ರಾಕೃತಿಕ ಸನ್ನಿವೇಶಗಳ ಹಿನ್ನೆಲೆಯಲ್ಲಿ ಜನಜೀವನದ ಐಕ್ಯದ ಚಿತ್ರ ರೂಪಿತವಾಗುತ್ತಿರುವುದನ್ನು ಸೂಚಿಸುತ್ತದೆ.

ವೇದ ಉಪನಿಷತ್ತುಗಳನ್ನು ದಾಟಿ ಇತಿಹಾಸ ಪುರಾಣಗಳಿಗೆ ಬಂದಂತೆಲ್ಲಾ ಈ ಐಕ್ಯದ ಭಾವನೆ ಇನ್ನೂ ವ್ಯಾಪಕವಾಗಿ ಬೆಳೆಯಿತು. ಇವುಗಳಲ್ಲಿ ಕ್ರಮೇಣ ವಿಕಾಸಗೊಂಡು ಅಭಿವ್ಯಕ್ತಗೊಂಡ ಧರ್ಮಸಂಸ್ಕೃತಿಯ ಸಮನ್ವಯದೃಷ್ಟಿ ದೇಶಭಾಷೆಗಳ ಮೂಲಕ ಜನಜೀವನವನ್ನು ವ್ಯಾಪಿಸಿತು. ಈ ದೇಶದ ಕಣಕಣಗಳನ್ನೂ ಅವಿಭಾಜ್ಯವಾದ ಒಂದು ಅಂಗದಂತೆ ಬೆಸೆಯಿತು. ಇಲ್ಲಿರುವ ನದಿಗಳು, ಬೆಟ್ಟಗಳು, ಕ್ಷೇತ್ರಗಳು ಒಂದೇ ದೇಹದ ಹಲವು ಅಂಗಗಳಾಗಿ ಪರಿಣಮಿಸಿ ಭಾರತಿಯ ವಿರಾಡ್ರೂಪ ಗೋಚರವಾಗತೊಡಗಿತು :

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಎಂದು ಎಲ್ಲ ನದಿಗಳ ಪವಿತ್ರಜಲವನ್ನು ಸ್ಮರಿಸಿಕೊಳ್ಳುವ ಈ ಮಾತನ್ನಾಗಲಿ, ಅಥವಾ

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ ॥

ಎಂದು ದೇಶದ ಕೆಲವು ಕ್ಷೇತ್ರಗಳನ್ನು ಸ್ಮರಿಸಿಕೊಳ್ಳುವ ಈ ಶ್ಲೋಕವನ್ನಾಗಲಿ ನೋಡಬಹುದು. ಇವು ನಿತ್ಯಪೂಜೆಯ ಮಂತ್ರಗಳಾಗಿ ಪರಿಣಮಿಸಿದುವು. ದಕ್ಷಿಣದವರಿಗೆ ಉತ್ತರದ ಕಾಶಿ ಪವಿತ್ರಕ್ಷೇತ್ರವಾದರೆ ಉತ್ತರದವರಿಗೆ ದಕ್ಷಿಣದ ರಾಮೇಶ್ವರ ಯಾತ್ರಾಸ್ಥಳವಾಯಿತು. ಈ ಎಲ್ಲಾ ಭಾವನೆಗಳು ದೇಶದ ವಿಸ್ತಾರವನ್ನೂ ಮತ್ತು ಅದರಲ್ಲಿ ಹಾಸುಹೊಕ್ಕಾಗಿ ಹರಡಿರುವ ಧಾರ್ಮಿಕ ಐಕ್ಯವನ್ನೂ ಸೂಚಿಸುವ ಶಕ್ತಿ ಸಂಕೇತವಾದುವು ; ಜನಾಂಗಗಳ ಅಂತರವನ್ನು ತೊಡೆದು ಜನಜೀವನವನ್ನು ಒಂದುಗೂಡಿಸಲು ಕಾರಣವಾದುವು.

ಇವುಗಳಿಂದ ಸಾಂಸ್ಕೃತಿಕವಾಗಿ ಮೂಲಭೂತವಾದ ಐಕ್ಯವನ್ನು ಸಾಧಿಸುವುದು ಸಾಧ್ಯವಾದರೂ ಭೌತಿಕವಾದ ವೈವಿಧ್ಯವು ಉಳಿದೇ ಇತ್ತು. ವಿಸ್ತಾರವಾದ ಈ ದೇಶದಲ್ಲಿ ಪ್ರಕೃತಿಯ ವೈಲಕ್ಷಣ್ಯಗಳಿಗನುಗುಣವಾಗಿ ಹಲವಾರು ವಿಭಾಗಗಳನ್ನು ಕಾಣುವುದು ಸಹಜವಾಗಿದೆ. ಉತ್ತರದ ಸಿಂಧು ಗಂಗಾ ಬಯಲುಗಳು ಒಂದು ರೀತಿಯಾದರೆ, ದಕ್ಷಿಣದ ಪ್ರಸ್ಥಭೂಮಿ ತನ್ನ ಸನ್ನಿವೇಶಗಳಿಗನುಗುಣವಾಗಿ ರೂಪುಗೊಂಡಿತು. ಮಧ್ಯದಲ್ಲಿರುವ ವಿಂಧ್ಯಪರ್ವತ ಸ್ವಲ್ಪಮಟ್ಟಿಗೆ ಉತ್ತರ ದಕ್ಷಿಣ ಭಾರತಗಳನ್ನು ಬೇರ್ಪಡಿಸಲು ಕಾರಣವಾಯಿತೆನ್ನಬಹುದು. ಪಶ್ಚಿಮದ ಸಹ್ಯಾದ್ರಿ ಮತ್ತು ಪೂರ್ವಘಟ್ಟಗಳು ದಕ್ಷಿಣ ಭಾರತದ ತೀರಪ್ರದೇಶಗಳಲ್ಲಿ ತಮ್ಮ ಪ್ರಭಾವಮುದ್ರೆಯನ್ನು ಒತ್ತಿದುವು. ರಾಜಕೀಯವಾಗಿ ಒಂದು ಆಡಳಿತಕ್ಕೆ ಈ ದೇಶ ಎಂದೂ ಒಳಪಟ್ಟಿರಲಿಲ್ಲ; ಹಾಗೆ ಒಳಪಡಿಸಲು ಆಗದಿರುವಷ್ಟು ವಿಸ್ತಾರವಾಗಿತ್ತು. ಮೌರ್ಯರ ಮತ್ತು ಗುಪ್ತರ ಕಾಲದಲ್ಲಿ ತಕ್ಕಮಟ್ಟಿಗೆ ಒಂದು ಆಡಳಿತದ ವಶಕ್ಕೆ ಬಂದಿತೆಂದು ಹೇಳಬಹುದಾದರೂ ಅದು ಕೇವಲ ತಾತ್ಕಾಲಿಕ. ರಾಜಕೀಯದ ಕಚ್ಚಾಟ ಇತರ ದೇಶಗಳಂತೆ ಭರತಖಂಡದ ಚರಿತ್ರೆಯಲ್ಲಿಯೂ ಕಾಣುವ ಒಂದು ಅವಿಭಾಜ್ಯವಾದ ಅಂಶ. ಆದರೆ ಈ ಬಹಿರಂಗದ ಕಚ್ಚಾಟದ ಹಿಂದೆ, ಅಂತರಂಗದ ಅನುಭವದಿಂದ ಶ್ರೀಮಂತವಾದ ಧರ್ಮ ಸಂಸ್ಕೃತಿಯ ಕೃಪಾಹಸ್ತ ಇದ್ದುದರಿಂದ ಸಮುದ್ರದ ಅಲೆಯ ಮೇಲೆ ತೋರುವ ಬುರುಗಿನ ಏಳುಬೀಳುಗಳಂತೆ ಇವು ಉದುರಿ

ಹೋದುವು. ಸಾಮ್ರಾಜ್ಯಗಳು ಹುಟ್ಟಿ ಸಾಮ್ರಾಜ್ಯಗಳು ಅಳಿದುವು. ಆದರೆ ಸಂಸ್ಕೃತಿ ಸಮುದ್ರಕ್ಕೆ ಚ್ಯುತಿಯಿಲ್ಲದಂತೆ ಈ ಪ್ರಯೋಗಗಳಿಂದ ಈ ದೇಶ ಪೋಷಣೆಯನ್ನು ಪಡೆದು ಇನ್ನೂ ಶ್ರೀಮಂತವಾಗಿ ಬೆಳೆಯುತ್ತಾ ಹೋಯಿತು. ಅಶೋಕ, ಹರ್ಷ, ಪುಲಿಕೇಶಿ ಮೊದಲಾದ ಅನೇಕ ರಾಜರ ರಾಜಕೀಯದ ಸಾಧನೆಯು ಸಂಸ್ಕೃತಿಯ ಸಂವರ್ಧನೆಗೂ ಕಾರಣವಾಯಿತು. ಭರತಖಂಡವು ರೂಪಿಸಿದ ರಾಜತ್ವದ ಆದರ್ಶಕ್ಕೆ ಇಂತಹ ರಾಜರು ಸಾಕ್ಷಿಗಳಾಗಿ ಉಳಿದರು. ಸಂಸ್ಕೃತಿ ಸಾಹಿತ್ಯ ಧರ್ಮಗಳನ್ನು ಪೋಷಿಸಿದರು; ದೇಶದ ಸಂಪತ್ತನ್ನು ರೂಢಿಸಿ, ಜನಜೀವನವನ್ನು ಹಸನುಗೊಳಿಸಲು ಪ್ರಯತ್ನಿಸಿದರು.

ಸಂಪತ್ಪೂರಿತವಾದ ಭಾರತ ಅನೇಕವೇಳೆ ಪರಕೀಯರ ದಾಳಿಯನ್ನು ಎದುರಿಸಬೇಕಾಯಿತು. ಉತ್ತರದಲ್ಲಿ ಹಿಮಾಲಯದ ರಕ್ಷೆ ಇದ್ದರೂ ಅಲ್ಲಲ್ಲಿ ಅದರ ಉತ್ತುಂಗಶಿಖರಗಳು ತಗ್ಗಾಗಿದ್ದು ಕೆಲವು ಕಣಿವೆಗಳು ಏರ್ಪಟ್ಟಿದ್ದುವು. ಅಫ್ಘಾನಿಸ್ಥಾನದ ಕಡೆಯಿಂದ ಖೈಬರ್ ಮೊದಲಾದ ಕಣಿವೆಗಳ ಮೂಲಕ ಮಹಮ್ಮದೀಯರ ದಾಳಿಯ ಅಪಾಯ ನಿರಂತರವಾಗಿತ್ತು. ಅನೇಕ ವೇಳೆ ಅಂತಹ ದಾಳಿಗಳಿಗೆ ತುತ್ತಾಗಿ ಸೋಲನ್ನೂ ಅನುಭವಿಸಿತು. ರಾಜಪುರಾಣದಲ್ಲಿ ಏರ್ಪಟ್ಟಿದ್ದ ಥಾರ್ ಮರುಭೂಮಿಯ ಪಾತ್ರವೂ ಇದರಲ್ಲಿ ಪ್ರಮುಖವಾದುದೆಂಬುದು ಚರಿತ್ರಕಾರರ ಅಭಿಪ್ರಾಯ. ಒಳಿತು ಮತ್ತು ಕೆಡಕುಗಳೆರಡೂ ಆ ಮರುಭೂಮಿಯಿಂದ ಏಕಕಾಲದಲ್ಲಿ ಸಂಭವಿಸಿದುವೆನ್ನಬಹುದು. ಹೊರಗಡೆಯಿಂದ ಬಂದ ಶತ್ರುಗಳು ಸುಲಭವಾಗಿ ಅದನ್ನು ದಾಟಿ ದೇಶದ ಒಳಭಾಗಕ್ಕೆ ನುಗ್ಗುವಂತಿರಲಿಲ್ಲ. ಆ ಅರ್ಥದಲ್ಲಿ ಅದು ದೇಶದ ರಕ್ಷಣೆಗೆ ಮರಳುಬಯಲಿನ ಕೋಟೆಯಾಗಿ ಪರಿಣಮಿಸಿತು. ಆದರೆ ಅದಕ್ಕೆ ಉತ್ತರದಲ್ಲಿರುವ ಇಂಡಿಯಾದೇಶದ ಭೂಭಾಗ ಶತ್ರುಗಳನ್ನು ಎದುರಿಸುವಾಗ ದಕ್ಷಿಣದ ಸಹಾಯವನ್ನು ಪಡೆಯುವುದು ಸುಲಭವಾಗಿ ಸಾಧ್ಯವಿಲ್ಲದಂತಾಯಿತು. ಅದು ದಾಳಿಕಾರರ ಜಯಕ್ಕೆ ಅನುಕೂಲಕರವಾಯಿತು. ಈ ಅರ್ಥದಲ್ಲಿ ಥಾರ್ ಮರುಭೂಮಿ ಗಡಿರಕ್ಷಣೆಯ ಕಾರ್ಯಕ್ಕೆ ಅಡ್ಡಿಯಾಯಿತು.

ಭರತಖಂಡದಮೇಲೆ ಎಷ್ಟೋ ಧಾಳಿಗಳು ನಡೆದುವು. ಕೆಲವರು ಸಂಪತ್ತನ್ನು ದೋಚಿಕೊಂಡು ಹೋದರು. ಮತ್ತೆ ಕೆಲವರು ಒಳನುಗ್ಗಿ ಇಲ್ಲಿಯೇ ನೆಲಸಿದರು. ತಮ್ಮ ಅಧಿಕಾರದರ್ಪದ ಆಳಿಕೆಯಿಂದ ಜನಜೀವನವನ್ನು ವ್ಯಾಪಿಸಿದರು. ಇವೆಲ್ಲವನ್ನೂ ಭರತಖಂಡ ಸಹಿಸಿಕೊಂಡಿತು; ಯಶಸ್ವಿಯಾಗಿ ಅದನ್ನು ಎದುರಿಸಿತು; ಕೊನೆಯಲ್ಲಿ ಅದನ್ನು ಅರಗಿಸಿಕೊಂಡಿತು. ತನ್ನ ವ್ಯಕ್ತಿತ್ವಕ್ಕೆ ಅನುಗುಣವಾಗಿ ಅದನ್ನು ತನಗೆ ತಕ್ಕಂತೆ ಪರಿವರ್ತಿಸಿಕೊಂಡಿತು; ಇದೇ ಭರತಖಂಡದ ಸಂಸ್ಕೃತಿಯ ವೈಶಿಷ್ಟ್ಯ. ಇಂತಹ ದಾಳಿಗಳನ್ನು ತಡೆಯಲಾರದೆ ಇತರ ದೇಶಗಳ ಎಷ್ಟೋ ಪ್ರಾಚೀನ ನಾಗರಿಕತೆಗಳು ನಾಮಾವಶೇಷವಾಗಿ ಹೋಗಿರುವುದನ್ನು ಇತಿಹಾಸದ ಪುಟಗಳು ಉಲ್ಲೇಖಿಸುತ್ತವೆ. ಆದರೆ ಭರತಖಂಡದ ಸಂಸ್ಕೃತಿ. ನಂಜನ್ನೂ ಉಂಡ ನಂಜುಂಡನಂತೆ ಅದನ್ನು ತಿಂದು ಅರಗಿಸಿಕೊಂಡಿತು. ಅದಕ್ಕೆ ಸೋತು ಒಳಗಾದಂತೆ ತಾತ್ಕಾಲಿಕವಾಗಿ ತೋರಿದರೂ ಕೊನೆಗೆ ಅದನ್ನು ಮೆಟ್ಟಿ ಮೇಲೇರಿತು. ಆ ಪ್ರಾಚೀನತೆಯಿಂದ ಹಿಡಿದು ಇಂದಿನವರೆಗೂ ತನ್ನ ಮೂಲಭೂತ

ಅಂಶವನ್ನು ಅದು ಜೀವಂತವಾಗಿ ಉಳಿಸಿಕೊಂಡು ಬಂದಿದೆ. ಕಾಲಕ್ಕನುಗುಣವಾದ ಏಳು ಬೀಳುಗಳನ್ನೂ ದೌರ್ಬಲ್ಯಗಳನ್ನೂ ಅದು ಒಳಗೊಳ್ಳದೇ ಇಲ್ಲ. ಆದರೆ ಅವುಗಳಿಗೆ ಅತೀತ ವಾಗಿ ನಿಲ್ಲಬಲ್ಲ ಚೈತನ್ಯ ಶಕ್ತಿ ಅದನ್ನು ಚಿರಂತನಗೊಳಿಸಿದೆ. ಆ ಚೈತನ್ಯ ಶಕ್ತಿಯೇ ಭರತ ಖಂಡದ ಜನಜೀವನವನ್ನು ರೂಪಿಸುತ್ತಾ ಬಂದಿದೆ; ಅದರ ನಿರಂತರತೆಗೆ ಕಾರಣ ವಾಗಿದೆ.

ಆ ಚೈತನ್ಯಶಕ್ತಿ ಯಾವುದು? ಅದು ಜನಜೀವನವನ್ನು ರೂಪುಗೊಳಿಸಿರುವ ಬಗೆ ಹೇಗೆ?—ಇವು ಭರತಖಂಡದ ಸಂಸ್ಕೃತಿಯನ್ನು ಕುರಿತ ಮೂಲಭೂತವಾದ ಪ್ರಶ್ನೆಗಳು. ಇದಕ್ಕೆ ಉತ್ತರವನ್ನು ತಿಳಿಯಲು ಸಿಂಧು ಸಂಸ್ಕೃತಿಯೊಡನೆ ಆರ್ಯರಿಗೆ ಉಂಟಾದ ಸಂಘರ್ಷದಿಂದ ಹಿಡಿದು ಕ್ರಮೇಣ ವಿಕಾಸಗೊಳ್ಳುತ್ತ ಬಂದ ಅದರ ಅಂತರಂಗದ ಚರಿತ್ರೆ ಯನ್ನು ನೋಡಬೇಕಾಗುತ್ತದೆ.

## ವೇದಗಳು

ಭರತಖಂಡದ ಅಂತರಂಗದ ಚರಿತ್ರೆಯನ್ನು ಅರಿಯಲು ಇರುವ ಅತ್ಯಂತ ಪ್ರಾಚೀನವಾದ ಗ್ರಾಂಥಿಕ ಆಧಾರವೆಂದರೆ ವೇದಗಳು. ಅವುಗಳಿಗಿಂತ ಹಿಂದಿನ ಬರವಣಿಗೆಗಳು ಸಿಂಧು ಸಂಸ್ಕೃತಿಯಲ್ಲಿ ಸಿಕ್ಕಿದ್ದರೂ ಅವುಗಳನ್ನು ಓದುವುದು ಇನ್ನೂ ಸಾಧ್ಯವಾಗಿಲ್ಲ. ಅಲ್ಲಿ ಬಳಸುತ್ತಿದ್ದ ಭಾಷೆ ಯಾವುದೆಂಬುದನ್ನಾಗಲಿ ಅದರ ಸ್ವರೂಪವನ್ನಾಗಲಿ ತಿಳಿಯುವುದಕ್ಕೆ ಇತರ ಆಧಾರಗಳಾವುವೂ ಇಲ್ಲ. ಆದುದರಿಂದ ಗ್ರಂಥರೂಪವಾಗಿ ದೊರೆಯುವ ಅತ್ಯಂತ ಪ್ರಾಚೀನ ಆಧಾರಗಳೆಂದರೆ ವೇದಗಳೇ.

ವೇದಗಳ ರಚನೆಯ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲವಾದರೂ ಅವುಗಳ ಭಾಷೆ ಮೊದಲಾದುವುಗಳ ಆಧಾರದಿಂದ ಸುಮಾರು ಕ್ರಿ.ಪೂ. ೧೦೦೦ದ ಹೊತ್ತಿಗಾಗಲೇ ಋಗ್ವೇದ ರೂಪಿತವಾಗಿತ್ತೆಂದು ವಿದ್ವಾಂಸರು ಊಹಿಸಿದ್ದಾರೆ.[7] ಆದರೆ ಈ ವಿಚಾರದಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಬಾಲಗಂಗಾಧರ ತಿಲಕರು, ಯಾಕೋಬಿ ಮೊದಲಾದವರು ಕ್ರಿ.ಪೂ. ೨೦೦೦ದಿಂದ ೬೦೦೦ ವರ್ಷಗಳಷ್ಟು ಹಿಂದಿನವೆಂದು ವಾದಿ ಸಿದ್ದಾರೆ. ವಿಂಟರ್‌ನಿಟ್ಸ್ ಅವರು ಕ್ರಿ.ಪೂ. ೨೫೦೦ಕ್ಕಿಂತ ಹಿಂದಿನವು ಎಂದು ಹೇಳಿದರೆ ಮೆಕ್‌ಡಾನೆಲ್ ಮೊದಲಾದವರು ಕ್ರಿ.ಪೂ. ೧೫೦೦ಕ್ಕಿಂತ ಹಿಂದಿನವಾಗಿರಲಾರವೆಂದು ಅಭಿಪ್ರಾಯಪಡುತ್ತಾರೆ.[8] ಇದೆಲ್ಲವನ್ನೂ ನೋಡಿದರೆ ಕ್ರಿ.ಪೂ. ೧೦೦೦ಕ್ಕಿಂತ ಈಚಿಗೆ ಎಂಬ ಅಭಿಪ್ರಾಯವನ್ನು ಯಾರೂ ಉಳ್ಳವರಾಗಿಲ್ಲ. ಅದಕ್ಕಿಂತ ಎಷ್ಟು ಹಿಂದೆ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಆದರೆ ೧೦೦೦ದ ವೇಳೆಗೆ ವೇದಗಳು ರೂಪಿತ ವಾಗಿದ್ದುವೆಂಬ ವಿಚಾರದಲ್ಲಿ ಸಂದೇಹವಿಲ್ಲ.

ಈ ಕಾಲಕ್ಕೆ ಬಹಳ ಹಿಂದಿನಿಂದಲೂ ಅವರ ರಚನೆಯು ಪೂರ್ವಸಿದ್ಧತೆ ನಡೆದು, ಕೊನೆಯಲ್ಲಿ ಅದು ಆ ರೂಪವನ್ನು ಪಡೆದಿರಬೇಕು. ಋಗ್ವೇದದಲ್ಲಿ ವ್ಯಕ್ತವಾದ ಸಮಾಜ

ಮತ್ತು ಸಂಸ್ಕೃತಿಯ ಚಿತ್ರವೂ ಇದಕ್ಕೆ ಸಮರ್ಥನೆಯನ್ನು ಒದಗಿಸುತ್ತದೆ. ಅಷ್ಟೊಂದು ಪರಿಣತವಾದ ಸಮಾಜದ ಕಲ್ಪನೆ ಮತ್ತು ಸಂಸ್ಕೃತಿಯ ಸುಳಿಹುಗಳು ಇದ್ದಕ್ಕಿದ್ದಂತೆಯೇ ರೂಪುಗೊಂಡು ಹೊರಹೊಮ್ಮಲಾರವು. ಅದಕ್ಕೆ ಆವಶ್ಯಕವಾದ ಹಿನ್ನೆಲೆ ಸಾಕಷ್ಟು ಹಿಂದಿನಿಂದಲೂ ಬೆಳೆದು ಬಂದು ಆ ಅನುಭವದ ಫಲವಾಗಿ ವೇದಗಳು ಮೂಡಿದುವು.

'ವೇದ' ಎಂದರೆ ಅರಿವು ತಿಳಿವು ಜ್ಞಾನ ಎಂಬ ಅರ್ಥ ಬರುತ್ತದೆ. ಅದರಲ್ಲಿಯೂ 'ಪರಾತ್ಪರ ಶಕ್ತಿಯನ್ನು ಪ್ರತಿನಿಧಿಸುವ ದೇವತೆಗಳನ್ನು ಕುರಿತ ಜ್ಞಾನ'—ಎಂಬ ಅರ್ಥ ಇಲ್ಲಿ ಕಂಡುಬರುತ್ತದೆ. ಈ ಜ್ಞಾನವನ್ನು ತಿಳಿಸಿಕೊಡುವುದಕ್ಕಾಗಿಯೇ ವೇದಗಳು ಹುಟ್ಟಿದವು. ವೇದಗಳಲ್ಲೆಲ್ಲಾ ಋಗ್ವೇದವೇ ಅತ್ಯಂತ ಪ್ರಾಚೀನವಾದುದು. ಅನಂತರ ಯಜುರ್ವೇದ ಸಾಮವೇದಗಳು ಹುಟ್ಟಿದುವು. ಮೊದಮೊದಲು ಈ ಮೂರೇ ವೇದಗಳೆಂಬ ಭಾವನೆಯಿತ್ತು. ಈ ಮೂರನ್ನೂ ಒಟ್ಟಾಗಿ 'ತ್ರಯೀ' ಎಂದು ಕರೆಯುತ್ತಿದ್ದರು. ಅನಂತರ ಅಥರ್ವಣವೂ ಇವುಗಳ ಜೊತೆಗೆ ಬಂದು ಸೇರಿತು. ಪ್ರಧಾನವಾಗಿ ಲೌಕಿಕ ವಿದ್ಯೆಗಳನ್ನೇ, ಅದರಲ್ಲಿಯೂ ಮಾಟ, ಯಂತ್ರ ತಂತ್ರಗಳನ್ನು ಕುರಿತಿದ್ದ ಅಥರ್ವಣವನ್ನು ಆ ಮೂರು ವೇದಗಳ ಜೊತೆಯಲ್ಲಿ ಸೇರಿಸಬಹುದೇ ಎಂಬ ಸಂದೇಹ ಪ್ರಾರಂಭದಲ್ಲಿ ಇದ್ದಂತೆ ತೋರುತ್ತದೆ. ಕೊನೆಯಲ್ಲಿ ಅದಕ್ಕೂ ವೇದದ ಸ್ಥಾನ ಲಭಿಸಿತು. ವೇದಗಳು ನಾಲ್ಕಾಗಿ ಪರಿಣಮಿಸಿದುವು.

ಒಂದೊಂದು ವೇದದಲ್ಲಿಯೂ ಸಂಹಿತೆ, ಬ್ರಾಹ್ಮಣ, ಆರಣ್ಯಕ—ಎಂಬ ಮೂರು ಭಾಗಗಳಿವೆ. ಕೊನೆಯಲ್ಲಿ ಬರುವ ಉಪನಿಷತ್ತುಗಳನ್ನೂ ಸೇರಿಸಿಕೊಂಡರೆ ನಾಲ್ಕು ಭಾಗಗಳಾಗುತ್ತವೆ. ಯಾಸ್ಕ, ಆಪಸ್ತಂಬ ಮೊದಲಾದವರ ಅಭಿಪ್ರಾಯದಂತೆ ವೇದದಲ್ಲಿರುವ ವಿಭಾಗಗಳು ಎರಡೇ: ಸಂಹಿತೆ ಮತ್ತು ಬ್ರಾಹ್ಮಣಗಳು. ಆರಣ್ಯಕಗಳು ಬ್ರಾಹ್ಮಣಗಳಲ್ಲಿಯೇ ಒಂದು ಭಾಗವೆಂಬುದು ಅವರ ಅಭಿಪ್ರಾಯ. ಉಪನಿಷತ್ತುಗಳು ಸಹ ಆರಣ್ಯಕಗಳಿಗೆ ಸೇರಿದಂತೆ ಬೇರೆ ಬೇರೆ ಅಧ್ಯಾಯಗಳಾಗಿ ಇಲ್ಲಿ ಪರಿಣಮಿಸುತ್ತವೆ.

ಸಂಹಿತೆಗಳೆಂದರೆ ವೇದಮಂತ್ರಗಳನ್ನು ಒಳಗೊಂಡ ಭಾಗಗಳು. ದೇವತೆಗಳ ಉಪಾಸನೆಗಾಗಿ ಮಾಡಿದ ಸ್ತುತಿಗಳು ಇವು. ಬ್ರಾಹ್ಮಣಗಳಲ್ಲಿ ಈ ಮೂಲ ಮಂತ್ರಗಳನ್ನು ಕುರಿತ ವಿವರಣೆ ವ್ಯಾಖ್ಯಾನಗಳು ಬರುತ್ತವೆ. ಯಜ್ಞಕರ್ಮಗಳನ್ನು ಮಾಡುವ ನಿಯಮಗಳನ್ನೂ ವಿಧಿಗಳನ್ನೂ ಇವು ತಿಳಿಸುತ್ತವೆ. ಉಪಾಸನೆಯ ವಿಧಾನ, ಯಜ್ಞಯಾಗಾದಿಗಳ ಅಂತರಾರ್ಥ ಮೊದಲಾದುವುಗಳನ್ನು ತಿಳಿಸುವ ಭಾಗಗಳು ಆರಣ್ಯಕಗಳು. ಇನ್ನು ಕೊನೆಯ ಭಾಗವಾದ ಉಪನಿಷತ್ತುಗಳಲ್ಲಿ ಪರಾತ್ಪರತತ್ತ್ವದ ಸ್ವರೂಪವನ್ನು ಕುರಿತ ತಾತ್ತ್ವಿಕವಾದ ಜಿಜ್ಞಾಸೆ ಪ್ರತಿಪಾದಿತವಾಗಿದೆ. ವೇದದ ಈ ನಾಲ್ಕು ಭಾಗಗಳನ್ನೂ ಕುರಿತು ಹೇಳಬಹುದಾದರೆ, ಸಂಹಿತೆ ಬ್ರಾಹ್ಮಣಗಳನ್ನು ಕರ್ಮಕಾಂಡಗಳೆಂದೂ ಆರಣ್ಯಕಗಳನ್ನು ಉಪಾಸನಾ ಕಾಂಡವೆಂದೂ ಉಪನಿಷತ್ತುಗಳನ್ನು ಜ್ಞಾನಕಾಂಡವೆಂದೂ ಕರೆಯಬಹುದು.[9]

ಋಗ್ವೇದದ ಸಂಹಿತೆಯ ಭಾಗಕ್ಕೆ ಎಂದರೆ ಮಂತ್ರಗಳಿಗೆ ಋಕ್ಕುಗಳೆಂದು ಹೆಸರು. ಸುಮಾರು ೧೦,೫೫೨ ಋಕ್ಕುಗಳನ್ನು ಋಗ್ವೇದ ಒಳಗೊಂಡಿದೆಯೆಂದರೆ ಅದರ ಬೃಹತ್ತ್ವನ್ನು

ಹಿಸಿಕೊಳ್ಳಬಹುದು. ಒಂದೇ ಭಾವನೆಯನ್ನು ಒಳಗೊಂಡ ಕೆಲವು ಮಂತ್ರಗಳನ್ನು ರಿಸಿ, ಅವುಗಳನ್ನು ಸೂಕ್ತಗಳೆಂದು ಕರೆಯಲಾಗಿದೆ. ಋಗ್ವೇದದಲ್ಲಿ ಅಂತಹ ೧೦೨೮ ಕ್ತಗಳಿವೆ. ಅವುಗಳನ್ನು ಹತ್ತು ಮಂಡಲಗಳನ್ನಾಗಿ ವಿಭಾಗಿಸಿದ್ದಾರೆ. ಅನೇಕ ಋಷಿ ಂದ ರಚಿತವಾದ ಶ್ಲೋಕಗಳನ್ನೆಲ್ಲಾ ಹೀಗೆ ವ್ಯವಸ್ಥಿತವಾಗಿ ವಿಂಗಡಿಸಲಾಗಿದೆ. ವೇದ ಲ್ಲಿ. ಋಗ್ವೇದವನ್ನು ಮತ್ತು ಇತರ ವೇದಗಳನ್ನು ಕೂಡ, ಬರೆವಣಿಗೆ ಹುಟ್ಟುವುದಕ್ಕಿಂತ ಂಚೆಯಿಂದಲೂ ಕೇವಲ ತಮ್ಮ ಸ್ಮೃತಿಶಕ್ತಿಯಿಂದಲೇ ಕಾಪಾಡಿಕೊಂಡು ಬಂದುದನ್ನು ಸಿಕೊಂಡರೆ ಆಶ್ಚರ್ಯಮೂಕರಾಗುತ್ತೇವೆ.

ಋಗ್ವೇದದ ಸಂಹಿತೆಯ ಭಾಗ, ಪ್ರಾಚೀನತೆಯ ದೃಷ್ಟಿಯಿಂದಲೂ ಸಂಸ್ಕೃತಿಯ ಂಪರೆಗೆ ಹಾಕಿದ ಆಧ್ಯಾತ್ಮಿಕ ತಳಹದಿಯ ದೃಷ್ಟಿಯಿಂದಲೂ ಬಹಳ ಮುಖ್ಯವಾದುವು. ತಖಂಡದ ಸಂಸ್ಕೃತಿಯ ವಿಕಾಸದ ಚಿತ್ರವನ್ನು ಇವುಗಳಲ್ಲಿ ಕಂಡುಕೊಳ್ಳಬಹುದಾಗಿದೆ. ವೇದಗಳ ಪ್ರಾರಂಭದ ದೆಸೆಯಲ್ಲಿ ಮುಖ್ಯವಾಗಿರುವುದು ಅನೇಕ ದೇವತೆಗಳ ಪಾಸನೆ. ವೇದಗಳ ಈ ಮೊದಲನೆಯ ಹಂತದಲ್ಲಿ ಇಂದ್ರ ವರುಣ ಅಗ್ನಿ ಮೊದಲಾದ ೂವತ್ತಮೂವರು ದೇವತೆಗಳು ಪ್ರಮುಖರಾಗಿದ್ದಾರೆ. ಅವರಲ್ಲಿ ಸ್ವರ್ಗದ ದೇವತೆಗಳು, ಾಶದ ದೇವತೆಗಳು ಮತ್ತು ಭೂಮಿಯ ದೇವತೆಗಳು—ಎಂದು ಮೂರು ಗುಂಪು ನ್ನು ಮಾಡಬಹುದು. ವರುಣ, ಮಿತ್ರ, ಸವಿತೃ ಮೊದಲಾದವರು ಸ್ವರ್ಗದ ದೇವತೆ ು; ಇಂದ್ರ, ವಾಯು, ಪರ್ಜನ್ಯ ಮೊದಲಾದವರು ಆಕಾಶದ ದೇವತೆಗಳು; ಪೃಥ್ವಿ, ್ನಿ, ಸೋಮ ಮೊದಲಾದವರು ಭೂಲೋಕದ ದೇವತೆಗಳು.

ಇದನ್ನು ನೋಡಿದರೆ ಪ್ರಕೃತಿಯ ಒಂದೊಂದು ಶಕ್ತಿಯನ್ನು ಇಲ್ಲಿ ದೇವತೆಗಳನ್ನಾಗಿ ್ಪಿಸಿ ಉಪಾಸಿಸಿದಂತೆ ತೋರುತ್ತದೆ. ಈ ಪ್ರಕೃತಿಯ ಉಪಾಸನೆ ಸಿಂಧು ಸಂಸ್ಕೃತಿಯಿಂದ ಭಾವಿತರಾದ ಆರ್ಯರು ವೇದಗಳಲ್ಲಿ ಸೇರಿಸಿದ ಪ್ರಧಾನವಾದ ಅಂಶವೆನ್ನಬಹುದು. ಅಲ್ಲದೆ ವು ನೆಲಸಿದ ಸಿಂಧೂ ತೀರದ ಫಲವತ್ತಾದ ಬಯಲು, ಉತ್ತರದಲ್ಲಿ ಗಗನಚುಂಬಿ ಾಗಿ ತಲೆಯೆತ್ತಿ ನಿಂತಿರುವ ಹಿಮವಂತನ ಮಹಿಮಾನ್ವಿತ ಗಾಂಭೀರ್ಯ, ಸುತ್ತಲಿನ ುತ ಸೌಂದರ್ಯ—ಇವೆಲ್ಲವೂ ಆರ್ಯರನ್ನು ಸಹಜವಾಗಿಯೇ ಪ್ರಕೃತಿಯ ಉಪಾಸಕರನ್ನಾಗಿ ಾಡಿದುವು. ಆ ಪ್ರಕೃತಿಯ ಶಕ್ತಿಯನ್ನು ದೈವತ್ವದ ಕಲ್ಪನೆಯಲ್ಲಿ ಅವರು ಆಹ್ವಾನಿ ರು. ಅದಕ್ಕೊಂದು ಸಾಂಕೇತಿಕ ರೂಪವನ್ನಿತ್ತು ಉಪಾಸಿಸಿದರು. ಮೂಡಣ ದಿಗಂತ ್ಲ ಮೂಡುತ್ತಿರುವ ಅರುಣೋದಯವನ್ನು ಕಂಡ ಋಷಿ ಉಷಾದೇವಿಯ ಕಲ್ಪನೆಯನ್ನು ್ತು ಹೀಗೆ ಹಾಡಿದ್ದಾನೆ:

ಇದಮುತ್ಯತ್ಪುರುತಮಂ ಪುರಸ್ತಾಜ್ ‌। ಜ್ಯೋತಿಸ್ತಮಸೋ ವಯುನಾವದಸ್ಥಾತ್ ।
ನೂನಂ ದಿವೋ ದುಹಿತರೋ ವಿಭಾತೀ । ಗಾತುಂ ಕೃಣವನ್ನುಷಸೋ ಜನಾಯ ।

ಲ್ಲರಿಗೂ ಸುಪರಿಚಿತವಾಗಿ, ಕ್ರಮವಾಗಿ ಪೂರ್ವದಿಕ್ಕಿನಲ್ಲಿ ಕಾಣಿಸಿಕೊಳ್ಳುವ ಈ ಬೆಳಕು ್ತಲಿನಿಂದ ಪ್ರತ್ಯೇಕವಾಗಿ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ದಿವದ ಪುತ್ರಿಯರಾದ ಷೆಯರು ಬಹು ದೂರದವರೆಗೆ ಬೆಳಗಿ ಜನರಿಗೆ ದಾರಿ ತೋರಲಿ."

ಅಸ್ಮೃದು ಚಿತ್ರಾ ಉಷಸಃ ಪುರಸ್ತಾನ್ । ಮಿತಾ ಇವ ಸ್ವರವೋಽಧ್ವರೇಷು ।
ವ್ಯೂ ವ್ರಜಸ್ಯ ತಮಸೋ ದ್ವಾರೋ । ಚ್ಛಂತೀರವ್ರಂಛುಚಯಃ ಪಾವಕಾಃ ॥

"ಪೂರ್ವ ದಿಕ್ಕನ್ನು ಬೆಳಗುತ್ತಿರುವ ಉಷೆಯರು ಯಜ್ಞಸ್ತಂಭಗಳಂತೆ ಬಗೆಬಗೆಯಾದ ಬಣ್ಣ ಗಳನ್ನು ಬೀರುತ್ತಾ ನಿಂತಿರುತ್ತಾರೆ. ಶುಚಿಯಾಗಿ ಪಾವಕರಾಗಿ ಹೊಳೆಯುತ್ತಾ ಕತ್ತ ಗವಿಯ ಎರಡು ಬಾಗಿಲುಗಳನ್ನೂ ತೆರೆದಿದ್ದಾರೆ"—ಹೀಗೆ ಕವಿಯಾಗಿ ಹಾಡಿದ್ದಾನೆ ಋಷಿ ಮೂಡಿಬರುತ್ತಿರುವ ಸೂರ್ಯನ ಅರುಣೋದಯದ ಮುನ್ಸೂಚನೆ, ಬಗೆಬಗೆಯ ಬಣ ಗಳನ್ನು ಬೀರುತ್ತ ನಿಂತ ಉಷೆಯ ಕಲ್ಪನೆಗೆ ಕಾರಣವಾಗಿದೆ. ಹೀಗೆಯೇ ಇತರ ಅನೇ ದೇವತೆಗಳ ಕಲ್ಪನೆಗೆ ಪ್ರಕೃತಿವ್ಯಾಪಾರಗಳೇ ಕಾರಣ. ಆದುದರಿಂದ ವೇದಗಳಲ್ಲಿ ಕಾಣು ದೇವತೆಗಳು ಸಾಮಾನ್ಯವಾಗಿ 'ಮಾನವವೇಷಧಾರಿಗಳಾದ ಪ್ರಕೃತಿ ಶಕ್ತಿಗಳು'—ಎಂ ಹೇಳಬಹುದು.

ಪ್ರಕೃತಿಯನ್ನು ಪ್ರತಿನಿಧಿಸುವ ದೇವತೆಗಳೂ ವೇದಗಳಲ್ಲುಂಟು. ಆಗ ಅವು ಸೃಷ್ಟಿ ಇನ್ನಾವುದೋ ಶಕ್ತಿಯನ್ನು ಒಳಗೊಂಡವುಗಳಾಗಿರುತ್ತವೆ. ಮಾನಸಿಕವಾದ ಕೆಲ ಶಕ್ತಿಗಳು—ಉದಾಹರಣೆಗೆ, ಸ್ವಾತಂತ್ರ್ಯಶಕ್ತಿ ಮೊದಲಾದುವು—ದೇವತಾಸ್ವರೂ ವನ್ನು ತಾಳಿರುವುದೂ ಉಂಟು. ಇವಲ್ಲದೆ ಹೊಲ, ಮನೆ, ನೇಗಿಲು ಮೊದಲಾದುವುಗಳ ಅಧಿಪತಿಗಳಾದ ಪ್ರಾದೇಶಿಕ ದೇವತೆಗಳೂ ವೇದಗಳಲ್ಲಿವೆ. ಅಷ್ಟೇ ಅಲ್ಲದೆ ಯಜ್ಞಸ್ತಂ ದರ್ಭೆ, ಪಾತ್ರೆಗಳು, ಸೋಮರಸವನ್ನು ತೆಗೆಯುವ ಕಲ್ಲು, ಕೊನೆಗೆ ಬಿಲ್ಲು ಬಾಣಗ ಕೂಡ ದೇವತೆಗಳಾಗಿ ಪರಿಣಮಿಸಿವೆ. ದೇವತೆಗಳಲ್ಲದ ವಸ್ತುಗಳನ್ನು ಅವರು ಸೃಷ್ಟಿ ಲ್ಲೆಲ್ಲೂ ಕಾಣಲೇ ಇಲ್ಲವೆನ್ನಬಹುದು. ಈ ಸೃಷ್ಟಿಯೆಲ್ಲಾ ದೈವಶಕ್ತಿಸಮನ್ವಿತವೆಂ ಸತ್ಯಕ್ಕೆ ಈ ದೇವತೆಗಳು ಸಾಂಕೇತಿಕವಾದ ಪ್ರತ್ಯಕ್ಷರೂಪಗಳೆಂಬುದನ್ನು ಕಂಡುಕೊಂಡಾ ಮಾತ್ರ ವೇದಗಳಲ್ಲಿನ ಈ ಕಲ್ಪನೆ ಶಕ್ತಿಯುತವಾಗುತ್ತದೆ.

ಅರ್ಥಗರ್ಭಿತವಾದ ಈ ಕಲ್ಪನೆ ಅನೇಕ ದೇವತೆಗಳ ಉಪಾಸನೆಗೆ ಕಾರಣವಾದು ಮಾತ್ರವಲ್ಲದೆ, ಮುಂದುವರಿದಂತೆ ಈ ವಿವಿಧ ರೂಪಗಳ ಹಿಂದೆ ಏಕರೂಪವಿದೆ ಎಂಬು ಅನುಭವಕ್ಕೂ ತಿರುಗಿತು. ಇದು ಬಹಳ ಮಹತ್ತರವಾದ ಹೆಜ್ಜೆ. ಒಂದೊಂದು ದೇವ ಯನ್ನು ಒಮ್ಮೊಮ್ಮೆ ಪ್ರಮುಖವಾಗಿ ಪರಿಗಣಿಸಿ ಆತನೇ ಸರ್ವಶಕ್ತ, ಸೃಷ್ಟಿಕರ್ತನೆಂಬ ವರ್ಣಿಸಿರುವುದು ಕೆಲವು ವೇಳೆ ಕಂಡುಬರುತ್ತದೆ. ಇನ್ನು ಕೆಲವು ಕಡೆಗಳಲ್ಲಿ ಕೆಲ ದೇವತೆಗಳ ಸಮುದಾಯವನ್ನೆಲ್ಲಾ ಒಟ್ಟಾಗಿ ಸೇರಿಸಿ ಅವುಗಳ ಸರ್ವಶಕ್ತತ್ವವ ನಿರೂಪಿಸುವುದೂ ಉಂಟು. ಇದು ಆ 'ಏಕೈಕ ಸರ್ವಶಕ್ತತತ್ತ್ವ'ದ ಕಡೆಗೆ ನಡೆಯ ತ್ತಿರುವ ಸೂಚನೆ ಎಂದು ಹೇಳಬಹುದು. ಇದರ ಮುಂದಿನ ಹೆಜ್ಜೆಯೇ "ಏಕಂ ಸ ವಿಪ್ರಾ ಬಹುಧಾ ವದಂತಿ"—ಎಂಬ ಭಾವನೆ.[10] ದೇವರು ಒಬ್ಬನೇ, ಅವನನ್ನು ಜ್ಞಾ ಗಳು ಬೇರೆ ಬೇರೆ ರೀತಿಯಲ್ಲಿ ಕರೆದಿದ್ದಾರೆ; ಅವನೂ ಈ ವಿಶ್ವವೂ ಬೇರೆ ಬೇರೆಯಲ್ಲ- ಎಂಬ ನಿರ್ಣಯಕ್ಕೆ ಋಷಿಗಳು ಬರುತ್ತಾರೆ. ಇದು ಮುಂದಿನ ತಾತ್ತ್ವಿಕ ಬೆಳವಣಿಗೆ ದೃಷ್ಟಿಯಿಂದ ಮುಖ್ಯವಾಗಿ ಗಮನಿಸಬೇಕಾದ ಅಂಶ.

ತ್ಮ ಮತ್ತು ಪರಮಾತ್ಮನ ವಿಷಯವನ್ನು ಕುರಿತ ಗಹನವಾದ ಜಿಜ್ಞಾಸೆ ಮುಂದೆ ನಿಷತ್ತುಗಳಲ್ಲಿ ಹಾಗಿರಲಿ, ಋಗ್ವೇದದ ಸೂಕ್ತಗಳಲ್ಲಿಯೇ ಬರುತ್ತದೆ.

ಕೋ ದದರ್ಶ ಪ್ರಥಮಂ ಜಾಯಮಾನಮಸ್ಥನ್ವನ್ತಂ ಯದನಸ್ಥಾ ಬಿಭರ್ತಿ ।
ಭೂಮ್ಯಾ ಅಸುರಸೃಗಾತ್ಮಾ ಕ್ವಸ್ವಿತ್ ಕೋ ವಿದ್ವಾಂಸಮುಪಗಾತ್ ಪ್ರಷ್ಟುಮೇತತ್ ॥

ಾಲಪುರುಷನು ಹುಟ್ಟಿದ್ದನ್ನು ಯಾರು ಕಂಡಿದ್ದಾರೆ? ಎಲುಬುಳ್ಳ ಇದಕ್ಕೆ ಎಲು ದ ಯಾವುದು ಆಸರೆ? ಭೂಮಿಯಿಂದ ರಕ್ತ ಉಸಿರು ಆದುವು; ಆದರೆ ಆತ್ಮ ೆ? ಇದನ್ನು ತಿಳಿಯಲು ಆ ವಿದ್ವಾಂಸನ ಬಳಿಗೆ ಹೋದವರು ಯಾರು?"—ಎಂಬ ಪ್ರಶ್ನೆಗಳು 'ಅಲ್ಪಸ್ತವ ಸೂಕ್ತ'ದಲ್ಲಿ ಬರುತ್ತವೆ.[11] ಆತ್ಮವಿಷಯವನ್ನು ಕುರಿತ ಇಂತಹ ನವಾದ ವಿಚಾರದತ್ತ ಋಗ್ವೇದದ ಋಷಿಗಳ ಮನಸ್ಸು ತಿರುಗಿದೆ. ಈ ಲೋಕಗಳ ಗ್ಲಾ ಎತ್ತಿ ಹಿಡಿದಿರುವ ಏಕೈಕ ಶಕ್ತಿ ಆ ಅಜ (ಹುಟ್ಟಿಲ್ಲದವನು) ಎಂಬುವನು ರು?—ಎಂದು ಪರಮಾತ್ಮನನ್ನು ಕುರಿತ ಪ್ರಶ್ನೆಯೂ ಇಲ್ಲಿ ಬರುತ್ತದೆ. ಆತ್ಮ ಮಾತ್ಮರ ಸ್ವರೂಪದ ಕಲ್ಪನೆ ಅದೇ ಸೂಕ್ತದಲ್ಲಿಯೇ ಹೀಗೆ ನಿರೂಪಿತವಾಗಿದೆ :

ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿ ಚಾಕಶೀತಿ ॥

ಚಾರಿಗಳಾದ ಪರಸ್ಪರ ಸ್ನೇಹಿತರಾದ ಎರಡು ಹಕ್ಕಿಗಳು ಒಂದೇ ಮರದ ಮೇಲೆ ಸುತ್ತವೆ. ಅವುಗಳಲ್ಲಿ ಒಂದು ಸಿಹಿಯಾದ ಅಂಜೂರದ ಹಣ್ಣನ್ನು ತಿನ್ನುತ್ತದೆ, ನ್ನೊಂದು ತಿನ್ನದೆ ಸುಮ್ಮನೆ ನೋಡುತ್ತದೆ." ಸುಖದುಃಖಗಳೆಂಬ ಹಣ್ಣನ್ನು ತಿನ್ನುವ ಜೀವಾತ್ಮ; ಅವುಗಳನ್ನು ತಿನ್ನದೆ ಕೇವಲ ಸಾಕ್ಷೀಭೂತವಾಗಿ ಕುಳಿತು ನೋಡು ವ ಹಕ್ಕಿ ಪರಮಾತ್ಮ. ಮುಂದೆ ಉಪನಿಷತ್ತುಗಳಲ್ಲಿ ಇದೇ ಭಾವ ಇನ್ನೂ ಸ್ಪಷ್ಟ ವಿಕಾಸಗೊಂಡಿದೆ. ಅದಕ್ಕೆ ಇದು ಬೀಜರೂಪವಾಗಿದೆ ಎನ್ನಬಹುದು.

ಈ ಅತೀತವಾದ ಪರಮಾತ್ಮನ ಅವ್ಯಕ್ತಶಕ್ತಿ ಈ ವಿಶ್ವದ ರೂಪದಿಂದ ಹೇಗೆ ಹೊರ ಬ್ಬಿತೆಂಬುದನ್ನು 'ನಾಸದೀಯ ಸೂಕ್ತ' ಅರ್ಥವತ್ತಾಗಿ ಸೂಚಿಸುತ್ತದೆ :

ಾಸದಾಸೀನ್ನೋ ಸದಾಸೀತ್ತದಾನೀಂ । ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।
ಮಾವರೀವಃ ಕುಹ ಕಸ್ಯ ಶರ್ಮನ್ನಂ । ಭಃ ಕಿಮಾಸೀದ್ಗಹನಂ ಗಭೀರಮ್ ॥

(ಮೊದಲಲ್ಲಿ) ಅಸತ್ತೂ ಇರಲಿಲ್ಲ, ಸತ್ತೂ ಇರಲಿಲ್ಲ. ಲೋಕವೂ ಇರಲಿಲ್ಲ. ಅದರ ಮ ಆಕಾಶವೂ ಇರಲಿಲ್ಲ. ಅದೇನನ್ನು ಆವರಿಸಿತ್ತು? ಎಲ್ಲಿ? ಯಾರ ಆಶ್ರಯ ? ಅಲ್ಲಿ ಗಹನವೂ ಗಭೀರವೂ ಆದ ನೀರೇನಾದರೂ ಇತ್ತೆ?"—ಎಂದು ಸೃಷ್ಟಿಯ ಂಭದ ವಿಷಯವನ್ನು ಊಹಿಸಿಕೊಂಡು ಆಶ್ಚರ್ಯದ ಉದ್ಗಾರವನ್ನು ತೆಗೆದಿದ್ದಾರೆ ಋಷಿ ಮತ್ತೆ ಹೇಳುತ್ತಾರೆ :

ನ ಮೃತ್ಯುರಾಸೀದಮೃತಂ ನ ತರ್ಹಿ । ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ । ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥

"ಆಗ ಮೃತ್ಯುವಿರಲಿಲ್ಲ, ಅಮೃತತ್ವವೂ ಇರಲಿಲ್ಲ; ರಾತ್ರಿ ಹಗಲುಗಳಿಗೆ ಭೇದವಿರಲಿಲ್ಲ. ಅದೊಂದು (ಗಾಳಿ ಇಲ್ಲದೆ) ತನ್ನ ಬಲದಿಂದಲೇ ಉಸಿರಾಡುತ್ತಿತ್ತು. ಅದನ್ನು ಬಿಟ್ಟು ಹೊರಗೆ ಬೇರೆ ಏನೂ ಇರಲಿಲ್ಲ."—ಎಂದು ಮುಂತಾಗಿ ಆ ಅನಾದಿತತ್ತ್ವದ ಆದಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ತೆರೆದ ಮನಸ್ಸಿನಿಂದ ವಿವೇಚಿಸಿದ್ದಾರೆ. ತಮ್ಮ ಅನುಭವ ಎಟುಕದ ಕಡೆ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. "ಈ ಸೃಷ್ಟಿಕ್ರಮವನ್ನು ನಿಜವಾಗಿ ತಿಳಿದವರು ಯಾರು? ಯಾವುದರಿಂದ ಇದೆಲ್ಲಾ ಆಯಿತು? ಈ ಸೃಷ್ಟಿ ಆದುದು ಹೇಗೆ? ಇದನ್ನು ಹೇಳುವವರು ಯಾರು? ಈ ಸೃಷ್ಟಿಯೆಲ್ಲಾ ಆದನಂತರ ಬಂದವರು ದೇವತೆಗಳು. ಆದ್ದರಿಂದ ಇದು ಹೇಗಾಯಿತು ಎಂದು ತಿಳಿದವರು ಯಾರು?" –ಮುಂತಾದ ಮಾತುಗಳಲ್ಲಿ ಅವರ ಮನೋಧರ್ಮವನ್ನು ಕಾಣುತ್ತೇವೆ. ಅನೇಕ ದೇವತೆಗಳಿಗೆ ಅತೀತವಾದ ಪರತತ್ತ್ವವನ್ನು ಕಾಣಬೇಕೆಂಬ ಹಂಬಲ ಅಲ್ಲಿಗಿದೆ: ತಮ್ಮ ಅನುಭವವನ್ನು ಯಥಾವತ್ತಾಗಿ ನಿರೂಪಿಸುವ ಪ್ರಾಮಾಣಿಕತೆ ಅಲ್ಲಿದೆ. ಈ ವಿಶಾಲ ಮನಸ್ಸಿನ ವಿಚಾರಮಾರ್ಗವೇ ಮುಂದೆ ಉಪನಿಷತ್ತುಗಳಲ್ಲಿ ಅಮೋಘತತ್ತ್ವ ಬೆಳೆಯಲು ತಳಹದಿಯಾಯಿತೆನ್ನಬಹುದು.

'ಪುರುಷಸೂಕ್ತ'ವಂತೂ ಈ ಸೃಷ್ಟಿಯು 'ಪುರುಷ'ನಿಂದ ಹೇಗೆ ಹುಟ್ಟಿತೆಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಆ ಪುರುಷನು ಈ ಸೃಷ್ಟಿಯನ್ನೆಲ್ಲಾ ವ್ಯಾಪಿಸಿ ಅಂತರ್ಯಾಮಿಯಾಗಿದ್ದರೂ ಇದಕ್ಕೆ ಅತೀತನಾದವನೆಂಬ ಭಾವವನ್ನು ಇಲ್ಲಿ ಋಷಿಗಳು ಸುಂದರವಾಗಿ ಪ್ರತಿಬಿಂಬಿಸಿದ್ದಾರೆ.

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃ । ತ್ವಾತ್ಯತಿಷ್ಠದ್ದಶಾಂಗುಲಮ್ ॥

"ಪುರುಷನು ಸಾವಿರ ತಲೆಯುಳ್ಳವನು, ಸಾವಿರ ಕಣ್ಣುಳ್ಳವನು, ಸಾವಿರ ಕಾಲುಳ್ಳವನು. ಅವನು ಭೂಮಿಯನ್ನು ಎಲ್ಲ ಕಡೆಗಳಿಂದಲೂ ಬಳಸಿ ಅದರ ಮೇಲೆ ಹತ್ತು ಅಂಗುಲಗಳಷ್ಟು (ಬೆಳೆದು) ನಿಂತಿದ್ದಾನೆ."

ಪುರುಷ ಏವೇದಂ ಸರ್ವಂ । ಯದ್ಭೂತಂ ಯಚ್ಚ ಭವ್ಯಮ್ ।
ಉತಾಮೃತತ್ವಸ್ಯೇಶಾನೋ । ಯದನ್ನೇನಾತಿರೋಹತಿ ॥

"ಹಿಂದೆ ಇದ್ದದ್ದು, ಮುಂದೆ ಬರುವುದು-ಇದೆಲ್ಲವೂ ಪುರುಷನೇ. ಇವನು ಯಜ್ಞದಲ್ಲಿ ಅರ್ಪಿಸಿದ ಅನ್ನದಿಂದ ಬೆಳೆದು ಅಮೃತತ್ವದ ಅಧಿಪತಿಯಾಗಿದ್ದಾನೆ"—ಇಂತಹ ಮಾತುಗಳು ಸೃಷ್ಟಿಯನ್ನು ಮತ್ತು ಸೃಷ್ಟಿಕರ್ತನನ್ನು ಕುರಿತು ಅವರು ಕಂಡ ವ್ಯಾಪಕ ದೃಷ್ಟಿಯನ್ನು ಪರಿಚಯ ಮಾಡಿಕೊಡುತ್ತವೆ. ಈ ಸೃಷ್ಟಿಯೆಲ್ಲವೂ ಒಂದು ಮಹಾ ಯಜ್ಞ; ಪರಮಪುರುಷ ತನ್ನನ್ನೇ ಆ ಯಜ್ಞಕ್ಕೆ ಹವಿಸ್ಸನ್ನಾಗಿ ಅರ್ಪಿಸಿಕೊಳ್ಳುತ್ತಾನೆ—

ಎಂಬ ಭಾವನೆ ಈ ಸೂಕ್ತದಲ್ಲಿ ವಿರಾಡ್ರೂಪದಿಂದ ವರ್ಣಿತವಾಗಿದೆ. ಇದೇ ಮುಂದೆ ಬ್ರಾಹ್ಮಣಗಳಲ್ಲಿ ವಿಶೇಷ ಸಂಕೀರ್ಣ ರೂಪವನ್ನು ತಳೆದು ಬಾಹ್ಯ ಆಚರಣೆಯ ಕರ್ಮಕಾಂಡವಾಗಿ ಪರಿಣಮಿಸಿತೆನ್ನಬಹುದು.

ಈ ಯಜ್ಞಗಳಿಂದ ದೇವತೆಗಳು ಸುಪ್ರೀತರಾಗಿ ತಮ್ಮ ಇಷ್ಟಾರ್ಥವನ್ನು ಅನುಗ್ರಹಿಸುತ್ತಾರೆಂಬುದು ಅವರ ನಂಬಿಕೆ. ನೂರು ವರ್ಷಗಳ ತುಂಬು ಜೀವನವನ್ನು ಆ ದೇವತೆಗಳು ಅನುಗ್ರಹಿಸಲೆಂಬ ಪ್ರಾರ್ಥನೆ ಅಲ್ಲಲ್ಲಿ ಬರುತ್ತದೆ. ನಮ್ಮ ಮಕ್ಕಳು ಮರಿಗಳನ್ನು, ಧನಕನಕಗಳನ್ನು, ಹಸುಕರುಗಳನ್ನು ಕಾಪಾಡುವಂತೆ ಅವರು ದೇವತೆಗಳನ್ನು ಪ್ರಾರ್ಥಿಸುತ್ತಾರೆ. ಈ ಜೀವನ ದುಃಖಮಯವಾದುದೆಂಬ ಭಾವನೆಯಾಗಲಿ ನಿರಾಸೆಯ ಮನೋಧರ್ಮವಾಗಲಿ ಎಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿರುವಷ್ಟು ದಿನ, ದೇವತೆಗಳ ದಯೆಯನ್ನು ಪಡೆದು ಸುಖವಾಗಿ ಬದುಕಬೇಕೆಂಬುದು ಅವರ ಆಶಯವಾಗಿತ್ತು.

ಇಹಲೋಕದ ಜೀವನ ಮುಗಿದ ನಂತರ ಇಲ್ಲಿ ಮಾಡಿದ ಪುಣ್ಯಕರ್ಮಗಳಿಗೆ ಅನುಸಾರವಾಗಿ ಇದಕ್ಕಿಂತಲೂ ಹೆಚ್ಚು ಸಂತೋಷಕರವಾದ ಇನ್ನೊಂದು ಲೋಕಕ್ಕೆ ಹೋಗುತ್ತೇವೆಂಬುದು ಅವರ ನಂಬಿಕೆಯಾಗಿತ್ತು. ಅದನ್ನೇ 'ಪಿತೃಲೋಕ' ಎಂದು ಅವರು ಕರೆದರು. ಆ ಲೋಕವನ್ನು ಪ್ರವೇಶಿಸಿದ ಜೀವಿಗಾಗಿ ಮರ್ತ್ಯಲೋಕದಲ್ಲಿರುವ ಅವರ ಪುತ್ರರು ಮತ್ತು ಬಂಧುಗಳು ಮಾಡಬೇಕಾದ ವಿಧಿಗಳನ್ನು ನಿಯಮಿಸಿ ಶ್ರಾದ್ಧಕರ್ಮಗಳನ್ನು ರೂಪಿಸಿದರು. ಆದರೆ ಆ ಪಿತೃಲೋಕವನ್ನು ಪ್ರವೇಶಿಸಿದ 'ಜೀವ'ದ ಗುರಿಯೇನೆಂಬುದನ್ನು ಋಗ್ವೇದ ಸ್ಪಷ್ಟವಾಗಿ ಹೇಳುವುದಿಲ್ಲ. ತನ್ನ ಪುಣ್ಯದ ಫಲ ತೀರುವವರೆಗೂ ಆ ಲೋಕದಲ್ಲಿದ್ದು ಮತ್ತೆ ಭೂಲೋಕದಲ್ಲಿ ಅದು ಹುಟ್ಟುತ್ತದೆಂಬುದಾಗಲಿ, ಕೊನೆಗೆ ಮೋಕ್ಷವನ್ನು ಪಡೆಯುವವರೆಗೂ ಈ ಹುಟ್ಟುಸಾವುಗಳ ಚಕ್ರದಲ್ಲಿ ಸಿಕ್ಕು ಪರಿಭ್ರಮಣೆಗೊಳ್ಳುತ್ತಿರಬೇಕೆಂಬ ಭಾವನೆಯಾಗಲಿ ವೇದಗಳಲ್ಲಿ ಕಾಣಸಿಗುವುದಿಲ್ಲ. ಅದು ಮೊತ್ತಮೊದಲು ಸ್ಪಷ್ಟವಾಗಿ ಗೋಚರವಾಗುವುದು ಉಪನಿಷತ್ತುಗಳಲ್ಲಿ. ಭೌತಿಕ ದೇಹ ನಾಶವಾದ ಮೇಲೂ ಇದಕ್ಕೆ ಅತೀತವಾಗಿ ಉಳಿಯುವ ಆತ್ಮತತ್ತ್ವವಿದೆಯೆಂಬ ಭಾವನೆಯನ್ನು ಮಾತ್ರ ವೇದಗಳಲ್ಲಿ ಕಾಣುತ್ತೇವೆ.

ಇನ್ನೊಂದು ಮುಖ್ಯವಾದ ಅಂಶವೆಂದರೆ, ಕರ್ಮ ಮತ್ತು ಜ್ಞಾನಮಾರ್ಗಗಳಿಂದ ಲಭಿಸುವ ಫಲ ಬೇರೆ ಬೇರೆ ಎಂಬುದನ್ನು ಋಗ್ವೇದವೇ ಸೂಚಿಸುತ್ತದೆಂಬುದು. ಯಜ್ಞರೂಪವಾದ ಕರ್ಮವೇ ಋಗ್ವೇದದಲ್ಲಿ ಅತ್ಯಂತ ಪ್ರಧಾನವಾದುದೆಂಬುದರಲ್ಲಿ ಸಂದೇಹವಿಲ್ಲ. ಸಂಹಿತೆ ಬ್ರಾಹ್ಮಣಗಳಲ್ಲಿರುವ ಮುಖ್ಯವಾದ ಅಂಶವೆಂದರೆ ಯಜ್ಞಗಳನ್ನು ಕುರಿತದ್ದೇ. ಯಜ್ಞವನ್ನು ಮಾಡುವ ವಿಧಿ ವಿಧಾನಗಳು, ಅವಕ್ಕೆ ಸಂಬಂಧಿಸಿದ ದೇವತೆಗಳನ್ನು ಆಹ್ವಾನಿಸುವ ಸ್ತುತಿರೂಪವಾದ ಮಂತ್ರಗಳು—ಇವೇ ವೇದದ ಬಹುಭಾಗವನ್ನು ಆಕ್ರಮಿಸುತ್ತವೆ. ಆದರೂ ಆ ವೇದದಲ್ಲಿಯೇ, ಕರ್ಮಕ್ಕಿಂತ ಜ್ಞಾನದ ಫಲ ಹೆಚ್ಚಿನದೆಂಬ ಭಾವನೆ ರೂಪಿತವಾಗಿರುವುದು ಗಮನಾರ್ಹವಾಗಿದೆ. ಯಜ್ಞಕರ್ಮಗಳಿಗಿಂತ ಹೆಚ್ಚಿನ ಫಲವು ಜ್ಞಾನದಿಂದ ಲಭಿಸುತ್ತದೆಂದು ಋಷಿಗಳು ಹೇಳಿರುವುದನ್ನು ಎಚ್ಚರಿಕೆಯಿಂದ

ಗಮನಿಸಿದರೆ ಗುರುತಿಸಬಹುದು. ಯಜ್ಞದಿಂದ ಲಭಿಸುವ ಲೋಕಕ್ಕಿಂತ ಹೆಚ್ಚಿನ ಲೋಕ ಜ್ಞಾನದಿಂದ ಲಭಿಸುತ್ತದೆನ್ನುವ ಮಾತು ಅಲ್ಲಿ ಬರುತ್ತದೆ.[12] ಮುಂದೆ ಉಪನಿಷತ್ತುಗಳಲ್ಲಿ ವಿಕಾಸಗೊಂಡಿರುವ ಜ್ಞಾನಮಾರ್ಗಕ್ಕೆ ಇದು ಬೀಜರೂಪವಾಗಿದೆ ಎನ್ನಬಹುದು.

ಯಜುರ್ವೇದ ಸಾಮವೇದಗಳು ಸ್ವಲ್ಪ ಹೆಚ್ಚುಕಡಮೆ ಋಗ್ವೇದದ ನೆರಳಿನಲ್ಲಿಯೇ ರೂಪುಗೊಂಡಿವೆ. ಅಲ್ಲಿ ಕಾಣದೇ ಇರುವ ವಿಶಿಷ್ಟವಾದ ಅಂಶಗಳನ್ನು ಇವುಗಳಲ್ಲಿ ನಾವು ಕಾಣುವುದಿಲ್ಲ. ಹೆಚ್ಚಾಗಿ ಋಗ್ವೇದದ ಸೂಕ್ತಗಳೇ ಅಲ್ಪಸ್ವಲ್ಪ ಬದಲಾವಣೆಗಳೊಡನೆ ಇಲ್ಲಿ ಬರುತ್ತವೆ. ಸಾಮವೇದವಂತೂ ಗಾನಕ್ಕೆ ಅನುಕೂಲವಾಗುವಂತೆ ತಕ್ಕ ಸ್ವರಗಳಿಂದ ಕ್ರಮಪಡಿಸಿದ ಋಗ್ವೇದದ ಋಕ್ಕುಗಳನ್ನೇ ಹೆಚ್ಚಾಗಿ ಒಳಗೊಂಡಿದೆ. ಆದರೆ ಅಥರ್ವಣ ವೇದವು ಮಾತ್ರ ಈ ಮೂರು ವೇದಗಳಿಗೂ ಬೇರೆಯಾದ ವಿಶಿಷ್ಟ ಅಂಶಗಳಿಂದ ಕೂಡಿದೆ. ಅವುಗಳಲ್ಲಿರುವಂತೆ ಇಲ್ಲಿ ಯಜ್ಞಯಾಗಾದಿಗಳಿಗೆ ಸ್ಥಳವಿಲ್ಲ. ಯಜ್ಞಕ್ಕೆ ದೇವತೆಗಳನ್ನು ಆಹ್ವಾನಿಸುವುದು, ಸ್ತುತಿಸುವುದು ಮತ್ತು ಯಜ್ಞಕರ್ಮದ ಪ್ರಕ್ರಿಯೆಗಳು ಬರುವುದಿಲ್ಲ. ಜನಜೀವನದ ಇನ್ನೊಂದು ಮುಖವನ್ನು ಅದು ಚಿತ್ರಿಸುತ್ತದೆ; ಲೌಕಿಕ ಜೀವನವನ್ನು ವಿಶೇಷವಾಗಿ ಕುರಿತಿದೆ.

ಯಂತ್ರ ಮಂತ್ರಗಳು, ತಂತ್ರಗಳು ಶತ್ರುಗಳನ್ನು ನಾಶಮಾಡುವ ವಿಧಾನ ಇತ್ಯಾದಿ ಕ್ಷುದ್ರವಿಷಯಗಳು ಅಥರ್ವಣವೇದದಲ್ಲಿ ಬಂದರೂ ಅವೇ ಪ್ರಧಾನ ವಿಷಯಗಳಾಗಿ ಅಲ್ಲಿ ಕೊನೆಗೊಳ್ಳುವುದಿಲ್ಲ. ಆ ಕಾಲದ ಬೌದ್ಧಿಕ ಪರಿಣತಿಗೆ ಸಾಕ್ಷಿಯಾಗಿ ನಿಲ್ಲುವಂತಹ ಅನೇಕ ವಿಷಯಗಳು ಅಲ್ಲಿ ದೊರೆಯುತ್ತವೆ. 'ಅಥರ್ವ' ಎಂಬ ಮಾತೇ ಬೌದ್ಧಿಕಶಕ್ತಿಗೆ ಸಂಕೇತವಾಗಿ ಪರಿಣಮಿಸಿತ್ತು. ಈ ಲೋಕದ ಜೀವನವನ್ನು ಕುರಿತ ಲೌಕಿಕ ವಿದ್ಯೆಗಳನ್ನು ಇದು ಪ್ರತಿಪಾದಿಸುವುದರ ಜೊತೆಗೆ ಗಹನವಾದ ತತ್ತ್ವಜಿಜ್ಞಾಸೆಗೂ ತಳಹದಿಯನ್ನು ಹಾಕಿತು. ಋಗ್ವೇದದಲ್ಲಿರುವ ತಾತ್ತ್ವಿಕವಾದ ಸೂಕ್ತಗಳೆಲ್ಲವೂ ಇಲ್ಲಿರುವುವಲ್ಲದೆ, ಅಲ್ಲಿಲ್ಲದ ಅನೇಕ ಗಹನವಾದ ಉಕ್ತಿಗಳು ಇಲ್ಲಿವೆ. ಸೃಷ್ಟಿಶಕ್ತಿಯ ಸ್ವರೂಪವನ್ನು ಕುರಿತ ಗಂಭೀರವಾದ ಚರ್ಚೆ ಈ ವೇದದಲ್ಲಿ ಬಂದಿರುವಷ್ಟು ಇತರ ಮೂರು ವೇದಗಳಲ್ಲೆಲ್ಲಿಯೂ ಬಂದಿಲ್ಲವೆನ್ನಬಹುದು. ಈ ದೃಷ್ಟಿಯಿಂದ ಈ ವೇದಕ್ಕೆ ಪ್ರಮುಖ ಸ್ಥಾನವಿದೆ. ಆ ಮೂರು ವೇದಗಳೂ ವೇದಯುಗದ ಸಂಸ್ಕೃತಿಯ ಒಂದು ಮುಖವನ್ನು ತೋರಿಸಿದರೆ ಅಥರ್ವವೇದವು ಅದರ ಇನ್ನೊಂದು ಮುಖದ ಮೇಲೆ ವಿಚಾರದ ಬೆಳಕನ್ನು ಬೀರುತ್ತದೆ.

ಈ ನಾಲ್ಕು ವೇದಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಈ ಜೀವನವನ್ನು ಕುರಿತ ಅವರ ದೃಷ್ಟಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಯಾವ ಕೊರತೆಯೂ ಇಲ್ಲದ ತುಂಬು ಜೀವನದ ಚಿತ್ರ ಅಲ್ಲಿದೆ. ಜೀವನ ದುಃಖಮಯ, ಅದು ಪಾಪದ ಫಲ—ಎಂಬ ಭಾವನೆಗಳಿಗೆ ಅಲ್ಲಿ ಅವಕಾಶವೇ ಇಲ್ಲ. ಆನಂದದ ಅನುಭವವೇ ಅವರ ಜೀವನದ ಗುರಿಯಾಗಿತ್ತು. ಜೀವನ ಅವರಿಗೆ ಸ್ವರ್ಗವಾಗಿತ್ತು. ವೇದಗಳಲ್ಲಿ ಕೇವಲ ಸ್ವರ್ಗದ ಕಲ್ಪನೆ ಇದೆಯೇ ಹೊರತು ನರಕದ ಹೆಸರೂ ಅಲ್ಲಿ ಬರುವುದಿಲ್ಲ. ಇಲ್ಲಿ ಚೆನ್ನಾಗಿ ಬದುಕಬೇಕು, ಆದರೆ ಈ ಬದುಕಿನ ಆಚೆಯ ಬದುಕನ್ನು ಮರೆಯಬಾರದು; ಆ ಪರಲೋಕದ ಬದುಕಿಗೆ ಇಹ

ಲೋಕದ ಬದುಕು ಸಹಾಯಕವಾಗಬೇಕು. ಅದಕ್ಕೆ ಸಾಧಕವಾದ ಮಾರ್ಗ ಯಜ್ಞಯಾಗಾದಿಗಳು ಮತ್ತು ಆ ಮೂಲಕ ಅನೇಕ ದೇವತೆಗಳ ಉಪಾಸನೆ—ಇದು ವೇದಗಳಲ್ಲಿ ಕಾಣುವ ದೃಷ್ಟಿ.

ಈ ಉಪಾಸನೆ ಮೊದಮೊದಲು ಎಲ್ಲರಿಗೂ ತೆರೆದ ಮಾರ್ಗವಾಗಿತ್ತು. ಅನಂತರ ಜಾತಿಮತಗಳ ಕಟ್ಟುಪಾಡುಗಳು ಬೆಳೆದುವು. ವೇದಕಾಲದಲ್ಲಿ ಇವು ಅಷ್ಟಾಗಿದ್ದಂತೆ ಕಾಣುವುದಿಲ್ಲ. 'ಪುರುಷ ಸೂಕ್ತ'ಕ್ಕೆ ಮೊದಲು ಋಗ್ವೇದದಲ್ಲೆಲ್ಲೂ ಚತುರ್ವರ್ಣದ ಮಾತು ಬರುವುದಿಲ್ಲ. 'ಪುರುಷ ಸೂಕ್ತ'ದಲ್ಲಿ :

> ಬ್ರಾಹ್ಮಣೋಽಸ್ಯ ಮುಖಮಾಸೀದ್ । ಬಾಹೂ ರಾಜನ್ಯಃ ಕೃತಃ ।
> ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥

ಎಂದರೆ "ಆ ಪರಮಪುರುಷನ ಮುಖದಿಂದ ಬ್ರಾಹ್ಮಣನು ಆದನು; ಅವನ ತೋಳುಗಳಿಂದ ಕ್ಷತ್ರಿಯನು ಹುಟ್ಟಿದನು; ತೊಡೆಗಳಿಂದ ವೈಶ್ಯರೂ ಎರಡು ಕಾಲುಗಳಿಂದ ಶೂದ್ರರೂ ಹುಟ್ಟಿದರು"—ಎಂಬ ಮಾತು ಬರುತ್ತದೆ. ಇದು ಹುಟ್ಟಿನಿಂದಲೇ ಬರುವ ಜಾತಿಯನ್ನು ಹೇಳುತ್ತದೆನ್ನುವುದಕ್ಕಿಂತ ಗುಣಕರ್ಮಗಳಿಂದ ಬರುವ ಮನಸ್ಸಿನ ಸ್ಥಿತಿಯನ್ನು ಸೂಚಿಸುತ್ತದೆನ್ನುವುದು ಹೆಚ್ಚು ಸೂಕ್ತವಾಗಿ ತೋರುತ್ತದೆ. ಒಂದು ವರ್ಣದವರು ತಮ್ಮ ಸಾಧನೆಯಿಂದ ಮೇಲೇರಿ ಉತ್ತಮ ವರ್ಣದವರಾಗುವುದು ಸಾಧ್ಯವಿದ್ದಿತೆಂಬ ಮಾತು ಆ ಕಾಲದ ಅನೇಕ ಋಷಿಗಳ ಜೀವನದಿಂದಲೇ ಕಂಡುಬರುತ್ತದೆ. ಹುಟ್ಟಿನಿಂದಲೇ ವರ್ಣಗಳ ನಿರ್ಣಯದ ಕಠಿನ ನಿಯಮಗಳು ಮೈದೋರಿದುದು ಧರ್ಮದ ಅಧಃಪತನದ ಕಾಲದಲ್ಲಿ ಎಂದು ಹೇಳಬಹುದು.

ಆದರೂ ಸಮಾಜದಲ್ಲಿ ಒಂದು ರೀತಿಯ ವಿಭಾಗಗಳು ವೇದಕಾಲದಲ್ಲಿಯೂ ಇಲ್ಲದೇ ಇರಲಿಲ್ಲ. ತಾವು ಸೋಲಿಸಿದ ದಸ್ಯುಗಳು, ನಿಷಾದರು ಮೊದಲಾದ ಆದಿವಾಸಿಗಳನ್ನು ಆರ್ಯರು ದೂರದಲ್ಲಿಟ್ಟಿದ್ದಂತೆ ತೋರುತ್ತದೆ. ಅದರಲ್ಲಿಯೂ ಆರ್ಯರನ್ನು ಪ್ರತಿಭಟಿಸಿ ನಿಂತವರಲ್ಲಿ ಪ್ರಧಾನರಾದವರೆಂದರೆ ದಸ್ಯುಗಳು, ಎಂದರೆ ಬಹುಶಃ ದ್ರಾವಿಡರು. ಅವರ ಸಿಂಧು ಸಂಸ್ಕೃತಿಯನ್ನು ನಾಶಮಾಡಿ ಆರ್ಯರು ಅವರನ್ನು ಹಿಮ್ಮೆಟ್ಟಿಸಿದರೂ ಅವರ ಪ್ರಭಾವ ಸಂಪೂರ್ಣವಾಗಿ ಕುಗ್ಗಿರಲಿಲ್ಲ. ಮೂಲಭೂತವಾದ ಧಾರ್ಮಿಕ ವಿಧಿಗಳಲ್ಲಿ ಈ ಎರಡು ಸಂಸ್ಕೃತಿಗಳೂ ತೀರ ಭಿನ್ನವಾಗಿದ್ದುವು. ಆರ್ಯರು ಯಜ್ಞಕರ್ಮಿಗಳು; ದ್ರಾವಿಡರು ಪ್ರಧಾನವಾಗಿ ಶಿವನ ಮತ್ತು ಅವನ ಸಂಕೇತವಾದ ಲಿಂಗದ ಆರಾಧಕರು. ಈ ಎರಡು ಸಂಸ್ಕೃತಿಗಳ ಸಂಘರ್ಷ ಬಹಳ ಕಾಲ ನಡೆದಂತೆ ತೋರುತ್ತದೆ. ಇದರಿಂದ ಇಬ್ಬರೂ ಪರಸ್ಪರ ಪ್ರಭಾವಿತರಾಗಿ ಕ್ರಮೇಣ ಹತ್ತಿರ ಹತ್ತಿರ ಬಂದಿರಬೇಕು. ದ್ರಾವಿಡರ ಉಪಾಸ್ಯ ದೇವತೆಯಾದ ಶಿವ, ವೇದದಲ್ಲಿದ್ದ ರುದ್ರ ಎಂಬ ಹೆಸರಿನ ದೇವತೆಯೊಡನೆ ಏಕೀಭಾವವನ್ನು ಪಡೆದನು. ಅನಂತರ ವೇದಗಳ ಕಾಲವನ್ನು ಕಳೆದು ಮುಂದೆ ಬಂದಂತೆ ಶಿವನ ಮತ್ತು ಲಿಂಗದ ಉಪಾಸನೆ ಆರ್ಯಧರ್ಮದಲ್ಲಿಯೂ ಪ್ರಧಾನವಾದ ಅಂಗವಾಗಿ

ಪರಿಣಮಿಸಿತು. ಹೀಗೆ ಹೊಸ ಹೊಸವನ್ನು ಪಡೆದು ವಿಕಾಸ ಮಾರ್ಗದಲ್ಲಿ ನಡೆಯುತ್ತಿದ್ದ ಜನಜೀವನವನ್ನು ಕಾಣುತ್ತೇವೆ ವೇದಗಳಲ್ಲಿ.

ಆ ಕಾಲದ ಜನಜೀವನವನ್ನು ವೇದ ಸ್ಪಷ್ಟವಾದ ಮಾತುಗಳಲ್ಲಿ ವರ್ಣಿಸದಿದ್ದರೂ ಅವನ್ನು ಸೂಚಿಸುವ ಅನೇಕ ಸಂದರ್ಭಗಳು ಅಲ್ಲಿ ಬರುತ್ತವೆ. ಆದಿಮಾನವನ ಅನಾಗರಿಕತೆಯಿಂದ ಬಹಳ ಮುಂದುವರಿದಿದ್ದ ಸುಸಂಸ್ಕೃತ ಸಮಾಜದ ಚಿತ್ರ ವೇದಗಳಲ್ಲಿದೆ. ಮಾನವೀಯ ಭಾವಗಳ ಮಧುರ ವಿಕಾಸದಿಂದ ಕೂಡಿದ ಕುಟುಂಬ ಜೀವನವನ್ನು ಅಲ್ಲಿ ಕಾಣಬಹುದು. ಮದುವೆ ಎಂಬುದು ಕೇವಲ ಸಾಮಾಜಿಕ ಒಡಂಬಡಿಕೆಯಾಗಿರದೆ, ಜೀವನದಲ್ಲಿ ಬಹಳ ಪ್ರಮುಖವಾದ ಧಾರ್ಮಿಕ ವಿಧಿಯಾಗಿತ್ತು. ಸ್ತ್ರೀಗೂ ಪುರುಷನಿಗೆ ಹೇಗೋ ಹಾಗೆ ಸ್ಥಾನಮಾನಗಳು ಸಮಾಜದಲ್ಲಿ ಸಮಾನವಾಗಿದ್ದುವು. ಧಾರ್ಮಿಕವಾಗಿಯೂ ಸ್ತ್ರೀಪುರುಷರಲ್ಲಿ ಭೇದವಿರಲಿಲ್ಲ. ಹುಡುಗನಂತೆ ಹುಡುಗಿಗೂ ಆಗ ಉಪನಯನ ಸಂಸ್ಕಾರವಿತ್ತು. ಪುರುಷರಂತೆ ಆಕೆಗೂ ವಿದ್ಯಾಭ್ಯಾಸ ಲಭಿಸುತ್ತಿತ್ತು. ಅದುವರೆಗೂ ಬ್ರಹ್ಮಚರ್ಯಾಶ್ರಮದಲ್ಲಿದ್ದ ಆಕೆ ಅನಂತರ ವಿವಾಹವಾಗುತ್ತಿದ್ದಳು. ಬಾಲ್ಯವಿವಾಹ ಪದ್ಧತಿ ಆಗ ಇರಲಿಲ್ಲ. ಸ್ತ್ರೀಗೆ ವೇದಗಳನ್ನು ಓದುವ ಅಧಿಕಾರವಿದ್ದುದಲ್ಲದೆ ಲೋಪಾಮುದ್ರಾ, ಘೋಷಾ ಮೊದಲಾದ ಕೆಲವು ಮಹಿಳೆಯರು ವೇದಸೂಕ್ತಗಳನ್ನು ರಚಿಸಿರುವುದು ಗಮನಾರ್ಹವಾದ ಸಂಗತಿ. ಧರ್ಮದ ದೃಷ್ಟಿಯಲ್ಲಿ ಸ್ತ್ರೀಪುರುಷರನ್ನು ಕುರಿತ ತಾರತಮ್ಯ ಸೂತ್ರಗಳ ಕಾಲದಿಂದ ಈಚೆಗೆ ಪ್ರಾರಂಭವಾಯಿತೆನ್ನಬಹುದು.

ಆ ಕಾಲದ ಜನಜೀವನದ ಬಾಹ್ಯಸ್ವರೂಪವನ್ನು ಕುರಿತು ಒಂದೆರಡು ಮಾತುಗಳನ್ನು ಇಲ್ಲಿ ಹೇಳಬಹುದು: ಆ ಕಾಲದ ಸಮಾಜ ಹೆಚ್ಚು ಸಂಕೀರ್ಣಸ್ವರೂಪದ್ದಾಗಿರಲಿಲ್ಲ. ಜೀವನ ಹೆಚ್ಚು ತೊಡಕಾಗಿರಲಿಲ್ಲ. ಅನಂತರ ಹುಟ್ಟಿದಷ್ಟು ಭೇದಗಳು ಮೇಲು ಕೀಳುಗಳೂ ಆಗ ಇರಲಿಲ್ಲ. ವರ್ಣವಿಭೇದಗಳು ಆಗತಾನೇ ಬೆಳೆಯುವುದರಲ್ಲಿದ್ದುವು. ಋಗ್ವೇದದ ಕೊನೆಕೊನೆಯ ವೇಳೆಗೆ ಅವು ನಿರ್ದಿಷ್ಟವಾಗಿ ರೂಪುಗೊಂಡುವೆನ್ನಬಹುದು. ಆರ್ಯರೆಲ್ಲರೂ ಒಟ್ಟಾಗಿ ಒಂದೇ ಸಾರಿ ಭಾರತಕ್ಕೆ ಬರಲಿಲ್ಲ. ತಂಡತಂಡವಾಗಿ ಬಹುಕಾಲ ಬಂದರು. ಹೀಗೆ ಬಂದವರಲ್ಲಿ ಒಂದು ಗುಂಪಿನವರನ್ನು ವ್ರಾತ್ಯರು ಎಂದು ಕರೆಯಲಾಗಿದೆ. ಅವರು ವ್ರತಗಳನ್ನು ಬಿಟ್ಟು ಅಲೆದಾಡಿಕೊಂಡಿದ್ದುದರಿಂದ ವ್ರಾತ್ಯ ಎಂಬ ಹೆಸರು ಅವರಿಗೆ ಬಂದಂತೆ ತೋರುತ್ತದೆ.[13] ಅವರೂ ಸಂಸ್ಕಾರಗಳನ್ನು ಪಡೆದು ಉತ್ತಮರಾಗಲು ಅವಕಾಶವಿತ್ತು.

ಇವರನ್ನು ಬಿಟ್ಟರೆ ಇತರ ಜನಾಂಗಗಳಲ್ಲಿ ಪ್ರಮುಖರಾದವರು ದಸ್ಯುಗಳು. ಅವರೊಡನೆ ಆಗಾಗ ಘರ್ಷಣೆಗಳಾಗುತ್ತಿದ್ದಂತೆ ತೋರುತ್ತದೆ. ಅವರಿಗೂ ಆರ್ಯರಿಗೂ ಧರ್ಮದೃಷ್ಟಿಯಲ್ಲಿ ಪ್ರಮುಖವಾದ ಭೇದಗಳಿದ್ದುವು. ಆ ಭೇದಗಳೇ ಮತ್ತೆ ಮತ್ತೆ ಘರ್ಷಣೆಗೆ ಕಾರಣವಾಗುತ್ತಿದ್ದಂತೆ ತೋರುತ್ತದೆ. ಇವರಲ್ಲದೆ ಇನ್ನೂ ಕೆಲವು ಅನಾಗರಿಕ ಜನಾಂಗಗಳಿದ್ದುವು. ಅವರನ್ನು ಆರ್ಯರು ಬಹುಮಟ್ಟಿಗೆ ದೂರದಲ್ಲಿಟ್ಟಿದ್ದಂತೆ ತೋರುತ್ತದೆ. ಆದರೂ ಪರಸ್ಪರವಾಗಿ ಸಂಪರ್ಕವಾಗದೇ ಇರಲಿಲ್ಲ.

ಆರ್ಯರಲ್ಲಿಯೂ ಕೆಲವು ಉಪಪಂಗಡಗಳು ಏರ್ಪಟ್ಟುವು.[14] ಒಂದೊಂದು ಪಂಗಡವೂ ತಾನು ವ್ಯಾಪಿಸಿದ ಭೂಭಾಗವನ್ನು ತಮ್ಮ ಪ್ರಮುಖ ನಾಯಕನ ನೇತೃತ್ವದಲ್ಲಿ ಆಳತೊಡಗಿತು. ಈ ಒಂದು ರಾಜ್ಯದವರೆಲ್ಲರನ್ನೂ ಸೇರಿಸಿ 'ಜನ' ಎಂದು ಕರೆಯುತ್ತಿದ್ದರು. ಬೇರೆ ಬೇರೆ ಸಜಾತರ ಗುಂಪಿಗೆ 'ವಿಶಃ' ಎಂಬ ಹೆಸರು ಇದ್ದಂತೆ ಕಂಡುಬರುತ್ತದೆ. 'ಆರ್ಯವಿಶಃ', 'ದಸ್ಯುವಿಶಃ' ಎಂಬ ಮಾತುಗಳು ಆ ಅರ್ಥವನ್ನು ಸೂಚಿಸುತ್ತವೆ. ಇದಕ್ಕೆ 'ಯೋಧರ ಪಡೆಗಳು' 'ಬಂಧುಗಳ ಗುಂಪು'—ಎಂಬ ಬೇರೆ ಬೇರೆ ಅರ್ಥಗಳೂ ಇದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. 'ವಿಶ'ರ ಗುಂಪಿಗಿಂತ ಚಿಕ್ಕದಾದುದು ಗ್ರಾಮ. ಅನೇಕ ಕುಟುಂಬಗಳು ಸೇರಿ ಒಂದು ಗ್ರಾಮವಾಗುತ್ತಿದ್ದಿತು. ಕುಟುಂಬಗಳ ಮುಖ್ಯಸ್ಥನನ್ನು 'ಕುಲಪ' ಎಂದು ಕರೆಯುತ್ತಿದ್ದಂತೆ ತಿಳಿದುಬರುತ್ತದೆ. ಕುಟುಂಬ ವ್ಯವಸ್ಥೆ ರಾಜ್ಯದ ಮೂಲಘಟಕವಾಗಿತ್ತು. ಅನೇಕ ಕುಟುಂಬಗಳು ಸೇರಿ ಗ್ರಾಮ. ಅನೇಕ ಗ್ರಾಮಗಳಿಂದ ಕೂಡಿದ ರಾಜ್ಯವೆಲ್ಲವನ್ನೂ 'ಜನ' ಎಂದು ಕರೆಯಲಾಗುತ್ತಿತ್ತು. ಒಂದೊಂದು ರಾಜ್ಯಕ್ಕೆ ಒಬ್ಬೊಬ್ಬ ರಾಜನಿರುತ್ತಿದ್ದನು. ಈ ರಾಜತ್ವ ಕೆಲವು ವೇಳೆ ಆಯ್ಕೆಯ ಮೂಲಕವೂ ಅನೇಕ ವೇಳೆ ವಂಶಪಾರಂಪರ್ಯವಾಗಿಯೂ ಲಭಿಸುತ್ತಿತ್ತು. ಇವೆರಡಕ್ಕೂ ವೇದಗಳಲ್ಲಿಯೇ ಆಧಾರವಿದೆ. ಮೊದಮೊದಲು ಆರ್ಯರು ಇಲ್ಲಿನ ಆದಿವಾಸಿಗಳನ್ನು ಎದುರಿಸುವುದಕ್ಕಾಗಿ ತಮ್ಮಲ್ಲಿ ಸಮರ್ಥನಾದ ಮುಖಂಡನನ್ನು ಆರಿಸಿ ಆತನನ್ನು ರಾಜನೆಂದು ಕರೆದರು. ಆದರೆ ಹೊರಗಿನ ಶತ್ರುಗಳ ಭಯ ತಗ್ಗಿದಮೇಲೆ ರಾಜತ್ವಕ್ಕಾಗಿ ತಮ್ಮಲ್ಲಿಯೇ ಅಂತಃಕಲಹಗಳು ತಲೆದೋರಿದಂತೆ ತೋರುತ್ತದೆ. ಈ ಜಗಳವನ್ನು ತಪ್ಪಿಸುವುದಕ್ಕಾಗಿ ವಂಶಪಾರಂಪರ್ಯವಾದ ರಾಜತ್ವ ರೂಢಿಗೆ ಬಂದಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯ.[15]

ರಾಜನ ಕೆಲಸವನ್ನು ನಿರ್ವಹಿಸಲು ಸಹಾಯಕವಾಗುವಂತೆ ಮೊದಮೊದಲು ಸಭೆ ಮತ್ತು ಸಮಿತಿಗಳು ಇರುತ್ತಿದ್ದುವು. ಆದರೆ ರಾಜ ಪ್ರಬಲನಾಗುತ್ತ ಬಂದಂತೆ ಇವುಗಳ ಹಿಡಿತವನ್ನು ಮೀರಿ ಆತ ನಿರಂಕುಶನಾಗಿ ಪರಿಣಮಿಸಿದ. ಅವನನ್ನೇ ಅವಲಂಬಿಸಿ ಮುಂದೆ ಬಂದ ಪುರೋಹಿತ ಆತನಿಗೆ ಸಾಕ್ಷಾತ್ ದೇವತ್ವವನ್ನೇ ತಂದುಕೊಟ್ಟನು. ರಾಜ ಮತ್ತು ಪುರೋಹಿತರು ಪ್ರಬಲರಾದರು. ಆದರೆ ಇದು ಸಾಮಾನ್ಯ ಜನರ ನಿತ್ಯಜೀವನದ ಮೇಲೆ ವಿಶೇಷ ಪ್ರಭಾವವನ್ನು ಬೀರಲಿಲ್ಲವೆನ್ನಬಹುದು.

ಜನರಿಗೆ ಕೃಷಿಯೇ ಮುಖ್ಯ ಉದ್ಯೋಗವಾಗಿತ್ತು. ಅದಲ್ಲದೆ ಇನ್ನೂ ಅನೇಕ ಕಸುಬುಗಳು ರೂಢಿಯಲ್ಲಿದ್ದುವು. ಬಡಗಿ, ಕಮ್ಮಾರ, ಕುಂಬಾರ, ಚರ್ಮ ಹದಮಾಡುವವನು ಮೊದಲಾದವರು ಕೃಷಿ ಕೆಲಸಗಾರರಿಗೆ ಸಹಾಯಕರಾಗಿದ್ದರು. ನೂಲುವುದು, ನೇಯುವುದು ಅತ್ಯಂತ ಚತುರತೆಯ ಕುಶಲಕಲೆಯಾಗಿ ಬೆಳೆದಿತ್ತು. ರಥಗಳನ್ನು ತಯಾರಿಸುವುದೂ ಒಂದು ಮುಖ್ಯ ಕಸುಬಾಗಿತ್ತು. ಆರ್ಯರ ದೇವತೆಗಳೆಲ್ಲಾ ಸಂಚರಿಸುತ್ತಿದ್ದುದು ರಥಗಳಲ್ಲಿಯೇ. ಆ ರಥಗಳ ವರ್ಣನೆಗಳನ್ನು ನೋಡಿದರೆ ಅದೊಂದು ಕಸುಬಾಗಿದ್ದುದು ಮಾತ್ರವಲ್ಲದೆ ಕುಶಲಕಲೆಯಾಗಿ ಕೂಡ ಪರಿಣಮಿಸಿತ್ತೆನ್ನಬಹುದು. ರಥಕ್ಕೆ

ಹೂಡುತ್ತಿದ್ದವು ಕುದುರೆಗಳು. ಎತ್ತಿನ ಗಾಡಿಗಳೂ ಬಳಕೆಯಲ್ಲಿದ್ದುವು. ರಥಕ್ಕೆ ಬೇಕಾದ ರಸ್ತೆಗಳು, ಎತ್ತಿನ ಗಾಡಿಯ ರಸ್ತೆಗಳು, ಮತ್ತು ಪಾದಚಾರಿಗಳ ರಸ್ತೆಗಳನ್ನು ಕುರಿತ ಮಾತು ಅಥರ್ವವೇದದಲ್ಲಿ ಬರುತ್ತದೆ. ಹಡಗು ಕಟ್ಟುವುದು ಇನ್ನೊಂದು ಮುಖ್ಯವಾದ ಉದ್ಯೋಗವಾಗಿತ್ತು. ಸಮುದ್ರಯಾನದಲ್ಲಿ ವೇದಕಾಲದ ಜನ ಪರಿಣತರಾಗಿದ್ದರೆಂಬುದಕ್ಕೆ ಅನೇಕ ಸಾಕ್ಷ್ಯಗಳಿವೆ.

ಮಾನವಸಹಜವಾದ ದೌರ್ಬಲ್ಯಗಳು ವೇದಕಾಲದ ಸಮಾಜದಲ್ಲಿ ಇಲ್ಲದೇ ಇರಲಿಲ್ಲ. ದ್ಯೂತ, ಸುರಾಪಾನ ಇತ್ಯಾದಿಗಳಲ್ಲಿ ಕಾಲ ಕಳೆಯುವ ಜನ ಇದ್ದರು. ಆದರೆ ಇವುಗಳನ್ನು ಬಿಟ್ಟು ನೈತಿಕ ಜೀವನವನ್ನು ಕೈಗೊಳ್ಳುವುದೇ ಉದ್ಧಾರಕ್ಕೆ ಕಾರಣವೆಂಬ ಅಂಶವನ್ನು ಮನವಟ್ಟುಮಾಡಿಕೊಡಲು ವೇದಗಳು ಪ್ರಯತ್ನಪಟ್ಟುವು. ಜೀವನದ ನೀತಿ ನಡೆ ನುಡಿಗಳ ವಿಚಾರದಲ್ಲಿ, ಅಲ್ಲಿ ಸರಳವಾದ ನಿರೂಪಣೆಯಿದೆ; ವಿಶೇಷವಾದ ಜಿಜ್ಞಾಸೆಯಿಲ್ಲ. ಶ್ರದ್ಧೆಯಿಂದ ದೇವತೆಗಳನ್ನು ಸ್ತೋತ್ರಮಾಡುವುದು, ಯಜ್ಞಗಳನ್ನು ಕೈಕೊಳ್ಳುವುದು, ಸುಳ್ಳು ಮೋಸ ದ್ರೋಹ ಕಳ್ಳತನ ಕೊಲೆ ವ್ಯಭಿಚಾರ ಈ ಮೊದಲಾದ ದುರ್ಗುಣಗಳನ್ನು ಬಿಡುವುದು—ಇವೇ ಸಾಧಕನಿಗೆ ಅವಶ್ಯಕವಾದ ಶೀಲಗಳು ಎಂದು ವೇದಗಳು ಹೇಳುತ್ತವೆ.

ವೇದಗಳ ಕಾಲದಲ್ಲಿ ಯಜ್ಞಗಳೇ ಪ್ರಧಾನ ಉಪಾಸನೆಯ ವಿಧಾನವಾಗಿದ್ದುದರಿಂದ ವಿಗ್ರಹಾರಾಧನೆ ಆರ್ಯರಲ್ಲಿ ಆಗ ಇರಲಿಲ್ಲ. ಅನೇಕ ದೇವತೆಗಳನ್ನು ಅವರು ಸ್ತುತಿಸುತ್ತಿದ್ದರು, ಮತ್ತು ಅವುಗಳಿಗೆ ಸ್ಪಷ್ಟವಾದ ಆಕಾರವನ್ನು ಕೊಟ್ಟಿದ್ದರು. ಆದರೆ ಅವುಗಳನ್ನು ಮೂರ್ತಿಗಳನ್ನಾಗಿ ನಿರ್ಮಿಸಿ ದೇವಾಲಯಗಳಲ್ಲಿಟ್ಟು ಪೂಜಿಸುತ್ತಿದ್ದಂತೆ ತೋರುವುದಿಲ್ಲ. ಆದುದರಿಂದ ಭಾರತೀಯ ಸಂಸ್ಕೃತಿಯಲ್ಲಿ ಮುಂದೆ ಪ್ರಧಾನ ಅಂಶಗಳಾದ ವಾಸ್ತು ಮತ್ತು ಶಿಲ್ಪಕಲೆಗಳು ವೇದಗಳ ಕಾಲದಲ್ಲಿ ಅಷ್ಟಾಗಿ ಬೆಳೆಯಲು ಅವಕಾಶವಾಗಲಿಲ್ಲ. ಆದರೆ ಸಂಗೀತಕಲೆಗೆ ವೇದಗಳೇ ಉಗಮಸ್ಥಾನವಾಗಿ ಪರಿಣಮಿಸಿದುವು. ವೇದಗಳನ್ನು ಓದುವುದಕ್ಕಾಗಿ ಬಳಸುತ್ತಿದ್ದ ಏರಿಳಿತಗಳ ರೀತಿಯೇ ಸಂಗೀತದ ಸಪ್ತಸ್ವರಗಳಿಗೆ ಪ್ರಚೋದನೆಯನ್ನಿತ್ತಿತು. ಸಾಮಗಾನ ಭಾರತೀಯ ಸಂಗೀತದ ಅರುಣೋದಯಕ್ಕೆ ಹಾಡಿದ ಮುನ್ಸೂಚನೆಯ ಮಧುರಗೀತೆಯಾಗಿ ಪರಿಣಮಿಸಿತು. ಯಜ್ಞವೇದಿಕೆಯ ನಿರ್ಮಾಣ, ದೇವತೆಗಳ ಆಹ್ವಾನಕ್ಕೆ ಸಿದ್ಧತೆ, ಹವಿಸ್ಸಿನ ಸಮರ್ಪಣೆ—ಈ ಮೊದಲಾದ ಪ್ರಕ್ರಿಯೆಗಳು ಆಯಾ ಸಂದರ್ಭಕ್ಕನುಗುಣವಾಗಿ ಇತರ ಲಲಿತಕಲೆಗಳ ಬೆಳೆವಣಿಗೆಗೂ ಅವಕಾಶವನ್ನು ಇತ್ತವು.

ವೇದಕಾಲದ ನಾಗರಿಕತೆ ಮತ್ತು ಸಂಸ್ಕೃತಿಗಳು ಜನಾಂಗ ಜೀವನದ ಪರಿಣತಾವಸ್ಥೆಯನ್ನು ವ್ಯಕ್ತಪಡಿಸುತ್ತವೆ. ಮುಂದೆ ಭಾರತೀಯ ಸಂಸ್ಕೃತಿ ಬಹುಶಾಖೆಯಿಂದ ಕೂಡಿದ ಹೆಮ್ಮರವಾಗಿ ಬೆಳೆಯಿತು. ಆ ಸಂಸ್ಕೃತಿವೃಕ್ಷದ ಸಂಕಲ್ಪಶಕ್ತಿಯೆಲ್ಲವೂ ಬೀಜರೂಪವಾಗಿ ವೇದಗಳಲ್ಲಿ ಅಡಗಿದುದೆನ್ನಬಹುದು. ಅದನ್ನು ತಮ್ಮ ಮಹತ್ಸಾಧನೆಯ ದಿವ್ಯಶಕ್ತಿಯಿಂದ ಸಮುನ್ನತ ಪ್ರವರ್ತನದ ಪರಿಪೂರ್ಣಮಟ್ಟಕ್ಕೇರಿಸಿದವರು ಉಪನಿಷತ್ತಿನ ಋಷಿಗಳು.



## ಉಪನಿಷತ್ತುಗಳು

ಉಪನಿಷತ್ತುಗಳಲ್ಲಿ ಕಾಣುವ ಜೀವನದರ್ಶನ ಪೂರ್ಣವಾದುದು, ಚಿರಂತನವಾದುದು. ವೇದಗಳಲ್ಲಿರುವಂತೆ ಬಾಹ್ಯಜೀವನದ ಅನುಕೂಲಗಳನ್ನು ಪಡೆಯುವುದಕ್ಕಾಗಿ ಯಜ್ಞ ಯಾಗಾದಿಗಳಲ್ಲಿ ನಿರತವಾಗುವುದನ್ನು ಉಪನಿಷತ್ತುಗಳು ಹೇಳುವುದಿಲ್ಲ. ಅವಿನಾಶಿಯಾದ ಆತ್ಮತತ್ತ್ವದ ದರ್ಶನಕ್ಕಾಗಿ ಉಪನಿಷತ್ತಿನ ಋಷಿಗಳ ಪ್ರತಿಭೆ ಊರ್ಧ್ವಮುಖವಾಗಿ ಸಾಗಿದೆ. ಆ ನಿಲವಿನಲ್ಲಿ ನಿಂತ ಅವರಿಗೆ ವೇದಗಳಲ್ಲಿ ಅತಿವಿಸ್ತಾರವಾಗಿ ಪ್ರತಿಪಾದಿತವಾದ ಕರ್ಮಕಾಂಡ ವ್ಯರ್ಥಶ್ರಮವೆಂದು ತೋರಿತು. ವೇದಗಳ ಕರ್ಮಕಾಂಡದ ಮಧ್ಯದಲ್ಲಿಯೇ ಅಲ್ಲೊಮ್ಮೆ ಇಲ್ಲೊಮ್ಮೆ ಸುಳಿಯುತ್ತಿದ್ದ ತತ್ತ್ವಜಿಜ್ಞಾಸೆಯ ಸುಳುಹು ಅವರ ಮನಸ್ಸನ್ನು ಹೊಕ್ಕಿತು.

ಅದುವರೆಗೂ ಪರಂಪರೆಯಿಂದ ಬಂದ ವೇದಗಳ ಕರ್ಮಕಾಂಡದ ವಿಧಿ ವಿಧಾನಗಳನ್ನು ಇದ್ದಕ್ಕಿದ್ದಂತೆಯೇ ಅವರು ಖಂಡಿಸಲು ತೊಡಗಿಲ್ಲ. ಆ 'ಕರ್ಮಯಜ್ಞ'ಗಳ ಪರಿಮಿತಿಯನ್ನು ಮನದಟ್ಟುಮಾಡಿಕೊಡಲು ಪ್ರಯತ್ನಿಸಿದ್ದಾರೆ. 'ಜ್ಞಾನಯಜ್ಞ'ದ ಮಹಿಮೆಯನ್ನು ತೋರಿಸಿಕೊಟ್ಟಿದ್ದಾರೆ. ಯಜ್ಞಗಳಿಂದ ಬರುವ ಫಲ ಅಲ್ಪವಾದುದೆಂದೂ ಪುನರ್ಜನ್ಮಕ್ಕೆ ಕಾರಣವೆಂದೂ ಹೇಳುವ ಮಾತುಗಳು ಉಪನಿಷತ್ತುಗಳಲ್ಲಿ ಬರುತ್ತವೆ. "ಯಜ್ಞಗಳೇ ಅತ್ಯಂತ ಶ್ರೇಷ್ಠಗಳೆಂದು ಆನಂದಿಸುವ ಮೂಢರು ಮತ್ತೆ ಮತ್ತೆ ಹುಟ್ಟುಸಾವುಗಳಿಗೆ ಒಳಗಾಗುವರು" ಎಂಬ ಮಾತು ಮುಂಡಕೋಪನಿಷತ್ತಿನಲ್ಲಿದೆ. "ನಮ್ಮೊಳಗಿರುವ ಪ್ರಾಣಕ್ಕೆ ಆಹುತಿಯನ್ನು ಕೊಡುವುದೇ ನಿಜವಾದ ಯಜ್ಞ"[16] ಎಂದು ಕರ್ಮಯಜ್ಞದಿಂದ ಜ್ಞಾನಯಜ್ಞದ ಕಡೆಗೆ ಕ್ರಮೇಣ ಅಂತರ್ಮುಖಗೊಳಿಸುವ ಪ್ರಯತ್ನ ಕಂಡುಬರುತ್ತದೆ:

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂಧಯೀತ ।
ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥

"ಮಹಾಸ್ತ್ರವಾದ ಉಪನಿಷತ್ತೆಂಬ ಬಿಲ್ಲನ್ನೆತ್ತಿ ಉಪಾಸನೆಯಿಂದ ಕೂರಾದ ಮನವೆಂಬ ಬಾಣವನ್ನು ಅದಕ್ಕೆ ಹೂಡು. ಚಿತ್ತವನ್ನು ಪರಮಾತ್ಮನಲ್ಲಿ ಏಕಮಾಡಿ ಆ ಅಕ್ಷರವನ್ನೇ ಗುರಿಯಾಗಿಟ್ಟುಕೊಂಡು ನಿನ್ನ ಬಾಣವನ್ನು ಬಿಡು ಮತ್ತು ತಾದಾತ್ಮ್ಯವನ್ನು ಹೊಂದು"[17] —ಇಂತಹ ಮಾತುಗಳಿಂದ ಜ್ಞಾನಯಜ್ಞದ ಉಜ್ಜ್ವಲವಾದ ಅಗ್ನಿಕುಂಡವನ್ನು ಅಂತರಂಗದಲ್ಲಿ ತೋರಿಸಿಕೊಟ್ಟಿದ್ದಾರೆ. ಯಜ್ಞದ ಕಲ್ಪನೆಯನ್ನೇ ಬಳಸಿಕೊಂಡರೂ ಅದಕ್ಕೆ ಕೊಟ್ಟಿರುವ ವ್ಯಾಪಕವಾದ ಅರ್ಥದಿಂದ ಕರ್ಮಗಳನ್ನು ಮೀರಿ ನಿಲ್ಲುತ್ತಾರೆ ಋಷಿಗಳು. ಯಜ್ಞಕ್ರಿಯೆಯಲ್ಲಿ ಸೃಷ್ಟಿಕರ್ತನ ಪ್ರಯೋಗಶಾಲೆಯ ವಿರಾಡ್ರೂಪವನ್ನು ಕಾಣುತ್ತಾರೆ. ಉದಾಹರಣೆಗೆ, ಬಹಳ ಶ್ರೇಷ್ಠವೆಂದು ವೇದಗಳು ಭಾವಿಸಿದ್ದ ಅಶ್ವಮೇಧಯಾಗವನ್ನು ಕುರಿತು ಬೃಹದಾರಣ್ಯಕ ಉಪನಿಷತ್ತಿನ ಋಷಿಯ ಪ್ರತಿಭೆ ಈ ಪ್ರತಿಮೆಯನ್ನು ಹೀಗೆ ನಿರ್ಮಿಸಿ ನಿರೂಪಿಸುತ್ತದೆ:

ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ
ಪ್ರಾಣೋವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಽಶ್ವಸ್ಯ ಮೇಧ್ಯಸ್ಯ । ದ್ಯೌಃ
ಪೃಷ್ಠಮನ್ತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇ ಅವಾನ್ತರದಿಶಃ
ಪರ್ಶವ ಋತವೋಽಙ್ಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ
ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಂಸಾನಿ । ಊವಧ್ಯಂ ಸಿಕತಾಃ
ಸಿನ್ಧವೋ ಗುದಾ ಯಕೃಚ್ಚ ಕ್ಲೋಮಾನಶ್ಚ ಪರ್ವತಾ ಓಷಧಯಶ್ಚ ವನಸ್ಪತ
ಯಶ್ಚ ಲೋಮಾನ್ಯುದನ್ ಪೂರ್ವಾರ್ಧೋ ನಿಮ್ಲೋಚಞ್ಜಘನಾರ್ಧೋ
ಯದ್ ವಿಜೃಮ್ಭತೇ ತದ್ವಿದ್ಯೋತತೇ ಯದ್ ವಿಧೂನತೇ ತತ್
ಸ್ತನಯತಿ ಯನ್ಮೇಹತಿ ತದ್ವರ್ಷತಿ ವಾಗೇವಾಸ್ಯ ವಾಕ್ ॥

"ಮೇಧ್ಯವಾದ ಅಶ್ವಕ್ಕೆ ಉಷಾ (ಮುಹೂರ್ತವೇ) ತಲೆ, ಸೂರ್ಯನು ಕಣ್ಣು, ವಾಯು ಉಸಿರು, ವ್ಯಾತ್ತವು ಅಗ್ನಿವೈಶ್ವಾನರನು. ಮೇಧ್ಯವಾದ ಅಶ್ವಕ್ಕೆ ಸಂವತ್ಸರವು ಆತ್ಮವು, ದ್ಯುಲೋಕವು ಬೆನ್ನು, ಅಂತರಿಕ್ಷವು ಉದರವು, ಪೃಥಿವಿಯು ಪಾಜಸ್ಯವು, ದಿಕ್ಕು ಗಳು ಪಕ್ಕೆಗಳು, ಅವಾಂತರ ದಿಕ್ಕುಗಳು ಪರ್ಶುಗಳು, ಋತುಗಳು ಅಂಗಗಳು, ಮಾಸ ಗಳೂ ಅರ್ಧಮಾಸಗಳೂ ಪರ್ವತಗಳು, ಅಹೋರಾತ್ರಿಗಳು ಪ್ರತಿಷ್ಠೆಗಳು, ನಕ್ಷತ್ರಗಳು ಎಲುಬುಗಳು, ನಭವು ಮಾಂಸಗಳು, ಊವಧ್ಯವು ಮರಳುಗಳು, ಸಿಂಧುಗಳು ಗುದ ಗಳೂ, ಯಕೃತ್ತೂ ಕ್ಲೋಮವೂ ಪರ್ವತಗಳು, ಓಷಧಿಗಳೂ ವನಸ್ಪತಿಗಳೂ ಲೋಮ ಗಳು, ಉದಯಿಸುವ (ಸೂರ್ಯನು) ಕೆಳಗಿನ ಅರ್ಧವು, ಬಾಯಿಬಿಡುತ್ತದೆಯಲ್ಲ (ಅದು) ಮಿಂಚುತ್ತದೆ, ಕೊಡವುತ್ತದೆಯಲ್ಲ ಅದು ಗುಡುಗುತ್ತದೆ, ಮೇಹನವನ್ನು ಮಾಡುತ್ತದೆ ಯಲ್ಲ ಅದು ಮಳೆಗರೆಯುತ್ತದೆ, ಇದರ ವಾಕ್ಕೇ ವಾಕ್ಕು."[18]

ಹೀಗೆ ಆತ್ಮಜ್ಞಾನದ ಮಹಾಯಜ್ಞದ ಕಡೆಗೆ ಅವರ ಮನಸ್ಸು ಏಕಮುಖವಾಗಿ ಪ್ರವಹಿಸುತ್ತದೆ.

ಆತ್ಮಜ್ಞಾನವೇ ಉಪನಿಷತ್ತುಗಳ ಪ್ರಧಾನವಾದ ವಿಷಯ. ಅದಕ್ಕಿಂತ ಕಡಮೆ ಯಾವುದಾವುದನ್ನೂ ಆ ಋಷಿಗಳ ಮನಸ್ಸು ಬಯಸಲಾರದು. "ನಾಽಲ್ಪೇ ಸುಖಮಸ್ತಿ" ಎಂದು ಅಲ್ಪವಾದುದರಿಂದ ತೃಪ್ತಿಯನ್ನು ಪಡೆಯದೆ ಭೂಮವಾದುದನ್ನು ಬಯಸಿದ ಚೇತನ ಅವರದು. ಅಲ್ಪವಾದುದನ್ನು ನಾಶಗೊಳಿಸಿ ಅನಂತವಾದುದನ್ನು ಅಳವಡಿಸಿ ಕೊಂಡವರು ಅವರು. 'ಉಪನಿಷತ್' ಎಂಬ ಮಾತಿನ ಅರ್ಥವೇ ಅದನ್ನು ಸೂಚಿಸುತ್ತದೆ. ಈ ಮಾತನ್ನು ಎರಡು ರೀತಿಯಲ್ಲಿ ವಿವರಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ: 'ಉಪ' ಎಂದರೆ ಸಮೀಪದಲ್ಲಿ, 'ನಿ' ಎಂದರೆ ಸಂಪೂರ್ಣವಾಗಿ, 'ಸತ್' ಅಂದರೆ ನಾಶಗೊಳಿಸು. ಸಮೀಪದಲ್ಲಿರುವುದನ್ನು ಸಂಪೂರ್ಣವಾಗಿ ನಾಶಗೊಳಿಸುವ, ಎಂದರೆ ಅಜ್ಞಾನವನ್ನು ನಾಶಗೊಳಿಸಿ ಶಾಶ್ವತವಾದುದನ್ನು ಪಡೆಯಲು ಸಹಾಯಕವಾಗುವ ಮಾತುಗಳೇ ಉಪನಿಷತ್ತುಗಳು. ಇದರ ಇನ್ನೊಂದು ಅರ್ಥ: 'ಸಮೀಪದಲ್ಲಿ ಕುಳಿತುಕೊಳ್ಳುವುದು' ಎಂದಾಗುತ್ತದೆ. ಶಿಷ್ಯನನ್ನು ಪ್ರೇಮದಿಂದ ಬಳಿಗೆ ಕರೆದು, ಆತನು ಸಮೀಪದಲ್ಲಿ ಕುಳಿ ತಾಗ ಹೇಳುವ ರಹಸ್ಯವಿದ್ಯೆ—ಎಂಬ ಅರ್ಥವನ್ನು ಇಲ್ಲಿ ಕಾಣಬಹುದು. ಹೀಗೆ ಆ

ಮಾತಿಗೆ ಇರುವ ಇವೆರಡೂ ಅರ್ಥಗಳು ಒಂದಕ್ಕೊಂದು ಪೂರಕವಾಗಿವೆ. ಬಲವತ್ತರವಾದ ಅಜ್ಞಾನವನ್ನು ಮೆಟ್ಟಿ ಮೇಲೇರುವ ಸಾಹಸ ಮತ್ತು ಹಾಗೆ ಪಡೆದ ಜ್ಞಾನವನ್ನು ಬಳಿಯಲ್ಲಿ ಕುಳಿತ ಮುಮುಕ್ಷುವಿಗೆ ಹೇಳುವ ಲೋಕಕಾರುಣ್ಯ—ಇವೆರಡೂ ಈ ಮಾತಿನಿಂದ ಧ್ವನಿಸುತ್ತವೆ.

ಉಪನಿಷತ್ತುಗಳ ಸಂಖ್ಯೆ ಮತ್ತು ಕಾಲಗಳ ವಿಚಾರದಲ್ಲಿ ಏಕಾಭಿಪ್ರಾಯವಿಲ್ಲ. ಮುಕ್ತಿಕೋಪನಿಷತ್ತಿನಲ್ಲಿ ನೂರೆಂಟು (೧೦೮) ಉಪನಿಷತ್ತುಗಳ ಹೆಸರು ಬರುತ್ತವೆ. ಇನ್ನು ಕೆಲವರು ನೂರೈವತ್ತು ಉಪನಿಷತ್ತುಗಳಿವೆ ಎನ್ನುತ್ತಾರೆ. ಆದರೆ ಇವುಗಳಲ್ಲಿ ಬಹಳ ಮುಖ್ಯವಾದುವುಗಳೆಂದರೆ ಈಶ, ಕೇನ, ಕಠ, ಮಾಂಡೂಕ್ಯ, ಮುಂಡಕ, ಪ್ರಶ್ನ, ತೈತ್ತಿರೀಯ, ಐತರೇಯ, ಬೃಹದಾರಣ್ಯಕ ಮತ್ತು ಛಾಂದೋಗ್ಯ—ಎಂಬ ಹತ್ತು ಉಪನಿಷತ್ತುಗಳು ಮಾತ್ರ. ಇವುಗಳಲ್ಲಿಲ್ಲದೇ ಇರುವ ಹೊಸ ವಿಚಾರಗಳು ಇತರ ಉಪನಿಷತ್ತುಗಳಲ್ಲಿಲ್ಲವೆಂದೇ ಹೇಳಬಹುದು. ಇವುಗಳು ರಚಿತವಾದ ಕಾಲವನ್ನು ನಿರ್ಧರವಾಗಿ ಹೇಳುವುದು ಕಷ್ಟ. ಇವೆಲ್ಲವೂ ಏಕಕಾಲದಲ್ಲಿ ರಚಿತವಾದುವುಗಳಲ್ಲ. ಋಗ್ವೇದ ಸಂಹಿತೆ ಮತ್ತು ಬ್ರಾಹ್ಮಣಗಳಿಗಿಂತ ಇವು ಈಚಿನವೆಂಬುದರಲ್ಲಿ ಸಂದೇಹವಿಲ್ಲ. ವೇದಗಳ ಕೊನೆಯಲ್ಲಿ ಇವು ರಚಿತವಾದುವು. ಆರಣ್ಯಕದ ಬೇರೆ ಬೇರೆ ಅಧ್ಯಾಯಗಳೆಂದು ಇವನ್ನು ಭಾವಿಸುವುದುಂಟು. ಬುದ್ಧನಿಗಿಂತ ಇವು ಹಿಂದಿನವುಗಳೆಂಬುದರಲ್ಲಿ ಅನುಮಾನವಿರುವಂತೆ ತೋರುವುದಿಲ್ಲ. ಆದುದರಿಂದ ಸುಮಾರು ಕ್ರಿ. ಪೂ. ೫೦೦ಕ್ಕೆ ಹಿಂದೆಯೇ ಪ್ರಮುಖವಾದ ಉಪನಿಷತ್ತುಗಳು ಸೃಷ್ಟಿಯಾದುವೆಂದು ಹೇಳಬಹುದು.

ಆ ಕಾಲದ ಸಮಾಜದ ಚಿತ್ರ ಉಪನಿಷತ್ತುಗಳಲ್ಲಿ ಹೆಚ್ಚಾಗಿ ಕಾಣಸಿಗುವುದಿಲ್ಲ. ಆಧ್ಯಾತ್ಮಿಕ ವಾತಾವರಣದ ಆಶ್ರಮಗಳಲ್ಲಿ ಅವು ಹುಟ್ಟಿದುವು. "ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ"-ಎಂದು[19] ಯಾವಾಗಲೂ ಮಂಗಳವನ್ನೇ ಕೇಳುವ, ಮಂಗಳವನ್ನೇ ಕಾಣುವ ಹಂಬಲದಲ್ಲಿದ್ದವರು ಆ ಋಷಿಗಳು. ಸಮಾಜದ ಅದೊಂದೇ ಮುಖ ಅಲ್ಲಿ ಪ್ರತಿಬಿಂಬಿತವಾಗಿದೆ. ಬಹುಮುಖ ಸಮಾಜದ ಸಮಸ್ಯೆಗಳಾಗಲಿ ತೊಡಕುಗಳಾಗಲಿ ಅಲ್ಲಿ ಬರಲು ಅವಕಾಶವಾಗಲಿಲ್ಲ. ಆದರೆ ಸಮಾಜದ ಎಲ್ಲ ತೊಡಕುಗಳ ಮೇಲೂ ಪ್ರಭಾವವನ್ನು ಬೀರಿ ಆ ಸಮಸ್ಯೆಗಳನ್ನು ಬಗೆಹರಿಸಬಲ್ಲ ಆಧ್ಯಾತ್ಮಿಕ ಶಕ್ತಿಯ ಆವಿಷ್ಕಾರ ಅಲ್ಲಿ ನಡೆಯಿತು. ಸಮಾಜವನ್ನು ಬಿಟ್ಟು ಓಡಿಹೋಗಬೇಕೆನ್ನುವ ಗುಂಪಲ್ಲ ಋಷಿಗಳದು. ಅವರಲ್ಲಿ ಎಷ್ಟೋ ಜನ ಸಂಸಾರಿಗಳಿದ್ದರು. ಸಂಸಾರವನ್ನೇ ಸಂಜೀವನಿಯನ್ನಾಗಿ ಕಾಣಬಲ್ಲವರಾಗಿದ್ದರು. ಯಾಜ್ಞವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಗೆ ಮಾಡಿದ ಉಪದೇಶವನ್ನು ಈ ಸಂದರ್ಭದಲ್ಲಿ ನೆನಸಿಕೊಳ್ಳಬಹುದು. ಸ್ತ್ರೀಯರಿಗೆ ಧರ್ಮದಲ್ಲಿ ಸಮಾನವಾದ ಅಧಿಕಾರ ವೇದಗಳ ಕಾಲದಲ್ಲಿಯಂತೆಯೇ ಉಪನಿಷತ್ತುಗಳ ಕಾಲದಲ್ಲಿಯೂ ಉಳಿದುಕೊಂಡುಬಂದಿತ್ತು. ಮೈತ್ರೇಯಿ ಗಾರ್ಗಿ ಮೊದಲಾದ ಹೆಸರುಗಳು ಇಲ್ಲಿ ಮಿಂಚುತ್ತವೆ. ಪುರುಷರಂತೆಯೇ ಸ್ತ್ರೀಯರು ಸಹ ಎಲ್ಲ ವಿದ್ಯೆಗಳಲ್ಲಿಯೂ ಪಾರಂಗತರಾಗುವ ಅವಕಾಶವಿತ್ತು. ಸಮಾಜದಲ್ಲಿ ಮೇಲುಕೀಳುಗಳೆಂಬ ವಿಷಮತೆಯನ್ನು

ಬೆಳಸುವ ಮಾತುಗಳೆಲ್ಲೂ ಉಪನಿಷತ್ತುಗಳಲ್ಲಿ ಕಾಣುವುದಿಲ್ಲ. 'ಸರ್ವೇಜನಾಃ ಸುಖಿನೋ ಭವಂತು'—ಎಂದು ಇಡೀ ವಿಶ್ವಕ್ಕೇ ಶಾಂತಿಯನ್ನು ಕೋರುವ ವಿಶಾಲ ಸಂಸ್ಕೃತಿಯ ದ್ಯೋತಕವಾಗಿ ಅವು ಉಳಿದಿವೆ.

ಉಪನಿಷತ್ತುಗಳನ್ನು ಓದುತ್ತಿದ್ದರೆ ಊರಿನ ಸದ್ದುಗದ್ದಲಗಳಿಂದ ದೂರವಾದ ಪ್ರಶಾಂತ ವಾತಾವರಣದ ಅನುಭವ ಉಂಟಾಗುತ್ತದೆ. ನಿಸರ್ಗಸೌಂದರ್ಯದ ಮಡಿಲಿನಲ್ಲಿ ಆಶ್ರಮಗಳನ್ನು ಅವರು ಕಟ್ಟಿಕೊಳ್ಳುತ್ತಿದ್ದರು. ಪ್ರಕೃತಿಸೌಂದರ್ಯದ ಆರಾಧನೆಯ ಜೊತೆಗೆ ಅಂತರಂಗದ ಪ್ರಕೃತಿಯ ಬಗೆಗೂ ಪ್ರಯೋಗಗಳನ್ನು ಕೈಕೊಳ್ಳುತ್ತಿದ್ದರು. ಆಧ್ಯಾತ್ಮ ವಿಜ್ಞಾನಿಗಳಾಗಿ ಆತ್ಮಪರೀಕ್ಷೆ ಮಾಡಿಕೊಳ್ಳುತ್ತಿದ್ದರು. ಆ ಪ್ರಯೋಗ ಪರೀಕ್ಷೆಗಳಿಂದ ಮೂಡಿಬಂದ ಫಲವೇ ಉಪನಿಷತ್ತುಗಳಲ್ಲಿ ವ್ಯಕ್ತವಾಗಿರುವ ಪೂರ್ಣಜೀವನದ ದರ್ಶನ.

ಈಶಾವಾಸ್ಯ ಉಪನಿಷತ್ತಿನ ಮೊದಲನೆಯ ಎರಡು ಶ್ಲೋಕಗಳನ್ನು ಇಲ್ಲಿ ಮೊದಲು ನೋಡಬಹುದು:

> ಈಶಾವಾಸ್ಯಮಿದಂ ಸರ್ವಂ ಯತ್ಕಿಂ ಚ ಜಗತ್ಯಾಂ ಜಗತ್ ।
> ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯ ಸ್ವಿದ್ಧನಮ್ ॥

ಈ ಸೃಷ್ಟಿಯ ವಸ್ತುಗಳೆಲ್ಲವೂ ಪರಮಾತ್ಮನ ಆವಾಸಸ್ಥಾನಗಳು—ಎಂಬ ಇಲ್ಲಿಯ ಮಾತಿನಲ್ಲಿ ಸೃಷ್ಟಿ ಮತ್ತು ಸೃಷ್ಟಿಕರ್ತನ ಸ್ವರೂಪ ಅರ್ಥಗರ್ಭಿತವಾಗಿ ಸೂಚಿತವಾಗಿದೆ. ಅವನು ಕೊಟ್ಟ ಪದಾರ್ಥವನ್ನು ಅವನ ಪ್ರಸಾದವೆಂಬ ಭಾವನೆಯಿಂದ ಉಪಭೋಗಿಸು, ಪರಧನವನ್ನು ಅಪೇಕ್ಷಿಸಬೇಡ—ಎಂಬ ಮುಂದಿನ ಮಾತು ಈ ಜಗತ್ತಿನಲ್ಲಿ ಬಾಳಬೇಕಾದ ಸಾಧನೆಯ ರಹಸ್ಯವನ್ನು ಒಳಗೊಂಡಿದೆ. ಮುಂದಿನ ಶ್ಲೋಕ ಆ ಸಾಧನೆಯ ಮಾರ್ಗವನ್ನು ಇನ್ನೂ ಸ್ಪಷ್ಟವಾಗಿ ನಿರೂಪಿಸುತ್ತದೆ:

> ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
> ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಬಹಳ ವ್ಯಾಪಕವಾದ ತತ್ತ್ವ ಇದು. ಮನುಷ್ಯ ಕರ್ಮಶೀಲನಾಗಿಯೇ ನೂರುವರ್ಷ ಬಾಳಬೇಕು. ಇದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ—ಎನ್ನುತ್ತಾರೆ ಋಷಿಗಳು. ಜೀವನದ ವಿಮುಖತೆಯನ್ನು, ಜೀವನಕ್ಕೆ ಅಂಜಿ ಹಿಂಜರಿಯಬೇಕೆಂಬುದನ್ನು ಉಪನಿಷತ್ತುಗಳು ಎಲ್ಲಿಯೂ ಹೇಳಿಲ್ಲ. ಅದಕ್ಕೆ ಬದಲಾಗಿ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ"—ಎಂದು ಸಾಧಕನನ್ನು ಎಚ್ಚರಿಸುತ್ತವೆ; ಪ್ರವೃತ್ತಿಮಾರ್ಗದಲ್ಲಿ ನಿಯೋಜಿಸುತ್ತವೆ.

ಆದರೆ ಇಲ್ಲಿ ಒಂದು ಮಾತನ್ನು ಗಮನಿಸಬೇಕು: ಕರ್ಮವನ್ನು ಮಾಡುತ್ತಲೇ ನೂರು ವರ್ಷ ಬದುಕಬೇಕು ಎನ್ನುತ್ತಾರೆ ನಿಜ. ಆದರೆ ಎಂತಹ ಕರ್ಮಗಳಲ್ಲಿ ನಿರತರಾಗಬೇಕು? ಕೇವಲ ಲೌಕಿಕ ವ್ಯವಹಾರದ ಕರ್ಮಗಳಲ್ಲಿ ಮಗ್ನರಾದರೆ ಸಾಕೆ?

ಥವಾ ಯಜ್ಞಯಾಗಾದಿ ಕರ್ಮಗಳಲ್ಲಿ ತೊಡಗಬೇಕೆ ? 'ಗುರಿ ಸೇರುವವರೆಗೂ ನಿಲ್ಲ ೇಡಿ'—ಎನ್ನುವುದಾದರೆ ಆ ಗುರಿ ಯಾವುದು, ಸೇರುವುದು ಹೇಗೆ?—ಎಂಬ ಪ್ರಶ್ನೆ ಳು ಎದುರಾಗುತ್ತವೆ. ಇವುಗಳನ್ನು ಆಳವಾಗಿ ವಿವೇಚಿಸಿ, ಅವುಗಳಿಗೆ ವ್ಯಾಪಕವೂ ಾಶ್ವತವೂ ಆದ ಉತ್ತರವನ್ನು ಕಂಡುಕೊಂಡಿರುವುದೇ ಉಪನಿಷತ್ತುಗಳ ವೈಶಿಷ್ಟ್ಯ.

ಓಂ ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥

ಯಾರ ಇಚ್ಛೆಗನುಸರಿಸಿ, ಯಾರ ಪ್ರೇರಣೆಯಿಂದ ಈ ಮನಸ್ಸು ತನ್ನ ವಿಷಯದಲ್ಲಿ ೊಡಗುವುದು? ಪ್ರಾಣವು ಮೊಟ್ಟಮೊದಲು ಯಾರ ಆಜ್ಞೆಯಿಂದ ತನ್ನ ಕರ್ಮ ನ್ನಾರಂಭಿಸುವುದು ? ಯಾರ ಇಚ್ಛೆಯಿಂದ ಜನರು ನುಡಿಯುವರು? ಕಣ್ಣು ಕಿವಿಗಳಿಗೆ ಜ್ಞೆಮಾಡುವ ದೇವತೆಯು ಯಾರು ?"—ಎಂಬ ಈ ಪ್ರಶ್ನೆಗಳಿಂದಲೇ ಪ್ರಾರಂಭ ಾಗುತ್ತದೆ ಕೇನೋಪನಿಷತ್ತು. ಈ ದೇಹದಲ್ಲಿರುವ ಮನಸ್ಸು ಪ್ರಾಣಗಳನ್ನು ಪ್ರಚೋ ಿಸಿ ಕಾರ್ಯದಲ್ಲಿ ಪ್ರವೃತ್ತಗೊಳಿಸುವ ಶಕ್ತಿ ಯಾವುದೆಂದು ಕೇನೋಪನಿಷತ್ತು ಕೇಳಿದರೆ, ಠೋಪನಿಷತ್ತಿನಲ್ಲಿ ನಚಿಕೇತ ಈ ಪ್ರಶ್ನೆಯನ್ನು ಮುಂದಿಡುತ್ತಾನೆ:

"ಓ ಮೃತ್ಯು, ಮಾನವನು ಸತ್ತಮೇಲೆ ಅವನ ಆತ್ಮವು ಬದುಕಿರುವುದೆಂದು ಕೆಲ ರು ಹೇಳುತ್ತಾರೆ. ದೇಹದೊಡನೆ ಆತ್ಮವೂ ನಾಶವಾಗುವುದೆಂದು ಕೆಲವರು ಹೇಳು ್ತಾರೆ. ಇದರಲ್ಲಿ ಯಾವುದು ನಿಜವೆಂಬುದನ್ನು ನನಗೆ ಉಪದೇಶಿಸು"—ಯಮನನ್ನೇ ುರಿತು ಈ ಪ್ರಶ್ನೆಯನ್ನು ಕೇಳುತ್ತಾನೆ, ನಚಿಕೇತ. ಇದು ಅತ್ಯಂತ ಗಹನವಾದ ್ರಶ್ನೆ ಎಂಬುದನ್ನು ಉಪನಿಷತ್ತಿನ ಋಷಿಗಳು ಅರಿತಿದ್ದರು. "ಇದು ಬಹು ಸೂಕ್ಷ್ಮ ಾದುದು, ಸುಲಭವಾಗಿ ತಿಳಿದುಕೊಳ್ಳುವಂತಹುದಲ್ಲ"—ಎಂಬ ಮಾತು ಯಮನ ಾಯಿಂದ ಬರುತ್ತದೆ. ಜನಕರಾಜನ ಸಭೆಯಲ್ಲಿ ಆರ್ತಭಾಗ ಎನ್ನುವವನು ಇಂತಹುದೇ ್ರಶ್ನೆಯನ್ನು ಯಾಜ್ಞವಲ್ಕ್ಯರಿಗೆ ಕೇಳುವ ಸನ್ನಿವೇಶ ಬೃಹದಾರಣ್ಯಕೋಪನಿಷತ್ತಿನಲ್ಲಿ ುತ್ತದೆ. "ಸತ್ತ ಬಳಿಕ ಮಾನವನ ದೇಹೇಂದ್ರಿಯಗಳ ಭಾಗಗಳು ತಮ್ಮ ಮೂಲ ದಾರ್ಥಗಳಲ್ಲಿ ಹೋಗಿ ಸೇರುತ್ತವೆ, ಎಂದರೆ ದೇಹ ನಾಶವಾಗುತ್ತದೆ. ಆಗ ಈ ಆತ್ಮ ್ಲಿರುತ್ತದೆ ?"—ಎಂದು ಕೇಳುತ್ತಾನೆ, ಆರ್ತಭಾಗ. ಹೀಗೆ ಉಪನಿಷತ್ತುಗಳು 'ಅಹಂ ತ್ತ್ವ'ದ ಸ್ವರೂಪವನ್ನು, ಎಂದರೆ ಪಿಂಡಾಂಡದ ರಹಸ್ಯವನ್ನು ಅರಸಲು ತೊಡಗಿವೆ. ಂಡಾಂಡದ ರಹಸ್ಯವೇ ಬ್ರಹ್ಮಾಂಡದ ರಹಸ್ಯವೂ ಹೌದು. ಈ ದೇಹದ ಹಿಂದಿರುವ ೈತನ್ಯಶಕ್ತಿ, ಇದರ ಚಲನೆಗೆ ಕಾರಣವಾದರೆ ಬ್ರಹ್ಮಾಂಡದ ಹಿಂದಿರುವ ಮಹಾಶಕ್ತಿ ಇಡೀ ವಿಶ್ವದ ಚಾಲನೆಗೆ ನಿಮಿತ್ತವಾಗಿದೆ. ಈ ಶಕ್ತಿಯನ್ನೇ 'ಬ್ರಹ್ಮ' ಎಂದು ಪನಿಷತ್ತುಗಳು ಕರೆಯುತ್ತವೆ:

ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥

"ಅದು ಚಲಿಸುವುದು, ಚಲಿಸದು. ಅದು ದೂರವಿರುವುದು, ಸಮೀಪವೂ ಇರುವು
ಅದು ಸರ್ವಾಂತರದಲ್ಲಿಯೂ ಇರುವುದು, ಸರ್ವದ ಬಾಹ್ಯದಲ್ಲಿಯೂ ಇರುವುದು."

ಸಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಮ್ ।
ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ವ್ಯದಧಾತ್
ಶಾಶ್ವತೀಭ್ಯಃ ಸಮಾಭ್ಯಃ ॥

"ಅವನೇ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಿದನು. ಅವನು ತೇಜಸ್ವಿಯು, ಅಶರೀ ಘಾಯರಹಿತನು, ಸ್ನಾಯುರಹಿತನು, ಶುದ್ಧನು, ಪಾಪದಿಂದ ಅಲಿಪ್ತನು. ಅವ ಕವಿಯು, ಬುದ್ಧಿವಂತನು, ಸರ್ವವ್ಯಾಪಿಯು, ಸ್ವಯಂಭುವು. ಅವನು ಅನಾದಿಕಾ ದಿಂದ ಸಕಲಸೃಷ್ಟಿ ಪದಾರ್ಥಗಳ ವ್ಯವಸ್ಥೆಯನ್ನು ಯಥಾಯೋಗ್ಯವಾಗಿ ಮಾಡಿ ದನು.[20]—ಇತ್ಯಾದಿ ಅನೇಕ ಮಾತುಗಳಲ್ಲಿ ಆ ವಿಶ್ವಾತ್ಮನ ಶಕ್ತಿಯ ವ್ಯಾಪಕತೆಯ ಈಶಾವಾಸ್ಯೋಪನಿಷತ್ತು ಅರ್ಥಗರ್ಭಿತವಾಗಿ ನುಡಿಯುತ್ತದೆ.

ಅವನು ಅಶರೀರನಾದರೂ ಬಹುರೂಪಧಾರಿ; ಅಲಿಪ್ತನಾದರೂ ಸರ್ವವ್ಯಾಪಿ ಅವನು ಈ ಸೃಷ್ಟಿಯಲ್ಲಿ ಎಲ್ಲ ಕಡೆಗೂ ವ್ಯಾಪಿಸಿ ಆಯಾ ವಸ್ತುಗಳ ರೂಪವನ್ನೇ ಆ ಧರಿಸುತ್ತಾನೆ. ಆದರೆ ವಾಸ್ತವವಾಗಿ ಇವೆಲ್ಲಕ್ಕೂ ಅತೀತನಾದವನು ಆತ. ಇದ ಕಠೋಪನಿಷತ್ತು ಹೀಗೆ ಹೇಳುತ್ತದೆ:

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥

"ಒಂದು ಭವನವನ್ನು ಪ್ರವೇಶಿಸಿದ ಒಂದೇ ಅಗ್ನಿಯು ಆಯಾ ವಸ್ತುಗಳಿಗನುರೂಪವಾ ರೂಪಗಳನ್ನು ಧರಿಸುವಂತೆ ಸರ್ವಭೂತಗಳ ಅಂತರದಲ್ಲಿರುವ ಒಬ್ಬನೇ ಆತ್ಮನು ನಾ ರೂಪಗಳನ್ನು ಧರಿಸಿ ವಸ್ತುಗಳ ಹೊರಗೂ ವ್ಯಾಪಿಸಿರುವನು." ಈ ಶಕ್ತಿಯ ಆಶ್ರ ದಿಂದಲೇ ಎಲ್ಲ ಲೋಕಗಳೂ ಬೆಳೆದು ನಿಂತಿರುವುವು. ಇದನ್ನು ಸ್ಪಷ್ಟಪಡಿಸಲು ಕಠೋ ಪನಿಷತ್ತು ಅಗ್ನಿಯ ಸಾದೃಶ್ಯವನ್ನು ಆರಿಸಿಕೊಂಡಿದೆ. ಅದೇ ಉಪನಿಷತ್ತಿನ ಇನ್ನೊಂ ಕಡೆಯಲ್ಲಿ ಈ ಮಾತು ಬರುತ್ತದೆ:

ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ಏತದ್ವೈ ತತ್ ॥

"ಈ ಸಂಸಾರವು ಸನಾತನವಾದ ಅಶ್ವತ್ಥ ವೃಕ್ಷ. ಇದರ ಬೇರುಗಳು ಮೇಲೆ ಇರುವು ಟೊಂಗೆಗಳು ಕೆಳಗೆ ಬೆಳೆದಿರುವುವು. ಅದೇ (ಅಂದರೆ ಆ ವೃಕ್ಷದ ಬೇರು) ಶುದ್ಧವಸ್ತು ಬ್ರಹ್ಮವು, ಅದಕ್ಕೆಯೆ ಅಮೃತವೆನ್ನುವರು. ಸರ್ವಲೋಕಗಳು ಅದರ ಆಶ್ರಯದಿಂದ

ಇರುವುವು. ಅದರಾಚೆಗೆ ಯಾರೂ ಹೋಗಲಾರರು"—ಈ ಕಲ್ಪನೆ ಅರ್ಥಗರ್ಭಿತವಾಗಿದೆ. ಸಂಸಾರವೃಕ್ಷವನ್ನು ಅವಲಂಬಿಸಿ ಊರ್ಧ್ವಮುಖಗಮನವನ್ನು ಕೈಕೊಂಡರೆ ಮಾತ್ರ ಇದಕ್ಕೆ ಮೂಲಕಾರಣವಾದ ಪರಬ್ರಹ್ಮವನ್ನು ಕಾಣುವುದು ಸಾಧ್ಯವೆಂಬ ಸೂಚನೆ ಇಲ್ಲಿದೆ.

ಹೀಗೆ ಸೃಷ್ಟಿಯೆಲ್ಲವನ್ನೂ ವ್ಯಾಪಿಸಿರುವ ಬ್ರಹ್ಮಶಕ್ತಿಯೇ ಎಲ್ಲ ಪ್ರಾಣಿಗಳಲ್ಲಿಯೂ ಚೈತನ್ಯರೂಪವಾಗಿ ಅಡಗಿರುವ ಆತ್ಮಶಕ್ತಿ. ಅದು ಅಣುವಿನಲ್ಲಿ ಅಣು, ಮಹತ್ತಿನಲ್ಲಿ ಮಹತ್ತು. ಅದು ಶರೀರಗಳಲ್ಲಿ ಅಶರೀರಿ, ಅನಿತ್ಯವಸ್ತುಗಳಲ್ಲಿ ನಿತ್ಯತತ್ತ್ವ.

ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।
ಮಹಾಂತಂ ವಿಭುಮಾತ್ಮಾನಂ ಮತ್ವಾಧೀರೋ ನ ಶೋಚತಿ ॥

—ಎನ್ನುತ್ತದೆ ಕಠ. ಇಂತಹ ಸರ್ವವ್ಯಾಪಿಯಾದ ಆತ್ಮನ ಸಾಕ್ಷಾತ್ಕಾರಮಾಡಿಕೊಂಡ ಬುದ್ಧಿವಂತನು ಶೋಕರಹಿತನಾಗುವನು—ಎಂದು ಆತ್ಮಸಾಕ್ಷಾತ್ಕಾರದ ಮಹದ್ದರ್ಶನ ವನ್ನು ಸಾಧಕನ ಮುಂದೆ ಉಪನಿಷತ್ತು ನಿಲ್ಲಿಸಿತು.

ಈ ಆತ್ಮನನ್ನು ಕಂಡುಕೊಳ್ಳುವುದು ಹೇಗೆ?—ಎಂಬುದೇ ಮುಂದಿನ ಪ್ರಶ್ನೆ. "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ" ಆತ್ಮಸಾಕ್ಷಾತ್ಕಾರವನ್ನು ಕೇವಲ ಪ್ರವಚನಶಕ್ತಿಯಿಂದ, ಮೇಧಾಶಕ್ತಿಯಿಂದ ಅಥವಾ ಬಹಳ ಶ್ರವಣದಿಂದ ಪಡೆಯುವುದು ಸಾಧ್ಯವಿಲ್ಲ. ಅದು ಬುದ್ಧಿ ತರ್ಕಗಳನ್ನು ಮೀರಿದುದು.

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।
ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥

"ಯಾವನು ದುಷ್ಟ ಕರ್ಮಗಳನ್ನು ಬಿಟ್ಟಿಲ್ಲವೋ, ಯಾವನು ಅಶಾಂತನೋ, ಯಾವನು ಏಕಾಗ್ರಚಿತ್ತವಿಲ್ಲದವನೋ ಯಾವನ ಮನಸ್ಸಿನಲ್ಲಿ ಶಾಂತಿಯು ನೆಲೆಗೊಂಡಿಲ್ಲವೋ ಅವನಿಗೆ ಆತ್ಮನ ಬೌದ್ಧಿಕ ಜ್ಞಾನವಾದರೂ ಆತ್ಮಸಾಕ್ಷಾತ್ಕಾರವಾಗಲಾರದು"—ಎಂದು ಕಠೋಪನಿಷತ್ತು ಹೇಳುವ ಮಾತನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು. ಕೇವಲ ಬುದ್ಧಿಯಿಂದ ತಿಳಿದರೆ ಸಾಲದು; ಅನುಭವದಿಂದ ಅದನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ವಿಶ್ವಾತ್ಮನನ್ನು ಕುರಿತ ನೇರವಾದ ಅನುಭಾವವನ್ನು ಪರಮಪ್ರಮಾಣವನ್ನಾಗಿ ಮತ್ತು ಪರಮಶ್ರೇಷ್ಠವನ್ನಾಗಿ ಋಷಿಗಳು ಪರಿಗಣಿಸಿದರು. ಉಳಿದುದೆಲ್ಲಾ ಅಲ್ಲಿ ಗೌಣ. ಆದುದ ರಿಂದಲೇ ಇವುಗಳನ್ನು ಅನುಭಾವ ಗ್ರಂಥಗಳೆಂದು ಕರೆಯುತ್ತೇವೆ.

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

—ಎಂದು ಈಶಾವಾಸ್ಯೋಪನಿಷತ್ತು ಹೇಳುವ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. "ಸತ್ಯದ ಮುಖವನ್ನು ಚಿನ್ನದ ಮುಚ್ಚಳದಿಂದ ಮುಚ್ಚಿದೆ. ಹೇ ಜ್ಞಾನಸೂರ್ಯನೇ, ಸತ್ಯ ಧರ್ಮದ ದರ್ಶನಕ್ಕಾಗಿ ಆ ಮುಚ್ಚಳವನ್ನು ನೀನು ತೆರೆದುಬಿಡು"—ಎಂದು ಋಷಿಗಳು

ಇಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾರೆ. ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುವ ಹಂಬಲ, ಅದಕ್ಕಾಗಿ ಕೈಕೊಳ್ಳುವ ಸಾಧನೆಯ ಮಾರ್ಗ ಮತ್ತು ಅದನ್ನು ಕೈಗೂಡಿಸಿ ಕೊಂಡ ಆನಂದದ ಉದ್ಗಾರ—ಇವು ಉಪನಿಷತ್ತುಗಳಲ್ಲಿ ಸಾಲು ಸಾಲಿಗೂ ಕಂಡು ಬರುವ ಮಹತ್ತರವಾದ ಅಂಶಗಳು.

ಆನಂದದ ಅನುಭವವೇ ಜೀವನದ ಗುರಿ—ಎಂಬುದನ್ನು ಉಪನಿಷತ್ತು ಅನುಭವಿಸಿ ಕಂಡಿತು, ಅನುವರಿತು ಬೋಧಿಸಿತು. ತೈತ್ತಿರೀಯೋಪನಿಷತ್ತಿನಲ್ಲಿ ಆನಂದದ ಮೀಮಾಂಸೆ ಬರುತ್ತದೆ. ಮೊತ್ತಮೊದಲು ಇಂದ್ರಿಯಾತೀತ ವಸ್ತುವೊಂದೇ ಇತ್ತು. ಅದನ್ನು 'ಅಸತ್' ಎಂದು ಇಲ್ಲಿ ವಿಶಿಷ್ಟವಾದ ಅರ್ಥದಲ್ಲಿ ಕರೆಯಲಾಗಿದೆ. ಅಸತ್ತಿನಿಂದ 'ಸತ್', ಎಂದರೆ ಇಂದ್ರಿಯಗೋಚರವಾದ ಸೃಷ್ಟಿ ಹುಟ್ಟಿತು. 'ಅಸತ್' ತನ್ನನ್ನು ತಾನೇ ಸದ್ರೂಪಗೊಳಿಸಿಕೊಂಡಿತು. ಇದು 'ರಸ' ಸ್ವರೂಪವಾದ್ದು. "ರಸೋ ವೈ ಸಃ" ಎನ್ನುತ್ತದೆ ಉಪನಿಷತ್ತು. ಇದು ಆನಂದವನ್ನೀಯುವ ತತ್ತ್ವ. "ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ"—ಎಂದರೆ ಈ 'ರಸ'ವನ್ನು ಸಂಪಾದಿಸಿ ಮನುಷ್ಯನು ಆನಂದ ವನ್ನನುಭವಿಸುತ್ತಾನೆ. ಈ ಆನಂದವು ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ತುಂಬಿದೆ. ಆಕಾಶ ದಲ್ಲಿ ಆನಂದವು ತುಂಬಿರದಿದ್ದರೆ ಉಸಿರಾಡುವುದು ಅಥವಾ ಜೀವಿಸುವುದು ಸಾಧ್ಯವಿಲ್ಲ. ಇಂದ್ರಿಯಗಳಿಗೆ ಅಸ್ಪಷ್ಟವಾಗಿರುವ ಈ ನಿರಾಲಂಬ ವಸ್ತುವಿನಲ್ಲಿ ಯಾವನು ನಿರ್ಭಯ ವಾದ ಪ್ರತಿಷ್ಠೆಯನ್ನು ಪಡೆಯುತ್ತಾನೆಯೋ ಅವನು ಅಭಯ ಪದವಿಯನ್ನು ಪಡೆಯು ತ್ತಾನೆ. ಎಲ್ಲೆಲ್ಲಿಯೂ ವ್ಯಾಪಿಸಿರುವ ಈ ಆನಂದ ತತ್ತ್ವವನ್ನು ಕಂಡುಕೊಂಡು ಅದ ರೊಡನೆ ಸಮರಸಗೊಂಡಾಗ ಸಾಧಕ ತಾನೂ ಆನಂದಸ್ವರೂಪಿಯಾಗಿ ಪರಿಣಮಿಸು ತ್ತಾನೆ—ಎನ್ನುತ್ತದೆ ಈ ಉಪನಿಷತ್ತು. ಅಲ್ಲದೆ ವಿಷಯ ಸುಖಗಳ ಬೆನ್ನುಹತ್ತಿ ಆನಂದದ ನೆರಳನ್ನೇ ಆನಂದವೆಂದು ಭ್ರಮಿಸಿ ಆಯಾಸಗೊಳ್ಳುವ ಲೌಕಿಕರನ್ನು ಈ ಅನಂತ ಆನಂದದ ಅನುಭವಕ್ಕಾಗಿ ಆಹ್ವಾನಿಸುತ್ತದೆ.

ಈ ಗುರಿಯನ್ನು ಮುಟ್ಟುವುದಕ್ಕಾಗಿ ಅವರು ರೂಪಿಸಿದ ಮಾರ್ಗ ಪ್ರಧಾನವಾಗಿ ಜ್ಞಾನಮಾರ್ಗ. "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ"—ಎಂಬ ಉದ್ಗಾರ ಉಪನಿಷತ್ತಿನಲ್ಲಿದೆ. ಇಲ್ಲಿ 'ಜ್ಞಾನ' ಎಂಬ ಮಾತು ವ್ಯಾಪಕವಾದುದು. ಅರಿತ ಅರಿವು ಮತ್ತು ನುರಿತ ಆಚರಣೆ—ಇವೆರಡನ್ನೂ ಈ ಮಾತು ಒಳಗೊಳ್ಳುತ್ತದೆ.

> ಪ್ರಾಣೋಹ್ಯೇಷ ಯಃ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ಭವತೇ ನಾತಿವಾದೀ।
> ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ॥

"ಎಲ್ಲ ಭೂತಮಾತ್ರಗಳಲ್ಲಿ ಬೆಳಗುತ್ತಿರುವ ಪ್ರಾಣವು ಇವನೇ ಎಂಬುದನ್ನರಿತು ವಿದ್ವಾಂಸನು ಹೆಚ್ಚಿನ ವಾದಗಳನ್ನು ಬಿಟ್ಟುಬಿಡುವನು. ಆತ್ಮರತನಿದ್ದು ಆತ್ಮನ ಕೂಡ ಕ್ರೀಡಿಸುತ್ತಾ ಕ್ರಿಯಾವಂತನಾಗಿರುವವನೇ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನು." ಇಲ್ಲಿ ಕೊನೆಯ ಮಾತು ಬಹಳ ಮುಖ್ಯವಾದುದು. "ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾ

ನೇಷ ಬ್ರಹ್ಮವಿದಾಂ ವರಿಷ್ಠಃ"—ಎಂಬ ಈ ಮಾತು ಉಪನಿಷತ್ತುಗಳು ಈ ಲೋಕದ ಮುಂದಿಟ್ಟ ಬಹಳ ದೊಡ್ಡ ಆದರ್ಶ. ಬಹುಶಃ ಅದು ಮಾನವತೆಯ ಶಾಶ್ವತ ಧರ್ಮವಾಗಿ ಉಳಿಯಬಲ್ಲುದು.

ಇಂತಹ ವ್ಯಾಪಕವಾದ ಭಾವನೆಗಳನ್ನು ಪಡೆದಿರುವುದರಿಂದಲೇ ಉಪನಿಷತ್ತುಗಳು ದೇಶಕಾಲಗಳ ಎಲ್ಲೆಯನ್ನು ಮೀರಿ ಶಾಶ್ವತವಾಗಿ ಉಳಿದಿವೆ. ಜನಾಂಗದ ಅನುಭವ ಬೆಳೆದಂತೆಲ್ಲಾ ಇಲ್ಲಿನ ಮಾತುಗಳು ತಮ್ಮ ಅರ್ಥಗಾಂಭೀರ್ಯವನ್ನೂ ಬೆಳಸಿಕೊಳ್ಳುತ್ತವೆ.

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಉಜ್ಜಿದಷ್ಟೂ ಉಜ್ವಲವಾದ ಹೊಳಪನ್ನು ಕೊಡುವ ಅಪರಂಜಿಯ ಗುಣ ಇಂತಹ ಮಾತುಗಳಲ್ಲಿದೆ.

ಅವರು ತಮ್ಮ ಅನುಭವದ ನಿಲವಿನಲ್ಲಿ ಹೇಳಿದ ಮಾತುಗಳು ಎಂದೂ ಹಳತಾಗವು. ಮುಂಡಕೋಪನಿಷತ್ತಿನಲ್ಲಿ ಬರುವ ಈ ಮಾತನ್ನು ನೋಡಬಹುದು.

ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾ ದ್ವಿವಿಧಾಃ ಸೋಮ್ಯಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ ॥

"ಚೆನ್ನಾಗಿ ಹೊತ್ತಿ ಉರಿಯುತ್ತಿರುವ ಅಗ್ನಿಯಿಂದ ಸಾವಿರಾರು ಕಿಡಿಗಳು ಹೊರಡುವಂತೆ ಅಕ್ಷರ ಬ್ರಹ್ಮನಿಂದ ವಿವಿಧ ವಸ್ತುಗಳು ಹುಟ್ಟಿ ಅಲ್ಲಿಯೇ ಲಯ ಹೊಂದುವುವು"—ಎಂಬ ಈ ಮಾತು ಸೃಷ್ಟಿಯ ಹುಟ್ಟಿಗೆ ಕಾರಣವಾದ ಪರಬ್ರಹ್ಮದ ಸ್ವರೂಪವನ್ನೂ ಅತನಿಗೂ ಮತ್ತು ಸೃಷ್ಟಿಗೂ ಇರುವ ಸಂಬಂಧವನ್ನೂ ಸಾಮಾನ್ಯರೂ ಅರಿಯಬಹುದಾದಂತಹ ಸಾದೃಶ್ಯದಿಂದ ನಿರೂಪಿಸುತ್ತಿದೆ. ಹಾಗೆಯೇ ಮುಮುಕ್ಷುವಿನ ಸಾಧನೆಯ ಮಾರ್ಗವನ್ನು ಸೂಚಿಸುವ ಈ ಮಾತನ್ನು ಅದೇ ಉಪನಿಷತ್ತಿನಿಂದಲೇ ಉದಾಹರಿಸಬಹುದು :

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥

ಓಂಕಾರವೇ ಬಿಲ್ಲು, ಆತ್ಮವೇ ಬಾಣ, ಬ್ರಹ್ಮವೇ ಗುರಿ, ಗುರಿಯನ್ನು ತಪ್ಪದೇ ಹೊಡೆದು ಬಾಣವು ಅದರಲ್ಲಿ ಲೀನವಾಗುವಂತೆ ಮಾಡಬೇಕು. ಆತ್ಮನು ಬ್ರಹ್ಮವೆಂಬ ಗುರಿಯನ್ನು ಹೊಕ್ಕು ಅದರಲ್ಲಿ ಐಕ್ಯವಾಗಬೇಕೆಂಬುದನ್ನು ಹೀಗೆ ಹೇಳಿದ್ದಾರೆ ಋಷಿಗಳು. ಇದೇ ಅಭಿಪ್ರಾಯವನ್ನು ಇನ್ನೊಂದು ರೀತಿಯಲ್ಲಿ ಹೇಳಿ ಇನ್ನೂ ಸ್ಪಷ್ಟಪಡಿಸಲು ಪ್ರಯತ್ನಿಸಿರುವುದನ್ನು ಮುಂದಿನ ಮಾತುಗಳಲ್ಲಿ ಕಾಣಬಹುದು :

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥

"ಹರಿಯುವ ನದಿಗಳೆಲ್ಲವೂ ಯಾವ ರೀತಿಯಲ್ಲಿ ಸಮುದ್ರವನ್ನು ಸೇರಿ ತಮ್ಮ ನಾಮರೂಪಗಳನ್ನು ತ್ಯಜಿಸಿ ಅಲ್ಲಿ ಲೀನವಾಗುವುವೋ ಅದೇ ರೀತಿಯಲ್ಲಿ ಜ್ಞಾನಿಯು ನಾಮ

ರೂಪಗಳಿಂದ ಮುಕ್ತನಾಗಿ ಪರಾತ್ಪರ ದಿವ್ಯ ಪುರುಷನಲ್ಲಿ ಪ್ರವೇಶಿಸುವನು"—ಎಂಬ ಮಾತಿನಲ್ಲಿ ನದಿ ಮತ್ತು ಸಮುದ್ರಗಳ ಹೋಲಿಕೆ ಅರ್ಥವತ್ತಾಗಿದೆ; ಮತ್ತು ಮೋಕ್ಷ ಕಲ್ಪನೆಯನ್ನು ತಂದುಕೊಡುವುದಕ್ಕೆ ಸಹಾಯಕವಾಗಿದೆ.

ಇನ್ನು ಕಠೋಪನಿಷತ್ತಿನ ಎರಡು ಶ್ಲೋಕಗಳನ್ನು ಇಲ್ಲಿ ನೋಡಬಹುದು :

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥
ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥

"ಈ ಶರೀರವೇ ಒಂದು ರಥ. ಆತ್ಮನು ಅದರಲ್ಲಿರುವ ರಥಿ. ಬುದ್ಧಿಯೇ ಸಾರಥಿ, ಮನಸ್ಸೇ ಕಡಿವಾಣ"—ಎಂದು ತಿಳಿದುಕೊಳ್ಳಬೇಕು. ಇಂದ್ರಿಯಗಳೇ ಕುದುರೆಗಳು, ವಿಷಯ ಗಳು ಅವು ಸಾಗುವ ಮಾರ್ಗ, ಇಂದ್ರಿಯ ಮತ್ತು ಮನಸ್ಸುಗಳಿಂದ ಯುಕ್ತನಾದ ಆತ್ಮ ಸುಖದುಃಖಗಳ ಭೋಕ್ತೃವೆಂದು ಜಾಣರು ಹೇಳುತ್ತಾರೆ". ಹೀಗೆ ಶರೀರವೆಂಬ ರಥವನ್ನ ರಿದ ಆತ್ಮರಥಿಕನ ಮಾರ್ಗವನ್ನು ಇಲ್ಲಿ ಚಿತ್ರಿಸಿದ್ದಾರೆ.

ಇಂತಹ ಅನೇಕ ಮಾತುಗಳಲ್ಲಿ ಋಷಿಗಳ ಅನುಭಾವ, ಕಾವ್ಯವಾಣಿಯಲ್ಲಿ ಹೊ ಹೊಮ್ಮಿದೆ. ಅಂತಹ ಕಡೆಗಳಲ್ಲಿ ಅವರು ದಾರ್ಶನಿಕ ಕವಿಗಳಾಗಿದ್ದಾರೆ. ಸಾಹಿತ್ಯ ಮತ ಜೀವನ ದರ್ಶನಗಳು ಇಲ್ಲಿ ಮೇಳವಿಸಿ ಸಾರ್ಥಕಗೊಂಡಿವೆ. ದೃಷ್ಟಾರರಾಗಿ ಅವರು ಸತ್ಯ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಂಡಿದ್ದಾರೆ; ಕವಿಗಳಾಗಿ ಹೃದಯ ತುಂಬಿ ಹಾಡಿದ್ದಾ ಸ್ವಯಂಭುವಾಗಿ ತೇಜಸ್ಸಿನಿಂದ ಕಂಗೊಳಿಸಿದ್ದಾರೆ.

ಉಪನಿಷತ್ತಿನ ಋಷಿಗಳ ಈ ಸಾಧನೆ ಮತ್ತು ಸಿದ್ಧಿಗಳು ಭರತಖಂಡದ ಭವಿಷ್ಯ ಜೀ ನದ ರೀತಿ ನೀತಿಗಳನ್ನು ಅಂದೇ ನಿರ್ದಿಷ್ಟವಾಗಿ ರೂಪಿಸಿದುವು. ಧಾರ್ಮಿಕ ಭಾವನೆಯನ ಭರತಖಂಡದ ಜನಜೀವನದಲ್ಲಿ ಓತಪ್ರೋತಗೊಳಿಸಿದವರು ಅವರು. ಭಾರತೀಯ ಸಂಸ್ಕೃ ಚೈತನ್ಯ ಅಂದೇ ರೂಪಿತವಾಯಿತು. ಅದು ಮುಂದೆ ಅಶ್ವತ್ಥವೃಕ್ಷದಂತೆ ವಿಶಾಲವಾ ವ್ಯಾಪಕವಾಗಿ ಬೆಳೆಯಿತು, ಅನೇಕ ರೂಪಗಳನ್ನು ತಳೆಯಿತು. ಧರ್ಮದಲ್ಲಿ, ಸಾಹಿತ್ಯದ ಜನಜೀವನದ ಎಲ್ಲ ಅಂಗಗಳಲ್ಲಿಯೂ ಬಹುಮುಖವಾಗಿ ಬೇರುಬಿಟ್ಟಿತು. ಅನೇಕ ಏ ಪೇರುಗಳನ್ನು ಅದು ಕಂಡಿರಬಹುದು. ಮಾನವನ ಸಹಜವಾದ ದೌರ್ಬಲ್ಯಗಳಿಗೆ ಒಳಗಾ ಅದರ ಕಾಂತಿ ಆಗಾಗ ಮಸುಳಿಸಿರಬಹುದು. ಆದರೂ ಉಪನಿಷತ್ತುಗಳು ರೂಪಿಸಿದ ಆಧ ತ್ಮದ ಪ್ರಭೆ ಇಂದಿಗೂ ಆರಿಲ್ಲ. ಅದು ಭರತಖಂಡದ ಸಂಸ್ಕೃತಿಯ ಅಡಿಗಲ್ಲು ಮತ ಮುಡಿಯ ಕಿರೀಟವಾಗಿ ಉಳಿದಿದೆ. ಶೋಫೆನ್‌ಹಾವರ್ ಹೇಳುವ ಈ ಕೆಳಗಿನ ಮಾ ಉಪನಿಷತ್ತುಗಳ ಮಹತ್ತ್ವವನ್ನರಿತ ತತ್ತ್ವಜ್ಞಾನಿಯೊಬ್ಬನ ಸಾರ್ಥಕ ಉದ್ಗಾರವಾಗಿ

"In the whole world there is no study so beneficial and elevating as that of Upanishads. It has been the solace of m life; it will be the solace of my death."

## ಇತಿಹಾಸ ಪುರಾಣಗಳು

ಿಷತ್ತುಗಳ ದಿವ್ಯ ಅಮರ ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿ ಧರ್ಮವು
ತೆಯು ಉಸಿರಾಗುವಂತೆ ಮಾಡಿದ ಕೀರ್ತಿ ಇತಿಹಾಸ ಪುರಾಣಗಳದು. ಉಪನಿಷತ್ತು
ಮುಂದಿಟ್ಟ ನಿರ್ವಿಕಲ್ಪ ಬ್ರಹ್ಮನ ಸ್ವರೂಪ ಸಾಮಾನ್ಯ ಜನರಿಗೆ ಸುಲಭವಾಗಿ
ಕದ ತತ್ತ್ವವಾಗಿತ್ತು. ಅದನ್ನು ಎಲ್ಲರಿಗೂ ನಿಲುಕುವಂತೆ ಮಾಡುವ ಪ್ರಯತ್ನ
ಯಬೇಕಾಗಿತ್ತು. ಬೌದ್ಧ ಜೈನಧರ್ಮಗಳು ಒಂದು ರೀತಿಯಲ್ಲಿ ಅದನ್ನು ನಿರ್ಗ
ಪ್ರಯತ್ನಿಸಿದುವು. ಆದರೆ ವೈದಿಕ ಧರ್ಮದ ಆವರಣದಲ್ಲಿಯೇ ಇದ್ದು ಅದನ್ನು
ಸಿದುವು ಎಂದರೆ ಇತಿಹಾಸ ಪುರಾಣಗಳು. ಉಪನಿಷತ್ತಿನ ಹೂರಣವನ್ನು ಅನೇಕ
ಗಳೊಡನೆ ಸೇರಿಸಿ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನಾಗಿ ಮಾಡಿ ಎಲ್ಲ ಮಟ್ಟದ
ರುಚಿಗೂ ಅಳವಡುವಂತಹ ಸಮಾರಾಧನೆಯನ್ನು ಇವು ಮಾಡಿದುವು. ಭರತ
ಷದ ಸಂಸ್ಕೃತಿಗೆ ಅಚ್ಚಳಿಯದ ಸಾಕಾರಸ್ವರೂಪವನ್ನು ತಮ್ಮ ಕಲ್ಪನಾಪ್ರತಿಭೆಯಿಂದ
ದುವು.

ದೇವತೆಗಳನ್ನು ಕುರಿತ ಕಲ್ಪನೆಯ ಕಥೆಗಳು ವೇದಗಳ ಕಾಲದಿಂದಲೂ ಬೆಳೆದು
ದ್ದುವು. ಆರ್ಯರು ತಮ್ಮ ಜೀವನದ ಸೋಲು ಗೆಲುವುಗಳನ್ನೇ ದೇವತೆಗಳಿಗೆ ಆರೋಪಿಸಿ
ಗಳನ್ನು ಕಟ್ಟುತ್ತಿದ್ದುದೂ ಉಂಟು. ಇತಿಹಾಸ ಪುರಾಣಗಳಲ್ಲಿ ಈ ಕಲ್ಪನಾಪ್ರತಿಭೆ
ಕವಾಗಿ ಬೆಳೆದಿದೆ. ಕೆಲವು ವೇಳೆ ಅದು ಬಹಳ ಅರ್ಥವತ್ತಾಗಿ ಇಡೀ ಜನಾಂಗದ
ತಿಯನ್ನೇ ಪ್ರತಿಬಿಂಬಿಸುವಷ್ಟು ಸಶಕ್ತವಾಗಿ ಮೂಡಿಬಂದಿದೆ.

ಈ ಅವಧಿಯಲ್ಲಿ ಭರತಖಂಡ ಧಾರ್ಮಿಕಜಾಗ್ರತಿಯ ಅನೇಕ ಸೆಳೆತಗಳಿಗೆ ಸಿಕ್ಕಿತ್ತು.
ದ ಇತರ ಜನಾಂಗಗಳು ಆರ್ಯ ಸಂಸ್ಕೃತಿಯ ವಲಯದೊಳಕ್ಕೆ ಬರತೊಡಗಿದ್ದರು.
ಲ್ಲರನ್ನೂ ಒಳಗೊಳ್ಳಬಲ್ಲಷ್ಟು ವ್ಯಾಪಕವಾಗಿ ಧಾರ್ಮಿಕ ಕಲ್ಪನೆ ಬದಲಾಗುತ್ತಿತ್ತು.
ನಾಂಗಗಳ ಅನೇಕ ದೇವತೆಗಳನ್ನು ಆರ್ಯರು ಅಂಗೀಕರಿಸಿದರು. ವೇದಗಳಲ್ಲಿನ ಇಂದ್ರ,
ಣ ಮೊದಲಾದ ದೇವತೆಗಳ ಸ್ಥಾನ ಕ್ರಮೇಣ ತಗ್ಗತೊಡಗಿತು. ವೇದಕಾಲದಲ್ಲಿ
ನೂ ಪ್ರಮುಖವಾಗಿಲ್ಲದ ಶಿವ, ವಿಷ್ಣು ಮುಂದೆ ಬರುತ್ತಿದ್ದರು. ವೇದದ 'ರುದ್ರ'
ಸಿಂಧು ಸಂಸ್ಕೃತಿಯ 'ಶಿವ' ಇವರಲ್ಲಿ ಅಭೇದ ಕಲ್ಪಿತವಾಯಿತು. ಸಿಂಧು
ತಿಯಲ್ಲಿದ್ದಂತೆ ಅವನನ್ನು ಲಿಂಗರೂಪದಲ್ಲಿಯೂ ಪೂಜಿಸುವುದನ್ನು ವೇದಧರ್ಮ
ಕರಿಸಿತು. ವಿಷ್ಣುವಿನ ಅವತಾರವೆಂದು ಕೃಷ್ಣನ ಪಾತ್ರದ ಕಲ್ಪನೆ ಬೆಳೆದು
ಗಿ ಅವನ ಸುತ್ತ ಅನೇಕ ಕಥೆಗಳು ಬೆಳೆದುವು. ಮೊದಲು ಗೋಪಾಲಕನಾಗಿದ್ದ
, ಮಹಾಭಾರತದ ರಚನೆಯಲ್ಲಿ ಗೀತೆಯನ್ನು ಬೋಧಿಸಿದ ಭಗವಂತನಾಗಿ
ಮಿಸಿದ. ರಾಮನೂ ವಿಷ್ಣುವಿನ ಅವತಾರವಾಗಿ ರಾಮಾಯಣದಲ್ಲಿ ಪೂರ್ಣ
ಪವನ್ನು ಪಡೆದ. ಈ ಶೈವ ವೈಷ್ಣವ ಶಾಖೆಗಳೆರಡೂ ಹಿಂದೂಧರ್ಮದ ಎರಡು
ಮುಖಗಳಾಗಿ ಪರಿಣಮಿಸಿದುವು. ಇವುಗಳೊಡನೆ ಶಕ್ತಿಯ ಉಪಾಸನೆಯನ್ನೇ

ಪ್ರಧಾನವಾಗಿ ಕೈಕೊಂಡ ಶಾಕ್ತರೂ ಗಣಪತಿಯ ಉಪಾಸಕರಾದ ಗಾಣಾಪತ್ಯರೂ ಇತರ ಅನೇಕ ಶಾಖೆಗಳೂ ತಲೆದೋರಿದುವು. ಅವುಗಳನ್ನೆಲ್ಲಾ ತನ್ನಲ್ಲಿ ಅಡಗಿಸಿಕೊಂಡು ವಿಶಾಲವಾಗಿ ಬೆಳೆಯಿತು, ಹಿಂದೂಧರ್ಮ.

ಹಿಂದೂಧರ್ಮಕ್ಕೆ ಈ ವ್ಯಾಪಕತೆಯನ್ನು ತಂದುಕೊಟ್ಟವು ಪುರಾಣಗಳು ಮತ್ತು ಇತಿಹಾಸಗಳು—ಎನ್ನಬಹುದು. ಇವುಗಳು ಹುಟ್ಟಿದುದೇ ಮುಖ್ಯವಾಗಿ ಧರ್ಮದ ತಾತ್ತ್ವಿಕ ಆದರ್ಶವನ್ನು ಜನರ ವ್ಯಾವಹಾರಿಕ ಜೀವನಕ್ಕೆ ಅಳವಡಿಸಿಕೊಡಲು. ಇನ್ನೊಂದು ಮುಖ್ಯವಾದ ಅಂಶವೇನೆಂದರೆ ವೇದ ಉಪನಿಷತ್ತುಗಳ ಯುಗದಿಂದ ಮುಂದೆ ವರ್ಣ ವಿಭೇದಗಳ ತೊಡಕು ಹೆಚ್ಚಿತ್ತು. ವೇದ ಮೊದಲಾದ ಧರ್ಮಗ್ರಂಥಗಳ ಜ್ಞಾನ ಭಂಡಾರ ಕೇವಲ ಕೆಲವರ ಸ್ವತ್ತಾಗಿತ್ತು. ಶೂದ್ರರಿಗೂ ಸ್ತ್ರೀಯರಿಗೂ ವೇದವನ್ನು ಓದಲು ಅಧಿಕಾರವಿಲ್ಲವೆಂಬ ಮಟ್ಟಕ್ಕೆ ವೈದಿಕ ಸಂಸ್ಕೃತಿ ಇಳಿದಿತ್ತು. ಧರ್ಮದಿಂದ ಜನತೆ ವಂಚಿತವಾಗಿತ್ತು. ಅದನ್ನು ಕಂಡು ಒಂದು ಕಡೆ ಬೌದ್ಧ ಜೈನ ಮತಗಳು ತಲೆದೋರಿದಂತೆ, ವೈದಿಕ ಧರ್ಮದಲ್ಲಿಯೂ ಪ್ರತಿಕ್ರಿಯೆಯುಂಟಾಯಿತು. ಜನಸಾಮಾನ್ಯಕ್ಕಾಗಿ ಋಷಿಗಳ ಹೃದಯ ಅನುಕಂಪೆಯಿಂದ ಮಿಡಿಯಿತು. ಆಗ ಅವರು ವರ್ಣಗಳ ತಾರತಮ್ಯವಿಲ್ಲದೆ ಎಲ್ಲರೂ ಓದಬಹುದಾದ ಗ್ರಂಥಗಳಲ್ಲಿ ವೇದೋಪನಿಷತ್ತುಗಳ ಸಾರವನ್ನೆಲ್ಲಾ ಅಡಕಗೊಳಿಸಲು ಪ್ರಯತ್ನಿಸಿದರು. ಅದರ ಫಲವಾಗಿ ಅನೇಕ ಪುರಾಣಗಳೂ ರಾಮಾಯಣ ಮಹಾಭಾರತ ಮಹಾಕಾವ್ಯಗಳೂ ಸೃಷ್ಟಿಯಾದುವು. ಮಹಾಭಾರತವಂತೂ ಭಗವದ್ಗೀತೆಯನ್ನು ಪಡೆದು ಪಂಚಮ ವೇದವೆಂದೇ ಪ್ರಸಿದ್ಧವಾಯಿತು.

ರಾಮಾಯಣ ಮಹಾಭಾರತಗಳನ್ನು ಇತಿಹಾಸಗಳೆಂದು ಕರೆಯಲಾಗಿದೆ. ರಾಮ ಕೃಷ್ಣರ ಮತ್ತು ಕೌರವ ಪಾಂಡವರ ಚರಿತ್ರೆಯನ್ನು ಅವು ತಿಳಿಸುತ್ತವೆಂಬಷ್ಟೇ ಕಾರಣದಿಂದ ಅವನ್ನು ಇತಿಹಾಸವೆಂದು ಕರೆದಿಲ್ಲ. ಇಡಿ ಭರತಖಂಡದ ಸಂಸ್ಕೃತಿಯ ಸಮಗ್ರ ಸ್ವರೂಪದ ಇತಿಹಾಸವನ್ನು ಅವು ಚಿತ್ರಿಸುತ್ತವೆ. ಇವುಗಳನ್ನು ಕುರಿತು ಸ್ವಾಮಿ ವಿವೇಕಾನಂದರು ಹೇಳುವ ಈ ಮಾತುಗಳನ್ನು ಗಮನಿಸಬಹುದು[21] :

> "In fact The Ramayana and Mahabharata are the two encyclopaedias of Ancient Aryan life and wisdom, portraying an ideal civilization, which humanity has yet to aspire after."

ಪ್ರಾಚೀನ ಭಾರತದ ಸಾರಸರ್ವಸ್ವವನ್ನು ಈ ಗ್ರಂಥಗಳು ಒಳಗೊಂಡಿವೆ. ಮಾನವನು ಬಯಸಬಹುದಾದ ಅತ್ಯುಚ್ಚ ಸಂಸ್ಕೃತಿಯ ಶಿಖರಗಳನ್ನು ಇವುಗಳಲ್ಲಿ ಕಾಣುತ್ತೇವೆ. ಕೇವಲ ಶಿಖರಗಳನ್ನಲ್ಲ, ಜೀವನದ ಎಲ್ಲ ಮುಖಗಳನ್ನೂ ಇವು ಚಿತ್ರಿಸುತ್ತವೆ. ತಗ್ಗು ಹಳ್ಳಗಳನ್ನೂ ಕಣಿವೆ ಜಾರುಗಳನ್ನೂ ತೋರಿಸಿ ಆ ಮೂಲಕ ಶಿಖರದ ಔನ್ನತ್ಯ ಮನವಟ್ಟಾಗುವಂತೆ ಮಾಡುತ್ತವೆ.

ರಾಮಾಯಣದ ಬೆಳವಣಿಗೆ ಬಹಳ ಕುತೂಹಲಕಾರಿಯಾದ ಅಂಶ. ಈಗಿರುವ ರೂಪವನ್ನು ಪಡೆಯಲು ನಾಲ್ಕು ಘಟ್ಟಗಳಲ್ಲಿ ಅದರ ವಿಕಾಸವಾಗಿದೆಯೆಂಬುದು ವಿದ್ವಾಂಸರ

ಅಭಿಪ್ರಾಯ.[22] ರಾಮನು ರಾಜ್ಯಚ್ಯುತನಾಗಿ ಹಿಮಾಲಯದ ಕಡೆಗೆ ತಪಸ್ಸಿಗೆ ಹೊರಟ ನೆಂಬುದು ಪ್ರಾರಂಭದಲ್ಲಿ ಪ್ರಚಲಿತವಾಗಿದ್ದ ಕಥೆ. ಅವನು ಹೊರಟದ್ದು ಹಿಮಾಲಯದ ಕಡೆಗಲ್ಲ, ದಕ್ಷಿಣ ಭಾರತದ ಕಡೆಗೆ—ಎಂಬ ಬದಲಾವಣೆ ಅನಂತರ ಆಗಿರಬೇಕು. ಅಲ್ಲದೆ ಸೀತೆಯನ್ನು ರಾವಣ ಅಪಹರಿಸಿದ ಸನ್ನಿವೇಶ, ಮತ್ತು ಅದಕ್ಕನುಗುಣವಾಗಿ ಘಟನೆಗಳು ಮುಂದೆ ಬೆಳೆದುವು. ಆ ಮೂಲಕ ಉತ್ತರ ದಕ್ಷಿಣ ಸಂಸ್ಕೃತಿಗಳ ಸಂಗಮವನ್ನು ಸೂಚಿಸು ವುದಕ್ಕೆ ಸಹಾಯಕವಾಗಿ ಈ ಕಥೆ ರೂಪುಗೊಂಡಿತು. 'ದಶರಥ ಜಾತಕ'ದಲ್ಲಿ ಸೀತೆಯ ಅಪಹರಣದ ವಿಷಯ ಸೂಚಿತವಾಗಿಲ್ಲದಿರುವುದೂ ಇದೇ ಅಭಿಪ್ರಾಯಕ್ಕೆ ಸಮರ್ಥನೆ ಯನ್ನೀಯುತ್ತದೆ. ಸೀತೆಯ ಪಾತ್ರವೆಲ್ಲಾ ಅನಂತರ ಬೆಳೆದುಬಂದುದೆಂದು ಅಭಿಪ್ರಾಯ ಪಡಲಾಗಿದೆ. ಋಗ್ವೇದದಲ್ಲಿ 'ಸೀತೆ' ಎಂಬ ಹೆಸರು ವ್ಯವಸಾಯದ ದೇವತೆಯನ್ನು ಸೂಚಿಸುತ್ತದೆ. ರಾಮಾಯಣದಲ್ಲಿ ಆಕೆ ನೇಗಿಲ ತುದಿಗೆ ಸಿಕ್ಕವಳೆಂದು ಹೇಳಿ ಆಕೆಯನ್ನು ಭೂಜಾತೆಯನ್ನಾಗಿ ಮಾಡಿರುವುದರಲ್ಲಿ ಬಹುಶಃ ಆ ಅರ್ಥ ಸೂಚಿತವಾಗಿರಬಹುದು. ಹಾಗೆಯೇ ಋಗ್ವೇದದ ಇಂದ್ರನೇ ಇಲ್ಲಿಯ ರಾಮ. ಇಂದ್ರ ವೃತ್ರಾಸುರರ ಯುದ್ಧವೇ ಇಲ್ಲಿ ರಾಮರಾವಣರ ಯುದ್ಧವಾಗಿ ಪರಿಣಮಿಸಿದೆ. ಹೀಗೆ ಋಗ್ವೇದದ ಪೌರಾಣಿಕ ಕಥೆ ರಾಮಾಯಣದ ರೂಪವನ್ನು ಪಡೆದಿದೆ—ಎಂದು ಹೇಳುವವರೂ ಉಂಟು. ಇದು ಹೇಗೇ ಇರಲಿ, ಋಷಿ ವಾಲ್ಮೀಕಿಯ ಕೈಯಲ್ಲಿ ರಾಮಾಯಣ ಅತ್ಯಂತ ಸುಂದರವಾದ, ಶಕ್ತಿ ಯುತವಾದ ಹಾಗೂ ಆದರ್ಶಪ್ರಾಯವಾದ ಕಲಾಕೃತಿಯಾಗಿ ಪರಿಣಮಿಸಿತು.

ಹೀಗೆ ವಾಲ್ಮೀಕಿ ತನಗಿಂತ ಹಿಂದೆ ಪ್ರಚಲಿತವಾಗಿದ್ದ ಕಥೆಗಳನ್ನೆಲ್ಲಾ ಗಮನಿಸಿ ಸ್ವಲ್ಪ ಹೆಚ್ಚು ಕಡಮೆ ಇಂದಿನ ರೂಪಕ್ಕೆ ರಾಮಾಯಣವನ್ನು ತಂದುದು ಕ್ರಿ. ಪೂ. ೩ನೆಯ ಶತಮಾನದಲ್ಲಿ ಎಂಬುದು ಕೆಲವರು ವಿದ್ವಾಂಸರ ಅಭಿಪ್ರಾಯ.[23] ರಾಮಾಯಣ ಮಹಾಭಾರತಗಳ ಕಾಲದ ವಿಚಾರವಾಗಿ ನಿರ್ದಿಷ್ಟವಾಗಿ ಏನನ್ನೂ ಹೇಳಲಾಗದೇ ಇರು ವಷ್ಟು ಅಭಿಪ್ರಾಯಭೇದಗಳಿವೆ.

> "Since the Ramayana refers to Buddha as nastika or a denying spirit, its composition is said to be of a later date than that of the Mahabharata though its story may be of an earlier period."[24]

ಎಂಬುದಾಗಿ ರಾಧಾಕೃಷ್ಣನ್ ಅವರು ಹೇಳಿದರೆ,

> "While there are numerous references to the Ramayana and its author Valmiki in the Mahabharata, there is not a single reference to Bharata war, or to the heroes of the Mahabharata, in the Ramayana, which shows that the Ramayana in its present form existed prior to the time when the Mahabharata assumed its final form."[25]

ಎಂಬುದು ಇನ್ನೊಂದು ಅಭಿಪ್ರಾಯವಾಗಿದೆ. ಕ್ರಿ.ಪೂ. ೫ನೆಯ ಶತಮಾನದ ಹೊತ್ತಿಗೆ

ಆಗಲೇ ಮಹಾಭಾರತದ ಮೂಲರೂಪ ಸಿದ್ಧರಾಗಿತ್ತೆಂಬುದು ಮೆಕ್‌ಡಾನೆಲ್ ಅವರ ಅಭಿಪ್ರಾಯ. ಈ ಕಾವ್ಯಗಳು ಯಾವುದೋ ಒಂದು ಕಾಲದಲ್ಲಿ ರಚಿತವಾದುವೆಂದು ಹೇಳುವುದೇ ಸೂಕ್ತವಲ್ಲವೆನ್ನುವವರೂ ಇದ್ದಾರೆ. ಅದರಲ್ಲಿಯೂ ಮಹಾಭಾರತಕ್ಕೆ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ. ಅನೇಕ ಶತಮಾನಗಳವರೆಗೂ ಅದು ಬೆಳೆದು ಇಂದಿನ ರೂಪವನ್ನು ಧರಿಸಿತು. ರಾಮಾಯಣದಲ್ಲಿ ಅದರ ಪ್ರಾರಂಭದ ಭಾಗ ಮತ್ತು ಉತ್ತರ ರಾಮಾಯಣವನ್ನು ಬಿಟ್ಟರೆ ಇನ್ನುಳಿದ ಭಾಗವೆಲ್ಲಾ ಏಕಕವಿಕೃತವೆಂದು ಸಾಮಾನ್ಯವಾಗಿ ಒಪ್ಪಿಕೊಳ್ಳಬಹುದು. ಆದರೆ ಮಹಾಭಾರತಕ್ಕೆ ಈ ಮಾತನ್ನು ಅನ್ವಯಿಸುವುದು ಕಷ್ಟ. ಅದರ ವ್ಯಾಪ್ತಿ, ವಿಸ್ತಾರ ವೈವಿಧ್ಯಗಳನ್ನು ನೋಡಿದರೆ ಅದು ಏಕಕವಿಕೃತವೆನ್ನುವುದಕ್ಕಿಂತ ಒಂದು ಜನಾಂಗದ ಸಮಷ್ಟಿಮನಸ್ಸಿನ ಹಲವಾರು ಶತಮಾನಗಳ ಕಾಣಿಕೆ ಎನ್ನಬಹುದು. ಈ ದೃಷ್ಟಿಯಿಂದಲೇ ವಿಂಟರ್‌ನಿಟ್ಸ್ ಅವರು ಅದರ ಕಾಲವನ್ನು ಚರ್ಚಿಸುತ್ತ ಕ್ರಿ. ಪೂ. ೪ನೆಯ ಶತಮಾನದಿಂದ ಅದರ ರಚನೆ ಪ್ರಾರಂಭವಾಗಿ ಕ್ರಿ. ಶ. ೪ನೆಯ ಶತಮಾನದ ಹೊತ್ತಿಗೆ ಅದು ಈಗಿನ ರೂಪಕ್ಕೆ ಬಂದು ಪೂರ್ಣಗೊಂಡಿರಬೇಕೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.[26] ಎಂದರೆ ರಾಮಾಯಣದ ರಚನೆಗಿಂತ ಮೊದಲೇ ಮಹಾಭಾರತದ ರಚನೆ ಪ್ರಾರಂಭವಾಗಿ ರಾಮಾಯಣ ಮುಗಿದ ನಂತರವೂ ಅದು ಬೆಳೆಯುತ್ತಲೇ ಇತ್ತು—ಎನ್ನಬಹುದು. ಅದರೂ ಒಟ್ಟಿನಲ್ಲಿ ಸ್ಥೂಲವಾಗಿ ಹೇಳಬಹುದಾದರೆ ಈ ಎರಡು ಮಹಾಕಾವ್ಯಗಳೂ, ಕ್ರಿಸ್ತಶಕದ ಪ್ರಾರಂಭದ ವೇಳೆಗಾಗಲೇ ಪೂರ್ಣಗೊಂಡು ಭಾರತದ ವಿವಿಧ ಜನಾಂಗಗಳನ್ನು ಬೆಸೆಯುವ ಮತ್ತು ಜನಜೀವನವನ್ನು ರೂಪಿಸುವ ಪ್ರಬಲಶಕ್ತಿಗಳಾಗಿ ಪರಿಣಮಿಸಿದ್ದುವು.

ಹಿಂದೂ ಸಂಸ್ಕೃತಿಯ ಅತ್ಯುಚ್ಚವಾದ ಆದರ್ಶಗಳನ್ನು ಪ್ರತಿಬಿಂಬಿಸುವ ನಿರ್ಮಲ ದರ್ಪಣವಾಗಿ ಪರಿಣಮಿಸಿತು ರಾಮಾಯಣ. ಇದಲ್ಲದೆ ಆರ್ಯ ಸಂಸ್ಕೃತಿಯ ಪ್ರಭಾವ ದಕ್ಷಿಣಕ್ಕೆ ವ್ಯಾಪಿಸಿ ಇಲ್ಲಿ ವಿಜಯವನ್ನು ಪಡೆದುದರ ಸಾಂಕೇತಿಕ ನಿರೂಪಣೆ ರಾಮಾಯಣದಲ್ಲಿದೆ—ಎಂದು ಹೇಳುವವರಿದ್ದಾರೆ.[27] ಈ ಅಭಿಪ್ರಾಯವನ್ನು ರಾಮಾಯಣದ ಕಥೆಯ ಬೆಳವಣಿಗೆಯಲ್ಲಿ ಕಂಡುಬರುವ ವಿವಿಧ ಹಂತಗಳಿಂದ ಸಮರ್ಥಿಸಬಹುದೆಂಬುದು ವಿದ್ವಾಂಸರ ಅಭಿಪ್ರಾಯ. ಅದರಲ್ಲಿ ಸತ್ಯಾಂಶವಿಲ್ಲದೇ ಇಲ್ಲ. ಆ ದೃಷ್ಟಿಯಿಂದ 'ದಶರಥ ಜಾತಕ'ವನ್ನೂ ಇಂದಿನ ರಾಮಾಯಣ ಕಥೆಯನ್ನೂ ರಾಮಾಯಣದ ವಿವಿಧ ಸನ್ನಿವೇಶಗಳನ್ನೂ ವ್ಯಕ್ತಿಗಳನ್ನೂ ವಿಮರ್ಶಾತ್ಮಕವಾಗಿ ಅಭ್ಯಸಿಸುವುದು ಒಳ್ಳೆಯದು.

ಒಟ್ಟಿನಲ್ಲಿ ಹೇಳಬಹುದಾದರೆ ಇಲ್ಲಿ ಭರತಖಂಡದ ಉತ್ತರ ದಕ್ಷಿಣ ಸಂಸ್ಕೃತಿಗಳ ಸಂಘರ್ಷವಿದೆ, ಸಂಗಮವಿದೆ. ಆ ಕಾಲದ ಭಾರತೀಯ ಸಂಸ್ಕೃತಿಯ ಚಿತ್ರಗಳಾದ ಅಯೋಧ್ಯೆಯ 'ಆರ್ಯ ಸಂಸ್ಕೃತಿ,' ಕಿಷ್ಕಿಂಧೆಯ 'ವಾನರ ಸಂಸ್ಕೃತಿ,' ಲಂಕೆಯ 'ರಾಕ್ಷಸ ಸಂಸ್ಕೃತಿ'—ಇವುಗಳ ಸಮನ್ವಯ ಮತ್ತು ಸಾಮರಸ್ಯಗಳು ಇಲ್ಲಿ ಸಿದ್ಧಿಸಿವುವು. ಭಾರತೀಯ ಸಂಸ್ಕೃತಿಯನ್ನು ಒಂದಾಗಿ ಬೆಸೆದ ಮಹಾಶಕ್ತಿಗಳಲ್ಲಿ ಮೊತ್ತಮೊದಲನೆಯದು ರಾಮಾಯಣವೆನ್ನಬಹುದು. ಈ ಅರ್ಥದಲ್ಲಿ ರಾಮಾಯಣ ಆದಿಕಾವ್ಯ, ವಾಲ್ಮೀಕಿ ಆದಿ

ಕವಿ. ಭಾರತದ ವೈವಿಧ್ಯಮಯ ವಿರಾಟ್ ಜೀವನದ ನಾಟಕಕ್ಕೆ ಈ ಕವಿಕೋಗಿಲೆ ನಾಂದಿಯನ್ನು ಹಾಡಿದುದಲ್ಲದೆ ಸೂತ್ರಧಾರ ಶಕ್ತಿಯೂ ಆಗಿ ಪರಿಣಮಿಸಿದನು.

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ
ಆರುಹ್ಯ ಕವಿತಾ ಶಾಖಾಂ ವಂದೇ ವಾಲ್ಮೀಕಿ ಕೋಕಿಲಂ॥

ಎಂಬ ಸುಂದರವಾದ ಸೂಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಕವಿ ಕೋಗಿಲೆಯ ಕೂಜನ ಭಾರತದ ಆದ್ಯಂತವೂ ಪ್ರತಿಧ್ವನಿಸಿತು. ಅನುರಣಿತವಾಗಿ ಅಣುವಣುವಿನಲ್ಲಿಯೂ ಆದರ್ಶದ ಕಂಪನಗಳನ್ನೆಬ್ಬಿಸಿತು. ವಾಲ್ಮೀಕಿಯ ಕಂಠದಿಂದ ಹೊರಹೊಮ್ಮುತ್ತಿರುವ ನಿತ್ಯಶ್ರುತವಾದ ಗಾನವೆನ್ನಬಹುದು ರಾಮಾಯಣವನ್ನು.

ಭಾರತೀಯ ಜನಜೀವನದ ಮುಂದೆ ಈ ಕಾವ್ಯ ಕೆಲವು ಶಾಶ್ವತವಾದ ಜೀವನ ಮೌಲ್ಯಗಳನ್ನು ಮಂಡಿಸಿತು. ಉಪನಿಷತ್ತುಗಳಂತೆ ತಾತ್ತ್ವಿಕವಾದ ಜಿಜ್ಞಾಸೆಯ ರೂಪದಲ್ಲಿ ಅವುಗಳನ್ನು ಮಂಡಿಸಲಿಲ್ಲ. ರಸಮಯವಾದ ಸಾಹಿತ್ಯದ ಮಾರ್ಗದಿಂದ ಜನರ ಹೃದಯವನ್ನು ನೇರವಾಗಿ ಮುಟ್ಟಿತು. ಪಿತೃಭಕ್ತಿ, ಭ್ರಾತೃಪ್ರೇಮ, ಸ್ವಾಮಿನಿಷ್ಠೆ, ಬ್ರಹ್ಮಚರ್ಯದ ಮಹತ್ಸಾಧನೆ, ಪಾತಿವ್ರತ್ಯದ ಪವಿತ್ರ ಶಕ್ತಿ—ಈ ಮೊದಲಾದ ಮಹೋನ್ನತ ಗುಣಗಳು ರಾಮಾಯಣದ ಪಾತ್ರಗಳಲ್ಲಿ ಮುಗಿಲು ಮುಟ್ಟಿದುವು. ಒಳಿತು ಕೆಡುಕುಗಳನ್ನು ಅಕ್ಕಪಕ್ಕಗಳಲ್ಲಿಟ್ಟು ಅವುಗಳಿಂದ ಜೀವನಕ್ಕೆ ಆಗುವ ಶುಭಾಶುಭಗಳನ್ನು ಜೀವಂತ ಪಾತ್ರಗಳ ಮೂಲಕ ರಾಮಾಯಣ ಚಿತ್ರಿಸಿತು. 'ಶಿವೇತರ ಕ್ಷತಿ'ಗೆ ಕಾರಣವಾಯಿತು. ರಾಮ, ಲಕ್ಷ್ಮಣ, ಭರತ, ವಾಲಿ, ಸುಗ್ರೀವ, ಆಂಜನೇಯ, ರಾವಣ, ವಿಭೀಷಣ, ಸೀತೆ, ಕೈಕೆ, ಮಂಥರೆ—ಈ ಮೊದಲಾದ ಪಾತ್ರಗಳು ಆ ಕಾಲದ ಸಂಸ್ಕೃತಿಯ ಎಲ್ಲ ಮಟ್ಟಗಳನ್ನೂ ಪ್ರತಿಬಿಂಬಿಸಿ ತೋರಿಸುವಂತಿವೆ, ಒಳಿತು ಕೆಡುಕುಗಳ ಸಂಕೇತಗಳಂತಿವೆ. ಮಾನವ ಸ್ವಭಾವದ ಬಹುಮುಖಗಳನ್ನು ಕಂಡ ಮಹಾಕವಿಯ ಕುಂಚದಿಂದ ಅವು ಮೂಡಿಬಂದು ಇಡೀ ಜನಾಂಗದ ಮನಸ್ಸನ್ನೇ ಆವರಿಸಿದವು. ಆದುದರಿಂದಲೇ ಇದು ಹಿಮಾಲಯ ಹಿಂದೂಸಾಗರಗಳಂತೆ, ಬದುಕಿಗೆ ಬೇಕಾದ ಗಾಳಿಬೆಳಕುಗಳಂತೆ, ಭಾರತದ ಜೀವನದಲ್ಲಿ ಅಂತರ್ಗತವಾದ ಮಹಾಶಕ್ತಿಯಾಗಿ ಬೆಳೆಯಿತು. ಕಾಲಕಾಲಕ್ಕೆ ಹೊಸ ರೂಪವನ್ನು ತಳೆಯಿತು. ದೇಶಭಾಷೆಗಳ ಕಾವ್ಯ ಪ್ರನಾಳಿಕೆಗಳನ್ನು ಕಾಲದಿಂದ ಕಾಲಕ್ಕೆ ತುಂಬುತ್ತ ಹರಿದ ಹೊನ್ನುಹೊಳೆಯಾಯಿತು. ಬೆಳೆಯುತ್ತಿರುವ ಜನಜೀವನದ ಆಸೆ ಆಕಾಂಕ್ಷೆಗಳನ್ನೆಲ್ಲ ಪ್ರತಿಬಿಂಬಿಸಲು ಮತ್ತು ರೂಪಿಸಲು ಸಹಾಯಕವಾಯಿತು.

ಮಹಾಭಾರತದ ವ್ಯಾಪ್ತಿ ಸಂದರ್ಭದಲ್ಲಿ ಇದಕ್ಕಿಂತ ವಿಸ್ತಾರವಾದುದೆನ್ನಬಹುದು. ಗಾತ್ರದಲ್ಲಿ ಮತ್ತು ಪಾತ್ರಗಳ ವೈವಿಧ್ಯದಲ್ಲಿ ಅದು ರಾಮಾಯಣವನ್ನು ಮೀರಿಸುತ್ತದೆ. "ಮಹಾಭಾರತದಲ್ಲಿಲ್ಲದುದು ಪ್ರಪಂಚದಲ್ಲಿಯೇ ಇಲ್ಲ"—ಎಂಬ ಮಾತಿನಲ್ಲಿ ಸ್ವಲ್ಪ ಅತ್ಯುಕ್ತಿ ಇದ್ದರೂ ಸತ್ಯಾಂಶವಿದೆಯೆನ್ನಬಹುದು. ರಾಮಾಯಣದಂತೆ ಅದರ ಓಟ ಏಕಮುಖವಾದುದಲ್ಲ. ಅನೇಕ ಕಥೆಗಳೂ ಉಪಕಥೆಗಳೂ ಸೇರಿ ಬೆಳೆದುದನ್ನು ನೋಡಿದರೆ ಅದು ಏಕಕವಿ ಕೃತವೂ ಅಲ್ಲವೆಂಬುದು ವಿದ್ವಾಂಸರ ಅಭಿಪ್ರಾಯ. ವ್ಯಾಸರಿಂದ ಇದು ರಚಿತ

ವಾಯಿತೆಂಬ ಪರಂಪರೆಯ ಅಭಿಪ್ರಾಯದಲ್ಲಿಯೂ ಸತ್ಯವಿರುವಂತೆ ತೋರುತ್ತದೆ. ಅಪರ ಕಾಲದಲ್ಲಿ ಸುಮಾರು ೨೪೦೦೦ ಶ್ಲೋಕಗಳ ಭಾರತ ರಚಿತವಾಗಿ, ಅನಂತರ ಅದು ಅನೇಕ ಉಪಾಖ್ಯಾನಗಳನ್ನೂ ಕಥೆಗಳನ್ನೂ ಒಳಗೊಂಡು ಬೆಳೆಯತೊಡಗಿತೆನ್ನಬಹುದು. ಅದಕ್ಕಿಂತಲೂ ಹಿಂದೆ 'ಜಯ' ಎಂಬ ಹೆಸರಿನ ಕಥೆಯಾಗಿ ಅದು ಪ್ರಚಲಿತವಿದ್ದಂತೆ ತೋರುತ್ತದೆ. ಹೀಗೆ ಬಹುಶಃ ಕ್ರಿ.ಪೂ. ೪ನೆಯ ಶತಮಾನದಿಂದ ಪ್ರಾರಂಭವಾದ ರಚನೆ ಕ್ರಿ.ಶ. ೪ನೆಯ ಶತಮಾನದವರೆಗೂ ಬೆಳೆದು ಪೂರ್ಣಗೊಂಡಿತು. ಪ್ರಪಂಚದ ಮಹಾಕಾವ್ಯಗಳಲ್ಲೆಲ್ಲಾ ಅತಿ ದೊಡ್ಡದಾದುದೆಂದರೆ ಮಹಾಭಾರತವೇ. ಗಾತ್ರದಲ್ಲಿ ಮಾತ್ರವಲ್ಲ, ಯೋಗ್ಯತೆಯಲ್ಲಿ ಕೂಡ.

ಭಾರತದ ಸಂಸ್ಕೃತಿಯ ಎಲ್ಲ ಮುಖಗಳನ್ನೂ ಅದು ಚಿತ್ರಿಸುತ್ತದೆ. ಮಾನವ ಸ್ವಭಾವದ ಎಲ್ಲ ಪ್ರವೃತ್ತಿಗಳೂ ಅಲ್ಲಿ ವ್ಯಕ್ತಸ್ವರೂಪವನ್ನು ಪಡೆದಿವೆ. ಅಲ್ಲಿ ಬರುವ ಕಥೆ ಉಪಕಥೆಗಳೂ ಪಾತ್ರಗಳೂ ಸನ್ನಿವೇಶಗಳೂ ಆ ಕಾಲದ ಜನಜೀವನಕ್ಕೆ ಕನ್ನಡಿಯನ್ನು ಹಿಡಿದಿವೆ. ಮತ್ತು ಮುಂದಿನ ಜನಾಂಗದ ಜೀವನಕ್ಕೆ ಅವು ಮುನ್ನುಡಿಯಾಗಿವೆ. ಧರ್ಮ ಮತ್ತು ಸಂಸ್ಕೃತಿಗಳಿಗೆ ಅದೊಂದು ಮಹಾ ವಿಶ್ವಕೋಶವಾಗಿ ಪರಿಣಮಿಸಿತು. ಭೀಷ್ಮ, ದ್ರೋಣ, ಧರ್ಮರಾಯ, ಭೀಮ, ಕೌರವ, ಅರ್ಜುನ, ಕರ್ಣ, ಕುಂತಿ, ದ್ರೌಪದಿ ಮತ್ತು ಎಲ್ಲಕ್ಕೂ ಸೂತ್ರಧಾರಿಯಾದ ಕೃಷ್ಣ—ಎಷ್ಟೊಂದು ಪಾತ್ರಗಳು. ಎಷ್ಟೊಂದು ಮನೋಧರ್ಮಗಳು! ಇವುಗಳಲ್ಲಿ ಒಂದೊಂದೂ ತನ್ನ ವಿಶಿಷ್ಟತೆಯಿಂದ ಅದ್ವಿತೀಯವೆನಿಸಿದೆ. ಭಾರತ ಸಂಸ್ಕೃತಿಯ ಹೃದಯಮಂದಿರದಲ್ಲಿ ವಾಸಿಸುತ್ತಿರುವ ಉಜ್ಜ್ವಲಮೂರ್ತಿಗಳು ಇವು. ಇವು ಭರತಖಂಡದ ದೇಶಭಾಷೆಗಳ ಮೂಲಕ ಜನತೆಯ ಅಂತರಂಗದ ಮಂದಿರವನ್ನು ಸೇರಿದುವು. ರಾಮಾಯಣದಂತೆ ಮಹಾಭಾರತವೂ ಎಲ್ಲ ದೇಶೀಯ ಭಾಷೆಗಳಲ್ಲಿಯೂ ಕಾಲಕಾಲಕ್ಕೆ ಅವತರಿಸಿತು. ಆಸೇತುಹಿಮಾಚಲಪರ್ಯಂತವಾಗಿ ಹಬ್ಬಿದ ಈ ಉಪಖಂಡವನ್ನು ಒಂದು ರಾಷ್ಟ್ರವನ್ನಾಗಿ ರೂಪಿಸುವುದರಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿತು.

ಭಗವದ್ಗೀತೆಯು ಮಹಾಭಾರತದಲ್ಲಿ ಸೇರಿದುದಂತೂ ಅದರ ಮಹತ್ವಕ್ಕೆ ಕಳಶವಿಟ್ಟಂತಾಯಿತು. ಉಪನಿಷತ್ತುಗಳ ಸಾರವನ್ನೆಲ್ಲಾ ಅದು ಸಂಗ್ರಹಿಸಿ ಸಮನ್ವಯದ ಮಾರ್ಗವನ್ನು ರೂಪಿಸಿತು.

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥

—ಎಂಬ ಮಾತು ಬಹಳ ಅರ್ಥವತ್ತಾದುದು. ಉಪನಿಷತ್ತುಗಳೆಂಬ ಕಾಮಧೇನುಗಳಿಂದ ಕರೆದ ಅಮೃತದ ರಸ ಭಗವದ್ಗೀತೆ. ಗೋಪಾಲಕನಾದ ಕೃಷ್ಣನು ಅದನ್ನು ಅರ್ಜುನನಿಗೆ ಉಣಬಡಿಸಿದನು. ಅದು ಅಂದು ಅರ್ಜುನನಿಗೆ ತೃಪ್ತಿಯನ್ನಿತ್ತಂತೆ, ಮುಂದೆ ಇಡಿ ಮಾನವ ಜನಾಂಗಕ್ಕೇ ಮಾರ್ಗದರ್ಶಕವಾಗುವ ಯೋಗ್ಯತೆಯನ್ನು ಪಡೆಯಿತು. ಭರತಖಂಡದ ಸಂಸ್ಕೃತಿಯ ಸಾಗರದ ಮಥನದಿಂದ ಉದ್ಭವಿಸಿದ ಅನರ್ಘ್ಯರತ್ನವಾಗಿ ಪರಿಣಮಿಸಿತು.

ತಾತ್ಕಾಲಿಕವಾದ ಯುಗಧರ್ಮದ ಮಾತು ಗೀತೆಯಲ್ಲಿ ಅಲ್ಲಲ್ಲಿ ಬರುವುದಾದರೂ ಅವನ್ನು ಮೀರಿದ ಸನಾತನ ತತ್ತ್ವದ ತಿರುಳಿನಿಂದ ಗೀತೆ ಚಿರಂತನವಾಗಿ ಉಳಿದಿದೆ. "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ" ಎಂಬ ಮಾತು ಆಗ ಯುದ್ಧಕ್ಕೆ ಸಿದ್ಧನಾಗಿದ್ದ ಅರ್ಜುನನಿಗೆ ಮಾತ್ರವಲ್ಲ, ಎಂದೆಂದಿಗೂ ಎಲ್ಲರಿಗೂ ಎಲ್ಲ ರಂಗಗಳಲ್ಲಿಯೂ ಬೇಕಾದ ಪ್ರವೃತ್ತಿಪರ ಸಂದೇಶವಾಗಿದೆ. ಪ್ರವೃತ್ತಿಮಾರ್ಗದಲ್ಲಿದ್ದೂ ನಿವೃತ್ತಿಯ ನಿರಂತರ ಊರ್ಧ್ವಗಮನದ ಸಾಧನೆಯನ್ನು ಗೀತೆ ಅದ್ವಿತೀಯವಾದ ರೀತಿಯಲ್ಲಿ ಸಮನ್ವಯಿಸಿ ತೋರಿಸಿದೆ. "ಸಮತ್ವಂ ಯೋಗ ಉಚ್ಯತೇ" ಎಂದರೆ ಬುದ್ಧಿಯ ಸಮತ್ವವೇ ಯೋಗ, "ಯೋಗಃ ಕರ್ಮಸು ಕೌಶಲಂ" ಎಂದರೆ ಕರ್ಮಮಾಡಿ ನಿರ್ಲಿಪ್ತವಾಗಿರುವ ಕುಶಲತೆಯೇ ಯೋಗ—ಮುಂತಾದ ಮಾತುಗಳಲ್ಲಿ ಯೋಗದ ರಹಸ್ಯವನ್ನು ಗೀತೆ ಸುಂದರವಾಗಿ ಹಿಡಿದಿಟ್ಟಿದೆ. ಅದನ್ನು ಸಾಧಿಸಿದ ಸ್ಥಿತಪ್ರಜ್ಞನ ನಿಲವನ್ನು ವರ್ಣಿಸಿದೆ. ಗೀತೆಯ ಎರಡನೆಯ ಅಧ್ಯಾಯದಲ್ಲಿ ಬರುವ ಸ್ಥಿತಪ್ರಜ್ಞನ ಆ ವರ್ಣನೆ ಮಾನವತೆ ಮುಟ್ಟಬಹುದಾದ ಅತ್ಯುನ್ನತವಾದ ನಿಲವನ್ನು ನಿರೂಪಿಸುತ್ತದೆ.

ಮಾನವಸ್ವಭಾವದ ಎಲ್ಲ ಶಕ್ತಿಗಳನ್ನೂ ಉದಾತ್ತೀಕರಿಸುವ ಉಪಾಯವನ್ನು ಗೀತೆಯಲ್ಲಿ ಕಾಣಬಹುದಾಗಿದೆ. ಜ್ಞಾನ ಭಕ್ತಿ ಕರ್ಮಗಳೆಲ್ಲವೂ ಸಾಧನೆಗೆ ಆವಶ್ಯಕ. ಆದರೆ ಅವುಗಳನ್ನು ತನ್ನ ಮನೋಧರ್ಮಕ್ಕೆ ಅನುಗುಣವಾದ ರೀತಿಯಲ್ಲಿ ಅರಿತು ಅಳವಡಿಸಿಕೊಳ್ಳಬೇಕು. ಅರ್ಥವಿಲ್ಲದ ಕಾಮ್ಯಕರ್ಮಗಳು ವ್ಯರ್ಥವಾಗಿ ಸಾಧಕನ ಶಕ್ತಿಯ ನಾಶಕ್ಕೆ ಕಾರಣವಾಗುತ್ತವೆ. ಆದುದರಿಂದಲೇ ವೇದದಲ್ಲಿ ಪ್ರಧಾನವಾಗಿದ್ದ ಯಜ್ಞಯಾಗಾದಿಗಳ ಕರ್ಮಕಾಂಡವನ್ನು ಗೀತೆಯು ಪುರಸ್ಕರಿಸಲಿಲ್ಲ. ಈ ವಿಚಾರದಲ್ಲಿ ಅದು ಉಪನಿಷತ್ತುಗಳ ಧೋರಣೆಯನ್ನೇ ಅವಲಂಬಿಸುತ್ತದೆ:

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥
ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥

"ವೇದಗಳು ತ್ರಿಗುಣಾತ್ಮಕ ವಿಷಯಗಳಿಂದ ತುಂಬಿರುವುವು. ನೀನು ತ್ರಿಗುಣಾತೀತನೂ ದ್ವಂದ್ವರಹಿತನೂ ಆತ್ಮನಲ್ಲಿ ಪ್ರತಿಷ್ಠಿತನೂ ಯೋಗಕ್ಷೇಮಗಳ ಚಿಂತೆಯನ್ನು ತೊರೆದವನೂ ಆತ್ಮವಂತನೂ ಆಗು."

"ಎಲ್ಲ ಕಡೆಗೂ ನೀರು ತುಂಬಿರುವಾಗ ಭಾವಿಯ ಪ್ರಯೋಜನವು ಎಷ್ಟೋ ಅಷ್ಟೇ, ಬ್ರಹ್ಮಜ್ಞಾನಿಗೆ ವೇದಗಳ ಪ್ರಯೋಜನವು."

ಹೀಗೆ ವೇದಗಳ ಕರ್ಮಕಾಂಡಕ್ಕೆ ಅತೀತವಾಗುವುದೇ ಸಾಧನೆಯ ಕೊನೆಯ ಗುರಿ ಎಂದು ಬೋಧಿಸುತ್ತಾನೆ ಕೃಷ್ಣ.

ಗೀತೆಯಲ್ಲಿ ಬರುವ ಯಜ್ಞದ ಕಲ್ಪನೆ ಭವ್ಯವಾದುದು. ನಾವು ಮಾಡುವ ಕರ್ಮಗಳನ್ನು ಆತ್ಮಜ್ಞಾನದ ಅನುಭಾವದಿಂದ ಕೂಡಿ ಪರಿಶುದ್ಧ ಮನೋಧರ್ಮದಿಂದ ಮಾಡು

ವುದೇ ಯಜ್ಞ. ಇಂತಹ ಯಜ್ಞದಿಂದಲೇ ಸೃಷ್ಟಿಯ ಆವಿರ್ಭಾವ, ಮತ್ತು ಆ ಯಜ್ಞದಲ್ಲಿಯೇ ಇದರ ಕೊನೆ.

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥

"ಅನ್ನದಿಂದ ಭೂತಗಳು ಹುಟ್ಟುವವು. ಮಳೆಯಿಂದ ಅನ್ನವು ಬೆಳೆಯುವುದು, ಯಜ್ಞದಿಂದ ಮಳೆ ಬೀಳುವುದು, ಯಜ್ಞವು ಕರ್ಮದಿಂದ ಸಿದ್ಧಿಹೊಂದುವುದು"—ಎಂಬ ಮಾತಿನಲ್ಲಿ ಕೃಷ್ಣ ಯಜ್ಞಕ್ಕೆ ಬಹಳ ವ್ಯಾಪಕವಾದ ಅರ್ಥವನ್ನು ಕೊಟ್ಟಿರುವುದು ಕಾಣುತ್ತದೆ. ಬೆಂಕಿಯಲ್ಲಿ ತುಪ್ಪವನ್ನು ಹೋಮಿಸುವ ಅಥವಾ ಆಡನ್ನು ಬಲಿಕೊಡುವ ಕ್ರಿಯೆ ಎಂಬ ಕರ್ಮಯಜ್ಞದ ಕಲ್ಪನೆ ಇಲ್ಲಿರುವಂತೆ ತೋರುವುದಿಲ್ಲ. ಅಂತರಂಗದ ಶುದ್ಧಿಯಿಂದ ಮಾಡುವ ಕೃಷಿಕ ಕರ್ಮದಿಂದ ಹಿಡಿದು ಜಗತ್ತಿನ ಚಲನೆಯೆಲ್ಲವೂ ಯಜ್ಞಸಂಕಲ್ಪದಿಂದ ನಿಯಂತ್ರಿತವಾದುದೆಂಬ ವಿರಾಟ್‌ರೂಪ ಇಲ್ಲಿ ಆ ಮಾತಿಗೆ ಲಭಿಸಿದೆ.

ಹೀಗೆ ಭಗವದ್ಗೀತೆ ಸಾಧಕನ ಅಂತರಂಗದ ವಿಕಾಸಕ್ಕೆ ವಿಶೇಷ ಮಹತ್ತ್ವವನ್ನು ಕೊಟ್ಟಿತು :

ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ ॥

"ಬೆಂಕಿಯು ಹೊಗೆಯಿಂದ, ಕನ್ನಡಿಯು ಧೂಳಿನಿಂದ, ಗರ್ಭವು ಚೀಲದಿಂದ ಮುಚ್ಚಲ್ಪಟ್ಟಿರುವಂತೆ, ಜೀವಾತ್ಮನು ಆ ಕಾಮದಿಂದ ಆಚ್ಛಾದಿಸಲ್ಪಟ್ಟಿದ್ದಾನೆ"—ಎಂದು ಆತ್ಮಕ್ಕೆ ಅಂಟಿದ ಅಜ್ಞಾನದ ಹೊದಿಕೆಯನ್ನು ಗೀತೆ ವರ್ಣಿಸಿ, ಅದರಿಂದ ಮುಕ್ತವಾಗುವ ಮಾರ್ಗವನ್ನು ಸೂಚಿಸುತ್ತದೆ. ಇಂದ್ರಿಯ ಮನ ಬುದ್ಧಿಗಳೇ ಇದರ ಆಶ್ರಯಸ್ಥಾನಗಳು. ಇವುಗಳ ಮುಖಾಂತರ ಕಾಮವು ಜ್ಞಾನವನ್ನು ಮುಚ್ಚಿ ಜೀವವನ್ನು ಮೋಹಿಸುತ್ತದೆ. ಆದುದರಿಂದ ಇಂದ್ರಿಯಗಳನ್ನು ಸಂಯಮಿಸಿ ಜ್ಞಾನವಿಜ್ಞಾನನಾಶಿಯಾದ ಈ ಪಾಪಿಷ್ಠ ಕಾಮನನ್ನು ಕೊಂದುಬಿಡಬೇಕೆಂಬ ಮಾತನ್ನು ಕೃಷ್ಣ ಹೀಗೆ ಹೇಳಿದ್ದಾನೆ :

ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥

ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನವಿಜ್ಞಾನನಾಶನಮ್ ॥

"ಎಲೈ ಅರ್ಜುನನೇ, ಈ ಪಾಪಿಷ್ಠ ಕಾಮನನ್ನು ಕೊಂದುಬಿಡು"—ಎಂದು ಕೃಷ್ಣ ಹೇಳಿದ ಈ ಮಾತು ಅರ್ಜುನನಿಗೆ ಮಾತ್ರವಲ್ಲ, ಮುಂದೆ ಸಾಧಕರೆಲ್ಲರ ಕೈದೀವಿಗೆಯಾಯಿತು. ಕರ್ಮ, ಜ್ಞಾನ ಭಕ್ತಿಗಳೆಲ್ಲವೂ ಈ ಮಾರ್ಗಕ್ಕೆ ಸಹಾಯಕವಾದ ಅಂಶಗಳಾಗಿ ಪರಿಣಮಿಸಿದುವು. ದೇಹದಲ್ಲಿ ಸುಪ್ತವಾಗಿರುವ ಅಲೌಕಿಕ ಶಕ್ತಿಗಳನ್ನು ಜಾಗ್ರತಗೊಳಿಸುವುದಕ್ಕೆ ಸಾಧನಗಳಾದುವು. ಆಸುರೀಗುಣಗಳು ಅಳಿದು ದೈವೀಗುಣಗಳ ಅವತಾರಕ್ಕೆ ಈ

ಸಾಧನೆ ಆವಶ್ಯಕವೆಂದು ಗೀತೆ ಹೇಳಿತು. ಆ ದೈವೀಸಂಪತ್ತಿನ ಆದರ್ಶವನ್ನು ಸಮಾಜದ ಮುಂದೆ ನಿಲ್ಲಿಸಿತು :

ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥

ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ॥

ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥

ನಿರ್ಭೀತಿ, ಸತ್ತ್ವಶುದ್ಧಿ, ಯೋಗವ್ಯವಸ್ಥೆ—ಇತ್ಯಾದಿ ಸದ್ಗುಣಗಳಲ್ಲಿ ಜೀವನದ ಆದರ್ಶವನ್ನು ಕಂಡ ಗೀತೆಯ ನಿರೂಪಣೆಯಿಂದ, ಮತ್ತು

ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ॥

ದಂಭ, ಗರ್ವ, ಅತಿಮಾನ, ಕೋಪ, ಕಠೋರತೆ, ಅಜ್ಞಾನ—ಇತ್ಯಾದಿ ವಿನಾಶಕಾರಕ ಆಸುರೀಶಕ್ತಿಗಳ ನಿಗ್ರಹದಿಂದ ಸಮಾಜದ ಸಂಸ್ಕೃತಿಯ ಮೇಲೆ ಬಲವತ್ತರವಾದ ಪರಿಣಾಮವಾಯಿತು.

ಗೀತೆಯ ಉಪದೇಶ ಕೃಷ್ಣಾರ್ಜುನರ ಸಂಭಾಷಣೆಯ ರೂಪದಲ್ಲಿದ್ದುದು ಬಹುಶಃ ಅದು ಇನ್ನೂ ಹೆಚ್ಚು ಪರಿಣಾಮಕಾರಿಯಾಗಲು ಸಹಾಯಕವಾಯಿತು. ಸಾಧಕನಿಗೆ ಬರಬಹುದಾದ ಸಂದೇಹಗಳನ್ನೇ ಅರ್ಜುನ ಸಾಧಕರ ಪ್ರತಿನಿಧಿಯಾಗಿ ನಿಂತು ಪ್ರತಿಧ್ವನಿಸುತ್ತಾನೆ. ಕೃಷ್ಣ ಅದಕ್ಕೆ ಉತ್ತರವನ್ನು ಕೊಡುತ್ತಾನೆ. ಅಂತರಂಗದ ಆಧ್ಯಾತ್ಮಿಕ ಕಥಾನಕದಂತೆ ಅವರ ಪ್ರಶ್ನೋತ್ತರಮಾಲಿಕೆ ಉದ್ದಕ್ಕೆ ಬೆಳೆದುಕೊಂಡುಬಂದಿವೆ. ಇಲ್ಲಿ ರೂಪಿತವಾದ ಆದರ್ಶವನ್ನು ಜೀವನದಲ್ಲಿ ಸಾಧಿಸಿ ತೋರಿಸಿದ ಮಹಾವ್ಯಕ್ತಿಗಳು ಮಹಾಭಾರತದಲ್ಲಿ ಜೀವಂತವಾಗಿ ಚಿತ್ರಿತವಾಗಿದ್ದರು. ಅದು ತತ್ತ್ವಜಿಜ್ಞಾಸೆಗಿಂತ ಹೆಚ್ಚಿನ ಪ್ರಭಾವವನ್ನು ಜನಸಾಮಾನ್ಯರ ಮೇಲೆ ಬೀರಲು ಸಹಾಯಕವಾಯಿತು.

ಹೀಗೆ ರಾಮಾಯಣ ಮಹಾಭಾರತಗಳ ಪ್ರಭಾವ ಭಾರತವನ್ನು ವ್ಯಾಪಿಸಿದ ನಂತರದಲ್ಲಿ ಹಿಂದೂಧರ್ಮದ ಉಪಾಸನೆಯ ಸ್ವರೂಪ ಸ್ಪಷ್ಟವಾದ ಬದಲಾವಣೆಯನ್ನು ಪಡೆಯಿತು. ರಾಮ ಕೃಷ್ಣರ ಅವತಾರದ ಕಲ್ಪನೆ ಬೆಳೆಯಿತು. ಕೃಷ್ಣನ ಪಾತ್ರದಲ್ಲಿಯೂ ಕೆಲವು ಹಂತಗಳ ವಿಕಾಸ ಕಂಡುಬರುತ್ತದೆ. ಕೊನೆಯಲ್ಲಿ ಅವನು ಗೀತಾಚಾರ್ಯನಾದ ಅವತಾರ ಪುರುಷನಾಗಿ ಪರಿಣಮಿಸಿದ. ಇದರ ಜೊತೆಗೆ ರುದ್ರ, ಶಿವ, ಲಿಂಗ—ಈ ಕಲ್ಪನೆಗಳೂ ಬೆಳೆಯುತ್ತಾ ಹೋದುವು. ರುದ್ರನ ಉಗ್ರವಾದ ಉಪಾಸನೆ ಕ್ರಮೇಣ ಶಾಂತ ಮಂಗಳಕರನಾದ ಶಂಭುಶಿವನ ಭಕ್ತಿಯಾಯಿತು. ಅವನ ಸಂಕೇತವಾದ ಲಿಂಗರೂಪವೂ ಉದಾತ್ತವಾದ ಅರ್ಥವನ್ನು ಪಡೆಯಿತು. ರಾಮನೂ ರಾಮೇಶ್ವರದಲ್ಲಿ

ಶಿವಲಿಂಗವನ್ನು ಪೂಜಿಸಿದನೆಂಬ ಮಾತಿನಲ್ಲಿ, ಎಲ್ಲ ಸಾಕಾರ ದೇವತೆಗಳಿಗೂ ಅತೀತನಾದ ನಿರಂಜನ ಬ್ರಹ್ಮನೆಂಬ ಸಾಂಕೇತಿಕ ಅರ್ಥದಿಂದ ಲಿಂಗವನ್ನು ಕಂಡಿರುವುದಕ್ಕೆ ಸಾಕ್ಷ್ಯ ದೊರಕುತ್ತದೆ. ಮಹಾಭಾರತದಲ್ಲಿಯೂ ಶಿವನ ಉಪಾಸನೆಯ ಅನೇಕ ಬಗೆಗಳು ಬರುತ್ತವೆ. ಹೀಗೆ ಶಿವ ವಿಷ್ಣುಗಳು ಇತರ ದೇವತೆಗಳನ್ನೆಲ್ಲಾ ಹಿಂದೆ ತಳ್ಳಿ ಪ್ರಧಾನಪಟ್ಟವನ್ನು ಪಡೆದರು. ಅಲ್ಲದೆ ಇವರ ಜೊತೆಗೆ ಬ್ರಹ್ಮನೂ ಸೇರಿ ಸೃಷ್ಟಿ, ಸ್ಥಿತಿ, ಮತ್ತು ಲಯಕಾರಕ ಶಕ್ತಿಗಳೇ ಈ ತ್ರಿಮೂರ್ತಿಗಳು ಎಂಬ ಕಲ್ಪನೆ ಬೆಳೆಯಿತು.

ಇವುಗಳಲ್ಲದೆ ಶಕ್ತಿ, ಗಣಪತಿ, ಸ್ಕಂದ, ಲಕ್ಷ್ಮಿ, ಸರಸ್ವತಿ ಮೊದಲಾದ ದೇವತೆಗಳೂ ಅವರ ಸುತ್ತ ಅನೇಕ ಕಥೆಗಳೂ ನಿರ್ಮಿತವಾದುವು. ಇವುಗಳಿಗೆಲ್ಲಾ ಸ್ಪಷ್ಟವಾದ ಆಕಾರವನ್ನು ಕೊಟ್ಟುದೂ ಅಲ್ಲದೆ ಅವುಗಳ ಪೂಜೆಗಾಗಿ ದೇವಾಲಯಗಳನ್ನು ಕಟ್ಟುವ ರೂಢಿಯೂ ಈ ವೇಳೆಗಾಗಲೇ ಪ್ರಚಲಿತವಾಗಿದ್ದಿರಬೇಕು. 'ದೇವಾಯತನ' 'ಚೈತ್ಯ' 'ಆಲಯ'—ಈ ಮೊದಲಾದ ಮಾತುಗಳು ರಾಮಾಯಣ ಮಹಾಭಾರತಗಳಲ್ಲಿವೆ. ದಶರಥನ ಮರಣದಿಂದ ದೇವಾಲಯಗಳೆಲ್ಲಾ ಶೂನ್ಯವಾಗಿದ್ದುವು ಎಂಬ ಮಾತು ಬರುತ್ತದೆ. ರಾಮನು ಅಗಸ್ತ್ಯರ ಆಶ್ರಮಕ್ಕೆ ಬಂದಾಗ ಅಲ್ಲಿ ಹದಿನೆಂಟು ದೇವತೆಗಳಿಗಾಗಿ ಮೀಸಲಾಗಿದ್ದ ದೇವಾಲಯವನ್ನು ನೋಡುತ್ತಾನೆ. ಧರ್ಮರಾಯ ತನ್ನ ಪ್ರಯಾಣದಲ್ಲಿ ಒಮ್ಮೆ ಅನೇಕ ದೇವತೆಗಳಿರುವ ಆಲಯವನ್ನು ಕಾಣುತ್ತಾನೆ. ಇಂತಹ ಮಾತುಗಳು ಆ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಪ್ರಾರಂಭವಾಗಿದ್ದಿತೆಂಬುದಕ್ಕೆ ಸಾಕ್ಷ್ಯವನ್ನು ಒದಗಿಸುತ್ತವೆ. ಆದರೆ ವಾಸ್ತುಶಿಲ್ಪದ ದೃಷ್ಟಿಯಿಂದ ಆ ದೇವಾಲಯಗಳ ರೂಪ ಮತ್ತು ಸ್ವರೂಪಗಳ ವಿಚಾರವಾಗಿ ಏನನ್ನೂ ತಿಳಿಯುವಂತಿಲ್ಲ.

ಮಹಾಕಾವ್ಯಗಳು ರೂಪುಗೊಳ್ಳುತ್ತಿದ್ದ ಕಾಲದಲ್ಲಿಯೇ ಇನ್ನೊಂದು ಕಡೆಯಲ್ಲಿ ಪುರಾಣಗಳು ರಚಿತವಾಗುತ್ತಿದ್ದುವು. 'ಪುರಾಣ' ಎನ್ನುವ ಮಾತು, ಹಳೆಯದು ಎನ್ನುವ ಅರ್ಥವನ್ನು ಸೂಚಿಸುತ್ತದೆ. "ಪುರಾತನಸ್ಯ ಕಲ್ಪಸ್ಯ ಪುರಾಣಾನಿ ವಿದುರ್ಬುಧಾಃ" —ಎಂದರೆ "ಹಿಂದಿನ ಕಲ್ಪಗಳಲ್ಲಿ ನಡೆದ ಸಂಗತಿಗಳನ್ನು ತಿಳಿಸುವುದರಿಂದ ಪಂಡಿತರು ಇವನ್ನು ಪುರಾಣಗಳೆಂದು ತಿಳಿಯುತ್ತಾರೆ"—ಎಂದು ಇದನ್ನು ವಿವರಿಸಲಾಗಿದೆ. "ಪುರಾಭವಂ ಪುರಾಣಂ" ಎಂದು ಪಾಣಿನಿ ಇದರ ವ್ಯುತ್ಪತ್ತಿಯನ್ನು ಹೇಳಿದ್ದಾನೆ. ವೇದಗಳನ್ನು ಬಿಟ್ಟರೆ ಎರಡನೆಯ ಪ್ರಮಾಣವಾಗಿ ಇತಿಹಾಸ ಪುರಾಣಗಳನ್ನು ಸ್ವೀಕರಿಸಬೇಕಾಗುತ್ತದೆಂಬುದು ಸಾಯಣಾಚಾರ್ಯರ ಅಭಿಪ್ರಾಯ: "ಇತಿಹಾಸ ಪುರಾಣಮಪಿ ಪೌರುಷೇಯತ್ವಾತ್ ಪ್ರಮಾಣಾಂತರ ಮೂಲತಾಮಾಕಾಂಕ್ಷತೇ"–ಎಂದಿದ್ದಾರೆ ಅವರು.

ಪುರಾಣಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲು ಆಗುವಂತಿಲ್ಲ. ಎಲ್ಲಾ ಪುರಾಣಗಳೂ ಒಂದೇ ಕಾಲದಲ್ಲಿ ರಚಿತವಾದವೆಂದೂ ಅಲ್ಲ. ಕ್ರಿ.ಶ.ದ ಪ್ರಾರಂಭಕ್ಕಾಗಲೇ ಅನೇಕ ಪುರಾಣಗಳು ರಚಿವಾಗಿದ್ದುವೆಂಬುದು ಪಂಡಿತರ ಅಭಿಪ್ರಾಯ. ಮನು ಮತ್ತು ಯಾಜ್ಞವಲ್ಕ್ಯರ ಧರ್ಮಶಾಸ್ತ್ರಗಳಲ್ಲಿ ಮತ್ತು ತೈತ್ತಿರೀಯ ಆರಣ್ಯಕದಲ್ಲಿ 'ಪುರಾಣ' ಎಂಬ ಮಾತನ್ನು ಬಹುವಚನದಲ್ಲಿ ಪ್ರಯೋಗಿಸಿರುವುದು ಕಂಡುಬರುತ್ತದೆ. ಮಹಾ

ಭಾರತದಲ್ಲಿಯೂ ಆಪಸ್ತಂಬ ಧರ್ಮಸೂತ್ರಗಳಲ್ಲಿಯೂ ಪುರಾಣದ ಉಲ್ಲೇಖವಿದೆ. 'ಹಳೆಯದು' ಎಂಬ ಅರ್ಥದಲ್ಲಿ ಮಾತ್ರವಲ್ಲ, ಒಂದು ವಿಶಿಷ್ಟರೀತಿಯ ಗ್ರಂಥಗಳು—ಎಂಬ ಅರ್ಥದಲ್ಲಿಯೇ ಅಲ್ಲಿ ಆ ಮಾತು ಪ್ರಯೋಗವಾಗಿದೆ. ಆ ಅರ್ಥವನ್ನು ಅದು ಪಡೆಯಬೇಕಾಗಿದ್ದರೆ ಆ ವೇಳೆಗೆ ಅನೇಕ ಪುರಾಣ ಗ್ರಂಥಗಳು ರಚಿತವಾಗಿ ಪ್ರಚಲಿತವಾಗಿದ್ದಿರಬೇಕು. ಆಪಸ್ತಂಬ ಧರ್ಮಸೂತ್ರದ ಕಾಲವು ಸು. ಕ್ರಿ.ಪೂ. ೬೦೦ರಿಂದ ೩೦೦ರ ಒಳಗೆ ಎಂದು ಈಗ ಒಪ್ಪಿಕೊಂಡಿರುವ ಅಭಿಪ್ರಾಯ.[28] ಆದುದರಿಂದ ಅದಕ್ಕಿಂತ ಹಿಂದೆಯೇ ಪುರಾಣಗಳ ರಚನೆ ಪ್ರಾರಂಭವಾಗಿ ಕೆಲವು ಪುರಾಣಗಳು ಬೆಳೆದು ಬಂದಿದ್ದುವೆನ್ನಬಹುದು.

ಪುರಾಣಗಳನ್ನು ಹದಿನೆಂಟು ಮಹಾಪುರಾಣಗಳೆಂದು ಹದಿನೆಂಟು ಉಪಪುರಾಣಗಳೆಂದು ವಿಭಾಗಿಸಲಾಗಿದೆ. ಹದಿನೆಂಟು ಮಹಾಪುರಾಣಗಳು ಇವು :

ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ.

ಈ ಹದಿನೆಂಟು ಪುರಾಣಗಳಲ್ಲಿ ಶಿವ, ಭವಿಷ್ಯ, ಮಾರ್ಕಂಡೇಯ, ಲಿಂಗ, ವರಾಹ, ಸ್ಕಾಂದ, ಮತ್ಸ್ಯ, ಕೂರ್ಮ, ವಾಮನ, ಬ್ರಹ್ಮಾಂಡ—ಇವು ಹತ್ತು ಶೈವ ಪುರಾಣಗಳು. ಶಿವ ಮಹಿಮೆಯ ವರ್ಣನೆಯೇ ಇವುಗಳ ಮುಖ್ಯ ಉದ್ದೇಶ. ವಿಷ್ಣು, ಭಾಗವತ, ನಾರದ, ಗರುಡ—ಈ ನಾಲ್ಕು ಪುರಾಣಗಳು ವಿಷ್ಣುವಿನ ಮಹತ್ತ್ವವನ್ನು ವರ್ಣಿಸುವ ವೈಷ್ಣವ ಪುರಾಣಗಳು. ಬ್ರಹ್ಮ ಮತ್ತು ಪದ್ಮ ಪುರಾಣಗಳು ಬ್ರಹ್ಮನಿಗೆ ಸಂಬಂಧಿಸಿದುವು. ಅಗ್ನಿಪುರಾಣ ಅಗ್ನಿಗೂ ಬ್ರಹ್ಮವೈವರ್ತ ಪುರಾಣ ಸೂರ್ಯನಿಗೂ ಸಂಬಂಧಿಸಿವೆ. ಈ ಮಹಾಪುರಾಣಗಳಲ್ಲದೆ ಅನಂತರ ಶಿವಪುರಾಣ, ಶಿವಧರ್ಮಪುರಾಣ, ವಿಷ್ಣುಧರ್ಮಪುರಾಣ, ನಂದೀಶ್ವರಪುರಾಣ—ಮೊದಲಾದ ಹದಿನೆಂಟು ಉಪಪುರಾಣಗಳೂ ಹುಟ್ಟಿ ಬೆಳೆದುವು. ಹೀಗೆ ಪುರಾಣ ಸಾಹಿತ್ಯ ಸಂಸ್ಕೃತದಲ್ಲಿ ಅತ್ಯಂತ ಶ್ರೀಮಂತವಾದ ವಿಭಾಗವಾಗಿ ಬೆಳೆಯಿತು. ಮಹಾಪುರಾಣಗಳನ್ನಷ್ಟೇ ತೆಗೆದುಕೊಂಡರೂ ಆ ಹದಿನೆಂಟು ಪುರಾಣಗಳಲ್ಲಿ ಬರುವ ಒಟ್ಟು ಶ್ಲೋಕಗಳ ಸಂಖ್ಯೆ ನಾಲ್ಕು ಲಕ್ಷ ಎಂದು ಹೇಳಲಾಗಿದೆ. ಉಪಪುರಾಣಗಳೂ ಹಲವು ಲಕ್ಷ ಶ್ಲೋಕಗಳನ್ನು ಒಳಗೊಂಡಿವೆ. ಈ ಪುರಾಣಗಳಲ್ಲಿ ಮೊದಲು ನಿರ್ಮಿತವಾದ ಪ್ರಾಚೀನಭಾಗಗಳು ಯಾವುವು ? ಅನಂತರ ಸೃಷ್ಟಿಯಾಗಿ ಅದರೊಳಗೆ ಸೇರುತ್ತಾ ಬಂದ ಆಖ್ಯಾನಗಳು, ಕಥೆಗಳು ಯಾವುವು ?—ಎಂದು ಸ್ಪಷ್ಟವಾಗಿ ಹೇಳುವುದು ಸಾಧ್ಯವಿಲ್ಲದ ಸ್ಥಿತಿಯಲ್ಲಿ ಅವು ಉಳಿದಿವೆ.

ಬರುಬರುತ್ತ ಅವು ಒಂದು ರೀತಿಯ ಧಾರ್ಮಿಕ ವಿಶ್ವಕೋಶಗಳಾಗಿ ಬೆಳೆದು ಬಂದುವು. ಆದರೂ ಮುಖ್ಯವಾಗಿ ಅವುಗಳಿಗೆ ಪಂಚಲಕ್ಷಣಗಳನ್ನು ಹೇಳುತ್ತಾರೆ :

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥

ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ಮತ್ತು ವಂಶಾನುಚರಿತ—ಎಂಬ ಐದು ವಿಷಯಗಳು ಇವುಗಳಲ್ಲಿ ಬರುತ್ತವೆ. ಅಂದರೆ ಲೋಕದ ಸೃಷ್ಟಿ ಮತ್ತು ಪುನಸ್ಸೃಷ್ಟಿಗಳ ವಿಚಾರ, ದೇವತೆಗಳ ಪಿತೃದೇವತೆಗಳ ವಂಶವಿವರಣೆ, ಯಾವ ಯಾವ ಮನು ಎಷ್ಟೆಷ್ಟು ಕಾಲ ಆಳಿದನೆಂಬ ನಿರೂಪಣೆ, ಸೂರ್ಯ ಚಂದ್ರ ವಂಶಗಳು ಮತ್ತು ಆ ವಂಶದ ರಾಜರುಗಳ ಚರಿತ್ರೆ—ಇವುಗಳನ್ನು ಪುರಾಣಗಳು ಒಳಗೊಂಡಿರುತ್ತವೆ. ಇವುಗಳು ಉಪಪುರಾಣಗಳ ಲಕ್ಷಣಗಳೆಂದೂ ಮಹಾಪುರಾಣಗಳಿಗೆ ಇವುಗಳನ್ನೂ ಒಳಗೊಂಡ ಹತ್ತು ಲಕ್ಷಣಗಳಿರುವುವೆಂದೂ ಕೆಲವರು ಹೇಳುತ್ತಾರೆ. ಆದರೆ ನಿಜವಾಗಿ ನೋಡಿದರೆ ಯಾವ ಒಂದು ನಿರ್ದಿಷ್ಟವಾದ ಸಂಖ್ಯೆಗಳ ಹಿಡಿತಕ್ಕೂ ಅವುಗಳ ಲಕ್ಷಣಗಳು ಸಿಕ್ಕುವುದಿಲ್ಲವೆನ್ನಬಹುದು. 'ಮತ್ಸ್ಯಪುರಾಣ'ದಲ್ಲಿ ಅವುಗಳ ಲಕ್ಷಣಗಳನ್ನು ಕುರಿತ ಈ ಮಾತು ಬರುತ್ತದೆ:

ಬ್ರಹ್ಮವಿಷ್ಣ್ವರ್ಕರುದ್ರಾಣಾಂ ಮಾಹಾತ್ಮ್ಯಂ ಭುವನಸ್ಯ ಚ।
ಸಸಂಹಾರಪ್ರದಾನಾಂ ಚ ಪುರಾಣೇ ಪಂಚವರ್ಣಕೇ॥
ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವಾತ್ರ ಕೀರ್ತ್ಯತೇ।

ಬ್ರಹ್ಮ ವಿಷ್ಣು ಸೂರ್ಯ ರುದ್ರ—ಈ ದೇವತೆಗಳ ಮಹಿಮೆಯ ವರ್ಣನೆ, ಪ್ರಪಂಚದ ಸ್ಥಿತಿ ಮತ್ತು ಲಯಗಳ ವರ್ಣನೆ, ಧರ್ಮಾರ್ಥಕಾಮ ಮೋಕ್ಷಗಳ ಕಥನ—ಈ ಅಂಶಗಳೂ ಪುರಾಣದಲ್ಲಿರಬೇಕೆಂದು ಅದು ಹೇಳುತ್ತದೆ. ಈ ಲಕ್ಷಣಗಳೆಲ್ಲವೂ ಯಾವೊಂದು ಪುರಾಣದಲ್ಲಿಯೂ ಕ್ರಮಬದ್ಧವಾಗಿ ಮತ್ತು ಸಮಗ್ರವಾಗಿ ಕಂಡು ಬರುವುದಿಲ್ಲ. ದಾನ, ವ್ರತ, ತೀರ್ಥಯಾತ್ರೆ, ಶ್ರಾದ್ಧ ಯೋಗ—ಈ ಮೊದಲಾದ ಹಲವಾರು ವಿಷಯಗಳೂ ಇವುಗಳ ಜೊತೆಗೆ ಸೇರಿರುತ್ತವೆ. ಒಟ್ಟಿನಲ್ಲಿ "ಪುರಾಭವಂ ಪುರಾಣಂ" ಎಂಬ ಲಕ್ಷಣವೊಂದು ಮಾತ್ರ ಅವುಗಳಿಗೆ ಚೆನ್ನಾಗಿ ಅನ್ವಯಿಸುತ್ತದೆನ್ನಬಹುದು.

ಈ ಪುರಾಣಗಳ ಕರ್ತೃ ಯಾರು? ಎಂಬ ಪ್ರಶ್ನೆಗೆ ಉತ್ತರ ಸುಲಭವಾಗಿಲ್ಲ. ಈ ಎಲ್ಲ ಪುರಾಣಗಳೂ ಮಹಾಭಾರತವೂ ವ್ಯಾಸಕೃತವೆಂಬುದು ಪರಂಪರೆಯಿಂದ ಬಂದ ಮಾತು. ಕೆಲವರು ಪಂಡಿತರ ಅಭಿಪ್ರಾಯದಂತೆ ಪುರಾಣಗಳು ಕ್ಷತ್ರಿಯ ಮೂಲದಿಂದ ಜನಿಸಿದುವೇ ಹೊರತು ಬ್ರಾಹ್ಮಣರು ಅವುಗಳಿಗೆ ಕಾರಣಕರ್ತರಲ್ಲ. ಆ ಅಭಿಪ್ರಾಯಕ್ಕೆ ಸಮರ್ಥನೆಯಾಗಿ ಲೋಮಹರ್ಷಣ ಮತ್ತು ಅವನ ಮಗ ಉಗ್ರಶ್ರವ ಮೊದಲಾದ ಸೂತಮಂಡಲದವರು ಇವುಗಳನ್ನು ನಿರೂಪಿಸಿದರೆಂಬ ಕಥೆ ಬೆಳೆದುಬಂದಿದೆ. ಆದರೆ ವ್ಯಾಸರು ಹೇಳಿದುವನ್ನು ಈ ಸೂತರು ನಿರೂಪಿಸಿದರೇ ಹೊರತು ಅವರೇ ಸ್ವತಃ ಸೃಷ್ಟಿಸಲಿಲ್ಲ—ಎಂಬ ಅಭಿಪ್ರಾಯದವರಿದ್ದಾರೆ. ವ್ಯಾಸರೂ ತಮಗಿಂತ ಹಿಂದೆ ಪ್ರಚಲಿತವಾಗಿದ್ದ ಹಾಡುಗಳನ್ನು ಸಂಗ್ರಹಿಸಿದರು—ಎಂಬ ಅಭಿಪ್ರಾಯವೂ ಇದೆ. ಎಂದರೆ ಒಬ್ಬ ವ್ಯಕ್ತಿ ಎಂದೋ ಒಂದು ಕಾಲದಲ್ಲಿ ಕುಳಿತು ಬರೆದ ಗ್ರಂಥಗಳು ಇವಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಜನರ ಒಟ್ಟು ಮನಸ್ಸು ತಮ್ಮ ಜೀವನಕ್ರಮವನ್ನು ಆಶೆ ಆಕಾಂಕ್ಷೆಗಳನ್ನು ಶ್ರದ್ಧೆ ಸಂಸ್ಕೃತಿಗಳನ್ನು ರೂಪಿಸಿಕೊಳ್ಳುತ್ತ ಬಂದ ವಿಕಾಸದ ಫಲವಾಗಿ ಇವು ರೂಪುಗೊಂಡುವೆನ್ನಬಹುದು. ಇವು ಪ್ರಾಯಶಃ ಒಬ್ಬ ಕವಿಗಾಗಲಿ ಒಂದು

ಕಾಲದ ಹಿಡಿತಕ್ಕಾಗಲಿ ಒಳಪಡುವ ಕೃತಿಗಳಾಗಿರದೆ ಸಮಷ್ಟಿ ಜನಶಕ್ತಿಯ ಸಂಕೇತವಾಗಿ ಉಳಿಯುವಂತಾದುವು.

ಪುರಾಣಗಳಲ್ಲಿ ಬರುವ ಅನೇಕ ದೇವತೆಗಳೂ ಅವುಗಳನ್ನು ಕುರಿತ ಕಥೆಗಳೂ ಭಾರತದ ಧಾರ್ಮಿಕ ಜೀವನಕ್ಕೆ ವೈವಿಧ್ಯವನ್ನೂ ವೈಶಾಲ್ಯವನ್ನೂ ಕಲ್ಪಿಸಿಕೊಟ್ಟುವು. ಅನೇಕತೆಯಲ್ಲಿ ಏಕತೆಯನ್ನು ಕಾಣುವ ದೃಷ್ಟಿಯನ್ನು ತಂದುಕೊಟ್ಟುವು. "ದೈವಶಕ್ತಿ ಒಂದೇ, ಅದು ತನ್ನ ಲೀಲೆಗಾಗಿ ಅನೇಕ ರೂಪಗಳಲ್ಲಿ ವ್ಯಕ್ತವಾಗುತ್ತದೆ"—ಎಂಬ ಭಾವನೆ ಜನಾಂಗದಲ್ಲಿ ಬೇರೂರಿ ಬೆಳೆಯಲು ಈ ಪುರಾಣಗಳು ಸಹಾಯಕಗಳಾದುವು. ಅವುಗಳಲ್ಲಿ ಬರುವ ಕಥೆಗಳು ಎಷ್ಟೋ ಸಂದರ್ಭಗಳಲ್ಲಿ ಅಸಂಬದ್ಧವಾದ ಕಂತೆಗಳಂತೆ ತೋರಿದರೂ ಅವುಗಳಲ್ಲಿಯೂ ಆಧ್ಯಾತ್ಮಿಕ ಅನುಭವದ ಸುಸಂಬದ್ಧತೆ ಇರುವುದನ್ನು ಕಾಣಬಹುದು. ಭಕ್ತಿಜ್ಞಾನಕರ್ಮಗಳ ಸುಂದರ ಸಮನ್ವಯವನ್ನು ಅಲ್ಲಿನ ಕಥೆಗಳು ಕೆಲವು ವೇಳೆ ಸಾಂಕೇತಿಕವಾಗಿ ಸೂಚಿಸುತ್ತಿವೆ. ಶಿವನ ಪಂಚವಿಂಶತಿ ಲೀಲೆಗಳಾಗಲಿ, ವಿಷ್ಣುವಿನ ದಶಾವತಾರಗಳಾಗಲಿ, ದೇವೀಪುರಾಣದಲ್ಲಿ ಬರುವ ಆದಿಶಕ್ತಿಯ ಮಹಿಮೆಯಾಗಲಿ ಓದುಗರ ಭಾವುಕ ಮನಸ್ಸನ್ನು ಮುಟ್ಟಿ ಪರಿವರ್ತನೆಗೊಳಿಸದೆ ಇರುವುದು ಸಾಧ್ಯವೇ ಇಲ್ಲ. ವೇದಾಂತದ ಮಹತ್ತತ್ತ್ವಗಳು ಕಥಾರೂಪದಲ್ಲಿ ಮೈವೆತ್ತು ಜನಸಾಮಾನ್ಯರ ಜೀವನವನ್ನು ವ್ಯಾಪಿಸುವಂತೆ ಮಾಡಿದುವು ಪುರಾಣಗಳು.

ಕಲ್ಪಿತ ಕಥೆಗಳನ್ನೊಳಗೊಂಡು ಪುರಾಣಗಳು ಮೈವೆತ್ತುದು ಜನಸಾಮಾನ್ಯರಿಗಾಗಿಯೇ ಎಂಬುದರಲ್ಲಿ ಸಂದೇಹವಿಲ್ಲ. ಸ್ತ್ರೀಯರಿಗೂ ವೇದಾಧಿಕಾರವಿಲ್ಲದ ಪುರುಷರಿಗೂ ತತ್ತ್ವದರ್ಶನವನ್ನು ಮಾಡಿಸುವುದಕ್ಕಾಗಿಯೇ ಇವು ಸೃಷ್ಟಿಯಾದುವೆಂಬ ಮಾತು ದೇವೀಭಾಗವತದಲ್ಲಿ ಬರುತ್ತದೆ. ಆದರೆ ಮುಂದೆ ಇವು ಅವರಿಗೆ ಮಾತ್ರ ಸೀಮಿತವಾಗಲಿಲ್ಲ. ವೇದ ಉಪನಿಷತ್ತುಗಳನ್ನೆಲ್ಲಾ ಅರಿತವರು ಸಹ ಪುರಾಣಗಳನ್ನು ಅರಿಯದಿದ್ದರೆ ಅಂತಹವರ ಜ್ಞಾನ ಪೂರ್ಣವಲ್ಲವೆಂಬ ಭಾವನೆ ಬೆಳೆಯಿತು. ಈ ಕೆಳಗಿನ ಮಾತನ್ನು ಗಮನಿಸಬಹುದು :

> ಯೋ ವಿದ್ಯಾಚ್ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ ।
> ನ ಚೇತ್ ಪುರಾಣವತ್ ಸಂವಿದ್ಯಾನ್ ನೈವ ಸ ಸ್ಯಾದ್ ವಿಚಕ್ಷಣಃ ॥
>
> ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
> ಬಿಭೇತಿ ಅಲ್ಪಶ್ರುತಾದ್ ವೇದೋ ಮಾಂ ಅಯಮ್ ಪ್ರಹರಿಷ್ಯತಿ ॥

"ವೇದ ವೇದಾಂಗಗಳು ಉಪನಿಷತ್ತುಗಳನ್ನು ಬಲ್ಲ ದ್ವಿಜ ಪುರಾಣಗಳನ್ನು ತಿಳಿಯದ ಹೊರತು ವಿಚಕ್ಷಣನೆಂದು ಹೇಳಲಾಗದು. ವೇದದ ಜ್ಞಾನವನ್ನು ಇತಿಹಾಸ ಪುರಾಣಗಳಿಂದ ಸಮರ್ಥವಾದುದನ್ನಾಗಿ ಮಾಡಿಕೊಳ್ಳಬೇಕು. ಇವುಗಳಿಗೆ ಹೊರತಾದವನನ್ನು ಕಂಡರೆ ವೇದಗಳೂ ಹೆದರುತ್ತವೆ, ನನ್ನನ್ನೂ ಅವನು ಅಲುಕಿಸುತ್ತಾನೆ"—ಎಂಬ ಮಾತು ಇತಿಹಾಸ ಪುರಾಣಗಳಿಗೆ ಕಾಲಕ್ರಮದಲ್ಲಿ ಉಂಟಾದ ಪ್ರಾಮುಖ್ಯವನ್ನು ಸ್ಪಷ್ಟಪಡಿಸುತ್ತದೆ. ಭಾರತೀಯ ಸಂಸ್ಕೃತಿ ಮತ್ತು ಜನಜೀವನಗಳ ಆದರ್ಶಗಳನ್ನೂ ಆಶೋತ್ತರ

ಗಳನ್ನೂ ತಿಳಿಯುವುದಕ್ಕೆ ಇವು ಅನಿವಾರ್ಯವಾದ ಅಂಗಗಳಾಗಿ ಪರಿಣಮಿಸಿದುವು.

ಪುರಾಣಗಳಲ್ಲಿ ಧಾರ್ಮಿಕ ಮತ್ತು ತಾಂತ್ರಿಕ ವಿಚಾರಗಳಷ್ಟೇ ಅಲ್ಲದೆ ಜ್ಞಾನದ ಇತರ ಮುಖಗಳನ್ನು ಕುರಿತ ವಿವರಗಳೂ ಬರುತ್ತವೆ. ಮತ್ಸ್ಯ, ಗರುಡ ಮತ್ತು ಅಗ್ನಿ ಪುರಾಣಗಳಲ್ಲಿ ಖಗೋಳಶಾಸ್ತ್ರ, ವೈದ್ಯ, ವ್ಯಾಕರಣ, ಕಾವ್ಯಮೀಮಾಂಸೆ, ಸಂಗೀತ ಮೊದಲಾದುವುಗಳಲ್ಲದೆ ರಾಜಕೀಯ, ಆರ್ಥಿಕ, ಕೃಷಿ, ಔದ್ಯೋಗಿಕ ವಿಷಯಗಳನ್ನು ಕುರಿತ ಅಧ್ಯಾಯಗಳೂ ನಿರೂಪಿತವಾಗಿವೆ. ಮುಂದೆ ವಿಪುಲವಾಗಿ ಬೆಳೆದ ಈ ಶಾಸ್ತ್ರಗಳಿಗೆಲ್ಲಾ ಇವು ಆಧಾರಭೂತವಾಗಿ ಪರಿಣಮಿಸಿವೆ.

## ಸ್ಮೃತಿಗಳು, ಆಗಮಗಳು

ವೇದ ಉಪನಿಷತ್ತುಗಳಲ್ಲಿ ರೂಪುಗೊಂಡ ಹಿಂದೂಧರ್ಮ, ಇತಿಹಾಸ ಪುರಾಣಗಳಲ್ಲಿ ಸಾಕಾರವನ್ನು ಪಡೆದು ವಿವಿಧ ರೂಪಗಳಲ್ಲಿ ಜನತೆಯನ್ನು ಮುಟ್ಟಲು ಪ್ರಯತ್ನಿಸಿದುದನ್ನು ಇದುವರೆಗೂ ನೋಡಿದೆವು. ಇವುಗಳ ಜೊತೆಗೆ ವೇದಾಂಗಗಳು, ಸ್ಮೃತಿಗಳು ಮತ್ತು ಆಗಮಾದಿಗ್ರಂಥಗಳು ಮತ್ತೊಂದು ಭದ್ರವಾದ ತಳಹದಿಯನ್ನು ಹಾಕಿದುವು. ಜನಜೀವನದ ಸ್ವರೂಪವನ್ನು ನಿರ್ಧರಿಸಿದುವು. ಶಿಕ್ಷಾ (phonetics), ಕಲ್ಪ (ritual), ವ್ಯಾಕರಣ (grammar), ನಿರುಕ್ತ (etymology), ಛಂದಸ್ (metrics) ಮತ್ತು ಜ್ಯೋತಿಷ (astronomy)—ಇವು ಆರೂ ವೇದಾಂಗಗಳು. ವೇದಗಳನ್ನು ಶುದ್ಧರೂಪದಲ್ಲಿ ಉಳಿಸಿಕೊಂಡು ಬರುವುದಕ್ಕೆ ಇವು ಸಹಾಯಕವಾದುವು. ಇವುಗಳ ಜೊತೆಗೆ ಸ್ಮೃತಿಗಳು ಬೆಳೆದು ಜನಜೀವನದ ಮೇಲೆ ಪ್ರಭಾವವನ್ನು ಬೀರಿದುವು.

ವೇದಾಂಗಗಳನ್ನಾಗಲಿ ಸ್ಮೃತಿಗಳನ್ನಾಗಲಿ ವೇದಗಳ ಸಾಲಿಗೆ ಸೇರಿಸುವಂತಿಲ್ಲ. ವೇದಗಳು ಅಪೌರುಷೇಯಗಳಾದರೆ ಸ್ಮೃತಿಗಳು ವ್ಯಕ್ತಿಗಳಿಂದ ರಚಿತವಾದುವುಗಳು. ವೇದ ಮತ್ತು ಸ್ಮೃತಿಗಳ ಉಕ್ತಿಗಳಲ್ಲಿ ಸಂದೇಹ ಬಂದಾಗ ವೇದಗಳೇ ಪರಮಪ್ರಮಾಣ. ವೇದೋಕ್ತವಾದ ಧರ್ಮರಹಸ್ಯಗಳನ್ನು ತಮ್ಮ ಸ್ಮೃತಿಪಥಕ್ಕೆ ತಂದುಕೊಂಡು ರಚಿಸಿದುದರಿಂದ ಇವುಗಳಿಗೆ ಸ್ಮೃತಿಗಳೆಂದು ಹೆಸರಾಯಿತು. ಶ್ರುತಿ ಸಮ್ಮತವಾದ ಧಾರ್ಮಿಕ ವಿಧಿಗಳ ನಿರೂಪಣೆಗಳೇ ಸ್ಮೃತಿಗಳೆನಿಸಿದುವು. "ಸ್ಮರಣಾನುಕೂಲತ್ವಾತ್ ಸ್ಮೃತಿಃ" ಮತ್ತು "ಶ್ರುತಿಂ ಮುನಯಃ ಸ್ಮರಂತಿ ಚ ತಥಾವಿಧಂ"—ಎಂಬ ಮಾತುಗಳು ಈ ಅರ್ಥವನ್ನು ಸೂಚಿಸುತ್ತವೆ.

ವೇದಾಂಗಗಳಲ್ಲಿ ಒಂದಾದ ಕಲ್ಪಸೂತ್ರ, ಧರ್ಮಸೂತ್ರ ಮತ್ತು ಧರ್ಮಶಾಸ್ತ್ರಗಳ ಬೆಳವಣಿಗೆಗೆ ತಳಹದಿಯಾಗಿ ಪರಿಣಮಿಸಿತು. ಕಲ್ಪಸೂತ್ರದಲ್ಲಿ ಮೂರು ಭಾಗಗಳು: ಶ್ರೌತಸೂತ್ರ, ಗೃಹ್ಯಸೂತ್ರ ಮತ್ತು ಧರ್ಮಸೂತ್ರ ಎಂಬುದಾಗಿ. ಇವುಗಳಲ್ಲಿ ಶ್ರೌತಸೂತ್ರಗಳು ವೇದದ ಕರ್ಮಗಳಿಗೆ ಸಂಬಂಧಿಸಿದುವು. ಅವನ್ನು ಬಿಟ್ಟರೆ ಗೃಹ್ಯ ಮತ್ತು ಧರ್ಮಸೂತ್ರಗಳು ಬಹಳ ಮುಖ್ಯವಾದುವು. ಅಂದಿನ ಜನಜೀವನವನ್ನು ರೂಪಿಸಿ

ಪ್ರಮುಖ ಶಕ್ತಿಗಳ ಪರಿಚಯ ಇವುಗಳಿಂದ ನಮಗಾಗುತ್ತದೆ.

ಗೃಹ್ಯಸೂತ್ರಗಳು ಮನುಷ್ಯನ ಗೃಹಜೀವನದ ನಿಯಮಗಳನ್ನು ಸೂತ್ರೀಕರಿಸಿವೆ. ಹುಟ್ಟಿದಂದಿನಿಂದ ಅಥವಾ ಅದಕ್ಕೆ ಮುನ್ನ ಮಾತೃಗರ್ಭಕ್ಕೆ ಬಂದಂದಿನಿಂದಲೂ ಹಿಡಿದು ಕೊನೆಯ ಉಸಿರನ್ನು ಎಳೆಯುವವರೆಗೆ ವ್ಯಕ್ತಿ ಪಡೆಯಬೇಕಾದ ಸಂಸ್ಕಾರಗಳನ್ನು ಅದು ಹೇಳುತ್ತದೆ. ಗರ್ಭಾಧಾನದಿಂದ ಪ್ರಾರಂಭವಾಗಿ ಸುಮಾರು ೪೦ ಸಂಸ್ಕಾರಗಳು ಉಕ್ತವಾಗಿವೆ. ಅವುಗಳಲ್ಲಿ ವಿವಾಹದವರೆಗೆ ಹದಿನೆಂಟು ಸಂಸ್ಕಾರಗಳು ಮುಖ್ಯವಾದುವು. ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ವಿದ್ಯಾರಂಭ, ಉಪನಯನ, ಸಮಾವರ್ತನ ಮತ್ತು ವಿವಾಹ. ಇಲ್ಲಿಗೆ ಜೀವನದಲ್ಲಿ ಪ್ರಮುಖವಾದ ಒಂದು ಘಟ್ಟವನ್ನು ತಲುಪಿದಂತಾಗುತ್ತದೆ. ಈ ಸಂಸ್ಕಾರ ವಿಧಿಗಳ ಹಿಂದಿರುವ ಮನೋಧರ್ಮ ಅರ್ಥವತ್ತಾದುದು.

ಅನಂತರದ ಸಂಸ್ಕಾರಗಳಲ್ಲಿ ಮುಖ್ಯವಾದುವು ಪಂಚಮಹಾಯಜ್ಞಗಳು; ಅವು ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ ಮತ್ತು ಮನುಷ್ಯಯಜ್ಞ. ಇವಲ್ಲದೆ ಬೆಳಗಿನ ಸಂಜೆಯ ಪೂಜಾವಿಧಾನಗಳು, ಹುಣ್ಣಿಮೆ ಅಮಾವಾಸ್ಯೆಯ ಕರ್ಮಗಳು, ವಾರ್ಷಿಕಶ್ರಾದ್ಧ, ಕೊನೆಗೆ ಮನೆ ಕಟ್ಟುವುದರಿಂದ ಹಿಡಿದು ದನ ಸಾಕುವುದು ಮೊದಲಾದ ಗೃಹಕೃತ್ಯದ ಎಲ್ಲ ಅಂಶಗಳೂ ವಿಧಿರೂಪದಿಂದ ಗೃಹ್ಯಸೂತ್ರಗಳಲ್ಲಿ ಉಕ್ತವಾಗಿವೆ. ಒಂದೊಂದನ್ನೂ ಅಲ್ಲಿ ವಿವರವಾಗಿ ವಿವೇಚಿಸಲಾಗಿದೆ. ಈ ದೃಷ್ಟಿಯಿಂದ ಗೃಹ್ಯಸೂತ್ರಗಳನ್ನು ಜನಪದ ಜೀವನದ ಕೈಪಿಡಿ ಎನ್ನಬಹುದು.

ಧರ್ಮಸೂತ್ರಗಳೂ ಇಷ್ಟೇ ಮುಖ್ಯವಾದುವು. ವ್ಯಕ್ತಿನಿಷ್ಠ ಜೀವನದ ಗೃಹಕೃತ್ಯದ ಅಂಶಗಳನ್ನು ಗೃಹ್ಯಸೂತ್ರದಲ್ಲಿ ಕಂಡರೆ, ಧರ್ಮಸೂತ್ರಗಳ ಮುಖ್ಯ ವಿಷಯ ಧರ್ಮಾನುಷ್ಠಾನದ ನಿಯಮಗಳನ್ನು ವಿಧಿಸುವುದು. ಇಲ್ಲಿ ಧರ್ಮ ಎನ್ನುವುದನ್ನು ಮುಖ್ಯವಾಗಿ ಮಾನವನ ಕರ್ತವ್ಯಗಳು, ಅವನು ಕೈಕೊಳ್ಳಬೇಕಾದ ವಿಹಿತ ಕರ್ಮಗಳು—ಎಂಬ ಅರ್ಥದಲ್ಲಿ ತೆಗೆದುಕೊಳ್ಳಬಹುದು. ಧರ್ಮಾನುಷ್ಠಾನದ ಆವಶ್ಯಕತೆಯನ್ನು ಒತ್ತಿಹೇಳುವುದೇ ಧರ್ಮಸೂತ್ರಗಳ ಮುಖ್ಯೋದ್ದೇಶ.

> ನ ಜಾತು ಕಾಮಾನ್ನ ಭಯಾತ್ ನ ಲೋಭಾತ್ ಧರ್ಮಂ ತ್ಯಜೇಜ್ಜೀವಿತಸ್ಯಾಪಿ
> ಹೇತೋಃ । ಧರ್ಮೋ ನಿತ್ಯಃ ಸುಖದುಃಖೇತ್ವನಿತ್ಯೇ

—ಎಂಬ ಮಹಾಭಾರತದ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕಾಮ, ಭಯ ಲೋಭಗಳಿಗೊಳಗಾಗಿ ಧರ್ಮವನ್ನು ಬಿಡಬಾರದೆಂಬ ನಿಷ್ಠೆಯನ್ನು ಅದು ವಿಧಿಸುತ್ತದೆ. ಇದೇ ಅಭಿಪ್ರಾಯವನ್ನು ಧರ್ಮಶಾಸ್ತ್ರದಲ್ಲಿ ಹೀಗೆ ಹೇಳಲಾಗಿದೆ:

> ಶ್ರುತಿಃ ಸ್ಮೃತಿಸ್ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
> ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ॥

ಶ್ರುತಿ, ಸ್ಮೃತಿ, ಸದಾಚಾರ ಮತ್ತು ಆತ್ಮಪ್ರಿಯತೆ—ಇವೇ ಧರ್ಮದ ಮುಖ್ಯ ಲಕ್ಷಣಗಳೆಂದು ಇಲ್ಲಿ ಹೇಳಿವೆ. ಯಾವುದರ ಅನುಷ್ಠಾನದಿಂದ ಆತ್ಮಸಾಕ್ಷಾತ್

ಕಾರವಾಗುತ್ತದೋ ಅದೇ ಧರ್ಮ ಎಂದು 'ಧರ್ಮ' ಶಬ್ದದ ವ್ಯಾಖ್ಯೆಯನ್ನು ವೇದಾಂತಿಗಳು ಮಾಡುವುದುಂಟು. "ಅಯಂ ಹಿ ಪರಮೋ ಧರ್ಮಃ ಯದ್ಯೋಗೇನಾತ್ಮ ದರ್ಶನಂ"—ಎಂಬುದು ಅವರ ಮಾತು. "ಆಚಾರಃ ಪ್ರಥಮೋ ಧರ್ಮಃ"—ಎಂಬ ಅಭಿಪ್ರಾಯವೂ ಇದೆ. ಬೇರೆ ಬೇರೆ ರೀತಿಯ ಈ ನಿರ್ವಚನಗಳಲ್ಲಿ ಬೆಳೆದು ಬಂದಿರುವ ದೃಷ್ಟಿ ಒಂದೇ. ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿಗೆ ಕಾರಣವಾದ ಅಲೌಕಿಕೋ ಪಾಯವೇ ಧರ್ಮ—ಎಂದು ಈ ಎಲ್ಲ ದೃಷ್ಟಿಗಳನ್ನೂ ಒಳಗೊಳ್ಳುವಂತೆ ಅವನ್ನು ವಿವರಿಸ ಬಹುದು.

ಈ ಅಲೌಕಿಕ ಉಪಾಯವಾದ ಧರ್ಮವನ್ನು ಬೋಧಿಸುವುದೇ ಸ್ಮೃತಿಗಳ ಮುಖ್ಯ ಧ್ಯೇಯ. ಮನುವೇ ಮೊದಲಾದವರು ರಚಿಸಿರುವ ಧರ್ಮಸೂತ್ರಗಳು ಲೋಕವಿಹಿತ ವೆಂದು ಆ ಕಾಲಕ್ಕೆ ಪರಿಗಣಿತವಾದ ಧಾರ್ಮಿಕವಿಧಿಗಳನ್ನು ವಿವರವಾಗಿ ನಿರೂಪಿಸುತ್ತವೆ. ಭಾರತೀಯ ಜನಜೀವನವನ್ನು ರೂಪಿಸುವ ಬಹು ದೊಡ್ಡ ಶಕ್ತಿಗಳಾಗಿ ಅವು ಪರಿಣಮಿಸಿ ದುವು. ಇವುಗಳಲ್ಲಿ ಅನೇಕವು ಶ್ರೌತ ಮತ್ತು ಗೃಹ್ಯಸೂತ್ರಗಳಿಗೆ ಪೂರಕವಾಗಿ ಸೃಷ್ಟಿಯಾ ದವು. ಆದರೆ ಗೌತಮ ಮೊದಲಾದವರ ಧರ್ಮಸೂತ್ರಗಳು ಕಲ್ಪಸೂತ್ರಗಳಿಂದ ಬೇರೆ ಯಾಗಿ ಸ್ವತಂತ್ರ ಗ್ರಂಥಗಳಾಗಿ ರಚಿತವಾದುವು. ಈ ಸ್ಮೃತಿಕಾರರು ಜನಜೀವನದ ಸ್ವರೂಪವನ್ನು ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು.

ಸ್ಮೃತಿಕಾರರ ಸಂಖ್ಯೆಯಾಗಲಿ, ಸ್ಮೃತಿಗಳ ಕಾಲವಾಗಲಿ ನಿರ್ದಿಷ್ಟವಾಗಿ ತಿಳಿದು ಬರುವಂತಿಲ್ಲ. ಗೌತಮ ಧರ್ಮಸೂತ್ರವೇ ಅತ್ಯಂತ ಪ್ರಾಚೀನವಾದುದೆಂದು ಒಂದು ಅಭಿಪ್ರಾಯ. ಅದರ ಕಾಲ ಸುಮಾರು ಕ್ರಿ. ಪೂ. ೬೦೦ರಿಂದ ೩೦೦ರ ಒಳ ಎನ್ನುತ್ತಾರೆ.[೨೨] ಆಪಸ್ತಂಬ ಧರ್ಮಸೂತ್ರವೂ ಸ್ವಲ್ಪ ಹೆಚ್ಚು ಕಡಮೆ ಅದೇ ಕಾಲ ದಲ್ಲಿಯೇ ಎಂದರೆ ಕ್ರಿ. ಪೂ. ೫೦೦ರಿಂದ ೩೦೦ರ ಒಳಗೆ ರಚಿತವಾಯಿತೆನ್ನಬಹುದು ಅದು ಆಪಸ್ತಂಬ ಶ್ರೌತ ಮತ್ತು ಆಪಸ್ತಂಬ ಗೃಹ್ಯಸೂತ್ರಗಳಿಗೆ ಪೂರಕವಾಗಿ ಬೋಧಾಯನನ ಧರ್ಮಸೂತ್ರಕ್ಕೂ ಕ್ರಿ. ಪೂ. ೫೦೦ರಿಂದ ೩೦೦ರ ವರೆಗಿನ ಕಾಲವನ್ನೆ ಸೂಚಿಸಲಾಗಿದೆ. ಬೋಧಾಯನ ತನ್ನನ್ನೂ ಸೇರಿಸಿ ಎಂಟು ಜನ ಸ್ಮೃತಿಕಾರರನ್ನು ಹೇಳ ತ್ತಾನೆ. ಅವನು ಹೇಳುವ ಸ್ಮೃತಿಕಾರರು: ಔಪಜಂಘನಿ, ಕಾತ್ಯ, ಕಾಶ್ಯಪ, ಗೌತಮ ಪ್ರಜಾಪತಿ, ಮೌದ್ಗಲ್ಯ ಮತ್ತು ಹಾರೀತ. ವಸಿಷ್ಠನು ಉಲ್ಲೇಖಿಸಿರುವ ಸ್ಮೃತಿಕಾರ ಗೌತಮ, ಪ್ರಜಾಪತಿ, ಮನು, ಯಮ, ಹಾರೀತ ಎಂಬುವರು. ಆಪಸ್ತಂಬನು ಐವರು ಮತ್ತು ವಸಿಷ್ಠರ ಜೊತೆಗೆ ಏಕ, ಕುಣಿಕ ಮತ್ತು ಪುಷ್ಕರಸ ಎಂ ಮೂವರನ್ನೂ ಸೇರಿಸುತ್ತಾನೆ. ಅವನ ಪ್ರಕಾರ ಅವನೂ ಸೇರಿ ಹತ್ತು ಜನ ಸ್ಮೃತಿಕಾ ರಾಗುತ್ತಾರೆ. ಮನು ಹೇಳುವುದು ಅತ್ರಿ, ಔತಥ್ಯ, ಭೃಗು, ವಸಿಷ್ಠ, ವೈಖಾನ ಶೌನಕ, ತಾನು—ಹೀಗೆ ಏಳು ಜನ. ಯಾಜ್ಞವಲ್ಕ್ಯರು ಇಪ್ಪತ್ತು ಮಂದಿ ಸ್ಮೃತಿ ರರನ್ನು ಹೇಳುತ್ತಾರೆ. ಹೀಗೆ ಸ್ಮೃತಿಕಾರರ ಮತ್ತು ಸ್ಮೃತಿಗಳ ಸಂಖ್ಯೆಯ ವಿಚಾರ ಯಾರೊಬ್ಬರಲ್ಲಿಯೂ ಏಕಾಭಿಪ್ರಾಯವಿಲ್ಲ. ನಿಜಗುಣ ಶಿವಯೋಗಿಗಳು ತಮ್ಮ 'ವಿವೆ

ಚಿಂತಾಮಣಿ'ಯಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯದಂತೆ ಒಟ್ಟು ಹತ್ತೊಂಬತ್ತು ಮಂದಿ ಸ್ಮೃತಿಕಾರರಿದ್ದಾರೆ.

ಇವುಗಳ ಸಂಖ್ಯೆಯಂತೆ ಕಾಲ ನಿರ್ಧಾರವೂ ತೊಡಕಿನ ವಿಷಯವೇ ಆಗಿದೆ. ಅಲ್ಲದೆ ಕಲ್ಪಸೂತ್ರಕ್ಕೆ ಅಂಗಗಳಾದ ಧರ್ಮಸೂತ್ರಗಳು ಮತ್ತು ಶ್ಲೋಕರೂಪವಾದ ಸ್ವತಂತ್ರ ಧರ್ಮಶಾಸ್ತ್ರಗಳು—ಇವುಗಳಲ್ಲಿ ಕಾಲಾನುಕ್ರಮವನ್ನು ನಿರ್ಧರಿಸುವುದೂ ಸಾಧ್ಯವಿಲ್ಲವಾಗಿದೆ. ಬಹುಶಃ ಧರ್ಮಸೂತ್ರಗಳು ಪ್ರಾಚೀನವಾಗಿದ್ದು ಧರ್ಮಶಾಸ್ತ್ರಗಳಿಗೆ ಪ್ರೇರಕಶಕ್ತಿಯಾಗಿದ್ದುವೆನ್ನಬಹುದು. ಮನು ಮೊದಲಾದ ಧರ್ಮಶಾಸ್ತ್ರಜ್ಞರ ಉಲ್ಲೇಖ ಅನೇಕ ಧರ್ಮಸೂತ್ರಗಳಲ್ಲಿ ಕಂಡುಬರುವುದರಿಂದ ಬಹುಶಃ ಇವೆರಡೂ ಜೊತೆ ಜೊತೆಯಲ್ಲಿಯೇ ರಚಿತವಾಗುತ್ತ ಬಂದುವೆನ್ನಬಹುದು.

ಸ್ಮೃತಿಗಳಲ್ಲಿ ಆಚಾರ, ವ್ಯವಹಾರ, ಮತ್ತು ಪ್ರಾಯಶ್ಚಿತ್ತ ಎಂದು ಮುಖ್ಯವಾಗಿ ಮೂರು ವಿಭಾಗಗಳನ್ನು ಮಾಡಲಾಗಿದೆ. ಇವುಗಳಲ್ಲಿ ಮೊದಲನೆಯದರಲ್ಲಿ ವ್ಯಕ್ತಿಜೀವನ, ಗೃಹಜೀವನ ಮತ್ತು ಸಾಮಾಜಿಕ ಜೀವನಗಳಲ್ಲಿ ಅನುಸರಿಸಬೇಕಾದ ನಿಯಮಗಳು ಉಕ್ತವಾಗಿವೆ. ಆಚಾರಕ್ಕೆ ಬಹಳ ಪ್ರಮುಖ ಸ್ಥಾನವನ್ನು ಧರ್ಮಶಾಸ್ತ್ರಗಳು ಕೊಡುತ್ತವೆ. ಧರ್ಮಶಾಸ್ತ್ರಗಳ ಪ್ರಾರಂಭದಲ್ಲಿ ಆಚಾರಗಳ ಪ್ರಾಧಾನ್ಯವನ್ನು ಒತ್ತಿಹೇಳುತ್ತಾರೆ ಸ್ಮೃತಿಕಾರರು :

ಚತುರ್ಣಾಮಪಿ ವರ್ಣಾನಾಮಾಚಾರೋ ಧರ್ಮಪಾಲಕಃ ।
ಆಚಾರಭ್ರಷ್ಟದೇಹಾನಾಂ ಭವೇತ್ ಧರ್ಮಃ ಪರಾಙ್ಮುಖಃ ॥

ಎಂದು ಪರಾಶರ ಸ್ಮೃತಿ (೧–೩೭) ಹೇಳುತ್ತದೆ. ಮನುವೂ ಆಚಾರದ ಆವಶ್ಯಕತೆಯನ್ನು ಹೀಗೆ ಹೇಳುತ್ತಾನೆ: "ಆಚಾರಚ್ಯುತನಾದ ವಿಪ್ರನಿಗೆ ವೇದಾಧ್ಯಯನದ ಫಲವೂ ಸಹ ಲಭಿಸುವುದಿಲ್ಲ. ಪ್ರಾಚೀನ ಋಷಿಗಳು ಆಚಾರದಿಂದಲೇ ಧರ್ಮದ ಮೂಲವನ್ನು ಅರಿತರು. ಎಲ್ಲ ತಪಸ್ಸಿಗೂ ಆಚಾರವೇ ಆಧಾರ. ಅವರವರ ಕರ್ಮಗಳನ್ನು ಆಲಸ್ಯವಿಲ್ಲದೆ ಅನುಸರಿಸಬೇಕು. ಸದಾಚಾರವೇ ಧರ್ಮದ ಮೂಲ. ಆಚಾರದಿಂದ ಆಯುಸ್ಸು, ಇಷ್ಟಾರ್ಥಸಿದ್ಧಿ ಮತ್ತು ಅಕ್ಷಯವಾದ ಐಶ್ವರ್ಯಗಳು ಲಭಿಸುತ್ತವೆ. ಆಚಾರವು ಅಶುಭವನ್ನು ಸಹ ನಾಶಮಾಡುತ್ತದೆ"—ಎನ್ನುತ್ತಾನೆ ಮನು. ಆತ ದುರಾಚಾರಿಗಳನ್ನು ಕುರಿತು ಹೇಳುವ ಮಾತುಗಳೂ ಗಮನಾರ್ಹವಾಗಿವೆ: "ದುರಾಚಾರಿಯು ಲೋಕದಲ್ಲಿ ನಿಂದೆಗೆ ಗುರಿಯಾಗುತ್ತಾನೆ. ಅವನು ದುಃಖಿಯೂ ರೋಗಗ್ರಸ್ತನೂ ಅಲ್ಪಾಯುವೂ ಆಗುತ್ತಾನೆ. ಆದುದರಿಂದ ಮಾನವನು ಪರಾಧೀನವಾದ ಕರ್ಮವನ್ನು ಸಾಧ್ಯವಾದಮಟ್ಟಿಗೂ ತ್ಯಜಿಸಿ ಆತ್ಮಾಧೀನವಾದ ಕರ್ಮವನ್ನು ಅನುಷ್ಠಾನ ಮಾಡಬೇಕು"—ಈ ಮೊದಲಾದ ಮಾತುಗಳು ಆಚಾರದ ಮಹತ್ತ್ವವನ್ನು ಸೂಚಿಸುತ್ತವೆ. ಆಚಾರರಹಿತರಾದವರಿಗೆ ಮನು ಈ ಎಚ್ಚರಿಕೆಯನ್ನು ಕೊಡುತ್ತಾನೆ :

ಅಧರ್ಮೇಣೈಧತೇ ತಾವತ್ ತತೋ ಭದ್ರಾಣಿ ಪಶ್ಯತಿ ।
ತತಃ ಸಪತ್ನಾನ್ ಜಯತಿ ಸಮೂಲಸ್ತು ವಿನಶ್ಯತಿ ॥

"ಅಧಾರ್ಮಿಕನಿಗೆ ಮೊದಮೊದಲು ಏಳ್ಗೆಯೂ ಶುಭಪರಂಪರೆಯೂ ಲಭಿಸಿದಂತೆ ತೋರುತ್ತದೆ. ಶತ್ರುಜಯವೂ ಆಗುತ್ತದೆ. ಆದರೆ ಕಡೆಗೆ ಸಮೂಲವಾಗಿ ಅವನು ನಾಶ ವಾಗುತ್ತಾನೆ."

ಆಚಾರಕಾಂಡದಲ್ಲಿ ಮುಖ್ಯವಾಗಿ ಕಾಣುವುದು ದಿನಚರ್ಯೆಯನ್ನು ಕುರಿತ ಷಟ್ ಕರ್ಮ ಗಳ ನಿರೂಪಣೆಯನ್ನು.

ಸಂಧ್ಯಾಸ್ನಾನಂ ಜಪೋ ಹೋಮೋ ದೇವತಾನಾಂ ಚ ಪೂಜನಮ್ ।
ಆತಿಥ್ಯಂ ವೈಶ್ವದೇವಶ್ಚ ಷಟ್ ಕರ್ಮಾಣಿ ದಿನೇ ದಿನೇ ॥

ಈ ಆರು ವಿಧಿಗಳು ಸಾಮಾನ್ಯವಾಗಿ ಎಲ್ಲ ಸ್ಮೃತಿಗಳಲ್ಲಿಯೂ ಕಂಡುಬರುತ್ತವೆ. "ಬ್ರಾಹ್ಮೀಮುಹೂರ್ತದಲ್ಲೆದ್ದು ಧರ್ಮ ಮತ್ತು ಅರ್ಥಗಳನ್ನು ಅನುಚಿಂತನಮಾಡ ಬೇಕು. ಕಾಯಕ್ಲೇಶ ಮತ್ತು ಅದಕ್ಕೆ ಮೂಲವಾದ ವಿಷಯಗಳು ಹಾಗೂ ವೇದ ತತ್ತ್ವಾರ್ಥಗಳನ್ನು ಆಲೋಚಿಸಬೇಕು. ತರುವಾಯ ನಿತ್ಯಕರ್ತವ್ಯಗಳನ್ನು ಮಾಡಿ ಸಂಧ್ಯಾದಿಗಳನ್ನು ಆಚರಿಸಬೇಕು. ಋಷಿಗಳು ಈ ಪವಿತ್ರ ಕರ್ತವ್ಯಗಳನ್ನೆಸಗುತ್ತಿದ್ದುದ ರಿಂದಲೇ ದೀರ್ಘಾಯುಸ್ಸು, ಪ್ರಜ್ಞೆ, ಕೀರ್ತಿ ಮತ್ತು ಬ್ರಹ್ಮವರ್ಚಸ್ಸುಗಳನ್ನು ಪಡೆ ದಿದ್ದರು"—ಎಂಬ ಮಾತು ಮನುಧರ್ಮಶಾಸ್ತ್ರದಲ್ಲಿ ಬರುತ್ತದೆ. ಇತರ ದೈನಂದಿನ ಕರ್ಮಗಳ ವಿಧಿಯೂ ದೀರ್ಘವಾಗಿದೆ.

ಆತ್ಮಪರಿಶೋಧನೆಯ ಮಾರ್ಗದಲ್ಲಿ ಸಂಸ್ಕಾರಗಳು ಅವಶ್ಯಕ. ಹಿಂದೆ ನೋಡಿದ ಗೃಹ್ಯಸೂತ್ರದ ಗರ್ಭಾಧಾನಾದಿ ಸಂಸ್ಕಾರಗಳೆಲ್ಲವನ್ನೂ ಇಲ್ಲಿ ಸೇರಿಸಬಹುದು. ಗೌತಮ ೪೦ ಸಂಸ್ಕಾರಗಳನ್ನು ಹೇಳುತ್ತಾನೆ. ಅವುಗಳನ್ನು ಆಚರಿಸುವುದರಿಂದ ಜೀವಕ್ಕಂಟಿದ ಪಾಪ ವಿಮುಕ್ತವಾಗುತ್ತದೆಂಬುದು ಆತನ ಅಭಿಮತ. "ಸಂಸ್ಕಾರವು ದೋಷವನ್ನು ಹೋಗ ಲಾಡಿಸಿ ಸಂಸ್ಕಾರ್ಯನಲ್ಲಿ ಗುಣಾದಾನ ಮಾಡುತ್ತದೆ"—ಎಂದು ಶಂಕರರು ತಮ್ಮ 'ಬ್ರಹ್ಮ ಸೂತ್ರ ಭಾಷ್ಯ'ದಲ್ಲಿ ಸಂಸ್ಕಾರಗಳ ಮಹತ್ತ್ವವನ್ನು ಹೇಳಿದ್ದಾರೆ.

ವರ್ಣಾಶ್ರಮಗಳ ಪ್ರತಿಪಾದನೆ ಸ್ಮೃತಿಗಳಲ್ಲಿ ಸ್ಪಷ್ಟವಾಗಿದೆ. ವೇದೋಪನಿಷತ್ತುಗಳ ಕಾಲಕ್ಕಾಗಲೇ ವರ್ಣವ್ಯವಸ್ಥೆ ರೂಪುಗೊಂಡಿತ್ತು. ಸ್ಮೃತಿಗಳು ಅದನ್ನು ಖಚಿತಗೊಳಿಸಿ ದುವು. ಆಯಾ ವರ್ಣಗಳವರು ಕೈಕೊಳ್ಳಬೇಕಾದ ವೃತ್ತಿಗಳನ್ನು ಕುರಿತು ವಿವರವಾಗಿ ಸ್ಮೃತಿಗಳು ಪ್ರಸ್ತಾಪಿಸಿವೆ. ಮುಖ್ಯವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ —ಎಂಬ ವರ್ಣಗಳೂ ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಆಶ್ರಮಗಳೂ ಆಯಾ ವರ್ಣಗಳ ಮತ್ತು ಆಶ್ರಮಗಳ ಕರ್ತವ್ಯ ಮತ್ತು ಸಾಧನೆಗಳ ಮಾರ್ಗಗಳೂ ವಿವರವಾಗಿ ನಿರೂಪಿತವಾಗಿವೆ.

ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಗಳು ಬಾ[illegible] ಮುಖ್ಯ ವೃತ್ತಿಗಳೆಂದು ಮನು ಹೇಳುತ್ತಾನೆ (ಮನು. ೧-೮೮ ; ೧೦-

೭೫). ಆದರೆ ಪರಾಶರ ಸ್ಮೃತಿ ಇಲ್ಲಿ ಕೆಲವು ಬದಲಾವಣೆಗಳನ್ನು ಮಾಡುತ್ತದೆ. ಅದರ ಪ್ರಕಾರ ವಿಪ್ರನು ಕೃಷಿಕರ್ಮಗಳನ್ನು ಕೈಕೊಳ್ಳಬಹುದು. "ಅವನು ತಾನೇ ನೆಲವನ್ನು ಉತ್ತು ಹದಮಾಡಿ, ತಾನೇ ಸಂಪಾದಿಸಿದ ಬೀಜಗಳನ್ನು ಬಿತ್ತಿ ಪಂಚಯಜ್ಞಗಳನ್ನಾಚರಿಸ ಬೇಕು" (೨-೬) ಎನ್ನುತ್ತಾನೆ ಪರಾಶರ. ಆದರೂ ಬ್ರಾಹ್ಮಣ ಇತರರಿಗೆ ವಿಹಿತವಾದ ಕೃಷಿಕರ್ಮಗಳಲ್ಲಿ ತೊಡಗದೆ ತನಗೆ ಸಹಜವಾದ ಕರ್ಮಗಳನ್ನೇ ಕೈಕೊಳ್ಳಬೇಕೆಂದು ಮತ್ತೆ ಸೂಚಿಸುತ್ತಾನೆ.

ರಾಜ್ಯವನ್ನು ಕಟ್ಟುವ ಆಳುವ ಸಂಘಟಿಸುವ ಕರ್ತವ್ಯ ಕ್ಷತ್ರಿಯನದು. ಆತ ಹೊರಗಿನ ಶತ್ರುಗಳಿಂದಲೂ ಒಳಗಿನ ಜಗಳಗಳಿಂದಲೂ ಜನರನ್ನು ರಕ್ಷಿಸಿ ಸಾಮಾಜಿಕ ಜೀವನದ ಶಾಂತಿಯನ್ನು ಕಾಪಾಡುವವನು. ಇನ್ನು ವೈಶ್ಯರಿಗೆ ಪರಾಶರನು ವಿಧಿಸುವ ಕರ್ತವ್ಯಗಳು ಇವು :

ಲಾಭ ಕರ್ಮ ತಥಾ ರತ್ನಂ ಗವಾಂ ಚ ಪರಿಪಾಲನಮ್ ।
ಕೃಷಿಕರ್ಮ ಚ ವಾಣಿಜ್ಯಂ ವೈಶ್ಯವೃತ್ತಿರುದಾಹೃತ ॥

ಎಂದರೆ ಕೃಷಿ, ಗೋರಕ್ಷೆ, ವಾಣಿಜ್ಯ ಮೊದಲಾದ ಕರ್ಮಗಳು ಆತನವು.

ಶೂದ್ರ ಈ ಮೂರು ವರ್ಣಗಳವರ ಸೇವೆಯನ್ನು ಮಾಡಿಕೊಂಡು ಬಾಳಬೇಕಾದವ ನೆಂದು ಹೇಳಿರುವುದು ಸ್ಮೃತಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಪರಾಶರ ಮೊದಲಾದ ಕೆಲವು ಸ್ಮೃತಿಗಳಲ್ಲಿ ಶೂದ್ರನು ಲವಣ ಮಧು ತೈಲ ದಧಿ ಕ್ಷೀರ ಇತ್ಯಾದಿ ಗಳನ್ನು ವಿಕ್ರಯ ಮಾಡಬಹುದೆಂದೂ ವ್ಯವಸಾಯ ಕೈಗಾರಿಕೆ ವ್ಯಾಪಾರಗಳನ್ನು ಕೈಕೊಳ್ಳಬಹುದೆಂದೂ ಹೇಳಲಾಗಿದೆ. ಚತುರ್ವರ್ಣಗಳಿಗೆ ಉಕ್ತವಾದ ಈ ಆಚಾರಗಳಲ್ಲಿ ಕಾಲಕಾಲಕ್ಕೆ ಅಲ್ಲಲ್ಲಿ ಬದಲಾವಣೆಗಳು ಆಗುತ್ತ ಬಂದಿರುವುದು ಅನೇಕ ಸ್ಮೃತಿಗಳ ಅಧ್ಯಯನದಿಂದ ತಿಳಿದುಬರುತ್ತದೆ. ಆದರೆ ಮೂಲಭೂತವಾದ ಚೌಕಟ್ಟು ಮಾತ್ರ ಸ್ವಲ್ಪ ಹೆಚ್ಚುಕಡಿಮೆ ಒಂದೇ ಆಗಿ ಉಳಿಯಿತು. ಹಿಂದೂಧರ್ಮದಲ್ಲಿ ವಿಭಜನೆಗಳನ್ನು ಶಾಶ್ವತ ಗೊಳಿಸಿತು.

ಧರ್ಮಶಾಸ್ತ್ರಗಳ ಎರಡನೆಯ ಕಾಂಡ ವ್ಯವಹಾರಕಾಂಡ. ಇದು ಬಹಳ ಮುಖ್ಯ ವಾದುದು. ನ್ಯಾಯ ತೀರ್ಮಾನದ ಪದ್ಧತಿಗೆ ಇದು ತಳಹದಿಯನ್ನು ಹಾಕಿತು. ಪ್ರಾಚೀನ ಭಾರತದಲ್ಲಿ ರಾಜನೇ ಕೊನೆಯ ನ್ಯಾಯಾಧಿಪತಿ. ಆತನ ತೀರ್ಮಾನವೇ ಅಂತಿಮ. ಆದರೆ ಅದಕ್ಕೆ ನಿರ್ದಿಷ್ಟವಾದ ವಿಧಿಯನ್ನು ರೂಪಿಸಿಕೊಟ್ಟವು ಸ್ಮೃತಿಗಳು :

ವ್ಯವಹಾರಾನ್ ನೃಪಃ ಪಶ್ಯೇತ್ ವಿದ್ವದ್ಭಿಃ ಬ್ರಾಹ್ಮಣೈಃ ಸಹ ।
ಧರ್ಮಶಾಸ್ತ್ರಾನುಸಾರೇಣ ಕ್ರೋಧಲೋಭವಿವರ್ಜಿತಃ ॥

ನ್ಯಾಯತೀರ್ಮಾನದಲ್ಲಿ ರಾಜನು ವೇದಶಾಸ್ತ್ರಪಾರಂಗತರೂ ಧರ್ಮಜ್ಞರೂ ಸತ್ಯ ವಾದಿಗಳೂ ಶತ್ರುಮಿತ್ರರಲ್ಲಿ ಸಮಬುದ್ಧಿಯುಳ್ಳವರೂ ಆದ ಸಭಾಸದರ ಸಹಾಯವನ್ನು ಪಡೆಯಬೇಕೆಂದು ಯಾಜ್ಞವಲ್ಕ್ಯ ಸ್ಮೃತಿ ಹೇಳುತ್ತದೆ. ರಾಜನು ವ್ಯವಹಾರಗಳನ್ನು

ತಾನೇ ಪರಿಶೀಲಿಸಲು ಅವಕಾಶವಿಲ್ಲವಾದರೆ ಮೇಲೆ ಕಂಡ ಸಭ್ಯರ ಜೊತೆಗೆ ಸರ್ವಧರ್ಮಜ್ಞನಾದ ಬ್ರಾಹ್ಮಣನನ್ನು ತನ್ನ ಪ್ರತಿನಿಧಿಯನ್ನಾಗಿ ನೇಮಿಸಬಹುದಿತ್ತು. ಗೌರವಸ್ಥರೂ ಐಶ್ವರ್ಯವಂತರೂ ಮತ್ತು ಉತ್ತಮ ಮನೆತನಕ್ಕೆ ಸೇರಿದವರೂ ಆದ ವೃದ್ಧ ವ್ಯಾಪಾರಿಗಳನ್ನು ನ್ಯಾಯಾಲಯಕ್ಕೆ ಆಹ್ವಾನಿಸಬೇಕೆಂದು ಕಾತ್ಯಾಯನನು ಹೇಳುತ್ತಾನೆ. ಇಲ್ಲಿ ರಾಜ ನ್ಯಾಯನಿರ್ವಹಣೆಯ ಅಧಿಕಾರಿಯಾಗಿದ್ದನೇ ಹೊರತು, ನ್ಯಾಯ ತೀರ್ಮಾನದ ನಿಯಮಗಳನ್ನು ರೂಪಿಸುವವನಾಗಿರಲಿಲ್ಲ. ನ್ಯಾಯ ತೀರ್ಮಾನಕ್ಕೆ ಅಗತ್ಯವಾದ ನಿಯಮಗಳನ್ನು ಸ್ಮೃತಿಗಳೇ ಹಾಕಿಕೊಟ್ಟುವು. ಆ ಮಾರ್ಗದಲ್ಲಿ ನಡೆದು ಅವುಗಳನ್ನು ಕಾರ್ಯಗತಗೊಳಿಸುವುದಷ್ಟೇ ರಾಜನ ಕರ್ತವ್ಯವಾಗಿತ್ತು.

ಇನ್ನು ಕೊನೆಯದು ಪ್ರಾಯಶ್ಚಿತ್ತಕಾಂಡ. ವಿಹಿತ ಆಚಾರಗಳನ್ನು ಬಿಟ್ಟು ಕರ್ತವ್ಯ ಚ್ಯುತನಾದ ಮಾನವ ಪ್ರಾಯಶ್ಚಿತ್ತಕ್ಕೆ ಒಳಗಾಗಲೇಬೇಕೆಂಬುದು ಸ್ಮೃತಿಗಳ ಅಭಿಪ್ರಾಯ ತಿಳಿಯದೇ ಮಾಡಿದ ಪಾಪವು ವೇದಾಧ್ಯಯನ ಮೊದಲಾದ ಸತ್ಕರ್ಮಗಳಿಂದ ನಾಶವಾಗುತ್ತದೆ. ಆದರೆ ತಿಳಿದು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವೇ ಗತಿ.

ಪ್ರಾಯೋ ನಾಮ ತಪಃ ಪ್ರೋಕ್ತಂ ಚಿತ್ತಂ ನಿಶ್ಚಯ ಉಚ್ಯತೇ।
ತಪೋನಿಶ್ಚಯಸಂಯುಕ್ತಂ ಪ್ರಾಯಶ್ಚಿತ್ತಮಿತಿ ಸ್ಮೃತಮ್॥

ಎನ್ನುತ್ತಾನೆ ಮನು. ಮುಂದುವರಿದು ಆತ ಹೇಳುತ್ತಾನೆ: "ಕೆಲವರು ದುಶ್ಚರಿತಗಳಿಂದಲೂ ಕೆಲವರು ಪೂರ್ವಕೃತ ಕರ್ಮಫಲದಿಂದಲೂ ನರಕಸ್ಥಿತಿಯನ್ನು ಇಲ್ಲಿಯೇ ಅನುಭವಿಸುತ್ತಾರೆ. ಅಂಥ ಪಾಪಪರಿಶೋಧನೆಗಾಗಿ ಪ್ರತಿನಿತ್ಯವೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದ ಪಕ್ಷದಲ್ಲಿ ಅವರು ನಿಂದ್ಯ ಲಕ್ಷಣಯುಕ್ತರಾಗಿ ಹುಟ್ಟಬೇಕಾಗುತ್ತದೆ" (೧೧–೪೮—೫೩).

ಹೀಗೆ ಧರ್ಮಶಾಸ್ತ್ರಗಳಲ್ಲಿ ಆಚಾರ ವ್ಯವಹಾರ ಪ್ರಾಯಶ್ಚಿತ್ತ ಎಂಬ ಈ ಮೂರು ಮುಖ್ಯ ವಿಭಾಗಗಳಿರುತ್ತವೆ. ಇವುಗಳ ಜೊತೆಗೆ ಇವುಗಳಿಗೆ ಸಹಾಯಕವಾಗುವಂತೆ ಬ್ರಹ್ಮಚಾರಿಯ ಜೀವನ, ಸ್ನಾತಕನ ಕರ್ತವ್ಯಗಳು, ಗೃಹಸ್ಥನ ಕರ್ತವ್ಯಗಳು, ಪಂಚಯಜ್ಞಗಳು, ದಾನ, ಯುಕ್ತಾಹಾರ, ನಿಷಿದ್ಧಾಹಾರ, ಅಶೌಚ, ಶ್ರಾದ್ಧ, ಸ್ತ್ರೀಧರ್ಮ, ರಾಜಧರ್ಮ, ಆಪದ್ಧರ್ಮ, ಶಾಂತಿಕರ್ಮ—ಈ ಮೊದಲಾದ ಅನೇಕ ಅಂಶಗಳನ್ನು ವಿವರಿಸುತ್ತವೆ ಸ್ಮೃತಿಗಳು. ಜೀವನದ ಎಲ್ಲ ಮುಖಗಳನ್ನೂ ಸ್ಮೃತಿಗಳು ವ್ಯಾಪಿಸಿರುವುದನ್ನು ಇದರಿಂದ ಕಂಡುಕೊಳ್ಳಬಹುದು.

ಇವುಗಳ ಗಾಢವಾದ ಪರಿಣಾಮ ಸಮಾಜದ ಮೇಲಾಯಿತು. ಸಾಮಾಜಿಕ ಜೀವನದ ಒಂದು ಸ್ಪಷ್ಟವಾದ ರೂಪ ಇವುಗಳಲ್ಲಿ ವ್ಯಕ್ತವಾಯಿತು. ವೈಯಕ್ತಿಕ ಜೀವನದ ನೀತಿನಿಯಮಗಳು ನಿರ್ಬಂಧಿತವಾದುವು. "ಆತ್ಮಪ್ರಶಂಸಾ ಪರಗರ್ಹಾಮಿತಿ ಚ ವರ್ಜಯೇತ್", ಎಂದರೆ "ಆತ್ಮಸ್ತುತಿ ಪರನಿಂದೆಗಳನ್ನು ಬಿಡಬೇಕು"—ಎಂಬಂತಹ ಅನೇಕ ಮಾತುಗಳು ಸ್ಮೃತಿಗಳಲ್ಲಿ ಉಕ್ತವಾಗಿವೆ.

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ।
ಪ್ರಿಯಂ ಚ ನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ॥

ಎಂಬ ಮನುವಿನ ಮಾತಂತೂ ಸುಪ್ರಸಿದ್ಧವಾಗಿದೆ. ವೈಯಕ್ತಿಕವಾದ ನೈತಿಕ ಜೀವನದ ವಿಷಯದಲ್ಲಿ ಸ್ಮೃತಿಗಳು ಉದಾತ್ತವಾದ ಮಾರ್ಗವನ್ನು ಹಾಕಿಕೊಟ್ಟುವು. ಪರಸ್ತ್ರೀಯರನ್ನು ಗೌರವದಿಂದ ಕಾಣಬೇಕು. "ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ." ಆದುದರಿಂದ ತಾಯಿ ತಂಗಿ ಮಗಳು ಇವರೊಡನೆಯೂ ಕೂಡ ಏಕಾಂತದಲ್ಲಿ, ಏಕಾಸನದಲ್ಲಿ ಇರಬಾರದು—ಎಂದು ಮುಂತಾಗಿ ಮನು ಎಚ್ಚರಿಸುತ್ತಾನೆ. ಕಾಮವನ್ನು ಅದರ ಉಪಭೋಗದಿಂದ ತೃಪ್ತಿಪಡಿಸುವುದು ಸಾಧ್ಯವಿಲ್ಲವೆಂಬ ಮಾತನ್ನು ಆತ ಹೀಗೆ ಹೇಳಿದ್ದಾನೆ:

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥

"ಕಾಮವು ಉಪಭೋಗದಿಂದ ತೃಪ್ತಿಹೊಂದುವುದಿಲ್ಲ. ಅದು ತುಪ್ಪದಿಂದ ಬೆಂಕಿ ವರ್ಧಿಸುವಂತೆ ಮತ್ತಷ್ಟು ಹೆಚ್ಚುತ್ತದೆ."

ಜೀವನದಲ್ಲಿ ಕೆಲವು ಉದಾತ್ತವಾದ ಮೌಲ್ಯಗಳನ್ನು ಸ್ಮೃತಿಗಳು ನಿರ್ಧರಿಸಿದುವು. ಸತ್ಯ ಅಹಿಂಸೆ ಧರ್ಮ ಮೊದಲಾದುವನ್ನು ಜೀವನದಲ್ಲಿ ಅಳವಡಿಸಿದುವು. ಇಲ್ಲಿ ನಾವು ಹೇಡಿಗಳಾಗಿರಬಾರದು, ಚೆನ್ನಾಗಿ ಬದುಕಬೇಕು. ಆದರೆ ಅದಕ್ಕಾಗಿ ಉತ್ತಮರು "ಯಾವ ಪ್ರಾಣಿಗೂ ನೋವಾಗದಿರುವ ವೃತ್ತಿಯನ್ನು ಅವಲಂಬಿಸಬೇಕು. ಅನಿಂದ್ಯವಾದ ಯಾವ ಕೆಲಸವನ್ನಾದರೂ ಮಾಡಿ ಧನಾರ್ಜನೆ ಮಾಡಬಹುದು."

ವಿದ್ಯಾ ಶಿಲ್ಪಂ ಭೃತಿಃ ಸೇವಾ ಗೋರಕ್ಷ್ಯಂ ವಿಪಣಿಃ ಕೃಷಿಃ।
ಧೃತಿರ್ಭೈಕ್ಷ್ಯಂ ಕುಸೀದಂ ಚ ದಶ ಜೀವನಹೇತವಃ॥

ಎಂದು ಹತ್ತು ವಿಧವಾದ ಜೀವನ ಮಾರ್ಗವನ್ನು ಮನು ಸಂಗ್ರಹಿಸಿದ್ದಾನೆ. ಯಾವ ವೃತ್ತಿಯನ್ನೇ ಅನುಸರಿಸಲಿ, ಯಾವ ಮಾರ್ಗವನ್ನೇ ಅವಲಂಬಿಸಲಿ, ಮುಖ್ಯವಾಗಿ ನೆನಪಿನಲ್ಲಿಡಬೇಕಾದ ಮಾತೆಂದು ಸ್ಮೃತಿಕಾರರು ಹೇಳುವುದು ಇದು:

ಆತ್ಮೈವ ಹ್ಯಾತ್ಮನಃ ಸಾಕ್ಷೀ ಗತಿರಾತ್ಮಾ ತಥಾತ್ಮನಃ।
ಮಾವಮಂಸ್ಥಾಃ ಸ್ವಮಾತ್ಮಾನಂ ನೃಣಾಂ ಸಾಕ್ಷಿಣಮುತ್ತಮಂ॥

ತನಗೆ ತನ್ನ ಆತ್ಮವೇ ಸಾಕ್ಷಿ; ತನಗೆ ತಾನೇ ಗತಿ.

ಹೀಗೆ ಋಷಿಗಳು ಕಂಡ ಆತ್ಮಸಾಕ್ಷಾತ್ಕಾರ ಮಾರ್ಗದ ಕಡೆಗೆ ನಡೆಯುವ ಜೀವನ ಕ್ರಮವನ್ನು ಸ್ಮೃತಿಗಳು ರೂಪಿಸಲು ಯತ್ನಿಸಿದುವು. ಅವುಗಳಲ್ಲಿ ಉಕ್ತವಾದ 'ಯಮ' 'ನಿಯಮ'ಗಳು ಇಡೀ ಮಾನವ ಸಮಾಜಕ್ಕೇ ಆದರ್ಶಪ್ರಾಯವಾಗಿವೆ. ಪತಂಜಲಿಯ ಯೋಗಮಾರ್ಗಕ್ಕೆ ತಳಹದಿಯಾಗಿ ಈ ಎರಡು ಅಂಶಗಳು ಮೊತ್ತಮೊದಲು ಬಂದಿರುವುದನ್ನು ಕಾಣುತ್ತೇವೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ—ಇವು

ಗಳನ್ನು 'ಯಮು'ಗಳೆಂದೂ, ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ—ಇವು 'ನಿಯಮು'ಗಳೆಂದೂ ಯೋಗಸೂತ್ರದಲ್ಲಿ ಹೇಳಲಾಗಿದೆ. ಸಾಧನೆಗೆ ಆಧಾರವಾದ ನೈತಿಕ ಅಂಶಗಳು ಇವು. ಒಟ್ಟಿನಲ್ಲಿ ಮನು ಹೇಳುವಂತೆ :

ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಾಃ ಪರಂ ತಪಃ ।
ಸಾವಿತ್ರ್ಯಾಸ್ತು ಪರಂ ನಾಸ್ತಿ ಮೌನಾತ್ಸತ್ಯಂ ವಿಶಿಷ್ಯತೇ ॥

"ಓಂಕಾರ ಪ್ರಣವವೇ ಪರಬ್ರಹ್ಮ, ಪ್ರಾಣಾಯಾಮವೇ ತಪಸ್ಸು, ಗಾಯಿತ್ರಿಗಿಂತ ಶ್ರೇಷ್ಠವಾದ ಮಂತ್ರವಿಲ್ಲ, ಮೌನಕ್ಕಿಂತ ಸತ್ಯವಾದಿತ್ವವೇ ಮುಖ್ಯ." ಇಂಥ ಉದಾತ್ತ ಧ್ಯೇಯ ಸ್ಮೃತಿಗಳದು. "ಮಹಾಮಹಿಮರಾದ ಋಷಿಗಳು ಸಂಯಮಶೀಲರಾಗಿ ಗೆಡ್ಡೆ ಗೆಣಸುಗಳನ್ನು ಸೇವಿಸಿ ಕೇವಲ ತಪಸ್ಸಿನಿಂದಲೇ ಸಚರಾಚರಾತ್ಮಕವಾದ ಮೂರು ಲೋಕ ಗಳನ್ನೂ ಕುಳಿತಲ್ಲಿಂದಲೇ ನೋಡುತ್ತಿದ್ದರು. "ತಪಸ್ಸಿಗೆ ದುಸ್ತರವಾದ ಮತ್ತು ದುಷ್ಕರ ವಾದ ವಿಷಯವು ಯಾವುದೂ ಇಲ್ಲ"—ಎನ್ನುತ್ತಾನೆ ಮನು. ಇಂತಹ ಮಾತುಗಳಲ್ಲಿ ಸ್ಮೃತಿಗಳ ಉದ್ದೇಶಿತ ಧರ್ಮವೇನೆಂಬುದು ಸ್ಪಷ್ಟವಾಗುತ್ತದೆ.

ಮನು ಹೇಳುವ ಆತ್ಮಸಾಕ್ಷಾತ್ಕಾರದ ಮಾತು ಬಹಳ ಮುಖ್ಯವಾದುದು. ಕರ್ಮ ಗಳಲ್ಲಿ ಕಾಮ ಮತ್ತು ನಿಷ್ಕಾಮ ಎಂಬ ಎರಡು ವಿಧಗಳನ್ನು ಆತ ಮಾಡುತ್ತಾನೆ. ಐಹಿಕ ಮತ್ತು ಆಮುಷ್ಮಿಕ ಫಲಾಪೇಕ್ಷೆಯಿಂದ ಮಾಡುವ ಕರ್ಮಗಳು ಪ್ರವೃತ್ತಿ ಕರ್ಮಗಳು. ಜ್ಞಾನಪೂರ್ವಕವಾಗಿ ನಿಷ್ಕಾಮ ಬುದ್ಧಿಯಿಂದ ಮಾಡುವ ಕರ್ಮಗಳು ನಿವೃತ್ತಿ ಕರ್ಮಗಳು. ಕಾಮ್ಯಕರ್ಮಗಳಿಂದ ದೇವಗತಿ ಲಭಿಸುತ್ತದೆ, ನಿವೃತ್ತಿ ಕರ್ಮಗಳಿಂದ ಪಂಚಭೂತಗಳಿಗೆ ಅತೀತವಾದ ಮುಕ್ತಿ ಲಭಿಸುತ್ತದೆ. "ಯಾರು ಸರ್ವಭೂತಗಳಲ್ಲಿ ತನ್ನನ್ನೂ ತನ್ನಲ್ಲಿ ಸರ್ವಭೂತಗಳನ್ನೂ ಸಮನೆಂದು ತಿಳಿಯುತ್ತ ಬ್ರಹ್ಮಾರ್ಪಣ ಬುದ್ಧಿ ಯಿಂದ ಸತ್ಕರ್ಮಗಳನ್ನು ಮಾಡುತ್ತಿರುವರೋ ಅವರು ಸ್ವರಾಟ್ ಎಂದರೆ ಬ್ರಹ್ಮ ಸ್ವರೂಪವನ್ನೇ ಪಡೆಯುವರು." (೧೨-೯೧) ಎಂದು ಹೇಳುತ್ತಾನೆ ಮನು. ಕೊನೆಯಲ್ಲಿ :

ಏತಮೇಕೇ ವದಂತ್ಯಗ್ನಿಂ ಮನುಮನ್ಯೇ ಪ್ರಜಾಪತಿಂ
ಇಂದ್ರಮೇಕೇ ಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್ ॥

"ಕೆಲವರು ಅಗ್ನಿಯೆಂದೂ, ಕೆಲವರು ಪ್ರಜಾಪತಿಯೆಂದೂ ಮತ್ತೆ ಕೆಲವರು ಇಂದ್ರನೆಂದೂ ಇನ್ನುಳಿದವರು ಪರಬ್ರಹ್ಮವೆಂದೂ ಹೇಳುತ್ತಾರೆ"—ಎಂಬ ಮಾತು ಬರುತ್ತದೆ. ಅಲ್ಲದೆ, ಆ ಪರಬ್ರಹ್ಮ ವಸ್ತುವೇ ಸರ್ವಭೂತಗಳನ್ನೂ ತನ್ನ ಐದು ಮೂರ್ತಿಗಳಿಂದ ವ್ಯಾಪಿಸಿ ಸೃಷ್ಟಿ, ಸ್ಥಿತಿ ಲಯಗಳಿಗೆ ಕಾರಣವಾಗಿ ಸಂಸಾರವನ್ನು ಚಕ್ರದಂತೆ ಪ್ರವರ್ತಿಸುತ್ತಿದೆ. ಹೀಗೆ ಸರ್ವಭೂತಗಳಲ್ಲಿಯೂ ವ್ಯಾಪಿಸಿರುವ ಆತ್ಮನನ್ನು ಯಾವನು ಅರಿಯುವನೋ ಅವನು ಎಲ್ಲವನ್ನೂ ಆತ್ಮಸಮವೆಂದು ಭಾವಿಸಿ ಬ್ರಹ್ಮಸ್ವರೂಪವನ್ನೇ ಪಡೆಯುವನು" (೧೨-೧೨೪, ೧೨೫). ಇಂಥ ಮಾತುಗಳಲ್ಲಿ ಬ್ರಹ್ಮಸಾಕ್ಷಾತ್ಕಾರದ ಆದರ್ಶಕ್ಕೆ ಸ್ಮೃತಿ ಗಳು ಸಂಕೇತಗಳಾಗಿ ನಿಲ್ಲುವಂತೆ ಮಾಡಿದ್ದಾನೆ ಮನು.

ಭರತಖಂಡದ ಸಂಸ್ಕೃತಿಯಲ್ಲಿ ಸ್ಮೃತಿಕಾರರ ಸಾಧನೆ ಒಂದು ಪ್ರಮುಖವಾದ ಘಟ್ಟ. ಮನುಷ್ಯತ್ವದಲ್ಲಿ ದೈವತ್ವದ ಆವಿರ್ಭಾವವನ್ನು ಕಂಡಿದ್ದ ಉಪನಿಷತ್ತುಗಳ ದರ್ಶನದ ತಿರುಳಿಗೆ ಆಚಾರದ ರಕ್ಷೆಯನ್ನು ಇವು ಒದಗಿಸಿದುವು. ಇದರಿಂದ ಒಂದು ಕಡೆ ತಿರುಳಿಗೆ ರಕ್ಷಣೆ ದೊರೆತಂತಾದರೆ ಇನ್ನೊಂದು ಕಡೆ ತಿರುಳನ್ನು ಮರೆತು ಸಿಪ್ಪೆಯೇ ಸರ್ವಸ್ವವೆಂದು ಭ್ರಮಿಸುವ ಕರ್ಮಠ ಭಾವನೆಯೂ ಬೆಳೆಯದಿರಲಿಲ್ಲ. ಸ್ಮೃತಿಯಲ್ಲಿ ಉಕ್ತವಾದ ಆಚಾರಗಳೆಷ್ಟೋ ಅರ್ಥಹೀನವಾದ ಕರ್ಮಗಳಾಗಿ ಪರಿಣಮಿಸಿದುವು. ಅಲ್ಲದೆ ಸ್ಮೃತಿಕಾರರ ಉಕ್ತಿಗಳಲ್ಲಿ ಶಾಶ್ವತವಾದ ಸತ್ಯದ ಜೊತೆಗೆ ಕಾಲದೇಶಪರಿಮಿತವಾದ ಯುಗಧರ್ಮವೂ ಸೇರಿತ್ತು. ಯುಗಧರ್ಮದ ಬದಲಾವಣೆ ಕಾಲಕಾಲಕ್ಕೆ ಅನಿವಾರ್ಯ. ಸ್ಮೃತಿಕಾರರೂ ಈ ಅಂಶವನ್ನು ಅಲ್ಲಲ್ಲಿ ಗಮನಿಸಿರುವುದು ಕಂಡು ಬರುತ್ತದೆ. ಉದಾಹರಣೆಗೆ ಪರಾಶರ ಹೇಳುತ್ತಾನೆ, ಒಂದು ಯುಗಕ್ಕೆ ಹೇಳಿದ ಧರ್ಮಗಳನ್ನು ಇನ್ನೊಂದು ಯುಗದಲ್ಲಿ ಅನುಷ್ಠಾನ ಮಾಡುವುದು ಅಶಕ್ಯ—ಎಂದು.

ಆದರೆ ಮುಂದೆ ಬಂದವರಲ್ಲಿ ಆ ದೃಷ್ಟಿ ಮರೆಯಾಯಿತು. ಅಲ್ಲಿ ಉಕ್ತವಾದ ಆಚಾರಗಳೂ ಕರ್ಮಗಳೂ ಶಾಶ್ವತವಾಗಿ ಉಳಿಯತಕ್ಕುವೆಂದು ಭಾವಿಸುವಂತಾಯಿತು. ಯಜ್ಞಯಾಗಾದಿಗಳು ಶ್ರೌತಸೂತ್ರಗಳ ಹಿನ್ನೆಲೆಯಲ್ಲಿ ಪ್ರಬಲವಾದುವು. ಅವುಗಳ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆಗೆ ಧಾರ್ಮಿಕಸ್ವರೂಪ ಬಂದಿತ್ತು. ಅದನ್ನು ಬುದ್ಧ ಮಹಾವೀರ ಮೊದಲಾದವರು ಪ್ರತಿಭಟಿಸಿದರು. ಗೃಹ್ಯಸೂತ್ರಗಳ ಸಂಸ್ಕಾರ ವಿಧಿಗಳು ಮೀರಲಾರದ ನಿಯಮಗಳಾದುವು. ತಮ್ಮ ಉದ್ದೇಶಿತ ಅರ್ಥವನ್ನೇ ಕಳೆದುಕೊಂಡು ಯಾಂತ್ರಿಕ ಕ್ರಿಯೆಗಳಾಗಿ ಪರಿಣಮಿಸಿದುವು. ವೃತ್ತಿಗಳ ನಿರ್ವಹಣೆ ಮತ್ತು ಚತುರ್ವರ್ಣಗಳ ನಿಯತಕ್ರಮ—ಇವುಗಳ ವಿಚಾರದಲ್ಲಿ ಸ್ಮೃತಿಗಳು ಹಾಕಿಕೊಟ್ಟ ಮಾರ್ಗ ಒಂದು ದೃಷ್ಟಿಯಿಂದ ಒಳಿತನ್ನೇ ಸಾಧಿಸಿದರೂ ಇನ್ನೊಂದು ಕಡೆ ಸಮಾಜವನ್ನು ಹೋಳು ಹೋಳಾಗಿ ವಿಭಜಿಸಿತು. ಅನೇಕ ಜನಾಂಗಗಳ ಸಮ್ಮಿಶ್ರಣವಾಗಿದ್ದ ಭಾರತೀಯ ಜೀವನದಲ್ಲಿ ಈ ವಿಭಜನೆ ಆಗಲೇ ಸಹಜವಾಗಿ ಬೇರೂರಿತ್ತು. ವೇದಗಳಲ್ಲಿಯೇ ಅದಕ್ಕೆ ಸಾಕಷ್ಟು ಸಾಕ್ಷ್ಯಗಳು ದೊರೆಯುತ್ತವೆ. ಆ ಅವ್ಯವಸ್ಥೆಯಲ್ಲಿಯೇ ಒಂದು ವ್ಯವಸ್ಥೆಯನ್ನು ತರಲು ಪ್ರಯತ್ನಪಟ್ಟಿತು ಚತುರ್ವರ್ಣಗಳ ಕಲ್ಪನೆ.

ಬಹುಮುಖವಾದ ಸಮಾಜದಲ್ಲಿ ಎಲ್ಲ ವ್ಯಕ್ತಿಗಳ ಮಾನಸಿಕ ವಿಕಾಸವೂ ಒಂದೇ ಬಗೆಯದಾಗಿರುವುದಿಲ್ಲ—ಎಂಬ ತತ್ತ್ವದ ಮೇಲೆ ರೂಪಿತವಾದುದು ಚತುರ್ವರ್ಣ ಪದ್ಧತಿ. ಅವರವರ ಮಾನಸಿಕ ವಿಕಾಸಕ್ಕೆ, ಸಂಸ್ಕಾರಕ್ಕೆ ಸಂಬಂಧಿಸಿದಂತೆ ಕೈಕೊಳ್ಳುವ ವೃತ್ತಿಗಳಿಂದ ವ್ಯಕ್ತಿಯ ಜೀವನಕ್ರಮ ರೂಪಿತವಾಗುತ್ತದೆ. ಗುಣಸ್ವಭಾವಗಳಿಗೆ ಅನುಗುಣವಾಗಿ ಕರ್ಮ ನಿರ್ಧಾರಿತವಾಗುತ್ತದೆ. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂಬ ಕೃಷ್ಣನ ಮಾತು ಇದೇ ಅರ್ಥವನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಸಮಾಜದಲ್ಲಿ ಹಲವು ಹಂತಗಳು ಅನಿವಾರ್ಯ. ಆದರೆ ಕಾಲಕ್ರಮೇಣ ಈ ದೃಷ್ಟಿ ಮರೆಯಾಗಿ ವರ್ಣವ್ಯವಸ್ಥೆ ಸಂಕುಚಿತ ರೂಪವನ್ನು ಪಡೆಯಿತು. ಸಂಸ್ಕಾರ

ಸ್ವಭಾವಗಳ ಅರಿವಿಲ್ಲದೆ ಹುಟ್ಟಿನಿಂದಲೇ ವರ್ಣವ್ಯವಸ್ಥೆಯನ್ನು ಅಳೆಯುವ ಮತ್ತು ಆ ಅಳತೆಗೋಲಿನಿಂದ ಸಮಾಜವನ್ನು ವಿಭಜಿಸುವ ಸಾಧನವಾಯಿತು. ಸ್ಮೃತಿಕಾರರ ಕೈಯಲ್ಲಿ ಅದು ಧರ್ಮದ ಮುದ್ರೆಯನ್ನು ಪಡೆದು ಅಧಿಕೃತ ಶಾಸನವಾಗಿ ಪರಿಣಮಿಸಿತು.

ಶೂದ್ರರಿಗೆ ವೇದವನ್ನು ಓದುವ ಅಥವಾ ಕೇಳುವ ಅಧಿಕಾರವಿಲ್ಲವೆಂದೂ ಆ ಶಾಸನವನ್ನು ಮೀರಿದರೆ ಉಗ್ರಶಿಕ್ಷೆಗೆ ಒಳಗಾಗಬೇಕೆಂದೂ ಸ್ಮೃತಿಗಳು ಸಾರಿದುವು. ಅಲ್ಲದೆ ಅದನ್ನು ಕಟ್ಟುನಿಟ್ಟಾಗಿ ಆಚರಣೆಗೆ ತಂದುವು. ಸಮಾಜದ ಬಹುದೊಡ್ಡ ಭಾಗವನ್ನು ವಿದ್ಯಾವಿಹೀನವನ್ನಾಗಿ ಬೆಳಸಿ ತಮ್ಮ ಸೇವೆಗಿಟ್ಟುಕೊಂಡರು ಉತ್ತಮರು. ಎಲ್ಲೆಲ್ಲಿಯೂ ದೇವತ್ವವನ್ನೇ ಕಾಣುವ ಹಿಂದೂಧರ್ಮದ ಆದರ್ಶ ಇಲ್ಲಿ ಕೃತಿರೂಪಕ್ಕಿಳಿಯಲಿಲ್ಲ. ಅಂದಿನ ಸಮಾಜದ ರಚನೆಯಲ್ಲಿ ಇದು ಸಹಜವಾಗಿಯೇ ಪರಿಣಮಿಸಿತೆಂದೂ ಇದಕ್ಕೆ ಸ್ಮೃತಿಗಳು ಕಾರಣವಲ್ಲವೆಂದೂ ಸಮಾಧಾನವನ್ನು ಹೇಳಲು ಪ್ರಯತ್ನಿಸಬಹುದು. ಆದರೆ ಅಂತಹ ಉದಾತ್ತ ತಾತ್ತ್ವಿಕ ಹಿನ್ನೆಲೆಯುನ್ನುಳ್ಳ ಸ್ಮೃತಿಗಳು ಆದರ ವ್ಯಾಪಕ ಅಂಶಗಳಿಂದ ಸಮಾಜದ ಅಸಮತೆಯನ್ನು ಅಳಿಸಲಾರದುದು ಮಾತ್ರವಲ್ಲದೆ ಬೆಳಸಿಕೊಂಡು ಬರಲು ಕಾರಣವಾದುದು ಹೆಮ್ಮೆಪಡುವಂತಹ ಸಂಗತಿಯೇನೂ ಅಲ್ಲ. ಇದರ ಜೊತೆಗೆ ಅಸ್ಪೃಶ್ಯತೆಯೂ ಸೇರಿ ಹಿಂದೂಧರ್ಮದ ಸಾಮಾಜಿಕ ವಿಕಾರವನ್ನು ಇನ್ನೂ ಅಧಿಕಗೊಳಿಸಿತು. ಇದನ್ನು ಪ್ರತಿಭಟಿಸಿ ಇದರ ವಿರುದ್ಧ ಸಿಡಿದುನಿಂತ ಮಹಾತ್ಮರು ಆಗಾಗ ಆಗಿಹೋದರು. ಆದರೂ ಅದು ಒಂದಲ್ಲ ಒಂದು ರೂಪದಲ್ಲಿ ಬೆಳೆದುಕೊಂಡೇ ಬಂದಿತು. ಧರ್ಮದ ಆದರ್ಶಕ್ಕಿಂತ ಮನಸ್ಸಿನ ಸ್ವಾರ್ಥ ಮತ್ತು ದೌರ್ಬಲ್ಯಗಳು ದೊಡ್ಡವೆಂದು ತೋರಿಸಿಕೊಟ್ಟಿತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಆ ದೌರ್ಬಲ್ಯಕ್ಕೆ ಸ್ಮೃತಿಗಳಲ್ಲಿ ಧಾರ್ಮಿಕ ಅಂಗೀಕಾರ ದೊರೆತುದು.

ಸ್ಮೃತಿಗಳಲ್ಲಿ ಬರುವ ಆದರ್ಶಸಮಾಜದ ಸ್ವರೂಪ, ಧಾರ್ಮಿಕ ಆಚರಣೆಗಳು, ಸಂಸ್ಕಾರಗಳು—ಇವುಗಳಲ್ಲಿ ಬಹುಪಾಲು, ಇಡೀ ಸಮಾಜಕ್ಕೆ ಅನ್ವಯಿಸುವ ವಿಧಿಗಳಾಗಿರದೆ ಕೇವಲ ಒಂದು ವರ್ಗದವರಿಗೆ ಮಾತ್ರ ಮುಖ್ಯವಾಗಿ ಅನ್ವಯಿಸುವಂತಾದುವು. ಇದು ಅವುಗಳ ವ್ಯಾಪ್ತಿಯನ್ನು ಕಿರಿದುಗೊಳಿಸಿತು. ಸಾರ್ವಕಾಲಿಕವಾದ ಮತ್ತು ಸರ್ವವ್ಯಾಪಕವಾದ ದೃಷ್ಟಿಯಿಂದ ನೋಡಿದಾಗ ಇದು ಅವುಗಳಲ್ಲಿ ಕಂಡುಬರುವ ಕೊರತೆ. ಆದರೆ ಅವುಗಳಲ್ಲಿ ಎಷ್ಟೇ ನ್ಯೂನತೆಗಳಿದ್ದರೂ ಸ್ಮೃತಿಕಾರರಿಂದ ಭರತಖಂಡದ ಸಂಸ್ಕೃತಿ ಸಾಹಿತ್ಯ ಕಲೆ ವಿಜ್ಞಾನಗಳ ರಕ್ಷಣೆಗೆ ಆಗಿರುವ ಉಪಕಾರ ಅಪಾರವಾದುದು. ವಿಸ್ತಾರವಾದ ಈ ದೇಶದ ನಿರಂತರವಾದ ರಾಜಕೀಯ ಬದಲಾವಣೆಗಳ ಮಧ್ಯದಲ್ಲಿಯೂ ಸಾಮಾಜಿಕ ಪ್ರಕ್ಷುಬ್ಧತೆಗಳನ್ನು ತಡೆದು ನಿಲ್ಲಿಸಿದ ಶಕ್ತಿಗಳಲ್ಲಿ ಸ್ಮೃತಿಗಳು ಪ್ರಬಲವಾದುವುಗಳು. ಸಮಾಜದ ಪ್ರಗತಿಯಲ್ಲಿ ಇವು ದೊಡ್ಡ ಮೈಲಿಗಲ್ಲುಗಳಾಗಿ ಪರಿಣಮಿಸಿದುವು. ಅವುಗಳಲ್ಲಿ ಅನೇಕ ಅಂಶಗಳನ್ನು ಇಂದು ನಾವು ಒಪ್ಪಿಕೊಳ್ಳದಿರಬಹುದು. ಆದರೂ ಅವುಗಳ ಮಹತ್ತ್ವ ಮರೆಯಾಗುವಂತಹದಲ್ಲ. ಅದಕ್ಕೆ

ಕಾರಣ, ಸಮಾಜದ ಬೆಳವಣಿಗೆಯ ಒಂದು ದೊಡ್ಡ ಘಟ್ಟವನ್ನು ಅವು ಚಿತ್ರಿಸಿರುವುದು.

ಇನ್ನು ಆಗಮಗಳು : ಕಾಲದ ದೃಷ್ಟಿಯಿಂದ ಇವುಗಳಲ್ಲಿ ಅನೇಕವು ಈಚಿನವಾದರೂ ತತ್ತ್ವದ ದೃಷ್ಟಿಯಿಂದ ಅತಿ ಪ್ರಾಚೀನವಾದುವು. ಆದುದರಿಂದ ಸ್ಮೃತಿಗಳ ಜೊತೆಯಲ್ಲಿಯೇ ಆಗಮಗಳನ್ನು ನೋಡುವುದು ಉಚಿತವೆನ್ನಿಸುತ್ತದೆ. ಸ್ಮೃತಿಗಳಲ್ಲಿ ಸಾಮಾಜಿಕ ಮತ್ತು ವೈಯಕ್ತಿಕವಾದ ಆಚಾರಗಳನ್ನು ಕುರಿತ ನಿಯಮಗಳನ್ನು ಕಂಡರೆ ಆಗಮಗಳಲ್ಲಿ ಉಪಾಸನೆಯ ವಿಧಾನಗಳನ್ನು ಪ್ರಮುಖವಾಗಿ ಕಾಣುತ್ತೇವೆ. ಕಾಲದ ದೃಷ್ಟಿಯಿಂದ ಅನೇಕ ಆಗಮಗಳು ಈಚಿನವು. ಅಂದರೆ ಕ್ರಿ.ಶ. ೫ನೆಯ ಶತಮಾನದಿಂದ ಈಚೆಗೆ ರಚಿತವಾದುವೆನ್ನಬಹುದು. ಆದರೆ ಕೆಲವು ಆಗಮಗಳು, ಮುಖ್ಯವಾಗಿ ಪಾಶುಪತ ಶೈವ ಪ್ರತಿಪಾದಕವಾದ ಶಿವಾಗಮಗಳು, ಬಹಳ ಪ್ರಾಚೀನವಾದುವುಗಳೆನ್ನುವುದಕ್ಕೆ ಆಧಾರಗಳಿವೆ.[30] ವೇದಗಳಂತೆ ಇವುಗಳನ್ನು ಶ್ರುತಿಗಳೆಂದೂ ಅಪೌರುಷೇಯಗಳೆಂದೂ ಹೇಳುವ ವಾಡಿಕೆ ಬೆಳೆದು ಬಂದಿದೆ.

ಆಗತಂ ಶಿವವಕ್ತ್ರೇಭ್ಯಃ ಗತಂತು ಗಿರಿಜಾಶ್ರುತಾ ।
ಮತಂ ಚ ವಾಸುದೇವಸ್ಯ ತಸ್ಮಾದಾಗಮಮುಚ್ಯತೇ ॥

ಎಂಬ ಮಾತಿನಲ್ಲಿ ಶಿವನ ಮುಖದಿಂದಲೇ ಅವು ಹುಟ್ಟಿದುವು—ಎಂಬ ಅಭಿಪ್ರಾಯವಿದೆ. "ಪರಮೇಶ್ವರನ ಮುಖದಿಂದ ತನ್ನ ಸಹಚಾರಿಣಿಯಾದ ಗಿರಿಜೆಗಾಗಿ ಉಕ್ತವಾದ ಪರಮಪಾವನವಾದ ಶಾಸ್ತ್ರಕ್ಕೆ ಆಗಮವೆಂದು ಹೆಸರು"–ಎಂದು 'ಶಾರದಾತಿಲಕ'ದಲ್ಲಿ ಆಗಮಗಳನ್ನು ಕುರಿತು ಹೇಳಲಾಗಿದೆ. ಪಾಂಚರಾತ್ರಾಗಮಗಳೂ ಮಂತ್ರಶಾಸ್ತ್ರಗಳೂ ಇದೇ ಅಭಿಪ್ರಾಯವನ್ನು ಸಮರ್ಥಿಸುತ್ತವೆ. ಪರಮೇಶ್ವರನಿಂದ ಪಾರ್ವತೀದೇವಿಗೆ ಉಪದಿಷ್ಟವಾಗಿ ವಾಸುದೇವನಿಗೆ ಸಮ್ಮತವಾಗಿರುವ ಶಾಸ್ತ್ರಕ್ಕೆ 'ಆಗಮ'ವೆಂದು ಅವು ಹೇಳುತ್ತವೆ.

ಇವುಗಳನ್ನು ತಂತ್ರಶಾಸ್ತ್ರಗಳೆಂದು ಕರೆಯುವುದುಂಟು. ತಂತ್ರ ಪ್ರಧಾನವಾದುದರಿಂದ ಆ ಹೆಸರು ಬಂದಿರಬಹುದು. ಅದರಲ್ಲಿಯೂ ವಿಶೇಷವಾಗಿ ಶಾಕ್ತಾಗಮಗಳನ್ನು ಕುರಿತು ಈ ಮಾತು ಹೆಚ್ಚು ಪ್ರಚಲಿತವಾಗಿದೆ. ಆದರೆ 'ತಂತ್ರ' ಎಂಬ ಆ ಮಾತು ವಾಸ್ತವವಾಗಿ ಎಲ್ಲ ಆಗಮಗಳಿಗೂ ಅನ್ವಯಿಸುವ ವ್ಯಾಪಕವಾದ ಶಬ್ದ. 'ಆಗಮ' ಎಂಬ ಮಾತು ಇನ್ನೂ ಹೆಚ್ಚು ವ್ಯಾಪಕವಾದ ಅರ್ಥವನ್ನು ಸೂಚಿಸುತ್ತದೆ. "ಆಸಮಂತಾತ್ ಗಮಯತೀತ್ಯಾಗಮಃ"—ಎಂದು ಈ ಶಬ್ದದ ವ್ಯುತ್ಪತ್ತಿಯನ್ನು ಹೇಳುವುದುಂಟು.

'ಆಗಮ' ಎಂಬ ಮಾತೇ ಅವುಗಳ ಪುರಾತನತೆಯನ್ನು ಸೂಚಿಸುತ್ತದೆ. ಆಗಮ ಎಂದರೆ ಪರಂಪರಾಗತವಾಗಿ ಬಂದ ಗ್ರಂಥಗಳೆಂದಾಗುತ್ತದೆ. ಆದರೆ ಶೈವಸಿದ್ಧಾಂತದಲ್ಲಿ 'ಆಗಮ' ಎಂಬ ಹೆಸರು ಬಹಳ ಮಹತ್ತ್ವಪೂರಿತವಾದ ಅರ್ಥಕಲ್ಪನೆಯನ್ನು ಗರ್ಭೀಕರಿಸಿಕೊಂಡಿದೆ. 'ಆ' ಎಂದರೆ ಪಾಶ, 'ಗ' ಎಂದರೆ ಪಶು, 'ಮ' ಎಂದರೆ ಪತಿ. ಈ ಮೂರು ತತ್ತ್ವಗಳ ಜ್ಞಾನವನ್ನು ಒಳಗೊಂಡಿರುವ ಗ್ರಂಥಗಳು—ಎಂಬ ವಿವರಣೆ ಬರುತ್ತದೆ. ಇದು ಆಗಮಗಳ ಮಹತ್ತ್ವಸೂಚಕವಾದ ಸಾಂಕೇತಿಕ ವಿವರಣೆ ಅಷ್ಟೆ.

ಧಾರ್ಮಿಕ ವಿಚಾರಗಳ ಜೊತೆಗೆ ಶಿಲ್ಪ ಚಿತ್ರ ಸಂಗೀತ ಮೊದಲಾದ ಕಲೆಗಳ ಪ್ರಾಸಂಗಿಕ ನಿರೂಪಣೆಯೂ ಇಲ್ಲಿ ಬರುತ್ತದೆ. ಸೃಷ್ಟಿಯಿಂದ ಹಿಡಿದು ಪ್ರಳಯದವರೆಗಿನ ಆಗುಹೋಗುಗಳ ವಿಮರ್ಶೆ ಇವುಗಳಲ್ಲಿ ಅಡಗಿದೆ ಎನ್ನಬಹುದು. ಒಂದೊಂದು ಆಗಮದಲ್ಲಿಯೂ ವಿವಿಧ ಶಾಸ್ತ್ರಗಳ ವಿಶೇಷ ವಿವರಣೆಗಳು ಬರುತ್ತವೆ. ಆಯಾ ಶಾಸ್ತ್ರಗಳನ್ನು ತಿಳಿಯಬೇಕಾದವರಿಗೆ ಇವುಗಳ ಅಧ್ಯಯನ ಅನಿವಾರ್ಯವಾಗಿದೆ. ವೇದಗಳಷ್ಟೇ ಪ್ರಮುಖವಾಗಿ ನಿಲ್ಲಬಲ್ಲ ಶಾಸ್ತ್ರಗಳು ಆಗಮ ಗ್ರಂಥಗಳು.

ವೇದ ಮತ್ತು ಆಗಮಗಳೆರಡೂ ಭಾರತೀಯ ಸಂಸ್ಕೃತಿಯ ಆಧಾರಭೂತವಾದ ಅಪೌರುಷೇಯ ವಾಣಿಗಳೆಂದು ಪರಿಗಣಿತವಾಗಿವೆ. ವೇದಗಳು ಪರಮಾತ್ಮನ ನಿಃಶ್ವಾಸ ರೂಪವಾಗಿದ್ದರೆ, ಆಗಮಗಳು ವಾಣೀರೂಪಗಳಾಗಿವೆ—ಎನ್ನುವುದುಂಟು. ಇವುಗಳನ್ನು ನಿಗಮಾಗಮಗಳೆಂದು ಕರೆಯುತ್ತಾರೆ. ವೇದಗಳಲ್ಲಿ ವ್ಯಕ್ತವಾಗದಿರುವ ಅನೇಕ ವಿಷಯಗಳು ಆಗಮಗಳಲ್ಲಿವೆ. "ವೇದಯತೀತಿ ವೇದಃ" : ಪರಮಾತ್ಮನ ವಿಚಾರವನ್ನು ತಿಳಿಸಿ ಹೇಳುವುದು ವೇದ. ಆದರೆ "ಆಸಮಂತಾತ್ ಗಮಯತೀತ್ಯಾಗಮಃ", ಎಂದರೆ ಎಲ್ಲೆಲ್ಲಿಯೂ ವ್ಯಾಪ್ತನಾದ ಪರಮಾತ್ಮನನ್ನು ಅನುಷ್ಠಾನಯೋಗ್ಯವಾದ ವಿಚಾರಧಾರೆಯಿಂದ ತಿಳಿಯಹೇಳುವುದು ಆಗಮ. ಇವು ಒಂದೇ ದೇಹದಲ್ಲಿ ತೋರಿಬಂದ ಎರಡು ಮುಖಗಳಂತೆ: ದಿವ್ಯಜ್ಞಾನವೆಂಬ ಗಂಡಭೇರುಂಡನ ಎರಡು ಮುಖಗಳಿವು. ವೇದಗಳು ಕರ್ಮ ಜ್ಞಾನ ಭಕ್ತಿಪ್ರಧಾನವಾದ ಕರ್ಮಾಚರಣೆಗೂ ಆಗಮಗಳು ದೀಕ್ಷಾಪ್ರಧಾನವಾದ ಭಗವದುಪಾಸನೆಯ ಆಚರಣೆಗೂ ಆಶ್ರಯವಾಗಿವೆ. ಹೀಗೆ ವೈದಿಕ ಮತ್ತು ತಾಂತ್ರಿಕ ಜ್ಞಾನಗಳೆರಡೂ ಹಿಂದೂಧರ್ಮದ ತಾತ್ತ್ವಿಕ ಮುಖವನ್ನು ಪೂರ್ಣಗೊಳಿಸುತ್ತವೆ.

ಆಗಮಗಳ ಹುಟ್ಟು ಬೆಳವಣಿಗೆಗಳು ಶೈವಧರ್ಮ ಮತ್ತು ಪಾಂಚರಾತ್ರಗಳಿಗೆ ನೇರವಾಗಿ ಸಂಬಂಧಿಸಿವೆ.[31] ಇವೆರಡೂ ಬಹಳ ಪ್ರಾಚೀನ ಧರ್ಮಗಳು. 'ಪಾಶುಪತ' ಎಂಬ ಹೆಸರಿನ ಶೈವಧರ್ಮ ಮಹಾಭಾರತದ ನಾರಾಯಣೀಯ ವಿಭಾಗದಲ್ಲಿ ಉಕ್ತವಾಗಿದೆ. ಪಾಶುಪತ ತತ್ತ್ವಗಳು ಮೊದಲು ಶಿವಶ್ರೀಕಂಠ ಎಂಬುವನಿಂದ ನಿರೂಪಿತವಾದುವೆಂದು ಮಹಾಭಾರತ ಹೇಳುತ್ತದೆ. ಈತನ ಶಿಷ್ಯನೇ ಪ್ರಸಿದ್ಧನಾದ ಲಕುಲೀಶನಾಗಿರಬೇಕು. ೨ನೆಯ ಚಂದ್ರಗುಪ್ತನ ಶಾಸನವೊಂದರಲ್ಲಿ ಲಕುಲೀಶನನ್ನೂ ಅವನ ಶಿಷ್ಯರಾದ ಕುಶಿಕ, ಗಾರ್ಗಿ, ಮಿತ್ರ ಮತ್ತು ಕೌರುಷ್ಯ ಇವರನ್ನೂ ಉಲ್ಲೇಖಿಸಲಾಗಿದೆ. ಆದುದರಿಂದ ಈ ಚಂದ್ರಗುಪ್ತನಿಗಿಂತ ಹಿಂದೆ ಇದ್ದವನು ಲಕುಲೀಶ. ಪತಂಜಲಿ ತನ್ನ ಗ್ರಂಥದಲ್ಲಿ 'ಶಿವಭಾಗವತ'ರನ್ನು ಹೇಳುವುದರಿಂದ ಬಹುಶಃ ಆ ಕಾಲಕ್ಕೆ ಇವನನ್ನು ಸೇರಿಸಬಹುದು. ಈ 'ಶಿವಭಾಗವತ' ಧರ್ಮವನ್ನು ಬೆಳಸಿಕೊಂಡು ಬಂದ ಗ್ರಂಥಗಳು ಶಿವಾಗಮಗಳು. "ವೇದಸಾರ ಶಿವಾಗಮಃ" ಎಂಬ ಮಾತಿನಲ್ಲಿ ಶಿವಾಗಮಗಳ ಮಹತ್ತ್ವ ವ್ಯಕ್ತವಾಗುತ್ತದೆ.

ಇವುಗಳ ನಂತರ ಆಗಮಗಳಲ್ಲಿ ಕಂಡುಬರುವ ಇನ್ನೊಂದು ಪ್ರಮುಖವಾದ ಭಾಗ

ವೆಂದರೆ ಯಾಮಲಗಳು. ಇವುಗಳಲ್ಲಿ ರುದ್ರ ಸ್ಕಂದ ಬ್ರಹ್ಮ ವಿಷ್ಣು ಯಮ ವಾಯು ಕುಬೇರ ಇಂದ್ರ—ಈ ಎಂಟು ಯಾಮಲಗಳು ಪ್ರಮುಖವಾದುವು. ಶಿವಾಗಮಗಳು ಶಿವಪರಂಪರೆಯನ್ನು ಹೇಳಿದರೆ ಯಾಮಲಗಳು ಭೈರವ ಪರಂಪರೆಯನ್ನುಳ್ಳವಾಗಿವೆ. ಸಾಧನೆಯಲ್ಲಿ ಮೇಲೇರಿ ಶಿವತ್ವವನ್ನು ಪಡೆದ ಗುರುವನ್ನೇ 'ಭೈರವ' ಎಂದು ಕರೆದಿರುವಂತೆ ತೋರುತ್ತದೆ. ತಾಂತ್ರಿಕ ಸಾಧನೆಯಲ್ಲಿ ಯಾಮಲಗಳು ಪ್ರಗತಿಪಥದಲ್ಲಿ ನಡೆದಿವೆ. ಅನೇಕ ದೇವತೆಗಳನ್ನೂ ಉಪಾಸನೆಯ ವಿಧಿವಿಧಾನಗಳನ್ನೂ ಸಮಂಜಸವಾಗಿ ಸಮನ್ವಯಗೊಳಿಸಲಾಗಿದೆ ಯಾಮಲಗಳಲ್ಲಿ.

ಇದಲ್ಲದೆ ತಂತ್ರಶಾಸ್ತ್ರಗಳಲ್ಲಿ ಮುಖ್ಯವಾಗಿ ಐದು ವಿಭಾಗಗಳನ್ನು ಕಾಣಬಹುದು. ಹಿಂದೆ ಹೇಳಿದ ಶಿವಾಗಮಗಳು ಮೊತ್ತಮೊದಲನೆಯ ಗುಂಪು. ಇವುಗಳಲ್ಲಿಯೇ ಶಾಕ್ತಾಗಮಗಳನ್ನೂ ಸೇರಿಸಬಹುದು. ಅನಂತರ ವೈಷ್ಣವಾಗಮಗಳು. ಇವುಗಳಲ್ಲಿ ವೈಖಾನಸ ಮತ್ತು ಪಾಂಚರಾತ್ರ ಎಂದು ಎರಡು ಬಗೆ. ಅಲ್ಲದೆ ಸೌರತಂತ್ರ, ಗಾಣಪತ್ಯತಂತ್ರ, ಮತ್ತು ಬೌದ್ಧತಂತ್ರಗಳೂ ಇವೆ. ಇವುಗಳಲ್ಲಿ ಬಹಳ ಮುಖ್ಯವಾದ ಶಿವಾಗಮ ವೈಷ್ಣವಾಗಮಗಳನ್ನು ಮಾತ್ರ ಕುರಿತು ಸಂಗ್ರಹವಾಗಿ ಒಂದೆರಡು ಮಾತುಗಳನ್ನು ಹೇಳಬಹುದು.

ಶಿವಾಗಮಗಳಲ್ಲಿ ಬಹಳ ಮುಖ್ಯವಾದುವು ಇಪ್ಪತ್ತೆಂಟು. ಅವುಗಳಲ್ಲಿ ಹತ್ತು ಆಗಮಗಳಂತೂ ಸಾಕ್ಷಾತ್ ಶಿವಪ್ರಣೀತವಾದುವೆಂಬ ನಂಬಿಕೆಯಿದೆ. ಉಳಿದ ಹದಿನೆಂಟು ಶಿವ ತನ್ನ ಭಕ್ತರ ಮೂಲಕ ಹೇಳಿಸಿದ ಆಗಮಗಳು. ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಾಹಸ್ರಕ, ಅಂಶುಮಾನ್, ಸುಪ್ರಭ–ಈ ಹತ್ತು ಶಿವಪ್ರಣೀತವಾದುವು. ವಿಜಯ, ನಿಃಶ್ವಾಸ, ಸ್ವಾಯಂಭುವ, ಆಗ್ನೇಯಕ, ಭದ್ರ, ರೌರವ, ಮಾಕುಟ, ವಿಮಲ, ಚಂದ್ರಹಾಸ, ಮುಖಯುಗ್‌ಬಿಂಬ, 'ಉದ್ಗೀತ, ಲಲಿತ, ಸಿದ್ಧ, ಸಂತಾನ, ನಾರಸಿಂಹ, ಪರಮೇಶ್ವರ, ಕಿರಣ, ಪರ—ಇವು ಶಿವನ ಅನುಭವದಿಂದ ಪ್ರೇರಿತರಾದ ಋಷಿಗಳು ಅವನ ಕರುಣೆಯಿಂದ ಹೇಳಿದವು. ಪ್ರತಿಯೊಂದು ಆಗಮದಲ್ಲಿಯೂ ಪ್ರಧಾನವಾಗಿ ನಾಲ್ಕು ಭಾಗಗಳು: ವಿದ್ಯಾ ಅಥವಾ ಜ್ಞಾನಕಾಂಡ, ಯೋಗಕಾಂಡ, ಕ್ರಿಯಾಕಾಂಡ, ಚರ್ಯಾಕಾಂಡ.

ಕ್ರಿಯಾ ಮತ್ತು ಚರ್ಯಾಕಾಂಡಗಳೆರಡೂ ದೇವಾಲಯಗಳ ನಿರ್ಮಾಣ, ಮೂರ್ತಿ ಪ್ರತಿಷ್ಠಾಪನೆಯ ವಿಧಾನ, ಪೂಜೆಯ ವಿವಿಧ ರೀತಿಗಳು—ಮೊದಲಾದ ಧಾರ್ಮಿಕ ಸಂಪ್ರದಾಯಗಳನ್ನು ಒಳಗೊಂಡಿರುತ್ತವೆ. ಇವುಗಳ ವಿಚಾರದಲ್ಲಿ ಶಿವಾಗಮಗಳು ಸ್ವಲ್ಪ ಹೆಚ್ಚುಕಡಮೆ ಒಂದೇ ಮಾರ್ಗದಲ್ಲಿ ನಡೆದಿರುವುದನ್ನು ಕಾಣಬಹುದು. ಜ್ಞಾನಕಾಂಡ ಮತ್ತು ಯೋಗಕಾಂಡಗಳಲ್ಲಿ ದೇವತ್ವದ ಕಲ್ಪನೆ, ಸೃಷ್ಟಿನಿರ್ಮಾಣ, ಜೀವಶಿವರ ಸಂಬಂಧ, ಸಾಧನೆಯ ಯೋಗಮಾರ್ಗ—ಈ ಮೊದಲಾದ ತಾತ್ತ್ವಿಕ ಜಿಜ್ಞಾಸೆಗಳು ಬರುತ್ತವೆ. ಮೊದಲನೆಯ ಆಗಮವಾದ ಕಾಮಿಕಾಗಮದ ಜ್ಞಾನಕಾಂಡದಲ್ಲಿ ಬರುವ ಮುಖ್ಯ ಅಂಶಗಳಿಂದ ಆಗಮಗಳು ಪ್ರತಿಪಾದಿಸಿರುವ ಶಿವತತ್ತ್ವದ ಸಾಮಾನ್ಯ

ಸ್ವರೂಪವನ್ನು ಹೀಗೆ ಹೇಳಬಹುದು.

"ಶಿವ ಅನಾದಿ, ಅನಂತ, ಸರ್ವಜ್ಞ, ಸರ್ವಶಕ್ತ ; ಆತನೇ ಜಗತ್ತಿಗೆ ನಿಮಿತ್ತಕಾರಣ. ತನ್ನಲ್ಲಿಯೇ ಅಂತರ್ಗತವಾಗಿರುವ ಶಕ್ತಿಯ ಸಹಾಯದಿಂದ ಜಗತ್ತನ್ನು ಸೃಷ್ಟಿಸುತ್ತಾನೆ. ಶಿವನಲ್ಲಿರುವ ಈ ಶಕ್ತಿಯು ಚಿದ್ರೂಪನಾದ ಶಿವನಿಗೂ ಅಚಿದ್ರೂಪವಾದ ಸೃಷ್ಟಿಗೂ ಮಧ್ಯವರ್ತಿಯಾದ ತತ್ತ್ವ. ಎಲ್ಲ ಜೀವರುಗಳ ಬಂಧನಕ್ಕೂ ಬಿಡುಗಡೆಗೂ ಈ ಶಕ್ತಿಯೇ ಕಾರಣ. ಇದನ್ನೇ 'ಮಾಹೇಶ್ವರೀಶಕ್ತಿ' ಎಂದು ಕರೆದಿದ್ದಾರೆ. ಬಂಧನಕ್ಕೆ ಒಳಗಾದ ಜೀವಿಯ ಬಿಡುಗಡೆಗೆ ಈ ಶಕ್ತಿ ಅನೇಕ ವಿಧದಿಂದ ಕಾರಣವಾಗುತ್ತದೆ. ಅನೇಕ ವೇಳೆ ಮನುಷ್ಯ ದುಃಖದಿಂದ ನರಳುತ್ತಿರುವಂತೆ ತೋರಿದರೂ ಅದು ಅವನ ಉದ್ಧಾರಕ್ಕಾಗಿ ಮಾಹೇಶ್ವರೀಶಕ್ತಿ ಕೈಕೊಂಡ ಉಪಾಯ. ಎಲ್ಲ ಜೀವಿಗಳ ಉದ್ಧಾರಕ್ಕೂ ಕಾರಣವಾದಂತಹ ಕರ್ಮಗಳನ್ನು ಶಿವ ತನ್ನ ಶಕ್ತಿಯ ಸಹಾಯದಿಂದ ಮಾಡಿಸುತ್ತಾನೆ. ಕೊನೆಯಲ್ಲಿ ಜೀವಿಗಳನ್ನು ಮಲತ್ರಯಗಳಿಂದ ಬಿಡುಗಡೆಗೊಳಿಸುತ್ತಾನೆ.

ಆತ್ಮನನ್ನು ಆಣವ, ಮಾಯಾ ಮತ್ತು ಕಾರ್ಮಿಕ ಮಲಗಳೆಂಬ ಮುಪ್ಪುರಿಪಾಶ ಬಂಧಿಸಿದೆ. ಆತ್ಮನ ಆನಂದಸ್ವರೂಪವನ್ನು ನಾಶಗೊಳಿಸಿ ಬಂಧನಕ್ಕೆ ಗುರಿಪಡಿಸಿ ಅವನನ್ನು ಪಶುವನ್ನಾಗಿ ಮಾಡುತ್ತದೆ ಈ ಪಾಶ. ಶಿವ ತನ್ನ ಅನುಗ್ರಹ ಶಕ್ತಿಯಿಂದ ಈ ಪಾಶವನ್ನು ಕತ್ತರಿಸಿ ಉದ್ಧಾರಮಾಡುವ ಪಶುಪತಿ. ಜೀವಿ ಈ ಪಾಶದಿಂದ ಬಿಡುಗಡೆ ಪಡೆದಾಗಲೇ ಶಿವ ಜೀವರ ಸಾಮರಸ್ಯ ಸಿದ್ಧಿಸುತ್ತದೆ. ಇದೇ ಮೋಕ್ಷ." ಇದು ಶಿವಾಗಮಗಳಲ್ಲಿ ಪ್ರತಿಪಾದಿತವಾದ ತತ್ತ್ವದ ಸ್ಥೂಲರೂಪ.

"ಶೈವಧರ್ಮದ ಇತಿಹಾಸದಲ್ಲಿ ಶಿವಾಗಮಗಳು ಒಂದು ಪ್ರಮುಖವಾದ ಘಟ್ಟ. ಶಿವಾಗಮಗಳನ್ನೇ ಆಧಾರಗ್ರಂಥಗಳನ್ನಾಗಿಟ್ಟುಕೊಂಡು ಅನೇಕ ಶೈವಶಾಖೆಗಳು ರೂಪುಗೊಂಡುವು. ಕಾಶ್ಮೀರ ಶೈವ, ತಮಿಳು ಶೈವ ಸಿದ್ಧಾಂತ, ವೀರಶೈವ—ಈ ಮೊದಲಾದುವುಗಳಿಗೆಲ್ಲಾ ಶಿವಾಗಮಗಳಲ್ಲಿ ಉಕ್ತವಾದ ಮೂಲತತ್ತ್ವವೇ ತಳಹದಿಯಾಗಿದ್ದರೂ ಅವರು ತಮ್ಮ ತಮ್ಮ ಅನುಭವಗಳಿಗೆ, ಆವಶ್ಯಕತೆಗಳಿಗೆ ಅನುಗುಣವಾಗಿ ಧರ್ಮದ ಸೌಧವನ್ನು ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ."[32]

ಶೈವಾಗಮಗಳಲ್ಲಿ ಅನುಷ್ಠಾನಭೇದ ಅಥವಾ ಉಪಾಸನಾಭೇದದಿಂದ ಕೆಲವು ಒಳವಿಭಾಗಗಳುಂಟು. ಅವುಗಳಲ್ಲಿ ಮುಖ್ಯವಾಗಿ ದೇವ್ಯಾಗಮ ಅಥವಾ ಶಾಕ್ತಾಗಮ, ವಾತುಲಾಗಮ ಅಥವಾ ತಾಂತ್ರಿಕಾಗಮ ಮತ್ತು ವೀರಶೈವಾಗಮಗಳನ್ನು ಹೇಳಬಹುದು.

ಇನ್ನು ವೈಷ್ಣವಾಗಮಗಳು ವಿಷ್ಣುಪರಮ ತತ್ತ್ವವನ್ನು ಬೋಧಿಸುತ್ತವೆ. ಇವುಗಳಲ್ಲಿ ವಿಖನಸ ಮಹರ್ಷಿಗಳಿಂದ ಪ್ರವೃತ್ತವಾದ ಆಗಮಕ್ಕೆ 'ವೈಖಾನಸ' ಆಗಮವೆಂದು ಹೆಸರಾಗಿದೆ. ಇದರಲ್ಲಿ ಸಂಹಿತೆ ಅಧಿಕರಣ ತಂತ್ರ ಕಾಂಡಗಳೆಂಬ ನಾಲ್ಕು ಭಾಗಗಳಿವೆ. ಇವೆಲ್ಲಕ್ಕೂ ವಿಖನಸ ಮಹರ್ಷಿಗಳಿಂದ ಉಕ್ತವಾದ ಮೂವತ್ತೆರಡು ಸೂತ್ರಗಳೇ ಮೂಲಾ

ಧಾರವಾಗಿವೆ. ಇವುಗಳ ಮೇಲೆ ಸುಮಾರು ನಾಲ್ಕು ಲಕ್ಷ ಗ್ರಂಥದ ವ್ಯಾಪ್ತಿಯನ್ನೊಳಗೊಂಡು ರಚಿತವಾದ ಬೃಹತ್ ಕೃತಿ ಇದು. ಉಪಾಸನಾ ಮಾರ್ಗದ ಜೊತೆಗೆ ಇತರ ಆಗಮಗಳಂತೆ ಅನೇಕ ಕಲೆಗಳನ್ನು ಕುರಿತ ವಿವರಗಳೂ ಇಲ್ಲಿ ಬರುತ್ತವೆ. ಮಂತ್ರ ತಂತ್ರಗಳ ಸಾಮರಸ್ಯದಿಂದ ಕೂಡಿದ ಇದನ್ನು 'ಮಹಾತಂತ್ರ'ವೆಂದು ಕರೆಯಲಾಗಿದೆ. ಪಾಂಚರಾತ್ರಾಗಮಕ್ಕಿಂತ ಇದು ಹಿಂದಿನದೆನ್ನುವ ಅಭಿಪ್ರಾಯವಿದೆ.

'ಪಾಂಚರಾತ್ರ' ವಿಷ್ಣುವಿನ ಉಪಾಸನೆಯನ್ನು ಸಾಂಗೋಪಾಂಗವಾಗಿ ಬೋಧಿಸುವ ಆಗಮ. ವಿಷ್ಣುಪಾರಮ್ಯವನ್ನು ಬೋಧಿಸಲು ಹೊರಟಿರುವ ಮೂರು ಮಾರ್ಗಗಳಲ್ಲಿ ವೈಖಾನಸ ಮೊದಲನೆಯದು, ಪಾಂಚರಾತ್ರ ಎರಡನೆಯದು, ಮತ್ತು ಭಾಗವತ ಸಂಪ್ರದಾಯ ಮೂರನೆಯದು. ಪಾಂಚರಾತ್ರಾಗಮವು ಅನಂತ ಗರುಡ ವಿಷ್ವಕ್ಸೇನ ಬ್ರಹ್ಮ, ಇಂದ್ರರೆಂಬ ಐದು ದೇವತೆಗಳಿಗೆ ಐದು ರಾತ್ರಿಗಳಲ್ಲಿ ಭಗವನ್ಮುಖದಿಂದ ನಿರೂಪಿತವಾಯಿತು. ಆದುದರಿಂದಲೇ ಇದಕ್ಕೆ 'ಪಾಂಚರಾತ್ರ' ಎಂಬ ಹೆಸರು ಅನ್ವರ್ಥವಾಗಿ ಪರಿಣಮಿಸಿತು. ಈ ಆಗಮದಲ್ಲಿ ದಿವ್ಯ (ಮಂತ್ರ) ಸಿದ್ಧಾಂತ, ಆಗಮಸಿದ್ಧಾಂತ, ತಂತ್ರಸಿದ್ಧಾಂತ, ತಂತ್ರಾಂತರ ಸಿದ್ಧಾಂತ—ಎಂದು ನಾಲ್ಕು ವಿಧ. ಶೈವಾಗಮದಂತೆ ಇದರಲ್ಲಿಯೂ ಜ್ಞಾನ ಯೋಗ ಕ್ರಿಯಾ ಚರ್ಯಾ ಪಾದಗಳಿವೆ. ಮಹಾವಿಷ್ಣುವಿನ ಆರಾಧನಾದಿ ವಿವರಗಳು ಮಾತ್ರವಲ್ಲದೆ ಗ್ರಾಮ ನಗರ ಪ್ರಾಸಾದ ಆಲಯಾದಿಗಳ ನಿರ್ಮಾಣಕ್ರಮಗಳು ಉಕ್ತವಾಗಿವೆ. ರಾಮಾನುಜಾಚಾರ್ಯರ ಶ್ರೀಭಾಷ್ಯಕ್ಕೆ ಪಾಂಚರಾತ್ರಾಗಮವೇ ಮುಖ್ಯ ಆಧಾರವೆಂದು ಹೇಳಲಾಗಿದೆ.

ತಂತ್ರಶಾಸ್ತ್ರಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ತಾತ್ತ್ವಿಕವಾದ ಆಲೋಚನೆಗಳಲ್ಲಿ ಕೆಲವನ್ನು ಸಂಗ್ರಹವಾಗಿ ಇಲ್ಲಿ ಹೇಳಬಹುದು : ಮನುಷ್ಯರಲ್ಲಿ ಮೂರು ಬಗೆಗಳನ್ನು ಈ ಆಗಮಗಳು ಕಂಡವು. ಸ್ವಭಾವಾನುಗುಣವಾಗಿ ದಿವ್ಯ ವೀರ ಮತ್ತು ಪಶು ಎಂದು ಅವುಗಳನ್ನು ಕರೆದರು. ಸಾಧನೆಯ ಮಾರ್ಗದಲ್ಲಿ ಈ ಭಾವಗಳನ್ನು ಅರಿತು ಅಳವಡಿಸಿಕೊಳ್ಳುವುದೇ ಅತ್ಯಂತ ಮುಖ್ಯವಾದ ಕರ್ತವ್ಯ.

ಶಂಕರಾಚಾರ್ಯರ ಶಿಷ್ಯರಾದ ಪದ್ಮಪಾದಾಚಾರ್ಯರು ಶಾಸ್ತ್ರಗಳ ಅಧ್ಯಯನದ ನಿರೂಪಣೆಯಲ್ಲಿ ಈ ಕೆಳಗಿನ ಐದು ಅಂಶಗಳು ಬಹಳ ಮುಖ್ಯವೆಂದಿದ್ದಾರೆ: ಸ್ಥೂಲ (gross) ಸೂಕ್ಷ್ಮ (subtle), ಕಾರಣ (causal), ಸಾಮಾನ್ಯ (cosmic) ಸಾಕ್ಷಿ (witness-like). ಈ ಎಲ್ಲ ದೃಷ್ಟಿಗಳಿಂದಲೂ ಪೂರ್ಣವಾಗಿ ನೋಡಲು ಎಲ್ಲರೂ ಸಾಮರ್ಥ್ಯವನ್ನು ಪಡೆದಿರುವುದಿಲ್ಲ. ಹಿಂದೆ ಹೇಳಿದ 'ಪಶು' ಮಾನವ ಕೇವಲ 'ಸ್ಥೂಲ'ವನ್ನು ಮಾತ್ರ ನೋಡಬಲ್ಲ. 'ವೀರ'ನು ಅದನ್ನು ಸ್ವಲ್ಪಮಟ್ಟಿಗೆ ದಾಟಬಲ್ಲನು. 'ದಿವ್ಯ' ಮಾನವ ಮಾತ್ರ ತನ್ನ ಸಂಸ್ಕಾರಗಳ ಬಲದಿಂದ ಪೂರ್ಣಜ್ಞಾನವನ್ನು ಪಡೆದು ಶಿವಸ್ವರೂಪನಾಗಬಲ್ಲ. ಇದು ತಂತ್ರಶಾಸ್ತ್ರದ ಮತ.

ಮೇಲೆ ಹೇಳಿದ ಪಶು ವೀರ ದಿವ್ಯ—ಈ ಮೂರು ಭಾವಗಳಿಗೆ ನೇರವಾಗಿ ಸಂಬಂಧವನ್ನು ಪಡೆದಿರುವ ಏಳು ಆಚಾರಗಳನ್ನು ಕುಲಾರ್ಣವ ತಂತ್ರ ಹೀಗೆ ಹೇಳುತ್ತದೆ: ವೇದ,

ವೈಷ್ಣವ, ಶೈವ, ದಕ್ಷಿಣ, ವಾಮ, ಸಿದ್ಧಾಂತ ಮತ್ತು ಕಾಲ. ಈ ಸಪ್ತ ಆಚಾರಗಳಲ್ಲಿ ಸಾಧಕನು ಹೆಜ್ಜೆ ಹೆಜ್ಜೆಯಾಗಿ ಮೇಲೇರುತ್ತಾ ಹೋಗಬೇಕು. ಇವುಗಳಲ್ಲಿ ಮೊದಲನೆಯದು ಮಾನಸಿಕ ಮತ್ತು ದೈಹಿಕ ಶುಚಿತ್ವವನ್ನೂ ಎರಡನೆಯದು ಭಕ್ತಿಯನ್ನೂ ಮೂರನೆಯದು ಜ್ಞಾನವನ್ನೂ ಹೇಳುತ್ತದೆ. ನಾಲ್ಕನೆಯದಾದ 'ದಕ್ಷಿಣ' ಆಚಾರದಲ್ಲಿ ಅದುವರೆಗೆ ಸಾಧಕ ನಡೆದುಬಂದ ದಾರಿಯನ್ನು ಹಿಂದಿರುಗಿ ನೋಡಿ ದೃಢಪಡಿಸಿಕೊಳ್ಳಬೇಕು. ಅನಂತರ ಬರುವ 'ವಾಮಾಚಾರ' ವೈರಾಗ್ಯದ ಗುಣಗಳನ್ನು ಪ್ರಮುಖವಾಗಿ ಉಳ್ಳದ್ದು. ಕೆಲವರು ಹೇಳುವಂತೆ 'ವಾಮ' ಎಂದರೆ ಸ್ತ್ರೀಯೊಡನೆ ಆಚರಿಸಬೇಕಾದ ವ್ಯವಹಾರಗಳು ಎಂದು ಅರ್ಥವಾಗುವುದಿಲ್ಲ. ಒಂದುವೇಳೆ ವಾಮಾಚಾರದಲ್ಲಿ ಸ್ತ್ರೀಯರ ಸಂಬಂಧವೇನಾದರೂ ಇದ್ದರೆ ಸರ್ವಸಂಗಪರಿತ್ಯಾಗಕ್ಕೆ ಸಹಾಯಕವಾಗುವಂತೆಯೇ ಹೊರತು ದೈಹಿಕ ತೃಪ್ತಿಗಾಗಿ ಅಲ್ಲ. ಸ್ತ್ರೀಯರ ವಿಚಾರದಲ್ಲಿ ಎಲ್ಲ ತಂತ್ರಗಳೂ ಬಹಳ ಗೌರವದ ಮಾತುಗಳನ್ನು ಹೇಳುತ್ತವೆ, ಮತ್ತು ಪೂಜ್ಯಸ್ಥಾನವನ್ನು ಕೊಟ್ಟಿವೆ. ಈ ಅರ್ಥದಲ್ಲಿ ವಾಮಾಚಾರ ಅಗತ್ಯ. ಆದರೆ ಅನಂತರ ಅದು ಬೇರೆಯ ದಿಕ್ಕನ್ನು ಹಿಡಿದು ತನ್ನ ಮೂಲ ಅರ್ಥವನ್ನು ಕಳೆದುಕೊಂಡಿತೆಂಬುದು ನಿಜ.

ವಾಮದ ನಂತರ ಬರುವ ಆಚಾರ 'ಸಿದ್ಧಾಂತ.' ಇದುವರೆಗಿನ ಸಾಧನೆಯಿಂದ ತನ್ನ ನಿರ್ದಿಷ್ಟ ಗುರಿಯನ್ನು ಕಾಣುವ ನಿರ್ಧಾರಕ್ಕೆ ಸಾಧಕ ಇಲ್ಲಿ ಬರುತ್ತಾನೆ. ಅದೇ ಮಾರ್ಗದಲ್ಲಿ ಮುಂದುವರಿದು ಕೊನೆಯದಾದ 'ಕೌಲ' ಸ್ಥಿತಿಯನ್ನು ಅವನು ಪಡೆಯುತ್ತಾನೆ, ಆನಂದಮಯನಾಗುತ್ತಾನೆ.

ಶ್ರುತಿಗಳಂತೆಯೇ ತಂತ್ರಗಳೂ ಗುರುವಿಗೆ ಬಹಳ ಮಹತ್ತ್ವವನ್ನು ಕೊಟ್ಟಿವೆ. ದೀಕ್ಷೆಯನ್ನು ಕೊಟ್ಟ ಗುರು ಸಾಧಕನನ್ನು ಸಾಧನೆಯ ಮಾರ್ಗದಲ್ಲಿ ತೊಡಗಿಸುತ್ತಾನೆ. ಆ ಸಾಧನೆಯ ಮಾರ್ಗ, ಉಪಾಸನೆಯ ರೀತಿ—ಇತ್ಯಾದಿಗಳು ಆಗಮಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತವೆ. ಮಂತ್ರೋಚ್ಚಾರಣೆಗೆ ಬಹಳ ಮಹತ್ತ್ವವಿದೆ ತಂತ್ರ ಶಾಸ್ತ್ರಗಳಲ್ಲಿ. ಶಬ್ದವು ಪರಾ ಪಶ್ಯಂತಿ ಮಧ್ಯಮ ಅವಸ್ಥೆಗಳನ್ನು ದಾಟಿ 'ವೈಖರಿ' ಎಂಬ ಸ್ಥಿತಿಗೆ ಬರುವುದರ ರಹಸ್ಯವನ್ನು ಸಾಧಕ ಅರಿಯಬೇಕು. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಆಜ್ಞಾ—ಎಂಬ ಈ ಷಟ್ ಚಕ್ರಗಳ ರಹಸ್ಯವನ್ನೂ ಕುಂಡಲಿನೀ ಸರ್ಪದ ಸುಪ್ತಶಕ್ತಿಯನ್ನೂ ಅರಿತು ಜಾಗ್ರತಗೊಳಿಸುವ ಮಾರ್ಗವನ್ನು ತಂತ್ರಶಾಸ್ತ್ರಗಳು ವಿವರಿಸುತ್ತವೆ.

ಶಿವ ಶಕ್ತಿಯರ ಸಂಬಂಧದ ಕಲ್ಪನೆ ತಂತ್ರಗಳಲ್ಲಿ ಬಹು ವ್ಯಾಪಕವಾಗಿ ಬೆಳೆದು ಬಂದಿತು. ಶಕ್ತಿರಹಿತನಾದ ಶಿವ ಜಡಸ್ವರೂಪ; ಅವರಿಬ್ಬರ ಸಂಬಂಧ ಅವಿನಾಭಾವ ಸಂಬಂಧ. ಒಂದಿಲ್ಲದೆ ಇನ್ನೊಂದು ಇರಲಾರದು. ಈ ಶಕ್ತಿಯನ್ನು ಸ್ತ್ರೀಯೊಡನೆ ಏಕೀಭವಿಸಲು ಮಾಡಿದ ಕೆಲವು ಪ್ರಯತ್ನಗಳು ತಪ್ಪು ಹೆಜ್ಜೆಯನ್ನಿಡಲು ಕಾರಣವಾದುವು. ನಿಜವಾಗಿ ನೋಡಿದರೆ ಅಲ್ಲಿ ಹೆಣ್ಣು ಗಂಡುಗಳೆಂಬ ಕಲ್ಪನೆಯೇ ಇಲ್ಲ. ಶಿವನಿಗೆ ಪುರುಷ ರೂಪವನ್ನು ಕೊಟ್ಟು ಉಪಾಸಿಸಿದವರು ಶೈವರು; ಶಕ್ತಿಗೆ ಸ್ತ್ರೀರೂಪವನ್ನು ಕೊಟ್ಟು

ಪ್ರೋಜಿಸಿದವರು ಶಾಕ್ತರು. ಆದರೆ ಶಿವ ಶಕ್ತಿಯರ ಅವಿನಾಸಂಬಂಧವನ್ನು ಅಳವಡಿಸುವಾಗ ಅರ್ಧನಾರೀಶ್ವರ ಮೊದಲಾದ ಕಲ್ಪನೆಗಳು ಮೂಡಿದರೂ ಕೊನೆಯಲ್ಲಿ ಅವು ಸ್ತ್ರೀ ಪುರುಷತ್ವದ ಮಿತಿಯನ್ನು ಕಳಚಿಕೊಂಡು ವಿಚಾರತತ್ತ್ವಗಳ ಸಂಕೇತವಾಗುತ್ತವೆ; ಉಳಿಯಬೇಕು. ಈ ಭಾವನೆಯನ್ನು ಬೆಳಸಿಕೊಂಡು ಬರಲು ತಂತ್ರಶಾಸ್ತ್ರಗಳು ಕಾರಣ ವಾದುವು.

ತಂತ್ರಶಾಸ್ತ್ರಗಳನ್ನು ಕುರಿತು ಇನ್ನೂ ಅನೇಕ ದೃಷ್ಟಿಗಳಿಂದ ಅವುಗಳ ಅಭ್ಯಾಸ ಹೆಚ್ಚು ಹೆಚ್ಚಾಗಿ ನಡೆಯಬೇಕಾಗಿದೆ. ಭಾರತದ ಧರ್ಮ ಮತ್ತು ಸಂಸ್ಕೃತಿಗಳಿಗೆ ಅವು ಗಳ ಕೊಡುಗೆ ಅಪಾರವಾದುದು. ಸಂಸ್ಕೃತಿಯ ದೃಷ್ಟಿಯಿಂದ ಹೇಳಬಹುದಾದರೆ ವಾಸ್ತುಶಿಲ್ಪ ಮತ್ತು ಶಿಲ್ಪಗಳಿಗೆ ಇವುಗಳಲ್ಲಿ ಆಶ್ರಯ ಸಿಕ್ಕಿತು. ಪುರ ನಗರಗಳ ರಚನೆಗೆ ಭೂಮಿಯನ್ನು ಆರಿಸುವುದರಿಂದ ಹಿಡಿದು ಮಠ ದೇವಾಲಯಗಳವರೆಗೆ ವಾಸ್ತುಶಾಸ್ತ್ರದ ಎಲ್ಲ ಬಗೆಯ ವಿವರಗಳೂ ಆಗಮಗಳಲ್ಲಿ ಬರುತ್ತವೆ. ದೇವಾಲಯಗಳನ್ನು ಕಟ್ಟುವುದಕ್ಕೆ, ಮೂರ್ತಿಗಳನ್ನು ನಿರ್ಮಾಣ ಮಾಡುವುದಕ್ಕೆ ಉಪಯೋಗಿಸಬೇಕಾದ ಶಿಲೆಯ ಲಕ್ಷಣ ಗಳು ಆಗಮಗಳಲ್ಲಿವೆ. ಮೂರ್ತಿಗಳಲ್ಲಿ ಅಲೌಕಿಕ ಶಕ್ತಿಯನ್ನು ಅನುಗ್ರಹಿಸುವ ಜೀವ ಕಳೆ ಲಭಿಸಬೇಕಾದರೆ ಶಿಲಾಶುದ್ಧಿ ಆವಶ್ಯಕ. ಕಳಾಹೀನವಾದ ಮೂರ್ತಿ ಪೂಜಾರ್ಹ ವಲ್ಲ. ಮೂರ್ತಿಗಳಲ್ಲಿ ದೇವತಾ ಸಾನ್ನಿಧ್ಯವು ಕಳಾಪೂರ್ಣವಾಗಿ ನೆಲಸಬೇಕಾದರೆ ಆಧಾರವಾದ ಅಂಶಗಳು ಮೂರು:

ಅರ್ಚಕನು ಸದಾಚಾರಿಯಾಗಿ ಸುಶಿಕ್ಷಿತನಾಗಿ ಸಂಪನ್ನನಾಗಿ ತಪಸ್ವಿಯಾಗಿ ಇರ ಬೇಕು. ಪೂಜೆಗೊಳ್ಳುವ ಮೂರ್ತಿಯೂ ಸರ್ವಾಂಗಸುಂದರವಾಗಿದ್ದು ಪ್ರತಿಮಾ ಲಕ್ಷಣ ಲಕ್ಷಿತವಾಗಿರಬೇಕು. ಮೂರನೆಯದು, ಪೂಜೆಗೆ ಅಗತ್ಯವಾದ ಉಪಕರಣಗಳು ಪರಿಪೂರ್ಣವಾಗಿರಬೇಕು. ಇವುಗಳಿಂದ ಕೂಡಿದ ಮೂರ್ತಿಯು ಚೇತನಪೂರ್ಣವಾಗಿ ವಿರಾಜಿಸುವುದು. ಇದು ಆಗಮದ ಅಭಿಪ್ರಾಯ.

ಮೂರ್ತಿಶಿಲ್ಪದಲ್ಲಿ ಅನೇಕ ತತ್ವಗಳ ಸಾಂಕೇತಿಕ ಅರ್ಥವನ್ನು ಆಗಮ ಅಳವಡಿಸಿದೆ. ಅದಕ್ಕನುಗುಣವಾಗಿ ಮೂರ್ತಿಯನ್ನು ಅನೇಕ ವಿಧವಾಗಿ ವಿಭಾಗಿಸಿದೆ. ಶಿವನ ಮೂರ್ತಿ ಗಳಲ್ಲಿ ಸೃಷ್ಟಿಮೂರ್ತಿ ಸ್ಥಿತಿಮೂರ್ತಿ ಸಂಹಾರಮೂರ್ತಿ ತಿರೋಧಾನಮೂರ್ತಿ ಅನುಗ್ರಹ ಮೂರ್ತಿಗಳೆಂದು ಐದು ವಿಧ. ಶಕ್ತಿಮೂರ್ತಿಗಳಲ್ಲಿ ದ್ವಿಭಂಗಿ ತ್ರಿಭಂಗಿಗಳ ವಿವರಣೆ ಬರುತ್ತದೆ. ವಿಷ್ಣುಮೂರ್ತಿಗಳಲ್ಲಿಯೂ ತ್ರಿಭಂಗಿಯೇ ಮೊದಲಾದ ವಿನ್ಯಾಸ ಗಳ ಜೊತೆಗೆ ಸ್ಥಿತಮೂರ್ತಿ ಆಸೀನಮೂರ್ತಿ ಶಯನಮೂರ್ತಿಗಳೆಂದು ಮೂರು ವಿಧ ವಾದ ಮೂರ್ತಿಗಳು ಕಂಡುಬರುತ್ತವೆ.

ಶಿವಲಿಂಗದ ಲಕ್ಷಣಗಳನ್ನು ಸೂಕ್ಷ್ಮವಾಗಿ ವಿಚಾರ ಮಾಡಲಾಗಿದೆ. ಇಲ್ಲಿಯೂ ಮೇಲಿನ ಮೂರು ವಿಭಾಗಗಳಿವೆ. ಆಯಾ ಲಿಂಗಗಳಿಗೆ ಆಧಾರವಾಗಿರುವ ಚತುರಸ್ರ ಆಕಾರದ ವೃತ್ತಪೀಠಗಳಿಂದ ಇವುಗಳ ಭೇದವನ್ನು ತಿಳಿಯಬಹುದಾಗಿದೆ. ಸುಪ್ರಭೇದ ಆಗಮ ಲಿಂಗಶಬ್ದವನ್ನು ಹೀಗೆ ನಿದರ್ಶಿಸುತ್ತದೆ:

ಲಯಂ ಗಚ್ಛಂತಿ ಭೂತಾನಿ ಸಂಹಾರೇ ನಿಖಿಲಂ ಯತ್।
ಸೃಷ್ಟಿಕಾಲೇ ಪುನಸ್ಸೃಷ್ಟಿಂ ತಸ್ಮಾಲ್ಲಿಂಗಮುದಾಹೃತಂ ॥

ಸಂಹಾರಕಾಲದಲ್ಲಿ ಸಮಸ್ತಭೂತಗಳನ್ನು ತನ್ನಲ್ಲಿ ಅಡಗಿಸಿಕೊಂಡು ಸೃಷ್ಟಿಸಮಯದಲ್ಲಿ ಪುನಃ ಪ್ರಕಟಮಾಡಬಲ್ಲ ವಿರಾಡ್ರೂಪವನ್ನು ಲಿಂಗವೆಂದು ಕರೆದಿದ್ದಾರೆ. ಆಢ್ಯ, ಅನಾಢ್ಯ, ಸುರೇಢ್ಯ, ಸರ್ವಸಮ—ಎಂದು ಲಿಂಗದ ನಾಲ್ಕು ವಿಧಗಳನ್ನು 'ಸಿದ್ಧಾಂತ ಸಾರಾವಳಿ' ಎಂಬ ಗ್ರಂಥ ಪ್ರತಿಪಾದಿಸುತ್ತದೆ. ಈ ಎಲ್ಲ ಲಿಂಗಗಳ ಲಕ್ಷಣಗಳನ್ನೂ ಶೈವಾಗಮ ಗಳಲ್ಲಿ ಬರುವ ಪ್ರತಿಮಾ ಲಕ್ಷಣದಿಂದ ತಿಳಿಯಬಹುದಾಗಿದೆ.

ಆಗಮಗಳು ಮೂರ್ತಿಪೂಜೆಯ ವಿಧಾನ ಮತ್ತು ರಹಸ್ಯಗಳನ್ನು ವಿವೇಚಿಸುತ್ತವೆ. ದೇವಾಲಯಗಳ ನಿರ್ಮಾಣವನ್ನು ಅದಕ್ಕೆ ಸಾಧನವನ್ನಾಗಿಟ್ಟುಕೊಂಡಿವೆ. ವೇದಗಳೂ ಉಪನಿಷತ್ತುಗಳೂ ಹೇಳಿದ ಸೂಕ್ಷ್ಮತತ್ತ್ವಗಳು ಸುಲಭವಾಗಿ ಜನತೆಗೆ ಅರ್ಥವಾಗಿ ಜೀವನದಲ್ಲಿ ಅಳವಡಲು ಅಸಾಧ್ಯವಾದಾಗ ಅವೇ ತತ್ತ್ವಗಳನ್ನು ಆಗಮಗಳು ಅರ್ಥ ವಾಗುವ ಸಾಕಾರ ಉದಾಹರಣೆಗಳೊಡನೆ ವಿವರಿಸಿದುವು. ದೇವಾಲಯಗಳನ್ನು ಕಟ್ಟಿ ಮೂರ್ತಿಗಳನ್ನು ಸ್ಥಾಪಿಸಿದುವು. ವಿರಾಡ್ರೂಪಿಯ ವಿಶ್ವದೇಹವು ದೇವಸ್ಥಾನದ ರೂಪ ತಾಳಿದೆ ಎಂಬ ಭಾವನೆಯನ್ನು ಮೂಡಿಸಿದುವು. ಅದಕ್ಕೆ ಸಹಾಯಕವಾಗಿ ಶಿಲ್ಪಕಲಾ ಸೌಂದರ್ಯ ದೇವಾಲಯಗಳ ನಿರ್ಮಾಣದಲ್ಲಿ ಬೆಳೆಯಿತು. ಸಗುಣೋಪಾಸನೆಯಿಂದ ಕೂಡಿದ ತತ್ವಾನ್ವೇಷಣೆಯ ಮಾರ್ಗದಲ್ಲಿ ನಡೆದು ಬ್ರಹ್ಮಸಾಕ್ಷಾತ್ಕಾರದ ಕಡೆಗೆ ಕೊಂಡೊಯ್ಯಲು ಆಗಮಗಳು ಸಹಾಯಕಗಳಾದುವು.

ಹೀಗೆ ಭರತಖಂಡದ ಧಾರ್ಮಿಕ ಇತಿಹಾಸದಲ್ಲಿ, ಉಪಾಸನೆಯ ಮಾರ್ಗದ ವಿಕಾಸ ದಲ್ಲಿ, ಮತ್ತು ಆ ಮೂಲಕ ಜನತೆಯಲ್ಲಿ ಧರ್ಮದ ಆಚರಣೆಯ ಮಾರ್ಗವನ್ನು ರೂಪಿಸು ವುದರಲ್ಲಿ ಆಗಮಗಳು ವಹಿಸಿದ ಪಾತ್ರ ಬಹುಮುಖ್ಯವಾದುದು. ಸಾಮಾಜಿಕ ಜನ ಜೀವನಕ್ಕೆ ಒಂದು ಧಾರ್ಮಿಕ ಚೌಕಟ್ಟನ್ನು ಇವು ಕಲ್ಪಿಸಿಕೊಟ್ಟುವು. ಚಿರಂತನ ಸ್ಫೂರ್ತಿಯ ಸೆಲೆಗಳಾಗಿ ಉಳಿದುವು.

## ಜೈನ ಬೌದ್ಧ ಧರ್ಮಗಳು

ಹಿಂದೂಧರ್ಮದ ಸಮಾನತತ್ತ್ವಗಳನ್ನು ಆಧಾರವಾಗಿಟ್ಟುಕೊಂಡು ಅನೇಕ ದರ್ಶನ ಗಳು ರೂಪುಗೊಂಡುವು. ನ್ಯಾಯ ವೈಶೇಷಿಕ ಮೊದಲಾದ ಷಡ್ದರ್ಶನಗಳು, ಬ್ರಹ್ಮ ಸೂತ್ರಾದಿಗಳ ಮೇಲೆ ವಿವಿಧ ಭಾಷ್ಯಗಳು—ಇವು ಆತ್ಮವಿಜ್ಞಾನದ ವಿವಿಧ ಪ್ರಯೋಗ ಗಳಾಗಿ ಪರಿಣಮಿಸಿದುವು. ಅವುಗಳನ್ನು ವಿವೇಚಿಸುವುದಕ್ಕೆ ಮುನ್ನ ಹಿಂದೂ ಸಮಾಜ ದಿಂದ ಸಿಡಿದೆದ್ದ ಎರಡು ಕ್ರಾಂತಿಯ ಕಿಡಿಗಳನ್ನು ಈಗ ನೋಡಬಹುದು.

ಜೈನ ಮತ್ತು ಬೌದ್ಧಧರ್ಮಗಳು ಹಿಂದೂಧರ್ಮದಿಂದಲೇ ಹುಟ್ಟಿ ಹೊರಸಿಡಿದುವು. ಹಿಂದೂಧರ್ಮದ ಉದಾತ್ತ ಆದರ್ಶಗಳು ಮುಸುಳಿಸಿ, ಸಮಾಜದಲ್ಲಿ ವಿಷಮತೆಯ

ಶೋಂಕು ವ್ಯಾಪಿಸಿದಾಗ ಅದಕ್ಕೆ ಪ್ರತಿಕ್ರಿಯೆಯ ಸ್ವರೂಪದಲ್ಲಿ ಇವು ಮೂಡಿಬಂದುವು. ಜೀವನದ ಮೌಲ್ಯಗಳು ತಮ್ಮ ಮಹತ್ತ್ವವನ್ನು ಕಳೆದುಕೊಂಡು ಸವಕಲು ನಾಣ್ಯಗಳಾದಾಗ ಅವುಗಳಿಗೆ ಮತ್ತೊಮ್ಮೆ ಹೊಸ ಮುದ್ರೆಯನ್ನೊತ್ತಿ ಚಲಾವಣೆಗೆ ತರುವ ಕನ್ನುಟದ ಕಾರ್ಯ ಇವುಗಳಿಂದ ನಡೆಯಿತು. ಆಧ್ಯಾತ್ಮಿಕ ಅಭೀಪ್ಸೆಯ ಅಂತರಂಗದ ಪ್ರಪಂಚದಲ್ಲಿ ಹೊಸ ಹೊಸ ಸಾಮ್ರಾಜ್ಯಗಳನ್ನು ಕಟ್ಟಲು ಈ ಸಾಹಸ ಕಾರಣವಾಯಿತು.

ವೇದದ ಮೂಲ ಉದ್ದೇಶ ಮತ್ತು ಆಶಯಗಳು ನಾಶವಾಗಿ ಅವುಗಳಲ್ಲಿನ ಧರ್ಮ ಪ್ರತಿಕ್ರಿಯೆಗಳು ಅರ್ಥಹೀನ ಸಂಪ್ರದಾಯಗಳಾಗಿ ಪರಿಣಮಿಸಿದ್ದುವು. ಸಾಮಾನ್ಯರ ಕೈಗೆ ಅವು ಎಟುಕುವಂತಿರಲಿಲ್ಲ. ಕೇವಲ ಕೆಲವರ ಸ್ವತ್ತಾಗಿ ಸ್ವಾರ್ಥದ ಮುಖವಾಡವಾಗಿತ್ತು ಧರ್ಮ. ಕರ್ಮಮಾರ್ಗ ಅಡ್ಡಹಾದಿಯನ್ನು ಹಿಡಿದು ಅನೇಕ ಅಂಧಶ್ರದ್ಧೆಗಳಲ್ಲಿ ಪರ್ಯವಸಾನವಾಗಿತ್ತು. ಮಂತ್ರತಂತ್ರಗಳ ಮೂಲಭಾವನೆ ಮಾಯವಾಗಿ ಕ್ಷುದ್ರಕಾರ್ಯಗಳಿಗಾಗಿ ಅವುಗಳನ್ನು ಬಳಸಲಾಗುತ್ತಿತ್ತು. ಮುಖ್ಯವಾಗಿ ಯಜ್ಞಯಾಗಾದಿಗಳು ಮತ್ತು ಅವುಗಳ ಹೆಸರಿನಲ್ಲಿ ನಡೆಯುತ್ತಿದ್ದ ಪ್ರಾಣಿಹಿಂಸೆ ಅನೇಕ ವಿಚಾರವಾದಿಗಳ ಮನಸ್ಸನ್ನು ಕಲಕಿತ್ತು.

ಸಮಾಜದ ವ್ಯವಸ್ಥೆಗಾಗಿ ಏರ್ಪಟ್ಟ ಚತುರ್ವರ್ಣಗಳು ಮೇಲುಕೀಳನ್ನು ಬಿತ್ತಿ ಬೆಳಸುತ್ತಿದ್ದುವು. ಬ್ರಹ್ಮಜ್ಞಾನವನ್ನು ಪಡೆದಿರುವವರು ಬ್ರಾಹ್ಮಣರೆಂಬ ಗುಣಕರ್ಮ ವಿಭಾಗ ಮರೆಯಾಗಿ ಹುಟ್ಟಿನಿಂದಲೇ ಬ್ರಾಹ್ಮಣತ್ವ ಸಿದ್ಧವಾಗುತ್ತಿತ್ತು. ಧರ್ಮ ಅವರ ಸರ್ವಾಧಿಕಾರಿತ್ವದ ಕೈಸೇರಿತ್ತು. ಸಮಾಜದಲ್ಲಿ ಅವರ ಸ್ಥಾನ ಅತ್ಯುಚ್ಚವಾಗಿತ್ತು. ರಾಜಕೀಯ ಶಕ್ತಿಯೂ ಅವರಿಗೆ ತಲೆಬಾಗಿತ್ತು. ಧರ್ಮದ ಮಂತ್ರದಂಡವನ್ನು ಕೈಯಲ್ಲಿ ಹಿಡಿದು, ರಾಜನಿಗೆ ಪರಂಪರೆಯ ಅಂಕುಶವನ್ನು ಹಾಕಿ ಅವನನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ಸಾಮಾನ್ಯ ಜನರಿಗಿಲ್ಲದ ವಿಶೇಷ ಸೌಲಭ್ಯಗಳನ್ನು ಧರ್ಮದ ಹೆಸರಿನಲ್ಲಿ ಅವರು ಪಡೆಯುತ್ತಿದ್ದರು.

ನಿಜವಾದ ಧಾರ್ಮಿಕ ತತ್ತ್ವಗಳು ಜನತೆಯನ್ನು ಮುಟ್ಟುವಂತಿರಲಿಲ್ಲ. ಅವುಗಳಿಂದ ಜನರು ವಂಚಿತರಾಗಿದ್ದರು. ಅಲ್ಲಿಯೂ ಮೇಲುಕೀಳೆಂಬ ನೂರಾರು ಜಾತಿಗಳು ಬಂದು ಸಮಾಜವನ್ನು ಒಡೆದಿದ್ದುವು. ವಿಚಾರವಂತರನ್ನು ಈ ಪರಿಸ್ಥಿತಿ ಕೆರಳಿಸಿತ್ತು. ಜನತೆಯನ್ನು ಮುಟ್ಟಿ ಎಚ್ಚರಿಸಬಲ್ಲ ಧರ್ಮಜಿಜ್ಞಾಸೆಯ ಹಂಬಲ ಅಲ್ಲಲ್ಲಿ ಕಂಡುಬರತೊಡಗಿತು. ಜೈನ ಬೌದ್ಧ ಧರ್ಮಗಳಿಗಿಂತ ಹಿಂದೆಯೇ ಅಲ್ಲಲ್ಲಿ ಅಂತಹ ಪ್ರಯತ್ನಗಳು ನಡೆದಂತೆ ತೋರುತ್ತವೆ. ಪಾಳಿ ಮತ್ತು ಜೈನ ಗ್ರಂಥಗಳಲ್ಲಿ ಇದಕ್ಕೆ ಸಮರ್ಥನೆ ಸಿಕ್ಕುತ್ತದೆ. ಬುದ್ಧ ತನಗಿಂತ ಹಿಂದೆ ಆಗಿಹೋದ ಪೂರಣಕಸ್ಸಪ, ಪಕುಧ ಕಚ್ಚಾಯನ, ಮಖ್ಖಲಿ ಗೋಸಾಲ—ಇತ್ಯಾದಿ ಧರ್ಮಪ್ರವರ್ತಕರನ್ನು ಹೇಳುತ್ತಾನೆ. ಜೈನಧರ್ಮ ಗ್ರಂಥಗಳಲ್ಲಿ ಪ್ರಾಚೀನ ಧರ್ಮಜಾಗ್ರುತಿ ಪರಂಪರೆಯ ಉಲ್ಲೇಖನ ಬರುತ್ತದೆ. ಇವೆಲ್ಲವುಗಳಿಗಿಂತ ಮುಂದೆ ನಡೆದು ತಮ್ಮ ವ್ಯಕ್ತಿತ್ವದಿಂದ ಸಮಾಜದ ಮೇಲೆ ಹೆಚ್ಚು ಪ್ರಭಾವವನ್ನು

ಬೀರಿ, ಶಾಶ್ವತ ಪರಿಣಾಮವನ್ನು ಸಾಧಿಸಲು ಶಕ್ತರಾದವರೆಂದರೆ ಬುದ್ಧ ಮತ್ತು ಮಹಾವೀರ. ಜೈನ ಮತ್ತು ಬೌದ್ಧ ಧರ್ಮಗಳು ಭರತಖಂಡದ ಧಾರ್ಮಿಕ ಇತಿಹಾಸ ದಲ್ಲಿ ಉಜ್ಜ್ವಲವಾದ ಅಧ್ಯಾಯಗಳಾಗಿ ಪರಿಣಮಿಸಿದುವು. ಅವುಗಳನ್ನು ಬಹಳ ಸಂಗ್ರಹ ವಾಗಿ ಇಲ್ಲಿ ಪರಿಚಯ ಮಾಡಿಕೊಳ್ಳಬಹುದು.

ಜೈನಧರ್ಮದ ಪ್ರಾರಂಭ ಮತ್ತು ಪ್ರಾಚೀನತೆಗಳು ಇದುವರೆಗೂ ಒಂದು ರಹಸ್ಯ ವಾಗಿಯೇ ಉಳಿದಿದೆ. ಇಪ್ಪತ್ತುನಾಲ್ಕು ಜನ ತೀರ್ಥಂಕರರಿಂದ ಈ ಧರ್ಮ ಪ್ರತಿಪಾದಿತ ವಾಗಿದೆ ಎಂಬುದು ಜೈನಧರ್ಮದಲ್ಲಿ ಬಂದ ಪರಂಪರೆ. ಇವರಲ್ಲಿ ಮೊದಲನೆಯ ತೀರ್ಥಂಕರನಾದ ವೃಷಭದೇವನ ಸೂಚನೆ ಋಗ್ವೇದ ಮಂತ್ರಗಳಲ್ಲಿದೆ ಎಂದು ವಿದ್ವಾಂ ಸರು ಅಭಿಪ್ರಾಯಪಡುತ್ತಾರೆ.[33] ವಿಷ್ಣುಪುರಾಣ ಮತ್ತು ಭಾಗವತ ಪುರಾಣಗಳಲ್ಲಿ ವೃಷಭದೇವನ ಉಲ್ಲೇಖವಿದೆ. ನಾರಾಯಣನ ಅವತಾರ ಎಂದು ಅಲ್ಲಿ ಅವನನ್ನು ಹೇಳ ಲಾಗಿದೆ. ಆದರೂ ಮೊದಲನೆಯ ಇಪ್ಪತ್ತೆರಡು ಜನ ತೀರ್ಥಂಕರರ ವಿಷಯ ಇದು ವರೆಗೂ ಕೇವಲ ಕಥೆಯಾಗಿಯೇ ಉಳಿದಿದೆ. ಚಾರಿತ್ರಿಕವಾಗಿ ಅವರ ಅಸ್ತಿತ್ವವನ್ನಾಗಲಿ ವ್ಯಕ್ತಿತ್ವವನ್ನಾಗಲಿ ತಿಳಿಯಲು ಯಾವ ಸಾಧನಗಳೂ ದೊರಕಿಲ್ಲ. ಆದರೆ ಇಪ್ಪತ್ತ ಮೂರನೆಯ ತೀರ್ಥಂಕರನಾದ ಪಾರ್ಶ್ವನಾಥ ಐತಿಹಾಸಿಕ ವ್ಯಕ್ತಿ. ಮಹಾವೀರನಿಗಿಂತ ಸುಮಾರು ೨೫೦ ವರ್ಷಗಳಷ್ಟು ಹಿಂದೆ ಜೀವಿಸಿದ್ದನೆಂದು ಹೇಳುವುದಕ್ಕೆ ಸಾಕಷ್ಟು ಆಧಾರಗಳು ದೊರಕುತ್ತವೆ. ಆತ ಅಶ್ವಸೇನ ಎಂಬ ಮಹಾರಾಜನ ಮಗ. ಆಧ್ಯಾತ್ಮದ ಹಂಬಲಿಕೆಯಿಂದ ರಾಜ್ಯವನ್ನು ತ್ಯಜಿಸಿ ತಪಸ್ಸನ್ನು ಕೈಕೊಂಡ. ಅಹಿಂಸೆ, ಸತ್ಯ, ಅಸ್ತೇಯ —ಇವೇ ಮೊದಲಾದುವು ಆತನ ಉಪದೇಶದ ಮುಖ್ಯ ಅಂಶಗಳಾಗಿದ್ದುವು. ಈ ಉಪ ದೇಶದ ತಳಹದಿಯಮೇಲೆ ಒಂದು ವ್ಯವಸ್ಥಿತವಾದ ಸಮಾಜವನ್ನು ಕಟ್ಟಲು ಆತ ಸಮರ್ಥನಾದನು. ೨೪ನೆಯ ತೀರ್ಥಂಕರನಾದ ವರ್ಧಮಾನ ಮಹಾವೀರನ ತಂದೆ ತಾಯಿಗಳು ಪಾರ್ಶ್ವನಾಥನು ಕಟ್ಟಿದ ಸಮಾಜದಲ್ಲಿಯೇ ಹುಟ್ಟಿ ಬೆಳೆದವರು. ಆದುದರಿಂದ ಮಹಾವೀರನ ಮೇಲೆ ಚಿಕ್ಕಂದಿನಿಂದಲೂ ಜೈನಧರ್ಮದ ತತ್ತ್ವಗಳ ಪ್ರಭಾವವಿತ್ತೆಂದು ಹೇಳಬಹುದು.

ಮಹಾವೀರನು ಕ್ರಿ.ಪೂ. ೫೯೯ರಲ್ಲಿ ವೈಶಾಲಿಯಲ್ಲಿ (ಈಗಿನ ಬಿಹಾರ) ಹುಟ್ಟಿದನು. ಜ್ಞಾತೃಕ ಎಂಬ ಕ್ಷತ್ರಿಯ ವಂಶಕ್ಕೆ ಮುಖ್ಯನಾದ ಸಿದ್ಧಾರ್ಥ ಎಂಬುವನು ಈತನ ತಂದೆ. ಲಿಚ್ಛವಿಯ ರಾಜನಾದ ಚೇತಕನ ತಂಗಿ ತ್ರಿಶಲದೇವಿ ಈತನ ತಾಯಿ. ಚಿಕ್ಕಂದಿ ನಲ್ಲಿಯೇ ಮಹಾವೀರನಿಗೆ ಸಕಲ ವಿದ್ಯೆಗಳನ್ನೂ ಅಭ್ಯಸಿಸುವ ಅವಕಾಶ ಸಿಕ್ಕಿತು. ಅನಂತರ ಯಶೋದೆ ಎಂಬುವಳೊಡನೆ ಈತನ ವಿವಾಹವಾಯಿತು. ಇವರಿಗೆ ಒಬ್ಬ ಮಗಳು ಹುಟ್ಟಿದಳೆಂದು ತಿಳಿದುಬರುತ್ತದೆ. ಮಹಾವೀರ ತನ್ನ ಮೂವತ್ತನೆಯ ವಯಸ್ಸಿ ನಲ್ಲಿ ವೈರಾಗ್ಯಪರನಾದನು. ಬಹುಶಃ ತಂದೆತಾಯಿಗಳ ಮರಣದ ದುಃಖ ಇವನಲ್ಲಿ ಸುಪ್ತವಾಗಿದ್ದ ಆ ಭಾವನೆಯನ್ನು ಪ್ರಚೋದಿಸಲು ಕಾರಣವಾಗಿರಬಹುದು. ಅನಂತರ ಅವನು ಸರ್ವಸಂಗಪರಿತ್ಯಾಗಿಯಾಗಿ ಸತ್ಯಶೋಧನೆಯಲ್ಲಿ ತೊಡಗಿದನು.

ತನ್ನ ಸಂಚಾರದಲ್ಲಿ ಒಮ್ಮೆ ನಲಂದಕ್ಕೆ ಬಂದಾಗ ಈತನಿಗೆ ಗೋಸಲ ಮಖ್ಖಲ ಪುತ್ತ ಎಂಬುವನ ಪರಿಚಯವಾಯಿತು. ಆತ ಮಹಾವೀರನ ವ್ಯಕ್ತಿತ್ವಕ್ಕೆ ಮಾರುಹೋಗಿ ಅವನೊಡನೆಯೇ ಇರತೊಡಗಿದನು. ಆದರೆ ಆರು ವರ್ಷಗಳ ನಂತರ ಮಹಾವೀರನನ್ನು ಬಿಟ್ಟು ಆಜೀವಿಕವೆಂಬ ಸ್ವತಂತ್ರಪಂಥವನ್ನು ಗೋಸಲನು ಸ್ಥಾಪಿಸಿದನು. ಇತ್ತ ಮಹಾವೀರ ಸಂನ್ಯಾಸಿಯಾದ ಹದಿಮೂರನೆಯ ವರ್ಷ ಜ್ಞಾನದ ಬೆಳಕನ್ನು ಕಂಡುಕೊಂಡು ತೀರ್ಥಂಕರನಾದನು. ಅಲ್ಲಿಂದ ಮುಂದೆ ಮೂವತ್ತು ವರ್ಷಗಳ ಕಾಲ ಸಂಚರಿಸುತ್ತ ತನ್ನ ಧರ್ಮದ ತತ್ತ್ವಗಳನ್ನು ಬೋಧಿಸಿದನು. ಬಿಂಬಸಾರ ಅಜಾತಶತ್ರು ಮೊದಲಾದ ರಾಜರಿಂದ ಮನ್ನಣೆಯನ್ನು ಪಡೆದನು. ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಕ್ರಿ.ಪೂ. ೫೨೭ರಲ್ಲಿ (ಕೆಲವರು ಕ್ರಿ.ಪೂ. ೪೬೮ ಎಂದು ಅಭಿಪ್ರಾಯಪಡುತ್ತಾರೆ.) ಪಪ ಎಂಬಲ್ಲಿ ಇಹಲೋಕ ವ್ಯಾಪಾರವನ್ನು ತ್ಯಜಿಸಿದನು. ಈತ ಬುದ್ಧನ ಸಮಕಾಲೀನನಾಗಿದ್ದು ಅವನ ಅನಂತರವೂ ಕೆಲವು ಕಾಲ ಬದುಕಿದ್ದನು. ಪಾರ್ಶ್ವನಾಥನು ಪ್ರತಿಪಾದಿಸಿದ್ದ ತತ್ತ್ವಗಳನ್ನು ಆಧಾರವಾಗಿಟ್ಟುಕೊಂಡು ಅದರ ಮೇಲೆ ತನ್ನದೇ ಆದ ಧರ್ಮಸೌಧವನ್ನು ಕಟ್ಟಿ ಜೈನಧರ್ಮವನ್ನು ಶಾಶ್ವತಗೊಳಿಸಿದನು.

ಮಹಾವೀರ ಬುದ್ಧನಂತೆ ಜನತೆಗೆ ತಿಳಿಯುವ ಪ್ರಾಕೃತ ಭಾಷೆಯಲ್ಲಿ ಧರ್ಮವನ್ನು ಬೋಧಿಸಿದುದು ಗಮನಿಸಬೇಕಾದ ಅಂಶ. ಮಾಗಧಿ ಮತ್ತು ಶೌರಸೇನಿ ಭಾಷೆಗಳನ್ನಾಡುವವರೆಲ್ಲರಿಗೂ ಪರಿಚಿತವಾಗಿದ್ದ ಅರ್ಧಮಾಗಧಿ ಅವನು ಬಳಸಿದ ಪ್ರಮುಖ ಭಾಷೆಯಾಗಿತ್ತು. ಅವನ ಉಪದೇಶಗಳೆಲ್ಲವನ್ನೂ ಶಿಷ್ಯರು ಸಂಗ್ರಹಿಸಿ ಅವುಗಳನ್ನು ಶ್ರುತಾಂಗಗಳೆಂದು ಕರೆದರು. ಅವು ಮಹಾವೀರನ ಶಿಷ್ಯರಲ್ಲಿ ಬಾಯಿಂದ ಬಾಯಿಗೆ ಬರುತ್ತ ಉಳಿದುಕೊಂಡು ಬಂದಿದ್ದುವೆಂದೂ ಆದರೆ ಕಾಲಕ್ರಮೇಣ ನಾಶವಾದುವೆಂದೂ ಭಾವಿಸಲಾಗಿದೆ. ಕ್ರಿ.ಶ. ೫ನೆಯ ಶತಮಾನದಲ್ಲಿ(ಕ್ರಿ. ಶ. ಸು. ೪೫೪) ಎಂದರೆ ಮಹಾವೀರನ ನಿರ್ವ್ಯಾಣಾನಂತರ ಹತ್ತು ಶತಮಾನಗಳಾದ ಮೇಲೆ ಆ ಗ್ರಂಥಗಳನ್ನು ಪುನರ್‌ನಿರ್ಮಿಸುವ ಪ್ರಯತ್ನ ನಡೆಯಿತು.

ಮಹಾವೀರನ ಬೋಧನೆಯಿಂದ ಸಂಘಟಿತವಾದ ಜೈನಧರ್ಮ ದೇಶದ ವಿವಿಧ ಭಾಗಗಳಿಗೆ ಹರಡಿತು. ಉತ್ತರ ಭಾರತವನ್ನು ದಾಟಿ ದಕ್ಷಿಣದ ಕಡೆಗೂ ಕಾಲಿಟ್ಟಿತು. ಅದರಲ್ಲಿ ಮುಖ್ಯವಾಗಿ ಕರ್ಣಾಟಕ ಈ ಧರ್ಮದ ಕೇಂದ್ರವಾಗಿ ಪರಿಣಮಿಸಿತು. ಭದ್ರಬಾಹು ಮುನಿಗಳು ಚಂದ್ರಗುಪ್ತನೊಡನೆ ಮತ್ತು ತನ್ನ ಅನೇಕ ಶಿಷ್ಯರ ಜೊತೆಯಲ್ಲಿ ಕರ್ಣಾಟಕಕ್ಕೆ ಬಂದು ಶ್ರವಣಬೆಳಗೊಳದಲ್ಲಿ ನೆಲಸಿದರು. ಉತ್ತರದೇಶದಲ್ಲಿ ಬಂದ ಭೀಕರ ಬರಗಾಲವು ಇದಕ್ಕೆ ಕಾರಣವಾಯಿತು. ಕೆಲವರು ಉತ್ತರದಲ್ಲಿಯೇ ಉಳಿದರು. ಇನ್ನುಳಿದ ಜೈನರು ಭದ್ರಬಾಹುವನ್ನು ಹಿಂಬಾಲಿಸಿ ದಕ್ಷಿಣಕ್ಕೆ ಬಂದರು. ಇದು ಮುಂದೆ ದಿಗಂಬರ ಶ್ವೇತಾಂಬರ ಪಂಥಗಳಿಗೆ ಕಾರಣವಾಯಿತೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ.

ಕರ್ಣಾಟಕದಲ್ಲಿ ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹ ಸಿಕ್ಕಿತು. ರಾಜಮನ್ನಣೆಗೂ

ಪೋಷಣೆಗೂ ಅದು ಪಾತ್ರವಾಯಿತು. ಚಾಳುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು—ಈ ಮೊದಲಾದ ಪ್ರಮುಖ ರಾಜವಂಶಗಳಿಂದ ಏಕಪ್ರಕಾರವಾದ ಗೌರವವನ್ನು ಅದು ಪಡೆದುದು ಇತಿಹಾಸಪ್ರಸಿದ್ಧವಾಗಿದೆ. ಅದರ ಫಲವಾಗಿ ಜೈನಧರ್ಮ ಕರ್ನಾಟಕದ ಪ್ರಮುಖಧರ್ಮಗಳಲ್ಲಿ ಒಂದಾಗಿ ಪರಿಣಮಿಸಿತು; ಕರ್ನಾಟಕದ ಸಾಹಿತ್ಯ ಮತ್ತು ಸಂಸ್ಕೃತಿಗೆ ಚಿರಸ್ಮರಣೀಯವಾದ ಕಾಣಿಕೆಯನ್ನು ನೀಡಿತು.

ಜೈನಧರ್ಮದ ಪ್ರಮುಖವಾದ ಸಂದೇಶ ಅಹಿಂಸೆ. "ಅಹಿಂಸಾ ಪರಮೋ ಧರ್ಮಃ"—ಎಂಬುದನ್ನು ನಿಷ್ಠುರವಾದ ನಿಷ್ಠೆಯಿಂದ ಆಚರಿಸಿ ತೋರಿಸಿದ ಧರ್ಮ ಇದು. ಪಂಚಾಣು ವ್ರತಗಳಲ್ಲಿ ಮೊದಲನೆಯದೇ ಅಹಿಂಸೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ—ಇವು ಪಂಚಾಣುವ್ರತಗಳು. ಸಮತೆಯ ಪೀಠದ ಮೇಲೆ ಅಹಿಂಸಾದಿ ವ್ರತಗಳ ಸ್ಥಾಪನೆಯಾಯಿತು. ಸಂಯಮ ಮತ್ತು ತಪಸ್ಸುಗಳು ಅದರ ಪಾಲನೆಗೆ ಆವಶ್ಯಕವಾದ ಅಂಗಗಳಾದುವು. ಸಾಮಾನ್ಯವಾಗಿ ರಾಗದ್ವೇಷಗಳಿಗೆ ಒಳಗಾಗಿ ಮನುಷ್ಯ ಸಾಧನೆಯ ಮಾರ್ಗದಿಂದ ಚ್ಯುತನಾಗುತ್ತಾನೆ. ಹಾಗಾಗದೇ ಇರುವುದಕ್ಕಾಗಿ ಸಂಯಮದ ಕಡಿವಾಣ ಆತನಿಗೆ ಬೇಕು. ಸಮತೆಯ ಕವಚವನ್ನು ಆತ ತೊಡಬೇಕು. ಎಲ್ಲ ಜೀವಗಳೂ ಸಮಾನವಾದುವು; ಅವುಗಳಲ್ಲಿ ಉಚ್ಚ ನೀಚವೆಂಬ ಕಲ್ಪನೆಯೇ ಹಿಂಸೆಯ ಮೂಲ—ಎಂದ ಮಹಾವೀರ. ಜೈನ ಗ್ರಂಥಗಳು ಜ್ಞಾನ ಪೂಜೆ ಕುಲ ಜಾತಿ ಬಲ ಋದ್ಧಿ ತಪ ಮತ್ತು ಶರೀರ—ಈ ಎಂಟು ಬಗೆಯ ಮದಗಳನ್ನು ಹೇಳುತ್ತವೆ. ತಾರಕವಾಗಬಹುದಾದ ಜ್ಞಾನ ಪೂಜೆ ತಪಸ್ಸುಗಳು ಕೂಡ ಅಹಂಕಾರಮೂಲವಾದರೆ ಬಂಧಕಗಳಾಗುತ್ತವೆ.

ಸವ್ವೇ ಪಾಣಾ ಪಿಯಾ ಉಆ, ಸುಹಸಾಯಾ ದುಕ್ಖಪಡಿಕೂಲಾ ಅಪ್ಪಿಯವಹಾ।
ಪಿಯ ಜೀವಿಣೋ ಜೀವಿ ಉಕಾಮಾ, ಸವ್ವೇಸಿಂ ಜೀವಿಯಂ ಪಿಯಂ॥

(ಆಚಾರಾಂಗ—೨-೩-೮೧)

ಎಂದರೆ "ಎಲ್ಲರಿಗೂ ತಮ್ಮ ತಮ್ಮ ಜೀವನವು ಪ್ರಿಯವಾಗಿದೆ. ಎಲ್ಲರೂ ಸುಖವಾಗಿರಲು ಇಚ್ಛಿಸುತ್ತಾರೆ. ಅದಕ್ಕಾಗಿ ಯಾವ ಪ್ರಾಣಿಗೂ ಕಷ್ಟವನ್ನು ಕೊಡುವುದು ಒಳ್ಳೆಯದಲ್ಲ"—ಎಂದು ಮಹಾವೀರ ಬೋಧಿಸಿದ. "ಶಾಂತನೂ ಸಂಯಮಿಯೂ ಆದವನು ಇನ್ನೊಬ್ಬರಿಗೆ ಹಿಂಸೆಯನ್ನುಂಟುಮಾಡಿ ತಾನೂ ಬದುಕಬೇಕೆಂದು ಬಯಸಲಾರನು. ನಿಜವಾಗಿ ನೋಡಿದರೆ ಯಾರು ಇನ್ನೊಂದು ಜೀವವನ್ನು ಹಿಂಸಿಸುವರೋ ಅವರು ತಮ್ಮನ್ನು ತಾವೇ ಹಿಂಸಿಸಿಕೊಂಡಂತೆ"—ಈ ಮೊದಲಾದ ಮಾತುಗಳಲ್ಲಿ ಸರ್ವಜೀವ ಸಮತೆಯನ್ನು ಆತ ಸಾಧಿಸಿದ.

ಈ ಅಹಿಂಸೆ ಮತ್ತು ಸರ್ವಸಮಾನತೆಯ ಭಾವನೆಗಳು ಜೈನಧರ್ಮವನ್ನು ಜನಪ್ರಿಯವನ್ನಾಗಿ ಮಾಡಲು ಕಾರಣವಾದುವು. ಸಮಾಜದಲ್ಲಿ ಮೇಲುಕೀಳುಗಳನ್ನು ಬೆಳಸಲು ಕಾರಣವಾಗಿದ್ದ ಚತುರ್ವರ್ಣಗಳನ್ನು ಮಹಾವೀರ ಮಾನ್ಯಮಾಡಲಿಲ್ಲ. ಮನುಷ್ಯನು ತನ್ನ ಕರ್ಮಗಳಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎನಿಸಿಕೊಳ್ಳುತ್ತಾನೆಯೇ

ಹೊರತು ಆ ಜಾತಿಯಲ್ಲಿ ಹುಟ್ಟಿದುದರಿಂದ ಅಲ್ಲ—ಎಂದು ಮಹಾವೀರ ಹೇಳಿ, ಆತ್ಮನ ಉದ್ಧಾರಕ್ಕಾಗಿ ಎಲ್ಲರಿಗೂ ಅವಕಾಶ ಮಾಡಿಕೊಟ್ಟನು. ಸಮ್ಯಗ್‌ಜ್ಞಾನವುಳ್ಳ ಚಾಂಡಾಲನು ಸಹ ಪೂಜನೀಯ ಎಂದು ಹೇಳುವ ಮಾತು 'ರತ್ನಕರಂಡ ಶ್ರಾವಕಾಚಾರ'ದಲ್ಲಿ ಬರುತ್ತದೆ (೧. ೨೮. ೨೯). ಹರಿಕೇಶ ಎಂಬ ಜೈನ ಸಾಧು ಚಾಂಡಾಲ ಕುಲೋತ್ಪನ್ನನಾಗಿದ್ದನೆಂಬೂ ತನ್ನ ಸಾಧನೆಯಿಂದ ಆ ಹಂತಕ್ಕೇರಿದನೆಂದೂ ತಿಳಿದುಬರುತ್ತದೆ. ರವಿಷೇಣಾಚಾರ್ಯರು ತಮ್ಮ 'ಪದ್ಮಪುರಾಣ'ದಲ್ಲಿ 'ಗುಣದಿಂದಲೇ ಜಾತಿ' ಎಂಬ ಸಿದ್ಧಾಂತವನ್ನು ಮನ್ನಿಸಿದ್ದಾರೆ.

ಮಹಾವೀರನ ಅನುಯಾಯಿಗಳು ಸಮಾಜದ ಎಲ್ಲ ವರ್ಗಗಳವರಿಂದಲೂ ಬಂದವರಾಗಿದ್ದರು. ಬ್ರಾಹ್ಮಣ ಕ್ಷತ್ರಿಯರು ಮಾತ್ರವಲ್ಲದೆ ವೈಶ್ಯ ಕುಂಬಾರ ಮಾಲೆಕಾರ ಇತ್ಯಾದಿ ಕರ್ಮಗಳಲ್ಲಿ ತೊಡಗಿದವರಿದ್ದರು. ಜಾಲಗಾರ, ಮ್ಲೇಚ್ಛ, ಚಾಂಡಾಲ ಪುತ್ರರಿಗೂ ಮಹಾವೀರ ದೀಕ್ಷೆಯನ್ನು ಕೊಟ್ಟಿದ್ದಾನೆ. ಮಹಾವೀರನ ಧರ್ಮಸಮವಸರಣದಲ್ಲಿ ಎಲ್ಲ ಜಾತಿಯವರಿಗೂ ಮುಕ್ತದ್ವಾರವಿತ್ತು, ಸಮಾನಸ್ಥಾನವಿತ್ತು. ಸ್ತ್ರೀಪುರುಷರೆಂಬ ತಾರತಮ್ಯವೂ ಅಲ್ಲಿರಲಿಲ್ಲ. ಸ್ತ್ರೀಯರಿಗೂ ಸ್ಥಾನವನ್ನು ಮಹಾವೀರ ತನ್ನ ಸಂಘದಲ್ಲಿ ಕಲ್ಪಿಸಿಕೊಟ್ಟಿದ್ದನು. ಚಂದನಬಾಲೆ ಎಂಬುವಳು ಮಹಾವೀರನ ಪ್ರಥಮ ಶಿಷ್ಯೆಯಾಗಿದ್ದು ಭಿಕ್ಷುಣೀ ಸಂಘದ ಅಧಿಷ್ಠಾತ್ರಿಯಾಗಿದ್ದಳು. ಜೈನಧರ್ಮದ ಈ ವಿಶಾಲ ದೃಷ್ಟಿ ಜನತೆಯನ್ನಾಕರ್ಷಿಸಲು ಬಹುಮಟ್ಟಿಗೆ ಕಾರಣವಾಯಿತು.

ಜೈನಧರ್ಮದ ತಾತ್ತ್ವಿಕ ಅಂಶ ಮುಂದೆ ಬಹಳ ವಿವರವಾಗಿ ಬೆಳೆಯಿತು. ಅವರ ಸೃಷ್ಟಿಕಲ್ಪನೆ, ಲೋಕಾಕಾರ ಕಥನ, ಕಾಲಗಣನೆಯ ಕ್ರಮ, ಜೀವ ಮತ್ತು ಅದರ ಬಂಧಕ್ಕೆ ಕಾರಣವಾದ ಕರ್ಮ, ಅದರಿಂದ ಬಿಡುಗಡೆಯನ್ನು ಪಡೆಯುವ ಬಗೆ, ಜೀವ ಪಡೆಯುವ ಜಿನಸ್ವರೂಪ—ಈ ಮೊದಲಾದುವು ಜೈನ ಧರ್ಮಶಾಸ್ತ್ರಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿವೆ. ಅವೆಲ್ಲವುಗಳ ವಿವೇಚನೆ ಇಲ್ಲಿ ಅಗತ್ಯವಿಲ್ಲ. ಕನ್ನಡ ಜೈನ ಪುರಾಣಗಳನ್ನು ನೋಡುವಾಗ ಈ ವಿವರಣೆಗಳು ಅಗತ್ಯವಾಗುತ್ತವೆ. ಜಿನಸೇನಾಚಾರ್ಯರೇ ಮೊದಲಾದ ಜೈನ ಆಚಾರ್ಯರ ಧರ್ಮಗ್ರಂಥಗಳು ತಮ್ಮ ಪ್ರಭಾವವನ್ನು ಬೀರಿ ಕನ್ನಡ ಜೈನ ಪುರಾಣಗಳಿಗೆ ತಳಹದಿಯಾದುವು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಜೈನಪುರಾಣಗಳನ್ನು ವಿವೇಚಿಸುವಾಗ ಜೈನಧರ್ಮದ ಈ ಅಂಶಗಳನ್ನು ವಿವರವಾಗಿ ನೋಡಬೇಕಾಗುತ್ತದೆ. ಇಲ್ಲಿ ಆ ವಿವರಗಳಿಗೆ ಹೋಗದೆ ಭಾರತೀಯ ಜನಜೀವನದ ಮೇಲೆ ಪ್ರಭಾವ ಬೀರಲು ಕಾರಣವಾದ ಒಂದೆರಡು ಅಂಶಗಳನ್ನು ಗಮನಿಸಬಹುದು.

ಜೈನಧರ್ಮ ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರ ಮೋಕ್ಷ—ಎಂಬ ಏಳು ತತ್ತ್ವಗಳನ್ನು ಪ್ರಮುಖವಾಗಿ ಹೇಳುತ್ತದೆ. ಈ ತತ್ತ್ವಗಳಲ್ಲಿ ಪ್ರಧಾನವಾಗಿ ಎರಡು ವಿಭಾಗಗಳನ್ನು ಮಾಡಬಹುದು: ಜೀವ ಅಜೀವ ಇವು ಒಂದರೊಡನೊಂದು ಸಂಬಂಧವನ್ನು ಪಡೆಯುವುದರಿಂದಲೇ ಜನನ ಮರಣ ಮತ್ತು ವಿವಿಧ ಅನುಭವ ರೂಪವಾದ ಸೃಷ್ಟಿವ್ಯಾಪಾರ ತೊಡಗುತ್ತದೆ. ಇವನ್ನು ಸಚೇತನ ಅಚೇತನ ಎಂದೂ

ಕರೆಯುತ್ತಾರೆ. ಜೀವ ಸಚೇತನ. ಇದಕ್ಕೆ 'ಪರಿಸ್ಪಂದಾತ್ಮಕ ಕ್ರಿಯಾಶೀಲತೆ'ಯಿದೆ. ಜಡ ಅಥವಾ ಅಚೇತನವನ್ನು ಐದು ಭಾಗಗಳಾಗಿ ಮಾಡಲಾಗಿದೆ: ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ—ಈ ದ್ರವ್ಯಗಳು ಅಚೇತನಗಳು. ಪುದ್ಗಲರೂಪವಾದ ಜಡತ್ವವನ್ನೇ ಕರ್ಮ ಎಂದು ಜೈನಧರ್ಮ ಕರೆಯುತ್ತದೆ. ಜೀವಕ್ಕೆ ಉಂಟಾದ ಪರಿಣಾಮದ ಸಮಯವನ್ನು ಸಾಧಿಸಿ ಪುದ್ಗಲ ರೂಪವಾದ ಕರ್ಮವು ಆತ್ಮದೊಳಕ್ಕೆ ಪ್ರವೇಶಿಸುತ್ತದೆ. ಅಥವಾ ಅಯಸ್ಕಾಂತವು ಕಬ್ಬಿಣವನ್ನು ಆಕರ್ಷಿಸುವಂತೆ ಆತ್ಮನು ಕರ್ಮವನ್ನು ಆಕರ್ಷಿಸುತ್ತದೆ. ಕರ್ಮ ಪುದ್ಗಲಗಳು ಆತ್ಮದೊಳಕ್ಕೆ ಹರಿಯುವ ಈ ಕ್ರಿಯೆಯನ್ನು 'ಆಸ್ರವ' ಎಂದು ಕರೆದಿದ್ದಾರೆ.

ಕರ್ಮವು ಆತ್ಮದೊಳಗೆ ಹರಿದ ನಂತರ ಆತ್ಮ ಪಡೆಯುವ ಅವಸ್ಥೆಯೇ ಬಂಧ. ಹೀಗೆ ಬಂಧನಕ್ಕೆ ಒಳಗಾದ ಆತ್ಮ ಒಂದು ಘಟ್ಟದಲ್ಲಿ ತನ್ನೊಳಕ್ಕೆ ಹರಿಯುತ್ತಿರುವ ಕರ್ಮಗಳನ್ನು ತಡೆದು ನಿಲ್ಲಿಸುತ್ತದೆ. ಇದನ್ನೇ 'ಸಂವರ' ಎಂದು ಕರೆದಿದ್ದಾರೆ. ಈಗ ಬಂಧಿತ ಜೀವದ ಮುಂದಿರುವ ಕರ್ತವ್ಯ, ತನ್ನೊಳಗೆ ಹರಿದು ಬಂದು ಸೇರಿಕೊಂಡಿರುವ ಕರ್ಮ ಪುದ್ಗಲಗಳನ್ನು ಹೊರಕ್ಕೆ ಹಾಕುವುದು. ಇದೇ ನಿರ್ಜರ. ನಿರ್ಜರದಿಂದ ಕರ್ಮಪುದ್ಗಲಗಳೆಲ್ಲಾ ಜೀವನಿಂದ ಹೊರಕ್ಕೆ ಹರಿದಮೇಲೆ ಜೀವ ತನ್ನ ಸ್ವಸ್ವರೂಪವನ್ನು ಪಡೆಯುತ್ತದೆ. ಇದೇ ಮೋಕ್ಷ. ಹೀಗೆ ಜೀವ ಮತ್ತು ಅಜೀವ ಇವೆರಡರ ಸಂಬಂಧದಿಂದಲೇ ಈ ಏಳು ತತ್ತ್ವಗಳು ಏರ್ಪಡುತ್ತವೆ. ಸೃಷ್ಟಿಯ ರಹಸ್ಯ ಮತ್ತು ಉದ್ದೇಶಗಳ ಪೂರ್ಣಚಿತ್ರವನ್ನು ತಂದುಕೊಡುವಂತಿವೆ, ಈ ತತ್ತ್ವಗಳ ಕಲ್ಪನೆ ಮತ್ತು ವಿವೇಚನೆಗಳು.

ಕರ್ಮತತ್ತ್ವವನ್ನಂತೂ ಜೈನಗ್ರಂಥಗಳು ಬಹು ಸೂಕ್ಷ್ಮವಾಗಿ ವಿವೇಚಿಸಿವೆ. ಕರ್ಮದಲ್ಲಿ 'ಘಾತಿಕರ್ಮ' 'ಅಘಾತಿಕರ್ಮ' ಎಂದು ಎರಡು ಪ್ರಕಾರಗಳನ್ನು ಮಾಡಿದ್ದಾರೆ. ಆತ್ಮನ ಅನಂತಜ್ಞಾನ ಅನಂತವೀರ್ಯಾದಿ ಗುಣಗಳನ್ನು ಮಲಿನಗೊಳಿಸಿ ಅವನನ್ನು ಬಂಧಿಸುವ ಕರ್ಮಗಳು ಘಾತಿಕರ್ಮಗಳು. ಇವುಗಳಲ್ಲಿ ಮತ್ತೆ ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಅಂತರಾಯ—ಎಂದು ನಾಲ್ಕು ಬಗೆಗಳನ್ನು ಮಾಡಲಾಗಿದೆ. ಅಘಾತಿಕರ್ಮಗಳಲ್ಲಿಯೂ ವೇದನೀಯ ಆಯು ನಾಮ ಗೋತ್ರ ಎಂದು ನಾಲ್ಕು ಬಗೆಗಳಿವೆ. ಹೀಗೆ ಕರ್ಮದಲ್ಲಿ ಒಟ್ಟು ಎಂಟು ಬಗೆಗಳೆಂಬುದು ಸ್ಥೂಲವಾದ ವಿಭಜನೆ. ಇವುಗಳಲ್ಲಿ ಮತ್ತೆ ಅಂತರ್ ವಿಭಜನೆಗಳನ್ನು ಮಾಡಿ ನೂರ ನಲವತ್ತೆಂಟರವರೆಗೂ ಆ ಸಂಖ್ಯೆಯನ್ನು ಬೆಳಸಿದ್ದಾರೆ. ಯಾವುದೇ ಒಂದು ವಿಷಯವನ್ನು ತೆಗೆದುಕೊಂಡರೂ ಅದನ್ನು ವಿಭಜಿಸುತ್ತ ಹೆಸರು ಕೊಡುತ್ತ ಸಂಖ್ಯೆಗಳನ್ನು ಬೆಳಸಿಕೊಂಡು ಹೋಗುವುದರಲ್ಲಿ ಅದ್ಭುತಶಕ್ತಿ ಜೈನಶಾಸ್ತ್ರಕಾರರಿಗಿದೆ.

ಇಲ್ಲಿ ಒಂದು ಮಾತನ್ನು ಸಾಧಕ ಗಮನಿಸಬೇಕಾದುದು ಆವಶ್ಯಕ. ಸಾಧಕನು ಕೇವಲ ಕರ್ಮಗಳ ಪ್ರಧಾನಕ್ಕೆ ಒಳಗಾಗಿ ಕುಳಿತುಕೊಳ್ಳಬೇಕಾಗಿಲ್ಲ. ಅದರಿಂದ ಅವರ ವಿಕಾಸದ ಮಾರ್ಗ ಕುಂಠಿತವಾಗುತ್ತದೆಂದು ಎಚ್ಚರಿಸುತ್ತಾರೆ. ಸ್ವಾಮಿ ಸಮಂತಭದ್ರರ 'ಆಪ್ತಮೀಮಾಂಸೆ'ಯಲ್ಲಿ ಈ ಮಾತು ಬರುತ್ತದೆ:

ದೈವಾದೇವಾರ್ಥಸಿದ್ಧಿಶ್ಚೇದ್ವ್ಯರ್ಥಂ ಪೌರುಷಕಃ ಕಥಮ್ ।
ದೈವತಶ್ಚೇದಪಿವರ್ೊರ್ಕ್ಷಃ ಪೌರುಷಂ ನಿಷ್ಫಲಂ ಭವೇತ್ ॥
ಪೌರುಷಾದೇವ ಸಿದ್ಧಿಶ್ಚೇತ್ ಪೌರುಷಂ ದೈವತಃ ಕಥಮ್ ।
ಪೌರುಷಾಚ್ಚೇದಮೋಘಂ ಸ್ಯಾತ್ ಸರ್ವಪ್ರಾಣಿಷು ಪೌರುಷಮ್ ॥

ದೈವವೇ ಎಲ್ಲವನ್ನೂ ಮಾಡುವುದಾಗಿದ್ದರೆ ಜೀವರ ಪ್ರಯತ್ನದಿಂದ ದೈವದ ಉತ್ಪತ್ತಿ ಏಕಾಗುತ್ತಿತ್ತು? ಇಂದಿನ ನಮ್ಮ ಪುರುಷಾರ್ಥವೇ ನಮ್ಮ ನಾಳೆಯ ಜೀವನದ ದೈವವಾಗುವುದು. ಪೂರ್ವಕೃತ ಕರ್ಮವನ್ನುಳಿದು ದೈವವೆಂಬುದು ಬೇರೆಯಿಲ್ಲ. ಎಂದರೆ ಪುರುಷ ಪ್ರಯತ್ನ ಅತ್ಯಂತ ಆವಶ್ಯಕ. ಪುರುಷ ಪ್ರಯತ್ನಕ್ಕೆ ದೊರಕುವ ಫಲದ ಹಿಂದೆ ಕರ್ಮದ ಕೈವಾಡವಿದ್ದೇ ಇರುತ್ತದೆ. ಆದುದರಿಂದ ದೈವ ಪುರುಷಾರ್ಥಗಳೆರಡನ್ನೂ ನಂಬಬೇಕಾಗುತ್ತದೆ. ಇಂತಹವರಲ್ಲಿ ಎರಡು ಬಗೆ: ಮೊದಲನೆಯವರು ಮೋಕ್ಷಕ್ಕಾಗಿ ದೈವವನ್ನು ನಂಬುತ್ತಾರೆ; ಸಂಸಾರ ಸುಖಕ್ಕಾಗಿ ಪುರುಷಾರ್ಥವನ್ನು ಉಪಯೋಗಿಸಿಕೊಳ್ಳುತ್ತಾರೆ, ಜೀವನದ ಸೌಕರ್ಯಗಳನ್ನು ದೈವದ ಕಡೆಗೆ ಬಿಡುತ್ತಾರೆ. ಇವರನ್ನೇ ಮುಮುಕ್ಷುಗಳೆನ್ನಬಹುದು. ಕರ್ಮದ ಶಕ್ತಿಯನ್ನು ಕಡಮೆ ಮಾಡುತ್ತ ಸಾಗಿದ ಈ ಸಾಧಕರಿಗೆ ಸಂಸಾರಸುಖ ಸಾಧನಗಳು ತಾವಾಗಿಯೇ ಲಭಿಸುತ್ತವೆ. ಇವರ ಆತ್ಮ ವಿಕಾಸದ ಮಾರ್ಗ ಸರಳವೂ ಸುಲಭವೂ ಆಗಿ ಪರಿಣಮಿಸುತ್ತದೆ.

ಈ ತಾತ್ತ್ವಿಕ ದೃಷ್ಟಿಯಂತೆ ಜೈನಧರ್ಮಕ್ಕೆ ತಳಹದಿಯಾಗಿ ಅವರ ದರ್ಶನ ದೃಷ್ಟಿಯೊಂದುಂಟು. ಇದನ್ನು ಅನೇಕಾಂತವಾದ ಅಥವಾ ಸ್ಯಾದ್ವಾದ ಎಂದು ಕರೆಯುತ್ತಾರೆ. ಜೈನದರ್ಶನದ ತಾತ್ತ್ವಿಕ ವಿಚಾರ ಆಚಾರ ವ್ಯವಹಾರಗಳಿಗೆಲ್ಲಾ ಈ ಸ್ಯಾದ್ವಾದವೇ ಮೂಲ. ಇದು ಒಂದು ಪದಾರ್ಥವನ್ನು, ಅದನ್ನು ನೋಡಬಹುದಾದ ಎಲ್ಲ ದೃಷ್ಟಿಗಳಿಂದಲೂ ನಿರೀಕ್ಷಿಸಿ ಪರೀಕ್ಷಿಸಿ, ಸತ್ಯದ ಸಮಗ್ರಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನದ ಫಲ. ಯಾವುದೇ ಒಂದು ವಸ್ತುವನ್ನು ಒಂದು ದಿಕ್ಕಿನಿಂದ ನೋಡಿದರೆ ಪೂರ್ಣವಾಗಿ ಅದರ ಸ್ವರೂಪವನ್ನು ಕಂಡುಕೊಂಡಂತೆ ಆಗುವುದಿಲ್ಲ. ಉದಾಹರಣೆಗಾಗಿ, ಒಂದು ಮನೆಯನ್ನು ಒಂದೊಂದು ದಿಕ್ಕಿನಿಂದ ನೋಡಿದರೆ ಒಂದೊಂದು ಬಗೆಯಾಗಿ ಕಾಣುತ್ತದೆ. ಎಲ್ಲ ದಿಕ್ಕುಗಳಲ್ಲಿಯೂ ನಿಂತು ಪರೀಕ್ಷಿಸಿದಾಗ ಆ ಎಲ್ಲ ನೋಟಗಳಿಂದ ಒಂದು ಸಾರಭೂತವಾದ ದೃಷ್ಟಿ ರೂಪಿತವಾಗುತ್ತದೆ. ಅದೇ ಪೂರ್ಣಾವಲೋಕನದಿಂದ ಲಭಿಸುವ ಸತ್ಯ. ಈ ಪೂರ್ಣಾವಲೋಕನಕ್ಕೆ ಒಂದೊಂದು ದಿಕ್ಕಿನಲ್ಲಿಯೂ ನಿಂತು ನೋಡುವ ಅಂಶಾವಲೋಕನ ಅನಿವಾರ್ಯ. ಸ್ಯಾದ್ವಾದದ ಈ ಕ್ರಿಯೆಯನ್ನು ಇನ್ನೊಂದು ರೀತಿಯಲ್ಲಿಯೂ ಹೇಳಬಹುದು: ಮೊಸರನ್ನು ಕಡೆಯುವ ಕಾಲದಲ್ಲಿ ಕಡೆಗೋಲಿನ ಹಗ್ಗವನ್ನು ಒಂದು ಕೈಯಿಂದ ಜಗ್ಗಿ ಇನ್ನೊಂದು ಕೈಯಿಂದ ಅದನ್ನು ಸಡಿಲ ಬಿಡಬೇಕಾಗುತ್ತದೆ. ಕೈಲಿರುವ ಹಗ್ಗದ ಯಾವ ಕೊನೆಯನ್ನೂ ಕೆಳಗೆ ಬಿಡುವುದಿಲ್ಲ; ಆದರೆ ಒಮ್ಮೆ ಅದನ್ನು ಎಳೆಯಬೇಕಾಗುತ್ತದೆ, ಮತ್ತೆ ಸಡಿಲ ಬಿಡಬೇಕಾಗುತ್ತದೆ. ಅಂತೆಯೇ ಸ್ಯಾದ್ವಾದವೂ ಒಮ್ಮೊಮ್ಮೆ ಒಂದೊಂದು ದೃಷ್ಟಿಗೆ ಪ್ರಾಧಾನ್ಯವನ್ನು ಕೊಟ್ಟು ಉಳಿದ

ದೃಷ್ಟಿಗಳನ್ನು ಗೌಣವಾಗಿಡುತ್ತದೆ. ಇದರಿಂದ ತತ್ತ್ವಜ್ಞಾನವೆಂಬ ನವನೀತವನ್ನು ಅದು ಪಡೆಯುತ್ತದೆ.

ಒಂದು ವಸ್ತುವನ್ನು ನೋಡುವ ಸಪ್ತಭಂಗಿಗಳನ್ನು ಸ್ಯಾದ್ವಾದದಲ್ಲಿ ಕಾಣಬಹುದು. 'ಸ್ಯಾದಸ್ತಿ', ಒಂದು ದೃಷ್ಟಿಯಿಂದ ವಸ್ತು ಇದೆ. ಸ್ವರೂಪ, ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ ಈ ಚತುಷ್ಟಯಗಳಲ್ಲಿ ಯಾವುದಾದರೊಂದು ಸಂಬಂಧದಿಂದ ವಸ್ತು ಇದೆ ಎಂದು ನೋಡುವುದು. 'ಸ್ಯಾನ್ನಾಸ್ತಿ' ಎರಡನೆಯದು. ಯಾವ ವಸ್ತು ಸ್ವರೂಪಾದಿ ಚತುಷ್ಟಯಗಳ ದೃಷ್ಟಿಯಿಂದ ಇದೆಯೋ ಅದೇ ವಸ್ತು, ಪರಸ್ವರೂಪ ಪರದ್ರವ್ಯ ಪರಕ್ಷೇತ್ರ ಪರಕಾಲಗಳ ಅಪೇಕ್ಷೆಯಿಂದ ಇಲ್ಲ ಎನಿಸುತ್ತದೆ. 'ಸ್ಯಾದಸ್ತಿನಾಸ್ತಿ' ಎಂಬುದು ಮೂರನೆಯ ಭಂಗಿ. ಒಂದು ವಸ್ತುವು ಇಲ್ಲಿ ಸ್ವಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಇಲ್ಲ ಎನಿಸಿಕೊಳ್ಳುತ್ತದೆ. ಇದರ ಮುಂದಿನದು 'ಸ್ಯಾದವಕ್ತವ್ಯಂ.' ಒಂದು ವಸ್ತು ಒಂದು ಕಾಲದಲ್ಲಿ ಸ್ವರೂಪಾದಿ ಮತ್ತು ಪರರೂಪಾದಿ ಚತುಷ್ಟಯಾಪೇಕ್ಷೆಯಿಂದ ಅನಿರ್ವಚನೀಯವಾಗಿರುತ್ತದೆ. 'ಸ್ಯಾದಸ್ತ್ಯವಕ್ತವ್ಯಂ' (ಸ್ಯಾದಸ್ತಿ ಚ, ಅವಕ್ತವ್ಯಂ ಚ). ಎಂದರೆ ಒಂದು ವಸ್ತು ಇದೆ, ಆದರೆ ಅನಿರ್ವಚನೀಯವಾಗಿದೆ. 'ಸ್ಯಾನ್ನಾಸ್ತ್ಯವಕ್ತವ್ಯಂ' (ಸ್ಯಾನ್ನಾಸ್ತಿ ಚ ಅವಕ್ತವ್ಯಂ ಚ) ಎಂದರೆ ಒಂದು ವಸ್ತುವಿನ ಅಸ್ತಿತ್ವವೂ ಇಲ್ಲ ಮತ್ತು ಅದು ಅನಿರ್ವಚನೀಯವೂ ಆಗಿದೆ. ಕೊನೆಯದಾಗಿ 'ಸ್ಯಾದಸ್ತಿನಾಸ್ತ್ಯವಕ್ತವ್ಯಂ' (ಸ್ಯಾದಸ್ತಿ ನಾಸ್ತಿ ಚ ಅವಕ್ತವ್ಯಂಚ) ಅಂದರೆ ಒಂದು ವಸ್ತು, ಸ್ವಸ್ವರೂಪಾದಿಗಳಿಂದ ಇರುತ್ತದೆ; ಪರಸ್ವರೂಪಾದಿಗಳಿಂದ ಇರುವುದಿಲ್ಲ. ಅನಿರ್ವಚನೀಯವಾಗಿರುತ್ತದೆ. ಇವು ಸ್ಯಾದ್ವಾದದ ಏಳು 'ಭಂಗಿ'ಗಳು. ಇವುಗಳಲ್ಲಿ 'ಅಸ್ತಿ' 'ನಾಸ್ತಿ' 'ಅವಕ್ತವ್ಯ'—ಇವು ಮೂರು 'ಮೂಲಭಂಗಿ'ಗಳು. ಇವುಗಳಿಂದ ಉಳಿದ ನಾಲ್ಕು 'ಸಂಯುಕ್ತ ಭಂಗಿ'ಗಳು ಉಂಟಾಗುತ್ತವೆ. ಇವುಗಳನ್ನು ಅನಂತರ ಬಂದ ಜೈನ ಆಚಾರ್ಯರು ವಿಸ್ತರಿಸಿ ಸ್ಯಾದ್ವಾದದ ಮೇಲೆ ಅನೇಕ ಗ್ರಂಥಗಳನ್ನು ರಚಿಸಿರುವರು. ಸಮಂತಭದ್ರ, ಸಿದ್ಧಸೇನ, ಹರಿಭದ್ರ, ಅಕಲಂಕ, ಹೇಮಚಂದ್ರ—ಈ ಮೊದಲಾದ ಪಂಡಿತ ಪ್ರಕಾಂಡರಿಂದ ಈ ವಾದ ಸಮೃದ್ಧವಾಗಿ ಬೆಳೆದು ನಿಂತಿದೆ.

ಈ ಸ್ಯಾದ್ವಾದ ದೃಷ್ಟಿ ಜೀವನಕ್ಕೊಂದು ಪೂರ್ಣಸ್ವರೂಪವನ್ನು ತಂದುಕೊಟ್ಟಿತು. ಪ್ರವೃತ್ತಿನಿವೃತ್ತಿಗಳಲ್ಲಿ ಇಹಪರಗಳಲ್ಲಿ ಸಮನ್ವಯವನ್ನು ಸಾಧಿಸಲು ಶಕ್ತವಾಯಿತು. ಸಂನ್ಯಾಸಿಗಳಿಗೂ ಸಂಸಾರಿಗಳಿಗೂ ತಿಕ್ಕಾಟ ಬಂದಾಗ, ಪ್ರವೃತ್ತಿ ಶ್ರೇಷ್ಠವೋ ನಿವೃತ್ತಿ ಶ್ರೇಷ್ಠವೋ ಎಂಬ ಸಮಸ್ಯೆ ಬಂದಾಗ ಅದಕ್ಕೆ ಸ್ಯಾದ್ವಾದ ಹೇಳುವ ಸಮಾಧಾನ ಹೀಗಿದೆ: "ಪ್ರತಿಯೊಂದು ಕ್ಷೇತ್ರದಲ್ಲಿ ಯಾವಾಗ ಸೇವೆಯ ಪ್ರಸಂಗ ಬರುವುದೋ ಆಗ ಆತ್ಮಾರ್ಪಣೆಯ ಪ್ರವೃತ್ತಿಪರ ಆದೇಶವನ್ನು ಕೊಡುವುದರಿಂದ ಜೈನಧರ್ಮ ಪ್ರವೃತ್ತಿಗಾಮಿಯಾಗಿದೆ. ಮತ್ತು ಎಲ್ಲಿ ಭೋಗವೃತ್ತಿಯ ಪ್ರಸಂಗ ಬರುವುದೋ ಅಲ್ಲಿ ನಿವೃತ್ತಿಯನ್ನು ಬೋಧಿಸುವುದರಿಂದ ನಿವೃತ್ತಿಗಾಮಿಯೂ ಆಗಿದೆ". ಹೀಗೆ ಎಲ್ಲ ತೊಡಕುಗಳನ್ನೂ ಬಿಡಿಸಿ ಆಯಾ ಸನ್ನಿವೇಶಕ್ಕೆ ಆವಶ್ಯಕವಾದ ಜೀವನ ದೃಷ್ಟಿಯನ್ನಿತ್ತು ಮುನ್ನಡಸ

ಬಲ್ಲುದು ಸಾಧಕನನ್ನು. ಎಲ್ಲ ವಿಷಯಗಳ ವಿವೇಚನೆಯ ಮೇಲೂ ಬೆಳಕನ್ನು ಬೀರುವಷ್ಟು ವ್ಯಾಪಕವಾಗಿದೆ ಅದು. ವಿಶ್ವಕಲ್ಯಾಣಕ್ಕಾಗಿ ಮಹಾವೀರ ಮಾನವ ಜನಾಂಗಕ್ಕೆ ಕೊಟ್ಟ ಒಂದು ದಿವ್ಯದೃಷ್ಟಿ ಎನ್ನಬಹುದು ಸ್ಯಾದ್ವಾದವನ್ನು.

ತಾತ್ತ್ವಿಕ ಹಿನ್ನೆಲೆ ಮತ್ತು ದರ್ಶನಗಳಂತೆಯೇ ಸಾಧಕನ ಆಚರಣೆಯ ಮಾರ್ಗದಲ್ಲಿಯೂ ಜೈನಧರ್ಮ ಉದಾತ್ತತತ್ತ್ವಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ—ಇವು ಗೃಹಸ್ಥನ ಸಾಧನೆಯ ಮಾರ್ಗದಲ್ಲಿ ಪಂಚ ಅಣುವ್ರತಗಳಾಗಿದ್ದಂತೆ, ಜೈನಸಂನ್ಯಾಸಿಯ ಮಾರ್ಗದಲ್ಲಿ ಪಂಚ ಮಹಾವ್ರತಗಳಾಗಿ ಪರಿಣಮಿಸುತ್ತವೆ. ಜೈನಯತಿಗಳು ಹಸಿವು ತೃಷೆ ಶೀತ ಉಷ್ಣ ಇತ್ಯಾದಿ ಪರೀಷಹಗಳನ್ನು ಗೆಲ್ಲಬೇಕಲ್ಲದೆ ಗೃಹಸ್ಥನಿಗಿಂತ ಹೆಚ್ಚಾಗಿ ಅತಿ ಕಟ್ಟುನಿಟ್ಟಾದ ರೀತಿಯಲ್ಲಿ ಪಂಚಮಹಾವ್ರತಗಳನ್ನು ಆಚರಿಸಬೇಕು. ಅಹಿಂಸೆಯನ್ನು ಆಚರಿಸಬೇಕಾದ ಕೆಲವು ವಿಧಿಗಳಂತೂ ಅತ್ಯಸಾಧಾರಣವಾಗಿ ಅತಿಯಾಯಿತೇನೋ ಎನ್ನುವಷ್ಟರಮಟ್ಟಿಗೆ ಬೆಳೆದು ನಿಂತಿವೆ. ಈ ವ್ರತಗಳನ್ನು ಚಾಚೂ ತಪ್ಪದೆ ಆಚರಿಸುವುದಕ್ಕಾಗಿ ಸನ್ಯಾಸಿಗಳು ಕೆಲವು 'ಸಮಿತಿ'ಗಳನ್ನು ಎಂದರೆ ಎಚ್ಚರಿಕೆಗಳನ್ನು ವಹಿಸಬೇಕಾಗುತ್ತದೆ. 'ಈರ್ಯಾ ಸಮಿತಿ' : ಒಂದು ಪ್ರಾಣಿಯನ್ನೂ ಕೊಲ್ಲದಂತೆ ಎಚ್ಚರಿಕೆ ವಹಿಸಿ ಹಗಲು ಹೊತ್ತಿನಲ್ಲಿ ಮಾತ್ರ ನಡೆಯುವುದು. 'ಭಾಷಾ ಸಮಿತಿ' : ಸ್ತ್ರೀಯರನ್ನು ಕುರಿತು ಅಥವಾ ಇತರರ ಹೊಗಳಿಕೆ ತೆಗಳಿಕೆಗಳನ್ನು ಕುರಿತು ಹಾಡುಹರಟೆಯಲ್ಲಿ ತೊಡಗದಿರುವುದು. 'ಏಷಣಾ ಸಮಿತಿ' : ಸಿಕ್ಕಷ್ಟು ಆಹಾರದಿಂದ ತೃಪ್ತನಾಗುವುದು, ಮತ್ತು ಅಶುದ್ಧವಾದ ಆಹಾರವನ್ನು ಸೇವಿಸದಿರುವುದು. 'ಆದಾನ ನಿಕ್ಷೇಪಣ ಸಮಿತಿ' : ತನ್ನ ವಸ್ತುಗಳನ್ನು ಇಡುವುದು ತೆಗೆದುಕೊಳ್ಳುವುದರಲ್ಲಿ ಎಚ್ಚರಿಕೆ. 'ಉತ್ಸರ್ಗ ಸಮಿತಿ': ದೈಹಿಕ ವ್ಯಾಪಾರಗಳಲ್ಲಿ ಎಚ್ಚರಿಕೆ ವಹಿಸುವುದು. ಹೀಗೆ ಈ ಪಂಚ ಸಮಿತಿಗಳನ್ನು ಹೇಳಲಾಗಿದೆ.

ಜೈನಧರ್ಮದ ಆಚರಣೆಯ ಮಾರ್ಗದಲ್ಲಿ ಕಾಣುವ ಇನ್ನೊಂದು ಗಮನಾರ್ಹವಾದ ಅಂಶವೆಂದರೆ ಹದಿನಾಲ್ಕು ಗುಣಸ್ಥಾನಗಳು. ಆಧ್ಯಾತ್ಮಿಕ ಯಾತ್ರೆಯಲ್ಲಿ ಜೀವ ವಿಕಾಸಗೊಳ್ಳುವ ವಿವಿಧ ಹಂತಗಳನ್ನು ಇವು ಸೂಚಿಸುತ್ತವೆ. ಅವುಗಳ ವಿಭಾಗ ಮತ್ತು ವಿವೇಚನೆಯ ಕ್ರಮಗಳು ವಿವರವಾಗಿ ಜೈನಶಾಸ್ತ್ರಗಳಲ್ಲಿ ಬರುತ್ತವೆ. ಇವುಗಳಲ್ಲಿ ಕೊನೆಯ ಸ್ಥಾನ ಆತ್ಮವನ್ನು ಅತ್ಯಂತ ಶುದ್ಧರೂಪಕ್ಕೆ ತಂದು ನಿಲ್ಲಿಸುವುದು. ಕರ್ಮಪುದ್ಗಲಗಳನ್ನು ಸಂಪೂರ್ಣವಾಗಿ ಹೊರಗೆ ಹಾಕುವುದರಿಂದ ಉಂಟಾದ ಮುಕ್ತಸ್ಥಿತಿ ಅದು. ಅನೇಕ ಜನ್ಮಗಳನ್ನೆತ್ತಿ ನಾರಕ ತಿರ್ಯಕ ಮಾನುಷ ದೇವಲೋಕಗಳಲ್ಲಿ ಹುಟ್ಟಿ, ಈ ಭವಾವಳಿಗಳಿಂದ ತನ್ನ ಕರ್ಮವನ್ನು ಆತ್ಮ ಕಳೆದುಕೊಳ್ಳುತ್ತದೆ.

ಒಟ್ಟಿನಲ್ಲಿ ಜೈನಧರ್ಮ ಸಾರಿದ ಚಿರಂತನ ಸಂದೇಶವನ್ನು ಹೀಗೆ ಹೇಳಬಹುದು: ಈ ಜಗತ್ತಿನ ಜೀವಿಗಳ ಮಹತ್ತರವಾದ ಉದ್ದೇಶ ಕರ್ಮಬಂಧನವನ್ನು ಪರಿಹರಿಸಿಕೊಳ್ಳುವುದು. ಜಾತಿಮತಗಳ ಯಾವ ತಾರತಮ್ಯಗಳೂ ಇಲ್ಲದೆ, ಎಲ್ಲ ಮಾನವ ಜೀವಿಗಳೂ ಆ ಮಾರ್ಗವನ್ನು ಕೈಕೊಳ್ಳುವುದು ಅಗತ್ಯ. ಆಧ್ಯಾತ್ಮ ಮಾರ್ಗಕ್ಕೆ ಮೇಲುಕೀಳುಗಳಿಲ್ಲ

ವೆಂದು ಜೈನಧರ್ಮ ಸಾರಿತು. ಮಾನವ ಜನ್ಮದ ಮಹತ್ತ್ವವನ್ನು ಮನಗಾಣಿಸಿಕೊಟ್ಟಿತು. ದೇವತೆಗಳಿಗೂ ಇಲ್ಲದ ಅಪೂರ್ವ ಅವಕಾಶ ಮಾನವನಿಗೆ ಮಾತ್ರ ಇವೆ. ದೇವ ಲೋಕದಲ್ಲಿ ಹುಟ್ಟಿದ ಜೀವ ಮೋಕ್ಷ ಪಡೆಯಬೇಕಾದರೆ ಮತ್ತೆ ಭೂಲೋಕಕ್ಕೆ ಬರಲೇಬೇಕು; ಮಾನವಲೋಕದಿಂದ ಮಾತ್ರ ಸಿದ್ಧಶಿಲೆಗೆ ಹೋಗುವುದು ಸಾಧ್ಯ— ಎಂಬ ಕಲ್ಪನೆಯಲ್ಲಿ ಮಾನವ ಜನ್ಮದ ಹಿರಿಮೆಯನ್ನು ಎತ್ತಿ ಹಿಡಿದಿರುವುದು ಕಾಣುತ್ತದೆ. 'ಅಮೃತಸ್ಯ ಪುತ್ರಾಃ' ಎಂದು ಉಪನಿಷತ್ತುಗಳು ಆಗಲೇ ಘೋಷಿಸಿದ್ದ ಮಾನವತ್ವದ ಮೌಲ್ಯವನ್ನು ಇದು ಮತ್ತೆ ಆಚರಿಸಿ ತೋರಿಸಿತು. ಆತ್ಮನೇ ಅರುಹಂತ ಸ್ಥಿತಿಯನ್ನು ಪಡೆದು ಜಿನಸ್ವರೂಪನಾಗುತ್ತಾನೆಂಬ ಇವರ ನಂಬಿಕೆಯಲ್ಲಿ "ತತ್ ತ್ವಂ ಅಸಿ" ಎಂಬ ಉಪನಿಷತ್ತಿನ ದರ್ಶನ ಅಳವಟ್ಟಿರುವುದು ಕಾಣುತ್ತದೆ. ಆದರೆ ಅದು ತನ್ನದೇ ಆದ ಒಂದು ಸ್ವತಂತ್ರ ಮಾರ್ಗದಲ್ಲಿ ನಡೆದು ವಿಶಿಷ್ಟ ಧರ್ಮವನ್ನು ರೂಪಿಸಿತು. ಭರತಖಂಡದ ಸಾಂಸ್ಕೃತಿಕ ಜೀವನದಲ್ಲಿ ಬಹು ದೊಡ್ಡ ಶಕ್ತಿಯಾಗಿ ಪರಿಣಮಿಸಿತು. ಬಹು ಪ್ರಾಚೀನ ಕಾಲದಲ್ಲಿಯೇ ಕರ್ನಾಟಕಕ್ಕೆ ಕಾಲಿಟ್ಟು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಉಗಮಕ್ಕೆ ಮತ್ತು ಬೆಳವಣಿಗೆಗೆ ಪ್ರಚೋದಕ ಪುಣ್ಯ ಶಕ್ತಿಯಾಗಿ ಪರಿಣಮಿಸಿತು ಜೈನಧರ್ಮ.

ಜೈನಧರ್ಮಕ್ಕಿಂತ ಕೆಲವು ಅಂಶಗಳಲ್ಲಿ ಹೆಚ್ಚಿನ ಪ್ರಭಾವವನ್ನು ಬೀರಲು ಶಕ್ತವಾಯಿತು ಬೌದ್ಧಧರ್ಮ. ಮಹಾವೀರನು ಸ್ವಲ್ಪ ಹೆಚ್ಚು ಕಡಮೆ ಬುದ್ಧನ ಕಾಲದಲ್ಲಿಯೇ ಇದ್ದವನು. ಇವರು ಬೋಧಿಸಿದ ಧರ್ಮದಲ್ಲಿನ ಕೆಲವು ಅಂಶಗಳು ಇಬ್ಬರಿಗೂ ಸಮಾನವಾಗಿದ್ದುವು. ಇಬ್ಬರೂ ವೇದದ ಪರಮ ಪ್ರಾಮಾಣ್ಯವನ್ನು ಪ್ರತಿಭಟಿಸಿದರು. ಯಜ್ಞ ಯಾಗಾದಿಗಳನ್ನು ಖಂಡಿಸಿದರು. ಚತುರ್ವರ್ಣಗಳನ್ನು ತಳ್ಳಿಹಾಕಿದರು. ಸರ್ವರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟರು. ನೈತಿಕ ಜೀವನಕ್ಕೆ ಹೆಚ್ಚು ಗಮನಕೊಟ್ಟರು. ಬುದ್ಧನ ಉಪದೇಶಗಳು ಎಲ್ಲ ಮನೋಧರ್ಮದವರಿಗೂ ಹಿಡಿಸುವಂತೆ ವೈಚಾರಿಕ ವಿಮರ್ಶೆಯಿಂದಲೂ ವ್ಯಾವಹಾರಿಕ ದೃಷ್ಟಿಯಿಂದಲೂ ಕೂಡಿದ್ದುವು. ಅಲ್ಲದೆ ಸಂಘ ವ್ಯವಸ್ಥೆಯ ಶಕ್ತಿ ಆತನಲ್ಲಿ ಅದ್ಭುತವಾಗಿತ್ತು. ಅದು ಆತನ ಧರ್ಮಪ್ರಸರಣಕಾರ್ಯಕ್ಕೆ ಸಹಕಾರಿಯಾಯಿತು.

ಮಹಾವೀರನಂತೆಯೇ ಬುದ್ಧನು ರಾಜನ ಮಗನಾಗಿಯೇ ಹುಟ್ಟಿದನು. ಶಾಕ್ಯವಂಶದ ಶುದ್ಧೋದನ ಮಾಯಾದೇವಿಯರು ಈತನ ತಂದೆತಾಯಿಗಳು. ಕಪಿಲವಸ್ತುವಿನ ಲುಂಬಿನೀ ವನದಲ್ಲಿ ಸುಮಾರು ಕ್ರಿ.ಪೂ. ೫೬೩ರಲ್ಲಿ ಸಿದ್ಧಾರ್ಥ ಹುಟ್ಟಿದನು (ಇನ್ನು ಕೆಲವರ ಮತದಂತೆ ಕ್ರಿ.ಪೂ. ೫೬೬). ಮುಂದೆ ಆತ ಸಂನ್ಯಾಸಿಯಾಗಬಹುದೆಂಬ ಜ್ಯೋತಿಷ್ಕರ ಹೇಳಿಕೆಯಿಂದ ಭೀತನಾದ ತಂದೆ ಪ್ರಪಂಚದ ಸಮಸ್ಯೆಗಳು ದುಃಖಗಳು ಕಷ್ಟಕಾರ್ಪಣ್ಯಗಳೊಂದೂ ಅವನ ಕಣ್ಣಿಗೆ ಬೀಳದಂತೆ ಅರಮನೆಯ ರಾಜಭೋಗದ ಮಧ್ಯದಲ್ಲಿ ಬೆಳಸಿದನು. ಆದರೆ ವಿಧಿಯ ಸಂಕಲ್ಪ ಬೇರೆಯಾಗಿತ್ತು. ಭೋಗದ ಮಧ್ಯದಲ್ಲಿ ಯೋಗ ಯಾರೂ ಅರಿಯದಂತೆ ಅರಳುತ್ತಿತ್ತು. ಒಂದು ದಿನ ಅದು ವ್ಯಕ್ತವಾಗುವ ಸಮಯ ಸನ್ನಿಹಿತವಾಯಿತು. ಮುದುಕನನ್ನೂ ರೋಗಿಯನ್ನೂ ಹೆಣವನ್ನೂ ಕಂಡುದೇ ಕಾರಣ

ವಾಗಿ ಅವನ ಸುಪ್ತಶಕ್ತಿ ಜಾಗ್ರತವಾಯಿತು. ಲೌಕಿಕ ಬಂಧನವನ್ನು ಕಿತ್ತೊಗೆದು ಅವೊಂದು ಮಹಾರಾತ್ರಿಯಲ್ಲಿ ಹುಟ್ಟಿ ಬೆಳೆದ ಅರಮನೆಯನ್ನೂ ತಂದೆಯನ್ನೂ ಪತ್ನಿಯನ್ನೂ ಮತ್ತು ಅಂದೇ ಹುಟ್ಟಿದ ಮಗನನ್ನೂ ತೊರೆದು ತೀವ್ರ ವೈರಾಗ್ಯಪರನಾಗಿ ಹೊರಟುಹೋದನು.

ದುಃಖಮಯವಾದ ಈ ಜಗತ್ತಿನ ಹಿಂದಿರುವ ರಹಸ್ಯವನ್ನು ಕಂಡುಕೊಳ್ಳುವುದೇ ಆತನ ಮಹೋದ್ದೇಶವಾಗಿತ್ತು. ಜನನ ಮರಣವೆಂದರೇನು? ಜೀವನದ ಉದ್ದೇಶವೇನು? ಇದರ ಪರಿಣಾಮ ಹೇಗೆ? ಕಗ್ಗತ್ತಲಿನ ಈ ಜೀವನದಲ್ಲಿ ಬೆಳಕನ್ನು ಕಂಡುಕೊಳ್ಳುವ ಮಾರ್ಗವಾವುದು?—ಈ ಮೊದಲಾದ ಪ್ರಶ್ನೆಗಳು ಆತನ ತಲೆಯನ್ನು ತಿನ್ನುತ್ತಿದ್ದುವು. ಈ ಆಧ್ಯಾತ್ಮಿಕ ಅಭೀಪ್ಸೆಯಿಂದ ತೃಷಿತನಾಗಿ ಕೆಲವು ವರ್ಷಗಳ ಕಾಲ ಅನೇಕ ಕಡೆಗಳಲ್ಲಿ ತೊಳಲಾಡಿದನು. ಅನೇಕರನ್ನು ಆಶ್ರಯಿಸಿದನು. ದೇಹವನ್ನು ದಂಡಿಸಿ ಧ್ಯಾನದಲ್ಲಿ ಮಗ್ನನಾದನು. ಒಮ್ಮೆಯಂತೂ ದೇಹದ ಸ್ವಾಧೀನವೇ ತಪ್ಪಿ ಬಿದ್ದುಹೋಗುವಷ್ಟು ಉಗ್ರವಾದ ತಪಸ್ಸನ್ನು ಕೈಕೊಂಡನು. ಆದರೂ ಹೃದಯ ಹಂಬಲಿಸುತ್ತಿದ್ದ ಬೆಳಕು ಗೋಚರವಾಗಲಿಲ್ಲ. ಕೇವಲ ದೇಹದಂಡನೆ ವ್ಯರ್ಥವೆಂಬುದನ್ನಾತ ಕಂಡುಕೊಂಡನು. ಆದರೆ ಈ ಸತತ ಸಾಧನೆಯಿಂದ ಅವನ ಲೋಕಾನುಭವ ಶ್ರೀಮಂತವಾಗಿತ್ತು. ಅನೇಕ ಸಾಧಕರನ್ನು ಕಂಡು ಅವರೊಡನಾಡಿದ್ದನು. ಅವೆಲ್ಲದರ ಫಲವಾಗಿ ಮುಂದಿನ ಮಾರ್ಗ ಆತನಿಗೆ ಅಸ್ಪಷ್ಟವಾಗಿ ಗೋಚರವಾಗುತ್ತಿತ್ತು. ಅವನ ಸಾಧನೆ ಈಗ ದೇಹದಂಡನೆಯನ್ನು ದಾಟಿ ಹೆಚ್ಚು ಅಂತರ್ಮುಖವಾಗತೊಡಗಿತ್ತು.

ಅವನು ಅನೇಕ ವರ್ಷಗಳಿಂದ ಹಂಬಲಿಸಿದ ಪುಣ್ಯಮುಹೂರ್ತ ಕೈಗೂಡುವ ಗಳಿಗೆ ಸಮೀಪಿಸಿತು. ಕ್ರಿ.ಪೂ ೫೪೪ರಲ್ಲಿ ವೈಶಾಖ ಶುದ್ಧ ಪೂರ್ಣಿಮೆಯ ದಿನ ಬೋಧಿವೃಕ್ಷದ ಬುಡದಲ್ಲಿ ಧ್ಯಾನಲೀನನಾಗಿದ್ದ ಸಿದ್ಧಾರ್ಥನ ಮೇಲೆ ಬೆಳಕಿನ ಮಳೆಗರೆಯಿತು. ಅವನ ಅಂತರಂಗದಲ್ಲಿಯೂ ಬೆಳಕಿನ ಬುಗ್ಗೆ ಚಿಮ್ಮಿತು. ಸಿದ್ಧಾರ್ಥ ಬುದ್ಧನಾಗಿ ಪರಿಣಮಿಸಿದ.

ತಾನು ಕಂಡ ಅನಂತವಾದ ಬೆಳಕಿನಲ್ಲಿ ಬುದ್ಧ ಲೀನನಾಗಿ ಆನಂದಸಾಗರದಲ್ಲಿ ಉಪ್ಪಿನ ಬೊಂಬೆಯಂತೆ ಕರಗಿಹೋಗಬಹುದಾಗಿತ್ತು. ಆದರೆ ಬುದ್ಧ ಕೇವಲ ತನ್ನ ಮುಕ್ತಿಯಿಂದ ತೃಪ್ತನಾಗುವಂತಿರಲಿಲ್ಲ. ಸಮುದ್ರದ ಆಳ ಅಗಲಗಳನ್ನು ಕಂಡ ಚೇತನ ಅಲ್ಲಿಂದ ಗರಿಗೆದರಿ ಹಾರಿ ಹೊರಜಗತ್ತಿಗೂ ಅದರ ಪರಿಚಯವನ್ನು ಮಾಡಿಕೊಡುವ ವೈನತೇಯವಾಗಿ ಪರಿಣಮಿಸಿತು. ತಾನು ಬೆಳಕನ್ನು ಕಂಡ ಮಾರ್ಗವನ್ನು ಜಗತ್ತಿಗೆ ಬೋಧಿಸಬೇಕೆಂದು ಬುದ್ಧ ನಿರ್ಧಾರವನ್ನು ಕೈಕೊಂಡ ಆದಿನ ಚಿರಸ್ಮರಣೀಯವಾದ ದಿನ. ಸಾರನಾಥನಲ್ಲಿ ತನ್ನ ಮೊತ್ತಮೊದಲನೆಯ ಸಂದೇಶವನ್ನು ಆತ ಬೀರಿದನು. ಕೆಲವು ಜನ ಶಿಷ್ಯರನ್ನು ಪಡೆದನು. ಅಲ್ಲಿಂದ ಮುಂದೆ ಸುಮಾರು ನಲವತ್ತು ವರ್ಷಗಳಿಗಿಂತಲೂ ಹೆಚ್ಚುಕಾಲ ಧರ್ಮಚಕ್ರ ಪ್ರವರ್ತಕನಾಗಿ ತನ್ನ ಸಂದೇಶವನ್ನು ಭರತಖಂಡದಲ್ಲಿ ಮಾತ್ರವಲ್ಲದೆ ಹೊರದೇಶಗಳಿಗೂ ಮುಟ್ಟಿಸಿದನು. ಅವನ ಕಾಲದಲ್ಲಿಯೂ

ಅನಂತರವೂ ಬೌದ್ಧಧರ್ಮ ಬೆಳೆದು ಜಗತ್ತಿನ ಅತಿ ದೊಡ್ಡ ಧರ್ಮಗಳಲ್ಲಿ ಒಂದಾಗಿ ಪರಿಣಮಿಸುವಂತಾಯಿತು.

ಅಂದಿನ ದುಃಖತಪ್ತ ಜನತೆಗೆ ಆತನ ಸರಳವಾದ ಸಂದೇಶವಾಣಿ ಸಂಜೀವನಿಯಾಗಿ ಬಂದಿತು. ಆತನ ಉಪದೇಶದಲ್ಲಿದ್ದುದು ಎಟುಕಿಸಲಾಗದ ಆದರ್ಶವಾಗಲಿ, ಪುಸ್ತಕದ ಪಾಂಡಿತ್ಯವಾಗಲಿ ಅಲ್ಲ. ಆತನ ಒಂದೊಂದು ಮಾತೂ ಅನುಭವದಿಂದ ಶ್ರೀಮಂತವಾಗಿ, ಅನುಕಂಪೆಯಿಂದ ಆರ್ದ್ರವಾಗಿತ್ತು: ಹೃದಯವನ್ನು ನೇರವಾಗಿ ನಾಟುವಂತಿತ್ತು. ಮುಖ್ಯವಾಗಿ ಆತ ಹೇಳಿದುದು, ಆಧ್ಯಾತ್ಮಿಕ ಪ್ರಗತಿಯಿಂದ ಆನಂದವನ್ನು ಪಡೆಯುವಂತಹ ನೇರವಾದ ಆಚರಣೆ, ಪರಿಶುದ್ಧವಾದ ಜೀವನ, ಉದಾತ್ತವಾದ ಆಲೋಚನೆಗಳು. ವೈಚಾರಿಕವಾದ ಹಿನ್ನೆಲೆಯಲ್ಲಿ ನಿರೂಪಿತವಾದ ಆತನ ಮಾರ್ಗವು ಅಂದು ಸಮಾಜದಲ್ಲಿ ಪ್ರಚಲಿತವಾಗಿದ್ದ ಅರ್ಥಹೀನ ಕರ್ಮಗಳನ್ನು ತಿರಸ್ಕರಿಸಿತು. ಅಂತರಂಗದ ಪರಿಶುದ್ಧಿಯೇ ಧಾರ್ಮಿಕ ಸಾಧನೆಯ ಫಲ. ಅದೇ ಆನಂದದ ಮೂಲ. ಅದನ್ನು ಕೈಗೂಡಿಸಿಕೊಡಲಾರದ ಕರ್ಮಗಳೆಲ್ಲಾ ವ್ಯರ್ಥ—ಎಂದು ಸಾರಿದನು ಬುದ್ಧ.

ಬುದ್ಧನು ಸಾರನಾಥದಲ್ಲಿ ಮೊತ್ತಮೊದಲು ಮಾಡಿದ ಉಪದೇಶದಲ್ಲಿ ಆತನ ಧರ್ಮದ ಸಾರವೆಲ್ಲಾ ಅಡಗಿದೆ ಎನ್ನಬಹುದು. ನಾಲ್ಕು ಮಹಾಸತ್ಯಗಳನ್ನು ಬುದ್ಧ ಅಲ್ಲಿ ಘೋಷಿಸಿದನು: ಜಗತ್ತು ದುಃಖದಿಂದ ಕೂಡಿದೆ. ತೃಷ್ಣೆಯೇ ಆ ದುಃಖಕ್ಕೆ ಕಾರಣ. ಆಸೆಯನ್ನು ಅಳಿಯುವುದರಿಂದ ತೃಷ್ಣೆಯನ್ನು ಕಳೆದುಕೊಳ್ಳಬಹುದು. ಕಾರಣ ನಾಶವಾದರೆ ಅದರ ಕಾರ್ಯವಾದ ದುಃಖವೂ ನಾಶವಾಗುತ್ತದೆ. ಜಗತ್ತನ್ನೆಲ್ಲಾ ವ್ಯಾಪಿಸಿರುವ ದುಃಖದ ಹಿಂದೆ ಬುದ್ಧನು ಕಾರ್ಯಕಾರಣಸಂಬಂಧವನ್ನು ಕಂಡುಕೊಂಡನು. ಬುದ್ಧನು ಪ್ರಧಾನವಾಗಿ ವಿಚಾರವಾದಿಯೆಂಬುದಕ್ಕೆ ಆತನ ಈ ಆಲೋಚನೆಯ ಸರಣಿ ಸಾಕ್ಷಿಯಾಗಿದೆ.

His was one of the giant intellects of human history, exibitting a keenness of analytic understanding that has rarely been equalled.[34]

ಎಂಬ ಮಾತು ಬಹುಮಟ್ಟಿಗೆ ಸತ್ಯವಾದುದು. ಸತ್ಯದ ಸಮಗ್ರವಾದ ಸ್ವರೂಪವನ್ನು ಕಾಣುವ ಆತನ ವಿಭಜನಾತ್ಮಕ ದೃಷ್ಟಿ ಮೆಚ್ಚತಕ್ಕದ್ದು. ಅದಕ್ಕಿಂತ ಹೆಚ್ಚಾಗಿ ಆತನ ಅಪಾರವಾದ ಲೋಕಾನುಕಂಪೆ ಆತನ ವ್ಯಕ್ತಿತ್ವಕ್ಕೆ ದಿವ್ಯಶಕ್ತಿಯನ್ನು ತಂದುಕೊಟ್ಟಿತು. ತನ್ನ ಸಂದೇಶ ಎಲ್ಲ ಜನರಿಗೂ ಮುಟ್ಟಬೇಕೆಂಬುದು ಆತನ ಕಳಕಳಿಯಾಗಿತ್ತು. ಅದಕ್ಕಾಗಿಯೇ ಆತ ಜನರ ಭಾಷೆಯಾದ ಪಾಳಿ ಪ್ರಾಕೃತವನ್ನೇ ತನ್ನ ಸಂದೇಶವಾಹಕವನ್ನಾಗಿ ಬಳಸಿಕೊಂಡನು. ಒಂದು ಕಡೆಯಲ್ಲಿ ವೈಚಾರಿಕ ಪ್ರಖರತೆ, ಇನ್ನೊಂದು ಕಡೆಯಲ್ಲಿ ಲೋಕಾನುಕಂಪೆಯ ಹೊನಲು—ಇವುಗಳ ತಳಹದಿಯ ಮೇಲೆ ರೂಪಿತವಾದ ಆತನ ಧರ್ಮ ಎಲ್ಲ ಮನೋಧರ್ಮದ ಸಾಧಕರನ್ನೂ ಬಳಿಗೆ ಆಕರ್ಷಿಸಲು ಸಮರ್ಥವಾಯಿತು. ಶಿಷ್ಯರ ಸಂಖ್ಯೆ ಬೆಳೆಯಿತು. ಧರ್ಮದ ಪ್ರಭಾವ ಪ್ರಸರಿಸಿತು.

ತನ್ನ ಮಹಾಪರಿನಿರ್ವಾಣದ ಸಂದರ್ಭದಲ್ಲಿ ಬುದ್ಧ ತನ್ನ ಶಿಷ್ಯನಾದ ಆನಂದನಿಗೆ ಹೇಳಿದ ಮಾತು ಇದು : "ಆತ್ಮದೀಪರಾಗಿ, ಆತ್ಮಶರಣರಾಗಿ, ಅನನ್ಯಶರಣರಾಗಿ ವಿಹರಿಸಿರಿ ಆನಂದ. ಧರ್ಮದೀಪರಾಗಿ, ಧರ್ಮಶರಣರಾಗಿ, ಅನನ್ಯಶರಣರಾಗಿ ವಿಹರಿಸಿರಿ ಆನಂದ. ಯಾರು ಆತ್ಮದೀಪರಾಗಿ, ಆತ್ಮಶರಣರಾಗಿ, ಅನನ್ಯಶರಣರಾಗಿ, ಹಾಗೂ ಧರ್ಮದೀಪರಾಗಿ, ಧರ್ಮಶರಣರಾಗಿ, ಅನನ್ಯಶರಣರಾಗಿ, ವಿಹರಿಸುವರೋ ಆ ಶಿಕ್ಷಾಕಾಮರು ನನ್ನ ಭಿಕ್ಷುಗಳಲ್ಲಿ ಅತ್ಯಗ್ರರಾಗುವರು." ಹೀಗೆ ಹೇಳಿ ತಾನು ಬೋಧಿಸಿದ ಈ ಧರ್ಮಮಾರ್ಗಕ್ಕೆ ತನ್ನ ಉಪದೇಶವಾಣಿಗಳೇ ಆಧಾರಭೂತವಾಗಿ ನಿಲ್ಲುವುದಾಗಿ ನಿರೂಪಿಸಿದನು.

ಬುದ್ಧನ ನಿರ್ವಾಣಾನಂತರ ಆತನ ಉಪದೇಶಗಳನ್ನೆಲ್ಲಾ ಸಂಗ್ರಹಿಸಿಕೊಡುವುದಕ್ಕಾಗಿ ಕ್ರಿ.ಪೂ. ೪೮೩ರಲ್ಲಿ ರಾಜಗೃಹದ ಬಳಿ ಸತ್ತಪಣ್ಣಿಗುಹೆಯಲ್ಲಿ ಬೌದ್ಧರ ಸಭೆ ಸೇರಿತು. ಎಲ್ಲ ಬೌದ್ಧಸಂಘಗಳನ್ನೂ ಪ್ರತಿನಿಧಿಸಿದ್ದ ಐದುನೂರು ಭಿಕ್ಷುಗಳು ಅಲ್ಲಿ ಸೇರಿದ್ದರು. ಬುದ್ಧನ ಉಪದೇಶವಾಣಿಯನ್ನು ಒಂದೆಡೆ ಒಟ್ಟುಗೂಡಿಸಿ 'ವಿನಯಪಿಟಕ', 'ಧರ್ಮಪಿಟಕ' ಎಂದು ಎರಡು ಭಾಗವಾಗಿ ವಿಭಾಗಿಸಿದರು. ಅದಾದ ನೂರು ವರ್ಷಗಳ ನಂತರ ಕ್ರಿ.ಪೂ. ೩೮೩ರಲ್ಲಿ ವೈಶಾಲಿಯಲ್ಲಿ ಒಂದು ಸಭೆಯೂ ಮತ್ತೆ ಅಶೋಕನ ಕಾಲದಲ್ಲಿ ಪಾಟಲಿಪುತ್ರದಲ್ಲಿ ಮೂರನೆಯ ಸಭೆಯೂ ಸೇರಿ ಇವುಗಳನ್ನು ಇನ್ನೂ ಹೆಚ್ಚು ವ್ಯವಸ್ಥೆಗೊಳಿಸಲಾಯಿತು. ಮೇಲಿನ ಎರಡು ಪಿಟಕಗಳ ಜೊತೆಗೆ 'ಅಭಿಧಮ್ಮ ಪಿಟಕ'ವೂ ಸೇರಿತು. 'ಸುತ್ತ ಪಿಟಕ', 'ವಿನಯ ಪಿಟಕ', 'ಅಭಿಧಮ್ಮ ಪಿಟಕ'—ಎಂಬಿವು ತ್ರಿಪಿಟಕಗಳೆಂದು ಪ್ರಸಿದ್ಧವಾದುವು. ಇವುಗಳಲ್ಲಿ ಬರುವ ಬೌದ್ಧಧರ್ಮದ ಪ್ರಮುಖವಾದ ಅಂಶಗಳನ್ನು ಇಲ್ಲಿ ಸಂಗ್ರಹವಾಗಿ ನೋಡಬಹುದು.

ಎಲ್ಲ ದುಃಖಕ್ಕೂ ಮೂಲ ತೃಷ್ಣೆ (ಪಾಳಿಯಲ್ಲಿ 'ತನ್ಹಾ'). ಎಂದರೆ ಕ್ಷಣಿಕ ಸುಖಕ್ಕಾಗಿ ಪಡುವ ಪಾಡು. ಜನ್ಮಪುನರ್ಜನ್ಮಗಳಿಗೆ ತನ್ಹಾವೇ ಕಾರಣ. ಇದನ್ನು ನಿರ್ಮೂಲಗೊಳಿಸುತ್ತ ಹೋದಂತೆ ದುಃಖದ ಸೆಲೆ ಬತ್ತುತ್ತ ಹೋಗುತ್ತದೆ. ತನ್ಹಕ್ಕೆ ಒಳಗಾಗಿರುವವರೆಗೂ ದುಃಖದಿಂದ ಬಿಡುಗಡೆ ಪಡೆಯುವುದು ಸಾಧ್ಯವಿಲ್ಲ.

ಯಜ್ ಏಸಾ ಸಹತೀ ಜಮ್ಮೀ ತನ್ಹಾ ಲೋಕೇ ವಿಸತ್ತಿಕಾ
ಸೋಕಾ ತಸ್ಸ ಪವಡ್ಢಂತಿ ಅಭಿವಟ್ಠಂ ವ ಬೀರಣಂ

(ಧಮ್ಮಪದ : ತನ್ಹಾವಗ್ಗ)

"ಈ ಲೋಕದಲ್ಲಿ ಯಾರು ವಿಷಪೂರಿತವಾದ ಮತ್ತು ತುಚ್ಛವಾದ ಈ ತನ್ಹಕ್ಕೆ ಒಳಗಾಗುವರೋ ಅವರ ಶೋಕವು ಮಳೆಯಾದನಂತರ ಬೀರಣ ಎಂದರೆ ಹುಲ್ಲು ಬೆಳೆಯುವಂತೆ ಬೆಳೆಯುತ್ತದೆ?"—ಎಂದು ಅನೇಕ ಬಗೆಯಲ್ಲಿ ತನ್ಹವನ್ನು ವರ್ಣಿಸಲಾಗಿದೆ 'ಧಮ್ಮಪದ'ದಲ್ಲಿ.

ಈ ತನ್ಹಾದ ಬೇರನ್ನು ಬುಡಸಹಿತ ಕತ್ತರಿಸದ ಹೊರತು ದುಃಖದ ಕೊಂಬೆಗಳು ಚಿಗುರುವುದು ನಿಲ್ಲುವುದಿಲ್ಲ. ಅದರಿಂದ "ತನ್ಹಾಯ ಮೂಲಜ್ ಖಣಥ": ತನ್ಹಾದ

ಮೂಲವನ್ನು ಅಗೆದು ಹಾಕಿ. "ಯಾರು ರಾಗದಲ್ಲಿ ಅನುರಕ್ತರಾಗಿರುವರೋ ಅವರು ತಾವೇ ನೆಯ್ದ ಬಲೆಯಲ್ಲಿ ಜೇಡರಹುಳು ಸಿಕ್ಕಿ ಬೀಳುವಂತೆ ಸಂಸಾರ ಪ್ರವಾಹಕ್ಕೆ ಸಿಕ್ಕಿ ಬೀಳುತ್ತಾರೆ. ಜಾಣರಾದವರು ಇದನ್ನು ಕತ್ತರಿಸಿಹಾಕಿ ಯಾವುದಕ್ಕೂ ಅಂಟಿಕೊಳ್ಳದೆ ಎಲ್ಲ ದುಃಖವನ್ನೂ ತೊರೆಯುತ್ತಾರೆ." ಅಲ್ಲದೆ :

ಹನಂತಿ ಭೋಗಾ ದುಮ್ಮೇಧಜ್ ನೋ ಚ ಪಾರಗವೇಸಿನೋ।
ಭೋಗತನ್ಹಾಯ ದುಮ್ಮೇಧೋ ಹಂತಿ ಅಞ್ಞೇವ ಅತ್ತನಜ್

(ತನ್ಹಾವಗ್ಗ)

"ಭೋಗವು ಮೂರ್ಖನನ್ನು ನಾಶಮಾಡುತ್ತದೆ. ಆದರೆ ಆಚಿನದನ್ನು ಅರಸುವವನಿಗೆ ಅದು ಏನೂ ಮಾಡಲಾರದು. ಭೋಗವನ್ನಪೇಕ್ಷಿಸುವುದರಿಂದ ಮೂರ್ಖನು ಇತರರನ್ನು ನಾಶಮಾಡುತ್ತಾನೆ, ತನ್ನನ್ನು ನಾಶಮಾಡಿಕೊಳ್ಳುತ್ತಾನೆ." ಇಂಥ ಮಾತುಗಳು 'ಧಮ್ಮಪದ'ದಲ್ಲಿ ಬರುತ್ತವೆ. ಇಲ್ಲಿ ಬುದ್ಧ ತನ್ಹಾದ ಬಂಧಕಾರಕ ಶಕ್ತಿಯನ್ನೂ ಅದನ್ನು ದಾಟಿ ಮೇಲೇರುವ ಆವಶ್ಯಕತೆಯನ್ನೂ ವಿವರವಾಗಿ ಹೇಳಿದ್ದಾನೆ.

ಈ ತನ್ಹಾವನ್ನು ಮೆಟ್ಟಿ ಮೇಲೇರುವ ಬಗೆ ಹೇಗೆ? ಇದೇ ಜೀವನದ ಪ್ರಮುಖ ಪ್ರಶ್ನೆ. ಇದಕ್ಕೆ ಬುದ್ಧ ತೋರಿಸುವ ಮಾರ್ಗ ಸಮನ್ವಯ ಮಾರ್ಗ. 'ಮಹಾವಗ್ಗ'ದಲ್ಲಿ ಬರುವ ಅವನ ಉಪದೇಶ ಇದನ್ನು ಸ್ಪಷ್ಟಪಡಿಸುತ್ತದೆ. ಲೋಕದಲ್ಲಿ ಎರಡು ಬಗೆಯ ಜನರನ್ನು ಬುದ್ಧ ಕಂಡ. ಪ್ರಾಸಂಗಿಕ ಸುಖಗಳಿಗೆ ಸಂಪೂರ್ಣವಾಗಿ ಮಾರುಹೋದ ಜನ ಒಂದು ಬಗೆ. ಇಂದ್ರಿಯ ಕಾಮನೆ ಮತ್ತು ಲೋಲುಪ್ತಿಗಳ ಹೊರತಾಗಿ ಇನ್ನೇನೂ ಅವರಿಗೆ ಬೇಕಾಗಿಲ್ಲ. ಬತ್ತದಿರುವ ತೃಷ್ಣೆಯ ಜ್ವಾಲೆಯಲ್ಲಿ ಅವರ ಜೀವನ. ಉರಿಯುತ್ತಿದೆ. ಇನ್ನೊಂದು ಬಗೆಯವರು ಇದಕ್ಕೆ ತೀರ ವಿರುದ್ಧವಾದ ಗುಂಪು. ತೃಷ್ಣೆಯನ್ನು ಜಯಿಸಲು ಅತಿಕಠಿಣವಾದ ಮಾರ್ಗವನ್ನು ಕೈಕೊಂಡವರು ಅವರು. ದೇಹದಂಡನೆ ಅವರ ಪ್ರಧಾನವಾದ ಮಾರ್ಗ. ಯಾತನಾಮಯವಾದ ಈ ಕಠಿಣಮಾರ್ಗವೂ ಅನಗತ್ಯ. ಈ ಎರಡು ಅತಿರೇಕಗಳನ್ನು ಬಿಟ್ಟು ಸುವರ್ಣ ಮಧ್ಯಮಮಾರ್ಗವನ್ನು ಬುದ್ಧ ಬೋಧಿಸಿದ. 'ಆರ್ಯ ಅಷ್ಟಾಂಗಮಾರ್ಗ'—ಎಂದು ಕರೆಯಬಹುದಾದ ಎಂಟು ಸೂತ್ರಗಳನ್ನು ಆತ ಕೊಟ್ಟನು.

ಅಷ್ಟಾಂಗ ಮಾರ್ಗದ ಮೊದಲನೆಯ ಅಂಗ 'ಸಮ್ಯಕ್‌ದೃಷ್ಟಿ' (Right view or faith); ಎಂದರೆ ದುಃಖ ಸಮುದಯ ನಿರೋಧ ಮತ್ತು ಮಾರ್ಗ ಎಂಬ ಈ ನಾಲ್ಕು ಸತ್ಯಗಳನ್ನು ಸರಿಯಾಗಿ ತಿಳಿದಿರುವುದು. ಎರಡನೆಯದು 'ಸಮ್ಯಕ್ ಸಂಕಲ್ಪ' (Right aspiration). ಕಾಮಕ್ರೋಧಾದಿಗಳನ್ನು ದೂರವಿರಿಸಿ ಸರ್ವಭೂತ ಹಿತದಲ್ಲಿ ರತಿಯನ್ನು ಬೆಳಸಬೇಕೆಂದು ಮನಸ್ಸು ಮಾಡುವುದು. ಮೂರನೆಯದು 'ಸಮ್ಯಕ್‌ವಾಕ್' (Right speech) : ಸುಳ್ಳು ಚಾಡಿ ಇತ್ಯಾದಿ ಮಾತುಗಳನ್ನು ಬಿಟ್ಟು ಸತ್ಯವಾದ ಹಿತವಾದ ಪ್ರಿಯವಾದ ಮಾತುಗಳನ್ನಾಡುವುದು. 'ಸಮ್ಯಕ್ ಕರ್ಮಾಂತ' (Right action) :

ಕೊಲೆ ಕಳವು ವ್ಯಭಿಚಾರ ಮೊದಲಾದ ದುಷ್ಕರ್ಮಗಳನ್ನು ಬಿಟ್ಟು ಕುಶಲಕರ್ಮಗಳನ್ನೇ ಮಾಡುವುದು. ಮುಂದಿನದು 'ಸಮ್ಯಕ್ ಆಜೀವ' (Right livelihood). ಸಮಾಜಕ್ಕೂ ತನಗೂ ಹಾನಿಯಾಗದಂತಹ ಜೀವನೋಪಾಯವನ್ನು ಕೈಕೊಳ್ಳುವುದು. ಆರನೆಯದು 'ಸಮ್ಯಕ್ ವ್ಯಾಯಾಮ' (Right effort). ಮನಸ್ಸಿನಲ್ಲಿ ಕೆಟ್ಟ ಆಲೋಚನೆಗಳು ತಲೆದೋರದಂತೆ, ಒಳ್ಳೆಯ ಭಾವಗಳು ಹುಟ್ಟಿ ಬೆಳೆಯುವಂತೆ ಮಾನಸಿಕ ಪ್ರಯತ್ನ ನಡಸುವುದು. 'ಸಮ್ಯಕ್ ಸ್ಮೃತಿ' (Right mindfulness) ಏಳನೆಯ ಅಂಗ. ದೇಹದ ನಶ್ವರ ಸ್ವರೂಪವನ್ನೂ ಸುಖದುಃಖಗಳ ಸಾರಾಸಾರ ವಿವೇಕವನ್ನೂ ಚಿತ್ತಶುದ್ಧಿಯ ಆವಶ್ಯಕತೆ ಮತ್ತು ವಿಧಾನಗಳನ್ನು ಮರೆಯದಂತೆ ಮತ್ತೆ ಮತ್ತೆ ಮನನ ಮಾಡುವುದು. ಕೊನೆಯ ಅಂಗ 'ಸಮ್ಯಕ್ ಸಮಾಧಿ' (Right contemplation) ಚಿತ್ತದ ಏಕಾಗ್ರತೆಯ ಮೂಲಕ ಧ್ಯಾನವನ್ನು ದೊರಕಿಸಿಕೊಳ್ಳುವುದು. ಇವು ಅಷ್ಟಾಂಗಗಳು.

ಇವುಗಳನ್ನು ಒಂದಾದಮೇಲೊಂದರಂತೆ ಕ್ರಮವಾಗಿ ಆಚರಿಸಿಕೊಂಡು ಬರಬೇಕೆಂದಲ್ಲ. ಇವೆಲ್ಲ ಅನ್ಯೋನ್ಯಭಾವದಿಂದ ಒಟ್ಟಿಗೆ ಸೇರಿರುವಂತಹವು. ಈ ಎಂಟು ಅಂಗಗಳಲ್ಲಿ ಮೊದಲನೆಯ ಎರಡನ್ನು ಎಂದರೆ 'ದೃಷ್ಟಿ' ಮತ್ತು 'ಸಂಕಲ್ಪ'ಗಳನ್ನು 'ಪ್ರಜ್ಞೆ' ಎಂದೂ ಅನಂತರದ ಮೂರು ಅಂಗಗಳಾದ 'ವಾಕ್', 'ಕರ್ಮಾಂತ', 'ಆಜೀವ'ಗಳನ್ನು 'ಶೀಲ'ವೆಂದೂ ಉಳಿದ ಮೂರನ್ನು 'ಸಮಾಧಿ' ಎಂದೂ ವ್ಯವಹರಿಸುವುದು ರೂಢಿ. 'ಪ್ರಜ್ಞೆ' ಶುದ್ಧವಾದರೆ 'ಶೀಲ' ಶುದ್ಧವಾಗುತ್ತದೆ. ಎಂದರೆ ಮಾತು ಕೆಲಸ ಬದುಕು ನೇರವಾಗುತ್ತವೆ. 'ಶೀಲ' ಶುದ್ಧಿಯಿಂದ 'ಸಮಾಧಿ' ಸುಗಮವಾಗುತ್ತದೆ. ಆದುದರಿಂದ ಈ ಮಾರ್ಗದಲ್ಲಿ ನಡೆಯುವವರಿಗೆ ಕೊನೆಮುಟ್ಟುವವರೆಗೂ ಈ ಎಂಟು ಅಂಗಗಳು ಎಲ್ಲ ಕಾಲದಲ್ಲೂ ಅಗತ್ಯ. ಜೈನಧರ್ಮದ ಪಂಚಾಣುವ್ರತಗಳು, ರತ್ನತ್ರಯಗಳು, ಹದಿನಾಲ್ಕು ಗುಣಸ್ಥಾನಗಳು—ಇವುಗಳಲ್ಲಿ ಅಳವಡಿಸಿದ ಅಂಶಗಳು ಇಲ್ಲಿ ಈ ಬಗೆಯಲ್ಲಿ ನಿರೂಪಿತವಾಗಿರುವುದು ಕಂಡುಬರುತ್ತದೆ.

ಈ ಮಾರ್ಗದಲ್ಲಿ ನಡೆದರೆ ಚಿತ್ತ ಶುದ್ಧವಾಗಿ 'ನಿರ್ವಾಣ' ಲಭಿಸುತ್ತದೆ. 'ನಿರ್ವಾಣ' ಎಂಬುದನ್ನು ಒಂದು ಮಾತಿನಲ್ಲಿ ಹೇಳಬಹುದಾದರೆ ಎಲ್ಲ ತೃಷ್ಣೆಗಳನ್ನೂ ನಿರಸನಗೊಳಿಸಿದ ಸ್ಥಿತಿ. ಕೊನೆಗೆ ಇದು ನಿಷೇಧಾತ್ಮಕ ಸ್ವರೂಪವನ್ನು ಪಡೆದರೂ ಇದು ಮೂಲತಃ ಆನಂದರೂಪಿ. ಬಂಧಕಶಕ್ತಿಯ ನಿರಸನದಿಂದ ಲಭಿಸಿದ ತಾರಕಶಕ್ತಿಯ ತನ್ಮಯ ಆನಂದ ಇದು. ಈ ಆನಂದವನ್ನು ಪಡೆದು ತಲ್ಲೀನನಾದವನು ಪುನರ್ಜನ್ಮಗಳ ಬಂಧನದಿಂದ ಪಾರಾಗುತ್ತಾನೆ: "ಯಾರ ಕಶ್ಮಲಗಳು ಕಳೆದುಹೋಗಿರುವುವೋ, ಯಾರು ಆಹಾರದಲ್ಲಿ ಉದಾಸೀನರಾಗಿರುವರೋ, ಯಾರ ಗುರಿಯು ಶೂನ್ಯ ಮತ್ತು ಅನಿಮಿತ್ತವಾದ ವಿಮುಕ್ತಿಯಾಗಿರುವುದೋ ಅಂಥವನು ನಡೆಯುವ ದಾರಿಯು ಆಕಾಶದ ಹಕ್ಕಿಗಳ ದಾರಿಯಂತೆ ಗುರುತಿಸಲು ಕಷ್ಟವಾದುದು"—ಎಂದು ಅಂತಹವರ ವರ್ಣನೆಯನ್ನು 'ಧಮ್ಮಪದ'ದಲ್ಲಿ ಮಾಡಲಾಗಿದೆ. ಅಲ್ಲದೆ :

ಸಂತಜಬ್ ತಸ್ಸ ಮನಜಬ್ ಹೋತಿ ಸಂತಾ ವಾಚಾ ಚ ಕಮ್ಮ ಚ
ಸಮ್ಮಾದಞ್ಞಾ ವಿಮುತ್ತಸ್ಸ ಉಪಸಂತಸ್ಸ ತಾದಿನೋ

(ಅರಹಂತ ವಗ್ಗ)

"ಸಮ್ಯಕ್‌ಜ್ಞಾನವನ್ನು ಪಡೆದು ವಿಮುಕ್ತಿ ಪಡೆದವನ ಮನಸ್ಸು ಶಾಂತವಾಗಿರುತ್ತದೆ, ಕರ್ಮ ಶಾಂತವಾಗಿರುತ್ತದೆ. ಅಂಥವನು ಉಪಶಾಂತಿಯಿಂದಿರುತ್ತಾನೆ." ಅವನು "ಯಾವುದರ ವಿಷಯದಲ್ಲಿಯೂ ಅಸಮಾಧಾನ ತೋರಿಸುವುದಿಲ್ಲ. ಇಂದ್ರಕೀಲದಂತೆ ಅವನು ನಿಶ್ಚಲ. ಕೆಸರಿಲ್ಲದ ಆಳವಾದ ಸರೋವರದಂತೆ ಅವನು ಪರಿಶುದ್ಧ. ಅಂಥವನಿಗೆ ಸಂಸಾರವೆಂಬುದಿರುವುದಿಲ್ಲ."

ಯಸ್ಸಿಂದ್ರಿಯಾನಿ ಸಮತಜಬ್ ಗತಾನಿ ಅಸ್ಸ ಯಥಾ ಸಾರಥಿನಾ ಸುದಂತಾ
ಪಹೀಣಮಾನಸ್ಸ ಅನಾಸವಸ್ಸ ದೇವ ಪಿ ತಸ್ಸ ಪಿ ಹಯಂತಿ ತಾದಿನೋ

"ಸಾರಥಿಯಿಂದ ದಮನಮಾಡಲ್ಪಟ್ಟ ಕುದುರೆಗಳಂತೆ ಯಾರ ಇಂದ್ರಿಯಗಳು ನಿಗ್ರಹಿಸಲ್ಪಟ್ಟಿರುವುವೋ, ಯಾರ ದುರಭಿಮಾನವು ನಾಶವಾಗಿ ಹೋಗಿದೆಯೋ, ಯಾರು ಕಶ್ಮಲಗಳಿಂದ ಬಿಡುಗಡೆ ಹೊಂದಿರುವರೋ ಅಂಥವರು ದೇವತೆಗಳಿಗೆ ಪ್ರಿಯವಾಗಿರುತ್ತಾರೆ." ಈ ರೀತಿಯ ಮಾತುಗಳಲ್ಲಿ ಜ್ಞಾನಿಗಳ ವರ್ಣನೆ ಬರುತ್ತದೆ.

ಬುದ್ಧನ ಉಪದೇಶದ ಪ್ರಮುಖವಾದ ಅಂಶಗಳೆಂದರೆ, ಮೊದಲನೆಯದಾಗಿ ಅವನು ತನ್ನ ಅಂತರಂಗದ ಅನುಭವಗಳಿಗೆ ಪ್ರಾಧಾನ್ಯವನ್ನು ಕೊಟ್ಟುದು. ವೇದಗಳಲ್ಲಿ ಹೇಳಿದೆ ಎಂದ ಮಾತ್ರಕ್ಕೆ ಅದು ಪರಮ ಪ್ರಮಾಣವಾಗಲಾರದು. ಸುತ್ತಮುತ್ತಲಿನ ಪರಿಸರಕ್ಕೂ ಅನುಭವಕ್ಕೂ ಹೊಂದಿಕೊಳ್ಳುವಂತಿರಬೇಕೆಂಬುದೇ ಆತನ ದೃಷ್ಟಿ. ತನ್ನ ಶಿಷ್ಯರಲ್ಲಿಯೂ ಆ ಸ್ವತಂತ್ರ ವಿಚಾರಶಕ್ತಿಯನ್ನು ಉದ್ದೀಪಿಸಿದನು. ತನ್ನ ಉಪದೇಶಗಳನ್ನು ಕೂಡ ವಿಚಾರಮಾಡಿದ ನಂತರವೇ ಒಪ್ಪಿಕೊಳ್ಳಬೇಕೆಂದು ಆತ ಹೇಳುತ್ತಿದ್ದನು.

ತಾಪಾತ್ ಛೇದಾಚ್ಚ ನಿಕಷಾತ್ ಸುವರ್ಣಮಿವ ಪಂಡಿತೈಃ ।
ಪರೀಕ್ಷ್ಯ ಭಿಕ್ಷವಃ ಗ್ರಾಹ್ಯಂ ನ ತು ಮದ್ವಾಕ್ಯ ಗೌರವಾತ್ ॥

(ತತ್ತ್ವಸಂಗ್ರಹ)

"ಸುವರ್ಣವನ್ನು ಬೆಂಕಿಯಲ್ಲಿ ಕಾಯಿಸಿ ಕತ್ತರಿಸಿ ಒರೆಗೆ ಹಚ್ಚಿ ಪರೀಕ್ಷಿಸಿ ಪರಿಗ್ರಹಿಸುವಂತೆ ನನ್ನ ಮಾತನ್ನು ಪರೀಕ್ಷಿಸಿ ಪರಿಗ್ರಹಿಸಿರಿ. ನನ್ನಲ್ಲಿ ಬರಿಯ ಗೌರವದಿಂದ ನಂಬಬೇಡಿ"—ಎಂದಿದ್ದಾನೆ. ಅಲ್ಲದೆ, ಜಾಗ್ರತ ಹೃದಯದ ಸತತ ಸಾಧನೆಯಿಂದ ಮಾತ್ರ ಚಿರಂತನ ಸತ್ಯ ಗೋಚರಿಸಬಲ್ಲುದು; ಪ್ರತಿಯೊಬ್ಬ ಸಾಧಕನೂ ತನ್ನ ಮಾರ್ಗದಲ್ಲಿ ತಾನೇ ನಡೆದು ಬೆಳಕನ್ನು ಕಂಡುಕೊಳ್ಳಬೇಕು—ಎಂದು ಸ್ವಪ್ರಯತ್ನಕ್ಕೆ ಹೆಚ್ಚು ಮಹತ್ತ್ವವನ್ನು ಕೊಟ್ಟಿದ್ದಾನೆ.

ಇನ್ನೊಂದು ಮುಖ್ಯವಾದ ಅಂಶವೆಂದರೆ ಅಂಧಶ್ರದ್ಧೆಯ ಆಚಾರಗಳನ್ನೂ ಯಜ್ಞಯಾಗಾದಿ ಕರ್ಮಗಳನ್ನೂ ಕಟುವಾಗಿ ಖಂಡಿಸಿದುದು. ಈ ಎಲ್ಲ ಕರ್ಮಗಳಿಗಿಂತ

ಮುಖ್ಯವಾದುದೆಂದರೆ ಪರಿಶುದ್ಧವಾದ ನೈತಿಕ ಜೀವನ ಮತ್ತು ಮಾನಸಿಕ ಏಕಾಗ್ರತೆ. ಏಕಾಗ್ರತೆಗೆ ಸಹಾಯಕವಾಗುವಂತಹ ಆಚರಣೆಗಳನ್ನು ಬುದ್ಧ ಬೋಧಿಸಿದನು. ಅಹಿಂಸೆ, ಸತ್ಯ ಮೊದಲಾದುವು ಈ ದೃಷ್ಟಿಯಿಂದ ಪ್ರಮುಖಸ್ಥಾನವನ್ನು ಪಡೆದುವು. ಆದರೆ ಜೈನಧರ್ಮದಷ್ಟು ಅತಿರೇಕಕ್ಕೆ ಅಹಿಂಸೆಯನ್ನು ಬುದ್ಧನು ತೆಗೆದುಕೊಂಡು ಹೋದಂತೆ ಕಾಣುವುದಿಲ್ಲ. ಎಲ್ಲ ನೈತಿಕ ಆಚರಣೆಗಳ ಮುಖ್ಯ ಉದ್ದೇಶವೆಂದರೆ ಮಾನಸಿಕವಾದ ಶಾಂತಿಯನ್ನು ತಂದುಕೊಡುವುದು, ಮನಸ್ಸಿನ ತಿಳಿಯನ್ನು ಕದಡಿ ಬಗ್ಗಡಗೊಳಿಸುವ ಭಾವನೆಗಳನ್ನು ಹೊರಹಾಕುವುದು. ಈ ಭಾವಗಳ ಸಂಪೂರ್ಣ ನಿರಸನವೇ 'ನಿರ್ವಾಣ.'

ತಾತ್ತ್ವಿಕ ವಿಷಯಗಳನ್ನು ಕುರಿತ ಪಾಂಡಿತ್ಯಪೂರ್ವಕವಾದ ಜಿಜ್ಞಾಸೆಗೆ ಬುದ್ಧ ಹೆಚ್ಚು ಮಹತ್ವವನ್ನು ಕೊಡಲಿಲ್ಲ. ಜೀವ, ಜಗತ್ತು, ಈಶ್ವರ—ಇವುಗಳ ಅಸ್ತಿತ್ವ ಮತ್ತು ಪರಸ್ಪರ ಸಂಬಂಧಗಳ ಶಾಸ್ತ್ರೀಯವಾದ ವಿವೇಚನೆ ಅವನ ಉಪದೇಶಗಳಲ್ಲಿಲ್ಲ. ಆ ವಿಚಾರದಲ್ಲಿ ಅವನು ಮಹಾಮೌನಿ. ವ್ಯರ್ಥವಾದ ಆ ಚರ್ಚೆ ಸಾಧನೆಗೆ ಸಹಾಯಕ ವಾಗದೆಂಬುದೇ ಅದಕ್ಕೆ ಮುಖ್ಯಕಾರಣ. ಶಿಷ್ಯರು ಆ ಪ್ರಶ್ನೆಗಳನ್ನು ಕೇಳಿದಾಗ ಆತನು ಕೊಡುತ್ತಿದ್ದ ವಿಷಪೂರಿತ ಬಾಣ, ಸುಡುತ್ತಿರುವ ಮನೆ—ಈ ಮೊದಲಾದ ದೃಷ್ಟಾಂತ ಗಳನ್ನು ನೋಡಿದರೆ ಆತನ ಮನೋಧರ್ಮವೇನೆಂಬುದು ಸ್ಪಷ್ಟವಾಗುತ್ತದೆ. ವಿಷದ ಬಾಣ ಬಂದು ನಾಟಿದಾಗ ಬಾಣವನ್ನು ಬಿಟ್ಟವರು ಯಾರು ? ಎಲ್ಲಿಂದ ಬಿಟ್ಟರು ? ಆ ವಿಷದ ಸ್ವರೂಪವೇನು ?—ಎಂಬಿವೇ ಮೊದಲಾದ ಚರ್ಚೆಗಳಲ್ಲಿ ತೊಡಗುವುದು ಬುದ್ಧಿ ವಂತಿಕೆಯ ಲಕ್ಷಣವಲ್ಲ. ಮೊದಲು ಬೇಕಾದುದು ಚಿಕಿತ್ಸೆ. ಹಾಗೆ ಈ ಜೀವನದ ಸ್ಥಿತಿ. ಸೃಷ್ಟಿಕರ್ತನಾರು ? ಅವನ ಸ್ವರೂಪವೇನು ಅವನಿಗೂ ಜೀವಗಳಿಗೂ ಸಂಬಂಧವೇನು ? —ಈ ಮೊದಲಾದ ಚರ್ಚೆಗಳಿಗೆಲ್ಲಾ ಅವಕಾಶವೆಲ್ಲಿದೆ ? ನಾಲ್ಕು ಕಡೆಯಲ್ಲಿಯೂ ಹತ್ತಿ ಉರಿಯುತ್ತಿರುವ ಮನೆಯಲ್ಲಿ ನಿಂತಿದ್ದೇವೆ. ಮೊದಲು ಹುಡುಕಬೇಕಾದುದು ಅಲ್ಲಿಂದ ಪಾರಾಗುವ ಮಾರ್ಗ. ಬುದ್ಧನ ಈ ವಾದ ಒಂದು ದೃಷ್ಟಿಯಿಂದಲೇನೋ ಸರಿ. ತಾತ್ತ್ವಿಕ ಚರ್ಚೆಗಳು ಅತಿಯಾಗಿ ಬೆಳೆದಾಗ ಬೌದ್ಧಿಕ ಚಮತ್ಕಾರಗಳಾಗಿ ಮುಖ್ಯ ವಿಷಯವನ್ನೇ ಮರೆಮಾಡಿಬಿಡುತ್ತವೆ. ಆದರೆ ಬುದ್ಧನ ಅತಿ ಅವಜ್ಞೆಯೂ ಅಪಾಯಕಾರಿಯೇ. ಅದೇ ಮುಂದೆ ಅನಾತ್ಮವಾದದಲ್ಲಿ ಪರ್ಯವಸಾನವಾಗಲು ಕಾರಣವಾಯಿತೆನ್ನಬಹುದು.

ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಬುದ್ಧನು ಸಾಧಿಸಿದ ಪ್ರಮುಖವಾದ ಅಂಶವೆಂದರೆ ಸರ್ವಸಮಾನತೆ. ಮೇಲುಕೀಳುಗಳನ್ನೂ ಜಾತಿಭೇದಗಳನ್ನೂ ತೊಡೆದು ಹಾಕಲು ಬುದ್ಧ ಪ್ರಯತ್ನಿಸಿದ. ಸಾಮಾಜಿಕವಾಗಿ ಮತ್ತು ಧಾರ್ಮಿಕ ದೃಷ್ಟಿಯಿಂದ ಕೂಡ, ಬುದ್ಧನು ಸಾಧಿಸಿ ತೋರಿಸಿದಂತಹ ಸಮಾನತೆ ಆ ಯುಗದ ವೈದಿಕ ಧರ್ಮದ ದೃಷ್ಟಿಯಲ್ಲಿ ಅಸಾಧ್ಯವಾದುದಾಗಿತ್ತು. ಉಪನಿಷತ್ತುಗಳ ಆದರ್ಶ ಮಂಕಾಗಿ ವೈದಿಕ ಕರ್ಮಕಾಂಡದ ಬೇರುಗಳು ಆಳವಾಗಿ ಇಳಿದು ಸಮಾಜದಲ್ಲಿ ಬಿರುಕನ್ನು ತಂದ ಕಾಲ ಅದು. ಚತುರ್ವರ್ಣಗಳು ಸಾಮಾಜಿಕ ಜೀವನದಲ್ಲಿ ಅಳಿಸಲಾರದ ಅಂತರವನ್ನು ತಂದು ಹಾಕಿದ್ದುವು. ಇವುಗಳ ವಿರುದ್ಧ ಬುದ್ಧ ಪ್ರಬಲವಾದ ಹೋರಾಟ ನಡಸಬೇಕಾಯಿತು.

ಆತ ತನ್ನ ಧರ್ಮದಲ್ಲಿ ಜಾತಿವರ್ಣಗಳ ಭೇದವಿಲ್ಲದೆ ಎಲ್ಲರಿಗೂ ಸಮಾನಸ್ಥಾನ ಮತ್ತು ಅವಕಾಶಗಳನ್ನು ಕಲ್ಪಿಸಿಕೊಟ್ಟ. ಹುಟ್ಟಿನಿಂದ ಜಾತಿಯನ್ನು ನಿರ್ಧರಿಸಬಾರದೆಂಬುದನ್ನೂ ಅಂತಹ ಜಾತಿಯಿಂದ ಯೋಗ್ಯತೆಯನ್ನು ಅಳೆಯಲಾಗದೆಂಬುದನ್ನು ಸ್ಪಷ್ಟವಾಗಿ ಸಾರಿದ. ಯಾವನು ನಿಜವಾದ ಜ್ಞಾನಿಯೋ ಅವನೇ ಬ್ರಾಹ್ಮಣ, ಅವನೇ ಭಿಕ್ಷು ಎಂದ.

ಯಸ್ಸ ಪಾರಂ ಅಪಾರಂ ವಾ ಪಾರಾಪಾರಂ ನ ವಿಜ್ಜತಿ।
ವೀತದ್ದರಂ ವಿಸಂಯುತ್ತಂ ತಮಹಂ ಬ್ರೂಮಿ ಬ್ರಾಹ್ಮಣಂ

(ಬ್ರಾಹ್ಮಣವಗ್ಗ)

"ಯಾರಿಗೆ ಪಾರವಾಗಲಿ (ಒಳಗಿನ ಕಾಮ) ಅಪಾರವಾಗಲಿ (ಕಾಮಪ್ರಚೋದಕ ವಸ್ತು) ಇಲ್ಲವೋ, ನಾನು ಮತ್ತು ನನ್ನದು ಎನ್ನುವ ಪಾರಾಪಾರ ಭಾವನೆಗಳು ಯಾರಿಗಿಲ್ಲವೋ, ಯಾರು ಚಿಂತೆಗಳಿಂದ ದೂರವಿರುವನೋ, ಮತ್ತು ಯಾರು ಸಂಕೋಲೆಗಳನ್ನು ಬಿಡಿಸಿ ಕೊಂಡಿರುವನೋ ಅಂಥವನನ್ನು ಬ್ರಾಹ್ಮಣನೆಂದು ಕರೆಯುತ್ತೇನೆ." "ಯಾರು ಧ್ಯಾನಪರನಾಗಿರುವನೋ, ಕಶ್ಮಲರಹಿತನೋ, ಶಾಂತಚಿತ್ತನೋ, ಕೃತಕೃತ್ಯನೋ, ಆಸನಗಳನ್ನು ನೀಗಿಕೊಂಡಿರುವನೋ ಮತ್ತು ಉತ್ತಮವಾದುದನ್ನು ಸಾಧಿಸಿರುವನೋ ಅಂಥವನನ್ನು ಬ್ರಾಹ್ಮಣನೆಂದು ಕರೆಯುತ್ತೇನೆ."

ನ ಜಟಾಹಿ ನ ಗೊತ್ತೇನ ನ ಜಚ್ಚಾ ಹೋತಿ ಬ್ರಾಹ್ಮಣೋ
ಯಮ್ಹಿ ಸಚ್ಚಂ ಚ ಧಮ್ಮೋ ಚ ಸೋ ಸುಚೀ ಸೊ ಚ ಬ್ರಾಹ್ಮಣೋ

(ಬ್ರಾಹ್ಮಣವಗ್ಗ)

"ಜಟೆಯಿಂದಾಗಲಿ ಗೋತ್ರದಿಂದಾಗಲಿ ಜಾತಿಯಿಂದಾಗಲಿ ಒಬ್ಬ ಬ್ರಾಹ್ಮಣನಾಗುವುದಿಲ್ಲ. ಯಾರಲ್ಲಿ ಧರ್ಮ ಮತ್ತು ಸತ್ಯಗಳಿವೆಯೋ ಅವನೇ ಶುಚಿ, ಅವನೇ ಬ್ರಾಹ್ಮಣ."

ಮುಂದುವರಿದು, ಇನ್ನೊಂದು ಕಡೆ ಹೀಗೆ ಹೇಳಿದ್ದಾನೆ: "ಒಬ್ಬನು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿರುವುದರಿಂದಾಗಲಿ ಅಥವಾ ಬ್ರಾಹ್ಮಣ ಹೆಂಗಸಿನ ಉದರದಲ್ಲಿ ಜನಿಸಿರುವುದರಿಂದಾಗಲಿ ಅವನನ್ನು ಬ್ರಾಹ್ಮಣನೆಂದು ಕರೆಯಲಾರೆ. ಕಶ್ಮಲಗಳಿಲ್ಲದವನನ್ನು, ಯಾವುದಕ್ಕೂ ಅಂಟಿಕೊಳ್ಳದವನನ್ನು ಬ್ರಾಹ್ಮಣನೆನ್ನುತ್ತೇನೆ." ಇಂಥ ಮಾತುಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ, ಯೋಗ್ಯತೆಯಿಂದಲೇ 'ಬ್ರಾಹ್ಮಣತ್ವ' ಅಥವಾ 'ಭಿಕ್ಷುತ್ವ' ಎಂಬುದು.

ಬುದ್ಧನ ಈ ಉಪದೇಶವಾಣಿ, ಅವನ ಅಪೂರ್ವ ವ್ಯಕ್ತಿತ್ವ ಅಂದಿನ ಸಮಾಜದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದುವು. ಅವನ ಅನುಯಾಯಿಗಳ ಸಂಖ್ಯೆ ಹೆಚ್ಚಿತು. ರಾಜಾಶ್ರಯವೂ ಸಿಕ್ಕಿ ಅವನ ಧರ್ಮದ ಬೆಳವಣಿಗೆಗೆ ಪ್ರಚೋದನೆ ಸಿಕ್ಕಂತಾಯಿತು. ಬೌದ್ಧಧರ್ಮ ಅವನ ಕಾಲದಲ್ಲಿಯೂ ಅವನ ಅನಂತರವೂ ಒಂದೇ ಸಮನೆ ಬೆಳೆಯುತ್ತ ಹೋಯಿತು. ಹೊರದೇಶಗಳಿಗೂ ಪ್ರಯಾಣವನ್ನು ಕೈಕೊಂಡಿತು. ಜಗತ್ತಿನ ಪ್ರಮುಖವಾದ ಧರ್ಮಗಳಲ್ಲಿ ಒಂದಾಗಿ ಪರಿಣಮಿಸಿತು.

ಇದರಲ್ಲಿ ಕ್ರಮೇಣ ಹಲವಾರು ಶಾಖೆಗಳು ಏರ್ಪಟ್ಟುವು. ಬುದ್ಧನು ಪರಿನಿರ್ವಾಣ

ವನ್ನು ಪಡೆದು ನೂರು ವರ್ಷಗಳ ವೇಳೆಗಾಗಲೇ ಮೂಲಸಂಘವು ಎರಡಾಗಿ ಒಡೆದಿತ್ತು. ಬುದ್ಧನಿಂದ ಬಂದ ಪರಂಪರೆಯನ್ನೇ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದವರು ಸ್ಥವಿರ ವಾದಿಗಳೆಂದೂ ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡವರು ಮಹಾಸಾಂಘಿಕ ರೆಂದೂ ಹೆಸರಾದರು. ಈ ಪಂಗಡಗಳಲ್ಲಿ ಮತ್ತೆ ಅನೇಕ ಉಪಪಂಗಡಗಳು ತಲೆದೋರಿ ದುವು. ಮಹಾಸಾಂಘಿಕರು ಬುದ್ಧನ ವಚನಗಳಲ್ಲಿ ಕೆಲವು ಅರ್ಥವ್ಯತ್ಯಾಸಗಳನ್ನು ಮಾಡಿ ಕೊಂಡರು. ಅವುಗಳ ಆಧಾರದಿಂದ 'ಮಹಾಯಾನ'ವೆಂಬ ಒಂದು ದೊಡ್ಡ ಪಂಥವೇ ಬೆಳೆಯಲು ಕಾರಣವಾಯಿತು. ಆಗ ಸ್ಥವಿರವಾದಿಗಳ ಸಂಪ್ರದಾಯವನ್ನು 'ಹೀನಯಾನ' ವೆಂದು ಕರೆಯಲಾಯಿತು. ಇಲ್ಲ 'ಮಹಾ' ಮತ್ತು 'ಹೀನ' ಎಂಬುದನ್ನು ಉತ್ಕೃಷ್ಟ ಮತ್ತು ನಿಕೃಷ್ಟ ಎಂಬ ಅರ್ಥದಲ್ಲಿ ತೆಗೆದುಕೊಳ್ಳಬಾರದು. ನಿರ್ವಾಣಕ್ಕೆ ಹೆಚ್ಚು ಜನರನ್ನು ಕೊಂಡೊಯ್ಯುವ ಯಾನ 'ಮಹಾಯಾನ', ಕೆಲವೇ ಜನರನ್ನು ನಿರ್ವಾಣಕ್ಕೆ ಕೊಂಡೊ ಯ್ಯುವ ಯಾನ 'ಹೀನಯಾನ'—ಎಂಬ ಅರ್ಥವನ್ನು ಕೆಲವು ವಿದ್ವಾಂಸರು ಈ ಮಾತು ಗಳಿಗೆ ಕೊಟ್ಟಿದ್ದಾರೆ.[35] ಆದರೆ ಇನ್ನು ಕೆಲವರ ಅಭಿಪ್ರಾಯದ ಪ್ರಕಾರ 'ಮಹಾಯಾನ' ತಂದುಕೊಡುವ ಅತ್ಯುನ್ನತವಾದ ಸ್ಥಿತಿಯನ್ನು 'ಹೀನಯಾನ' ತಂದುಕೊಡಲಾರದು. ಅದು ಹೆಚ್ಚೆಂದರೆ ಶ್ರಾವಕತ್ವವನ್ನು ಸಾಧಿಸಿಕೊಡಬಹುದು. ಬುದ್ಧತ್ವವನ್ನು ಕೊಡ ಲಾರದು. ಆದರೆ ಮಹಾಯಾನ ಬುದ್ಧತ್ವದ ಮಟ್ಟಕ್ಕೆ ಸಾಧಕನನ್ನು ಏರಿಸಲು ಸಮರ್ಥ ವಾಗುತ್ತದೆ ಎನ್ನುವವರಿದ್ದಾರೆ.[36]

ಕೆಲವು ಕಾಲ ಬೌದ್ಧಧರ್ಮ ಭಾರತದಲ್ಲಿ ಪ್ರಬಲಶಕ್ತಿಯಾಗಿ ಪರಿಣಮಿಸಿತು. ಅಶೋಕ ಮೊದಲಾದ ರಾಜರ ಆಶ್ರಯವೂ ಸಿಕ್ಕು ರಾಷ್ಟ್ರಧರ್ಮವಾಗಿ ಅದು ಮೆರೆಯಿತು. ಸಂಖ್ಯೆಯ ದೃಷ್ಟಿಯಿಂದಲೇ ಅಲ್ಲದೆ, ಸತ್ತ್ವದ ದೃಷ್ಟಿಯಿಂದಲೂ ಅದು ಬಹುದೊಡ್ಡ ಪರಿಣಾಮವನ್ನು ಹಿಂದೂ ಸಂಸ್ಕೃತಿಯ ಮೇಲೆ ಬೀರಿತು. ನೈತಿಕ ವಿಚಾರ, ಧಾರ್ಮಿಕ ಉಪಾಸನೆ, ಕಲಾ ಕೃತಿಯ ರಚನೆ, ಸಾಹಿತ್ಯಸೃಷ್ಟಿ ಈ ಮೊದಲಾದುವುಗಳಲ್ಲಿ ಬೌದ್ಧಧರ್ಮ ಅಚ್ಚಳಿಯದ ಪ್ರಭಾವವನ್ನೂ ಪ್ರಚೋದನೆಯನ್ನೂ ಹಿಂದೂ ಧರ್ಮಕ್ಕೆ ಕೊಟ್ಟಿತು. ಬೌದ್ಧಧರ್ಮಕ್ಕೆ ಸಿಕ್ಕ ಜಯಪ್ರಿಯತೆಯಿಂದ ಹಿಂದೂಧರ್ಮ ತಾನೂ ಉತ್ಸಾಹಗೊಂಡಿತು. ಉದಾತ್ತ ತತ್ತ್ವಗಳನ್ನು ಮತ್ತೆ ಅಳವಡಿಸಿಕೊಳ್ಳಲು ಹವಣಿಸಿತು. ಆದರ ಫಲವಾಗಿ ಬೌದ್ಧಮತ ಪ್ರಾರಂಭದ ಹೊಳಪನ್ನೂ ವ್ಯಾಪ್ತಿಯನ್ನೂ ಕಳೆದುಕೊಂಡು ಹಿಂದೂಧರ್ಮದಲ್ಲಿ ಸಮಾ ವೇಶಗೊಳ್ಳತೊಡಗಿತು.

ಬೌದ್ಧಧರ್ಮ ಹಿಂದೂಧರ್ಮದಿಂದ ಸಿಡಿದು ನಿಂತ ಸ್ವತಂತ್ರಧರ್ಮವಾಗಿದ್ದರೂ ಕೆಲವು ಅಂಶಗಳಲ್ಲಿ ಸಮಾನತೆ ಇದ್ದೇ ಇತ್ತು. ಬುದ್ಧನ 'ನಿರ್ವಾಣ' ಮತ್ತು ಉಪನಿಷತ್ತು ಗಳ 'ಬ್ರಹ್ಮಸಾಕ್ಷಾತ್ಕಾರ' ಒಂದಕ್ಕೊಂದು ತೀರ ವಿರೋಧವಾದುವೇನೂ ಆಗಿರಲಿಲ್ಲ. ಅವು ಒಂದೇ ಸತ್ಯವನ್ನು ಹೇಳುವ ಅಥವಾ ಸಾಕ್ಷಾತ್ಕರಿಸಿಕೊಳ್ಳುವ ಎರಡು ವಿಧಾನಗಳು. ಬೌದ್ಧ ಧರ್ಮದ ಪ್ರಭಾವದಿಂದ ಹಿಂದೂಧರ್ಮದಲ್ಲಿ ಯಜ್ಞಯಾಗಾದಿಗಳ ಹಿಂಸಾಕರ್ಮಗಳು ಬಹುಮಟ್ಟಿಗೆ ಕಡಮೆಯಾದುವೆನ್ನಬಹುದು. ಹೀಗೆ ಹಿಂದೂಧರ್ಮ ಕ್ರಮೇಣ ಎಚ್ಚೆತ್ತು

ಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳತೊಡಗಿತು. ಮುಂದೆ ಗುಪ್ತರ ಕಾಲದಲ್ಲಿ ಹಿಂದೂಧರ್ಮಕ್ಕೆ ಹೊಸ ಪ್ರಚೋದನೆ ಸಿಕ್ಕಿತು. ಆ ವೇಳೆಗೆ ಬೌದ್ಧಧರ್ಮದ ಅವನತಿ ಪ್ರಾರಂಭವಾಗಿತ್ತು. ನೈತಿಕನಿಷ್ಠೆ ಶಿಥಿಲಗೊಂಡು ಬೌದ್ಧಸಂಘಗಳ ಶಕ್ತಿ ಕುಸಿದುಬೀಳುತ್ತಿತ್ತು. ಅಲ್ಲದೆ ಮುಖ್ಯವಾಗಿ ಆ ಧರ್ಮ ಭದ್ರವಾದ ತಾತ್ತ್ವಿಕ ತಳಹದಿಯಮೇಲೆ ನಿಂತಿಲ್ಲದಿದ್ದುದರಿಂದ ನಾಸ್ತಿಕವಾದವಾಗಿ ಪರಿಣಮಿಸಿತ್ತು. ಅದ್ವೈತ ಪಂಥದಂತಹ ಪ್ರಚಂಡ ಶಕ್ತಿಯ ಎದುರಿನಲ್ಲಿ ಅದು ನಿಲ್ಲಲಾರದೇ ಹೋಯಿತು. ಕೊನೆಗೆ ಹುಟ್ಟಿದ ನಾಡನ್ನೇ ಬಹುಮಟ್ಟಿಗೆ ತೊರೆದು ಹೊರಗೆ ಹೋಗಬೇಕಾದ ಸ್ಥಿತಿಯೊದಗಿತು.

ಬೌದ್ಧಮತ ಮರೆಯಾದರೂ ಅದರ ಪ್ರಭಾವ ಹಿಂದೂಧರ್ಮದಲ್ಲಿ ಹಾಸುಹೊಕ್ಕಾಗಿ ಸೇರಿತು. ಅದರ ಮುಖ್ಯಾಂಶಗಳು ಹಿಂದೂಧರ್ಮದಲ್ಲಿ ಸೇರಿಹೋದುವು. ಯಾವ ಹೊಸ ಅಂಶಗಳನ್ನಾದರೂ ಬೆರಸಿ ಬೇರಲ್ಲದಂತೆ ಅರಗಿಸಿಕೊಳ್ಳುವ ಹಿಂದೂಧರ್ಮದ ವಿಶಿಷ್ಟಶಕ್ತಿ ಈ ಸಂದರ್ಭದಲ್ಲಿಯೂ ವ್ಯಕ್ತವಾಯಿತು. ವಿಷ್ಣುವಿನ ಅವತಾರಗಳಲ್ಲಿ ಒಬ್ಬನಾಗಿ ಪರಿಣಮಿಸಿ ಬುದ್ಧ ದೇವತ್ವದ ಮಟ್ಟಕ್ಕೇರಿದ. ಬೌದ್ಧಧರ್ಮದ ನಾಸ್ತಿಕ ಅಂಶ ಹೊರಗುಳಿಯಿತು. ಅದರ ಆಸ್ತಿಕ ಅಂಶ ಹಿಂದುತ್ವದಲ್ಲಿ ಒಂದಾಗಿ ಸೇರಿಕೊಂಡಿತು.

## ಷಡ್ದರ್ಶನಗಳು

ಬೌದ್ಧ ಮತ್ತು ಜೈನಧರ್ಮಗಳ ನಂತರ ಹಿಂದೂಧರ್ಮದಲ್ಲಿ ಒಂದು ಹೊಸ ಜಾಗ್ರತಿ ಪ್ರಾರಂಭವಾಯಿತೆನ್ನಬಹುದು. ಜನಮನದ ಮೇಲೆ ವಿಶೇಷ ಪ್ರಭಾವವನ್ನು ಬೀರಿದ ಆ ಧರ್ಮಗಳ ವೈಚಾರಿಕ ಶಕ್ತಿಯನ್ನು ಕಂಡು ವೈದಿಕಧರ್ಮ ಎಚ್ಚತ್ತಿತು. ವೇದೋಕ್ತವಾದ ಮಾತ್ರದಿಂದಲೇ ಸತ್ಯವೆಂಬ ಶ್ರದ್ಧೆಯ ಮೇಲೆ ಬುದ್ಧಿ ಬಹುಕಾಲ ನಿಲ್ಲಲಾರವೆಂಬುದನ್ನು ಕಂಡುಕೊಂಡಿತು. ಅನುಭವವೇ ಪರಮ ಪ್ರಮಾಣವೆಂದು ಸಾರಿದ ಬುದ್ಧನ ಸಂದೇಶ ವಿಚಾರಶಕ್ತಿಯನ್ನು ಪ್ರಚೋದಿಸಿ ಬುದ್ಧಿಯ ಬಲವನ್ನು ಬೆಳಸಲು ಕಾರಣವಾಯಿತು.

ಇದರಿಂದ ಹಿಂದು ಪಂಡಿತರು ಜಾಗ್ರತರಾದರು. ಜೈನ ಬೌದ್ಧಧರ್ಮಗಳು ತೋರಿಸಿದ ವಿಚಾರಪ್ರಧಾನವಾದ ತಳಹದಿಯ ಮೇಲೆ ವೈದಿಕ ಧರ್ಮತತ್ತ್ವದ ಮೌಲ್ಯಗಳನ್ನು ಪುನರ್ನಿರ್ಮಿಸುವ ಅಗತ್ಯ ಅವರಿಗೆ ತೋರಿತು. ವೇದನಿಂದಕರಾದ ನಾಸ್ತಿಕರನ್ನು ಅವರಂತೆಯೇ ಯುಕ್ತಿವಾದದ ಪ್ರಬಲ ಆಯುಧದಿಂದ ಎದುರಿಸಲು ಸಿದ್ಧರಾದರು. ವಿಚಾರ ಮತ್ತು ವಿಮರ್ಶೆಗಳ ಬಲದಿಂದ ವೇದಪ್ರಾಮಾಣ್ಯವನ್ನು ಆಸ್ತಿಕರು ನಿರೂಪಿಸತೊಡಗಿದರು[37] ಅದರ ಫಲವಾಗಿ ಹುಟ್ಟಿದವು ದರ್ಶನಗ್ರಂಥಗಳು.

'ದರ್ಶನ' ಎಂದರೆ ನೋಡುವಿಕೆ. ಶ್ರುತಿ, ಸ್ಮೃತಿ, ಆಗಮ—ಈ ಪರಂಪರೆಯ ನಂತರ ದರ್ಶನಗಳು ಬರುತ್ತವೆ. 'ಶ್ರುತಿ' ಎಂದರೆ ಕೇಳಿದುದು. 'ಸ್ಮೃತಿ' ಎಂದರೆ ಕೇಳಿದುದನ್ನು ಅನಂತರ ಸ್ಮರಣೆಗೆ ತಂದುಕೊಂಡು ಬರೆದುದು. 'ಆಗಮ'ವೆಂದರೆ ಒಬ್ಬರಿಂದ ಒಬ್ಬರಿಗೆ ಅವ್ಯಾಹತವಾಗಿ ಅನೂಚಾನವಾಗಿ ಬಂದದ್ದು. ಇವೆಲ್ಲವನ್ನೂ ಎಂದರೆ ಅಂತ

ವಾಣಿಯಿಂದ ಕೇಳಿದ್ದನ್ನು, ಸ್ಮರಣೆಯಿಂದ ಬರೆದದ್ದನ್ನು, ಪರಂಪರೆಯಿಂದ ಬಂದದ್ದನ್ನು ಸ್ವಬುದ್ಧಿ ಸ್ವವಿಮರ್ಶೆಗಳಿಂದ ದರ್ಶಿಸಿ ರಚಿತವಾದವು ದರ್ಶನಗ್ರಂಥಗಳು.

ಅಪರೋಕ್ಷವಾದ ಆತ್ಮಾನುಭೂತಿಯನ್ನು ಪರೋಕ್ಷ ಪ್ರಮಾಣಗಳಿಂದ ಅಳೆದು ನೋಡುವ ವಿಚಾರಶಕ್ತಿಯ ಫಲವಾಗಿ ದರ್ಶನಗಳು ಮೂಡಿದುವು. ಬಹುಶಃ ಇವು ಬುದ್ಧನ ಕಾಲದಿಂದ ಈಚೆಗೆ ಪ್ರಾರಂಭವಾಗಿ ಅಶೋಕನ ಕಾಲದವರೆಗೂ ಹೆಚ್ಚಾಗಿ ರಚಿತವಾದುವೆನ್ನಬಹುದು. ಆದರೆ ಅದಕ್ಕಿಂತ ಹಿಂದೆಯೇ ಇವುಗಳ ರಚನೆ ಅಸ್ಪಷ್ಟವಾಗಿ ರೂಪುಗೊಳ್ಳುತ್ತಿದ್ದಿರಬೇಕು. ಅವುಗಳಿಗೆ ಸ್ಪಷ್ಟರೂಪ ಬಂದುದು ಜೈನ ಬೌದ್ಧ ಧರ್ಮಗಳ ವಿಚಾರಕ್ರಾಂತಿಯ ನಂತರವೆಂದು ತೋರುತ್ತದೆ.

ಅನೇಕ ದರ್ಶನಗ್ರಂಥಗಳು ರಚಿತವಾಗಿರಬಹುದಾದರೂ ಅವುಗಳಲ್ಲಿ ಪ್ರಮುಖವಾಗಿ ಉಳಿದು ಬೆಳೆದು ಬಂದವು ಆರು : ಗೌತಮನಿಂದ ರಚಿತವಾದ ನ್ಯಾಯ, ಕಣಾದನ ವೈಶೇಷಿಕ, ಕಪಿಲನ ಸಾಂಖ್ಯ, ಪತಂಜಲಿಯ ಯೋಗ, ಜೈಮಿನಿಯ ಪೂರ್ವಮೀಮಾಂಸೆ, ಮತ್ತು ಬಾದರಾಯಣನ ಉತ್ತರಮೀಮಾಂಸೆ ಅಥವಾ ವೇದಾಂತ ದರ್ಶನ. ಇವು ಸೂತ್ರರೂಪದಲ್ಲಿ ರಚಿತವಾಗಿವೆ.

'ಸೂತ್ರ' ಎನ್ನುವ ರಚನೆಯ ಒಂದು ವಿಶಿಷ್ಟ ರೀತಿ ವೇದಗಳಿಂದ ಈಚೆಗೆ ಬೆಳೆದು ಬಂದಿತು. ವೇದಸಾಹಿತ್ಯ ಅಗಾಧವಾಗಿ ಬೆಳೆದ ಮೇಲೆ, ವೈದಿಕ ವಿಚಾರಕರು ಅವುಗಳಿಂದ ಒಂದು ಕ್ರಮಬದ್ಧವಾದ ರೀತಿಯಲ್ಲಿ ತಮ್ಮ ಆಲೋಚನೆಗಳನ್ನು ರೂಪುಗೊಳಿಸಬೇಕಾಯಿತು. ಅವು ಸುಲಭವಾಗಿ ನೆನಪಿನಲ್ಲಿ ಉಳಿಯುವಂತೆಯೂ ಇರಬೇಕಾಗಿದ್ದಿತು. ಆ ಪ್ರಯತ್ನದ ಫಲವಾಗಿ ಹುಟ್ಟಿದ್ದು ಸೂತ್ರಪದ್ಧತಿ. ಅತಿ ಅಡಕವಾದ ಮಾತುಗಳಲ್ಲಿ ಸಂಗ್ರಹವಾಗಿ ತಮ್ಮ ಅಭಿಪ್ರಾಯಗಳನ್ನು ಹಿಡಿದಿಡಲು ಸೂತ್ರಗಳು ಸಹಾಯಕವಾದುವು.

ಅಲ್ಪಾಕ್ಷರಂ ಅಸಂದಿಗ್ಧಂ ಸಾರವತ್ ವಿಶ್ವತೋಮುಖಂ ।
ಅಸ್ತೋಭಂ ಅನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

ಎಂದರೆ "ಸೂತ್ರಗಳು ಅಲ್ಪಾಕ್ಷರಗಳಿಂದ ಕೂಡಿರಬೇಕು. ಸಂದಿಗ್ಧತೆಗೆ ಅವಕಾಶವಿರಬಾರದು. ಸಾರವತ್ತಾಗಿದ್ದು ಸತ್ಯವನ್ನು ಸಾರುವಂತಾಗಿರಬೇಕು. ತಪ್ಪುಕಲ್ಪನೆಗೆ ಎಡೆಮಾಡಿಕೊಡುವಂತಿರಬಾರದು"—ಎಂದು ಸೂತ್ರಗಳನ್ನು ವಿವರಿಸಲಾಗಿದೆ.

"ಅಲ್ಪಾಕ್ಷರಗಳಿಂದ ಕೂಡಿರಬೇಕು" ಎಂಬ ಮಾತು ಸೂತ್ರಕ್ಕೆ ಬಹಳ ಮುಖ್ಯವಾಗಿ ಪರಿಣಮಿಸಿತು. ಸಾಧ್ಯವಾದಷ್ಟು ಸಂಗ್ರಹವಾಗಿ ಎಂದರೆ ಸಾಧ್ಯವಾದಷ್ಟು ಕಡಮೆ ಅಕ್ಷರಗಳಲ್ಲಿ ಹೇಳುವ ಸ್ಪರ್ಧೆ ಸೂತ್ರರಚನೆಗಳಲ್ಲಿ ಕಂಡುಬರತೊಡಗಿತು. ವೈಯಾಕರಣರಿಗೆ ಸೂತ್ರರಚನೆಯಲ್ಲಿ ಒಂದು ಅರ್ಧಸ್ವರ ಉಳಿದರೆ ಪುತ್ರೋತ್ಸವವಾದಷ್ಟು ಸಂತೋಷವೆಂಬ ಗಾದೆಯ ಮಾತು ಬೆಳೆಯುವಂತಾಯಿತು. ಅನೇಕ ವೇಳೆ ಸೂತ್ರದ ಮುಂದಿನ ಲಕ್ಷಣವಾದ 'ಅಸಂದಿಗ್ಧತೆ' ಎಂಬ ಗುಣ ಸಂಗ್ರಹದ ಭರದಲ್ಲಿ ಹಾರಿಹೋಗುವಂತಾಯಿತು. ವಿವರಣೆಗಳೂ ವ್ಯಾಖ್ಯಾನಗಳೂ ಇಲ್ಲದೆ ವಿಷಯವನ್ನು ಅರ್ಥಮಾಡಿಕೊಳ್ಳುವುದೇ ಕಷ್ಟಕರವಾಗಿ ಪರಿಣಮಿಸುವಂತಾಯಿತು.

ಈ ಎಲ್ಲ ದರ್ಶನಗಳಲ್ಲಿಯೂ ಸ್ಥೂಲವಾಗಿ ಮೂರು ಘಟ್ಟಗಳು : ಆಯಾ ದರ್ಶನದ ಮೂಲಭೂತವಾದ ತಾತ್ತ್ವಿಕ ಅಂಶಗಳು ಕ್ರಮೇಣ ರೂಪುಗೊಳ್ಳುತ್ತ ಆ ದರ್ಶನದ ಒಟ್ಟು ಮನೋಧರ್ಮ ಸ್ಥೂಲವಾಗಿ ಕಾಣಿಸಿಕೊಳ್ಳುವುದು, ಅನಂತರ ಅದು ಸ್ಪಷ್ಟವಾದ ಸೂತ್ರಗಳಲ್ಲಿ ಮೂಡುವುದು, ಮತ್ತು ಆ ಸೂತ್ರಗಳಿಗೆ ವಿವರಣೆಗಳೂ ವ್ಯಾಖ್ಯಾನಗಳೂ ಬರುವುದು.

ಅನೇಕ ವಿಚಾರಗಳಲ್ಲಿ ಆರು ದರ್ಶನಗಳು ಪರಸ್ಪರ ಭಿನ್ನಾಭಿಪ್ರಾಯವುಳ್ಳವಾಗಿದ್ದರೂ ಕೆಲವು ಸಮಾನವಾದ ಅಂಶಗಳನ್ನು ಒಳಗೊಂಡಿವೆ. ವೇದ ಪ್ರಾಮಾಣ್ಯವನ್ನು ಇವೆಲ್ಲ ಒಪ್ಪಿಕೊಳ್ಳುತ್ತವೆ. ಈ ಅರ್ಥದಲ್ಲಿ ಇವೆಲ್ಲವೂ ಆಸ್ತಿಕವಾದಿಗಳು. ಬೌದ್ಧರ ಸಂದೇಹವಾದವನ್ನು ಖಂಡಿಸುವುದರಲ್ಲಿಯೂ ಇವುಗಳಲ್ಲಿ ಏಕತೆಯಿದೆ. ಸೃಷ್ಟಿಪ್ರವಾಹ ನಿರಂತರವಾಗಿ ಹರಿಯುತ್ತಿದೆ. ಇದು ಕೇವಲ ಮಾನಸಿಕವಾದ ಸ್ಥಿತಿಯಲ್ಲ; ವಸ್ತುಸ್ಥಿತಿಯೂ ಹೌದು. ಇದಕ್ಕೆ ಕಾರಣವನ್ನು ದರ್ಶನಗಳು ಪ್ರಕೃತಿ ಅಥವಾ ಮಾಯೆ ಅಥವಾ ಅಣುಗಳಿಗೆ ಆರೋಪಿಸುತ್ತವೆ.

ನಾಮರೂಪ ವಿನಿರ್ಮುಕ್ತಂ ಯಸ್ಮಿನ್ ಸಂತಿಷ್ಠತೇ ಜಗತ್ ।
ತಂ ಆಹುಃ ಪ್ರಕೃತಿಂ ಕೇಚಿನ್ ಮಾಯಂ ಅನ್ಯೇಪರೇತ್ವಣೂನ್ ॥

"ನಾಮ ರೂಪಗಳನ್ನು ಕಳೆದುಕೊಂಡು ಈ ಜಗತ್ತು ಯಾವುದರಲ್ಲಿ ಅಡಗುತ್ತದೆಯೋ ಅದನ್ನು ಕೆಲವರು ಪ್ರಕೃತಿ ಎಂದೂ ಕೆಲವರು ಮಾಯೆ ಎಂದೂ ಮತ್ತೆ ಕೆಲವರು ಅಣು ಎಂದೂ ಕರೆಯುತ್ತಾರೆ" ಈ ಮಾತು 'ಬೃಹದ್‌ವಾಶಿಷ್ಠ'ದಲ್ಲಿ ಬರುತ್ತದೆ.

ಆರು ದರ್ಶನಗಳೂ ಒಪ್ಪಿಕೊಳ್ಳುವ ಇನ್ನೊಂದು ಅಂಶವೆಂದರೆ ಸೃಷ್ಟಿಯ ಆಕುಂಚನ ವಿಕಸನಗಳು. ಸೃಷ್ಟಿ ಅನಾದಿ ಮತ್ತು ಅನಂತ ಎಂಬುದನ್ನು ಇವು ಧ್ವನಿಸುತ್ತವೆ. ಕಾಲ ಕಾಲಕ್ಕೆ ಅದು ವ್ಯಕ್ತವಾಗುತ್ತದೆ, ಮತ್ತೆ ಅಡಗುತ್ತದೆ. ಇದು ಲಯಬದ್ಧವಾಗಿ ನಡೆಯುವ ನಿರಂತರಕ್ರಿಯೆ ಎನ್ನುತ್ತವೆ ದರ್ಶನಗಳು. ದರ್ಶನಗಳಲ್ಲಿ ಕಂಡುಬರುವ ಮೋಕ್ಷದ ಕಲ್ಪನೆಯಲ್ಲಿಯೂ ತಕ್ಕಮಟ್ಟಿಗೆ ಏಕತೆ ಕಂಡುಬರುತ್ತದೆ. ಆತ್ಮ ತನ್ನ ಸಹಜವಾದ ಸ್ವರೂಪವನ್ನು ಪಡೆಯುವುದೇ ಮೋಕ್ಷವೆಂಬ ಮಾತು ಕೆಲವು ದರ್ಶನಗಳಲ್ಲಿವೆ. ಈ ಆರು ದರ್ಶನಗಳನ್ನೂ ನ್ಯಾಯ–ವೈಶೇಷಿಕ, ಸಾಂಖ್ಯ–ಯೋಗ, ಪೂರ್ವ–ಉತ್ತರ ಮೀಮಾಂಸೆಗಳು ಎಂದು ಮೂರು ಗುಂಪುಗಳನ್ನಾಗಿ ಮಾಡಬಹುದು. ಅವೆರಡರಲ್ಲಿ ಅನೇಕ ಅಂಶಗಳು ಸಮಾನವಾಗಿವೆ; ಒಂದಕ್ಕೊಂದು ಪೂರಕವಾಗಿವೆ.

ನ್ಯಾಯ ವೈಶೇಷಿಕಗಳು ಹೊರ ಜಗತ್ತಿನ ಮತ್ತು ಅದರಿಂದ ಲಭಿಸುವ ಅಂತರಂಗದ ಅನುಭವಗಳ ವಿಭಜನೆಯ ಮೂಲಕ ಜ್ಞಾನವನ್ನು ಅರಿಯಲು ಯತ್ನಿಸಿದರೆ, ಸಾಂಖ್ಯ ಯೋಗಗಳು ಊಹೆ ಸಿದ್ಧಾಂತಗಳ ಮಾರ್ಗದಿಂದ ಮುನ್ನಡೆಯುತ್ತವೆ. ಪೂರ್ವ ಉತ್ತರ ಮೀಮಾಂಸೆಗಳು ಶ್ರುತಿಯಲ್ಲಿ ವ್ಯಕ್ತಗೊಂಡ ಅನುಭವಗಳನ್ನು ತಾತ್ತ್ವಿಕ ಜಿಜ್ಞಾಸೆಗೆ ಹೊಂದಿಕೊಳ್ಳುವಂತೆ ಅಳವಡಿಸಿ ತೋರಿಸುತ್ತವೆ. ಆದುದರಿಂದ ಕಾಲದಿಂದ ದೃಷ್ಟಿಯಿಂದ

ಅಲ್ಲದಿದ್ದರೂ ತಾತ್ತ್ವಿಕವಾದ ಆಲೋಚನಾಕ್ರಮದ ವಿಕಾಸದ ದೃಷ್ಟಿಯಿಂದ ಇಲ್ಲಿ ಹೆಸರಿಸಿದ ಕ್ರಮದಲ್ಲಿಯೇ ಇವುಗಳನ್ನು ಸಂಗ್ರಹವಾಗಿ ನೋಡಬಹುದು :

ನ್ಯಾಯ ವೈಶೇಷಿಕಗಳೆರಡನ್ನೂ ಸೇರಿಸಿ ಸಾಮಾನ್ಯವಾಗಿ ತಾರ್ಕಿಕ ದರ್ಶನವೆಂದು ಕರೆಯುವುದುಂಟು. ವೈಶೇಷಿಕವನ್ನು ಪ್ರಮೇಯಶಾಸ್ತ್ರವೆಂದೂ ನ್ಯಾಯವನ್ನು ಪ್ರಮಾಣ ಶಾಸ್ತ್ರವೆಂದೂ ಪರಿಗಣಿಸಿ ಒಂದಕ್ಕೊಂದು ಪೂರಕವೆಂದು ಭಾವಿಸಲಾಗಿದೆ. "ಬುದ್ಧ್ಯಾಧಿಯದ್ ಉಪಪನ್ನಂ ತತ್ ಸರ್ವಂ ನ್ಯಾಯಮನುತಮ್"—ಎಂದು ವಾಚಸ್ಪತಿ ನ್ಯಾಯ ಶಾಸ್ತ್ರವನ್ನು ಕುರಿತು ಹೇಳುತ್ತಾನೆ. ವೈಚಾರಿಕ ದೃಷ್ಟಿಯ ವಿಭಜನೆ ಇಲ್ಲಿಯದು. ಪ್ರಮಾಣಗಳಿಂದ ಪದಾರ್ಥಗಳನ್ನು ಪರೀಕ್ಷೆ ಮಾಡುವ ಶಾಸ್ತ್ರವಿದು. ಇನ್ನು ವೈಶೇಷಿಕ ಎಂಬುದನ್ನು ನೋಡಿದರೆ 'ವಿಶೇಷ' ಎಂಬುದರಿಂದ ಇದಕ್ಕೆ ಈ ಹೆಸರು ಬಂದಿರ ಬೇಕೆಂಬುದು ವಿದ್ವಾಂಸರ ಮತ. 'ವಿಶೇಷ' ಎಂಬುದು ಸಾಂಖ್ಯ ಸಂಪ್ರದಾಯದಲ್ಲಿ ಪಂಚಭೂತಗಳನ್ನು ನಿರ್ದೇಶಿಸುತ್ತದೆ. ಆ ಅರ್ಥವನ್ನೇ ಇಲ್ಲಿ ತೆಗೆದುಕೊಂಡರೆ ಸ್ಥೂಲ ವಾದ ಪಂಚಭೂತಗಳನ್ನೇ ಜಗತ್ಕಾರಣಗಳೆಂದು ತಿಳಿಯುವ ಸಿದ್ಧಾಂತ ವೈಶೇಷಿಕ. ಸಂಪ್ರದಾಯ ಪರಂಪರೆಯಿಂದ ಬಂದ ಕೆಲವು ತಾತ್ತ್ವಿಕವಾದ ಅಂಶಗಳನ್ನು ಎಂದರೆ ಕಾಲ ಆಕಾಶ ಕಾರಣ ಕಾರ್ಯ ಸೃಷ್ಟಿ ಮನಸ್ಸು ಆತ್ಮ—ಈ ಮೊದಲಾದ ಮೂಲ ತತ್ತ್ವಗಳನ್ನು ಬೌದ್ಧಿಕವಾಗಿ ವಿಭಜಿಸಿ ಚರ್ಚಿಸಿ ಒಂದು ಸಿದ್ಧಾಂತವನ್ನು ರೂಪಿಸುವುದು ನ್ಯಾಯ ವೈಶೇಷಿಕಗಳಲ್ಲಿ ಕಾಣುತ್ತದೆ.

ನ್ಯಾಯಸೂತ್ರಗಳನ್ನು ಬರೆದವನು ಗೌತಮ. ಇದಕ್ಕೆ ವಾತ್ಸ್ಯಾಯನ, ಪ್ರಶಸ್ತಪಾದ, ಉದ್ಯೋತ್ಕರ, ವಾಚಸ್ಪತಿ, ಮೊದಲಾದವರು ಬರೆದ ಸೂತ್ರಭಾಷ್ಯ ಮತ್ತು ವೃತ್ತಿಗಳಿವೆ. ಬುದ್ಧಿಯ ಒರೆಗಲ್ಲಿನ ಮೇಲೆ ಸತ್ಯವನ್ನು ಉಜ್ಜಿ ನೋಡುವ ಸಾಹಸ ನ್ಯಾಯಶಾಸ್ತ್ರದ್ದು. ಚಿನ್ನವನ್ನು ಚಿನ್ನವೆಂದು ತಿಳಿಯುವುದಕ್ಕೆ ಮುನ್ನ ಕಾಯಿಸಿ ಬಡಿದು ತಿಕ್ಕಿ ನೋಡುವಂತೆ ಯುಕ್ತಿಯುಕ್ತವಾದದಿಂದ ಮೂಲತತ್ತ್ವಗಳನ್ನು ಅದು ವಿಮರ್ಶಿಸಿ ನೋಡುತ್ತದೆ. ಆದುದರಿಂದಲೇ ಅದನ್ನು ತರ್ಕಶಾಸ್ತ್ರ ಅಥವಾ ವಾದವಿದ್ಯೆ ಎಂದು ಕರೆಯುತ್ತಾರೆ. ಅಲ್ಲದೆ 'ಅನ್ವೀಕ್ಷಣ' ಎಂಬ ಪರ್ಯಾಯನಾಮವೂ ಇದೆ. ಜ್ಞಾತೃ ಜ್ಞಾನ ಜ್ಞೇಯಾತ್ಮಕವಾದ ಸಚರಾಚರ ಸೃಷ್ಟಿಯನ್ನು ಕೆದಕಿ ಬೆದಕಿ ಪರೀಕ್ಷಿಸಿ ನೋಡುವ ಬುದ್ಧಿಶಕ್ತಿಯ ವಿಶಿಷ್ಟತೆ ನ್ಯಾಯ ದರ್ಶನದ ತಳಹದಿ.

ಎಲ್ಲ ಜ್ಞಾನವೂ ನಾಲ್ಕು ಅಂಶಗಳನ್ನು ಒಳಗೊಳ್ಳುತ್ತದೆನ್ನಬಹುದು : 'ಪ್ರಮಾತೃ' : ಯಥಾರ್ಥ ಜ್ಞಾನಕ್ಕೆ ಆಶ್ರಯನಾಗಿ ಅದನ್ನು ಅರಿಯುವವನು ; 'ಪ್ರಮೇಯ': ಜ್ಞಾನಕ್ಕೆ ವಿಷಯವಾಗಿರುವ ವಸ್ತು; 'ಪ್ರಮಿತಿ'; ಜ್ಞಾನವನ್ನು ಗ್ರಹಿಸಿದುದರಿಂದ ಉಂಟಾಗುವ ಸ್ಥಿತಿ : 'ಪ್ರಮಾಣ' : ಜ್ಞಾನವನ್ನು ಗ್ರಹಿಸುವುದಕ್ಕೆ ಕಾರಣವಾದ ಸಾಧನ. ಈ ನಾಲ್ಕು ವಿಧಾನಗಳಲ್ಲಿ ಪ್ರಪಂಚವೆಲ್ಲಾ ಅಡಗಿಹೋಗುತ್ತದೆ—ಎನ್ನುತ್ತವೆ ನ್ಯಾಯಸಿದ್ಧಾಂತ. ಸಾಮಾನ್ಯವಾಗಿ ಪ್ರತಿಯೊಂದು ಕ್ರಿಯೆಗೂ ಕರ್ತೃ ಕರಣ ಕರ್ಮಗಳು ಇರುವ ಹಾಗೆ ಪ್ರಮೆ ಅಥವಾ ಪ್ರಮಿತಿಯೆಂಬ ಜ್ಞಾನರೂಪಕ್ರಿಯೆಗೂ ಕರ್ತೃ ಕರಣ ಕರ್ಮಗಳು ಬೇಕು. ಅವನ್ನು

ಪ್ರಮಾತೃ ಪ್ರಮಾಣ ಮತ್ತು ಪ್ರಮೇಯ ಎಂದು ಕರೆಯಲಾಗಿದೆ. ಕರಣಗಳು ಎಂದರೆ ಪ್ರಮಾಣಗಳು ಶುದ್ಧವಾದಷ್ಟೂ ಕರ್ತೃವು ಜ್ಞಾನವನ್ನು ಗ್ರಹಿಸುವ ಕರ್ಮ ಹೆಚ್ಚು ಶುದ್ಧವಾಗುತ್ತದೆ. ಆದುದರಿಂದ ಜ್ಞಾನದ ಗ್ರಹಣಕ್ಕೆ ಮುಖ್ಯವಾದ ಸಾಧನ ಪ್ರಮಾಣಗಳು. ಪ್ರಮಾಣಗಳಲ್ಲಿ ಪ್ರತ್ಯಕ್ಷ ಅನುಮಾನ ಉಪಮಾನ ಶಬ್ದ ಎಂಬುವು ಬಹಳ ಮುಖ್ಯವಾದುವು. ಇವಲ್ಲದೆ ಅರ್ಥಾಪತ್ತಿ ಅನುಪಲಬ್ಧಿ ಸಂಭವ ಐತಿಹ್ಯ ಲಿಪಿ ಲೋಕಪ್ರಸಿದ್ಧಿ ಚೇಷ್ಟೆ ಪ್ರತಿಭೆ—ಇವುಗಳೂ ಸೇರಿ ಒಟ್ಟು ಹನ್ನೆರಡು ಪ್ರಮಾಣಗಳಿವೆ ಎಂದು ಹೇಳಲಾಗಿದೆ. ಇವುಗಳಲ್ಲಿ ಮೊದಲನೆಯ ನಾಲ್ಕು ಪ್ರಮಾಣಗಳನ್ನು ಮಾತ್ರ ನೈಯಾಯಿಕರು ಒಪ್ಪುತ್ತಾರೆ. ವೈಶೇಷಿಕರು ಮೊದಲನೆಯ ಎರಡನ್ನು ಮಾತ್ರ ಒಪ್ಪಿಕೊಂಡು ಅವುಗಳಲ್ಲಿ ಉಳಿದವೆಲ್ಲಾ ಸೇರಿಹೋಗುತ್ತವೆಂದು ಅಭಿಪ್ರಾಯಪಡುತ್ತಾರೆ.

ಪ್ರಮಾಣಗಳಿಂದ ಜ್ಞಾನದ ಪರೀಕ್ಷೆ ನಡೆಯುವುದಕ್ಕೆ ಮುನ್ನ ಪ್ರಮಾಣಗಳ ಪರೀಕ್ಷೆ ನಡೆಯಬೇಕಾಗುತ್ತದೆ. ಅವನ್ನು ಪರೀಕ್ಷಿಸುವುದು ಹೇಗೆ? ಸಾಕ್ಷಿಗೆ ಸಾಕ್ಷಿಕೊಡುವುದೆಂತು? ಈ ವಿಚಾರದಲ್ಲಿ ಅತಿಸೂಕ್ಷ್ಮವಾದ ಬೌದ್ಧಿಕ ಚರ್ಚೆ ಇಲ್ಲಿ ಬರುತ್ತದೆ. ಪ್ರತ್ಯಕ್ಷ ಅನುಮಾನ ಮೊದಲಾದ ಪ್ರಮಾಣ ಲಕ್ಷಣಗಳನ್ನೂ ವ್ಯಾಪ್ತಿ ಮಿತಿಗಳನ್ನೂ ವಿವರಿಸಿ ಆಯಾ ಪ್ರಮಾಣಗಳಿಂದ ಪ್ರಮೆಯನ್ನು ಎಂದರೆ ಜ್ಞಾನವನ್ನು ಪಡೆಯುವ ಬಗೆಯನ್ನು ಸಾಧಿಸಿಕೊಂಡು ಹೋಗುವ ರೀತಿ ಅದ್ಭುತವಾದುದು. ಸೃಷ್ಟಿ, ಜೀವ, ಈಶ್ವರ, ಮೋಕ್ಷ ಮೊದಲಾದ ತತ್ತ್ವಗಳ ಸ್ವರೂಪನಿರ್ಣಯ ಇಲ್ಲಿ ಬರುತ್ತದೆ. ಕೊನೆಯ ಸತ್ಯದನಿರ್ಣಯ ಏನೇ ಇರಲಿ, ವಿಚಾರದ ಪ್ರಖರತೆಗೆ ಒಳ್ಳೆಯ ಸಾಕ್ಷಿ ಸಿಕ್ಕುತ್ತದೆ ಇಲ್ಲಿ.

ವಿಚಾರವಾದಕ್ಕೆ ನ್ಯಾಯಶಾಸ್ತ್ರ ಒಂದು ಒಳ್ಳೆಯ ತಳಹದಿಯಾಗಿ ಪರಿಣಮಿಸಿತು. ಹಿಂದುಪಂಡಿತರ ಪ್ರೌಢವ್ಯಾಸಂಗಗಳ ವಿಷಯದಲ್ಲಿ ನ್ಯಾಯ ಅಥವಾ ತರ್ಕ ಒಂದು ಅನಿವಾರ್ಯವಾದ ಅಂಗವಾಗಿ ಪರಿಣಮಿಸಿತು. ಕಾವ್ಯ, ನಾಟಕ, ಅಲಂಕಾರ, ತರ್ಕ, ವ್ಯಾಕರಣ–ಇವು ಪಾಂಡಿತ್ಯಕ್ಕೆ ಅಗತ್ಯವಾದ ಐದು ಅಂಗಗಳಾದುವು. ಮುಂದೆ ಯಾವುದೇ ವಿಶಿಷ್ಟವಾದ ವಿಷಯವನ್ನು ವ್ಯಾಸಂಗಕ್ಕಾಗಿ ಆರಿಸಿಕೊಂಡರೂ ಈ ಐದು ಶಾಸ್ತ್ರಗಳ ಹಿನ್ನೆಲೆ ಅಗತ್ಯವಾಗಿ ಇರಲೆಬೇಕೆಂಬ ಭಾವನೆ ಬೆಳೆದುಬಂದಿತು.

ಇನ್ನು ವೈಶೇಷಿಕ ದರ್ಶನ: ಇದನ್ನು ಪ್ರತಿಪಾದಿಸಿದವನು ಕಣಾದ. ಚಾರಿತ್ರಿಕ ದೃಷ್ಟಿಯಿಂದ ಇದು ನ್ಯಾಯದರ್ಶನಕ್ಕಿಂತ ಪ್ರಾಚೀನ. ಆದರೆ ಅಭ್ಯಾಸ ಕ್ರಮದಲ್ಲಿ ನ್ಯಾಯದರ್ಶನ ಮೊದಲು ಬರುತ್ತದೆ. ಅದಕ್ಕೆ ಕಾರಣವೂ ಉಂಟು. ವಸ್ತುವಿಗಿಂತ ವಸ್ತುವನ್ನು ಕುರಿತ ಜ್ಞಾನಕ್ಕೆ ಪ್ರಮುಖಸ್ಥಾನವನ್ನು ನೈಯಾಯಿಕರು ಕೊಟ್ಟರು. ನ್ಯಾಯಸಿದ್ಧಾಂತ ಜ್ಞಾನವನ್ನು ವಿಮರ್ಶಿಸಿದರೆ ವೈಶೇಷಿಕ ಸಿದ್ಧಾಂತ ಜ್ಞೇಯವಸ್ತುಗಳ ಲಕ್ಷಣವಿಮರ್ಶೆಗೆ ತೊಡಗುತ್ತದೆ. ವಸ್ತುಗಳ ಅಣುಸಂಯೋಜನೆಯ ಕ್ರಮವಿಶೇಷವನ್ನು ಅರಿಯುವ ಆಣವಕ ವಿಮರ್ಶೆಗೆ ಇಲ್ಲಿ ಹೆಚ್ಚು ಗಮನ. ನ್ಯಾಯವು ವಸ್ತುಗಳ ಸ್ವರೂಪವನ್ನು ತರ್ಕದಿಂದ ಅರಿಯಲು ಯತ್ನಿಸಿದರೆ ವೈಶೇಷಿಕವು ಅವುಗಳ ಸ್ಥೂಲ ಸ್ವರೂಪವನ್ನು ಅಣುವಿಭಜನೆಯಿಂದ ನಿರ್ಧರಿಸಲು ಹವಣಿಸುತ್ತದೆ. ಇವೆರಡೂ ಒಟ್ಟು

ಸೇರಿದಾಗ ಸತ್ಯದ ಅಂತರಂಗ ಬಹಿರಂಗ ಸ್ವರೂಪಗಳು ಪೂರ್ಣವಾಗಿ ಗೋಚರವಾಗುತ್ತವೆ. ಆದುದರಿಂದಲೇ ಮುಂದೆ ಬಂದವರು ಇವೆರಡನ್ನೂ ಒಂದಾಗಿ ಜೋಡಿಸಿದರು. ಆದರೂ ವೈಶೇಷಿಕ ತನ್ನದೇ ಆದ ಕೆಲವು ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಸ್ವತಂತ್ರ ದರ್ಶನವಾಗಿ ನಿಂತಿದೆ.

ವೈಶೇಷಿಕದರ್ಶನ ಹೆಚ್ಚು ವಿಭಜನಾತ್ಮಕವಾಗಿ ಸೃಷ್ಟಿಯ ವಸ್ತುಗಳನ್ನು ನೋಡುವಂತಹದು. ಆದುದರಿಂದ ಅದು ಹೆಚ್ಚು ವೈಜ್ಞಾನಿಕವಾದುದು. ಜಗತ್ತಿನ ಎಲ್ಲ ವಸ್ತುಗಳನ್ನೂ ಅನುಭವಗಳನ್ನೂ ವಿಭಜಿಸಿ ವಿಶ್ಲೇಷಿಸಿ ಸತ್ಯದ ಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನ ಅದರದು. ಬೌದ್ಧರ ಸಂದೇಹವಾದವನ್ನು ಇದು ಪ್ರತಿಭಟಿಸಿತು. ಬಹುಶಃ ಆ ಸಂದೇಹವಾದವೇ ಈ ದರ್ಶನದ ಪ್ರತಿಪಾದನೆಗೆ ಪ್ರಚೋದಕಶಕ್ತಿ ಇರಬಹುದು.

ಪ್ರತಿಯೊಂದು ವಸ್ತುವಿಗೂ ಅಸ್ತಿತ್ವ ಅಭಿಧೇಯತ್ವ ಜ್ಞೇಯತ್ವ—ಈ ಮೂರು ಅಂಶಗಳಿವೆ. ಎಂದರೆ ವಸ್ತು ಅಸ್ತಿತ್ವದಲ್ಲಿದೆ, ಅದನ್ನು ಅನುಭವಿಸಿ ತಿಳಿಯಬಹುದು, ಹೆಸರಿಸಬಹುದು. ಹೀಗೆ ಪದ ಮತ್ತು ಅರ್ಥಗಮ್ಯವಾದುವುಗಳೆಲ್ಲಾ 'ಪದಾರ್ಥ'ಗಳು. 'ಪದಾರ್ಥ'ಗಳೆಂದರೆ ಕೇವಲ ಭೌತಿಕವಾದ ವಸ್ತುಗಳು ಮಾತ್ರವಲ್ಲ "ಪ್ರಮಿತಿವಿಷಯಃ ಪದಾರ್ಥಃ" ಎಂಬ ಮಾತು 'ಸಪ್ತಪಾದಾರ್ಥಿ'ಯಲ್ಲಿ ಬರುತ್ತದೆ.

ವೈಶೇಷಿಕವು ಪದಾರ್ಥಗಳನ್ನು ಆರು ಬಗೆಯಾಗಿ ವಿಂಗಡಿಸುತ್ತದೆ : ದ್ರವ್ಯ (substance), ಗುಣ (quality), ಕರ್ಮ (activity), ಸಾಮಾನ್ಯ (generality), ವಿಶೇಷ (particularity) ಮತ್ತು ಸಮವಾಯ (inherance). ಇವುಗಳಲ್ಲದೆ 'ಅಭಾವ' (nonexistence) ಎಂಬ ಸಪ್ತಮ ಪದಾರ್ಥವನ್ನು ಈಚೆಗೆ ವೈಶೇಷಿಕರು ಸೇರಿಸಿದ್ದಾರೆ. ಈ ಸಪ್ತಪದಾರ್ಥಗಳ ವಿವೇಚನೆ ವಿವರಣೆಗಳು ವೈಶೇಷಿಕ ಸಿದ್ಧಾಂತದಲ್ಲಿ ಬಹುದೀರ್ಘವಾಗಿ ಬರುತ್ತವೆ. ಆದರೆ ಅವುಗಳ ವಿವರಗಳಿಗೆ ಹೋಗದೆ, ಒಟ್ಟಿನಲ್ಲಿ ನ್ಯಾಯ ವೈಶೇಷಿಕ ದರ್ಶನಗಳ ಸಾರವನ್ನು ಹೀಗೆ ಸಂಗ್ರಹಿಸಬಹುದು :

ಯಥಾರ್ಥಜ್ಞಾನಕ್ಕೆ ವಿಷಯವಾದ ಪದಾರ್ಥಗಳೆಲ್ಲವೂ ಸತ್ಯವಾದವು. ಅದಕ್ಕೆ ಜ್ಞಾನವೇ ಪ್ರಮಾಣ. ಜ್ಞಾನದಲ್ಲಿ ಕಂಡುಬರುವ ಪ್ರಭೇದಕ್ಕನುಸಾರವಾಗಿ ವಸ್ತುವಿನಲ್ಲಿಯೂ ಪ್ರಭೇದಗಳಾಗುತ್ತವೆ. ಉದಾಹರಣೆಗಾಗಿ 'ಘಟ' ಅಥವಾ 'ಕುಂಭ' ಎಂಬ ವಸ್ತುವನ್ನು ತೆಗೆದುಕೊಳ್ಳಬಹುದು. ಮೇಲೆ ಹೇಳಿದ ಸಪ್ತ ಪದಾರ್ಥಗಳ ದೃಷ್ಟಿಯಿಂದ ಅದರ ವಿಷಯವಾಗಿ ನಾವು ಪಡೆಯುವ ಜ್ಞಾನ ಬೇರೆ ಬೇರೆಯಾಗಿ ಪರಿಣಮಿಸುತ್ತದೆ. ಒಟ್ಟು ಘಟ ಒಂದು ದ್ರವ್ಯವೆಂದು ತೆಗೆದುಕೊಂಡಾಗ ಅದರಲ್ಲಿಯೇ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಸಂಬಂಧವಾದ ಜ್ಞಾನಕ್ಕೂ ಇತರ ವಸ್ತುಗಳಿಗಿರುವ ಭೇದ ಮೊದಲಾದ ಅಭಾವದ ಜ್ಞಾನಕ್ಕೂ ಅಂತರವಿದೆ. ಘಟವೆಂಬ ಒಂದು ವಸ್ತುವಿನಲ್ಲಿಯೇ ಈ ರೀತಿ ಪದಾರ್ಥಭೇದಗಳಿವೆ ಎಂದು ತಿಳಿಯಬಹುದು.

ಮೇಲೆ ಹೇಳಿದ ಈ ಸಪ್ತಪದಾರ್ಥಗಳು ಪ್ರತ್ಯಕ್ಷ ಅನುಮಾನ ಉಪಮಾನ ಮತ್ತು ಶಬ್ದವೆಂಬ ಪ್ರಮಾಣಗಳ ಸಹಾಯದಿಂದ ಗೋಚರವಾಗುತ್ತವೆ. ಈ ಪ್ರಮಾಣಗಳ

ಮೂಲಕ ಅವುಗಳಿಂದ ಉತ್ಪನ್ನವಾದ ಜ್ಞಾನ ಪ್ರಮಿತಿ ಆತ್ಮನು ದ್ರವ್ಯರೂಪ ನಾದವನು. ಇವನಲ್ಲಿ ಜ್ಞಾನಾದಿ ಗುಣಗಳಿರುತ್ತವೆ. ನಿತ್ಯ ಅನಿತ್ಯ ವಸ್ತುಗಳ ವಿವೇಕ ಜ್ಞಾನದಿಂದ ಆತ್ಮನ ದುಃಖ ನಿವೃತ್ತಿಯಾಗುತ್ತದೆ. ಇದೇ ಮೋಕ್ಷ. ಈಶ್ವರನ ಅಸ್ತಿತ್ವ ಸತ್ಯವಾದುದು. ಪ್ರತ್ಯಕ್ಷ ಅನುಮಾನಾದಿ ಪ್ರಮಾಣಗಳಿಂದ ಚಾರ್ವಾಕ ಬೌದ್ಧ ದರ್ಶನಗಳು ಭಗವದಸ್ತಿತ್ವವನ್ನು ನಿರಾಕರಿಸುವುದು ಸರಿಯಲ್ಲ. ಅದು ಯುಕ್ತಿಯುಕ್ತ ವಲ್ಲ. 'ಸೃಷ್ಟಿ' ಎಂಬ ಮಹತ್ಕಾರ್ಯಕ್ಕೆ ಈಶ್ವರನೊಬ್ಬನಿದ್ದೇ ತೀರಬೇಕು. ಆದರೆ ಮೋಕ್ಷಕ್ಕೆ ಅವನ ಅನುಗ್ರಹ ಅವಶ್ಯಕವಿಲ್ಲ. ಆತ್ಮನ ಕರ್ತವ್ಯಕರ್ಮದ ಫಲವಾಗಿ ಮೋಕ್ಷ ಸ್ಥಿತಿ ಲಭಿಸುತ್ತದೆ. ಅದು ಈಶ್ವರನಿಂದ ದತ್ತವಾದುದಲ್ಲ, ಆತ್ಮನಿಂದ ಅರ್ಜಿತವಾದುದು. ಆತ್ಮಗಳು ಅನೇಕವೂ ಅನಂತವೂ ಆಗಿವೆ. ಇವುಗಳಲ್ಲದೆ ಜಗದ್ವ್ಯವಹಾರ ನಿಯಂತ್ರಣ ಕರ್ತನಾದ ಪರಮಾತ್ಮನೂ ಒಬ್ಬನಿದ್ದಾನೆ. ಈ ಮೊದಲಾದ ಅಂಶಗಳನ್ನು ನ್ಯಾಯ ವೈಶೇಷಿಕಗಳು ಪ್ರತಿಪಾದಿಸುತ್ತವೆ.

ಸಾಂಖ್ಯ ಯೋಗದರ್ಶನಗಳು ಇವುಗಳಿಗಿಂತ ಒಂದು ಹೆಜ್ಜೆ ಮುಂದೆಹೋಗಿರುವುದನ್ನು ಕಾಣುತ್ತೇವೆ. ಸಾಂಖ್ಯಸಿದ್ಧಾಂತ ವಿಚಾರವಾದದಲ್ಲಿ ಒಂದು ಹೊಸ ಜಾಡನ್ನು ನಿರ್ಮಿಸಿತು. ಸೃಷ್ಟಿನಿರ್ಮಾಣ ಕ್ರಮದಲ್ಲಿ ಮತ್ತು ಅವಕ್ಕೆ ಕಾರಣವಾದ ತತ್ತ್ವಗಳ ಸಂಖ್ಯಾ ನಿರ್ಣಯದಲ್ಲಿ ತನ್ನದೇ ಆದ ಹೊಸ ದೃಷ್ಟಿಯನ್ನು ಇದು ವ್ಯಕ್ತಪಡಿಸಿತು. 'ಸಾಂಖ್ಯ' ಎಂಬ ಹೆಸರು 'ಸಂಖ್ಯೆ' ಎಂಬ ಶಬ್ದದಿಂದಾದುದು. 'ಸಂಖ್ಯೆ' ಎಂದರೆ ಚರ್ಚೆ ವಿಚಾರಣೆ ಎಣಿಕೆ. ಸೃಷ್ಟಿಗೆ ಕಾರಣವಾದ ತತ್ತ್ವಗಳನ್ನು ಎಣಿಸಿ ವಿಂಗಡಿಸಿ ಅವುಗಳ ಸ್ವರೂಪವನ್ನು ನಿರ್ಣಯಿಸುತ್ತದೆ ಸಾಂಖ್ಯಶಾಸ್ತ್ರ. "ಸಂಖ್ಯಾ ಚರ್ಚಾವಿಚಾರಣಾ" ಎಂಬ ಮಾತಿನಲ್ಲಿ ಅದರ ಅರ್ಥವನ್ನು ಕಾಣುತ್ತೇವೆ. ಅಲ್ಲದೆ "ಶುದ್ಧಾತ್ಮತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ" ಎಂಬುದಾಗಿಯೂ ಅದರ ನಿರ್ವಚನವನ್ನು ಹೇಳಿದೆ.

> ದೋಷಾಣಾಂ ಚ ಗುಣಾನಾಂ ಚ ಪ್ರಮಾಣಾನಾಂ ವಿಭಾಗತಃ ।
> ಕಂಚಿದರ್ಥಂ ಅಭಿಪ್ರೇಕ್ಷ್ಯ ಸಾ ಸಾಂಖ್ಯೇತಿ ಉಪಧಾರ್ಯತಾಂ ॥

ಇಂಥ ಮಾತುಗಳನ್ನು ನೋಡಿದರೆ 'ಸಾಂಖ್ಯ' ಎಂಬುದು ಕೇವಲ ಅಂಕೆಗಳ ಎಣಿಕೆಯನ್ನು ಕುರಿತದ್ದಲ್ಲ, ತಾತ್ತ್ವಿಕ ವಿಚಾರವಿಮರ್ಶೆಯನ್ನು ಕುರಿತದ್ದು—ಎಂಬುದು ವಿಶದ ಪಡುತ್ತದೆ. ಇದರಿಂದ 'ಸಾಂಖ್ಯ' ಶಬ್ದದ ಉದ್ದೇಶವೂ ವ್ಯಾಪ್ತಿಯೂ ಸ್ಪಷ್ಟವಾಗುತ್ತವೆ.

ಕಪಿಲನು ಸಾಂಖ್ಯತತ್ತ್ವ ಪ್ರವರ್ತಕನೆಂದು ನಂಬಲಾಗಿದೆ. ಬುದ್ಧನಿಗಿಂತ ಒಂದು ಶತಮಾನ ಹಿಂದೆ ಈತನು ಇದ್ದವನೆಂದು ಹೇಳಲು ಅವಕಾಶವಿದೆ.[೩೮] ಆದುದರಿಂದ ಬೌದ್ಧ ಧರ್ಮ ಪ್ರಭಾವ ಸಾಂಖ್ಯತತ್ತ್ವ ರೂಪುಗೊಳ್ಳಲು ಕಾರಣವಾಯಿತೆಂದು ಕೆಲವರು ಹೇಳುವ ಅಭಿಪ್ರಾಯ ಸರಿಯೆಂದು ತೋರುವುದಿಲ್ಲ. 'ಸಾಂಖ್ಯಪ್ರವಚನ ಸೂತ್ರ' ಮತ್ತು 'ತತ್ತ್ವಸಮಾಸ'ಗಳು ಕಪಿಲನ ಕೃತಿಗಳೆಂದು ಪರಂಪರೆಯಿದೆ. ಅವನ್ನು ಬಿಟ್ಟರೆ ಈಶ್ವರ ಕೃಷ್ಣನ 'ಸಾಂಖ್ಯಕಾರಿಕ'ವೇ ಈ ದರ್ಶನದ ಪ್ರಮುಖ ಗ್ರಂಥ. ಇದು ಕ್ರಿ.ಶ. ಸು. ೩ನೆಯ ಶತಮಾನದ ಕೃತಿ. ಇದಕ್ಕೆ ಗೌಡಪಾದರು (ಕ್ರಿ.ಶ. ೮ನೆಯ ಶತಮಾನ)

ವ್ಯಾಖ್ಯಾನ ಬರೆದಿದ್ದಾರೆ. ಕ್ರಿ.ಶ. ೯ನೆಯ ಶತಮಾನದ ವಾಚಸ್ಪತಿಯ "ಸಾಂಖ್ಯತತ್ತ್ವ ಕೌಮುದೀ" ಇದನ್ನು ಪ್ರತಿಪಾದಿಸುವ ಇನ್ನೊಂದು ಮುಖ್ಯ ಗ್ರಂಥ.

ಸಾಂಖ್ಯರ ಪ್ರಕಾರ ಸೃಷ್ಟಿ ಸತ್ಯವಾದುದು, ಚೇತನಾಚೇತನಾತ್ಮಕವಾದುದು. ಇಪ್ಪತ್ತೈದು ತತ್ತ್ವಗಳಿಂದ ಅದು ಸಮನ್ವಿತವಾಗಿದೆ. ಕಾರಣ (cause) ಮತ್ತು ಕಾರ್ಯ (effect)ಗಳ ಪರಸ್ಪರ ಅವಿನಾಸಂಬಂಧವನ್ನು ಸಾಂಖ್ಯಸಿದ್ಧಾಂತ ಹೇಳುತ್ತದೆ. ಕಾರ್ಯವು ತಾನು ವ್ಯಕ್ತವಾಗುವುದಕ್ಕೆ ಮುನ್ನವೇ ಕಾರಣದಲ್ಲಿ ಅಂತರ್ನಿಹಿತವಾಗಿದೆ—ಎನ್ನುವುದೇ ಇದರ ತಿರುಳು. ಕಾರಣ ಮತ್ತು ಅದರ ಫಲವಾದ ಕಾರ್ಯಗಳೆರಡೂ ಸ್ವರೂಪದಲ್ಲಿ ಒಂದೇ. ಮೂಲತಃ ಸಂಪೂರ್ಣ ವಿಭಿನ್ನವಾದ ವಸ್ತುಗಳಲ್ಲಿ ಕಾರ್ಯ ಕಾರಣಸಂಬಂಧವಿರಲಾರದು. ಎಂದರೆ ಕೆಲವರು ಹೇಳುವಂತೆ ಅಸದ್ರೂಪದಿಂದ ಸದ್ರೂಪ ವಾಗಲಿ ಅಥವಾ ಸದ್ರೂಪದಿಂದ ಅಸದ್ರೂಪ ಜಗತ್ತಾಗಲಿ ಹುಟ್ಟಲಾರದು. ಸತ್ಪದಾ ರ್ಥದ ಕಾರಣದಿಂದ ಸದ್ರೂಪಕಾರ್ಯ, ಎಂದರೆ ಈ ಸೃಷ್ಟಿ ನಿರ್ಮಿತವಾಗಿದೆ—ಎನ್ನುತ್ತದೆ ಸಾಂಖ್ಯ. ಇದನ್ನು 'ಸತ್ಕಾರ್ಯವಾದ' ಎಂದು ಕರೆದಿದ್ದಾರೆ. ಇದರ ಪ್ರಕಾರ 'ಕಾರಣ' 'ಕಾರ್ಯ'ಗಳೆರಡೂ ಒಂದೇ ಸದ್ರೂಪವಸ್ತುವಿನ ಅವ್ಯಕ್ತ ಮತ್ತು ವ್ಯಕ್ತ ರೂಪಗಳು. 'ಕಾರಣ'ದ ಫಲವಾಗಿ ಕಾರ್ಯರೂಪವಾದ ಸೃಷ್ಟಿ 'ಉದ್ಭವ'ವಾಗುತ್ತದೆ. ಪುನಃ ಕಾರ್ಯವು ಕಾರಣದಲ್ಲಿ ಅಡಗಿದಾಗ ಸೃಷ್ಟಿ ಅಡಗುತ್ತದೆ. ಇದನ್ನು 'ಅನುದ್ಭವ' ಸ್ಥಿತಿಯೆಂದು ಕರೆಯಬಹುದು. ಸೃಷ್ಟಿಗೆ ವಿನಾಶವೆಂಬುದಿಲ್ಲ. 'ಆವಿರ್ಭಾವ' 'ತಿರೋಭಾವ' ಕ್ರಿಯೆ ಗಳು ಕಾರ್ಯಕಾರಣಸಂಬಂಧದಿಂದ ನಡೆಯುತ್ತಿರುತ್ತವೆ.

ಈ ಸೃಷ್ಟಿಗೆ ಮೂಲಭೂತ ಕಾರಣ ಪ್ರಕೃತಿ. ಇದಕ್ಕೆ ಕಾರಣವಾದುದು ಇನ್ನಾವುದೂ ಇಲ್ಲ. ಸೃಷ್ಟಿಯೆಲ್ಲಾ ಇದರ ಕಾರ್ಯ. ಇದು ಅನಾದಿ ಅನಂತ. ಇಂತಹುದೇ ಇನ್ನೊಂದು ತತ್ತ್ವವನ್ನು ಸಾಂಖ್ಯಸಿದ್ಧಾಂತ ಇಲ್ಲಿ ತರುತ್ತದೆ. ಅದು ಪುರುಷ. ಪ್ರಕೃತಿ ಮತ್ತು ಪುರುಷ–ಇವೆರಡೂ ಸಮಾನಾಂತರವಾದ ತತ್ತ್ವಗಳು. ಚೈತನ್ಯರೂಪಿ ಯಾದ ಪುರುಷನ ಸಾನ್ನಿಧ್ಯದಲ್ಲಿ ಪ್ರಕೃತಿ ಅನಂತರೂಪಗಳನ್ನು ಧರಿಸುತ್ತದೆ. ಪ್ರಕೃತಿ ತ್ರಿಗುಣಾತ್ಮಕವಾದುದು. ಸತ್ತ್ವರಜಸ್ತಮೋಗುಣಗಳು ಪ್ರಕೃತಿಯನ್ನು ವಿಕ್ಷೋಭ ಗೊಳಿಸಿ ಸೃಷ್ಟಿಯ ಬಹುರೂಪಧಾರಣೆಗೆ ಕಾರಣವಾಗುತ್ತವೆ.

ಪ್ರಕೃತಿಯ ಸಂಗದಿಂದ ಪುರುಷ ಬಂಧಿತನಾಗುತ್ತಾನೆ. ಪ್ರಕೃತಿಯಂತೆ ಪುರುಷರೂ ಅನಾದಿ ಅನಂತರಾದವರು. ಇವರು ಪ್ರಕೃತಿಯ ಹಿಡಿತಕ್ಕೆ ಸಿಕ್ಕಿರುವವರೆಗೂ ಬಂಧನಕ್ಕೆ ಒಳಗಾಗಿರುತ್ತಾರೆ. ಪ್ರಕೃತಿಯ ಸಂಸರ್ಗದಿಂದ ದೂರ ಸರಿದು ನಿಸ್ಸಂಗಿ ಯಾಗುವುದೇ ಬಂಧನದಿಂದ ಬಿಡುಗಡೆಯನ್ನು ಪಡೆದಂತೆ. ಇದನ್ನು 'ಮುಕ್ತಿ' ಎಂದು ಕರೆಯಬಹುದು. ಪ್ರಕೃತಿ ಒಬ್ಬ ನರ್ತಕಿ, ಪುರುಷ ಅದರ ಪ್ರೇಕ್ಷಕ—ಎಂಬ ಸಾದೃಶ್ಯ ವನ್ನು ಸಾಂಖ್ಯರು ಕೊಡುವುದುಂಟು. ಪುರುಷನು ನರ್ತಕಿಯನ್ನು ನೋಡುತ್ತಿರುವ ವರೆಗೂ ಆಕೆಯ ನರ್ತನ ಸಾಗುತ್ತದೆ. ಒಬ್ಬ ಪುರುಷ ಆಕೆಯ ನರ್ತನದ ಆಕರ್ಷಣೆ ಯಿಂದ ತಪ್ಪಿಸಿಕೊಂಡರೆ ಅವನ ಪಾಲಿಗೆ ಆ ನರ್ತನ ನಿಂತಂತೆ. ಆದರೆ ಇನ್ನೂ ಅನೇಕ

ಪುರುಷರು ಅದಕ್ಕೆ ಒಳಗಾಗಿ ಇದ್ದೇ ಇರುವುದರಿಂದ ಪ್ರಕೃತಿಯ ನರ್ತನ ಅವ್ಯಾಹತವಾಗಿ ನಡೆದೇ ಇರುತ್ತದೆ.

ಪ್ರಕೃತಿ ಮತ್ತು ಪುರುಷ ಸ್ವಭಾವತಃ ವಿರುದ್ಧವಾದುವು. ಪ್ರಕೃತಿ ಅಚೇತನ, ಪುರುಷ ಸಚೇತನ; ಪ್ರಕೃತಿ ಚಲನಾತ್ಮಕ, ಕರ್ತವ್ಯಮುಖಿ; ಪುರುಷ ನಿರಂಜನ, ಅಕರ್ತ. ಪ್ರಕೃತಿ ತ್ರಿಗುಣಾತ್ಮಕ, ಪುರುಷ ತ್ರಿಗುಣಾತೀತ—ಎಂದು ಮುಂತಾಗಿ ಪ್ರಕೃತಿ ಪುರುಷರ ವೈವಿಧ್ಯಗಳ ವರ್ಣನೆ ಬರುತ್ತದೆ. ಉಪನಿಷತ್ತುಗಳ 'ಆತ್ಮ'ದ ಕಲ್ಪನೆ ಇಲ್ಲಿ ಪುರುಷ ರೂಪದಲ್ಲಿ ಮೂಡಿ ನಿಂತಿದೆಯೆನ್ನಬಹುದು.

ಪ್ರಕೃತಿಯ ಬಂಧನಕ್ಕೆ ಸಿಕ್ಕಾಗಲೇ ಪುರುಷ ಈ ಜಗತ್ತಿನಲ್ಲಿ ಜನ್ಮವೆತ್ತಿ ಇದರಲ್ಲಿ ಭಾಗಿಯಾಗಬೇಕಾಗುತ್ತದೆ. ಇಪ್ಪತ್ತೈದು ತತ್ತ್ವಗಳನ್ನು ಸಾಂಖ್ಯ ಹೇಳುತ್ತದೆ: ಪ್ರಕೃತಿ, ಮಹತ್ತು, ಅಹಂಕಾರ, ಪಂಚತನ್ಮಾತ್ರಗಳು, ಮನಸ್ಸು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಭೂತಗಳು ಮತ್ತು ಪುರುಷ. ಇವನ್ನು ಮತ್ತೆ ಐದು ಭಾಗಗಳಾಗಿ ವಿಭಾಗಿಸುವುದುಂಟು: ಭೂತಪಂಚಕ, ತನ್ಮಾತ್ರಪಂಚಕ, ಜ್ಞಾನೇಂದ್ರಿಯ ಪಂಚಕ ಮತ್ತು ಅವಿಶಿಷ್ಟ ಪಂಚಕ. ಇವುಗಳಲ್ಲಿ ಪುರುಷನನ್ನು ಬಿಟ್ಟರೆ ಮೂಲ ಪ್ರಕೃತಿಯೇ ಮೊದಲನೆಯ ತತ್ತ್ವ. ಮುಂದೆ ಕಾರ್ಯರೂಪದಲ್ಲಿ ತೋರಿಬರುವ ಎಲ್ಲ ಸ್ವಭಾವಗಳ ಮೂಲ, ಪ್ರಕೃತಿಯಲ್ಲಿದೆ. ಈ ಪ್ರಕೃತಿಯಿಂದ ಬುದ್ಧಿ ಎಂಬ ಮಹತ್ತತ್ತ್ವವು ಹುಟ್ಟುವುದು. ಆ ಬುದ್ಧಿ ಎಂಬ ಸಮುದ್ರದಲ್ಲಿ ಅಹಂಕಾರವೆಂಬ ಮೂರನೆಯ ತತ್ತ್ವ ಹೊರಬೀಳುವುದು. ಅದು ಸಾತ್ತ್ವಿಕ ರಾಜಸ ತಾಮಸ ಎಂದು ಮೂರು ವಿಧ. ಸಾತ್ತ್ವಿಕ ಅಹಂಕಾರದಿಂದ ಮನಸ್ಸು ಸೇರಿ ಹನ್ನೊಂದು ಇಂದ್ರಿಯಗಳು ಹುಟ್ಟುತ್ತವೆ. ತಾಮಸ ಅಹಂಕಾರದಿಂದ ಪಂಚತನ್ಮಾತ್ರಗಳೂ ಅವುಗಳಿಂದ ಪಂಚಭೂತಗಳೂ ಹುಟ್ಟುವುವು. ರಾಜಸ ಅಹಂಕಾರವು ಸಾತ್ತ್ವಿಕ ಮತ್ತು ತಾಮಸ ಅಹಂಕಾರಗಳಿಗೆ ಈ ವಿಷಯದಲ್ಲಿ ನೆರವಾಗುತ್ತದೆ. ಹೀಗೆ ಪ್ರಕೃತಿತತ್ತ್ವದಿಂದ ಸೃಷ್ಟಿ ವಿಕಾಸಗೊಳ್ಳುತ್ತದೆ.

ಈ ಸೃಷ್ಟಿನಿರ್ಮಾಣಕ್ಕೆ ಬೇರೊಬ್ಬ ಈಶ್ವರನನ್ನು ಕಲ್ಪಿಸುವ ಅವಶ್ಯಕತೆ ಸಾಂಖ್ಯ ಶಾಸ್ತ್ರಕ್ಕೆ ಕಂಡಿಲ್ಲ. ಪ್ರಕೃತಿಯಲ್ಲಿ ಲೀನವಾಗಿರುವ ಪುರುಷತತ್ತ್ವವೇ ಸೃಷ್ಟಿಗೆ ಕಾರಣವಾಗುತ್ತದೆ: "ಪ್ರಕೃತಿ ಲೀನಸ್ಯ ಜನ್ಯೇಶ್ವರಸ್ಯ ಸಿದ್ಧಿಃ" ಎಂಬ ಮಾತು ಬರುತ್ತದೆ. ಪುರುಷರು ಪ್ರಕೃತಿ ಸಂಸರ್ಗಕ್ಕೆ ಒಳಗಾಗಿ ಸರ್ವವಿದರೂ ಸರ್ವಕರ್ತರೂ ಆಗಿ ಪರಿಣಮಿಸುತ್ತಾರೆ. ಆದುದರಿಂದ ಬೇರೊಬ್ಬ ದೇವನ ಅಸ್ತಿತ್ವವನ್ನು ಅವರು ಹೇಳಬೇಕಾಗಿ ಬರಲಿಲ್ಲ. ಒಂದು ವೇಳೆ ಈಶ್ವರನೊಬ್ಬನಿರುವನೆಂದೂ ಅವನಿಂದ ಸೃಷ್ಟಿಯಾಯಿತೆಂದೂ ನಂಬಿದರೆ ಯಾವ ಕೊರತೆಯನ್ನು ನೀಗಿಕೊಳ್ಳುವುದಕ್ಕಾಗಿ ಈಶ್ವರ ಸೃಷ್ಟಿಯನ್ನು ಮಾಡಿದನೆಂಬ ಪ್ರಶ್ನೆ ಬರುತ್ತದೆ. ಅವನಲ್ಲಿ ಕೊರತೆ ಇದ್ದರೆ ಈಶ್ವರನೆಂಬ ಹೆಸರಿಗೆ ಆತ ಯೋಗ್ಯನಾಗುವುದಿಲ್ಲ. ಸುಖದುಃಖಾತ್ಮಕವಾಗಿರುವ ಈ ಸೃಷ್ಟಿಯ ಪ್ರಯೋಜನ ಯಾರಿಗೆ? ಯಾರಿಗೂ ಪ್ರಯೋಜನವಿಲ್ಲವೆಂದರೆ ಅದನ್ನು ಸೃಷ್ಟಿಸಿದ ಪ್ರಭು ಅಪ್ರಯೋಜಕನಾಗುತ್ತಾನೆ. ಈ ಮೊದಲಾದ ತರ್ಕಗಳನ್ನೊಡ್ಡಿ ಈಶ್ವರನನ್ನೇ ತೆಗೆದುಹಾಕಿತು ಸಾಂಖ್ಯ. ಈ ವಾದ

ಹೊಸ ಹಾದಿಯೊಂದನ್ನೇನೋ ಹಾಕಿಕೊಟ್ಟಿತು ನಿಜ. ಆದರೆ ಅದು ವಿಚಾರದ ಒರೆಗಲ್ಲಿಗೆ ನಿಲ್ಲುವಂತಿರಲಿಲ್ಲ. ಅವರು ಕೊಡುವ ಉಪಮಾನಗಳೂ ದೃಷ್ಟಾಂತ ಕಥೆಗಳೂ ವಾದದ ಸಮರ್ಥನೆಗೆ ಸಹಾಯಕವಾಗುವುದರ ಬದಲು ವಿಷಯವನ್ನು ಇನ್ನೂ ತೊಡಕುಗೊಳಿಸಿದುವು. ಈ ಕೊರತೆಯನ್ನು ಹೋಗಲಾಡಿಸಿ ಇನ್ನೂ ಹೆಚ್ಚು ಸಮರ್ಥವಾದ ರೀತಿಯಲ್ಲಿ ಅನುಭವದ ಪ್ರಾಮಾಣಿಕ ನಿದರ್ಶನಗಳನ್ನು ತಾತ್ತ್ವಿಕವಾಗಿ ರೂಪಿಸಲು ಹೊರಟಿತು. ಯೋಗದರ್ಶನ.

ಪತಂಜಲಿಯ 'ಯೋಗಸೂತ್ರ'ವೇ ಯೋಗಶಾಸ್ತ್ರದ ಅತಿಪ್ರಾಚೀನ ಗ್ರಂಥ ಯೋಗದರ್ಶನದ ಮೂಲ ಅಂಶಗಳು ಉಪನಿಷತ್ತು ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾಗಿದ್ದ ತತ್ತ್ವಗಳೇ. ಈ ಮಾರ್ಗದ ಪ್ರವರ್ತಕ ಹಿರಣಗರ್ಭನೆಂದು ಪ್ರತೀತಿಯೂ ಇದೆ. ಆದರೆ ಅದಕ್ಕೊಂದು ನಿರ್ದಿಷ್ಟರೂಪ ಕೊಟ್ಟು, ಅದನ್ನು ಸೂತ್ರಗಳ ರೂಪದಲ್ಲಿ ಮೊತ್ತಮೊದಲು ವ್ಯವಸ್ಥಿತವಾಗಿ ಪ್ರತಿಪಾದಿಸಿದವನು ಪತಂಜಲಿ. ವ್ಯಾಕರಣಕಾರ ಪತಂಜಲಿ ಮತ್ತು ಇವನು ಏಕವ್ಯಕ್ತಿಗಳಾಗಿದ್ದರೆ ಇವನ ಕಾಲ ಕ್ರಿ.ಪೂ. ೨ನೆಯ ಶತಮಾನವೆಂದು ಭಾವಿಸಬಹುದು. ಕ್ರಿ.ಪೂ. ಸು. ೧೪೬ರ ವೇಳೆಗೆ ಯೋಗಸೂತ್ರಗಳು ರಚಿತವಾದುವೆಂಬ ಅಭಿಪ್ರಾಯಕ್ಕೆ ಈಗ ಬರಲಾಗಿದೆ. ಇವುಗಳಿಗೆ ವ್ಯಾಸರಚಿತವಾದ (ಕ್ರಿ.ಶ. ೪ನೆಯ ಶ.) ಭಾಷ್ಯ ದೊರೆತಿದೆ. ಈ ಭಾಷ್ಯಕ್ಕೆ ವಾಚಸ್ಪತಿ ಮಿಶ್ರ, ವಿಜ್ಞಾನ ಭಿಕ್ಷು ಮೊದಲಾದವರು ರಚಿಸಿದ ಟೀಕೆ ಟಿಪ್ಪಣಿಗಳು ದೊರೆತಿವೆ. ಇವಲ್ಲದೆ ಯೋಗದ ಅನುಭವ ಮತ್ತು ಪ್ರಯೋಗಗಳನ್ನು ತಿಳಿಸುವ 'ಹಠಯೋಗ ಪ್ರದೀಪಿಕಾ', 'ಯೋಗ ತಾರಾವಳಿ', 'ಯೋಗ ಚಿಂತಾಮಣಿ' ಮೊದಲಾದ ಅನೇಕ ಗ್ರಂಥಗಳು ರಚಿತವಾಗಿವೆ. ಇಷ್ಟಾದರೂ ಯೋಗಾಭ್ಯಾಸದ ಕ್ರಮ ಗ್ರಂಥಗಳಿಗೆ ಅತೀತವಾಗಿ ಪ್ರತ್ಯಕ್ಷ ಗುರೂಪದೇಶದಿಂದ ಗ್ರಹಿಸಬೇಕಾದ ಅನುಭಾವವಿದ್ಯೆಯಾಗಿ ಉಳಿದಿದೆ.

ತಾತ್ತ್ವಿಕ ದೃಷ್ಟಿಯಿಂದ ನೋಡುವುದಾದರೆ ಸಾಂಖ್ಯದರ್ಶನ ಎಲ್ಲಿ ನಿಂತಿತೋ ಅಲ್ಲಿಂದ ಮುಂದೆ ಯೋಗದರ್ಶನ ಬೆಳೆದಿದೆ. ಒಂದಾಗಿದ್ದುದ್ದು ಅನೇಕವಾದ ಬಗೆಯನ್ನು ವಿವರಿಸುವುದು ಸಾಂಖ್ಯರ ಗುರಿಯಾದರೆ, ಈ ಅನಂತರೂಪವಾದ ಸೃಷ್ಟಿಯೆಲ್ಲವೂ ಒಂದು ವಸ್ತುವಿನಲ್ಲಿ ಕೂಡುವುದೆಂಬುದನ್ನು ಪರಾಮರ್ಶಿಸುವುದು ಯೋಗದ ಗುರಿ. ಪ್ರಕೃತಿಯಿಂದ ನಿಸ್ಸಂಗಿಯಾಗಿರುವುದೇ ಮುಕ್ತಿ ಎನ್ನುತ್ತದೆ ಸಾಂಖ್ಯ. ಆದರೆ ಯೋಗ ಕಾಣುವ ಮೋಕ್ಷದ ಕಲ್ಪನೆಯೇ ಬೇರೆ ಬಗೆಯದು. ಸಾಂಖ್ಯ ಒಪ್ಪದೇ ಇರುವ 'ಈಶ್ವರ' ತತ್ತ್ವದ ಕಲ್ಪನೆಯನ್ನು ಇದು ಅಂಗೀಕರಿಸುತ್ತದೆ. ಸಾಂಖ್ಯ ಸಿದ್ಧಾಂತದ ೨೫ ತತ್ತ್ವಗಳನ್ನು 'ಯೋಗಸೂತ್ರ' ಒಪ್ಪಿದರೂ ಈಶ್ವರನೆಂಬ ೨೬ನೆಯ ತತ್ತ್ವವನ್ನು ಹೊಸದಾಗಿ ಸೇರಿಸಿಕೊಳ್ಳುತ್ತದೆ. ಅವರು 'ಮಹತ್' ಎಂದು ಕರೆಯುವುದನ್ನೇ ಇದು 'ಚಿತ್ತ' ಎಂದು ಕರೆಯುತ್ತದೆ. ಪ್ರಕೃತಿಯಿಂದ ಹೊರಹೊಮ್ಮುವ ಮೊತ್ತಮೊದಲನೆಯ ತತ್ತ್ವ ಇದು. ಪ್ರಕೃತಿಗಿಂತ ಹಿಂದೆ ಪುರುಷತತ್ತ್ವ, ಅದಕ್ಕೂ ಹಿಂದೆ ಈಶ್ವರ ತತ್ತ್ವ. ಹೀಗೆ ಸಾಂಖ್ಯರ ವಿಭಜನೆಯನ್ನೇ ಒಪ್ಪಿ ಜೊತೆಗೆ ಈಶ್ವರನನ್ನೂ ಸೇರಿಸಿಕೊಳ್ಳುವುದರಿಂದ

ಇದನ್ನು 'ಸೇಶ್ವರ ಸಾಂಖ್ಯ' ಎಂದೂ ಕರೆಯುವುದುಂಟು.

ಇದಕ್ಕನುಗುಣವಾಗಿ ಇವರ ಮೋಕ್ಷದ ಕಲ್ಪನೆಯೂ ಬದಲಾಯಿತು. ಸಾಂಖ್ಯರಂತೆ ಪುರುಷನು ಪ್ರಕೃತಿಯಿಂದ ವಿಮುಕ್ತನಾಗುವುದೇ ಮೋಕ್ಷವೆನ್ನುವುದಿಲ್ಲ ಯೋಗ. ಪುರುಷ ಪುರುಷೋತ್ತಮರ ಸಂಯೋಗವನ್ನು ಮೋಕ್ಷವೆನ್ನುತ್ತದೆ. ಪ್ರಕೃತಿಯಿಂದ ಬಿಡಿಸಿಕೊಂಡು ಈಶ್ವರನಲ್ಲಿ ಸೇರಿದಾಗಲೇ ಪುರುಷನಿಗೆ ಮೋಕ್ಷ. ಈ ಮುಕ್ತಿಮೂಲವಾದುದೇ ಯೋಗ. "ಸಂಯೋಗೋ ಯೋಗ ಇತ್ಯುಕ್ತೋ ಜೀವಾತ್ಮ ಪರಮಾತ್ಮನೋರಿತಿ"—ಎಂದು ಯಾಜ್ಞವಲ್ಕ್ಯನು ಯೋಗ ಸಿದ್ಧಾಂತವನ್ನು ಕುರಿತು ಹೇಳುತ್ತಾನೆ.

'ಯೋಗ' ಎಂಬ ಮಾತಿನ ಅರ್ಥವನ್ನು ಅನೇಕ ಬಗೆಯಲ್ಲಿ ಮಾಡಲಾಗಿದೆ. "ಯುಜಿರ್ ಯೋಗೇ" ಎಂಬ ಧಾತುವಿನಿಂದ ಎರಡು ವಸ್ತುಗಳನ್ನು ಒಂದಾಗಿ ಸೇರಿಸುವುದು—ಎಂಬ ಅರ್ಥ ಆ ಮಾತಿಗೆ ಆಗುತ್ತದೆ. "ಸಮತ್ವಂ ಯೋಗ ಉಚ್ಯತೇ", "ಯೋಗಃ ಕರ್ಮಸು ಕೌಶಲಮ್" ಎಂಬ ಮಾತುಗಳಲ್ಲಿ ಗೀತೆ ಯೋಗಕ್ಕೆ ವಿಶಿಷ್ಟವಾದ ಅರ್ಥವನ್ನು ಕಲ್ಪಿಸಿದೆ. ಬೇರೆ ಬೇರೆ ಸಂದರ್ಭಗಳಲ್ಲಿ ವಿಭಿನ್ನಾರ್ಥಗಳನ್ನು ಕೊಡಬಲ್ಲ ವ್ಯಾಪಕವಾದ ಶಬ್ದ 'ಯೋಗ.' ಇದಕ್ಕೆ ಪತಂಜಲಿ ಕೊಟ್ಟಿರುವ ಅರ್ಥ "ಯೋಗಶ್ಚಿತ್ತವೃತ್ತಿನಿರೋಧಃ" ಎಂಬ ಸೂತ್ರದಲ್ಲಿ ವ್ಯಕ್ತವಾಗುತ್ತದೆ. ಮನಸ್ಸಿನ ವೃತ್ತಿಗಳನ್ನೆಲ್ಲಾ ತೊಡೆದುಹಾಕಿದರೆ ಜೀವಾತ್ಮನಿಗೆ ಸ್ವಸ್ವರೂಪವು ಗೋಚರಿಸುತ್ತದೆ. ಆಗ ಜೀವಾತ್ಮ ಪರಮಾತ್ಮರ ಸಂಯೋಗ ಸಂಭವಿಸುತ್ತದೆ. ಯೋಗದ ಕೊನೆಯ ಅರ್ಥ ಅದೇ ಆಗಿದ್ದರೂ ಅದನ್ನು ಪಡೆಯಲು ಕೈಕೊಳ್ಳುವ ಮಾರ್ಗವೂ 'ಯೋಗ' ಪದದ ವ್ಯಾಪ್ತಿಯ ಒಳಗೆ ಸೇರುತ್ತದೆ. ಮನುಷ್ಯನ ದೈಹಿಕ ಮತ್ತು ಮಾನಸಿಕವಾದ ಸ್ವಭಾವವನ್ನು ನಿಯಂತ್ರಿಸಿ ಅದರ ಮೂಲಕ ಮನುಷ್ಯ ತನ್ನ ಪೂರ್ಣತೆಯನ್ನು ಕಂಡುಕೊಳ್ಳುವ ಮಾರ್ಗ ಯೋಗಮಾರ್ಗ. ಆದುದರಿಂದ ದೇಹ ಮನಸ್ಸುಗಳು ಪರಿಶುದ್ಧವಾಗಿರಬೇಕಾದುದು ಯೋಗಮಾರ್ಗದಲ್ಲಿ ಅನಿವಾರ್ಯ. ಅದನ್ನು ಸಾಧಿಸುವುದಕ್ಕಾಗಿ ಕೆಲವು ವಿಧಿಗಳನ್ನು 'ಯೋಗಸೂತ್ರ' ಕಲ್ಪಿಸಿದೆ.

ಚಂಚಲವೃತ್ತಿಗಳ ನಿರೋಧದಿಂದ ಚಿತ್ತಕ್ಕೆ ಒಂದು ಸಾಮರ್ಥ್ಯ ಲಭಿಸುತ್ತದೆ. ಅದಕ್ಕೆ ಸಹಾಯಕವಾದ ಅಷ್ಟಾಂಗಗಳನ್ನು ಪತಂಜಲಿ ನಿರೂಪಿಸಿದ್ದಾನೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ—ಇವು ಅಷ್ಟಾಂಗಗಳು. 'ಯಮ' ಎಂದರೆ ಬಿಡತಕ್ಕದ್ದು. ಸಾಧಕ ಹಿಂಸೆ ಸುಳ್ಳು ಕಳ್ಳತನ ದುರಾಚಾರ ಪರಿಗ್ರಹ—ಇವುಗಳನ್ನು ಬಿಡಬೇಕು. 'ನಿಯಮ'ವೆಂದರೆ ಮಾಡತಕ್ಕದ್ದು. ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ—ಎಂಬ ಐದು ಅಂಶಗಳನ್ನು ಇದು ಒಳಗೊಂಡಿದೆ. ಇವೆರಡನ್ನೂ 'ಯೋಗಸೂತ್ರ'ದಲ್ಲಿ ಹೀಗೆ ಹೇಳಲಾಗಿದೆ :

ಅಹಿಂಸಾ ಸತ್ಯಾಽಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ ।
ಶೌಚ ಸಂತೋಷ ತಪಃ ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ॥

ಯಮಗಳು ಸಮಾಜದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಸೂಚಿಸುತ್ತವೆ. ನಿಯಮಗಳು ವ್ಯಕ್ತಿಯ ಅಂತರಂಗ ಜೀವನದ ಪರಿಷ್ಕರಣಕ್ಕೂ ಪರಿಶುದ್ಧತೆಗೂ ಕಾರಣವಾಗುತ್ತವೆ. ಅಂತರಂಗ ಮತ್ತು ಬಹಿರಂಗಗಳ ಸಾಮರಸ್ಯ ಏರ್ಪಟ್ಟಲ್ಲಿ ಅದೇ ಪರಿಪೂರ್ಣ ನೈತಿಕ ಜೀವನವಾಗುತ್ತದೆ.

ಯೋಗದ ಮೂರನೆಯ ಅಂಗ 'ಆಸನ.' ಇದು ಸುಖಕರವಾಗಿಯೂ ಸ್ಥಿರವಾಗಿಯೂ ಇರುವ ಸ್ಥಿತಿ. ಇದು ಶಾರೀರಿಕ ಸ್ವಾಸ್ಥ್ಯಕ್ಕೆ ಹೆಚ್ಚಾಗಿ ಸಂಬಂಧಿಸಿದುದು. ಇದನ್ನು ಮೂರು ಬಗೆಯಾಗಿ ವಿಂಗಡಿಸುವುದುಂಟು. ಜಪ ಧ್ಯಾನ ಮೊದಲಾದುವುಗಳಿಗೆ ಉಪಯೋಗಿಸುವಂತಹ ಸಿದ್ಧಿಯ ಆಸನಗಳು, ಪದ್ಮಾಸನ ಸಿದ್ಧಾಸನ ಮೊದಲಾದುವು, ಈ ವರ್ಗಕ್ಕೆ ಸೇರುತ್ತವೆ. ದೈಹಿಕ ಚಿಕಿತ್ಸೆಗಾಗಿ ಅನುಸರಿಸುವ ಆಸನಗಳು ಕೆಲವು, ಮತ್ತು ದೇಹದ ವ್ಯಾಯಾಮಕ್ಕಾಗಿ ಕೈಕೊಳ್ಳುವ ಆಸನಗಳು ಕೆಲವು ಮೂರನೆಯ ಬಗೆಯವು. ಪ್ರಾಚೀನ ಗ್ರಂಥಗಳಲ್ಲಿ ಆಸನಗಳ ಪ್ರಸ್ತಾಪ ಅನೇಕ ಕಡೆ ಬರುತ್ತದೆ. ಕೆಲವು ಪುರಾಣಾಗಮಗಳಲ್ಲಿ ಇವುಗಳ ಸ್ವರೂಪ ಸಿದ್ಧಿಗಳನ್ನು ಹೇಳಿರುವುದುಂಟು. ಒಂದೊಂದು ಆಸನದಿಂದಲೂ ಬೇರೆ ಬೇರೆ ಫಲಗಳು ಲಭಿಸುತ್ತವೆ. ಆಸನಗಳ ಅಭ್ಯಾಸ ಕ್ರಮಕ್ರಮವಾಗಿ ವಿಧ್ಯುಕ್ತವಾಗಿ ನಡೆಯಬೇಕು. ಅವರವರ ಶರೀರಕ್ಕೆ ಹೊಂದುವ ಆಸನಗಳನ್ನು ಔಚಿತ್ಯವರಿತು ಮಾಡಬೇಕು. ಇವುಗಳಿಂದ ದೇಹದ ಆರೋಗ್ಯ ಸಿದ್ಧಿಸುತ್ತದೆ. ಮನಶ್ಶಾಂತಿ ಲಭಿಸುತ್ತದೆ. ಈ ಆಸನಗಳನ್ನು ಕುರಿತ ವಿವರವಾದ ವರ್ಣನೆ ಯೋಗಶಾಸ್ತ್ರಗಳಲ್ಲಿ ಬರುತ್ತದೆ.

ಯೋಗದ ನಾಲ್ಕನೆಯ ಮತ್ತು ಪ್ರಮುಖವಾದ ಅಂಗ 'ಪ್ರಾಣಾಯಾಮ.' ಉಚ್ಛ್ವಾಸ ನಿಃಶ್ವಾಸಗಳನ್ನು ನಿಯತಗೊಳಿಸಿ ಪ್ರಾಣದ ಮೇಲೆ ಪ್ರಭುತ್ವವನ್ನು ಸಾಧಿಸುವ ಸಾಹಸ ಇದು. ಇದಕ್ಕೆ ದೇಹ ಮನಸ್ಸುಗಳನ್ನು ಸಿದ್ಧಗೊಳಿಸುವುದಕ್ಕಾಗಿಯೇ ಯಮ ನಿಯಮ ಆಸನಗಳು ಉಕ್ತವಾಗಿವೆ. ನಮ್ಮ ದೇಹರಚನೆಯಲ್ಲಿ ಕೆಲವು ವಿಶಿಷ್ಟ ಶಕ್ತಿಕೇಂದ್ರಗಳನ್ನೂ ನಾಡಿಗಳನ್ನೂ ಯೋಗಶಾಸ್ತ್ರ ಕಂಡುಕೊಂಡಿದೆ. ಇಡಾ ಪಿಂಗಲಾ ಸುಷುಮ್ನಾ ಎಂಬ ನಾಡಿಗಳು ಯೋಗಾಭ್ಯಾಸದಲ್ಲಿ ಬಹಳ ಮುಖ್ಯವಾದುವು. ದೇಹದಲ್ಲಿರುವ ಷಟ್ ಚಕ್ರಗಳು : ಆಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞೇಯ— ಇವು ಅಗಾಧವಾದ ಶಕ್ತಿಸಂಚಯನದ ಕೇಂದ್ರಗಳು. ಆಧಾರಚಕ್ರದಲ್ಲಿ ಸುರುಳಿ ಸುತ್ತಿಕೊಂಡಿರುವ ಕುಂಡಲಿನೀಶಕ್ತಿಯನ್ನು ಎಚ್ಚರಗೊಳಿಸಿ ಸುಷುಮ್ನಾನಾಡಿಯ ಮೂಲಕ ಮೇಲಕ್ಕೇರುವಂತೆ ಮಾಡುವುದೇ ಯೋಗಾಭ್ಯಾಸದ ಮುಖ್ಯ ಉದ್ದೇಶ. ಕುಂಡಲಿನೀಶಕ್ತಿ ಮೇಲೇರಿ ಒಂದಾದಮೇಲೊಂದರಂತೆ ಷಟ್‌ಚಕ್ರಗಳನ್ನು ದಾಟಿಕೊಂಡು ಹೋದಂತೆಲ್ಲಾ ಸಾಧಕನಲ್ಲಿ ದೈಹಿಕ ಮತ್ತು ಮಾನಸಿಕವಾದ ಪರಿವರ್ತನೆಗಳಾಗುತ್ತವೆ. ಅದ್ಭುತಶಕ್ತಿ ಆತನಿಗೆ ಲಭಿಸುತ್ತದೆ. ಅಣಿಮಾದಿ ಅಷ್ಟಸಿದ್ಧಿಗಳು ದೊರೆಕೊಳ್ಳುತ್ತವೆ. ಅವುಗಳನ್ನೆಲ್ಲಾ ಮೆಟ್ಟಿ ಮೇಲೇರಿದರೆ ಜೀವಪರಮರ ಸಂಯೋಗದವರೆಗೂ ಅದು ಕೊಂಡೊಯ್ಯುತ್ತದೆ. ಇದಕ್ಕೆ ಸಹಾಯಕವಾದುದು 'ಪ್ರಾಣಾಯಾಮ.'

ಪ್ರಾಣಾಯಾಮವೆಂದರೆ ಪ್ರಾಣಶಕ್ತಿಯನ್ನು ಹಿಡಿತದಲ್ಲಿಟ್ಟುಕೊಳ್ಳುವುದು. ಮೂಗಿನ ಒಂದು ಕಡೆಯಿಂದ ಗಾಳಿಯನ್ನು ಒಳಕ್ಕೆ ತೆಗೆದುಕೊಂಡು ಸ್ವಲ್ಪ ಕಾಲ ಅದನ್ನು ಒಳಗೆ ಬಂಧಿಸಿ ಮತ್ತೆ ಮೂಗಿನ ಇನ್ನೊಂದು ಕಡೆಯಿಂದ ಅದನ್ನು ಹೊರಗೆ ಬಿಡುವುದು, ಹೊರಗೆ ಬಿಟ್ಟ ಕಡೆಯಿಂದಲೇ ಮತ್ತೆ ಗಾಳಿಯನ್ನು ಒಳಗೆಳೆದುಕೊಳ್ಳುವುದು—ಇದು ಇಲ್ಲಿ ಸ್ಥೂಲ ವಾಗಿ ನಡೆಯುವ ಕ್ರಿಯೆ. ಇದನ್ನೇ ಪೂರಕ ಕುಂಭಕ ರೇಚಕ ಎಂದು ಕರೆಯುತ್ತಾರೆ. ಇದು ಮನಸ್ಸಿನ ಕೇಂದ್ರೀಕರಣಕ್ಕೆ ಬಹಳ ಸಹಾಯಕವಾಗುತ್ತದೆ. ಗಾಳಿಯನ್ನು ನಿಲ್ಲಿಸಿದರೆ ಮನಸ್ಸು ನಿಶ್ಚಲವಾಗುತ್ತದೆ. ಪೂರಕ, ಕುಂಭಕ ರೇಚಕಗಳನ್ನು ನಿರ್ವಹಿಸುವ ಕಾಲಪರಿಮಿತಿಗೆ ಅನುಗುಣವಾಗಿ ಪ್ರಾಣಾಯಾಮದಲ್ಲಿ ಹಲವು ಬಗೆಗಳಾಗುತ್ತವೆ. ಇವು ಮೂರೂ ಒಂದೇ ಕಾಲಪರಿಮಿತಿಯಲ್ಲಿದ್ದರೆ 'ಸಮವರ್ತಿ ಪ್ರಾಣಾಯಾಮ' ಎಂದು ಹೆಸರು. ಈ ಮೂರರಲ್ಲಿ ಯಾವೊಂದನ್ನು ವ್ಯತ್ಯಾಸಮಾಡಿದರೂ ಅದು 'ವಿಷಮ ವೃತ್ತಿ ಪ್ರಾಣಾಯಾಮ'ವಾಗುತ್ತದೆ. ಸಾಧಕ ತನ್ನ ಶಕ್ತಿಗೆ ಅನುಗುಣವಾಗಿ ಪ್ರಾಣಾ ಯಾಮದ ನಿಯಮವನ್ನು ಅಳವಡಿಸಿಕೊಳ್ಳಬೇಕು. ಇದನ್ನು ಗುರುವಿನ ನೇತೃತ್ವ ದಲ್ಲಿಯೇ ಅಭ್ಯಾಸಮಾಡಬೇಕೆಂದು ವಿಧಿಸಲಾಗಿದೆ.

ಪ್ರಾಣಾಯಾಮ ಸಿದ್ಧಿ ಪಡೆದ ಸಾಧಕನು ಇಂದ್ರಿಯಗಳನ್ನು ಸುಲಭವಾಗಿ ತನ್ನ ವಶದಲ್ಲಿಟ್ಟುಕೊಳ್ಳಬಲ್ಲನು. ಇಂದ್ರಿಯಗಳನ್ನು ಆಯಾ ವಿಷಯಗಳಿಂದ ಹಿಂದಿರುಗಿಸಿ ಅಂತಃಕರಣಕ್ಕೆ ಅನುಕೂಲವಾಗಿರಿಸುವುದೇ 'ಪ್ರತ್ಯಾಹಾರ'ವೆನಿಸುತ್ತದೆ. "ಸ್ವವಿಷಯಾ ಸಂಪ್ರಯೋಗೇ ಚಿತ್ತಸ್ಯ ಸ್ವರೂಪಾನುಕಾರ ಇವೇಂದ್ರಿಯಾಣಾಂ ಪ್ರತ್ಯಾಹಾರಃ"— ಎನ್ನುತ್ತದೆ 'ಯೋಗಸೂತ್ರ'. ಯಮದಿಂದ ಹಿಡಿದು ಪ್ರತ್ಯಾಹಾರದವರೆಗೆ ಈ ಐದು ಅಂಗ ಗಳು ಯೋಗದ ಬಹಿರಂಗಸಾಧನಗಳೆನಿಸಿಕೊಂಡಿವೆ. ಇನ್ನು ಮುಂದಿನ ಧಾರಣ, ಧ್ಯಾನ ಸಮಾಧಿಗಳು ಯೋಗಸಾಧನೆಗೆ ಅಂತರಂಗದ ಅಂಗಗಳು.

ಮನಸ್ಸನ್ನು ನಿಶ್ಚಲವಾಗಿ ನಿರ್ದಿಷ್ಟವಾದ ಸ್ಥಳದಲ್ಲಿ ಅಥವಾ ಆಕಾರದಲ್ಲಿ ನಿಲ್ಲಿಸು ವುದಕ್ಕೆ 'ಧಾರಣಾ' ಎಂದು ಹೆಸರು. ಮಾನಸಿಕ ಭಾವನೆಗಳು ಜಾತ್ರೆಯಲ್ಲಿ ನಡೆಯು ತ್ತಿರುವ ಉತ್ಸವದಂತೆ. ಅನೇಕ ರೂಪಗಳ ಮೆರೆವಣಿಗೆ ಅಲ್ಲಿ ನಡೆದಿರುತ್ತದೆ. ಅನೇಕ ವಿಕಾರಗಳೂ ಪ್ರಕಾರಗಳೂ ಅಲ್ಲಿ ತೇಲುತ್ತವೆ. ಇದನ್ನು ತಡೆದು ಒಂದು ನಿರ್ದಿಷ್ಟವಾದ ವಸ್ತುವಿನ ಮೇಲೆ ಅಥವಾ ಆಕಾರದ ಮೇಲೆ ಕೇಂದ್ರೀಕರಿಸಬೇಕೆಂದರೆ ಅದು ಬಹಳ ಕಷ್ಟ ಕರವಾದುದು. ಆದರೆ ಸಾಧನೆಯಲ್ಲಿ ಮುನ್ನಡೆಯುವುದಕ್ಕೆ ಈ ಧಾರಣಾಶಕ್ತಿಯನ್ನು ಪಡೆಯುವುದು ಅನಿವಾರ್ಯ. 'ಧಾರಣಾ'ಸಿದ್ಧಿಯಿಂದ ಧ್ಯಾನ ಸುಲಭವಾಗುತ್ತದೆ. 'ಪ್ರಾಣಾ ಯಾಮ'ದಿಂದ ಗಾಳಿಯನ್ನು ತಡೆದು 'ಪ್ರತ್ಯಾಹಾರ'ದಿಂದ ಇಂದ್ರಿಯಗಳನ್ನು ವಶಪಡಿಸಿ ಕೊಂಡು 'ಧಾರಣಾ'ದಿಂದ ಭಗವಂತನ ದಿವ್ಯಮಂಗಳ ಸ್ವರೂಪವನ್ನು ಮನಸ್ಸಿನಲ್ಲಿ ನಿಲ್ಲಿಸಬೇಕು. ಇವುಗಳು ಸಿದ್ಧಿಸಿದರೆ ಧ್ಯಾನಮಾಡಲು ಅರ್ಹತೆಯುಂಟಾಗುತ್ತದೆ.

"ತತ್ರ ಪ್ರತ್ಯಯೈಕತಾನತಾ ಧ್ಯಾನಂ"—ಎಂದು ಪತಂಜಲಿ ಧ್ಯಾನದ ಸ್ವರೂಪ ವನ್ನು ಹೇಳಿದ್ದಾನೆ. ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವೇ ಧ್ಯಾನ. ಇನ್ನೊಂದರ

ಸಂಪರ್ಕವಿಲ್ಲದೆ ಒಂದೇ ಚಿತ್ತವೃತ್ತಿ ನಿಶ್ಚಲವಾಗಿ ನಿಲ್ಲಬೇಕು. ಹರಳೆಣ್ಣೆಯ ಧಾರೆಯಂತೆ ಅವಿಚ್ಛಿನ್ನವಾಗಿರಬೇಕೆಂಬ ಉದಾಹರಣೆಯನ್ನು ಅದಕ್ಕೆ ಕೊಡುವುದುಂಟು. ಗೀತೆ ಹೇಳುವಂತೆ :

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತ ಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥

ಗಾಳಿಯಿಲ್ಲದ ಸ್ಥಳದಲ್ಲಿ ಉರಿಯುತ್ತಿರುವ ದೀಪಜ್ವಾಲೆಯಂತೆ ಮನಸ್ಸು ಅಚಂಚಲವಾಗಿರಬೇಕು. ಇತರ ವಿಷಯಗಳ ಸಂಬಂಧ ಅಪ್ರಯತ್ನವಾಗಿ ನಿವೃತ್ತಿಯಾಗಿ ಸಾಧಕ ತಾನೇ ತಾನಾಗಿ ಪರಿಣಮಿಸುತ್ತಾನೆ ಈ ಸ್ಥಿತಿಯಲ್ಲಿ.

ಧ್ಯಾನದ ಪರಿಪಕ್ವಾವಸ್ಥೆಯೇ 'ಸಮಾಧಿ'. ಧ್ಯಾನದಲ್ಲಿ ಧ್ಯಾತಾ, ಧ್ಯಾನ, ಧ್ಯೇಯ—ಎಂಬೀ ತ್ರಿಪುಟೀಭಾವನೆ ತೋರುತ್ತಿರುತ್ತದೆ. ಸಮಾಧಿಯಲ್ಲಿ ಈ ಭೇದಗಳೂ ಅಳಿದು ಹೋಗುತ್ತವೆ. "ತದೇವ ಅರ್ಥಮಾತ್ರ ನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ" ಎನ್ನುತ್ತಾನೆ ಪತಂಜಲಿ. ಧಾರಣ, ಧ್ಯಾನ ಇವೆರಡೂ ಸಮಾಧಿಯಲ್ಲಿ ಲೀನವಾಗುತ್ತವೆ. ಈ ಸ್ಥಿತಿಯಲ್ಲಿ ಜೀವನಿಗೆ ಸ್ವಸ್ವರೂಪ ಸಾಕ್ಷಾತ್ಕಾರವಾಗುತ್ತದೆ. ಸಮಾಧಿಯಲ್ಲಿ 'ನಿರ್ವಿಕಲ್ಪ' 'ಸವಿಕಲ್ಪ' (ಅಥವಾ ಸಂಪ್ರಜ್ಞಾತ, ಅಸಂಪ್ರಜ್ಞಾತ) ಎಂದು ಎರಡು ಬಗೆ. 'ಸವಿಕಲ್ಪ ಸಮಾಧಿ' ಎಂದರೆ ಧ್ಯಾನಮಾಡುತ್ತಿರುವ ವಸ್ತುವಿನಲ್ಲಿ ಚಿತ್ತವು ಲೀನವಾಗುವುದು. ನಿರ್ವಿಕಲ್ಪವೆಂದರೆ ಯಾವ ವಸ್ತುವಿನ ಸಂಬಂಧವೂ ಇಲ್ಲದೆ ಚಿತ್ತವೃತ್ತಿ ಸಂಪೂರ್ಣವಾಗಿ ಲಯಾಭಿಮುಖಿಯಾಗುವುದು. ಈ ಅನುಭವ ಅದ್ವಿತೀಯ, ಆನಂದರೂಪ. ಉಪನಿಷತ್ತಿನ ಆತ್ಮಸಾಕ್ಷಾತ್ಕಾರ ಅಥವಾ ಬ್ರಹ್ಮಸಾಕ್ಷಾತ್ಕಾರಕ್ಕೆ ಅದು ಸಂವಾದಿ.

ಈ ಕೊನೆಯ ನಿಲವನ್ನು ಪಡೆದಾಗಲೇ ಯೋಗಮಾರ್ಗದ ಸಾರ್ಥಕತೆ. ಹಠಯೋಗಾದಿಗಳ ಅಭ್ಯಾಸದಿಂದ ತನ್ನ ಶರೀರದಮೇಲೆ ಅಧಿಕಾರ ಪಡೆದು ಅದ್ಭುತ ಶಕ್ತಿಗಳಿಸಿದ ಸಾಧಕನು ಅಷ್ಟಕ್ಕೇ ತೃಪ್ತನಾಗದೆ ಮುಂದುವರಿಯಬೇಕು. ಸಮುದ್ರವನ್ನು ಸೇರಲು ನದಿಗಳು ಬಯಸುವಂತೆ ಪರಮಾತ್ಮನಲ್ಲಿ ಲೀನನಾಗಲು ಹಂಬಲಿಸಬೇಕು. ಕ್ಷುದ್ರಸಿದ್ಧಿಗಳನ್ನು ಮೆಟ್ಟಿ ಮೇಲೇರಬೇಕು. ಅದೇ ರಾಜಯೋಗವೆನ್ನಿಸಿಕೊಳ್ಳುತ್ತದೆ. ಯೋಗಾಂಗದ ಅಭ್ಯಾಸಗಳು ರಾಜಯೋಗದ ನಿಲವನ್ನು ಮುಟ್ಟದೆ ಸಫಲವಾಗುವುದಿಲ್ಲ—ಎಂದು ಯೋಗಶಾಸ್ತ್ರ ಜೀವನದ ಕೊನೆಯ ಗುರಿಯನ್ನು ಅನುಭವಪೂರ್ವಕವಾಗಿ ನಿರ್ಧರಿಸಿ ಹೇಳಿತು.

ಮುಂದೆ ಬಂದ ಧರ್ಮಗಳೆಲ್ಲಾ ಯೋಗದರ್ಶನದ ಪ್ರಭಾವಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಒಳಗಾದುವು. ಅಚ್ಚಳಿಯದ ಪ್ರಭಾವವನ್ನು ಅದು ಹಿಂದುಧರ್ಮದ ಮೇಲೆ ಬೀರಿತು. ಭಾರತೀಯ ತತ್ತ್ವಶಾಸ್ತ್ರಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿತು. ಮನಸ್ಸಿನ ಶಕ್ತಿಗಳನ್ನು ಅರಿಯಲು ಕೈಕೊಂಡ ಮನಶ್ಶಾಸ್ತ್ರದ ಬಹುದೊಡ್ಡ ಮತ್ತು ಪ್ರಪ್ರಥಮ ಪ್ರಯೋಗ ಯೋಗಶಾಸ್ತ್ರ—ಎನ್ನಬಹುದು. ಇದನ್ನು ಆಧುನಿಕ ಮನಶ್ಶಾಸ್ತ್ರದ ಹಿನ್ನೆಲೆ

ಯಲ್ಲಿ ಹೊಸ ದೃಷ್ಟಿಯಿಂದ ಅಭ್ಯಾಸಮಾಡುವ ಆವಶ್ಯಕತೆಯಿದೆ. ಪದರಪದರವಾದ ಮನಸ್ಸಿನ ಸಂಕೀರ್ಣತೆಯನ್ನು, ಅದರ ಸುಪ್ತಶಕ್ತಿಗಳನ್ನು ತಿಳಿಯಲು ಭಾರತೀಯರು ಕೈಕೊಂಡ ಶಾಸ್ತ್ರೀಯವಾದ ಪ್ರಯತ್ನ ಯೋಗದರ್ಶನದಲ್ಲಿ ಕಂಡುಬರುತ್ತದೆ.

ಯೋಗದರ್ಶನದ ಪ್ರಭಾವದಿಂದ ವೇದದ ಕರ್ಮಕಾಂಡಗಳ ಪ್ರಾಬಲ್ಯ ಕುಗ್ಗಿತು. ಯೋಗಿಗಳು ವೇದದ ಸಂಬಂಧವೇ ಇಲ್ಲದಂತೆ ಈಶ್ವರನ ಸಾಕ್ಷಾತ್ಕಾರವನ್ನು ಸಾಧಿಸುವ ಅನುಭಾವ ಮಾರ್ಗವನ್ನು ರೂಪಿಸಿಕೊಟ್ಟರು. ಇದರಿಂದ ವೇದದ ಪ್ರಾಧಾನ್ಯ ಕಡಮೆಯಾಗುತ್ತಾ ಬಂದಿತು. ಯಜ್ಞಯಾಗಾದಿಗಳು ಕ್ರಮೇಣ ಹಿಂದಾಗತೊಡಗಿದುವು. ಈ ಕಾಲದಲ್ಲಿ ವೇದದ ವಿಧಿಗಳನ್ನು ಮತ್ತೊಮ್ಮೆ ಪ್ರತಿಷ್ಠಾಪಿಸುವ ಪ್ರಯತ್ನ ಪ್ರಾರಂಭವಾಯಿತು. ಅದರ ಫಲವಾಗಿ ಹುಟ್ಟಿದುದು 'ಪೂರ್ವಮೀಮಾಂಸೆ'.

ವೇದಸೂಕ್ತಗಳಿಗೆ ಅರ್ಥಮಾಡುವ ರೀತಿಯನ್ನು ಜೈಮಿನಿ ತನ್ನ 'ಮೀಮಾಂಸಾ ಸೂತ್ರ'ಗಳಲ್ಲಿ ನಿರೂಪಿಸಿದನು. ಈ ಅರ್ಥಕ್ರಮ ಜೈಮಿನಿಗಿಂತಲೂ ಪೂರ್ವದಲ್ಲಿಯೇ ಇದ್ದಿರಬೇಕು. ಆದರೆ ಜೈಮಿನಿಯ ಸೂತ್ರಗಳು ಒಂದು ನಿರ್ದಿಷ್ಟ ಸ್ವರೂಪವನ್ನು ಅದಕ್ಕೆ ಕೊಟ್ಟುವು. ಅದೇ 'ಪೂರ್ವಮೀಮಾಂಸೆ'ಯಾಗಿ ಪರಿಣಮಿಸಿತು.

ಜೈಮಿನಿಯ ಕಾಲವನ್ನು ಹೆಚ್ಚೆಂದರೆ ಕ್ರಿ.ಪೂ. ೪ನೆಯ ಶತಮಾನದಷ್ಟು ಹಿಂದಕ್ಕೆ ಕೊಂಡೊಯ್ಯಬಹುದು. ಈತನ ಮೀಮಾಂಸಾ ಸೂತ್ರಗಳ ಮೇಲೆ ಕ್ರಿ.ಪೂ. ೧ನೆಯ ಶತಮಾನದ ಶಬರನು ಭಾಷ್ಯ ಬರೆದಿದ್ದಾನೆ. ಶಬರನಿಗಿಂತ ಮೊದಲೇ ಬೃಹನ್ಮಿತ್ರ, ಭಾವದಾಸ, ಉಪವರ್ಷ ಮೊದಲಾದವರು ಇವುಗಳಿಗೆ ಭಾಷ್ಯಗಳನ್ನು ಬರೆದಿದ್ದಂತೆ ತಿಳಿದು ಬರುತ್ತದೆ. ಆದರೆ ಅವು ಸಿಕ್ಕಿಲ್ಲ. ಈಗ ದೊರೆತಿರುವ ಮಟ್ಟಿಗೆ ಶಾಬರಭಾಷ್ಯವೇ ಬಹಳ ಪ್ರಾಚೀನವಾದುದು. ಅನಂತರ ಬರೆಯುವವರಿಗೆಲ್ಲಾ ಅದು ಆಧಾರ ಗ್ರಂಥವಾಗಿ ಪರಿಣಮಿಸಿತು. ಜೈಮಿನಿಯ ಮೀಮಾಂಸಾಶಾಸ್ತ್ರಕ್ಕೆ ದೊರೆತ ಇನ್ನೊಬ್ಬ ಪ್ರಮುಖ ಪ್ರತಿಪಾದಕ ಮತ್ತು ಪ್ರಚಾರಕನೆಂದರೆ ಕುಮಾರಿಲಭಟ್ಟ. ವೇದಪ್ರಾಮಾಣ್ಯಕ್ಕೆ ಪ್ರಬಲ ಶಕ್ತಿ ಈತನಿಂದ ಲಭಿಸಿತು. ಇವನ ಅಭಿಪ್ರಾಯಗಳು ಭಾಟ್ಟಮತವೆಂದು ಪ್ರಸಿದ್ಧವಾದುವು. ಇವನು ಶಂಕರಾಚಾರ್ಯರಿಗಿಂತ ಪೂರ್ವದವನು. ಸುಮಾರು ಕ್ರಿ.ಶ. ಏಳನೆಯ ಶತಮಾನದಲ್ಲಿದ್ದವನು. ಶಾಬರ ಭಾಷ್ಯದ ಮೇಲೆ ಬಹುಶಃ ಕುಮಾರಿಲಭಟ್ಟನಿಗಿಂತ ಪೂರ್ವದಲ್ಲಿದ್ದ ಇನ್ನೊಬ್ಬ ಪಂಡಿತ ಪ್ರಭಾಕರ ವ್ಯಾಖ್ಯಾನಗ್ರಂಥವನ್ನು ಬರೆದು ಪ್ರಸಿದ್ಧನಾಗಿದ್ದಾನೆ.

'ಮೀಮಾಂಸಾ' ಎಂದರೆ ಪ್ರಮಾಣಪುರಸ್ಸರವಾಗಿ ವಿಚಾರಮಾಡುವುದು. ವೇದವನ್ನೇ ಪರಮಪ್ರಮಾಣವಾಗಿ ಮೀಮಾಂಸಾಕಾರರು ಅಂಗೀಕರಿಸಿದರು. ವೇದವು ಅಪೌರುಷೇಯ. ಆದುದರಿಂದ ದೋಷರಹಿತ. ಧರ್ಮಾಧರ್ಮವನ್ನು ನಿರ್ಣಯಿಸುವ ಅಧಿಕಾರ ವೇದಕ್ಕೆ ಮಾತ್ರ ಇದೆ. ಅದು ಸ್ವಯಂಭು, ಸ್ವಯಮೇವ ಪ್ರಮಾಣಭೂತವಾದ್ದು. ವೇದೋಕ್ತವಾದ ವೈದಿಕ ಕ್ರಿಯೆಗಳನ್ನು ಅನುಸರಿಸುವುದರಿಂದಲೇ ಮುಕ್ತಿ. ಹೀಗೆ ಮೀಮಾಂಸಾಕಾರರು ವೇದಕರ್ಮಗಳನ್ನು ವಿವರಿಸಿದ್ದಾರೆ.

ವೇದೋಕ್ತ ಕರ್ಮಗಳಲ್ಲಿ ಅವರ ಅಭಿಪ್ರಾಯದಂತೆ ಮೂರು ಬಗೆಗಳಿವೆ. ನಿತ್ಯ ನೈಮಿತ್ತಿಕ ಮತ್ತು ಕಾಮ್ಯಕರ್ಮಗಳು ಎಂದು ಅವುಗಳನ್ನು ಕರೆಯಲಾಗಿದೆ. ಕಾಮ್ಯ ಕರ್ಮಗಳೆಂದರೆ ಸ್ವರ್ಗ ಮೊದಲಾದ ಫಲಾಪೇಕ್ಷೆಯಿಂದ ಮಾಡುವ ಜ್ಯೋತಿಷ್ಟೋಮಾದಿ ಯಾಗಗಳು. ಮನುಷ್ಯನು ಈ ಜನ್ಮದಲ್ಲಿ ಅನುಭವಿಸುವ ಸುಖದುಃಖಗಳೆಲ್ಲವೂ ಪೂರ್ವಜನ್ಮದಲ್ಲಿ ಅವನು ಮಾಡಿದ ಪುಣ್ಯ ಪಾಪ ಕರ್ಮಗಳ ಫಲ. ಹಾಗೆ ಈ ಜನ್ಮದಲ್ಲಿ ಮಾಡಿದ ಕಾಮ್ಯಕರ್ಮಗಳ ಫಲ, ಜನ್ಮಾಂತರದಲ್ಲಿ ಫಲಿಸುವುದು. ನೈಮಿತ್ತಿಕ ಕರ್ಮಗಳೆಂದರೆ ಕೆಲವು ನಿಮಿತ್ತಗಳಿಗಾಗಿ ಕೈಕೊಳ್ಳುವ ಕರ್ಮಗಳು. ಉದಾಹರಣೆಗೆ: ಮನೆ ಸುಟ್ಟುಹೋಗುವುದು, ಯಾಗ ಕೆಟ್ಟುಹೋಗುವುದು—ಇಂತಹ ಸಂದರ್ಭಗಳಲ್ಲಿ ಆ ಪಾಪಕ್ಕೆ ಪರಿಹಾರಾರ್ಥವಾಗಿ ಕೈಕೊಳ್ಳುವ ಕರ್ಮಗಳು. ಇವಲ್ಲದೆ ಕೆಲವು ನೈಮಿತ್ತಿಕ ಕರ್ಮಗಳನ್ನು ತಂದೆ ತಾಯಿ.ಗಳೆಯ ಹೆಂಡತಿ ಮೊದಲಾದವರ ಅನುಕೂಲಕ್ಕಾಗಿಯೂ ಕೈಕೊಳ್ಳಬೇಕಾಗುತ್ತದೆ. ಇನ್ನು ನಿತ್ಯಕರ್ಮಗಳೆಂದರೆ ನಿತ್ಯಜೀವನದಲ್ಲಿ ಕೈಕೊಂಡು ನಡಸಬೇಕಾದವು. ಅವುಗಳಿಂದ ವಿಶೇಷ ಫಲಪ್ರಾಪ್ತಿಯಿಲ್ಲದಿದ್ದರೂ ಅವುಗಳನ್ನು ಮಾಡದೇ ಬಿಡುವಂತಿಲ್ಲ. ಆಯಾ ಕಾಲದಲ್ಲಿ ಅವುಗಳನ್ನು ನಿರ್ವಹಿಸದಿದ್ದರೆ ಹೊಸದಾಗಿ ಪಾಪ ಸಂಚಿತವಾಗುವುದು. ಅವು ಹುಟ್ಟದಿರುವುದಕ್ಕಾಗಿಯಾದರೂ ಇವುಗಳನ್ನು ಮಾಡಬೇಕು. ಹಿಂಸೆಯಿಂದ ಬಂದಿರಬಹುದಾದ ಪಾಪಗಳೂ ಈ ಕರ್ಮಗಳಿಂದ ನಶಿಸುತ್ತವೆ. ಹೀಗೆ ವೇದೋಕ್ತ ಕರ್ಮಗಳಂತೆ ನಡೆಯುವುದೇ ಧರ್ಮ. ಅದೇ ಸುಖಕ್ಕೆ ಸಾಧನ, ಪರಮಪುರುಷಾರ್ಥ.

ಪ್ರಪಂಚ, ಆತ್ಮ ಮತ್ತು ಅವುಗಳ ಪರಸ್ಪರ ಸಂಬಂಧ ಈ ಮೊದಲಾದ ವಿಷಯಗಳನ್ನು ಕುರಿತು ಮೀಮಾಂಸಾಕಾರರು ಚರ್ಚಿಸಿದ್ದಾರೆ. ಜೈಮಿನಿ ಮೊದಲಾದ ಪ್ರಾರಂಭದ ಮೀಮಾಂಸಾಕಾರರು ಈಶ್ವರನ ಅಸ್ತಿತ್ವವನ್ನು ಒಪ್ಪಿಕೊಳ್ಳುವುದಿಲ್ಲ. ಸಾಂಖ್ಯದರ್ಶನಕಾರರಂತೆ ಇವರೂ ನಿರೀಶ್ವರವಾದಿಗಳೆನ್ನಬಹುದು. ಕರ್ಮಕ್ಕೆ ತಕ್ಕ ಫಲಪ್ರದನಾದ ಪ್ರಭು ಒಬ್ಬನಿರಬೇಕೆಂಬುದನ್ನು ಜೈಮಿನಿ ಖಂಡಿಸಿದ್ದಾನೆ. ಕರ್ಮವೇ ಫಲವೂ ಹೌದು, ಫಲದಾಯಕವೂ ಹೌದು — ಎಂಬುದು ಜೈಮಿನಿಯ ವಾದ. ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೊಬ್ಬನಿದ್ದಾನೆಂದು ಹೇಳಲು ಆಧಾರಗಳು ಇಲ್ಲವೆಂಬುದು ಆತನ ಅಭಿಪ್ರಾಯ.

ಆದರೆ ಕ್ರಮೇಣ ಆ ಮಾರ್ಗ ಈಶ್ವರನತ್ತ ತಿರುಗಿತು. ಈ ಮಾರ್ಗದ ಪ್ರಬಲ ಪ್ರತಿಪಾದಕನಾದ ಕುಮಾರಿಲನೇ ಈಶ್ವರನ ಅಸ್ತಿತ್ವವನ್ನು ಒಪ್ಪಿಕೊಂಡಿದ್ದಾನೆ. ಆತನ ಶ್ಲೋಕವಾರ್ತಿಕದ ಆರಂಭದಲ್ಲಿ ಈ ಶ್ಲೋಕ ಬರುತ್ತದೆ:

> ವಿಶುದ್ಧಜ್ಞಾನದೇಹಾಯ ತ್ರಿವೇದಿ ದಿವ್ಯಚಕ್ಷುಷೇ ।
> ಶ್ರೇಯಃಪ್ರಾಪ್ತಿ ನಿಮಿತ್ತಾಯ ನಮಃ ಸೋಮಾರ್ಧಧಾರಿಣೇ ॥

"ಯಾರ ದೇಹವು ವಿಶುದ್ಧ ಜ್ಞಾನವೋ, ಯಾರ ಮೂರು ಕಣ್ಣುಗಳು ವೇದಗಳೋ, ಯಾರ ಶಿರೋಭೂಷಣವು ಚಂದ್ರಾರ್ಧವೋ ಅವನನ್ನು ಶ್ರೇಯಃಪ್ರಾಪ್ತಿಗಾಗಿ

ನಮಸ್ಕರಿಸುತ್ತೇನೆ"—ಎಂದು ಶಿವನನ್ನು ಪ್ರಾರ್ಥಿಸುತ್ತಾನೆ. ಇದರಿಂದ ಕೆಲವರು ಕುಮಾರಿಲನನ್ನು ವೇದಾಂತಿಗಳ ಗುಂಪಿಗೆ ಸೇರಿಸುತ್ತಾರೆ. ಆದರೆ ಅವನನ್ನು ವೇದಾಂತಿ ಎನ್ನುವುದಕ್ಕಿಂತ 'ಸೇಶ್ವರ ಮೀಮಾಂಸಾಕಾರ'ನೆಂದು ಹೇಳುವುದು ಹೆಚ್ಚು ಉಚಿತ ವೆಂದು ತೋರುತ್ತದೆ. ಜೈಮಿನಿಯ ದರ್ಶನದಲ್ಲಿ ಕಾಣುವ ಈಶ್ವರ ನಿರಾಕರಣೆ ಆತನಿಗೆ ಬೇಡವೆನಿಸಿ ಆತ ಈಶ್ವರನನ್ನು ಶಾಸ್ತ್ರದಲ್ಲಿ ಅಳವಡಿಸಿಕೊಂಡಂತೆ ತೋರುತ್ತದೆ.

ಒಟ್ಟಿನಲ್ಲಿ ಪೂರ್ವಮೀಮಾಂಸೆ ಒಂದು ವೈಚಾರಿಕ ದರ್ಶನವಾಗಿ ಅನೇಕ ಕೊರತೆ ಗಳಿಂದ ಕೂಡಿದೆ ಎಂಬುದು ತತ್ತ್ವಜ್ಞಾನಿಗಳ ಅಭಿಪ್ರಾಯ.[೨೧] ಸೃಷ್ಟಿಯ ಪೂರ್ಣಚಿತ್ರ ವನ್ನು ಪರಿಗಣಿಸದ ಅವರ ತಾರ್ಕಿಕ ಸರಣಿ ಅಷ್ಟು ಪರಿಪಕ್ವವಾಗಿ ಕಾಣುವುದಿಲ್ಲ. ಈ ದರ್ಶನದಲ್ಲಿರುವ ಅನೇಕ ಕೊರತೆಗಳಿಗೆ ಸಮಾಧಾನಗಳನ್ನು ಅನಂತರದ ದಾರ್ಶನಿಕರು ಹುಡುಕತೊಡಗಿರಬೇಕು. ಅದು 'ಉತ್ತರ ಮೀಮಾಂಸಾ' ಶಾಸ್ತ್ರದಲ್ಲಿ ಪರ್ಯವಸಾನ ವಾಯಿತೆನ್ನಬಹುದು.

'ಉತ್ತರ ಮೀಮಾಂಸೆ'ಯನ್ನು ವೇದಾಂತ ಸೂತ್ರಗಳೆಂದು ಕರೆಯುವುದೇ ಹೆಚ್ಚು ವಾಡಿಕೆ. ವೇದಾಂತದ ಸಿದ್ಧಾಂತಗಳನ್ನು ಇವು ಪ್ರತಿಪಾದಿಸುವುದರಿಂದ ಈ ಹೆಸರು ಬಂದಿದೆ. 'ವೇದಾಂತ'ವೆಂದರೆ ಸಾಮಾನ್ಯವಾಗಿ ಆಗುವ ಅರ್ಥ ವೇದದ ಕೊನೆಯ ಭಾಗಗಳು ಎಂದರೆ ಉಪನಿಷತ್ತುಗಳು. ಇದಕ್ಕೆ ತಾತ್ತ್ವಿಕವಾದ ಅರ್ಥ ಒಂದುಂಟು. ಕೊನೆ ಎಂಬ ಅರ್ಥದ ಛಾಯೆಯಿಂದ 'ಅಂತ' ಶಬ್ದಕ್ಕೆ ನಿರ್ಣಯ ಎಂಬ ಅರ್ಥ ಬರು ತ್ತದೆ. ದೃಷ್ಟಾಂತ, ಸಿದ್ಧಾಂತ, ವೇದಾಂತ—ಈ ಮೂರು ಪದಗಳನ್ನು ಗಮನಿಸಬಹುದು. ಕ್ರಮವಾಗಿ ಇವುಗಳಿಗೆ ನೋಡುವುದರಿಂದ ಬಂದ ನಿರ್ಣಯ, ಯುಕ್ತಿಯಿಂದ ಸಾಧಿಸ ಲ್ಪಟ್ಟ ನಿರ್ಣಯ, ಅನಾದಿಪರಂಪರೆಯಿಂದ ಉಪದೇಶದ (ವೇದದ) ಮೂಲಕ ಬಂದ ನಿರ್ಣಯ ಎಂಬ ಅರ್ಥ ಸ್ಫುರಿಸುತ್ತದೆ. ಎಂದರೆ ಈ ಮೂರು ಶಬ್ದಗಳೂ ಪ್ರತ್ಯಕ್ಷ ಅನುಮಾನ ಶಬ್ದ ಪ್ರಮಾಣಗಳ ಮೂಲಕ ಬಂದ ನಿರ್ಣಯಗಳೆಂಬ ಅರ್ಥವನ್ನು ಕೊಡುತ್ತವೆ.

'ವೇದಾಂತ ಸೂತ್ರ'ಗಳನ್ನು 'ಬ್ರಹ್ಮಸೂತ್ರ'ಗಳೆಂದೂ 'ಶಾರೀರಿಕ ಸೂತ್ರ'ಗಳೆಂದೂ ಕರೆಯುವುದುಂಟು. ಬ್ರಹ್ಮಸಾಕ್ಷಾತ್ಕಾರವನ್ನೇ ಗುರಿಯಾಗಿ ಉಳ್ಳ ಈ ಸೂತ್ರಗಳಿಗೆ 'ಬ್ರಹ್ಮಸೂತ್ರ'ಗಳೆಂಬ ಹೆಸರು ಅನ್ವರ್ಥವಾಗಿಯೇ ಇದೆ. ಇನ್ನು 'ಶಾರೀರಿಕ' ಎಂಬ ಶಬ್ದಕ್ಕೆ 'ಶರೀರದೊಳಗಿರುವ ಆತ್ಮ' ಎಂಬ ಅರ್ಥ ಬರುತ್ತದೆ. ಈ ಸೂತ್ರಗಳು ಆತ್ಮವಿಚಾರ ಶಾಸ್ತ್ರವಾದುದರಿಂದ 'ಶಾರೀರಿಕ ಶಾಸ್ತ್ರ', 'ಶಾರೀರಿಕ ಮೀಮಾಂಸೆ', 'ಶಾರೀರಿಕ ಸೂತ್ರ' ಮೊದಲಾದ ಹೆಸರುಗಳು ರೂಢವಾದುವು. ಶಾರೀರಿಕವೆಂಬ ಈ ಪದವನ್ನು ಮೊದಲು ಈ ಅರ್ಥದಲ್ಲಿ ಪ್ರಯೋಗಿಸಿದವರು ಉಪವರ್ಷಾಚಾರ್ಯರೆಂಬುದಾಗಿ ತಿಳಿದುಬರುತ್ತದೆ. ಅನಂತರದ ಭಾಷ್ಯಕಾರರೂ ಆ ಶಬ್ದವನ್ನು ಬಳಸಿದ್ದಾರೆ.

ಇದುವರೆಗೆ ನೋಡಿದ ಐದು ದರ್ಶನಗಳಲ್ಲಿ ಕಂಡುಬರುವ ಕುಂದುಕೊರತೆಗಳನ್ನೆಲ್ಲಾ ನಿವಾರಿಸಿ ಬಹುಮಟ್ಟಿಗೆ ಸರ್ವಸಮ್ಮತವಾಗುವಂತೆ ಈ ಸೂತ್ರಗಳು ರಚಿತವಾಗಿವೆ ಎನ್ನ

ಬಹುದು. ಮುಂದೆ ಈ ಸೂತ್ರಗಳಿಗೆ ದೊರೆತ ಪ್ರಾಮುಖ್ಯವೇ ಅದನ್ನು ಸ್ಪಷ್ಟಪಡಿಸುತ್ತದೆ. ಭರತಖಂಡದ ಧಾರ್ಮಿಕ ಚರಿತ್ರೆಯ ಮೇಲೆ ಅಚ್ಚಳಿಯದ ಪ್ರಭಾವವನ್ನು 'ಬ್ರಹ್ಮಸೂತ್ರ'ಗಳು ಬೀರಿದುವು. ಉಪನಿಷತ್ತುಗಳು ಮತ್ತು ಭಗವದ್ಗೀತೆಯ ಜೊತೆಗೆ ಇವೂ ಸೇರಿ 'ಪ್ರಸ್ಥಾನತ್ರಯ'ಗಳೆಂದು ಪ್ರಸಿದ್ಧವಾಗಿವೆ.

'ಬ್ರಹ್ಮಸೂತ್ರ'ಗಳನ್ನು ರಚಿಸಿದವನು ಬಾದರಾಯಣನೆಂಬುದು ಪರಂಪರೆಯಿಂದ ಬಂದ ಸಂಗತಿ. ಸನಾತನ ಸಂಪ್ರದಾಯದ ಪ್ರಕಾರ ಬಾದರಾಯಣನಿಗೂ ವ್ಯಾಸನಿಗೂ ಯಾವ ಭೇದವೂ ಇಲ್ಲ. ಇಬ್ಬರೂ ಏಕವ್ಯಕ್ತಿಗಳೆಂದೇ ನಂಬಲಾಗಿದೆ. ಆದರೆ ಶ್ರೀ ಶಂಕರರ ಅಭಿಪ್ರಾಯವನ್ನು ನೋಡಿದರೆ ಅವರಿಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದು ಹೇಳುವುದಕ್ಕೆ ಅವಕಾಶವಿದೆ. ಅದು ಹೇಗೇ ಇರಲಿ ಕ್ರಿ.ಪೂ. ೫೦೦ರಿಂದ ೨೦೦ರ ಒಳಗೆ ಈ ಸೂತ್ರಗಳು ರಚಿತವಾಗಿರಬೇಕೆಂಬುದು ಅನೇಕ ವಿದ್ವಾಂಸರ ಅಭಿಪ್ರಾಯ.

'ಬ್ರಹ್ಮಸೂತ್ರ'ಗಳಲ್ಲಿ ನಾಲ್ಕು ಅಧ್ಯಾಯಗಳಿದ್ದು ಒಂದೊಂದರಲ್ಲಿಯೂ ನಾಲ್ಕು ಪಾದಗಳಿವೆ. ಮೊದಲನೆಯ ಅಧ್ಯಾಯ ಬ್ರಹ್ಮತತ್ತ್ವವನ್ನು ಕೇಂದ್ರ ಸತ್ಯವನ್ನಾಗಿಟ್ಟುಕೊಂಡು ಚರ್ಚಿಸುತ್ತದೆ. ವೇದಗಳಲ್ಲಿಯ ವಿವಿಧ ಹೇಳಿಕೆಗಳಲ್ಲಿ ಸಮನ್ವಯವನ್ನು ಸಾಧಿಸುವ ಪ್ರಯತ್ನ ಇದರದು. ಮುಖ್ಯವಾಗಿ ಬ್ರಹ್ಮನ ಸ್ವರೂಪ, ಜೀವ ಮತ್ತು ಜಗತ್ತಿನೊಡನೆ ಅದರ ಸಂಬಂಧ ಇವುಗಳ ನಿರೂಪಣೆ ಇಲ್ಲಿ ಬರುತ್ತದೆ. ಈ ಅಭಿಪ್ರಾಯಕ್ಕೆ ವಿರೋಧವಾಗಿರುವ ಇತರ ಅಭಿಪ್ರಾಯಗಳ ವಿಮರ್ಶೆ ಎರಡನೆಯ ಅಧ್ಯಾಯದ ವಸ್ತು. 'ವೇದಾಂತ ಸೂತ್ರ'ಗಳ ತರ್ಕಸರಣಿ ಇಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಮೂರನೆಯ ಅಧ್ಯಾಯ ಬ್ರಹ್ಮವಿದ್ಯೆಯನ್ನು ಸಾಧಿಸುವ ಸಾಧನಗಳನ್ನು ಕುರಿತದ್ದು. ಇಲ್ಲಿ ಪುನರ್ಜನ್ಮ ಮೊದಲಾದ ಅನೇಕ ವಿಷಯಗಳ ಚರ್ಚೆಯಿದೆ. ಬ್ರಹ್ಮವಿದ್ಯೆಯ ಫಲನಿರೂಪಣೆ ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿತವಾಗಿದೆ. ಮರಣದ ನಂತರ ಜೀವಾತ್ಮರು ಕೈಕೊಳ್ಳುವ ಪ್ರಯಾಣದ ಕಥನ ಇಲ್ಲಿ ಬರುತ್ತದೆ. ಈ ಎಲ್ಲ ವಿಷಯಗಳಲ್ಲಿಯೂ 'ಉಪನಿಷತ್ತಿನ ಅಭಿಪ್ರಾಯಗಳನ್ನು ರೂಢಿಸಿಕೊಂಡು ತನ್ನದೇ ಆದ ಮಾರ್ಗದಲ್ಲಿ ನಡೆದಿದೆ 'ವೇದಾಂತ ಸೂತ್ರ'.

ಈ ಸೂತ್ರಗಳಲ್ಲಿ ಕಂಡುಬರುವ ದರ್ಶನವನ್ನು ಒಂದೆರಡು ಮಾತುಗಳಲ್ಲಿ ಹೀಗೆ ಹೇಳಬಹುದು: ಬ್ರಹ್ಮದ ಸ್ವರೂಪವನ್ನು ತಿಳಿದುಕೊಳ್ಳಲು ವೇದಗಳೇ ಪ್ರಮಾಣ. ವೇದ ಶಬ್ದಗಳು ನಿತ್ಯವಾದುವು. "ಅತ ಏವ ಚ ನಿತ್ಯತ್ವಂ" (೧. ೩. ೨೯) ಎಂಬ ಸೂತ್ರ ಅದನ್ನು ಸ್ಪಷ್ಟಪಡಿಸುತ್ತದೆ. ಆಗಮಗಮ್ಯವಾದ ವಿಷಯದಲ್ಲಿ ಕೇವಲ ತರ್ಕವನ್ನು ಅವಲಂಬಿಸಬಾರದು. ಬ್ರಹ್ಮಸತ್ಯ ತರ್ಕಾತೀತವಾದುದು. ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಬ್ರಹ್ಮನೇ ಕಾರಣ. ಎರಡನೆಯ ಸೂತ್ರವೇ ಈ ಮಾತನ್ನು ಸ್ಪಷ್ಟಪಡಿಸುತ್ತದೆ. "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಮೊದಲನೆಯ ಸೂತ್ರವಾದೊಡನೆ "ಜನ್ಮಾದ್ಯಸ್ಯ ಯತಃ" ಎಂದರೆ "ಈ ಜಗತ್ತಿನ ಉತ್ಪತ್ತಿ ಮೊದಲಾದುವು ಯಾವುದರಿಂದ ಉಂಟಾಗುವುವೋ ಅದೇ ಬ್ರಹ್ಮ" ಎಂಬ ಎರಡನೆಯ ಸೂತ್ರ ಬರುತ್ತದೆ.

ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ ।
ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ॥

ಯಾವುದರಿಂದ ಪ್ರಾಣಿಗಳು ಹುಟ್ಟುವುವೋ, ಹಾಗೆ ಹುಟ್ಟಿದವುಗಳು ಯಾವುದರಿಂದ ಜೀವಿಸುತ್ತವೆಯೋ ಮತ್ತು ಇಲ್ಲಿಂದ ಹೊರಡುವಾಗ ಯಾವುದನ್ನು ಪ್ರವೇಶಿಸುವುವೋ ಅದನ್ನು ತಿಳಿದುಕೋ. ಅದು ಬ್ರಹ್ಮ"—ಎಂಬ ತೈತ್ತಿರೀಯ ಉಪನಿಷತ್ತಿನ ಮಾತನ್ನು (೩.೧) ಇಲ್ಲಿ ಸ್ಮರಿಸಿಕೊಳ್ಳಬಹುದು.

ಬ್ರಹ್ಮನೇ ಈ ಜಗತ್ತಿಗೆ ನಿಮಿತ್ತಕಾರಣನೂ ಉಪಾದಾನಕಾರಣನೂ ಆಗಿದ್ದಾನೆ. ಆತನಿಗೆ ಜಗತ್ತನ್ನು ಸೃಷ್ಟಿಸಲು ಇತರ ಸಾಧನಗಳ ಆವಶ್ಯಕತೆಯಿಲ್ಲ. ಕಾರ್ಯರೂಪವಾದ ಈ ಸೃಷ್ಟಿ ಉತ್ಪತ್ತಿಗೆ ಮೊದಲು ಕಾರಣದಲ್ಲಿಯೇ ಅಡಗಿರುತ್ತದೆ. ಕಾರ್ಯಕಾರಣಗಳು ಒಂದೇ ಆಗಿದ್ದರೂ ಅವುಗಳ ಗುಣಗಳು ಬೇರೆಯಾಗಿರುತ್ತವೆ. ಬ್ರಹ್ಮದ ಕಾರ್ಯವಾದ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ. ಮಣ್ಣನ್ನು ಮಡಕೆಯ ಆಕಾರಕ್ಕೆ ತಂದಾಗಲೂ ಅದು ಮಣ್ಣಾಗಿಯೇ ಇರುತ್ತವೆ. ಹಾಗೆ ಕಾರ್ಯಕಾರಣಗಳಲ್ಲಿ ಭೇದವು ಕಂಡುಬರುವುದು ಅವಸ್ಥೆಯಿಂದ. ಆದರೆ ವಸ್ತುತಃ ಕಾರಣನಾದ ಪರಬ್ರಹ್ಮ ಮತ್ತು ಕಾರ್ಯವಾದ ಸೃಷ್ಟಿ ಅಭಿನ್ನವಾದುವು.

ಜೀವಾತ್ಮನನ್ನು "ಜ್ಞ" ಎಂದಿದ್ದಾನೆ ಬಾದರಾಯಣ. ಇದಕ್ಕೆ ಶಂಕರರು ಕೊಡುವ ಅರ್ಥ 'ನಿತ್ಯಚೈತನ್ಯಸ್ವರೂಪನು' ಎಂದು. ಆನಂದಮಯನಾದ ಆತ್ಮನ ವರ್ಣನೆ ಉಪನಿಷತ್ತುಗಳಲ್ಲಿ ಬರುತ್ತದೆ. ಜೀವಾತ್ಮನು ಜ್ಞಾತೃವೂ ಕರ್ತೃವೂ ಆಗಿದ್ದಾನೆ. ಇವನಿಗೆ ಜನನ ಮರಣಗಳಿಲ್ಲ. ಇವನು ನಿತ್ಯನು, ಅಣುಪರಿಮಾಣವುಳ್ಳವನು, ಬ್ರಹ್ಮನ ಅಂಶ ಸ್ವರೂಪನಾದವನು. ಉಪಾಸನಾ ರೂಪವಾದ ಜ್ಞಾನದಿಂದ ಜೀವನಿಗೆ ಪುರುಷಾರ್ಥವು ಸಿದ್ಧಿಸುತ್ತದೆ. ಬ್ರಹ್ಮಜ್ಞಾನದಿಂದ ಅವನ ಪಾಪವು ನಾಶವಾಗುತ್ತದೆ. ಕೊನೆಗೆ ಬ್ರಹ್ಮನಲ್ಲಿ ಐಕ್ಯವಾಗುತ್ತಾನೆ. ಈ ಮೊದಲಾದ ಅಂಶಗಳು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿರುವ ರೀತಿಯನ್ನು ನೋಡಿದರೆ ಉಪನಿಷತ್ತುಗಳ ದರ್ಶನವೇ ಇಲ್ಲಿ ಮೈವೆತ್ತಿರುವುದನ್ನು ಕಾಣಬಹುದು.

ಉಪನಿಷತ್ತುಗಳ ಹೇಳಿಕೆಗಳಲ್ಲಿ ಸಮನ್ವಯವನ್ನು ಸಾಧಿಸಲು ಬಾದರಾಯಣನು ಪ್ರಯತ್ನಿಸಿದನೇ ಹೊರತು ಯುಕ್ತಿಯ ಆಧಾರದ ಮೇಲೆ ಹೊಸದೊಂದು ಶಾಸ್ತ್ರವನ್ನೇ ಪ್ರತಿಪಾದಿಸಲು ಪ್ರಯತ್ನಿಸಲಿಲ್ಲ. ಎಲ್ಲ ದೃಷ್ಟಿಗಳ ಸಮನ್ವಯರೂಪವಾದ ಅವರ ಸೂತ್ರಗಳು ಮುಂದೆ ಬಂದ ತಾತ್ತ್ವಿಕರಿಗೆ ಅವರವರ ಅಭಿಪ್ರಾಯಕ್ಕನುಗುಣವಾಗಿ ಅರ್ಥವನ್ನು ನೀಡಿದುವು. ಶಂಕರರಿಗೆ ಸಂಪೂರ್ಣ ಅದ್ವೈತದ ಅನುಭವ ಅಲ್ಲಿ ಕಂಡರೆ, ರಾಮಾನುಜರಿಗೆ ವಿಶಿಷ್ಟಾದ್ವೈತದರ್ಶನ ಅವುಗಳಿಂದ ಸ್ಫುರಿಸಿತು. ಮಧ್ವರಿಗೆ ಸಂಪೂರ್ಣ ದ್ವೈತವೇ ಅಲ್ಲಿ ಕಾಣಿಸಿತು. ಶಂಕರರಿಗಿಂತ ಹಿಂದೆಯೇ ಕೆಲವರು ಈ ಸೂತ್ರಗಳ ಮೇಲೆ ಭಾಷ್ಯ ಬರೆದಿದ್ದಂತೆ ತೋರುತ್ತದೆ. ಶಂಕರರ ನಂತರ ಭಾಸ್ಕರ, ಯಾದವಪ್ರಕಾಶ, ರಾಮಾನುಜ, ಕೇಶವ, ನೀಲಕಂಠ, ಮಧ್ವ, ಬಲದೇವ, ವಲ್ಲಭ, ಶ್ರೀಕಂಠ, ವಿಜ್ಞಾನ

ಭಿಕ್ಷು ಮೊದಲಾದವರು ತಮ್ಮ ತಮ್ಮ ಅಭಿಪ್ರಾಯಗಳಿಗೆ ಸಮರ್ಥನೆಯನ್ನು ಈ ಸೂತ್ರಗಳಲ್ಲಿ ಕಂಡರು. ಅದಕ್ಕೆ ಅನುಗುಣವಾಗಿ ಭಾಷ್ಯಗಳನ್ನು ಬರೆದರು. ಅನೇಕ ಸಂಪ್ರದಾಯ ಪರಂಪರೆಗಳಿಗೆ ಕಾರಣರಾದರು. ಈ ದೃಷ್ಟಿಯಿಂದ ಷಡ್ದರ್ಶನಗಳಲ್ಲೆಲ್ಲಾ ಒಂದು ವಿಶಿಷ್ಟವಾದ ಸ್ಥಾನ 'ಬ್ರಹ್ಮಸೂತ್ರ'ಗಳಿಗೆ ಲಭಿಸಿತು.

## ಭಾಷ್ಯಗಳು, 'ಮತ'ಗಳು

ಇದುವರೆಗಿನ ಧಾರ್ಮಿಕ ಬೆಳವಣಿಗೆಯ ಹಿನ್ನೆಲೆಯನ್ನು ಗಮನಿಸಿದರೆ ಭಾರತೀಯ ಜನಜೀವನ, ಧಾರ್ಮಿಕ ಪ್ರಯೋಗಗಳ ಪರೀಕ್ಷಾರಂಗವಾಗಿ ಪರಿಣಮಿಸಿದುದು ಕಂಡು ಬರುತ್ತದೆ. ಭೌತಿಕ ಜಗತ್ತಿನ ವಸ್ತುನಿಷ್ಠ ಪ್ರಯೋಗಗಳಿಗಿಂತ ಹೆಚ್ಚಾಗಿ ಅಂತರಂಗದ ಆಧ್ಯಾತ್ಮಿಕ ಪ್ರಯೋಗಕ್ಕೆ ಮಹತ್ತ್ವ ಲಭಿಸಿತು. ಆ ರಂಗದಲ್ಲಿ ಅನೇಕ ಅಭಿಪ್ರಾಯಗಳ ಮಂಡನೆಗಳೂ ಖಂಡನೆಗಳೂ ನಡೆಯುತ್ತಿದ್ದುವು. ಭೌತಜಗತ್ತಿನ ವಿಷಯಸುಖವೇ ಪರಮಪದವೆಂಬ ಚಾರ್ವಾಕಾದಿ ನಾಸ್ತಿಕರಿಂದ ಹಿಡಿದು ಷಡ್ದರ್ಶನಗಳ ತುತ್ತತುದಿಯಾದ ವೇದಾಂತದರ್ಶನದವರೆಗೆ ವಿವಿಧ ಅಭಿಪ್ರಾಯಗಳು ಮೂಡುತ್ತಿದ್ದುವು; ಮಾರ್ಗಗಳು ಏರ್ಪಡುತ್ತಿದ್ದುವು. ಅಲ್ಲಿಗೂ ನಿಲ್ಲದೆ ಅಂತರಜಗತ್ತಿನ ಪರಿಶೀಲನೆ ಮುಂದುವರಿಯಿತು. ಷಡ್ದರ್ಶನಗಳ ಅಭಿಪ್ರಾಯಗಳನ್ನು ಹೊಸ ಅನುಭವಗಳ ಬೆಳಕಿನಲ್ಲಿ ಮತ್ತು ಶ್ರುತಿಸ್ಮೃತಿಗಳ ಹಿನ್ನೆಲೆಯಲ್ಲಿ ಹೊಸ ದೃಷ್ಟಿಯಿಂದ ವಿಚಾರವಂತ ತತ್ತ್ವವೇತ್ತರು ಪರಿಶೀಲಿಸಿದರು. ಹಿಂದಿನ ಗ್ರಂಥಗಳ ಮೇಲೆ ಹೊಸ ದೃಷ್ಟಿಯ ಭಾಷ್ಯಗಳೂ ವ್ಯಾಖ್ಯಾನಗಳೂ ಹೊರಟವು.

ಪ್ರಸ್ಥಾನತ್ರಯ ಭಾಷ್ಯಕಾರರ ಮನೋಧರ್ಮಕ್ಕೆ ಅನುಗುಣವಾಗಿ ಬೇರೆ ಬೇರೆ ದೃಷ್ಟಿಯ ಪ್ರತಿಪಾದನೆಗಳಿಗೆ ಎಡೆಕೊಟ್ಟಿತು. ಅವುಗಳಲ್ಲಿ ಉಕ್ತವಾದ ಆಧ್ಯಾತ್ಮಿಕ ಅನುಭವ ಒಂದೇ ಆದರೂ ಅದನ್ನು ಅನುಭವಕ್ಕೆ ತಂದುಕೊಳ್ಳುವ ವಿಭಿನ್ನ ಮಾರ್ಗಗಳು ಭಾಷ್ಯಕಾರರಿಂದ ಏರ್ಪಟ್ಟುವು. ಅನುಭವದ ಸ್ವರೂಪಕಲ್ಪನೆಯೂ ರೂಪದಲ್ಲಿ ಬೇರೆ ಬೇರೆಯಾಯಿತು. ಈ ಭಾಷ್ಯಕಾರರಲ್ಲಿ ಪ್ರಧಾನರಾದ ಮೂವರ ಅಭಿಪ್ರಾಯಗಳನ್ನು ಸಂಗ್ರಹವಾಗಿ ಇಲ್ಲಿ ನೋಡಲಾಗಿದೆ. ಅವುಗಳ ಜೊತೆಯಲ್ಲಿಯೇ, ಕೆಲವು 'ಮತ'ಗಳ ಸಂಕ್ಷೇಪ ಪರಿಶೀಲನೆಯೂ ಇಲ್ಲಿದೆ.

ಮೊತ್ತಮೊದಲನೆಯದಾಗಿ ಶಂಕರರ ವಿಚಾರಸರಣಿಯನ್ನು ನೋಡಬಹುದು. ಇವರ ಕಾಲದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಸುಮಾರು ಕ್ರಿ.ಶ. ೯ನೆಯ ಶತಮಾನದಲ್ಲಿದ್ದವರೆಂಬ ಅಭಿಪ್ರಾಯವನ್ನು ಬಹುಮಟ್ಟಿಗೆ ಈಗ ಒಪ್ಪಿಕೊಳ್ಳಲಾಗಿದೆ. ಇವರಿಗಿಂತಲೂ ಹಿಂದೆ ಕೆಲವರು ಭಾಷ್ಯಕಾರರು ಆಗಿಹೋಗಿರುವುದಕ್ಕೆ ಆಧಾರಗಳಿವೆ. ಕಾಲದ ದೃಷ್ಟಿಯಿಂದ ಅಲ್ಲದಿದ್ದರೂ ತಾವು ಬೀರಿದ ಪ್ರಭಾವದ ದೃಷ್ಟಿಯಿಂದ ಶಂಕರರು ಮೊದಲ ಭಾಷ್ಯಕಾರರೆಂದು ಹೇಳಬಹುದು. ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು 'ಅದ್ವೈತ' ಸಿದ್ಧಾಂತವನ್ನು ಅವರು ಸ್ಥಾಪಿಸಿದರು.

ಅದ್ವೈತದ ಸುಳುಹುಗಳು ಶಂಕರರಿಗಿಂತಲೂ ಹಿಂದೆಯೇ ಇದ್ದುವು. ಗೌಡಪಾದರಲ್ಲಿ ಈ ದೃಷ್ಟಿ ಕಾಣಸಿಗುತ್ತದೆ. ಶಂಕರರ ಗುರುಗಳಾದ ಗೋವಿಂದರಿಗೆ ಗುರುಗಳಾಗಿದ್ದವರು ಗೌಡಪಾದರು. ಇವರ ಕಾರಿಕೆಗಳು ಅದ್ವೈತದ ಅಭಿಪ್ರಾಯಗಳನ್ನು ಸೂಕ್ಷ್ಮರೂಪದಲ್ಲಿ ಸೂಚಿಸಿದುವು. ಆದರೆ ಶಂಕರರು ಅವುಗಳನ್ನು ತಮ್ಮ ಪ್ರತಿಭಾಸ್ಫುರಣೆಯಿಂದ ಬೆಳಗಿಸಿ ಸ್ವತಂತ್ರ ಸಿದ್ಧಾಂತವನ್ನಾಗಿ ಪ್ರತಿಷ್ಠಾಪಿಸಿದರು. ಭಾರತೀಯ ವಿಚಾರಧಾರೆಯಲ್ಲಿ ಒಂದು ಪ್ರಮುಖವಾದ ಘಟ್ಟವನ್ನು ಅದ್ವೈತಸಿದ್ಧಾಂತ ನಿರ್ಮಿಸಿತು. ಮುಖ್ಯವಾದ ಉಪನಿಷತ್ತುಗಳು ಭಗವದ್ಗೀತೆ ಬ್ರಹ್ಮಸೂತ್ರಗಳ ಮೇಲೆ ಭಾಷ್ಯಗಳನ್ನು ಬರೆದುದಲ್ಲದೆ 'ಉಪದೇಶಸಾಹಸ್ರಿ', 'ವಿವೇಕ ಚೂಡಾಮಣಿ' ಎಂಬ ಗ್ರಂಥಗಳನ್ನು ರಚಿಸಿದರು. ಇವುಗಳಲ್ಲಿ ಅವರ ಆಳವಾದ ಪಾಂಡಿತ್ಯ, ನಿಶಿತಮತಿ, ಸೂಕ್ಷ್ಮಗ್ರಾಹಿಯಾದ ಬುದ್ಧಿಯ ಅದ್ಭುತ ತರ್ಕಶಕ್ತಿ ಇವುಗಳನ್ನು ಕಾಣಬಹುದು. ಅಂತೆಯೇ ತನ್ಮಯತೆಯಿಂದ ಉಕ್ಕೇರಿ ತಮ್ಮನ್ನೇ ಮರೆತು ಹಾಡಬಲ್ಲ ಭಕ್ತಹೃದಯವೂ ಅವರಿಗಿತ್ತು. ಅದಕ್ಕೆ ಉಜ್ಜ್ವಲವಾದ ಸಾಕ್ಷಿಯನ್ನು ಸ್ತೋತ್ರರೂಪವಾಗಿರುವ ಅವರ ಶ್ಲೋಕಗಳು ನುಡಿಯುತ್ತಿವೆ. ದಕ್ಷಿಣಾಮೂರ್ತಿ ಸ್ತೋತ್ರ, ಶಿವಾನಂದಲಹರಿ, ಸೌಂದರ್ಯಲಹರಿ—ಈ ಮೊದಲಾದ ಸ್ತೋತ್ರಗಳನ್ನು ಅವರು ರಚಿಸಿದ್ದಾರೆ. ಹೀಗೆ ಬಹುಮುಖವಾದ ತಮ್ಮ ವ್ಯಕ್ತಿತ್ವದಿಂದ ಶಂಕರರು ಅಚ್ಚಳಿಯದ ಪ್ರಭಾವವನ್ನು ಬೀರಿದ ಪ್ರಚಂಡಶಕ್ತಿಯಾಗಿ ಪರಿಣಮಿಸಿದರು.

ಬೌದ್ಧ ಧರ್ಮದ ಪ್ರಭಾವ ಕುಗ್ಗಿ ಹಿಂದುಧರ್ಮ ಪುನರುಜ್ಜೀವನಗೊಳ್ಳುವುದಕ್ಕೆ ಶಂಕರರ ವ್ಯಕ್ತಿತ್ವ ಬಹುಮಟ್ಟಿಗೆ ಕಾರಣವಾಯಿತು. ಈ ವೇಳೆಗೆ ಅನಾತ್ಮವಾದವಾಗಿ ಪರಿಣಮಿಸಿದ್ದ ಬೌದ್ಧಧರ್ಮವನ್ನು ಇವರು ತೀವ್ರವಾಗಿ ಪ್ರತಿಭಟಿಸಿದರು. ಶಂಕರರ ಅದ್ವೈತಕ್ಕೂ ಬೌದ್ಧಧರ್ಮದ ಕೆಲವು ಅಂಶಗಳಿಗೂ ಸಾಮ್ಯವಿದ್ದುದು ನಿಜ. ಎರಡಕ್ಕೂ ಪ್ರೇರಣೆ ಉಪನಿಷತ್ತುಗಳೇ. ಬುದ್ಧನಮೇಲೆಯೂ ಅವು ಬೀರಿದ ಪ್ರಭಾವವನ್ನು ಕಡೆಗಣಿಸುವಂತಹುದಲ್ಲ. ಆದರೆ ಬೌದ್ಧರು ಅದನ್ನು ಒಪ್ಪಿಕೊಳ್ಳಲಿಲ್ಲ. ಶಂಕರರು ಅದನ್ನು ಸ್ಪಷ್ಟವಾಗಿ ಒಪ್ಪಿಕೊಂಡು ಅವುಗಳ ತಳಹದಿಯ ಮೇಲೆಯೇ ತಮ್ಮ ವಾದವನ್ನು ಕಟ್ಟಿದರು. ಬೌದ್ಧಧರ್ಮದ ಅನೇಕ ಅಂಶಗಳನ್ನು ಅಳವಡಿಸಿಕೊಂಡರು. ಆದರೆ ಅದನ್ನು ಶ್ರುತಿಪ್ರಮಾಣಬದ್ಧವಾಗಿ, ತರ್ಕಸಮ್ಮತವಾಗಿ ನಿರೂಪಿಸಿದರು.

ಸೃಷ್ಟಿ, ಸೃಷ್ಟಿಕರ್ತ, ಜೀವ, ಜಗತ್ತು—ಇವುಗಳ ಸ್ವರೂಪ, ಪರಸ್ಪರ ಸಂಬಂಧ ಇವುಗಳನ್ನು ಕೂಲಂಕಷವಾಗಿ ಶಂಕರರು ಚರ್ಚಿಸಿದರು. ಉಪನಿಷತ್ತುಗಳು ಇದನ್ನು ಕುರಿತು ಹರಿಯಬಿಟ್ಟ ಆಲೋಚನೆಯ ಸರಣಿಯಲ್ಲಿ ಎರಡು ಶಾಖೆಗಳನ್ನು ಶಂಕರರು ಗುರುತಿಸಿದರು. ಒಂದು, ಸೃಷ್ಟಿಯಲ್ಲಿ ವೈವಿಧ್ಯವನ್ನು ಕಾಣುವ ದೃಷ್ಟಿ; ಇನ್ನೊಂದು, ಈ ಎಲ್ಲ ವೈವಿಧ್ಯದ ಹಿಂದೆ ಏಕತತ್ತ್ವವನ್ನು ಗುರುತಿಸುವುದು. ಶಂಕರರ ಒಲವು ಏಕತೆಯ ಕಡೆಗೆ. ಜಗತ್ತಿನ ವಿವಿಧ ರೂಪಗಳೆಲ್ಲಾ ಒಂದು ಮಟ್ಟದವರೆಗೆ ಸತ್ಯ; ಅನಂತರ ಉಳಿಯುವ ಸತ್ಯವೆಂದರೆ ಏಕತೆಯೊಂದೇ. ಆದರೆ ವೈವಿಧ್ಯವಿಲ್ಲದೆ ಏಕತೆಯಿಲ್ಲ. ಆದುದರಿಂದಲೇ ಅವರು ತಮ್ಮ ಸಿದ್ಧಾಂತವನ್ನು 'ಅದ್ವೈತ' ಎಂದು ಕರೆದರು. 'ದ್ವೈತ'ವನ್ನು ದಾಟಿ

ದುದು ಅದ್ವೈತ. ವಾಚಸ್ಪತಿಗಳು ಹೇಳುವಂತೆ : "ನ ಖಲು ಅನನ್ಯತ್ವಮಿತಿ ಅಭೇದಂ ಬ್ರೂಮಃ ಕಿಂತು ಭೇದಂ ವ್ಯಾಸೇ ಧಾಮಃ" ಎಂದರೆ ಅವರು ಅನೇಕತ್ವವೇ ಕೊನೆಯ ಸತ್ಯವೆಂಬುದನ್ನು ನಿರಾಕರಿಸಿದರೇ ಹೊರತು ಕೇವಲ 'ಏಕತ್ವ' ಒಂದನ್ನೇ ಪ್ರತಿಪಾದಿಸಲಿಲ್ಲ.

'ಸೃಷ್ಟಿಯೆಲ್ಲ ಮಿಥ್ಯೆ, ಬ್ರಹ್ಮವೊಂದೇ ಸತ್ಯ : "ಬ್ರಹ್ಮಸತ್ಯ ಜಗನ್ಮಿಥ್ಯಾ" ಎಂಬುದು ಅದ್ವೈತದ ಪ್ರಸಿದ್ಧವಾದ ಉಕ್ತಿ. ಶಂಕರರು ಅದನ್ನು ಹೇಳಿದ ನಿಲವನ್ನೂ ಅದರ ವ್ಯಾಪ್ತಿಯನ್ನೂ ಸರಿಯಾಗಿ ಅರ್ಥಮಾಡಿಕೊಳ್ಳಬೇಕು. 'ಸತ್ಯ' 'ಮಿಥ್ಯೆ' ಇವುಗಳ ವಿವಿಧ ಹಂತಗಳನ್ನು ಅನೇಕ ದೃಷ್ಟಾಂತಗಳಿಂದ ಸಾದೃಶ್ಯಗಳಿಂದ ಅವರು ವಿವರಿಸಿದ್ದಾರೆ. ಇಲ್ಲಿ ಪ್ರಸಿದ್ಧವಾದ ಅವರ ಒಂದು ಉದಾಹರಣೆ 'ಸರ್ಪರಜ್ಜು ನ್ಯಾಯ'ವನ್ನು ತೆಗೆದುಕೊಳ್ಳಬಹುದು : ದೂರದಿಂದ ಬಂದು ಹಗ್ಗವನ್ನು ಕಂಡಾಗ ಆಕಾರ ಸಾದೃಶ್ಯದಿಂದ ಅದು ಹಾವು ಎಂಬ ಭ್ರಾಂತಿ ಮೊದಲು ಉಂಟಾಗಬಹುದು. ಆದರೆ ಹತ್ತಿರ ಹೋಗಿ ನೋಡಿದ ಮೇಲೆ ಮೊದಲಿನ ಭ್ರಾಂತಿ ನಿವಾರಣೆಯಾಗಿ ಅದು ಹಗ್ಗವೆಂಬ ಸತ್ಯ ಗೋಚರವಾಗುತ್ತದೆ. ಭ್ರಾಂತಿ ನಿರಸನವಾಗುವವರೆಗೂ ಹಾವೆಂಬ ಭಾವನೆ ಸತ್ಯ; ಅನಂತರ ಅದು ಮಿಥ್ಯೆ, ಹಗ್ಗ ಮಾತ್ರ ಸತ್ಯ. ಜಗತ್ತಿಗೂ ಈ ಮಾತು ಅನ್ವಯಿಸುತ್ತದೆ. ಸೃಷ್ಟಿಯ ಈ ಅನೇಕ ರೂಪ ವೈವಿಧ್ಯಗಳೆಲ್ಲಾ ಹಗ್ಗದಲ್ಲಿ ಹಾವನ್ನು ಕಂಡಂತೆ ಭ್ರಾಂತಿಜನ್ಯ. ಈ ಅರ್ಥದಲ್ಲಿ ಅದು ಮಿಥ್ಯೆ. ಎಂದರೆ ಶಂಕರರು ಈ ಸೃಷ್ಟಿ ವ್ಯಾವಹಾರಿಕ ಸತ್ಯ (Empirical reality) ವೇ ಹೊರತು ಪಾರಮಾರ್ಥಿಕ ಸತ್ಯ (Absolute reality) ವಲ್ಲ ಎಂದರು.

ಜೀವಾತ್ಮರ ಸ್ವರೂಪವೇನು ? ಅವೂ ಕೇವಲ ಭ್ರಾಂತಿಜನ್ಯವಾದವೇ ಹೇಗೆ ? ಶಂಕರರು ಜೀವಾತ್ಮರ ಸತ್ಯತ್ವವನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಈಗ ಕಾಣುವ ಬಂಧಿತ ಸ್ವರೂಪವೇ ಅವುಗಳ ಕೊನೆಯ ಸತ್ಯವಲ್ಲ. ತಮ್ಮ ಮೂಲ ಪರಿಶುದ್ಧ ಸ್ವರೂಪವನ್ನು ಕಳೆದುಕೊಂಡು ಬೇರೆ ಬಣ್ಣವನ್ನು ಅವು ತಳೆದಂತೆ ಕಾಣುತ್ತವೆ. ಇದನ್ನು ಸಮರ್ಥಿಸುವುದಕ್ಕಾಗಿ ಬೇರೊಂದು ಉದಾಹರಣೆಯನ್ನು ಆರಿಸಿಕೊಳ್ಳುತ್ತಾರೆ. ಸ್ಫಟಿಕಶುಭ್ರವಾದ ಶಂಖವನ್ನು ಹಸಿರುಬಣ್ಣದ ಗಾಜಿನ ಮೂಲಕ ನೋಡಿದರೆ ಅದು ಹಸಿರಾಗಿಯೇ ಕಾಣುತ್ತದೆ. ಗಾಜನ್ನು ತೆಗೆದು ನೋಡಿದರೆ ಅದರ ನಿಜವಾದ ಬಣ್ಣ ಗೋಚರಿಸುತ್ತದೆ. ಇಲ್ಲಿ ಶಂಖ ಸತ್ಯ, ಅದಕ್ಕೆ ಆರೋಪಿತವಾದ ಬಣ್ಣ ಮಿಥ್ಯ. ಇದು ಜೀವಾತ್ಮರಿಗೆ ಅನ್ವಯಿಸುವ ಮಾತು. ಜೀವಾತ್ಮರು ಸತ್ಯ. ಆದರೆ ಈಗ ಅವರು ಪಡೆದಿರುವ ಸಂಸಾರಬಂಧನದ ಬಣ್ಣ ಮಿಥ್ಯ. ಅವರು ದೀನರು, ದುಃಖಿಗಳು, ದರಿದ್ರರು ಅಲ್ಲ; ಅವರು ಆನಂದಸ್ವರೂಪರು. ಬ್ರಹ್ಮನ ಅಂಶಮಾತ್ರರು. ಬ್ರಹ್ಮನ ಸ್ವರೂಪವೇ ಆಗಿ ಪರಿಣಮಿಸಿ ಅದರಲ್ಲಿ ಲೀನರಾಗತಕ್ಕವರು. ಸಂಸಾರದ ಗಾಜಿನ ಬಣ್ಣ ಅವುಗಳಿಗೆ ತಾತ್ಕಾಲಿಕವಾಗಿ ಅಂಟಿದೆ. ಅದರಿಂದ ಬಿಡುಗಡೆಯನ್ನು ಪಡೆದು ಸಾಕ್ಷಾತ್ ಸಚ್ಚಿದಾನಂದ ಸ್ವರೂಪರಾಗಿ ಪರಿಣಮಿಸುವುದೇ ಅದರ ಗುರಿ. "ತತ್ ತ್ವಂ ಅಸಿ" "ಅಹಂ ಬ್ರಹ್ಮಾಸ್ಮಿ" "ಶಿವೋಽಹಂ"–ಇತ್ಯಾದಿ ಮಹಾವಾಕ್ಯಗಳು ಆ ಅರ್ಥವನ್ನು ಒಳಗೊಂಡಿವೆ.

ಇದು ಅದ್ವೈತದ ಮೂಲಭೂತವಾದ ತಿರುಳು. ಆ ಸಿದ್ಧಾಂತದ ಪ್ರಮುಖವಾದ ತಾತ್ತ್ವಿಕ ಕಲ್ಪನೆಗಳನ್ನು ಒಂದೆರಡು ಮಾತುಗಳಲ್ಲಿ ಇಲ್ಲಿ ನೋಡಬಹುದು.

ಮೊದಲನೆಯದು ಮಾಯೆ. ಅದ್ವೈತ ಸಿದ್ಧಾಂತದಲ್ಲಿ ಇದು ಬಹಳ ಪ್ರಮುಖವಾದ ಶಬ್ದ; ಅನಂತರವೂ ಅನೇಕ ಅರ್ಥಕಲ್ಪನೆಗಳನ್ನು ಪಡೆದು ವ್ಯಾಪಕವಾಗಿ ಬೆಳೆದು ಬಂದ ಶಬ್ದ. ಈ ಜಗತ್ತು ಮಿಥ್ಯೆ, ಅದು ಕನಸಿನಂತೆ ಕೇವಲ ತೋರಿಕೆಯದು—ಎಂಬುದು ಅದ್ವೈತದ ನಿರ್ಧಾರ. ಎಂದ ಮಾತ್ರಕ್ಕೆ ಇದಕ್ಕೆ ಅಸ್ತಿತ್ವವೇ ಇಲ್ಲವೆಂದಲ್ಲ. ಕನಸು ಕಾಣುತ್ತಿರುವವನಿಗೂ ಕನಸಿನ ಅಸ್ತಿತ್ವ ಸುಳ್ಳಲ್ಲ. ಹಾಗೆ ಪ್ರಪಂಚದ ಅಸ್ತಿತ್ವಕ್ಕೆ ಕಾರಣವಾಗಿರುವುದೇ ಮಾಯೆ. ಸಾಂಖ್ಯರು ಹೇಳುವ ಪ್ರಕೃತಿ, ಮತ್ತು ಅದರಿಂದ ಹುಟ್ಟುವ ಅನೇಕ ತತ್ತ್ವಗಳಿಂದ ನಿರ್ಮಿತವಾದ ಸೃಷ್ಟಿ—ಇವು ಮಾಯೆಯ ಆವರಣದಲ್ಲಿರುವವರೆಗೂ ಸತ್ಯವೆಂದು ತೋರುತ್ತವೆ. "ನಾನು ನಡೆದೆ" ಎಂದರೆ ನಡೆದವರು ಯಾರು? ದೇಹವೋ ದೇಹದಲ್ಲಿರುವ ಆತ್ಮವೋ? ದೇಹದ ಸಂಸರ್ಗದಿಂದ ಆತ್ಮನು ನಡೆದೆನೆಂಬ ಭ್ರಾಂತಿಗೆ ಒಳಗಾಗುತ್ತಾನೆ. ಎಂದರೆ ಇವೆರಡಕ್ಕೂ ಇರುವ ಸಂಬಂಧ ತೋರಿಕೆಯದು. ಅದನ್ನೇ 'ಮಾಯೆ' ಎಂದು ಶಂಕರರು ಹೆಸರಿಸಿದ್ದಾರೆ. ಮತ್ತು ಅನೇಕ ಯುಕ್ತಿಗಳಿಂದ ಅದರ ಪ್ರಭಾವವನ್ನು ಪ್ರತಿಪಾದಿಸಿದ್ದಾರೆ. ಸಾಂಖ್ಯರ ಮೂಲತತ್ತ್ವವಾದ ಪ್ರಕೃತಿಯೇ ಇಲ್ಲಿ ತೋರಿಕೆಯದಾಗಿ ಪರಿಣಮಿಸುತ್ತದೆ. ಅದ್ವೈತದ ಪರಿಭಾಷೆಯಲ್ಲಿ ಹೇಳುವುದಾದರೆ ಅದು 'ಸದಸದ್ ವಿಲಕ್ಷಣ'. ಸತ್ಯ ಅಸತ್ಯಗಳೆರಡಕ್ಕಿಂತಲೂ ಅದು ಬೇರೆಯಾದುದು. ಮಾಯೆಯ ತೆರೆ ಸರಿದಾಗ ಅದರ ನಿಜಸ್ವರೂಪ ಗೋಚರವಾಗುತ್ತದೆ. ಬ್ರಹ್ಮದ ದೃಷ್ಟಿಯಿಂದ ಈ ಮಾಯೆ 'ತುಚ್ಛ.' ತರ್ಕದ ದೃಷ್ಟಿಯಿಂದ ಅದು 'ಅನಿರ್ವಚನೀಯ', ಎಂದರೆ ತರ್ಕಕ್ಕೆ ಮೀರಿದ್ದು.

ತೋರಿಕೆಯ ಈ ಜಗತ್ತು ಪರಬ್ರಹ್ಮನಿಂದ ವ್ಯಕ್ತವಾದುದು. ಪರಬ್ರಹ್ಮವೇ ಏಕೈಕ ಸತ್ಯ. ಅದು ಅನಾದಿ ಅನಂತ ನಿತ್ಯ ನಿರಾಲಂಬ ನಿರಂಜನ. ಬ್ರಹ್ಮನನ್ನುಳಿದ ಸ್ವತಂತ್ರ ಅಸ್ತಿತ್ವ ಈ ಸೃಷ್ಟಿಗಿಲ್ಲ. ಹಗ್ಗವಿಲ್ಲದಿದ್ದರೆ ಹಾವಿನ ಭ್ರಾಂತಿ ಹೇಗೆ ಬರಲಾರದೋ ಹಾಗೆ ಬ್ರಹ್ಮನಿಲ್ಲದಿದ್ದರೆ ಈ ಪ್ರಪಂಚದ ಭ್ರಾಂತಿಯೂ ಬರಲಾರದು. ಮಾಯೆಯಿಂದ ಗೋಚರವಾಗುವ ಈ ತೋರಿಕೆಯಲ್ಲಿ ಪರಿವರ್ತನೆಗಳೂ ಬದಲಾವಣೆಗಳೂ ಕಾಣಬಹುದು. ಆದರೆ ಇವೆಲ್ಲಕ್ಕೂ ಆಧಾರಭೂತವಾದ ಬ್ರಹ್ಮ ನಿಷ್ಕಲ, ನಿರ್ಗುಣ.

ನಿರ್ಗುಣ ಬ್ರಹ್ಮದಂತೆ ಸಗುಣ ಸಾಕಾರ ಬ್ರಹ್ಮನ ಕಲ್ಪನೆಯೂ ಅದ್ವೈತದಲ್ಲಿದೆ. ಈ ತೋರಿಕೆಯ ಸೃಷ್ಟಿಕಲ್ಪನೆ ತೊಡಗಿದಾಗ "ಪರಬ್ರಹ್ಮ"ವೂ ಕಾರ್ಯಕಾರಣ ಸಂಬಂಧಕ್ಕೆ ಒಳಗಾಗುತ್ತದೆ. ಆಗ ಅದನ್ನು 'ಸಗುಣಬ್ರಹ್ಮ' ಅಥವಾ 'ಅಪರಬ್ರಹ್ಮ' ಎಂದು ಕರೆಯಬಹುದು. ಇದರ ಅಂಶವೇ ಇನ್ನೂ ಕೆಳಗಿಳಿದು ಜೀವಾತ್ಮರಾಗಿ ಪರಿಣಮಿಸುತ್ತದೆ. ಅವಿದ್ಯೆಯಿಂದ ತನ್ನ ಸ್ವರೂಪವನ್ನು ಮರೆಯುತ್ತದೆ. ಇಡೀ ಸೃಷ್ಟಿಗೆಲ್ಲಾ ವ್ಯಾಪಿಸುವ ವ್ಯಾಪಕವಾದ ಶಕ್ತಿಯನ್ನು 'ಮಾಯೆ' ಎಂದು ಕರೆಯಬಹುದಾದರೆ, ಜೀವಾತ್ಮರಿಗೆ

ಮುಸುಕುವ ಆವರಣವನ್ನು 'ಅವಿದ್ಯೆ' ಎನ್ನಬಹುದು. ಸಗುಣಬ್ರಹ್ಮನು ಮೂರ್ತಿಕಲ್ಪನೆಯನ್ನು ಪಡೆದರೆ 'ಈಶ್ವರ' ಅಥವಾ 'ಶಿವ'ನಾಗಿ ಪರಿಣಮಿಸುತ್ತಾನೆ. ಶಿವ ಸೃಷ್ಟಿಕರ್ತನಾದರೆ ಆಗ ಮಾಯೆ ಶಿವನೊಡನೆ ಅವಿನಾಭಾವಸಂಬಂಧವನ್ನುಳ್ಳ ಶಕ್ತಿಯಾಗಿ ಪರಿಣಮಿಸುತ್ತದೆ.

ಇನ್ನು ಜೀವಾತ್ಮರು. ಪರಮಾತ್ಮನ ಒಂದು ಅಂಶವೇ ಜೀವಾತ್ಮ. ಇದು ಅವಿದ್ಯೆಗೆ ಒಳಗಾಗಿ ಬಂಧನಕ್ಕೆ ಗುರಿಯಾಗುತ್ತದೆ. ದೇಹಾದಿಗಳನ್ನು ಧರಿಸಿ ಸಂಸಾರ ಚಕ್ರಕ್ಕೆ ಸಿಕ್ಕುತ್ತದೆ. ತಾನು ದೀನ ದುಃಖಿ ಅಲ್ಪಜ್ಞ ಎಂಬ ಭ್ರಮೆಗೆ ಒಳಗಾಗುತ್ತದೆ. ಈ ಬಂಧನದ ಪರಿಮಿತಿ ಜೀವಕ್ಕೆ ಶಾಶ್ವತವಲ್ಲ. ಅದು ತಾತ್ಕಾಲಿಕ ಸತ್ಯ. ಇದನ್ನು ಪ್ರಾತಿಭಾಸಿಕ ಸತ್ಯ (Seeming reality) ಎಂದು ಕರೆಯಬಹುದು. ಇದನ್ನು ಕಳೆದುಕೊಂಡು ತನ್ನ ಮೂಲಸ್ವರೂಪವನ್ನು ಆತ ಕಾಣಬೇಕಾದರೆ ಉಪಾಧಿಗಳನ್ನು ದಾಟಿ ಮೇಲೇರಬೇಕು. ಆ ನಿಲವಿನಲ್ಲಿ ನಿಂತು ನೋಡಿದಾಗ ತಾನೇ ತಾನಾಗಿ ಪರಿಣಮಿಸುತ್ತಾನೆ. ಎಲ್ಲವೂ ಬ್ರಹ್ಮಸ್ವರೂಪವಾಗಿ ಗೋಚರಿಸುತ್ತದೆ. "ಸರ್ವಂ ಖಲ್ವಿದಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" ಎಂಬ ಉದ್ಗಾರಗಳು ಆತನಿಂದ ಉಣ್ಮುತ್ತವೆ.

ಈ ನಿಲವನ್ನು ಪಡೆಯುವುದಕ್ಕೆ ಸಾಧಕನಿಗೆ ಸಾಧನ ಚತುಷ್ಟಯಗಳು, ಶ್ರವಣ ಮನನ ನಿದಿಧ್ಯಾಸನಗಳು, ಪಂಚಕೋಶ ವಿವೇಕ, ದೃಗ್‌ದೃಶ್ಯಮಾರ್ಗ ಮೊದಲಾದ ಅಂಶಗಳು ಅದ್ವೈತದ ಆಚರಣೆಯ ಮಾರ್ಗದಲ್ಲಿ ಉಕ್ತವಾಗಿವೆ. ಹಲವಾರು ವರ್ಷಗಳ ಅಧ್ಯಯನಕ್ಕೆ ವಿಷಯವಾಗುವಷ್ಟು ವಿಸ್ತಾರವಾಗಿದೆ, ಗಹನವಾಗಿದೆ ಆ ಜ್ಞಾನ. ಒಟ್ಟಿನಲ್ಲಿ ಭರತಖಂಡದ ತಾತ್ತ್ವಿಕ ದರ್ಶನಗಳ ಇತಿಹಾಸದಲ್ಲಿ ಒಂದು ಅತ್ಯುಜ್ಜ್ವಲ ಅಧ್ಯಾಯವಾಗಿ ಅದ್ವೈತ ದರ್ಶನ ಪರಿಣಮಿಸಿದೆ.

'ಬ್ರಹ್ಮಸೂತ್ರ'ಗಳ ಮೇಲೆ ಇದಾದ ನಂತರ ಬಂದ ಭಾಷ್ಯಗಳಲ್ಲಿ ರಾಮಾನುಜರ 'ಶ್ರೀಭಾಷ್ಯ' ಮುಖ್ಯವಾದುದು. ಇವರು ಪ್ರತಿಪಾದಿಸಿದುದು ವಿಶಿಷ್ಟಾದ್ವೈತ. ರಾಮಾನುಜರಿಗಿಂತಲೂ ಹಿಂದೆ ಇವನ್ನು 'ಸೇಶ್ವರ ಮೀಮಾಂಸೆ' ಎಂದು ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ. ಅನಂತರ ತಮಿಳಿನಲ್ಲಿ ಆಳ್ವಾರರಿಂದ ಪ್ರಚಲಿತವಾಯಿತು. ಇವರಲ್ಲದೆ ಈ ಪರಂಪರೆಯಲ್ಲಿ ಮೂವರು ಆಚಾರ್ಯರನ್ನು ಮುಖ್ಯವಾಗಿ ಹೇಳುವುದುಂಟು: ನಾಥಮುನಿಗಳು (ಕ್ರಿ.ಶ. ೫೪೩), ಯಾಮುನಾಚಾರ್ಯರು (ಕ್ರಿ.ಶ. ೯೧೬), ಮತ್ತು ರಾಮಾನುಜಾಚಾರ್ಯರು (ಕ್ರಿ. ಶ. ೧೦೨೭). ಇವರಲ್ಲಿ ನಾಥಮುನಿಗಳು ಬರೆದ ಗ್ರಂಥಗಳಾವುವೂ ದೊರೆತಿಲ್ಲ. ಯಾಮುನರು ಬರೆದ ಕೆಲವು ಗ್ರಂಥಗಳು ಸಿಕ್ಕಿವೆ. ಅವರು ಪ್ರತಿಪಾದಿಸಿದ ಅಂಶಗಳನ್ನೇ ತಮ್ಮ ಕೃತಿಗಳಲ್ಲಿ ವಿಸ್ತರಿಸಿ ರಾಮಾನುಜರು ಸಿದ್ಧಾಂತ ರೂಪವಾಗಿ ವಿಶಿಷ್ಟಾದ್ವೈತವನ್ನು ಪ್ರತಿಷ್ಠಾಪಿಸಿದರು.

ಇವರ ಕಾಲಕ್ಕಾಗಲೇ ಅದ್ವೈತ ತನ್ನ ಹೊಳಪನ್ನು ಕಳೆದುಕೊಂಡಿತ್ತು. ಸಾಮಾನ್ಯರ ಬೌದ್ಧಿಕ ಮಟ್ಟಕ್ಕೆ ಎಟುಕದ ಆ ತತ್ತ್ವ ಪಂಡಿತರ ಬುದ್ಧಿ ಚಮತ್ಕಾರವಾಗಿ ಪರಿಣಮಿಸಿತ್ತು. "ಜಗತ್ತು ಮಿಥ್ಯೆ" ಎಂಬ ತತ್ತ್ವ ಅನೇಕ ತೊಡಕುಗಳನ್ನು ತಂದೊಡ್ಡಿತ್ತು.

ಶಂಕರರು ಅದನ್ನು ಹೇಳಿದ ನಿಲವನ್ನಾಗಲಿ ಅದರ ಅಂತರ್ಯವನ್ನಾಗಲಿ ಸಾಮಾನ್ಯರು ಅರಿಯುವುದು ಸುಲಭಸಾಧ್ಯವಿಲ್ಲದಾಗಿತ್ತು. ಸೃಷ್ಟಿ ತತ್ತ್ವತಃ ಮಿಥ್ಯವಾದರೂ ವ್ಯಾವಹಾರಿಕ ಸತ್ಯವೆಂದು ಶಂಕರರು ಹೇಳಿದ ಮಾತು ಮರೆಯಾಗಿ ಅದ್ವೈತ ಅಡ್ಡಹಾದಿಯನ್ನು ಹಿಡಿದಿತ್ತು. ಈ ಎಲ್ಲ ತೊಡಕುಗಳನ್ನೂ ರಾಮಾನುಜರ ವಿಶಿಷ್ಟಾದ್ವೈತ ಪರಿಹರಿಸಿ ಹೊಸ ರೂಪದಲ್ಲಿ ಸನಾತನ ತತ್ತ್ವಗಳನ್ನು ಜಗತ್ತಿನ ಮುಂದಿಟ್ಟಿತು.

"ಬ್ರಹ್ಮಸತ್ಯ ಜಗನ್ಮಿಥ್ಯಾ" ಎಂದು ಅದ್ವೈತ ಹೇಳುವ ಮಾತಿನಲ್ಲಿ ಉತ್ತರಾರ್ಧವನ್ನು ವಿಶಿಷ್ಟಾದ್ವೈತ ಕೈಬಿಟ್ಟಿತು. ಬ್ರಹ್ಮ ಸತ್ಯವೆಂದು ರಾಮಾನುಜರೂ ಹೇಳಿದರು. ಆದರೆ ಆದಕ್ಕೆ ಎರಡು ವಿಶೇಷಣಗಳನ್ನು ಅವರು ಸೇರಿಸಿದರು. ಅವನ್ನು 'ಚಿತ್' ಮತ್ತು 'ಅಚಿತ್' ಎಂದು ಕರೆದರು. "ಚಿದಚಿದ್ವಿಶಿಷ್ಟ ತತ್ತ್ವಂ" ಎಂದು ಬ್ರಹ್ಮಸ್ವರೂಪವನ್ನು ಅವರು ನಿರ್ಣಯಿಸಿದರು. ಪರಬ್ರಹ್ಮನನ್ನು ಕೇವಲ ನಿರ್ಗುಣ ಸ್ವರೂಪದಲ್ಲಿ ಅವರು ಕಾಣಲಿಲ್ಲ. ಜಗತ್ತಿಗೆ ಕಾರಣವಾದ ಸಗುಣ ವಿಶಿಷ್ಟತತ್ತ್ವವಾಗಿ ಅದನ್ನು ಕಲ್ಪಿಸಿಕೊಂಡರು. 'ಚಿತ್' ಮತ್ತು 'ಅಚಿತ್'ಗಳು ಈಶ್ವರನಿಗೆ ಅಧೀನವಾಗಿ ಪ್ರತ್ಯೇಕಿಸಲಾಗದ ಅಂಗವಾಗಿ ಅವನೊಡನೆ ಅವಿನಾಭಾವ ಸಂಬಂಧದಿಂದ ಇರುವ ತತ್ತ್ವಗಳು ಇವು. ಈಶ್ವರ ಶರೀರಿ; ಇವು ಆತನ ಶರೀರಗಳು. ಹೀಗೆ ಚಿತ್, ಅಚಿತ್ ಮತ್ತು ಈಶ್ವರ ಇವು ವಿಶಿಷ್ಟಾದ್ವೈತದ ತತ್ತ್ವತ್ರಯ.

ಇವುಗಳಲ್ಲಿ 'ಚಿತ್' ಎನ್ನುವುದೇ ಜೀವ, 'ಅಚಿತ್' ಎನ್ನುವುದೇ ಪ್ರಕೃತಿ. ಜೀವ ಮತ್ತು ಪ್ರಕೃತಿಗಳು ಅನಾದಿಕಾಲದಿಂದ ಇವೆ, ಅನಂತ ಕಾಲದವರೆಗೂ ಇರುತ್ತವೆ. ಈಶ್ವರನಿಗೆ ಇವು ಶರೀರವಾಗಿದ್ದರೂ ಇವುಗಳ ದೋಷ ಅವನಿಗೆ ಅಂಟುವುದಿಲ್ಲ. ಕಾಲಕಾಲಕ್ಕೆ ಈ ಜೀವ ಮತ್ತು ಪ್ರಕೃತಿಗಳು ಈಶ್ವರನಲ್ಲಿ ಸೂಕ್ಷ್ಮರೂಪದಲ್ಲಿ ಅಡಗುತ್ತವೆ, ಸೃಷ್ಟಿ ವಿಕಾಸದಲ್ಲಿ ಹೊರಹೊಮ್ಮುತ್ತವೆ. ಪ್ರಕೃತಿಯಿಂದ ಬಹುರೂಪವೈವಿಧ್ಯದ ಈ ಜಗತ್ತು ನಿರ್ಮಾಣವಾಗುತ್ತದೆ. ಈ ಅರ್ಥದಲ್ಲಿ ಜಗತ್ತು ಸತ್ಯ, ಜೀವಾತ್ಮರೂ ಸತ್ಯ.

'ವಿಶಿಷ್ಟಾದ್ವೈತ' ಎಂಬ ಮಾತಿನ ಅರ್ಥವೇ ಈ ಸಿದ್ಧಾಂತದ ಸಾರವನ್ನು ಸೂಚಿಸುತ್ತದೆ. "ವಿಶಿಷ್ಟಯೋಃ ಅದ್ವೈತಂ" ಎಂದರೆ ವಿಭಿನ್ನಧರ್ಮಗಳಿಂದ ವಿಶಿಷ್ಟವಾದ ತತ್ತ್ವಗಳಲ್ಲಿ ಏಕತೆ. ವಿಶಿಷ್ಟತೆಯಿಂದ ಕೂಡಿದ ಆ ತತ್ತ್ವಗಳು ಒಂದಾಗಿವೆ—ಎಂಬುದನ್ನು ಅದು ಸೂಚಿಸುತ್ತದೆ. ಉದಾಹರಣೆಗೆ: ಒಟ್ಟಾಗಿ ನೋಡಿದಾಗ ಮಾವಿನ ಹಣ್ಣು ಒಂದು ವಸ್ತು ಎಂಬಂತೆ ತೋರಿದರೂ ಅದನ್ನು ವಿಭಜಿಸಿ ನೋಡಿದಾಗ ಆಕಾರ ಬಣ್ಣ ಸಿಪ್ಪೆ ಒಳಗಿರುವ ರಸ ನಾರು ಓಟೆ ಅದರೊಳಗೆ ಮುಂದೆ ಮೊಳಕೆಯಾಗಲಿರುವ ಸೂಕ್ಷ್ಮಶಕ್ತಿ—ಇವೆಲ್ಲಾ ತತ್ತ್ವತಃ ಬೇರೆ ಬೇರೆಯಾದವು. ಆದರೆ ಒಂದನ್ನು ಬಿಟ್ಟು ಒಂದು ಇರಲಾರವು. ಇವೆಲ್ಲಾ ಸಾಮರಸ್ಯದಿಂದ ಸೇರಿದಾಗ ಒಂದು ಹಣ್ಣು ಸಿದ್ಧವಾಗುತ್ತದೆ. ಆ ಅನೇಕ ವಿಶಿಷ್ಟತತ್ತ್ವಗಳಲ್ಲಿ ಒಂದು ಏಕತೆ ಕಂಡುಬರುತ್ತದೆ. ಹಾಗೆಯೇ ಈಶ್ವರನೆಂಬ ಒಂದು ತತ್ತ್ವ ಅನೇಕ ವಿಶಿಷ್ಟ ತತ್ತ್ವಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ವಿಭಜಿಸಿ ನೋಡಿದಾಗ ಅವುಗಳಲ್ಲಿ ದ್ವೈತ, ಒಟ್ಟಾಗಿ ಅದ್ವೈತ. ಇದರಿಂದ ವಸ್ತುವಿಗೆ

ಐಕ್ಯವೂ ಭೇದವೂ ಏಕಕಾಲದಲ್ಲಿ ಸಂಭವಿಸುತ್ತದೆ. ಇದೇ ವಿಶಿಷ್ಟಾದ್ವೈತದ ವಿಶಿಷ್ಟತೆ.

ಪ್ರಕೃತಿ (ಅಥವಾ ಜಗತ್ತು), ಜೀವ ಮತ್ತು ಈಶ್ವರ—ಈ ಮೂರು ತತ್ತ್ವಗಳಲ್ಲಿ ರಾಮಾನುಜರು ಕಂಡಿರುವ ದರ್ಶನ ವಿಶಿಷ್ಟವಾದುದು. ಪ್ರಕೃತಿಯು ಕಲ್ಪನೆ ಇಲ್ಲಿಯೂ ಸಾಂಖ್ಯಸಿದ್ಧಾಂತವನ್ನೇ ಹೋಲಿದರೂ ಮುಖ್ಯವಾದ ಅಂಶದಲ್ಲಿ ಸ್ವತಂತ್ರ ದೃಷ್ಟಿಯ ನ್ನೊಳಗೊಂಡಿದೆ. ಸಾಂಖ್ಯದಲ್ಲಿರುವಂತೆ ಇಲ್ಲಿ ಪ್ರಕೃತಿಯು ಪುರುಷನಿಂದ ಬೇರೆ ಸ್ವತಂತ್ರ ಅಸ್ತಿತ್ವವನ್ನುಳ್ಳುದಲ್ಲ. ಮತ್ತು ಸತ್ತ್ವಾದಿ ಗುಣತ್ರಯ ಇದಕ್ಕೆ ವಿಶೇಷಣವಾಗಿ ಬರು ತ್ತದೆಯೇ ಹೊರತು ಇದರ ಅಂಗವಾಗಿ ಅಲ್ಲ.

ಜೀವಗಳು ಈಶ್ವರನಿಂದ ಬೇರೆಯಾದುವು. ಆದರೆ ಸಂಪೂರ್ಣವಾಗಿ ಆತನಿಂದ ಸ್ವತಂತ್ರವಾದವಲ್ಲ. ಅವು ಈಶ್ವರನ ಒಂದು ಪ್ರಕಾರ. ಹಿಂದೆ ಹೇಳಿದಂತೆ ಅವನಲ್ಲಿ ಚಿತ್ ಸ್ವರೂಪದಿಂದ ಅಡಗಿದ್ದು ಹೊರಹೊಮ್ಮಿದವು. ಜೀವದ ಸಂಖ್ಯೆ ಅಸಂಖ್ಯ. ಒಂದೊಂದು ಜೀವಕ್ಕೆ ಆವರಣವಾಗಿರುವ ಶರೀರದಲ್ಲಿ ಭೇದವೇ ಹೊರತು ಸ್ವರೂಪತಃ ಅವುಗಳಲ್ಲಿ ಭೇದವಿಲ್ಲ. ಎಲ್ಲ ಅಂಶಗಳಲ್ಲಿಯೂ ಅವು ಸಮಾನವಾದುವು, ಎಂದರೆ ಸಮಾನ ಸ್ಥಿತಿಯನ್ನು ಪಡೆಯಬಲ್ಲಂಥವು. ಜೀವಾತ್ಮ ಕೆಲವು ಅಂಶಗಳಲ್ಲಿ ಪರಮಾತ್ಮ ಸ್ವರೂಪನೇ. ಇನ್ನು ಕೆಲವಲ್ಲಿ ಆತನಿಗಿಂತ ಭಿನ್ನ. ಅವನು ವಿಭು, ಇವನು ಅಣು; ಅವನು ಒಡೆಯ, ಇವನು ಭೃತ್ಯ. ಅನಾದಿಕಾಲದಿಂದ ಕರ್ಮದಲ್ಲಿ ಆವೃತನಾದವನು; ಅದರಿಂದ ಬಿಡು ಗಡೆ ಪಡೆಯಲು ಹವಣಿಸುತ್ತಿರುವವನು.

ಜೀವಾತ್ಮರಲ್ಲಿ ನಿತ್ಯ ಮುಕ್ತ ಬದ್ಧ ಎಂದು ಮೂರು ವಿಧಗಳನ್ನು ವಿಶಿಷ್ಟಾದ್ವೈತ ಹೇಳುತ್ತದೆ. ಭಗವಂತನ ಪರಿಜನರಾದ ಗರುಡ ಅನಂತ ಮೊದಲಾದವರು ನಿತ್ಯರು. ಶುಕ ವಾಮದೇವ ವ್ಯಾಸ ಆಳ್ವಾರರು ಆಚಾರ್ಯರು ಮೊದಲಾದವರು ಮುಕ್ತರು; ಎಂದರೆ ಪ್ರಕೃತಿ ಸಂಬಂಧವನ್ನು ಬಿಡಿಸಿಕೊಂಡವರು. ಈಗ ಪ್ರಕೃತಿ ಸಂಬಂಧದಲ್ಲಿದ್ದು ಬಿಡಿಸಿ ಕೊಳ್ಳಲು ಹೆಣಗುತ್ತಿರುವವರು ಬದ್ಧರು. ಬದ್ಧರಾದ ಜೀವರೇ ಮುಂದೆ ಮುಕ್ತರಾಗು ತ್ತಾರೆ. ನಿತ್ಯರಿಗೂ ಮುಕ್ತರಿಗೂ ವ್ಯತ್ಯಾಸ ಇಲ್ಲ. ನಿತ್ಯರು ಅನಾದಿಕಾಲದಿಂದ ಮುಕ್ತರು; ಮುಕ್ತರು ಈಚೆಗೆ ಮುಕ್ತಿಯನ್ನು ಪಡೆದವರು. ಆದುದರಿಂದ ಜೀವರಲ್ಲಿ ಮುಕ್ತ ಮತ್ತು ಬದ್ಧ ಎಂದು ಎರಡೇ ವಿಭಾಗಗಳನ್ನು ಮಾಡಿದರೂ ಸಾಕು.

'ಮುಕ್ತಿ' ಎಂದರೆ ಪರಮಾತ್ಮಸಾಮ್ಯವನ್ನು ಪಡೆಯುವುದು. ಇಲ್ಲಿ ಜೀವ ಅದ್ವೈತ ದಂತೆ ತಾನೇ ಪರಮಾತ್ಮನಾಗಿ ಪರಿಣಮಿಸುವುದಿಲ್ಲ. ಮುಕ್ತ ಸ್ಥಿತಿಯಲ್ಲಿಯೂ ಕೆಲವು ವಿಶಿಷ್ಟತೆಗಳನ್ನು ಉಳಿಸಿಕೊಂಡೇ ಆನಂದವನ್ನು ಜೀವಾತ್ಮ ಅನುಭವಿಸುತ್ತಾನೆ. ಸರ್ವ ಶಕ್ತಿತ್ವ, ಸೃಷ್ಟಿಕರ್ತೃತ್ವ, ಲಕ್ಷ್ಮೀಪತಿತ್ವ ಮೊದಲಾದ ಅಂಶಗಳು ನಾರಾಯಣನಿಗೆ ಮಾತ್ರಮೀಸಲು, ಜೀವಾತ್ಮನಿಗೆ ಐಕ್ಯಸ್ಥಿತಿಯಲ್ಲಿಯೂ ಅವು ಲಭಿಸಲಾರವು. ಆನಂದಾ ನುಭವವು ಸರ್ವಸಮವಾಗಿರುವುದಾದರೂ 'ಕೈಂಕರ್ಯಪರ್ಯಂತ ಪರಿಪೂರ್ಣ ಪರ ಬ್ರಹ್ಮಾನುಭವ'ವೇ ಮೋಕ್ಷ.

ಈಶ್ವರ ಅಥವಾ ಪರಮಾತ್ಮ, ಪ್ರಕೃತಿ ಮತ್ತು ಜೀವಾತ್ಮರ ಅಂತರ್ಯದಲ್ಲಿದ್ದು ಅವು

ಗಳಿಗೆ ಕಾರಣವಾದ ಶಕ್ತಿ. ಆತನಿಗೆ ಇವು ದೇಹವೆಂದು ಹೇಳಿರುವುದರ ಉದ್ದೇಶವೇ ಇದು. ಈ ಪರಮಾತ್ಮತತ್ತ್ವವನ್ನು ವಿಷ್ಣು ನಾರಾಯಣ ವಾಸುದೇವ ಪುರುಷೋತ್ತಮ ಮೊದಲಾದ ಹೆಸರುಗಳಿಂದ ಕರೆದು ಸಾಕಾರ ರೂಪದಲ್ಲಿಯೇ ಅದನ್ನು ಕಂಡರು ರಾಮಾನುಜರು. ಲಕ್ಷ್ಮಿಯು ಪರಮಾತ್ಮನೊಡನೆ ಅವಿನಾಭಾವದಿಂದಿದ್ದಾಳೆ. ಅವನು ಪ್ರಪಂಚಕ್ಕೆ ಉಪಾದಾನಕಾರಣ ಮತ್ತು ನಿಮಿತ್ತಕಾರಣ. ಈ ಜಗತ್ತೆಲ್ಲಾ ಆತನಿಗೆ ಶರೀರವಾದುದರಿಂದ ಈ ಶರೀರದ ಮೂಲಕವಾಗಿಯೇ ಅವನ ಸೇವೆ ಮಾಡಬೇಕು.

ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ ।
ಅತಸ್ತದಾನುಕೂಲ್ಯಂ ಮೇ ಕಾರ್ಯಮಿತ್ಯೇವ ನಿಶ್ಚಯಃ ॥

ಎಂಬ ಮಾತು 'ಅಹಿರ್ಬುಧ್ನ್ಯಸಂಹಿತೆ'ಯಲ್ಲಿ ಬರುತ್ತದೆ. ಪರಮಾತ್ಮನ ಸೇವೆಯನ್ನು ಪ್ರತ್ಯಕ್ಷರೂಪವಾಗಿರುವ ಈ ಲೋಕದ ಮೂಲಕ ಮಾಡಬೇಕೆಂಬ ಭಾವನೆ ಅರ್ಥವತ್ತಾದುದು; ಅತ್ಯುದಾತ್ತವಾದುದು. ಪರಮಾತ್ಮನು ಪ್ರತಿ ವಸ್ತುವಿನಲ್ಲಿಯೂ ಪರಿಪೂರ್ಣನಾಗಿರುವನು; ಮಹಾತ್ಮರಾದ ಯೋಗೀಶ್ವರರ ಹೃದಯದಲ್ಲಿ ಸೂಕ್ಷ್ಮರೂಪವನ್ನು ಧರಿಸಿ ನೆಲಸಿರುವನು; ಅಚಿಂತ್ಯಶಕ್ತಿ ಮತ್ತು ಅಘಟಿತ ಘಟನಾ ಸಾಮರ್ಥ್ಯಗಳಿಂದ ಸಂಯುಕ್ತನಾಗಿರುವನು—ಈ ಮೊದಲಾದ ಮಾತುಗಳಲ್ಲಿ ವಿಶಿಷ್ಟಾದ್ವೈತವು ಕಂಡ ಈಶ್ವರತತ್ತ್ವದ ಕಲ್ಪನೆ ಸ್ಪಷ್ಟವಾಗುತ್ತದೆ.

ಈ ಪರಮಾತ್ಮನೇ ಜೀವರ ಪರಮ ಗಂತವ್ಯ. ಪಂಚಭೂತಗಳ ಸಂಗದಿಂದ ಬಿಡುಗಡೆಯನ್ನು ಪಡೆದು ಜೀವನು ಪರಮಾತ್ಮನನ್ನು ಸೇರುವ ಬಗೆ ಹೇಗೆಂಬ ಸಾಧನೆಯ ಮಾರ್ಗ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ವಿವರವಾಗಿ ಬರುತ್ತದೆ. ಮುಕ್ತಿಮಾರ್ಗದಲ್ಲಿ ಭಕ್ತಿಗೆ ಪ್ರಧಾನ ಸ್ಥಾನ ಇಲ್ಲಿ ಸಿಕ್ಕಿದೆ. ಸತ್ಯ, ಅಹಿಂಸೆ, ಆರ್ಜವ, ದಯೆ ಮೊದಲಾದ ಗುಣಗಳನ್ನು ಭಕ್ತಿಗೆ ಅಂಗಗಳೆಂದು ಹೇಳಲಾಗಿದೆ. ಜ್ಞಾನ ಕರ್ಮ ಮತ್ತು ಭಕ್ತಿಗಳ ಸಮನ್ವಯವನ್ನು ಇಲ್ಲಿ ಕಾಣಬಹುದು. ಜ್ಞಾನ ಕರ್ಮಗಳಿಂದ ಭಕ್ತಿ ಹುಟ್ಟುತ್ತದೆ. ಮತ್ತು ಅವುಗಳ ಕೊನೆಯ ಗುರಿ ಭಕ್ತಿ. ಹೀಗೆ ಭಕ್ತಿ ಎಂಬುದು ವ್ಯಾಪಕವಾದ ಅರ್ಥವನ್ನು ಪಡೆದು 'ಬ್ರಹ್ಮವಿದ್ಯೆ' ಎಂಬ ಮಟ್ಟಕ್ಕೇರಿದೆ.

ಈ ಭಕ್ತಿಯ ಮುಂದಿನ ಹೆಜ್ಜೆ ಪ್ರಪತ್ತಿ, ಎಂದರೆ ಸಂಪೂರ್ಣ ಶರಣಾಗತಿ. ಭಗವಂತನ ಮೇಲಿನ ಅಪಾರ ವಿಶ್ವಾಸದಿಂದ ಭಕ್ತ ಅವನನ್ನು ಸಂಪೂರ್ಣವಾಗಿ ನಂಬಿ ಅವನನ್ನೇ ಮರೆಹೊಗುವುದು, ಆತನ ಅನುಗ್ರಹಕ್ಕೆ ಪಾತ್ರನಾಗುವುದು, ತನ್ನದೆನ್ನುವುದೇನೂ ಇಲ್ಲದಂತಾಗುವುದು ಪ್ರಪತ್ತಿ. ಭಾಗವತ ಧರ್ಮದ ಮುಖ್ಯ ತತ್ತ್ವ ಇದು. ರಾಮಾನುಜರೂ ಇದರ ಮಹತ್ತ್ವವನ್ನು ಕಂಡುಕೊಂಡರು. ಸಂಯಮಪೂರ್ಣವಾದ ಪ್ರಪತ್ತಿಯನ್ನು ಬೋಧಿಸಿದರು.

ಈ ಮಾರ್ಗದಲ್ಲಿ ನಡೆದ ಭಕ್ತ ಮೋಕ್ಷಗಾಮಿಯಾಗುತ್ತಾನೆ. ಕೊನೆಗೆ ಜೀವ ನಾರಾಯಣನ ಸಾಮೀಪ್ಯವನ್ನು ಪಡೆಯುತ್ತದೆ. ಅತ್ಯಂತ ಸಾಮ್ಯಪ್ರಾಪ್ತಿ ಎಂದರೂ

ಪರಮಾತ್ಮನೊಡನೆ ಸಂಪೂರ್ಣವಾಗಿ ಲೀನವಾಗುವುದಲ್ಲ. ಒಂದು ರೀತಿಯ ಏಕತೆಯನ್ನು ಪಡೆದು ಸಹಜ ಸ್ವಭಾವವಾದ ಆನಂದದಿಂದ ಕೂಡುವುದು. ಇದನ್ನು 'ಸ್ವರಾಟ್' ಎಂದು ಕರೆಯುತ್ತಾರೆ. ಈ 'ಸ್ವರಾಟ್' ಸ್ಥಿತಿಯಲ್ಲಿ ಜೀವ ತಾನೇ ಬ್ರಹ್ಮವಾಗಿ ಪರಿಣಮಿಸದೆ ಪ್ರತ್ಯೇಕತೆಯನ್ನು ಉಳಿಸಿಕೊಂಡು ಆನಂದವನ್ನು ಅನುಭವಿಸುತ್ತದೆ. ದ್ವೈತ ಅದ್ವೈತ ಗಳೆರಡನ್ನೂ ಒಂದು ರೀತಿಯಲ್ಲಿ ಸಮನ್ವಯಗೊಳಿಸಲು ರಾಮಾನುಜರು ಮಾಡಿದ ಪ್ರಯತ್ನ ಮೆಚ್ಚತಕ್ಕದ್ದು. ತಾತ್ತ್ವಿಕಜಿಜ್ಞಾಸೆ ಧಾರ್ಮಿಕ ಉತ್ಸಾಹ ಎರಡೂ ಸಮವಾಗಿ ಇವರಲ್ಲಿ ಸೇರಿ, ವಿಶಿಷ್ಟಾದ್ವೈತ ಸಿದ್ಧಾಂತವನ್ನು ರೂಪಿಸಲು ಕಾರಣವಾಯಿತು.

ಮಧ್ವಾಚಾರ್ಯರದು (ಕ್ರಿ.ಶ. ೧೩ನೆಯ ಶ.) ಇವೆರಡಕ್ಕಿಂತಲೂ ಭಿನ್ನವಾದ ಮಾರ್ಗ; ದ್ವೈತಮಾರ್ಗ. ಜೀವ ಜೀವಗಳಲ್ಲಿ, ಜೀವ ಪರಮಾತ್ಮರಲ್ಲಿ ಶಾಶ್ವತ ಭಿನ್ನತೆಯನ್ನು ಕಲ್ಪಿಸಿದರು ಮಧ್ವರು. 'ಬ್ರಹ್ಮಸೂತ್ರ ಭಾಷ್ಯ', 'ಗೀತಾಭಾಷ್ಯ', 'ತತ್ತ್ವವಿವೇಕ', 'ತತ್ತ್ವನಿರ್ಣಯ' ಮೊದಲಾದುವು ಅವರ ಗ್ರಂಥಗಳು. ಅವುಗಳಲ್ಲಿ ತಮ್ಮ ಸಿದ್ಧಾಂತ ವನ್ನು ಅವರು ವಿವರವಾಗಿ ಪ್ರತಿಪಾದಿಸಿದ್ದಾರೆ. ಅವರ ಸಿದ್ಧಾಂತದ ಸಾರವನ್ನು ಈ ಕೆಳಗಿನ ಒಂದು ಶ್ಲೋಕದಲ್ಲಿ ಸಂಗ್ರಹಿಸಲಾಗಿದೆ :

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತಃ
ಭಿನ್ನಾ ಜೀವಗಣಾಃ ಹರೇರನುಚರಾಃ ನೀಚೋಚ್ಚಭಾವಂ ಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ದ್ವೈತ ಸಿದ್ಧಾಂತದ ಪ್ರಮುಖವಾದ ಒಂಬತ್ತು ಅಂಶಗಳನ್ನು ಈ ಶ್ಲೋಕ ತಿಳಿಸುತ್ತದೆ.

"ಶ್ರೀಹರಿಯು ಸರ್ವೋತ್ತಮನು. ಈ ಜಗತ್ತು ಸತ್ಯವಾದುದು. ಜೀವಗಣಗಳು ಭಿನ್ನವಾದುವು. ಚೇತನ, ಅಚೇತನ ಮತ್ತು ಈಶ್ವರ ಇವರಿಗಿರುವ ಭೇದ ಸತ್ಯವಾದುದು. ಸಕಲಜೀವರೂ ಶ್ರೀಹರಿಗೆ ಅಧೀನರು ಮತ್ತು ಅವನ ದಾಸರು. ಜೀವರು ಪರಸ್ಪರ ತಾರತಮ್ಯವುಳ್ಳವರು. ನೈಜ ಸುಖಾನುಭವವೇ ಮುಕ್ತಿ. ನಿರ್ಮಲವಾದ ಭಕ್ತಿಯೇ ಅದಕ್ಕೆ ಸಾಧನ. ಪ್ರತ್ಯಕ್ಷಾದಿಯಾಗಿ ಪ್ರಮಾಣಗಳು ಮೂರು. ಎಲ್ಲ ವೇದಗಳಲ್ಲಿಯೂ ಮುಖ್ಯವಾಗಿ ಪ್ರತಿಪಾದ್ಯನಾದವನು ಶ್ರೀಹರಿ."

ರಾಮಾನುಜರಂತೆ ಮಧ್ವರೂ ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದಿಸಿದರು. ಆತನು ಸರ್ವಜ್ಞ, ಸರ್ವಶಕ್ತಿ ಸರ್ವವ್ಯಾಪಕ. ಸಾಕಾರ ಸಗುಣಸ್ವರೂಪ. ಲಕ್ಷ್ಮೀಸಮೇತ ನಾದ ಶ್ರೀಮನ್ನಾರಾಯಣ ಮೂರ್ತಿಯನ್ನಾಗಿ ದೇವರನ್ನು ಕಲ್ಪಿಸಿದರು. ಅವನು ವೈಕುಂಠ ವಾಸಿ; ಕ್ಷೀರಸಾಗರದಲ್ಲಿ ಅನಂತಶಾಯಿ. ಅವನ ಮಹಿಷಿಯಾದ ಲಕ್ಷ್ಮಿ ಆತನಿಗೆ ಅಧೀನಳು. ಪರಮಾತ್ಮನಂತೆ ಈಕೆಯೂ ನಿತ್ಯ ಮುಕ್ತಸ್ವರೂಪವುಳ್ಳವಳು. ಅನಂತ ಕಲ್ಯಾಣಗುಣಕಾರಿಣಿ. ಇವಳೊಡನೆ ಸಂಯುಕ್ತನಾದ ನಾರಾಯಣನೇ ಜಗನ್ನಿ ಯಾಮಕ ಪರಮತತ್ತ್ವ. ಆತನ ಅನುಗ್ರಹದಿಂದ ಜೀವರಿಗೆ ಮುಕ್ತಿ ಲಭಿಸುತ್ತದೆ.

ಪ್ರಕೃತಿಯಿಂದ ನಿರ್ಮಿತವಾದ ಈ ಜಗತ್ತು ಸತ್ಯವಾದುದು, ಅನಾದಿಯಾದುದು. ಸತ್ತ್ವರಜಸ್ತಮೋಗುಣಗಳೊಡನೆ ಇದು ಸೇರಿ ಇತರ ತತ್ತ್ವಗಳ ಉದಯಕ್ಕೆ ಕಾರಣವಾಗಿದೆ. ಆದರಿಂದಲೇ ಬಹುರೂಪದ ಈ ಸೃಷ್ಟಿ. ಸೃಷ್ಟಿವಿಕಾಸ ಕೂಡ ಇಲ್ಲಿ ಭಿನ್ನವಾದ ಕ್ರಮದಲ್ಲಿ ನಿರೂಪಿತವಾಗಿದೆ. "ಸತ್ಯಂ ಜಗತ್ ತತ್ತ್ವತಃ": ಈ ಜಗತ್ತು ಪಾರಮಾರ್ಥಿಕ ಸತ್ಯ.

ಚೇತನ, ಅಚೇತನ ಮತ್ತು ಪರಮಾತ್ಮ ಇವರಿಗಿರುವ ಭೇದವು ಸತ್ಯವಾದುದು, ನಿತ್ಯವಾದುದು. 'ಭೇದವಾದ'ವೇ ಅದ್ವೈತ ಸಿದ್ಧಾಂತದ ತಳಹದಿ. ಜೀವ ಈಶ್ವರರಲ್ಲಿ ಭೇದ, ಜಗತ್ತು ಈಶ್ವರರಲ್ಲಿ ಭೇದ, ಜೀವಜೀವರಲ್ಲಿ ಪರಸ್ಪರ ಭೇದ, ಜಗತ್ತಿನಲ್ಲಿ ಪರಸ್ಪರ ಭೇದ, ಜಗತ್ತು ಮತ್ತು ಜೀವರಲ್ಲಿ ಭೇದ—ಈ ಐದು ಭೇದಗಳಿಂದ ಜಗತ್ತು ವ್ಯಾಪ್ತವಾಗಿದೆ.

ಜಗತ್ತಿನಂತೆಯೇ ಜೀವರೂ ಅನಾದಿಯಾದವರು. ಅವರು ಪರಮಾತ್ಮನ ಅನುಚರರು. ಜೀವಗಳು ಅಸಂಖ್ಯಾತ. ಅವು ೮೪ ಲಕ್ಷ ಯೋನಿಗಳಲ್ಲಿ ನಿತ್ಯವೂ ಉದ್ಭವಿಸುತ್ತ ಶರೀರಾಂತರಗಳನ್ನು ಹೊಂದುತ್ತ ಇರುತ್ತವೆ. ಪ್ರಾಣಿವರ್ಗದಲ್ಲಿ ಮಾತ್ರವಲ್ಲದೆ ಸಸ್ಯ ಖನಿಜವರ್ಗದಲ್ಲಿಯೂ ಜೀವಗಳು ಇರುತ್ತವೆ. "ಪರಮಾಣು ಪ್ರದೇಶೇಷು ಅನಂತಾಃ ಪ್ರಾಣಿರಾಶಯಃ," ಎಂದರೆ ಒಂದು ಪರಮಾಣು ಪ್ರದೇಶದಲ್ಲಿಯೇ ಅನಂತ ಜೀವರಾಶಿಗಳಿರುತ್ತವೆ ಎಂದು ಮಧ್ವರು 'ತತ್ತ್ವನಿರ್ಣಯ'ದಲ್ಲಿ ತಿಳಿಸಿದ್ದಾರೆ. ಜೀವಜೀವರಲ್ಲಿ ಮಧ್ವರು ಕಂಡಷ್ಟು ಭೇದಗಳನ್ನು ಇನ್ನಾರೂ ಕಾಣಲಿಲ್ಲ. ಅವರ ಪ್ರಕಾರ ಪುಂ ಮತ್ತು ಸ್ತ್ರೀ ಜೀವಗಳುಂಟು, ನಪುಂಸಕ ಜೀವಗಳಿಲ್ಲ. ಪುರುಷನಿಗೆ ಸ್ತ್ರೀ ದೇಹವು ಪ್ರಾಪ್ತವಾದರೂ ಬಿಂಬಜೀವವು ಪುರುಷಾಕಾರವಾಗಿಯೇ ಇರುವುದು. ಸ್ತ್ರೀಜೀವರಿಗೆ ಪುರುಷದೇಹ ಪ್ರಾಪ್ತಿಯೇ ಇಲ್ಲ.

ಇನ್ನೂ ಆಶ್ಚರ್ಯವೆಂದರೆ, ಜೀವರಲ್ಲಿ ಇವರು ಮಾಡಿದ ಮುಕ್ತಿಯೋಗ್ಯರು ತಮೋಯೋಗ್ಯರು ನಿತ್ಯಸಂಸಾರಿಗಳು—ಎಂಬ ಮೂರು ವಿಭಜನೆ. ಮುಕ್ತಿಯೋಗ್ಯ ಜೀವರಲ್ಲಿ ದೇವ ಮನುಷ್ಯ ಪಿತೃ ಚಕ್ರವರ್ತಿ ಮನುಷ್ಯೋತ್ತಮ—ಎಂಬವು ಮಾತ್ರ ಮುಕ್ತಿಗೆ ಅಧಿಕಾರವನ್ನು ಪಡೆದಿರುವ ಜೀವಗಳು. ಸುಖದುಃಖಗಳನ್ನು ಅನುಭವಿಸುವ ಯೋಗ್ಯತೆಯುಳ್ಳ ಅಸಂಖ್ಯಾತ ಜೀವರು ನಿತ್ಯಸಂಸಾರಿಗಳು. ತಮೋಯೋಗ್ಯ ಜೀವರಲ್ಲಿಯೂ ಕೆಲವು ಭಾಗಗಳನ್ನು ಮಾಡಿ ದೈತ್ಯ ರಾಕ್ಷಸ ಪಿಶಾಚ ಮನುಷ್ಯಾಧಮ—ಎಂದು ಹೆಸರಿಸಿದ್ದಾರೆ. ಈ ಜೀವರಿಗೆ ಸದ್ಗತಿಯೇ ಇಲ್ಲ. ಅವು ನಿತ್ಯನಾರಕಿಗಳು. ಮುಕ್ತಿಯೋಗ್ಯ ಜೀವರು ಮಾತ್ರ ಮೋಕ್ಷವನ್ನು ಪಡೆಯಬಲ್ಲರು.

ದುಃಖಲೇಶಸ್ಪರ್ಶವಿಲ್ಲದ ಸ್ವಸ್ವರೂಪ ಸುಖಾನುಭವವೇ ಮುಕ್ತಿ ಎಂದು ಹೇಳಿದ್ದಾರೆ ಮಧ್ವರು: "ಮುಕ್ತಿರ್ನೈಜಸುಖಾನುಭೂತಿಃ." ಮೋಕ್ಷಸ್ಥಿತಿಯಲ್ಲಿಯೂ ಜೀವಗಳು ಮೂಲಭೂತವಾದ ಭೇದವನ್ನು ಉಳಿಸಿಕೊಂಡಿರುತ್ತವೆ. ಜೀವರ ತಾರತಮ್ಯಕ್ಕನುಗುಣವಾಗಿ ಮೋಕ್ಷದಲ್ಲಿಯೂ ಬಗೆಗಳುಂಟು. ಅವನ್ನು ಸಾಲೋಕ್ಯ ಸಾಮೀಪ್ಯ

ಸಾರೂಪ್ಯ ಮತ್ತು ಸಾಯುಜ್ಯ—ಎಂದು ಕರೆದಿದ್ದಾರೆ. ಸಾಯುಜ್ಯ ಮುಕ್ತಿಯೆಂದರೆ ಭಗವಂತನ ಶರೀರದಲ್ಲಿ ಅನುಪ್ರವೇಶಮಾಡಿ ಆನಂದವನ್ನು ಅನುಭವಿಸುವುದು. ಇತರ ಮೂರು ಬಗೆಯ ಮೋಕ್ಷಗಳು ಭಗವಂತನ ಲೋಕದಲ್ಲೂ ಇತರ ಲೋಕಗಳಲ್ಲೂ ಭಗವಂತನ ಸ್ವರೂಪ ಸಾಕ್ಷಾತ್ಕಾರಸಹಿತವಾಗಿ ಆನಂದವನ್ನು ಅನುಭವಿಸಲು ಕಾರಣವಾಗುತ್ತವೆ. ಅವ್ಯಾಕೃತ ಆಕಾಶದಲ್ಲಿ ವೈಕುಂಠವೆಂಬ ಲೋಕವಿದೆ. ಪ್ರಕೃತಿಮಂಡಲಕ್ಕೂ ಆ ಪರಮಲೋಕಕ್ಕೂ ಮಧ್ಯೆ ವಿರಜೆಯೆಂಬ ನದಿಯಿದೆ. ಆ ವಿರಜಾನದಿಯಲ್ಲಿ ಸ್ನಾನ ಮಾಡಿ ಮುಕ್ತ ಜೀವರು ಮುಂದುವರಿಯಬೇಕಾಗುತ್ತದೆ. ಅನಂತರ ಕೆಲವು ಜೀವರು ಕ್ಷೀರಸಾಗರದಲ್ಲೂ ಕೆಲವರು ಅಶ್ವತ್ಥವನದಲ್ಲೂ ಇನ್ನು ಕೆಲವರು ಇತರ ಉದ್ಯಾನವನಗಳಲ್ಲೂ ಮುಕ್ತಿ ಸುಖವನ್ನು ತಾರತಮ್ಯಗಳೊಡನೆ ಅನುಭವಿಸುವರು. ಈ ವೈಕುಂಠಾದಿ ದಿವ್ಯಲೋಕಗಳು ಪ್ರಲಯಕಾಲದಲ್ಲೂ ನಾಶವಾಗುವುದಿಲ್ಲ. ಅಲ್ಲಿ ಲಕ್ಷ್ಮೀನಾರಾಯಣನು ಯಾವಾಗಲೂ ಸರ್ವಭೋಗಗಳನ್ನೂ ಅನುಭವಿಸುತ್ತ ಜೀವಗಳಿಗೆ ಮೋಕ್ಷಸುಖವನ್ನು ದಯಪಾಲಿಸುತ್ತ ವಿರಾಜಿಸುತ್ತಿರುವನು.

ಮೋಕ್ಷಕ್ಕೆ ಭಕ್ತಿಯೇ ಸಾಧನ ಎಂದು ಮಧ್ವರು ಭಕ್ತಿಗೆ ಪ್ರಮುಖಸ್ಥಾನವನ್ನು ಕೊಟ್ಟರು. ಆ ಭಗವಂತನ ಮೇಲಿಟ್ಟಿರುವ ಅಚಲವಾದ ಪ್ರೇಮವೇ ಭಕ್ತಿ. ನಿಶ್ಚಲ ಭಕ್ತಿಗೆ ಮಾತ್ರ ಪರಮಾತ್ಮ ಮೆಚ್ಚಿ ಅವರನ್ನು ಉದ್ಧರಿಸುತ್ತಾನೆ. ಧರ್ಮವ್ಯಾಧ, ಧ್ರುವ, ಕುಚೇಲ, ವಿದುರ, ಗಜೇಂದ್ರ—ಮೊದಲಾದವರನ್ನು ಅವನು ಉದ್ಧರಿಸಿದುದು ಅವರ ಕುಲ ಜಾತಿ ರೂಪ ವೈಭವಗಳನ್ನು ಕಂಡಲ್ಲ, ಅಚಲವಾದ ಭಕ್ತಿಗೆ ಮೆಚ್ಚಿ—ಎಂದು ಮುಂತಾಗಿ ಸಾಧನೆಯ ಮಾರ್ಗವನ್ನು ವಿವರಿಸುತ್ತಾರೆ.

ಪ್ರತ್ಯಕ್ಷಾದಿ ಪ್ರಮಾಣತ್ರಯದ ಮೇಲೆ ವೇದವೇದ್ಯನಾದ ಹರಿಯನ್ನು ಕಾಣುವ ಮಾರ್ಗವನ್ನು ಮಧ್ವರು ಸಿದ್ಧಾಂತಪೂರ್ವಕವಾಗಿ ನಿರೂಪಿಸಿದರು. ಅದನ್ನು ಕರ್ಣಾಟಕದ ಹರಿದಾಸರು, ಅದರಲ್ಲೂ ಮುಖ್ಯವಾಗಿ ೧೫ನೆಯ ಶತಮಾನದ ಪುರಂದರಾದಿಗಳು ಅನುಭವಪೂರ್ವಕವಾಗಿ ಆಚರಿಸಿ ಜೀವಂತದರ್ಶನವನ್ನಾಗಿ ವ್ಯಾಪಕಗೊಳಿಸಿದರು. ಮಧ್ವರ ಸಿದ್ಧಾಂತಗಳು ಇಂದಿನ ಆಧುನಿಕ ವೈಜ್ಞಾನಿಕ ದೃಷ್ಟಿಯ ಒರೆಗಲ್ಲಿನ ಮೇಲೆ ಉಜ್ಜಿದಾಗ ಎಷ್ಟರಮಟ್ಟಿಗೆ ಉಳಿಯುತ್ತವೆಯೋ ಹೇಳುವುದು ಕಷ್ಟ. ಆದರೆ ಒಟ್ಟಿನಲ್ಲಿ ಆ ತತ್ತ್ವದರ್ಶನದ ಪ್ರಭಾವ ಜನತೆಯಲ್ಲಿ ಉದಾತ್ತ ಸಂಸ್ಕೃತಿಯ ಬೆಳವಣಿಗೆಗೆ ಕಾರಣವಾಯಿತೆಂಬುದರಲ್ಲಿ ಸಂದೇಹವಿಲ್ಲ.

‘ಬ್ರಹ್ಮಸೂತ್ರ’ಗಳ ಮೇಲೆ ಬಂದ ಭಾಷ್ಯಗಳಲ್ಲಿ ಈ ಮೂರು ಮುಖ್ಯವಾದುವಲ್ಲದೆ, ಇನ್ನೂ ಹಲವು ಬಂದುವು. ಒಬ್ಬೊಬ್ಬರೂ ತಮ್ಮ ತಮ್ಮ ದೃಷ್ಟಿಗೆ ತಕ್ಕಂತೆ ಬ್ರಹ್ಮಸೂತ್ರಗಳನ್ನೂ ಭಗವದ್ಗೀತೆ ಉಪನಿಷತ್ತುಗಳ ಶ್ಲೋಕಗಳನ್ನೂ ಹಿಂಜಿದ್ದಾರೆ. ಸಂಸ್ಕೃತ ಭಾಷೆಯೂ ಅದಕ್ಕೆ ಅನುಕೂಲವಾಗಿಯೇ ಇತ್ತು. ಎಳೆದಂತೆ ಹಿಗ್ಗುವ ಬಾಗುವ ಬೆಳೆಯುವ ಶಕ್ತಿಯುಳ್ಳ ಅದ್ವಿತೀಯ ಭಾಷೆಯಾಗಿದ್ದುದು ಅವರ ಶಕ್ತಿಪ್ರದರ್ಶನಕ್ಕೆ ಅವಕಾಶಮಾಡಿಕೊಟ್ಟಿತು. ಹೀಗಾಗಿ ಭಾಷ್ಯಗಳೂ ಪಂಥಗಳೂ ‘ಮತ’ಗಳೂ ಬೆಳೆಯುತ್ತಲೇ ಬಂದುವು.

ಭಾಷ್ಯಗಳ ತಳಹದಿಗೆ ಹೊರತಾದ ವಲಯದಲ್ಲಿಯೂ ಕೆಲವು ಸ್ವತಂತ್ರ ಅಭಿಪ್ರಾಯಗಳು ಪ್ರಾಚೀನ ಪರಂಪರೆಯ ಆಧಾರದ ಮೇಲೆ ಬೆಳೆದುವು. ಅವುಗಳಲ್ಲಿ ಮುಖ್ಯವಾಗಿ ಶೈವ ಶಾಕ್ತ ಮತ್ತು ವೈಷ್ಣವ ಮತಗಳನ್ನು ಹೇಳಬಹುದು. ಅಲ್ಲಿಯೂ ಶೈವ ಮತ್ತು ವೈಷ್ಣವ ಮತಗಳು ಹಿಂದುಧರ್ಮದ ಎರಡು ದೊಡ್ಡ ಶಾಖೆಗಳು, ಪ್ರಾಚೀನವಾದುವು.

ರಾಮಾಯಣ ಮಹಾಭಾರತಗಳ ನಂತರ ರಾಮ ಮತ್ತು ಕೃಷ್ಣರು ವಿಷ್ಣುವಿನ ಅವತಾರಪುರುಷರಾಗಿ ಜನಮನದಲ್ಲಿ ನೆಲಸಿ ವೈಷ್ಣವಧರ್ಮ ಹೆಚ್ಚು ಪ್ರಚಾರವಾಗಲು ಕಾರಣವಾಯಿತು. ಭಾಗವತ ಪುರಾಣ ವಾಸುದೇವ ಕೃಷ್ಣನ ಉಪಾಸನೆಯನ್ನು ಪ್ರಪತ್ತಿ ಭಾವದ ಕಥಾನಕಗಳಿಂದ ಇನ್ನೂ ಹೆಚ್ಚು ಜನಪ್ರಿಯಗೊಳಿಸಿತು. ತಮಿಳಿನ ಆಳ್ವಾರರು ಅನುಭವಪೂರ್ವಕವಾಗಿ ಅದನ್ನು ಆಚರಿಸಿ ತೋರಿಸಿದರು. ಅನಂತರ ನಾಥಮುನಿ ಯಾಮುನಾಚಾರ್ಯರಿಂದ ಬೆಳೆದು ಬಂದು ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪರಾಕಾಷ್ಠತೆಯನ್ನು ಮುಟ್ಟಿತು. ಇವರ ಕಾಲದಲ್ಲಿಯೇ ಇದ್ದ ನಿಂಬಾರ್ಕರು ರಾಧಾಕೃಷ್ಣ ಭಕ್ತಿಯನ್ನು ಹೆಚ್ಚು ಪ್ರಚಾರಮಾಡಿದರು. ಮಧ್ವರ ದ್ವೈತಸಿದ್ಧಾಂತ ವೈಷ್ಣವ ಮತಕ್ಕೆ ಅಧಿಕ ಶಕ್ತಿಯನ್ನು ತಂದುಕೊಟ್ಟಿತು. ೧೪ನೆಯ ಶತಮಾನದ ರಾಮಾನಂದ ಕಬೀರ ತುಳಸೀದಾಸ ಇತ್ಯಾದಿ ಸಂತರಿಂದ ರಾಮಪಂಥ ಹೆಚ್ಚು ಪ್ರಚಲಿತವಾಯಿತು. ಇದೇ ಕಾಲದ ವಲ್ಲಭಾಚಾರ್ಯನ ಪಂಥ, ಚೈತನ್ಯನ ಭಕ್ತಿಗಳು ಇದಕ್ಕೆ ಬಂದು ಸೇರಿದುವು. ಮಹಾರಾಷ್ಟ್ರದಲ್ಲಿ ಪಂಡರಪುರದ ವಿಠೋಬನ ಭಕ್ತರಾದ ಜ್ಞಾನದೇವ ನಾಮದೇವ ತುಕಾರಾಮ ಇತ್ಯಾದಿ ಸಂತರು ಆಗಿಹೋದರು. ಕರ್ಣಾಟಕದಲ್ಲಿ ದಾಸಪಂಥ ತನ್ನ ಸಮ್ಮೋಹಕ ಶಕ್ತಿಯನ್ನು ಪುರಂದರಾದಿ ದಾಸರ ನೇತೃತ್ವದಲ್ಲಿ ಬೀರಿತು. ಹೀಗೆ ಅತ್ಯಂತ ಶ್ರೀಮಂತವಾದ ಮತ್ತು ವೈವಿಧ್ಯಪೂರ್ಣವಾದ ಧರ್ಮವಾಗಿ ವೈಷ್ಣವಶಾಖೆ ಬೆಳೆದು ಬಂದಿದೆ.

ಇನ್ನು ಶೈವಧರ್ಮ. ಕಾಲದ ದೃಷ್ಟಿಯಿಂದ ಇದು ಬಹುಶಃ ಭರತಖಂಡದಲ್ಲಿಯೇ ಅತ್ಯಂತ ಪ್ರಾಚೀನವಾದ ಧರ್ಮ. ವೇದಗಳಿಗಿಂತ ಹಿಂದಿನ ಕಾಲದ ಸಿಂಧು ಸಂಸ್ಕೃತಿಯ ಕಾಲದಿಂದಲೂ ಅದರ ಚರಿತ್ರೆ ಕಾಣುತ್ತದೆಂಬುದನ್ನು ಪ್ರಾರಂಭದಲ್ಲಿಯೇ ನೋಡಿದ್ದೇವೆ. ಸಿಂಧು ಸಂಸ್ಕೃತಿಯಲ್ಲಿ ಶಿವನ ಉಪಾಸನೆ ಪ್ರಮುಖವಾಗಿತ್ತೆಂಬುದನ್ನು ನೋಡಿದರೆ ಶೈವ ಧರ್ಮದ ಪ್ರಾಚೀನತೆ ಗೋಚರವಾಗುತ್ತದೆ. ಆರ್ಯರಿಗಿಂತ ಮೊದಲೇ ಇಲ್ಲಿದ್ದ ಮೂಲ ನಿವಾಸಿಗಳಿಂದ ಶಿವಪೂಜೆಗೊಳ್ಳುತ್ತಿದ್ದ ಆರ್ಯರ ವೇದಸಂಸ್ಕೃತಿ ಅನಂತರ ತಾನೂ ಶಿವನನ್ನು ಒಪ್ಪಿ ಆತನಿಗೆ ಪ್ರಾಧಾನ್ಯ ಕೊಟ್ಟಿತು.

ವೇದಗಳ ಕಾಲದಿಂದ ಈಚೆಗೆ ವೇದದ ರುದ್ರ ಮತ್ತು ಸಿಂಧು ಸಂಸ್ಕೃತಿಗಳ ಶಿವ ಅಭೇದರೂಪವನ್ನು ಪಡೆದುದು ಶೈವಧರ್ಮದ ವಿಕಾಸಕ್ಕೆ ಕಾರಣವಾಯಿತು. ಶಿವನ ಉಪಾಸನೆ ಇಷ್ಟೊಂದು ಪುರಾತನವಾಗಿದ್ದರೂ ಶೈವಮತದ ವಿವಿಧ ಶಾಖೆಗಳ ನಿರಂತರ ಪ್ರವಾಹದ ಸ್ಪಷ್ಟರೂಪವನ್ನು ಕಾಣುವಂತಿಲ್ಲ. ಶೈವ ಸಿದ್ಧಾಂತವನ್ನು ವ್ಯವಸ್ಥಿತವಾದ

ರೀತಿಯಲ್ಲಿ ಮೊತ್ತಮೊದಲು ಪ್ರತಿಪಾದಿಸಿದವರು ಯಾರೆಂಬುದೂ ನಿರ್ಧರವಾಗಿ ತಿಳಿಯದು. ಮಹಾಭಾರತದ ಕಾಲಕ್ಕಾಗಲೇ ಶಿವನ ಉಪಾಸನೆ ಹೆಚ್ಚಿನ ಪ್ರಾಮುಖ್ಯವನ್ನು ಪಡೆದಿದ್ದುದಲ್ಲದೆ 'ಪಾಶುಪತ' ಎಂಬ ಹೆಸರಿನ ಶೈವಸಿದ್ಧಾಂತದ ಒಂದು ಶಾಖೆಯೂ ಪ್ರಸಿದ್ಧವಾಗಿತ್ತು. ಲಕುಲೀಶನೆಂಬುವನು ಪಾಶುಪತ ಸಿದ್ಧಾಂತವನ್ನು ಪ್ರತಿಪಾದಿಸಿದನೆಂಬುದಕ್ಕೆ ಆಧಾರಗಳು ಸಿಕ್ಕುತ್ತವೆ. ಈತ ಸಾಕ್ಷಾತ್ ಶಿವಸ್ವರೂಪನೆಂದೂ ಈತನಿಗೆ ಕುಷಿಕ, ಗಾರ್ಗ್ಯ, ಕೌರುಷ ಮತ್ತು ಮೈತ್ರೇಯ ಎಂಬ ನಾಲ್ವರು ಶಿಷ್ಯರಿದ್ದರೆಂದೂ ತಿಳಿದು ಬರುತ್ತದೆ. ಇವರೂ ಶೈವಧರ್ಮವನ್ನು ಪ್ರತಿಪಾದಿಸಿದರು. ಪಾಶುಪತ, ಕಾಪಾಲಿಕ, ಕಾಳಾಮುಖ ಮತ್ತು ಶೈವ—ಎಂಬ ನಾಲ್ಕು ಮುಖ್ಯ ವಿಭಾಗಗಳು ಇದರಲ್ಲುಂಟಾದುವು.

ಪಾಶುಪತ ಅಥವಾ ಮಾಹೇಶ್ವರ ಎಂಬ ಮಾತುಗಳನ್ನು ಕಾಪಾಲಿಕ ಕಾಳಾಮುಖ ಮೊದಲಾದ ಶೈವ ವಿಭಾಗಗಳನ್ನು ಒಳಗೊಳ್ಳುವ ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಿರುವಂತೆ ಕಂಡುಬರುತ್ತದೆ. ಶಂಕರರು ಪಶುಪತಿ ಮತದವರನ್ನೆಲ್ಲ ಮಾಹೇಶ್ವರರೆಂದು ಕರೆದಿರುವರು. ಅನಂತರ ಬಂದ ಆಚಾರ್ಯರು ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಶೈವಧರ್ಮದ ವಿಭಾಗಗಳನ್ನು ಹೆಸರಿಸಿದ್ದಾರೆ. ಶೈವ ಪಾಶುಪತ ಕಾರುಣಿಕಸಿದ್ಧಾಂತ ಕಾಪಾಲಿಕ ಎಂದು ವಾಚಸ್ಪತಿ ಮಿಶ್ರರೂ ಕಾಪಾಲಿಕ ಕಾಳಾಮುಖ ಪಾಶುಪತ ಶೈವ—ಎಂದು ರಾಮಾನುಜರೂ ಹೇಳಿದ್ದಾರೆ. ಮಧ್ವರು 'ಪಾಶುಪತ' ಎಂಬ ಮಾತನ್ನು ಎಲ್ಲ ಶೈವ ಶಾಖೆಗಳಿಗೂ ಅನ್ವಯಿಸುವಂತೆ ಉಪಯೋಗಿಸಿದ್ದಾರೆ. ಇತರ ಗ್ರಂಥಕರ್ತರ ಕೈಯಲ್ಲಿ ಇನ್ನೂ ಬೇರೆ ಬೇರೆ ಹೆಸರುಗಳನ್ನು ಇದು ಪಡೆದಿದೆ.

ಇದರಲ್ಲಿ 'ಪಾಶುಪತ' ಎಂದು ಪ್ರಸಿದ್ಧವಾದ ಶೈವಮತದ ಸ್ವರೂಪವನ್ನು ಒಂದೆರಡು ಮಾತುಗಳಲ್ಲಿ ನೋಡಬಹುದು: ಪಾಶುಪತ ಮಾರ್ಗದಲ್ಲಿ ಕಾರ್ಯ ಕಾರಣ ಯೋಗ ವಿಧಿ ಮತ್ತು ದುಃಖಾಂತ—ಎಂಬ ಐದು ಅಂಶಗಳಿವೆ. ಕಾರ್ಯ ಅಥವಾ ಪರಿಣಾಮ ಎಂದರೆ ಈ ಜಗತ್ತು. ಇದರ ನಿರ್ಮಾಣದ ವಿಚಾರದಲ್ಲಿ ಹೆಚ್ಚಿನ ಜಿಜ್ಞಾಸೆ ಇಲ್ಲ. ಈ ಜಗತ್ತಿಗೆ ಶಿವ ನಿಮಿತ್ತಕಾರಣನೆಂದು ಹೇಳುತ್ತದೆ. ಸರ್ವಶಕ್ತನಾದ ಆ ಈಶ್ವರನ ಕಾರ್ಯ ಈ ಸೃಷ್ಟಿ. ಇದರ ಬಂಧನದಿಂದ ಪಶು ಅಥವಾ ಜೀವ ಬಿಡುಗಡೆಯನ್ನು ಪಡೆದು ಎಲ್ಲ ದುಃಖಗಳಿಂದ ಮುಕ್ತನಾಗುವುದಕ್ಕೆ ಆತನ ಅನುಗ್ರಹಬೇಕು.

ಯೋಗ ಮತ್ತು ವಿಧಿ ಸಾಧನೆಯ ಮಾರ್ಗವನ್ನು ತೋರಿಸುತ್ತವೆ. 'ಪತಿ'ಯೊಡನೆ 'ಪಶು'ವಿನ ಸತತ ಸಂಬಂಧವೇ 'ಯೋಗ'ವೆಂದು ಪಾಶುಪತ ಹೇಳುತ್ತದೆ.[40] ಸಾಧಕ ದೇಹ ದಂಡನೆಯಿಂದ ಎಲ್ಲ ಕರ್ಮಗಳನ್ನೂ ಕಳಚಿಹಾಕಿ ಕೊನೆಯ ಪಕ್ಷ ಆರು ತಿಂಗಳ ಕಾಲವಾದರೂ ಒಂದೇ ಸಮನೆ ಧ್ಯಾನದಲ್ಲಿ ತೊಡಗಬೇಕು. ಈ ಯೋಗಮಾರ್ಗದಲ್ಲಿ ಆತ ಮುಂದುವರಿದಂತೆಲ್ಲ ಶಿವನ ಅನುಗ್ರಹದಿಂದ ಅಲೌಕಿಕ ಶಕ್ತಿಗಳು ಆತನಿಗೆ ಹಸ್ತಗತವಾಗುತ್ತವೆ. ಪಾಶುಪತಯೋಗಿ ಅನುಸರಿಸಬೇಕಾದ ಕೆಲವು ವಿಧಿಗಳುಂಟು. ಜಗತ್ತಿನ ಪ್ರಲೋಭನೆಗೆ ಒಳಗಾಗದೆ ತೀವ್ರ ವೈರಾಗ್ಯವನ್ನು ಪಡೆಯುವುದಕ್ಕೋಸ್ಕರ ಶ್ಮಶಾನದಲ್ಲಿ

ವಾಸಮಾಡುವುದು ಒಳ್ಳೆಯದು. ತ್ರಿಕಾಲ ಭಸ್ಮಸ್ನಾನ, ಈಶ್ವರರೂಪವನ್ನು ಅನುಕರಿಸುವುದು, ಈಶ್ವರನ ಧ್ಯಾನದಿಂದ ಉನ್ಮತ್ತನಾಗಿ ಕುಣಿಯುವುದು—ಈ ಮೊದಲಾದುವು ವಿಧಿಗಳು. ಇವನ್ನು ಅನುಸರಿಸಿ ನಡೆದರೆ ಜೀವದ ದುಃಖವು ಕೊನೆಗೊಳ್ಳುತ್ತದೆ; ಇದೇ ದುಃಖಾಂತ.

ಈ ಮಾರ್ಗ ಹಲವಾರು ಸಾಧಕರನ್ನು ದಾಟಿಬರುವ ವೇಳೆಗೆ ತನ್ನ ನಿಜವಾದ ಸ್ವರೂಪ ಉದ್ದೇಶಗಳನ್ನು ಕಳೆದುಕೊಂಡು ಅವಿತತ್ಕರಣ, ಅವಿತದ್ಭಾಷಣ ಎಂದರೆ ಮಾಡಬಾರದ್ದನ್ನು ಮಾಡುವುದು, ಆಡಬಾರದ್ದನ್ನು ಆಡುವುದು ಎನ್ನುವ ಅರ್ಥದಲ್ಲಿ ಕೊನೆಗೊಂಡಿತು. ಹುಡುಹುಡು ಶಬ್ದಮಾಡುತ್ತ ಕುಣಿಯುವುದು, ಕಾಲು ಕೈಗಳನ್ನು ವಿಚಿತ್ರ ರೀತಿಯಲ್ಲಿ ಅಲುಗಾಡಿಸುತ್ತ ಬಿದ್ದಿರುವುದು ಈ ಮೊದಲಾದುವೆಲ್ಲ ಪಾಶುಪತ ವಿಧಿಯಲ್ಲಿ ಸೇರಿದುವು. ನೇರವಾದ ಮಾರ್ಗವನ್ನು ಅತಿಕ್ರಮಿಸಿ ನಡೆಯುವ ಈ ಅತಿಮಾರ್ಗಿಕ ಪಂಥ ತನ್ನ ಅಕ್ರಮ ಮಾರ್ಗದಲ್ಲಿ ಇನ್ನೂ ಬಹು ದೂರ ಹೋಯಿತು. ಅದನ್ನು ಕಾಪಾಲಿಕ ಮಾರ್ಗದಲ್ಲಿ ಕಾಣಬಹುದು. ಜೀವ ತನ್ನ ಗುರಿಯನ್ನು ಸಾಧಿಸಬೇಕಾದರೆ ಈ ಕೆಳಗಿನ ನಿಯಮಗಳನ್ನು ಅನುಸರಿಸಬೇಕೆಂದು ಕಾಪಾಲಿಕ ಮಾರ್ಗ ಹೇಳುತ್ತದೆ: ಯಾವಾಗಲೂ ನರಕಪಾಲವನ್ನು ಧರಿಸಿ ಅದರಲ್ಲಿಯೇ ಅನ್ನವನ್ನು ತಿನ್ನುವುದು. ಶ್ಮಶಾನದಲ್ಲಿ ವಾಸಿಸುವುದು. ಸದಾಕಾಲ ಮೈಗೆಲ್ಲ ಬೂದಿಯನ್ನು ಬಳಿದುಕೊಳ್ಳುತ್ತಿರುವುದು. ಬೂದಿಯನ್ನು ತಿನ್ನುವುದು. ಕೈಯಲ್ಲಿ ಲಾಕುಳ ಅಥವಾ ದಂಡವನ್ನು ಹಿಡಿದಿರುವುದು. ಮದ್ಯ ತುಂಬಿದ ಮಡಕೆಯನ್ನು ಬಳಿಯಲ್ಲಿಟ್ಟುಕೊಂಡಿರುವುದು. ಅದರ ಸೇವನೆಯಿಂದ ಜಗತ್ತನ್ನು ಮರೆಯುವುದು. ಆ ಮದ್ಯದ ಮಡಕೆಯಲ್ಲಿ ಶಿವ ಪ್ರತಿಷ್ಠಾಪಿತನಾಗಿರುವಂತೆ ಭಾವಿಸಿ ಪೂಜಿಸುವುದು.

ಈ ಮೊದಲಾದ ವಿಧಿಗಳನ್ನು ನೋಡಿದರೆ ಭಕ್ತಿಯ ಹೆಸರಿನಲ್ಲಿ ಹಿಡಿಯಬಹುದಾದ ವಿಕಾರಮಾರ್ಗವನ್ನು ಕಂಡುಕೊಳ್ಳುತ್ತೇವೆ. ಶಿವನ ಉಗ್ರರೂಪದ ವರ್ಣನೆಯ ಹಿಂದಿರುವ ರಹಸ್ಯವನ್ನು ತಿಳಿಯದೆ ಆ ಉಗ್ರರೂಪವನ್ನೇ ಅನುಕರಿಸಬೇಕೆಂದು ಪ್ರಯತ್ನಪಟ್ಟುದು ಇಂತಹ ಆಭಾಸಕ್ಕೆ ಕಾರಣವೆಂದು ಹೇಳಬಹುದು.

ಇಲ್ಲಿಂದ ಮುಂದೆ ಶೈವಮಾರ್ಗ ಶಿವಾಗಮಗಳು ಶಿವಪುರಾಣಗಳನ್ನು ದಾಟಿಕೊಂಡು ಬರುವ ವೇಳೆಗೆ ಹೆಚ್ಚು ಮಾನವೀಯಗುಣಗಳಿಂದ ಕೂಡಿ ವಿಕಾಸಮಾರ್ಗದಲ್ಲಿ ನಡೆಯತೊಡಗಿತ್ತು. ಶೈವಧರ್ಮದ ಇತಿಹಾಸದಲ್ಲಿ ಹಿಂದೆ ನೋಡಿದ ಶಿವಾಗಮಗಳು ಒಂದು ಪ್ರಮುಖವಾದ ಘಟ್ಟ. ಇವನ್ನು ಆಧಾರವಾಗಿಟ್ಟುಕೊಂಡು ಅನೇಕ ಶೈವಶಾಖೆಗಳು ರೂಪುಗೊಂಡುವು. ಕಾಶ್ಮೀರಶೈವ, ತಮಿಳುಶೈವ, ವೀರಶೈವ—ಈ ಮೊದಲಾದುವುಗಳಿಗೆಲ್ಲ ಶಿವಾಗಮಗಳಲ್ಲಿ ಉಕ್ತವಾದ ಮೂಲತತ್ತ್ವವೇ ತಳಹದಿಯಾಗಿದ್ದರೂ ಅವು ತಮ್ಮ ತಮ್ಮ ಅನುಭವಗಳಿಗೆ ಅನುಗುಣವಾಗಿ ಧರ್ಮದ ಸೌಧವನ್ನು ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ.

ಮೊದಲನೆಯದಾಗಿ ಕಾಶ್ಮೀರಶೈವ. ಇಲ್ಲಿ ಎರಡು ಶಾಖೆಗಳು: ಸ್ಪಂದಶಾಸ್ತ್ರ, ಪ್ರತ್ಯ

ಭಿಜ್ಞಾಶಾಸ್ತ್ರ. ವಸುಗುಪ್ತ ಮತ್ತು ಅವನ ಶಿಷ್ಯ ಕಲ್ಲಟ ಇವರು ಸ್ಪಂದಶಾಸ್ತ್ರಕ್ಕೂ ಸೋಮಾನಂದ ಪ್ರತ್ಯಭಿಜ್ಞಾಶಾಸ್ತ್ರಕ್ಕೂ ಪ್ರವರ್ತಕರೆಂದು ತಿಳಿದುಬರುತ್ತದೆ. ಕ್ರಿ.ಶ. ಸು. ೮೫೦ರಲ್ಲಿ ವಸುಗುಪ್ತನಿಂದ ಸೃಷ್ಟಿಯಾದ 'ಶಿವಸೂತ್ರ' ಮತ್ತು 'ಸ್ಪಂದಕಾರಿಕ'ಗಳು ಸ್ಪಂದಶಾಸ್ತ್ರದ ಮುಖ್ಯ ಗ್ರಂಥಗಳು. ಇವುಗಳಲ್ಲಿ ಪ್ರತಿಪಾದಿತವಾದ ಮುಖ್ಯ ಅಂಶಗಳು : ಶಿವ ತನ್ನ ಅದ್ಭುತ ಶಕ್ತಿಯಿಂದ ತಾನೇ ಅನೇಕ ಆತ್ಮರಾಗಿ ಪರಿಣಮಿಸುತ್ತಾನೆ. ತನ್ನ ಇನ್ನೊಂದು ಶಕ್ತಿಯಿಂದ ತಾನೇ ಸೃಷ್ಟಿಗೂ ಕಾರಣನಾಗುತ್ತಾನೆ. ಪ್ರತಿಯೊಂದು ಆತ್ಮವೂ ಶಿವಸ್ವರೂಪವಾದುದೇ. ಮಲತ್ರಯಗಳ ಆವರಣದಿಂದ ತಮ್ಮ ಸ್ವರೂಪವನ್ನು ಅವು ಕಳೆದುಕೊಂಡಿವೆ. ಏಕೈಕ ನಿಷ್ಠೆಯ ಸತತ ಶಿವಧ್ಯಾನದಿಂದ ಆತ್ಮ ಮಲತ್ರಯರೂಪವಾದ ಆವರಣವನ್ನು ಕಳೆದುಕೊಳ್ಳುತ್ತದೆ. ಧ್ಯಾನರೂಪವಾದ ಶಿವಭಾವನೆಯೇ ಸ್ಥಿರವಾಗಿ ಆತ್ಮನಲ್ಲಿ ನೆಲಸಿದರೆ ಅದೇ ವಿಶ್ವಾತ್ಮಸ್ವರೂಪವಾಗಿ ಪರಿಣಮಿಸುತ್ತದೆ. ಆತ್ಮ ಪಡೆಯುವ ಈ ದೃಷ್ಟಿಯನ್ನೇ 'ಭೈರವ' ಎಂದು ಇಲ್ಲಿ ಕರೆಯಲಾಗಿದೆ. ಏಕೆಂದರೆ ಭೈರವರೂಪನಾದ ಶಿವನ ಸ್ವರೂಪವೇ ಈ ದೃಷ್ಟಿ, ಮತ್ತು ಭೈರವನೇ ಇದಕ್ಕೆ ಕಾರಣ. ಇದೇ ಆತ್ಮನು ಪಡೆಯುವ ಮುಕ್ತಸ್ಥಿತಿ.

ಪ್ರತ್ಯಭಿಜ್ಞಾಶಾಸ್ತ್ರದ ಪ್ರವರ್ತಕ ಸೋಮಾನಂದನ ಕೃತಿ 'ಶಿವದೃಷ್ಟಿ.' ಇದು ಕ್ರಿ.ಶ. ಸು. ೯೦೦ರಲ್ಲಿ ರಚಿತವಾಗಿರಬೇಕು. ಇವನ ಶಿಷ್ಯ ಉದಯಾಕರ ಮತ್ತು ಅವನ ಶಿಷ್ಯ ಅಭಿನವಗುಪ್ತ ಇವರು ಈ ಶಾಸ್ತ್ರದ ಬೆಳೆವಣಿಗೆಗೆ ಸಹಾಯಕರಾಗಿದ್ದಾರೆ. ಪ್ರಮುಖವಾದ ತಾತ್ತ್ವಿಕ ವಿಚಾರಗಳಲ್ಲಿ ಇದು ಸ್ಪಂದಶಾಸ್ತ್ರವನ್ನೇ ಬಹುಮಟ್ಟಿಗೆ ಹೋಲುತ್ತಿದ್ದರೂ ಮುಕ್ತಿಯ ಕಲ್ಪನೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದೆ. ದೇವತ್ವದ ಆನಂದವನ್ನು ಸಾಮಾನ್ಯಜೀವರು ಅನುಭವಿಸದೆ ಇರುವುದಕ್ಕೆ ಕಾರಣ, ತಮ್ಮಲ್ಲಿರುವ ದೈವಶಕ್ತಿಗಳು ಅಗೋಚರವಾಗಿರುವುದು ಸಾಧಕ ತನ್ನಲ್ಲಿಯೇ ಇರುವ ಈ ಶಕ್ತಿಯ ಸ್ವರೂಪವನ್ನು ಕಂಡುಕೊಂಡು ಎಡೆಬಿಡದೆ ಶಿವನೊಡನೆ ಅಭೇದವನ್ನು ಭಾವಿಸಿದರೆ ಅದೇ ಮುಕ್ತಿ. ತಾನೇ ಶಿವನೆಂಬ ಸತತ ಗ್ರಹಿಕೆಯಿಂದ ಶಿವತ್ವ ಸಿದ್ಧಿಸುತ್ತದೆಂಬುದು ಇದರ ಅಭಿಪ್ರಾಯ. ಆದುದರಿಂದಲೇ ಇದಕ್ಕೆ 'ಪ್ರತ್ಯಭಿಜ್ಞಾ' ಎಂದು ಹೆಸರು. ಇದು ಶಿವ ಶಕ್ತಿ ಮತ್ತು ಅಣು ಅಥವಾ ಪತಿ ಪಾಶ ಮತ್ತು ಪಶು—ಎಂಬ ಮೂರು ತತ್ತ್ವಗಳನ್ನು ಒಳಗೊಂಡಿರುವುದರಿಂದ 'ತ್ರಿಕ' ಎಂದೂ ಇದನ್ನು ಕರೆಯುವುದುಂಟು.

ದಕ್ಷಿಣದ ಶೈವಶಾಖೆಗಳಲ್ಲಿ ತಮಿಳು ದೇಶದ ಶೈವಸಿದ್ಧಾಂತ ಮತ್ತು ಕನ್ನಡನಾಡಿನ ವೀರಶೈವಧರ್ಮ—ಇವು ಬಹಳ ಪ್ರಮುಖವಾದುವು. ತಮಿಳು ಶೈವಸಿದ್ಧಾಂತದ ಮೂಲ ಮತ್ತು ಬೆಳೆವಣಿಗೆಯ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಕ್ರಿ.ಶ. ಸು. ೮ನೆಯ ಶತಮಾನದಿಂದ ೧೩ನೆಯ ಶತಮಾನದ ಒಳಗೆ ಎಂದು ಹೇಳಬಹುದು. ತಮಿಳು ದೇಶದಲ್ಲಿ ಶಿವಭಕ್ತರಾದ ನಾಯನಾರರು ಆಳ್ವಾರರಂತೆ ತಮ್ಮ ಭಕ್ತಿಗೀತೆಗಳಿಂದ ಅದ್ಭುತ ಪರಿಣಾಮವನ್ನೂ ಪರಿವರ್ತನೆಯನ್ನೂ ಸಮಾಜದಲ್ಲಿ ಉಂಟುಮಾಡಿದರು. ಅನೇಕ ಶೈವಗ್ರಂಥಗಳು ತಮಿಳಿನಲ್ಲಿ ರಚಿತವಾದುವು. ನಾಯನಾರರು ಶಿವನ ಉಗ್ರರೂಪವನ್ನು ತೊಡೆದುಹಾಕಿ

ಪ್ರೇಮಮಯನಾದ ಶಾಂತಿರೂಪನಾದ ಶಿವನ ನಿಜಸ್ವರೂಪವನ್ನು ಬೆಳಗಬಲ್ಲ ಭಕ್ತಿಗೀತೆಗಳನ್ನು ಹಾಡಿದರು. ಶಿವಭಕ್ತರ ಈ ಕೀರ್ತನೆಗಳ ಸಂಗ್ರಹವು 'ತೇವಾರಂ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅಲ್ಲದೆ ಶೈವದರ್ಶನವನ್ನು ತರ್ಕಬದ್ಧವಾಗಿ ಸಿದ್ಧಾಂತದ ರೂಪದಲ್ಲಿ ಪ್ರತಿಪಾದಿಸುವ ಸೂತ್ರಗಳೂ ರಚಿತವಾದುವು. ಮೆಯ್‌ಕಂಡದೇವನ 'ಶಿವಜ್ಞಾನಬೋಧ', ಅರುಳ್‌ನಂದಿಯ 'ಶಿವಜ್ಞಾನಸಿದ್ಧಿ', ಉಮಾಪತಿಯ 'ಶಿವಪ್ರಕಾಶ' ಮೊದಲಾದ ಹದಿನಾಲ್ಕು ತಮಿಳು ಗ್ರಂಥಗಳು ಶೈವಸಿದ್ಧಾಂತ ರೂಪವನ್ನು ಪೂರ್ಣಗೊಳಿಸಿದುವು.

ಶೈವಸಿದ್ಧಾಂತ ತಾನು ಪ್ರತಿಪಾದಿಸುವ ತತ್ವಗಳ ವಿಚಾರವಾಗಿ ಸ್ಪಷ್ಟವಾದ ಕಲ್ಪನೆಯನ್ನು ಪಡೆದಿದೆ. ಸೃಷ್ಟಿಕರ್ತ, ಸೃಷ್ಟಿ ಮತ್ತು ಜೀವರು—ಈ ಮೂರೂ ಇಲ್ಲಿ ಅನಾದಿಯಾದುವುಗಳು. ಅದ್ವೈತ ಸಿದ್ಧಾಂತದಂತೆ ಈ ಜಗತ್ತು ಮಿಥ್ಯೆಯೆಂದು ಶೈವ ಸಿದ್ಧಾಂತ ಹೇಳುವುದಿಲ್ಲ. ನಮ್ಮ ಬಾಹ್ಯ ಇಂದ್ರಿಯಗಳು ಸತ್ಯವೆಂದು ತಿಳಿದಿರುವ ರೂಪದಲ್ಲಿ ಇದು ಸತ್ಯವಲ್ಲದಿರಬಹುದು. ಆದರೆ ಮೊಲದ ಕೋಡುಗಳಂತೆ ಜಗತ್ತೇ ಕೇವಲ ಭ್ರಮೆ ಎಂಬ ವಾದವನ್ನು ಇದು ಒಪ್ಪುವುದಿಲ್ಲ. ಶಿವ ಈ ಜಗತ್ತಿನ ಮೂಲಕಾರಣ, ಅವನ ಶಕ್ತಿ ನಿಮಿತ್ತಕಾರಣ, ಮಾಯೆ ಉಪಾದಾನಕಾರಣ—ಎಂಬುದು ಶೈವ ಸಿದ್ಧಾಂತದ ಅಭಿಪ್ರಾಯ.

ಶೈವಸಿದ್ಧಾಂತ ಸೃಷ್ಟಿಕ್ರಮದಲ್ಲಿ ಮೂವತ್ತಾರು ತತ್ತ್ವಗಳನ್ನು ನಿರ್ಣಯಿಸುತ್ತದೆ. ಸಾಂಖ್ಯರಂತೆ ಪ್ರಕೃತಿಯಿಂದ ಪ್ರಾರಂಭಿಸದೆ ಸೃಷ್ಟಿಗೆ ಉಪಾದಾನಕಾರಣವಾದ ಮಾಯೆಯಿಂದ ಪ್ರಾರಂಭಿಸುತ್ತದೆ ಮಾಯೆಯಲ್ಲಿ ಶುದ್ಧ ಅಶುದ್ಧ ಎಂದು ಎರಡು ವಿಧ. ಶುದ್ಧ ಮಾಯೆಯ ಮೇಲೆ ಶಿವನೇ ನೇರವಾಗಿ ಪ್ರಭಾವವನ್ನು ಬೀರಿ ನಾದ ಬಿಂದು ಸಾದಾಖ್ಯ ಮಹೇಶ್ವರಿ ಮತ್ತು ಶುದ್ಧವಿದ್ಯಾ ಎಂಬ ಶಿವತತ್ತ್ವಗಳಿಗೆ ಕಾರಣನಾಗುತ್ತಾನೆ. ಅಶುದ್ಧ ಮಾಯೆಯ ಮೇಲೆ ಶಿವನ ನೇರವಾದ ಸಂಬಂಧವಿಲ್ಲದೆ ಶುದ್ಧ ಮಾಯಾ ತತ್ತ್ವದಿಂದ ಹುಟ್ಟಿದ ಶಕ್ತಿಗಳು ಸೃಷ್ಟಿಯನ್ನು ಮುಂದುವರಿಸುತ್ತವೆ. ಮಾಯೆ, ಕಾಲ, ನಿಯತಿ, ಕಲೆ, ವಿದ್ಯೆ, ರಾಗ ಮತ್ತು ಪುರುಷ—ಈ ಏಳು ವಿದ್ಯಾತತ್ತ್ವಗಳು ಹುಟ್ಟುತ್ತವೆ. ಪ್ರಕೃತಿತತ್ತ್ವ ಅನಂತರ ಬರುತ್ತದೆ ಅಲ್ಲಿಂದ ಮುಂದೆ ಸಾಂಖ್ಯರ ಕ್ರಮದಲ್ಲಿಯೇ ಮುಂದುವರಿಯುತ್ತದೆ. ಹೀಗೆ ಏಕವಿದ್ದುದು ಅನೇಕವಾಗಿ ಬೆಳೆದು ವಿವಿಧ ರೂಪದ ಸೃಷ್ಟಿಯಲ್ಲಿ ಪರ್ಯವಸಾನವಾಗಿರುವ ವಿಧಾನದ ಈ ವಿವೇಚನೆಯಲ್ಲಿ ಶೈಸಿದ್ಧಾಂತ ತನ್ನದೇ ಆದ ಮಾರ್ಗವನ್ನು ಕಂಡುಕೊಂಡಿದೆ.

ಈ ಸೃಷ್ಟಿಯ ಮುಖ್ಯ ಉದ್ದೇಶ ಜೀವರನ್ನು ಬಂಧನದಿಂದ ಬಿಡುಗಡೆಗೊಳಿಸುವುದು. ಸೃಷ್ಟಿಯಂತೆಯೇ ಜೀವರೂ ಅನಾದಿಯಾದವರು. ಮಲಪಾಶದಿಂದ ಬಂಧಿತರಾದ ಪಶುಗಳು ಇವರು. ಇವರನ್ನು ಬಿಡುಗಡೆಗೊಳಿಸುವುದಕ್ಕಾಗಿ ಶಿವ ಸೃಷ್ಟಿಯನ್ನು ನಿರ್ಮಾಣ ಮಾಡಿ ಇವರ ಉದ್ಧಾರಕ್ಕೆ ಸಹಾಯಕನಾಗಿದ್ದಾನೆ—ಎನ್ನುತ್ತದೆ ಶೈವಸಿದ್ಧಾಂತ.

ತಮಿಳು ಶೈವಸಿದ್ಧಾಂತದ ಮುಕ್ತಿಯ ಕಲ್ಪನೆ ಇತರ ಶೈವಶಾಖೆಗಳ ಕಲ್ಪನೆಗಿಂತ ಭಿನ್ನವಾದುದು. ಆತ್ಮವು ಮಲತ್ರಯಗಳಿಂದ ಬಿಡುಗಡೆಯನ್ನು ಪಡೆಯುವುದನ್ನೇ

ಮೋಕ್ಷವೆಂದು ಕರೆಯಲಾಗಿದ್ದರೂ ಇತರ ವಿಷಯಗಳಲ್ಲಿ ಕಾಶ್ಮೀರ ಶೈವಕ್ಕೂ ತಮಿಳು ಶೈವಕ್ಕೂ ದೃಷ್ಟಿಭೇದ ಕಂಡುಬರುತ್ತದೆ. ಜೀವ ಮತ್ತು ಶಿವ ಇವರ ಸ್ವರೂಪ ಬೇರೆ, ಮುಕ್ತಿಯಲ್ಲಿಯೂ ಇವರು ಬೇರೆ—ಎಂಬ ದ್ವೈತವನ್ನು ತಮಿಳು ಶೈವಸಿದ್ಧಾಂತವನ್ನು ಪ್ರತಿಪಾದಿಸುತ್ತದೆ.[41] ಇಲ್ಲಿ "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಎಂಬ ಅದ್ವೈತದ ಮಾತುಗಳಿಗೂ ಇದಕ್ಕೂ ಮೂಲಭೂತವಾದ ವ್ಯತ್ಯಾಸವಿರುವುದನ್ನು ಕಾಣಬಹುದು. ವೀರಶೈವ ಸಿದ್ಧಾಂತ ಈ ಸಂದರ್ಭದಲ್ಲಿ ಇನ್ನೂ ಒಂದು ಹೆಜ್ಜೆಯನ್ನು ಮುಂದಿಟ್ಟು ಈ ಎಲ್ಲ ದೃಷ್ಟಿಗಳಿಗೂ ಇರುವ ಅಂತರವನ್ನು ಹೋಗಲಾಡಿಸಿದೆ.

ವೀರಶೈವಧರ್ಮ ಕರ್ನಾಟಕದಲ್ಲಿ ಪುನರುಜ್ಜೀವನಗೊಂಡುದು ೧೨ನೆಯ ಶತಮಾನ ದಲ್ಲಿ. ಇದಕ್ಕೆ ಬಹಳ ಹಿಂದೆಯೇ ಈ ಧರ್ಮ ಅಸ್ತಿತ್ವದಲ್ಲಿದ್ದಿರಬೇಕು. ಆಗ ಇದನ್ನು ಯಾವ ಹೆಸರಿನಿಂದ ಕರೆಯುತ್ತಿದ್ದರೆಂಬುದನ್ನು ನಿರ್ದಿಷ್ಟವಾಗಿ ಹೇಳುವಂತಿಲ್ಲ. ಮಹಾ ಭಾರತದಲ್ಲಿ ಉಕ್ತವಾದ ಪಾಶುಪತಧರ್ಮದಲ್ಲಿನ ಕೆಲವು ಆಚಾರವಿಚಾರಗಳು ವೀರ ಶೈವರಲ್ಲಿ ಈಗಲೂ ಕಂಡುಬರುತ್ತವೆ. ವೀರಶೈವ ಧರ್ಮದ ವಿಕಾಸದಲ್ಲಿ ಪಾಶುಪತಮತದ ಸಂಬಂಧವೂ ಉಂಟಾಗಿದೆಯೆಂದು ತಿಳಿಯಬಹುದು. ವೀರಶೈವ, ಲಿಂಗವಂತ ಎಂಬ ಹೆಸರುಗಳು ಅನಂತರ ರೂಢವಾದಂತೆ ತೋರುತ್ತವೆ. ೧೪ನೆಯ ಶತಮಾನದ ಮಾಧವರು ಕೂಡ ತಮ್ಮ 'ಸರ್ವದರ್ಶನ ಸಂಗ್ರಹ'ದಲ್ಲಿ 'ವೀರಶೈವ' ಎಂಬ ಹೆಸರನ್ನು ಉಲ್ಲೇಖಿಸದೆ ವೀರಶೈವರಿಗೂ ಕಾಳಾಮುಖರಿಗೂ ಭೇದವಿಲ್ಲವೆಂದು ಕಲ್ಪಿಸಿ ಲಕುಲೀಶ ಪಂಥವನ್ನಷ್ಟೇ ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.[42] ಅಂತೂ ವೀರಶೈವ ತತ್ತ್ವ ಪುರಾತನ ವಾದುದು. ಕಾಳಿದಾಸನ ಕಾವ್ಯಗಳಲ್ಲಿ ಕೂಡ ಧ್ವನಿಪೂರ್ವಕವಾಗಿ ವೀರಶೈವ ತತ್ತ್ವ ಪ್ರತಿಪಾದಿತವಾಗಿದೆಯೆಂಬ ತಮ್ಮ ಅಭಿಪ್ರಾಯವನ್ನು ಎಸ್. ಎನ್. ದಾಸಗುಪ್ತ ಅವರು ಹೀಗೆ ಹೇಳಿದ್ದಾರೆ:

> "The kernel of Veerashaiva thought is almost as early as the Upanishads and it may be found in a more or less systematic manner by way of suggestion in the writings of Kalidasa who lived in the early centuries of christian era."[43]

ವೀರಶೈವ ಅನೇಕ ಅಂಶಗಳಲ್ಲಿ ತಮಿಳುಶೈವ ಸಿದ್ಧಾಂತವನ್ನೇ ಹೋಲುತ್ತದಾದರೂ ಷಟ್‌ಸ್ಥಲ ಅಷ್ಟಾವರಣ ಪಂಚಾಚಾರ ಈ ಮೊದಲಾದ ಕೆಲವು ವಿಶಿಷ್ಟ ಅಂಶಗಳಿಂದ ತನ್ನದೇ ಆದ ಆಚರಣೆಯ ಮಾರ್ಗವನ್ನು ಕಂಡುಕೊಂಡಿದೆ. ಶಿವ, ಜೀವ, ಜಗತ್ತು— ಈ ಪದಾರ್ಥಗಳ ವಿಚಾರವನ್ನು ವ್ಯಾಪಕವಾದ ಮನೋಧರ್ಮದಿಂದ ಇಲ್ಲಿ ವಿವೇಚಿಸಿದೆ. ಶಿವ ಮತ್ತು ಜೀವರು ತತ್ತ್ವತಃ ಬೇರೆ ಬೇರೆಯಾದವರೆಂಬ ಮಾತನ್ನು ವೀರಶೈವಮತ ಒಪ್ಪುವುದಿಲ್ಲ. ಒಂದು ಇದ್ದದ್ದು ಅನೇಕವಾಗಿ ಮತ್ತೆ ಅದು ಏಕತ್ವದಲ್ಲಿಯೇ ಕೊನೆ ಗೊಳ್ಳಬೇಕು—ಎಂಬ ತತ್ತ್ವವನ್ನು ಇದು ಪ್ರತಿಪಾದಿಸುತ್ತದೆ. ಪ್ರಾರಂಭದಲ್ಲಿ ಶಿವ ಜೀವ ರಿಗೆ ಭೇದ ತಲೆದೋರಿದರೂ ಕೊನೆಯಲ್ಲಿ ಅಭೇದವುಂಟಾಗುತ್ತದೆ. ಭೇದ ಮತ್ತು ಅಭೇದ

ರೂಪವಾದ ಶ್ರುತಿವಾಕ್ಯಗಳೆಲ್ಲವೂ ಇಲ್ಲಿ ಸಮನ್ವಯವನ್ನು ಪಡೆಯುತ್ತವೆ. ಆದುದರಿಂದಲೇ ಶ್ರೀಪತಿ ಪಂಡಿತರು ತನ್ನ ಶ್ರೀಕರ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ :

ದ್ವೈತಾದ್ವೈತ ಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ।
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಶಿವ ತನ್ನೊಡನೆ ಅವಿನಾಸಂಬಂಧದಿಂದಿರುವ ಶಕ್ತಿಯ ಸಹಾಯದಿಂದ ಪ್ರಪಂಚ ವನ್ನು ನಿರ್ಮಿಸುತ್ತಾನೆ. ಶಕ್ತಿಯು ಶಿವನೊಡನೆ ಬೇರ್ಪಡಿಸಲಾಗದ ರೀತಿಯಲ್ಲಿ ವೈದೋರಿ ಸೃಷ್ಟಿಕಾರ್ಯವನ್ನು ನಿರ್ವಹಿಸುತ್ತಿದೆ. ಸಾಮಾನ್ಯವಾಗಿ ಎಲ್ಲ ಧರ್ಮಗಳೂ ಅಂಗೀಕರಿಸಿರುವ ಪ್ರಕೃತಿ ಪುರುಷ ಪರಬ್ರಹ್ಮ ಅಥವಾ ಪಶು ಪಾಶ ಪತಿ ಎಂಬ ಪದಾರ್ಥಗಳ ಜೊತೆಗೆ 'ಶಕ್ತಿ' ಎಂಬ ನಾಲ್ಕನೆಯ ಪದಾರ್ಥವನ್ನು ಅಂಗೀಕರಿಸಿದೆ. ವೀರ ಶೈವ ತತ್ತ್ವವನ್ನು ಪ್ರತಿಪಾದಿಸುವ 'ಅನುಭವಸೂತ್ರ'ವು "ಶಕ್ತಿರಪ್ರತಿಮಾ ಸಾಕ್ಷಾತ್ ಶಿವೇನ ಸಹಧರ್ಮಿಣೀ" ಎಂದು ಶಿವಶಕ್ತಿಯರ ಸಂಬಂಧವನ್ನು ಹೇಳುತ್ತದೆ. ವೀರಶೈವ ಸಿದ್ಧಾಂತಕ್ಕೆ 'ಶಕ್ತಿವಿಶಿಷ್ಟಾದ್ವೈತ' ಎಂಬ ಹೆಸರೂ ಉಂಟು : "ಶಕ್ತಿಶ್ಚ ಶಕ್ತಿಶ್ಚ ತಾಭ್ಯಾಂ ವಿಶಿಷ್ಟೌ ಜೀವೇಶೌ ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ." ಶಿವನೂ ಜೀವನೂ ಶಕ್ತಿ ವಿಶಿಷ್ಟರಾದವರು. ಈ ಶಕ್ತಿ ವಿಶಿಷ್ಟರಾದ ಜೀವಶಿವರ ಸಾಮರಸ್ಯವೇ ಶಕ್ತಿವಿಶಿಷ್ಟಾ ದ್ವೈತ.

ಶಿವ ತನ್ನ ಶಕ್ತಿಯ ಸಹಾಯದಿಂದ ಈ ಪ್ರಪಂಚವನ್ನು ನಿರ್ಮಿಸಿದ್ದಾನೆ. ಸರ್ವತಂತ್ರ ಸ್ವತಂತ್ರನಾದ ಲೀಲಾಸ್ವರೂಪಿಯಾದ ಶಿವನಿಗೆ ಪ್ರಪಂಚವನ್ನು ನಿರ್ಮಿಸಲು ಕಾರಣವೇನೂ ಬೇಕಾಗಿಲ್ಲ. ಕೇವಲ ಲೀಲೆಗೋಸ್ಕರ ಸೃಷ್ಟಿಸಿದ್ದಾನೆ. ಈ ಸೃಷ್ಟಿಯೂ ಸತ್ಯ, ಜೀವರೂ ಸತ್ಯ. ಈ ಅರ್ಥದಲ್ಲಿ ಇದು ದ್ವೈತ. ಆದರೆ ಇದೇ ಕೊನೆಯ ಸತ್ಯವಲ್ಲ. ಶಿವನ ಲೀಲೆ ಮುಗಿದೊಡನೆಯೇ ಇವೆಲ್ಲಾ ಒಂದರಲ್ಲೊಂದು ಅಡಗಿ ಕೊನೆಯಲ್ಲಿ ಶಿವತತ್ತ್ವವೊಂದೇ ಉಳಿಯುತ್ತದೆ. ಈ ಅರ್ಥದಲ್ಲಿ ಇದು ಅದ್ವೈತ. ಹೀಗೆ ವೀರಶೈವ ದ್ವೈತ ಅದ್ವೈತ ಗಳೆರಡನ್ನೂ ಭೇದ ಅಭೇದಗಳೆರಡನ್ನೂ ಹೊಂದಿಸಿಕೊಂಡಿದೆ. ಸೃಷ್ಟಿಯ ವಿಕಾಸಕ್ರಮ ದಲ್ಲಿಯೂ ವೀರಶೈವ ಒಂದು ಸ್ವತಂತ್ರವಾದ ಮಾರ್ಗವನ್ನು ಹಾಕಿಕೊಟ್ಟಿದೆ. ತಮಿಳು ಶೈವ ಸಿದ್ಧಾಂತವು ಸಾಂಖ್ಯರ ಇಪ್ಪತ್ತೈದು ತತ್ತ್ವಗಳನ್ನು ದಾಟಿಹೋಗಿ, ಮೂವ ತ್ತಾರು ತತ್ತ್ವಗಳಿಂದ ಜಗತ್ತು ನಿರ್ಮಾಣಗೊಂಡಿವೆಯೆಂದು ಹೇಳಿದ ಮಾತನ್ನೇ ವೀರಶೈವ ಅಂಗೀಕರಿಸಿದೆ. ಆದರೆ ಅವುಗಳ ವಿವರಣೆಯಲ್ಲಿ ಶೈವಸಿದ್ಧಾಂತಕ್ಕಿಂತ ಸ್ವಲ್ಪ ಭಿನ್ನತೆಯನ್ನೂ ವಿಶಿಷ್ಟತೆಯನ್ನೂ ಕಾಣುತ್ತೇವೆ. ಸಚ್ಚಿದಾನಂದರೂಪನಾದ ಶಿವನಲ್ಲಿ ಶಕ್ತಿಯ ಸ್ಫುರಣದಿಂದ ಮೂವತ್ತಾರು ತತ್ತ್ವಗಳ ರೂಪವಾಗಿ ಸೃಷ್ಟಿಯು ಪರಿಣಮಿಸು ವುದನ್ನು ತನ್ನದೇ ಆದ ರೀತಿಯಲ್ಲಿ ಅಲ್ಲಿ ಚಿತ್ರಿಸಿದೆ.

ಇಂತಹ ಸೃಷ್ಟಿಗೆ ಕಾರಣವಾದ ಸೃಷ್ಟಿಕರ್ತನ ಸ್ವರೂಪವೇನು ? ಇದನ್ನು ವೀರಶೈವ ಸಿದ್ಧಾಂತ ವ್ಯಾಪಕವಾದ ಕಲ್ಪನೆಯಿಂದ ಚಿತ್ರಿಸಿದೆ. ಅದು ತನ್ನ ಕಾಲನ್ನು ಹೊರಚಾಚಿ

ಮತ್ತೆ ಒಳಗೆ ಎಳೆದುಕೊಳ್ಳುವಂತೆ ಈ ಸೃಷ್ಟಿಯನ್ನು ಹೊರಗೆ ಚಾಚಿ ಮತ್ತೆ ಒಳಗೆ ಅಡಗಿಸಿಕೊಳ್ಳುತ್ತ ತನ್ನ ಲೀಲೆಯನ್ನು ಮೆರೆಯುತ್ತಿದ್ದಾನೆ ಸೃಷ್ಟಿಕರ್ತ. ಅವನು ವಿಶ್ವಭರಿತ, ವಿಶ್ವರೂಪ, ವಿಶ್ವಪತಿ; ಆದರೂ ವಿಶ್ವಾತೀತ, ವಿಶ್ವಕ್ಕೆಲ್ಲ ಆಧಾರಭೂತ.

ಜೀವರ ಸ್ವರೂಪ ನಿರ್ಣಯದಲ್ಲಿಯೂ ವೀರಶೈವ ತನ್ನದೇ ಆದ ಹೆಜ್ಜೆಯನ್ನು ಹಾಕಿದೆ. ಶೈವಸಿದ್ಧಾಂತದ ಪ್ರಕಾರ ಸೃಷ್ಟಿ ಮತ್ತು ಸೃಷ್ಟಿಕರ್ತರಂತೆ ಜೀವರು ಅನಾದಿಯಾದವರು, ಮತ್ತು ಶಿವನಿಂದ ಬೇರೆಯಾದವರು. ಆದರೆ ವೀರಶೈವರ ವಿವರಣೆ ಬೇರೆ. ಸದಾಶಿವಮೂರ್ತಿಯ ಅಷ್ಟತನುಗಳಲ್ಲಿ ಆತ್ಮವೂ ಒಂದು. ಆ ಮೂರ್ತಿಯ ಗೋಪ್ಯಮುಖದಿಂದ ಆತ್ಮ ಹುಟ್ಟಿತು ಎಂದು ಶರಣರು ಹೇಳಿದ್ದಾರೆ. ವೀರಶೈವ ಪರಿಭಾಷೆಯಲ್ಲಿ ಇದಕ್ಕೆ 'ಅಂಗ' ಎಂದು ಹೆಸರು. ಇದು ಅವಿದ್ಯೆಯ ಪ್ರಭಾವಕ್ಕೆ ಒಳಪಟ್ಟು ತನ್ನ ಸ್ವರೂಪವನ್ನು ಮರೆತು ಜೀವರಾಗಿ ಪರಿಣಮಿಸುತ್ತದೆ. ಎಂದರೆ ಜೀವರು ಶಿವನ ಅಂಶಮಾತ್ರದಿಂದ ಹುಟ್ಟಿದ, ಮೂಲತಃ ಪರಿಶುದ್ಧರಾದ, ಪುನಃ ಮೊದಲಿನ ಶುದ್ಧ ರೂಪವನ್ನು ಪಡೆಯುವ ಗುರಿಯುಳ್ಳವರು.

ವೀರಶೈವರ ಮೋಕ್ಷದ ಕಲ್ಪನೆ ಶೈವಸಿದ್ಧಾಂತಕ್ಕಿಂತ ತೀರ ಭಿನ್ನವಾದುದು. "ಜೀವರು ಮುಕ್ತಿಯ ನಂತರವೂ ಶಿವನಿಂದ ಬೇರೆಯಾಗಿಯೇ ಉಳಿಯತಕ್ಕವರು" ಎಂದು ಶೈವಸಿದ್ಧಾಂತ ಹೇಳುವ ಮಾತನ್ನು ವೀರಶೈವವು ಒಪ್ಪುವುದಿಲ್ಲ. ಶಿವ ಮತ್ತು ಜೀವ ತತ್ತ್ವತಃ ಬೇರೆಯಲ್ಲ. ಕೊನೆಯಲ್ಲಿ ಬೇರೆ ಬೇರೆ ಉಳಿಯುವವರೂ ಅಲ್ಲ. "ಚಿನ್ನದಿಂದಲಾದ ಹಲವು ಭಂಗಾರವಳಿದು ಕರಗಿದರೆ ಮುನ್ನಿನ ಚಿನ್ನವೇ ಆದಂತೆ" ಒಂದಾಗಿ ಸೇರಿಹೋಗುವವರು. ಚಿನ್ನ ಮತ್ತು ಚಿನ್ನದ ಆಭರಣಗಳಲ್ಲಿ, ನೀರು ಮತ್ತು ಆಲಿಕಲ್ಲುಗಳಲ್ಲಿ ರೂಪಭೇದವೇ ಹೊರತು ಸ್ವರೂಪಭೇದವಿಲ್ಲ. ತತ್ತ್ವತಃ ಅವು ಒಂದೇ. "ಚಂದ್ರನಿಂದಾದ ಕಲೆ ಚಂದ್ರನ ಬೆರಸಿ ಚಂದ್ರನಾದಂತೆ, ಸೂರ್ಯಕಿರಣ ಸೂರ್ಯನ ಬೆರಸಿ ಸೂರ್ಯನಾದಂತೆ, ಅಗ್ನಿಯಿಂದಾದ ಕಾಂತಿ ಅಗ್ನಿಯ ಬೆರಸಿ ಅಗ್ನಿಯಾದಂತೆ, ದೀಪದಿಂದಾದ ಬೆಳಗು ದೀಪವ ಬೆರಸಿ ದೀಪವಾದಂತೆ, ಸಮುದ್ರದಿಂದಾದ ನದಿ ಸಮುದ್ರವ ಬೆರಸಿ ಸಮುದ್ರವಾದಂತೆ" ಜೀವರು ಶಿವನಲ್ಲಿ ಬೆರಸಿ ಶಿವನೇ ಆಗಿ ಪರಿಣಮಿಸುತ್ತಾರೆ. "ಉರಿಯುಂಡ ಕರ್ಪುರದಂತೆ" ಅವನ ರೂಪ ಕರಗುತ್ತದೆ. ಬಯಲಿನಲ್ಲಿ ಬಯಲು ಬೆರೆದಂತಾಗಿ ನಿರ್ವಯಲಾಗುತ್ತಾನೆ ಜೀವ. ಇದೇ ಲಿಂಗೈಕ್ಯಸಾಮರಸ್ಯದ ನಿಲವು.

ಇದನ್ನು ಸಾಧಿಸಲು ವೀರಶೈವ ಸಿದ್ಧಾಂತ ರೂಪಿಸಿಕೊಂಡಿರುವ ಆಚರಣೆಯ ಮಾರ್ಗವೂ ವಿಶಿಷ್ಟವಾದುದು. ಅದೇ ಷಟ್‌ಸ್ಥಲ ಸಿದ್ಧಾಂತ. ಜೀವವು ದೇವನತ್ತ ಸಾಗುವ ತನ್ನ ಯಾತ್ರೆಯ ಮಾರ್ಗದಲ್ಲಿ ಏರಬೇಕಾದ ಆರು ಮೆಟ್ಟಿಲುಗಳು ಈ ಷಟ್‌ಸ್ಥಲಗಳು. ತನ್ನ ನಿಜಸ್ವರೂಪವನ್ನು ಮರೆತು ತಾನು ದುಃಖಿಯೆಂದು ತಲ್ಲಣಗೊಳ್ಳುವ ಭಕ್ತನಮನಸ್ಸಿನ ತಳಮಳದಿಂದ ಹಿಡಿದು ವಿಶ್ವವನ್ನೆಲ್ಲ ವ್ಯಾಪಿಸಿರುವ ಚೈತನ್ಯಸ್ವರೂಪ ಶಕ್ತಿಯೇ ತಾನೆಂಬ ಮುಕ್ತಿಯ ಶಾಂತಭಾವದವರೆಗಿನ ಎಲ್ಲ ಮನೋಧರ್ಮಗಳನ್ನೂ ಷಟ್‌ಸ್ಥಲಗಳಲ್ಲಿ ಕಾಣುತ್ತೇವೆ. ಈ ಮಾರ್ಗದಲ್ಲಿ ಭಕ್ತಿ ಕರ್ಮಜ್ಞಾನ—ಇವೆಲ್ಲಕ್ಕೂ

ಪ್ರಾಮುಖ್ಯವಿದೆ. ಇವೆಲ್ಲವುಗಳ ಸಮನ್ವಯವೇ ಈ ಮಾರ್ಗದ ವೈಶಿಷ್ಟ್ಯ.

ಶೈವಧರ್ಮದ ಈ ವಿಕಾಸದ ಜೊತೆಜೊತೆಯಲ್ಲಿಯೇ ಬೆಳೆದು ಬಂದಿತು ಶಾಕ್ತಮತ. ಈ ಮತವೂ ಆಗಮ ಮತ್ತು ತಂತ್ರಗಳನ್ನು ಆಶ್ರಯಿಸಿ ಅವುಗಳ ಆಧಾರದ ಮೇಲೆ ವಿಕಾಸಗೊಂಡಿತು. ಶಿವ ಮತ್ತು ಅವನಲ್ಲಿ ಅವಿನಾಭಾವದಿಂದಿರುವ ಶಕ್ತಿ ಇವುಗಳಲ್ಲಿ ಶಕ್ತಿಯನ್ನೇ ಪ್ರಧಾನವಾಗಿ ಪರಿಗಣಿಸಿ ಉಪಾಸಿಸಿದವರು ಶಾಕ್ತರು. ತಾತ್ತ್ವಿಕವಾದ ನಿರೂಪಣೆಯಲ್ಲಿ ಶೈವಧರ್ಮಕ್ಕಿಂತ ವಿಶೇಷವಾದ ಭಿನ್ನತೆ ಇದರಲ್ಲಿ ಕಂಡುಬರುವುದಿಲ್ಲ. ಆದರೆ ಶಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ಅದಕ್ಕನುಗುಣವಾದ ರೀತಿಯಲ್ಲಿ ಅಳವಡಿಸಿಕೊಂಡಿದೆ. ಶಿವ ಮತ್ತು ಶಕ್ತಿ ಈ ಎರಡು ತತ್ತ್ವಗಳ ಸ್ವರೂಪ ಸ್ವಭಾವಗಳನ್ನು ಪರಿಮಿತವಾದ ದೃಷ್ಟಾಂತಗಳಿಂದ ಅಥವಾ ಸಾಮ್ಯಗಳಿಂದ ತಿಳಿಯುವುದು ಸಾಧ್ಯವಿಲ್ಲ. ಆದರೂ ಲೌಕಿಕ ದೃಷ್ಟಾಂತವನ್ನು ಕೊಟ್ಟು ಹೇಳಬಹುದಾದರೆ ದಂಪತಿಗಳ ಸಂಸರ್ಗದಿಂದ ಸಂತಾನವು ಬೆಳೆಯುವಂತೆ ಶಿವಶಕ್ತಿಯೋಗದಿಂದ ಈ ವಿಶ್ವದ ಉತ್ಪತ್ತಿ. ಶಿವನನ್ನು 'ಸಿತಬಿಂದು'ವೆಂದೂ ಶಕ್ತಿಯನ್ನು 'ಶೋಣಬಿಂದು'ವೆಂದೂ ಇಲ್ಲಿ ಕರೆಯಲಾಗಿದೆ:

> ಸಿತಶೋಣ ಬಿಂದುಯುಗಲಂ । ವಿವಿಕ್ತ ಶಿವಶಕ್ತಿ ಸಂಕುಚಿತ್ಪ್ರಸರಮ್ ।
> ವಾಗರ್ಥ ಸೃಷ್ಟಿಹೇತುಃ ಪರಸ್ಪರಾನುಪ್ರವಿಷ್ಟ ವಿಸ್ಪಷ್ಟಮ್ ॥

ಎಂಬ ಮಾತು 'ಶಕ್ತಿಸೂತ್ರ ಭಾಷ್ಯ'ದಲ್ಲಿ ಬರುತ್ತದೆ. ಶಿವನು ಸಮಸ್ತ ಸೃಷ್ಟಿ ಸ್ಥಿತಿ ಲಯಗಳಲ್ಲಿ ಉದ್ಯುಕ್ತನಾಗುತ್ತಾನೆ. ಪ್ರಕಾಶಮಾತ್ರ ಸ್ವಯಂಭುವಾದ ಅವನು ಸ್ವಸ್ವರೂಪ ವಿಮರ್ಶಕ್ಕಾಗಿ ಶಕ್ತಿಯ ಕಡೆಗೆ ನೋಡುತ್ತಾನೆ. ಅಲ್ಲಿ ತನ್ನ ಸ್ವರೂಪವನ್ನು ಕಂಡುಕೊಳ್ಳುತ್ತಾನೆ. ಇದನ್ನೇ ಮೇಲಿನ ಸೂತ್ರ 'ಪರಸ್ಪರಾನುಪ್ರವೇಶ' ಎಂದು ಕರೆದಿದೆ. ಇದನ್ನೇ ದಿವ್ಯಮಿಥುನ, ಸಮರಸಾಕಾರ, ಶಿವಶಕ್ತಿಸಮಾಗಮ—ಇತ್ಯಾದಿ ಶಬ್ದಗಳಿಂದಲೂ ಈ ಸಂಪ್ರದಾಯದವರು ಕರೆಯುತ್ತಾರೆ. ಶಿವಶಕ್ತಿಯರ ಈ ಮಿಥುನದಿಂದಲೇ ಸೃಷ್ಟಿ ನಡೆಯುತ್ತಿದೆ. ಶಕ್ತಿರಹಿತನಾಗಿ ಕೇವಲ ನಿರಂಜನನಾದ ಶಿವ ಸೃಷ್ಟಿಕಾರ್ಯದಲ್ಲಿ ತೊಡಗಲಾರ.

ಹೀಗೆ ಶಕ್ತಿಯನ್ನು ಪರಮಶ್ರೇಷ್ಠವೆಂದು ಅವಲಂಬಿಸಿದುದರಿಂದ ಅವರ ಉಪಾಸನೆಯ ಮಾರ್ಗವೂ ಭಿನ್ನವಾಯಿತು. ಸ್ತ್ರೀರೂಪದ ಮೂಲಕವಾಗಿಯೇ ಉಪಾಸನೆ ಮಾಡಬೇಕೆಂದೂ ಅದರಿಂದ ಶೀಘ್ರವಾಗಿ ಫಲಸಿದ್ಧಿಯಾಗುತ್ತದೆಂದೂ ಹೇಳಲಾಗಿದೆ. "ಶಿವನಿಗೆ ಫಲದಾತೃತ್ವವಿದ್ದರೂ ಫಲದಾನಶಕ್ತಿಯು ಶಕ್ತಿಯ ಅಧೀನವಾಗಿರುತ್ತದೆ. ಆದುದರಿಂದ ಶೀಘ್ರಸಿದ್ಧಿಗೆ ಸ್ತ್ರೀರೂಪವೇ ಗತಿ"—ಎಂಬ ಅಭಿಪ್ರಾಯ ಕೆಲವು ವೇಳೆ ಅಡ್ಡದಾರಿಗೆ ಒಯ್ದಿತು. ಕಾಳಿ, ದುರ್ಗಿ ಮೊದಲಾದ ಉಗ್ರದೇವತೆಗಳ ಕಲ್ಪನೆ ಒಂದು ಕಡೆ ಬೆಳೆಯಿತು. ಕ್ಷುದ್ರಸಿದ್ಧಿಗಾಗಿ ಅವಳನ್ನು ತಾಮಸಿಕವಾಗಿ ಉಪಾಸಿಸುವ ಅನುಚಿತಮಾರ್ಗವಾಗಿ ಪರಿಣಮಿಸಿತು. ಕೆಲವು ವೇಳೆ ಶೈವಶಾಖೆಯ ಕಾಪಾಲಿಕ ಮೊದಲಾದ ಮಾರ್ಗಗಳಂತೆ ವಿಕಾರಮಾರ್ಗವನ್ನು ಹಿಡಿಯಿತು.

ಪ್ರಧಾನವಾದ ಈ ಧಾರ್ಮಿಕ ಮಾರ್ಗಗಳಲ್ಲದೆ ಇನ್ನೂ ಕೆಲವು ಉಪಾಸನೆಯ ವಿಧಾನಗಳು ಬೆಳೆದುಬಂದುವು. ಗಣಪತಿಯ ಉಪಾಸಕರಾಗಿದ್ದ ಗಾಣಪತ್ಯರು ಒಂದು ಕಾಲದಲ್ಲಿ ಪ್ರಬಲರಾಗಿದ್ದರು. ಕ್ರಮೇಣ ಗಣಪತಿಯ ಕಲ್ಪನೆ ವಿಕಾಸವಾಗುತ್ತ ಬಂದು ಎಲ್ಲ ಧರ್ಮಗಳ ಸಮಾನದೇವತೆಯಾಗಿ ಆತ ಪರಿಣಮಿಸಿದುದು ಗಾಣಪತ್ಯ ಶಾಖೆ ಹಿಂದುಳಿಯಲು ಕಾರಣವಾಯಿತು. ಇತರ ಗ್ರಾಮದೇವತೆಗಳ ಉಪಾಸನೆಯ ವಿವಿಧ ಮಾರ್ಗಗಳು ಸಾಮಾನ್ಯ ಜನಜೀವನದಲ್ಲಿ ಪ್ರಚಲಿತವಾಗಿದ್ದುವು. ಅನೇಕ ಮಟ್ಟಗಳಲ್ಲಿ ಧಾರ್ಮಿಕ ಭಾವನೆಗಳೂ ಆಚಾರಗಳೂ ಜೊತೆಜೊತೆಯಲ್ಲಿಯೇ ಬೆಳೆದುಕೊಂಡು ಬಂದುವು. ಅವುಗಳನ್ನೆಲ್ಲಾ ಒಳಕೊಳ್ಳಬಲ್ಲ ವ್ಯಾಪಕವಾದ ಅರ್ಥವನ್ನು 'ಹಿಂದು' ಎಂಬ ಶಬ್ದ ಪಡೆಯಿತು. ಭಾರತೀಯ ಧಾರ್ಮಿಕ ಹಿನ್ನೆಲೆಯಲ್ಲಿ ನಾವು ಮುಖ್ಯವಾಗಿ ಕಾಣುವ ಅಂಶ ಇದೇ. ಸರ್ವಭಾವನೆಗಳಿಗೂ ಅವಕಾಶವಿತ್ತ ಸರ್ವಸಮನ್ವಯ ಸಂಸ್ಕೃತಿಯೇ ಭಾರತದ ವೈಶಿಷ್ಟ್ಯ. ಸಮಾಜವೆನ್ನುವುದು ಅನೇಕ ವಯೋಧರ್ಮಗಳ ಮತ್ತು ಅನೇಕ ಮನೋಧರ್ಮಗಳ ಸಮಾವೇಶದಿಂದಾದ ಬಹುರೂಪದ ನಿರಂತರ ಪ್ರವಾಹವೆಂಬುದನ್ನು ಕಂಡ ಭಾರತೀಯ ತಾತ್ತ್ವಿಕರು ಆ ಎಲ್ಲಕ್ಕೂ ಸ್ಥಾನವನ್ನು ಕಲ್ಪಿಸಿದರು. ಅದರದರ ಮಟ್ಟದಿಂದ ಸಾಧನೆಯ ಮಾರ್ಗದಲ್ಲಿ ಮುಂದುವರಿಯುವ ವಿಕಾಸಮಾರ್ಗವನ್ನು ಹಾಕಿ ಕೊಟ್ಟರು.

## ಅಡಿಟಿಪ್ಪಣಿಗಳು

1 Sir Mortimer Wheeler, *The Indus Civilization*, Cambridge, 1960, p. 63; ಡಾ. ಎಂ. ಶೇಷಾದ್ರಿ, ಹರಪ್ಪಾ ಸಂಸ್ಕೃತಿ, ಮೈಸೂರು, ೧೯೫೫, ಪು. ೬೧
2 M. Wheeler, Ibid., p. 82
3 ಅದೇ, ಪು. ೪೯
4 Radha Kumud Mookerji, *Ancient India*, Allahabad, 1956, p. 46
5 B. N. Luniya, *Evolution of Indian Culture*, Agra, 1960, pp. 29–30
6 ಅದೇ, "It is described as 'the epitome of the world' ", ಪು. ೧೪
7 *The Cultural Heritage of India*, Vol. i, Calcutta, 1937, Intro., p. xl
8 ಜಿ. ಹನುಮಂತರಾವ್, 'ಋಗ್ವೇದ ಸೂಕ್ತಗಳು', ಮೈಸೂರು, ೧೯೬೦, ಪೀಠಿಕೆ, ಪು. ೧೧
9 *The Cultural Heritage of India*, Vol. i, p. 346
10 "ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ", ಋಗ್ವೇದ, ೧-೧೬೪-೪೬
11 ಜಿ. ಹನುಮಂತರಾವ್, ಪೂರ್ವೋಕ್ತ, ಪು. ೪೮-೪೯
12 *The Cultural Heritage of India*, Vol. i, p. 208
13 ಜಿ. ಹನುಮಂತರಾವ್, ಪೂರ್ವೋಕ್ತ, ಪು. ೩೧
14 Ed. by R. C. Majumdar and A. D. Pusalker, The History and Culture of the Indian People, *The Vedic Age*, Bharatiya Vidya Bhavan Publication, Bombay, 1957, pp. 356–57

15 ಜಿ. ಹನುಮಂತರಾವ್, ಪೂರ್ವೋಕ್ತ, ಪು. ೩೫
16 'ಛಾಂದೋಗ್ಯೋಪನಿಷತ್', ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ, ೧೯೫೩, ಪು. ೧೩೮
17 ರಂ. ರಾ. ದಿವಾಕರ, 'ಉಪನಿಷತ್ಪ್ರಕಾಶ', ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ, ೧೯೫೧, ಪು. ೧೩೦
18 'ಬೃಹದಾರಣ್ಯಕೋಪನಿಷತ್ತು', ಮಂತ್ರ ೧
19 'ಮುಂಡಕೋಪನಿಷತ್ತು', ಶಾಂತಿಪಾಠ
20 ರಂ. ರಾ. ದಿವಾಕರ, ಅದೇ, ಪು. ೮
21 *Complete Works of Swami Vivekananda*, Vol. iv, Mayavati, Almora Himalayas, 1945, p. 97
22 *The Cultural Heritage of India*, Vol. ii, p. 17
23 Winternitz, *A History of Indian Literature*, Vol. i
24 S. Radhakrishnan, *Indian Philosophy*, Vol. i, London, 1962, p. 483
25 *The Cultural Heritage of India*, Vol. ii, p. 31
26 Winternitz, Ibid., Vol. i
27 *The Cultural Heritage of India*, Vol. ii, p. 49
28–29 ಅದೇ., ಪು. ೩೦೩
30 *The Cultural Heritage of India*, Vol. iv, p. 69
31 ಅದೇ, ಪು. ೨೧೬–೧೭
32 ಎಚ್. ತಿಪ್ಪೇರುದ್ರಸ್ವಾಮಿ, 'ಶರಣರ ಅನುಭಾವ ಸಾಹಿತ್ಯ', ಮೈಸೂರು, ೧೯೬೩, ಪು. ೧೬-೧೭
33 B. N. Luniya, Ibid., p. 122
34 Ed. E. A. Burtt, *The Teachings of The Compassionate Buddha*, New American Library, 1955, Intro., p. 22
35 ಸಂ. ಅ. ನ. ಕೃಷ್ಣರಾಯ, 'ಭಾರತೀಯ ಸಂಸ್ಕೃತಿ ದರ್ಶನ', ಬೆಂಗಳೂರು, ೧೯೬೨, ಪು. ೨೦೫
36 *The Cultural Heritage of India*, Vol. ii, pp. 479–80
37 ನಾಸ್ತಿಕರೆಂದರೆ ಇಲ್ಲಿ ದೇವರ ಅಸ್ತಿತ್ವವನ್ನೇ ಒಪ್ಪದವರೆಂದಲ್ಲ. ವೇದವನ್ನು ನಿಂದಿಸುವವರೆಲ್ಲ ನಾಸ್ತಿಕರು. "ನಾಸ್ತಿಕೋ ವೇದನಿಂದಕಃ"—ಮನು. ವೇದವನ್ನು ಮನ್ನಿಸುವವರೆಲ್ಲ ಆಸ್ತಿಕರು.
38 S. Radhakrishnan, *Indian Philosophy*, Vol. ii, pp. 251–52
39 ಅದೇ, ೧೭೩–೭೪
40 S. N. Dasgupta, *A History of Indian Philosophy*, Vol. v
41 V. Paranjoti, *Shaiva Siddanta*
42 ಎಸ್. ಸಿ. ನಂದಿಮಠ, 'ಕನ್ನಡ ನಾಡಿನ ಚರಿತ್ರೆ', ಭಾಗ ೨, ಬೆಂಗಳೂರು, ೧೯೪೪, ಪು. ೧೮೫–೮೬
43 S. N. Dasgupta, Ibid., Vol.



## ಅಧ್ಯಾಯ ನಾಲ್ಕು

# ಕನ್ನಡ ನಾಡು, ನುಡಿ ಮತ್ತು ಜನತೆ

## ಕನ್ನಡ ನಾಡು

ದಕ್ಷಿಣ ಭರತಖಂಡದೊಳಗೆ ಕನ್ನಡ ಭಾಷೆಯನ್ನು ಆಡುವ ಜನ ವಿಶೇಷವಾಗಿ ವಾಸ ಮಾಡುತ್ತಿರುವ ಭೂಭಾಗವನ್ನು ಕನ್ನಡ ನಾಡು ಎಂದು ವ್ಯವಹರಿಸುತ್ತೇವೆ. ಈ ನಾಡಿಗೆ ಪ್ರಾಚೀನವೂ ಉಜ್ಜ್ವಲವೂ ಆದ ಇತಿಹಾಸವಿದೆ, ಸಂಸ್ಕೃತಿ ಸಾಹಿತ್ಯಗಳ ಪರಂಪರೆಯಿದೆ. ಇಂಥ ಹಿರಿಮೆಯು ಸೀಮೆಯ ಭೂರಚನೆ, ಭೌಗೋಳಿಕ ವ್ಯಾಪ್ತಿ, ಕಾಲಕಾಲಕ್ಕೆ ಅದರಲ್ಲಿ ಉಂಟಾದ ಸಂಕೋಚ ವಿಸ್ತಾರಗಳು, ಅಂತರ್ಗತ ಪ್ರದೇಶಗಳು, ಅವುಗಳ ಹೆಸರು ಹಿನ್ನೆಲೆಗಳು, ಅಲ್ಲಿಯ ಭಾಷೆ ಮತ್ತು ಅದರ ಪ್ರಾಚೀನತೆ, ಆ ಭಾಷೆಯನ್ನಾಡುವ ಜನ ಮತ್ತು ಅವರ ವಿಶೇಷತೆ ಈ ಕೆಲವು ವಿಚಾರಗಳಿಗೆ ಸಂಬಂಧಿಸಿದಂತೆ ಒಂದು ಸ್ಥೂಲವಾದ ಪರಿಶೀಲನೆಯನ್ನು ಈಗ ಗಮನಿಸಬಹುದು.

### ಕನ್ನಡ ನಾಡು : ಇಂದು

ಕನ್ನಡ ನಾಡು ಈಗ ೧೯೭೩ರ ನವೆಂಬರ್ ೧ರಿಂದ ಅಧಿಕೃತವಾಗಿ ಕರ್ನಾಟಕ ಎಂದು ಕರೆಯಲ್ಪಡುತ್ತಿದೆ. ಪ್ರಾಚೀನಕಾಲದಿಂದ ಉಜ್ಜ್ವಲವಾಗಿ ಈ ನಾಡು ಬೆಳಗಿರುವುದು ಇದೇ ಹೆಸರಿನಲ್ಲಿ. ಆದರೆ ಈ ನಡುವೆ ರಾಜಕೀಯ ಕಾರಣಗಳಿಗಾಗಿ ಅದು ಮೈಸೂರು, ನವ ಮೈಸೂರು ಎಂಬ ಹೆಸರುಗಳಲ್ಲಿ ಸೂಚಿತವಾಗುತ್ತಿತ್ತು. ಈಗಿನ ಕರ್ನಾಟಕದ ಭೌಗೋಳಿಕ ಪರಿಸರಗಳು ಹೀಗಿವೆ : ಉತ್ತರದಲ್ಲಿ ಕೃಷ್ಣೆ ಮತ್ತು ದಕ್ಷಿಣದಲ್ಲಿ ಕಾವೇರಿ ಈ ಎರಡು ನದೀವ್ಯವಸ್ಥೆಗಳಿಂದ ಕೂಡಿ, ದಖನ್ ಪ್ರಸ್ಥಭೂಮಿಯ ನೈರುತ್ಯ ಭಾಗದಲ್ಲಿ ಉತ್ತರ ಅಕ್ಷಾಂಶ ೧೧° ೩೦'ರಿಂದ ೧೮° ೪೫'ರವರೆಗೂ ಪೂರ್ವರೇಖಾಂಶ ೭೪° ೧೨'ರಿಂದ ೭೮° ೩೦'ರವರೆಗೂ ಹಬ್ಬಿರುವ ಪ್ರದೇಶ (ಉಷ್ಣವಲಯದಲ್ಲಿ ಅಕ್ಷಾಂಶ ೧೧½°-೧೯°ರ ಮಧ್ಯೆ ಮತ್ತು ರೇಖಾಂಶ ೭೪°-೭೮½°ಯ ನಡುವೆ ಸ್ಥಾಪಿತವಾಗಿದೆಯೆಂದು ಕೂಡ ಗುರುತಿಸಿರುವುದುಂಟು). ವಾಯುವ್ಯ ಮತ್ತು ಉತ್ತರ ದಿಕ್ಕುಗಳಲ್ಲಿ ಮಹಾರಾಷ್ಟ್ರವೂ ಪೂರ್ವದಲ್ಲಿ ಆಂಧ್ರಪ್ರದೇಶವೂ ಆಗ್ನೇಯ ದಕ್ಷಿಣಗಳಲ್ಲಿ ತಮಿಳುನಾಡೂ ನೈರುತ್ಯದಲ್ಲಿ ಕೇರಳವೂ ಪಶ್ಚಿಮದಲ್ಲಿ ಅರಬ್ಬೀ ಸಮುದ್ರವೂ ನಾಡಿನ ಮೇರೆಗಳು. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ಉತ್ತರದಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರ

ತಮಿಳು ನಾಡುಗಳು ದಕ್ಷಿಣದಲ್ಲಿ ತಮಿಳು ಕೇರಳ ದೇಶಗಳೂ ಇವೆಯೆಂದು ಕೂಡ ಹೇಳಬಹುದು. ಇನ್ನೂ ನಿಖರವಾಗಿ ಆಯಕಟ್ಟನ್ನು ಹೀಗೆ ಹೇಳಬಹುದು: ಪಶ್ಚಿಮದ ಕಡೆ ಅರಬ್ಬೀ ಸಮುದ್ರದ, ವಾಯವ್ಯ ಮತ್ತು ಉತ್ತರ ದಿಕ್ಕುಗಳಲ್ಲಿ ಮಹಾರಾಷ್ಟ್ರ ಪ್ರಾಂತಕ್ಕೆ ಸೇರಿದ ಕೊಲ್ಲಾಪುರ, ದಕ್ಷಿಣ ಸತಾರ, ಸೊಲ್ಲಾಪುರ, ಉಸ್ಮಾನಾಬಾದ್ ನಾಂದೇಡ್ ಈ ಪ್ರದೇಶಗಳ, ಪೂರ್ವದಲ್ಲಿ ಆಂಧ್ರಪ್ರದೇಶದ ನಿಜಾಮಾಬಾದ್, ಮೇಡಕ್, ಮೆಹಬೂಬ್‌ನಗರ್, ಕರ್ನೂಲ್, ಅನಂತಪುರ, ಚಿತ್ತೂರ್ ಈ ಪ್ರದೇಶಗಳ, ಆಗ್ನೇಯ ದಕ್ಷಿಣಗಳಲ್ಲಿ ತಮಿಳು ನಾಡಿನ ಉತ್ತರ ಆರ್ಕಾಟ್. ಸೇಲಂ, ಕೊಯಮುತ್ತೂರು, ನೀಲಗಿರಿ ಈ ಪ್ರದೇಶಗಳ, ನೈರುತ್ಯದಲ್ಲಿ ಕೇರಳದ ಎಲ್ಲೆಕಟ್ಟುಗಳೊಳಗಿನ ನಾಡೇ ಇಂದಿನ ಕರ್ನಾಟಕ ಎನ್ನಬಹುದು. ಈ ಸೀಮಾವ್ಯವಸ್ಥೆ ಕರ್ನಲ್ ವಿಲ್ಕ್ಸ್ ವಿವರಿಸಿರುವ ಈ ಭೂಭಾಗದ ಭೌಗೋಳಿಕ ರೂಪರೇಷೆಗಳೊಡನೆ ಬಲುಮಟ್ಟಿಗೆ ಸರಿಬರುತ್ತದೆ. ಕುತೂಹಲಕ್ಕೆ ಆತನ ವಿವರಣೆಯನ್ನು ಇಲ್ಲಿ ಎತ್ತಿಕೊಡಬಹುದು:

"Commencing near the town of Bidar...Following the course of the Kanarese language to the South-east, it is found to be limited by a waving line which nearly touches Adoni, winds to the west of Gooty, skirts the town of Anantapur, and Passing through Nandidroog, touches the range of the Eastern Ghāṭs; thence pursuing their southern course to the mountainous pass of Gazzalhati, it continues to follow the abrupt turn caused by the great chasm of the western hills between the towns of Coimbatore, Pollachi and Palghat; and sweeping to the north-west, skirts the edges of the precipitous Western Ghats, nearly as far north as the sources of the Kistna (Krishna); whence following first an eastern and afterwards a north-eastern course, it terminates in rather an acute angle near Bidar, already described as its northern limit."[1]

ಕರ್ನಾಟಕ ಪೂರ್ವಪಶ್ಚಿಮವಾಗಿ ಸು. ೪೦೦ ಕಿ.ಮೀ. ಮತ್ತು ಉತ್ತರದಕ್ಷಿಣವಾಗಿ ಸು. ೭೭೦ ಕಿ.ಮೀ. ಉದ್ದದವರೆಗೆ ಹಬ್ಬಿದೆ. ಒಟ್ಟು ವಿಸ್ತೀರ್ಣ ೧,೯೨,೨೦೪ ಚದರ ಕಿ.ಮೀ. ಹಿಂದಿನ ಲೆಕ್ಕದಂತೆ ಒಟ್ಟು ವಿಸ್ತೀರ್ಣ ಸು. ೭೦,೦೦೦ ಚದರ ಮೈಲಿಗಳು; ಉತ್ತರ ದಕ್ಷಿಣ ಮುಖವಾಗಿ ಉದ್ದದ ಮಿತಿ ಸು. ೫೦೦ ಮೈಲಿಗಳನ್ನೂ ಪೂರ್ವಪಶ್ಚಿಮವಾಗಿ ಅಗಲದ ಮಿತಿ ಸು. ೩೦೦ ಮೈಲಿಗಳನ್ನೂ ಮುಟ್ಟುತ್ತವೆ. ಬೆಂಗಳೂರು, ಬೆಳಗಾವಿ, ಬಳ್ಳಾರಿ, ಬೀದರ್. ಬಿಜಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ಕೊಡಗು, ಧಾರವಾಡ, ಗುಲ್ಬರ್ಗ, ಹಾಸನ, ಕೋಲಾರ, ಮಂಡ್ಯ, ಮೈಸೂರು, ಉತ್ತರ ಕನ್ನಡ, ರಾಯಚೂರು, ಶಿವಮೊಗ್ಗ; ದಕ್ಷಿಣ ಕನ್ನಡ ಮತ್ತು ತುಮಕೂರು—ಇವು ಪ್ರಾಂತದ ೧೯ ಜಿಲ್ಲೆಗಳು.

ಆಡಳಿತದ ಸೌಕರ್ಯಕ್ಕಾಗಿ ಬೆಂಗಳೂರು, ಮೈಸೂರು, ಬೆಳಗಾವಿ, ಮತ್ತು ಗುಲ್ಬರ್ಗ ಎಂಬ ೪ ವಿಭಾಗಗಳನ್ನು ವಿಂಗಡಿಸಿದೆ. ರಾಜ್ಯದ ರಾಜಧಾನಿ ಬೆಂಗಳೂರು ನಗರ. ೧೯೭೧ರ ಜನಗಣತಿಯಂತೆ ಈ ನಾಡಿನ ಒಟ್ಟು ಜನಸಂಖ್ಯೆ ೨,೯೨,೯೯,೦೧೪. ಇತಿಹಾಸಜ್ಞರೊಬ್ಬರು ಅದರ ವಿಸ್ತಾರವನ್ನು ಕುರಿತು ಹೇಳುತ್ತ (೧೯೬೨), ಇಂಗ್ಲೆಂಡ್ ಸ್ಕಾಟ್ಲೆಂಡ್ ಒಟ್ಟು ಸೇರಿದರೆ ಎಷ್ಟೋ ಅಷ್ಟು, ಪೋರ್ಚುಗಲ್ ಅಥವಾ ಗ್ರೀಸ್‌ಗೆ ಎರಡರಷ್ಟು, ಡೆನ್ಮಾರ್ಕ್‌ಗೆ ಐದರಷ್ಟು, ಹಾಲೆಂಡ್‌ಗೆ ಆರರಷ್ಟು, ಬೆಲ್ಜಿಯಂಗೆ ಏಳರಷ್ಟು ಎಂಬುದಾಗಿ ಪ್ರಮಾಣಕ್ಕೆ ಹೋಲಿಕೆ ಕೊಟ್ಟಿದ್ದಾರೆ.[2]

ನಾಡಿನ ಮೇಲ್ಮೈ ಲಕ್ಷಣವನ್ನು ಹೀಗೆ ವಿವರಿಸಿದೆ: "ಕರ್ನಾಟಕದ ಬಹುಭಾಗ ದಖನ್ ಪ್ರಸ್ಥಭೂಮಿ ಪ್ರದೇಶದಲ್ಲಿದೆ. ಇದು ಭಾರತದಲ್ಲೇ ಅತ್ಯಂತ ಪುರಾತನವಾದ ನೆಲ. ಕರ್ನಾಟಕದ ಪಶ್ಚಿಮದಂಚಿನ ಕಿರಿದಾದ ನೆಲ ಮಾತ್ರ ತಗ್ಗು ಪ್ರದೇಶ. ದಖನಿನ ಆಚೀಚೆ ಮಾಲೆಯಂತೆ ಹಬ್ಬಿರುವ ಪೂರ್ವ ಪಶ್ಚಿಮ ಘಟ್ಟಗಳು ಕರ್ನಾಟಕಕ್ಕೆ ದಕ್ಷಿಣದಲ್ಲಿ ನೀಲಗಿರಿಯಲ್ಲಿ ಸಂಧಿಸುತ್ತವೆ. ಪಶ್ಚಿಮ ಕರಾವಳಿಯಿಂದ ಕಡಿದಾಗಿ ಮೇಲೇರುವ ಪಶ್ಚಿಮಘಟ್ಟಗಳು ಪೂರ್ವಘಟ್ಟಗಳಿಗಿಂತ ಹೆಚ್ಚು ಎತ್ತರ. ಸು. ೨೦೦ ಮೈಲಿ ಉದ್ದದ ಪಶ್ಚಿಮದ ಕಡಲ ಕರೆ ಬಹುತೇಕ ನೇರ. ತೀರದಿಂದ ಸಮುದ್ರದತ್ತ ಚಾಚಿದಂತೆ ೪೦-೫೦ ಮೈಲಿಗಳ ಖಂಡಾವರಣ ಪ್ರದೇಶದಲ್ಲಿ ಕಡಲ ಆಳ ೬೦೦ ಅಡಿಗಳಿಗಿಂತ ಕಡಿಮೆ. ಕಡಿದಾದ ಬೆಟ್ಟದಿಂದ ಕೆಳಗಿಳಿದು ಸಮುದ್ರ ಸೇರುವ ಹೊಳೆ ಝರಿಗಳು ಜಲರಾಶಿಯಲ್ಲಿ ಹೊತ್ತುತರುವ ಆಹಾರವೂ ಕಿರಿ ಆಳದ ಕಡಲೂ ಕರ್ನಾಟಕದ ಮತ್ಸ್ಯಸಂಪತ್ತಿಗೆ ಮೂಲಾಧಾರ.

ಪಶ್ಚಿಮ ಕರಾವಳಿ, ಪೂರ್ವಪಶ್ಚಿಮ ಘಟ್ಟಗಳು, ಪ್ರಸ್ಥಭೂಮಿ ಪ್ರದೇಶ—ಇವು ಕರ್ನಾಟಕದ ಮೇಲ್ಮೈಯ ಸ್ಥೂಲ ವಿಭಾಗಗಳಾದರೂ ಇವುಗಳಲ್ಲಿ ಒಂದೊಂದನ್ನೂ ಮತ್ತೆ ವಿಭಾಗಿಸಬಹುದಾಗಿವೆ. ಕರಾವಳಿಯ ಉತ್ತರ ದಕ್ಷಿಣ ಭಾಗಗಳು ಪ್ರಾಕೃತಿಕವಾಗಿ ಒಂದೇ ರೀತಿಯಾಗಿಲ್ಲ. ಪಶ್ಚಿಮ ಘಟ್ಟಗಳು ಪೂರ್ವಘಟ್ಟಗಳಿಗಿಂತ ಹೆಚ್ಚು ಎತ್ತರ. ಘಟ್ಟಗಳ ನಡುವಣ ಪ್ರಸ್ಥಭೂಮಿಯನ್ನೂ ಇಬ್ಭಾಗಿಸಬಹುದಾಗಿದೆ. ಕರ್ನಾಟಕದ ಮಧ್ಯಭಾಗದಲ್ಲಿ ೧೫° ಉ.ಅ.ದ ಸನಿಯದಲ್ಲಿ ಹರಿಯುವ ತುಂಗಭದ್ರಾನದಿಯು ಉತ್ತರ ದಕ್ಷಿಣ ಭಾಗಗಳು ಕ್ರಮವಾಗಿ ಉತ್ತರ ಮತ್ತು ದಕ್ಷಿಣ ಕರ್ನಾಟಕಗಳೆಂದು ಹೆಸರಾಗಿವೆ. ಭೂರಚನೆ, ಮೇಲ್ಮೈಲಕ್ಷಣ, ಮಳೆಬೆಳೆ, ಜನರ ನಡೆನುಡಿ, ವ್ಯವಹಾರ, ಆಹಾರ, ಉಡಿಗೆ ತೊಡಿಗೆ ಇವುಗಳಲ್ಲಿ ಉತ್ತರ ದಕ್ಷಿಣಗಳಲ್ಲಿ ವೈಶಿಷ್ಟ್ಯಗಳುಂಟು. ಆದ್ದರಿಂದ ಪ್ರಾಕೃತಿಕವಾಗಿ ಕರ್ನಾಟಕವನ್ನು ಉತ್ತರ ಕರಾವಳಿ, ದಕ್ಷಿಣ ಕರಾವಳಿ, ಸಹ್ಯಾದ್ರಿ ಪರ್ವತಶ್ರೇಣಿ, ಪೂರ್ವಘಟ್ಟ, ಉತ್ತರದ ಪ್ರಸ್ಥಭೂಮಿ, ದಕ್ಷಿಣದ ದಿಣ್ಣೆ ನೆಲ, ಮತ್ತು ಮಲೆನಾಡು ಎಂದು ವಿಂಗಡಿಸಬಹುದು. ಕರ್ನಾಟಕದ ಪ್ರಸ್ಥಭೂಮಿಯನ್ನು ಮೈದಾನ ಅಥವಾ ಬಯಲುಸೀಮೆ ಎಂದು ಕರೆಯುತ್ತಾರೆ. ಇದು ತ್ರಿಕೋಣಾಕಾರ. ಉತ್ತರದಲ್ಲಿ ಇದರ ತಳ; ದಕ್ಷಿಣಕ್ಕೆ ಶಿರ. ಇದು ದಖನಿನ ಬಹುಭಾಗವನ್ನಾ

ಕ್ರಮಿಸಿಕೊಂಡಿದೆ. ದಖನೀ ದಿಣ್ಣೆನೆಲದ ಅತ್ಯಂತ ಎತ್ತರಭಾಗ ಇರುವುದು ಕರ್ನಾಟಕದಲ್ಲಿ. ಪರ್ಯಾಯ ದ್ವೀಪೀಯ ಭಾರತದಲ್ಲಿ ಬೇರಾವ ರಾಜ್ಯವೂ ಇಷ್ಟು ಎತ್ತರವಿಲ್ಲ. ಸಮುದ್ರ ಮಟ್ಟಕ್ಕಿಂತ ಸಾಮಾನ್ಯವಾಗಿ ೨೦೦೦ ಅಡಿಗಳಿಗೂ ಹೆಚ್ಚು ಎತ್ತರವಿರುವ ಇದನ್ನು ದಕ್ಷಿಣ ಭಾರತದ ಚಾವಣಿಯೆನ್ನಬಹುದು....”[3]

## ಕನ್ನಡ ನಾಡು : ಪರಂಪರೆಯಲ್ಲಿ

ರಾಮಾಯಣದಲ್ಲಿ ಬಂದಿರುವ ದಂಡಕಾರಣ್ಯ, ಗೋದಾವರಿ, ಕೃಷ್ಣವೇಣಿ (ಮಹಾನದಿ), ಕಾವೇರಿ, ತಾಮ್ರಪರ್ಣಿ ಈ ನಾಮೋಲ್ಲೇಖಗಳು ಆ ಪ್ರದೇಶಗಳ ಬಗೆಗೆ ಬೆಳಕು ಚೆಲ್ಲುತ್ತವೆ. ಉತ್ತರಕನ್ನಡ ದಕ್ಷಿಣಕನ್ನಡ ಜಿಲ್ಲೆ ಕೂಡಿದ ಕೊಂಕಣ ಪರಶುರಾಮ ಕ್ಷೇತ್ರವೆನಿಸಿದೆ. ವಾನರ ರಾಜಧಾನಿ ಕಿಷ್ಕಿಂಧೆ ಎಂಬುದು ಸಾಮಾನ್ಯವಾಗಿ ಕರ್ನಾಟಕದ ಹಂಪೆಯ ಹತ್ತಿರದ ಆನೆಗೊಂದಿ ಎಂಬ ಸ್ಥಳವೆಂದು ತಿಳಿಯಲ್ಪಟ್ಟಿದೆ. ಪಾಂಡವರು ಅಜ್ಞಾತವಾಸವಿದ್ದ ವಿರಾಟನಗರ ಇಂದಿನ ಧಾರವಾಡ ಜಿಲ್ಲೆಯ ಹಾನಗಲ್ಲು ಎಂದೂ, ಚಂದ್ರಹಾಸನ ರಾಜಧಾನಿ ಕುಂತಲಪುರ ಎಂಬುದು ಇಂದಿನ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕುಬಟೂರು ಗ್ರಾಮವೆಂದೂ ಅರ್ಜುನನು ಬಭ್ರುವಾಹನನೊಡನೆ ಹೋರಾಡಿದ ಮಣಿಪುರ, ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ತಾಲ್ಲೂಕಿನಲ್ಲಿರುವ ಒಂದು ಊರೆಂದೂ ಮುಂತಾಗಿ ತಿಳಿಯಲ್ಪಟ್ಟಿದೆ.[4] ಹಾಗೆಯೇ ಗೋಕರ್ಣ, ಬಳ್ಳಾರಿ ಜಿಲ್ಲೆಯ ಹಂಪೆ, ಚಂದ್ರಗುತ್ತಿ, ತಮ್ಮಸಂದ್ರ, ಆವನಿ, ಶೃಂಗೇರಿ, ಬನವಾಸಿ, ಜಟಿಂಗ ರಾಮೇಶ್ವರ, ರಾಮನಾಥಪುರ, ನಂದಿ, ಮುಳಕುಂಟೆ—ಈ ಮೊದಲಾದ ಕೆಲವು ಕನ್ನಡ ನಾಡಿನ ಊರುಗಳು ರಾಮಾಯಣದ ಐತಿಹ್ಯಗಳೊಡನೆ, ಚಿತ್ರದುರ್ಗ, ತಾಳಗುಂದ, ರಹಮಾನಬೇಟೆ, ಕೈವಾರ, ಶ್ರೀಶೈಲ, ಮಣಿಪುರ, ಬಳ್ಳಿಗಾವಿ, ಹಾನಗಲ್ಲು, ಹರಿಹರ, ಬನವಾಸಿ, ಗೋಕರ್ಣ—ಮೊದಲಾದ ಊರುಗಳು ಮಹಾಭಾರತದ ಐತಿಹ್ಯಗಳೊಡನೆ ಸಂಬಂಧಿಸಿರುವುದು ಕಂಡುಬರುತ್ತದೆ.[5] ಇಲ್ಲಿಯ ಕೆಲವು ಪ್ರತೀತಿಗಳನ್ನು ಐತಿಹಾಸಿಕವಾಗಿ ಮಾನ್ಯಮಾಡುವುದು ಕಷ್ಟ. ಆ ಮಹಾಕಾವ್ಯಗಳ ವಿಷಯದಲ್ಲಿ ಕನ್ನಡಿಗರಿಗೆ ಇರುವ ಆತ್ಮೀಯತೆ ಈ ಮೂಲಕವಾಗಿ ವ್ಯಕ್ತವಾಗಿದೆ, ಅಷ್ಟೆ.

## ಕರ್ಣಾ(ರ್ನಾ)ಟ(ಕ) ಶಬ್ದದ ಪ್ರಾಚೀನತೆ

ಕನ್ನಡ, ಕರ್ನಾಟ ಎಂಬ ಪದಗಳು ಬಹು ಪ್ರಾಚೀನಕಾಲದಲ್ಲಿಯೇ ಈ ನಾಡಿಗೆ ಬಳಕೆಯಾಗುತ್ತ ಬಂದಿರುವುದಕ್ಕೆ ಶಾಸನಗಳ ಹಾಗೂ ಸಾಹಿತ್ಯ ಗ್ರಂಥಗಳ ಆಧಾರವಿದೆ. ಇವು ಮುಖ್ಯವಾಗಿ ದೇಶವಾಚಿಯಾಗಿ, ಭಾಷಾವಾಚಿಯಾಗಿ ಬಳಕೆಯಲ್ಲಿರುವುದು ಸ್ಪಷ್ಟ; ಆದರೆ ಇವುಗಳ ನಿಷ್ಪತ್ತಿ, ನಿಷ್ಪನ್ನರೂಪದಲ್ಲಿ ಪೂರ್ವೋತ್ತರ ಪದಗಳ ಅರ್ಥ ಬಹುವಾದ ಜಿಜ್ಞಾಸೆಗೆ ಎಡೆಗೊಟ್ಟಿವೆ. ಅದರ ಪರಿಶೀಲನೆಗೆ ಮೊದಲು, ಈ ಶಬ್ದದ ಹಳೆಯ ಉಲ್ಲೇಖಗಳನ್ನು ಇಲ್ಲಿ ಕ್ರೋಡೀಕರಿಸಬಹುದು.

೧. 'ಮಹಾಭಾರತ'ದಲ್ಲಿ (ಕ್ರಿ.ಪೂ. ೪ನೆಯ ಶತಮಾನ–ಕ್ರಿ.ಶ. ೪ನೆಯ ಶತಮಾನ):

ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ।
ದ್ರಾವಿಡಾಃ ಕೇರಲಾಃ ಪ್ರಾಚ್ಯಾ ಭೂಷಿಕಾ ವನವಾಸಿಕಾಃ ॥

ಕರ್ಣಾಟಕಾ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ ।
ಝಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದಾ ನಭಕಾನನಾಃ ॥

(ಭೀಷ್ಮಪರ್ವ : ಅಧ್ಯಾಯ ೯–ಶ್ಲೋಕ ೫೮, ೫೯)[6]

ಇಲ್ಲಿ ಗಮನಿಸತಕ್ಕ ಸಂಗತಿಯೊಂದಿದೆ. ಮಹಾಭಾರತದ ಹಲವು ಪ್ರಚಲಿತ ಮುದ್ರಣಗಳಲ್ಲಿ ಈ ಮೇಲಿನ ರೀತಿಯಲ್ಲಿ ಪದ್ಯಪಾಠವಿದ್ದು ಅಲ್ಲಿ 'ಕರ್ಣಾಟಕ' ಶಬ್ದವನ್ನು ಕಾಣಬಹುದಾಗಿದೆ. ಆದರೆ ಪುಣೆಯ ಭಂಡಾರ್ಕರ್ ಸಂಸ್ಥೆಯ ಅಧಿಕೃತ ಪರಿಷ್ಕರಣದಲ್ಲಿ ಈ ಭಾಗದಲ್ಲಿ ಪದ್ಯಪಾಠ

ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ॥

ದ್ರಾವಿಡಾಃ ಕೇರಲಾಃ ಪ್ರಾಚ್ಯಾ ಭೂಷಿಕಾ ವಾನವಾಸಿನಃ ।
ಉನ್ನತ್ಯಕಾ ಮಾಹಿಷಕಾ ವಿಕಲ್ಪಾ ಮೂಷಕಾಸ್ತಥಾ ॥

(ಭೀಷ್ಮಪರ್ವ : ಅಧ್ಯಾಯ ೯–ಶ್ಲೋಕ ೫೭ರ ಉತ್ತರಾರ್ಧ, ಮತ್ತು ಶ್ಲೋಕ ೫೮)

ಎಂಬುದಾಗಿದ್ದು, ಪಾಠಾಂತರವಾಗಿ ಅಡಿಟಿಪ್ಪಣಿಯಲ್ಲಿ 'ಕರ್ಣಾಟ' ಶಬ್ದವನ್ನು (ಸಾಲು ೯) ತೋರಿಸಿದೆ. ಆದ್ದರಿಂದ ಮಹಾಭಾರತದ ಬೆಳೆವಣಿಗೆಯ ಕಾಲದಲ್ಲಿ ಎಂದೋ ಆ ಶಬ್ದ ಮೂಲದೊಳಗೆ ಸೇರಿರಬೇಕೆಂದು ತೋರುತ್ತದೆ.

೨. ಶೂದ್ರಕ ಕವಿಯ (ಸು. ೪೦೦) 'ಮೃಚ್ಛಕಟಿಕ ಪ್ರಕರಣ'ದಲ್ಲಿ:

ಚಂದನಕಃ....

ವಯಂ ದಾಕ್ಷಿಣಾತ್ಯಾ ಅವ್ಯಕ್ತಭಾಷಿಣಃ। ಖಶ–ಖತ್ತಿ–ಖಡ–ಖಡಟ್ಠೊ–ವಿಡ–ಕರ್ಣಾಟ* – ಕರ್ಣ – ಪ್ರಾವರಣ–ದ್ರಾವಿಡ–ಚೋಲ–ಚೀನ–ಬರ್ಬರ–ಖೇರ – ಖಾನ–ಮುಖ–ಮಧುಘಾತ–ಪ್ರಭೃತೀನಾಂ ಮ್ಲೇಚ್ಛಜಾತೀನಾಮನೇಕ ದೇಶಭಾಷಾಭಿಜ್ಞಾ ಯಥೇಷ್ಟಂ ಮನ್ತ್ರಯಾಮಹೇ ದೃಷ್ಟೋ ದೃಷ್ಟಾ ವಾ ಆರ್ಯ ಆರ್ಯಾ ವಾ।

*ಅಡಿಟಿಪ್ಪಣಿಯ ಪ್ರಾಕೃತರೂಪ: ಕಣ್ಣಾಟ (ಅಂಕ ೬, ೨೦ನೆಯ ಪದ್ಯವಾದ ಮೇಲೆ ಚಂದನಕನ ಮಾತು)

ಚಂದನಕ : (ವಿಚಿನ್ತ್ಯ) ಕರ್ಣಾಟ ಕಲಹ ಪ್ರಯೋಗಂ ಕರೋಮಿ*
*ಕಣ್ಣಾಟ ಕಲಹಪ್ಪಓಅಂ ಕಲೇಮಿ
(ಅಂಕ ೬, ೨೦ನೆಯ ಪದ್ಯವಾದ ಮೇಲೆ ಚಂದನಕನ ಮಾತು)[7]

೩. ವಿಷ್ಣುಧರ್ಮೋತ್ತರ ಪುರಾಣ (ಸು. ೪೦೦–೫೦೦) :

ಅಯೋಧ್ಯಾಯಾಂ ತಥಾ ರಾಮಂ ನೈಮಿಷೇ ಧರ್ಮಮೇವ ಚ ।
ಕರ್ಣಾಟೇ ಚಾಶ್ವಶಿರಸಂ ಮದ್ರದೇಶೇ ನೃಕೇಸರಿಂ ॥
(ಅಧ್ಯಾಯ ೧೨೧-ಖಂಡ ೩-ಶ್ಲೋಕ ೩; ವಜ್ರಮಾರ್ಕಂಡೇಯ ಸಂವಾದ)[8]

೪. ವರಾಹಮಿಹಿರನ (ಸು. ೬ನೆಯ ಶತಮಾನ) ಬೃಹತ್ಸಂಹಿತೆ:

ಕರ್ಣಾಟ ಮಹಾಟವಿ ಚಿತ್ರಕೂಟ ನಾಸಿಕ್ಯ ಕೊಲ್ಲಗಿರಿ ಚೋಲಾಃ ।
ಕ್ರೌಞ್ಚದ್ವೀಪ ಜಟಾಧರ ಕಾವೇರ್ಯೋ ರಿಷ್ಯಮೂಕಶ್ಚ ॥
(ಅಧ್ಯಾಯ ೧೪-ಶ್ಲೋಕ ೧೩)[9]

೫. ಭಾಗವತ ಪುರಾಣ (ಸು. ೬ನೆಯ ಶತಮಾನ):

ತಸ್ಯ ಹ ವಾ ಏವಂ ಮುಕ್ತಲಿಙ್ಗಸ್ಯ ಭಗವತ ಋಷಭಸ್ಯ ಯೋಗಮಾಯಾವಾಸನಯಾ ದೇಹ ಇಮಾಂ ಜಗತೀಮಭಿಮಾನಾಭಾಸೇನ ಸಂಕ್ರಮಮಾಣಃ ಕೋಙ್ಕವೇಙ್ಕಕುಟಕಾನ್ ದಕ್ಷಿಣ ಕರ್ಣಾಟಕಾನ್ ದೇಶಾನ್ ಯದೃಚ್ಛಯೋಪಗತಃ ಕುಟಕಾಚಲೋಪವನ ಆಸ್ಯಕೃತಾಶ್ಮಕವಲ ಉನ್ಮಾದ ಇವ ಮುಕ್ತಮೂರ್ಧಜೋऽಸಂವೀತ ಏವ ವಿಚಚಾರ॥ (ಸ್ಕಂಧ ೫, ಅಧ್ಯಾಯ. ೬, ಗದ್ಯ ೭.)[10]

೬. ಮಾರ್ಕಂಡೇಯಪುರಾಣ (ಸು. ೮ನೆಯ ಶತಮಾನ)

ಮಹಾರಾಷ್ಟ್ರಾಃ ಸಕರ್ಣಾಟಾ ಗೋಪರ್ವಾಶ್ಚಿತ್ರಕೂಟಕಾಃ।
ಚೌಲಾಃ ಕೌಲಗಿರಾಶ್ಚೈವ ಕ್ರೌಞ್ಚದ್ವೀಪಜಟಾಧರಾಃ॥
(ಅಧ್ಯಾಯ ೫೫-ಶ್ಲೋಕ ೨೪)[11]

೭. ರಾಜಶೇಖರನ 'ಕಾವ್ಯಮೀಮಾಂಸೆ' (ಸು. ೯೦೦-೨೫) ಮತ್ತು 'ವಿದ್ಧಶಾಲಭಂಜಿಕೆ'

ರಸಃ ಕೋऽಸ್ಯಸ್ತು ಕಾವ್ಯಸ್ತು ರೀತಿಃ ಕೋऽಸ್ಯಸ್ತು ವಾ ಗುಣಃ ।
ಸಗರ್ವಂ ಸರ್ವಕರ್ಣಾಟಾಷ್ಟಂಕಾರೋತ್ತರವಾದಿನಃ ॥
(ಅಧಿಕರಣ ೧-ಅಧ್ಯಾಯ ೭)[12]

ಸಮರ ಕರ್ಮಣಿ ನಿಸರ್ಗೋದ್ಭಟಾಃ ಏವ ಕರ್ಣಾಟಾಃ।[13]

ಈಚೆಗೆ ೯ನೆಯ ಶತಮಾನದಿಂದ ಮುಂದೆ ರಚಿತವಾದಂತೆ ಊಹೆಯಿಂದಲೂ ಸ್ಪಷ್ಟ ನಿರ್ದೇಶನದಿಂದಲೂ ತಿಳಿದುಬಂದಿರುವ ಪದ್ಮಪುರಾಣದಲ್ಲಿ (ಆದಿ. ೬-೫೪) ಮತಂಗನ 'ಬೃಹದ್ದೇಶಿ' (ಸು. ೯ನೆಯ ಶತಮಾನದಿಂದ ಮುಂದೆ)ಯಲ್ಲಿ (ಪ. ೩೯೭, ೪೧೧, ೪೮೭, ೪೮೯), ಜಯಕೀರ್ತಿಯ (ಸು. ೧೦೫೦) 'ಛಂದೋನುಶಾಸನ'ದಲ್ಲಿ (೧-೨೨, ೭-೪-೧೦), ಕ್ಷೇಮೇಂದ್ರನ (ಸು. ೧೧ನೆಯ ಶತಮಾನ) 'ಔಚಿತ್ಯವಿಚಾರ ಚರ್ಚೆ'ಯಲ್ಲಿ (ಪ. ೨೭), ಕಲ್ಹಣನ 'ರಾಜತರಂಗಿಣಿ' (ಸು. ೧೨ನೆಯ ಶತಮಾನ)ಯಲ್ಲಿ (೧-೩೦೦) ಬಿಲ್ಹಣನ (ಸು. ೧೨ನೆಯ ಶತಮಾನ) 'ವಿಕ್ರಮಾಂಕದೇವ ಚರಿತ'ದಲ್ಲಿ (೯-೪೧, ೪೨) ಜಲ್ಹಣನ 'ಸೂಕ್ತಿ ಮುಕ್ತಾವಳಿ' (೧೨-೫೭)ಯಲ್ಲಿ (೧-ಪು. ೪೭) ಮತ್ತು ಇನ್ನೂ ಹಲವು ಗ್ರಂಥಗಳಲ್ಲಿ 'ಕರ್ಣಾಟಕ' ಶಬ್ದ ಪ್ರಸ್ತಾಪಗೊಂಡಿದೆ.

‘ ಕನ್ನಡ ಸಾಹಿತ್ಯದಲ್ಲಿಯೇ, ಆದಿಪುರಾಣ (೨೩–೪೫ ವ.) ಪಂಪಭಾರತ (೧–೧೪೮ ವ; ೨-೩೯ ವ.), ಕರ್ಣಾಟಕ ಕಾದಂಬರಿ (೧–೫), ಛಂದೋಂಬುಧಿ (೧–೫೫ ವ; ೫–೨), ಕರ್ಣಾಟಕ ಭಾಷಾಭೂಷಣ (ಸೂ. ೧, ೧೧ ವೃ, ೧೨ ವೃ), ಕಾವ್ಯಾವಲೋಕನ (ಪ. ೩), ಶಬ್ದಮಣಿದರ್ಪಣ (ಸೂ. ೩, ೨೫), ಧರ್ಮನಾಥಪುರಾಣ (೧–೪೮) ಬಸವಪುರಾಣ (೬–೧೮ ; ೧೯–೭೦), ಕುಮಾರವ್ಯಾಸಭಾರತ (ಪರ್ವಾಂತ ಗದ್ಯ), ವಿವೇಕ ಚಿಂತಾಮಣಿ (ಪು. ೨೩೩), ಹಮ್ಮೀರಕಾವ್ಯ (೨–೯೦), ಭರತೇಶ ವೈಭವ (೧–೧೨–೧೨), ಚೆನ್ನಬಸವಪುರಾಣ (೧–೬–೪೯,೫೧), ಜೈಮಿನಿಭಾರತ (೧–೧೧) ಕಂಠೀರವನರಸರಾಜವಿಜಯ (೧೧–೮,೬೭), ಕರ್ಣಾಟಕ ಶಬ್ದಾನುಶಾಸನ (ಸೂತ್ರಾದಿ, ಪು. ೭)—ಈ ಮುಂತಾದ ಗ್ರಂಥಗಳಲ್ಲಿ ಆದರ ಉಲ್ಲೇಖವಿದೆ.

‘ಶಿಲಪ್ಪದಿಗಾರಂ’ ಎಂಬ ತಮಿಳು ಭಾಷೆಯ ಪ್ರಾಚೀನ ಕೃತಿಯಲ್ಲಿ (ಸು. ೨–೫ ಶ.) ‘ಕರುನಾಡರ್’ ಎಂಬ ಶಬ್ದವೂ ಪಾಂಡ್ಯರಾಜ ಶಡ್ಡೈಯನ್ ಪರಾಂತಕನ ವೇಳ್ವಿಕುಡಿ ತಾಮ್ರಶಾಸನದಲ್ಲಿ (ಸು. ೭೭೦) ‘ಕರುನಾಡಗನ್’ ಎಂಬ ಶಬ್ದವೂ ಕಂಡುಬರುತ್ತವೆ.[14] ಹಾಗೆಯೇ ತಮಿಳು ಶಾಸನಗಳಲ್ಲಿ ಕನ್ನಾಡಗರುಂ, ಕನ್ನಾಟ, ಕನ್ನಾಟಕ ಎಂಬ ರೂಪಗಳು ಕೂಡ ಕಂಡುಬಂದಿವೆ.[15] ಅಪಭ್ರಂಶ ಪ್ರಾಕೃತದಲ್ಲಿ ಕನ್ನಾಡ, ಪಾಲಿಯಲ್ಲಿ ಕಣ್ಣಾಟ, ಗುಜರಾತಿಯಲ್ಲಿ ಕನಡಿ, ಮರಾಠಿಯಲ್ಲಿ ಕಾನಡಿ ಎಂಬ ರೂಪಗಳುಂಟು. ಬಿ. ಎ. ಸಾಲೆತೊರೆ ಅವರ ಪ್ರಕಾರ ಪಾಶ್ಚಾತ್ಯರು ಕನ್ನಡ ಭಾಷೆಯ ಹೆಸರನ್ನು ಕ್ರಿ.ಶ. ೧೫೧೬ ರಲ್ಲಿ Canari, ೧೫೨೦ರಲ್ಲಿ Canarim, ೧೫೫೨ರಲ್ಲಿ Canary, ೧೬೧೫ರಲ್ಲಿ Canarin, ೧೬೫೪ರಲ್ಲಿ Cannary ಎಂದೂ ನಡುನಡುವೆ ಎಷ್ಟೋ ಬಾರಿ Carnatic, Carnate, Karnat—ಎಂದು ಮುಂತಾಗಿ ಬರೆಯುತ್ತಿದ್ದರೆಂದು ತಿಳಿಯುತ್ತದೆ.[16]

ಕನ್ನಡ ಭಾಷೆಯಲ್ಲಿಯೇ ಬಹು ಸಂಖ್ಯೆಯ ಪ್ರಾಚೀನ ಶಾಸನಗಳಲ್ಲಿ ಹಾಗೂ ಗ್ರಂಥಗಳಲ್ಲಿ ಕರ್ಣಾಟ ಮತ್ತು ಹೋಲಿಕೆಯ ಶಬ್ದಗಳಾದ ಕರ್ನಾಟ, ಕರ್ಣಾಟಕ, ಕರ್ನಾಟಕ, ಕನ್ನಡ ಮುಂತಾದವು ಬಳಕೆಯಾಗಿವೆ. ಉತ್ತರಕರ್ನಾಟಕದಲ್ಲಿ, ವ್ಯವಹಾರದಲ್ಲಿ ಕನ್ನಡು ಎಂಬ ಮಾತುಂಟು. ಸು. ೧ನೆಯ ಶತಮಾನದಿಂದ ಶಾಸನಗಳಲ್ಲಿ ಈ ಶಬ್ದಗಳ ಕೆಲವು ರೂಪಗಳು ಬಳಕೆಯಾಗಿರುವಂತೆ ತೋರುತ್ತವೆ. ೯೦ಕ್ಕೆ ಮೇಲ್ಪಟ್ಟ ಅಂಥ ಶಾಸನಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.[17] ಇವುಗಳ ಆಧಾರದಿಂದ ಕನ್ನಡ ನಾಡು ಬಹು ಹಿಂದಿನ ಕಾಲದಿಂದಲೂ ಕರ್ಣಾಟ, ಕರುನಾಡು ಮುಂತಾದ ಹೆಸರುಗಳಲ್ಲಿ ಅಸ್ತಿತ್ವದಲ್ಲಿದೆಯೆಂಬುದಾಗಿ ತಿಳಿಯುತ್ತದೆ.

ಕರ್ಣಾಟ(ಕ) ಅಥವ ಕರ್ನಾಟ(ಕ) ಎಂಬ ಪದದ ಸರಿಯಾದ ರೂಪ ಯಾವುದು? ಅರ್ಥವೇನು? ನಿಷ್ಪತ್ತಿ ಹೇಗೆ?—ಎಂಬ ವಿಷಯದಲ್ಲಿ ಚರಿತ್ರಕಾರರೂ ಸಾಹಿತ್ಯಜ್ಞರೂ ತುಂಬ ಜಿಜ್ಞಾಸೆ ಮಾಡಿರುವುದು ಕಾಣುತ್ತದೆ. ಆ ಪದದ ಸಂಬಂಧವಾಗಿಯೇ ‘ಕನ್ನಡ’ ಪದವೂ ವಿಚಾರಕ್ಕೆ ಸೇರಿಕೊಂಡಿದೆ. ವಿಚಾರಮಥನ ನಡೆದು ಭಿನ್ನಭಿನ್ನ ಮತಗಳು ವ್ಯಕ್ತಪಟ್ಟಿವೆ. ಆದರೆ ಒಮ್ಮತವಾದ ಅಥವಾ ಬಹುಜನಸಮ್ಮತವಾದ

ನಿರ್ಣಯ ಇನ್ನೂ ಸಾಧ್ಯವಾಗಿಲ್ಲ. ನಿಶ್ಚಿತ ಪ್ರಮಾಣಗಳ ಅಭಾವವೇ ಇದಕ್ಕೆ ಮುಖ್ಯ ಕಾರಣ. ಕೆಲವು ಅಭಿಪ್ರಾಯಗಳನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಬಹುದು :

(ಅ) ಕರ್ಣಾಟ(ಕ) ಎಂಬ ಪದಕ್ಕೆ ಸಂಸ್ಕೃತಮೂಲವಾಗಿ ನಿಷ್ಪತ್ತಿಯನ್ನು ಕೊಡುವ ಹಳೆಯ ಉಲ್ಲೇಖಗಳಲ್ಲಿ ಇವು ಪ್ರಸಿದ್ಧವಾಗಿವೆ: ಕರ್ಣೇಷು ಅಟತಿ—ಪ್ರಭೂತ ಯಶಸ್ವಿನ ಏತದ್ದೇಶಸ್ಯ ರಾಜ್ಞೋ ಗುಣಾದಿ ಕೀರ್ತನೇನ ಸರ್ವೇಷಾಂ ಕರ್ಣೇಷು ಭ್ರಮತೀತಿ. ಕರ್ಣ + ಅಟ್ + ಅಚ್ (ಯಾವ ದೇಶದ ರಾಜನ ಕೀರ್ತಿ ಎಲ್ಲರ ಕಿವಿಯಲ್ಲಿಯೂ ಮೊಳಗುತ್ತಿರುವುದೋ ಆ ದೇಶ). ಇದು 'ಶಬ್ದರತ್ನಾವಲಿ'ಯ ಆಧಾರ. ಕೇಶವವರ್ಣಿಯೆಂಬ (ಕ್ರಿ.ಶ. ೧೩೫೯) ಜೈನಪಂಡಿತನ ಪ್ರಕಾರ ಭೇದಸಾರ್ಥಕವಾದ ಕರ್ಣ ಧಾತುವಿನಿಂದ ಕರ್ಣಾಟ ಪದವಾಯಿತು. ದಿವ್ಯಭಾಷೆಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯೆಂದು ಆ ಪದದ ಅರ್ಥ. ಇನ್ನು ವೇಂಕಟಾಧ್ವರಿಯ 'ವಿಶ್ವಗುಣಾದರ್ಶ'ದಲ್ಲಿ "ಕರ್ಣಾಟದೇಶೋ ಯಃ ಪೂರ್ವಂ ಕರ್ಣದೇಶಮಭೂಷಯತ್ । ಸ ಏಷ ಸಾಂಪ್ರತಂ ಪಶ್ಯ ಚಕ್ಷುಷೋರ್ಭೂಷಣಾಯತೇ ॥" (ಶ್ಲೋಕ. ೨೪೯) ಎಂದೂ "ಕರ್ಣಯೋಃ ಅಟತೀತಿ ಕರ್ಣಾಟಃ, ಅಟ ಗತೌ ಇತಿ ಧಾತೋಃ ನಿಷ್ಪನ್ನಶ್ಶಬ್ದಃ"— ಎಂದೂ ನಿರೂಪಣೆಯಿದೆ.[18] 'ಸ್ಕಾಂದ ಪುರಾಣ'ದ ಪ್ರಕಾರ ಕರ್ಣಾಟನೆಂಬ ರಾಕ್ಷಸನಿಂದ ನಾಡಿಗೆ ಈ ಹೆಸರು ಬಂತು.

ಕವಿಕಲ್ಪಿತಗಳೆಂದು ಹೇಳಿ ಈ ಸಂಸ್ಕೃತ ಮೂಲದ ಅರ್ಥ ಮತ್ತು ನಿಷ್ಪತ್ತಿಗಳನ್ನು ರಾ. ನರಸಿಂಹಾಚಾರ್ ಮೊದಲಾದ ಮಹನೀಯರು ಗ್ರಾಹ್ಯಮಾಡಿಲ್ಲ. ರಾಜವಾಡೆಯವರು ಕರಣ+ನಟ=ಕರ್ಣಾಟ ಎಂದು ನಿಷ್ಪತ್ತಿ ಹೇಳಿದ್ದಾರೆ. ಮನು ತನ್ನ ಕಾಲದ ವ್ರಾತ್ಯ ಕ್ಷತ್ರಿಯರ ಪಂಗಡಗಳನ್ನು ವಿಂಗಡಿಸುತ್ತ, 'ನಟಶ್ಚ ಕರಣಶ್ಚೈವ' ಎಂಬುದಾಗಿ ಎರಡು ಬಗೆಗಳನ್ನು ಕೂಡ ಹೇಳಿದ್ದಾನೆ ಎಂಬ ಆಧಾರವನ್ನು ಹಿಡಿದು, ಕರಣ ಮತ್ತು ನಟರ ಸಮ್ಮಿಶ್ರ ಪಂಗಡವೇ ಕರ್ಣಾಟವೆಂದು ಅವರು ಗ್ರಹಿಸಿದ್ದಾರೆ.[19] ಈ ಯಂಶವನ್ನು ವಿಮರ್ಶಿಸುತ್ತ ಶಂ. ಬಾ. ಜೋಶಿಯವರು ಬೇರೆ ಸ್ಮೃತಿಗಳಲ್ಲಿಯೂ ನಟರ ಉಲ್ಲೇಖಗಳನ್ನು ಗುರುತಿಸಿ, 'ಮತ್ಸ್ಯ ಪುರಾಣ'ದಲ್ಲಿ ಕರಣ ಎಂದಿರುವ ಜನಪದ ವಾಚಕವನ್ನು ಕರಣ ಎಂಬುದರೊಡನೆ ಅಭಿನ್ನವಾಗಿ ಗ್ರಹಿಸಿ ಕರಣ+ನಟ=ಕಣ್ಣಾ೯ಟ>ಕರ್ಣಾಟ ಎಂದೋ ಕರ್ಣ+ನಟ=ಕರ್ಣಾಟ ಎಂದೋ ಆಗಬಹುದೆಂದು ಸೂಚಿಸಿ, ಆ ಶಬ್ದಗಳ ಮೂಲವನ್ನು ಮಾತ್ರ ದೇಶೀಯವೆಂದು, ಎಂದರೆ ಕನ್ನಡವೆಂದು, ಹೇಳಿದ್ದಾರೆ.[20] ಆದರೆ ಈ ಸಮೀಕರಣಗಳನ್ನು ಪುಷ್ಟೀಕರಿಸುವ ಬೇರೆ ಪ್ರಮಾಣಗಳಿಲ್ಲ.

(ಆ) ಕನ್ನಡ ಎಂಬ ದೇಶ್ಯ ಶಬ್ದವೇ ಕರ್ಣಾಟ (ಕ) ಎಂಬ ಸಂಸ್ಕೃತ ರೂಪವನ್ನು ಅನಂತರದಲ್ಲಿ ಪಡೆಯಿತು ಎನ್ನುವ ಆಧುನಿಕ ಭಾಷಾ ವಿದ್ವಾಂಸರ ಕೆಲವು ಅಭಿಪ್ರಾಯಗಳನ್ನು ಈಗ ಒಗ್ಗೂಡಿಸಬಹುದು :

೧. ರಾಬರ್ಟ್ ಕಾಲ್ಡ್ವೆಲ್: ದಕ್ಷಿಣ ದಖನಿನ ನೆಲ ಕಪ್ಪು ಬಣ್ಣದ ಭೂಮಿಯಾಗಿದೆ. ಆದ್ದರಿಂದ ಕರ್‌ನಾಡು (=ಕಪ್ಪುನಾಡು) ಎಂಬುದು ಕರ್ಣಾಟಕದ ಮೂಲರೂಪ.[21]

ಕರ್+ನಾಟ್+ಅಗಂ ಎಂದರೆ ಕಪ್ಪು ನಾಡಿನ ಒಳಭಾಗ (ಪ್ರದೇಶ)–ಎಂಬ ಗುಂಡರ್ಟ್ ಸೂಚನೆಯಿಂದ ಇದು ಪ್ರೇರಿತ[22]. ಮೊದಲನೆಯದನ್ನು ಆರ್. ರಘುನಾಥರಾಯರು ಒಪ್ಪಿದ್ದಾರೆ[23]; ಎರಡನೆಯದನ್ನು ಉದ್ಧರಿಸಿದ್ದಾರೆ.[24] ಎಲ್. ಡಿ. ಬಾರ್ನೆಟ್ ಅವರು ಉದ್ಧರಿಸುವ ಫ್ಲೀಟ್ ಅವರ ಊಹೆಯೂ[25] ಎಚ್. ಸಿ. ರಾಯ್‌ಚೌಧುರಿ ಅವರ ಅಭಿಪ್ರಾಯವೂ[26] ಒಟ್ಟಿನಲ್ಲಿ ಈ ಸೂಚನೆಗಳಲ್ಲಿ ಮೊದಲನೆಯದನ್ನು ಪೋಷಿಸುವಂಥವಾಗಿವೆ.

೨. ಎಚ್. ನಾರಾಯಣರಾಯರು: ಕನ್ನಡ ನಾಡು ಸಮುದ್ರಮಟ್ಟಕ್ಕಿಂತ ಎತ್ತರವಾಗಿ ಘಟ್ಟದ ಮೇಲಿದೆ. ಕರುನಾಡು ಎಂಬುದು ಕರುಮಾಡ ಎಂಬ ಶಬ್ದದ ಹಾಗೆ. ಮೇಲಣ ಸೀಮೆ, ಕಣಿವೆಗೆ ಮೇಲಣ ಸೀಮೆ–ಎಂಬ ಅರ್ಥವನ್ನು ಕೊಡಬಲ್ಲ ಮಾತು ಅದು. ಆದ್ದರಿಂದ ಕರುನಾಡು (=ಎತ್ತರವಾದ ನಾಡು) ಎಂಬುದು ಮುಂದೆ ದ್ರಾವಿಡ ಭಾಷೆಗಳಲ್ಲಿ 'ಕನ್ನಡ' ಎಂಬುದಾಗಿಯೂ ಸಂಸ್ಕೃತದಲ್ಲಿ 'ಕರ್ಣಾಟ' ಎಂಬುದಾಗಿಯೂ ಪರಿವರ್ತಿಸಿರಬಹುದು.[27]

೩. ಆರ್. ತಾತಾಚಾರ್ಯರು: ಕರುನಡಂ ಎಂಬುದೂ ಕನ್ನಡಂ ಎಂಬುದೂ ತಮಿಳು ಲಕ್ಷಣ ಗ್ರಂಥಗಳ ವೃತ್ತಿಗಳಲ್ಲಿ ಉಕ್ತವಾಗಿವೆ. ತಮಿಳಿನಲ್ಲಿ ಕರು ಎಂದರೆ ಬೆಟ್ಟ ಎಂದರ್ಥ. ಕೀಳ್ನಾಡಿನವರಾದ ತಮಿಳರು ಮೇಲ್ನಾಡನ್ನು ಕರುನಾಡು – ಕರುನಡಂ ಎಂದು ಕರೆದಿರಬಹುದು. ಕನ್ನಡಕ್ಕೆ ನಿಷ್ಪತ್ತಿ ಬೇರೆ. ಅದು ಕಮ್ಮಿತು+ನಡೆ= ಕಂ+ನಡೆ>ಕನ್ನಡ.[28]

೪. ಎಂ. ಗೋವಿಂದ ಪೈ ಅವರು: ಕರಂ, ಕರು, ಕಡು ಎಂಬವು ದೊಡ್ಡ, ವಿಸ್ತಾರವಾದ, ಮಹಾ ಎಂಬ ಅರ್ಥವನ್ನು ಕೊಡುವ ಪದಗಳು. ಆದ್ದರಿಂದ ಕರುನಾಡು ಎಂದರೆ ಮಹಾರಾಷ್ಟ್ರ. ಕರು+ನಾಡು>ಕರ್+ನಾಡು>ಕರ್ನಾಡು (=ದೊಡ್ಡದೇಶ) ಎಂಬ ಕನ್ನಡ ಸಮಾಸಪದವೇ ಸಂಸ್ಕೃತದಲ್ಲಿ ಕರ್ಣಾಟ ಎಂದು ಆಗಿರಬೇಕು.[29] ರಾ. ಹೆ. ದೇಶಪಾಂಡೆಯವರ[30] ಮತ್ತು ಮಾಸ್ಟರ್ ಎಂಬವರ ಅಭಿಪ್ರಾಯವೂ ಒಟ್ಟಿನಲ್ಲಿ ಇದೇ.[31]

೫. ರಾ. ನರಸಿಂಹಾಚಾರ್ಯರು: (ಪರಿಮಳವಾಚಿಯಾದ) ಕಮ್ಮಿತು + ನಾಡು = ಕನ್ನಾಡು>ಕನ್ನಡು>ಕನ್ನಡ. ಪರಿಮಳ ವಿಶಿಷ್ಟವಾದ ದೇಶದ ಭಾಷೆ ಕನ್ನಡ. ಕನ್ನಡ ದೇಶ ಗಂಧದ ಮರದ ಕಾಡುಗಳಿಗೂ ತಾವರೆಕೊಳಗಳಿಗೂ ಪ್ರಸಿದ್ಧಿ ಪಡೆದಿರುವುದರಿಂದ ಕಮ್ಮಿತು ಎಂಬ ವಿಶೇಷಣ ಈ ನಾಡಿಗೆ ಅನುರೂಪವಾದ್ದು.[32] ಈ ಅಭಿಪ್ರಾಯ ಆರ್. ತಾತಾಚಾರ್ಯರಿಗೆ ಕೂಡ ಸಮ್ಮತವಾಗಿರುವಂತೆ ತೋರುತ್ತದೆ[33].

೬. ಬಿ. ಎಂ. ಶ್ರೀಕಂಠಯ್ಯನವರು: ಕರ್ + ನಾಟ್ + ಅಗಂ, ಎಂದರೆ ಕರಿಯ ನಾಡನ್ನು ಒಳಗೊಂಡಿರುವ ಪ್ರದೇಶ ಎಂದರ್ಥ. ಆದರೆ ಶಬ್ದರೂಪ ಕರ್ನಾಟಕವೇ ಹೊರತು ಕರ್ಣಾಟಕ ಅಲ್ಲ. ಒಟ್ಟಿನಲ್ಲಿ ಈ ವಿವರಣೆ ಗುಂಡರ್ಟ್ ಅವರ ಅಭಿಪ್ರಾಯವನ್ನು ಪೋಷಿಸುತ್ತದೆ.[34]

೭. ಫಾದರ್ ಹೆರಾಸ್ ಅವರು: ಮೊಹೆಂಜೋದಾರೋ ಚಿತ್ರಲಿಪಿಯ ಸಂಕೇತವನ್ನು ಗಮನಿಸಿದರೆ, ಕಣ್‌ನಿರ್ ಪದದ ಸಂಸ್ಕೃತ ರೂಪ ಕರ್ಣಾಟಕ ಆಗಿರಬಹುದು.[35]

೮. ದ. ರಾ. ಬೇಂದ್ರೆ ಮತ್ತು ಬೆಟಗೇರಿ ಕೃಷ್ಣಶರ್ಮರು: ಕನ್ (ಎಂದರೆ ಕಾಣು ಅಥವಾ ಒಡಮೂಡು) ಎಂಬ ಧಾತುವಿನಿಂದ ಕನ್ನಡ ಹುಟ್ಟಿದೆ. ಕನ್+ಅಳ್=ಕನ್ನಳ್, ಕನ್ನಡ್, ಕನ್ನಡ: ಕನ್+ಅಳ್ ಎಂದರೆ ಒಡಮೂಡುವುದನ್ನು ಉಳ್ಳದ್ದು. ಆದಕಾರಣ, ಭಾವಗಳನ್ನು ಒಡಮೂಡಿಸುವುದು ಕನ್ನಡ ಎಂದಾಗುತ್ತದೆ.[36]

೯. ಚೆನ್ನಪ್ಪ ಉತ್ತಂಗಿ ಅವರು: ಅಡಿಯಲ್ಲಿ ಕಣ್ಣುಳ್ಳವರು ಯಾರೋ ಅವರು ಕನ್ (ಣ್)+ಅಡಿಗರ್ ಅರ್ಥಾತ್ ಕನ್ನಡಿಗರು.[37]

೧೦. ಮುಳಿಯ ತಿಮ್ಮಪ್ಪಯ್ಯನವರು: (i) ಕನ್ನಡದ ರಾಜಕುಲಕ್ಕೆ ಕದಂಬ ಅಥವಾ ಕರಂಬ ಎಂಬ ಹೆಸರಿದೆ. ಆ ಕರ್ ಅಥವಾ ಕನ್ ಎಂಬ ದಸ್ಯುವರ್ಗದಿಂದ ಕನ್ನಡ ಎಂಬ ಹೆಸರಾಗಿರಬಹುದು. (ii) 'ಕರು' ಪದಕ್ಕೆ ಎತ್ತರ, ಶಿಖರ, ಮಹತ್ತು ಎಂಬ ಅರ್ಥಗಳಿರುವುದು ತಿಳಿದಿದೆ. ಕನ್ ಮತ್ತು ಕರ್ ಎಂಬ ರೂಪಗಳು ಅಭಿನ್ನ. ಆದ್ದರಿಂದ ಕನ್+ನಾಡು=ಕನ್ನಾಡು (ಕನ್ನಡ); ಕರ್ + ನಾಡು = ಕರುನಾಡು (ಕರುನಾಡಗ, ಸಂ. ಕರ್ಣಾಟಕ); 'ಕಱುತಳ'ದ ನಾಟರೇ ಕನ್ನಡಿಗರು. (iii) ಆದಿ ಜನಾಂಗದೊಳಗಿನವರಾದ ಕನ್ ಮತ್ತು ನಾಟರು ಬೆರೆತು ಕನ್ನಡಿಗರೆನಿಸಿರಬಹುದು.[38]

೧೧. ಎನ್. ವೆಂಕಟರಮಣಯ್ಯನವರು: ಶ್ರೀಶೈಲದ ತಪ್ಪಲಿನಲ್ಲಿ ಹಿಂದಿನ ಕಾಲದಲ್ಲಿ ಕಣ್ಣ ವಿಷಯ, ಕರ್ಣಾಟ ಸೀಮ, ಕನ್ನಾಡು ಎಂಬ ಚಿಕ್ಕ ಜಿಲ್ಲೆಯೊಂದಿತ್ತು. 'ಕರ್ಣ' ದೊರೆಗಳ ಮೂಲಕವಾಗಿ ಈ ಶಬ್ದಗಳು ಉಗಮಗೊಂಡಿರಬೇಕು. 'ಶಾತಕರ್ಣ'ದ ಹ್ರಸ್ವರೂಪ ಕರ್ಣ (ಸಂ. ಕರ್ಣ > ಪ್ರಾ. ಕಣ್ಣ > ತೆ. ಕನ್ನ). ಹೀಗೆ ಶಾತವಾಹನ ದೊರೆಗಳ ಆಳ್ವಿಕೆಯ ಆಂಧ್ರದೇಶದ ಒಂದು ಚಿಕ್ಕ ಜಿಲ್ಲೆಯ ಮೂಲಕವಾಗಿ ಕನ್ನಡ ಜನ ತಮ್ಮ ದೇಶ ಮತ್ತು ಭಾಷೆಗಳ ಹೆಸರನ್ನು ಪಡೆದುಕೊಂಡಂತೆ ತೋರುತ್ತದೆ. ಡಾ. ಎಸ್. ಶ್ರೀಕಂಠಶಾಸ್ತ್ರಿಯವರು ಈ ಅಭಿಪ್ರಾಯವನ್ನು ಕೆಲಮಟ್ಟಿಗೆ ಪೋಷಿಸುವಂತೆ ಕಾಣುತ್ತದೆ.[40]

೧೨. ಶಂ. ಬಾ. ಜೋಶಿಯವರು: ಳ, ಣ ಮತ್ತು ನ ಗಳಲ್ಲಿ ಪರಸ್ಪರವಾಗಿ ಪಲ್ಲಟವುಂಟು. ಕಳವರು (ಕಳ್ವರು ಅಥವಾ ಕಳ್ಳರು=ಕಳಭ್ರರು) ಎಂಬ ದ್ರಾವಿಡ ವರ್ಗದ ಬಹು ಪ್ರಾಚೀನ ಶಾಖೆಯ ಜನಾಂಗವೇ ಕಣ್ಣರು ಅಥವಾ ಕನ್ನರು. ಕನ್ನರ ನಾಡು ಕನ್ನಾಡು (>ಕನ್ನಡ). ಇದು ಕನ್ನಾಡು>ಕನ್ನಾಟ>ಕರ್ಣಾಟ ಈ ಕ್ರಮದಿಂದ ಸಂಸ್ಕೃತದಲ್ಲಿ ಸೇರಿಕೊಂಡಿದೆ. ಕರ್ಣಾಟಕದಲ್ಲಿರುವ ದ್ವಿರುಕ್ತಿದೋಷ ಕನ್ನಾಡ (ಕನ್ನಡ) ದಲ್ಲಿ ಸ್ವಲ್ಪವೂ ಇಲ್ಲ.[41] ರಾ. ಯ. ಧಾರವಾಡಕರರು ಈ ವಾದವನ್ನು ಒಪ್ಪುತ್ತಾರೆ.[42]

೧೩. ಬಿ. ಎ. ಸಾಲೆತೊರೆಯವರು: ಕನ್ನಾಡು ಅಥವಾ ಕರ್ನಾಡು ಎಂಬ ಪದದ ಮೂಲ ಅರ್ಥ ಒಂದು ಮಹಾನಾಡು ಅಥವಾ ಒಂದು ಎತ್ತರವಾದ ನಾಡು ಆಗಿದ್ದು, ಅದನ್ನು ಸಂಸ್ಕೃತಕ್ಕೆ ತಿರುಗಿಸಿದಾಗ ಕರ್ನಾಟ, ಕರ್ನಾಟಕ, ಮಹಾರಾಷ್ಟ್ರ ಆಗಿರಬೇಕು. ಕ್ರಮವಾಗಿ ಮಹಾರಾಷ್ಟ್ರ ಎಂಬ ಹೆಸರು ಕರ್ನಾಟಕದ ಒಡಲಿನ ಉತ್ತರ ಭಾಗಗಳಿಗೂ

ಹೆಚ್ಚು ಪುರಾತನವಾದ ಕರ್ನಾಡು ಎಂಬ ಅಂಕಿತ, ದೇಶದ ಮಿಕ್ಕ ಭಾಗಕ್ಕೂ ಉಳಿದು ಕೊಂಡಿರಬೇಕು.[43] ಇದು ಒಟ್ಟಿನಲ್ಲಿ ಗೋವಿಂದ ಪೈ ಅವರ ಅಭಿಪ್ರಾಯದ ಅನುವಾದವೇ.

೧೪. ತೀ. ನಂ. ಶ್ರೀಕಂಠಯ್ಯನವರು : ಕಣಾ(ನಾ)ರ್ಟ, ಕಣಾ(ನಾ)ರ್ಟಕ ಶಬ್ದಗಳು ಮೂಲತಃ ಸಂಸ್ಕೃತ ಶಬ್ದಗಳಲ್ಲ. ಪುನ್ನಾಡು ಸಂಸ್ಕೃತಕ್ಕೆ ಬರುವಾಗ ಪುನ್ನಾಟ ಆದಂತೆ 'ಕರ್ನಾಡು' ಎಂಬ ದೇಶ್ಯಶಬ್ದ ಸಂಸ್ಕೃತಜ್ಞರ ಉಚ್ಚಾರಣೆಯಲ್ಲಿ ಕಣಾ(ನಾ)ರ್ಟ ಎಂಬ ರೂಪವನ್ನು ತಾಳಿರಬೇಕು. ಕಣಾ(ನಾ)ರ್ಟ+ಕ = ಕಣಾ(ನಾ)ರ್ಟಕ.[44]

೧೫. ಜಿ. ಪಿ. ರಾಜರತ್ನಂ ಅವರು : ಕರ್‌ನಾಡುವಿನಿಂದ ಕರ್‌ನಾಟ ಹುಟ್ಟಿ ಸ್ವಾರ್ಥದಲ್ಲಿ ಕ ಪ್ರತ್ಯಯ ಬಂದು ಕರ್ನಾಟಕ ಆಗಿರುವುದು ಸಾಧ್ಯ. ಕರ್ನಾಟ, ಕರ್ನಾಟಕ ರೂಪಗಳು ಅಪಾಣಿನೀಯವೆಂದು ಅವನ್ನು ಕರ್ಣಾಟ ಕರ್ಣಾಟಕ ಎಂದು ಮಾಡಿಕೊಂಡಿರಬೇಕು; ಆಗ ಮೂಲಪದದ ಅರ್ಥ ಮರೆಯಾಗಿಯೋ ಗೊತ್ತಾಗದೆಯೋ ಪುನ್‌ನಾಟವನ್ನು ಪುಂರಾಷ್ಟ್ರ ಎಂದು ಮಾಡಿಕೊಂಡಂತೆ ಕರ್ಣಾಟದ ನಿಷ್ಪತ್ತಿಯನ್ನು "ಕರ್ಣೇಷು ಅಟತಿ ಇತಿ ಕರ್ಣಾಟಃ" ಎಂದು ವಿವರಿಸಲು ಸ್ವಾಭಾವಿಕವಾಗಿ ಯತ್ನಿಸಿರಬಹುದು. ಪ್ರಯೋಗಗಳನ್ನು ನೋಡಿದರೆ, ನಕಾರಯುಕ್ತ ಕರ್ನಾಟಕವೂ ಣಕಾರಯುಕ್ತ ಕರ್ಣಾಟಕವೂ ಬಹುಕಾಲದಿಂದ ವಿಕಲ್ಪವಾಗಿ ಬಳಕೆಯಾಗಿರುವುದಕ್ಕೆ ಶಾಸನೋಕ್ತ ಉದಾಹರಣೆಗಳಿರುವುದರಿಂದ ಎರಡೂ ಗ್ರಾಹ್ಯವೇ. ಪ್ರಾಯಃ ಪ್ರಾಕೃತ ಪ್ರಭಾವದಿಂದ, ಪ್ರಾಚೀನವಾದ ಪುನ್ನಾಡು ಪುನ್ನಾಟವಾದಂತೆ ಕರ್‌ನಾಡು ಕರ್ಣಾಟವಾಗಿರಬೇಕು.[45]

ಈ ಮೇಲೆ ಕೊಟ್ಟಿರುವ ವಿವಿಧಾಭಿಪ್ರಾಯಗಳ ಸಾರಾಂಶಗಳನ್ನು ಪರಿಶೀಲಿಸಿದರೆ, ಕನ್ನಡ ದೇಶ ಮತ್ತು ಭಾಷೆಗಳಿಗೆ ಆ ಹೆಸರುಗಳು ಎಲ್ಲಿಂದ ಹೇಗೆ ಬಂದುವು ಎನ್ನುವ ವಿಷಯವನ್ನು ಖಚಿತವಾಗಿ ಗೊತ್ತುಮಾಡುವುದು ಇನ್ನೂ ಸಾಧ್ಯವಾಗದಿರುವುದು ಸ್ಪಷ್ಟವಾಗುತ್ತದೆ. ಒಂದೊಂದು ಸೂಚನೆಯಲ್ಲಿಯೂ ಏನಾದರೂ ಕುಂದುಕೊರತೆಗಳನ್ನು ಎತ್ತುವುದು ಸಾಧ್ಯವಿದೆ.[46] ಆದ್ದರಿಂದ ಬಹುಜನಸಮ್ಮತವಾದ ಅಭಿಪ್ರಾಯ ಇನ್ನೂ ದೊರೆತಿಲ್ಲ. ಹೀಗಿದ್ದು ಕೂಡ, ಈ ವಿಚಾರಮಥನದಿಂದ ಕೆಲವಂಶಗಳ ಬಗೆಗೆ ಸಂಶೋಧಕರಿಗೆ ಸಮಾನವಾಗಿ ಒಪ್ಪಿಗೆಯಿದೆ. ಆ ಭಾಗ ಇದು : (i) ಕನಾ(ಣಾ)ರ್ಟ(ಕ) ಎಂಬ ಸಂಸ್ಕೃತ ಪದದ ಮೂಲ ದೇಶೀಯವಾದುದು. ದೇಶೀಯವಾದೊಂದು ಪದದಿಂದ ಸಂಸ್ಕೃತ ರೂಪ ಹುಟ್ಟಿತಲ್ಲದೆ, ಸಂಸ್ಕೃತ ರೂಪದ ತದ್ಭವವಾಗಿ ಪ್ರಸ್ತುತ ಶಬ್ದ ಹುಟ್ಟಿಲ್ಲ. (ii) ಕನಾ(ಣಾ)ರ್ಟ(ಕ) ವಾಗಲಿ 'ಕನ್ನಡ'ವಾಗಲಿ ಒಂದು ಸಮಾಸಪದ. ಇಲ್ಲಿ ಪೂರ್ವಪದದ ವಿಷಯದಲ್ಲಿ ಪ್ರಬಲವಾದ ಸಂಶಯಗಳಿದ್ದರೂ ಉತ್ತರಪದ ನಾಡು ಅಥವಾ ಅದರ ಯಾವುದಾದರೊಂದು ಜನ್ಯರೂಪ. ಅಭಿಪ್ರಾಯದ ಏಕತೆ ಇಲ್ಲಿಗೆ ನಿಲ್ಲುತ್ತದೆ. ಹಾಗಾದರೆ ಪೂರ್ವಪದದ ರೂಪ ಏನಿರಬಹುದು ? ಅದು ಎತ್ತರ, ದೊಡ್ಡ, ವಿಶಾಲ, ಮಹಾ ಎಂಬರ್ಥಗಳಿರುವ 'ಕರು' ಎಂದಿರಬೇಕು—ಎಂಬುದು ಹಲವರಿಗೆ ಒಪ್ಪಿಗೆಯಾಗಿರುವಂತೆ ತೋರುತ್ತದೆ. ಇದರಲ್ಲಿ ಹುರುಳಿರುವಂತೆ ತೋರುವುದು ಈ ಕಾರಣಗಳಿಗಾಗಿ : ತಮಿಳಿನಲ್ಲಿ 'ಕರುಮೈ' ಎಂಬ ನಾಮವಾಚಕವು ಗಟ್ಟಿತನ, ಹಿರಿತನ ಎಂಬ ಅರ್ಥಗಳಲ್ಲಿದೆ.[47] ಈ

ಪದದ ವಿಶೇಷಣರೂಪವಾದ 'ಕರು' ಕನ್ನಡದಲ್ಲಿ ಸ್ವತಂತ್ರ ರೂಪದಲ್ಲಿ ಅಷ್ಟು ಪ್ರಚಲಿತ ವಿರದಿದ್ದರೂ ಕರುವಮಾಡ (=ಉಪ್ಪರಿಗೆ, ಮಹಡಿ), ಕರುವಗೆಯ್ (=ದಿಣ್ಣೆಯ ಹೊಲ), ಕರುವಗಬ್ಬಿ (=ಎತ್ತರವಾದ ಗದ್ದೆ), ಕರುಮನೆ (=ದೊಡ್ಡಮನೆ) ಎಂಬ ಸಮಾಸ ರೂಪಗಳಲ್ಲಿ ಪ್ರಾಚೀನ ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಕಂಡುಬರುತ್ತಿದೆ.[48] ಆದ್ದರಿಂದ ಕರುನಾಡು ಎಂದರೆ ಎತ್ತರವಾದ ನಾಡು ಅಥವಾ ತಮಿಳು ಭಾಷೆಯ ಕರುಮೈ ಶಬ್ದದ ಅರ್ಥಚ್ಛಾಯೆಯನ್ನು ಗಮನಿಸಿ ಹೇಳುವುದಾದರೆ ಗಟ್ಟಿಯಾದ, ಉತ್ಕೃಷ್ಟವಾದ, ವಿಶಾಲವಾದ ಎಂಬವುಗಳಲ್ಲಿ ಯಾವುದಾದರೊಂದು ಅರ್ಥವನ್ನು ಕೊಡುವ ನಾಡು ಎಂದಾಗಬಹುದು. ತ್ರಿವೇಂದ್ರಂನ ಕೆ. ಜಿ. ಶೇಷ ಅಯ್ಯರ್ 'ಕಪ್ಪು-ಸೀಮೆ' ಎಂಬ ನಿಷ್ಪತ್ತಿಯನ್ನೊಪ್ಪದೆ, ತಮಿಳಿನಲ್ಲಿ 'ಕರುನಾಡು' ಎಂದರೆ 'ಎತ್ತರವಾದ ನಾಡು' ಎಂದಾಗುವುದೆಂದೂ ಕನ್ನಡಿಗರ ನಾಡಿನ ಭೌಗೋಳಿಕ ಲಕ್ಷಣಕ್ಕೆ ಅದು ಹೊಂದುವುದರಿಂದ ಎಂದರೆ ಕನ್ನಡ ನಾಡು ಪ್ರಸ್ಥಭೂಮಿಯಾಗಿರುವುದರಿಂದ ಈ ನಿಷ್ಪತ್ತಿಯೇ ಗ್ರಾಹ್ಯವೆಂದೂ ಅಭಿಪ್ರಾಯಪಟ್ಟಿರುವುದನ್ನು ಇಲ್ಲಿ ನೆನೆಯಬಹುದು.[49] ಅಲ್ಲಿಗೆ ದೊಡ್ಡ ನಾಡು, ಎತ್ತರವಾದ ನಾಡು ಎಂಬ ಅರ್ಥಗಳನ್ನು ಮುಖ್ಯವಾಗಿ ಕೊಡುವ 'ಕರುನಾಡು' ಎಂಬುದೇ ಕನ್ನಡವಾಯಿತೆಂದು ಈ ವಾದದ ತಿರುಳು. ಈ ಪದದ, ಈ ಅರ್ಥದ ಸಂಸ್ಕೃತರೂಪವೇ 'ಮಹಾರಾಷ್ಟ್ರ' ಮತ್ತು ಪ್ರಾಯಃ ಪುಲಿಕೇಶಿಯ ಐಹೊಳೆ ಶಾಸನದಲ್ಲಿ ಬಂದಿರುವ '೯೯೦೦೦ ಹಳ್ಳಿಗಳುಳ್ಳ ಮಹಾರಾಷ್ಟ್ರಕತ್ರಯ'—ಎಂಬುದು ಸಾಲೆತೊರೆಯವರ ಸಮೀಕರಣ.[50] ಈ ವಾದವನ್ನು ಕೆಲವರು ನಿರಾಕರಿಸಿರುವುದೂ ಉಂಟು. 'ಕರು' ಎಂಬ ಪದಕ್ಕೆ ವಿಸ್ತಾರವಾದ, ಎತ್ತರವಾದ ಮೊದಲಾದ ಅರ್ಥಗಳಿಲ್ಲವೆಂದೂ[51] ತಮಿಳು ಉಲ್ಲೇಖಗಳಲ್ಲಿ ಅಲ್ಲದೆ 'ಕರುನಾಡು' ಎಂಬ ಮಾತು ಕನ್ನಡದಲ್ಲಿ ಎಲ್ಲೂ ಬಳಕೆಯಾಗಿಲ್ಲವೆಂದೂ ಎತ್ತರವಲ್ಲದ ಬಯಲುಸೀಮೆಯೂ ಕನ್ನಡ ನಾಡಿನಲ್ಲಿ ಉಂಟೆಂದೂ ಹೇಳುವುದೇ ಅವರು ಕೊಡುವ ಕಾರಣಗಳು. ತಮಿಳಿನ 'ಕರು' ಶಬ್ದಕ್ಕೆ ಆಗಲಿ 'ಕರುಮೈ' ಶಬ್ದಕ್ಕೆ ಆಗಲಿ ಇರುವ ಹಲವು ಅರ್ಥಗಳಲ್ಲಿ ವಿಸ್ತಾರವಾದ, ಎತ್ತರವಾದ ಅಥವಾ ದೊಡ್ಡದಾದ ಎಂಬ ಅರ್ಥಗಳನ್ನು ತಮಿಳು ನಿಘಂಟುಗಳಲ್ಲಿ ಉಲ್ಲೇಖಿಸಿರುವಂತೆ ತೋರುವುದಿಲ್ಲ; ದ್ರಾವಿಡ ವ್ಯುತ್ಪತ್ತಿ ಕೋಶದಲ್ಲಿಯೂ ಅಷ್ಟೇ. ಆದರೆ ಕನ್ನಡದಲ್ಲಿಯೇನೋ 'ಕರು' ಮತ್ತು 'ಕರುವ' ಪದಗಳ ಸಮಾಸಘಟಿತರೂಪಗಳಲ್ಲಿ ಪೂರ್ವೋಕ್ತವಾದ ಅರ್ಥಗಳು ಕಂಡುಬರುವಂತೆ ತೋರುತ್ತವೆ. ಈ ಅವಲಂಬನೆಯಿಂದ ಕರುವಾದುದು (=ಎತ್ತರವಾದ್ದು ವಿಶಾಲವಾದ್ದು)+ನಾಡು=ಕರುನಾಡು ಎಂದು ಭಾವಿಸಲು ಅವಕಾಶವಿದೆ. ಆದರೆ ಇಲ್ಲಿ ಏಳುವ ಮುಖ್ಯವಾದ ಸಮಸ್ಯೆಯೆಂದರೆ, 'ಕರುನಾಡು' ಶಬ್ದದ ಪ್ರಯೋಗ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಎಲ್ಲಿಯೂ ದೊರೆಯದೆ, ತಮಿಳಿನಲ್ಲಿ ಮಾತ್ರ ಕ್ವಚಿತ್ತಾಗಿ ದೊರೆಯುತ್ತಿರುವುದು.[52] ಇಲ್ಲಿ ಕೂಡ ಇದು 'ಕರ್ನಾಟಕಮ್', 'ಕಣ್ಣಾಟಮ್' ಎಂಬ ರೂಪಗಳ ಜತೆಗೆ ಗೋಚರಿಸುತ್ತಿರುವ ಪರ್ಯಾಯ ರೂಪ. ಆದ್ದರಿಂದ ಕರುನಾಡು>ಕರ್ನಾಡು >ಕನ್ನಡ ಎಂಬ ರೂಪಗಳ ಬೆಳವಣಿಗೆ ಸಂಶಯಾಸ್ಪದ.

ಪ್ರಾಚೀನವೂ ಪ್ರಚುರವೂ ಆದ 'ಕನ್ನಡ' ರೂಪವನ್ನು ಮೂಲವಾಗಿಟ್ಟುಕೊಂಡು ವಿಚಾರ ಮಾಡಿದರೆ, ಆಗ ಕರ್+ನಡ (<ನಾಡು) >ಕರ್ಣಾಟ>ಕರ್ನಾಟ ಎಂಬ ರೂಪಗಳ ಬೆಳವಣಿಗೆ ಸಹಜವಾಗಿ ತೋರುತ್ತದೆ. ಇಲ್ಲಿಯೇ ಎರಡನೆಯದಾದ ಜನಪ್ರಿಯ ನಿಷ್ಪತ್ತಿಗೆ ಅವಕಾಶವಿರುವುದು: ಕರಿದು ಎಂಬ ಅರ್ಥದ 'ಕರ್'+ನಾಡು ಎಂಬುದರ ಹ್ರಸ್ವರೂಪ 'ನಡ'=ಕನ್ನಡ. ಕನ್ನಡದ ಸೀಮೆ ಕಪ್ಪು ಮಣ್ಣಿನ ನೆಲದ ಸೀಮೆ ಎಂಬುದು ಈ ನಿಷ್ಪತ್ತಿಗೆ ಮೂಲ. ಗುಂಡರ್ಟ್, ಕಾಲ್ಡ್ವೆಲ್, ಫ್ಲೀಟ್ ಮೊದಲಾದವರಿಗೆ ಇದು ಸಮ್ಮತವಾಗಿರುವಂತೆ ತೋರುತ್ತದೆ. ಈ ಸಂದರ್ಭದಲ್ಲಿ ಆರನೆಯ ವಿಕ್ರಮಾದಿತ್ಯನ ನೀಲಗುಂದ ತಾಮ್ರಶಾಸನದಲ್ಲಿ (ಕ್ರಿ.ಶ. ೧೦೮೭, ೧೧೨೩) ಬಂದಿರುವ

> ವಿಖ್ಯಾತ ಕೃಷ್ಣವರ್ಣೇ ತೈಲಸ್ನೇಹೋಪಲಬ್ಧ ಸರಲತ್ವೇ
> ಕುಂತಲವಿಷಯೇ ನಿತರಾಂ ವಿರಾಜತೇ ಮಲ್ಲಿಕಾಮೋದಃ ॥

ಎಂಬ ಪದ್ಯದ ಆಶಯವನ್ನು ವಿವರಿಸುವಾಗ, "ವೇರ್ಣಾ (>ವರ್ಣಾ) ನದಿ ಸಂಗಮಿಸಿದ ಕೃಷ್ಣಾನದಿಗಾಗಿ ಪ್ರಸಿದ್ಧವಾಗಿರುವ ಕುಂತಲ ವಿಷಯ" ಎಂದು ಅರ್ಥಮಾಡಲಾಗುವಂತೆ "ಫಲವತ್ತಾದ ಕಪ್ಪು ನೆಲಕ್ಕಾಗಿ ಪ್ರಸಿದ್ಧವಾಗಿರುವ ಕುಂತಲ ವಿಷಯ" ಎಂದೂ ಅರ್ಥಮಾಡಲು ಸಾಧ್ಯವಿದೆಯೆಂಬ ಫ್ಲೀಟ್ ಅಭಿಪ್ರಾಯವನ್ನು ಬಾರ್ನೆಟ್ ಉದ್ಧರಿಸಿದ್ದಾರೆ.[53] ಕವಿ ಈ ಪದ್ಯದಲ್ಲಿ ಶ್ಲೇಷೆಯ ಮೂಲಕ, ಇಂಥ ಅರ್ಥವನ್ನಿಟ್ಟಿರುವ ಸಾಧ್ಯತೆಯೇನೋ ಇದೆ. ಆದರೆ ಅರ್ವಾಚೀನವಾದ ಒಂದೇ ಆಧಾರದಿಂದ ಪ್ರಾಚೀನವೂ ಪ್ರಚುರವೂ ಆದ 'ಕರ್ಣಾಟಕ' ಪದದ ನಿಷ್ಪತ್ತಿಯನ್ನು 'ಕರಿದು+ನಾಡು' ಎಂದು ಹೇಳಿದರೆ ಅದು ಸಾರ್ವತ್ರಿಕ ಮನ್ನಣೆಯನ್ನು ಪಡೆದೀತೆಂದು ಹೇಳುವುದು ಕಷ್ಟ. ರಾ. ನರಸಿಂಹಾಚಾರ್, ಮುಳಿಯ ತಿಮ್ಮಪ್ಪಯ್ಯ ಮುಂತಾದವರು ಈ ನಿಷ್ಪತ್ತಿಯನ್ನು ಒಪ್ಪಿಲ್ಲ.[54] ಪೂರ್ವೋಕ್ತ ಪದ್ಯವನ್ನು ಉದ್ಧರಿಸಿ ವಿಚಾರಮಾಡಿರುವ ರಾಯ್ ಚೌಧುರಿ ತಮ್ಮ ಸಮ್ಮತಿಯನ್ನು ಸೂಚಿಸಿದ್ದಾರೆ.[55]

ಕನ್ನಡದ ಕೆಲವು ಜಿಲ್ಲೆಗಳು ಕಪ್ಪು ನೆಲದಿಂದ ಕೂಡಿದ್ದು ಎಂಬುದು ನಿಜ. ಆದರೆ ಇಲ್ಲಿಯೂ, ಕಪ್ಪುಮಣ್ಣಿನ ನೆಲವಲ್ಲದ ಭಾಗಗಳೂ ಬಹುವಾಗಿರುವುದೆಂದು ಶಂ. ಬಾ. ಜೋಶಿ[56] ಮುಂತಾದ ಕೆಲವರು ಈ ನಿಷ್ಪತ್ತಿಯನ್ನು ಒಪ್ಪದಿರುವುದುಂಟು. ಕಳ್ ಕಣ್ ಕರ್ ಕನ್ ಎಂಬವು ಜನಾಂಗವಾಚಕ ಪೂರ್ವಪದಗಳೆಂದು ತೋರಿಸಲು ಶಂ. ಬಾ. ಜೋಶಿ ಮೊದಲಾದ ವಿದ್ವಾಂಸರು ತುಂಬ ಶ್ರಮಿಸಿದ್ದರೂ, ಅವರು ಒದಗಿಸಿರುವ ಪ್ರಮಾಣಗಳು ಪ್ರಾಯಃ ಗಟ್ಟಿಯಾದವಲ್ಲವಾಗಿ ಅವಕ್ಕೆ ಮಾನ್ಯತೆ ದೊರೆತಿಲ್ಲ. ಅಲ್ಲದೆ ಅವುಗಳ ನಿಷ್ಪತ್ತಿ ವಿಚಾರದಲ್ಲಿ ಭಾಷಾಶಾಸ್ತ್ರೀಯವಾದ ದೋಷಗಳೂ ಕಂಡುಬರುತ್ತವೆ. ಹೀಗಾಗಿ ಕರು=ಎತ್ತರ, ದೊಡ್ಡ ಎಂಬ, ಅಥವಾ ಕರ್=ಕರಿಯದು ಎಂಬ ವಿಶೇಷಣಗಳಲ್ಲಿ ಯಾವುದಾದರೊಂದು ಪೂರ್ವಪದವಾಗಿರುವ ನಿಷ್ಪತ್ತಿಯ ಕಡೆಗೆ ವಿದ್ವಾಂಸರ ಒಲವು ತೂಗುತ್ತದೆ. ಈಚೆಗೆ ಈ ವಿಷಯದಲ್ಲಿ ಹೆಚ್ಚಿನ ವಿಚಾರ ವಿಮರ್ಶೆಗಳೇನೂ ನಡೆದಿಲ್ಲ.

ಶಬ್ದಾರ್ಥದ ವಿಚಾರದಲ್ಲಿ ವಿವಿಧಾಭಿಪ್ರಾಯಗಳು ವ್ಯಕ್ತವಾಗಿರುವಂತೆಯೇ ಶಬ್ದರೂಪದ—ಮುಖ್ಯವಾಗಿ ಕರ್ನಾಟ(ಕ)—ಕರ್ಣಾಟ(ಕ) ಎಂಬ ರೂಪಗಳ—ವಿಚಾರದಲ್ಲಿಯೂ ಬಹುವಾಗಿ ಚರ್ಚೆ ನಡೆದಿರುವುದು ಕಾಣುತ್ತದೆ. ಈ ಚರ್ಚೆಯಲ್ಲಿ ಶ್ರೀಯುತರಾದ ತೋಗೆರೆ ನಂಜುಂಡಶಾಸ್ತ್ರಿ,[57] ಎಚ್. ನಾರಾಯಣರಾವ್, ಆರ್. ತಾತಾಚಾರ್ಯ[58] ರಾ. ಹ. ದೇಶಪಾಂಡೆ.[59] ತೀ. ನಂ. ಶ್ರೀಕಂಠಯ್ಯ[60], ಜಿ. ಪಿ. ರಾಜರತ್ನಂ[61] ಮೊದಲಾದ ಮಹನೀಯರು ಪಾಲ್ಗೊಂಡಿದ್ದಾರೆ. ಕರ್ಣಾಟ(ಕ) ಶುದ್ಧ ಸಂಸ್ಕೃತಪದವೆಂದೂ ಅದಕ್ಕೆ ಸಂಸ್ಕೃತದಲ್ಲಿ ವ್ಯುತ್ಪತ್ತಿ ಕೊಡಬಹುದೆಂದೂ ಕನ್ನಡ ಅದರ ತದ್ಭವವೆಂದೂ ಆದ್ದರಿಂದ ಕರ್ಣಾಟ(ಕ)ವೇ ಸಾಧುವೆಂದೂ ಹೇಳುವವರು ಸಾಮಾನ್ಯವಾಗಿ 'ಶಬ್ದರತ್ನಾವಲಿ'ಯಲ್ಲಿ ಉಕ್ತವಾದ ವ್ಯುತ್ಪತ್ತಿಯನ್ನು 'ಶಬ್ದಮಣಿದರ್ಪಣ'ದ ಅಪಭ್ರಂಶ ಪ್ರಕರಣದಲ್ಲಿ (ಶಬ್ದಾನುಶಾಸನದಲ್ಲಿ ಸೂ.೧೬೦) 'ಕರ್ಣಾಟ' ಪದದ ತದ್ಭವ 'ಕನ್ನಡ' ಎಂದು ಹೇಳಿರುವುದನ್ನೂ ಸಂಸ್ಕೃತ ಕನ್ನಡ ಗ್ರಂಥಗಳಲ್ಲಿ ಕರ್ಣಾಟ(ಕ) ಪದದ ಪ್ರಾಚುರ್ಯವನ್ನೂ ಆಧಾರವಾಗಿ ತೋರಿಸುತ್ತಾರೆ. ಪೂರ್ವೋಕ್ತವಾದ ಸಂಸ್ಕೃತ ಗ್ರಂಥದಲ್ಲಿ ಕೊಡುವ ವ್ಯುತ್ಪತ್ತಿಯನ್ನು ಯಾವ ದೇಶಕ್ಕಾಗಲಿ ಭಾಷೆಗಾಗಲಿ ಅನ್ವಯಿಸಬಹುದೆಂದೂ ಕೇಶಿರಾಜ ತನ್ನ ವ್ಯಾಕರಣ ಗ್ರಂಥದಲ್ಲಿ ಕೆಲವು ದ್ರಾವಿಡ ಶಬ್ದಗಳನ್ನೂ ಸಂಸ್ಕೃತದ ತದ್ಭವವಾಗಿ ಹೇಳಿರುವುದರಿಂದ ಆತನ ಸೂಚನೆಯನ್ನು ಒಪ್ಪುವುದಕ್ಕಾಗದೆಂದೂ ಮುಂತಾಗಿ ಇದಕ್ಕೆ ಆಕ್ಷೇಪವಿದೆ.[62] ಎರಡನೆಯ ಪಂಥದವರು ಕರ್ಣಾಟ(ಕ)ಕ್ಕೆ ಮೂಲ ಕನ್ನಡ ಅಥವಾ ಕರ್ನಾಟ(ಕ) ಯಾವುದೇ ಇರಲಿ, ರಕಾರ ಸಂಪರ್ಕವಿರುವ ನಕಾರ ಣಕಾರವಾಗಿ ಮಾರ್ಪಡಬೇಕಾದ್ದು ಸಂಸ್ಕೃತ ವ್ಯಾಕರಣದ ಮರ್ಯಾದೆಯಾದ್ದರಿಂದ ಕರ್ಣಾಟ(ಕ) ಎಂಬ ರೂಪವೇ ಸಾಧುವಾದ್ದು ಎನ್ನುತ್ತಾರೆ. ಇದನ್ನು ಆಕ್ಷೇಪಿಸುವವರು, ದುರ್ನಯ ದುರ್ನೀತಿ ಇತ್ಯಾದಿ ಸಂಸ್ಕೃತ ಪದಗಳಲ್ಲಿ ರಕಾರ ಸಂಪರ್ಕದ ನಕಾರ ಣಕಾರವಾಗದಿರುವುದನ್ನು ತೋರಿಸಿ, ಕರ್ನಾಟ(ಕ) ತಪ್ಪೆಂದು ಹೇಳುವುದಕ್ಕಾಗುವುದಿಲ್ಲ ಎನ್ನುತ್ತಾರೆ. ಕರ್ನಾಟ(ಕ) ಅಚ್ಚಗನ್ನಡ ಶಬ್ದ; ಅದಕ್ಕೆ ಕನ್ನಡದಲ್ಲಿಯೇ ವ್ಯುತ್ಪತ್ತಿಯುಂಟು. ಸಂಸ್ಕೃತಜ್ಞರು ಅವರ ಭಾಷಾಮರ್ಯಾದೆಗೆ ಅನುಸಾರವಾಗಿ ಅದನ್ನು ಕರ್ಣಾಟಕವೆಂದು ಮಾಡಿದ್ದಾರೆ ಎನ್ನುವುದು ಇನ್ನೊಂದು ಪಂಥ.[63] ಕರ್ನಾಟ(ಕ) ಅಚ್ಚಕನ್ನಡ ಎನ್ನುವವರ ವಾದವನ್ನು ಆಧುನಿಕ ಭಾಷಾಶಾಸ್ತ್ರಜ್ಞರ ಮತ್ತು ಇತರರ ನಿರೂಪಣೆಯಲ್ಲಿ ಕಾಣುತ್ತೇವೆ.

ಕರ್ಣಾಟಕ, ಕರ್ನಾಟಕ ಎರಡು ರೂಪಗಳನ್ನೂ ಭಾಷಾಶಾಸ್ತ್ರದ ತತ್ತ್ವಗಳಿಗೆ ಅನುಸಾರವಾಗಿ ವಿಮರ್ಶಿಸಿ "ಒಂದು ಶಬ್ದರೂಪ ಸಾಧುವೆ ಅಸಾಧುವೆ ಎಂದು ನಿರ್ಣಯಿಸುವುದರಲ್ಲಿ ಶಿಕ್ಷಾಶಾಸ್ತ್ರ, ಭಾಷಾಗತಿ, ಶಿಷ್ಟಸಮ್ಮತಿ—ಇವೆಲ್ಲವನ್ನೂ ಗಮನಕ್ಕೆ ತಂದುಕೊಳ್ಳಬೇಕು. 'ಕರ್ಣಾಟಕ' ಎಂಬ ಮೂರ್ಧನ್ಯ ಸಹಿತ ರೂಪವು ಪಾಣಿನಿಗೆ ಸಮ್ಮತವಾದದ್ದು, ಕನ್ನಡನಾಡಿನ ಒಂದು ಭಾಗದಲ್ಲಿ (ಮುಖ್ಯವಾಗಿ, ಮೈಸೂರಿನಲ್ಲಿ) ಬಹುಮಟ್ಟಿಗೆ ಬಳಕೆಯಾಗಿರತಕ್ಕದ್ದು. ಆದಕಾರಣ ಅದರ ಉಚ್ಚಾರಣೆ ಕಠಿನವಾದರೂ ಶಿಕ್ಷಾಶಾಸ್ತ್ರದ ಬೆಂಬಲ ಅದಕ್ಕಿಲ್ಲದೆಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳ

ಲಾಗುವುದಿಲ್ಲ. 'ಕರ್ನಾಟ' ಎಂಬ ರೂಪವಾದರೋ ಹೆಚ್ಚು ಯುಕ್ತಿಯುಕ್ತವಾದದ್ದು, ಉಚ್ಚಾರಣೆಗೆ ಸುಲಭವಾದದ್ದು, ಕನ್ನಡ ನಾಡಿನ ಉತ್ತರಭಾಗದಲ್ಲೆಲ್ಲಾ ರೂಢಿಯಾಗಿರ ತಕ್ಕದ್ದು. ಇದನ್ನು ಅಸಾಧುವೆಂದು ಹೊರದೂಡುವುದು ಹಾಗಿರಲಿ; ಮೂರ್ಧನ್ಯಸಹಿತ ರೂಪಕ್ಕಿಂತ ಹೆಚ್ಚು ಉಪಾದೇಯವೆಂದು ಹೇಳಲು ಮನಸ್ಸಿಲ್ಲದಿದ್ದರೆ ಅದರಷ್ಟೇ ಸಾಧು ವೆಂದಾದರೂ ಒಪ್ಪಲೇಬೇಕು. ಸದ್ಯಕ್ಕೆ ಎರಡು ರೂಪಗಳನ್ನೂ ಅಂಗೀಕರಿಸೋಣ. ಸಂಸ್ಕೃತದಲ್ಲೇ ಕೋಷ—ಕೋಶ, ಪೃಥ್ವೀ—ಪೃಥಿವೀ ಮೊದಲಾದ ಜೋಡಿಗಳಿಲ್ಲವೇ? ಕರ್ಣಾಟಕ—ಕರ್ನಾಟಕಗಳಲ್ಲಿ ಕೊನೆಗೆ ಯಾವುದು ನಿಲ್ಲಬೇಕೆಂಬುದನ್ನು ಕಾಲಪುರುಷನು ನಿರ್ಣಯಿಸಲಿ"—ತೀ. ನಂ. ಶ್ರೀಕಂಠಯ್ಯನವರ ಈ ಅಭಿಪ್ರಾಯ ಈ ಸಮಸ್ಯೆಯ ಬಗ್ಗೆ ಸೂಕ್ತವಾದ ನಿಲವನ್ನು ತೋರಿಸಿವೆ.[64] ಈಚೆಗೆ ರಾಜ್ಯ ತನ್ನ ಹೊಸ ಹೆಸರನ್ನು ತಳೆ ದಾಗ, 'ಕರ್ನಾಟಕ' ಎಂಬ ರೂಪ ಅಧಿಕೃತವಾಗಿ ಬಳಕೆಗೆ ಬಂದಿದೆ. ಇಷ್ಟವಿದ್ದವರು 'ಕರ್ಣಾಟಕ' ಎಂಬ ರೂಪವನ್ನು ಬಳಸುತ್ತಾರೆ.

## ಕರ್ಣಾಟಕ, ಕುಂತಲ ಮತ್ತು ಮಹಿಷಮಂಡಲ

ಕರ್ಣಾಟಕ: ಕರ್ಣಾಟಕ ಎಂಬ ಹೆಸರನ್ನೂ ಪ್ರಾಚೀನ ಕರ್ಣಾಟಕದ ಪ್ರದೇಶ ಗಳನ್ನೂ ಉಲ್ಲೇಖಿಸುವ ಆಧಾರಗಳು ಬೇರೆ ಬೇರೆ ಭಾಷೆಯ,ಶಾಸನಗಳಲ್ಲಿಯೂ ಸಾಹಿತ್ಯ ಗ್ರಂಥಗಳಲ್ಲಿಯೂ ಹೇರಳವಾಗಿ ದೊರೆಯುತ್ತವೆ. ಸ್ಥಿರವಾದ ನೆಲೆ, ವಿಸ್ತಾರ ಮತ್ತು ಸೀಮೆಗಳನ್ನು ಸಮಗ್ರವಾಗಿ ಹೇಳಿರುವ ಆಧಾರಗಳು ಪ್ರಾಯಶಃ ದುರ್ಲಭ. ರಾಜ ಕೀಯವಾಗಿ ಸಂಘಟಿಸುತ್ತಿದ್ದ ಸ್ಥಿತ್ಯಂತರಗಳು ಕಾರಣವಾಗಿ ಕರ್ಣಾಟಕದ ಹೃದಯ ಸ್ಥಾನ ಮತ್ತು ಪರಿಸರಗಳು ವ್ಯತ್ಯಾಸಗೊಳ್ಳುತ್ತ, ಅದಕ್ಕೆ ಅನುಗುಣವಾಗಿ ಸೀಮೆ ವಿಸ್ತರಗೊಳ್ಳುತ್ತ ಸಂಕೋಚಗೊಳ್ಳುತ್ತ ಇದ್ದುದು ಸಹಜವೇ. ಕದಂಬರಿಂದ ಮೈಸೂರರ ಸರವರೆಗೆ ಆಯಾ ರಾಜಮನೆತನದವರು ತಮ್ಮ ಆಳ್ವಿಕೆಯ ಸೀಮೆಯನ್ನು ಕರ್ಣಾಟಕ ಎಂದು ಕರೆದುಕೊಂಡಿದ್ದಾರೆ (ಸು. ೪೫೦–೧೮೫–೧೦). ಇಲ್ಲಿ ಪ್ರಾತಿನಿಧಿಕವಾಗಿ ಕೆಲವು ಉಲ್ಲೇಖಗಳನ್ನು ಗುರುತಿಸಬಹುದು.

ಕರ್ಣಾಟಕದ ಮೊದಲ ಗಣ್ಯ ರಾಜಮನೆತನ ಕದಂಬರದು. ಕದಂಬರ ದೊರೆ ಶಾಂತಿ ವರ್ಮನ ಸು. ೪೫೦ರ ಒಂದು ಶಾಸನದಲ್ಲಿ (ಎ. ಕ. vi—ಕ. ೧೬೨) "ವೈಜಯನ್ತೀತಿಲಕ ಸಮಗ್ರ ಕರ್ಣಾಟಭೂಮಗ್ಗ ರ್ಭಾರ್ತಾರಂ" ಎಂದಿದೆ.[65] ಕರ್ಣಾಟಕದ ಹಲವು ಪ್ರದೇಶಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿ (ವೈಜಯಂತಿ, ಜಯಂತಿ) ಖ್ಯಾತವಾದ್ದೆಂದು ಹೇಳಿರುವುದು ಅಂದು ಕನ್ನಡ ನಾಡಿನ ಹೃದಯಸ್ಥಾನ ಬನವಾಸಿ ಮತ್ತು ಪರಿಸರ ಪ್ರದೇಶಗಳು ಎಂಬುದನ್ನು ಸೂಚಿಸುತ್ತದೆ. ಸು. ೮ನೆಯ ಶತಮಾನದ ದಂತಿದುರ್ಗನ ಸಾಮನ್‌ಗಡ ತಾಮ್ರಶಾಸನದಲ್ಲಿ[66] ಬಾದಾಮಿ ಚಾಳುಕ್ಯರ ದೊರೆ ಇಮ್ಮಡಿ ಕೀರ್ತಿ ವರ್ಮನ ಸೇನೆಯನ್ನು ದಂತಿದುರ್ಗನು 'ಕರ್ಣಾಟಕಬಲಂ' ಎಂದು ಕರೆದಿರುವುದರಿಂದ ಬಾದಾಮಿ ಚಾಳುಕ್ಯರು ಆಗ್ಗೆ ಆಳುತ್ತಿದ್ದ ಬಾದಾಮಿ (ವಾತಾಪಿ) ಮತ್ತು ಸುತ್ತಣ

ಸೀಮೆ ಕರ್ಣಾಟವೆನಿಸಿತ್ತು ಎನ್ನಬಹುದು. ಕ್ರಿ.ಶ. ೫ರಿಂದ ೯ನೆಯ ಶತಮಾನದ ಆದಿ ಭಾಗದವರೆಗೆ ದೊರೆಯುವ ಸಮಕಾಲೀನ ದಾಖಲೆಗಳಿಂದ ಅಂದಿನ ಕರ್ಣಾಟಕ ಉತ್ತರ ಕನ್ನಡ, ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳು, ರಾಯಚೂರು ಗುಲ್ಬರ್ಗ ಜಿಲ್ಲೆಗಳು ಸೇರಿದ್ದ ಪ್ರದೇಶವಾಗಿತ್ತೆಂದೂ 'ಸಮಗ್ರ ಕರ್ಣಾಟ ಭೂವರ್ಗ'ದಲ್ಲಿ ಉಳಿದ ಯಾವ ಪ್ರದೇಶಗಳು ಸೇರಿದ್ದುವೆಂಬುದನ್ನು ನಿರ್ಣಯಿಸುವುದು ಕಷ್ಟವೆಂದೂ ಎಚ್. ಸಿ. ರಾಯ್ ಚೌಧುರಿ ಹೇಳಿದ್ದಾರೆ.[67] ಅಲ್ಲದೆ 'ಶಕ್ತಿಸಂಗಮ ತಂತ್ರ' ರಾಮನಾಥದಿಂದ ಶ್ರೀರಂಗದವರೆಗೆ ಹಬ್ಬಿದ್ದ ನಾಡು ಕರ್ಣಾಟ ಎಂದು ಹೇಳಿದೆಯೆಂದೂ ರಾಮನಾಥ ಎಂಬುದು ರಾಮೇಶ್ವರ ತೀರ್ಥ ಅಥವಾ ರೈಸ್ ಅವರ ಪ್ರಕಾರ ತುಂಗ ಭದ್ರಾ ನದಿಗಳ ಸಂಗಮಸ್ಥಾನದ ದಕ್ಷಿಣಕ್ಕೆ ಕೆಲವು ಮೈಲಿಗಳ ದೂರದಲ್ಲಿರುವ ಒಂದು ಸಣ್ಣ ದ್ವೀಪ ಹಾಗೂ ಶ್ರೀರಂಗ ಎಂಬುದು ಪ್ರಾಯಶಃ ತಮಿಳುನಾಡಿನ ಹೃದಯಸ್ಥಾನದಲ್ಲಿರುವ ತಿರುಚಿರಪಲ್ಲಿಯ ಶ್ರೀರಂಗವಾಗಿರದೆ ಮೈಸೂರು ಹತ್ತಿರದ ಶ್ರೀರಂಗಪಟ್ಟಣ ಎಂದೂ ಅವರು ಸೂಚಿಸಿದ್ದಾರೆ.[68]

ಗಂಗದೊರೆ ಒಬ್ಬನನ್ನು "ಗಂಗ ಪೆರ್ಮನಡಿಗಳು ಕರ್ಣಾಟನಾಳತ್ತಮಿರೆ" ಎಂದಿದೆ.[69] ಇಮ್ಮಡಿ ಸೋಮೇಶ್ವರನ ತಂದೆ ಕುಂತಳೋರ್ವೀತಿಲಕನಾದ ತ್ರೈಳೋಕ್ಯಮಲ್ಲ ಆಹವ ಮಲ್ಲದೇವನಿಗೆ ಎದುರು ನಿಲ್ಲಲಾರದೆ ಲಾಟಕಳಿಂಗ ಕರಹಾಟ ಮುಂತಾದ ದೇಶದವರು ಕಪ್ಪ ನನ್ನಿತ್ತರೆಂದು ಹೇಳುವಾಗ ಕರ್ಣಾಟವನ್ನು ಸೇರಿಸಿದೆ.[70] ಆಹವಮಲ್ಲ ಕುಂತಳ ಸೀಮೆಯ ದೊರೆಯೆಂದೂ ಆತನಿಗೆ ಕಪ್ಪವನ್ನಿತ್ತವರು ಕರ್ಣಾಟದವರು ಎನ್ನುವುದೂ ಕುತೂಹಲ ಕರವಾಗಿದೆ. ಕಳಚುರ್ಯರ ರಾಯಮುರಾರಿ ಸೋಯಿದೇವನ ಗುಣವನ್ನು ಕೀರ್ತಿಸು ವಾಗ "ಕ್ರಮದಿಂ ಕರ್ಣಾಟಮುಂ ಕುಂತಳಮನೊಲವಿಸಿಂ ತಾಳ್ದಿ ತಳ್ಕಯ್ಸಿ...."ಎಂದಿದೆ; ಕರ್ಣಾಟ ಮತ್ತು ಕುಂತಳಗಳು ಆಗ ಕನ್ನಡನಾಡಿನ ಕೇಂದ್ರಗಳಾಗಿದ್ದವೆಂದು ತಿಳಿಯು ವುದು.[71] ಕಾಕತೀಯ ಮಹಾದೇವನ ಕಾಲದ ಒಂದು ಶಾಸನದಲ್ಲಿ "ವರಹಾಟಾದಿ ಕರ್ನಾಟದ್ರವಿಡಾನ್ತ್ರಾಳವಾನಪಿ...." ಎಂದಿದೆ. ಸೇಉಣ ಸಿಂಘಣನ ಶಾಸನದಲ್ಲಿ ಹೊಯ್ಸಳ ದೊರೆಯನ್ನು 'ಕರ್ಣಾಟಕ್ಷಿತಿಪಾಳ'ನೆಂದು ಕರೆದಿದೆ.[72] ವಿಜಯನಗರದ ಅರಸ ರಲ್ಲಿ, ಕರ್ಣಾಟಕ ವಿದ್ಯಾವಿಳಾಸನೂ ಉತ್ತರ ದಕ್ಷಿಣ ಪೂರ್ವ ಪಶ್ಚಿಮ ಸಮುದ್ರಾಧಿ ಪತಿಯೂ ಆದ ಶ್ರೀ ಹರಿಹರರಾಯನು 'ಆರಗ ಗುತ್ತಿ ಬಾರಕೂರ ಮಂಗಳೂರು ಪಶ್ಚಿಮ ಸಮುದ್ರಾಂತವಾಗಿ ಕರ್ನಾಟಕ ರಾಜ್ಯವನ್ನು ಅದೇ ಪಾಲಿಸಿಯಿಹ ಸಮಯದಲ್ಲಿ' ಎಂದಿರುವುದರಿಂದ ಆ ಕಾಲದ ಕರ್ಣಾಟಕ ರಾಜ್ಯದ ಸೀಮಾವ್ಯಾಪ್ತಿಯನ್ನು ಗುರುತಿಸಿ ದಂತಾಗಿದೆ.[73] ಸಂಗಮನೆಂಬದೆ ೂರೆಯಿಂದಾಗಿ 'ಕರ್ಣಾಟವೇಶಶ್ರೀ' 'ಸ್ಥಿರತಾಟಂಕವತೀ' ಆದಳೆಂದೂ[74] ವಿರೂಪಾಕ್ಷನೆಂಬ ದೊರೆ 'ಕರ್ನಾಟೇಶ್ವರರಾಯ ಕುಂಜರ'ನೆಂದೂ ಮುಂತಾಗಿ[75] ವಿಜಯನಗರದ ಅರಸರೊಬ್ಬೊಬ್ಬರೂ ತಮ್ಮ ಪ್ರಶಸ್ತಿಯ ಮಾತುಗಳಲ್ಲಿ ತಾವು ಕರ್ಣಾಟಕದ ಅರಸರೆಂಬುದನ್ನು ಆಲಂಕಾರಿಕವಾಗಿ ಹೇಳಿಕೊಂಡಿರುವುದು ಕಾಣು ತ್ತದೆ. ಕೆಳದಿ ವೆಂಕಟನೆಂಬ ದೊರೆಗೆ 'ಕರ್ಣಾಟಕ ಧರಣೀ ವಜ್ರಕವಾಟಾಯಿತ ವಿಕ್ರಮಃ' ಎಂಬ ಬಿರುದಿನುಗ್ಗಡಿಕೆಯಿದೆ. ಯದುಗಿರಿಯ ತಮ್ಮ ಕುಲದೈವತವನ್ನು ನೋಡಲೆಂದು

ಬಂದ ಯದುವಂಶದ ಕೆಲವರು ರಾಜಪುತ್ರರು ಕರ್ಣಾಟಕದೇಶಕ್ಕೆ ಬಂದರೆಂದು ಹೇಳುವ ಉಕ್ತಿ ಅವರ ಶಾಸನಗಳಲ್ಲಿ ಆಗಾಗ್ಗೆ 'ತಸ್ಯಾಂ ಕೃತಾವತಾರಾಃ ಕತಿ ಚ ನ ಕರ್ನಾಟ ದೇಶ ಮಾಜಗ್ಮುಃ' ಎಂಬುದಾಗಿ ಕಾಣಿಸಿಕೊಳ್ಳುತ್ತಿರುತ್ತದೆ. ಮೊದಲ ದೊರೆ ರಾಜ ಒಡೆಯ ನನ್ನು 'ಕರ್ನಾಟ ರಾಜ್ಯಾಭಿಷವಣ ಪರಿತೃಪ್ತ' ಎಂದಿದೆ. ಹಾಗೂ ಆ ಮುಂದಿನ ಅರಸ ರನ್ನು 'ಕರ್ಣಾಟಕ ರತ್ನ ಸಿಂಹಾಸನಾಧೀಶ್ವರ'ರೆಂದೂ ಅವರ ಆಳಿಕೆಯನ್ನು 'ಕರ್ಣಾಟಕ ಜನಪದ ಸಂಪದಧಿಷ್ಠಾನ ಭೂತ ಶ್ರೀಮನ್ಮಹೀಶೂರ ಸಂಸ್ಥಾನ' ಎಂದೂ ಕರೆದಿದೆ. ನಂದಿಬೆಟ್ಟವನ್ನು ಕರ್ಣಾಟಕ ದೇಶದ ಪೂರ್ವ ದಿಕ್ಕಿಗಿದೆ ಎಂದು ಒಂದು ಶಾಸನದಲ್ಲಿ ಹೇಳಿರುವುದನ್ನು ನೋಡಿದರೆ, ಆ ಶಾಸನಕಾಲವಾದ ಸು. ೧೬೮೦ರಲ್ಲಿ ಮೈಸೂರು ಕರ್ಣಾಟಕವೆಂದು ವ್ಯವಹರಿಸಲ್ಪಡುತ್ತಿತ್ತು ಎಂದು ತಿಳಿಯುವುದಕ್ಕೆ ಅವಕಾಶವಾಗು ತ್ತದೆ.

'ಕರ್ಣಾಟಕ' ಎಂಬ ಪದದ ಜತೆಯಲ್ಲಿಯೇ, ಅದರ ಸದೃಶರೂಪವಾದ 'ಕನ್ನಡ'ವನ್ನೂ ಗಮನಿಸಬಹುದು. 'ಕನ್ನಡ' ಎಂಬುದು ದೇಶವಾಚಕವಾಗಿ ಕೂಡ ಆ ಭಾಷೆಯ ಸಾಹಿತ್ಯ ಗ್ರಂಥಗಳಲ್ಲಿ ಆಗಾಗ್ಗೆ ಬಳಕೆಯಾಗಿರುವುದುಂಟು. ಕವಿರಾಜಮಾರ್ಗದ (ಸು. ೮೫೦)

ಕಾವೇರಿಯಿಂದಮಾ ಗೋ
ದಾವರಿವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದವಿಷಯವಿಶೇಷಂ ॥ (೧-೩೬)

ಎಂಬ ಪದ್ಯದಲ್ಲಿ[81] ಕನ್ನಡ ನಾಡಿನ ಸೀಮೆಯನ್ನು ಸ್ಥೂಲವಾಗಿ ಸೂಚಿಸಿದೆ. ಪ್ರಸಿದ್ಧ ವಾದ ಕನ್ನಡನಾಡಿನಲ್ಲಿ (ಕನ್ನಡದೊಳ್) ಕಾವೇರಿಯಿಂದ ಗೋದಾವರಿವರೆಗೆ ಇರು ವಂತಹ ನಾಡು ಗೌರವಾರ್ಹವಾದ ಜನಪದ, ವಸುಧಾವಲಯದಲ್ಲಿ ಸೇರಿದ ನಿರ್ಮಲ ವಾದ ಪ್ರಾಂತವಿಶೇಷ—ಎಂಬುದಾಗಿ (೧-೩೬) ಅದರ ತಾತ್ಪರ್ಯ. ಈ ಅಭಿಪ್ರಾಯ ವನ್ನೇ ಈಚೆಗೆ ನಂಜುಂಡ ಕವಿ (ಸು. ೧೫೨೫) ಕೂಡ 'ರಾಮನಾಥ ಚರಿತ' ಎಂಬ ತನ್ನ ಗ್ರಂಥದಲ್ಲಿ—

ಕಾವೇರಿಯಿಂ ಗೋದಾವರಿವರೆಗಮಿ
ರ್ದಾ ವಸುಧಾತಳವಳಯ
ಭಾವಿಸೆ ಕರ್ಣಾಟಕ ಜನಪದವದ
ನಾವನೊಲಿದು ಬಣ್ಣಿಸುವವನು ॥

ಎಂಬುದಾಗಿ ಹೇಳಿದ ಮಾತಿನಲ್ಲಿ[82] ಪುನರುಚ್ಚರಿಸಿದ್ದಾನೆ. ಗೋದಾವರಿ ಎಂಬ ಹೆಸರಿಗೆ ಪ್ರತಿಯಾಗಿ ಅದರ ಶಾಖೆಯೇ ಆದ ಮಾಂಜ್ರಾ ನದಿಯನ್ನು ಹೇಳಿಕೊಂಡರೆ ಇವತ್ತಿಗೂ ಒಪ್ಪುತ್ತದೆ. ಕವಿರಾಜಮಾರ್ಗಕಾರನು ಮುಂದುವರಿದು

ಅದಱೊಳಗಂ ಕಿಸುವೊಳಲಾ
ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ

ಪದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (೧-೩೭)

ಎಂದು[83], ಕನ್ನಡನಾಡಿನ ಪ್ರಮುಖಕೇಂದ್ರಗಳನ್ನು ಗುರುತಿಸಿದ್ದಾನೆ. ಕಾವೇರಿಯಿಂದ ಗೋದಾವರಿವರೆಗಿನ ಕನ್ನಡ ನಾಡಿನಲ್ಲಿಯೂ ಕಿಸುವೊಳಲು (ಬಿಜಾಪುರ ಜಿಲ್ಲೆಯ ಈಗಿನ ಪಟ್ಟದಕಲ್ಲು), ಕೊಪಣನಗರ (ಗದುಗು ಬಳ್ಳಾರಿ ನಡುವಣ ಕೊಪ್ಪಳ), ಪುಲಿಗೆರೆ (ಧಾರವಾಡ ಜಿಲ್ಲೆಯ ಈಗಿನ ಲಕ್ಷ್ಮೇಶ್ವರ), ಮತ್ತು ಒಂಕುಂದ (ಬೆಳಗಾವಿ ಜಿಲ್ಲೆಯಲ್ಲಿ ಈಗಿನ ಒಕ್ಕುಂದ) ಈ ನಾಲ್ಕು ನಗರಗಳ ನಡುವಣ ನಾಡೇ ಕನ್ನಡ ನಾಡಿನ ತಿರುಳು ಎಂದು ಇಲ್ಲಿಯ ಆಶಯ.

ಹೀಗೆಯೇ 'ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು' ಎಂಬ 'ಕಬ್ಬಿಗರ ಕಾವ'ದ, 'ಕನ್ನಡ ವಂಗ ಚೌಟ ಮಲೆಯಾಳ ದೇಶಂಗಳೊಪ್ಪಿದುವು' ಎಂಬ ಮೋಹನತರಂಗಿಣಿಯ (೨-೧೪), 'ಇಕ್ಕೇರಿಯ ಸೆಳೆದಾಗ ತುರುಕರ ಪಡೆ ನಡೆದುದು ಕನ್ನಡಕೆ' ಎಂಬ ಕಂಠೀರವನರಸರಾಜವಿಜಯದ (೧೧ ಸೂಚನೆ) ಹೇಳಿಕೆಗಳೂ 'ಕನ್ನಡಮೇ ಕರ್ಣಾಟ ನಾಮಂ' (ಕರ್ಣಾಟಕ ನಿಘಂಟು, ೪೧), 'ಕನ್ನಡವೆ ಕರ್ಣಾಟಕಂ' (ಕರ್ಣಾಟಕ ಶಬ್ದರತ್ನಾಕರ, ೨೧) ಎಂಬ ನಿಘಂಟುಗಳ ಅರ್ಥಗಳೂ 'ಕನ್ನಡ' ಪದ ದೇಶವಾಚಕವಾಗಿಯೂ ಇದ್ದುದನ್ನು ಹೇಳುತ್ತದೆ.

ಕುಂತಲ : ಕರ್ಣಾಟಕಕ್ಕೆ ದ್ರಾವಿಡ ಮೂಲದ ನಿಷ್ಪತ್ತಿಯನ್ನು ಹೇಳುವ ಹಾಗೆಯೇ 'ಕುಂತಲ' ಶಬ್ದವೂ ಅಂಥ ಒಂದು ಮೂಲದಿಂದ ಸಂಸ್ಕೃತೀಕರಣಗೊಂಡ ರೂಪವಾಗಿರಬಹುದು. ಮತ್ಸ್ಯ (೧೧೪-೩೪,೩೬) ಮಾರ್ಕಂಡೇಯ (೫೪-೩೩-೪೯) ಬ್ರಹ್ಮಾಂಡ (೧೬-೪೧) ಪದ್ಮ (೧-೬-೫೪) ಮೊದಲಾದ ಪುರಾಣಗಳಲ್ಲಿ ಇದರ ಉಲ್ಲೇಖವಿದೆ. ಕುಂತಲ, ಕರ್ಣಾಟ, ಬನವಾಸಿ, ಮಾಹಿಷಕ (ಮಹಿಷ ವಿಷಯ) ಇತ್ಯಾದಿ ಶಬ್ದಗಳು ಮೂಲತಃ ಬೇರೆಬೇರೆ ಭೌಗೋಳಿಕ ಘಟಕಗಳಾಗಿದ್ದು, ಒಂದೊಂದೂ ಇನ್ನೊಂದರ ಮಗ್ಗುಲಿಗೆ ಸೇರಿಕೊಂಡಿದ್ದಿರುವುದೂ ಒಂದು ಇನ್ನೊಂದರ ಭಾಗವಾಗಿದ್ದಿರುವುದೂ ಸಂಭವನೀಯವಾಗಿದೆ. ಚಾಳುಕ್ಯ ಮತ್ತು ರಾಷ್ಟ್ರಕೂಟರ ಪ್ರಾಬಲ್ಯ ಕಾಲದಲ್ಲಿ ಕರ್ಣಾಟ ಮತ್ತು ಕುಂತಲಗಳು ಪಶ್ಚಿಮ ಮತ್ತು ದಕ್ಷಿಣ ದಖನ್ನಿನ ಬಹುಭಾಗಕ್ಕೆ ವ್ಯಾಪಿಸಿತ್ತು. ಕಲಿಂಗತ್ತು-ಪರಣಿಯಲ್ಲಿ ಚಾಳುಕ್ಯರು 'ಕುಂತಲರ್' ಎಂದು ವರ್ಣಿಸಲ್ಪಟ್ಟಿದ್ದಾರೆ. ಬಾದಾಮಿ ಚಾಳುಕ್ಯರ ಕಾಲದಲ್ಲಿ ಕನ್ನಡ ಸೀಮೆ ಕರ್ಣಾಟ, ಕುಂತಲ, ಲಾಟ, ಕರಹಾಟ, ವನವಾಸ, ತುಳುವ, ಆಳ್ವಖೇಡ, ಗೋಮಾಂತಕ, ಕೊಂಕಣ, ಪುನ್ನಾಟ ಮತ್ತು ವೆಂಗಿಮಂಡಲ ಎಂದು ಬೇರೆ ಬೇರೆ ವಿಷಯಗಳಾಗಿ ವಿಭಜನೆಗೊಂಡಿದ್ದ ಪ್ರದೇಶ 'ಕರ್ಣಾಟ' ಎಂಬ ಒಂದು ಹೆಸರಿನ ಕೆಳಗೆ ಬಂದುವೆಂದೂ ಇದಕ್ಕೆ ಇಮ್ಮಡಿ ಪುಲಿಕೇಶಿಯ ಸಾಹಸೋದ್ಯಮಗಳು ಬಹುಮಟ್ಟಿಗೆ ಕಾರಣವೆಂದೂ ತಿಳಿಯುತ್ತದೆ.[84] ಇಮ್ಮಡಿ ಹರಿಹರನ ಶಾಸನವೊಂದರಲ್ಲಿ (ಕ್ರಿ.ಶ. ೧೩೮೫) ವಿಜಯನಗರ ಕರ್ಣಾಟಕ ಸೀಮೆಯ ಕುಂತಲ ವಿಷಯಕ್ಕೆ ಸೇರಿದ್ದೆಂದು ಹೇಳಿದೆ.

ಕುಂತಲ-ಕರ್ಣಾಟಕಗಳನ್ನು ಪರ್ಯಾಯಪದಗಳಾಗಿ ಬಳಸಿರುವುದು ಬಿಲ್ಹಣನ ವಿಕ್ರಮಾಂಕದೇವಚರಿತದಲ್ಲಿ ಕಾಣುತ್ತದೆ. ೬ನೆಯ ವಿಕ್ರಮಾದಿತ್ಯನು 'ಕುಂತಲೇಂದು' ಎಂದೂ 'ಕರ್ಣಾಟೇಂದು' ಎಂದೂ ಕರೆಯಲ್ಪಟ್ಟಿದ್ದಾನೆ ಇಲ್ಲಿ (ix–೪೧, ೪೨). ವೈಜಯಂತೀಪುರ (ಎಂದರೆ ಬನವಾಸಿ) 'ಕರ್ಣಾಟದೇಶದ ತಿಲಕ' ಎಂಬುದಾಗಿ ಶಾಂತಿ ವರ್ಮನ ಬೀರೂರು ಶಾಸನದಲ್ಲಿ ಹೇಳಿದೆ (ಎ.ಕ. vi, ಪು. ೯೧). ಆದ್ದರಿಂದ ಕುಂತಲ ಎಂಬ ಹೆಸರು ಸೂಚಿಸುತ್ತಿದ್ದ ಅಥವಾ ಕುಂತಲ ಒಂದು ಭಾಗವಾಗಿದ್ದ ನಾಡನ್ನು ಸೂಚಿಸುತ್ತಿದ್ದ ಪ್ರದೇಶವೇ ಕರ್ಣಾಟ ಎಂಬುದಾಗಿ ಅಭಿಪ್ರಾಯವಿದೆ. ಸಾಂಪ್ರದಾಯಿಕ ದೇಶ ವಾಚಕ ಪಟ್ಟಿಯಲ್ಲಿ ಒಮ್ಮೊಮ್ಮೆ ಅವನ್ನು ಬೇರೆಯಾಗಿ ಹೇಳಿರುವುದೂ ಉಂಟು (ಉದಾ. ವಿವೇಕಚಿಂತಾಮಣಿ ೪–೪೦೪ ; ಶಿವತತ್ತ್ವರತ್ನಾಕರ ೪–೨–೫–೧೧ ಚೆನ್ನಬಸವಪುರಾಣ ೧–೬–೪೯–೫೧ ಇತ್ಯಾದಿ).

ಕುಂತಲ ಯಾವ ಪ್ರದೇಶಗಳನ್ನು ಒಳಕೊಂಡಿದ್ದ ಪ್ರದೇಶವಾಗಿತ್ತು? ಕೆಲವು ಶಾಸನಗಳ ಆಧಾರದಂತೆ ಬೊಂಬಾಯಿ ಪ್ರಾಂತದ ತೀರ ದಕ್ಷಿಣಕ್ಕಿರುವ ಜಿಲ್ಲೆಗಳು ಮತ್ತು ಮೈಸೂರಿನ ಉತ್ತರಭಾಗದ ಪ್ರದೇಶಗಳು ಕೂಡಿದ್ದವೆಂದು ತೋರುತ್ತದೆ. ಕೆಲವು ಶಾಸನಗಳಲ್ಲಿ ಬನವಾಸಿಯ ಸುತ್ತಿನಲ್ಲಿರುವ ಜಿಲ್ಲೆ ಎಂದಾಗುತ್ತದೆ. ಪುರಾಣಗಳು ಬೃಹತ್ಸಂಹಿತೆ ಮೊದಲಾದ ಕಡೆಗಳಲ್ಲಿ ಕುಂತಲ ಬನವಾಸಿಗಳನ್ನು ಬೇರ್ಪಡಿಸಿ ಹೇಳಿರುವುದೂ ಉಂಟು. ವಿಶಾಲವಾದ ಅರ್ಥದಲ್ಲಿ ಕುಂತಲ ಬಹುಮಟ್ಟಿಗೆ ಬೊಂಬಾಯಿ, ಮದ್ರಾಸು, ಮೈಸೂರು (ಪ್ರಾಯಃ ತೀರಪ್ರದೇಶ ಬಿಟ್ಟು) ಇವುಗಳ ಕನ್ನಡ ಮಾತನ್ನಾಡುವ ಪ್ರದೇಶವನ್ನು ಹೇಳುವುದೆಂದು ತೋರುತ್ತದೆ. ಈ ಕುಂತಲ ಸೀಮೆಯನ್ನು ಶಾಸನಗಳ ಆಧಾರದಿಂದ ಕೃಷ್ಣವರ್ಣ ನದಿ ತೊಳೆಯುವ ಬಳ್ಳಾರಿ ಜಿಲ್ಲೆಯ ಕುರುಗೋಡು, ಮೈಸೂರಿನ ಗಂಗವಾಡಿ, ಧಾರವಾಡ ಜಿಲ್ಲೆಯ ನರಗುಂದ, ಕೊಲ್ಹಾಪುರದ ತರಗಲ್, ಸಾಂಗ್ಲಿಯ ತೇರದಾಳ, ಮೈಸೂರಿಗೆ ವಾಯುವ್ಯ ದಿಕ್ಕಿಗಿರುವ ನುಬತ್ತೂರ್ (ಕುಂತಲನಗರ) ಇವನ್ನು ಒಳಕೊಂಡಿದ್ದ ಪ್ರದೇಶವೆಂದು ಹೇಳಲವಕಾಶ ವಿದೆ. ಕ್ರಿ.ಶ. ಸು. ೪ನೆಯ ಶತಮಾನದ ಮಧ್ಯಭಾಗದಿಂದ ೬ನೆಯ ಶತಮಾನದ ಮಧ್ಯ ಭಾಗದವರೆಗೆ ಕುಂತಲ ಅಥವಾ ಕರ್ಣಾಟಕ ಕದಂಬರ ರಾಜಧಾನಿಯಾಗಿತ್ತು.[86]

ಮಹಿಷಮಂಡಲ : ಸಿಲೋನಿಯ ಬೌದ್ಧ 'ಮಹಾವಂಶ' ಗ್ರಂಥದ ಮೂಲಕವಾಗಿ, ಅಶೋಕ ಒಂದು ಬೌದ್ಧಧರ್ಮ ಪ್ರಸಾರಕ ತಂಡವನ್ನು ಬನವಾಸಿಗೂ ಇನ್ನೊಂದನ್ನು ಮಹಿಷಮಂಡಲಕ್ಕೂ ಕಳಿಸಿದನೆಂದು ತಿಳಿಯುವುದು. ಡಾ. ಫ್ಲೀಟ್ ಈ ಮಹಿಷಮಂಡಲವೆಂಬುದು ಇಂದಿನ ಮೈಸೂರಿಗೆ ಅನ್ವಯಿಸತಕ್ಕದ್ದಲ್ಲ, ನರ್ಮದಾ ನದೀ ತೀರದ ಮೇಲಿನ ಒಂದು ಪ್ರಾಂತಕ್ಕೆ ಅನ್ವಯಿಸುತ್ತದೆ ಎಂದು ಭಾವಿಸಿದ್ದಾರೆ. ಮಹಿಷರ ಸೀಮೆಯೇ ಮಹಿಷಮಂಡಲ. ಮೊಗ್ಗಲಿಪುತ್ರ ತಿಸ್ಸನು ಅಶೋಕನ ಕಾಲದಲ್ಲಿ ಒಂದು ಬೌದ್ಧ ಧರ್ಮ ಪ್ರಸಾರಕ ತಂಡವನ್ನು ಈ ದೇಶಕ್ಕೆ ಕಳಿಸಿದನು. ಇದರ ರಾಜಧಾನಿ ಮಾಹಿಷ್ಮತಿ. ಈಗ ಮಾಂಧಾತ ಎಂಬುದಾಗಿ ಕರೆಯಲ್ಪಡುವ ಈ ಮಾಹಿಷ್ಮತಿ, ನರ್ಮ

ದೆಯ ದ್ವೀಪದ ಮೇಲೆ ಇರುವಂಥದು. ಫ್ಲೀಟರ ಈ ಅಭಿಪ್ರಾಯವನ್ನು[86] ರೈಸ್ ಅವರು ಒಪ್ಪದೆ, ಇಂದಿನ ಮೈಸೂರಿಗೆ ದಕ್ಷಿಣದ ಸೀಮೆಯೇ ಮಹಿಷಮಂಡಲ ಎಂದಿದ್ದಾರೆ. ಮೈಸೂರು ಮುಖ್ಯನಗರವಾಗಿದ್ದ ಮೈಸೂರು ದೇಶವೇ ಆ ಪ್ರದೇಶವೆಂದು ವಾದಿಸಿ, ಕ್ರಿ.ಪೂ. ೨ನೆಯ ಶತಮಾನದ ತಮಿಳು ಸಾಹಿತ್ಯದ ಗ್ರಂಥದಲ್ಲಿ 'ಎರುಮೈನಾಡು', 'ಎರುಮೈಯೂರನ್' ಎಂಬುದಾಗಿ ಬಂದಿರುವ ಶಬ್ದಗಳು ಅದರ ಪರ್ಯಾಯವಾಗಿ ಹೇಳಿರುವಂಥವು ಎಂದು ಗ್ರಹಿಸಿದ್ದಾರೆ.[87] 'ಅಗನಾನೂರು' ಎಂಬ ತಮಿಳು ಸಂಗ್ರಹ ಗ್ರಂಥದಲ್ಲಿ ೨ನೆಯ ಶತಮಾನದ ಮಾಮೂಲನಾರ್ ಕವಿ ರಚಿಸಿದ ೧೧೫ನೆಯ ಪದ್ಯದಲ್ಲಿ 'ಎರುಮೈನಾಡು' ಪದವೂ ಇಲ್ಲಿಯೇ ಪ್ರಾಯಃ ನಕ್ಕಿರಾರ್ ಕೃತವಾದ ೩೬ನೆಯ ಪದ್ಯದಲ್ಲಿ ಪಾಂಡ್ಯದೊರೆ ನೆಡುಂಜೆಳಿಯನು ಸೋಲಿಸಿದ ೭ ಜನ ಮುಖ್ಯರಲ್ಲಿ 'ಎರುಮೈಯೂರನ್' ಎಂಬವನ ಹೆಸರೂ ಬಂದಿವೆ. ಇದೇ ಕವಿಯ ೨೫೩ನೆಯ ಪದ್ಯದಲ್ಲಿ ಈತ ಬಡಗಂಗೆ ಸಂಬಂಧಿಸಿದವನೆಂದಿದೆ.

ಆರ್. ನರಸಿಂಹಾಚಾರ್ಯರು ಕೂಡ ಶಾಸನ ಮತ್ತು ಸಾಹಿತ್ಯಗಳಲ್ಲಿ ಮಹಿಷರಾಷ್ಟ್ರ, ಮಹಿಷನಾಡು ಎಂದು ಬಂದಿರುವುದು ಮೈಸೂರು ಸೀಮೆಯನ್ನು ಹೇಳುವ ಅರ್ಥದಲ್ಲಿಯೇ ಎಂದಿದ್ದಾರೆ. ಕೆಲವರು ಪಾಣಿನಿಯ (ಕ್ರಿ.ಪೂ. ೭೦೦) ವ್ಯಾಖ್ಯಾನಕಾರನಾದ ಕಾತ್ಯಾಯನ (ಕ್ರಿ.ಪೂ. ೪೦೦) ಹೇಳುವ ಮಾಹಿಷ್ಮತ್ ಮೈಸೂರು ದೇಶವನ್ನು ಕುರಿತಿರಬಹುದು, ಏಕೆಂದರೆ ಆ ಹೆಸರು ಬರಲು ಅದು ಮಹಿಷಗಳು ತುಂಬಿರುವ ನಾಡು ಎಂಬುದೇ ಕಾರಣ ಎಂದು ಆತ ಹೇಳಿದ್ದಾನೆ—ಎಂದು ಭಾವಿಸಿದ್ದಾರೆ.[88] ಮತ್ಸ್ಯ, ಬ್ರಹ್ಮಾಂಡ, ಮಾರ್ಕಂಡೇಯ ಮುಂತಾದ ಪುರಾಣಗಳ ಮಾಹಿಷಿಕ (೧೧೪-೪೬; ೧೬-೫೫-೫೮; ೫೪-೪೭) ಮತ್ತು ಈ ಮಹಿಷಮಂಡಲ ಅಭಿನ್ನವೇ ಹೇಗೆಂದು ತಿಳಿಯದು.

## ಕನ್ನಡ ದೊರೆಗಳ ಆಳ್ವಿಕೆಯ ಕನ್ನಡ ನಾಡು

ಕನ್ನಡ ನಾಡಿನಲ್ಲಿ ಜನಜೀವನ ಕ್ರಿ.ಪೂ. ಕಾಲದ ಶಿಲಾ ಮತ್ತು ಲೋಹಯುಗಗಳ ಕಾಲದಿಂದ ವಿಕಾಸಗೊಳ್ಳುತ್ತ ಬಂದಿರುವುದು ತುಮಕೂರು, ಮೈಸೂರು, ಹಾಸನ, ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗ, ಬಿಜಾಪುರ, ರಾಯಚೂರು, ಬಳ್ಳಾರಿ, ಬೆಳಗಾವಿ, ಬೆಂಗಳೂರು, ಧಾರವಾಡ ಮುಂತಾದ ಜಿಲ್ಲೆಗಳಿಗೆ ಒಳಪಟ್ಟ ಅನೇಕ ಪ್ರದೇಶಗಳಲ್ಲಿ ನಡೆದಿರುವ ಕೆಲವು ಉತ್ಖನನಗಳ ಮೂಲಕವಾಗಿ ತಿಳಿದುಬಂದಿದೆ. ಆ ಬಳಿಕ ಚರಿತ್ರಕಾಲದಲ್ಲಿ ಕ್ರಿ.ಪೂ. ೪ನೆಯ ಶತಮಾನದಿಂದ ಮುಂದಕ್ಕೆ ಮಗಧಸಾಮ್ರಾಜ್ಯದ ನಂದರು ಮೌರ್ಯರು ಶಾತವಾಹನರು ಚುಟುಗಳು ಬಾಣರು ಆಳುಪರು ಸೇಂದ್ರಕರು ನಳರು ಪುನ್ನಾಟರು ಪಲ್ಲವರು ಕದಂಬರು ನೊಳಂಬರು ಗಂಗರು ಬಾದಾಮಿ ಚಾಳುಕ್ಯರು ರಾಷ್ಟ್ರಕೂಟರು ಕಲ್ಯಾಣ ಚಾಳುಕ್ಯರು ಯಾದವರು ಕಳಚುರಿಯರು ಚೋಳರು ಹೊಯ್ಸಳರು ಶಿಲಾಹಾರರು ರಟ್ಟರು ಹಾನಗಲ್ಲು ಮತ್ತು ಗೋವೆ ಕದಂಬರು ಸಿಂದರು

ಗುತ್ತರು ಸೇನವಾರರು ಸಾಂತರರು ಸಾಳುವರು ಚಂಗಾಳ್ವರು ಕೊಂಗಾಳ್ವರು ಪಾಂಡ್ಯರು ವಿಜಯನಗರದವರು ಕೆಳದಿ ಇಕ್ಕೇರಿ ಮೈಸೂರರಸರು ಇನ್ನಿತರ ಮನೆತನಗಳವರು ರಾಜಕೀಯ ಮೇಲಾಟಗಳಲ್ಲಿ ಒಬ್ಬರು ಇನ್ನೊಬ್ಬರನ್ನು ಹತ್ತಿಕ್ಕಿ ಅಲ್ಪಬಲರಾಗಿದ್ದವರು ಪ್ರಬಲಿಸುತ್ತ, ಪ್ರಬಲರು ಅಲ್ಪಬಲರಾಗಿ ಕ್ಷೀಣಿಸುತ್ತ, ಕನ್ನಡ ನಾಡಿನ ವಿವಿಧ ಸೀಮೆಗಳನ್ನು ಕಾಲದಿಂದ ಕಾಲಕ್ಕೆ ತಮ್ಮ ಅಂಕೆಗೆ ಒಳಪಡಿಸಿಕೊಳ್ಳುತ್ತ ಆಗಿಹೋದುದು ಈ ನಾಡಿನ ಗಣ್ಯ ಗತ ಇತಿಹಾಸವಾಗಿದೆ. ಚೋಳರು ಪಲ್ಲವರು ಮಹಮ್ಮದೀಯರು ಮುಂತಾದ ಪರಕೀಯ ಜನರ ಸೈನ್ಯಕೀಯ ಆಘಾತಗಳಿಗೆ ಸಿಕ್ಕುತ್ತ ಅವರಿಗೆ ಪ್ರತ್ಯಾಘಾತಗಳನ್ನು ದಿಟ್ಟವಾಗಿ ಕೊಡುತ್ತ ತಮ್ಮ ತಲೆಮೆಯನ್ನು ಮೆರೆದ ಕೀರ್ತಿ ಕನ್ನಡಿಗರ ನಿರಂತರವಾದ ಪರಿಶ್ರಮ ಬಲಿದಾನಗಳ ಫಲ. ಸಾಮಂತಪದದಲ್ಲಿದ್ದವರು ಸಾರ್ವಭೌಮ ಪದಕ್ಕೆ ಏರಿ ಕನ್ನಡ ತಾಯಿಯನ್ನು ಸಾಮ್ರಾಜ್ಯಲಕ್ಷ್ಮಿಯನ್ನಾಗಿ ಮೆರೆಸಿದ ಸತ್ತ್ವಶಾಲಿ ಜನತೆ ಕನ್ನಡ ಜನತೆ.

ಅಶೋಕನ ರಾಜ್ಯದ ದಕ್ಷಿಣದ ಮೇರೆಯಲ್ಲಿ ಮಸ್ಕಿ ಕೊಪ್ಪಳ ಬ್ರಹ್ಮಗಿರಿ ಸಿದ್ಧಾಪುರ ಮೊದಲಾದವನ್ನು ಒಳಕೊಂಡ ಉತ್ತರ ಕರ್ಣಾಟಕದ ಬಹುಭಾಗ ಸೇರಿತ್ತು. ಮಸ್ಕಿಯ ಬಳಿಯ ಸುವರ್ಣಗಿರಿ, ಬ್ರಹ್ಮಗಿರಿಯ ಹತ್ತಿರದ ಇಸಿಲ ಪ್ರಾದೇಶಿಕ ಮುಖ್ಯ ನಗರಗಳಾಗಿದ್ದವು. ಶ್ರೀಪರ್ವತ ಪ್ರಾಂತದವರೆನ್ನಲಾದ ಸಾತವಾಹನರು ಕರ್ಣಾಟಕದ ಉತ್ತರಭಾಗದಲ್ಲಿ ಅಚ್ಚಕನ್ನಡ ಕೇಂದ್ರವಾದ ಪೈಠಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಚುಟುಗಳು ಬನವಾಸಿಯಲ್ಲಿ ತಲೆಯೆತ್ತಿದರು. ಕರ್ಣಾಟಕದ ಪೂರ್ವಭಾಗದಲ್ಲಿ, ಕೋಲಾರ ಕಡಪ ಮತ್ತು ಉತ್ತರ ಆರ್ಕಾಟು ಜಿಲ್ಲೆಗಳ ಸೀಮೆಯಲ್ಲಿದ್ದವರು ಬಾಣರು. ಆಳ್ವಖೇಡ ೬೦೦೦ ನಾಡನ್ನು ಆಳುತ್ತಿದ್ದ ಆಳುಪರು ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳ, ಕೊಂಕಣ ಮತ್ತು ಪಶ್ಚಿಮಘಟ್ಟಗಳ ಕೆಲಪ್ರಾಂತಗಳ ಮೇಲೆ ಬಹುಕಾಲ ರಾಜ್ಯವಾಳಿದರು. ಬನವಾಸಿ ಪ್ರಾಂತಕ್ಕೆ ಸೇರಿದ ನಾಗರಖಂಡ ಎಂದರೆ ಇಂದಿನ ಶಿವಮೊಗ್ಗ ಜಿಲ್ಲೆಯ ಕೆಲವು ಭಾಗಗಳು ಸೇಂದ್ರಕರದಾದ ಸೇಂದ್ರಕ ವಿಷಯವೆನಿಸಿತ್ತು. ನಳರದಾದ ನಳವಾಡ ವಿಷಯ, ಈಗಿನ ಬಳ್ಳಾರಿ ಮತ್ತು ಕರ್ನೂಲು ಜಿಲ್ಲೆಗಳು. ಮೈಸೂರಿಗೆ ದಕ್ಷಿಣದ ಈಗಿನ ಹೆಗ್ಗಡದೇವನಕೋಟೆಯ ಸೀಮೆ ಪುನ್ನಾಟರ ಆಳಿಕೆಯ ಪುನ್ನಾಡು ಆಗಿತ್ತು.

ಕನ್ನಡಿಗರ ಮೊದಲ ಪ್ರಸಿದ್ಧ ರಾಜವಂಶವಾದ ಕದಂಬವಂಶದ ಮೂಲನಿವಾಸ ಶಿವಮೊಗ್ಗ ಜಿಲ್ಲೆಯ ತಾಳಗುಂದ. ಆದಿ ಕದಂಬರು ಮಯೂರಶರ್ಮನ ಕಾಲದಿಂದ ಬನವಾಸಿಯಲ್ಲಿ ನಿಂತು ವೈಜಯಂತೀ ಪುರವರಾಧೀಶ್ವರರೆನಿಸಿ ಕನ್ನಡ ನಾಡಿನ ವಾಯುವ್ಯ ಪ್ರಾಂತವನ್ನಾಳಿದರು. ಈಚಿನ ಶಾಖೆಗಳೂ ಸೇರಿದಂತೆ ಅವರ ರಾಜ್ಯ ಈಗಿನ ಬೆಳಗಾವಿ, ಉತ್ತರ ಕನ್ನಡ, ಶಿವಮೊಗ್ಗ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಕೊಂಡಿದ್ದು ಕೇಂದ್ರಗಳು ಹಲಸಿ, ಬನವಾಸಿ ಮತ್ತು ಉಚ್ಚಂಗಿದುರ್ಗಗಳಾಗಿದ್ದವು. ಗಂಗರು ಗಂಗವಾಡಿ ೯೬,೦೦೦ ಸೀಮೆಯ ಒಡೆಯರು. ಮೊದಲು ಪಶ್ಚಿಮದಲ್ಲಿ ಕದಂಬರ ಮತ್ತು ಪೂರ್ವ

ದಲ್ಲಿ ಪಲ್ಲವರ ರಾಜ್ಯಗಳ ನಡುವೆ ಅನಂತಪುರ ಮತ್ತು ಕಡಪ ಜಿಲ್ಲೆಗಳನ್ನು ಒಳಕೊಂಡಿದ್ದ ಕಾಲದಲ್ಲಿ, ರಾಜ್ಯದ ರಾಜಧಾನಿ ಕೋಲಾರ (ಕುವಲಾಲ ಪುರ)ವಾಗಿತ್ತು. ಅನಂತರದಲ್ಲಿ ತುಮಕೂರು ಬೆಂಗಳೂರು ಕೊಡಗು ಮೈಸೂರು ಪ್ರದೇಶಗಳೂ ಕೊಯಮುತ್ತೂರು ಮತ್ತು ಸೇಲಂ ಜಿಲ್ಲೆಗಳೂ ಅವರ ವಶಕ್ಕೆ ಬಂದಮೇಲೆ. ಸುಮಾರು ೬ನೆಯ ಶತಮಾನದ ಆದಿಭಾಗದಲ್ಲಿ ತಲಕಾಡು ಕೇಂದ್ರವಾಯಿತು. ೭ನೆಯ ಶತಮಾನದಲ್ಲಿ ಚೆನ್ನಪಟ್ಟಣದ ಬಳಿಯ ಮಾನ್ಯಕುಂಡ, ಬಳಿಕ ನೆಲಮಂಗಲ ತಾಲ್ಲೂಕಿನ ಮಾನ್ಯಪುರ (ಮನ್ನೆ) ರಾಜಧಾನಿಗಳಾದುವು. ನೊಳಂಬಳಿಗೆ ೩೨,೦೦೦ ಅಥವಾ ನೊಳಂಬವಾಡಿ ಸೀಮೆ ತುಮಕೂರು ಚಿತ್ರದುರ್ಗ ಜಿಲ್ಲೆಗಳನ್ನೂ ಬಳ್ಳಾರಿ ಅನಂತಪುರ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳ ಭಾಗಗಳನ್ನೂ ಒಳಕೊಂಡಿತ್ತು. ಈ ಸೀಮೆಯ ಅಧಿಪತಿಗಳಾದ ನೊಳಂಬರ ಮೊದಲ ರಾಜಧಾನಿ ಸಿರಾ ತಾಲ್ಲೂಕಿಗೆ ಉತ್ತರದಲ್ಲಿದ್ದ, ಹೆಂಜೇರು ಅಥವಾ ಹೇಮಾವತಿ.

ಕದಂಬ, ಗಂಗ, ಆಳುಪ, ಹೈಹಯ ಮುಂತಾದ ಮನೆತನಗಳಲ್ಲಿ ಹಂಚಿಹೋಗಿದ್ದ ಕನ್ನಡ ನಾಡು ಬಾದಾಮಿ ಚಾಳುಕ್ಯರ ಕಾಲದಲ್ಲಿ ಒಗ್ಗೂಡಿದಂತಾಗಿ ಅದಕ್ಕೆ ಒಂದು ಐತಿಹಾಸಿಕ ಸ್ಥಿರತೆ ವ್ಯಾಪ್ತಿ ಪ್ರಭಾವಗಳು ಕೂಡಿಕೊಂಡವು. ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇವರು ಕನ್ನಡ ರಾಜ್ಯದ ಗಡಿಗಳನ್ನು ಉತ್ತರದಲ್ಲಿ ನರ್ಮದ, ಪೂರ್ವದಲ್ಲಿ ಕರ್ನೂಲು ಗುಂಟೂರು ಮತ್ತು ನೆಲ್ಲೂರು ಪ್ರದೇಶಗಳು, ದಕ್ಷಿಣದಲ್ಲಿ ಕಾವೇರಿ ಮತ್ತು ಪಶ್ಚಿಮದಲ್ಲಿ ಅರಬ್ಬೀಸಮುದ್ರ ಹೀಗೆ ಮುಟ್ಟುವಂತೆ ವಿಸ್ತರಿಸಿದರು. ಗುಜರಾತ್ ಮತ್ತು ಆಂಧ್ರಗಳಲ್ಲೂ ರಾಜ್ಯಶಾಖೆಗಳನ್ನು ನೆಟ್ಟರು. ಇವರು ಸರಿಸುಮಾರು ಇಂದಿನ ಬೊಂಬಾಯಿ ಹೈದರಾಬಾದ್ ಮತ್ತು ಮೈಸೂರಿನ ವಾಯುವ್ಯ ಪ್ರಾಂತಗಳನ್ನು ಆಳಿದರು. ಅನಂತರದಲ್ಲಿ ರಾಷ್ಟ್ರಕೂಟರು ಕ್ರಮವಾಗಿ ಉಸ್ಮಾನಾಬಾದ್ ಜಿಲ್ಲೆಯ ಲಟ್ಟಲೂರ (ಲಾಟೂರು), ನಾಸಿಕ್ ಜಿಲ್ಲೆಯ ಮಯೂರಖಂಡಿ, ಗುಲ್ಬರ್ಗದ ಬಳಿಯ ಮಾನ್ಯಖೇಟ (ಮಾಲ್ಖೇಡ್) ಈ ಸ್ಥಳಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ನರ್ಮದೆಯಿಂದ ಕಾವೇರಿವರೆಗಿನ ಭೂಭಾಗವನ್ನು ತಮ್ಮ ನೇರವಾದ ಆಳಿಕೆಗೆ ಒಳಪಡಿಸಿಕೊಂಡಿದ್ದರು. ಇಷ್ಟು ಮಾತ್ರವಲ್ಲದೆ ಹಲವು ಬಾರಿ ತಮ್ಮ ಪೌರುಷ ಪ್ರಾಬಲ್ಯದಿಂದ ದಕ್ಷಿಣ ಗುಜರಾತ್, ಮಾಳ್ವ, ಆಂಧ್ರ, ಕಂಚಿ ಮತ್ತು ತಂಜಾವೂರು ಪ್ರದೇಶಗಳ ಮೇಲೆ ಅಧಿಕಾರವನ್ನು ಸ್ಥಾಪಿಸಿದರು. ಭರತಖಂಡದ ಇನ್ನಿತರ ಪ್ರಬಲ ರಾಜವಂಶಗಳನ್ನು ಹಣಿಸಿ, ಅರಬ್ಬೀ ಇತಿಹಾಸಕಾರ ಸುಲೇಮಾನ್ ಪ್ರಕಾರ ವಿಶ್ವದ ನಾಲ್ಕು ಬೃಹದ್ ರಾಷ್ಟ್ರಗಳಲ್ಲಿ ಒಂದೆನಿಸಿದ ಈ ರಾಜವಂಶ ಕ್ರಿ.ಶ. ೮ರಿಂದ ೧೧ನೆಯ ಶತಮಾನದವರೆಗೆ ಭಾರತವನ್ನೆಲ್ಲ ಕರ್ಣಾಟಕವನ್ನಾಗಿ ಮಾಡಿದ್ದು ಅತ್ಯಂತ ಅಭಿಮಾನದ ಸಂಗತಿಯಾಗಿದೆ. ಈ ಕಾರಣದಿಂದ ಈ ಅವಧಿಯ ಭಾರತದ ಚರಿತ್ರೆಯನ್ನು ರಾಷ್ಟ್ರಕೂಟಯುಗವೆಂದು ಕರೆಯುವುದು ಸಮಂಜಸವೆಂದರೆ ಕೆಲವು ಇತಿಹಾಸಕಾರರ ಅಭಿಪ್ರಾಯ.

ಕುಂತಲದ ದೊರೆಗಳೆಂದು ಬಾದಾಮಿ ಚಾಳುಕ್ಯರಂತೆ ತಾವೂ ಪರಿಕೀರ್ತಿತರಾದ

ಕಲ್ಯಾಣ ಚಾಳುಕ್ಯರು ಮುಂದಿನ ಘಟ್ಟದಲ್ಲಿ ರಟ್ಟಪಾಡಿ ಏಳೂವರೆ ಲಕ್ಷ ದೇಶವೆಂದು ಹೆಸರಾಗಿದ್ದ ರಾಷ್ಟ್ರಕೂಟ ಸಾಮ್ರಾಜ್ಯದ ಅಧಿಪತಿಗಳಾಗಿ ಪ್ರಬಲಿಸಿದರು. ಅವರ ಆಳ್ವಿಕೆಯ ಕುಂತಲದೇಶವು ಬನವಾಸಿ, ಪಾನುಂಗಲ್ಲು, ಪುಲಿಗೆರೆ, ಬೆಳವೊಲ, ಕುಂಡಿ, ವೇಣುಗ್ರಾಮ, ತೊರಗಲೆ, ಕೆಲವಾಡಿ, ಕಿಸುಕಾಡು, ಬಾಗಡಿಗೆ, ತರ್ದವಾಡಿ ಹೀಗೆ ಅನೇಕ ರಾಜ್ಯವಿಭಾಗಗಳನ್ನು ಒಳಗೊಂಡಿದ್ದು, ಇವನ್ನು ಅವರ ಆಳ್ವಿಕೆಯ ಮಂಡಲೇಶರರೂ ಇತರ ಅಧಿಕಾರಿಗಳೂ ನೋಡಿಕೊಳ್ಳುತ್ತಿದ್ದರು. ಅನಂತರ ಪ್ರಬಲಿಸಿದವರು ಕಲಚುರಿಗಳು. ಇವರು ಇಂದಿನ ಬಿಜಾಪುರ ಮತ್ತು ಸೊಲ್ಲಾಪುರ ಜಿಲ್ಲೆಗಳನ್ನೊಳಕೊಂಡ ತರ್ದವಾಡಿ ಪ್ರಾಂತವನ್ನು ಮಂಗಳವಾಡ ಕೇಂದ್ರದಿಂದ ಮಹಾಮಂಡಲೇಶ್ವರರಾಗಿ ಆಳುತ್ತಿದ್ದರು. ಸೊಲ್ಲಾಪುರ ಜಿಲ್ಲೆಯ ಪಂಡರಪುರ ಗ್ರಾಮದ ಹತ್ತಿರದ ಮಂಗಳವೇಡೆಯೇ ಆ ಕೇಂದ್ರವಾಗಿದ್ದಿರಬೇಕೆಂದು ಊಹಿಸಿದೆ.

ಸಣ್ಣಪುಟ್ಟ ರಾಜವಂಶಗಳಲ್ಲಿ ಈಚಿನ ಕದಂಬರು ರಟ್ಟರು ಸಿಂದರು ಮೊದಲಾದ ಕೆಲವರು ಪ್ರಮುಖರು. ಇವರಲ್ಲಿ ಗೋವೆಯ (ಗೋಪಕ ಪಟ್ಟಣದ) ಕದಂಬರು ಅನಿಲಾಪುರ (ಧಾರವಾಡ ಜಿಲ್ಲೆಯ ಅಲ್ನಾವರ್) ಮತ್ತು ಚಂದ್ರಾಪುರ (ಬಹುಶಃ ಗೋವೆಯ ಸಮೀಪದಲ್ಲಿರುವ ಚಂದೋರ್), ಕುಂದೂರ (ಬಹುಶಃ ಧಾರವಾಡ ತಾಲ್ಲೂಕಿನ ನರೇಂದ್ರ). ಸಂಪಗಡಿ (ಬಹುಶಃ ಖಾನಾಪುರ ತಾಲ್ಲೂಕಿನ ಬಿಡಿ) ಈ ಪ್ರದೇಶಗಳನ್ನು ರಾಜಧಾನಿಗಳನ್ನಾಗಿಟ್ಟುಕೊಂಡು ಕೊಂಕಣ ೯,೦೦೦ ಮತ್ತು ಪಲಸಿಗೆ ೧೨,೦೦೦ ಪ್ರಾಂತಗಳನ್ನು ವಂಶಪಾರಂಪರ್ಯವಾಗಿ ಆಳುತ್ತಿದ್ದರು. ಹೀಗೆಯೇ ಹಾನಗಲ್ಲು ಕದಂಬರು ತಮ್ಮ ಮುಖ್ಯ ಪಟ್ಟಣವಾದ ಪಾನುಂಗಲ್ (ಧಾರವಾಡ ಜಿಲ್ಲೆಯ ಈಗಿನ ಹಾನುಗಲ್ಲು)ನಿಂದ ಬನವಾಸಿ ಪ್ರಾಂತವೆಲ್ಲವನ್ನೂ ಆಳುತ್ತಿದ್ದರು. ಸೌಂದತ್ತಿಯ ರಟ್ಟರು ಪಶ್ಚಿಮದಲ್ಲಿ ಶಿಲಾಹಾರರ ಕೊಲ್ಲಾಪುರ, ಉತ್ತರದಲ್ಲಿ ಕಳಚುರ್ಯರ ಮಂಗಳವೇಢೆ, ದಕ್ಷಿಣದಲ್ಲಿ ಕದಂಬರ ಗೋವೆ ಮತ್ತು ಪೂರ್ವದಲ್ಲಿ ಇಂದಿನ ಬೆಳಗಾಂ ಜಿಲ್ಲೆ ಇವು ಸೀಮೆಯಾಗಿದ್ದು ಕುಂತಲ ದೇಶದ ಒಂದು ಭಾಗವಾಗಿದ್ದ ಕುಂಡಿ ೩೦೦೦ (ಇಂದಿನ ಅಥಣಿ ಖಾನಾಪುರ ತಾಲ್ಲೂಕುಗಳನ್ನೂ ಸಂಪಗಾವ್ ತಾಲ್ಲೂಕಿನ ದಕ್ಷಿಣ ಭಾಗವನ್ನೂ ಬಿಟ್ಟು ಉಳಿದ ಬೆಳಗಾಂ ಜಿಲ್ಲೆಯ ಪ್ರದೇಶ) ಪ್ರಾಂತವನ್ನು ಆಳುತ್ತಿದ್ದರು. ಬೆಳಗಾಂ ಜಿಲ್ಲೆಯ ಸೌಂದತ್ತಿ ತಾಲ್ಲೂಕಿನ ಮುಖ್ಯ ಸ್ಥಳವಾದ ಸೌಂದತ್ತಿಯೇ (ಸುಗಂಧವರ್ತಿ) ಇವರ ರಾಜಧಾನಿಯಾಗಿತ್ತು. ಎಲ್ಬುರ್ಗದ ಸಿಂದರು ಬಿಜಾಪುರ ಜಿಲ್ಲೆಯ ಆಗ್ನೇಯ ಭಾಗ, ಧಾರವಾಡ ಜಿಲ್ಲೆಯ ಈಶಾನ್ಯ ಭಾಗ, ಕಿಸುಕಾಡು ೭೦, ಕೇಲವಾಡಿ ೩೦೦, ಬಾಗಡೆ ೭೦, ನರೆಯಂಗಲ್ ೧೨ ಈ ಪ್ರದೇಶಗಳಲ್ಲಿ ಆಳುತ್ತಿದ್ದರು. ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ಪೂರ್ವದ ಸೀಮಾ ಪ್ರದೇಶ ಸೇರಿದ ಈ ನಾಡಿಗೆ ಸಿಂದವಾಡಿ ಎಂದು ಹೆಸರಿದ್ದು, ರಾಜಧಾನಿ ಎರಂಬರಗೆ ಆಗಿತ್ತು. ಹೀಗೆಯೇ ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ ಬಾಗಡಗೆಯ ಸಿಂದರೂ ಈಗಿನ ಬಳ್ಳಾರಿಜಿಲ್ಲೆಯ ಕುರುಗೋಡಿನಲ್ಲಿ ಕುರುಗೋಡಿನ ಸಿಂದರೂ, ಶಿವಮೊಗ್ಗ ಜಿಲ್ಲೆಯ

ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿಯ ಪರಿಸರದಲ್ಲಿ ಬೆಳಗುತ್ತಿಯ ಸಿಂದರೂ ಒಡೆಯರಾಗಿದ್ದರು. ಧಾರವಾಡ ಜಿಲ್ಲೆಯ ಕರಜಗಿ ತಾಲ್ಲೂಕಿನ ಗುತ್ತಲ್ (ಗುತ್ತವೊಳಲ್) ಮತ್ತು ಸುತ್ತಣ ಪ್ರದೇಶವನ್ನು ಗುತ್ತರು ಆಳುತ್ತಿದ್ದರು.

ಶಿಲಾಹಾರರ ಬೇರೆ ಬೇರೆ ಶಾಖೆಗಳು ಬೊಂಬಾಯಿ ಕರ್ಣಾಟಕ ಮತ್ತು ಸುತ್ತಣ ಪ್ರದೇಶಗಳಲ್ಲಿ ತಲೆಯೆತ್ತಿದ್ದವು. ಕೊಂಕಣ ೯೦೦ (ಮೊದಲಿನ ಸಾಮಂತವಾಡಿ ಪ್ರಾಂತ ಮತ್ತು ರತ್ನಗಿರಿ ಜಿಲ್ಲೆಗೆ ಸೇರಿದ ಇರಿಡಿಗೆ ನಾಡು)ರಲ್ಲಿ ದಕ್ಷಿಣ ಕೊಂಕಣ ಶಿಲಾಹಾರರು, ಅಣಂದೂರು ೩೦೦ರ ಅಂಕುಲಗೆ ನಾಡು (ಇಂದಿನ ಅಕ್ಕಲಕೋಟೆ ಪ್ರದೇಶ) ಎಂಬಲ್ಲಿ ಅಕ್ಕಲಕೋಟೆ ಶಿಲಾಹಾರರು, ಮುಂಬಯಿಯ ಈಗಿನ ಥಾಣ (ಸ್ಥಾನಕ)ದಲ್ಲಿ ಉತ್ತರ ಶಿಲಾಹಾರರು, ಕೊಲ್ಲಾಪುರ ಪನಹಾಲಾದುರ್ಗ ಮತ್ತು ವಳವಾಡಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಸತಾರಾ ಬೆಳಗಾಂ ಜಿಲ್ಲೆಗಳ ಕೆಲವು ಭಾಗಗಳನ್ನೊಳಗೊಂಡ ಕೊಲ್ಲಾಪುರ ಪ್ರಾಂತವನ್ನು—ದಕ್ಷಿಣ ಮಹಾರಾಷ್ಟ್ರವನ್ನು—ಕರ್ಹಾಡ (ಕೊಲ್ಲಾಪುರ) ಶಿಲಾಹಾರರು ಹಾಗೆ ಆಳಿದಂಥ ಬೇರೆ ಬೇರೆ ಶಾಖೆಗಳ ಶಿಲಾಹಾರರಾಗಿದ್ದಾರೆ.

ಇನ್ನೂ ಕೆಲವು ಸಣ್ಣ ರಾಜಮನೆತನಗಳು : ಇಂದಿನ ಚಿಕ್ಕಮಗಳೂರು ಜಿಲ್ಲೆಯ ಅದೇ ತಾಲ್ಲೂಕು ಮತ್ತು ಶಿವಮೊಗ್ಗ ಜಿಲ್ಲೆಯ ಕೊಪ್ಪ ತಾಲ್ಲೂಕು ಪ್ರದೇಶಗಳಲ್ಲಿ ಸೇಣವಾರರು, ಈಗಿನ ತೀರ್ಥಹಳ್ಳಿ ತಾಲ್ಲೂಕು ಮತ್ತು ಸುತ್ತಣ ಪ್ರದೇಶಗಳಲ್ಲಿ ಸಾಂತರರು, ಉತ್ತರ ಕನ್ನಡ ಜಿಲ್ಲೆಗೆ ಸೇರಿದ ಹಾಡುಹಳ್ಳಿಯಲ್ಲಿ ಸಾಳುವರು, ಮೈಸೂರು ಜಿಲ್ಲೆಯ ಪಶ್ಚಿಮ ಭೂಭಾಗ ಮತ್ತು ಕೊಡಗು ಪ್ರಾಂತಗಳಲ್ಲಿ ಚೆಂಗಾಳ್ವರು, ಹಾಸನ ಜಿಲ್ಲೆಗೆ ದಕ್ಷಿಣದಲ್ಲಿರುವ ಅರಕಲಗೂಡು ತಾಲ್ಲೂಕು ಮತ್ತು ಕೊಡಗಿನ ಉತ್ತರ ಭಾಗಗಳಲ್ಲಿ ಕೊಂಗಾಳ್ವರು ಆಧಿಪತ್ಯವನ್ನು ನಡಸುತ್ತಿದ್ದರು, ಉಚ್ಚಂಗಿಯ (ಹಳೆಯ ಮೈಸೂರಿನ ಉತ್ತರದ ಗಡಿಯಲ್ಲಿ ಬಳ್ಳಾರಿ ಜಿಲ್ಲೆಗೆ ಈಶಾನ್ಯದಿಕ್ಕಿಗಿರುವ ಒಂದು ಗಿರಿದುರ್ಗ) ಪಾಂಡ್ಯರು ಸ್ಥೂಲವಾಗಿ ಈಗಿನ ಚಿತ್ರದುರ್ಗ ಜಿಲ್ಲೆಗೆ ಹೊಂದುವ ನೊಳಂಬವಾಡಿ ೩೨,೦೦೦ ಸೀಮೆಯ ಒಡೆಯರಾಗಿದ್ದರು. ನಿಡುಗಲ್ಲಿನ ಚೋಳರು ಗುಂಡ್ಲುಪೇಟೆ ತಾಲ್ಲೂಕಿನ ತೆರಕಣಾಂಬಿ ರಾಜಧಾನಿಯಾಗಿದ್ದ ಪದಿನಾಲ್ಕು ನಾಡು ಸೀಮೆಯ ನಾಯಕರಾಗಿದ್ದರು. ಹೆಂಜೇರು ರಾಜಧಾನಿಯಾಗಿ ಹೇಮಾವತಿ ಮತ್ತು ನಿಡುಗಲ್ಲುಗಳ ನಡುವಿನ ಸಣ್ಣ ಪ್ರದೇಶದ ಒಡೆತನವೂ ಇವರಿಗಿತ್ತು.

ಕಲ್ಯಾಣ ಚಾಳುಕ್ಯರ ಬಳಿಕ, ದ್ವಾರಸಮುದ್ರದ ಹೊಯ್ಸಳರು ಕರ್ಣಾಟಕದ ಇತಿಹಾಸದಲ್ಲಿ ಖ್ಯಾತರಾಗುವ ಮುನ್ನ ಅದರ ಉತ್ತರಭಾಗದಲ್ಲಿ ಪ್ರಬಲಿಸಿದವರು ಎಂದರೆ ಸೇಉಣರು ಅಥವಾ ದೇವಗಿರಿಯ ಯಾದವರು. ಶಿವಮೊಗ್ಗ, ಹಾಸನ, ಚಿತ್ರದುರ್ಗ, ಧಾರವಾಡ, ಬಿಜಾಪುರ, ರಾಯಚೂರು, ಬಿದರೆ, ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳು ಇವರ ರಾಜ್ಯದಲ್ಲಿ ಸೇರಿದ್ದವು. ಇವರ ಪ್ರತಾಪಶಾಲಿ ದೊರೆ ಐದನೆಯ ಭಿಲ್ಲಮನ ಕಾಲದಲ್ಲಿ ಇವರ ಆಳ್ವಿಕೆಯ ಸೀಮೆ ಕಲ್ಯಾಣ, ಕಿಸುಕಾಡು ನಾಡು (ಇಂದಿನ ಎಲ್ಬುರ್ಗ ಲಿಂಗಸುಗೂರು ರಾಯಚೂರು ಜಿಲ್ಲೆ), ತರ್ದವಾಡಿ ನಾಡು (ಬಿಜಾಪುರ ಜಿಲ್ಲೆಯ

ಬಾಗೆವಾಡಿ ತಾಲ್ಲೂಕು), ಬೆಳವೊಲ (ಧಾರವಾಡ ಜಿಲ್ಲೆಯ ಗದುಗಿನ ಪರಿಸರ) ಇವನ್ನು ಒಳಗೊಂಡಿತ್ತು. ಈಗಿನ ಧಾರವಾಡ ಜಿಲ್ಲೆಯ ದಂಬಾಳ್ ಎಂಬ ಊರಿನ ನೆರೆ ಭಾಗಗಳನ್ನು ಒಳಕೊಂಡಿದ್ದ ಮಾಸವಾಡಿ ೧೪೦ ಎಂಬ ಪ್ರಾಂತವನ್ನು ಮಾಸವಾಡಿ ಸೇಉಣರು ಆಳುತ್ತಿದ್ದರು.

ಮಹಾಮಂಡಲೇಶ್ವರರಾಗಿ ಬಾಳಿದ ಕರ್ಣಾಟಕದ ಹೈಹೇಯ ರಾಜವಂಶದವರ ಒಂದು ಶಾಖೆ ನೊರಟ ೩೦೦ ಪ್ರದೇಶವನ್ನೂ (ರಾಯಚೂರು ತಾಲ್ಲೂಕಿನ ಮಾನ್ವಿ ತಾಲ್ಲೂಕಿನ ಪ್ರದೇಶ) ಇನ್ನೊಂದು ಶಾಖೆ ಅರಳು ೩೦೦ ಪ್ರದೇಶವನ್ನೂ (ಈಗಿನ ಗುಲ್ಬರ್ಗ ಜಿಲ್ಲೆಯ ಸೇಡಂ ತಾಲ್ಲೂಕಿನ ಅರಳೂರು ಗ್ರಾಮದ ಪರಿಸರ) ಆಳುತ್ತಿದ್ದಂತೆ ತಿಳಿದುಬಂದಿದೆ.

ಅಚ್ಚ ಕನ್ನಡಿಗರಾದ ಹೊಯ್ಸಳರ ಮೂಲಸ್ಥಾನ ಶಿಕಾರಿಪುರ ತಾಲ್ಲೂಕಿನ ಸೊಸೆವೂರು (ಈಗಿನ ಅಂಗಡಿ) ಅಥವಾ ಕೆಲವರ ಮತದಂತೆ ಚಿಕ್ಕಮಗಳೂರು ಜಿಲ್ಲೆಗೆ ಸೇರಿದ ಮೂಡಿಗೆರೆ ತಾಲ್ಲೂಕಿನ ಅಂಗಡಿ. ಈ ಮನೆತನದ ಪ್ರಸಿದ್ಧ ರಾಜನಾದ ವಿಷ್ಣುವರ್ಧನನ ಕಾಲದಲ್ಲಿ ದೋರಸಮುದ್ರ ಅಥವಾ ಹಳೆಯಬೀಡು ರಾಜಧಾನಿಯಾಗಿದ್ದು ಹೊಯ್ಸಳ ಸಾಮ್ರಾಜ್ಯವು ಕೊಂಗು (ಸೇಲಂ), ನಂಗಲಿ (ಕೋಲಾರ ಜಿಲ್ಲೆಯ ಪೂರ್ವಭಾಗ), ತಲಕಾಡು, ಗಂಗವಾಡಿ, ನೊಳಂಬವಾಡಿ, ಬನವಾಸಿ, ಹಾನಗಲ್, ಹುಲಿಗೆರೆ, ಹಲಸಿಗ, ಬೆಳವೊಲ ಈ ಪ್ರಾಂತಗಳಿಂದ ಕೂಡಿದ್ದಿತು. ಮುಂದಿನ ಘಟ್ಟದಲ್ಲಿ ಕರ್ಣಾಟಕದ ಕೀರ್ತಿಯನ್ನು ಮೆರೆಸಿದ ವಿಜಯನಗರ ಸಾಮ್ರಾಜ್ಯ ತುಂಗಭದ್ರಾ ನದೀತೀರದ ವಿಜಯನಗರದಲ್ಲಿ ಸ್ಥಾಪಿತವಾಗಿ, ರಾಜ್ಯದ ಮುಖ್ಯಪಟ್ಟಣಗಳಾಗಿ ಬಂಕಾಪುರ, ರಾಯಚೂರು, ಆದವಾನಿ, ಭಟ್ಕಳ, ಹೊನ್ನಾವರ, ಅಂಕೋಲ, ಮಂಗಳೂರು, ಪೆನಗೊಂಡೆ, ಇಕ್ಕೇರಿ, ದೋರಸಮುದ್ರ, ಶ್ರೀರಂಗಪಟ್ಟಣ ಇವು ಆ ಸಾಮ್ರಾಜ್ಯದ ತಲೆಮೆಯನ್ನು ಮೆರಸಿದವು. ಈ ರಾಜ್ಯದ ಕೀರ್ತಿಗೆ ಕಾರಣನಾದ ಕೃಷ್ಣದೇವರಾಯನ ಕಾಲದಲ್ಲಿ ರಾಜ್ಯದ ಗಡಿರೇಖೆಗಳು ಒರಿಸ್ಸದ ತುದಿಯಿಂದ ಸಿಲೋನಿನವರೆಗೆ ವಿಸ್ತರಿಸಿತಾದರೂ ರಾಜಕೀಯ ಕಾರಣಗಳಿಂದ ಕಾಲಕಾಲಕ್ಕೆ ರಾಜಧಾನಿಯೂ ಆಳ್ವಿಕೆಯ ಪ್ರದೇಶಗಳೂ ವ್ಯತ್ಯಾಸಗೊಂಡವು. "ವಿಜಯನಗರದ ದೀರ್ಘಕಾಲದ ಚರಿತ್ರೆಯಲ್ಲೆಲ್ಲ ಆ ರಾಜರು ತಮ್ಮ ಪ್ರಖ್ಯಾತ ರಾಜಧಾನಿಯಾದ ವಿಜಯನಗರದಿಂದಲೇ ಆಳುತ್ತಿರಲಿ ಅಥವಾ ಈಚಿನ ರಾಜಧಾನಿಗಳಾದ ಪೆನುಗೊಂಡ ಚಂದ್ರಗಿರಿ ವೆಲ್ಲೂರುಗಳಿಂದ ಆಳುತ್ತಿರಲಿ, ಯಾವಾಗಲೂ ಅವರನ್ನು ಕರ್ನಾಟಕ ರಾಜರೆಂದೇ ಕರೆಯುತ್ತಿದ್ದರು. ಇದರಿಂದ ದಕ್ಷಿಣ ಮತ್ತು ಪಶ್ಚಿಮ ಭಾರತದ ಮುಂದಾಳುತನ, ಕನಿಷ್ಠಪಕ್ಷ ಹಿಂದುಗಳ ವಿಷಯದಲ್ಲಾದರೂ ಕರ್ನಾಟಕದ್ದೆಂದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಮುಖ್ಯವಾಗಿ ತೆಲುಗು ಮೂಲವುಳ್ಳ ವಿಜಯನಗರದ ಕೊನೆಯ ರಾಜಸಂತತಿ ಎಂದರೆ ಆರವೀಟಿ ಸಂತತಿ ಅಧಿಕಾರಕ್ಕೆ ಬಂದಮೇಲೂ ಜನ ವಿಜಯನಗರದ ರಾಜರನ್ನು ಕರ್ನಾಟ ರಾಜರೆಂದೇ ಕರೆಯುತ್ತಿದ್ದದ್ದು ಇನ್ನೂ ಹೆಚ್ಚು ಗಮನಾರ್ಹವಾಗಿದೆ."[೪೨]

ಕರ್ಣಾಟಕದ ಕೊನೆಯ ಐತಿಹಾಸಿಕ ಸಾಮ್ರಾಜ್ಯವಾದ ವಿಜಯನಗರದ ಪತನಾ

ನಂತರದಲ್ಲಿ ಮೈಸೂರು, ಇಕ್ಕೇರಿ (ಬಿದನೂರು), ಗೇರುಸೊಪ್ಪೆ, ಭಟ್ಕಳ ಇಲ್ಲಿಯ ಅರಸರು ಮತ್ತು ಉನ್ಮತ್ತೂರು ಆವತಿನಾಡು ಎಲಹಂಕ ಚಿತ್ರದುರ್ಗ ನಿಡಗಲ್ಲು ಚೆನ್ನಪಟ್ಟಣ ಕೊಡಗು ಕಾರ್ಕಳ ಮುಂತಾದ ಕಡೆಗಳ ಪಾಳೆಯಗಾರರು ಸಾಮ್ರಾಜ್ಯವನ್ನು ಸಣ್ಣಪುಟ್ಟ ಭಾಗಗಳಾಗಿ ಹಂಚಿಕೊಂಡು ಆಳತೊಡಗಿದರು. ಇವರಲ್ಲಿ ಪ್ರಬಲರಾದವರು ಎಂದರೆ ಬಿದನೂರಿನ ಕೆಳದಿ ಅರಸರು ಮತ್ತು ಮೈಸೂರಿನ ಒಡೆಯರು.[90]

# ಕನ್ನಡ ನುಡಿ

## ದ್ರಾವಿಡ ಭಾಷೆಗಳ ಸಾಮಾನ್ಯ ಪರಿಚಯ

ಪೀಠಿಕೆ: ಜಗತ್ತಿನಲ್ಲಿ ಬಳಕೆಯಲ್ಲಿರುವ ಸಾವಿರಾರು ಭಾಷೆಗಳನ್ನು ಅವುಗಳ ಆಂತರಿಕ ಸಾಮ್ಯವನ್ನಾಧರಿಸಿ ಯುರೋಪಿಯನ್, ಆಸ್ಟ್ರೋ-ಏಷಿಯಾಟಿಕ್, ಸಿನೋ-ಟಿಬೆಟಿಯನ್, ಅಮೆರಿಕನ್, ಆಫ್ರಿಕನ್, ದ್ರವಿಡಿಯನ್, ಫಿನೋ-ಉಗ್ರಿಕ್ ಎಂಬ ಏಳು ಭಾಷಾಪರಿವಾರಗಳನ್ನಾಗಿ ವರ್ಗೀಕರಿಸಲಾಗಿದೆ.[91] ಈ ಭಾಷಾಪರಿವಾರಗಳಿಗೆ ಸೇರದ, ಆದರೆ ಬಳಕೆಯಲ್ಲಿರುವ ಅನೇಕ ಭಾಷೆ ಉಪಭಾಷೆಗಳು ಇನ್ನೂ ವರ್ಗೀಕೃತವಾಗದೆಯೇ ಉಳಿದಿವೆ. ನಮ್ಮ ದೃಷ್ಟಿಯನ್ನು ಭಾರತದಲ್ಲಿ ಬಳಕೆಯಲ್ಲಿರುವ ಭಾಷೆಗಳಿಗಷ್ಟೇ ಸೀಮಿತಗೊಳಿಸಿದಲ್ಲಿ ಎರಡು ಪ್ರಮುಖ ಭಾಷಾಪರಿವಾರಗಳಿಗೆ ಸೇರಿದ ಭಾಷೆಗಳು ಕಾಣಸಿಗುತ್ತವೆ. ಬಹುತೇಕ ಭಾರತದ ಉತ್ತರಭಾಗದಲ್ಲಿ ಬಳಕೆಯಲ್ಲಿದ್ದು ಇಂಡೋ ಯುರೋಪಿಯನ್ ಭಾಷಾಪರಿವಾರಕ್ಕೆ ಸೇರಿದ ಭಾಷೆಗಳು ಎಂದರೆ ಹಿಂದಿ, ಪಂಜಾಬಿ, ಗುಜರಾತಿ, ಒರಿಯ, ಮರಾಠಿ, ಬಂಗಾಳಿ, ಅಸ್ಸಾಮಿ, ರಾಜಾಸ್ಥಾನಿ, ಬಿಹಾರಿ ಮುಂತಾದುವು. ಬಹುತೇಕ ಭಾರತದ ದಕ್ಷಿಣಭಾಗದಲ್ಲೇ ಬಳಕೆಯಲ್ಲಿದ್ದು ದ್ರಾವಿಡ ಭಾಷಾಪರಿವಾರಕ್ಕೆ ಸೇರಿದ ಭಾಷೆಗಳು[92] ತಮಿಳು, ಕನ್ನಡ, ತೆಲುಗು, ಮಲಯಾಳ, ತುಳು, ತೊದ, ಕೋತ, ಕೊಡಗು, ಬಡಗ, ಕೊಲಾಮಿ, ನಾಯ್ಕಿ, ಪಾರ್ಜಿ, ಗದಬ, ಕುರುಖ್, ಮಾಲ್ತೋ, ಬ್ರಾಹುಇ ಇತ್ಯಾದಿ. ಆದರೆ ಭಾರತದಲ್ಲಿ ಬಳಕೆಯಲ್ಲಿರುವ ಭಾಷೆಗಳೆಲ್ಲ ಈ ಎರಡು ಭಾಷಾ ಪರಿವಾರಗಳಿಗೇ ಸೇರುವುದಿಲ್ಲ; ಬೇರೆ ಭಾಷಾವರ್ಗಕ್ಕೆ ಸೇರಿದವೂ ಉಂಟು.

ಇಂಡೋ ಯುರೋಪಿಯನ್ ಭಾಷಾಪರಿವಾರವನ್ನು ಬಿಟ್ಟರೆ ಭಾರತದಲ್ಲಿ ದ್ರಾವಿಡ ಭಾಷಾ ಪರಿವಾರವೇ ದೊಡ್ಡದು. ಈ ಭಾಷಾವರ್ಗಕ್ಕೆ ಸೇರಿದ ಭಾಷೆಗಳನ್ನು ಭಾರತದ ಜನಸಂಖ್ಯೆಯ ೧/೫ ಭಾಗದಷ್ಟು ಜನ ಆಡುತ್ತಾರೆ. ದ್ರಾವಿಡಭಾಷಾವರ್ಗದಲ್ಲಿ ಕನ್ನಡ, ತಮಿಳು, ತೆಲುಗು ಮತ್ತು ಮಲಯಾಳ ಈ ನಾಲ್ಕು ಭಾಷೆಗಳು ಪ್ರಾಚೀನ ಇತಿಹಾಸವನ್ನು ಹೊಂದಿ ಸಾಹಿತ್ಯ ಸಂಪನ್ನ ಭಾಷೆಗಳೆನಿಸಿವೆ; ಅಲ್ಲದೆ ಭಾರತ ರಾಜ್ಯಾಂಗದ ಎನೆಯ ನಿಬಂಧನೆಯಲ್ಲಿ ನಮೂದಿಸಿರುವ ಭಾರತದ ೧೪ ರಾಷ್ಟ್ರಭಾಷೆಗಳಲ್ಲಿ ಸೇರಿವೆ. ಇವನ್ನು ಬಿಟ್ಟರೆ ಉಳಿದವು ಕೇವಲ ಆಡುಭಾಷೆಗಳಾಗಿ ಬಳಕೆಯಲ್ಲಿವೆ. ಇವುಗಳನ್ನು ನಿರ್ಗ್ರಾಂಥಿಕ, ಅಸಂಸ್ಕೃತ ಅಥವಾ ಕ್ಷುಲ್ಲಕ ಭಾಷೆಗಳೆಂದೂ ಪರಿಗಣಿಸಲಾಗಿದೆ. ಇವುಗಳ

ಪ್ರಾಚೀನತೆಗೆ ಆಧಾರವಿಲ್ಲ. ಇವು ಕೇವಲ ಆಡುನುಡಿಗಳಾಗಿಯೇ ಶತಮಾನಗಳಿಂದ ಬಳಕೆಯಲ್ಲಿವೆ. ಈ ಮೇಲೆ ಹೇಳಿದ ಗ್ರಾಂಥಿಕ ಅಥವಾ ಸುಸಂಸ್ಕೃತ ಮತ್ತು ಕ್ಷುಲ್ಲಕ ಭಾಷೆಗಳ ಜೊತೆಗೆ ಬೆಳಕಿಗೆ ಬಾರದ ಇನ್ನೂ ಹಲವಾರು ಉಪಭಾಷೆಗಳೂ ಉಂಟು. ದಕ್ಷಿಣ ಭಾರತದ ತಮಿಳುನಾಡು, ಕರ್ನಾಟಕ, ಕೇರಳ ಮತ್ತು ಆಂಧ್ರಪ್ರದೇಶ ಇವು ದ್ರಾವಿಡ ಭಾಷೆಗಳ ಮುಖ್ಯ ನೆಲೆಗಳಾದರೆ ದ್ರಾವಿಡದ ಅನೇಕ ಉಪಭಾಷೆಗಳು ನೇಪಾಳದಿಂದ ಕನ್ಯಾಕುಮಾರಿಯವರೆಗೆ, ಪಾಕೀಸ್ಥಾನದಿಂದ ಬಂಗಾಳದವರೆಗೆ ಕಂಡುಬರುವ ಭಾರತದ ವಿಶಾಲ ಭೂಭಾಗದಲ್ಲಿ ಹರಡಿಕೊಂಡಿವೆ. ಮತ್ತೊಂದು ಅಂಶವೇನೆಂದರೆ ಈ ಉಪಭಾಷೆಗಳಲ್ಲಿ ಬಹುತೇಕ ಉಪಭಾಷೆಗಳನ್ನು ಮಾತನಾಡುವವರು ಆದಿವಾಸಿಗಳಾಗಿದ್ದಾರೆ.

ದ್ರಾವಿಡ ಭಾಷೆಗಳು ಒಂದು ಸ್ವತಂತ್ರ ಭಾಷಾವರ್ಗಕ್ಕೆ ಸೇರಿದವೇ ಅಥವಾ ಬೇರಾವುದಾದರೂ ಭಾಷಾವರ್ಗಕ್ಕೆ ಸೇರಿದವೇ ಎಂಬ ವಿಷಯವಾಗಿ ಸಾಕಷ್ಟು ಚರ್ಚೆ ನಡೆದಿದೆ. ಪ್ರಪಂಚದ ಭಾಷೆಗಳನ್ನೆಲ್ಲಾ ಆರ್ಯ, ಸೆಮಿಟಿಕ್ ಮತ್ತು ಸಿಥಿಯನ್ ಎಂಬ ಮೂರು ವರ್ಗಕ್ಕೆ ಇಳಿಸಬೇಕೆಂಬ ಪ್ರಯತ್ನ ನಡೆದು ಭಾಷಾಪಂಡಿತರು ದ್ರಾವಿಡಭಾಷೆಗಳನ್ನು ಕೂಡ ಈ ಗುಂಪುಗಳಲ್ಲಿ ಒಂದಕ್ಕೆ ಸೇರಿಸಲು ಯತ್ನಿಸಿದರು. ಡಾ. ಪೋಪರು ದ್ರಾವಿಡ ಭಾಷೆಗಳಿಗೂ ಕೆಲ್ಟಿಕ್ ಮತ್ತು ಟ್ಯುಟಾನಿಕ್ ಭಾಷೆಗಳಿಗೂ ಇರುವ ಹಲವು ಸಾಮ್ಯಗಳ ಮೂಲಕ ಎಲ್ಲ ದ್ರಾವಿಡಭಾಷೆಗಳನ್ನೂ 'ಆರ್ಯ'ವರ್ಗಕ್ಕೆ ಸೇರಿಸಿದರು. ಡಾ. ಗೋವರ್, ಶೇಷಗಿರಿಶಾಸ್ತ್ರಿ ಈ ಅಭಿಪ್ರಾಯವನ್ನು ಅನುಮೋದಿಸಿದರು. ರಾಸ್‌ಮನ್‌ರಾಸ್ಕನು ಫಿನ್ನಿಷ್, ಟರ್ಕಿಷ್, ಉಗ್ರಿಯನ್, ಮಂಗೋಲಿಯನ್, ಟಂಗುಷಿಯನ್ ಮುಂತಾದ ಭಾಷೆಗಳಿಂದಾದ ಸಿಥಿಯನ್ ಭಾಷಾಕುಟುಂಬಕ್ಕೆ ಈ ದ್ರಾವಿಡಭಾಷೆಗಳು ಸೇರುತ್ತವೆಂದು ಅಭಿಪ್ರಾಯಪಟ್ಟಿದ್ದು ಅದನ್ನು ಕಾಲ್ಡ್‌ವೆಲ್ ಅನುಮೋದಿಸಿರುವುದು ಕಾಣುತ್ತದೆ. ಈ ಅಂಶವನ್ನು ಖಚಿತವಾಗಿ ಹೇಳುವುದು ಕಷ್ಟ ಎಂಬ ಮಾತನ್ನು ಕಾಲ್ಡ್‌ವೆಲ್ ಒಪ್ಪಿಕೊಂಡಿದ್ದಾರೆ.[93] ಡಾ. ವಿಟ್ನಿ ಮತ್ತು ಡಾ. ಮ್ಯಾಕ್ಸ್‌ಮುಲ್ಲರ್ ಕೂಡ ದ್ರಾವಿಡ ಭಾಷೆಗಳನ್ನು ಸಿಥಿಯನ್ ಕುಟುಂಬಕ್ಕೆ ಸೇರಿಸುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ದ್ರಾವಿಡ ಹಾಗೂ ಯುರೆಲಿಯನ್ ಭಾಷೆಗಳ ಮತ್ತು ದ್ರಾವಿಡ ಹಾಗೂ ಫಿನ್ನೊ ಉಗ್ರಿಯನ್ ಭಾಷೆಗಳ ಸಂಬಂಧವನ್ನು ಎತ್ತಿತೋರಿಸುವ ಪ್ರಯತ್ನ ಆಂಡ್ರನೋವ್, ಬ್ಲಾಕ್, ಬರೊ,[94] ಸ್ಕ್ರೇದರ್ ಮುಂತಾದವರಿಂದ ನಡೆದಿದೆಯಾದರೂ ಅವು ಅಷ್ಟು ಸಫಲವಾಗಲಿಲ್ಲ.

ಕೆಲವು ದೇಶೀಯ ಲಾಕ್ಷಣಿಕರು, ಪ್ರಾಚೀನ ಸಂಸ್ಕೃತಪಂಡಿತರು ಮತ್ತು ಮೊದಮೊದಲ ಐರೋಪ್ಯ ವಿದ್ವಾಂಸರು ದಕ್ಷಿಣಭಾಷೆಗಳಲ್ಲಿ ಕಂಡುಬರುವ ವಿಪುಲ ತತ್ಸಮ ಹಾಗೂ ತದ್ಭವ ಶಬ್ದಗಳ ಆಧಾರದ ಮೇಲೆ ದ್ರಾವಿಡಭಾಷೆಗಳು ಸಂಸ್ಕೃತಜನ್ಯವೆಂಬ ವಾದವನ್ನು ಮುಂದಿಟ್ಟಿದ್ದಾರೆ. ಔತ್ತರೇಯ ಭಾಷೆಗಳಿಗೂ ದಾಕ್ಷಿಣಾತ್ಯಭಾಷೆಗಳಿಗೂ ಇರುವ ಭಿನ್ನತೆ ಸ್ಪಷ್ಟವಾಗಿ ಕಂಡುಬಂದರೂ ಈ ಎರಡು ವರ್ಗದ ಭಾಷೆಗಳೂ ಸಂಸ್ಕೃತಜನ್ಯವೆಂಬ ವಾದ ಮುಂದುವರಿಯಿತು. ಆದರೆ ನಿತ್ಯಗಟ್ಟಲೆಯ ವ್ಯವಹಾರಕ್ಕೆ ಅತ್ಯಾವಶ್ಯಕವಾದ ಮತ್ತು ಭಾಷೆಯ ನಾಡಿಯಂತಿರುವ ಶಬ್ದಸಾಮಗ್ರಿಯನ್ನು ವ್ಯಾಕರಣ

ಪ್ರಕ್ರಿಯೆಗಳು ಹಾಗೂ ಸಂಖ್ಯಾವಾಚಕ ಶಬ್ದಗಳನ್ನು ನೋಡಿದರೆ ಇವೆರಡೂ ಭಿನ್ನವರ್ಗದವೆಂಬ ಸತ್ಯಾಂಶ ಗೋಚರವಾಗುತ್ತದೆ. ಆದುದರಿಂದ ಸರ್ ಜಾರ್ಜ್ ಗ್ರಿಯರ್ಸನ್,[95] ರಾ. ನರಸಿಂಹಾಚಾರ್,[96] ಸ್ಟೆನ್‌ಕೊನೋ ಮುಂತಾದವರು ದ್ರಾವಿಡಭಾಷಾವರ್ಗ ಸಿಥಿಯನ್ ಅಥವಾ ಜಗತ್ತಿನ ಯಾವುದೇ ಭಾಷಾಪರಿವಾರದೊಡನೆ ಸೇರದೆಂದೂ ಅದು ತಾನೇ ಪ್ರತ್ಯೇಕ ಹಾಗೂ ಸ್ವತಂತ್ರ ಭಾಷಾಪರಿವಾರವಾಗಿ ನಿಲ್ಲುವುದೆಂದೂ ಅಭಿಪ್ರಾಯಪಟ್ಟಿರುವುದು ಇಂದಿಗೂ ತೃಪ್ತಿಕರವಾಗಿ ತೋರುತ್ತದೆ. ಆದರೆ ದ್ರಾವಿಡಭಾಷೆಗಳು ಸಂಸ್ಕೃತಜನ್ಯವಲ್ಲವೆಂಬ ಅಂಶವನ್ನು ಮೊತ್ತಮೊದಲು ತಿಳಿಸಿದ ಯೂರೋಪಿನ ವಿದ್ವಾಂಸ, ಫ್ರಾನ್ಸಿಸ್ ವೈಟ್ ಎಲ್ಲಿಸ್. ಈತನನ್ನು ದ್ರಾವಿಡಭಾಷಾಶಾಸ್ತ್ರದ ಜನಕನೆಂದು ಪರಿಗಣಿಸಲಾಗಿದೆ. ಇವನ ನಂತರ ರಾಸ್ಕ್ ಕೂಡ ಎಲ್ಲಿಸ್‌ರ ನಿಲವನ್ನೇ ಸಮರ್ಥಿಸಿದ್ದಾನೆ. ಮುನ್ನಡೆದು ದ್ರಾವಿಡಭಾಷೆಗಳು ಸಂಸ್ಕೃತಜನ್ಯವಲ್ಲವೆಂದು ಅನೇಕ ಅಂಕಿ ಅಂಶಗಳ ಆಧಾರದಿಂದ ಸ್ಥಿರೀಕರಿಸಿದ ಶ್ರೇಯಸ್ಸು ಎಫ್. ಕಿಟ್ಟೆಲ್, ಗುಂಡರ್ಟ್, ಆರ್. ಭಗವತ್ ಅವರಿಗೆ ಸಲ್ಲುತ್ತದೆ.

ದ್ರಾವಿಡಶಬ್ದ ಸ್ವರೂಪ: ದ್ರಾವಿಡ ಭಾಷೆಗಳನ್ನು ಯಾವುದಾದರೂ ಭಾಷಾವರ್ಗದಲ್ಲಿ ಸೇರಿಸುವ ಬಗ್ಗೆಯಾಗಲಿ ಅಥವಾ ಅವುಗಳನ್ನು ಒಟ್ಟುಗೂಡಿಸಿ ಒಂದು ಭಾಷಾವರ್ಗವೆಂದು ಗೊತ್ತುಮಾಡುವ ಬಗ್ಗೆಯಾಗಲಿ ಎಷ್ಟು ಚರ್ಚೆ ನಡೆದಿದೆಯೋ ಅಷ್ಟೇ ಚರ್ಚೆ 'ದ್ರಾವಿಡ' ಶಬ್ದದ ಐತಿಹಾಸಿಕ ಹಿನ್ನೆಲೆ ಮತ್ತು ಅದರ ಬಳಕೆಯ ಬಗ್ಗೆಯೂ ನಡೆದಿದೆ. ಈ ಶಬ್ದವು ಮಹಾಭಾರತ, ಬೃಹತ್ ಸಂಹಿತೆ, ತಂತ್ರವಾರ್ತಿಕೆ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆದರೆ ಅದನ್ನು ಯಾವ ಅರ್ಥದಲ್ಲಿ ಪ್ರಯೋಗಿಸಲಾಗಿತ್ತು ಎಂಬುದು ಸ್ಪಷ್ಟವಿಲ್ಲ. ಈ ಶಬ್ದವನ್ನು ಕೆಲವು ಕಡೆ ದೇಶವಾಚಕವಾಗಿಯೂ ಕೆಲವು ಕಡೆ ಜಾತಿಸಂಗಡವಾಚಕವಾಗಿಯೂ ಮತ್ತೆ ಕೆಲವು ಕಡೆ ಭಾಷಾವಾಚಕವಾಗಿಯೂ ಪ್ರಯೋಗಿಸಲಾಗಿದೆ ಎಂಬುದಕ್ಕೆ ಆಧಾರಗಳಿವೆ. ದ್ರಾವಿಡ ಶಬ್ದದಿಂದಲೇ 'ತಮಿಳು' ಶಬ್ದ ವಿಕಾಸಗೊಂಡಿರಬಹುದೆಂದು ಹಲವರ ಅಭಿಮತ. ದ್ರಾವಿಡ > ದ್ರಮಿಡ > ದ್ರಮಿೞ್ > ದಮಿೞ್ > ತಮಿೞ್ ಎಂದಾಗಿದೆ ಎಂದು ಒಂದು ಮತ; ಕಾಲ್ಡ್‌ವೆಲ್ ಈ ನಿಷ್ಪತ್ತಿಯನ್ನು ವಿರೋಧಿಸಿದ್ದಾನೆ.[97] ಪಾಳಿ, ಪ್ರಾಕೃತ, ಸಂಸ್ಕೃತ, ಗ್ರೀಕ್ ಭಾಷೆಗಳ ಪ್ರಾಚೀನ ಗ್ರಂಥಗಳಲ್ಲಿ ದ್ರಾವಿಡ, ದ್ರಮಿಡ, ದ್ರಮಿೞ್, ದಮಿಳ, ದ್ರಮನಿಕೆ, ತಮಿೞ್ ಎಂಬ ಪದಗಳು ದೊರೆಯುತ್ತವೆ. ಸುನೀತಿಕುಮಾರ್ ಚಟರ್ಜಿಯವರು Dramil > Dramida > Dravida > Dravila > Dramiz > Damiz (Ancient Tamil) > Draminike (Greek) > Dramila (Pali) > Tamil (600 A.D) ಎಂಬ ನಿಷ್ಪತ್ತಿಯನ್ನು ಸೂಚಿಸಿದ್ದಾರೆ.[98] ಆಂಗ್ಲ ಲೇಖಕರು Tamulian ಅಥವಾ Tamulic ಪದವನ್ನು ಉಪಯೋಗಿಸುತ್ತಿದ್ದರು. ಆದರೆ ಆ ಅರ್ಥದಲ್ಲಿ 'ದ್ರಾವಿಡ' ಎಂಬ ಪದ ಸೂಕ್ತವಾಗಿ ಕಂಡುಬಂದು ಕ್ರಮೇಣ 'ದ್ರಾವಿಡ' ಪದವೇ ಪ್ರಯೋಗವಾಗಿದೆ. ಕುಮಾರಿಲಭಟ್ಟನ (೮ ಶತಮಾನ) 'ತಂತ್ರವಾರ್ತಿಕೆ'ಯಲ್ಲಿ (ಅಧ್ಯಾಯ ೧, ಪಾದ ೩, ಅಧಿಕರಣ ೬)

ಬರುವ 'ಆಂಧ್ರದ್ರಾವಿಡಭಾಷಾ' ಎಂಬ ಉಲ್ಲೇಖವೇ ಭಾಷಾವಾಚಿಯಾದ ಮೊದಲ ಉಲ್ಲೇಖ. ಕನ್ನಡವನ್ನು ತೆಲುಗಿನಲ್ಲಿಯೂ, ಮಲಯಾಳವನ್ನು ತಮಿಳಿನಲ್ಲಿಯೂ ಸಮಾವೇಶಮಾಡಿ ದಕ್ಷಿಣ ಭಾರತದ ಭಾಷೆಗಳನ್ನು 'ಆಂಧ್ರ ದ್ರಾವಿಡ ಭಾಷಾ' ಎಂದು ಹೇಳಿರಬೇಕೆಂದು ಡಾ. ಕಾಲ್ಡ್‌ವೆಲ್ ಮತ.[99] ಸಂಸ್ಕೃತೇತರ ಶಬ್ದಗಳಿಗೂ ಸಂಸ್ಕೃತ ಧಾತುಗಳಿಂದ ನಿಷ್ಪತ್ತಿ ಹೇಳುವ ಸಂಸ್ಕೃತಜ್ಞರನ್ನು ಕುರಿತು ಹೇಳುವಲ್ಲಿ ಇತರ ಭಿನ್ನಭಾಷೆಗಳ ಪದಗಳನ್ನು ಹೇಳಿ, ದ್ರಾವಿಡ ಶಬ್ದಗಳನ್ನು ಹೇಳಹೋಗಿ ಕುಮಾರಿಲಭಟ್ಟನು 'ಅಥ ದ್ರಾವಿಡ ಭಾಷಾಯಾಂ' ಎಂದು ಉಪಕ್ರಮಿಸಿದ್ದಾನೆ. ವಿದ್ವಾಂಸರು ಈ ಪಾಠವನ್ನು 'ಆಂಧ್ರ ದ್ರಾವಿಡ ಭಾಷಾಯಾಂ' ಎಂದು ತಪ್ಪಾಗಿ ಓದಿಕೊಂಡುದೇ ಈ ಭ್ರಮೆಗೆ ಅವಕಾಶವಾಗಿರಬೇಕು ಎಂದು ಕೆ. ರಾಮಕೃಷ್ಣಯ್ಯನವರು ಸಕಾರಣವಾಗಿ ಹೇಳಿದ್ದಾರೆ.[100] ಇದಲ್ಲದೆ 'ದ್ರಾವಿಡ'ವನ್ನು 'ಮ್ಲೇಚ್ಛ ಭಾಷಾ' ಪಟ್ಟಿಯಲ್ಲಿ ಸೇರಿಸಿದ್ದಾನಾದ್ದರಿಂದ ಕುಮಾರಿಲಭಟ್ಟನ ದೃಷ್ಟಿಯಲ್ಲಿ ದ್ರಾವಿಡ ಸಂಸ್ಕೃತಪ್ರಾಕೃತ ವರ್ಗಕ್ಕೆ ಸೇರಿದ್ದಲ್ಲವೆಂಬ ಅಂಶವೂ ಸ್ಪಷ್ಟವಾಗಿದೆ.

ಪ್ರಸಿದ್ಧ ಇತಿಹಾಸಕಾರ ಹೆರೊಡಟಸ್, ಕ್ರೀಟಿನ ಹೆಲೆನಿಕ್ ಪೂರ್ವದ ಮೂಲಜನ ತಮ್ಮನ್ನು 'ತೆರ್ಮಿಲೈ' (Termilai) ಎಂದು ಕರೆದುಕೊಳ್ಳುತ್ತಿದ್ದರೆಂದು ತಿಳಿಸಿದ್ದಾನೆ. ಇದಲ್ಲದೆ ಲಿಸಿಯನ್ ಶಾಸನಗಳಲ್ಲಿ ಲಿಸಿಯನರು ತಮ್ಮನ್ನು 'ತ್ರಿಮ್ಮಿಲಿ' (Trmmili) ಎಂದು ಹೇಳಿಕೊಂಡಿರುವುದು ತಿಳಿದುಬಂದಿದೆ. Termilai ಮತ್ತು Trmmili ಇವೆರಡು ಒಂದೇ ಮೂಲಶಬ್ದ 'ತಮಿಳ್'ದ ಎರಡು ರೂಪಗಳಿರಬೇಕು. ಆದರೆ ಕೇವಲ ಊಹೆ ಇದು. 'ದ್ರಾವಿಡ' ಎಂಬ ಶಬ್ದವೇ ಅತಿ ಪ್ರಾಚೀನ ಶಬ್ದವಾಗಿರುವುದರಿಂದ, Termilai ಮತ್ತು Trmmiliಗಳ ನಿಷ್ಪತ್ತಿ 'Tamil'ನಿಂದ ಆಗಿರುವುದರಲ್ಲಿ ಸತ್ಯಾಂಶ ಕಡಿಮೆ ಎನ್ನಬಹುದು. ಪೂರ್ವ ದ್ರಾವಿಡರಲ್ಲಿ ಕೇವಲ ಅಘೋಷ ಧ್ವನಿಗಳಿದ್ದು ಈಗ ಕನ್ನಡ ತೆಲುಗು ಭಾಷೆಗಳಲ್ಲಿ ಬಳಕೆಯಲ್ಲಿರುವ 'ಘೋಷ' ಧ್ವನಿಗಳು ಅನಂತರ ವಿಕಾಸಗೊಂಡವು ಎಂಬ ಅಂಶಗಳನ್ನು ಆಧಾರವಾಗಿಟ್ಟುಕೊಂಡು Tamil ಎಂಬುದೇ ಮೂಲರೂಪ ಎಂಬ ವಾದವನ್ನು ಅನೇಕರು ಮುಂದಿಟ್ಟಿದ್ದಾರೆ. ನಾಲ್ಕನೆಯ ಶತಮಾನದ ಗ್ರಂಥವಾದ 'ಪದ್ಮಪುರಾಣ'ದಲ್ಲಿ 'ಜಾತಹಂ ದ್ರಾವಿಡೇ ದೇಶೇ....' ಎಂಬಲ್ಲಿ ದ್ರಾವಿಡ ಶಬ್ದದ ಬಳಕೆಯಾಗಿರುವುದರಿಂದ ಮತ್ತು ಇದೇ ಕಾಲದ 'ಮಾರ್ಕಂಡೇಯ ಪುರಾಣ'ದಲ್ಲೂ 'ದ್ರಾವಿಡ' ಶಬ್ದದ ಪ್ರಸ್ತಾಪವಾಗಿರುವುದರಿಂದ 'ದ್ರಾವಿಡ' ಶಬ್ದದ ಪೂರ್ವೇತಿಹಾಸವನ್ನು ಹೀಗೆ ಕ್ರಿ.ಪೂ. ೫ ಶತಮಾನಗಳವರೆಗೂ ಕೊಂಡೊಯ್ಯಲಾಗಿದೆ.

ದ್ರಾವಿಡ ಭಾಷೆಗಳು, ಅವುಗಳ ವರ್ಗೀಕರಣ: ದ್ರಾವಿಡ ಭಾಷಾಪರಿವಾರದಲ್ಲಿ ಸುಮಾರು ನೂರ ಐವತ್ತಕ್ಕೂ ಹೆಚ್ಚು ಭಾಷೆ ಉಪಭಾಷೆಗಳಿದ್ದರೂ, ಇದುವರೆಗೆ ಕೇವಲ ೨೩ ಭಾಷೆ ಉಪಭಾಷೆಗಳ ಬಗೆಗೆ ಅಧ್ಯಯನ ನಡೆದು ಅವುಗಳ ಸ್ವರೂಪ ಮತ್ತು ರಚನೆಗಳ ಬಗೆಗೆ ಸಾಕಷ್ಟು ವಿಷಯ ತಿಳಿದಿದೆ. ಇದುವರೆಗೆ ಬೆಳಕಿಗೆ ಬಂದಿರುವ ೨೩ ಭಾಷೆ ಉಪಭಾಷೆಗಳು: ತಮಿಳು, ಕನ್ನಡ, ತೆಲುಗು, ಮಲಯಾಳ, ತುಳು, ತೊದ, ಕೋತ,

ಬಡಗ, ಕೊಡಗು, ಕುಈ, ಕುವಿ, ಪೆಂಗು, ಗದಬ, ಕೊಲಾಮಿ, ಕೊಂಡ, ನಾಯ್ಕಿ, ಪಾರ್ಜಿ, ಕೊಯ, ಗೋಂಡಿ, ಮಂಡ, ಕುರುಖ್, ಮಾಲ್ತೋ, ಬ್ರಾಹ್ವಿ. ೧೯೭೦ರ ಈಚೆಗೆ ಅನೇಕ ವಿದ್ವಾಂಸರು ಸವರ, ದೊರ್ಲಿ, ಧಾಂಗರ್‌ಕುರುಖ್ ಭಾಷೆಗಳನ್ನು ಸ್ವತಂತ್ರ ಭಾಷೆಗಳನ್ನಾಗಿ ಪರಿಗಣಿಸಲು ಪ್ರಯತ್ನಪಟ್ಟಿರುವರಾದರೂ ಅವರ ಪ್ರಯತ್ನ ಸಫಲವಾಗಿಲ್ಲ. ೧೯೭೧ರಲ್ಲಿ ಕೆನ್ನೆತ್ ಎಲ್. ಪೈಕ್ ಮತ್ತು ಗಾರ್ಡನ್ ಅವರು ನೇಪಾಳದ ಧಾಂಗರಿಗಳು ಮಾತನಾಡುವ ಭಾಷೆಯಾದ 'ಧಾಂಗರ್ ಕುರುಖ'ನ್ನು ಬೆಳಕಿಗೆ ತಂದರು. ಅವರು ಅದನ್ನು ಕುಡುಖ್ ಅಥವಾ ಕುರುಖ್ ಭಾಷೆಯ ಉಪಭಾಷೆಯೆಂದಷ್ಟೇ ಹೇಳಿದ್ದಾರೆ.[101]

ವ್ಯಾಕರಣದ ದೃಷ್ಟಿಯಿಂದ ದ್ರಾವಿಡಭಾಷೆಗಳು 'ಅಂಟು ಭಾಷಾವರ್ಗ'ಕ್ಕೆ ಸೇರಿದರೂ ಭೌಗೋಳಿಕವಾಗಿ ಈ ಭಾಷಾ ಪರಿವಾರಕ್ಕೆ ಸೇರಿದ ಎಲ್ಲ ಭಾಷೆ ಉಪಭಾಷೆಗಳನ್ನೂ ಅವುಗಳ ಆಂತರಿಕ ಸಂಬಂಧವನ್ನೂ ಆಧಾರವಾಗಿಟ್ಟುಕೊಂಡು ದ್ರಾವಿಡ ಭಾಷೆಗಳನ್ನು ಉತ್ತರ ದ್ರಾವಿಡ, ಮಧ್ಯ ದ್ರಾವಿಡ, ಹಾಗೂ ದಕ್ಷಿಣ ದ್ರಾವಿಡ ಎಂದು ಮೂರು ಮುಖ್ಯ ವಿಭಾಗಗಳನ್ನಾಗಿ ವರ್ಗೀಕರಿಸಬಹುದು; ಹಾಗೆಯೇ ವಿವಿಧ ಉಪವರ್ಗಗಳನ್ನೂ ಮಾಡಬಹುದು. ಸರ್ ಜಾರ್ಜ್ ಗ್ರಿಯರ್ಸನ್ ದ್ರಾವಿಡ ಭಾಷೆಗಳನ್ನು ಐದು ಗುಂಪುಗಳಾಗಿ ವಿಭಾಗಿಸಿದ್ದಾರೆ: (೧) ಆಂಧ್ರವರ್ಗ: ತೆಲುಗು ಇತ್ಯಾದಿ (೨) ದ್ರಾವಿಡ ವರ್ಗ: ತಮಿಳು ಇತ್ಯಾದಿ. (೩) ಮಧ್ಯವರ್ತಿವರ್ಗ: ಗೋಂಡಿ, ಮಾಲ್ತೋ ಇತ್ಯಾದಿ. (೪) ವಾಯವ್ಯ ದ್ರಾವಿಡವರ್ಗ: ಬ್ರಾಹ್ವಿ ಇತ್ಯಾದಿ. (೫) ಆರ್ಧ ದ್ರಾವಿಡವರ್ಗ: ಭರಿಯ. ಆದರೆ ಗ್ರಿಯರ್ಸನ್ ಈ ವರ್ಗೀಕರಣಕ್ಕೆ ಭಾಷೆಗಳಲ್ಲಿ ಕಂಡುಬರುವ ಪರಸ್ಪರ ಸಾಮ್ಯವನ್ನಾಗಲಿ, ಭೌಗೋಳಿಕ ಹಿನ್ನೆಲೆಯನ್ನಾಗಲಿ ಖಚಿತವಾಗಿ ಗಮನಕ್ಕೆ ತೆಗೆದುಕೊಂಡಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಈಗಾಗಲೇ ಹೇಳಿರುವಂತೆ ಭೌಗೋಳಿಕ ಪ್ರಸಾರದ ಹಿನ್ನೆಲೆಯಲ್ಲಿ ದ್ರಾವಿಡ ಭಾಷೆಗಳನ್ನು ಉತ್ತರ ದ್ರಾವಿಡ, ಮಧ್ಯ ದ್ರಾವಿಡ ಮತ್ತು ದಕ್ಷಿಣ ದ್ರಾವಿಡ ಎಂಬುದಾಗಿ ವರ್ಗೀಕರಿಸಿದ್ದಾರೆ. ಈ ರೀತಿಯ ವರ್ಗೀಕರಣದಲ್ಲಿ ಕುರುಖ್ (ಒರಾಒನ್), ಮಾಲ್ತೋ (ಮಾಲೇರ್ ಅಥವಾ ರಾಜಮಹಾಲ್) ಮತ್ತು ಬ್ರಾಹ್ವಿ ಭಾಷೆಗಳು ಉತ್ತರ ದ್ರಾವಿಡ ವರ್ಗದಲ್ಲಿ ಸೇರುತ್ತವೆ. ಕುಈ, ಕುವಿ, ಪೆಂಗು, ಗದಬ, ಕೊಲಾಮಿ, ಕೊಂಡ, ನಾಯ್ಕಿ, ಪಾರ್ಜಿ, ಕೊಯ, ಗೋಂಡಿ, ಮಂಡ ಇವು ಮಧ್ಯ ದ್ರಾವಿಡವರ್ಗದಲ್ಲಿ ಸೇರುತ್ತವೆ. ಉಳಿದ ಭಾಷೆಗಳಾದ ಕನ್ನಡ, ತಮಿಳು, ತೆಲುಗು, ಮಲಯಾಳ, ತೊದ, ಕೋತ, ಬಡಗ, ಕೊಡಗು ಮತ್ತು ತುಳು—ಇವು ದಕ್ಷಿಣ ದ್ರಾವಿಡ ವರ್ಗದಲ್ಲಿ ಸೇರುತ್ತವೆ. ದ್ರಾವಿಡ ಭಾಷೆಗಳನ್ನು ಈ ಭಾಷೆಗಳು ಕಾಲಾನುಕ್ರಮದಲ್ಲಿ ಐತಿಹಾಸಿಕವಾಗಿ ಹೇಗೆ ಮೂಲ ದ್ರಾವಿಡದ ತಾಯಿಬೇರಿನಿಂದ ಬೇರೆ ಬೇರೆಯಾಗಿ ಬೆಳೆದುಬಂದಿತೆಂಬ ಅಂಶದ ಮೇಲೆ ವಿಭಾಗಿಸುವ ಮೂರನೆಯ ಕ್ರಮವೂ ರೂಢಿಯಲ್ಲಿದೆ. ಮೂಲದ್ರಾವಿಡದಿಂದ ಇಂದಿನ ದ್ರಾವಿಡ ಭಾಷೆಗಳು ಎಂದು ಬೇರೆಯಾದುವು ಎಂಬ ವಿಚಾರದಲ್ಲಿ, ಭಾಷಾ ಕಾಲಕ್ರಮ

ವಿಜ್ಞಾನದ ನಿಯಮಗಳನ್ನು ಅನ್ವಯಿಸಿ ನಡಸಿದ ಅಭ್ಯಾಸವೇ ಈ ವರ್ಗೀಕರಣಕ್ಕೆ ಆಧಾರ.[102] ಇಲ್ಲಿ 'ಮೂಲದ್ರಾವಿಡ' ಎಂಬಲ್ಲಿ 'ಮೂಲ' ಎಂಬ ಪದವನ್ನು ಪ್ರಾಚೀನವಾದ, ಆದಿಯ ಎಂಬ ಅರ್ಥದಲ್ಲಿ ಬಳಸಲಾಗಿದೆ. ಭಾಷಿಕ ಪುನರ್ರಚನೆಯ (Linguistic reconstruction) ತಂತ್ರಗಳನ್ನು ಬಳಸಿ, ಪ್ರಕೃತ ಬಳಕೆಯಲ್ಲಿರುವ ದ್ರಾವಿಡ ಭಾಷೆಯ ಅಥವಾ ಭಾಷೆಗಳ ರಚನೆಯ ಆಧಾರದ ಮೇಲೆ, ಊಹಿಸಲಾದ 'ಆದಿಯ' ಭಾಷಾರಚನೆಯೇ ಮೂಲದ್ರಾವಿಡ ಎನಿಸಿಕೊಳ್ಳುವುದು. ಉತ್ತರ, ದಕ್ಷಿಣ ಮತ್ತು ಮಧ್ಯವರ್ಗದ ಭಾಷೆಗಳೆಲ್ಲವನ್ನೂ ಅಥವಾ ಆ ಗುಂಪುಗಳ ಪ್ರತಿನಿಧಿ ಭಾಷೆಗಳನ್ನು ಒಟ್ಟುಗೂಡಿಸಿ, ವಿವಿಧ ಬಗೆಯ ಭಾಷಿಕ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಭಾಷಿಕ ಅಂಶಗಳ ತುಲನೆಮಾಡಿ ಇವೆಲ್ಲಕ್ಕೂ ಆಧಾರಭೂತವಾದ ದ್ರಾವಿಡ ಭಾಷೆಯ ರಚನೆಯತ್ತ ಬರಲು ಭಾಷಾ ಪುನರ್ರಚನೆಯ ತಂತ್ರಗಳನ್ನು ಬಳಸಬಹುದು. ಹೀಗೆ ಭಾಷೆಯ ಧ್ವನಿ ವ್ಯಾಕರಣ ಮುಂತಾದ ಎಲ್ಲ ಅಂಗಗಳಲ್ಲಿಯೂ ಅಧ್ಯಯನಮಾಡಿ ಊಹಿಸಿಕೊಂಡ 'ಆದಿ' ಭಾಷೆಗೆ 'ಮೂಲದ್ರಾವಿಡ' ಎಂದು ಹೇಳುವುದು ವಾಡಿಕೆಯಾಗಿದೆ. ಅಧ್ಯಯನವನ್ನು ದಕ್ಷಿಣ, ಉತ್ತರ ಅಥವಾ ಮಧ್ಯ ದ್ರಾವಿಡ ಭಾಷೆಗಳಿಗಷ್ಟೇ ಸೀಮಿತಗೊಳಿಸಿದಲ್ಲಿ ಕ್ರಮವಾಗಿ ಮೂಲ ದಕ್ಷಿಣ ದ್ರಾವಿಡ, ಮೂಲ ಉತ್ತರ ದ್ರಾವಿಡ, ಮೂಲ ಮಧ್ಯದ್ರಾವಿಡ ಎಂದು ಹೆಸರಿಸಬಹುದು. ಆದರೆ ಇದು ಕೇವಲ ಊಹೆಯಷ್ಟೆ. ಇದರಿಂದ ನಿರ್ದಿಷ್ಟ ಹಾಗೂ ಖಚಿತ ಫಲಿತಾಂಶ ಕಂಡುಬರುವ ಸಾಧ್ಯತೆ ಕಡಿಮೆ ಎಂದೇ ಹೇಳಬಹುದು. ಕೇವಲ ಚಾಕ್ಷುಷ ದ್ರಾವಿಡ ಭಾಷೆಗಳನ್ನೇ ಗಣನೆಗೆ ತೆಗೆದುಕೊಂಡಾಗ, ಅವುಗಳ ವಿಕಾಸವನ್ನು ಈ ರೀತಿ ತೋರಿಸಬಹುದು:




ದ್ರಾವಿಡ ಭಾಷೆಗಳ ಉಪವರ್ಗೀಕರಣದ ಕಾರ್ಯವೂ ನಡೆದು ದಕ್ಷಿಣ ದ್ರಾವಿಡ ವರ್ಗದಲ್ಲೇ ನಾಲ್ಕು ಉಪವರ್ಗಗಳು ಏರ್ಪಟ್ಟಿವೆ. ತಮಿಳು-ಮಲಯಾಳ ವರ್ಗದಲ್ಲಿ ತಮಿಳು, ಮಲಯಾಳ, ತೊದ, ಕೋತ ಭಾಷೆಗಳು ಸೇರುತ್ತವೆ. ಈ ಭಾಷೆಗಳು ಒಂದೇ ಪೂರ್ವ ಭಾಷೆಯಿಂದ ಉದ್ಭವಿಸಿದವು. ಅವುಗಳ ನಡುವೆ ಕಂಡುಬರುವ ಸಾಮ್ಯವೇ ಸಾಕ್ಷಿಯಾಗಿದೆ. ಕನ್ನಡ ವರ್ಗದಲ್ಲಿ ಕನ್ನಡ, ಬಡಗ, ಕೊಡಗು ಭಾಷೆಗಳು ಸೇರುತ್ತವೆ. ಈ ವರ್ಗದ ಭಾಷೆಗಳಿಗಿಂತ ಸ್ವಲ್ಪ ಭಿನ್ನವಾಗಿರುವ ತುಳು ಭಾಷೆಯು ತುಳುವರ್ಗದ ಏಕೈಕ ಸದಸ್ಯ

ಭಾಷೆಯಾಗಿದೆ. ತೆಲುಗು ಮತ್ತು ಅದರ ಪ್ರಮುಖ ಉಪಭಾಷೆಯಾದ ಸವರ, ತೆಲುಗು ವರ್ಗದಲ್ಲಿ ಸೇರಿರುವ ಭಾಷೆಗಳಾಗಿವೆ. ಮಧ್ಯದ್ರಾವಿಡ ಶಾಖೆಯಲ್ಲಿ ಕಂಡುಬರುವ ಸುಮಾರು ಹನ್ನೊಂದು ಭಾಷೆಗಳನ್ನು ಕೊಲಾಮಿ—ಪಾರ್ಜಿವರ್ಗ, ಗೋಂಡಿ—ಕೊಂಡ ವರ್ಗ, ಮತ್ತು ಕುಈ—ಕುವಿವರ್ಗ ಎಂದು ಮೂರು ವರ್ಗಗಳಾಗಿ ವರ್ಗೀಕರಿಸಬಹುದು. ಕೊಲಾಮಿ, ನಾಯ್ಕಿ, ಪಾರ್ಜಿ ಹಾಗೂ ಗದಬ ಇವು ಕೊಲಾಮಿ ವರ್ಗದಲ್ಲಿಯೂ ಗೋಂಡಿ, ಪೆಂಗು, ಕೊಂಡ, ಕೊಯ ಈ ಭಾಷೆಗಳು ಗೋಂಡಿ—ಕೊಂಡ ವರ್ಗ ದಲ್ಲಿಯೂ ಸೇರುತ್ತವೆ. ಉಳಿದ ಕುಈ, ಕುವಿ ಹಾಗೂ ಮಂಡ ಭಾಷೆಗಳು ಕುಈ—ಕುವಿ ವರ್ಗದಲ್ಲಿ ಸೇರುತ್ತವೆ. ಉತ್ತರ ದ್ರಾವಿಡ ಶಾಖೆಯ ಸದಸ್ಯ ಭಾಷೆಗಳಾದ ಕುರುಖ್ ಮತ್ತು ಮಾಲ್ತೋ ಒಂದು ವರ್ಗದಲ್ಲಿ ಸೇರಿದರೆ ಏಕೈಕ ಭಾಷೆಯಾದ ಬ್ರಾಹ್ವಿ, ಬ್ರಾಹ್ವಿ ವರ್ಗಕ್ಕೆ ಸೇರುತ್ತದೆ.

ಈ ವರ್ಗೀಕರಣದಲ್ಲಿಯೂ ಅಲ್ಪಸ್ವಲ್ಪ ನ್ಯೂನತೆಗಳು ಇಲ್ಲದೇ ಇಲ್ಲ. ತೆಲುಗು ಭಾಷೆಯನ್ನು ಅನೇಕರು ದಕ್ಷಿಣ ದ್ರಾವಿಡ ಭಾಷಾಶಾಖೆಯಲ್ಲಿ ಉಲ್ಲೇಖಿಸುವರಾದರೂ ಕೆಲವು ಅಂಶಗಳಲ್ಲಿ ದಕ್ಷಿಣ ದ್ರಾವಿಡ ಭಾಷೆಗಳೊಂದಿಗೆ, ಕೆಲವು ಅಂಶಗಳಲ್ಲಿ ಮಧ್ಯ ದ್ರಾವಿಡ ಭಾಷೆಗಳೊಂದಿಗೆ ಸಾಮ್ಯವನ್ನು ಅದು ಹೊಂದಿರುವುದು ಕಾಣುತ್ತದೆ. ಆದುದರಿಂದ ಅದು ಮಧ್ಯ ಮತ್ತು ದಕ್ಷಿಣ ವರ್ಗಗಳೆರಡರಲ್ಲೂ ಅಳವಡುತ್ತದೆಂಬ ಅಂಶವನ್ನು ಕೆಲವರು ಪ್ರತಿಪಾದಿಸಿದ್ದಾರೆ. ಭದ್ರಿರಾಜು ಕೃಷ್ಣಮೂರ್ತಿಯವರು ತೆಲುಗು ಭಾಷೆಯನ್ನು ಮಧ್ಯ ದ್ರಾವಿಡ ವಿಭಾಗದ ದೊಡ್ಡ ಕವಲೆಂದು ವಾದಿಸಿದ್ದಾರೆ. ಇದೇ ರೀತಿ ತುಳು ಭಾಷೆಯ ಸ್ಥಾನವೂ ಸ್ಪಷ್ಟವಾಗಿಲ್ಲ. ತುಳುವನ್ನು ಸ್ವತಂತ್ರ ಉಪಭಾಷೆ ಎಂದು ಹೇಳುವವರೂ ಕನ್ನಡದ ಉಪಭಾಷೆಯಷ್ಟೇ ಎಂದು ಹೇಳುವವರೂ ಇದ್ದಾರೆ.

ದ್ರಾವಿಡ ಭಾಷಾಕ್ಷೇತ್ರ : ದ್ರಾವಿಡ ಭಾಷೆಗಳಲ್ಲಿ ತಮಿಳು ಐತಿಹಾಸಿಕ ದೃಷ್ಟಿಯಿಂದ ಪ್ರಾಚೀನವಾಗಿರುವುದರಿಂದಲೂ ಆ ಭಾಷೆಗಳ ವಿಶಿಷ್ಟ ಲಕ್ಷಣಗಳನ್ನು ಕಾಪಾಡಿಕೊಂಡು ಬಂದಿರುವುದರಿಂದಲೂ ಅದು ಆ ವರ್ಗದ ಪ್ರಮುಖ ಭಾಷೆಯಾಗಿದೆ. ಸಂಸ್ಕೃತವನ್ನು ಬಿಟ್ಟರೆ ಭಾರತೀಯ ಭಾಷೆಗಳಲ್ಲೆಲ್ಲಾ ತಮಿಳು ಬಹಳ ಪ್ರಾಚೀನವಾದ, ಸಾಹಿತ್ಯ ಕೃತಿಯನ್ನು ಪಡೆದ ಭಾಷೆ. ಈ ಭಾಷೆಯ ಪ್ರಮುಖ ಕೇಂದ್ರ ತಮಿಳುನಾಡಾದರೂ ತಮಿಳರು ಭಾರತದ ಮಿಕ್ಕೆಡೆಗಳಲ್ಲೂ ಹರಡಿಕೊಂಡಿದ್ದಾರೆ. ಭಾರತದ ಹೊರಗೆ ಬರ್ಮ, ಸಿಲೋನ್, ಇಂಡೊನೇಷ್ಯ, ಲಕ್ಷದ್ವೀಪ, ಜಾವ ಮುಂತಾದ ದೇಶಗಳಲ್ಲಿ ತಮಿಳು ಮಾತಾಡುವವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ತಮಿಳನ್ನು ಮೊಟ್ಟಮೊದಲ ಯೂರೋಪಿಯನ್ನರು 'ತಮುಲ್' ಎಂದು ಕರೆದರು. ಜನ ಮತ್ತು ಭಾಷೆಯನ್ನು ಗುರುತಿಸಲು ಸಂಸ್ಕೃತದವರು 'ತಮಿಳಿಗೆ' ಸಂಸ್ಕೃತದ ಸಂವಾದಿಪದವಾದ 'ದ್ರಾವಿಡ'ವನ್ನು ಬಳಸಿದರೆಂಬುದನ್ನು ಈಗಾಗಲೇ ಗಮನಿಸಿದೆ. ವರಾಹಮಿಹಿರನ 'ಬೃಹತ್‌ಸಂಹಿತೆ'ಯ ಕೆಲವು ಪ್ರತಿಗಳಲ್ಲಿ 'ದ್ರವಿಡ'ಕ್ಕೆ ಬದಲು 'ದ್ರಮಿಡ' ಎಂದಿರುವುದನ್ನೂ ತಾರಾನಾಥನ ಒಂದು ಟಿಬೆಟನ್ ಗ್ರಂಥದಲ್ಲಿ 'ದ್ರಮಿಳ' ಎಂದಿರುವುದನ್ನೂ ಪಾಳಿಭಾಷೆಯ 'ಮಹಾವಂಸೋ

ಗ್ರಂಥದಲ್ಲಿ 'ದಮಿಳೋ' ಎಂದಿರುವುದನ್ನೂ ಗಮನಿಸಿದರೆ 'ತಮಿಳ್' ದ್ರಾವಿಡ ಎಂಬುದರಿಂದಲೇ ಬಂದಿರಬೇಕೆಂದು ಊಹೆ. ಟಾಲೆಮಿಯದಕ್ಕಿಂತ ಹಿಂದಿನದಾಗಿರಬಹುದಾದ ರೋಮನ್ ಭೂಪಟಗಳಲ್ಲಿ ಒಂದು ವಿಸ್ತಾರವಾದ ಪ್ರದೇಶಕ್ಕೆ Andre Ind-Damarice ಎಂದು ಹೆಸರು ಕೊಟ್ಟಿದೆ. ಪ್ರಾಯಶಃ ಇದು ಆಂಧ್ರ-ತಮಿಳ್ ಪ್ರದೇಶಗಳಾಗಿರಬಹುದು. ಟಾಲೆಮಿಯು ಇನ್ನೊಂದು ಭೂಭಾಗವನ್ನು Ariakē ಎಂದು ಕರೆದಿರುವುದರಿಂದ Damarikē ಎಂಬುದು 'ದ್ರಾವಿಡ' ಎಂಬುದಕ್ಕೆ ಸಂಬಂಧಿಸಿದ್ದು ಎಂದು ಹೇಳಬಹುದು.

ತಮಿಳಿನಲ್ಲಿ ಎರಡು ಪ್ರಕಾರಗಳು: ಶೆಂದಮಿಳ್ (Classical Tamil) ಮತ್ತು ಕೊಡುಂದಮಿಳ್ (Colloquial Tamil). ಇವೆರಡಕ್ಕೂ ಸಾಕಷ್ಟು ವ್ಯತ್ಯಾಸ ಕಂಡುಬರುತ್ತದೆ. ಶೆಂದಮಿಳ್ ರೂಪವು ತನ್ನದೇ ವಿಶಿಷ್ಟವೂ ಕೃತಕವೂ ಆದ ರೀತಿಯಲ್ಲಿ ಬೆಳೆದು ಬಂದಿದೆ. ಆಡುಮಾತಿನ ತಮಿಳಿನಲ್ಲಿ ಸಂಸ್ಕೃತವು ಬೆರೆತು ಅದೇ ಬೇರೆ ರೀತಿಯಾಗಿದೆ.

ಕ್ರಿ.ಪೂ. ೧ನೆಯ ಶತಮಾನದ್ದೆಂದು ಹೇಳಲಾಗಿರುವ ತಮಿಳುನಾಡಿನ ಮಧುರೆಯ ತಿನ್ನವೆಲ್ಲಿಯಲ್ಲಿ ಸಿಕ್ಕಿರುವ ಹಳೆಯ ತಮಿಳು ಶಾಸನವೇ ತಮಿಳು ಭಾಷೆಯ ಮೊದಲ ಶಿಲಾಶಾಸನವೆಂದು ಹಲವರ ಅಭಿಪ್ರಾಯ. ತಮಿಳು ಭಾಷೆಯ ಮೊತ್ತಮೊದಲ ವ್ಯಾಕರಣಗ್ರಂಥ 'ತೊಲ್‌ಕಾಪ್ಪಿಯಮ್' (ಸು. ಕ್ರಿ.ಶ. ೪೫೦). ಇದಲ್ಲದೆ ಬುದ್ಧಮಿತ್ರ ರಚಿತ 'ವೀರಸೋಳಿಯಮ್', ಭವಣಂದಿ ಮುನಿವರ ರಚಿತ 'ನನ್ನೂಲ್', 'ನಾಚ್ಚಿನಾರ್ಕಿನಿಯರ್', 'ಸೇವಿನಾದಮ್' ಇವೇ ಮೊದಲಾದ ತಮಿಳು ವ್ಯಾಕರಣಗಳೂ ಇವೆ. 'ತೊಲ್‌ಕಾಪ್ಪಿಯಮ್'ನಲ್ಲಿ ಹಳೆಯ ತಮಿಳು ಭಾಷೆಯ ಧ್ವನಿವ್ಯವಸ್ಥೆ, ಪದ ಮತ್ತು ವಾಕ್ಯರಚನೆಗಳನ್ನು ಕುರಿತ ಸುದೀರ್ಘ ವಿಚಾರವಿದೆ. ಹೀಗಿದ್ದೂ ಕೆಲವರು ವಿದ್ವಾಂಸರು ತಮಿಳಿನ ಪ್ರಾಚೀನತೆಯನ್ನು ಪ್ರಶ್ನಿಸಿದ್ದಾರೆ. ಈ ವಿಷಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ೧೯೪೦ರಲ್ಲಿ ತಿರುಪತಿಯಲ್ಲಿ ನಡೆದ ಹತ್ತನೆಯ ಪ್ರಾಚ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಅಂಶಗಳನ್ನು ಗಮನಿಸಬೇಕು. ಅವರು ಕನ್ನಡದಲ್ಲಿ ಬಳಕೆಯಲ್ಲಿರುವ, ಆದರೆ ತಮಿಳಿನಿಂದ ಬಂದುವೆಂದು ನಿಷ್ಪತ್ತಿಯನ್ನು ಹೇಳಲಾಗದ ಕೆಲವು ಶಬ್ದಗಳನ್ನು ಉದಾಹರಣೆಯಾಗಿ ಕೊಟ್ಟು, ತಮಿಳೊಂದೇ ಪ್ರಾಚೀನಭಾಷೆಯಲ್ಲ, ಪ್ರಾಚೀನವೆಂದು ಹೇಳುವಷ್ಟು ವಿಶಿಷ್ಟ ಲಕ್ಷಣಗಳನ್ನು ಕನ್ನಡವೂ ಹೊಂದಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.[103] ಕಾಲ್ಡ್‌ವೆಲ್ ಕೂಡ ಇದೇ ರೀತಿ ಹೇಳಿದ್ದಾನೆ:

> "...neither Tamil, nor any other single dialect, ancient or modern can be implicitly adopted as a faithful representative of the primitive Dravidian tongue."[104]

ಕೈಕಡಿ, ಕೊರ್ವಿ, ಯೆರುಕುಲ ಮುಂತಾದುವು ತಮಿಳು ಭಾಷೆಯ ಉಪಭಾಷೆಗಳು. ಇವಲ್ಲದೆ ಅನೇಕ ಪ್ರಾದೇಶಿಕ ಉಪಭಾಷೆಗಳೂ ಇವೆ.

ಮೂಲದ್ರಾವಿಡ ಸ್ವರಗಳಾದ ಇ ಮತ್ತು ಉ ಗಳು ತಮಿಳಿನಲ್ಲಿ ಇ, ಉ ಆಗಿ ಉಳಿದಿವೆ; ಕನ್ನಡದಲ್ಲಿ ಎ ಒ ಆಗಿವೆ. ಕನ್ನಡದ ಸ್ವರಾದಿಶಬ್ದಗಳು ತಮಿಳಿನಲ್ಲಿ ಅನೇಕ ವೇಳೆ ಯ ಧ್ವನಿಯಿಂದ ಪ್ರಾರಂಭವಾಗುತ್ತವೆ. ಅನೇಕ ವ್ಯಂಜನಾಂತ ಶಬ್ದಗಳನ್ನೂ ಸಂಧ್ಯಕ್ಷರಗಳಿಂದ ಮುಕ್ತಾಯವಾಗುವ ಶಬ್ದಗಳನ್ನೂ ಹೊಂದಿರುವುದು ತಮಿಳಿನ ವಿಶೇಷತೆ ಎಂದು ಹೇಳಬಹುದು. ಇದಲ್ಲದೆ ಎರಡನೆಯ ಅಕ್ಷರವನ್ನು ಮೃದುಗೊಳಿಸುವ ಪ್ರವೃತ್ತಿಯನ್ನೂ ತಮಿಳು ಹೊಂದಿದೆ. ತಮಿಳಿನಲ್ಲಿ ಘೋಷ ವ್ಯಂಜನಗಳು ಬಳಕೆಯಲ್ಲಿ ದ್ದರೂ ಅವಕ್ಕೆ ಬೇರೆ ಲಿಪಿಚಿಹ್ನೆ ಇಲ್ಲ. ವ್ಯಾಕರಣ ದೃಷ್ಟಿಯಿಂದ ತಮಿಳಿನಲ್ಲಿ ಯಾವುದೇ ವಿಶೇಷತೆ ಅಥವಾ ಭಿನ್ನತೆ ಕಂಡುಬರುವುದಿಲ್ಲ. ವಿ. ಸ್ವಾಮಿನಾಥ ಅಯ್ಯರ್, ಪೋಪ್, ವಿನ್ಸ್ಲ, ಕಾಲ್ಡ್ವೆಲ್, ಶೇಷಗಿರಿಶಾಸ್ತ್ರಿ ಮೊದಲಾದವರು ತಮಿಳು ಭಾಷೆ ಹಾಗೂ ವ್ಯಾಕರಣ ಕ್ಷೇತ್ರದಲ್ಲಿ ಗಣ್ಯ ಸೇವೆ ಸಲ್ಲಿಸಿದ್ದಾರೆ.

ಇದೇ ವರ್ಗಕ್ಕೆ ಸೇರಿದ ತೊದ, ಕೋತ ಭಾಷೆಗಳು ನೀಲಗಿರಿ ಬೆಟ್ಟ ಪ್ರದೇಶದಲ್ಲಿ ವಾಸಿಸುವ ತೊದನ ಹಾಗೂ ಉಳಿಮೆ ಜೀತಗಾರರ ಭಾಷೆಗಳಾಗಿವೆ. ತೊದ ಜನಾಂಗ ದವರನ್ನು ತೋಡರು ಎನ್ನುವರು. ಪಶುಪಾಲನೆಯೇ ಮುಖ್ಯ ಕಸುಬಾಗಿರುವ ತೋಡರ ಭಾಷೆ ದ್ರಾವಿಡ ಭಾಷೆಗೆ ಸೇರಿದ ವಿಶಿಷ್ಟವಾದ ಒಂದು ಮಿಶ್ರ ಭಾಷೆ. ಏಕೆಂದರೆ ತೋಡರು ತಮ್ಮಲ್ಲೇ ಮಾತನಾಡಿಕೊಳ್ಳುವಾಗ ಒಂದು ರೀತಿಯ ಭಾಷೆಯನ್ನು ಬಳಸುತ್ತಾರೆ; ಪ್ರಾರ್ಥನಾಸಮಯದಲ್ಲಿ, ಹೈನು ಮನೆಗೆ ಸೇರಿದ ವಿಚಾರ ತಿಳಿಸುವಲ್ಲಿ ಮತ್ತು ಇನ್ನಿತರ ಸಂದರ್ಭಗಳಲ್ಲಿ ಭಿನ್ನ ಭಿನ್ನ ಭಾಷೆಗಳನ್ನು ಬಳಸುತ್ತಾರೆ. ಬಡಗರೊಡನೆ ಮಾತನಾಡುವಾಗ ಬಹುಮಟ್ಟಿಗೆ ತಮಿಳು ಭಾಷೆಯನ್ನು ಹೋಲುವ ಭಾಷೆಯನ್ನು ಆರಿಸುತ್ತಾರೆ. ತೊದ ಭಾಷೆಯನ್ನು ವಿಶ್ಲೇಷಿಸಿ ಅದರ ವ್ಯಾಕರಣವನ್ನು ಬರೆದಿರುವ ಡಾ. ಪೋಪ್ ತೊದ ಕನ್ನಡಕ್ಕೆ ಸಮೀಪತರವಾಗಿದೆ ಎಂಬ ಕಾರಣದಿಂದ ಅದನ್ನು ಕನ್ನಡದ ಉಪಭಾಷೆ ಇರಬೇಕೆಂದು ಅಭಿಪ್ರಾಯಪಟ್ಟಿದ್ದಾನೆ. ಫ಼ ಈ ಭಾಷೆಯಲ್ಲಿ ಕಂಡು ಬರುವ ಒಂದು ವಿಶಿಷ್ಟ ಧ್ವನಿಮ. ತೊದ ಭಾಷೆಯಲ್ಲಿ ಪ್ರಥಮಾ ದ್ವಿತೀಯಾ ಹಾಗೂ ಷಷ್ಠೀ ವಿಭಕ್ತಿಗಳಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಮೂಲ ದ್ರಾವಿಡ ಅ, ಒ, ಓ ಸ್ವರಗಳು ಈ ಭಾಷೆಯಲ್ಲಿ ಕ್ರಮವಾಗಿ ಓ, ವ, ವಾ/ವೀ ಆಗಿವೆ.

ಕೊತ ಭಾಷೆಯನ್ನು ಕಾಲ್ಡ್ವೆಲ್ ಕನ್ನಡ ಭಾಷೆಗೆ ಅತಿ ಸಮೀಪದ ಭಾಷೆ ಎಂದು ಅಭಿಪ್ರಾಯಪಟ್ಟಿದ್ದಾನೆ. ಎಮಿನೊ ಈ ಭಾಷೆಯ ಬಗ್ಗೆ ಕೆಲಸಮಾಡಿ 'Kota Texts' ಎಂಬ ಉಪಯುಕ್ತ ಹೊತ್ತಗೆಗಳನ್ನು ಹೊರತಂದಿದ್ದಾರೆ. ಈ ಭಾಷೆಯಲ್ಲಿ ಘೋಷ ಮೂರ್ಧನ್ಯ ವ್ಯಂಜನ ಜಕಾರ ಬಳಕೆಯಲ್ಲಿರುವುದೂ ಪದದ ಆದಿಯಲ್ಲಿ ವ್ಯಂಜನ ಗುಚ್ಛಗಳ ಬಳಕೆಯಿಲ್ಲದಿರುವುದೂ ಒಂದು ವಿಶೇಷತೆ. ಅಲ್ಲದೆ ನಾಮಪದಗಳಲ್ಲಿ ಹೆಚ್ಚಿನ ಪ್ರಕೃತಿಗಳು ಮತ್ತು ಧಾತುಗಳು ಏಕಾಕ್ಷರಿಗಳು.

ಮಲಯಾಳ ಕೇರಳ ರಾಜ್ಯದ ಪ್ರಧಾನಭಾಷೆ. ಈ ಭಾಷೆಯನ್ನು ಆಡುವವರು ಕೇರಳವೇ ಅಲ್ಲದೆ ಭಾರತದ ಬೇರೆ ಬೇರೆ ರಾಜ್ಯಗಳ ಕೆಲವು ಪಟ್ಟಣಗಳಲ್ಲಿಯೂ ವಾಸ

ಮಾಡುತ್ತಿದ್ದಾರೆ. ಈ ಭಾಷೆಯ ರೂಪ ರಚನೆ ತಮಿಳು ಭಾಷೆಯನ್ನು ಒಟ್ಟಿನಲ್ಲಿ ಹೋಲುವುದು. ಈ ಕಾರಣಗಳಿಂದ ಇದು ತಮಿಳು ಭಾಷೆಗೆ ತುಂಬ ಹತ್ತಿರವಾಗಿದ್ದು, ಯಾವುದೋ ಕಾಲದಲ್ಲಿ ಅದರಿಂದ ವಿಕಾಸಗೊಂಡಿರುವ ಸಾಧ್ಯತೆಯಿದೆ. ಮಲಯಾಳ ಭಾಷೆಯ ಮೊತ್ತಮೊದಲ ತಾಮ್ರಶಾಸನ ಸುಮಾರು ೧೧ನೆಯ ಶತಮಾನದ ಸ್ಥಾಣು ರವಿಯ ಕೊಟ್ಟಾಯಂ ಶಾಸನ. ಆದರೆ ಸುಮಾರು ಹದಿನೇಳನೆಯ ಶತಮಾನದ ಹಿಂದಿನ ಶಾಸನಗಳಲ್ಲಾಗಲಿ, ಸಾಹಿತ್ಯಕೃತಿಗಳಲ್ಲಾಗಲಿ ಮ ಕಾರಾಂತವಾದ 'ಮಲಯಾಳಂ' ಎಂಬ ಪದದ ಪ್ರಯೋಗ ದೊರೆತಿಲ್ಲ. ಆದರೆ 'ಮಲನಾಟ್ಟು' ಎಂಬುದು ಪ್ರದೇಶ ಸೂಚಕ ವಾಗಿಯೂ 'ಮಲೆಯಾಳಿ' ಎಂಬುದು ಜನ, ವರ್ಗ ಸೂಚಕವಾಗಿಯೂ 'ಮಲೆಯಾಣ್ಮ' ಎಂಬುದು ಭಾಷಾಸೂಚಕವಾಗಿಯೂ ಬಳಕೆಯಾಗುತ್ತಿದ್ದುದಕ್ಕೆ ಸೂಚನೆಗಳಿವೆ. ಸಂಸ್ಕೃತದ 'ಮಲಯ' ದ್ರಾವಿಡದ 'ಮಲ್ಯ' ಆಗಿ ಅನಂತರ 'ಮಲೆ/ಮಲ' ಆಗಿರಬಹುದು. ಅಶೋಕನ ಶಾಸನಗಳಲ್ಲಿ ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಮಲಯಾಳ ಪ್ರದೇಶಕ್ಕೆ 'ಕೇರಳ' ಎಂದೂ ಅಲ್ಲಿಯ ಅರಸನಿಗೆ 'ಕೇರಳಪುತ್ರ'ನೆಂದೂ ಉಕ್ತವಾಗಿದೆ.

ಪ್ರಾಚೀನ ಮಲಯಾಳ ಗ್ರಂಥಗಳು ತಮಿಳು ಗ್ರಂಥಗಳಂತಿವೆಯಲ್ಲದೆ ಹಿಂದಿನ ಮಲಯಾಳ ಲಿಪಿಯೂ ತಮಿಳು ಲಿಪಿಯಂತೆಯೇ ಇದ್ದು, ಈಗ ಗ್ರಂಥಲಿಪಿಯನ್ನು ಬಳಸುತ್ತಾರೆ. ಸಂಸ್ಕೃತ ಶಬ್ದಗಳನ್ನು ತಮಿಳಿನಲ್ಲಿ ಬರೆಯಲು ತಮಿಳು ವರ್ಣಮಾಲೆ ಯನ್ನೇ ಸ್ವಲ್ಪ ಮಾರ್ಪಡಿಸಿಕೊಂಡು ಬರೆಯತೊಡಗಿದ್ದು ಗ್ರಂಥಲಿಪಿ ಹುಟ್ಟಲು ಕಾರಣವಾಯಿತು. ವ್ಯಾಕರಣ ಹಾಗೂ ಧ್ವನಿಮಾರಚನೆಯ ದೃಷ್ಟಿಯಿಂದ ಮಲಯಾಳ, ತಮಿಳು ಮತ್ತು ಇತರ ದ್ರಾವಿಡ ಭಾಷೆಗಳನ್ನು ಹೋಲುತ್ತದೆ. ಆದರೆ ಶೈಲಿಯ ದೃಷ್ಟಿ ಯಿಂದ ಮಲಯಾಳ ಭಾಷೆಯ ಮೇಲೆ ಸಂಸ್ಕೃತದ ಆಳವಾದ ಪ್ರಭಾವ ಎದ್ದುಕಾಣು ತ್ತದೆ. ಸಂಸ್ಕೃತ ವಾಕ್ಯ ವಾಕ್ಯಾಂಶಗಳು ಬೆರೆತ ಮಲಯಾಳದ ಶೈಲಿ 'ಮಣಿಪ್ರವಾಳ ಶೈಲಿ' ಎಂದೇ ಹೆಸರು ಪಡೆದಿದೆ. ಸಂಸ್ಕಾರ ಹಾಗೂ ಸಾಹಿತ್ಯಸಂಪನ್ನ ದ್ರಾವಿಡ ಭಾಷೆ ಗಳಲ್ಲಿ ಸಂಸ್ಕೃತದ ಪ್ರಭಾವ ಮಲಯಾಳದಲ್ಲೇ ಪ್ರಾಯಶಃ ಹೆಚ್ಚು.

ಮೂಲದ್ರಾವಿಡ ಭಾಷೆಯ ಧ್ವನಿಗಳನ್ನು ಉಳಿಸಿಕೊಂಡು ಬಂದಿರುವ ಭಾಷೆಗಳಲ್ಲಿ ತಮಿಳು ಭಾಷೆಯನ್ನು ಬಿಟ್ಟರೆ ಎರಡನೆಯ ಸ್ಥಾನ ಮಲಯಾಳ ಭಾಷೆಗೆ ಸಲ್ಲುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಮೂಲ ದ್ರಾವಿಡದ ಇ, ಉ ಕಾರಗಳು ಎ, ಒ ಕಾರಗಳಾಗಿ ವ್ಯತ್ಯಯ ಹೊಂದಿರುವ ಅಂಶವು ತಮಿಳಿನಂತೆ ಮಲಯಾಳದಲ್ಲೂ ಕಂಡು ಬರುವುದಿಲ್ಲ. ಐ ಮತ್ತು ಔ ಧ್ವನಿಮಾಗಳು ತಮಿಳಿನಂತೆ ಮಲಯಾಳದಲ್ಲಿ ಉಳಿದು ಕೊಂಡಿವೆ. ವ್ಯಾಕರಣದ ದೃಷ್ಟಿಯಿಂದ ಮಲಯಾಳದಲ್ಲಿ ಒಂದು ವೈಶಿಷ್ಟ್ಯ ಕಂಡು ಬರುತ್ತದೆ. ಈ ಭಾಷೆಯಲ್ಲಿ ವಚನ, ಪುರುಷ, ಲಿಂಗ ಭೇದಗಳಿಲ್ಲದೆ ಕ್ರಿಯಾಪದ ಒಂದೇ ರೂಪದಲ್ಲಿ ವ್ಯವಹಾರವಾಗುತ್ತದೆ. ಈ ಭಾಷೆಯ ಆದಿಗ್ರಂಥ 'ಲೀಲಾತಿಲಕಂ.' ಐರೋಪ್ಯ ವಿದ್ವಾಂಸರ ಪರಿಶ್ರಮದಿಂದ ಮಲಯಾಳ ಭಾಷೆಯ ವ್ಯಾಕರಣಗಳು, ಕೋಶಗಳು ಸಿದ್ಧವಾಗಿವೆ. ಪಿ. ಕ್ಲೆಮೆನ್ಸ್, ಗುಂಡರ್ಟ್, ಕಾಲ್ಡ್‌ವೆಲ್, ಆರ್. ಡ್ರಮೊಲ್,

ಈ ಮುಂತಾದ ವಿದ್ವಾಂಸರ ಹೆಸರುಗಳನ್ನು ಇಲ್ಲಿ ನೆನೆಯಬಹುದು.

ದ್ರಾವಿಡ ಭಾಷಾವರ್ಗದಲ್ಲಿ ಮತ್ತೊಂದು ಪ್ರಮುಖ ಚಾಕ್ಷುಷ ಭಾಷೆ ಕನ್ನಡ. ಇದು ಕರ್ಣಾಟಕ ರಾಜ್ಯದ ಪ್ರಮುಖ ಭಾಷೆ, ತಮಿಳು ಮೊದಲಾದ ಭಾಷೆಗಳಂತೆ ಸಾಹಿತ್ಯಸಂಪನ್ನ ಭಾಷೆ. ೧೯೬೧ನೆಯ ಜನಗಣತಿಯ ಪ್ರಕಾರ ಭಾರತದ ೧೭,೩೦, ೫೭,೬೯೯ ಜನರಿಗೆ ಇದು ಮಾತೃಭಾಷೆಯಾಗಿದೆ; ಸುಮಾರು ೩,೫೫೦೬೪೨ ಜನರಿಗೆ ಎರಡನೆಯ ಭಾಷೆಯಾಗಿದೆ. ಕನ್ನಡ ಭಾಷೆಯ ವಿಕಾಸದ ಬಗ್ಗೆ ಹೇಳುವಾಗ, ಮೂಲ ದಕ್ಷಿಣ ದ್ರಾವಿಡದಿಂದ ಮೂಲ ಕನ್ನಡ, ಮೂಲ ತಮಿಳು ಹಾಗೂ ತುಳು ಬೇರ್ಪಟ್ಟು ಅಂದಿನಿಂದ ತಮಿಳು ಮತ್ತು ಕನ್ನಡ ಪ್ರತ್ಯೇಕವಾಗಿ ವಿಕಾಸಗೊಂಡಿತೆಂಬುದು ಹಲವರ ಅಭಿಪ್ರಾಯ. ಕನ್ನಡವನ್ನು ಪ್ರಾಚೀನ ಸಂಸ್ಕೃತ ಪಂಡಿತರು ಕರ್ಣಾಟ ಅಥವಾ ಕರ್ಣಾಟಕ ಎಂದು ಭಾಷಾ ಪ್ರದೇಶಸೂಚಕವಾಗಿ ಕರೆದಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು Canarese ಅಥವಾ Kanarese ಎಂಬುದಾಗಿ ಕರೆದಿದ್ದಾರೆ. ಕವಿರಾಜಮಾರ್ಗದಲ್ಲಿ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂದೂ ಕಬ್ಬಿಗರ ಕಾವದಲ್ಲಿ "ಕನ್ನಡಮೆನಿಪ್ಪಾನಾಡು" ಎಂದೂ ಉಕ್ತವಾಗಿದೆ. ಈ ಮೊದಲೇ ಕನ್ನಡ ಮತ್ತು ಕರ್ಣಾಟ ಎಂಬ ಶಬ್ದಗಳ ನಿಷ್ಪತ್ತಿ ಅರ್ಥವ್ಯಾಪ್ತಿಗಳನ್ನೂ ದೇಶ ಮತ್ತು ಭಾಷಾವಾಚಿಯಾಗಿ ಅವುಗಳ ಪ್ರಾಚೀನ ಉಲ್ಲೇಖಗಳನ್ನೂ ಗಮನಿಸಿದೆಯಾದ್ದರಿಂದ ಇಲ್ಲಿ ಅವನ್ನು ಪುನರಾವರ್ತಿಸುವ ಅಗತ್ಯವಿಲ್ಲ. ಕ್ರಿ.ಶ. ಸು. ೪೫೦ರ ಹಲ್ಮಿಡಿಶಾಸನವೇ ಕನ್ನಡದ ಪ್ರಾಚೀನತಮ ಶಾಸನವೆನಿಸಿದೆ.

ಭಾಷಾ ಕಾಲಕ್ರಮ ವಿಜ್ಞಾನದ ನಿಯಮಗಳನ್ನು ಅನ್ವಯಿಸಿ ನಡೆಸಿದ ಅಭ್ಯಾಸದಂತೆ ಕನ್ನಡವು ತಮಿಳು ಭಾಷೆಯಿಂದ ಕ್ರಿ.ಶ. ಸು. ೪೦೦–೧೦೦೦ದ ನಡುವೆ ಬೇರ್ಪಟ್ಟಿದೆ ಎಂದು ಒಂದು ಅಂದಾಜು. ಅದು ಮೂಲ ದ್ರಾವಿಡದ ಸುಮಾರು ಶೇ. ೬೦ರಷ್ಟು ಶಬ್ದಗಳನ್ನು ಉಳಿಸಿಕೊಂಡಿದೆ ಎಂದೂ ಊಹಿಸಲಾಗಿದೆ.

ತಮಿಳು ಮೊದಲಾದ ಭಾಷೆಗಳಲ್ಲಿರುವಂತೆ ಕನ್ನಡದಲ್ಲಿಯೂ ನಾಮಪದಗಳಲ್ಲಿ ಲಿಂಗವಚನ ವಿಭಕ್ತಿಗಳ ವಿವಕ್ಷೆಯಿದೆ. ತಮಿಳು ಭಾಷೆಯ ವಿಶಿಷ್ಟ ಧ್ವನಿಯು ಳ ಹಳಗನ್ನಡ ನಡುಗನ್ನಡದ ಕಾಲಕ್ಕೆ ಮಾತ್ರ ಇದ್ದು, ಹೊಸಗನ್ನಡದಲ್ಲಿ ರಕಾರವಾಗಿದೆ. ಮೂಲ ದ್ರಾವಿಡದ ಸ್ವರ ಇ, ಎ ಆಗಿಯೂ ಉ ಆಗಿಯೂ ವ್ಯತ್ಯಯ ಹೊಂದಿದೆ. ಆದರೆ ಈ ವ್ಯತ್ಯಯ ಇ ಅಥವಾ ಉ ಪರವಾದಾಗ ಕಂಡುಬರುವುದಿಲ್ಲ. ಮೂಲದ್ರಾವಿಡ ಧ್ವನಿವ್ಯವಸ್ಥೆಗೆ ಕಲ್ಪಿಸಿಕೊಂಡಿರುವ ಅಯ್ ಎಂಬುದು ಕನ್ನಡದಲ್ಲಿ ಎರಡು ಇಲ್ಲವೆ ಹೆಚ್ಚಿನ ಅಕ್ಷರಗಳುಳ್ಳ ಶಬ್ದಾಂತ್ಯದಲ್ಲಿ ಬಂದಾಗ ಎಕಾರವಾಗಿದೆ.

ಕನ್ನಡದಲ್ಲಿಯೂ ಅನೇಕ ಉಪಭಾಷೆಗಳಿವೆ. ಬಡಗ ಮತ್ತು ಕೊಡಗು ಪ್ರಾರಂಭದಲ್ಲಿ ಕನ್ನಡದ ಉಪಭಾಷೆಗಳಾಗಿದ್ದು, ಈಗ ಸ್ವತಂತ್ರ ಉಪಭಾಷೆಗಳಾಗಿವೆ. ಹವ್ಯಕ, ಗೌಡ ಹಾಗೂ ಕುಂದಾಪುರ ಇವು ದಕ್ಷಿಣ ಕನ್ನಡದ ಪ್ರಾದೇಶಿಕ ಪ್ರಭೇದಗಳಾಗಿವೆ. ಹೀಗೆಯೆ ಉತ್ತರ ಕನ್ನಡದ ಪಾಲಕ್ಕೆ ಹಾಗೂ ಒಳನಾಡಿನ ಕನ್ನಡದ ಉತ್ತರದ ಪ್ರಭೇದಗಳ

ಧಾರವಾಡ, ಬೆಳಗಾಂ, ಬಿಜಾಪುರ, ಬೀದರ್, ಗುಲ್ಬರ್ಗ ಇಲ್ಲಿಯವು ಮುಖ್ಯವಾದವು. ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳ ಕನ್ನಡದ ಮೇಲೆ ಮರಾಠಿ ಪ್ರಭಾವವೂ ಗುಲ್ಬರ್ಗ ಬೀದರ್ ಜಿಲ್ಲೆಗಳ ಭಾಷೆಯ ಮೇಲೆ ಉರ್ದು ಪ್ರಭಾವವೂ ಕಂಡುಬರುತ್ತವೆ. ಇವಲ್ಲದೆ ಜಾತಿ ಹಾಗೂ ವರ್ಗಕ್ಕೆ ಸಂಬಂಧಪಟ್ಟಂತೆ ಕೊರಗರ ಕನ್ನಡ, ಕುರುಂಬರ ಕನ್ನಡ, ಇರುಳರ ಕನ್ನಡ, ಸೋಲಿಗರ ಕನ್ನಡ ಹೀಗೆ ಪ್ರಭೇದಗಳು ಕಂಡುಬರುತ್ತವೆ.

ಸಾಹಿತ್ಯಸಂಪನ್ನ ದ್ರಾವಿಡ ಭಾಷೆಗಳಲ್ಲಿ ಗಣ್ಯವಾದ ತೆಲುಗು ಆಂಧ್ರಪ್ರದೇಶದ ಪ್ರಧಾನ ಭಾಷೆ. 'ತಮಿಳು' ಮತ್ತು 'ಕನ್ನಡ' ಪದಗಳ ನಿಷ್ಪತ್ತಿಯ ವಿಚಾರವಾಗಿ ಉಂಟಾಗಿರುವ ತೊಡಕು 'ತೆಲುಗು' ಶಬ್ದದ ವಿಚಾರದಲ್ಲೂ ತಲೆದೋರಿದೆ. ಆಂಧ್ರ, ತೆಲುಗು ಎಂಬ ಎರಡು ರೂಪಗಳೂ ಬಳಕೆಯಲ್ಲಿರುವುದರಿಂದ ಇವುಗಳಲ್ಲಿ ಹಳೆಯದು ಯಾವುದು, ಹೊಸದು ಯಾವುದು ಎಂಬುದು ಒಂದು ಸಮಸ್ಯೆ. 'ಆಂಧ್ರ' ಎಂಬ ಪದವೇ ಪ್ರಾಚೀನ ಎಂದು ಹಲವರ ಮತ. ಆಂಧ್ರ ಶಬ್ದದ ಉಲ್ಲೇಖ ಋಗ್ವೇದದ 'ಐತರೇಯ ಬ್ರಾಹ್ಮಣ'ವೇ ಮೊದಲಾದ ಗ್ರಂಥಗಳಲ್ಲಿ ಕಂಡುಬರುತ್ತದೆ. ಏಳನೆಯ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ್ದ ಹುಯೆನ್‌ತ್ಸಾಂಗನು ಆಂಧ್ರದ ಭಾಷೆ ಮಧ್ಯ ಭಾರತದ ಭಾಷೆಗಿಂತ ಭಿನ್ನವಾಗಿತ್ತೆಂದು ಹೇಳುತ್ತಾನೆ. ಮೆಗಾಸ್ತನೀಸನ ತರುವಾಯ ಬಂದ ಪ್ಲಿನಿ ಎಂಬ ಲೇಖಕ Andare ಎಂದು ಹೇಳಿರುವುದು ಆಂಧ್ರಕ್ಕೆ ಸಂಬಂಧಪಟ್ಟುದೆಂದು ಹೇಳಲಾಗಿದೆ.

'ಆಂಧ್ರ' ಶಬ್ದದ ಚರಿತ್ರೆ ಇಷ್ಟಾದರೆ ತೆಲುಗನ್ನು ಕುರಿತು ತೆಲುಂಗು, ತೆನುಂಗು, ತೆನುಗು, ತೆಲಗು, ತ್ರಿಲಿಂಗ, ತೆಲಿಂಗ ಮುಂತಾದ ರೂಪಗಳು ಸಿಗುತ್ತವೆ. ಪಂಪನ 'ವಿಕ್ರಮಾರ್ಜುನವಿಜಯ'[105] ಮತ್ತು ಕ್ರಿ.ಶ. ೧೦೩೦ರ ಶಾಸನವೊಂದರಲ್ಲಿ ಬಳಕೆಯಾಗಿರುವ 'ತ್ರಿಕಳಿಂಗ, ತ್ರಿಕಲಿಂಗ' ಎಂಬ ಶಬ್ದವನ್ನು ಪ್ರಾಚೀನವೆಂದು ಪರಿಗಣಿಸಿ 'ತೆಲುಗು' ಶಬ್ದದ ನಿಷ್ಪತ್ತಿಯನ್ನು ತೋರಿಸುವುದೂ ಉಂಟು. ಡಾ. ಬಾರ್ನೆಟ್‌ರವರು ತೆನ್ ಎಂಬುದು ತೆಂಕ ಎಂಬುವರ ಮೂಲರೂಪವೆಂದು ಹೇಳಿರುವುದನ್ನೂ ತಾರಾನಾಥ, ಪ್ಲಿನಿ ಹಾಗೂ ಪಂಪ ಇವರು ಹೇಳಿರುವ ತ್ರಿ-ಕಲಿಂಗ ಎಂಬುದನ್ನೂ ವಿಶ್ಲೇಷಿಸಿ, ಡಾ. ಡಿ. ಎಲ್. ನರಸಿಂಹಾಚಾರ್ಯರು 'ತೆನ್‌ಕಲಿಂಗ'ವೇ ತೆಲುಗು ಶಬ್ದಕ್ಕೆ ಮೂಲವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[106] ತ್ರಿ-ಕಲಿಂಗ ಎಂಬುದೇ ಪ್ರಾಕೃತದಲ್ಲಿ ತಿಅಲಿಂಗ > ತಿಯಲಿಂಗ > ತೆಲಂಗ > ತೆಲುಗು ಆಗಿದ್ದರೂ ಆಗಿರಬಹುದೆಂದು ಅವರು ತಿಳಿಸಿದ್ದಾರೆ.[107]

ಕೆಲವು ತೆಲುಗು ದೇಶೀಯ ಪಂಡಿತರು ತೆನುಗು, ತೆನುಂಗು ಈ ಶಬ್ದಗಳಿಗೆ ಮಾಧುರ್ಯಸೂಚಕವಾದ 'ತೇನೆ' ಎಂಬುದೇ ಮೂಲ (ತೇನೆ + ಅಗು) ಎಂದು ಹೇಳಿದ್ದಾರೆ. ತೆಲುಗು ಭಾಷೆಯಲ್ಲಿ ಶೇ. ೯೦ರಷ್ಟು ಶಬ್ದಗಳು ಸ್ವರಾಂತವಾಗಿದ್ದು, ಭಾಷೆ ಕೇಳಿದಂತೆ ಅವರಿಗೆ ಸಿಹಿಯಾಗಿ ಕಂಡಿದೆ.

ತೆಲುಗು ಭಾಷೆಯ ಪ್ರಾಚೀನತೆಯ ಶಾಸನದ ಬಗ್ಗೆಯೂ ಭಿನ್ನಾಭಿಪ್ರಾಯವಿದೆ.

ಕ್ರಿ.ಶ. ೬-೭ನೆಯ ಶತಮಾನದ ಕಡಪ ಜಿಲ್ಲೆಯ ತಿಪ್ಪಲೂರು ಶಾಸನವೇ ಪ್ರಾಚೀನವೆಂದು ಕೆಲವರೂ ಸುಮಾರು ಇದೇ ಕಾಲಕ್ಕೆಂದು ಹೇಳಲಾಗಿರುವ ಕಳಮಳ್ಳ ಶಿಲಾಶಾಸನವೇ ಪ್ರಾಚೀನವೆಂದು ಮತ್ತೆ ಕೆಲವರೂ ಹೇಳುತ್ತಾರೆ. ಅಂತೂ ಆರು ಅಥವಾ ಏಳನೆಯ ಶತಮಾನದ ವೇಳೆಗೆ ತೆಲುಗು ಬರಹದ ಭಾಷೆಯಾಗಿದ್ದಿತು ಎಂಬುದು ಇದರಿಂದ ಖಚಿತ. ೧೯೬೧ರ ಜನಗಣತಿಯ ಪ್ರಕಾರ ತೆಲುಗು ಭಾಷೆ ಮಾತನಾಡುವವರ ಸಂಖ್ಯೆ ಸು. ನಾಲ್ಕು ಕೋಟಿ. ಸು. ೧೧ನೆಯ ಶತಮಾನದಲ್ಲಿ ರಚಿತವಾದ ನನ್ನಯ ಕವಿಯ ಭಾರತವೇ ತೆಲುಗು ಭಾಷೆಯ ಬಹು ಹಳೆಯ ಹಾಗೂ ಹಿರಿಯ ಕಾವ್ಯ. ನನ್ನಯ ಭಾರತದ ಸ್ಫೂರ್ತಿಮೂಲ 'ಪಂಪಭಾರತ' ಎಂದು ಕೆಲವರು ವಿದ್ವಾಂಸರ ಅಭಿಪ್ರಾಯ.

ಕನ್ನಡ ಹಾಗೂ ತೆಲುಗು ಸಾಹಿತ್ಯಗಳ ಸಂಬಂಧ ಬಹು ಪ್ರಾಚೀನವೆಂದು ನಿಷ್ಕರ್ಷೆ ಮಾಡಬಹುದಾಗಿದೆ. ಪರಸ್ಪರವಾಗಿ ಹೋಲಿಸಿ ನೋಡಿದರೆ ಲಿಪಿಭೇದ ಬಹಳ ಕಡಿಮೆ, ಆದರೆ ಭಾಷಾಭೇದ ಹೆಚ್ಚು. ತೆಲುಗು ಭಾಷೆಯ ಒಂದು ವೈಶಿಷ್ಟ್ಯ ಅರ್ಧಾನುಸ್ವಾರ. ಹಳೆಯ ತೆಲುಗಿನಲ್ಲಿ ಅರ್ಧಾನುಸ್ವಾರ ಒಂದು ಪ್ರತ್ಯೇಕ ಧ್ವನಿಮ ಆಗಿತ್ತೆಂಬುದಕ್ಕೆ ನಿದರ್ಶನಗಳಿವೆ. ಕ್ರಮೇಣ ಅದರ ಪ್ರಯೋಗ ಕಡಮೆಯಾಗುತ್ತ ಬಂದು ಈಗ ಕೇವಲ ಐಚ್ಛಿಕವಾಗಿದೆಯೆಂಬುದು ಕೆಲವರ ಅಭಿಪ್ರಾಯ. ಕನ್ನಡದಲ್ಲಾಗಿರುವ ಇ > ಎ, ಉ > ಒ ವ್ಯತ್ಯಯ ತೆಲುಗಿನಲ್ಲಿಯೂ ಕಂಡುಬಂದಿದೆ. ಅನೇಕ ತಮಿಳು ಅಥವಾ ಕನ್ನಡದ ಶಬ್ದಗಳಲ್ಲಿ ಕಂಡುಬರುವ ಮೊದಲನೆಯ ಸ್ವರ ತೆಲುಗಿನಲ್ಲಿ ಎರಡನೆಯ ಸ್ವರವಾಗಿ ಪರಿಣಮಿಸಿವೆ. ಹೀಗಾಗಿ ತೆಲುಗು ಭಾಷೆಯಲ್ಲಿ ಉಳಿದ ದ್ರಾವಿಡ ಭಾಷೆಗಳಿಗಿಂತ ಅತ್ಯಧಿಕ ಪ್ರಮಾಣದಲ್ಲಿ ವರ್ಣಪಲ್ಲಟ ನಡೆದಿದೆ. ತೆಲುಗಿನಲ್ಲಿ ಸ್ತ್ರೀವಾಚಕ ಏಕವಚನ ಸರ್ವನಾಮವಿಲ್ಲ. 'ಅದಿ' ಎಂಬ ಶಬ್ದವು ಸ್ತ್ರೀಲಿಂಗ ಹಾಗೂ ನಪುಂಸಕಲಿಂಗ ಎರಡಕ್ಕೂ ಅನ್ವಯಿಸುತ್ತದೆ. ಈ ದೃಷ್ಟಿಯಲ್ಲಿ ತೆಲುಗು ಮಧ್ಯ ದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುತ್ತದೆ.

ದ್ರಾವಿಡ ಭಾಷಾವರ್ಗದಲ್ಲಿ ತೆಲುಗಿನ ಸ್ಥಾನದ ಬಗೆಗೆ ತರ್ಕ ವಿತರ್ಕಗಳು ಸಾಕಷ್ಟು ನಡೆದಿವೆ. ತೆಲುಗು ದಕ್ಷಿಣ ದ್ರಾವಿಡ ಭಾಷೆಗಳಿಗಿಂತ ಮಧ್ಯದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುತ್ತದೆಂಬುದು ಕೆಲವರ ಅಭಿಪ್ರಾಯ. ಆದರೆ ತೆಲುಗು ಪೂರ್ತಿಯಾಗಿ ದಕ್ಷಿಣ ದ್ರಾವಿಡ ಭಾಷೆಗಳನ್ನಾಗಲಿ, ಮಧ್ಯದ್ರಾವಿಡ ಭಾಷೆಗಳನ್ನಾಗಲಿ ಹೋಲುವುದಿಲ್ಲ. ಆದುದರಿಂದ ತೆಲುಗನ್ನು ದಕ್ಷಿಣ ಹಾಗೂ ಮಧ್ಯ ದ್ರಾವಿಡ ಭಾಷೆಗಳ ನಡುವೆ ಇರಿಸುವ ಪ್ರಯತ್ನ ಸೂಕ್ತವೆಂದು ಕಂಡುಬಂದಿದೆ.

ತೆಲುಗು ತಮಿಳು ಭಾಷೆಯಿಂದ ಕ್ರಿ.ಪೂ. ೪೦೦-ಕ್ರಿ.ಶ. ೪೦೦ರ ನಡುವೆ ಬೇರೆಯಾಗಿರಬಹುದೆಂದೂ ಕನ್ನಡ ಮತ್ತು ತೆಲುಗು ಭಾಷೆಗಳು ಕ್ರಿ.ಪೂ. ೩೦೦-ಕ್ರಿ.ಶ. ೩೦೦ರಲ್ಲಿ ಬೇರ್ಪಟ್ಟಿರಬಹುದೆಂದೂ ಅಂದಾಜು ಮಾಡಲಾಗಿದೆ. ತೆಲುಗು ಭಾಷಾಮೂಲವಾಗಿ ಹುಟ್ಟಿ, ಮಧ್ಯ ಹಾಗೂ ಉತ್ತರ ಭಾರತದ ಅನೇಕ ಭಾಷೆಗಳ ಪ್ರಭಾವಕ್ಕೊಳಪಟ್ಟು ಪರಿವರ್ತನೆಗೊಂಡ ಅನೇಕ ಉಪಭಾಷೆಗಳೇ ಈಗ ಸ್ವತಂತ್ರ ಮಧ್ಯದ್ರಾವಿಡ ಉಪಭಾಷೆಗಳಾಗಿವೆ ಎಂದು ವಿದ್ವಾಂಸರ ಅಭಿಪ್ರಾಯ. ತೆಲುಗಿನಲ್ಲಿಯೂ ಅನೇಕ

ಪ್ರಾದೇಶಿಕ ಪ್ರಭೇದಗಳುಂಟು.

ಬಹುತೇಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತನಾಡಲ್ಪಡುವ ಮತ್ತೊಂದು ಪ್ರಮುಖ ದ್ರಾವಿಡ ಭಾಷೆ ತುಳು. ಈಗಾಗಲೇ ಸುಸಂಸ್ಕೃತ ಭಾಷೆಗಳಲ್ಲಿ ಪ್ರಸ್ತಾಪ ಮಾಡಲ್ಪಟ್ಟ ನಾಲ್ಕು ಸಾಹಿತ್ಯ ಹಾಗೂ ಲಿಪಿಯುಕ್ತ ಭಾಷೆಗಳ ನಂತರದ ಸ್ಥಾನವನ್ನು ತುಳು ಆಕ್ರಮಿಸುತ್ತದೆ. ಕಾಲ್ಡ್‌ವೆಲ್ ಕೂಡ ತುಳುವನ್ನು ಸುಸಂಸ್ಕೃತ ಭಾಷೆಯೆಂದು ಪರಿಗಣಿಸಿದ್ದಾನೆ.[108] ತುಳು ಭಾಷೆಯನ್ನು ಈಗಿನ ಕರ್ನಾಟಕ ರಾಜ್ಯದ ತೆಂಕಣ ಮತ್ತು ಪಡುವಣ ಸಮುದ್ರತೀರ ಪ್ರದೇಶದಲ್ಲಿ ವಿಶೇಷವಾಗಿ ಮಂಗಳೂರಿನ ಸುತ್ತಮುತ್ತ ಚಂದ್ರಗಿರಿ ಹಾಗೂ ಕಲ್ಯಾಣಪುರ ನದಿಗಳ ನಡುವಿನ ಪ್ರದೇಶದಲ್ಲಿ ಆಡುವರು. ಸು. ಕ್ರಿ.ಶ. ೨೦೦-೮೦೦ರಲ್ಲಿ ತಮಿಳಿನಿಂದ ಬೇರೆಯಾಗಿ ಅನೇಕ ಶತಮಾನಗಳಿಂದ ಆಡುನುಡಿಯಾಗಿಯೇ ಉಳಿದಿರುವ ತುಳು ಭಾಷೆಯನ್ನು ಮಾತನಾಡುವವರು ಸುಮಾರು ಎಂಟು ಲಕ್ಷ ಜನರಿದ್ದಾರೆ.

ಬ್ರಿಗೆಲ್‌ರವರ ಪ್ರಕಾರ 'ತುಳು' ಶಬ್ದದ ಅರ್ಥ ಮೃದು. ಇದು ತುಳು ಭಾಷೆಗಿಂತ ಅದನ್ನು ಆಡುವ ಜನರಿಗೆ ಅನ್ವಯಿಸಬಹುದೇನೋ. ಈ ಶಬ್ದ ಯಾವಾಗ ಬಳಕೆಗೆ ಬಂದಿತೆಂದು ನಿಶ್ಚಯವಾಗಿ ಗೊತ್ತಿಲ್ಲದಿದ್ದರೂ ಸುಮಾರು ನಾಲ್ಕನೆಯ ಶತಮಾನದ 'ಅಗನಾನೂರು' ಎಂಬ ತಮಿಳು ಕಾವ್ಯದಲ್ಲಿ 'ತುಳುವರು' ಎಂಬ ಶಬ್ದದ ಪ್ರಯೋಗ ಕಂಡುಬಂದಿದೆ. ಸು. ೧೨ನೆಯ ಶತಮಾನದ ಪೂರ್ವಾರ್ಧದ ವಿಷ್ಣುವರ್ಧನನ ಕಾಲದ ಶಾಸನವೊಂದರಲ್ಲಿ ಬರುವ ಪದ್ಯದಲ್ಲಿ 'ತುಳು' ಎಂಬ ಪದವಿದೆ. ತುಳು ಭಾಷೆ ತನ್ನದೇ ಆದ ಲಿಪಿಯನ್ನು ಹೊಂದಿಲ್ಲ. ಮೊದಮೊದಲು ಈ ಭಾಷೆಯನ್ನು ಬರೆಯಲು ಮಲಯಾಳಂ ಲಿಪಿಯನ್ನು ಬಳಸುತ್ತಿದ್ದರೆಂದೂ ಈಚೆಗೆ ಕನ್ನಡ ಲಿಪಿಯನ್ನೇ ಬಳಸುತ್ತಿದ್ದು ಇದನ್ನೇ ತುಳು ಲಿಪಿ ಎಂದು ಪರಿಗಣಿಸಬಹುದೆಂದೂ ತುಳು ವ್ಯಾಕರಣದ ಕರ್ತೃ ಜೆ. ಬ್ರಿಗೆಲ್ ಹೇಳಿದ್ದಾರೆ.[109] ತುಳು ಮಲಯಾಳ ಭಾಷೆಯ ಉಪಭಾಷೆ ಎಂದು ಎಲ್ಲಿಸ್ ಹೇಳಿರುವ ಮಾತನ್ನು ಕಾಲ್ಡ್‌ವೆಲ್ ಅಲ್ಲಗಳೆದಿದ್ದಾರೆ.[110]

ತುಳು ಲಿಪಿರಹಿತ ಭಾಷೆಯಾಗಿದ್ದರೂ ಈ ಭಾಷೆಯನ್ನು ದಕ್ಷಿಣ ದ್ರಾವಿಡ ಗುಂಪಿನ ಸುಸಂಸ್ಕೃತ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಮಲಯಾಳ ಇವುಗಳೊಡನೆ ಸೇರಿಸಿ ಒಟ್ಟು 'ಪಂಚದ್ರಾವಿಡ' ಭಾಷೆಗಳು ಎಂದು ಕರೆಯುತ್ತಿದ್ದುದು ರೂಢಿ. ಇದು ಆ ಭಾಷೆಯ ಪ್ರಾಚೀನತೆಯನ್ನು ಸ್ಪಷ್ಟಪಡಿಸುತ್ತದೆ. ತುಳು ತಮಿಳು ಭಾಷೆಯಿಂದ ಸಾಕಷ್ಟು ಭಿನ್ನವಾಗಿದ್ದು ಕನ್ನಡ ಮತ್ತು ಕೊಡಗು ಭಾಷೆಗಳನ್ನು ಹೆಚ್ಚು ಹೋಲುತ್ತದೆ. ಈ ಭಾಷೆಯಲ್ಲಿ ಓಷ್ಠ್ಯೀಕೃತ ಮತ್ತು ನಿರೋಷ್ಠ್ಯೀಕೃತ ಎಂಬ ಎರಡು ಬಗೆಯ ಸ್ವರಗಳಿವೆ ಎಂದೂ ಒಟ್ಟು ಹದಿನಾರು ಸ್ವರಗಳಿವೆ ಎಂದೂ ಕೆಲವರ ಅಭಿಪ್ರಾಯ. ಆದರೆ ವಾಸ್ತವವಾಗಿ ಈ ಭಾಷೆಯಲ್ಲಿ ಕಂಡುಬರುವ ಉ, ಊ, ಎ, ಏ ಧ್ವನಿಗಳ ಎರಡೆರಡು ರೀತಿಯ ಉಚ್ಚಾರಗಳು ಕೇವಲ ಉಪಧ್ವನಿಗಳಾಗಿವೆ. ಕನ್ನಡದಲ್ಲಿ ಆಗಿರುವ ಪ>ಹ ಬದಲಾವಣೆ ತುಳುವಿನಲ್ಲಿ ಕಾಣುವುದಿಲ್ಲ. ಪ ಹಾಗೆಯೇ ಉಳಿದಿರುವುದಲ್ಲದೆ ಹ ಕಾರ

ಶಬ್ದಗಳ ಸೇರ್ಪಡೆಯೂ ಆಗಿದೆ. ಕನ್ನಡದ ಅಕಾರಾಂತ ನಾಮಪದಗಳು ತುಳುವಿನಲ್ಲಿ ಏಕಾರಾಂತವಾಗಿರುವುದು ತುಳು ಭಾಷೆಯ ವೈಶಿಷ್ಟ್ಯ.

ತುಳು ಭಾಷೆಯಲ್ಲಿ ಅನೇಕ ಪ್ರಭೇದಗಳು ಕಂಡುಬರುತ್ತವೆ. ಮಲೆಕುಡಿ ತುಳು, ಸರವ ತುಳು, ಶೂದ್ರ-ಹೊಲೆಯರ ತುಳು, ಬ್ರಾಹ್ಮಣರ ತುಳು ಮತ್ತು ತುಳು ಪದಗಳೇ ಹೆಚ್ಚಾಗಿರುವ ಬ್ರಾಹ್ಮಣೇತರರ ತುಳು ಇತ್ಯಾದಿ ಪ್ರಭೇದಗಳು ಜಾತಿ ಹಾಗೂ ಸಂಗಡಕ್ಕೆ ಸಂಬಂಧಿಸಿದವು. ಉಡುಪಿ ತುಳು, ಮಂಗಳೂರು ತುಳು, ಕಾರ್ಕಳ ತುಳು ಇತ್ಯಾದಿಯಾದವು ಸ್ಥಾನೀಯ ಪ್ರಭೇದಗಳು.

ಬಡಗ ಮತ್ತು ಕೊಡಗು ಇವು ದಕ್ಷಿಣ ದ್ರಾವಿಡ ವರ್ಗದ ಉಪಭಾಷೆಗಳು. ಕರ್ನಾಟಕದ ಕೊಡಗು ಜಿಲ್ಲೆ ಕೊಡಗು ಭಾಷೆಯನ್ನಾಡುವವರ ಕೇಂದ್ರವಾಗಿದ್ದರೂ ಕೊಡಗು ಭಾಷೆಯನ್ನಾಡುವವರು ಬೇರೆಡೆಯಲ್ಲೂ ಹರಡಿಕೊಂಡಿದ್ದಾರೆ. 'ಕೊಡಗು' ಶಬ್ದದ ನಿಷ್ಪತ್ತಿಯನ್ನು 'ಕುಡ' (ಪಶ್ಚಿಮ) ಎಂಬ ಪದದಿಂದ ವಿವರಿಸುತ್ತಾರೆ. ಏಕೆಂದರೆ ಕೊಡಗು ಪಶ್ಚಿಮ ದಿಕ್ಕಿಗಿದೆ.[111] ಕಾಲ್ಡ್‌ವೆಲ್ ಕೊಡಗನ್ನು ದ್ರಾವಿಡ ವರ್ಗದ ಸುಸಂಸ್ಕೃತ ಭಾಷೆಗಳಲ್ಲಿ ಕೊನೆಯದು ಎಂದು ಹೇಳಿದ್ದಾನೆ. ಆದರೆ ಕೊಡಗು ಭಾಷೆಯನ್ನು ಪೂರ್ಣವಾಗಿ ಸ್ವತಂತ್ರ ಹಾಗೂ ಗ್ರಾಂಥಿಕ ಭಾಷೆಗಳ ವರ್ಗಕ್ಕೆ ಸೇರಿಸಲು ಇಷ್ಟವಿದ್ದೂ ಹಿಂಜರಿದಿದ್ದಾನೆ.[112] ಮೇಜರ್ ಕೋಲ್ ಈ ಭಾಷೆಯ ವ್ಯಾಕರಣವನ್ನೂ ಮಂಗಳೂರಿನ ರೆ. ಗ್ರೈಟರ್ ಕೆಲವು ಹಾಡುಗಳನ್ನೂ ಸಾಕಷ್ಟು ಹಿಂದೆ ಸಂಗ್ರಹಿಸಿ ಪ್ರಕಟಿಸಿದ್ದಾರೆ. ತುಳು ಭಾಷೆಯಂತೆ ಇದೂ ತನ್ನ ವೈಶಿಷ್ಟ್ಯಪೂರ್ಣ ಉಚ್ಚಾರಣೆಯಿಂದ ಅಪರಿಚಿತರಿಗೆ ಆಶ್ಚರ್ಯವನ್ನುಂಟುಮಾಡುತ್ತದೆ.

ತುಳುವಿನ ಹಾಗೆಯೇ ಕೊಡಗು ಭಾಷೆಯಲ್ಲಿ ಕೂಡ ಪ, ಹ ಆಗಿಲ್ಲ. ವ್ಯಂಜನಾಂತ ಶಬ್ದಗಳು ಹೆಚ್ಚಾಗಿವೆ. ಸು. ಕ್ರಿ.ಶ. ೧೧೭೪ರದೆಂದು ಹೇಳಲಾದ ಹುಣಸೂರು ಶಾಸನದಲ್ಲಿ 'ಕೊಡವರು' ಎಂಬ ಉಲ್ಲೇಖವಿದೆ.[113] ಜರ್ಮನಿಯ ಮಿಷನರಿಗಳಲ್ಲೊಬ್ಬನಾದ ಡಾ. ಮೋಗ್ಲಿಂಗ್ ಕೊಡಗು ಭಾಷೆ ಕನ್ನಡಕ್ಕಿಂತಲೂ ತಮಿಳು ಮತ್ತು ಮಲಯಾಳ ಭಾಷೆಗಳನ್ನೇ ಹೆಚ್ಚು ಹೋಲುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾನೆ. ೧೯೬೧ರ ಜನಗಣತಿಯಂತೆ, ಸು. ೮೦ ಸಾವಿರ ಜನ ಕೊಡಗು ಭಾಷೆಯನ್ನಾಡುವರೆಂದು ತಿಳಿದು ಬಂದಿದೆ.

'ಬಡಗ' ಕನ್ನಡ ವರ್ಗಕ್ಕೆ ಸೇರಿದ ಪ್ರಮುಖ ಉಪಭಾಷೆ. ಅನೇಕ ವಿದ್ವಾಂಸರು ಇಂದಿಗೂ ಬಡಗ ಭಾಷೆಯನ್ನು ಪ್ರತ್ಯೇಕ ಭಾಷೆ ಎಂದು ಪರಿಗಣಿಸಲು ಹಿಂಜರಿಯುತ್ತಾರೆ. ಎಂ. ಬಿ. ಎಮಿನೊ ಬಡಗವನ್ನು ಪ್ರತ್ಯೇಕ ಭಾಷೆ ಎಂದು ಗ್ರಹಿಸಿದ್ದಾರೆ.[114] ನೀಲಗಿರಿಯ ಬೆಟ್ಟದ ತಪ್ಪಲಲ್ಲಿ ವಾಸಿಸುವ ಆದಿವಾಸಿಗಳು ಆಡುವ ಭಾಷೆಯೇ 'ಬಡಗ'. ಎನ್. ಲಕ್ಷ್ಮೀನಾರಾಯಣರಾವ್‌ರವರು ಚಾಮರಾಜನಗರ ತಾಲ್ಲೂಕಿನ ಬಳಿ ಬಾಗಳಿ ಗ್ರಾಮದ ೧೧೪೨ರ ಶಾಸನವೊಂದರ ಬಗ್ಗೆ ವಿವೇಚಿಸುತ್ತ ಸುಮಾರು ೧೨ನೆಯ ಶತಮಾನದ ವೇಳೆಗಾಗಲೇ ಬಡಗರು ನೀಲಗಿರಿ ಬೆಟ್ಟದ ಪ್ರದೇಶದಲ್ಲಿ ಬೀಡುಬಿಟ್ಟಿದ್ದರೆಂಬ

ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ತೊದ ಮತ್ತು ಬಡಗ ಭಾಷೆಗಳು ಬಹಳ ಕಾಲದಿಂದಲೂ ಅಕ್ಕಪಕ್ಕದ ಭಾಷೆಗಳಾಗಿ ಬೆಳೆದುಬಂದಿವೆಯಲ್ಲದೆ, ಇವುಗಳ ನಡುವೆ ಕೊಳುಕೊಡೆ ನಡೆದಿದೆ. ಬಡಗ ತನ್ನ ರೀತಿಯಲ್ಲಿ ಹಳಗನ್ನಡದ ಒಂದು ಉಪಶಾಖೆಯಂತೆ ತೋರುತ್ತದೆ. ಹಳಗನ್ನಡದ ಕೆಲವು ರೂಪಗಳು ಇಂದಿಗೂ ಬಡಗ ಭಾಷೆಯಲ್ಲಿ ಬಳಕೆಯಲ್ಲಿವೆ. ಪ>ಹ ಬದಲಾವಣೆ ಕೆಲವು ಕಡೆ ಮಾತ್ರ ಕಂಡುಬರುತ್ತದೆ. ೧೯೬೧ರ ಜನಗಣತಿಯಂತೆ ಈ ಭಾಷೆಯನ್ನು ಮಾತನಾಡುವವರ ಸಂಖ್ಯೆ ಸು. ೬೯,೦೦೦ವೆಂದು ತಿಳಿದುಬಂದಿದೆ.

ಮಧ್ಯದ್ರಾವಿಡ ಭಾಷಾವರ್ಗದ ಭಾಷೆಗಳು ಬಹುತೇಕ ಉಪಭಾಷೆಗಳೇ ಆಗಿವೆ. ಈ ವರ್ಗದ ಯಾವ ಭಾಷೆಯೂ ಸಾಹಿತ್ಯವನ್ನಾಗಲಿ, ಲಿಪಿಯನ್ನಾಗಲಿ ಹೊಂದಿಲ್ಲ. ೧೯೨೪ರಲ್ಲಿ ರೆ. ವಿನ್‌ಫೀಲ್ಡ್‌ರವರು ಬರೆದ 'ಕುಈ' ಭಾಷೆಯ ವ್ಯಾಕರಣದಿಂದ ಈ ಭಾಷೆ ಬಹು ಬೇಗನೆ ಪ್ರಾಚುರ್ಯಕ್ಕೆ ಬಂದಿತು. ಕುಈ ಒರಿಸ್ಸ ಸಂಸ್ಥಾನದಲ್ಲಿ ವಾಸಿಸುತ್ತಿರುವ ಸುಮಾರು ಆರು ಲಕ್ಷ ಕುಈಂಗರು ಆಡುವ ಭಾಷೆ. ಮಹಾನದಿಯ ಅಕ್ಕಪಕ್ಕಗಳಿಂದ ಮೊದಲುಗೊಂಡು ಆಂಧ್ರಪ್ರದೇಶದ ವಿಶಾಖಪಟ್ಟಣದವರೆಗೂ ಅವರು ಹರಡಿದ್ದಾರೆ. ಕುಈ ಭಾಷೆ ಪೂರ್ವ ದ್ರಾವಿಡದಿಂದ ಒಡೆದು ಸ್ವತಂತ್ರವಾಗಿ ವಿಕಾಸಗೊಂಡಿದೆ ಎಂದು ವಿದ್ವಾಂಸರ ಅಭಿಪ್ರಾಯ. ತೆಲುಗು ಭಾಷೆಗೆ ಇದು ಹತ್ತಿರವಾದ್ದು. ಕುಈ ಭಾಷೆಯನ್ನೇ ಕಾಲ್ಡ್‌ವೆಲ್ 'ಖು' ಎಂದು ಕರೆದರೆ, ಗ್ರಿಯರ್ಸನ್ ಅದನ್ನು ಖೊಂಡ್ ಭಾಷೆಯಲ್ಲಿ ಸೇರಿಸಿದನು. ಕುಈ ಭಾಷೆಯನ್ನು ಬರೆಯಲಿಕ್ಕಾಗಿ ಹಿಂದೆ ತೆಲುಗು ಲಿಪಿಯನ್ನು ಬಳಸುತ್ತಿದ್ದು, ಈಚೆಗೆ ಒರಿಯ ಲಿಪಿಯನ್ನು ಬಳಸುತ್ತಿದ್ದಾರೆ. ಬಹುತೇಕ ಮಧ್ಯ ದ್ರಾವಿಡ ಹಾಗೂ ತೆಲುಗು ಭಾಷೆಗಳಲ್ಲಿ ಕಂಡುಬರುವಂತೆ ಈ ಭಾಷೆಯಲ್ಲೂ ಸ್ತ್ರೀವಾಚಕ ಏಕವಚನ ಸರ್ವನಾಮ ಪ್ರತ್ಯೇಕವಾಗಿಲ್ಲ. ಇದು ಮಧ್ಯದ್ರಾವಿಡ ಭಾಷೆಗಳಲ್ಲಿ ಕಂಡುಬರುವ ವ್ಯಾಕರಣವಿಶೇಷತೆ ಎಂದು ಹೇಳಬಹುದು.

'ಕುವಿ' ಕುಈ ಭಾಷೆಗೆ ಸಮೀಪತರವಾದ್ದು, ಅಲ್ಲದೆ ಆ ಎರಡು ಭಾಷೆಗಳನ್ನು ಆಡುವವರೂ ಒಂದೇ ಜನಾಂಗದವರೆಂದು ಹೇಳಲಾಗಿದೆ. ಕುವಿ ಭಾಷೆಯ ಧ್ವನಿವ್ಯವಸ್ಥೆಯನ್ನು ಗಮನಿಸಿದಾಗ ಪೂರ್ವದ್ರಾವಿಡದ ಧ್ವನಿಗಳು ಸಾಕಷ್ಟು ಬದಲಾಗಿರುವುದನ್ನೂ ಇಲ್ಲಿ ಕಾಣಬಹುದು. ಮೂಲ ದ್ರಾವಿಡದ ಕ, ಯ ಆಗಿರುವುದನ್ನೂ ಚ, ಟ, ಐ ಗಳು ಹ, ತ, ಜ ಆಗಿ ಬದಲಾವಣೆ ಹೊಂದಿರುವುದನ್ನೂ ಕಾಣಬಹುದು. ಪೂಲ್ಸ್, ಫಿಟ್ಜೆರಾಲ್ಡ್ ಮುಂತಾದ ವಿದ್ವಾಂಸರು ಈ ಭಾಷೆಯನ್ನು ಅಭ್ಯಸಿಸಿ ಅನೇಕ ವಿಷಯಗಳನ್ನು ಹೊರಗೆಡಹಿದ್ದಾರೆ.

ಮಧ್ಯದ್ರಾವಿಡ ವರ್ಗದ ಮತ್ತೊಂದು ಪ್ರಮುಖ ಉಪಭಾಷೆ 'ಕೊಲಾಮಿ.' ಇದು ಮಧ್ಯ ಪ್ರದೇಶದ ಛಂದ, ಅಮರಾವತಿ, ಬೀರಾರಿನ ಯಂವೋತ್ಮಲ್, ವಾರ್ಧಾ ಮತ್ತು ಹೈದರಾಬಾದ್ ಜಿಲ್ಲೆಗಳಲ್ಲಿ ವಾಸಿಸುವ ಕೊಲಾಮಿಗಳ ಭಾಷೆ. ಅನೇಕ ಮಧ್ಯ ದ್ರಾವಿಡ ಭಾಷೆಗಳಂತೆ ಇದೂ ನೆರೆಹೊರೆ ಭಾಷೆಗಳ ಪ್ರಭಾವಕ್ಕೆ ಸಾಕಷ್ಟು ಒಳಗಾಗಿದೆ.

ಇಲ್ಲಿಯ ಸಂಖ್ಯಾವಾಚಕಗಳು ಅನೇಕ ಭಾಷಾಪಂಡಿತರ ಕುತೂಹಲವನ್ನು ಕೆರಳಿಸಿವೆ. ಒಂದರಿಂದ ಐದರವರೆಗೆ ಮಾತ್ರ ದ್ರಾವಿಡ ಸಂಖ್ಯಾವಾಚಿಗಳನ್ನು ಒಳಗೊಂಡು ಅನಂತರ ಬಹುತೇಕ ಮರಾಠಿ ಸಂಖ್ಯಾವಾಚಿಗಳಿಂದ ಗಣನೆ ಮಾಡುವುದು ಇಲ್ಲಿಯ ರೂಢಿ. ಇದು ದ್ರಾವಿಡ ಭಾಷೆಗಳ ಮೇಲೆ ಆರ್ಯವರ್ಗದ ಭಾಷೆಗಳ ಪ್ರಭಾವಕ್ಕೆ ಉತ್ತಮ ನಿದರ್ಶನ. ಈ ಭಾಷೆ ತೆಲುಗು ಭಾಷೆಯನ್ನು ಹೋಲುತ್ತದೆ. ಆಂಧ್ರಪ್ರದೇಶದ ಅದಿಲ್ ಬಾದ್ ಪ್ರದೇಶದಲ್ಲಿ ಮಾತನಾಡುವ ಮನ್ನೆ, ಹಾದ್ರ ಮತ್ತು ನಾಗರಹವೇಲಿಯಲ್ಲಿ ಬಳಕೆಯಲ್ಲಿರುವ 'ನಾಯ್ಕಿ ಕೊಲಾಮಿ' ಇವರ ಉಪಭಾಷೆಗಳು. ಸು. ನಲವತ್ತಾರು ಸಾವಿರ ಜನ ಕೊಲಾಮಿ ಭಾಷೆಯನ್ನು ಆಡುವವರಿದ್ದಾರೆಂದು ತಿಳಿದುಬಂದಿದೆ. ಎಮಿನೊ, ಸೇತುಮಾಧವರಾವ್, ಬರೊ, ಭಟ್ಟಾಚಾರ್ಯ ಮುಂತಾದ ವಿದ್ವಾಂಸರು ಈ ಭಾಷೆಯ ಸ್ವರೂಪ ವಿಶದಪಡುವಂತೆ ಕೆಲಸ ಮಾಡಿದ್ದಾರೆ. ಕೊಲಾಮಿ ಧ್ವನಿವ್ಯವಸ್ಥೆ ಯಲ್ಲಿ ಅನೇಕ ಮೂಲ ದ್ರಾವಿಡ ವ್ಯಂಜನಗಳು ಬದಲಾಗಿರುವುದು ಕಂಡುಬರುತ್ತದೆ.

ಬಹುಕಾಲದಿಂದಲೂ ಗೋಂಡಿ ಭಾಷೆಯ ಉಪಭಾಷೆಯೆಂದು ಪರಿಗಣಿಸಲ್ಪಟ್ಟಿದ್ದ ಮತ್ತೊಂದು ಮಧ್ಯದ್ರಾವಿಡಭಾಷೆ 'ಪಾರ್ಜಿ.' ಈ ಭಾಷೆಯನ್ನು ಮೊದಮೊದಲು ಅಭ್ಯಾಸಮಾಡಿದ ವಿದ್ವಾಂಸರು 'ಭಟ್ರಿ' ಅಥವಾ 'ಭಟ್ರಿಯನ್' ಭಾಷೆ ಎಂದು ಕರೆದಿದ್ದಾರೆ. ಆದರೆ ಗ್ರಿಯರ್ಸನ್ ಭಟ್ರಿ ಒರಿಯ ಭಾಷೆಯ ಉಪಭಾಷೆಯೆಂದೂ ಪಾರ್ಜಿ ಸ್ವತಂತ್ರ ಭಾಷೆಯೆಂದೂ ಹೇಳಿ ಸಮಸ್ಯೆಗೆ ಸಮಾಧಾನಕರವಾದ ಉತ್ತರ ವಿತ್ತಿದ್ದಾನೆ. ಇದಲ್ಲದೆ ಬರೊ ಮತ್ತು ಭಟ್ಟಾಚಾರ್ಯ ಅವರು ತಾವು ನಡಸಿದ ಪರಿವೀಕ್ಷಣೆಯ ಆಧಾರದ ಮೇಲೆ ಪಾರ್ಜಿ ಸ್ವತಂತ್ರಭಾಷೆ ಎಂಬುವನ್ನು ಖಚಿತಪಡಿಸಿದ್ದಾರೆ. ಜಗದಲ್‌ಪುರದ ಅಕ್ಕಪಕ್ಕಗಳಲ್ಲಿಯೂ ಜಯಪುರದ ಗಡಿಪ್ರದೇಶದಲ್ಲಿಯೂ ಇರುವ ಪರ್ಜಾಗಳು ಈ ಭಾಷೆಯನ್ನು ಆಡುತ್ತಾರೆ. ಮಧ್ಯದ್ರಾವಿಡದ ಅನೇಕ ಭಾಷೆಗಳಂತೆ ಈ ಭಾಷೆಯಲ್ಲೂ ಮಹಾಪ್ರಾಣ ಧ್ವನಿಗಳಿಲ್ಲ. ಜ ಕಾರ ಇನ್ನೂ ಬಳಕೆಯಲ್ಲಿದೆ. ಆರ್ಯನ್ ಭಾಷೆಯಾದ ಹಲ್ಬಿಯ ಪ್ರಭಾವ ಕಾಣುತ್ತದೆ.

ಒರಿಸ್ಸ ಸಂಸ್ಥಾನದ ಕೊರಪುತ್ ಜಿಲ್ಲೆಯಲ್ಲಿ ಮಧ್ಯದ್ರಾವಿಡ ವರ್ಗದ ಜೀವಂತ ಭಾಷೆಯಾದ 'ಗದಬ' ಭಾಷೆಯನ್ನು ಆಡುವ ಹೆಚ್ಚು ಜನರಿದ್ದಾರೆ. ವಿಶಾಖಪಟ್ಟಣದ ಸುತ್ತಲೂ ಈ ಭಾಷೆಯನ್ನಾಡುವವರಿದ್ದಾರೆ. ಬಲ್ಲಾರಿ ಗದಬ, ಸಾಲೂರ್ ಗದಬ ಮತ್ತು ಅದಿಲ್‌ಬಾದ್ ಗದಬ ಇವು ಈ ಭಾಷೆಯ ಮುಖ್ಯ ಉಪಭಾಷೆಗಳು. ಬಲ್ಲಾರಿ ಗದಬವನ್ನು ಕೆಲವರು ಸ್ವತಂತ್ರ ಉಪಭಾಷೆಯೆಂದೂ ಗ್ರಹಿಸಿದ್ದಾರೆ.

ಬಹುಕಾಲ ಗೋಂಡಿ ಭಾಷೆಯ ಉಪಭಾಷೆಯೆಂದು ಪರಿಗಣಿಸಲ್ಪಟ್ಟಿದ್ದ 'ಕೊಯ' ಮಧ್ಯ ದ್ರಾವಿಡದ ಮತ್ತೊಂದು ಸದಸ್ಯ ಭಾಷೆ. ಕೊಯ ಮಾತನಾಡುವ ಸುಮಾರು ಒಂದೂವರೆ ಲಕ್ಷ ಜನ ಆಂಧ್ರ ಮತ್ತು ಕೊರಪುತ್ ಪ್ರದೇಶಗಳಲ್ಲಿ ನೆಲಸಿದ್ದಾರೆ. ಇದನ್ನು ಗ್ರಿಯರ್ಸನ್ ಗೋಂಡಿ ಭಾಷೆಯ ಉಪಭಾಷೆಯೆಂದು ತಿಳಿಸಿದ್ದನು. ಮಧ್ಯ ದ್ರಾವಿಡ ವರ್ಗದ ಮತ್ತೊಂದು ಸದಸ್ಯ ಭಾಷೆ 'ಕೊಂಡ'. ೧೯೬೮ರಲ್ಲಿ ಭಟ್ಟಾಚಾರ್ಯ

ಅವರ ಪ್ರಯತ್ನದಿಂದ ಇದು ಬೆಳಕಿಗೆ ಬಂದಿತು. ಗ್ರಿಯರ್ಸನ್‌ನ ಕಣ್ಣಿಗೆ ಬಿದ್ದರೂ ಕೊಂಡ ಭಾಷೆ ಕೇವಲ ಕುಈ ಭಾಷೆಯ ರೂಪವೆಂದು ಪರಿಗಣಿಸಲ್ಪಟ್ಟಿತು. ಒಂದೆಡೆ ಗೋಂಡಿ, ಮತ್ತೊಂದೆಡೆ ಕುಈ–ಕುವಿಗಳನ್ನು ಹೋಲುವ ಭಾಷೆ ಇದು. ಕೊಂಡ ಭಾಷೆಯನ್ನಾಡುವ ಸುಮಾರು ಹದಿನೂರು ಸಾವಿರ ಜನರ ಪೈಕಿ ಸುಮಾರು ಹತ್ತು ಸಾವಿರ ಜನ ಒರಿಸ್ಸ ಒಂದರಲ್ಲೆ ವಾಸಿಸುವರಾಗಿದ್ದಾರೆ.

'ಪೆಂಗು' ಒರಿಸ್ಸ ಸಂಸ್ಥಾನದ ಕೊರಪುತ್ ಜಿಲ್ಲೆಯ ಉತ್ತರ ಭಾಗದಲ್ಲಿ ಹಾಗೂ ಕಲಹಂದಿ ಜಿಲ್ಲೆಯ ಗಡಿಗಳಲ್ಲಿ ವಾಸಿಸುವ ಜನರ ಭಾಷೆ. ಬೆಳಕಿಗೆ ಬಂದುದು ೧೯೫೭–೫೮ರಲ್ಲಿ, ಭಟ್ಟಾಚಾರ್ಯ ಹಾಗೂ ಬರೊ ನಡಸಿದ ಪರಿವೀಕ್ಷಣೆಯ ಫಲದಿಂದ. ಕೇವಲ ಒಂದು ಸಾವಿರದಷ್ಟು ಭಾಷಾವಕ್ತರನ್ನು ಹೊಂದಿರುವ ಪೆಂಗು ಸ್ವರೂಪದಲ್ಲಿ ಕುಈ ಮತ್ತು ಕುವಿ ಭಾಷೆಗಳನ್ನು ಹೋಲುತ್ತದೆ.

ಮಧ್ಯದ್ರಾವಿಡದ ಆಡು ಭಾಷೆಗಳಲ್ಲಿ 'ಗೋಂಡಿ' ಪ್ರಮುಖ ಭಾಷೆಯಾಗಿದೆಯಲ್ಲದೆ ಇದರ ಬಗ್ಗೆ ಸಾಕಷ್ಟು ಅಧ್ಯಯನವೂ ನಡೆದಿದೆ. ಗೋಂಡಿ ಕನ್ನಡ, ತೆಲುಗು ಮತ್ತು ತಮಿಳು ಭಾಷೆಗಳನ್ನು ಹೋಲುತ್ತದೆ. ಅವುಗಳಲ್ಲಿ ತೆಲುಗು ಮತ್ತು ತಮಿಳು ಭಾಷೆಗಳಿಗೆ ಸಮೀಪವಾಗಿದೆ. ಗೋಂಡಿ ಮಧ್ಯಪ್ರದೇಶದ ಕಾಡುಗಳಲ್ಲಿ ವಾಸಿಸುವ ಆದಿವಾಸಿಗಳ ಹಾಗೂ ಕಾಡುಜನರ ಭಾಷೆ. ಇದಲ್ಲದೆ ಬಿಹಾರ, ಆಂಧ್ರ, ಒರಿಸ್ಸ ಮತ್ತು ಮಹಾರಾಷ್ಟ್ರಗಳಲ್ಲೂ ಸುಮಾರು ಹತ್ತು ಲಕ್ಷ ಜನರು ಈ ಭಾಷೆಯನ್ನಾಡುತ್ತಾರೆ. ಇದು ಹಿಂದಿ ಭಾಷೆಯ ಪ್ರಭಾವಕ್ಕೆ ಸಾಕಷ್ಟು ಒಳಗಾಗಿವೆಯೆಂಬುದು ಜೂಲ್ಸ್ ಬ್ಲಾಕ್ ಅಭಿಪ್ರಾಯ. ಗೋಂಡಿ ಭಾಷೆಯಲ್ಲಿಯ ವಿಶೇಷಣಗಳು, ಅನೇಕ ಪ್ರತ್ಯಯಗಳು ಮತ್ತು ಸಂಬಂಧ ಸೂಚಕ ಸರ್ವನಾಮಗಳು ದ್ರಾವಿಡೇತರ ಭಾಷೆಯಿಂದ ಸ್ವೀಕೃತವಾಗಿವೆ.

'ನಾಯ್ಕಿ' ಭಾಷೆಯೂ ಕೊಲಾಮಿ, ಗೋಂಡಿ ಇತ್ಯಾದಿ ಭಾಷೆಗಳ ಹಾಗೆಯೇ ಸಾಕಷ್ಟು ಪ್ರಮುಖ ಭಾಷೆ. ಈ ಭಾಷೆಯನ್ನಾಡುವವರು ಸುಮಾರು ನಲವತ್ತು ಸಾವಿರ ಜನರಿದ್ದಾರೆ. ಅವರು ಮಹಾರಾಷ್ಟ್ರ ರಾಜ್ಯದ ಛಾಂದ ಜಿಲ್ಲೆಯ ಸುತ್ತ ನೆಲೆಸಿದ್ದಾರೆ. ತಮಿಳಿನಲ್ಲಿ ಕಂಡುಬರುವ ಪದದ ಆದಿಯ ಚಕಾರ ಕನ್ನಡದಲ್ಲಿ ಆಗಿರುವಂತೆ ಇಲ್ಲಿಯೂ ಕಕಾರವಾಗಿದೆ. ಹೀಗೆಯೇ 'ಮಂಡ' ಕೂಡ ಮಧ್ಯ ದ್ರಾವಿಡ ಭಾಷಾವರ್ಗದ ಸದಸ್ಯ ಭಾಷೆ. ಈ ಭಾಷೆಯ ಬಗ್ಗೆ ಇನ್ನೂ ಸಾಕಷ್ಟು ವಿವರಗಳು ತಿಳಿದುಬಂದಿಲ್ಲ.

ಉತ್ತರ ದ್ರಾವಿಡ ವರ್ಗದ ಮುಖ್ಯ ಭಾಷೆಗಳು ಎಂದರೆ ಕುರುಖ್, ಮಾಲ್ತೋ ಮತ್ತು ಬ್ರಾಹ್ವಿ. ಈ ಮೂರು ಭಾಷೆಗಳನ್ನು ಕಾಲ್ಡ್‌ವೆಲ್ ಮೊದಲೇ ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದನು. ಆದರೆ ಮೊದಲೆರಡು ಭಾಷೆಗಳನ್ನು ಒರಾವನ್ ಮತ್ತು ಮಾಲೇರ್ ಎಂದು ಹೆಸರಿಸಿದನು. ಛೋಟಾ ನಾಗಪುರ್ ಮತ್ತು ನೆರೆಹೊರೆ ಪ್ರದೇಶಗಳಲ್ಲಿ ವಾಸಿಸುವ ಕುರುಖ್ ವಕ್ತರು ಸುಮಾರು ಒಂದು ಲಕ್ಷಕ್ಕೂ ಹೆಚ್ಚಿದ್ದಾರೆ. ಕುರುಖ್ ಭಾಷೆಯನ್ನು 'ಕುಡುಖ್' ಎಂದೂ ಕರೆಯುತ್ತಾರೆ. ಅನೇಕ ಮಧ್ಯ ದ್ರಾವಿಡ ಭಾಷೆಗಳಂತೆ ಕುರುಖ್ ಬಹುಕಾಲದಿಂದ ಪ್ರಾಮುಖ್ಯ ಪಡೆಯುವ ೧೯೦೦ರ ಈಚೆಗೆ ಗ್ರಿಗ್

ನಾರ್ಡ್, ಫ್ಲೆಕ್ಸ್ ಮುಂತಾದವರ ಪ್ರಯತ್ನಗಳಿಂದ ಬೆಳಕಿಗೆ ಬಂದಿತು. ನೆರೆಹೊರೆಯ ಭಾಷೆಗಳಾದ ಹಿಂದಿ ಮತ್ತು ಬಿಹಾರಿ ಭಾಷೆಗಳು ಈ ಭಾಷೆಯ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಕುರುಖ್ ದ್ರಾವಿಡ ಭಾಷೆಗಳ ವ್ಯಾಕರಣ ವೈಶಿಷ್ಟ್ಯಗಳನೇಕವನ್ನು ಹೊಂದಿದೆ.

ಮಾಲೇರ್, ರಾಜಮಹಾಲ್ (ರಾಜಮಹಲಿ) ಎಂಬ ಹೆಸರುಗಳಿಂದಲೂ ಕರೆಯಲ್ಪಡುವ 'ಮಾಲ್ತೋ' ಭಾಷೆ ಬಂಗಾಳದ ರಾಜಮಹಲ್ ಬೆಟ್ಟ ಪ್ರದೇಶದಲ್ಲಿ ವಾಸಿಸುವ ಸುಮಾರು ಎಂಬತ್ತೆಂಟು ಸಾವಿರ ಜನರ ಭಾಷೆ. ಕೊಲಾಮಿ ಭಾಷೆಯಂತೆ, ಈ ಭಾಷೆಯಲ್ಲಿಯೂ ಕೇವಲ ಮೂರರವರೆಗೆ ಮಾತ್ರ ದ್ರಾವಿಡ ಸಂಖ್ಯಾವಾಚಗಳಿದ್ದು ಉಳಿದವು ಬಂಗಾಲಿ ಅಥವಾ ಬಿಹಾರಿ ಶಬ್ದಗಳಾಗಿರುವುದು ಕುತೂಹಲಕರ. ಅಲ್ಲದೆ ಆರ್ಯವರ್ಗದ ಭಾಷೆಗಳು ಪ್ರಭಾವಕ್ಕೆ ಇದೂ ಸ್ಪಷ್ಟ ನಿದರ್ಶನ.

ಮಾಲ್ತೋ ಅನೇಕ ಅಂಶಗಳಲ್ಲಿ ಕುರುಖ್ ಭಾಷೆಯನ್ನು ಹೋಲುತ್ತದೆಯಾದರೂ ಪ್ರತ್ಯೇಕ ಭಾಷೆಯೆಂದು ಕರೆಯುವಷ್ಟು ಗುಣಲಕ್ಷಣಗಳನ್ನು ಅದು ಹೊಂದಿರುವುದು ಕಂಡುಬರುತ್ತದೆ.

ದ್ರಾವಿಡ ಭಾಷೆಗಳ ಹಾಗೂ ದ್ರಾವಿಡರ ಪೂರ್ವೇತಿಹಾಸದ ಬಗ್ಗೆ ವಿದ್ವಾಂಸರಿಗೆ ಸಾಕಷ್ಟು ಕುತೂಹಲವನ್ನುಂಟುಮಾಡಿರುವ ಭಾಷೆ ಬ್ರಾಹ್ವಿ. ಕಾಲ್ಡ್‌ವೆಲ್‌ನ ಕಾಲಕ್ಕಾಗಲೇ ಈ ಭಾಷೆಯ ಪರಿಚಯವಾಗಿತ್ತು. ಆದರೆ ಅದನ್ನು ದ್ರಾವಿಡ ಭಾಷೆಗಳ ಗುಂಪಿಗೆ ಸೇರಿಸಲು ಆತ ಹಿಂಜರಿದಿದ್ದ. ಬ್ರಾಹ್ವಿ ಭಾಷೆಯ ಭೌಗೋಳಿಕ ಹಿನ್ನೆಲೆ ಭಾಷಾತಜ್ಞರನ್ನೂ ಮಾನವಶಾಸ್ತ್ರತಜ್ಞರನ್ನೂ ಸಮಾಜಶಾಸ್ತ್ರತಜ್ಞರನ್ನೂ ಸಾಕಷ್ಟು ಗೊಂದಲಕ್ಕೀಡುಮಾಡಿದೆ. ಈ ಭಾಷೆಯನ್ನು ಆಡುವವರು ಬಲೂಚಿಸ್ಥಾನದ ಕೇಲತ್ ಎಂಬ ಪರ್ವತ ಪ್ರದೇಶದ ಆದಿವಾಸಿಗಳಾಗಿದ್ದಾರೆ. ಆದುದರಿಂದಲೇ ದ್ರಾವಿಡರು ಬಹಳ ಹಿಂದೆ ಭಾರತದವರೇ ಆಗಿದ್ದು ನಂತರ ಹೊರಗೆ ಹೋಗಿದ್ದರೆಂದು ಕೆಲವರೂ ದ್ರಾವಿಡರೂ ಹೊರಗಿನಿಂದ ಬಂದವರೆಂದು ಮತ್ತೆ ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ಈಚೆಗೆ ಈ ಅನುಮಾನಕ್ಕೆ ಪುಷ್ಟಿ ನೀಡಿದ ಮತ್ತೊಂದು ಉಪಭಾಷೆ ಎಂದರೆ ಧಾಂಗರ್ ಕುರುಖ್. ಇದು ಉತ್ತರ ದ್ರಾವಿಡ ಭಾಷೆಯಾದ ಕುರುಖ್‌ಗೆ ಉಪಭಾಷೆ.[115] ಈ ಭಾಷೆಯನ್ನಾಡುವವರು ನೇಪಾಳದಲ್ಲಿ ವಾಸಿಸುವ ಧಾಂಗರ ಜಾತಿಯವರು. ಕುರುಖ್ ಭಾಷಾಪ್ರದೇಶದಿಂದ ಸಾಕಷ್ಟು ದೂರದಲ್ಲಿ ಮಾತನಾಡಲ್ಪಟ್ಟರೂ ಕುರುಖ್‌ನ ಉಪಭಾಷೆ ಎಂದು ಇದನ್ನು ಪರಿಗಣಿಸಿದೆ. ದ್ರಾವಿಡರು ಹೊರಗಿನಿಂದ ಬಂದವರೆಂಬ ಅನುಮಾನಕ್ಕೆ ಈ ಭಾಷೆ ದ್ರಾವಿಡ ಭಾಷಾಪ್ರದೇಶದಿಂದ ಬಹುದೂರದಲ್ಲಿರುವ ನೇಪಾಳದಲ್ಲಿ ಕಂಡುಬಂದಿರುವುದು ಸಹಾಯಮಾಡುತ್ತದೆ. ಆದರೆ ಬ್ರಾಹ್ವಿ ಭಾಷೆಯ ಸ್ಥಿತಿ ಕೊಂಚ ಭಿನ್ನವಾಗಿದೆ. ಏಕೆಂದರೆ ಅದು ಒಂಟಿಯಾಗಿ ನಿಂತರೂ ಅನೇಕ ವ್ಯಾಕರಣಾಂಶಗಳನ್ನು ಉಳಿಸಿಕೊಂಡಿದೆ. ಈ ಭಾಷೆಯಲ್ಲಿ ಮೂಲದ್ರಾವಿಡ ಎ ಮತ್ತು ಒ ಧ್ವನಿಗಳಿಲ್ಲ. ಈ ಧ್ವನಿಗಳು ಕ್ರಮವಾಗಿ ಅ ಮತ್ತು ಓ ಆಗಿವೆ. ದ್ರಾವಿಡ ಭಾಷೆಗಳಿಗೆ

ಸಹಜವಾದ ಲಿಂಗವಿಭಾಗವನ್ನು ಕಳೆದುಕೊಂಡು ಇರಾನಿ ಭಾಷೆಯನ್ನು ಹೋಲುತ್ತದೆ. ಇಸ್ಲಾಂ ಧರ್ಮಾನುಯಾಯಿಗಳಾದ ಬ್ರಾಹುಈಗಳ ಸಂಖ್ಯೆ ಸುಮಾರು ಎರಡು ಲಕ್ಷ.

ದ್ರಾವಿಡ ಭಾಷೆಯ ಕೆಲವು ವೈಶಿಷ್ಟ್ಯಗಳು : ದ್ರಾವಿಡ ಭಾಷೆಗಳ ಸ್ವರವ್ಯವಸ್ಥೆಯನ್ನು ಗಮನಿಸಿದಾಗ ಐದು ಪ್ರಮುಖ ಸ್ವರಗಳು ಕಂಡುಬರುತ್ತವೆ. ಮೂಲದ್ರಾವಿಡದಲ್ಲಿ ಅ, ಇ, ಉ, ಎ, ಒ ಎಂಬ ಐದು ಹ್ರಸ್ವಸ್ವರಗಳಿದ್ದು, ಈ ಸ್ವರಗಳಿಂದ ದೀರ್ಘಸ್ವರಗಳು ಅನಂತರ ವಿಕಾಸಗೊಂಡವು ಎಂಬುದು ಅನೇಕರ ಅಭಿಪ್ರಾಯ. ಆದರೆ ದ್ರಾವಿಡ ಭಾಷಾವರ್ಗವನ್ನು ಒಟ್ಟಾರೆ ಗಮನಿಸಿದಾಗ ಈ ಹತ್ತು ಸ್ವರಗಳು ಸಾಮಾನ್ಯವಾಗಿ ಕಂಡುಬರುತ್ತವಾದರೂ, ಆಯಾ ಭಾಷೆಯ ಆಡು ನುಡಿಗೆ ತಕ್ಕಂತೆ ಇನ್ನೂ ಅನೇಕ ಸ್ವರಗಳ ಸೇರ್ಪಡೆಯೂ ಆಗಿವೆ. ಇದೇ ರೀತಿ ಐ ಮತ್ತು ಔ ಸಂಧ್ಯಕ್ಷರಗಳೂ ನಂತರ ವಿಕಾಸಹೊಂದಿದವೇ ಆಗಿವೆ. ವ್ಯಂಜನ ವ್ಯವಸ್ಥೆಯಲ್ಲಿ ಕೂಡ ಸಂಸ್ಕೃತಕ್ಕೂ ದ್ರಾವಿಡ ಭಾಷೆಗಳಿಗೂ ಕೊಂಚ ವ್ಯತ್ಯಾಸ ಕಂಡುಬರುತ್ತದೆ. ಮೂಲದ್ರಾವಿಡದಲ್ಲಿ ಕೇವಲ ಅಘೋಷ ಧ್ವನಿಗಳಿದ್ದು ಕನ್ನಡ, ತೆಲುಗು ಮುಂತಾದ ಭಾಷೆಗಳಲ್ಲಿ ಕಂಡುಬರುವ ಘೋಷ ಧ್ವನಿಗಳು ಅನಂತರ ಸೇರಿದುವು. ಮಹಾಪ್ರಾಣ ಕೂಡ ಅನೇಕ ಭಾಷೆಗಳಲ್ಲಿ ಕಂಡುಬರುವುದಿಲ್ಲ. ಸ್ವರಗಳ ಪೈಕಿ ಎ ಮತ್ತು ಒ ಮತ್ತು ವ್ಯಂಜನಗಳ ಪೈಕಿ ಱ ೞ ಇವು ದ್ರಾವಿಡ ಭಾಷೆಗಳಲ್ಲಿ ಕಂಡುಬರುತ್ತವೆ, ಸಂಸ್ಕೃತದಲ್ಲಿಲ್ಲ. ದ್ರಾವಿಡ ಭಾಷೆಗಳಲ್ಲದ ರಲ್ಲಿ ಸಂಸ್ಕೃತದ ಶ, ಷ, ಸ ಮೂರು ಧ್ವನಿಗಳೂ ಬಳಕೆಯಲ್ಲಿಲ್ಲ. ಆದರೆ ತತ್ಸಮ ಶಬ್ದಗಳಲ್ಲಿ ಕಂಡುಬರುವ ಈ ಧ್ವನಿಗಳು ಸಾಮಾನ್ಯವಾಗಿ ಹಾಗೆಯೇ ಉಳಿದಿವೆ. ಕೆಲವು ಉಪಭಾಷೆಗಳಲ್ಲಿ ದ್ರಾವಿಡೇತರ ಧ್ವನಿಗಳಾದ ಫ (f), ಹ (x), ತ (θ) ಇವು ಧ್ವನಿಮಗಳಾಗಿ ಬಳಕೆಯಲ್ಲಿವೆ.

ವ್ಯಾಕರಣ ದೃಷ್ಟಿಯಿಂದ ದ್ರಾವಿಡ ಭಾಷೆಗಳಿಗೂ ಆರ್ಯನ್ ಭಾಷಾವರ್ಗದ ಭಾಷೆಗಳಿಗೂ, ಮುಖ್ಯವಾಗಿ ಸಂಸ್ಕೃತಕ್ಕೂ, ಇರುವ ವ್ಯತ್ಯಾಸಗಳು ಈ ರೀತಿ ಇವೆ : ದ್ರಾವಿಡ ವರ್ಗಕ್ಕೂ ಆರ್ಯ ವರ್ಗಕ್ಕೂ ವ್ಯಾಕರಣ ಕ್ರಿಯಾಭೇದಗಳಿವೆ. ಸಂಸ್ಕೃತದಲ್ಲಿ ಲಿಂಗವಿವಕ್ಷೆ ಶಬ್ದರೂಪಾನುಸಾರಿಯಾದುದು. ಈ ವ್ಯಾಕರಣ ಪ್ರಕ್ರಿಯೆ ಅನಂತರ ಬೆಳೆದುಬಂದಿರುವ ಹಿಂದಿ, ಮುಂತಾದ ಉತ್ತರ ಭಾರತದ ಭಾಷೆಗಳಲ್ಲಿ ಕೂಡ ಕಂಡುಬರುತ್ತದೆ. ಸಂಸ್ಕೃತದಲ್ಲಿ 'ಹೆಂಡತಿ' ಎಂಬ ಅರ್ಥದ ಪತ್ನಿ (ಸ್ತ್ರೀ), ದಾರಾ (ಪುಂ), ಕಲತ್ರ (ನಪುಂ) ಎಂಬ ಮೂರು ಶಬ್ದಗಳಿದ್ದು ಇವು ಮೂರು ಲಿಂಗಗಳಲ್ಲಿಯೂ ಪ್ರಯೋಗವಾಗುತ್ತವೆ. ಆದರೆ ದ್ರಾವಿಡ ಭಾಷೆಗಳಲ್ಲಿ ಅರ್ಥಾನುಸಾರವಾಗಿ ಶಬ್ದವಿರುತ್ತವೆ. ಬುದ್ಧಿಯುಳ್ಳವು ಸ್ತ್ರೀಲಿಂಗ ಪುಲ್ಲಿಂಗಗಳ ಗುಂಪಿಗೆ ಸೇರುತ್ತವೆ. ಜಡವಸ್ತುಗಳು, ಬುದ್ಧಿಯಿಲ್ಲದವು ನಪುಂಸಕ ಲಿಂಗದಲ್ಲಿರುತ್ತವೆ. ದ್ರಾವಿಡ ಭಾಷೆಗಳಲ್ಲಿ ನಿಜವಾದ ವಿಭಕ್ತಿಪ್ರತ್ಯಯಗಳಿಲ್ಲವೆಂದೂ ಸ್ವತಂತ್ರವೂ ಪ್ರತ್ಯೇಕವೂ ಆದ ಶಬ್ದಗಳನ್ನು ಸೇರಿಸಿ ವಿಭಕ್ತಿ ರೂಪಗಳು ಮಾಡಲಾಗುತ್ತವೆ ಎಂದೂ ಅನೇಕರ ಅಭಿಪ್ರಾಯ. ಆದರೆ ಇದು ಪಂಚಮಿ ಹಾಗೂ ಸಪ್ತಮಿ ವಿಭಕ್ತಿಗಳಿಗೆ ಅನ್ವಯಿಸುತ್ತದೆಯೇ ಹೊರತು

ಮಿಕ್ಕ ವಿಭಕ್ತಿಗಳಿಗೆ ಅನ್ವಯಿಸುವುದಿಲ್ಲ. ನಪುಂಸಕ ನಾಮಗಳಿಗೆ ಬಹುವಚನವು ದ್ರಾವಿಡ ಭಾಷೆಗಳಲ್ಲಿ ನಡೆಯುವುದು ಅಪರೂಪ. ಉದಾ: ಹತ್ತು ಮನೆ—ಒಂದು ಮನೆ, ಆನೆ ಬಂತು—ಆನೆ ಬಂದುವು. ಆರ್ಯ ಭಾಷೆಗಳಲ್ಲಿ ವಿಶೇಷಣವು ಲಿಂಗ ವಿಭಕ್ತಿ ವಚನಗಳಲ್ಲಿ ವಿಶೇಷ್ಯವನ್ನು ಅನುಸರಿಸುತ್ತದೆ (ಯಾ ಕುಂದೇಂದು ತುಷಾರ ಹಾರ ಧವಳಾ ಯಾ ಶುಭ್ರವಸ್ತ್ರಾನ್ವಿತಾ...., ಜ್ಞಾನಾನಂದಮಯಂ ದೇವಂ, ಆಧಾರಂ ಸರ್ವ ವಿದ್ಯಾನಾಂ....). ಆದರೆ ದ್ರಾವಿಡ ಭಾಷೆಗಳಲ್ಲಿ ಈ ಕಟ್ಟುನಿಟ್ಟಾದ ಕ್ರಮವಿಲ್ಲ (ಒಳ್ಳೆಯ ಗಂಡ, ಒಳ್ಳೆಯ ಹೆಂಡತಿ, ಒಳ್ಳೆಯ ಮಗು). ಸಂಸ್ಕೃತದಲ್ಲಿರುವಂತೆ 'ಅಜಂತ' ಮತ್ತು 'ಹಲಂತ' ಎಂಬ ಭೇದ ದ್ರಾವಿಡ ಭಾಷೆಗಳಲ್ಲಿಲ್ಲ. ದ್ರಾವಿಡ ಭಾಷೆಗಳಲ್ಲಿ ವ್ಯಂಜನಾಂತ ಶಬ್ದಗಳು ಕಡಮೆ. ಬಹುತೇಕ ದ್ರಾವಿಡ ಭಾಷೆಗಳಲ್ಲಿ ಸ್ವರಾಂತ ಶಬ್ದಗಳೇ ಹೆಚ್ಚು. ಆದರೆ ತಮಿಳಿನಲ್ಲಿ ಇಂದಿಗೂ ವ್ಯಂಜನಾಂತ ಶಬ್ದಗಳಿರುವುವಲ್ಲದೆ, ಹಳಗನ್ನಡದಲ್ಲಿಯೂ ಅನೇಕ ವ್ಯಂಜನಾಂತ ಶಬ್ದಗಳಿದ್ದು ಹೊಸಗನ್ನಡದಲ್ಲಿ ಅವುಗಳನ್ನು ಸ್ವರಾಂತವನ್ನಾಗಿ ಮಾಡಲಾಗಿದೆ. ಈ ಪ್ರಕ್ರಿಯೆ ದ್ರಾವಿಡ ಭಾಷೆಗಳ ಶಬ್ದ ಸಮೂಹಕ್ಕೆ ಮಾತ್ರವಲ್ಲ, ಅನ್ಯಭಾಷೆಗಳಿಂದ ಸ್ವೀಕೃತವಾದ ಶಬ್ದಗಳಿಗೂ ಅನ್ವಯಿಸುವುದು. ಈ ರೀತಿ ಶಬ್ದಾಂತ ಸ್ವರವಿರುವುದರಿಂದ ಸ್ವರಾನುರೂಪತೆಗೆ ಎಡೆಮಾಡಿ ಕೊಟ್ಟಿದೆ. ಸ್ವರಾನುರೂಪತೆ ದ್ರಾವಿಡ ಭಾಷೆಗಳ ಒಂದು ವೈಶಿಷ್ಟ್ಯ. ಸಂಸ್ಕೃತದಲ್ಲಿ ಇರುವ ದ್ವಿವಚನ ದ್ರಾವಿಡ ಭಾಷೆಗಳಲ್ಲಿಲ್ಲದೆ ಇರುವುದು ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವಲ್ಲವೆಂಬ ತರ್ಕವನ್ನು ಪುಷ್ಟೀಕರಿಸಿದೆ. ದ್ರಾವಿಡ ಭಾಷೆಗಳಲ್ಲಿ ಕೇವಲ ಎರಡೇ ವಚನಭೇದಗಳಿರುವುವ. ಇದಲ್ಲದೆ ಏಕ, ದ್ವಿ ಹಾಗೂ ಬಹುವಚನ ಶಬ್ದಗಳಿಗೆ ಹಚ್ಚುವ ವಿಭಕ್ತಿಪ್ರತ್ಯಯಗಳು ಸಂಸ್ಕೃತದಲ್ಲಿ ಭಿನ್ನವಾಗಿರುತ್ತವೆ; ದ್ರಾವಿಡ ಭಾಷೆಗಳಲ್ಲಿ ಏಕ ಹಾಗೂ ಬಹುವಚನ ಶಬ್ದಗಳಿಗೆ ಒಂದೇ ವಿಭಕ್ತಿರೂಪ ಪ್ರಯೋಗದಲ್ಲಿದೆ. ದ್ರಾವಿಡ ವರ್ಗದ ಅನೇಕ ಭಾಷೆಗಳಲ್ಲಿ ಅಭಿವ್ಯಾಪಕ (ಅಂದರೆ ಮಾತನಾಡುವವರನ್ನು ಸೇರಿಸಿಯೂ) ಮತ್ತು ವ್ಯಾವರ್ತಕ (ಮಾತನಾಡುವವರನ್ನು ಬಿಟ್ಟು) ಎಂಬ ಎರಡು ಬಗೆಯ ಸರ್ವನಾಮಗಳು ಉತ್ತಮಪುರುಷ ಬಹುವಚನದಲ್ಲಿ ಬಳಕೆಯಲ್ಲಿವೆ. ಈ ಕ್ರಮ ಮುಂಡ ವರ್ಗದ ಭಾಷೆಗಳಲ್ಲಿಯೂ ಕಂಡುಬರುತ್ತದೆ. ಹಳಗನ್ನಡದಲ್ಲಿ ಹಾಗೂ ಕನ್ನಡದ ಹವ್ಯಕ ಉಪಭಾಷೆಯಲ್ಲಿ ಈ ಕ್ರಮವಿರುವುದಕ್ಕೆ ನಿದರ್ಶನಗಳಿವೆ. ದ್ರಾವಿಡ ಭಾಷೆಗಳಲ್ಲಿ ಕರ್ಮಣಿ ಪ್ರಯೋಗ ಬಹಳ ವಿರಳ. ಇರುವೆಡೆಗಳಲ್ಲಿ ಇದಕ್ಕಾಗಿ ಬೇರೆ ಕ್ರಿಯಾರೂಪವಿಲ್ಲ. ಈ ಅಂಶಗಳಿಂದ ಸಂಸ್ಕೃತ ಭಾಷೆಯ ವೈಶಿಷ್ಟ್ಯಗಳು ದ್ರಾವಿಡ ಭಾಷೆಗಳಲ್ಲಿಲ್ಲ ಎಂಬುದು ಖಚಿತವಾಗುತ್ತದೆ. ದ್ರಾವಿಡ ಭಾಷಾವರ್ಗ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವುದರಿಂದ ಸ್ವತಂತ್ರ ಭಾಷಾವರ್ಗವಾಗಿ ವಿಕಾಸ ಹೊಂದುತ್ತಿದೆ.

ಇನ್ನು ಮುಂದೆ ದ್ರಾವಿಡ ಭಾಷಾವರ್ಗದಲ್ಲಿ ಒಂದಾದ ಕನ್ನಡ ಭಾಷೆಯ ಪ್ರಾಚೀನತೆ ಮತ್ತು ಸ್ವರೂಪಗಳನ್ನು ತಿಳಿಯಲು ಹಾಗೂ ಆ ಭಾಷೆಯ ಉಪಭಾಷೆಗಳ ಒಂದು ಸಾಮಾನ್ಯ ಪರಿಚಯವನ್ನು ಪಡೆಯಲು ಸ್ವಲ್ಪಮಟ್ಟಿಗೆ ಪ್ರಯತ್ನಿಸಬಹುದು.

## ಕನ್ನಡ ಭಾಷೆಯ ಪ್ರಾಚೀನತೆ

ಮೂಲದ್ರಾವಿಡ ಭಾಷೆಯನ್ನಾಡುತ್ತಿದ್ದ ಅಥವಾ ದ್ರಾವಿಡಭಾಷಾ ವಿಭೇದಗಳು ಏರ್ಪಡುವ ಮೊದಲಿನ ಜನಾಂಗ ಗುಂಪುಗುಂಪಾಗಿ ಚದುರಿಹೋದಾಗ ಕರ್ಣಾಟಕದಲ್ಲಿ ನೆಲಸಿದ ಗುಂಪಿನ ಉಪಭಾಷೆಯುಲ್ಲಿ ಸಹಜವಾಗಿ ಆದ ವ್ಯತ್ಯಾಸಗಳಿಂದಾಗಿ ಕನ್ನಡ ತಲೆ ಯೆತ್ತಿರುವುದು ಸಾಧ್ಯ. "ತಮಿಳು ಕನ್ನಡಗಳು ಯಾವಾಗ ಬೇರ್ಪಟ್ಟು ಪ್ರತ್ಯೇಕ ಭಾಷೆಗಳಾದವು ಎನ್ನುವುದು ತಿಳಿದಿಲ್ಲ. ಆದರೆ ಕ್ರಿ.ಪೂ. ಮೊದಲ ಸಹಸ್ರ ವರ್ಷಗಳ ಮಧ್ಯಭಾಗ ತೀರ ದೂರದ ಕಾಲ ಎನ್ನುವಂತಿಲ್ಲ"–ಎನ್ನುವ ಒಂದು ಅಭಿಪ್ರಾಯವಿದೆ ?[116] ಒಂದು ಭಾಷೆಯಲ್ಲಿ ದೊರಕುವ ಪ್ರಾಚೀನ ಶಾಸನಗಳೂ ಸಾಹಿತ್ಯಗ್ರಂಥಗಳೂ ಆ ಭಾಷೆಯ ಪ್ರಾಚೀನ ಅಸ್ತಿತ್ವಕ್ಕೆ ಸಾಕ್ಷಿ. ಆದರೆ ಹೀಗೆ ಭಾಷೆ ಸಾಹಿತ್ಯಿಕವಾಗಿ ಬಳಕೆ ಯಾಗುವ ಎಂದರೆ ಬರಹಕ್ಕೆ ಇಳಿಯುವ ಎಷ್ಟೋ ಶತಮಾನಗಳ ಮುಂಚೆಯೇ ಅದು ಆಡುನುಡಿಯಾಗಿ ಉಪಯೋಗದಲ್ಲಿರುತ್ತದೆ. ಆದ್ದರಿಂದ ಈಗ ದೊರಕುವ ನಿಶ್ಚಿತ ಆಧಾರ ಗಳಿಗಿಂತ ಕನ್ನಡಭಾಷೆ ಕೆಲವು ಶತಮಾನಗಳಷ್ಟು ಹಳೆಯದು ಎಂಬುದು ಸ್ಪಷ್ಟ.

ಕನ್ನಡಭಾಷೆಯ ಪ್ರಾಚೀನತೆಯನ್ನು ತಿಳಿಯಲು ನಮಗಿರುವ ಅಂಥ ಆಧಾರಗಳನ್ನು ಎರಡು ಗುಂಪುಗಳನ್ನಾಗಿ ಮಾಡಬಹುದು: ಶಾಸನೇತರವಾದವು ಮತ್ತು ಶಾಸನ ಸಂಬಂಧವಾದವು.

ಮೊಹೆಂಜೊದಾರೋ—ಹರಪ್ಪಾ ಸಂಸ್ಕೃತಿಗೆ ಸೇರಿದ ಮುದ್ರಿಕೆಗಳಲ್ಲಿ ಕನ್ನಡ ಜನರ ಉಲ್ಲೇಖವಿದೆಯೆಂದೂ ಸಿಂಧು ಸಂಸ್ಕೃತಿಯ ಭಾಷೆ ಕೂಡ ಒಂದು ಬಗೆಯ ದ್ರಾವಿಡ ಭಾಷೆಯಾಗಿತ್ತೆಂದೂ ಕೆಲವರು ತಿಳಿಯುತ್ತಾರೆ. ಇಂಥ ತಿಳಿವಳಿಕೆಗಳು ಕನ್ನಡದ ಪ್ರಾಚೀನತೆಯನ್ನು ವೇದಪೂರ್ವ ಕಾಲಕ್ಕೆ ಒಯ್ಯುವುದು ಸಾಧ್ಯ. ಆದರೆ ಸೈಂಧವ ಲಿಪಿಯನ್ನು ತೃಪ್ತಿಕರವಾಗಿ ಓದುವವರೆಗೆ ಮೇಲಿನ ತಿಳಿವಳಿಕೆಯನ್ನು ನೆಚ್ಚುವಹಾಗಿಲ್ಲ.

ಛಾಂದೋಗ್ಯೋಪನಿಷತ್ತಿನಲ್ಲಿ ದೊರೆಯುವ ಚೆನ್ (ಚಂಪ್ರ) ಮಟಚಿ (ಮಿಡತೆ) ಮುಂತಾದ ಶಬ್ದಗಳು ಕನ್ನಡವೆಂದು ಕೆಲವರ ಎಣಿಕೆ. ಇವುಗಳಲ್ಲಿ 'ಮಟಚಿ' ಶಬ್ದ ಕನ್ನಡದ 'ಮಿಡಿಚೆ' ಎಂಬ ಶಬ್ದದ ಸಂಸ್ಕೃತ ರೂಪವೆಂದು ಡಾ. ಭಂಡಾರ್ಕರ್ ಮುಂತಾ ದವರು ಭಾವಿಸಿದ್ದಾರೆ. ಆದರೆ ಈ ಸಾಕ್ಷ್ಯ ಸಂದಿಗ್ಧವಾದ್ದು. ಇತಿಹಾಸಪುರಾಣಗಳಲ್ಲಿ ಕರ್ಣಾಟಕ ಮತ್ತು ಕನ್ನಡಿಗರ ಪ್ರಸ್ತಾಪಗಳಿದ್ದರೂ ಭಾಷೆಯ ಪ್ರಾಚೀನತೆಯನ್ನು ಕಂಡುಹಿಡಿಯಲು ಅವು ನೆರವಾಗುವುದಿಲ್ಲ.

ಟಾಲೆಮಿ ಪ್ರಾಚೀನ ಭಾರತದ ಭೂಗೋಳವನ್ನು ಕುರಿತ ತನ್ನ ಗ್ರಂಥದಲ್ಲಿ, ಬಹುಶಃ ಭೀಮಾನದಿಯಿಂದ ಬನವಾಸಿವರೆಗಿನ ಪ್ರದೇಶದ ನಡುವೆಯಿದ್ದ ಹತ್ತು ಸ್ಥಳಗಳನ್ನು ಹೆಸರಿಸುತ್ತಾನೆ. ಈ ಹೆಸರುಗಳನ್ನು ಎಂ. ಗೋವಿಂದ ಪೈ ಇಂದಿನ ಕರ್ಣಾಟಕದ ಸ್ಥಳ ಗಳನ್ನಾಗಿ ಗುರುತಿಸಿದ್ದಾರೆ. ಅವು ಹೀಗಿವೆ: Nagarouris : ನಾಗರೂರು ; Tabaso : ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ತಪಸಿ; Inde : ಬಿಜಾಪುರ ತಾಲ್ಲೂಕಿನ ಇಂಡಿ;

Tiri Pangalida : ಕೊಲ್ಲಾಪುರ ಸೀಮೆಗೆ ಒಳಪಟ್ಟ ಗಡಾಹಿಂಗಲಜ; Hippo Koura : ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ಮೂರು ಹಿಪ್ಪರಿಗೆಗಳಲ್ಲಿ ಬಹುಶಃ ಹೂವಿನ ಹಿಪ್ಪರಿಗೆ ಇದ್ದಿರಬೇಕು ; Soubouttou : ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ಸವದಿ ಅಥವಾ ಧಾರವಾಡ ಜಿಲ್ಲೆಯ ರಾಣ್ ತಾಲ್ಲೂಕಿನ ಸವಡಿ ; Sirimalaga : ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ ಅಥವಾ ಅದೇ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಚಿಮ್ಮಲಗಿ. ಪ್ರಾಯಃ ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ ಇದಾಗಿರಬಹುದು; Kalligeris : ಧಾರವಾಡ ಜಿಲ್ಲೆಯ ಕಲಕೇರಿ ಅಥವಾ ಬಿಜಾಪುರ ಜಿಲ್ಲೆಯ ಕಲ್ಕೇರಿ; Modugoulla : ರಾಯಚೂರು ತಾಲ್ಲೂಕಿನ ಈಗಿನ ಮುದ್ಗಲ; Petirgala : ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲ್ಲೂಕಿನ ಹಟ್ಟಿಕಿಹಾಳ ಇರಬಹುದು.

ಈ ಆಧಾರಗಳಿಂದ ಟಾಲೆಮಿಯ ಗ್ರಂಥರಚನೆಯ ಕಾಲಕ್ಕೆ (ಕ್ರಿ.ಶ. ೩ನೆಯ ಶತಮಾನ) ಒಂದೆರಡು ಶತಮಾನಗಳ ಹಿಂದೆ ಕನ್ನಡ ಭಾಷೆ ಇದ್ದಿರಬೇಕು ಎಂದು ಪೈ ಅವರು ತೀರ್ಮಾನಿಸುತ್ತಾರೆ.

ಕನ್ನಡ ಸಾಹಿತ್ಯಕ್ಕೆ ಬೌದ್ಧಮೂಲವನ್ನು ಹುಡುಕುವ ಪ್ರಯತ್ನಗಳು ಕೂಡ ನಡೆದಿವೆ. ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತ ತಮ್ಮ ಬರಹದಲ್ಲಿ[118] ಟಿ. ಎಸ್. ವೆಂಕಣ್ಣಯ್ಯನವರು ೯ನೆಯ ಶತಮಾನಕ್ಕೆ ಬಹುಕಾಲ ಪೂರ್ವದಿಂದಲೂ, ಎಂದರೆ ೪-೫ ಶತಮಾನಗಳ ಹಿಂದಿನಿಂದಲಾದರೂ ಕನ್ನಡದಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು, ಬೌದ್ಧ ಮತದ ನಾಶದೊಂದಿಗೆ ಕನ್ನಡದ ಬೌದ್ಧ ಗ್ರಂಥಗಳು ನಾಶವಾಗಿರಬೇಕು, ಅಂಥ್ರದಲ್ಲಿ ಜೈನ ಗ್ರಂಥಗಳಿಗೆ ಒದಗಿದ ಸ್ಥಿತಿಯೇ ಕನ್ನಡದ ಬೌದ್ಧಗ್ರಂಥಗಳಿಗೆ ಸಹ ಒದಗಿರಬೇಕು—ಎಂದು ಮುಂತಾಗಿ ಅಭಿಪ್ರಾಯಪಟ್ಟಿದ್ದಾರೆ. ಕನ್ನಡ ನಾಡಿಗೆ ಬಹಳ ಹಿಂದಿನಿಂದಲೂ ಬೌದ್ಧರ ಸಂಪರ್ಕವಿತ್ತು ಎನ್ನಲು ಅಶೋಕನ ಶಾಸನಗಳು ದೊರೆಯುವ ಕ್ರಿ.ಪೂ. ೩ನೆಯ ಶತಮಾನದಿಂದಲೂ ಆಧಾರಗಳೇನೋ ಇವೆ. ಆದರೆ ಆಗ ಕನ್ನಡ ವ್ಯಾವಹಾರಿಕ ಭಾಷೆಯಾಗಿತ್ತು ಎನ್ನುವುದಕ್ಕೆ ಆಧಾರಗಳಿಲ್ಲ. ಕರ್ಣಾಟಕದ ರಾಜಕೀಯದಲ್ಲಿ ಅವರ ಪ್ರಭಾವ ಗಾಢವಾಗಿರಲಿಲ್ಲ ಎಂಬುದು ಇದಕ್ಕೆ ಕಾರಣವಾಗಿರಬಹುದು ; ಇಷ್ಟು ಮಾತ್ರವಲ್ಲ, ಕರ್ನಾಟಕದಲ್ಲಿ ಯಾವ ಕಾಲದಲ್ಲೂ ಬೌದ್ಧ ಧರ್ಮ ದೃಢವಾಗಿ ಬೇರೂರಿರುವ ಸಂಭವವೇ ಕಡಮೆ—ಎಂಬುದು ಕೆಲವರ ಭಾವನೆ.[119]

ವಾಸಿಷ್ಠೀಪುತ್ರ ಶ್ರೀ ಪುಳುಮಾಯಿಯಿಂದ ಏಳು ತಲೆಮಾರುಗಳ ಹಿಂದೆ ಆಳಿದ್ದಿರಬಹುದಾದ ಶಾತವಾಹನರಾಜ ಹಾಲನೆಂಬ ದೊರೆಯ 'ಗಾಥಾಸಪ್ತಶತಿ'ಯಲ್ಲಿ (ಕ್ರಿ.ಪೂ. ಸುಮಾರು ೧ನೆಯ ಶತಮಾನ) ಸಂಸ್ಕೃತ ಪ್ರಾಕೃತ ಭಾಷೆಗೆ ಸೇರಿರದ ಕೆಲವು ದೇಶ್ಯ ಶಬ್ದಗಳಿದ್ದು ಅವುಗಳಲ್ಲಿ ಕೆಲವನ್ನು ಕನ್ನಡವೆಂದು ಗೋವಿಂದ ಪೈ ಗುರುತಿಸುತ್ತಾರೆ :[120] ಅತ್ತಾ (ಅತ್ತೆ), ತುಪ್ಪ (ಘೃತ), ಪೊಟ್ಟ (ಹೊಟ್ಟೆ), ಫಲಹೀ (ಹತ್ತಿ), ತೀರ್ ಇ (ಧಾ. ತೀರ್=ಶಕ್ಯವಾಗು). ಶುದ್ಧ ಕನ್ನಡವೆಂದು ಖಂಡಿತವಾಗಿ ತಿಳಿದಿರುವ ಈ ಶಬ್ದ

ಗಳು ಕ್ರಿ.ಪೂ. ೧ನೆಯ ಶತಮಾನದ ಆ ಪ್ರಾಕೃತಗ್ರಂಥದಲ್ಲಿರಬೇಕಾದರೆ ಕನ್ನಡ ಆ ಕಾಲಕ್ಕೆ ಬಹಳ ಹಿಂದೆಯೇ ಬಳಕೆಯಲ್ಲಿದ್ದಿರಬೇಕು, ಕನಿಷ್ಠಪಕ್ಷ ಕ್ರಿ.ಪೂ. ೨ನೆಯ ಅಥವಾ ೩ನೆಯ ಶತಮಾನದಿಂದಲಾದರೂ ಅದು ಅಸ್ತಿತ್ವದಲ್ಲಿತ್ತೆಂದು ಹೇಳಬಹುದು— ಎಂದು ಅವರ ಅಭಿಪ್ರಾಯ. ಆದರೆ ಇವು ದ್ರಾವಿಡಸಾಮಾನ್ಯದ ಶಬ್ದಗಳಾಗಿವೆಯೆಂದೂ ಕನ್ನಡದ್ದೇ ಎಂದು ವಿಶೇಷಿಸಿ ಹೇಳುವ ಅಗತ್ಯವಿಲ್ಲವೆಂದೂ ಆಕ್ಷೇಪಿಸುವ ಸಾಧ್ಯತೆಯಿದೆ. ಕನ್ನಡ ಕ್ರಿಯಾಪದಗಳನ್ನು ಪ್ರಾಕೃತ ಎರವಲು ಪಡೆಯಲು ಆಗ ಕನ್ನಡ ಸಾಹಿತ್ಯ ಶ್ರೀಮಂತವಾಗಿದ್ದಿರಬೇಕೆಂಬ ಶ್ರೀಯುತರ ಮಾತನ್ನು ನಿರಾಕರಿಸುತ್ತ ಇನ್ನೊಬ್ಬ ವಿಮರ್ಶಕರು[121] ಕ್ರಿ.ಪೂ. ೩-೪ನೆಯ ಶತಮಾನದವರೆಗೆ ದಕ್ಷಿಣದಲ್ಲಿ ದೊರೆಯುವ ಶಾಸನಗಳೆಲ್ಲ ಪ್ರಾಕೃತ ಮತ್ತು ಸಂಸ್ಕೃತಗಳಲ್ಲಿರುವುದನ್ನು ಗಮನಿಸಿ, "ಈ ಕಾಲದಲ್ಲಿ ಸಂಸ್ಕೃತ ಪ್ರಾಕೃತಗಳೆರಡೂ ಆಸ್ಥಾನ ಮತ್ತು ವ್ಯಾವಹಾರಿಕ ಭಾಷೆಗಳಾಗಿದ್ದವೆಂದು ಹೇಳಬಹುದು. ಶಾಸನಗಳೆಲ್ಲವೂ ಇವೆರಡೇ ಭಾಷೆಗಳಲ್ಲಿರುವ ಕಾರಣ ದ್ರಾವಿಡ ಭಾಷೆಗಳು ಇನ್ನೂ ವಾಙ್ಮಯಕ್ಕೆ ತಕ್ಕ ಭಾಷೆಗಳಾಗಿರಲಿಲ್ಲವೆಂದು ಹೇಳಬೇಕಾಗುತ್ತದೆ"[122] ಎಂಬ ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿಯವರ ಅಭಿಪ್ರಾಯವನ್ನು ಅನುಮೋದಿಸುತ್ತಾರೆ.

ಪ್ರಾಕೃತ ಭಾಷೆಯ ದೇಶೀವಿಭಾಗದಲ್ಲಿರುವ ಪದಗಳಲ್ಲಿ ಹಲವು—ಅಪ್ಪ, ಅಕ್ಕ, ಕುರುಡ, ಕೊಟ್ಟ ಇತ್ಯಾದಿ ಪದಗಳು—ಕನ್ನಡವಾಗಿರುವ ಸಾಧ್ಯತೆಯನ್ನು ಡಾ. ಆ. ನೇ. ಉಪಾಧ್ಯೆ ಅವರು ತೋರಿಸಿಕೊಟ್ಟಿದ್ದಾರೆ.[123] ಆದರೆ ಅವು ಎಷ್ಟು ಹಿಂದೆ ಸೇರಿದುವು ಎಂಬುದು ಗೊತ್ತಾಗುವುದಾದರೆ, ಈ ದಿಶೆಯಲ್ಲಿ ಶೋಧನೆಯ ಪ್ರಯತ್ನಗಳು ಮುಂದುವರಿದರೆ, ಕನ್ನಡ ಭಾಷೆಯ ಪ್ರಾಚೀನತೆಯನ್ನು ಒಂದು ನೆಲೆಗೆ ಮುಟ್ಟಿಸಲು ಸ್ವಲ್ಪಮಟ್ಟಿಗಾದರೂ ಪ್ರಾಯಃ ಸಾಧ್ಯವಾಗಬಹುದು.

ಹೇಮಚಂದ್ರನ (೧೨ನೆಯ ಶತಮಾನ) 'ದೇಶೀನಾಮಮಾಲೆ'ಯಲ್ಲಿ ಕನ್ನಡ ಶಬ್ದಗಳು ಪ್ರಾಕೃತಕ್ಕೆ ನುಸುಳಿಕೊಂಡಿರುವುದನ್ನು ಗಮನಿಸಿ ಎಂ. ಮರಿಯಪ್ಪಭಟ್ಟರು ಕ್ರಿ.ಪೂ.ದ ಶತಮಾನಗಳಲ್ಲಿ ಕನ್ನಡ ಗ್ರಾಂಥಿಕವಾಗಿ ಅಲ್ಲವಾದರೂ ವ್ಯಾವಹಾರಿಕವಾಗಿ ಬಳಕೆಯಲ್ಲಿತ್ತು ಎನ್ನುತ್ತಾರೆ.

ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಸೇರಿರುವ ಕನ್ನಡ ಅಥವಾ ಇತರ ದ್ರಾವಿಡಭಾಷೆಯ ಶಬ್ದಗಳು ಯಾವ ಕಾಲಕ್ಕೆ ಯಾವ ಪರಿಸ್ಥಿತಿಯಲ್ಲಿ ಸೇರಿದವೆನ್ನುವುದು ಇನ್ನೂ ನಿರ್ಣಯವಾಗಿಲ್ಲವಾದ್ದರಿಂದ ಅವುಗಳ ಆಧಾರದ ಮೇಲೆ ಮಾಡಿದ ನಿರ್ಧಾರಗಳು ಕೊನೆಯ ಮಾತಾಗುವುದು ಕಷ್ಟ.

ಸುಮಾರು ೮೦೦ರ ಸೈಗೊಟ್ಟ ಶಿವಮಾರನ 'ಗಜಾಷ್ಟಕ'ದ ಬಗೆಗೆ ಹೇಳುವ ಶಾಸನದಲ್ಲಿ ಒವನಿಗೆಯ ಹಾಗೂ ಒನಕೆವಾಡಿನ ಪ್ರಸ್ತಾಪವಿದೆ. ಇಂಥ ಜಾನಪದ ಪ್ರಕಾರಗಳನ್ನುಳ್ಳ ಭಾಷೆ ಆ ಕಾಲಕ್ಕೆ ಬಹಳಷ್ಟು ಹಿಂದಿನಿಂದ ಬೆಳೆದು ಬಂದಿರಬೇಕು. ಎಷ್ಟು ಹಿಂದೆ ಎಂಬುದನ್ನು ನಿರ್ದೇಶಿಸುವುದು ಕಷ್ಟ.

೧೮೯೯ರಲ್ಲಿ, ಕೆಳ ಈಜಿಪ್ಟಿನ ಆಕ್ಸಿರಿಂಕಸ್‌ನಲ್ಲಿ ನಡಸಿದ ಸಂಶೋಧನೆಯ ವಿವರಗಳನ್ನು ಬಿ. ಪಿ. ಗ್ರೆನ್‌ಫುಲ್ ಮತ್ತು ಎ. ಎಸ್. ಹಂಟ್ ೧೯೦೩ರಲ್ಲಿ ಪ್ರಕಟಿಸಿದರು. ಹೀಗೆ ಪ್ರಕಟಿಸಿದ ಶೋಧನೆಗಳಲ್ಲಿ ಕ್ರಿ. ಶ. ೨ನೆಯ ಶತಮಾನಕ್ಕೆ ಸೇರಿದ ವಲ್ಕ ಲೇಖಗಳಲ್ಲಿ ೩ನೆಯ ಭಾಗದೊಳಗಿನ ೪೧೩ನೆಯ ವಲ್ಕ ಲೇಖವು ('The Oxyrhynchus papyri : part III') ಒಂದು ಚಿಕ್ಕ ಗ್ರೀಕ್ ಪ್ರಹಸನವನ್ನೊಳಗೊಂಡಿದೆ. ಇದರಲ್ಲಿನ ಕೆಲವು ಮಾತುಗಳು ಗ್ರೀಕೇತರ ಭಾಷೆಯಲ್ಲಿವೆ. ಆ ಭಾಷೆ ಕನ್ನಡವೇ ಅಲ್ಲವೇ ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಅದು ಮೂಲದ್ರಾವಿಡ, ಕನ್ನಡ, ತಮಿಳು ಅಥವಾ ತುಳು ಆಗಿರಬಹುದೆಂಬ ಅಭಿಪ್ರಾಯಗಳಿವೆ. ಆ ಪ್ರಹಸನದ ಗ್ರೀಕೇತರ ಭಾಷೆ ಕನ್ನಡವೆಂದು ಡಾ. ಹುಲ್ಷ್[124] ಅಭಿಪ್ರಾಯಪಟ್ಟಂದಿನಿಂದ ಪ್ರಹಸನದ ಪಾಠ ಅನೇಕ ವಿದ್ವಾಂಸರ ಕುತೂಹಲವನ್ನು ಸೆಳೆದಿದೆ. ಹುಲ್ಷರ ಮತವನ್ನು ಡಾ. ಶಾಮಶಾಸ್ತ್ರಿಯವರೂ ಆರ್. ನರಸಿಂಹಾಚಾರ್ಯರೂ ಅನುಮೋದಿಸಿದ್ದಾರೆ.

ಈ ಪ್ರಹಸನದ ಗ್ರೀಕೇತರ ಶಬ್ದಗಳು ಕನ್ನಡವಾಗಿರಬಹುದೆಂದು ಹೇಗೆ ತೋರುತ್ತವೋ ಹಾಗೆಯೇ ಅವು ಆ ಕಾಲದ ತಮಿಳು ಭಾಷೆಯವೂ ಆಗಿರಬಹುದೆಂದು ತೋರುವುದರಿಂದ ಇವೆರಡು ಭಾಷೆಗಳಲ್ಲಿ ಇದೊಂದೇ ಭಾಷೆಯದೆಂದು ಅಖಂಡನೀಯವಾಗಿ ತೀರ್ಮಾನವಾಗುವವರೆಗೆ ಅವನ್ನು ಕನ್ನಡವೇ ಎಂದು ಹೇಳತೀರದು—ಎಂಬುದು ಎಸ್. ಶ್ರೀಕಂಠಯ್ಯನವರ ಅಭಿಪ್ರಾಯಸಾರ.[125] ಇಲ್ಲಿಯ ಗ್ರೀಕೇತರ ಮಾತುಗಳಿಗೆ ತಮಿಳು ಪಾಠಾಂತರಗಳನ್ನು ಅವರು ಕೊಟ್ಟಿದ್ದಾರೆ.

ಮೇಲಿನ ಎರಡು ಅಭಿಪ್ರಾಯಗಳನ್ನೂ ಗಮನಿಸಿದ ಗೋವಿಂದಪೈ ಮೂಲವನ್ನು ಪರಿಶೀಲಿಸಿ, ಪ್ರಹಸನದ ಭಾಷೆ ಕನ್ನಡವೆಂದು ತೋರಿಸಲು ಯತ್ನಿಸಿದ್ದಾರೆ. ಸಮಗ್ರವೂ ಸುಸಂಬದ್ಧವೂ ಅಲ್ಲದ ಈ ಪ್ರಹಸನದಲ್ಲಿ ದೊರಕಬಹುದಾದ ಆಧಾರಗಳಿಂದ ಕಥಾಭೂಮಿ ಭಾರತವೆಂದೂ ಅದರಲ್ಲಿ ಪಶ್ಚಿಮ ಕರಾವಳಿಯೆಂದೂ ಪಶ್ಚಿಮ ಕರಾವಳಿಯಲ್ಲಿ ಆಗ ಕನ್ನಡದೊಂದಿಗೆ ಕೊಂಕಣಿ, ತುಳು, ತಮಿಳು ಭಾಷೆಗಳಿದ್ದರೂ ಕನ್ನಡ ವ್ಯಾವಹಾರಿಕ ಭಾಷೆಯಾಗಿ ವ್ಯಾಪಿಸಿದ್ದಿರಬೇಕು ಎಂದೂ ಪೈ ಅವರ ಅಭಿಪ್ರಾಯ. ಪ್ರಹಸನದ ಗ್ರೀಕೇತರ ಪದಗಳನ್ನು ಕನ್ನಡವೆಂದು ತೋರಿಸಲು ಯತ್ನಿಸಿರುವ ಅವರು ಅಲೂಪ ವಂಶ ಆಳಿದ ಪ್ರದೇಶವಾದ ದಕ್ಷಿಣ ಕನ್ನಡ ಜಿಲ್ಲೆಯ ಉದ್ಯಾವರ ಕಥೆ ನಡೆದ ಸ್ಥಳವಾಗಿರಬೇಕೆಂದೂ ಪ್ರಹಸನದ ಮಲ್ಪಿನಾಯಕ ಎಂಬವನು ಅಲೂಪನಾಯಕನೆಂದೂ ಗುರುತಿಸುತ್ತಾರೆ.

ಈ ಪ್ರಹಸನದ ರಚನೆಯ ಕಾಲ ಸುಮಾರು ಕ್ರಿ.ಶ. ೧೫೦ ಎಂದಿಟ್ಟುಕೊಂಡು ಸಂರಕ್ಷಿಸು, ಅರ್ಥ, ನಾಯಕ ಮುಂತಾದ ಸಂಸ್ಕೃತ ಶಬ್ದಗಳನ್ನು ಗಮನಿಸಿ ೨ನೆಯ ಶತಮಾನಕ್ಕೆ ಹಿಂದಿನಿಂದಲೇ ಕನ್ನಡ ಭಾಷೆಯಲ್ಲಿ ಸಂಸ್ಕೃತ ಶಬ್ದಗಳು ಬಂದು ನೆಲಸಿರಬೇಕು ಎಂದು ಅವರು ಊಹಿಸಿದ್ದಾರೆ.

ಪ್ರಹಸನದ ಗ್ರೀಕೇತರ ಭಾಷೆ ಕನ್ನಡವೆಂಬುದರಲ್ಲಿಯೂ ಅವಕ್ಕೆ ಕೊಟ್ಟಿರುವ

ಕನ್ನಡ ಪಾಠಗಳ ಬಗ್ಗೆಯೂ ಎಲ್ಲರಿಗೂ ಒಮ್ಮತವಾದ ಅಭಿಪ್ರಾಯವಿಲ್ಲ ಎಂಬುದಕ್ಕೆ ಡಾ. ಎ. ಎನ್. ನರಸಿಂಹಯ್ಯನವರ ಈ ಒಂದು ಸೂಚನೆಯನ್ನು ಉದ್ಧರಿಸಿದರೆ ಸಾಕು :

"The language of the passages under reference has not been accepted as Kanarese, inspite of Dr. R. Shamasastri's attempts. Dr. Shamasastri has not convinced us that the words are old Kanarese."[126]

ಈ ಪ್ರಹಸನದಲ್ಲಿ ಹೇಳಲಾದ ಒಂದೆರಡು ಮಾತುಗಳು ಆ ಪ್ರದೇಶದ ಚಾರಿತ್ರಿಕ ಸತ್ಯದೊಂದಿಗೆ ಸರಿಹೋಗುತ್ತವೆ—ಎಂದು ಬಿ. ಎ. ಸಾಲೆತೊರೆಯವರು ಅಭಿಪ್ರಾಯ ಪಟ್ಟರೆ[127], ಅದರ ಗ್ರೀಕೇತರ ಭಾಷೆಯ ಸರಿಯಾದ ವ್ಯಾಖ್ಯಾನ ಇನ್ನೂ ಆಗಬೇಕಾಗಿದೆ ಎನ್ನುವ ಡಾ. ಎಲ್. ಡಿ. ಬಾರ್ನೆಟ್ ಆ ಭಾಷೆ ಕನ್ನಡವೆಂಬುದನ್ನು ಸಂದೇಹಿಸುತ್ತಾರೆ.[128] ಅಲ್ಲದೆ,

"It is very doubtlul whether these passages are Kanarese (Kannada) at all. The attemps at interpretation vary hugely, and are most unconvincing to all but their authors..."

ಎಂದಿದ್ದಾರೆ.

ಮೇಲಿನ ಪಾಠಕ್ಕೆ ಸಂಬಂಧಿಸಿದಂತೆ ಈ ಮಾತೇ ಕೊನೆಯದೆನ್ನಬಹುದು – ಎನ್ನುತ್ತಾರೆ ತೀ. ನಂ. ಶ್ರೀಕಂಠಯ್ಯನವರು. ಮುಂದುವರಿದು, ಈ ಪ್ರಹಸನದಲ್ಲಿ ಕಾಣುವ ಭಾಷೆ ನಿಜವಾಗಿಯೂ ಅನ್ಯಭಾಷೆಯಾಗಿದ್ದು, ಈ ಅನ್ಯಭಾಷೆ ಭಾರತೀಯ ಭಾಷೆಯೇ ಆಗಿದ್ದರೆ ಅದು ಪ್ರಾಚೀನ ಕನ್ನಡವಾಗಿರುವುದಕ್ಕಿಂತ ಪ್ರಾಚೀನ ತುಳುವಾಗಿರುವ ಸಂಭವವೇ ಹೆಚ್ಚು ಎಂಬ ಸಾಹಸದ ಅಭಿಪ್ರಾಯ ಸಾಧ್ಯವಿದೆ—ಎಂಬ ಸೂಚನೆಯನ್ನು ಅವರು ಮುಂದಿಡುತ್ತಾರೆ. ಹೀಗೆ ಸಂದಿಗ್ಧವಾಗಿರುವ ಆ ಮಾತುಗಳನ್ನು ಇಲ್ಲಿ ಉದ್ಧರಿಸುವ ಅಗತ್ಯವಿಲ್ಲವಾದ್ದರಿಂದ ಇನ್ನು ಶಾಸನಾಧಾರಗಳ ಕಡೆಗೆ ತಿರುಗಬಹುದು.

ಇದುವರೆಗೆ ಪ್ರಕಟವಾಗಿರುವ ಪಂಪಪೂರ್ವ ಕಾಲದ ಶಾಸನಗಳು ಸುಮಾರು ಸಾವಿರಕ್ಕೂ ಹೆಚ್ಚು. ಕರ್ಣಾಟಕದಲ್ಲಿ ಸಿಕ್ಕಿರುವ ಮೊದಲ ಬರಹಗಳು ಬ್ರಾಹ್ಮೀ ಲಿಪಿಯಲ್ಲಿರುವ ಕ್ರಿ.ಪೂ. ೩ನೆಯ ಶತಮಾನದ ಅಶೋಕನ ಪ್ರಾಕೃತ ಶಾಸನಗಳು. ಈ ಶಾಸನಗಳಲ್ಲಿ ಒಂದಾದ ಬ್ರಹ್ಮಗಿರಿಯ ಶಾಸನದಲ್ಲಿ ಕಾಣಿಸಿಕೊಳ್ಳುವ 'ಇಸಿಲ' ಎಂಬ ಪದವನ್ನು 'ತೇದಿಯುಳ್ಳ ಪ್ರಾಚೀನತಮ ಕನ್ನಡಪದ' ಎಂದು ಡಿ. ಎಲ್. ನರಸಿಂಹಾಚಾರ್ ಅವರು ಭಾವಿಸಿದ್ದಾರೆ.[129] ಅವರ ಈ ನಿರ್ಧಾರದ ಹಿಂದಿನ ವಿಚಾರಸರಣಿ ಪ್ರಾಯಃ ಹೀಗೆ :

'ಇಸಿಲ'ದ ಮೂಲ ಸಂಸ್ಕೃತದ 'ಋಷಿ' ಶಬ್ದವಿರಬಹುದು ಎಂದು ಕೆಲವರ ಅಭಿಪ್ರಾಯ. ಅದು ಸಾಧ್ಯ. ಏಕೆಂದರೆ ಪಾಳಿಭಾಷೆಯಲ್ಲಿ—ಇಸಿ < ಋಷಿ ; ಇಸಿತ್ತ < ಋಷಿತ್ವ ; ಇಸಿಪಬ್ಬಜ್ಜ < ಋಷಿಪ್ರವ್ರಜ್ಯ ಹೀಗಾಗುತ್ತದೆ. ಇದರಂತೆಯೇ ಆಗಬೇಕಾದರೆ 'ಇಸಿಲ'ದ ಮೂಲ 'ಋಷಿಲ' ಆಗಬೇಕು. ಆದರೆ ಋಷಿಲ ಎಂದರೇನೆಂದು ತಿಳಿಯು

ವುದಿಲ್ಲ. 'ಇಸಿಲ' ಎಂಬ ಊರು ಇದ್ದದ್ದು ಕರ್ನಾಟಕದಲ್ಲಿ. ಅದು ಬಹುತೇಕ ಆರ್ಯೇತರ ಪದ. ಆದ್ದರಿಂದ 'ಇಸಿಲ'ದ ಮೂಲ 'ಋಷಿಲ'ವಲ್ಲ.

ಅರ್ಧಮಾಗಧಿಯ ಇಸಿಣ ಮತ್ತು ಇಸಣಿಕಾ ಎಂಬ ರೂಪಗಳಿಗೂ ಋಷಿಗೂ ಸಂಬಂಧವಿಲ್ಲ. ಇಸಿಣ ಎಂದರೆ ಅಲ್ಲಿ ಆದೊಂದು ಅನಾರ್ಯ ದೇಶದ ಹೆಸರು. ಲ<ಣ ಎಂಬುದಕ್ಕೆ ವಿವರಣೆ ಕಷ್ಟವಾಗುತ್ತದೆ. ಹೀಗಾಗಿ 'ಇಸಿಲ'ದ ಮೂಲ 'ಇಸಿಣ' ಆಗ ಲಾರದು. ಇನ್ನು 'ಇಸಿಲ' ಆರ್ಯೇತರ ಪದವಾದರೆ ಅದು ಮುಂಡವರ್ಗದ್ದಿರಬೇಕು ಅಥವಾ ದ್ರಾವಿಡ ಗುಂಪಿನದಿರಬೇಕು. ಮುಂಡದಲ್ಲಿ ಇಂಥ ಪದ ಕಾಣದಿರುವುದರಿಂದ ದ್ರಾವಿಡ ಪದವಿರಬೇಕು; ದ್ರಾವಿಡವಾದಲ್ಲಿ ಕನ್ನಡ ಪದವಾಗಿರುವ ಸಾಧ್ಯತೆ ಹೆಚ್ಚು.

'ಇಸಿಲ'ದ ಜ್ಞಾತಿಪದ 'ಎಸಿಲ' ಆಗಿರಬೇಕು. ತಮಿಳಿನ ಪದಮಧ್ಯದ—ಯ— ಕನ್ನಡದಲ್ಲಿ—ಸ—ಆಗುತ್ತದೆ. ಸಂಸ್ಕೃತ ಸ್ವರಸ್ಥಿತ್ಯಯ ನಿಯಮದಂತೆ ಕನ್ನಡದಲ್ಲಿ ಪದಾರಂಭದ ಎ— ಮುಂದೆ ಸಂಸ್ಕೃತಸ್ವರ ಬಂದರೆ ಇ— ಆಗುತ್ತದೆ. ಎಂದರೆ ಇಸಿಲದ ಸಂವಾದಿಶಬ್ದ 'ಎಯಿಲ್' ಅಥವಾ 'ಎಯಿಲಂ' ಆಗಿರಬೇಕು. ತಮಿಳಿನಲ್ಲಿ ಕೋಟೆ ಎಂಬ ಅರ್ಥದಲ್ಲಿ 'ಎಯಿಲ್' ಶಬ್ದವಿದೆ. ಆದ್ದರಿಂದ 'ಇಸಿಲ' ಕನ್ನಡ ಶಬ್ದ. ಅದರ ಅರ್ಥ ಕೋಟೆ, ಕೋಟೆಯುಳ್ಳ ಅಥವಾ ಕೋಟೆಯೊಳಗಿರುವ ಊರು. ಬಾಣ ಪ್ರಯೋಗ ಮಾಡು ಎಂಬರ್ಥದ ಧಾತು 'ಎಯ್' ಆಗಿರುವುದರಿಂದ 'ಎಯಿಲ' ಎಂಬುದೇ ಮೊದಲಿದ್ದು, ಅದು ನಂತರ 'ಇಸಿಲ' ಆಗಿರಬಹುದು.

ಈ ವಿಚಾರಗಳಿಗೆ ಒಟ್ಟಿನಲ್ಲಿ ಸಮ್ಮತಿಸುತ್ತ ತೀ. ನಂ. ಶ್ರೀಕಂಠಯ್ಯನವರು ಇದರ ಬಗ್ಗೆ ಆಕ್ಷೇಪಣೆಗೆ ಹೆಚ್ಚು ಅವಕಾಶವಿಲ್ಲವೆಂದೂ 'ಎಸಿಲ್' ಕನ್ನಡದ ಆದಿಪದಗಳಲ್ಲಿ ಒಂದಾಗಿರುವುದು ಬಹುಮಟ್ಟಿಗೆ ಸಾಧ್ಯವೆಂದೂ ಅಭಿಪ್ರಾಯಪಡುತ್ತಾರೆ[130].

ಎಸಿಲ್ ಶಬ್ದ, ಕೊಲ್ಲಾಪುರದ ನಾಣ್ಯಗಳಲ್ಲಿ ಬರುವ 'ವಿಲ್ಲಿವಾಯಕುರ' (ಬಹುಶಃ ಕನ್ನಡ ಅಥವಾ ತೆಲುಗು ಶಬ್ದವಿರಬಹುದು ಎಂದು ವಿ. ಎ. ಸ್ಮಿತ್ ಅಭಿಪ್ರಾಯ), ಟಾಲೆಮಿ ಹೇಳುವ ಪೌನ್ನಾಟ ಈ ಶಬ್ದಗಳನ್ನು ಗಮನಿಸಿ, "ಈ ಉದಾಹರಣೆಗಳು ಕನ್ನಡವು ಕ್ರಿ.ಪೂ. ೨೫೦ರಿಂದಲೇ ಅಸ್ತಿತ್ವದಲ್ಲಿದ್ದು ಮುಂದೆ ಶಾತವಾಹನರ ಕಾಲದಲ್ಲೂ ಇದ್ದಿತೆಂಬುದನ್ನು ಸ್ಥಿರಪಡಿಸುತ್ತವೆ" ಎಂದಿದ್ದಾರೆ ಡಿ. ಎಲ್. ನರಸಿಂಹಾಚಾರ್. "ಕನ್ನಡ ನುಡಿ ಕ್ರಿ.ಶ.ದ ಆದಿಭಾಗದಿಂದಲೂ ಇದ್ದಿತೆಂದು ಹೇಳಬಹುದಾಗಿದೆ. ಕ್ರಿ.ಶ. ೬-೭ನೆಯ ಶತಮಾನಗಳಲ್ಲಿ ಇದಕ್ಕೆ ಲಿಪಿಯೊಂದು ಉಂಟಾಗಿ ಅದು ಗ್ರಂಥಸ್ಥವಾಗು ವುದಕ್ಕೆ ಮೊದಲಿಟ್ಟಿದೆ"—ಎಂದು ಅವರೇ ಹೇಳಿರುವುದು ಪ್ರಾಯಃ ಈ ಆಧಾರಗಳನ್ನು ಅವಲಂಬಿಸಿಯೇ ಎಂದು ತೋರುತ್ತದೆ. ಶಾತವಾಹನರ ಕಾಲದ ಶಾಸನಗಳ ವ್ಯಕ್ತಿ ಮತ್ತು ಸ್ಥಳನಾಮಗಳ ಭಾಷಿಕ ವಿವೇಚನೆ ಕನ್ನಡದ ಪ್ರಾಚೀನತೆಗೆ ಹೊಸ ಅಂಶಗಳನ್ನು ಸೇರಿಸಬಹುದು—ಎಂಬುದೂ ಅವರದೇ ಅಭಿಪ್ರಾಯ.

ನಮಗೆ ಸಿಕ್ಕಿರುವ ಮೊದಲ ಕನ್ನಡ ಬರೆವಣಿಗೆ ಸುಮಾರು ೪೫೦ರ ಹಲ್ಮಿಡಿ ಶಾಸನ. ಹಲ್ಮಿಡಿಗೂ ಹಿಂದಿನ ಶಾಸನಗಳಿವೆ ಎಂದು ಪೈ ತಮ್ಮ ಬರಹಗಳಲ್ಲಿ ಸೂಚಿಸುತ್ತಾರೆ. ಆದರೆ

ಇದಕ್ಕೆ ಬಹುಜನ ಸನ್ಮತಿಯಿಲ್ಲ. ೨, ೩, ೪ನೆಯ ಶತಮಾನಗಳಲ್ಲಿ ನಿರ್ದಿಷ್ಟ ಶಕವನ್ನು ಹೇಳಿಕೊಂಡ ೩-೪ ಶಾಸನಗಳಿವೆ. ಆದರೆ ಅವುಗಳ ಕಾಲ ಕೃತಕ ಎಂದೇ ಸಾಮಾನ್ಯವಾದ ಗ್ರಹಿಕೆ. ಕ್ರಿ.ಶ. ಸು. ೪೫೦ರವೆಂದು ಸಾಮಾನ್ಯವಾಗಿ ತಿಳಿದಿರುವ ಹಲ್ಮಿಡಿಶಾಸನ ಈಗಿನ ಮಟ್ಟಿಗೆ ಕನ್ನಡ ಭಾಷೆಯ ಅತ್ಯಂತ ಹಳೆಯ ದಾಖಲೆ. ಇಲ್ಲಿಯ ಭಾಷಾ ವೈಲಕ್ಷಣ್ಯ ಗಳನ್ನು ಗಮನಿಸಿ ಅದರ ಸಂಪಾದಕರಾದ ಎಂ. ಎಚ್. ಕೃಷ್ಣ ಅವರು "ಕನ್ನಡ ಭಾಷೆಯೂ ಅದರ ವಾಙ್ಮಯವೂ ಕೆಲವು ಶತಮಾನಗಳ ಹಿಂದೆ ಬದುಕಿ ಬಾಳಿರಬೇಕು" ಎಂದಿದ್ದಾರೆ.[131] ರಂ. ಶ್ರೀ. ಮುಗಳಿಯವರು ಈ ಅಭಿಪ್ರಾಯವನ್ನು ವಿಮರ್ಶಿಸುತ್ತ "ಈ ಶಾಸನದಿಂದ ೧-೨ ಶತಕಗಳ ಹಿಂದಿನಿಂದ ಕನ್ನಡವು ಗ್ರಾಂಥಿಕಭಾಷೆಯಾಗಿ ಬೆಳೆಯ ತೊಡಗಿತ್ತು ಎಂದು ಹೇಳಬಹುದೇ ಹೊರತು ಬಹಳ ಹಿಂದಿನಿಂದ ಮೊದಲಾಗಿ 'ಚೆನ್ನಾಗಿ ಬೆಳೆದು ಬಲಿತ ಭಾಷೆಯಾಗಿತ್ತು' ಎಂದೆನ್ನುವಂತಿಲ್ಲ" ಎಂದು ಹೇಳಿದ್ದಾರೆ.[132] ಆದರೆ ಭಾಷೆಯ ಅಸ್ತಿತ್ವದ ಬಗೆಗೆ ಈ ಹೇಳಿಕೆಯಿಂದ ಅಡ್ಡಿಯಿಲ್ಲ. ಹಲ್ಮಿಡಿ ಶಾಸನದ ಕಾಲಕ್ಕೆ ೨-೩ ಶತಮಾನಗಳ ಹಿಂದೆಯೇ ಆದರಲ್ಲಿ ಬರೆವಣಿಗೆಯೂ ಆರಂಭವಾಗಿರಬೇಕು ಎಂದು ತಿಳಿಯಲು ಮೇಲೆ ಗಮನಿಸಿದ ಸಾಕ್ಷ್ಯಗಳು ಸಾಕಾಗುತ್ತವೆ.

## ಕನ್ನಡ ಭಾಷೆ

ಈವರೆಗಿನ ನಿರೂಪಣೆಯಿಂದ ಕ್ರಿಸ್ತಶಕದ ಆದಿಯಿಂದಲೂ ಕನ್ನಡನಾಡು ನುಡಿಗಳು ಅಸ್ತಿತ್ವದಲ್ಲಿವೆಯೆಂಬುದನ್ನು ಗಮನಿಸಿದೆವು. ಕನ್ನಡಭಾಷೆಯ ಪ್ರಥಮ ಸ್ವರೂಪದ ಸ್ಪಷ್ಟ ಪರಿಚಯ ನಮಗಾಗುವುದು ಕ್ರಿ.ಶ. ಸು. ೪೫೦ರ ಹಲ್ಮಿಡಿ ಶಾಸನದಲ್ಲಿ. ನಂತರ ಕ್ರಿ.ಶ. ಸು. ೮೫೦ರ ಕವಿರಾಜಮಾರ್ಗವೇ ಕನ್ನಡದ ಮೊದಲನೆಯ ಗ್ರಂಥ. ಇದೊಂದು ಕಾವ್ಯ ಶಾಸ್ತ್ರ ಕೃತಿಯಾದುದರಿಂದ ಅಂತಹ ಕೃತಿನಿರ್ಮಾಣಕ್ಕೆ ಕಾರಣವಾಗುವಂತೆ ಹಿಂದಿ ನಿಂದಲೇ ಕನ್ನಡ ಭಾಷಾಸಾಹಿತ್ಯಗಳು ಬೆಳೆದುಬಂದಿರಬಹುದೆಂದು ಊಹಿಸಲು ಅದು ಅವಕಾಶಮಾಡಿಕೊಟ್ಟಿದೆ. ಹಲ್ಮಿಡಿ ಶಾಸನದಿಂದ ಮುಂದಿನ ಕಾಲದ ಶಾಸನಸಾಹಿತ್ಯ ವನ್ನೂ ಕವಿರಾಜಮಾರ್ಗವು ಒದಗಿಸುವ ತತ್ಪೂರ್ವಕಾಲದ ಭಾಷಾಸಾಹಿತ್ಯ ಸಂಬಂಧದ ಕೆಲವು ಸಾಕ್ಷ್ಯಗಳನ್ನೂ ಪರಿಶೀಲಿಸಿ, ವಿದ್ವಾಂಸರು ಕನ್ನಡ ಭಾಷೆಯ ಬೆಳೆವಣಿಗೆಯನ್ನು ಸಾಧ್ಯವಾದಮಟ್ಟಿಗೆ ಗುರುತಿಸಿದ್ದಾರೆ. ಆ ಬೆಳೆವಣಿಗೆಯ ಹಂತಗಳು ಕ್ರಮವಾಗಿ ಈ ನಾಲ್ಕು :

ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ. ಕ್ರಿ.ಶ. ೮೫೦ರವರೆಗೆ ಪೂರ್ವದ ಹಳಗನ್ನಡ ಕಾಲ. ಶಾಸನಗಳ ಮೂಲಕವೇ ಈ ಯುಗದ ಭಾಷಾಸ್ವರೂಪ ತಿಳಿದುಬರಬೇಕಾಗಿದೆ. ಕ್ರಿ.ಶ. ೧೨ನೆಯ ಶತಮಾನದವರೆಗೆ ಹಳಗನ್ನಡ ಕಾಲ. ಜೈನ ಕವಿಗಳಿಂದ ವಿಶೇಷವಾಗಿ ರಚಿಸಲ್ಪಟ್ಟ ಚಂಪೂಕಾವ್ಯಗಳು ಈ ಯುಗದ ಭಾಷಾಸ್ವರೂಪಕ್ಕೆ ಮಾದರಿಗಳು. ಮುಂದೆ ಕ್ರಿ.ಶ. ೧೭ನೆಯ ಶತಮಾನದವರೆಗೆ

ನಡುಗನ್ನಡ ಕಾಲ. ವೀರಶೈವ, ಜೈನ ಹಾಗೂ ಬ್ರಾಹ್ಮಣ ಕವಿಗಳ ಹಲವು ದೇಶೀಯ ಛಂದಸ್ಸಿನ ರಚನೆಗಳು ಈ ಯುಗದ ಭಾಷೆಯನ್ನು ಪ್ರತಿನಿಧಿಸುತ್ತವೆ. ಅಲ್ಲಿಂದೀಚೆಗೆ ಹೊಸಗನ್ನಡ. ಈ ವಿಂಗಡಣೆ ಸಾಂಪ್ರದಾಯಿಕ ವಿವೇಚನೆಯ ಸ್ಥೂಲಮಾನದಿಂದ ಸಾಮಾನ್ಯವಾಗಿ ಸ್ವೀಕೃತವಾಗಿದೆ.

ಇದು ಲಿಖಿತಭಾಷೆಯ ಪ್ರಮುಖ ಹಂತಗಳ ಮಾತಾಯಿತು. ಆದರೆ ನಮ್ಮ ಭಾಷೆಯ ಆಡುಮಾತಿನ ಸ್ವರೂಪವು ಹೇಗೆ ಬದಲಾವಣೆಯಾಗುತ್ತಾ ಬಂದಿದೆಯೆಂಬು ದನ್ನು ವಿಶ್ಲೇಷಣೆ ಮಾಡಲು ನಮಗೆ ತಕ್ಕ ಆಧಾರಗಳಿಲ್ಲ. ೨ನೆಯ ನಾಗವರ್ಮ (ಸು. ೧೧೪೫) ಕೇಶಿರಾಜ (ಸು. ೧೨೬೦) ಭಟ್ಟಾಕಳಂಕ (ಕ್ರಿ.ಶ. ೧೬೦೪)—ಈ ಲಾಕ್ಷಣಿಕರು ಬರೆದಿರುವ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ಲಿಖಿತಭಾಷೆಯ ಸ್ವರೂಪ ವಿವೇಚನೆ ನಡೆಯುವಾಗ ಪ್ರಕಾರಾಂತವಾಗಿ ಆಡುಭಾಷೆಯ ಗತಿಸ್ಥಿತಿಗಳ ಕೆಲವು ಅಂಶ ಗಳಾದರೂ ಸುಳುಹುದೋರುತ್ತವೆ. ಈಚೆಗೆ ಈ ಎರಡೂ ದಿಕ್ಕುಗಳಲ್ಲಿ ಆಧುನಿಕ ಭಾಷಾ ವಿದ್ವಾಂಸರು ವರ್ಣನಾತ್ಮಕ ಭಾಷಾವಿಜ್ಞಾನದ ತತ್ತ್ವಗಳನ್ನು ಅನ್ವಯಿಸಿ ಕೆಲಸ ಮಾಡು ತ್ತಿದ್ದಾರೆ. ಈಗ ಇಂದಿನ ಕನ್ನಡ ಭಾಷೆಯ ಸ್ವರೂಪವನ್ನವಲೋಕಿಸುತ್ತ ಅಲ್ಲಲ್ಲಿ ಐತಿಹಾಸಿಕ ಸ್ಥಿತಿಯನ್ನೂ ಸಂಕ್ಷೇಪವಾಗಿ ಸೂಚಿಸಬಹುದು.

ವರ್ಣಮಾಲೆ: ಕನ್ನಡ ವರ್ಣಮಾಲೆಯಲ್ಲಿ ೪೭ ಅಕ್ಷರಗಳಿವೆಯೆಂದು 'ಶಬ್ದಮಣಿ ದರ್ಪಣ'ವೆಂಬ ತನ್ನ ವ್ಯಾಕರಣದಲ್ಲಿ ಕೇಶಿರಾಜನು ಹೇಳಿದ್ದಾನೆ. ಅವನು ಸಂಸ್ಕೃತ ವರ್ಣ ಮಾಲೆಯ ೫೨ ಅಕ್ಷರಗಳೊಳಗೆ ಕನ್ನಡದವಲ್ಲದ ೧೦ ಅಕ್ಷರಗಳನ್ನು ಕಳೆದು, ದೇಶೀಯ ವಾದ ೫ ಅಕ್ಷರಗಳನ್ನು ಸೇರಿಸಿ ಕನ್ನಡಕ್ಕೆ ೪೭ ಅಕ್ಷರಗಳನ್ನು ನಿರೂಪಿಸಿದ್ದಾನೆ. ಋ, ೠ, ಌ, ೡ ಎಂಬ ನಾಲ್ಕು ಸ್ವರಗಳು, ಶ, ಷ, ಕ್ಷಳ ಎಂಬ ಮೂರು ವ್ಯಂಜನಗಳು, ಃ, ×ಕ, ≍ಪ ಎಂಬ ಮೂರು ಯೋಗವಾಹಗಳು—ಹೀಗೆ ೧೦ ಅಕ್ಷರಗಳು ಕನ್ನಡ ದಲ್ಲಿಲ್ಲ. ಸಂಸ್ಕೃತದಲ್ಲಿಲ್ಲದ ಎ, ಒ ಎಂಬೆರಡು ಸ್ವರಗಳು, ಱ, ೞ, ಕುಳ ಎಂಬ ಮೂರು ವ್ಯಂಜನಗಳು—ಹೀಗೆ ೫ ಅಕ್ಷರಗಳು ಕನ್ನಡಕ್ಕೆ ಸೇರಬೇಕು. ಇದು ಕೇಶಿರಾಜನ ಲೆಕ್ಕ. ಈ ಚರ್ಚೆಯನ್ನು ಲಕ್ಷಿಸಿಯೂ ಕನ್ನಡದಲ್ಲಿ ಎಂದಿನಿಂದ ಬಳಸುತ್ತಿರುವ ಸಂಸ್ಕೃತ ಪದಗಳ ಅಗತ್ಯಕ್ಕಾಗಿ ವರ್ಣಮಾಲೆಯನ್ನು ಹೀಗೆ ವಿಸ್ತರಿಸಬಹುದು:

ಸ್ವರಗಳು: ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ;

ವರ್ಗೀಯ ವ್ಯಂಜನಗಳು: ಕವರ್ಗ: ಕ ಖ ಗ ಘ ಙ; ಚವರ್ಗ: ಚ ಛ ಜ ಝ ಞ: ಟವರ್ಗ: ಟ ಠ ಡ ಢ ಣ; ತವರ್ಗ: ತ ಥ ದ ಧ ನ; ಪವರ್ಗ: ಪ ಫ ಬ ಭ ಮ; ಅವರ್ಗೀಯ ವ್ಯಂಜನಗಳು: ಯ ರ ಲ ವ ಶ ಷ ಸ ಹ ಳ; ಯೋಗವಾಹಗಳು: ಅನುಸ್ವಾರ: ಂ ವಿಸರ್ಗ: ಃ

ಇಂಗ್ಲಿಷ್ ಮತ್ತು ಇರಾನೀ ಪದಗಳ ಬಳಕೆಯಿಂದಾಗಿ ಫ಼ (f) ಮತ್ತು ಜ಼ (z) ಧ್ವನಿಗಳನ್ನೂ ಕನ್ನಡ ವರ್ಣಮಾಲೆಗೆ ಇಂದು ಸೇರಿಸಿಕೊಳ್ಳಬೇಕಾಗಿದೆ. ಱ, ೞಗಳು ಹಳಗನ್ನಡದಲ್ಲಿದ್ದು ಈಗ ಲುಪ್ತವಾಗಿವೆಯೆಂಬುದನ್ನು ಲಕ್ಷಿಸಬೇಕು.

ನಾಮಪದ : ನಾಮಪದಗಳಿಗೆ ಲಿಂಗ, ವಚನ ಮತ್ತು ವಿಭಕ್ತಿಸೂಚಕ ಪ್ರತ್ಯಯಗಳು ಸೇರುತ್ತವೆ. ಕನ್ನಡದಲ್ಲಿ ನಾಮಪದದ ಲಿಂಗವು ಅದರ ಅರ್ಥದ ಮೇಲೆ ನಿರ್ಣಯವಾಗುತ್ತದೆ. ಪ್ರಥಮ ಪುರುಷ ನಾಮಪದಗಳಿಗೆ ಪರವಾಗಿ ಮೂರು ವಿಧದ ಲಿಂಗಭೇದವಿದೆ : ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ. ಸಾಮಾನ್ಯವಾಗಿ ಬುದ್ಧಿಶಕ್ತಿಯುಳ್ಳ ವಸ್ತುಗಳನ್ನು ತಿಳಿಸುವ ಶಬ್ದಗಳು ಮಹತ್‌ಶಬ್ದಗಳು. ಇವುಗಳಿಗೆ ಏಕವಚನದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಭೇದವುಂಟು. ಬುದ್ಧಿಶಕ್ತಿಯಿಲ್ಲದ ವಸ್ತುಗಳನ್ನು ತಿಳಿಸುವ ಶಬ್ದಗಳು ಅಮಹತ್ ಶಬ್ದಗಳು. ಅವುಗಳೆಲ್ಲವೂ ನಪುಂಸಕಲಿಂಗಕ್ಕೆ ಸೇರುತ್ತವೆ. ಮಹತ್ ಶಬ್ದಗಳಿಗೆ ಏಕವಚನದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಭೇದವನ್ನು ಸೂಚಿಸಲು ಬೇರೆ ಬೇರೆ ಪ್ರತ್ಯಯಗಳು ಸೇರುತ್ತವೆ. ಬಹುವಚನದಲ್ಲಿ ಪುಲ್ಲಿಂಗ, ಸ್ತ್ರೀಲಿಂಗಗಳಿಗೆ ಒಂದೇ ಪ್ರತ್ಯಯವಿದೆ. ಏಕವಚನದಲ್ಲಿ ಅನ್ ಎಂಬುದು ಪುಲ್ಲಿಂಗವಾಚಿ ಮತ್ತು ಅಳ್ ಎಂಬುದು ಸ್ತ್ರೀಲಿಂಗವಾಚಿ ಪ್ರತ್ಯಯ. ಬಹುವಚನದಲ್ಲಿ ಅರ್, ಇರ್, ದಿರ್ ಎಂಬುವು ಪುಲ್ಲಿಂಗ ಸ್ತ್ರೀಲಿಂಗಗಳೆರಡಕ್ಕೂ ಸೇರುವ ಪ್ರತ್ಯಯಗಳು. ನಪುಂಸಕಲಿಂಗದ ಶಬ್ದಗಳು ಏಕವಚನದಲ್ಲಿ ಪ್ರಕೃತಿರೂಪದಲ್ಲಿ ಇರುತ್ತವೆ. ಬಹುವಚನದಲ್ಲಿ ಅವುಗಳಿಗೆ ಗಳ್, ಕಳ್ ಪ್ರತ್ಯಯ ಸೇರುತ್ತದೆ. ಈ ಪ್ರತ್ಯಯಗಳಿಗೆಲ್ಲ ನಡುಗನ್ನಡ ಹೊಸಗನ್ನಡಗಳಲ್ಲಿ ಕೊನೆಗೆ—ಉ ಪ್ರತ್ಯಯ ಬರುತ್ತದೆ. ನಾಮಗಳಿಗೆ ಪರವಾಗಿ ಏಳು ವಿಭಕ್ತಿ ಪ್ರತ್ಯಯಗಳು ಬರುತ್ತವೆ. ಪ್ರಕೃತಿಯೇ ಪ್ರಥಮೆಯ ಅರ್ಥದಲ್ಲಿ ಬಳಸಲ್ಪಡುವುದರಿಂದ ಪ್ರಥಮಾ ವಿಭಕ್ತಿಸೂಚಕ ಪ್ರತ್ಯಯವಿಲ್ಲವೆಂದೂ ತೃತೀಯೆಯಲ್ಲೂ ಪಂಚಮಿಯಲ್ಲೂ ಒಂದೇ ವಿಧದ ಪ್ರತ್ಯಯ ಸೇರುತ್ತದೆಂದೂ ಸಾಮಾನ್ಯವಾಗಿ ಹೇಳಬಹುದು. ಇದು ಜಿಜ್ಞಾಸೆಯ ವಿಷಯವಾಗಿರುವುದುಂಟು. ಕನ್ನಡದ ವಿಭಕ್ತಿ ಪ್ರತ್ಯಯಗಳನ್ನೂ ಅವು ಕಾಲದಿಂದ ಕಾಲಕ್ಕೆ ಪಡೆದ ಬದಲಾವಣೆಯನ್ನೂ ಇಲ್ಲಿ ಕೊಡಲಾಗಿದೆ.

| | ಹಳಗನ್ನಡ | ನಡುಗನ್ನಡ | ಹೊಸಗನ್ನಡ |
|---|---|---|---|
| ಪ್ರಥಮಾ | (ನ್, ಮ್) | (ಉ) | (ಉ) |
| ದ್ವಿತೀಯಾ | ಅಂ, ಅಂ | ಅಂ, ಅನು | ಅನ್ನು, ಅನ್ನ |
| ತೃತೀಯಾ | ಇಂ, ಇಂದಂ, ಇಂದೆ | ಇಂ, ಇಂದಂ, ಇಂದೆ, ಇ, ಇಂದ | ಇಂದ |
| ಚತುರ್ಥೀ | ಕೆ, ಗೆ | ಕೆ, ಗೆ | ಕ್ಕೆ, ಗೆ |
| ಪಂಚಮೀ | (ಅತ್ತಣ್) ಇಂ, ಇಂದಂ, ಇಂದೆ | (ಅತ್ತಣ್) ಇಂ, ಇಂದಂ, ಇಂದೆ, ಇ, ಇಂದ | ಇಂದ |
| ಷಷ್ಠೀ | ಅ, ಆ | ಅ | ಅ |
| ಸಪ್ತಮೀ | ಉಳ್, ಒಳ್ | ಒಳ್, ಒಳು, ಒಳಗೆ, ಅಲು, ಅಲಿ, ಅಲ್ಲಿ | ಒಳಗೆ, ಅಲ್ಲಿ |

ಸರ್ವನಾಮಗಳು : ಕನ್ನಡ ಸರ್ವನಾಮಗಳಲ್ಲಿ ಉತ್ತಮ ಪುರುಷ, ಮಧ್ಯಮ ಪುರುಷ

ಮತ್ತು ಪ್ರಥಮ ಪುರುಷ ಎಂಬ ಮೂರು ಪ್ರಮುಖ ಭೇದಗಳಿವೆ. ಇವುಗಳನ್ನು ಸೂಚಿಸುವ ಪ್ರತ್ಯಯಗಳಲ್ಲಿ ಕಾಲದಿಂದ ಕಾಲಕ್ಕೆ ಅಲ್ಪಸ್ವಲ್ಪ ಬದಲಾವಣೆಗಳಾಗಿವೆ; ಮುಖ್ಯವಾದವನ್ನು ಇಲ್ಲಿ ಗಮನಿಸಿದೆ :

| | ಹಳಗನ್ನಡ | ನಡುಗನ್ನಡ | ಹೊಸಗನ್ನಡ |
|---|---|---|---|
| ಉ.ಪು. | ಆನ್ ಆಮ್<br>ನಾನ್ ನಾಮ್ | ನಾನು ನಾವುಮ್ | ನಾ ನಾನು ನಾವು |
| ಮ.ಪು. | ನೀನ್ ನೀಮ್ | ನೀನೀನು ನೀವುಮ್ | ನೀ ನೀನು ನೀವು |
| ಪ್ರ.ಪು. | ಅವನ್ ಅವಳ್ ಅವರ್ | ಅವನು ಅವಳು ಅವರು | ಅವನು ಅವ ಅವಳು ಅವರು |
| | ಅದು ಅವು | ಅದು ಅವು | ಅದು ಅವು |
| | ಇವನ್ ಇವಳ್ ಇವರ್ | ಇವನು ಇವಳು ಇವರು | ಇವನು ಇವ ಇವಳು ಇವರು |
| | ಇದು ಇವು | ಇದು ಇವು | ಇದು ಇವು |
| | ಉವನ್ ಉವಳ್ ಉವರ್ | — | — |
| | ಉದು ಉವು | | |
| ಆತ್ಮಾರ್ಥಕ : | ತಾನ್ ತಾಮ್ | ತಾತಾನು ತಾವು | ತಾತಾನು ತಾವು |
| ಪ್ರಶ್ನಾರ್ಥಕ : | ಆವನ್ ಆವಳ್ ಆರ್ | ಆವನು ಆರು<br>ಆವಳು | ಯಾವನು ಯಾರು<br>ಯಾವಳು |
| | ಆವುದು, ಆವುವು | ಆವುದು ಆವುವು | ಯಾವುದು ಯಾವುವು |

ದ್ರಾವಿಡವರ್ಗದ ಭಾಷೆಗಳಲ್ಲಿ ಉತ್ತಮ ಪುರುಷದ ಬಹುವಚನವು ಎರಡು ರೂಪಗಳನ್ನು ಒಳಗೊಂಡಿದೆ. ಎದುರಿಗೆ ಇರುವವರನ್ನು ಒಳಗೊಳ್ಳುವಂಥದು ಸಮ್ಮುಖ ಅಥವಾ ಅಭಿವ್ಯಾಪಕ (Inclusive); ಒಳಗೊಳ್ಳದಿರುವಂಥದು ವಿಸಮ್ಮುಖ ಅಥವಾ ವ್ಯಾವರ್ತಕ (Exclusive). ಕನ್ನಡ ಬಿಟ್ಟು ಉಳಿದ ದ್ರಾವಿಡ ಭಾಷೆಗಳಲ್ಲಿ ಈ ಭೇದವು ಈಗಲೂ ಉಂಟು. ಇದನ್ನು ಕಾಲ್ಡವೆಲ್ಲರೂ ಗುರುತಿಸಿದ್ದರು. ಆರ್. ನರಸಿಂಹಾಚಾರ್ಯರು ಈ ಭೇದವು ಹಳಗನ್ನಡದಲ್ಲಿ ಇತ್ತೆಂದು ಹೇಳಿದ್ದಾರೆ. ಆದರೆ ಹೊಸಗನ್ನಡ ಈ ವ್ಯತ್ಯಾಸವನ್ನೆಲ್ಲ ಕಳೆದುಕೊಂಡಿದೆ.

ವಿಶೇಷಣಗಳು: ವಿಶೇಷಣಗಳಲ್ಲಿ ಗುಣವಾಚಕ, ಸಂಖ್ಯಾವಾಚಕ, ಪರಿಮಾಣವಾಚಕ ಹೀಗೆ ಮೂರು ಪ್ರಕಾರಗಳು. ವಿಶೇಷಣಗಳು ನಾಮದ ಪೂರ್ವದಲ್ಲಿ ಬಂದಾಗ ನಾಮದ ಲಿಂಗ ವಚನ ವಿಭಕ್ತಿಗಳನ್ನು ತೆಗೆದುಕೊಳ್ಳುವುದಿಲ್ಲ. ಬಿಳಿ, ಕರಿ, ಒಂದು, ಎರಡು, ಹೆಚ್ಚು, ಕಡಿಮೆ ಮೊದಲಾದುವು ಅವಕ್ಕೆ ಲಕ್ಷ್ಯಗಳು. ವಿಶೇಷಣಗಳು ವಿಶೇಷ್ಯದ ಅನಂತರ ಬಂದಾಗ ಪುರುಷ, ಲಿಂಗವಾಚಿ ಪ್ರತ್ಯಯ ತೆಗೆದುಕೊಳ್ಳುತ್ತವೆ.

ಒಂದರಿಂದ ಐದರ ವರೆಗಿನ ಸಂಖ್ಯಾವಾಚಕ ಸರ್ವನಾಮಗಳಿಗೆ ಕೆಲವು ಸನ್ನಿವೇಶಗಳಲ್ಲಿ

ಲಿಂಗ ವಚನ ಸೂಚಿ ಪ್ರತ್ಯಯಗಳು ಸೇರುತ್ತವೆ. ಹ.ಗ: ಒರ್ವನ್, ಒರ್ವಳ್; ಹೊ.ಗ: ಒಬ್ಬನು, ಒಬ್ಬಳು, ಐವರು ಇತ್ಯಾದಿ.

ಕ್ರಿಯಾಪದ : ಕನ್ನಡದಲ್ಲಿ ಧಾತುಗಳಿಗೆ ಸೇರುವ ಆಖ್ಯಾತಪ್ರತ್ಯಯಗಳೆಲ್ಲವೂ ಒಂದು ಕಾಲಕ್ಕೆ ಸರ್ವನಾಮಗಳೇ ಆಗಿದ್ದವು. ಈ ಪ್ರತ್ಯಯಗಳು ಧಾತುಗಳ ಜೊತೆಗಷ್ಟೇ ಅಲ್ಲ; ನಾಮ, ಗುಣವಾಚಕ, ಸಂಖ್ಯಾವಾಚಕ, ಸರ್ವನಾಮಗಳಿಗೂ ಸೇರುತ್ತವೆ. ಕನ್ನಡಕ್ರಿಯಾ ಪದಗಳಿಗೆ ಭೂತ, ಭವಿಷ್ಯತ್ತು ಮತ್ತು ವರ್ತಮಾನ ಎಂಬ ಮೂರು ಕಾಲಭೇದಗಳಿವೆ. ಆದರೆ ಆಧುನಿಕರು ಭೂತಕಾಲ ಮತ್ತು ಭವಿಷ್ಯದ್ವರ್ತಮಾನಕಾಲ ಇವೆರಡೇ ಇವೆ ಎಂದು ಹೇಳುತ್ತಾರೆ. ದ ಎಂಬುದು ಭೂತಕಾಲದ ಪ್ರತ್ಯಯ. ಪ ಅಥವಾ ವ ಭವಿಷ್ಯತ್ಕಾಲದ ಪ್ರತ್ಯಯ. ಹಳಗನ್ನಡ ವರ್ತಮಾನಕಾಲ ಪ್ರತ್ಯಯವಾದ ದಪ್ಪ ಅಥವಾ ದಪ ಎಂಬ ಪ್ರತ್ಯಯದಲ್ಲಿ ಅಪ್ಪ ಅಥವಾ ಅಪ ಎಂಬುವುದು (ಆಗು) ಧಾತುವಿನ ಭವಿಷ್ಯದ್ರೂಪ; ಆದುದರಿಂದ ಇದು ಸಹಜವಾಗಿಯೇ ಭವಿಷ್ಯತ್ಕಾಲವನ್ನು ಸೂಚಿಸುತ್ತದೆ. ಉತ್ತ ಎನ್ನುವ ಕಾಲವಾಚಿಗೆ ಪುರುಷವಾಚಕ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಹೊಸಗನ್ನಡದಲ್ಲಿ ವರ್ತಮಾನಕಾಲವು ಸಿದ್ಧಿಸುತ್ತದೆ. ಧಾತುವಿಗೆ ಅ ಅಥವಾ ಅದೆ ಪ್ರತ್ಯಯವನ್ನೂ ಕ್ರಿಯಾಪದಕ್ಕೆ ಅಲ್ಲ, ಇಲ್ಲ ಎಂಬ ರೂಪಗಳನ್ನು ಸೇರಿಸುವುದರಿಂದಲೂ ನಿಷೇಧ ಕೃದ್ವಾಚಿ ಅಥವಾ ನಿಷೇಧ ಕ್ರಿಯಾಪದ ಸಿದ್ಧಿಸುತ್ತವೆ.

ಕೆಲವು ಧ್ವನಿ ವ್ಯತ್ಯಾಸಗಳು : ಪೂರ್ವದ ಹಳಗನ್ನಡದಲ್ಲಿ ಮೂಲದ್ರಾವಿಡ ವಕಾರ ವಕಾರವಾಗಿಯೇ ಉಳಿದಿದೆ. ಆದರೆ ವೆಟ್ಟ, ವಿತ್ತು, ವೆಳೆ ಎಂಬ ರೂಪಗಳು ಹಳಗನ್ನಡ ದಲ್ಲಿ ಬೆಟ್ಟ, ಬಿತ್ತು, ಬೆಳೆ ಎಂದಾದುವು. ಎಱಿದು, ಕೆಡುಗ ಎಂಬ ಪೂರ್ವದ ಹಳಗನ್ನಡ ರೂಪಗಳು ಹಳಗನ್ನಡದಲ್ಲಿ ಇಱಿದು, ಕಿಡುಗೆ ಎಂದಾಗಿವೆ.

ಹಳಗನ್ನಡದಲ್ಲಿ ಱ, ೞ ಅಕ್ಷರಗಳು ಬಳಕೆಯಲ್ಲಿದ್ದುವು. ಆದರೆ ಱಕಾರವು ಹಳಗನ್ನಡ ಮತ್ತು ನಡುಗನ್ನಡಗಳ ಸಂಧಿಕಾಲದಲ್ಲಿ ಸು. ೧೧ನೆಯ ಶತಮಾನದಲ್ಲಿ ಲೋಪವಾದು ದನ್ನೂ ಕಾಣುತ್ತೇವೆ. ೞಕಾರವು ಸು. ೧೫ನೆಯ ಶತಕದ ವರೆಗೆ ಇದ್ದು ಆಮೇಲೆ ಅದೂ ಹೋಯಿತು. ಹಳಗನ್ನಡದ ಪಕಾರವು ಹಕಾರವಾಗಿ ಮಾರ್ಪಟ್ಟಿತು.

ನಿಷೇಧಾರ್ಥಕ ಪ್ರತ್ಯಯ, ದ್ವಿತೀಯಾ ಮತ್ತು ಷಷ್ಠೀವಿಭಕ್ತಿಗಳು ಮೊದಲಾದೆಡೆಗಳಲ್ಲಿ ಹಳಗನ್ನಡದಲ್ಲಿ ಹ್ರಸ್ವಸ್ವರವಿದ್ದರೆ ಅಲ್ಲಿ ಪೂರ್ವದಹಳಗನ್ನಡದ ದೀರ್ಘ ಸ್ವರಗಳಿರುವುದನ್ನು ಕಾಣುತ್ತೇವೆ. ಸಪ್ತಮೀ ವಿಭಕ್ತಿಯ ಪ್ರತ್ಯಯ ಪೂ.ಹ.ಗ.ದಲ್ಲಿ ಉಳ್ ಎಂದಿದ್ದುದು ಹ.ಗ.ದಲ್ಲಿ ಒಳ್ ಎಂದಾಗಿದೆ.

ಶಬ್ದಭಂಡಾರ : ಕನ್ನಡ ಭಾಷೆಯ ಶಬ್ದಭಂಡಾರದಲ್ಲಿ ಪ್ರಧಾನವಾಗಿ ದೇಶ್ಯ ಮತ್ತು ಅನ್ಯದೇಶ್ಯಗಳೆಂಬ ಎರಡು ಮೂಲದ ಪದಗಳಿವೆ. ಮೂಲದ್ರಾವಿಡ ಭಾಷೆಯಲ್ಲಿದ್ದು ತನ್ಮೂಲಕ ಕನ್ನಡದಲ್ಲಿ ಉಳಿದು ಬಂದಿರುವ ಮತ್ತು ಅನಂತರದ ಕಾಲದಲ್ಲಿ ಕನ್ನಡಿಗ ರಿಂದಲೇ ಸೃಷ್ಟಿಸಲ್ಪಟ್ಟ ಪದಗಳು ದೇಶ್ಯಗಳೆನಿಸಿಕೊಳ್ಳುತ್ತವೆ. ಇತರ ಭಾಷೆಗಳಿಂದ ಬಂದು ಸೇರಿಕೊಂಡಿರುವ ಪದಗಳು ಅನ್ಯದೇಶ್ಯಗಳೆನಿಸಿಕೊಳ್ಳುತ್ತವೆ.

ಕನ್ನಡಕ್ಕೆ ಸೇರಿರುವ ಅನ್ಯದೇಶ್ಯಗಳಲ್ಲಿ ಸಂಸ್ಕೃತ, ಪ್ರಾಕೃತ, ಪೋರ್ಚುಗೀಸ್, ಅರಾಬಿಕ್, ಉರ್ದು, ಹಿಂದೂಸ್ತಾನಿ, ಇಂಗ್ಲಿಷ್—ಇವೇ ಮೊದಲಾದ ಭಾಷೆಗಳ ಪದಗಳು ಮುಖ್ಯವಾಗಿವೆ. ಇವುಗಳಲ್ಲೆಲ್ಲಾ ಸಂಸ್ಕೃತದ್ದೇ ಮೇಲುಗೈ. ಇದಕ್ಕೆ ಹಲವು ಕಾರಣಗಳುಂಟು. ಪ್ರಾಚೀನಕಾಲದಿಂದಲೂ ಸಂಸ್ಕೃತವು ಭಾರತದ ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಧಾರ್ಮಿಕ ಭಾಷೆಯಾಗಿ ಬೆಳೆದು ಬಂದಿತು. ಕನ್ನಡವು ತನ್ನ ಸ್ವತಂತ್ರ ಅಸ್ತಿತ್ವವನ್ನು ಕಂಡುಕೊಂಡ ತರುಣದಲ್ಲಿ ಸಂಸ್ಕೃತದಿಂದ ತುಂಬ ನೆರವನ್ನು ಪಡೆದುಕೊಳ್ಳಬೇಕಾಯಿತು. ಸಂಸ್ಕೃತ ಶಬ್ದಭಂಡಾರದಿಂದ ಬೇಕಾದಷ್ಟು ಪದಗಳನ್ನು ಸ್ವೀಕರಿಸಬೇಕಾಯಿತು. ಈ ಬಗೆಯ ಸ್ವೀಕರಣ ಭಾಷೆಯ ಬೆಳೆವಣಿಗೆಯ ಎಲ್ಲ ಹಂತಗಳಲ್ಲಿಯೂ ನಡೆಯಿತು. ಅತಿಯಾದ ಸ್ವೀಕರಣ ಕೂಡದೆಂಬ ಪ್ರತಿಭಟನೆ ಸಾಹಿತ್ಯ ರಚನೆಯ ಕ್ಷೇತ್ರದಲ್ಲಿ ಕಾಲಕಾಲಕ್ಕೆ ತೋರಿಬಂದರೂ ಅದರ ಪ್ರವಾಹವನ್ನು ತಡೆಗಟ್ಟುವುದು ಮಾತ್ರ ಸಾಧ್ಯವಾಗಲಿಲ್ಲ. ಇಂದಿನ ಯುಗದಲ್ಲಂತೂ ವಿಜ್ಞಾನ, ವೈದ್ಯಶಾಸ್ತ್ರ, ನ್ಯಾಯಶಾಸ್ತ್ರ, ತಾಂತ್ರಿಕ ಕಲೆ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಕನ್ನಡವು ಸಂಸ್ಕೃತದಿಂದ ಹೆಚ್ಚಿನ ಪ್ರಮಾಣದಲ್ಲಿ ಶಬ್ದಗಳನ್ನು ಸ್ವೀಕರಿಸುತ್ತಿದೆ. ಅತಿಯಾದ ಸ್ವೀಕರಣದಿಂದ ದೇಶ್ಯಪದಗಳು ಕೈತಪ್ಪಿಹೋಗುವ ಭಯ ಕೂಡ ಇಲ್ಲದೇ ಇಲ್ಲ. ಹೀಗೆ ಕೂಳ್, ನೇಸರ್, ತಿಂಗಳ್, ಅಲ್ ಮೊದಲಾದ ಅಚ್ಚಗನ್ನಡ ಪದಗಳು ಹೊಸಗನ್ನಡಕ್ಕೆ ಬಾರದೆ ಉಳಿದುವು. ಇವುಗಳಿಗೆ ಪ್ರತಿಯಾಗಿ ಅದೇ ಅರ್ಥದ ಅನ್ನ, ಸೂರ್ಯ, ಚಂದ್ರ, ನಕ್ಷತ್ರ ಮೊದಲಾದ ಸಂಸ್ಕೃತ ಪದಗಳು ಹೆಚ್ಚು ಸ್ವಾಭಾವಿಕವಾಗಿ ಬಳಕೆಯಲ್ಲಿ ಬಂದಿವೆ. ಸಂಸ್ಕೃತ ಶಬ್ದಗಳ ಧ್ವನಿರೂಪದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ದೇಶ್ಯಗಳನ್ನಾಗಿಸಿದೆ. ಮೂಲ ಸಂಸ್ಕೃತ ಪದಗಳಿಗೆ ತತ್ಸಮಗಳೆಂದು ಹೇಳಿದರೆ, ಧ್ವನಿ ವ್ಯತ್ಯಾಸ ಮಾಡಿ ದೇಶ್ಯವಾಗಿಸಿದ ಪದಗಳಿಗೆ ತದ್ಭವಗಳೆಂದು ಹೇಳುವುದು ಈಚಿನ ರೂಢಿ. ಇಂದು ಸಂಸ್ಕೃತ ಪದಗಳ ಮಟ್ಟಿಗೆ ದೇಶ್ಯ ಅನ್ಯದೇಶ್ಯಗಳ ವ್ಯತ್ಯಾಸ ಅಸಾಧ್ಯವೆಂಬ ಮಟ್ಟಿಗೆ ಅವು ಕನ್ನಡದಲ್ಲಿ ಬೆರೆತಿವೆ. ಎಂದೇ ಹೊಸಗನ್ನಡಕ್ಕೆ ಸಂಸ್ಕೃತ ಭಾಷೆಯ ವರ್ಣಗಳೂ ಸೇರಿಕೊಂಡಂತೆ ವಿಸ್ತೃತ ವರ್ಣಮಾಲೆಯನ್ನು ಏರ್ಪಡಿಸಬೇಕಾಗಿ ಬಂದಿದೆ.

ಸಂಸ್ಕೃತ ಶಬ್ದಗಳು ಕನ್ನಡಕ್ಕೆ ತದ್ಭವವಾಗಿ ಬರುವಾಗ ಪ್ರಾಕೃತಗಳ ಮೂಲಕ ಬಂದವು. ಆದುದರಿಂದ ಪ್ರಾಕೃತದ ನೆಪ, ಇಂಗಾಲ, ಅಜ್ಜ, ಠಾಣೆಗಳು ಕನ್ನಡದಲ್ಲಿವೆ. ಅಲ್ಲದೆ ಕನ್ನಡದ ದಾಡೆ, ಸಡಿಲ, ಸೊಸೆ, ಆಣೆ ಇವು ದಾಢಾ, ಸಡಿಲೋ, ಸುಸಾ, ಆಣಾ ಎಂಬ ಪ್ರಾಕೃತ ಶಬ್ದಗಳಿಗೆ ತೀರಾ ಹತ್ತಿರವಾಗಿವೆ.

ಇವಲ್ಲದೆ ಪಾದ್ರಿ ಇಸ್ತ್ರಿ ಪಗಾರ ಮೇಜು ಮೊದಲಾದ ಪೋರ್ಚುಗೀಸ್ ಪದಗಳು, ಅನಾಮತ್ತು ಇಲಾಖೆ ನಾಜೂಕು ಖಜಾನೆ ಮೊದಲಾದ ಅರಾಬಿಕ್ ಭಾಷೆಯ ಪದಗಳು, ಜಮೀನು ದಸ್ತಾವೇಜು ರಸ್ತೆ ಸಿಬ್ಬಂದಿ ಮೊದಲಾದ ಇರಾನೀ ಭಾಷೆಯ ಪದಗಳು, ತಗಾದೆ ಚಾಕರಿ ರುಜು ನಗದು ಮೊದಲಾದ ಹಿಂದುಸ್ಥಾನಿ ಭಾಷೆಯ ಪದಗಳು ಕನ್ನಡದಲ್ಲಿ ಪ್ರವೇಶ ಪಡೆದಿವೆ. ದಿನನಿತ್ಯದ ವ್ಯವಹಾರದಲ್ಲಿ ಆಧುನಿಕ ಬರೆವಣಿಗೆಯ

ಸಂದರ್ಭದಲ್ಲಿ ಇಂಗ್ಲಿಷ್ ಪದಗಳೂ ಧಾರಾಳವಾಗಿ ಬಳಕೆಯಾಗುತ್ತಿವೆ. ವಿಜ್ಞಾನ, ಯಂತ್ರಶಾಸ್ತ್ರ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಬರಹಗಳಲ್ಲಿ ಇಂಗ್ಲಿಷ್ ಪದಗಳು ಅನಿವಾರ್ಯ ಎಂದು ತೋರಿದೆ. ಟಿರೇಸ್, ನೇಟೀವ್, ಕಾಂಟ್ರಾಕ್ಟ್ ಎಂಬ ಸ್ವಾಭಾವಿಕ ಇಂಗ್ಲಿಷ್ ಪದಗಳೊಡನೆ ತಾರಸಿ ನಾಟಿ ಕಂತ್ರಾಟು ಮೊದಲಾದ ಆಂಗ್ಲಭವರೂಪಗಳೂ ದೊರೆಯುತ್ತವೆ. ಅಂತೂ ಭಾಷೆಯ ದೃಷ್ಟಿಯಿಂದ ತನ್ನದೇ ಆದ ರೀತಿಯಲ್ಲಿ ಇಂದಿನ ಕನ್ನಡ ಎಲ್ಲ ಕ್ಷೇತ್ರಗಳಲ್ಲಿಯೂ ವ್ಯವಹಾರ ನಡೆಸಿಕೊಂಡು ಹೋಗಲು ಸಾಮರ್ಥ್ಯ ಪಡೆದಿದೆಯೆಂದು ಹೇಳಬಹುದಾಗಿದೆ.

ಇನ್ನು ಮುಂದೆ, ಈ ಭಾಷೆಯ ಉಪಭಾಷೆಗಳ ಒಂದು ಸಾಮಾನ್ಯ ಪರಿಶೀಲನೆಯನ್ನೂ ಕರ್ಣಾಟಕದ ಜನರ ಮೂಲ ಮತ್ತು ಗುಣಲಕ್ಷಣಗಳನ್ನೂ ತಿಳಿಯಲು ಕೆಲಮಟ್ಟಿಗೆ ಪ್ರಯತ್ನಿಸಬಹುದು.

## ಕನ್ನಡದ ಉಪಭಾಷೆಗಳು

ಭಾಷಾವೈಜ್ಞಾನಿಕ ವಿಶ್ಲೇಷಣೆಯಲ್ಲಿ ಒಂದು ಭಾಷೆಯ ರೂಪರಚನೆಯನ್ನು ತಿಳಿಯಲು ಆಡುನುಡಿಗೆ ಪ್ರಾಧಾನ್ಯ ಕೊಟ್ಟಿರುವುದರಿಂದ ಅನೇಕ ಭಾಷಾಪ್ರಭೇದಗಳನ್ನೂ ಅವುಗಳ ವೈಶಿಷ್ಟ್ಯಗಳನ್ನೂ ತಿಳಿಯುವುದು ಸಾಧ್ಯವಾಗಿದೆ. ಭಾಷೆಯನ್ನು ಅತಿ ಸೂಕ್ಷ್ಮವಾಗಿ ವಿಶ್ಲೇಶಿಸಿ ಅಭ್ಯಾಸ ಮಾಡಿದ್ದು ವ್ಯಕ್ತಿಭಾಷೆ, ಪ್ರಭೇದ, ಸಾಮಾಜಿಕ ಉಪಭಾಷೆ, ಪ್ರಾದೇಶಿಕ ಉಪಭಾಷೆ. ಉಪಭಾಷಾದೂರ, ಪರಸ್ಪರಗ್ರಹಿಕೆ, ಭಾಷಾದ್ವಿರೂಪ ಇವೇ ಮುಂತಾದ ಕಲ್ಪನೆಗಳಿಗೆ ಎಡೆಮಾಡಿಕೊಟ್ಟಿದೆ. ಇವುಗಳಿಂದ ಭಾಷೆಯಲ್ಲಿ ಭಿನ್ನತೆ ಅನಿವಾರ್ಯವೆಂದೂ ಅದು ಭಾಷೆಯ ಪ್ರಮುಖ ಲಕ್ಷಣವೆಂದೂ ದೃಢಪಟ್ಟಿದೆ. ಭಿನ್ನತೆ ಪ್ರದೇಶದಿಂದ ಪ್ರದೇಶಕ್ಕೆ, ಕಾಲದಿಂದ ಕಾಲಕ್ಕೆ, ವರ್ಗದಿಂದ ವರ್ಗಕ್ಕೆ ಬಗೆಬಗೆಯದಾಗಿರಬಹುದು. ಇಷ್ಟುಮಾತ್ರವಲ್ಲ ಇನ್ನೂ ಸೂಕ್ಷ್ಮವಾಗಿ ನೋಡಿದಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆ ಕಂಡುಬರುವುದೂ ಉಂಟು. ಆದುದರಿಂದ ಭಾಷೆಯ ಪ್ರಾರಂಭದ ಹಂತ ಒಂದು ಕಾಲದ ಒಬ್ಬ ವ್ಯಕ್ತಿಯ ಭಾಷಿಕ ರೂಢಿಗಳ ಒಟ್ಟು ಮೊತ್ತದಿಂದಾದ 'ವ್ಯಕ್ತಿಭಾಷೆ' ಎನ್ನಬಹುದು. ಸಮಾನ ಅಂಶಗಳುಳ್ಳ ವ್ಯಕ್ತಿಭಾಷೆಯಿಂದಾದ 'ಪ್ರಭೇದ' ಭಾಷೆಯ ಮುಂದಿನ ಹಂತ. ಹಲವು ಪ್ರಭೇದಗಳಿಂದಾದ ಉಪಭಾಷೆಯು ಭಾಷೆ ಹಾಗೂ ಪ್ರಭೇದಗಳ ನಡುವಿನ ಘಟ್ಟ. ಆದುದರಿಂದ ಹೆಚ್ಚಿನ ಸಂಖ್ಯೆಯ ವ್ಯಕ್ತಿಭಾಷೆಗಳ ಒಂದು ಗುಂಪನ್ನು 'ಉಪಭಾಷೆ' ಎಂದು ಕರೆಯಬಹುದು. ಶಿಷ್ಟಭಾಷೆಯೊಡನೆ ಹೋಲಿಸಿದರೆ ಉಚ್ಚಾರಣೆ, ಶಬ್ದಸಮೂಹ ಹಾಗೂ ವ್ಯಾಕರಣಪ್ರಕ್ರಿಯೆಗಳಲ್ಲಿ ಭಿನ್ನತೆ ತೋರಿಬರುವುದು ಉಪಭಾಷೆಯ ಲಕ್ಷಣಗಳು. ಉಪಭಾಷೆಯು ಅನ್ಯಭಾಷಾ ಸಂಸರ್ಗ, ಅನ್ಯ ಸಂಸ್ಕೃತಿಯ ಪ್ರಭಾವ, ಸಾಮಾಜಿಕ ಹಾಗೂ ಭೌಗೋಳಿಕ ಪರಿಸರ—ಇವೇ ಮೊದಲಾದ ಕಾರಣಗಳಿಂದ ಹುಟ್ಟಿಕೊಳ್ಳುತ್ತದೆ. ಈ ಕಾರಣಗಳ ಹಿನ್ನೆಲೆಯಲ್ಲಿ ಎರಡು ರೀತಿಯ ಉಪ

ಭಾಷೆಗಳನ್ನು ಗಮನಿಸಬಹುದು : (೧) ಪ್ರಾದೇಶಿಕ ಉಪಭಾಷೆಗಳು. (೨) ಸಾಮಾಜಿಕ ಉಪಭಾಷೆಗಳು.

ಒಂದು ಭಾಷೆಯನ್ನಾಡುವ ವಿಸ್ತಾರವಾದ ಪ್ರದೇಶದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾದ ಭಾಷೆಗಳು ಪ್ರಾದೇಶಿಕ ಉಪಭಾಷೆಗಳೆನಿಸಿಕೊಳ್ಳುತ್ತವೆ. ಪ್ರಾದೇಶಿಕ ಉಪಭಾಷೆಗೆ ಪ್ರದೇಶ ಭಿನ್ನತೆಯೇ ಮುಖ್ಯ ಕಾರಣವಾದರೂ ನೆರೆಹೊರೆಯ ಭಾಷೆ ಹಾಗೂ ಸಂಸ್ಕೃತಿಗಳ ಪ್ರಭಾವವೂ ಸಾಮಾನ್ಯ. ಸಾಂಸ್ಕೃತಿಕ, ಭೌಗೋಳಿಕ ಮುಂತಾದ ಹಿನ್ನೆಲೆಗಳಿಂದಾಗಿ ಭಾಷೆ ಬದಲಾಗುವುದರಿಂದ, ಪ್ರಾದೇಶಿಕ ಉಪಭಾಷೆಗಳನ್ನಾಗಲಿ, ಸಾಮಾಜಿಕ ಉಪಭಾಷೆಗಳನ್ನಾಗಲಿ ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಅಥವಾ ನಿರ್ದಿಷ್ಟ ವರ್ಗಕ್ಕೆ ಸೀಮಿತಗೊಳಿಸುವುದು ಕಷ್ಟ. ಉದಾಹರಣೆಗೆ ಕನ್ನಡದ ಪ್ರಾದೇಶಿಕ ಉಪಭಾಷೆಗಳಲ್ಲಿ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಮತ್ತು ಗುಲ್ಬರ್ಗ ಕನ್ನಡಗಳನ್ನು ಪ್ರಮುಖವಾಗಿ ಹೆಸರಿಸಬಹುದಾದರೂ ಖಚಿತವಾಗಿ ಇವು ಇಂತಿಷ್ಟೇ ಎಂದು ಹೇಳುವುದು ಕಠಿಣ. ಏಕೆಂದರೆ ಜಿಲ್ಲೆ ಜಿಲ್ಲೆಗೂ ವ್ಯತ್ಯಾಸ ಕಂಡು ಬರುತ್ತದೆ.

ಒಂದು ಭಾಷೆಯನ್ನಾಡುವ ಸಮಾಜದ ಸಾಮಾಜಿಕ ವ್ಯವಸ್ಥೆಯಿಂದಾಗಿ ಸಾಮಾಜಿಕ ಉಪಭಾಷೆಗಳು ಹುಟ್ಟಿಕೊಳ್ಳುತ್ತವೆ. ಉದಾಹರಣೆಗೆ ಒಂದು ಹಳ್ಳಿಯನ್ನೋ ಅಥವಾ ಊರನ್ನೋ ಘಟಕವನ್ನಾಗಿ ತೆಗೆದುಕೊಂಡರೆ ಅಲ್ಲಿಯ ಭಿನ್ನ ಭಿನ್ನ ಜಾತಿ, ಅಥವಾ ವರ್ಗಕ್ಕೆ ಸೇರಿದವರು ಭಿನ್ನ ಭಿನ್ನ ಭಾಷೆಯನ್ನಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಆಯಾ ಜಾತಿ ವರ್ಗಗಳಿಗೆ ಸಂಬಂಧಪಟ್ಟಂತೆ ಉಪಭಾಷೆಗಳನ್ನು ಹೆಸರಿಸುವುದು ವಾಡಿಕೆಯಾಗಿದೆ.

ಈ ಹಿನ್ನೆಲೆಯಲ್ಲಿ ಈಗ ಕನ್ನಡದ ಉಪಭಾಷೆಗಳು ಯಾವುವು ಎಂಬುವನ್ನು ಗಮನಿಸಬಹುದು. ದ್ರಾವಿಡ ಭಾಷಾವರ್ಗದ ಪ್ರಾಚೀನ ಭಾಷೆಗಳಲ್ಲೊಂದಾಗಿ ಕನ್ನಡ, ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿದೆ. ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿರುವ ಕನ್ನಡ ಭಾಷಾಪ್ರದೇಶವನ್ನು ಗಮನಿಸಿದಾಗ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಹಾಗೂ ಗುಲ್ಬರ್ಗ ಕನ್ನಡ ಎಂಬ ನಾಲ್ಕು ಪ್ರಮುಖ ಉಪಭಾಷೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. 'ಕವಿರಾಜಮಾರ್ಗ' (ಪರಿಚ್ಛೇದ ೨), 'ಕಾವ್ಯಾವಲೋಕನ' ಮತ್ತು 'ಶಬ್ದಾನುಶಾಸನ'ಗಳಲ್ಲಿ (ಸೂತ್ರ ೧೨೪ ; ೮೮) ಪ್ರಸ್ತಾಪಿತವಾಗಿರುವ ದಕ್ಷಿಣೋತ್ತರಮಾರ್ಗಗಳೆಂಬ ಮಾತುಗಳನ್ನು ಹಿಡಿದು, ಕನ್ನಡದಲ್ಲಿ ಇದ್ದಿರಬಹುದಾದ ಪ್ರಾದೇಶಿಕ ಭೇದಗಳನ್ನಾಗಲಿ ಅಥವಾ ಭಾಷೆಯ ಅವಸ್ಥೆಗಳನ್ನಾಗಲಿ ಆ ಮಾತುಗಳು ಕುರಿತಿರಬಹುದೇ ಎಂಬ ಚರ್ಚೆ ನಡೆದಿದೆ.[133] ದಂಡಿಯು 'ಕಾವ್ಯಾದರ್ಶ'ದ ವೈದರ್ಭ ಮತ್ತು ಗೌಡಮಾರ್ಗಗಳೆಂಬ ರೀತಿಗಳನ್ನೇ 'ಕವಿರಾಜಮಾರ್ಗ' ಮತ್ತು 'ಕಾವ್ಯಾವಲೋಕನ'ಗಳಲ್ಲಿ ಕ್ರಮವಾಗಿ ದಕ್ಷಿಣಮಾರ್ಗ ಮತ್ತು ಉತ್ತರ ಮಾರ್ಗಗಳೆಂಬುದಾಗಿ ಹೇಳಿದೆ. ಆದಕಾರಣ ಶಬ್ದರೂಪಕ್ಕಿಂತಲೂ ರೀತಿಭೇದಕ್ಕೇ ಆ ಮಾತುಗಳು

ಅನ್ವಯಿಸುತ್ತವೆ. ಆದ್ದರಿಂದ ಅವುಗಳಿಗೆ ವಿಶೇಷವಾದ ಅರ್ಥ ಪ್ರಯೋಜನಗಳನ್ನು ಹುಡುಕುವುದು ಫಲಕಾರಿಯಲ್ಲ ಎಂಬುದು ಒಟ್ಟಿನಲ್ಲಿ ವಿದ್ವಾಂಸರ ಮತ. ‘ಕವಿರಾಜ ಮಾರ್ಗಕಾರ’ನು ಕೊಡುವ ಕ್ರಿಯಾಪದ ರೂಪಗಳ, ‘ಶಬ್ದಾನುಶಾಸನ’ ಕಾರನು ಕೊಡುವ ಸರ್ವನಾಮರೂಪಗಳ ಪ್ರಯೋಗ ವೈಚಿತ್ರ್ಯದಿಂದ ಏನನ್ನೂ ನಿರ್ಣಯಿಸಿ ಹೇಳುವುದಕ್ಕೆ ಆಗುವುದಿಲ್ಲ. ಏಕೆಂದರೆ ಅವುಗಳಲ್ಲಿ ಸಾಧುರೂಪಗಳೆಂಬುವು ಕಾಲದೇಶಭೇದಗಳಿಲ್ಲದೆ ಕವಿಪ್ರಯೋಗಗಳಲ್ಲಿ ಪರ್ಯಾಯವಾಗಿ ಬಳಕೆಯಾಗುತ್ತಲೇ ಇರುತ್ತವೆ. ಆದ್ದರಿಂದ ಈ ಬಗ್ಗೆ ವಿಶೇಷ ಚರ್ಚೆ ಅನಾವಶ್ಯಕವೆಂದೂ, ಆದರೆ ಪ್ರಾದೇಶಿಕ ಭೇದಗಳು ಹಿಂದಿನಿಂದ ಇದ್ದವು, ಭಾಷೆಯ ಅವಸ್ಥೆಗಳು ಕಾಲಾನುಕ್ರಮವಾಗಿ ತಲೆದೋರುವು ಎಂದು ತಿಳಿಯಲು ಅಡ್ಡಿಯೇನೂ ಇಲ್ಲವೆಂದೂ ಎಲ್ಲರೂ ಒಟ್ಟಿನಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಕರ್ಣಾಟಕದ ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು ಹಾಗೂ ಶಿವಮೊಗ್ಗ—ಈ ಜಿಲ್ಲೆಗಳಲ್ಲಿ ಆಡುವ ಕನ್ನಡ ಭಾಷೆಯ ಪ್ರಭೇದವನ್ನು ಮೈಸೂರು ಕನ್ನಡ ಎಂದು ಹೇಳುವುದು ವಾಡಿಕೆ. ಆದರೆ ಈ ಉಪಭಾಷೆಯಲ್ಲೆ ಅನೇಕ ಬಗೆಯ ಒಳಪಂಗಡಗಳು ಕಂಡುಬಂದು ಅವುಗಳ ವರ್ಣನಾತ್ಮಕ ವಿಶ್ಲೇಷಣೆಯ ಕಾರ್ಯವೂ ಈಗಾಗಲೇ ಕೆಲಮಟ್ಟಿಗೆ ನಡೆದಿದೆ, ನಡೆಯುತ್ತಿದೆ. ಗ್ರಾಂಥಿಕ ಕನ್ನಡದಲ್ಲಿ ಅ ಆ, ಇ ಈ, ಉ ಊ, ಎ ಏ, ಒ ಓ ಎಂಬ ಹತ್ತು ಸ್ವರ ಧ್ವನಿಮಗಳಿವೆ. ಮೈಸೂರು ಕನ್ನಡದಲ್ಲಿ ಈ ಸ್ವರ ಧ್ವನಿಮಗಳ ಜೊತೆಗೆ ಆ್ಯ, ಅ: ಮತ್ತು ಒ: ಎಂಬ ಸ್ವರಗಳ ಸೇರ್ಪಡೆ ಆಗಿದೆ.[134] ಆ್ಯ ಮತ್ತು ಒ:ಗಳು ಬಹುತೇಕ ವಿದೇಶೀಯ ಶಬ್ದಗಳಲ್ಲಿ ಕಂಡುಬರುತ್ತವೆ. ಇವಲ್ಲದೆ i ಸ್ವರ ಕೂಡ ಬಳಕೆಯಲ್ಲಿದ್ದು ಇದು ಬಹುಮಟ್ಟಿಗೆ ṛ ಮತ್ತು ḷ ಗಳನ್ನು ಹೊಂದಿರುವ ಕೃಷ್ಣ, ಕೃತಿ ಮುಂತಾದ ಸಂಸ್ಕೃತ ಶಬ್ದಗಳಲ್ಲಿ ಕಂಡುಬರುತ್ತದೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.[135] ಈ ಸ್ವರ ಆಡುನುಡಿಯಲ್ಲಿ ಅಷ್ಟಾಗಿ ಬಳಕೆಯಲ್ಲಿಲ್ಲ. ಇಂಗ್ಲಿಷಿನಲ್ಲಿರುವಂತೆ ಸಂಧ್ಯಕ್ಷರಗಳು ಕಂಡುಬರುವುದಿಲ್ಲ. ಹೀಗಾಗಿ ಮೈಸೂರು ಮತ್ತು ಕೈ ಎಂಬಲ್ಲಿ ಸ್ವರ ಹಾಗೂ ಅರ್ಧಸ್ವರ ‘ಯ’ಗಳ ಉಚ್ಚಾರ ಕಂಡುಬರುತ್ತದೆಂದೂ ಗೌಳಿ, ಪೌರ ಎಂಬಲ್ಲಿ ಸ್ವರ ಹಾಗೂ ಅರ್ಧ ಸ್ವರ ‘v’ಗಳ ಉಚ್ಚಾರ ಸ್ಪಷ್ಟವಾಗಿದೆ ಎಂಬುದೂ ವಿದ್ವಾಂಸರ ಅಭಿಪ್ರಾಯವಾಗಿದೆ. ಮೈಸೂರು ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ವಿದ್ಯಾವಂತರ ಹಾಗೂ ಸಮಾಜದಲ್ಲಿ ಉಚ್ಚವರ್ಗದವರ ಭಾಷೆಯಲ್ಲಷ್ಟೇ ಕಂಡುಬರುತ್ತದೆ. ಹ ಅನಕ್ಷರಸ್ಥ ಬ್ರಾಹ್ಮಣೇತರ ಭಾಷೆಯಲ್ಲಿ ಸಾಮಾನ್ಯವಾಗಿ ಲೋಪವಾಗುತ್ತದೆ. ಜ ಮತ್ತು ಝ ಇವುಗಳು ‘ಸ’ ಧ್ವನಿಮದ ಉಪಧ್ವನಿಗಳಾಗಿವೆ. ಊಷ್ಮ ಧ್ವನಿಗಳಾದ ಶ, ಷ, ಸ ಇವು ಉಚ್ಚವರ್ಗದ ಹಾಗೂ ವಿದ್ಯಾವಂತರ ಭಾಷೆಯಲ್ಲಿ ಉಳಿದು, ಉಳಿದೆಡೆ ಶ ಮತ್ತು ಷ ಸ ಆಗಿವೆ. ಕೆಲವು ಸ್ವೀಕೃತ ಪದಗಳಲ್ಲಿ f, z ಗಳು ಬಳಕೆಯಲ್ಲಿದ್ದು ಅವಿದ್ಯಾವಂತರ ನುಡಿಯಲ್ಲಿ ಕೇವಲ ಪ, ಜ, ಖ/ಕ ಗಳಾಗಿವೆ.[136] ಪದದ ಆದಿಯ ಎ ಮತ್ತು ಒ ಸ್ವರಗಳು ಬ್ರಾಹ್ಮಣೇತರ ಹಾಗೂ ಅವಿದ್ಯಾವಂತರ ನುಡಿಯಲ್ಲಿ ‘ಯೆ’ ಮತ್ತು ‘ವೊ’ ಆಗಿ

ಮಾರ್ಪಟ್ಟಿವೆ. ಅವಿದ್ಯಾವಂತರ ಹಾಗೂ ನಿಮ್ನ ವರ್ಗದವರ ಮಾತಿನಲ್ಲಿ ನಾಮಪದಗಳ ಮಧ್ಯೆ ಬರುವ ಏ ಸ್ವರ ಅನೇಕ ವೇಳೆ 'ಯಾ' ಆಗಿ ಮಾರ್ಪಡುವುದು ಈ ಪ್ರದೇಶದ ಪ್ರಮುಖ ಸಾಮಾಜಿಕ ಭಿನ್ನತೆ ಎಂದು ಹೇಳಬಹುದು (ಉದಾ: ಬೇಸರ : ಬ್ಯಾಸರ ಪೇಟೆ : ಪ್ಯಾಟೆ ಇ.). ಹಳೆಯ ಮೈಸೂರಿನಲ್ಲಿ ಆಡುವ ಭಾಷೆಯನ್ನು ಒಟ್ಟಾರೆ ಗಮನಿಸಿದಾಗ ಪದದ ಆರಂಭದ ಕ ಗ ಮತ್ತು ದ ಗಳು ಅವಿದ್ಯಾವಂತರ ಕನ್ನಡದಲ್ಲಿ ಚ ಹಾಗೂ ಜ ಗಳಾಗಿವೆ.[137]

ವ್ಯಾಕರಣದ ದೃಷ್ಟಿಯಿಂದ ಶಿಷ್ಟಭಾಷೆಗೂ ಈ ಪ್ರದೇಶದ ವಿದ್ಯಾವಂತರ ಆಡುನುಡಿಗೂ ಅತಿ ಹೆಚ್ಚಿನ ಭಿನ್ನತೆ ಕಂಡುಬರುವುದಿಲ್ಲ. ಶಿಷ್ಟಭಾಷೆಯ ಸರ್ವನಾಮ 'ಅವನು' ಆಡುನುಡಿಯಲ್ಲಿ 'ಅವ್ನ' ಎಂದಾದರೆ ಅವಿದ್ಯಾವಂತರ ಹಾಗೂ ನಿಮ್ನ ವರ್ಗದವರ ನುಡಿಯಲ್ಲಿ ಅವ ಅಥವಾ ಅಂತ್ಯಸ್ವರ ಅನುನಾಸಿಕವಾಗಿ 'ಅಂವ' ಎಂದೂ ಆಗುತ್ತದೆ. ವರ್ತಮಾನ ಸ್ತ್ರೀವಾಚಕ ಸರ್ವನಾಮ ಅವಳು, ಅವ್ಳು, ಆಕೆ ಎಂದಾಗುತ್ತದೆ. ವರ್ತಮಾನ ಕಾಲದ ಕ್ರಿಯಾಪದರೂಪಗಳಾದ ಮಾಡುತ್ತೇನೆ, ಮಾಡುತ್ತಾನೆ, ಮಾಡುತ್ತಾಳೆ, ಮಾಡುತ್ತಾರೆ ಎಂಬವು ಕ್ರಮವಾಗಿ ಮಾಡ್ತೀನಿ, ಮಾಡ್ತೇನೆ, ಮಾಡ್ತಾನೆ, ಮಾಡ್ತಾಳೆ, ಮಾಡ್ತಾರೆ ಎಂದಾಗುತ್ತವೆ. ಆಡುನುಡಿಯಲ್ಲಿ ಕಂಡುಬರುವ ಈ ಮಧ್ಯಸ್ವರ ಲೋಪ ಸಾಮಾನ್ಯವಾಗಿ ಎಲ್ಲ ಕ್ರಿಯಾಪದಗಳ ಮೂರು ಕಾಲದ ಕ್ರಿಯಾರೂಪಗಳಿಗೂ ಅನ್ವಯಿಸುತ್ತದೆ.[138] ಈ ಬದಲಾವಣೆಯ ಹಿನ್ನೆಲೆಯಲ್ಲಿ ಅತ್ಯಲ್ಪ ಶ್ರಮದ ನಿಯಮ ಮುಖ್ಯವಾಗಿ ಕೆಲಸ ಮಾಡುತ್ತದೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಪ್ರಶ್ನಾರ್ಥಕದಲ್ಲಿ ಕಂಡುಬರುವ ಏ ಪ್ರತ್ಯಯ, ಹೋಗೋಣ, ತಿನ್ನೋಣ ಎಂಬಲ್ಲಿಯ ಓಣ ಪ್ರತ್ಯಯ, ಬರೋಲ್ಲ, ಕೊಡೋಲ್ಲ ಎಂಬಲ್ಲಿ ಕಂಡುಬರುವ 'ಇಲ್ಲ' ಎಂಬುದರ ಹಿಂದೆ 'ಓ' ಸೇರಿದ ಕ್ರಿಯಾಪದದ ಪ್ರಯೋಗ—ಇವು ಮೈಸೂರು ಕನ್ನಡದ ವಿಶೇಷತೆಗಳಾಗಿವೆ. ಇನ್ನು ಬಿಡಿ ಶಬ್ದಗಳ ಬಳಕೆಯಲ್ಲಂತೂ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ.

ಕರ್ನಾಟಕದ ಕರಾವಳಿ ಪ್ರದೇಶ ಅನೇಕ ಭಾಷೆ ಮತ್ತು ಉಪಭಾಷೆಗಳ ಬೀಡಾಗಿದೆ. ಈ ಕರಾವಳಿ ಪ್ರದೇಶದಲ್ಲಿ ಕೊಂಕಣಿ, ಮರಾಠಿ, ತುಳು, ಮಲಯಾಳ ಹಾಗೂ ತಮಿಳು ಭಾಷೆಗಳ ಉಪಭಾಷೆಗಳನ್ನಾಡುವ ಅನೇಕ ಜನರಿದ್ದಾರೆ. ಅಲ್ಲಿಯ ಕನ್ನಡದ ಉಪಭಾಷೆಗಳನ್ನು ಎರಡು ಬಗೆಗಳಲ್ಲಿ ವರ್ಗೀಕರಿಸಬಹುದೆಂದು ಹಲವರ ಅಭಿಪ್ರಾಯ.[139] ಕನ್ನಡವನ್ನೇ ಮಾತೃಭಾಷೆಯಾಗಿ ಹೊಂದಿರುವ ಸುಮಾರು ಮೂರು ಲಕ್ಷ ಜನರ ಭಾಷೆ ಮೊದಲನೆಯ ಪ್ರಭೇದದಲ್ಲಿ ಸೇರುತ್ತದೆ. ಇವುಗಳಲ್ಲಿ ಮುಖ್ಯವಾದುವು ಹವ್ಯಕ, ಹಾಲಕ್ಕಿ, ಗೌಡ, ಕೋಟ. ಬಹುತೇಕ ದಕ್ಷಿಣ ಕರಾವಳಿಯಲ್ಲಿ ಬಳಕೆಯಲ್ಲಿದ್ದು ಗ್ರಾಂಥಿಕ ಕನ್ನಡವನ್ನು ಹೋಲುವ ಕನ್ನಡ ಎರಡನೆಯ ಬಗೆಯದಾಗಿರುತ್ತದೆ. ಎ ಮತ್ತು ಒ ಸ್ವರಗಳು ಕ್ರಮವಾಗಿ ಇ ಮತ್ತು ಉ ಆಗದಿರುವುದು ಮೊದಲನೆಯ ಪ್ರಭೇದದ ಮುಖ್ಯ ವೈಶಿಷ್ಟ್ಯ.[140] ದಕ್ಷಿಣ ಕನ್ನಡದಲ್ಲಿ ಬಳಸುವ ಕನ್ನಡ ಶಿಷ್ಟಕನ್ನಡಕ್ಕೆ ಸಮೀಪವರ್ತಿಯಾಗಿದೆಯೆಂಬೂ ಅದು ತನ್ನದೇ ಆದ ವೈಶಿಷ್ಟ್ಯವನ್ನೂ ಐತಿಹಾಸಿಕ ಹಿನ್ನೆಲೆಯನ್ನೂ ಹೊಂದಿದೆ

ಯೆಂದೂ ಅನೇಕರು ಸ್ಪಷ್ಟಪಡಿಸಿದ್ದಾರೆ.[141]

ಕರಾವಳಿಯ ಕನ್ನಡದ ಉಪಭಾಷೆಗಳಲ್ಲಿ ಹವ್ಯಕ ಕನ್ನಡ ಪ್ರಮುಖವಾದ್ದು. ಹವ್ಯಕ ದಕ್ಷಿಣ ಹಾಗೂ ಉತ್ತರ ಕನ್ನಡಗಳಲ್ಲಿ ನೆಲಸಿರುವ ಹವ್ಯಕ ಬ್ರಾಹ್ಮಣರ ಭಾಷೆ. ಉತ್ತರ ಕನ್ನಡದ ಹವ್ಯಕಕ್ಕೂ ದಕ್ಷಿಣ ಕನ್ನಡದ ಹವ್ಯಕಕ್ಕೂ ಸಾಕಷ್ಟು ವ್ಯತ್ಯಾಸ ಕಂಡುಬರುತ್ತದೆ. ಬಹುತೇಕ ಮಂಗಳೂರು, ಸುಳ್ಯ, ಉಡುಪಿ, ಪುತ್ತೂರು, ಬೆಳ್ತಂಗಡಿ, ಈ ಪ್ರದೇಶಗಳಲ್ಲಿ ಮಾತನಾಡುವ ದಕ್ಷಿಣ ಹವ್ಯಕದಲ್ಲಿ ಇ, ಎ, ಉ, ಒ ಮತ್ತು ಅ ಇವು ಸ್ವರ ಧ್ವನಿಮಗಳಾಗಿದ್ದರೆ, ಉತ್ತರ ಕನ್ನಡದ ಹವ್ಯಕದಲ್ಲಿ ಎ :, ಇ :, ಅ :, ಒ : ಈ ನಾಲ್ಕು ಸ್ವರಗಳು ಹೆಚ್ಚಾಗಿರುವುದು ಕಂಡುಬರುತ್ತದೆ.[142] ಈ ಎರಡು ಉಪಭಾಷೆಗಳಲ್ಲಿಯೂ ದೀರ್ಘ ಮತ್ತು ಅನುನಾಸಿಕತೆ ಪ್ರತ್ಯೇಕ ಧ್ವನಿಮಗಳಾಗಿವೆ. ಆಡುನುಡಿಯಲ್ಲಿ ಮಹಾಪ್ರಾಣಗಳೂ ಷ ಊಷ್ಮಧ್ವನಿಯೂ ಬಳಕೆಯಲ್ಲಿಲ್ಲ. ಷ, ಸ ಧ್ವನಿಯ ಉಪಧ್ವನಿಯಾಗಿದೆ. ಈ ಅಂಶ ಮೈಸೂರು ಕನ್ನಡದಲ್ಲಿಯೂ ಕಂಡುಬರುತ್ತದೆ.

ವ್ಯಾಕರಣದ ದೃಷ್ಟಿಯಿಂದ ನೋಡಿದಲ್ಲಿ ದಕ್ಷಿಣ ಕನ್ನಡದ ಹವ್ಯಕದಲ್ಲಿ ಪ್ರಥಮ ಪುರುಷ ಸ್ತ್ರೀವಾಚಕ ಸರ್ವನಾಮವಿಲ್ಲದಿರುವುದು ಕಂಡುಬರುತ್ತದೆ. ಕ್ರಿಯಾಪದದ ರೂಪಗಳಲ್ಲಿ ಶಿಷ್ಟಕನ್ನಡದ ವರ್ತಮಾನಕಾಲ, ಭೂತಕಾಲ ಮತ್ತು ಭವಿಷ್ಯತ್‌ಕಾಲದ ವಿಭಜನೆ ಉತ್ತರ ಕನ್ನಡದ ಹವ್ಯಕದಲ್ಲಿ ಕಂಡುಬರುವುದಿಲ್ಲ. ಕೇವಲ ಭೂತ ಮತ್ತು ಅಭೂತ ಎಂಬ ವಿಭಜನೆ ಬಳಕೆಯಲ್ಲಿದೆ.[143] ಸಾಮಾನ್ಯವಾಗಿ ಉತ್ತರ ಹಾಗೂ ದಕ್ಷಿಣ ಕನ್ನಡದ ಉಪಭಾಷೆಗಳಲ್ಲಿ ದ್ವಿತೀಯಾ ವಿಭಕ್ತಿಯ ಬದಲಾಗಿ ಚತುರ್ಥೀ ವಿಭಕ್ತಿಯ ಪ್ರಯೋಗ ಉಂಟು.[145] ಕನ್ನಡ, ತಮಿಳು ಮುಂತಾದ ದ್ರಾವಿಡಭಾಷೆಗಳಲ್ಲಿರುವ ಅಭಿವ್ಯಾಪಕ ಹಾಗೂ ವ್ಯಾವರ್ತಕಗಳೆಂಬ ಎರಡು ಬಗೆಯ ಸರ್ವನಾಮಗಳು ಉತ್ತಮ ಪುರುಷ ಬಹುವಚನದಲ್ಲಿ ಕಂಡುಬರುತ್ತದೆ. 'ಉಂಟು,' 'ಆಯಿತು', 'ಭಯಂಕರ,' ಗೌರವಸೂಚಕ ಶಬ್ದವಾದ 'ಮಾರಾಯ್ರೆ / ಮಾರಾಯ' ಇವೇ ಮೊದಲಾದ ಶಬ್ದಗಳು ಹೆಚ್ಚು ಬಳಕೆಯಲ್ಲಿವೆ.

ಕರಾವಳಿಯ ಇನ್ನಿತರ ಉಪಭಾಷೆಗಳಲ್ಲಿ ಗೌಡ ಕನ್ನಡ ಹಾಗೂ ಹಾಲಕ್ಕಿ ಕನ್ನಡ ಪ್ರಮುಖವಾದವು. ಉತ್ತರ ಕನ್ನಡದ ಕಾರವಾರ, ಅಂಕೋಲ, ಹಾಗೂ ಹೊನ್ನಾವರ ತಾಲ್ಲೂಕುಗಳಲ್ಲಿ ನೆಲಸಿರುವ ಸುಮಾರು ನಲವತ್ತು ಸಾವಿರ ಜನರ ಭಾಷೆ ಹಾಲಕ್ಕಿ ಕನ್ನಡ. ಈ ಭಾಷೆಯನ್ನಾಡುವವರು ಹಾಲಕ್ಕಿ ಒಕ್ಕಲರು. ಹಾಲಕ್ಕಿ ಉಪಭಾಷೆಯಲ್ಲಿ ೧೫ ಸ್ವರಗಳೂ ೧೯ ವ್ಯಂಜನಗಳೂ ಧ್ವನಿಮಗಳಾಗಿರುವುದಲ್ಲದೆ, ಅನುನಾಸಿಕವೂ ಒಂದು ಧ್ವನಿಮ ಆಗಿದೆ.[145] ಮೈಸೂರು ಕನ್ನಡದಲ್ಲಿ ಸ್ವತಂತ್ರ ಧ್ವನಿಮ ಆಗಿರುವ ಣ ಹಾಲಕ್ಕಿ ಕನ್ನಡದಲ್ಲಿ ನ ಧ್ವನಿಯ ಉಪಧ್ವನಿಯಾಗಿದೆ. ಇದಲ್ಲದೆ ಮಹಾಪ್ರಾಣ ಧ್ವನಿಗಳಿಲ್ಲ. ಹ ಕೇವಲ ಪದದ ಆದಿಯಲ್ಲಿದ್ದು ಅನೇಕ ವೇಳೆ ಲೋಪವಾಗುವುದೂ ಉಂಟು. ಪಾರ್ಶ್ವಿಕ ಧ್ವನಿಗಳಾದ ಲ ಹಾಗೂ ಳ ಗಳ ನಡುವೆ ವೈದೃಶ್ಯವಿಲ್ಲದೆ ಳ, ಲ ಧ್ವನಿಯ ಉಪಧ್ವನಿಯಾಗಿರುವುದು ಒಂದು ವೈಶಿಷ್ಟ್ಯ. ಈ ಉಪಭಾಷೆಯ

ಮತ್ತೊಂದು ವೈಶಿಷ್ಟ್ಯವೇನೆಂದರೆ ಷ ಮತ್ತು ಸ ಚ ಧ್ವನಿಯ ಉಪಧ್ವನಿಗಳಾಗಿವೆ.

ಕ್ರಿಯಾಪದ ಹಾಗೂ ಸರ್ವನಾಮಗಳಲ್ಲಿ ಪ್ರಥಮ ಪುರುಷ ಏಕವಚನದಲ್ಲಿ ಪುಲ್ಲಿಂಗ/ಅಪುಲ್ಲಿಂಗ ಎಂಬ ಭೇದವಿದೆ. ಆದರೆ ಸ್ತ್ರೀವಾಚಕ ಸರ್ವನಾಮದ ಪ್ರಯೋಗ ಕೆಲವೆಡೆಗಳಲ್ಲಿ ಮಾತ್ರ ಉಂಟು. ಕ್ರಿಯಾಪದಗಳ ಬಹುವಚನದ ರೂಪಗಳಲ್ಲಿ ಪುರುಷ ಮತ್ತು ಲಿಂಗ ಭೇದಗಳು ಕಂಡುಬರುವುದಿಲ್ಲ.

ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರಿನಿಂದ ಉತ್ತರಕ್ಕೆ ಸು. ೪೫ ಮೈಲಿ ದೂರದಲ್ಲಿರುವ ಬರ್ಕ್ಕೂರು ಪ್ರದೇಶದ ಕನ್ನಡವೇ ಒಂದು ಉಪಭಾಷೆ ಎಂಬುದು ಎ. ಎಸ್. ಆಚಾರ್ಯ ಅವರ ಅಭಿಪ್ರಾಯ. ಬರ್ಕ್ಕೂರು ಕನ್ನಡದಲ್ಲಿ ż ಹಾಗೂ f ಎರಡು ಸ್ವತಂತ್ರ ಧ್ವನಿಮಗಳಾಗಿರುವುದು ಒಂದು ವೈಶಿಷ್ಟ್ಯ[146]. ನ (ವರ್ತ್ಸ್ಯ), ಙ, ಞಗಳು ನ ಧ್ವನಿಯ ಉಪಧ್ವನಿಗಳಾಗಿವೆ. ವ್ಯಾಕರಣ ದೃಷ್ಟಿಯಿಂದ ಗಣನೀಯ ಪ್ರಮಾಣದ ಭಿನ್ನತೆಗಳಾಗಲಿ, ವೈಶಿಷ್ಟ್ಯಗಳಾಗಲಿ ಕಂಡುಬರುವುದಿಲ್ಲ. ಕರಾವಳಿ ಪ್ರದೇಶದ ಬರ್ಕ್ಕೂರು ಕನ್ನಡ, ಕನ್ನಡದ ಪ್ರಾದೇಶಿಕ ಉಪಭಾಷೆಯಾದರೆ ಗೌಡ ಕನ್ನಡ, ಹವ್ಯಕ ಕನ್ನಡ, ಕೊರಗ ಕನ್ನಡ ಇವು ಸಾಮಾಜಿಕ ಪ್ರಭೇದಗಳಾಗಿವೆ. ಕೊರಗ ಭಾಷೆಯನ್ನು ಕೆಲವರು ತುಳು ಭಾಷೆಯ ಉಪಭಾಷೆ ಎಂದೂ ಕೆಲವರು ಕನ್ನಡ ಭಾಷೆಯ ಉಪಭಾಷೆ ಎಂದೂ ಹೇಳಿದ್ದಾರೆ. ಕೊರಗ ಅನೇಕ ವೈಶಿಷ್ಟ್ಯಗಳಿಂದ ಕೂಡಿದ್ದು, ಸ್ವತಂತ್ರ ಭಾಷೆಯಾಗಿದೆ ಎಂಬ ಒಂದು ಮತವೂ ಇದೆ.[147] ಕೊರಗ ಭಾಷೆಯ ಮೂರು ಪ್ರಮುಖ ಉಪಭಾಷೆಗಳ ಬಗೆಗೆ ವಿಶ್ಲೇಷಣೆ ಈಗಾಗಲೇ ನಡೆದಿದೆ. ದಕ್ಷಿಣ ಕನ್ನಡ ಜಿಲ್ಲೆಯ ಸುಮಾರು ಒಂದು ಸಾವಿರ ಕೊರಗರು ಆಡುವ ಭಾಷೆಯೇ ಕೊರಗ. ಕೊರಗ ಭಾಷೆಯ ಧ್ವನಿವ್ಯವಸ್ಥೆಯಲ್ಲಿ ಅಷ್ಟಾಗಿ ಭಿನ್ನತೆ ಇಲ್ಲದಿದ್ದರೂ ಅದರ ವ್ಯಾಕರಣ ವ್ಯವಸ್ಥೆ ಕುತೂಹಲವನ್ನು ಕೆರಳಿಸುವಂತಹುದಾಗಿದೆ. ಏಕೆಂದರೆ ಕೊರಗ ತನ್ನ ವ್ಯಾಕರಣದ ಅಂಶಗಳಲ್ಲಿ ಉತ್ತರ ದ್ರಾವಿಡ ಭಾಷೆಗಳನ್ನು ಹೋಲುತ್ತದೆ. ಈ ಭಾಷೆಯಲ್ಲೂ ಭೂತ/ಅಭೂತ ಎಂಬ ಎರಡು ಭೇದಗಳಿದ್ದು ಭೂತಕಾಲದ ಪ್ರತ್ಯಯ ಉತ್ತರ ದ್ರಾವಿಡ ಭಾಷೆಗಳ ಪ್ರತ್ಯಯವನ್ನು ಹೋಲುತ್ತದೆ. ಕುರುಖ್ ಭಾಷೆಯಲ್ಲಿ ಕಂಡುಬರುವ ಲಿಂಗ ವಚನ ಭೇದವೇ ಈ ಭಾಷೆಯಲ್ಲೂ ಕಂಡುಬರುತ್ತದೆ(ಕುರುಖ್ ಭಾಷೆಯಲ್ಲಿ ಅಬುದ್ಧಿಕ ಹಾಗೂ ಜಡವಸ್ತುಗಳಿಗೆ ಬಹುವಚನ ಪ್ರತ್ಯಯ ಸೇರುವುದಿಲ್ಲ).

ಧಾರವಾಡ ಕನ್ನಡ ಕನ್ನಡದ ಉಪಭಾಷೆಗಳಲ್ಲಿ ಪ್ರಮುಖವಾದ್ದು. ಈ ಪ್ರದೇಶ ೧೯೫೬ರ ವರೆಗೆ ಮುಂಬೈ ಪ್ರಾಂತದಲ್ಲಿ ಸೇರಿದ್ದುದರಿಂದ ಈ ಭಾಗದಲ್ಲಿ ಆಡುವ ಕನ್ನಡಕ್ಕೆ ಮುಂಬೈ-ಕರ್ನಾಟಕ ಕನ್ನಡವೆಂದು ಹೇಳುವುದೂ ಉಂಟು. ಕ್ರಿ.ಪೂ. ೨೦೦ ರಿಂದ ಪ್ರಾರಂಭಿಸಿ ಈ ಪ್ರದೇಶ ಶಾತವಾಹನ, ಕದಂಬ, ಚಾಲುಕ್ಯ, ಯಾದವ, ಬಹಮನಿ, ಪೇಶ್ವೆ ಮುಂತಾದ ಅನೇಕ ವಂಶಸ್ಥರ ಆಳ್ವಿಕೆಗೊಳಪಟ್ಟಿದ್ದರಿಂದ ಅಲ್ಲಿಯ ಕನ್ನಡದ ಪ್ರಾದೇಶಿಕ ಪ್ರಭೇದದಲ್ಲಿ ವ್ಯತ್ಯಾಸಗಳು ಪ್ರಾಚೀನತಮವೂ ವೈಶಿಷ್ಟ್ಯಪೂರ್ಣವೂ ಆಗಿವೆ. ಉತ್ತರ ಕರ್ನಾಟಕದ ಪ್ರಾದೇಶಿಕ ಪ್ರಭೇದದ ವಿಶಿಷ್ಟ ಲಕ್ಷಣಗಳು

ಕ್ರಿ.ಶ. ೧೦ ಹಾಗೂ ೧೧ನೆಯ ಶತಮಾನದ ಶಾಸನಗಳಲ್ಲೇ ಕಂಡುಬಂದಿರುವುದರಿಂದ ಈ ಪ್ರಾದೇಶಿಕ ಕವಲು ೧೧ನೆಯ ಶತಮಾನದಿಂದಲೇ ಆರಂಭವಾಗಿದೆಯೆಂಬ ಅನುಮಾನವನ್ನು ಕೆಲವರು ವ್ಯಕ್ತಪಡಿಸಿದ್ದಾರೆ[148]. ಇ,ಉ,ಎ,ಒ,ಉ ಸ್ವರ ಧ್ವನಿಮಗಳ ಜೊತೆಗೆ ಆ್ಯ,ಅ:,ಒ:ಗಳು ಧಾರವಾಡ ಕನ್ನಡದಲ್ಲಿ ವಿಪುಲವಾಗಿ ಬಳಕೆಯಲ್ಲಿವೆ. ವ್ಯಂಜನ ಧ್ವನಿಮಗಳಲ್ಲಿ ವೈಶಿಷ್ಟ್ಯ ಏನೂ ಇಲ್ಲದಿದ್ದರೂ ಮಹಾಪ್ರಾಣಗಳು ಕೇವಲ ಸುಶಿಕ್ಷಿತರ ನುಡಿಯಲ್ಲಿ ಕಂಡುಬರುತ್ತವೆ. ಈ ಉಪಭಾಷೆಯಲ್ಲಿ ಹ ಸಾಮಾನ್ಯವಾಗಿ ಪದದ ಆದಿಯಲ್ಲಿ ಬರುತ್ತದೆ. ಎಕಾರಾಂತವಾದ ಶಬ್ದಗಳು ಧಾರವಾಡದ ಕನ್ನಡದಲ್ಲಿ ಇಕಾರಾಂತವಾಗಿ ಮಾರ್ಪಟ್ಟಿವೆ. ಆದರೆ ಕಡವಾಗಿ ಬಂದ ಕೆಲವು ಶಬ್ದಗಳು ಹಾಗೆಯೇ ಉಳಿದಿವೆ[149]. ಈ ಉಪಭಾಷೆಯಲ್ಲಿ 'ಋ'ದಿಂದ ಕೊನೆಗೊಳ್ಳುವ ಶಬ್ದಗಳಿರುವುದು ಒಂದು ವೈಶಿಷ್ಟ್ಯ. ಈ ರೀತಿಯ ಶಬ್ದಗಳು ಮೈಸೂರು ಕನ್ನಡದಲ್ಲಾಗಲಿ ಮಂಗಳೂರು ಕನ್ನಡದಲ್ಲಾಗಲಿ ಕಾಣಸಿಗುವುದಿಲ್ಲ. ಶಿಷ್ಟ ಹಾಗೂ ಮೈಸೂರು ಕನ್ನಡದ ಅನೇಕ ಉಕಾರಾಂತ ಶಬ್ದಗಳು ಅಕಾರಾಂತವಾಗಿವೆ.

ವ್ಯಾಕರಣದ ದೃಷ್ಟಿಯಿಂದ ಧಾರವಾಡದ ಉಪಭಾಷೆಯಲ್ಲಿ ವಿಭಕ್ತಿಪ್ರತ್ಯಯಗಳು, ಸರ್ವನಾಮಗಳು, ಕಾಲಸೂಚಕ ಪ್ರತ್ಯಯಗಳು ಅಲ್ಪಸ್ವಲ್ಪ ಭಿನ್ನವಾಗಿವೆ. ಮಧ್ಯಮ ಪುರುಷ ಏಕವಚನಪ್ರತ್ಯಯ ಶಿಷ್ಟ ಕನ್ನಡ ಹಾಗೂ ಮೈಸೂರು ಉಪಭಾಷೆಗಳಲ್ಲಿ –ಎ ಆದರೆ, ಧಾರವಾಡದ ಉಪಭಾಷೆಯಲ್ಲಿ –ಇ ಇದೆ. ಮಾಡಿದೆ>ಮಾಡಿದಿ; ಇದೇ ರೀತಿ 'ಮಾಡ್ತಾರೆ' ಎಂಬ ವರ್ತಮಾನಕಾಲದ ರೂಪಕ್ಕೆ ಬದಲಾಗಿ 'ಮಾಡ್ತಾರ' ಎಂಬ ರೂಪ ಬಳಕೆಯಲ್ಲಿದೆ. 'ಇರು' ಕ್ರಿಯಾಧಾತುವಿನ ಭೂತಕಾಲದ ರೂಪ 'ಆದ' ಎಂದಾಗಿದೆ.

ಬಿಜಾಪುರ ಕನ್ನಡ ಧಾರವಾಡ ಉಪಭಾಷೆಗಿಂತ ಭಿನ್ನವಾಗಿದೆ. ಈ ಉಪಭಾಷೆಯಲ್ಲಿ 'ಅವನು' ಎನ್ನುವ ಅರ್ಥದಲ್ಲಿ ಉಪಯೋಗಿಸಲ್ಪಡುವ 'ಕವನು' 'ಕವ', 'ಅವಳು' ಶಬ್ದಾರ್ಥಕ್ಕೆ ಸಮಾನಾರ್ಥಕವಾಗಿ 'ಕವಳು', 'ಕರೆ', ಇದೇ ರೀತಿ ಕಿವನು, ಕಿವ, ಕಿವಳು, ಕಿವರು—ಎಂಬ ಪುರುಷಾರ್ಥಕ ಸರ್ವನಾಮಗಳೂ ಬಳಕೆಯಲ್ಲಿರುವುದು ಒಂದು ವೈಶಿಷ್ಟ್ಯವಾಗಿದೆ. ಸ್ಥಳವಾಚಕ ಹಾಗೂ, ಪರಿಮಾಣವಾಚಕಗಳಲ್ಲಿಯೂ ಇದೇ ಬಗೆಯ ಪ್ರಯೋಗಗಳು ಕಂಡುಬರುತ್ತದೆ.

ಬಿಜಾಪುರ ಉಪಭಾಷೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದುದು 'ಇರು' ಧಾತುವಿನ ರೂಪ. 'ಇರು' ಧಾತು ಉತ್ತಮ ಪುರುಷದಲ್ಲಿ ಹೀನಿ ಹೀವಿ, ಮಧ್ಯಮ ಪುರುಷದಲ್ಲಿ ಹೀದಿ ಹೀರಿ ಹಾಗೂ ಪ್ರಥಮ ಪುರುಷದಲ್ಲಿ ಹಾನ ಹಾಳ ಹಾರ ಆಗಿದೆ. ಈ ವೈಶಿಷ್ಟ್ಯಗಳ ಜೊತೆಗೆ ಹಾಂಗ, ಹತ್ಯಾರ,ಹತ್ಯಾಳ ಮತ್ತು ಗೌರವಸೂಚಕ 'ರಿ' ಎಂಬುದು ಧಾರವಾಡ ಹಾಗೂ ಬಿಜಾಪುರ ಉಪಭಾಷೆಗಳಲ್ಲಿ ವಿಪುಲವಾಗಿ ಕಂಡುಬರುತ್ತವೆ. ತಿನ್ನ, ಕೇಸಿ (ಮಾಡಕೇಸಿ, ತಿನ್ನುವುದಕ್ಕೋಸ್ಕರ, ಮಾಡುವುದಕ್ಕೋಸ್ಕರ) ಹೋಗಾಮು, ತಿನ್ನಾಮು (ಹೋಗೋಣ, ತಿನ್ನೋಣ) ಎಂಬ ಪ್ರಯೋಗಗಳು ಬಿಜಾಪುರ ಕನ್ನಡದ

ವೈಶಿಷ್ಟ್ಯಗಳು. ಧಾರವಾಡದ ಸಾಮಾಜಿಕ ಉಪಭಾಷೆಗಳ ಅಧ್ಯಯನ ನಡೆಸಿರುವ ವಿಲಿಯಂ ಮೆಕ್‌ಕೊರ್ಮಾರ್ಕ್ ಧಾರವಾಡದ ಕನ್ನಡರಲ್ಲಿ ಬ್ರಾಹ್ಮಣರ ಉಪಭಾಷೆ, ಲಿಂಗಾಯಿತರ ಉಪಭಾಷೆ, ಹರಿಜನರ ಉಪಭಾಷೆ ಎಂಬ ಮೂರು ಮುಖ್ಯಸಾಮಾಜಿಕ ಉಪಭಾಷೆಗಳನ್ನು ಗುರುತಿಸಬಹುದೆಂದು ಹೇಳುತ್ತಾರೆ.

ಗುಲ್ಬರ್ಗ ಹಾಗೂ ಬಿಜಾಪುರ ಉಪಭಾಷೆಗಳ ನಡುವೆ ಅಂತರ ಅಷ್ಟಾಗಿ ಕಂಡು ಬರುವುದಿಲ್ಲ. ಗುಲ್ಬರ್ಗ ಜಿಲ್ಲೆಯ ಪೂರ್ವ ಹಾಗೂ ಪಶ್ಚಿಮ ದಿಕ್ಕಿಗೆ ಆಂಧ್ರ ಹಾಗೂ ಮಹಾರಾಷ್ಟ್ರ ರಾಜ್ಯಗಳಿದ್ದು, ಗುಲ್ಬರ್ಗ ಕನ್ನಡ ಉರ್ದು, ಮರಾಠಿ ಹಾಗೂ ಸಂಸ್ಕೃತ ಭಾಷೆಗಳ ಪ್ರಭಾವಕ್ಕೊಳಗಾಗಿದೆ. ಇದಲ್ಲದೆ ಈ ಪ್ರದೇಶ ಹಿಂದೆ ಹೈದರಾಬಾದು ಪ್ರಾಂತಕ್ಕೆ ಸೇರಿದ್ದು ನಿಜಾಮರ ಆಳ್ವಿಕೆಯಲ್ಲಿದ್ದುದು ಇದಕ್ಕೆ ಕಾರಣವಾಗಿದೆ. ಆದುದರಿಂದಲೇ ಗುಲ್ಬರ್ಗ ಪ್ರದೇಶದ ಕನ್ನಡಕ್ಕೆ 'ಹೈದರಾಬಾದ್-ಕರ್ನಾಟಕ ಕನ್ನಡ'ವೆಂತಲೂ ಕರೆಯುವುದುಂಟು. ಈ ಉಪಭಾಷೆಯಲ್ಲಿಯೂ ಕನ್ನಡದ ಅನೇಕ ಉಪಭಾಷೆಗಳಲ್ಲಿರುವಂತೆ 'ಅ' ಧ್ವನಿಮ ə ಮತ್ತು a ಎಂಬ ಎರಡು ಭಿನ್ನ ಧ್ವನಿಮಗಳಾಗಿ ಆಗಿ ಒಡೆದಿದೆ. c ಮತ್ತು j ಎಂಬೆರಡು ಧ್ವನಿಮಗಳು ಈ ಉಪಭಾಷೆಯಲ್ಲಿ ಕಂಡುಬರುತ್ತವೆ. c ಮತ್ತು j ಗಳನ್ನು ಈಷತ್‌ಸ್ಪರ್ಶ ವ್ಯಂಜನಗಳೆಂದು ಕರೆಯುವುದು ವಾಡಿಕೆಯಾಗಿದೆ. ಶಿಷ್ಟ ಕನ್ನಡದಲ್ಲೂ ಇವು ತಾಲವ್ಯ ಸ್ಪರ್ಶ ವ್ಯಂಜನಗಳಾಗಿರದೆ, ಈಷತ್‌ಸ್ಪರ್ಶಗಳೇ ಆಗಿವೆ ಎಂಬುದು ಅನೇಕರ ಅಭಿಪ್ರಾಯ.[150] ಗುಲ್ಬರ್ಗ ಕನ್ನಡದಲ್ಲಿ c ಮತ್ತು j ಗಳ ಜೊತೆಗೆ ತಾಲವ್ಯ ಸ್ಪರ್ಶ ವ್ಯಂಜನಗಳಾದ c ಮತ್ತು j ಗಳೂ ಇವೆ. ಅನೇಕವೇಳೆ ಉರ್ದುಪ್ರಭಾವದಿಂದಾಗಿ ಕನ್ನಡದ j ಗೆ ಬದಲು z ಬಳಸುವುದೂ ಉಂಟು : ಬೀಜ > ಬೀಜ ಉರ್ದು. ಶಿಷ್ಟ ಕನ್ನಡದ ಎಕಾರಾಂತ ಶಬ್ದಗಳು ಇಕಾರಾಂತವಾಗುತ್ತವೆ. ಉರ್ದು ಮತ್ತು ಮರಾಠಿ ಭಾಷೆಗಳಿಂದ ಸ್ವೀಕೃತವಾದ ವ್ಯಂಜನಾಂತ ಶಬ್ದಗಳು ವ್ಯಂಜನಾಂತವಾಗಿಯೇ ಉಳಿದಿವೆ. ವ್ಯಾಕರಣ ರಚನೆಯಲ್ಲೂ ಗುಲ್ಬರ್ಗ ಕನ್ನಡ ಬಿಜಾಪುರ ಕನ್ನಡದೊಡನೆ ಸಾಮ್ಯವನ್ನು ಹೊಂದಿದೆ. ಅಕಾರಾದಿ ಸಂಬಂಧ ಸೂಚಕ ಸರ್ವನಾಮಗಳು 'ಯಕಾರಾದಿ'ಯಾಗುತ್ತವೆ ಉದಾ. ಅಪ್ಪ > ಯಪ್ಪ, ಅವ್ವ > ಯವ್ವ

'ಇರು' ಧಾತುವಿನ ಹಾನ, ಹಾಳ, ಹಾರ ರೂಪಗಳು ಈ ಉಪಭಾಷೆಯಲ್ಲೂ ಬಳಕೆಯಲ್ಲಿವೆ. ಶಿಷ್ಟಕನ್ನಡದಲ್ಲಿ ದ್ವಿತೀಯಾ ವಿಭಕ್ತಿ ಪ್ರಯೋಗದಲ್ಲಿರುವ ಸ್ಥಾನದಲ್ಲಿ ಗುಲ್ಬರ್ಗ ಭಾಷೆಯಲ್ಲಿ ಚತುರ್ಥೀ ವಿಭಕ್ತಿ ಇರುವುದು, ಉರ್ದು ಭಾಷೆಯ ಪ್ರಭಾವವಿರಬೇಕು. ಅಪರಿಚಿತರನ್ನು ಕುರಿತು ಸಂಬೋಧಿಸುವಾಗ ಗೌರವಸೂಚಕ 'ರಿ' ಪ್ರತ್ಯಯವನ್ನು ಅತ್ಯಧಿಕವಾಗಿ ಬಳಸುತ್ತಾರೆ. ಮಹಾಪ್ರಾಣಗಳು ಬ್ರಾಹ್ಮಣರ ಹಾಗೂ ಸುಶಿಕ್ಷಿತರ ನುಡಿಯಲ್ಲಿ ಮಾತ್ರ ಉಳಿದಿವೆ. ಕೆಲವು ಸಂದರ್ಭಗಳಲ್ಲಿ ಶಿಷ್ಟಭಾಷೆಯಲ್ಲಿ ಮಹಾಪ್ರಾಣ ಬಳಕೆಯಲ್ಲಿಲ್ಲದಿದ್ದರೂ ಕೆಲವು ವ್ಯಂಜನಗಳನ್ನು ಮಹಾಪ್ರಾಣೀಕರಿಸುವ ಪ್ರವೃತ್ತಿ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಉದಾ : ಖೊಡಿ, ಭಂಡಿ, ಖಣ/ಖಳ ಇತ್ಯಾದಿ. ಅವಿದ್ಯಾವಂತರ ಹಾಗೂ ನಿಮ್ನವರ್ಗದವರ ನುಡಿಯಲ್ಲಿ 'ಹ' ಲೋಪವಾಗುತ್ತದೆ. ಶಿಷ್ಟ

ಭಾಷೆಯ ಅನೇಕ ಉಕಾರಾಂತ ಶಬ್ದಗಳು ಅಕಾರಾಂತವಾಗಿವೆ. ಉದಾ: ಆಕಳು > ಆಕಳ, ಕೆಚ್ಚಲು > ಕೆಚ್ಲ, ಕೀವು > ಕೀವ/ಕಿವ/ಕಿಂವ. ಗ್ರಾಂಥಿಕ ಕನ್ನಡದ ಅನೇಕ ವ್ಯಾಕರಣ ಪ್ರಕ್ರಿಯೆಗಳು ಈ ಉಪಭಾಷೆಯಲ್ಲಿ ಬಳಕೆಯಲ್ಲಿಲ್ಲ. ಮಾಡದೆ, ತಿನ್ನದೆ ಎಂಬ ನಿಷೇಧಾರ್ಥಕ ರೂಪಗಳು ಮಾಡ್ಲಾರದೆ, ತಿನ್ಲಾರದೆ ಎಂದಾಗಿ ಲಾರ್ದ್ ಎಂಬ ಪ್ರತ್ಯಯವನ್ನೊಳಗೊಂಡಿರುತ್ತವೆ. ಕರ್ಮಣಿ ಪ್ರಯೋಗವೂ ಅಷ್ಟಾಗಿ ಕಂಡು ಬರುವು ದಿಲ್ಲ. ಗುಲ್ಬರ್ಗ ಉಪಭಾಷೆಯಲ್ಲಿ ಬಳಸುವ ಸಂಖ್ಯಾವಾಚಕಗಳು ಬಹುತೇಕ ಉರ್ದು ಇಲ್ಲವೆ ಮರಾಠಿಯಿಂದ ಸ್ವೀಕೃತವಾಗಿರುತ್ತವೆ. ಉದಾ. ತೀಸ್, ಪನ್ನಾಸ್, ಶಂಭರ್, ದೋನ್ಸೆ, ಅಡೀಚ, ದೀಡು, ಡೇಡ್ ಇತ್ಯಾದಿ. ಉತ್ತ ಎಂಬ ಶಿಷ್ಟ ಕನ್ನಡದ ವರ್ತಮಾನ ಕಾಲದ ಪ್ರತ್ಯಯಕ್ಕೆ ಬದಲು ಕೋತ್, ಕಂತ್ ಎಂಬ ಪ್ರತ್ಯಯಗಳು ಬಳಕೆಯಲ್ಲಿವೆ. ಉದಾ. ಮಾಡ್‌ಕೋತ್ ಹೋಗು, ತಿನ್ನಕೋತ್ ಬಾ, ಕುಣಕಂತ್ ಬಂದ್ಲು.

ರಾಯಚೂರು ಕನ್ನಡಕ್ಕೂ ಗುಲ್ಬರ್ಗ ಕನ್ನಡಕ್ಕೂ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ. ರಾಯಚೂರು ಜಿಲ್ಲೆಯ ಉತ್ತರ ಅಂಚಿನಲ್ಲಿ ಹರಿಯುವ ಕೃಷ್ಣಾನದಿ ಗುಲ್ಬರ್ಗ ಹಾಗೂ ರಾಯಚೂರು ಉಪಭಾಷೆಗಳನ್ನು ಪ್ರತ್ಯೇಕಿಸುತ್ತದೆ. ಆದುದರಿಂದ ಕೃಷ್ಣಾನದಿಯನ್ನು ಪ್ರಾಕೃತಿಕ ಉಪಭಾಷಾ ಎಲ್ಲೆ ಎಂದು ಪರಿಗಣಿಸಬಹುದು. ಇದೇ ರೀತಿ ತುಂಗಭದ್ರಾ ನದಿಯೂ ಒಂದು ಪ್ರಾಕೃತಿಕ ಉಪಭಾಷಾ ಎಲ್ಲೆ ಎಂದು ಹೇಳ ಬಹುದು.

ಈ ಮೇಲೆ ಹೇಳಿದ ಪ್ರಾದೇಶಿಕ ಉಪಭಾಷೆಗಳ ಜೊತೆಗೆ ವಿಶಿಷ್ಟ ಸಮುದಾಯಕ್ಕೆ ಸಂಬಂಧಪಟ್ಟಂತೆ ಅನೇಕ ಉಪಭಾಷೆಗಳು ಬಳಕೆಯಲ್ಲಿವೆ. ಇವುಗಳ ಪೈಕಿ ಇರುಳ, ಕುರುಬ (ಜೇನುಕುರುಬ, ಬೆಟ್ಟಕುರುಬ), ಸೋಲಿಗ ಇವೇ ಮೊದಲಾದ ಮುಖ್ಯ ಉಪ ಭಾಷೆಗಳನ್ನು ಇಲ್ಲಿ ಹೆಸರಿಸಬಹುದು. ಇದೇ ಗುಂಪಿಗೆ ಸೇರುವ ಹವ್ಯಕ, ಗೌಡ ಹಾಲಕ್ಕಿ, ಕೊರಗ ಇವುಗಳ ಬಗ್ಗೆ ಈಗಾಗಲೇ ಪ್ರಸ್ತಾಪ ಮಾಡಲಾಗಿದೆ. ಪ್ರತಿಯೊಂದು ಪ್ರಾದೇಶಿಕ ಉಪಭಾಷೆಗಳಲ್ಲೂ ಬ್ರಾಹ್ಮಣರ ಉಪಭಾಷೆ, ಒಕ್ಕಲಿಗರ ಉಪಭಾಷೆ, ಲಿಂಗಾಯಿತರ ಉಪಭಾಷೆ, ಹರಿಜನರ ಉಪಭಾಷೆ, ಕುರುಬ ಅಥವಾ ಉಪ್ಪಾರರ ಉಪ ಭಾಷೆ ಎಂಬುದಾಗಿ ಆಯಾ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ವರ್ಗಗಳ ಆಧಾರದ ಮೇಲೆ ಸಾಮಾಜಿಕ ಉಪಭಾಷೆಗಳನ್ನು ಕೂಡ ಕಲ್ಪಿಸಬಹುದು. ಕನ್ನಡದ ಅನೇಕ ಪ್ರಾದೇಶಿಕ ಸಾಮಾಜಿಕ ಹಾಗೂ ಸಾಮುದಾಯಿಕ ಉಪಭಾಷೆಗಳ ಬಗ್ಗೆ ಸಾಕಷ್ಟು ಕೆಲಸ ನಡೆದಿದೆ.

## ಕರ್ಣಾಟಕದ ಜನ

ಬೇರೆ ಬೇರೆ ದೇಶಗಳಿಂದ ಬೇರೆ ಬೇರೆ ಕಾಲಗಳಲ್ಲಿ ವಲಸೆ ಬಂದ ಹಲವು ಜನಾಂಗ ಗಳು ಇಂದಿನ ಕರ್ಣಾಟಕದ ಜನಸ್ತೋಮಕ್ಕೆ ಹಾಗೂ ಅದರ ವೈವಿಧ್ಯಕ್ಕೆ ಅವಕಾಶ

ಮಾಡಿವೆ. ದೇಹದ ಆಕೃತಿ, ಮುಖದ ಮಾಟ, ಬಣ್ಣ ಇತ್ಯಾದಿಗಳನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸಿ ಇಂದಿನ ವಿಶ್ವದ ಜನಸಮೂಹವನ್ನು ಹಲವು ಬುಡಕಟ್ಟುಗಳಾಗಿ ವಿಂಗಡಿಸ ಬಹುದೆಂದು ಮಾನವಶಾಸ್ತ್ರಜ್ಞರ ಅಭಿಪ್ರಾಯ. ಅದರ ಆಧಾರದ ಮೇಲೆ ಕರ್ನಾಟಕದ ಜನರ ಅಧ್ಯಯನವನ್ನು ಕೈಗೊಂಡಲ್ಲಿ, ಇಲ್ಲಿ ಹಿಂದೆ ನಾಲ್ಕು ಮೂಲ ಬುಡಕಟ್ಟಿನ ಜನರಿದ್ದಂತೆ ತೋರುತ್ತದೆ. ಆದರೆ ಯಾವುದೇ ಒಂದು ಬುಡಕಟ್ಟಿನ ಜನ ಅದರ ಮೂಲ ಸ್ವರೂಪವೊಡನೆ ಇಂದು ಉಳಿದುಕೊಂಡಿಲ್ಲ; ಕಾಲಕ್ರಮದಲ್ಲಿ ಪರಸ್ಪರವಾಗಿ ರಕ್ತ ಸಂಬಂಧ ಬೆಳೆದು ಇಂದು ಈ ಜನ ಬಹು ಮಿಶ್ರಣದೊಡನೆ ಕಾಣಿಸಿಕೊಳ್ಳುತ್ತಾರೆ. ಈ ರಕ್ತಸಂಬಂಧ ಯಾವುದೇ ಒಂದು ಜಾತಿ, ಕುಲ ಅಥವಾ ಪಂಥದವರಿಗೆ ಸೀಮಿತವಾಗಿಲ್ಲ. ವರ್ಗವರ್ಗಗಳಲ್ಲಿ ವ್ಯತ್ಯಾಸಗಳು ಕಂಡುಬಂದರೆ, ಅವು ಕೇವಲ ಮಿಶ್ರಣದ ಪರಿಮಾಣ ದಲ್ಲಿ ಮಾತ್ರ. ಈ ದೃಷ್ಟಿಯಿಂದ ನೋಡಿದಲ್ಲಿ ಜನರನ್ನು ಬುಡಕಟ್ಟಿನ ಆಧಾರದ ಮೇಲೆ ವರ್ಗೀಕರಿಸುವುದು ಕೇವಲ ಶಾಸ್ತ್ರದೃಷ್ಟಿಯ ಸೌಕರ್ಯದಿಂದ ಸಾಧುವಾಗಬಹುದೇ ಹೊರತು, ವಸ್ತುತಃ ಇಂಥ ಮೂಲಸ್ಥಿತಿ ಎಲ್ಲಿಯೂ ಕಂಡುಬರುವುದಿಲ್ಲ.

ಮೊದಲಾಗಿ ನೀಗ್ರಿಟೋ ಬುಡಕಟ್ಟಿನ ರೂಪಾಂಶಗಳನ್ನು ಇಂದಿನ ಕರ್ನಾಟಕದ ಜನರಲ್ಲಿ ಅಲ್ಲಲ್ಲಿ ಗುರುತಿಸಬಹುದು. ಕುಳ್ಳುದೇಹ, ಕಪ್ಪಾದ ಮೈಬಣ್ಣ, ದೊಡ್ಡ ನಿತಂಬ, ಮುಂಚಾಚಿದ ಮೂತಿ, ಜಜ್ಜಿದಂತಹ ಮೂಗು, ಒಂದೊಂದೂ ಸುರುಳಿ ಸುರುಳಿಯಾಗಿ ಸುತ್ತಿಕೊಳ್ಳುವ ಗುಂಗುರು ಕೂದಲು—ಇವು ನೀಗ್ರಿಟೋ ಬುಡಕಟ್ಟಿನಲ್ಲಿ ಕಂಡು ಬರುವ ಸಾಮಾನ್ಯಾಂಶಗಳು. ಈ ಬುಡಕಟ್ಟಿನ ಜನ ಆಫ್ರಿಕಾದಲ್ಲಿ ವಿಶೇಷವಾಗಿ ಕಂಡು ಬರುತ್ತಾರೆ. ಮಲಯ, ಫಿಲಿಪೈನ್ಸ್, ನ್ಯೂಗಿನಿ ಅಂಡಮಾನ್ ದ್ವೀಪಗಳಲ್ಲೂ ಈ ಸ್ವರೂಪದ ಕೆಲವು ಆದಿವಾಸಿ ಜನಾಂಗಗಳು ಇರುವುದರಿಂದ, ಬಹು ಪ್ರಾಚೀನ ಕಾಲದಲ್ಲಿ ಎಂದೋ ಈ ಬುಡಕಟ್ಟಿನ ಜನ ಏಷ್ಯಾದಲ್ಲೂ ಪಸರಿಸಿದ್ದಂತೆ ತೋರುತ್ತದೆ. ಭಾರತ ದಲ್ಲೂ ಕೇರಳದ ಕಾಡಾರ್ ಜನರಲ್ಲಿ ಹಾಗೂ ಬಿಹಾರದ ರಾಜಮಹಲ್ ಬೆಟ್ಟ ಪ್ರದೇಶ ಗಳ ಜನರಲ್ಲಿ ಈ ರೂಪಾಂಶಗಳುಳ್ಳ ವ್ಯಕ್ತಿಗಳಿದ್ದಾರೆ. ಕರ್ನಾಟಕದಲ್ಲಿ ಈ ರೂಪಾಂಶ ಗಳೆಲ್ಲವನ್ನೂ ಪೂರ್ಣವಾಗಿ ಪಡೆದಿರುವ ವ್ಯಕ್ತಿಗಳು ಕಂಡುಬರುವುದು ವಿರಳವಾದರೂ ಅದರ ಹಲವಂಶಗಳನ್ನು ಹೊಂದಿರುವವರು ಅಲ್ಲಲ್ಲಿ ಕಾಣಸಿಗುತ್ತಾರೆ.

ನೀಗ್ರಿಟೋ ಬುಡಕಟ್ಟಿನ ಜನ ಅತ್ಯಂತ ಪ್ರಾಚೀನಕಾಲದಲ್ಲಿ ಇತರೆಲ್ಲರಿಗಿಂತ ಮೊದಲು ಕರ್ನಾಟಕ ದೇಶಕ್ಕೆ ಕಾಲಿಟ್ಟಿರಬಹುದು. ಪ್ರಾಗೈತಿಹಾಸಿಕ ಅಧ್ಯಯನದಿಂದ ಸುಮಾರು ೪ ಲಕ್ಷ ವರ್ಷಗಳ ಹಿಂದೆಯೇ ಕರ್ನಾಟಕದಲ್ಲಿ ಜನವಸತಿ ಇತ್ತೆಂಬುದು ತಿಳಿದಿದೆ. ಆದರೆ ಈ ಕಾಲದಲ್ಲಿ ಇಂದಿನ ವಿಶ್ವದಲ್ಲಿ ಕಂಡುಬರುವ ರೀತಿಯ ಆಧುನಿಕ ಮಾನವ ಜನಾಂಗಗಳು ಇನ್ನೂ ವಿಕಾಸ ಹೊಂದಿರಲಿಲ್ಲ. ಈ ಮಾನವರು ಸ್ಪಷ್ಟವಾಗಿ ಕಾಣಿಸಿಕೊಂಡಿದ್ದು ಪ್ಲೀಸ್ಟೋಸೀನ್ ಯುಗದ ಅಂತ್ಯಭಾಗದಲ್ಲಿ, ಎಂದರೆ ಸುಮಾರು ೪೦,೦೦೦ ವರ್ಷಗಳ ಹಿಂದೆ ಮಾತ್ರ. ಹೀಗಿರುವಲ್ಲಿ ಕರ್ನಾಟಕದಲ್ಲಿ ಕಂಡುಬರುವ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗಳ ಅಥವಾ ಇದಕ್ಕೂ ತೀರ ಹಿಂದಿನ ಪಟ್ಟೆಚಕ್ಕೆ ಶಿಲಾ

ಯುಧಗಳನ್ನು ಉಪಯೋಗಿಸುತ್ತಿದ್ದ ಜನ ಈ ನೀಗ್ರಿಟೋ ಬುಡಕಟ್ಟಿನವರೇ ಇರಬಹುದೇನೋ ಎನಿಸುತ್ತದೆ. ಆದರೆ ಇದು ಯಾವುದೇ ಸ್ಪಷ್ಟವಾದ ಮಾಹಿತಿಗಳಿಂದ ಸಿದ್ಧವಾಗದೇ ಇರುವ ವಿಷಯ; ಕೇವಲ ಊಹೆ.

ಸುಮಾರು ಕಪ್ಪಾದ ಮೈಬಣ್ಣ, ಅತಿ ಎತ್ತರವಲ್ಲದ ನಿಲುವು, ಸ್ವಲ್ಪ ಮುಂಚಾಚಿದ ಮೂತಿ, ಕಿರಿದಾದ ಹಣೆ, ದಪ್ಪ ಮೂಗು, ಅಲೆಯಲೆಯಾಗಿ ಹಬ್ಬುವ ಸಾಧಾರಣ ಗುಂಗುರು ಕೂದಲು—ಈ ವೈಶಿಷ್ಟ್ಯಗಳುಳ್ಳ ಆಸ್ಟ್ರಲಾಯಿಡ್ ಬುಡಕಟ್ಟಿನ ಜನ ಕರ್ಣಾಟಕದ ಜನಸಮೂಹದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮಿಳಿತವಾಗಿದ್ದಾರೆ. ಇಂದಿನ ಸೋಲಿಗ, ಇರುಳ, ಕೊರಗ ಮುಂತಾದ ಆದಿವಾಸಿ ಜನಾಂಗಗಳಲ್ಲಿ ಹೆಚ್ಚಾಗಿಯೂ ಇತರ ಅನೇಕ ಜಾತಿ ಮತ್ತು ವರ್ಗಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲೂ ಈ ಬುಡಕಟ್ಟಿನ ರೂಪಾಂಶಗಳು ಕಂಡುಬರುತ್ತವೆ. ಈ ಬುಡಕಟ್ಟಿನ ಜನ ಮೂಲತಃ ಎಲ್ಲಿಯವರು, ಎಂದು ಕರ್ಣಾಟಕಕ್ಕೆ ಬಂದರು—ಎಂಬ ವಿಷಯಗಳೂ ನಿಖರವಾಗಿ ತಿಳಿದಿಲ್ಲ. ಆದರೆ ಆಸ್ಟ್ರೇಲಿಯದ ಮತ್ತು ಆಗ್ನೇಯ ಏಷ್ಯದ ಕೆಲವು ಭಾಗಗಳಲ್ಲಿ ಈ ಬುಡಕಟ್ಟಿನ ಆದಿವಾಸಿಗಳು ನಿಬಿಡವಾಗಿ ಕಂಡುಬರುವುದರಿಂದ, ಈ ಜನ ಅತ್ತಣಿಂದಲೇ ಭಾರತಕ್ಕೆ, ಕರ್ಣಾಟಕಕ್ಕೆ ಸಹ, ಬಂದಿರಬೇಕೆಂದು ಊಹಿಸಲಾಗಿದೆ. ಇವರ ಆಗಮನ ನೀಗ್ರಿಟೋ ಜನರು ಬಂದು ನೆಲಸಿದ ನಂತರ ಆಗಿರಬಹುದು.

ಮೆಡಿಟರೇನಿಯನ್ ರೂಪಾಂಶಗಳನ್ನು ಗಮನಾರ್ಹ ಪ್ರಮಾಣದಲ್ಲಿ ಹೊಂದಿರುವ ಜನ ಕರ್ಣಾಟಕದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಸಾಮಾನ್ಯ ಎತ್ತರದ ನಿಲವು, ನೇರ ಮುಖ ಮತ್ತು ಹಣೆ, ನೀಳಮೂಗು, ಹೆಚ್ಚು ಗುಂಗುರಿಲ್ಲದ ಕೂದಲು, ಕಡುಗೆಂಪು ಮೈಬಣ್ಣ—ಇವು ಮೆಡಿಟರೇನಿಯನ್ ಬುಡಕಟ್ಟಿನ ವೈಶಿಷ್ಟ್ಯಗಳು. ಇದೇ ರೀತಿಯ ಜನ ಮೆಡಿಟರೇನಿಯನ್ ಸಮುದ್ರದ ಸುತ್ತ, ಅದರಲ್ಲೂ ಏಷ್ಯಾ ಮೈನರ್, ಪಶ್ಚಿಮ ಏಷ್ಯ ಮತ್ತು ಉತ್ತರ ಆಫ್ರಿಕಗಳಲ್ಲಿ ವಿಶೇಷವಾಗಿ ಹರಡಿದ್ದಾರೆ. ಈ ಬುಡಕಟ್ಟಿನ ಜನ ಪ್ರಾಯಶಃ ಆಸ್ಟ್ರಲಾಯಿಡ್ ಜನರ ಅನಂತರ ಕರ್ಣಾಟಕಕ್ಕೆ ವಲಸೆ ಬಂದಿರಬೇಕೆಂದು ಊಹೆಯಿದೆ. ಮೆಡಿಟರೇನಿಯನ್ ರೀತಿಯ ಅಸ್ಥಿಪಂಜರಗಳು ಕರ್ಣಾಟಕದ ನವಶಿಲಾಯುಗದ ಸಮಾಧಿಗಳಲ್ಲಿ ಕಂಡುಬಂದಿರುವುದನ್ನು ಇಲ್ಲಿ ಗಮನಿಸಬಹುದು. 'ಶಿರಸೂಚಿ'ಯ[151] ಆಧಾರದ ಮೇಲೆ ಈ ಮೆಡಿಟರೇನಿಯನ್ ಬುಡಕಟ್ಟಿನಲ್ಲಿ ಉದ್ದತಲೆ ಮತ್ತು ದುಂಡುತಲೆ ಎರಡು ರೀತಿಗಳಿದ್ದು, ಇವುಗಳಲ್ಲಿ ಉದ್ದತಲೆಯ ಮೆಡಿಟರೇನಿಯನ್ ಜನ ಪಶ್ಚಿಮ ಏಷ್ಯಾ ಪ್ರದೇಶದಿಂದ ಇಲ್ಲಿಗೆ ಮೊದಲು ಬಂದಿರಬೇಕೆಂದೂ ಮೂಲತಃ ಆರ್ಮೇನಿಯ, ಸಿರಿಯ ಮತ್ತು ಸುತ್ತಣ ಪ್ರದೇಶಗಳಲ್ಲಿದ್ದ ದುಂಡು ತಲೆಯ ಮೆಡಿಟರೇನಿಯನ್ ಜನ ಅನಂತರ ಇತ್ತ ಬಂದಿರಬೇಕೆಂದೂ ಕೆಲವು ಮಾನವ ಶಾಸ್ತ್ರಜ್ಞರು ಊಹಿಸಿದ್ದಾರೆ. ಆದರೆ ಈ ನಾಡಿನಲ್ಲಿ ಸ್ಪಷ್ಟ ಕಾಲನಿರ್ದೇಶ ಮಾಡಬಹುದಾದ ಮಾನವಾವಶೇಷಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆಯುವವರೆಗೂ ಈ ವಿಷಯದ ಬಗ್ಗೆ ಖಚಿತ ಅಭಿಪ್ರಾಯಗಳನ್ನು ನೀಡಲು ಸಾಧ್ಯವಾಗದು.

ಕ್ರಿ.ಪೂ ೩ನೆಯ ಸಹಸ್ರಮಾನದ ಹೊತ್ತಿಗೆ ಕಾಕೇಸಿಯನ್ ಬುಡಕಟ್ಟಿಗೆ ಸೇರಿದ ಜನ ಮಧ್ಯಏಷ್ಯಾ ಪ್ರದೇಶದಿಂದ ಹೊರಟು ಭಾರತದ ವಾಯುವ್ಯಭಾಗಕ್ಕೆ ತಲುಪಿದ್ದರೆಂದು ಅನೇಕ ಆಧಾರಗಳಿಂದ ತಿಳಿದುಬಂದಿದೆ. ಎತ್ತರದ ನಿಲವು, ನೀಟಾದ ಮುಖಮಾಟ, ತೆಳುವಾದ ನೇರಮೂಗು, ನೀಲಿಗಣ್ಣು, ನೇರ ಕೂದಲು—ಈ ವಿಶಿಷ್ಟರೂಪದ ಈ ಜನ ಕರ್ನಾಟಕದಲ್ಲೂ ಹರಡಿದ್ದರೇ ಎಂಬುವನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗಿಲ್ಲ. ಕ್ರಿ.ಪೂ. ಒಂದನೆಯ ಸಹಸ್ರಮಾನದ ಅಂತ್ಯದಲ್ಲಿ ಉತ್ತರ ಭಾರತದಿಂದ ಸಾಂಸ್ಕೃತಿಕ ಪ್ರಭಾವ ಹಬ್ಬಲಾರಂಭಿಸಿದರೂ ಎಷ್ಟರಮಟ್ಟಿಗೆ ಈ ಸ್ವರೂಪದ ಜನ ಇದಕ್ಕೆ ಕಾರಣರಾದರೆಂದು ಇಂದಿನ ಕರ್ನಾಟಕದ ಜನರ ಮಾನವಶಾಸ್ತ್ರೀಯ ವಿಶ್ಲೇಷಣೆಯಿಂದ ಸ್ಪಷ್ಟವಾಗಿಲ್ಲ.

ಕರ್ನಾಟಕದಲ್ಲಿ ಅಗಲತಲೆಯ ಇನ್ನೊಂದು ಜನವರ್ಗ ಸಾಕಷ್ಟು ಸಂಖ್ಯೆಯಲ್ಲಿ ಕಾಣಸಿಗುತ್ತದೆ. ಪ್ರಾಯಶಃ ಈ ಜನವರ್ಗಕ್ಕೆ ಕಾರಣರಾದವರು ಕ್ರಿಸ್ತಶಕಾರಂಭದ ಆಸುಪಾಸಿನಲ್ಲಿ, ಎಂದರೆ ಚಾರಿತ್ರಿಕ ಯುಗದ ಆದಿಭಾಗದಲ್ಲಿ ಭಾರತಕ್ಕೆ ವಲಸೆಬಂದ ಶಕರು ಎಂಬುದು ಒಂದು ಊಹೆ. ಹಿಮಾಲಯದ ಉತ್ತರ ತಪ್ಪಲಿನಲ್ಲಿದ್ದ ಈ ಬುಡಕಟ್ಟಿನ ಮೂಲಜನ, ಅಫ್ಘಾನೀಸ್ಥಾನದ ಸೇಸ್ತಾನ್ ಮೂಲಕ ವಾಯುವ್ಯ ಭಾರತವನ್ನು ಪ್ರವೇಶಿಸಿ, ಅನಂತರ ಭಾರತದ ಇತರೆಡೆಗಳಿಗೂ ಹರಡಿದಂತೆ ತೋರುತ್ತದೆ. ಕರ್ನಾಟಕದಲ್ಲಿ ಕಂಡುಬರುವ ಅಗಲತಲೆಯ ಜನವರ್ಗಕ್ಕೂ ಈ ವಲಸೆ ಕಾರಣವಾಗಿರಬಹುದು. ಆದರೆ ಇತ್ತೀಚಿನ ಕೆಲವು ಸಂಶೋಧನೆಗಳಿಂದ ಬೃಹತ್ ಶಿಲಾಸಮಾಧಿ ಸಂಸ್ಕೃತಿಗಳ ಕಾಲದಲ್ಲೂ ಈ ರೂಪಾಂಶವನ್ನು ಹೊಂದಿದ್ದ ಜನ ಇದ್ದಿರಬಹುದೆಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿರುವುದರಿಂದ ಈ ಸಂಬಂಧದ ಸಮಸ್ಯೆ ಜಟಿಲವಾಗಿದೆ.

ಒಟ್ಟಿನಲ್ಲಿ ಕ್ರಿಸ್ತಶಕಾರಂಭದ ೩–೪ನೆಯ ಶತಮಾನಗಳ ಹೊತ್ತಿಗೆ ಕರ್ನಾಟಕ ವಿವಿಧ ಬುಡಕಟ್ಟುಗಳವರ ನೆಲೆವೀಡಾಗಿತ್ತು. ಇಂದು ಈ ನಾಡಿನಲ್ಲಿರುವ ಬಹುಪಾಲು ಜನರ ಮೂಲವನ್ನು ಈ ನಾಲ್ಕು ವಿಧಗಳಲ್ಲಿಯೇ ಕಾಣಬಹುದು.

ಹೊರನಾಡುಗಳಿಂದ ಕರ್ನಾಟಕದತ್ತ ಹರಿಯುತ್ತಿದ್ದ ಜನವಲಸೆ ಚಾರಿತ್ರಿಕ ಕಾಲದಲ್ಲೂ ಮುಂದುವರಿಯಿತು. ಕ್ರಿಸ್ತಶಕದ ೧–೨ನೆಯ ಶತಮಾನಗಳಲ್ಲಿ ಗ್ರೀಕೋ–ರೋಮನರು ೭–೮, ೯ನೆಯ ಶತಮಾನಗಳಲ್ಲಿ ಅರಬ್ಬರು ಪರ್ಶಿಯನ್ನರು ಸಿಂಹಳೀಯರು ಹಾಗೂ ಪ್ರಾಯಶಃ ಆಗ್ನೇಯ ಏಷ್ಯಾದವರು, ಮುಂದೆ ೧೨ನೆಯ ಶತಮಾನದ ಅನಂತರದಲ್ಲಿ ತುರ್ಕಿ ಅರೇಬಿಯ ಪರ್ಶಿಯ ಮುತ್ತಿತರ ಪಶ್ಚಿಮ ಏಷ್ಯಾ ದೇಶಗಳ ಮೂಲದ ಮುಸಲ್ಮಾನರು, ೧೪ನೆಯ ಶತಮಾನದಿಂದ ಪೋರ್ಚುಗೀಸರು ಫ್ರೆಂಚರು ಡಚ್ಚರು ಬ್ರಿಟಿಷರು ಈ ನಾಡಿನೊಡನೆ ಸಂಪರ್ಕ ಹೊಂದಿದ್ದರು. ಅಲ್ಲದೆ ಬಹಮನಿ, ಬಿಜಾಪುರ ಸುಲ್ತಾನರ ಕಾಲದಲ್ಲಿ ಆಫ್ರಿಕದಿಂದ ಸಿದ್ಧಿಗಳು ಕರ್ನಾಟಕಕ್ಕೆ ವಲಸೆ ಬಂದರು. ಈ ವಿವಿಧ ಮೂಲಗಳವರು ಕರ್ನಾಟಕದ ಜನಸ್ತೋಮದಲ್ಲಿ ಒಂದಲ್ಲ ಒಂದೆಡೆ ಬೆರೆತಿದ್ದಾರೆ. ಆದರೆ ಇದು ಗಮನಾರ್ಹ ಪ್ರಮಾಣದಲ್ಲೇನೂ ಆಗಿಲ್ಲವೆಂದು ತೋರುತ್ತದೆ.

ಜನರಾಶಿಯ ವೈವಿಧ್ಯವನ್ನು ಹೇಳುವಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬೇಕಾಗುತ್ತದೆ. ನಮ್ಮ ದೇಶದಲ್ಲಿ ದ್ರಾವಿಡ, ಆರ್ಯ ಎಂಬ ಪದಗಳನ್ನು ಬೇರೆ ಬೇರೆ ಸ್ವರೂಪದ ಜನವರ್ಗಗಳು, ಎಂದರೆ ಬುಡಕಟ್ಟುಗಳು ಎಂಬ ಅರ್ಥದಲ್ಲಿ ಧಾರಾಳವಾಗಿ ಉಪಯೋಗಿಸಲಾಗುತ್ತಿದೆ. ಆದರೆ ಮಾನವಶಾಸ್ತ್ರಜ್ಞರ ದೃಷ್ಟಿಯಲ್ಲಿ ದ್ರಾವಿಡ ಆರ್ಯ ಎಂಬವು ಕೇವಲ ಭಾಷಿಕ ಗುಂಪುಗಳನ್ನು ಹೆಸರಿಸುತ್ತವೆಯೇ ಹೊರತು ಆ ವರ್ಗದ ಭಾಷೆಗಳನ್ನು ಆಡುವವರ ದೇಹಮಾಟದಲ್ಲಿರುವ ವ್ಯತ್ಯಾಸವನ್ನು ಸೂಚಿಸುವುದಿಲ್ಲ. ಒಂದು ರೀತಿಯ ದೇಹಮಾಟದ ವ್ಯಕ್ತಿಗಳು ಒಂದೇ ಭಾಷೆಯನ್ನು ಆಡುತ್ತಾರೆಂಬುದಾಗಲಿ, ಒಂದು ಭಾಷೆಯನ್ನು ಆಡುವ ಜನ ಒಂದೇ ರೀತಿಯ ದೇಹಮಾಟವನ್ನು ಹೊಂದಿರುತ್ತಾರೆಂಬುದಾಗಲಿ ಪ್ರಾಯಶಃ ಅಸಂಬದ್ಧವಾದ ತಿಳಿವಳಿಕೆ. ಇದರಿಂದಾಗಿ ಮೇಲಿನ ಜನವಿಶ್ಲೇಷಣೆಯಲ್ಲಿ ಈ ಪದಗಳನ್ನು ಕೈಬಿಟ್ಟಿದೆ.

ಈ ಸಂದರ್ಭದಲ್ಲಿ ಆ ಸಮಸ್ಯೆಯ ಸ್ವರೂಪವನ್ನು ಒಂದೆರಡು ಮಾತುಗಳಲ್ಲಿ ಇಲ್ಲಿ ಪ್ರಸ್ತಾಪಿಸುವುದು ಪ್ರಾಯಃ ಅನುಚಿತವಾಗದು. ಕನ್ನಡದ ಬೇರಾದ ಮೂಲದ್ರಾವಿಡ ಭಾಷೆ ಬೇರೆ ಬೇರೆಡೆಯಿಂದ ಬಂದ ಈ ಮೇಲಿನ ಯಾವುದೋ ಬುಡಕಟ್ಟಿನ ಆಡು ಭಾಷೆಯಾಗಿರಬೇಕು. ಆದರೆ ಆ ಭಾಷೆ ಇಲ್ಲಿಗೆ ಬಂದಮೇಲೆ ಬೇರೆ ಬುಡಕಟ್ಟಿನವರು ಅದನ್ನು ತಮ್ಮದನ್ನಾಗಿಸಿಕೊಂಡಿರಬಹುದು—ಎಂಬ ಭಾವನೆ ಸಹಜವೇ. ಹಾಗಿದ್ದಲ್ಲಿ ಮೂಲದ್ರಾವಿಡ ಭಾಷೆಯನ್ನು ಇಲ್ಲಿಗೆ ತಂದ ಜನ ಯಾರು ?—ಎಂಬ ಪ್ರಶ್ನೆಯೂ ಸಹಜವಾಗಿ ಏಳುತ್ತದೆ.

ಮೊದಲು ಬಂದ ನೀಗ್ರಿಟೋ ಜನರ ಭಾಷೆ ಆಫ್ರಿಕಾ ಮತ್ತಿತರೆಡೆಗಳಲ್ಲಿ ಇರುವ ಆ ಜನಾಂಗಗಳಲ್ಲಿ ಇಂದು ಕಾಣುವ ಭಾಷಾವರ್ಗಗಳಿಗೆ ಸೇರಿದ್ದಾಗಿರಬಹುದು. ಆದರೆ ದ್ರಾವಿಡ ಭಾಷೆಗಳಿಗೂ ಈಗಿನ ನೀಗ್ರಿಟೋ ಜನರ ಭಾಷೆಗೂ ಸಂಬಂಧವಿದ್ದಂತಿಲ್ಲ. ಅದರ ಛಾಯೆ ಅಥವಾ ಅಂಶಗಳು ಇಂದಿನ ದ್ರಾವಿಡ ಭಾಷೆಗಳಲ್ಲಿ ಉಳಿದಿವೆಯೋ ಎಂಬುದೂ ಸರಿಯಾಗಿ ತಿಳಿದಿಲ್ಲ. ಆಸ್ಟ್ರಲಾಯಿಡ್ ಜನ ಮುಂಡಾರಿ ವರ್ಗದ ಭಾಷೆಗಳನ್ನು ಆಡುತ್ತಿದ್ದರೆಂಬುದು ಕೆಲವರ ಅಭಿಪ್ರಾಯ. ಇಂದಿನ ದ್ರಾವಿಡಭಾಷೆಗಳಲ್ಲಿ (ಕನ್ನಡದಲ್ಲೂ) ಅದರ ಹಲವು ಅಂಶಗಳಿದ್ದಂತೆ ತೋರುತ್ತದೆ. ಸಸ್ಯಶಾಸ್ತ್ರಜ್ಞರ ಪ್ರಕಾರ ಈ ದೇಶದಲ್ಲಿ ಬೆಳೆಯುವ ಬಾಳೆ, ತೆಂಗು, ಪ್ರಾಯಶಃ ವೀಳ್ಯದ ಎಲೆ ಮೂಲತಃ ಪಾಲಿನೇಷಿಯ ದ್ವೀಪಸ್ತೋಮದ ಸ್ವಾಭಾವಿಕ ಸಸ್ಯಗಳಾದ್ದರಿಂದ, ಅತ್ತಣಿಂದ ಬಂದ ಆಸ್ಟ್ರಲಾಯಿಡ್ ಜನ ಅವನ್ನು ಭಾರತಕ್ಕೆ ತಂದಿರಬೇಕು ; ಅವುಗಳ ಜೊತೆಯಲ್ಲಿ ಅವಕ್ಕೆ ಸಂಬಂಧಿಸಿದ ಮುಂಡಾರಿ ಭಾಷಾವರ್ಗದ ಪದಗಳು ಇಲ್ಲಿ ಹಬ್ಬಿರಬೇಕು. ಪ್ರಾಯಶಃ ತೆಂಗು, ಬಾಳೆ, ವೀಳ್ಯ ಇವು ಇಲ್ಲಿಯ ಧಾರ್ಮಿಕ ಆಚರಣೆಗಳಲ್ಲಿ ಪ್ರಧಾನಪಾತ್ರ ವಹಿಸುವುದರಿಂದ ಈ ಸಸ್ಯಗಳು ಮತ್ತು ಆಚರಣೆಗಳು ಹಾಗೂ ತತ್ಸಂಬಂಧವಾದ ಪದಗಳು ಮುಂಡಾರಿ ಮೂಲದವಿರಬಹುದೆಂಬ ಅಭಿಪ್ರಾಯವೂ ಇದೆ. ಇಂದಿನ ದ್ರಾವಿಡ ಭಾಷೆಗಳಲ್ಲಿ ಅದರ ಹಲವು ಅಂಶಗಳಿದ್ದರೂ ಎರಡೂ ಬೇರೆ ಬೇರೆ ಭಾಷಾ ಕುಲಗಳಿಗೆ ಸೇರಿದವೆಂಬುದು ಭಾಷಾ ವಿಜ್ಞಾನಿಗಳ ಮತ.

ಮೆಡಿಟರೇನಿಯನ್ ಬುಡಕಟ್ಟಿನ ಜನ ನವಶಿಲಾಯುಗದ ಕಾಲದಲ್ಲಿ ಕರ್ನಾಟಕದಲ್ಲಿ ವಾಸಿಸುತ್ತಿದ್ದರೆಂಬುದನ್ನು ಹಿಂದೆಯೇ ಪ್ರಸ್ತಾಪಿಸಿದೆ. ಇಲ್ಲಿನ ನವಶಿಲಾಯುಗ ಸಂಸ್ಕೃತಿಗೂ ಮೆಡಿಟರೇನಿಯನ್ ಪ್ರದೇಶದಲ್ಲಿ ಅದಕ್ಕೂ ಹಿಂದಿನ ಕಾಲದಲ್ಲಿ ಇದ್ದ ನವ ಶಿಲಾಯುಗ ಸಂಸ್ಕೃತಿಗಳಿಗೂ ಹಲವು ಸಾಮ್ಯಗಳಿವೆ. ಅಲ್ಲದೆ ದ್ರಾವಿಡ ಭಾಷೆ ಮೆಡಿಟರೇನಿಯನ್ ಅಥವಾ ಸುತ್ತಣ ಪ್ರದೇಶದಲ್ಲೆಲ್ಲೊ ಪ್ರಚಲಿತವಾಗಿದ್ದು ವಾಯುವ್ಯ ಭಾರತದ ಮೂಲಕ ದಕ್ಷಿಣ ಭಾರತಕ್ಕೆ ಹರಡಿರಬೇಕೆಂದು ಕೆಲವು ಭಾಷಾ ವಿಜ್ಞಾನಿಗಳು ಊಹಿಸಿದ್ದಾರೆ. ಹೀಗಿರುವಲ್ಲಿ ಈ ದೇಶದ ನವಶಿಲಾಯುಗದ ಸಂಸ್ಕೃತಿಗೆ ಕಾರಣರಾಗಿರಬಹುದಾದ ಮೆಡಿಟರೇನಿಯನ್ ಜನರೇ ಮೂಲದ್ರಾವಿಡ ಭಾಷೆಯನ್ನು ತಂದವರಾಗಿರಬಹುದು. ಆದರೆ ಇದು ಒಂದು ಅಭಿಪ್ರಾಯ ಮಾತ್ರ. ಕೆಲವರು ವಿದ್ವಾಂಸರು ಮುಂದಿನ ಬೃಹತ್ ಶಿಲಾ ಸಂಸ್ಕೃತಿಗೆ ಕಾರಣರಾದ ಜನರೇ ದ್ರಾವಿಡ ಭಾಷೆಯನ್ನು ತಂದವರೆಂದು ಕೆಲವು ಪ್ರಬಲ ಆಧಾರಗಳ ಮೇಲೆ ತರ್ಕಿಸಿದ್ದಾರೆ. ಈ ವ್ಯತಿರಿಕ್ತ ಅಭಿಪ್ರಾಯಗಳ ಕಾರಣವಾಗಿ ದ್ರಾವಿಡ ಭಾಷೆಯನ್ನು ಮೂಲತಃ ಆಡುತ್ತಿದ್ದ ಜನ, ಎಂದರೆ 'ದ್ರಾವಿಡರು' ಯಾರು— ಎಂಬುದನ್ನು ತೀರ್ಮಾನಿಸುವುದು ಕಷ್ಟ.

'ಆರ್ಯ'ದ ವಿಷಯ ಹೆಚ್ಚು ಕ್ಲಿಷ್ಟವಲ್ಲ. ಕ್ರಿ.ಪೂ. ಒಂದನೆಯ ಸಹಸ್ರಮಾನದ ಉತ್ತರಾರ್ಧದಲ್ಲಿ ಔತ್ತರೇಯ ಸಾಂಸ್ಕೃತಿಕ ಪ್ರಭಾವಗಳು ಕರ್ನಾಟಕವಲ್ಲಿ ಹರಡಲಾರಂಭಿಸಿರಬೇಕೆಂದು ಸಾಂದರ್ಭಿಕ ಸಾಕ್ಷ್ಯಗಳಿಂದ ತಿಳಿದಿದೆ. ಈ ಪ್ರಭಾವ, ಅದರಲ್ಲೂ ಆರ್ಯ ಭಾಷಾಕುಲಕ್ಕೆ ಸೇರಿದ ಪ್ರಾಕೃತ ಸಂಸ್ಕೃತ ಭಾಷೆಗಳು ಮತ್ತು ಉತ್ತರ ಭಾರತದಲ್ಲಿ ಹುಟ್ಟಿ ಪ್ರಚಲಿತವಾದ ಹಿಂದು, ಬೌದ್ಧ ಜೈನಧರ್ಮಗಳು ಹಾಗೂ ತತ್ಸಂಬಂಧವಾದ ನಂಬಿಕೆ ನಡವಳಿಕೆಗಳು ಈ ದೇಶಕ್ಕೆ ಘಟ್ಟ ಘಟ್ಟವಾಗಿ ಬಂದಿರಬೇಕೆಂಬುದು ಚಾರಿತ್ರಿಕ ಆಧಾರಗಳಿಂದ ತಿಳಿಯುತ್ತದೆ. ಈ ಔತ್ತರೇಯ ಸಂಸ್ಕೃತಿ ಇಲ್ಲಿ ಹರಡುವುದಕ್ಕೆ ತತ್ಕಾಲೀನ ರಾಜಕೀಯ ಪರಿಸ್ಥಿತಿ ವ್ಯಾಪಾರಾದಿ ಸಂಪರ್ಕಗಳು ಮುಖ್ಯಕಾರಣಗಳು. ಉತ್ತರದಿಂದ ಜನ ಗುಂಪಾಗಿ ವಲಸೆ ಬಂದು ಇಲ್ಲಿ ಅವನ್ನು ಹರಡಲಾರಂಭಿಸಿದರೆಂಬುದಕ್ಕೆ ವಸ್ತುತಃ ಆಧಾರಗಳು ಇಲ್ಲ. ಒಂದು ಪಕ್ಷ ಜನವಲಸೆಯೂ ಇದಕ್ಕೆ ಕಾರಣವಿರಬೇಕೆಂದು ವಾದಿಸಿದರೂ ತತ್ಕಾಲೀನ ಉತ್ತರ ಭಾರತದಲ್ಲಿ ಆರ್ಯ ಭಾಷೆ ಮತ್ತು ಅದರ ಜೊತೆಯ ಸಂಸ್ಕೃತಿ ಮೂಲತಃ ಆರ್ಯ ಭಾಷೆಯನ್ನು ತಂದ ಕಾಕೇಶಿಯನ್ ಬುಡಕಟ್ಟಿನ ಜನರಿಗಷ್ಟೇ ಸೀಮಿತವಾಗಿರದೆ, ಅಲ್ಲಿದ್ದ ಇತರ ಜನರೂ ಆರ್ಯಭಾಷೆಗಳನ್ನು ತಮ್ಮದಾಗಿಸಿಕೊಂಡಿದ್ದರು. ಆರ್ಯಭಾಷೆ ಸಂಸ್ಕೃತಿಗಳು ಮಿಶ್ರ ಜನಾಂಗದವರ ಸ್ವತ್ತಾಗಿತ್ತು. ಆ ಜನಾಂಗಗಳಲ್ಲಿ ದಕ್ಷಿಣ ಭಾರತದಲ್ಲಿ ಕಂಡುಬರುವ ಬುಡಕಟ್ಟಿನವರೂ ಬಹುಪ್ರಮಾಣದಲ್ಲಿದ್ದರು. ಈ ತೆರನ ಅಂಶಗಳನ್ನು ಗಮನಿಸಬೇಕಾಗುತ್ತದೆ. ಆದ್ದರಿಂದ ದಕ್ಷಿಣ ಭಾರತಕ್ಕೆ ಯಾವುದೇ 'ಆರ್ಯ' ಎಂಬ ವಿಶಿಷ್ಟ ಬುಡಕಟ್ಟಿನವರು ತಮ್ಮ ಸಂಸ್ಕೃತಿಯನ್ನೂ ಭಾಷೆಯನ್ನೂ ತಂದರು ಎಂದು ಹೇಳುವುದು ಸಾಧ್ಯವಿಲ್ಲ.

ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಹಲವು ಪ್ರದೇಶಗಳಿಂದ

ಬಂದ ಈ ಅನೇಕ ಜನಾಂಗಗಳು ಕಾಲಾನುಕಾಲದಿಂದ ನಡೆಯುತ್ತಿರುವ ರಕ್ತಸಂಬಂಧಗಳಿಂದ ಒಂದುಗೂಡಿವೆಯಾದರೂ ಈ ರಕ್ತಸಂಬಂಧದ ವಿವಿಧ ಪ್ರಮಾಣದಿಂದ ಹಾಗೂ ಆರ್ಥಿಕ ಸಾಮಾಜಿಕ ಸ್ಥಿತ್ಯಂತರಗಳಿಂದ ಇಂದಿನ ಜನಸ್ತೋಮದಲ್ಲಿ ವೈವಿಧ್ಯಮಯ ಘಟಕಗಳು ಕಾಣುತ್ತವೆ.

ಆರ್ಥಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ವಿಶಿಷ್ಟವಾದ ರೂಪರೇಖೆಗಳಿಂದ ಬೇರ್ಪಡಿಸಬಲ್ಲ ಒಂದು ಘಟಕ ಆದಿವಾಸಿಗಳದು. ಉತ್ತರಕನ್ನಡ ಜಿಲ್ಲೆಯಲ್ಲಿರುವ ಭಿಲ್ಲರು, ದಕ್ಷಿಣ ಕನ್ನಡ ಜಿಲ್ಲೆಯ ಕೊರಗರು, ಮಲೆಯಕಂಡಿಗಳು, ಕೊಡಗಿನ ಯರವ, ಕುರುಂಬ, ಕುಡಿಯ ಮತ್ತು ಕೊರಮರು, ಮೈಸೂರು ಜಿಲ್ಲೆಯ ಪಲ್ಲಿಯನ್, ಕುರುಮನ್, ಕಣಿಯ, ಕಾಡುಕುರಬ ಮತ್ತು ಜೇನುಕುರಬರು, ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿರುವ ಸೋಲಿಗರು, ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿರುವ ಇರುಳಿಗರು, ಗುಲ್ಬರ್ಗ ಜಿಲ್ಲೆಯ ಚೆಂಚುಗಳು—ಈ ಮುಂತಾದ ವರ್ಗಗಳು ಈ ಆದಿವಾಸಿಗಳಲ್ಲಿವೆ. ಇವರೆಲ್ಲರನ್ನೂ ಇಂದು 'ಆದಿವಾಸಿ' ಎಂಬ ಒಂದೇ ಪದದಡಿಯಲ್ಲಿ ಹೆಸರಿಸಿದರೂ ಇವರ ರೂಪ, ಭಾಷೆ, ಜೀವನವಿಧಾನ, ನಡೆಗಳು, ನಂಬಿಕೆಗಳು ಒಂದೇ ರೀತಿಯಾಗಿಲ್ಲ. ಇವರೆಲ್ಲ ಅಲ್ಪಸಂಖ್ಯಾತರು.[152] ಹೆಚ್ಚಿನವರು ಸಣ್ಣಗುಂಪುಗಳಾಗಿದ್ದು ಬೆಟ್ಟಪ್ರದೇಶಗಳಲ್ಲಿ ಬೇಟೆ ಇತ್ಯಾದಿಗಳಿಂದ ಜೀವನ ನಡಸುವವರು. ಬಹುಮಟ್ಟಿಗೆ ಅನಕ್ಷರಸ್ಥರು. ಇವರಿಗೂ ಸುತ್ತಲಿನ ಗ್ರಾಮವಾಸಿಗಳಿಗೂ ಸಂಪರ್ಕ ಬಹಳಷ್ಟಿಲ್ಲ. ಧಾರ್ಮಿಕ, ಸಾಮಾಜಿಕ ಆಚರಣೆಗಳಲ್ಲಿ ಅವರವೇ ಆದ ರೀತಿನೀತಿಗಳಿರುತ್ತವೆ.[153] ಕರ್ಣಾಟಕದ ಈ ಆದಿವಾಸಿ ಜನಾಂಗಗಳ ಭಾಷೆ ಕನ್ನಡ ಅಥವಾ ಅದಕ್ಕೆ ಸಂಬಂಧಿಸಿದ ಉಪಭಾಷೆಗಳಾಗಿದ್ದರೂ, ಸಾಮಾನ್ಯ ಕನ್ನಡಭಾಷೆಯ ಜನ ಅವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ.[154]

ಆರ್ಥಿಕ ಸಾಮಾಜಿಕ ಸ್ಥಿತಿ ವೈಶಿಷ್ಟ್ಯದ ಆಧಾರದ ಮೇಲೆ ವಿಶ್ಲೇಷಿಸಿದಾಗ ಕರ್ಣಾಟಕದಲ್ಲಿ ಕಾಣಿಸಿಕೊಳ್ಳುವ ಇನ್ನೊಂದು ಜನವರ್ಗ ಗ್ರಾಮವಾಸಿಗಳದು. ಈ ದೇಶದ ಜನಸಂಖ್ಯೆಯ ದೊಡ್ಡಭಾಗ ಈ ಜನರದೇ. ವಿಶೇಷವಾಗಿ ಚಿಕ್ಕ ಚಿಕ್ಕ ಗ್ರಾಮಗಳಲ್ಲಿ ವಾಸಿಸುವ ಈ ಜನರ ಮುಖ್ಯ ಉದ್ಯೋಗ ಬೇಸಾಯ ಮತ್ತು ಸ್ವಲ್ಪಮಟ್ಟಿಗೆ ಗೃಹಕೈಗಾರಿಕೆಗಳು. ಅಕ್ಷರಸ್ಥರ ಸಂಖ್ಯೆ ಇಲ್ಲಿಯೂ ಕಡಿಮೆಯಿದ್ದು, ಹೆಚ್ಚಿನ ಸಾಂಸ್ಕೃತಿಕ ನಡೆವಳಿಕೆಗಳು ಹಾಗೂ ಸಾಧನೆಗಳು ಅಲಿಖಿತ ರೂಪದಲ್ಲಿ ಪರಂಪರಾನುಗತವಾಗಿ ಇವರಲ್ಲಿ ರೂಢಿಸಲ್ಪಟ್ಟಿವೆ. ಇದೇ ಕರ್ಣಾಟಕದ ಜಾನಪದ ಸಂಸ್ಕೃತಿಯ ತವರು. ಆದರೆ ಇತ್ತೀಚಿನ ದಿನಗಳಲ್ಲಿ ಹೊರಹೊಮ್ಮುತ್ತಿರುವ ರಾಜಕೀಯ ಸಾಮಾಜಿಕ ಪ್ರಜ್ಞೆ ಹಾಗೂ ಆರ್ಥಿಕ ಸಾಧನೆಗಳಿಂದಾಗಿ ಈ ಜನಸಮೂಹದ ಸ್ವರೂಪ ಬದಲಾಗುತ್ತಿದೆ, ಸುಧಾರಿಸುತ್ತಿದೆ.

ದೊಡ್ಡ ಊರುಗಳ ನಗರಗಳ ಸ್ವರೂಪ ಬೇರೆಯೇ ಆಗಿದೆ. ಇಲ್ಲಿನ ಜನರಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸದ, ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ಹೆಚ್ಚು ಪ್ರಮಾಣದಲ್ಲಿ ನೆಲೆಗೊಂಡಿರುವುದು ಗಮನಿಸತಕ್ಕ ಅಂಶ. ಅತಿ ಸಂಪತ್ತು, ಅತಿ ಬಡತನ, ಆರ್ಥಿಕ ಬಲದ ಮೇಲೆ ನಿಂತ ಸಾಮಾಜಿಕ ಸ್ತರಗಳು ಇತ್ಯಾದಿ ನಗರಸಂಸ್ಕೃತಿಗಳ ಸಾಮಾನ್ಯಾಂಶಗಳೆಲ್ಲ

ಇಲ್ಲಿಯೂ ಕಾಣಸಿಗುತ್ತವೆ. ವಿಶ್ವದ ಎಲ್ಲ ಸಮಾಜಗಳಂತೆ ಕರ್ಣಾಟಕದಲ್ಲೂ ಈ ಆರ್ಥಿಕ ಸಾಮಾಜಿಕ ವರ್ಗಗಳು ಪರಸ್ಪರಾನುವರ್ತಿಗಳಾಗಿವೆ. ಈ ವರ್ಗಗಳನ್ನು ಗುರುತಿಸ ಬಹುದೇ ಹೊರತು ಅವನ್ನು ಸ್ಪಷ್ಟಗೆರೆಗಳಿಂದ ಬೇರ್ಪಡಿಸುವುದು ಅಸಾಧ್ಯ.

ಈ ದೇಶದ ಜನಸಮೂಹದಲ್ಲಿ ಅನೇಕ ಧರ್ಮದವರು ಇದ್ದಾರೆ. ಇವರಲ್ಲಿ ಹಿಂದು ಗಳು ಬಹುಸಂಖ್ಯಾತರು. ಇಸ್ಲಾಮ್, ಕ್ರೈಸ್ತ ಮತ್ತು ಜೈನಧರ್ಮೀಯರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಬೌದ್ಧ, ಸಿಖ್ ಮತ್ತು ಜರತುಸ್ತ್ರ ಧರ್ಮಾನುಯಾಯಿ ಗಳೂ ಕೆಲಮಟ್ಟಿಗೆ ಅಲ್ಲಲ್ಲಿ ಕಂಡುಬರುತ್ತಾರೆ. ಈ ಎಲ್ಲ ಧರ್ಮೀಯರನ್ನೂ ಅವರ ಆಚಾರ ವಿಚಾರಗಳಿಂದ ಹಲವು ವೇಳೆ ಉಡುಗೆತೊಡುಗೆ, ಊಟಉಪಚಾರಗಳಿಂದ ಸುಲಭವಾಗಿ ಗುರುತಿಸಬಹುದು. ಭಾರತದೇಶದ ಒಂದು ವೈಶಿಷ್ಟ್ಯವಾದ ಜಾತಿಪದ್ಧತಿ, ಹೆಚ್ಚುಕಡಮೆ ಎಲ್ಲಾ ಮುಖ್ಯ ಧರ್ಮೀಯವರ್ಗಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಕಾಣಿಸಿಕೊಂಡಿದೆ. ವೃತ್ತಿ ಮತ್ತು ಕುಲಮೂಲಗಳು ಈ ಜಾತಿಗಳ ಆಧಾರಗಳು. ಇವು ವ್ಯಕ್ತಿಗಳ ಆಚಾರ ವ್ಯವಹಾರಗಳನ್ನು ಬಹುಮಟ್ಟಿಗೆ ನಿರ್ಧರಿಸುತ್ತಿದ್ದುವಾದರೂ ಇತ್ತೀಚಿನ ಕೈಗಾರಿಕೀಕರಣ, ನವ ಆರ್ಥಿಕ ವ್ಯವಸ್ಥೆ ಮತ್ತು ಹೊಸರೀತಿಯ ಸಾಮಾಜಿಕ ಪ್ರಜ್ಞೆ ಇಂಥವುಗಳ ಬೆಳವಣಿಗೆಯಿಂದಾಗಿ, ವರ್ಗಕಾರೀ ಮತಜಾತಿಗಳಲ್ಲಿ ನಂಬಿಕೆ ಹಾಗೂ ಅವುಗಳ ಪ್ರಭಾವ ಇಳಿಮುಖವಾಗುತ್ತಿರುವಂತೆ ತೋರುತ್ತದೆ.

ಜನವಿಶ್ಲೇಷಣೆಯಲ್ಲಿ ಉಪಯೋಗಿಸಬಹುದಾದ ಇನ್ನೊಂದು ಅಂಶ ಭಾಷೆ. ಕನ್ನಡ ಈ ನಾಡಿನ ಬಹುಸಂಖ್ಯಾತರ ಭಾಷೆ. ಕನ್ನಡದ ಜ್ಞಾತಿವರ್ಗಕ್ಕೆ ಸೇರಿದ ಕೆಲವು ಭಾಷಾ ಪ್ರಭೇದಗಳು ಇಂದಿಗೂ ಹಲವು ಆದಿವಾಸಿಗಳಲ್ಲಿ ಉಳಿದುಕೊಂಡಿವೆ. ಹಾಗೆಯೇ ಪ್ರಾಯಶಃ ಭೌಗೋಳಿಕ ಕಾರಣಗಳಿಂದಾಗಿ ಕನ್ನಡದ ಜೊತೆಯಲ್ಲಿ ಕೊಡಗಿನಲ್ಲಿ ಕೊಡಗು ಭಾಷೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು, ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕೊಂಕಣಿ ಚಾಲ್ತಿಯಲ್ಲಿವೆ. ಅನೇಕ ಚಾರಿತ್ರಿಕ ಕಾರಣಗಳಿಂದ ಉತ್ತರ ಕರ್ಣಾಟಕದ ಅಂಚಿನ ಜಿಲ್ಲೆಗಳಲ್ಲಿ ಮರಾಠಿ, ನಾಡಿನ ಪೂರ್ವ ಸೀಮೆಯಲ್ಲಿ ಅದರಲ್ಲೂ ಕೋಲಾರ ತುಮಕೂರು ಬಳ್ಳಾರಿ ಜಿಲ್ಲೆಗಳ ಭಾಗಗಳಲ್ಲಿ ತೆಲುಗು ಹರಡಿವೆ. ನಾಡಿನ ಹಲವೆಡೆ ಉರ್ದು, ತಮಿಳು, ಮಲಯಾಳ ಭಾಷೆಗಳೂ ಕೆಲಮಟ್ಟಿಗೆ ಪ್ರಚಲಿತವಾಗಿವೆ. ವಿರಳವಾಗಿ ಇತರ ಭಾಷೆಗಳೂ ಕೇಳಿಬರುವುದುಂಟು.

ಕರ್ಣಾಟಕದ ಜನಸಂಖ್ಯೆ ದಿನಂಪ್ರತಿ ಬೆಳೆಯುತ್ತಿದೆ. ನಾಡಿನ ಒಂದು ಕಡೆ ಯಿಂದ ಇನ್ನೊಂದು ಕಡೆಗೆ ಪ್ರಯಾಣಮಾಡಿದರಾಗಲಿ, ಅಥವಾ ಬೆಂಗಳೂರಿನಂಥ ದೊಡ್ಡ ನಗರದ ಜನಸಮೂಹವನ್ನು ವಿಶ್ಲೇಷಿಸಿದರಾಗಲಿ, ಇಲ್ಲಿಯ ಜನರಲ್ಲಿ ಕಂಡುಬರುವ ವೈವಿಧ್ಯ ವೈಶಿಷ್ಟ್ಯಗಳು ಗಮನಾರ್ಹವಾಗಿವೆ. ಲಿಂಗ, ವಯಸ್ಸು, ರೂಪ, ರಂಗು, ದೇಶ, ಭಾಷೆ, ಧಾರ್ಮಿಕ ಪಂಗಡ, ಒಳಪಂಗಡ, ವೃತ್ತಿ, ಕಸಬು, ನಡೆನಂಬಿಕೆಗಳು, ಆರ್ಥಿಕ ಸಾಮಾಜಿಕ ಸ್ತರಗಳು—ಹೀಗೆ ಹಲವು ಅಂಶಗಳು ಈ ವೈವಿಧ್ಯಕ್ಕೆ ಕಾರಣಗಳು. ಆದರೆ ಈ ನಾಡಿನ ಸಾಂಸ್ಕೃತಿಕ ಚೈತನ್ಯ ಇರುವುದು ಈ ವಿವಿಧ ಜನಘಟಕಗಳ ಸಮ

ರಸಸಮ್ಮಿಳನದಲ್ಲಿ. ಕನ್ನಡನಾಡಿನ ಪ್ರಜೆತನ, ಕನ್ನಡತನ ಈ ವೈವಿಧ್ಯದಲ್ಲಿ ಏಕತೆಯನ್ನು ರೂಪಿಸುವ ಮೂಲಶಕ್ತಿ. ಚರಿತ್ರಪೂರ್ವ ಹಾಗೂ ಚಾರಿತ್ರಿಕ ಕಾಲದಿಂದ ನಡೆದು ಬಂದಿರುವ ಈ ವಿವಿಧ ಜನಘಟಕಗಳ ಸಂಘರ್ಷ ಸಮ್ಮಿಳನಗಳಿಂದಾಗಿಯೇ ಇಂದಿನ ಕರ್ಣಾಟಕ ಸಂಸ್ಕೃತಿ ರೂಪುಗೊಂಡಿದೆ. ಈ ವಿವಿಧ ಘಟಕಗಳಲ್ಲಿ ಕಂಡು ಬರುವ ಆಚಾರ ವ್ಯವಹಾರಗಳು, ವಿವಿಧ ಸ್ತರಗಳಲ್ಲಿ ಸ್ಥಳಗಳಲ್ಲಿ ವ್ಯಕ್ತವಾಗುವ ಪ್ರೇಮ ದ್ವೇಷ ಆಕಾಂಕ್ಷೆ ಮುಂತಾದ ವಿವಿಧ ರೀತಿಯ ಮನೋಧರ್ಮಗಳು ಸಾಹಿತ್ಯ ರಚನೆಗೆ ಸಾಮಗ್ರಿಯನ್ನು ಒದಗಿಸುತ್ತವೆ ಹಾಗೂ ಅದನ್ನು ಸಂಪದ್ಭರಿತವಾಗಿಸುತ್ತವೆ.

## ಅಡಿಟಿಪ್ಪಣಿಗಳು

1 *Hyderabad Gazetteer*, 100: *Early History of the Deccan*, I–VI (1960), ಪು. ೪೦ರಲ್ಲಿ ಉದ್ಧೃತ.

2 B. S. Krishnaswamiengar, A Brief History of Karnataka, *HJMU(A)* 21–2, March 1962, p. 57.

3 'ಕನ್ನಡ ವಿಶ್ವಕೋಶ' ಸಂ. ೪ (೧೯೭೨), ಪು. ೨೨.

4 B. S. Krishnaswamiengar, ಪೂರ್ವೋಕ್ತ, ಪು. ೫೭.

5 ರಾ. ಹ. ದೇಶಪಾಂಡೆ, 'ಕರ್ನಾಟಕ ಸಾಮ್ರಾಜ್ಯ' (೧೯೨೬), ಸಂ. ೧, ಭಾಗ ೧, ಪು. ೧_೧೮.

6 'ಸಟೀಕ ಮಹಾಭಾರತ', ತೃತೀಯ ಖಂಡ, ಗೀತಾ ಪ್ರೆಸ್, ಗೋರಖಪುರ.

7 ಎಂ. ಆರ್. ಕಾಳೇ ಸಂಪಾದಿತ ಮುದ್ರಣ, ೧೯೨೪.

8 ಸಂ. ಸಂಕೀಘಟ್ಟಂ ವೆಂಕಟಾಚಾರ್ಯ, ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆ, ಸಂಖ್ಯೆ ೧೫.

9 ಸಂ. ಜೀವಾನಂದ ವಿದ್ಯಾಸಾಗರ ಭಟ್ಟಾಚಾರ್ಯ, 'ಬೃಹತ್ಸಂಹಿತಾ', ಕಲ್ಕತ್ತಾ, ೧೮೮೦.

10 'ಶ್ರೀಮದ್ಭಾಗವತ ಮಹಾಪುರಾಣಮ್' (೪ನೆಯ ಮುದ್ರಣ), ಗೀತಾ ಪ್ರೆಸ್, ಗೋರಖಪುರ.

11 ಸಂ. ಪಾ. ಚಂದ್ರಶೇಖರ ಭಟ್ಟ, ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆ, ಸಂಖ್ಯೆ ೫೭.

12 Ed. C. D. Dalal and R. A. Sastry, *Kavyamimamsa of Rajasekhara* (Third edition), GOS., Vol. I, Oriental Institute, Baroda, 1934, p. 34, l. 3-4.

13 A. S. Altekar, *Rashtrakutas and Their Times*, p. 247.

14 R. Narasimhachar, *History of Kannada Language*, University of Mysore, 1934, p. 34.

15 ಜಿ. ಪಿ. ರಾಜರತ್ನಂ, ಕರ್ನಾಟ(ಕ)—ಕರ್ಣಾಟ(ಕ), ಕಸಾಪ., ೨೩-೩, ೧೯೩೮, ಪು. ೧೮೫_೮೬.

16 *IA*, VIII, p. 174-6. ಉದ್ಧೃತ, ನೋಡಿ :, ಅ.ಟಿ. ೪೩.

17 ಜಿ. ಪಿ. ರಾಜರತ್ನಂ, ಪೂರ್ವೋಕ್ತ, ಕಸಾಪ., ೨೩-೩, ೧೯೩೮, ಪು. ೧೭೬.

18 ಕಸಾಪ., ೪_೪, ಪು. ೨೦೫.

19 ಶಂ. ಬಾ. ಜೋಶಿ, 'ಕನ್ನಡದ ನೆಲೆ', ೧೯೩೯, ಪು. ೪೬.

20 ಅದೇ, ಪು. ೬೫_೬೮.

21 *Comparative Grammar of the Dravidian Languages*, 1956, p. 30-31.
22 ಅದೇ, ಪು. ೫೭೭.
23-4 ಆರ್. ರಘುನಾಥರಾವ್, 'ವ್ಯಾಕರಣೋಪನ್ಯಾಸಮಂಜರಿ', ಪು. ೧೧ ; ಅ.ಟಿ. ೨೪ನ್ನು ಬಿಡಬೇಕು.
25 *EI.*, XII, p. 144.
26 *Early History of the Deccan*, p. 41.
27 *IA.*, 1923, p. 17 ; *JBBRAS.*, LXXIII, p. 491 ; ಕಸಾಪ., ೩-೪, ಪು. ೨೮-೩೪.
28 ಕನ್ನಡ ಶಬ್ದದ ವ್ಯುತ್ಪತ್ತಿ, ಕಸಾಪ., ೩-೪, ಜನವರಿ ೧೯೧೯, ಪು. ೩೦-೩೪.
29 ಪ್ರಕ., ೧೧-೪, ೧೯೩೦, ಪು. ೭-೯.
30 ಕರ್ನಾಟಕ-ಕರ್ಣಾಟಕ : ಈ ಎರಡು ಶಬ್ದಗಳಲ್ಲಿ ಸರಿಯಾದ್ದು ಯಾವುದು.?, ಕಸಾಪ., ೫-೨, ಜುಲೈ ೧೯೨೦, ಪು. ೧೪೧-೪.
31 IA., LVII, p. 175.
32 *History of Kannada Language*, 1934, p. 35.
33 ನೋಡಿ : ಅ.ಟಿ. ೨೮.
34 ರಾ. ಯ. ಧಾರವಾಡಕರ, 'ಕನ್ನಡ ಭಾಷಾಶಾಸ್ತ್ರ', ಪು. ೯೩.
35 ರಾ. ಯ. ಧಾರವಾಡಕರ ಅವರ 'ಕನ್ನಡ ಭಾಷಾಶಾಸ್ತ್ರ'ದಲ್ಲಿ ಉದ್ಧೃತ, ಪು. ೯೩.
36 ಜಯಕ., ಸಂ. ೧೦, ಪು. ೫೫೩-೫೫.
37 'ಸಮ್ಮೇಳನಾಧ್ಯಕ್ಷರ ಭಾಷಣಗಳು', ಸಂ. ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯, ಪು. ೪೩೨-೩೩.
38 'ಕನ್ನಡ'ದ ಸ್ವರೂಪ ನಿರೂಪಣ, 'ನಾಡೋಜ ಪಂಪ', ೧೯೩೮, ಪು. ೧೨೫-೬ ; 'ಕನ್ನಡ ನಾಡೂ ದೇಸೀ ಸಾಹಿತ್ಯವೂ', ಧಾರವಾಡ, ೧೯೫೪, ಪು. ೨೬-೨೭.
39 Karnata, *JAHRS.*, Vol. X, pp. 89-99.
40 ಕನ್ನಡ ನಾಡಿನ ಚರಿತ್ರೆ, 'ಮೈಸೂರು ರಾಜ್ಯ', ೧೯೫೬, ಪು. ೧೪-೧೫.
41 ಶಂ. ಬಾ. ಜೋಶಿ, ಪೂರ್ವೋಕ್ತ, ಪು. ೯೩-೯೫.
42 ರಾ. ಯ. ಧಾರವಾಡಕರ, ಪೂರ್ವೋಕ್ತ, ಪು. ೯೬.
43 'ಕನ್ನಡ ನಾಡಿನ ಚರಿತ್ರೆ' (ಮೊದಲನೆಯ ಭಾಗ), ಕನ್ನಡ ಸಾಹಿತ್ಯ ಪರಿಷತ್ತು, ೧೯೬೪, ಪು. ೫-೬.
44 "ಕರ್ನಾಟಕ" ಎಂಬ ರೂಪವು ಅಸಾಧುವೆ ? ಕಸಾಪ., ೨೩-೩, ಜುಲೈ-ಸೆಪ್ಟೆಂಬರ್ ೧೯೪೮, ಪು. ೧೫೯-೬೨ ; 'ಸಮಾಲೋಕನ', ಪು. ೨೩೮.
45 ಜಿ. ಪಿ. ರಾಜರತ್ನಂ, ಪೂರ್ವೋಕ್ತ , ಕಸಾಪ., ೨೩-೩, ೧೯೩೮.
46 ವಿವರವಾದ ಚರ್ಚೆಗೆ ನೋಡಿ : ಶಂ. ಬಾ. ಜೋಶಿ, ಪೂರ್ವೋಕ್ತ, ಪು. ೪೫-೯೨.
47 *Dravidian Etymological Dictionary*
48 'ಕನ್ನಡ ನಿಘಂಟು', ಸಂ. ೨, ಪು. ೧೫೫೬.
49 *QJMS.*, XI-I, October 1920.
50 ನೋಡಿ : ಅ.ಟಿ. ೪೩.
51 ಕರ್ನಾಟ-ಕರ್ಣಾಟ, ಕಸಾಪ., ೫-೨, ಜುಲೈ ೧೯೨೦, ಪು. ೧೪೫.
52 'ಕರ್ಣಾಟಕ-ಕರ್ನಾಟಕ ಈ ರೂಪಗಳಲ್ಲಿ ಯಾವುದು ಸಾಧು ?' ಶಂ. ಬಾ. ಜೋಶಿ ಅವರ 'ಕನ್ನಡದ ನೆಲೆ' (೧೯೩೯)ಯಲ್ಲಿ ಉದ್ಧೃತ, ಪು. ೭೩.
53 *EI.*, XII, p. 153.

54 *History of Kannada Language* (1934), p. 35; 'ನಾಡೋಜ ಪಂಪ' (೧೯೩೮), ಪು. ೧೨೬.

55 ನೋಡಿ : ಅ.ಟಿ. ೨೬.

56 ಶಂ. ಬಾ. ಜೋಶಿ, ಪೂರ್ವೋಕ್ತ, ಪು. ೭೦–೭೧.

57 ಕರ್ನಾಟ-ಕರ್ಣಾಟ ಶಬ್ದಸಾಧುತ್ವ ವಿಚಾರ, ಕಸಾಪ., ೪-೨, ಜನವರಿ ೧೯೨೦, ಪು. ೨೦೫–೧೨.

58 ಕಸಾಪ., ೪-೨, ೩, ಪು. ೧೭೭-೭೮ ; ಕಸಾಪ., ೩-೪, ಪು. ೨೮-೩೪.

59 ನೋಡಿ : ಅ.ಟಿ. ೩೦.

60 ನೋಡಿ : ಅ.ಟಿ. ೪೪.

61 ನೋಡಿ : ಅ.ಟಿ. ೧೫.

62–3 ಜಿ. ಪಿ. ರಾಜರತ್ನಂ, ಪೂರ್ವೋಕ್ತ, ಪು. ೧೬೩-೬೪.

64 ನೋಡಿ : ಅ.ಟಿ. ೪೪.

65 *EC.*, VI, 162.

66 IA., XI, p. IIIff.

67–8 ನೋಡಿ : ಅ.ಟಿ. ೨೬.

69 *EC.*, III, Md. 78.

70 *EC.*, VII, Sk. 136.

71 *EC.*, VII, Sk. 197.

72 *EC.*, VII, Sk. 95.

73 *EC.*, VI, 33, 34.

74 *EC.*, XII, Pg. 69.

75 *EC.*, III, Ml. 121.

76 *EC.*, VII, Intro. p. 42.

77 *EC.*, IV, Yd. 58, Ch. 92.

78 *EC.*, II, Sb. 249.

79 *EC.*, III, Ng. 1.

80 *EC.*, X, Kl. 106d.

81 ಸಂ. ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪು. ೧೦.

82 ಸಂ. ಎಚ್. ದೇವೀರಪ್ಪ, 'ರಾಮನಾಥಚರಿತ', ಸಂ. ೨, ೧–೨೧.

83 ನೋಡಿ : ಅ.ಟಿ. ೮೧.

84 Ed. P. B. Desai, *A History of Karnataka*, Dharwar, p. 107.

85 D. C. Sircar, *Successors of Satavahanas*, 1939, p. 215.

86–7 Mahishamandala and Mysore State, *QJMS.*, 10-1, 1919, p. 11-36.

88 B. S. Krishnaswamiengar, ಪೂರ್ವೋಕ್ತ, ಪು. ೫೭.

89 ಬಿ. ಎ. ಸಾಲೆತೊರೆ : ಪೂರ್ವೋಕ್ತ, ಪು. ೬೪-೬೫.

90 ಈ ಭಾಗದ ವಿವರಗಳನ್ನು 'ಕರ್ಣಾಟಕದ ಪರಂಪರೆ' ಮೊದಲಾದ ಮೂಲಗಳಿಂದ ಕೂಡಿಸಿದೆ.

91 Winfred Lehman, *Introduction to Historical Linguistics*, Ch. 'Geneological Classification of Languages'.

92 ಭಾಷೆ ಎಂಬ ಶಬ್ದವನ್ನು ವ್ಯಾವಹಾರಿಕವಾಗಿ ಸಂಪನ್ನ ಭಾಷೆಗಳಿಗೂ ಸ್ವತಂತ್ರ ಉಪಭಾಷೆಗಳಿಗೂ, ಸುಸಂಸ್ಕೃತ ಭಾಷೆಗಳಿಂದ ಬೇರ್ಪಡಿಸಲು ಪಾರಿಭಾಷಿಕ ಶಬ್ದವಾದ ಉಪಭಾಷೆ (Dialect)ಯನ್ನು ಸೀಮಿತ ಅರ್ಥದಲ್ಲಿ ಇತರ ಭಾಷೆಗಳಿಗೂ ಬಳಸಲಾಗಿದೆ.

93 R. Caldwell, *CGDL.*, Third edition, 1956, p. 63.

94 T. Burrow, 'The Body of Dravidian and Uralian', *BSOAS.*, XI, 43–46, *Dravidian Studies*, IV.

95 G. A. Grierson, *Linguistic Survey of India*, 1967, p. 282.

96 R. Narasimhachar, *History of Kannada Language*, 1934, p. 7.

97 R. Caldwell, ibid., p. 8.

98 S. K. Chatterji, *Dravidian.*

99 R. Caldwell, ibid., p. 4.

100 K. Ramakrishnayya, *Studies in Dravidian Philology*, Madras, 1935.

101 Kenneth L. Pike and K. H. Gordon, *IJDL.*, 2-1, Jan. 1973, F.N.

102 *Dravidian Linguistics*, A.U., 1969, p. 269–74.

103 B. M. Srikantia, Pūrvada Halagannada and Tamil, Proceedings, 10th Oriental Conference, Tirupati, 1940.

104 R. Caldwell, ibid., p. 87.

105 ಡಿ. ಎಲ್. ನರಸಿಂಹಾಚಾರ್, 'ಪೀಠಿಕೆಗಳು ಲೇಖನಗಳು', ೧೯೭೧, ಪು. ೬೧೬, ಅ.ಟಿ.

106 ಅದೇ, ಪು. ೬೧೭.

107 ಅದೇ, ಪು. ೬೧೮, ಅ.ಟಿ. ೧೬.

108 R. Caldwell, ibid., p. 31.

109 J. Brigel, *A Grammar of the Tulu Language*, p. 31.

110-2 R. Caldwell, ibid., p. 32; 33; 34.

113 R. Narasimhachar, *History of Kannada Language*, 1934, p. 38.

114 M. B. Emeneau, The Vowels of the Badaga Language, *Language*, 15, 1939, p. 43.

115 Kenneth L. Pike and D. J. Gordon, ibid.

116 ತೀ. ನಂ. ಶ್ರೀಕಂಠಯ್ಯ, 'ಕರ್ನಾಟಕದ ಪರಂಪರೆ', ೧, ಪು. ೯೦.

117 Ptolemy's Hippokoura, 'ವೀವಿಗೆ', ಪು. ೯೩–೧೦೩.

118 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು', ಪು. ೧–೧೮.

119 'ಕರ್ನಾಟಕದ ಪರಂಪರೆ', ೧, ಪು. ೨೨೬.

120 ಕನ್ನಡ ಸಾಹಿತ್ಯದ ಹಾಗೂ ಭಾಷೆಯ ಹಳಮೆ, 'ಉಪಾಯನ', ಪು. ೯೪–೧೦೩.

121 ಪ್ರ. ಗೋ. ಕುಲಕರಣಿ, 'ಕನ್ನಡ ಭಾಷೆಯ ಚರಿತ್ರೆ', ಪು. ೬೮–೮೪.

122 'ಕರ್ನಾಟಕದ ಅರಸುಮನೆತನಗಳು', ಸಂ. ೧, ಪು. ೫.

123 Kanarese Words in Desi Lexicon, *ABORI.*, Vol, 12. p. 274–84.

124 Remarks on a Papyrus Oxyrhynchus, JRAS., 1904, p. 399–405; ಮುಂದಿನ ವಾಕ್ಯದ ಆಕರ: MAR., 1926, p. 11-18; 'ಕರ್ನಾಟಕ ಕವಿಚರಿತೆ', ಸಂ. ೧, ಅವತರಣಿಕೆ, ಪು. ೭.

125 Kannada Passages in the Oxyrhynchus Papyri, No. 413, QJMS., Vol. 18, p. 294–341 ; ಮುಂದಿನ ಎರಡು ವಾಕ್ಯಪುಂಜಗಳ ಆಕರ: ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು, ಪ್ರ.ಕ., ಸಂ. ೧೧-೧, ೨ ; 'ಉಪಾಯನ', ಪು. ೯೫-೯೯.

126 A Grammar of the Oldest Kanarese Inscriptions, 1941, Intro. p. xiii.

127 The Greek Farce with Old Kannada Passages, *Ancient Karnataka*, Vol. I, p. 584–97.

128 Karnataka Through the Agesನಲ್ಲಿ ಉದ್ಧೃತ, ಪು. ೭೮ ; 'ಕರ್ಣಾಟಕದ ಪರಂಪರೆ', ಪು. ೯೧.

129 ತೇದಿಯುಳ್ಳ ಪ್ರಾಚೀನತಮ ಕನ್ನಡ ಪದ, ಸಾಧನೆ, ಸಂ. ೧-೩.

130 'ಕರ್ಣಾಟಕದ ಪರಂಪರೆ', ಪು. ೯೦-೯೧ ; ಮುಂದಿನ ವಾಕ್ಯಪುಂಜದ ಉದ್ಧೃತಿಗಳ ಆಕರ: 'ಕರ್ಣಾಟಕದ ಪರಂಪರೆ', ಪು. ೧೩೦ ; 'ಕನ್ನಡ ಗ್ರಂಥ ಸಂಪಾದನೆ', ಪು. ೩೨.

131 ಅತ್ಯಂತ ಪ್ರಾಚೀನ ಕನ್ನಡ ಶಾಸನ, ಪ್ರ.ಕ., ಸಂ. ೨೦-೩, ಪು. ೩೮.

132 'ಕನ್ನಡ ಸಾಹಿತ್ಯ ಚರಿತ್ರೆ', ೧೯೭೧, ಪು. ೧೦-೧೧.

133 ಈ ಕೆಲವು ಆಕರಗಳನ್ನು ನೋಡಿ: ಆರ್. ರಘುನಾಥರಾವ್, ಕಸಾಪ., ೧-೪, ೧೯೧೭, ಪು. ೩೩೫-೬೬ ; 'ವ್ಯಾಕರಣೋಪನ್ಯಾಸ ಮಂಜರಿ', ಚತುರ್ಥೋಪನ್ಯಾಸ, ಪು. ೩೫-೬೬; ಆರ್. ನರಸಿಂಹಾಚಾರ್, 'ಕರ್ಣಾಟಕ ಕವಿಚರಿತೆ', ಸಂ. ೨, ಅವತರಣಿಕೆ, ಪು. ೨೩-೨೫ ; *HKL*., ೧೯೩೪, ಪು. ೧೨೧-೨೪ ; ಪತ್ತಂಗಡಿ ನಾರಾಯಣರಾವ್, ಕಸಾಪ., ಸಂ. ೩-೧, ೧೯೧೮, ಪು. ೧೦೦-೧೦೫; 'ಕನ್ನಡ ಕೈಪಿಡಿ', ಸಂ. ೧, ಭಾಗ ೪, ೧೯೫೫, ಪು. ೩೦೦-೩೦೨ ; ಪ್ರ. ಗೋ. ಕುಲಕರಣಿ, 'ಕನ್ನಡ ಭಾಷೆಯ ಚರಿತ್ರೆ', ೧೯೬೭ ; ಎಂ. ವಿ. ಸೀತಾರಾಮಯ್ಯ, 'ಶ್ರೀವಿಜಯಕೃತ ಕವಿರಾಜಮಾರ್ಗ' ೧೯೬೮, ಪೀಠಿಕೆ, lxiv–lxvii.

134 ಆ್ಯ, ಅ: ಮತ್ತು ಒ: ಗಳಿಗೆ ಅಂತರ್ರಾಷ್ಟ್ರೀಯ ಧ್ವನಿವರ್ಣಮಾಲೆ ಸಂಕೇತಗಳು x, ə ಮತ್ತು ɔ.

135 Dr. H. M. Nayak, *Kannada Literary and Colloquial*, p. 44.

136 W. Mc Cormark, *Kannada—A Cultural Introduction to the Spoken Styles of the Language*, Loan words, p. 6.

137 ಡಾ. ಎಂ. ಚಿದಾನಂದಮೂರ್ತಿ, ಹಳೆಯ ಮೈಸೂರು ಕನ್ನಡ, 'ಸುವರ್ಣ ಸಂಚಯ' ಪು. ೨೬೪ ; ವೈದೃಶ್ಯ ಸ್ಪಷ್ಟವಿಲ್ಲವಿರುವೆಡೆ ದ > ಜ ಆಗುತ್ತದೆ. ದಿನ > ಜಿನ, ದಿವಸ > ಜಿವಸ / ಜಿಂವಸ.

138 Dr. H. M. Nayak, ibid., p. 69.

139–40 D. N. S. Bhat, *An Outline Grammar of Havyaka*, 1971, p. 2.

141 ಎಂ. ಮರಿಯಪ್ಪ ಭಟ್ಟ, ದಕ್ಷಿಣ ಕನ್ನಡದ ಕನ್ನಡ, 'ಸುವರ್ಣ ಸಂಚಯ', ಪು. ೨೩೬ ; D. N. S. Bhat, ibid., p. 1.

142 ಇಲ್ಲಿ ಹೇಳಲಾಗಿರುವ ಸ್ವರಗಳಿಗೆ IPA (ಅಂತರ್ರಾಷ್ಟ್ರೀಯ ಧ್ವನಿವರ್ಣಮಾಲೆ)ಯಲ್ಲಿರುವ E, f, ə ಮತ್ತು ɔ ಸಂಕೇತಗಳು ಅನ್ವಯಿಸುತ್ತವೆ.

143 K. G. Shastri, *The Havyaka Dialect of North Canara*, p. 73.

144 ಎಂ. ಮರಿಯಪ್ಪ ಭಟ್ಟ, ಪೂರ್ವೋಕ್ತ, ಪು. ೨೯೦.

145 A. S. Acharya, *Halakki Kannada*, p. 3.

146 A. S. Acharya, *Barkur Kannada*, p. 2; ಬಾರ್ಕೂರ್ ಎಂದು ರೂಪ.

147 D. N. S. Bhat, *The Koraga Language*, p. 1.

148 ಡಾ. ಆರ್. ಸಿ. ಹಿರೇಮಠ, ಧಾರವಾಡ-ಬಿಜಾಪುರಗಳ ಕನ್ನಡ, 'ಸುವರ್ಣ ಸಂಚಯ' ಪು. ೨೭೩.

149 ಡಾ. ಆರ್. ಸಿ. ಹಿರೇಮಠ, ಪೂರ್ವೋಕ್ತ, ಪು. ೨೭೭.

150 T. N. Srikantia, Affricates in Kannada Speech, *Indian Linguistics*, 1954.

151 ಜನಗಳನ್ನು ವರ್ಗೀಕರಿಸುವಲ್ಲಿ ಮಾನವಶಾಸ್ತ್ರಜ್ಞರು ಅನುಸರಿಸುವ ಒಂದು ವಿಧಾನ. ಎಲ್ಲ ಮಾನವರನ್ನೂ ಅವರ ತಲೆಯ ಮೇಲುಭಾಗದ ಉದ್ದ ಅಗಲಗಳಲ್ಲಿರುವ ಪ್ರಮಾಣದಿಂದ ಉದ್ದ ತಲೆ, ದುಂಡು ತಲೆ, ಮತ್ತು ಅಗಲ ತಲೆಯುಳ್ಳವರೆಂದು ವರ್ಗೀಕರಿಸಬಹುದು.

152 ಉದಾಹರಣೆಗೆ: ೧೯೭೧ರ ಜನಗಣತಿಯ ಪ್ರಕಾರ ಸೋಲಿಗರ ಸಂಖ್ಯೆ ೧೦,೬೫೫; ಭಿಲ್ಲ ೨೧೭; ಕೊರಮ ೧೪೭. ನೋಡಿ: 'ಕನ್ನಡ ವಿಶ್ವಕೋಶ', ಸಂ. ೪, ಪು, ೫೧.

153 ಕಾಲಾಂತರದಿಂದ ಬೆಳೆಯುತ್ತಿರುವ ಸಂಪರ್ಕಗಳಿಂದ ಈ ಆದಿವಾಸಿ ಸಂಸ್ಕೃತಿಗಳಲ್ಲಿಯೂ ಸುತ್ತಲಿನ ಸಂಸ್ಕೃತಿಯ ಪ್ರಭಾವ ಕಂಡುಬರುವುದುಂಟು. ಆದರೆ ಇದು ಅಷ್ಟು ಗಾಢವಾಗಿರುವುದಿಲ್ಲ. ಇತ್ತೀಚೆಗೆ ಸರ್ಕಾರದ ಮುತುವತ್ತಿನಿಂದ ಈ ಆದಿವಾಸಿಗಳ ಜೀವನವಿಧಾನ ಸುಧಾರಿತವಾಗುತ್ತಿದೆ.

154 ಸೋಲಿಗರಂಥ ಆದಿವಾಸಿಗಳು ಕೆಲವರು ಪರಸ್ಪರವಾಗಿ ಮಾತನಾಡಲು ಒಂದು ರೀತಿಯ ಭಾಷೆಯನ್ನೂ ಹೊರಗಿನವರೊಡನೆ ಇನ್ನೊಂದು ರೀತಿಯ ಭಾಷೆಯನ್ನೂ ಉಪಯೋಗಿಸುವರೆಂಬುದಾಗಿ ಹೇಳಲಾಗಿದೆ.

ಅಧ್ಯಾಯ ಐದು

# ಕರ್ನಾಟಕ ಚರಿತ್ರೆಯ ಸಂಕ್ಷಿಪ್ತ ಅವಲೋಕನ

## ಪೂರ್ವ ಚರಿತ್ರೆ

ಕರ್ನಾಟಕದ ಪ್ರಾಗೈತಿಹಾಸಿಕಕಾಲದ ಸಂಸ್ಕೃತಿಗಳು ಹೇಗಿದ್ದವೆಂದು ತಿಳಿಯಲು ನಮಗೆ ಸಾಧ್ಯವಾಗಿರುವುದು ಭೂಶೋಧನೆಗಳಿಂದ, ಅಲ್ಲಿ ದೊರೆತ ಬಗೆಬಗೆಯ ಉಪ ರಣಗಳು ಆಯುಧಗಳು ಪಾತ್ರೆ ಪದಾರ್ಥಗಳಿಂದ. ಸು. ನೂರು ವರ್ಷಗಳಿಂದ ೀಚೆಗೆ ಶಿಲಾಯುಗ ಸಂಸ್ಕೃತಿಗಳನ್ನು ಗೊತ್ತುಹಚ್ಚುವ ಪ್ರಯತ್ನ ನಮ್ಮ ನಾಡಿನಲ್ಲಿ ಡೆದಿದೆ. ಮೆಡೋಸ್ ಟೇಲರ್, ನ್ಯೂಬೋಲ್ಡ್, ರಾಬರ್ಟ್ ಬ್ರೂಸ್‌ಫೂಟ್, ಯೋನಾರ್ಡ್ ಮನ್ನ್, ಕೆ. ಎಂ. ಅಹಮದ್, ವೀಲರ್, ಸುಬ್ಬರಾವ್, ಥಾಪರ್, ಲ್ಚಿನ್, ಎಂ. ಎಚ್. ಕೃಷ್ಣ, ಎಂ. ಶೇಷಾದ್ರಿ ಮೊದಲಾದ ಪುರಾತತ್ತ್ವಜ್ಞರು ಮತ್ತು ತಿಹಾಸಶಾಸ್ತ್ರಜ್ಞರು ಆ ಪ್ರಯತ್ನದಲ್ಲಿ ಪಾಲುಗೊಂಡಿದ್ದಾರೆ. ಇವರು ಕರ್ನಾಟಕದ ವಿಧ ಭಾಗಗಳಲ್ಲಿ ಹಲವು ನಿವೇಶನಗಳನ್ನು ಪರೀಕ್ಷಿಸಿ ಶಿಲಾಯುಗ ಸಂಸ್ಕೃತಿಯ ನಾನಾ ಂಶಗಳನ್ನು ಗುರುತಿಸಿದ್ದಾರೆ. ಪೂರ್ವ, ಮಧ್ಯ, ಸೂಕ್ಷ್ಮ, ಹಾಗೂ ನವ ಶಿಲಾಯುಗ ಂಸ್ಕೃತಿಗಳ ಕುರುಹುಗಳು ಅಲ್ಲಲ್ಲಿ ಕಂಡುಬಂದಿವೆ. ಸಮಗ್ರ ಪರಿಶೀಲನೆ ಇನ್ನೂ ಡೆದಿಲ್ಲದಿದ್ದರೂ ನಡೆದಿರುವಷ್ಟು ಪರಿಶೀಲನೆಯಿಂದ ಈ ಪ್ರಾಂತದ ಪುರಾತನ ಂಸ್ಕೃತಿಯ ಸಾಮಾನ್ಯ ಸ್ವರೂಪವನ್ನು ನಾವು ತಿಳಿಯಬಹುದಾಗಿದೆ.

ಚರಿತ್ರಪೂರ್ವಕಾಲದಲ್ಲಿ, ಕರ್ನಾಟಕದಲ್ಲಿ ಯಾವ ಬಗೆಯ ಬುಡಕಟ್ಟಿನ ಜನ ಲಸಿದ್ದರೆಂಬುದನ್ನೂ ಅವರ ದೈಹಿಕ ಗುಣಲಕ್ಷಣಗಳನ್ನೂ ಹಿಂದಿನ ಅಧ್ಯಾಯದಲ್ಲಿ ಾವು ಸ್ವಲ್ಪಮಟ್ಟಿಗೆ ಪರಿಚಯ ಮಾಡಿಕೊಂಡಿದ್ದೇವೆ. ವಾನರ ರೂಪಗಳು ಭಾರತದಲ್ಲಿ ಕ್ಕಿದ್ದರೂ ಮನುಷ್ಯನ ನೇರವಾದ ಪೂರ್ವಜರ (anthropoid anscestors) ವಶೇಷಗಳು ಇನ್ನೂ ಸಿಕ್ಕಿಲ್ಲ. ಈ ಬಗ್ಗೆ ಇನ್ನೂ ಬೇಕಾದಷ್ಟು ಶೋಧ ನಡೆಯ ೇಕಾಗಿದೆ. ದಕ್ಷಿಣ ಭಾರತದ ನೆಲೆಗಳಲ್ಲೂ ವಿಂಧ್ಯಪರ್ವತದ ಗುಹೆಗಳಲ್ಲೂ ಅನೇಕ ಗೆತಗಳನ್ನು ಮಾಡಿ ಶೋಧ ನಡೆಸಿದರೆ, ಬಹುಶಃ ಅನೇಕ ಹೊಸ ಅಂಶಗಳು ಹೊರ ಟ್ಟು ವಾನರ ಕುನರ ವಂಶಗಳ ಇರುವಿಕೆಗೆ ಸಂಬಂಧವೇರ್ಪಡಬಹುದು, ಹಾಗೂ ರ್ನಾಟಕದಲ್ಲಿನ ಪ್ರಾಗೈತಿಹಾಸಿಕ ಮಾನವರ ಬಗ್ಗೆ ಬೆಳಕು ಬೀಳಬಹುದು.

ದಕ್ಷಿಣಭಾರತದಲ್ಲಿ ಗೋದಾವರಿ ಮತ್ತು ನರ್ಮದಾ ನದಿಗಳ ಕಣಿವೆಗಳಲ್ಲಿ ಪ್ರಾಚೀನ ಶಿಲಾ ಉಪಕರಣಗಳ ಜತೆಗೆ ಸಿಕ್ಕಿರುವ ಪ್ರಾಣಿಗಳ ಪಳೆಯುಳಿಕೆಗಳ ಆಧಾರದ ಮೇಲೆ ನಾಲ್ಕು ಲಕ್ಷ ವರ್ಷಗಳ ಹಿಂದೆ ಅಲ್ಲಿ ಮಾನವ ವಾಸವಾಗಿದ್ದ ಎಂದು ಊಹಿಸಲಾಗಿದೆ. ಈ ಕಾಲದ ಅವಶೇಷಗಳನ್ನು ಪ್ರಾಚೀನ ಶಿಲಾಯುಗಕ್ಕೆ ಸೇರಿಸುತ್ತಾರೆ. ಈ ಶಿಲಾಯುಗ ಸಂಸ್ಕೃತಿಯು ಪ್ರಪಂಚದ ಎಲ್ಲಾ ಭಾಗಗಳಲ್ಲೂ ಬಹುಶಃ ಬಹಳ ಮಂದಗತಿಯ ಪ್ರಗತಿಯನ್ನು ತೋರಿಸುವಂಥದಾಗಿ ನೆಲಸಿತ್ತು. ಉಪಕರಣಗಳನ್ನು ಮಾಡುವ ಪದ್ಧತಿ ಹಳೆಯ ಶಿಲಾಯುಗದಲ್ಲಿ ಅಂತರಖಂಡ ಪ್ರಸಾರ (Trans-continental distribution) ಉಳ್ಳದ್ದಾಗಿತ್ತು.

ಕರ್ಣಾಟಕದಲ್ಲಿ ಪೂರ್ವಶಿಲಾಯುಗದ ಸಂಸ್ಕೃತಿಯ ನಿವೇಶನಗಳು ಕೆಲವು ಕಂಡು ಬಂದಿವೆ. ಕ್ರಿ.ಶ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ರಾಬರ್ಟ್ ಬ್ರೂಸ್‌ಫ್ರೂಟ್ ಮೊದಲುಮಾಡಿ ಈಚೆಗೆ ಹಲವರು ಅವನ್ನು ಪತ್ತೆಮಾಡಿದ್ದಾರೆ. ತುಮಕೂರು ಜಿಲ್ಲೆಯ ಕಿಬ್ಬನಹಳ್ಳಿಯಲ್ಲಿಯೂ ಮೈಸೂರು ಜಿಲ್ಲೆಯ ರಂಗನಾಥಪುರ, ಹಾಸನ ಜಿಲ್ಲೆಯ ಕರಡಿಗುಡ್ಡ, ಚಿತ್ರದುರ್ಗ ಜಿಲ್ಲೆಯ ತಾಳ್ಯ, ಚಿಕ್ಕಮಗಳೂರು ಜಿಲ್ಲೆಯ ಕಡೂರು, ನಿಡುಘಟ್ಟ, ಲಿಂಗದಹಳ್ಳಿ ಮತ್ತು ಶಿವಮೊಗ್ಗ ಜಿಲ್ಲೆಯ ನ್ಯಾಮತಿ ಈ ಕೆಲವು ಸ್ಥಳಗಳಲ್ಲಿಯೂ ಹಾಗೆಯೇ ಉತ್ತರ ಕರ್ಣಾಟಕದ ಬಿಜಾಪುರ ಜಿಲ್ಲೆಯ ಬಾಗಲುಕೋಟೆ, ಪಟ್ಟದಕಲ್ಲು, ಬಾದಾಮಿ, ನಂದಿಕೇಶ್ವರ ಮೊದಲಾದೆಡೆಗಳಲ್ಲೂ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಸ್ಥಳಗಳಲ್ಲೂ ತುಂಗಭದ್ರಾ ದಡದ ನಿಟ್ಟೂರು, ಮಲಪ್ರಭಾ ನದೀ ದಂಡೆಯ–ಮುಖ್ಯವಾಗಿ ಮಲಪ್ರಭಾ ತೀರದ—ಖ್ಯಾಡ್, ಮೆಣಸಗಿ, ಹಿರೇಮಾಲಂಗಿ, ಆಲೂರು, ತಮ್ಮಿನಹಾಳು ಮೊದಲಾದ ನೆಲೆಗಳಲ್ಲೂ ಅಬ್ಬೆವಿಲಿಯನ್ ಮತ್ತು ಅಷ್ಯೂಲಿಯನ್ ಪ್ರಭೇದಗಳಿಗೆ ಸೇರಿದ ಕೈಗೊಡಲಿಗಳೂ ಇತರ ಆಯುಧಗಳೂ ದೊರೆತಿವೆ. ಕರ್ಣಾಟಕದಲ್ಲಿ ಈ ಕಾಲದಲ್ಲಿ ಶಿಲಾಯುಧ ತಯಾರಿಕೆಗೆ ಕ್ವಾರ್ಟ್ಜೈಟ್ (Quartzite) ಎಂಬ ಕಲ್ಲು ಬಳಕೆಯಲ್ಲಿದ್ದಿತು. ರೂಪ, ವಿಧ ಮತ್ತು ತಯಾರಿಕೆಯ ತಂತ್ರಗಳಾವರೋ ಬೇರೆಡೆಗಳಲ್ಲಿ ಕಂಡುಬರದಿರುವ, ಉಂಡೆಕಲ್ಲು ವಿಧಾನದಿಂದ ಮಾಡಿದ ಕೈಕೊಡಲಿ, ಛೇದಕ ಮತ್ತು ಒರೆಯುವ ಸಾಧನಗಳೇ ಆಗಿದ್ದುವು. ಈ ಜನರ ಮುಖ್ಯ ಕಸಬು ಬೇಟೆಯಾಡುವುದಾಗಿದ್ದು ಆಗಾಗ್ಗೆ ಈ ಉದ್ದೇಶಕ್ಕಾಗಿ ಅವರು ವಲಸೆ ಹೋಗಬೇಕಾಗಿತ್ತು. ಕಿಬ್ಬನಹಳ್ಳಿಯ ಆಯುಧಗಳನ್ನು ಪರೀಕ್ಷಿಸಿದ ಎಂ. ಎಚ್. ಕೃಷ್ಣರು ಬೃಹದುದರ, ಲಘೂದರ ಮತ್ತು ಶಲಕಶಿಲೆಯ ಆಯುಧಗಳೆಂದು ಗುರುತಿಸಿ ೩೦,೦೦೦ ವರ್ಷಗಳ ಕೆಳಗೆ ಕನ್ನಡ ನಾಡಿನಲ್ಲಿ ಕಾಡು ಮನುಷ್ಯರು ಜೀವಿಸಿದ್ದರೆಂದು ಹೇಳಬಹುದು ಎಂದಿದ್ದಾರೆ. ಈಚೆಗೆ ಇಲ್ಲಿ ದೊರೆಯುವ ಆಯುಧಗಳು ಬಗೆಬಗೆಯಾಗಿದ್ದು ಅವು ಮಿಶ್ರ ಸಂಸ್ಕೃತಿಯನ್ನು ತೋರಿಸುತ್ತವೆಯೆಂದು ಪುರಾತತ್ತ್ವಜ್ಞರು ಭಾವಿಸಿದ್ದಾರೆ. ಈ ಕಾಲದ ಮಾನವ ಪಳೆಯುಳಿಕೆಗಳು ಕರ್ಣಾಟಕದಲ್ಲಿ ಕಂಡುಬಂದಿಲ್ಲ. ಏಷ್ಯದ ಅಥವಾ ಆಫ್ರಿಕದ ಆದಿಮಾನವ ಸಂತತಿಗೆ ಸೇರಿದ ಮಾನವನೂ ನೆರೆನಾಡಿನ ನದೀತೀರ ಪ್ರದೇಶಗಳಲ್ಲಿ

ದೊರೆತಿರುವಂತೆ ಆನೆ ಮೊದಲಾದ ಪ್ರಾಣಿಗಳೂ ಇಲ್ಲಿ ಕೂಡ ಇದ್ದಿರಬಹುದು ಎಂದು ಊಹಿಸಲಾಗಿದೆ.

ವಲಸೆಗಾರರಾದ ಬೇಟೆಗಾರ ಜನಾಂಗದ ಅನಂತರ ಕಾಲದ ಸಂಸ್ಕೃತಿಗಳೂ ಕರ್ನಾಟಕದ ಮೇಲೆ ಹೇಳಿದ ಪ್ರದೇಶಗಳಲ್ಲಿ ಕಂಡುಬಂದಿವೆ. ಪೂರ್ವ ಶಿಲಾಯುಗ ಸಂಸ್ಕೃತಿ ಕ್ಷೀಣಿಸಿ ಮಧ್ಯಶಿಲಾಯುಗ ಸಂಸ್ಕೃತಿ ಕ್ರಮೇಣ ಕಾಣಿಸಿಕೊಂಡಿತು. ಈ ಸಂಸ್ಕೃತಿಯ ಸ್ವರೂಪ ಡಾ. ಸಾಂಕಲಿಯ ಅವರ ಸಂಶೋಧನೆಯಿಂದ ಸ್ಪಷ್ಟಪಟ್ಟಿತು. ಮುಖ್ಯವಾಗಿ ಮಲಪ್ರಭಾ ನದೀ ತೀರದ ತಮ್ಮಿನಹಾಳು, ಘಟಪ್ರಭಾ ನದೀ ತೀರದ ಬಾಗಲುಕೋಟೆ ತಾಳಿಕೋಟೆಯ ಬಳಿಯಿರುವ ಸಾಲ್ವಡಗಿ ಮತ್ತು ಇತರ ನೆಲೆಗಳಲ್ಲಿ ಇವರ ಕುರುಹುಗಳು ಕಂಡಿವೆ. ಈ ಕಾಲದಲ್ಲಿ ಹಿಂದಿನ ರೀತಿಯ ದಪ್ಪ ಒರಟು ಆಯುಧಗಳಿಗೆ ಬದಲಾಗಿ ಬಹಳ ನುಣುಪಾದ ಚರ್ಟ್ ಜಾಸ್ಪರ್ ಮುಂತಾದ ಕಲ್ಲುಗಳಿಂದ ಮಾಡಿದ ಆಯುಧಗಳು ಬಳಕೆಗೆ ಬಂದುವು. ಇವು ಆಕಾರದಲ್ಲಿ ಬೇರೆ ರೀತಿಯವು, ಗಾತ್ರದಲ್ಲಿ ಚಿಕ್ಕವು. ಆಯುಧಗಳನ್ನು ಉಂಡೆಕಲ್ಲಿನಿಂದ ಮಾಡುವುದರ ಬದಲಾಗಿ ಎಬ್ಬಿಸಿದ ಚಕ್ಕೆಗಳಿಂದಲೇ ತಯಾರಿಸುವ ರೂಢಿ ಬಂದಿತು. ಚರ್ಮ, ಮರ ಇತ್ಯಾದಿಗಳನ್ನು ಸಂಸ್ಕರಿಸಲು ಉಪಯೋಗಿಸುತ್ತಿದ್ದ ಚಕ್ಕೆ, ಒರೆಯುವ ಸಾಧನಗಳು ಮತ್ತು ಪ್ರಾಯಶಃ ಬಾಣ ಅಥವಾ ಈಟಿಗಾಗಿ ಉಪಯೋಗಿಸುತ್ತಿದ್ದ ಕಲ್ಲಿನ ಮೊನೆಗಳು ಈ ಕಾಲದ ಮುಖ್ಯ ಆಯುಧರೀತಿಗಳು. ಈ ಸಂಸ್ಕೃತಿಗೂ ಆಫ್ರಿಕ ಮತ್ತು ಪಶ್ಚಿಮ ಏಷ್ಯಾ ಪ್ರದೇಶಗಳಲ್ಲಿದ್ದ ಕೆಲವು ಸಂಸ್ಕೃತಿಗಳಿಗೂ ಸ್ವಲ್ಪಮಟ್ಟಿಗೆ ಹೋಲಿಕೆಯಿದೆಯಾದರೂ ಇವುಗಳ ಪರಸ್ಪರ ಸಂಬಂಧ ಸ್ಪಷ್ಟವಾಗಿಲ್ಲ. ಈ ಸಂಸ್ಕೃತಿಯ ಕಾಲವ್ಯಾಪ್ತಿಯೂ ಅಷ್ಟೇ. ಆದರೆ ಮಧ್ಯ ಪ್ಲೀಸ್ಟೋಸೀನ್ ಯುಗದ ಅಂತ್ಯದಲ್ಲೆಲ್ಲೋ ಆರಂಭವಾಗಿ ಉತ್ತರ ಪ್ಲೀಸ್ಟೋಸೀನ್‌ನಲ್ಲೂ ಮುಂದುವರಿದಿರಬಹುದೆಂದು ವಿದ್ವಾಂಸರ ಊಹೆ.

ಇದರ ಮುಂದಿನ ಘಟ್ಟ ಅಂತ್ಯಪೂರ್ವ ಶಿಲಾಯುಗ. ಈ ಕಾಲದ ಸಂಸ್ಕೃತಿಯ ಇರುವು ಕರ್ನಾಟಕದಲ್ಲಿ ಅಸ್ಪಷ್ಟ. ಆದರೆ ಅದರ ಬಳಿಕದ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಕೆಲವು ಕುರುಹುಗಳು ಕಂಡುಬಂದಿವೆ. ಈಗ ಬಳಸುತ್ತಿದ್ದ ಆಯುಧಗಳಾದರೋ ಅಗೇಟ್, ಚರ್ಟ್, ಕ್ವಾರ್ಟ್ಜ್, ಜಾಸ್ಪರ್ ಮುಂತಾದ ನುಣುಪು ಕಲ್ಲಿನಿಂದ ಮಾಡಿದವು. ಇವು ವಿಶೇಷವಾಗಿ ಪಟ್ಟಿ ಚಕ್ಕೆಗಳನ್ನು ವಿವಿಧರೂಪಗಳಿಗೆ ಪರಿವರ್ತಿಸಿ ಮಾಡಿದವುಗಳಾಗಿದ್ದವು. ಅಲ್ಲದೆ ಗಾತ್ರದಲ್ಲಿ ಬಹು ಚಿಕ್ಕವು. ಕೆಲವು ಒಂದು ಸೆಂಟಿಮೀಟರ್‌ಗಿಂತ ಹೆಚ್ಚು ಉದ್ದವಿರುವುದಿಲ್ಲ. ಆದ್ದರಿಂದ ಈ ಆಯುಧಗಳನ್ನು ಸೂಕ್ಷ್ಮಶಿಲಾಯುಧಗಳೆಂದೂ ಈ ಸಂಸ್ಕೃತಿಯನ್ನು ಸೂಕ್ಷ್ಮಶಿಲಾಯುಧ ಸಂಸ್ಕೃತಿಯೆಂದೂ ಹೆಸರಿಸುವ ರೂಢಿಯಿದೆ. ಭಾರತದಲ್ಲಿ ಇವುಗಳನ್ನು ಅಂತ್ಯ ಶಿಲಾಯುಗ ಸಂಸ್ಕೃತಿ ಎಂದು ಹೆಸರಿಸಿದ್ದಾರೆ. ಈ ಕಾಲದಲ್ಲಿ ಮೊನೆಗಳು, ಒರೆಯುವ ಸಾಧನಗಳು, ಚಾಕು ರೀತಿಯ ಪಟ್ಟಿಗಳು, ತ್ರಿಕೋಣ ಚತುಷ್ಕೋಣ ಮತ್ತು ಅರ್ಧಚಂದ್ರಾಕಾರದ ಆಯುಧಗಳು ಉಪಯೋಗದಲ್ಲಿದ್ದವು. ಹಲವು ಚಿಕ್ಕ ಆಯುಧಗಳನ್ನು ಬೇರೆ ಬೇರೆ ರೀತಿಯಾಗಿ ಮರದ

ಅಥವ ಎಲುಬಿನ ತುಂಡುಗಳಿಗೆ ಜೋಡಿಸಿ ಬಾಣ, ಕತ್ತಿ, ಕುಡುಗೋಲು ಮುಂತಾದ ಸಲಕರಣೆಗಳನ್ನು ಮಾಡಿಕೊಳ್ಳುವುದು ರೂಢಿಯಲ್ಲಿತ್ತೆಂದು ತೋರುತ್ತದೆ. ಗುಹೆಗಳಲ್ಲೂ ಗುಡಿಸಲುಗಳಲ್ಲೂ ವಾಸಿಸುತ್ತಿದ್ದ ಈ ಕಾಲದ ಮಾನವನ ಜೀವನ ನಿರ್ವಹಣೆಗೆ ಬೇಟೆ ಮತ್ತು ಮೀನು ಹಿಡಿಯುವುದು ಆಧಾರವಾಗಿತ್ತು. ಪ್ರಾಯಃ ಸಾಮಾಜಿಕ ಜೀವನದಲ್ಲಿ ಸಮಾನ ಸಮಸ್ಯೆಗಳ ಪರಿಹಾರಕ್ಕಾಗಿ ಮನೋರಂಜನೆಗಾಗಿ ಒಗ್ಗೂಡುತ್ತಿದ್ದಿರಬಹುದು.

ಕರ್ನಾಟಕದಲ್ಲಿ ಈ ಸಂಸ್ಕೃತಿಯ ಅವಶೇಷಗಳು ಬಯಲು ಪ್ರದೇಶದ ವಿವಿಧೆಡೆಗಳಲ್ಲಿ ದೊರೆತಿವೆ. ಗುಲ್ಬರ್ಗ ಜಿಲ್ಲೆಯ ಗುಲ್ಬಾಲ್, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಬೆಂಗಳೂರು ಜಿಲ್ಲೆಯ ಜಾಲಹಳ್ಳಿ, ತುಮಕೂರು ಜಿಲ್ಲೆಯ ಕಿಬ್ಬನಹಳ್ಳಿ ಇವು ಮುಖ್ಯವಾದ ಅಂತ್ಯ ಶಿಲಾಯುಗ ಸಂಸ್ಕೃತಿಯ ನೆಲೆಗಳೆಂದು ಹೆಸರಿಸಬಹುದು.

ಕೃಷ್ಣಾ ತುಂಗಭದ್ರಾ ನದಿಗಳ ನಡುವಿನ ರಾಯಚೂರು ಜಿಲ್ಲೆಯ ಮೈದಾನ ಪ್ರದೇಶವೂ ಇನ್ನೂ ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆಯೂ ನವಶಿಲಾಯುಗ ಸಂಸ್ಕೃತಿಯ ಕೇಂದ್ರಭೂಮಿ. ಉತ್ತರ ಕರ್ನಾಟಕದಲ್ಲಿ ಬೆಟ್ಟಗಳ ಮೇಲೆ ಮತ್ತು ತಪ್ಪಲುಗಳಲ್ಲಿ ಈಯುಗದ ಜನರು ಪಶುಪಾಲನೆ ಮಾಡಿಕೊಂಡು ವಾಸಿಸುತ್ತಿದ್ದರು. ಈ ಕಾಲದ ನಿವೇಶನಗಳ ಉತ್ಖನನಗಳು ಗುಲ್ಬರ್ಗ ಜಿಲ್ಲೆಯ ಕೊಡೆಕಲ್, ಚಿತ್ರದುರ್ಗದ ಬ್ರಹ್ಮಗಿರಿ, ಬಳ್ಳಾರಿಯ ಸಂಗನಕಲ್ಲು, ತೆಕ್ಕಲಕೋಟೆ, ಕುಪ್ಪಗಲ್ಲು, ರಾಯಚೂರಿನ ಮಾಸ್ಕಿ ಪಿಕ್ಲಿಹಾಳ್, ಮೈಸೂರಿನ ತಿರುಮಕೂಡ್ಲು ನರಸೀಪುರ, ಹೆಮ್ಮಿಗೆ, ಬೂದಿತಿಟ್ಟು ಮೊದಲಾದ ಕಡೆಗಳಲ್ಲಿ ತಕ್ಕಮಟ್ಟಿಗೆ ವ್ಯಾಪಕವಾಗಿ ನಡೆದಿವೆ. ನಯಗೊಳಿಸಿದ ಕಲ್ಲು ಕೊಡಲಿಗಳ ಸಂಸ್ಕೃತಿಯೆಂದು ಹೆಸರಾದ ಈ ನವಶಿಲಾಯುಗ ಬೌದ್ಧಿಕವಾಗಿಯೂ ಸಾಮಾಜಿಕವಾಗಿಯೂ ಕೆಲಮಟ್ಟಿಗೆ ಮುಂದುವರಿದುದಾಗಿದ್ದು, ಆಹಾರ ಸಂಗ್ರಹಣೆಯ ಮಜಲಿನಿಂದ ಆಹಾರೋತ್ಪಾದನೆಯ ಮಜಲಿಗೆ ಈ ಕಾಲದ ಮಾನವ ಜಿಗಿದುದನ್ನು ಕಾಣುತ್ತೇವೆ. ಆಹಾರಕ್ಕಾಗಿ ಒಂದೆಡೆಯಿಂದ ಇನ್ನೊಂದೆಡೆಗೆ ಅಲೆಯುವುದು ತಪ್ಪಿ, ಒಂದೇ ಕಡೆ ಮನೆಯನ್ನು ಕಟ್ಟಿಕೊಂಡು ನೆಲಸಿ ಪಾತ್ರೆ ಮುಂತಾದ ಸಲಕರಣೆಗಳನ್ನು ಹೂಡಿಕೊಂಡು ಸಾಮೂಹಿಕ ಗ್ರಾಮಜೀವನವನ್ನು ನಡಸತೊಡಗಿದಂತೆ ಕಾಣುತ್ತದೆ. ಬೇಸಾಯ ಪಶುಸಂಗೋಪನೆಗಳ ಕುರುಹುಗಳು ಗೋಚರಿಸುತ್ತವೆ. ಬೆಟ್ಟಗಳ ಶಿಖರಭಾಗ, ಇಳಿಜಾರು ಮತ್ತು ತಪ್ಪಲುಗಳಲ್ಲಿ ಗ್ರಾಮ ಜೀವನ ನಡಸುತ್ತಿದ್ದ ಈ ಕಾಲದ ಮನುಷ್ಯನಿಗೆ ಎಮ್ಮೆ ಹಸು ಕುರಿ ಮೇಕೆ ಮುಂತಾದ ಪ್ರಾಣಿಗಳ ಪರಿಚಯವಿತ್ತು. ಅವುಗಳ ಸಾಕಣೆ, ಬೇಸಾಯ, ಬೇಟೆ, ಮೀನುಗಾರಿಕೆ, ಅರಣ್ಯ ಉತ್ಪನ್ನಗಳ ಸಂಗ್ರಹಣೆ–ಇವುಗಳಿಂದ ಜೀವನೋಪಾಯ ಸಾಗುತ್ತಿದ್ದಿತು. ಮರದ ಕಂಬ ಮತ್ತು ಹುಲ್ಲಿನ ಬಳಕೆಯಿಂದ ಗುಡಿಸಿಲುಗಳನ್ನು ಕಟ್ಟಿಕೊಳ್ಳುತ್ತಿದ್ದುದು ಕಾಣುತ್ತದೆ. ವಿಶಾಲವಾದ ದನದ ಕೊಟ್ಟಿಗೆಗಳ ನಿರ್ಮಾಣವೂ ಕಾಣುತ್ತದೆ. ವಿವಿಧ ಆಕೃತಿಯ ಹಾಗೂ ಪ್ರಯೋಜನದ ಜೇಡಿಮಣ್ಣಿನ ಪಾತ್ರೆ ಪದಾರ್ಥಗಳು ಸೂಕ್ಷ್ಮವಾದ ಕರ ಕೌಶಲದಿಂದ ಸಿದ್ಧವಾಗುತ್ತಿದ್ದವು. ಗುದ್ದಲಿ, ಬೈರಿಗೆ, ಸುತ್ತಿಗೆ, ಬೀಸುವ ಕಲ್ಲು, ಅರೆಯುವ ಕಲ್ಲು, ಕೈಸುತ್ತಿಗೆ ಇಂತಹ ಹಲವಿಧದ ಉಪಕರಣಗಳೂ ಅಂಚಿನ ಮತ್ತು

ಮೊನೆಯ ಆಯುಧಗಳೂ ಆಗ್ಗೆ ಬಳಕೆಯಾಗುತ್ತಿದ್ದವು. ಕೊರೆದ ಮರದ ಅಥವಾ ಕೊಂಬಿನ ಹಿಡಿಗಳಲ್ಲಿ ಈ ಕಾಲದ ಆಯುಧಗಳನ್ನು ಸೇರಿಸುತ್ತಿದ್ದುದೂ, ಹುರಿಯಿಂದ ಬಿಗಿಯುತ್ತಿದ್ದುದೂ ಒಂದು ವಿಶೇಷ.

ರಾಯಚೂರು ಬಳ್ಳಾರಿ ಜಿಲ್ಲೆಯ ನೆಲೆಗಳಲ್ಲಿ ಎತ್ತರದ ಡುಬ್ಬದ ಎತ್ತುಗಳ ಸುಟ್ಟ ಮಣ್ಣಿನ ಗೊಂಬೆಗಳೂ ಬಂಡೆಗಳ ಮೇಲೆ ಅವುಗಳ ರೇಖಾಚಿತ್ರಗಳೂ ಕಂಡುಬಂದಿವೆ; ಮನುಷ್ಯರ ಗೊಂಬೆಗಳೂ ವಿರಳವಾಗಿ ಕಂಡುಬಂದಿವೆ. ಎತ್ತುಗಳ ಗೊಂಬೆಗಳು ಹರಪ್ಪಾದ ನೆಲೆಯ ಗೊಂಬೆಗಳನ್ನು ಹೋಲುತ್ತವೆ.

ಮಾನವನ ಸಾಂಸ್ಕೃತಿಕ ವಿಕಾಸದಲ್ಲಿ ಅತಿ ಗಮನಾರ್ಹವಾದ ಬದಲಾವಣೆಗಳಿಂದೊಡಗೂಡಿದ, ನಾಗರಿಕ ಜೀವನದತ್ತ ಪದಾರ್ಪಣ ಮಾಡಿದ, ಒಂದು ಮುಖ್ಯ ಘಟ್ಟವನ್ನು ಮುಂದಿನ ನವಶಿಲಾಯುಗ ಸಂಸ್ಕೃತಿಯಲ್ಲಿ ಗುರುತಿಸಬಹುದು. ಈ ಕಾಲದಲ್ಲಿ ವ್ಯವಸಾಯ ಮತ್ತು ಪಶುಪಾಲನೆಗಳ ವೃತ್ತಿಗಳು ರೂಢಿಗೆ ಬಂದು ಈ ಹಿಂದೆ ಆಹಾರಕ್ಕಾಗಿ ನಿಸರ್ಗದ ಮೇಲೆ ಪೂರ್ಣವಾಗಿ ಅವಲಂಬಿತವಾಗಿದ್ದ ಸ್ಥಿತಿ ಕಳೆಯಿತು. ಮಾನವ ತನ್ನ ಆಹಾರವನ್ನು ಸ್ವತಃ ಉತ್ಪಾದನೆ ಮಾಡಿಕೊಳ್ಳುವ ಹಂತವನ್ನು ತಲುಪಿದನಷ್ಟೆ. ವ್ಯವಸಾಯ ಪ್ರಾರಂಭವಾದ ಮೇಲೆ ಜನ ಒಂದೆಡೆ ನೆಲಸುವ ಆವಶ್ಯಕತೆಯುಂಟಾಗಿ, ಗ್ರಾಮಗಳು ಬೆಳೆದುವು. ಇದರ ಜೊತೆಯಲ್ಲೇ ಗ್ರಾಮಜೀವನದ ಸುಗಮ ನಿರ್ವಹಣೆಗೆ ಅನುಕೂಲವಾಗುವಂತೆ ನ್ಯಾಯ, ಆಡಳಿತ, ರಕ್ಷಣೆ ಇತ್ಯಾದಿಗಳಲ್ಲಿ ನವ ವ್ಯವಸ್ಥೆಗಳು ಬೆಳೆದುವು. ಅಲ್ಲದೆ ಪಶು ಮತ್ತು ಕೃಷಿ ಉದ್ಯಮಗಳು ಫಲಕಾರಿಯಾಗಿರುವಂತೆ ವ್ಯಕ್ತಿಗಳ ಅಥವ ಕುಟುಂಬಗಳ ಅಧೀನದಲ್ಲಿ ಪಶು ಮತ್ತು ಭೂಮಿಸಂಪತ್ತು ವಿಂಗಡಿತವಾದವು; ಅಂದರೆ ವ್ಯಕ್ತಿಸಂಪತ್ತು (Private property) ಅಥವಾ ಆಸ್ತಿಯ ಭಾವನೆ ಮೊದಲಾಗಿ ಹುಟ್ಟಿಕೊಂಡಿತು. ವ್ಯಕ್ತಿವ್ಯಕ್ತಿಗಳಲ್ಲಿ ಅಥವಾ ಗುಂಪುಗುಂಪುಗಳಲ್ಲಿ ಇದ್ದ ಆಸ್ತಿಯ ಪರಿಣಾಮದ ವ್ಯತ್ಯಾಸದಿಂದ ಆರ್ಥಿಕ ಅಸಮತೆ, ಅದಕ್ಕೆ ಹೊಂದಿಕೊಂಡಂತೆ ಸಾಮೂಹಿಕ ಸ್ತರಗಳು ಹುಟ್ಟಿಕೊಂಡು ಗ್ರಾಮಸಮಾಜಗಳು ವಿಭಿನ್ನ ಸ್ತರಗಳಲ್ಲಿ ವರ್ಗೀಕೃತವಾಗಲಾರಂಭಿಸಿದುವು. ಇದರಿಂದ ಬೇರೆ ಬೇರೆ ಸಾಮಾಜಿಕ ಸ್ತರಗಳ ಜನರ ಜೀವನಾಧಾರಗಳು ಬೇರೆ ಬೇರೆ ರೀತಿಯಾಗಿ ರೂಪುಗೊಂಡವು. ಕೆಲವರಿಗೆ ಆಸ್ತಿಯೇ ಜೀವನಾಧಾರವಾದರೆ, ಮತ್ತೆ ಕೆಲವರಿಗೆ ದುಡಿಮೆ ಅಥವಾ ಜೀತ ಜೀವನಾಧಾರವಾಗಿ ಸಮಾಜವರ್ಗಗಳು ಮತ್ತಷ್ಟು ಸ್ನಿಗ್ಧವಾದುವು. ಇಂತಹ ವ್ಯವಸ್ಥೆ ಇಂದಿನ ಸಾಮಾಜಿಕ ಮೌಲ್ಯಗಳಿಂದ ಅಳತೆಮಾಡಿದಲ್ಲಿ ಹೀನವಾಗಿ ಕಂಡರೂ ಅದು ಮಾನವನ ಸಂಸ್ಕೃತಿಗೆ ಅಡಿಪಾಯವನ್ನು ಹಾಕಿತು ಎಂಬುದನ್ನು ಮರೆಯುವಂತಿಲ್ಲ.

ಮಾನವನ ಇತಿಹಾಸದ ಉನ್ನತ ಘಟ್ಟಗಳಲ್ಲಿ ಕಂಡುಬರುವ ವ್ಯವಸ್ಥಿತ ಧರ್ಮತತ್ತ್ವ ಚಿಂತನೆ, ವೈಜ್ಞಾನಿಕ ಅಧ್ಯಯನ ಮುಂತಾದ ಬೌದ್ಧಿಕ ವ್ಯಾಪಾರಗಳು ಮೊಳಕೆಯೊಡೆಯಲಾರಂಭಿಸಿದವು. ಹಾಗೆಯೇ ಹೆಚ್ಚಿನ ಸಂಪತ್ತಿನ ಉತ್ಪಾದನೆಯ ದಿಶೆಯಲ್ಲಿ, ಹಲವು ಕಸಬುಗಳಲ್ಲಿ ಹಲವರೇ ಸತತವಾಗಿ ನಿರತವಾಗಿದ್ದು, ಅದರಿಂದ ತದ್ವಿಷಯದ

ಬಗ್ಗೆ ಜ್ಞಾನ ಮತ್ತು ಕೌಶಲಗಳು ವೃದ್ಧಿಯಾಗಿ, ವ್ಯಕ್ತಿಶ್ರಮ ದ್ವಿಗುಣವಾಗಿ ಫಲಕಾರಿಯಾಗುವ ಒಂದು ವ್ಯವಸ್ಥೆ ರೂಢಿಗೆ ಬಂದಿತು. ಕಸುಬು ಮತ್ತು ವ್ಯಾಪಾರಗಳು ಬೆಳೆದವು. ದೇಹಶ್ರಮದ ಉಳಿತಾಯದ ಪರಿಣಾಮವಾಗಿ ಉಳಿದ ಕಾಲವನ್ನು ವಿನಿಯೋಗಿಸಲು ಹಲವು ಹವ್ಯಾಸಗಳೂ ಬೆಳೆದವು. ಮಾನವನ ಮೂಲಭೂತಗುಣವಾದ ಸೌಂದರ್ಯಪ್ರಜ್ಞೆ ಮತ್ತು ಸೃಜನಾತ್ಮಕ ಶಕ್ತಿಗಳು ಇವಕ್ಕೆ ಪೂರಕವಾಗಿ ಪ್ರಾಯಶಃ ಈ ಕಾಲದಲ್ಲಿ ವಾಸ್ತುಶಿಲ್ಪ, ಚಿತ್ರಣ, ಸಂಗೀತ, ನಾಟ್ಯ ಹಾಗೂ ಕಾಲಹರಣಕ್ಕೆ ಅನುಕೂಲವಾಗುವ ವಿನೋದ ಆಟಗಳು ವ್ಯವಸ್ಥಿತವಾಗಿ ಬೆಳೆಯಲಾರಂಭಿಸಿರಬೇಕು. ಒಟ್ಟಿನಲ್ಲಿ ನವಶಿಲಾಯುಗದಲ್ಲಿ ನಾಗರಿಕತೆಯ ಸುಸಂಸ್ಕೃತ ಸಮೃದ್ಧಜೀವನದ ಬೇರುಗಳನ್ನು ಕಾಣಬಹುದು.

ಕರ್ಣಾಟಕದ ತತ್ಕಾಲೀನ ಸಂಸ್ಕೃತಿಯ ಅಂಶಗಳು ಹೊರ ದೇಶಗಳಲ್ಲಿ ಸಮಸ್ಥಿತಿಯಲ್ಲಿದ್ದಂತೆಯೇ ಕಾಣಿಸಿಕೊಂಡಿರಬಹುದೆಂದು ಊಹಿಸಬಹುದು. ಇಂದಿನ ಕರ್ಣಾಟಕದ ಜನಜೀವನದಲ್ಲಿ ಕಂಡುಬರುವ ಸ್ಥಳೀಯ ರೂಢಿಗಳಲ್ಲಿ ಹಲವು ಮೂಲತಃ ನವಶಿಲಾಯುಗ ಸಂಸ್ಕೃತಿಯ ಕಾಲದವೇ ಆಗಿದ್ದು, ಆ ಕಾಲದಿಂದಲೂ ಉಳಿದುಬಂದಿದ್ದವಾಗಿರಬೇಕೆಂದು ತರ್ಕಿಸಲು ಅವಕಾಶವಿದೆ. ಉತ್ತರ ಕರ್ಣಾಟಕದ ಕೆಲವು ಸ್ಥಳಗಳಲ್ಲಿ ನವಶಿಲಾಯುಗ ಸಂಸ್ಕೃತಿಯ ಕಾಲದ, ದನದ ಸಗಣಿಯನ್ನು ಸುಟ್ಟು ಉಂಟಾದ ಬೂದಿಯ ದೊಡ್ಡ ಗುಡ್ಡೆಗಳು ಕಂಡುಬಂದಿವೆ. ಈ ದೊಡ್ಡ ಬೂದಿ ರಾಶಿಗಳಿಗೂ ಈಗಿನ ಕರ್ಣಾಟಕದಲ್ಲಿ ಸಂಕ್ರಾಂತಿ ದೀಪಾವಳಿ ಇತ್ಯಾದಿ ಕಾಲಗಳಲ್ಲಿ ಗ್ರಾಮಗಳಲ್ಲಿ ನಡಸುವ ದನಗಳ ಕಿಚ್ಚುಹಾಯಿಸುವ ಪದ್ಧತಿಗೂ ಸಂಬಂಧವಿರಬೇಕೆಂದು ಒಬ್ಬ ಪುರಾತತ್ತ್ವಜ್ಞರು ಸಕಾರಣವಾಗಿ ಊಹಿಸಿದ್ದಾರೆ. ಇದು ಸಕಾರಣವಾಗಿದೆಯೇ, ಇದ್ದರೆ ಹೀಗೆಯೇ ಇನ್ನೂ ಇತರ ಹಲವು ಜಾನಪದ ರೂಢಿಗಳು ನಂಬಿಕೆಗಳು ಸಹ ನವಶಿಲಾಯುಗದ ಕಾಲದಿಂದಲೂ ಉಳಿದು ಬಂದವುಗಳಾಗಿರಬಹುದೇ ಎಂಬುದು ಪುರಾತತ್ತ್ವಜ್ಞರೂ ಜಾನಪದ ವಿದ್ವಾಂಸರೂ ವಿಚಾರಮಾಡಬೇಕಾದ ವಿಷಯ. ಇಂದಿನ ಜಾನಪದ ಜೀವನದಲ್ಲಿ ಕಂಡುಬರುವ ಪೌರಾಣಿಕ ಹಿಂದು ಧರ್ಮದ ನಂಬಿಕೆಗಳ ಹೊರಗಿರುವ ಇತರ ಅಂಶಗಳ ಮೂಲವನ್ನು ಸ್ಥಳೀಯ ಮೂಲದ ಸಂಸ್ಕೃತಿಗಳಲ್ಲಿ ಹುಡುಕಬೇಕಾದ್ದು ಸಹಜವಷ್ಟೇ. ಸದ್ಯದಲ್ಲಿ ಇಂದು ಸಿಗುವ ಆಧಾರಗಳು ಈ ವಿಷಯದ ಬಗ್ಗೆ ಖಚಿತ ತೀರ್ಮಾನವನ್ನು ನೀಡಲಾರವಾದರೂ ಕರ್ಣಾಟಕದ ಇಂದಿನ ಸಂಸ್ಕೃತಿಯ ಹಲವಂಶಗಳು ಇಲ್ಲಿಯ ನವಶಿಲಾಯುಗದ ಕಾಲದಲ್ಲಿ ರೂಪುಗೊಂಡಿರಬೇಕೆಂದು ಊಹಿಸುವುದು ಪ್ರಾಯಶಃ ತಪ್ಪಾಗಲಾರದು.

ಬ್ರಹ್ಮಗಿರಿಯ ಸಂಶೋಧನೆಯಲ್ಲಿ ಆರಂಭಕಾಲದ ನವಶಿಲಾಯುಗದ ಸಂಸ್ಕೃತಿಯೂ ಅನಂತರದ ಇತಿಹಾಸಕಾಲೀನ ಸಂಸ್ಕೃತಿಗಳೂ ಕಂಡುಬಂದಿವೆ. ಎರಡು ಹಂತಗಳಲ್ಲಿ ನವಶಿಲಾಯುಗ ಸಂಸ್ಕೃತಿ ಇಲ್ಲಿ ಪ್ರವರ್ತಿಸಿದ್ದು, ಮಹಾರಾಷ್ಟ್ರ ಪ್ರದೇಶದ ಸಂಪರ್ಕ ಪ್ರಭಾವದಿಂದಾಗಿ ಅಲ್ಲಿಯ ತಾಮ್ರ ಶಿಲಾಯುಗದ ಪ್ರಭಾವ ಇಲ್ಲಿಯೂ ಕಂಡುಬಂದಿವೆ. ವಿರಳವಾಗಿ ದೊರೆತಿರುವ ತಾಮ್ರ ವಸ್ತುಗಳು ಇದಕ್ಕೆ ಆಧಾರ.

ಕ್ರಿ. ಪೂ. ೨ನೆಯ ಸಹಸ್ರಮಾನದಲ್ಲಿ ಪ್ರಸರಣಗೊಂಡ ತಾಮ್ರ ಶಿಲಾಯುಗದ ಸಂಸ್ಕೃತಿ ಕರ್ಣಾಟಕದಲ್ಲಿ ಸುಮಾರು ೮೦೦ ವರ್ಷಗಳ ಕಾಲ ವ್ಯಾಪ್ತವಾಗಿತ್ತು. ರಾಯಚೂರು ಜಿಲ್ಲೆಯ ಕೃಷ್ಣಾನದೀ ಕಣಿವೆಯಲ್ಲಿರುವ ಪಿಕ್ಲಿಹಾಳ್‌ನಲ್ಲಿ ಆಲ್ಚಿನ್ ೧೯೫೨ರಲ್ಲಿ ಅಗೆತಗಳನ್ನು ನಡಸಿದಾಗ, ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ನವಶಿಲಾಯುಗ, ಕಬ್ಬಿಣದ ಯುಗ ಮತ್ತು ಚಾರಿತ್ರಿಕಯುಗದ ಆದಿಕಾಲ ಇವುಗಳ ಸಂಸ್ಕೃತಿಗಳ ಅವಶೇಷಗಳು ದೊರೆತವು. ನವಶಿಲಾಯುಗದ ಎರಡನೆಯ ಹಂತದಲ್ಲಿ ತಾಮ್ರ ಮತ್ತು ಕಂಚುಗಳ ಬಳಕೆ ಕಾಣಿಸಿದೆ. ಇಲ್ಲಿಯ ಮಣ್ಣಿನ ಪಾತ್ರೆಗಳಿಗೂ ಮಹಾರಾಷ್ಟ್ರದ ತಾಮ್ರಶಿಲಾಯುಗದ ನೆಲೆಗಳಲ್ಲಿ ದೊರೆತ ವಸ್ತುಗಳಿಗೂ ಸಾಮ್ಯವಿದೆ. ಇದು ಪರಸ್ಪರ ಸಂಪರ್ಕದ ಫಲ.

ರಾಯಚೂರು ಜಿಲ್ಲೆಯಲ್ಲಿಯೇ, ಪಿಕ್ಲಿಹಾಳ್‌ಗೆ ಪೂರ್ವಕ್ಕೆ ಸು. ೧೫ ಮೈಲಿ ದೂರದಲ್ಲಿರುವ ಮಾಸ್ಕಿಯಲ್ಲಿ ಹೈದರಾಬಾದ್ ಪುರಾತತ್ತ್ವ ಇಲಾಖೆ (೧೯೩೫-೩೬) ಹಾಗೂ ಬಿ. ಕೆ. ಥಾಪರ್ (೧೯೫೪) ಇವರು ಕೈಕೊಂಡ ಶೋಧಗಳ ಫಲವಾಗಿ ತಾಮ್ರಶಿಲಾಯುಗದ ಮತ್ತು ಕಬ್ಬಿಣ ಯುಗದ ಅವಶೇಷಗಳು ದೊರೆತವು.

ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ತೆಕ್ಕಲಕೋಟೆಯ ಬೆಟ್ಟದ ಮೇಲೆ ೧೯೬೩-೬೪ರಲ್ಲಿ ಡಾ. ಎಂ. ಎಸ್. ನಾಗರಾಜರಾವ್ ಮತ್ತು ಡಾ. ಸಾಂಕಲಿಯ ಇವರ ಶೋಧನೆಯ ಫಲವಾಗಿ ನವಶಿಲಾಯುಗದ ಸಂಸ್ಕೃತಿಯ ಎರಡು ಹಂತಗಳು ಕಂಡು ಬಂದಿದ್ದು, ಎರಡನೆಯ ಹಂತದಲ್ಲಿ ಅಧಿಕ ಸಂಖ್ಯೆಯ ತಾಮ್ರದ ವಸ್ತುಗಳು ದೊರೆತಿವೆ. ಕಪ್ಪು ಬಣ್ಣದ ಚಿತ್ರಗಳಿರುವ ಕೆಂಪು ಮಡಕೆಗಳೂ ದೊರೆತಿವೆ. ಇದೇ ಜಿಲ್ಲೆಯ ಸಂಗನಕಲ್ಲು ಹತ್ತಿರದ ಒಂದು ಬೆಟ್ಟದ ತಪ್ಪಲಿನಲ್ಲಿ ಡಾ. ಸುಬ್ಬರಾವ್ (೧೯೪೮), ಡಾ. ಅನ್ಸಾರಿ ಮತ್ತು ಡಾ. ನಾಗರಾಜರಾವ್ (೧೯೬೪-೬೫) ಇವರು ನಡಸಿದ ಸಂಶೋಧನೆಗಳಿಂದ ಸೂಕ್ಷ್ಮಶಿಲಾಯುಗದಿಂದ ಕಬ್ಬಿಣಯುಗದವರೆಗಿನ ಹಂತಗಳಲ್ಲಿ, ನವಶಿಲಾಯುಗದ ಎರಡನೆಯ ಹಂತದ ತಾಮ್ರ ವಸ್ತುಗಳೂ ಕೆಂಪುಮಣ್ಣಿನ ಪಾತ್ರೆಗಳೂ ದೊರೆತಿವೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನ ಬ್ರಹ್ಮಗಿರಿ ಅಶೋಕನ ಕಾಲದಲ್ಲಿ ಪ್ರಸಿದ್ಧವಾದ ದಕ್ಷಿಣ ಭಾರತದ ಒಂದು ಸ್ಥಳ. ಮೊದಲು ೧೯೪೨ರಲ್ಲಿ ಡಾ. ಎಂ. ಎಚ್. ಕೃಷ್ಣ, ಬಳಿಕ ೧೯೪೭ರಲ್ಲಿ ಡಾ. ಮಾರ್ಟಿಮರ್ ವೀಲರ್ ಇಲ್ಲಿ ಶೋಧನೆಗಳನ್ನು ನಡಸಿದಾಗ ನವಶಿಲಾಯುಗದ ಎರಡು ಹಂತಗಳು, ಕಬ್ಬಿಣಯುಗ, ಸಾತವಾಹನರ ಕಾಲದ ಸಂಸ್ಕೃತಿಗಳು ಕಂಡುಬಂದಿವೆ. ನವಶಿಲಾಯುಗದ ಎರಡನೆಯ ಹಂತದಲ್ಲಿ ತಾಮ್ರ ಶಿಲಾಯುಗದ ಎಲ್ಲ ಲಕ್ಷಣಗಳೂ ಕಂಡುಬಂದಿವೆ.

ಮೈಸೂರು ಜಿಲ್ಲೆಯ ಕಪಿಲಾ ಕಾವೇರೀ ನದೀ ಸಂಗಮ ಸ್ಥಾನದ ತಿರುಮಕೂಡ್ಲು ನರಸೀಪುರದಲ್ಲಿ ಡಾ. ಎಂ. ಶೇಷಾದ್ರಿಯವರು ೧೯೫೯ರಿಂದ ೬೪ರ ವರೆಗೆ ಕೈಕೊಂಡ ಶೋಧನೆಗಳಿಂದ ಕ್ರಮವಾಗಿ ನವಶಿಲಾಯುಗ, ಕಬ್ಬಿಣಯುಗ ಮತ್ತು ಚಾರಿತ್ರಿಕ ಯುಗದ ಆರಂಭಕಾಲ—ಇವುಗಳ ಸಂಸ್ಕೃತಿಯ ಅವಶೇಷಗಳನ್ನು ಗೊತ್ತುಹಚ್ಚಿದ್ದಾರೆ. ನವಶಿಲಾಯುಗ ಕಾಲದ ಸಂಸ್ಕೃತಿಯು ಮೊದಲು ರಾಯಚೂರು ಬಳ್ಳಾರಿ ಪ್ರದೇಶಗಳಲ್ಲಿ ಕೇಂದ್ರೀ

ಕೃತವಾಗಿದ್ದು, ಕಾಲಕ್ರಮದಲ್ಲಿ ದಕ್ಷಿಣಕ್ಕೆ ಪಸರಿಸಿದಂತೆ ತೋರುತ್ತದೆ. ಈ ವೇಳೆಗೆ ಈ ಸಂಸ್ಕೃತಿ ಮಧ್ಯ ಭಾರತದ ತಾಮ್ರ ಶಿಲಾಯುಗೀನ ಸಂಸ್ಕೃತಿಯೊಡನೆ ಸಂಪರ್ಕ ಬೆಳೆಸಿಕೊಳ್ಳಲಾರಂಭಿಸಿತ್ತೆಂದೂ ಕಾಣುತ್ತದೆ.

ವಿಶೇಷವಾಗಿ ಉತ್ಖನನಗಳು ನಡೆದ ಮೇಲಿನ ಆರು ನೆಲೆಗಳಲ್ಲದೆ, ಉತ್ತರ ಕರ್ನಾಟಕದ ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಭೂಮಿಯ ಮೇಲೆ ಕಂಡುಬರುವ ಮಾಹಿತಿಯನ್ನು ಪರಿಶೀಲಿಸಿಯೇ ಭೀಮಾನದಿಯ ಕೊಳ್ಳದ ಹಲವಾರು ನೆಲೆಗಳಲ್ಲಿ ಮಹಾರಾಷ್ಟ್ರದ ತಾಮ್ರಶಿಲಾಯುಗಕ್ಕೆ ಸೇರಿದ ಸಂಸ್ಕೃತಿ ಪ್ರಸರಿಸಿತ್ತೆಂದು ಈಚೆಗೆ ಅಂದಾಜುಮಾಡಲಾಗಿದೆ. ವಾಟ್ಗಲ್ಲು ನೆಲೆಯಲ್ಲಿ ಅಧಿಕವಾಗಿ ಈ ಯುಗದ ಅವಶೇಷಗಳು ಕಂಡುಬಂದಿವೆ.

ಇದರ ಫಲಿತವನ್ನು ಹೀಗೆ ಸಂಗ್ರಹಿಸಲಾಗಿದೆ: ಕರ್ನಾಟಕದಲ್ಲಿ ಈ ಮೊದಲೇ ನೆಲಸಿದ್ದ ನವಶಿಲಾಯುಗ ಸಂಸ್ಕೃತಿಯ ಜನರು ಪಶುಪಾಲನೆ, ಬೇಟೆ, ಮೀನುಗಾರಿಕೆ, ಮತ್ತು ಪ್ರಾಥಮಿಕ ಹಂತದ ವ್ಯವಸಾಯ ಈ ವಿಧಾನಗಳಿಂದ ಜೀವಿಸುತ್ತಿದ್ದರು. ಈಚೆಗೆ ಕ್ರಿ.ಪೂ. ೨ನೆಯ ಸಹಸ್ರಮಾನದ ಪೂರ್ವಾರ್ಧದಲ್ಲಿ ಪಶ್ಚಿಮ-ಮಧ್ಯಭಾರತದಲ್ಲಿ ಹುಟ್ಟಿದ ತಾಮ್ರಶಿಲಾಯುಗ ಸಂಸ್ಕೃತಿ ಹೆಚ್ಚು ಪ್ರಗತಿಶೀಲವಾಗಿ, ಸುಧಾರಿತ ಗ್ರಾಮಜೀವನ ಮತ್ತು ವ್ಯವಸಾಯ ಪದ್ಧತಿ, ಗೃಹೋಪಕರಣಗಳ ತಯಾರಿಕೆ, ಕುಂಬಾರಚಕ್ರದ ಉಪಯೋಗ—ಇವು ಏರ್ಪಟ್ಟವು. ಕರ್ನಾಟಕ ಇವನ್ನು ಅಳವಡಿಸಿಕೊಂಡರೂ ಹಳೆಯ ಸಂಸ್ಕೃತಿಯ ಆಯುಧಗಳೂ ಮಣ್ಣಿನ ಪಾತ್ರೆಗಳೂ ನಿತ್ಯೋಪಯೋಗಿ ವಸ್ತುಗಳಾಗಿ ಮುಂದುವರಿದುವು. ತಾಮ್ರ ಬೆಲೆಯುಳ್ಳ ಲೋಹವಾಗಿದ್ದುದು ಮತ್ತು ಚಿತ್ರಿತವಾದ ಕೆಂಪು ಮಡಕೆಗಳು ನೋಡಲು ಚೆನ್ನಾಗಿದ್ದರೂ ಬಳಕೆಗೆ ಅನುಕೂಲವಾಗಿಲ್ಲದಿದ್ದುದು—ಇವನ್ನು ಕಾರಣಗಳೆಂದು ಹೇಳಲಾಗಿದೆ.

ಮುಂದಿನ ಘಟ್ಟ ಕಬ್ಬಿಣಯುಗ ಅಥವಾ ಬೃಹತ್‌ಶಿಲಾ ಸಮಾಧಿಸಂಸ್ಕೃತಿಯ ಯುಗ. ಭಾರತದಲ್ಲಿ ಕಬ್ಬಿಣದ ಉಪಯೋಗ ಅಕಿಮಿನೀಡ್ ಪರ್ಶಿಯನ್ನರ ಮೂಲಕ ಕ್ರಿ.ಪೂ. ೬ನೆಯ ಶತಮಾನದಲ್ಲಿ ಪ್ರವೇಶಿಸಿರಬೇಕೆಂದು ವೀಲರ್ ಅಭಿಪ್ರಾಯಪಟ್ಟಿದ್ದಾನೆ. ಆದರೆ ಈಚಿನ ಶೋಧಗಳಿಂದ ಅದು ಕ್ರಿ.ಪೂ. ೧೦-೧೧ನೆಯ ಶತಮಾನಗಳಲ್ಲಿ ರೂಢಿಗೆ ಬಂತೆಂದು ತಿಳಿದಿದೆ. ಧಾರವಾಡ ಜಿಲ್ಲೆಯ ಹಳ್ಳೂರು ನೆಲೆಯ ಉತ್ಖನನಗಳೂ ಈ ವಿಷಯದಲ್ಲಿ ಸಾಕ್ಷ್ಯ ಹೇಳುತ್ತವೆ. ಈ ಕಾಲದ ದ್ರಾವಿಡಭಾಷಾ ಜನ ಗುಜರಾತ್ ರಾಜಸ್ಥಾನಗಳಲ್ಲಿ ಮೊದಲು ವಾಸಿಸುತ್ತಿದ್ದು, ಕಬ್ಬಿಣ ಮತ್ತು ಬೃಹತ್ ಶಿಲಾ ಸಮಾಧಿ ಪದ್ಧತಿಗಳನ್ನು ತಮ್ಮಲ್ಲಿ ಅಳವಡಿಸಿಕೊಂಡು ದಕ್ಷಿಣಕ್ಕೆ ವಲಸೆ ಬಂದರೆಂದೂ ಇಲ್ಲಿಯ ನವಶಿಲಾಯುಗದವರನ್ನು ತಮ್ಮಲ್ಲಿ ಲೀನವಾಗಿಸಿಕೊಂಡರೆಂದೂ ತಿಳಿಯಲಾಗಿದೆ. ಕಪ್ಪು-ಕೆಂಪು ಮಡಕೆಗಳು, ಕಬ್ಬಿಣದ ಆಯುಧೋಪಕರಣಗಳು, ವಿಶಿಷ್ಟ ರೀತಿಯ ಶಿಲಾಸಮಾಧಿಗಳು ಈ ಸಂಸ್ಕೃತಿಯ ವೈಲಕ್ಷಣ್ಯಗಳು.

ಕರ್ನಾಟಕದ ಅನೇಕ ನೆಲೆಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳು ಬೆಳಕಿಗೆ ಬಂದಿವೆ.

ಮೈಸೂರು, ಹಾಸನ, ಕೊಡಗು, ಬೆಂಗಳೂರು, ಕೋಲಾರ ಮುಂತಾದ ಪ್ರದೇಶಗಳಲ್ಲಿ ರಾಬರ್ಟ್‌ಕೋಲ್, ಮೆಕೆಂಜಿ, ಬ್ರಾನ್‌ಫಿಲ್ ಮುಂತಾದವರೂ ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಮೆಡೋಸ್ ಟೈಲರ್ ಅವರೂ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಅನೇಕ ಉತ್ಖನನಗಳನ್ನು ಮಾಡಿದರು. ಈಚೆಗೆ ಎಂ. ಎಚ್. ಕೃಷ್ಣ ಹಳೆಯ ಮೈಸೂರು ಪ್ರದೇಶದಲ್ಲೂ ಯಾಜ್‌ದಾನಿ, ಪಂಚಮುಖಿ ಮುಂತಾದವರು ಮುಂಬೈ-ಕರ್ನಾಟಕ ಪ್ರದೇಶದಲ್ಲೂ ಸಂಶೋಧನಗಳನ್ನು ಮುಂದುವರಿಸಿದರು.

ಬಿ. ಎಲ್. ರೈಸ್ ಅವರು ಬ್ರಹ್ಮಗಿರಿಯಲ್ಲಿ ಅಶೋಕನ ಶಾಸನಗಳನ್ನು ಕಂಡು ಹಿಡಿದ ಮೇಲೆ ಚಿಕ್ಕ ಹಡಗಲಿ ನದೀಪಾತ್ರದಲ್ಲಿ ಪುರಾತನ ಪಟ್ಟಣವಿದ್ದುದು ಕಂಡು ಬಂದಿತು. ಆರ್. ನರಸಿಂಹಾಚಾರ್ಯರು ಚಂದ್ರವಳ್ಳಿಯಲ್ಲಿ ಶೋಧ ನಡಸಿ ಶಾತ ವಾಹನ ನಾಣ್ಯಗಳ ಜತೆಗೆ ಚೀನಾ ಚಕ್ರವರ್ತಿಗಳ ಕಂಚಿನ ನಾಣ್ಯಗಳನ್ನೂ ಪತ್ತೆ ಮಾಡಿದರು. ಆಮೇಲೆ ೫ನೆಯ ಶತಮಾನದವರೆಗೆ ಆಳಿದ ರೋಮನ್ ಚಕ್ರವರ್ತಿಗಳ ಅನೇಕ ಚಿನ್ನದ ನಾಣ್ಯಗಳು ಬೆಳಕಿಗೆ ಬಂದವು. ಚಂದ್ರವಳ್ಳಿ ನಿವೇಶನದ ಅಗೆತಗಳಲ್ಲಿ ದೊರೆತ ೭-೮ ಸಾವಿರಕ್ಕೂ ಹೆಚ್ಚು ಪುರಾತನ ಪದಾರ್ಥಗಳ ಪರಿಶೀಲನೆಯಿಂದ ಎಂ. ಎಚ್. ಕೃಷ್ಣ ಅಲ್ಲಿ ಕರ್ನಾಟಕದ ಆದಿ ಮತ್ತು ಪೂರ್ವಚರಿತ್ರೆಗೆ ಸಂಬಂಧಿಸಿದ ವಿಷಯಗಳನ್ನು ಹೊರತರಲು ಕಾರಣರಾದರು. ಚಂದ್ರವಳ್ಳಿಯನ್ನು ಬಾರಲಗೊಂದಿ, ಹುಲಿಗೊಂದಿ, ನೇರಳಗೊಂದಿ, ಬಸವನಗೊಂದಿ, ಅಂಕಲೇಮಠ ಎಂದು ವಿಭಾಗಿಸಿ ಅವರು ಶೋಧಗಳನ್ನು ನಡಸಿದರು. ನೇರಳಗೊಂದಿಯಲ್ಲಿ ವರ್ತುಲವಾದ ಗುಡಿಸಿಲುಗಳ ತಳಪಾಯಗಳು, ಮಡಕೆಚೂರುಗಳು, ನವಶಿಲಾಯುಗದ ಉಪಕರಣಗಳು ದೊರೆತಿವೆ. ಶ್ಮಶಾನದಲ್ಲಿ ಶಿಲಾತೊಟ್ಟಿಗಳಲ್ಲಿ (Dolmenoid Cists) ಅಸ್ಥಿಪಂಜರ ಕಾಣಿಸಿತು. ಹುಲಿಯ ಚಿತ್ರ ಬರೆದ ಬಂಡೆಯ ಬಳಿ ಕ್ರಿ.ಪೂ. ೩೦೦ರ ಸೀಸದ ನಾಣ್ಯಗಳೂ ಪಾತ್ರೆಗಳೂ ಸಮಾಧಿಯಲ್ಲಿ ಬೂದಿತುಂಬಿದ ಎರಡು ಮಡಕೆಗಳೂ ಕಂಡುಬಂದವು. ಮತ್ತೊಂದು ಅಂತಹ ಶಿಲಾತೊಟ್ಟಿಯಲ್ಲಿ ಅನೆಕಾಲಿನ ಸಮಾಧಿಕುಂಭ, ಹೊಳಪುಕೊಟ್ಟ ಕಪ್ಪು ಮಡಕೆ, ತಟ್ಟೆ, ಮುಕ್ಕಾಲಿನ ಕೆಲವು ಸಮಾಧಿಕುಂಭಗಳು ಕೂಡ ದೊರೆತವು.

ಬಾರಲಗೊಂದಿಯಲ್ಲಿ ನವಶಿಲಾಯುಗದ ಆಯುಧಗಳು ಸಿಕ್ಕಿವೆ. ಬಹುಶಃ ಬೇಟೆಯಿಂದ ಜೀವಿಸುತ್ತಿದ್ದ ಪ್ರಾಚೀನ ಮನುಷ್ಯ ಅಲ್ಲಿ ಮನೆಮಾಡಿಕೊಂಡಿದ್ದ. ಬಸವನಗೊಂದಿಯಲ್ಲಿ ಶಾತವಾಹನರಿಗಿಂತಲೂ ಹಿಂದಿನ ಮೌರ್ಯಕಾಲೀನವಾದೆರಡು ಸ್ತರಗಳೂ ಮೂರು ಶಾತವಾಹನಕಾಲೀನ ಸ್ತರಗಳೂ ಕಂಡುಬಂದವು. ಕೆಂಪು ಮಣ್ಣಿನ ಗಾರೆಯನ್ನು ಬಳಿದಿದ್ದ, ಒಂದೂವರೆ ಅಡಿ ದಪ್ಪವಾಗಿದ್ದ ಗೋಡೆಗಳನ್ನುಳ್ಳ ಮನೆಗಳು ತೋರಿದವು. ಅಂಕಲೆಮಠದ ಬಳಿಯಲ್ಲಿ ಸೂಕ್ಷ್ಮ ಮತ್ತು ನವಶಿಲಾಯುಗದ ನೆಲೆಗಳ ಕುರುಹುಗಳಿದ್ದು ಬಹುಶಃ ಇಲ್ಲಿನ ಗುಹೆಗಳಲ್ಲಿ ಬೇಟೆಯಿಂದ ಜೀವಿಸುತ್ತಿದ್ದ ಮನುಷ್ಯ ವಾಸವಾಗಿರಬೇಕೆಂದು ತಿಳಿಯುವುದು.

ಚಂದ್ರವಳ್ಳಿಯಲ್ಲಿ ಮೌರ್ಯರ ಕಾಲದ ಒಂದು ಪಟ್ಟಣದ ಗುರುತು ಕಂಡಿದೆ. ಅಲ್ಲಿನ

ಕಟ್ಟಡಗಳು ಇಟ್ಟಿಗೆ ಮಣ್ಣಿನಿಂದ ಕಟ್ಟಿದವು. ರಾಜಬೀದಿ ಉತ್ತರದಿಂದ ದಕ್ಷಿಣಕ್ಕೆ ಸಾಗಿ ಹುಲಿಗೊಂದಿಯ ಕೆರೆಕಟ್ಟೆಯ ಬಳಿ ಕೊನೆಗೊಳ್ಳುತ್ತಿತ್ತು. ಇದರ ಅಕ್ಕಪಕ್ಕಗಳಲ್ಲಿ ವೈದ್ಯ, ಅಕ್ಕಸಾಲೆ, ಕುಂಬಾರ ಮುಂತಾದವರ ಕಾರ್ಯಾಗಾರಗಳೂ ಇದ್ದು, ಅವುಗಳ ಕಟ್ಟಡಗಳನ್ನು ಗಮನಿಸಿ ಚಂದ್ರವಳ್ಳಿ ಕ್ರಿ.ಪೂ. ೧೦೦ರಿಂದ ಕ್ರಿ.ಶ. ೨೦೦ರ ವರೆಗೆ ಉನ್ನತಿಯ ಕಾಲವನ್ನು ಕಂಡಿತೆಂದು ಹೇಳಲಾಗಿದೆ.

ಡಾ. ಎಂ. ಎಚ್. ಕೃಷ್ಣರು ಈ ಶತಮಾನದ ಐದನೆಯ ದಶಕದ ಪೂರ್ವಾರ್ಧದಲ್ಲಿ ಚಿತ್ರದುರ್ಗದ ಬಳಿ ನಡಸಿದ ಸಂಶೋಧನೆಗಳು ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಪರಿಚಯವನ್ನೊದಗಿಸುವ ದಿಕ್ಕಿನಲ್ಲಿ ಒಂದು ಮುಖ್ಯವಾದ ಹೆಜ್ಜೆ. ಇವರ ಸಂಶೋಧನೆಗಳ ಮಾಹಿತಿಗಳನ್ನು ಅವಲೋಕಿಸಿದ, ಭಾರತ ಸರ್ಕಾರದ ಅಂದಿನ ಪುರಾತತ್ತ್ವ ಇಲಾಖೆಯ ಮುಖ್ಯಾಧಿಕಾರಿ ಡಾ. ವೀಲರ್ ಮೊದಲ ಬಾರಿಗೆ ದಕ್ಷಿಣ ಭಾರತದ ಪ್ರಾಕ್ತನ ಇತಿಹಾಸದಲ್ಲಿ ೧೯೪೭ರಲ್ಲಿ ಬ್ರಹ್ಮಗಿರಿ ಚಂದ್ರವಳ್ಳಿಗಳಲ್ಲಿ ಉತ್ಖನನಗಳನ್ನು ಮುಂದುವರಿಸಿ, ಬ್ರಹ್ಮಗಿರಿಯಲ್ಲಿ ಮೂರು ಸಂಸ್ಕೃತಿ ಸ್ತರಗಳನ್ನು ಬೆಳಕಿಗೆ ತಂದನು. ಇವುಗಳಲ್ಲಿ ಅತ್ಯಂತ ಪುರಾತನವಾದ್ದು ಹಿಂದೆ ಪ್ರಸ್ತಾಪಿಸಿರುವ ನವಶಿಲಾಯುಗದ ಸಂಸ್ಕೃತಿ, ನಡುವಿನದು ಬೃಹತ್ ಶಿಲಾಸಮಾಧಿಯದು, ಮೇಲಿನದು ಇತಿಹಾಸದ ಆರಂಭಕಾಲಕ್ಕೆ ಸೇರಿದ ಶಾತವಾಹನರದು. ಮೊದಲ ಸ್ತರದಲ್ಲಿ ಆಂಧ್ರ ನಾಣ್ಯಗಳೂ ರೋಮನ್ ರೌಲೆಟೆಡ್ ಕುಂಭಗಳೂ ಕೆಳಗಿನ ಸ್ತರದಲ್ಲಿ ನಿಧಾನವಾಗಿ ತಿರುಗುವ ಚಕ್ರದಿಂದ ಮಾಡಿದ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಕುಂಭಗಳೂ ಕೆಳಗೆ ಎಂಟು ಅಡಿಗಳ ಆಳದಲ್ಲಿ ಶಿಲಾಯುಗದ ಸಂಸ್ಕೃತಿಯ ಕಲ್ಲಿನ ಆಯುಧಗಳೂ ಕ್ವಚಿತ್ತಾಗಿ ಕಂಡುಬಂದವು. ವೀಲರ್ ಪ್ರಕಾರ, ಕಲ್ಲನ್ನು ಬಳಸುತ್ತಿದ್ದ ನಾಗರಿಕರಲ್ಲದ ಜನ, ಅಶೋಕನ ಸಾಮ್ರಾಜ್ಯ ಪತನವಾದ ಮೇಲೆ ಬೃಹತ್ ಶಿಲಾಯುಗದ ಜನರಿಂದ ಪರಾಜಿತರಾದರು.

ಕರ್ಣಾಟಕದಲ್ಲಿ ನಾಗರಿಕತೆ ಇತಿಹಾಸಗಳ ಬುನಾದಿಯನ್ನು ನಿರ್ಮಿಸಿದ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಮೇಲ್ಕಂಡ ಶೋಧನೆಗಳಿಂದ ಉತ್ತೇಜಿತರಾಗಿ ಬಳ್ಳಾರಿಯ ಸಂಗನಕಲ್ಲು ತೆಕ್ಕಲಕೋಟೆಗಳಲ್ಲಿ, ರಾಯಚೂರಿನ ಪಿಕ್ಲಿಹಾಳ್ ಮಾಸ್ಕಿಗಳಲ್ಲಿ, ಬೆಂಗಳೂರಿನ ಜಡಿಗೇನಹಳ್ಳಿ, ಮೈಸೂರಿನ ಟಿ. ನರಸೀಪುರ ಮತ್ತು ಧಾರವಾಡದ ಹಳ್ಳೂರು ಇವುಗಳಲ್ಲಿ ಹಲವರು ಪುರಾತತ್ತ್ವಜ್ಞರು ಉತ್ಖನನಗಳನ್ನು ನಡಸಿದರು.

ಈಗ ಈ ಬೃಹತ್ ಶಿಲಾಸಮಾಧಿಯುಗದ ಸ್ವರೂಪ ವೈಲಕ್ಷಣ್ಯಗಳನ್ನು ಕುರಿತು ಕೆಲವಂಶಗಳನ್ನು ಗಮನಿಸಬಹುದು:

ಬೃಹತ್ ಶಿಲಾಸಮಾಧಿಯುಗದ ಸಂಸ್ಕೃತಿ, ಹಿಂದಿನ ಘಟ್ಟದ ತಾಮ್ರ ಶಿಲಾಯುಗ ಸಂಸ್ಕೃತಿಗಿಂತಲೂ ಉತ್ತಮ ಮಟ್ಟದ್ದಾಗಿತ್ತು. ಈ ಕಾಲದಲ್ಲಿ ಲೋಹ ಎಂದರೆ ಕಬ್ಬಿಣವನ್ನು ಹಲವು ಬಗೆಯ ಸಲಕರಣೆಗಳು ಮತ್ತು ಆಯುಧಗಳನ್ನು ಮಾಡಲು ಧಾರಾಳವಾಗಿ ಉಪಯೋಗಿಸುತ್ತಿದ್ದುದು ಕಂಡುಬರುತ್ತದೆ. ಅಲ್ಲದೆ ಈ ಕಾಲದ ಮಡಕೆಗಳು

ಕುಂಬಾರ ಚಕ್ರದ ಮೇಲೆ ಮಾಡಿದವುಗಳಾಗಿದ್ದು, ಉತ್ತಮ ರೀತಿಯ ಸಂಸ್ಕರಣೆಗೆ ಒಳಗಾಗಿದ್ದವು. ವಿಶೇಷವಾಗಿ ಹೊಳಪಿನ ಕಪ್ಪು ಕೆಂಪು ಬಣ್ಣಗಳನ್ನು ಹೊಂದಿರುತ್ತಿದ್ದುವು. ಆ ಕಪ್ಪು ಕೆಂಪು ಮಡಕೆಗಳೇ ಈ ಸಂಸ್ಕೃತಿಯ ಹೆಗ್ಗುರುತೆಂದು ಪುರಾತತ್ತ್ವಜ್ಞರು ಭಾವಿಸಿದ್ದಾರೆ.

ಈ ಕಾಲದಲ್ಲಿ ಚಪ್ಪಡಿಗಳನ್ನೂ ಬಂಡೆಗಳನ್ನೂ ಸಮಾಧಿಗಳ ನಿರ್ಮಾಣದಲ್ಲಿ ಉಪಯೋಗಿಸುತ್ತಿದ್ದುದರಿಂದ ಈ ಸಂಸ್ಕೃತಿಗೆ 'ಬೃಹತ್‌ಶಿಲಾಸಮಾಧಿ ಸಂಸ್ಕೃತಿ' ಎಂದು ಹೆಸರು ಬಂದಿದೆ. ಬಂಡೆಗಳನ್ನು ವೃತ್ತಾಕಾರವಾಗಿ ಜೋಡಿಸಿ ನಿರ್ಮಾಣ ಮಾಡಿದ ೧೦ರಿಂದ ಸುಮಾರು ೧೦೦೦ದ ವರೆಗೆ ಇರುವ ಸಮಾಧಿ ಗುಂಪುಗಳು ಹಲವು ನೂರು ಸ್ಥಳಗಳಲ್ಲಿ ಕಂಡುಬಂದಿವೆ. ಈ ಸಮಾಧಿವ್ಯಾಪ್ತಿ ಹಿಂದಿನ ಸಂಸ್ಕೃತಿಗಳಂತೆ ಬಯಲುನಾಡಿಗಷ್ಟೇ ಸೀಮಿತವಾಗಿರದೆ ಸಹ್ಯಾದ್ರಿ ಬೆಟ್ಟಪ್ರದೇಶದಲ್ಲಿ ಹಾಗೂ ಕರಾವಳಿಯಲ್ಲೂ ಹರಡಿದ್ದಿತು. ಈ ಶಿಲಾವೃತ್ತ (Stone Circles) ಸಮಾಧಿಗಳ ರಚನೆಯಲ್ಲಿ ಅನೇಕ ವೈವಿಧ್ಯಗಳು ಕಂಡುಬರುತ್ತವೆ. ಕೆಲವೆಡೆ ಶಿಲಾವೃತ್ತಗಳ ಮಧ್ಯೆದೊಡ್ಡ ಚಪ್ಪಡಿಯನ್ನು ಹಾಸುಗಲ್ಲಾಗಿ ಉಪಯೋಗಿಸಿ ಅದರ ಮೇಲೆ ನಾಲ್ಕು ಚಪ್ಪಡಿಗಳನ್ನು ಪ್ರಾಯಶಃ ಸ್ವಸ್ತಿಕಾಕಾರದಲ್ಲಿ ಜೋಡಿಸಿ, (ಪೂರ್ವಭಾಗದ ಚಪ್ಪಡಿಯಲ್ಲಿ ಒಂದು ದುಂಡು ತೂತು ಸಹ ಇರುತ್ತದೆ.) ಅದನ್ನು ಮತ್ತೊಂದು ದೊಡ್ಡ ಚಪ್ಪಡಿಯಿಂದ ಮುಚ್ಚಿ ಪೆಟ್ಟಿಗೆಯಂತಾದ ಒಳಭಾಗದಲ್ಲಿ ಮಾನವನ ಅವಶೇಷಗಳನ್ನು ಇಡುವ ಸಮಾಧಿಗಳೂ ಮೂರು ದೊಡ್ಡ ಬಂಡೆಗಳನ್ನು ನೆಟ್ಟಗೆ ನೆಟ್ಟು ಮೇಲೊಂದು ಚಪ್ಪಡಿಯನ್ನು ಇಟ್ಟು ಮಾಡಿದ ಸಮಾಧಿಗಳೂ ಶಿಲಾವೃತ್ತದ ಮಧ್ಯೆ ದೊಡ್ಡ ಗುಂಡಿಯನ್ನು ತೋಡಿ ಅದರೊಳಗೆ ಮೃತನ ಅವಶೇಷಗಳನ್ನು ಇಟ್ಟಿರುವ ಸಮಾಧಿಗಳೂ ಕಂಡುಬಂದಿವೆ. ಅಲ್ಲದೆ ಶಿಲಾವೃತ್ತಗಳ ಮಧ್ಯೆ ಕೇವಲ ಒಂದು ದೊಡ್ಡ ಬಂಡೆಯನ್ನು ನೆಟ್ಟು ಅದರ ಅಡಿಯಲ್ಲಿ ಸಮಾಧಿ ಮಾಡಿರುವುದೂ ಸಾಮಾನ್ಯವಾಗಿ ಕಂಡುಬಂದಿದೆ. ಉತ್ತರ ಕರ್ಣಾಟಕದ ಹಲವೆಡೆ, ಹಲವು ನೇರ ಸಾಲುಗಳಲ್ಲಿ ದೊಡ್ಡಕಲ್ಲುಗಳನ್ನು ನೆಟ್ಟಗೆ ಜೋಡಿಸಿ ಮಾಡಿದ ಕಲ್ಲುದಾರಿ (Avenues) ಯ ರೀತಿಯ ಸಮಾಧಿಗಳೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂಡೆಗಳಲ್ಲಿ ಕೊರೆದು ಮಾಡಿದ ಸಮಾಧಿಗಳೂ ಕಂಡುಬಂದಿವೆ. ಈ ಸಮಾಧಿಗಳಲ್ಲಿ ಕಂಡುಬರುವ ಸಂಸ್ಕಾರ ವಿಧಾನ ಕುತೂಹಲಕರವಾದುದು.

ಮಾಸ್ಕಿ ಉತ್ಖನನದಲ್ಲಿ ಕಂಡುಬರುವ ಒಂದೆರಡು ಶವಗುಳಿಗಳಲ್ಲಿ ಮೃತನ ಶವವನ್ನು ಹಾಗೆಯೇ ಇಟ್ಟಿರುವುದನ್ನು ಬಿಟ್ಟರೆ, ಹೆಚ್ಚಿನೆಡೆಗಳಲ್ಲೆಲ್ಲ ಶವವನ್ನು ಸ್ವಲ್ಪದಿನಗಳ ಕಾಲ ಬಿಟ್ಟಿದ್ದು ಅದರ ಮೃದು ಭಾಗಗಳು ಪ್ರಾಣಿ ಪಕ್ಷಿಗಳು, ಕೀಟಗಳು ತಿಂದೋ ಅಥವಾ ನೈಸರ್ಗಿಕ ರಾಸಾಯನಿಕ ಕ್ರಿಯೆಗಳಿಂದ ನಶಿಸಿದ ಮೇಲೆಯೋ ಉಳಿದ ದೇಹದ ಕೇವಲ ದೊಡ್ಡ ಮೂಳೆಗಳನ್ನಷ್ಟೇ ಆರಿಸಿ ಅವನ್ನು ವಿಧಿಯುಕ್ತವಾಗಿ ಸಂಸ್ಕರಿಸುವ ರೂಢಿ ಸಾಮಾನ್ಯವಾಗಿ ಕಂಡುಬರುತ್ತದೆ. ಒಂದೇ ಸಮಾಧಿಯಲ್ಲಿ ಹಲವು ವ್ಯಕ್ತಿಗಳ ಮೂಳೆಗಳನ್ನು ಒಟ್ಟಾಗಿ ಸೇರಿಸಿ ಸಮಾಧಿಮಾಡುವ ರೂಢಿ ವಿಶೇಷವಾಗಿ ಪ್ರಚಲಿತವಾಗಿದ್ದಿತು.

ಈ ಸಮಾಧಿಗಳಲ್ಲಿ ಮೃತನ ಅವಶೇಷಗಳ ಜೊತೆಯಲ್ಲಿ ಪ್ರಾಯಶಃ ಅನೇಕ ಖಾದ್ಯ ಪಾನೀಯಗಳನ್ನು ತುಂಬಿಪ್ಪ ಮಡಕೆಗಳೂ ಕಬ್ಬಿಣದ ಆಯುಧಗಳೂ ಉಪಕರಣ ಗಳೂ ಇಡಲಾಗುತ್ತಿದ್ದವು. ಇಂಥ ಅನೇಕ ಸಮಾಧಿಗಳನ್ನು ಬಿಜಾಪುರ ಜಿಲ್ಲೆಯ ತೇರದಾಳ್, ಹಲಿಂಗಲಿ, ರಾಯಚೂರು ಜಿಲ್ಲೆಯ ಮಾಸ್ಕಿ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಬೆಂಗಳೂರು ಜಿಲ್ಲೆಯ ಜಡಿಗೇನಹಳ್ಳಿ ಮುಂತಾದೆಡೆ ಶಾಸ್ತ್ರೀಯವಾಗಿ ಅಗೆದು ಅಧ್ಯಯನ ಮಾಡಿದ್ದಾರೆ. ಈ ಸಮಾಧಿಗಳಲ್ಲದೆ ಅಂದಿನ ಜನ ವಾಸಿಸುತ್ತಿದ್ದ ಹಲವು ಗ್ರಾಮನೆಲೆಗಳನ್ನು ಗುರುತಿಸಲಾಗಿದೆ. ಅವುಗಳಲ್ಲಿ ಉತ್ಖನನ ನಡೆದಿರುವ ಬ್ರಹ್ಮಗಿರಿ ಮತ್ತು ಮಾಸ್ಕಿ ಮುಖ್ಯವಾದುದು. ಇವೆಲ್ಲ ಉತ್ಖನನಗಳು ಮತ್ತು ಅನ್ವೇಷಣೆಗಳಿಂದ ಬೃಹತ್ ಶಿಲಾಯುಗ ಸಂಸ್ಕೃತಿಯ ಹಲವು ಸಾಮಾನ್ಯಾಂಶಗಳು ಎದ್ದು ಕಾಣುತ್ತವೆ.

ಮೊದಲಾಗಿ ಈ ಸಮಾಧಿಗಳು ಕರ್ನಾಟಕದ ಎಲ್ಲ ಪ್ರದೇಶಗಳಲ್ಲೂ ದೊರಕುವುದರಿಂದ ಈ ಕಾಲದಲ್ಲಿ ಸಾಕಷ್ಟು ಹೆಚ್ಚಿನ ಜನಸಂಖ್ಯೆಯಿದ್ದು ಹೆಚ್ಚಿನ ಪ್ರದೇಶಗಳನ್ನು ಅಬಾದಿಗೆ ತಂದಿರಬೇಕು. ಎರಡನೆಯದಾಗಿ ಸಮಾಧಿಗಳಲ್ಲಿ ಸಹ ಕಬ್ಬಿಣದ ಆಯುಧಗಳು ಇತ್ಯಾದಿ ಗಳೂ ಇಡಬೇಕಾದರೆ, ಅಂದಿನ ಕಾಲದ ಹಲವು ವರ್ಗಗಳಲ್ಲಾದರೂ ನಿತ್ಯಾವಶ್ಯಕತೆಗೂ ಹೆಚ್ಚಿನ ಸಂಪತ್ತು ಕೇಂದ್ರೀಕೃತವಾಗಿರಬೇಕು. ಮೂರನೆಯದಾಗಿ, ಆ ವರ್ಗಗಳಲ್ಲಿ ಇಂಥ ಸಂಪತ್ತು ಒಟ್ಟುಗೂಡಬೇಕಾದರೆ ಅಂದಿನ ಜನಜೀವನದ ಆರ್ಥಿಕ ಸ್ಥಿತಿ ಸಹ ಉತ್ತಮವಾಗಿರಬೇಕು. ನಾಲ್ಕನೆಯದಾಗಿ ಹಲವು ಕಡೆಗಳಲ್ಲಿ ಕಂಡುಬರುವ ಸಮಾಧಿ ಗಳಿಗೆ ಮತ್ತು ಅಲ್ಲಿ ಸಿಗುವ ವಸ್ತುಗಳಿಗೆ ಸಾಮ್ಯ ಇರುವುದರಿಂದ ವಿಶಾಲ ಪ್ರದೇಶದಲ್ಲಿ ಏಕರೂಪ ಸಂಸ್ಕೃತಿ ಹರಡಿರಬೇಕು ಮತ್ತು ಸಹಜವಾಗಿ ಆಂತರಿಕ ವ್ಯಾಪಾರ ಬೆಳೆದಿರ ಬೇಕು. ಇದೇ ರೀತಿಯ ಶಿಲಾಸಮಾಧಿಗಳು ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ ಹಾಗೂ ಇನ್ನಿತರ ಪ್ರದೇಶಗಳಲ್ಲಿ ಸಮಕಾಲದಲ್ಲಿ ಸಮಸ್ಥಿತಿಸ್ವರೂಪದಲ್ಲಿ ಇರುವುದರಿಂದ ಅಂದಿನ ಕರ್ನಾಟಕ ಸಂಸ್ಕೃತಿ ಎಂಬುದು ಈ ವಿಶಾಲಪ್ರದೇಶದಲ್ಲಿ ಹರಡಿದ್ದ ಸಂಸ್ಕೃತಿಯ ಭಾಗವಾಗಿರಬೇಕು ಎಂದು ತೀರ್ಮಾನಿಸಬಹುದು. ಈ ಕೊನೆಯ ಅಂಶದ ಆಧಾರದ ಮೇಲೆ ಎಂದರೆ ತಮಿಳುನಾಡಿನ ಬೃಹತ್ ಶಿಲಾಸಮಾಧಿ ಸಂಸ್ಕೃತಿಗಳಿಂದ ಹೊರಬಿದ್ದಿರುವ ಮಾಹಿತಿಗಳಿಂದ ಕರ್ನಾಟಕದಲ್ಲಿ ನೀರಾವರಿ ವ್ಯವಸಾಯ ಎಂದರೆ ಕೆರೆಗಳ ನಿರ್ಮಾಣ, ಬತ್ತದ ಬೆಳೆ ಮುಂತಾದವು ಈ ಕಾಲದಲ್ಲಿ ಪ್ರಾರಂಭವಾಗಿರ ಬೇಕೆಂದು ಹೇಳಬಹುದು. ಇದೇ ರೀತಿಯ ಬೃಹತ್ ಶಿಲಾಸಮಾಧಿಗಳು ಯುರೋಪ್ ಖಂಡದಲ್ಲಿ ಹಾಗೂ ಪಶ್ಚಿಮ ಏಷ್ಯಾ ಮತ್ತು ಆಗ್ನೇಯ ಏಷ್ಯಾದಲ್ಲೂ ಕಂಡುಬಂದಿವೆ. ಆದರೆ ಇವುಗಳ ಕಾಲ ಮತ್ತು ಸ್ವರೂಪ ಭಾರತೀಯ ಶಿಲಾಸಮಾಧಿಗಳಿಗಿಂತ ಭಿನ್ನ ವಾಗಿರುವುವಲ್ಲದೆ ಇವು ಬೇರೆಯ ಕಾಲಕ್ಕೆ ಸೇರಿದವೂ ಆಗಿವೆ. ಆದ್ದರಿಂದ ಈ ನಾಡಿನ ಮತ್ತು ಇತರೆಡೆಗಳ ಬೃಹತ್ ಶಿಲಾಸಮಾಧಿ ಸಂಸ್ಕೃತಿಗೆ ಇದ್ದ ಸಂಬಂಧವೇನೆಂಬುದು ಸ್ಪಷ್ಟವಾಗಿಲ್ಲ.

ಒಟ್ಟಿನಲ್ಲಿ ಶಿಲಾಸಮಾಧಿ ಸಂಸ್ಕೃತಿಯ ಕಾಲ ಆರ್ಥಿಕ ಸಮೃದ್ಧಿಯ ಕಾಲ,

ಸಾಂಸ್ಕೃತಿಕ ಏಕರೂಪತೆ ಹರಡಿದ ಕಾಲ. ಆದರೆ ಸಂಶೋಧನೆಗಳಲ್ಲಿ ಹೆಚ್ಚಿನವು ಸಮಾಧಿಗಳ ಅಧ್ಯಯನಕ್ಕೇ ಮೀಸಲಾಗಿರುವುದರಿಂದ ಇತರ ಜೀವನ ವಿಧಾನಗಳ ಮತ್ತು ಸಾಂಸ್ಕೃತಿಕ ಅಂಶಗಳ ಬಗ್ಗೆ ವಿವರಗಳು ಅವಿದಿತವಾಗಿವೆ. ಕಲೆ, ಸಾಹಿತ್ಯ ಇತ್ಯಾದಿಗಳು ಬೆಳೆಯಲು ಬೇಕಾದ ಆರ್ಥಿಕ ಸಾಂಸ್ಕೃತಿಕ ಪರಿಸರವಿದ್ದರೂ ಅಂದಿನ ಸಾಧನೆ ಏನೆಂಬುದನ್ನು ಇನ್ನೂ ಗುರುತಿಸಲಾಗಿಲ್ಲ.

ಈ ಬೃಹತ್ ಶಿಲಾಸಮಾಧಿ ಸಂಸ್ಕೃತಿಗೆ ಕಾರಣರಾದ ಜನ ಹೊರಗಿನಿಂದ ಬಂದವರೋ ಅಥವಾ ಇಲ್ಲಿಯೇ ಹಿಂದಿದ್ದ ಜನಗಳೇ ಹೊರಗಿನ ಪ್ರಭಾವಗಳಿಂದ ಹೊಸ ಜೀವನ ವಿಧಾನಗಳನ್ನು ರೂಪಿಸಿಕೊಂಡು ನವಸಂಸ್ಕೃತಿಗೆ ಕಾರಣರಾದರೋ ಅಥವಾ ಈ ಎರಡು ಕಾರಣಗಳೂ ಪರಸ್ಪರಾನುವರ್ತಿಯಾಗಿದ್ದವೋ ತಿಳಿಯುವುದು ಕಷ್ಟ. ಅಂದು ಕರ್ನಾಟಕದಲ್ಲಿದ್ದ ಜನಸಮೂಹದಲ್ಲಿ ಹಿಂದಿದ್ದ ಬುಡಕಟ್ಟಿನವರೂ ಇದ್ದರೆಂಬುದು ಸ್ಪಷ್ಟ. ಬೇರೆ ಬುಡಕಟ್ಟಿನವರೂ ಇಲ್ಲಿಗೆ ಈ ಕಾಲದಲ್ಲಿ ಬಂದು ನೆಲಸಿದರೇ ಎಂದು ಹೇಳುವುದು ಸದ್ಯದ ಸಂಶೋಧನಸ್ಥಿತಿಯಲ್ಲಿ ಸುಲಭಸಾಧ್ಯವಿಲ್ಲ. ಈ ಬೃಹತ್ ಶಿಲಾಸಮಾಧಿ ಸಂಸ್ಕೃತಿಯನ್ನು ಹರಡಿದ ಜನವೇ ದ್ರಾವಿಡ ಭಾಷೆಯನ್ನು ಈ ನಾಡಿಗೆ ತಂದವರೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಹಾಗಿದ್ದಲ್ಲಿ ಇಲ್ಲಿದ್ದ ತಾಮ್ರ ಶಿಲಾಯುಧ ಸಂಸ್ಕೃತಿಗಳ ಜನ ಆಡುತ್ತಿದ್ದ ಭಾಷೆಯಾವುದು, ಆ ಭಾಷೆ ಏನಾಯಿತು, ಅದು ಇದ್ದಲ್ಲಿ ಇಂದಿನ ದ್ರಾವಿಡ ಭಾಷೆಯಲ್ಲೇ ಅದು ಮಿಳಿತವಾಗಿದೆಯೇ—ಇತ್ಯಾದಿ ಕ್ಲಿಷ್ಟ ಸಮಸ್ಯೆಗಳಿಗೆ ಸರಿಯಾದ ಉತ್ತರ ಸಿಗುವುದಿಲ್ಲ. ಬ್ರಹ್ಮಗಿರಿ ಮಾಸ್ಕಿ ಮುಂತಾದೆಡೆ ನಡೆದಿರುವ ಉತ್ಖನನಗಳಿಂದ ಈ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಅನಂತರ ಕಂಡುಬರುವುದು ಬಿಳಿಸುದ್ದೆಯಿಂದ ಅಲಂಕೃತವಾದ ಮಡಕೆಗಳನ್ನು ಉಪಯೋಗಿಸುತ್ತಿದ್ದ ಕಾಲ. ಈ ಘಟ್ಟದಲ್ಲಿ ನಾಗರಿಕ ಸಂಸ್ಕೃತಿ ಎಂದರೆ ಪಟ್ಟಣಗಳ ಬೆಳೆವಣಿಗೆ ಮೊದಲಾಗಿ ಕಂಡುಬರುತ್ತವೆ. ಜೊತೆಯಲ್ಲೇ ಇಟ್ಟಿಗೆಯಿಂದ ಕಟ್ಟಿದ ಭಾರಿ ಕಟ್ಟಡಗಳ ನಿರ್ಮಾಣ, ನಾಣ್ಯಗಳ ಉಪಯೋಗ ಮುಂತಾದ ಹಲವು ವಿಶಿಷ್ಟ ನೂತನಾಂಶಗಳು ಕಾಣಸಿಗುತ್ತವೆ. ಅಲ್ಲದೆ ಇಲ್ಲಿ ದೊರೆತಿರುವ ವಸ್ತು ಹಾಗೂ ವಾಸ್ತುಗಳ ಆಧಾರಗಳಿಂದ ತತ್ಕಾಲದಲ್ಲಿ ಕೆಲವು ಔತ್ತರೇಯ ಧರ್ಮಗಳು (ಹಿಂದು, ಬೌದ್ಧ) ಇಲ್ಲಿದ್ದವು ಎಂಬುದು ಸ್ಪಷ್ಟವಾಗಿದೆ. ಹಾಗೂ ಈ ಕಾಲದಲ್ಲಿ ಬೇರೆ ಬೇರೆ ದೇಶಗಳೊಡನೆ ವ್ಯಾಪಾರ ಸಂಪರ್ಕಗಳು ಬೆಳೆದಿದ್ದವೆಂಬುದು ಬ್ರಹ್ಮಗಿರಿ, ಚಂದ್ರವಳ್ಳಿ, ಕಾರವಾರ, ಜಾಲಹಳ್ಳಿ ಇತ್ಯಾದೆಡೆಗಳಲ್ಲಿ ದೊರೆತಿರುವ ರೋಮನ್ ಅರಸರ ನಾಣ್ಯಗಳು, ಮೆಡಿಟರೇನಿಯನ್ ಪ್ರದೇಶದಲ್ಲಿ ತಯಾರಾದ ಆಂಫ್ರೋರಾ ಎಂಬ ರೀತಿಯ ಮಡಕೆಗಳು, ಅಲ್ಲಿನ ರೌಲೆಟೆಡ್ ಆರೆಟೈನ್ ಎಂಬ ವಿಶಿಷ್ಟ ರೀತಿಯ ಮಡಕೆಗಳು—ಇತ್ಯಾದಿಗಳಿಂದ ಸ್ಪಷ್ಟವಾಗುತ್ತದೆ. ಕರ್ನಾಟಕದಲ್ಲಿ ನಗರಘಟ್ಟದ (Urban State) ಸಂಸ್ಕೃತಿ ಪ್ರಾರಂಭವಾದ್ದು ಈ ಕಾಲದಲ್ಲಿ. ಬರಹದ ಕಲೆ ಕರ್ನಾಟಕದಲ್ಲಿ ರೂಢಿತವಾದ್ದೂ ಅಂದೇ. ಈ ಘಟ್ಟ ಪ್ರಾಯಶಃ ನಂದ ಮೌರ್ಯರ ಆಳ್ವಿಕೆಯ ಕಾಲದಲ್ಲಿ ಬೀಜರೂಪವಾಗಿದ್ದು ಶಾತವಾಹನರ

ಆಳ್ವಿಕೆಯ ಕಾಲದಲ್ಲಿ ಚೆನ್ನಾಗಿ ಬೆಳೆದಿರಬೇಕು ; ಎಂದರೆ ಕರ್ನಾಟಕದ ನಗರ ಸಂಸ್ಕೃತಿಯ ಘಟ್ಟದ ಕಾಲ ಆದಿಚಾರಿತ್ರಿಕ ಯುಗಕ್ಕೆ ಸೇರಿದ್ದಾಗಿದೆ. ಆದರೆ ಪುರಾತತ್ತ್ವ ಸಂಶೋಧನೆಯಿಂದ ದೊರೆತ ಆಧಾರಗಳನ್ನೂ ಲಿಖಿತ ಆಧಾರಗಳನ್ನೂ ಒಟ್ಟುಗೂಡಿಸಿ ಕರ್ನಾಟಕದಲ್ಲಿ ಈ ಘಟ್ಟದ ಸ್ಪಷ್ಟ ಚಿತ್ರಣವನ್ನು ರೂಪಿಸುವುದು ಇನ್ನೂ ಸಾಧ್ಯವಾಗಿಲ್ಲ.

ಈಗ ಚಾರಿತ್ರಿಕ ಕಾಲದ ಕರ್ನಾಟಕದ ರಾಜಕೀಯ ವಿದ್ಯಮಾನಗಳನ್ನೂ ಬಳಿಕ ಸಾಮಾಜಿಕ ಸಾಂಸ್ಕೃತಿಕ ವಿದ್ಯಮಾನಗಳನ್ನೂ ಸ್ಥೂಲವಾಗಿ ಪರಿಚಯಮಾಡಿಕೊಳ್ಳಲು ಮುಂದುವರಿಯಬಹುದು.

## ರಾಜಕೀಯ ಚರಿತ್ರೆ

### ಪೀಠಿಕೆ

ಕ್ರಿ.ಪೂ. ೪-೩ನೆಯ ಶತಮಾನಗಳಿಂದಲೇ ಕರ್ನಾಟಕ ಒಂದು ವಿಶಿಷ್ಟವಾದ ಭೂಭಾಗವಾಗಿ ರೂಪುಗೊಂಡಿತ್ತೆಂಬುದು ಎಲ್ಲ ವಿಧದ ಆಧಾರಗಳಿಂದಲೂ ಈಗ ವ್ಯಕ್ತಪಟ್ಟಿದೆ. ಸಾಹಿತ್ಯಿಕ ಆಧಾರಗಳಿಗಿಂತಲೂ ಹೆಚ್ಚು ಖಚಿತವಾದ ಶಾಸನಾಧಾರಗಳಿಂದ ಈ ಅಂಶವನ್ನು ಸ್ಪಷ್ಟಗೊಳಿಸಬಹುದು. ಮಾಸ್ಕಿಯಲ್ಲಿ ದೊರೆತ ಅಶೋಕನ ಶಾಸನದಲ್ಲಿ ಅಶೋಕನನ್ನು ವಾಡಿಕೆಯಂತೆ ದೇವನಾಂಪ್ರಿಯನೆಂದು ಕರೆದಿರುವುದಲ್ಲದೆ, ಅವನ ವೈಯಕ್ತಿಕ ಹೆಸರಾದ ಅಶೋಕ ಎಂಬುದನ್ನೂ ಬಳಸಲಾಗಿದೆ. ಇದನ್ನು ಹೊರತುಪಡಿಸಿದರೆ ಗುಜರಾತ್ರದಲ್ಲಿನ ಆತನ ಇನ್ನೊಂದು ಶಾಸನದಲ್ಲಿ ಮಾತ್ರವೇ ಈ ಹೆಸರನ್ನು ಉಪಯೋಗಿಸಲಾಗಿದೆ.

ಅಶೋಕನ ಕಿರಿಯ ಬಂಡೆಶಾಸನಗಳು ಕರ್ನಾಟಕದ ರಾಯಚೂರಿನ ಮಾಸ್ಕಿ ಹಾಗೂ ಕೊಪ್ಪಳಗಳಲ್ಲಿಯೂ ಚಿತ್ರದುರ್ಗದ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರಗಳಲ್ಲಿಯೂ ದೊರೆತಿವೆ. ಅಶೋಕನು ತನ್ನ ರಾಜ್ಯದ ಎಲ್ಲೆಗಳಲ್ಲೆಲ್ಲ ತನ್ನ ಈ ಶಾಸನಗಳನ್ನು ಸ್ಥಾಪಿಸಿದನೆಂಬುದನ್ನೂ ತಮಿಳುನಾಡಿನ ಚೋಳ ಪಾಂಡ್ಯ ದೇಶಗಳು ಅವನ ರಾಜ್ಯದ ಹೊರಪ್ರದೇಶಗಳಾಗಿತ್ತೆಂಬ ವಿಷಯ ಅವನ ಶಾಸನಗಳಿಂದಲೇ ವ್ಯಕ್ತವಾಗುವುದನ್ನೂ ಗಮನಿಸಿದಲ್ಲಿ ಕರ್ನಾಟಕ ಅಂದು, ಕ್ರಿ.ಪೂ. ೩ನೆಯ ಶತಮಾನದಲ್ಲಿ, ಮೌರ್ಯ ಸಾಮ್ರಾಜ್ಯದ ಒಂದು ಭಾಗವಾಗಿತ್ತೆಂಬ ವಿಷಯ ಖಚಿತಗೊಳ್ಳುತ್ತದೆ. ಅಶೋಕನು ಕಳಿಂಗದೇಶವನ್ನು ಹೊರತು ಬೇರಾವ ಪ್ರದೇಶವನ್ನೂ ಜಯಿಸಲಿಲ್ಲ. ಎಂದ ಮೇಲೆ ಆತನು ಕಳಿಂಗದೇಶವನ್ನು ಮಾತ್ರ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನೆಂಬುದು ಸ್ಪಷ್ಟ. ಹಾಗಿದ್ದಲ್ಲಿ ಕರ್ನಾಟಕವು ಆ ಮೊದಲೇ ಮೌರ್ಯ ಸಾಮ್ರಾಜ್ಯದ ಅಂಗವಾಗಿದ್ದಿರಬೇಕು. ಅಶೋಕನ ತಂದೆ ಬಿಂದುಸಾರನ ವಿಷಯ ನಮಗೆ ಹೆಚ್ಚಿಗೆ ತಿಳಿಯದು. ಆತನ ತಂದೆಯಾದ ಚಂದ್ರಗುಪ್ತಮೌರ್ಯನು ಕರ್ನಾಟಕದ ಶ್ರವಣಬೆಳಗೊಳಕ್ಕೆ ತನ್ನ ಗುರುವಾದ ಭದ್ರಬಾಹುವಿನೊಡನೆ ಬಂದನೆಂಬ ಸಾಂಪ್ರದಾಯಿಕ ಕತೆಗಳಿವೆ. ಕ್ರಿ.ಶ. ಸು. ೬–೭ನೆಯ ಶತಮಾನಗಳಲ್ಲಿ ಹುಟ್ಟಿದ ಶ್ರವಣಬೆಳಗೊಳದ ಶಾಸನವೇ

ಇದಕ್ಕೆ ಆಧಾರವೆನಿಸುತ್ತವೆ. ಎಂದರೆ, ಆ ವೇಳೆಗಾಗಲೇ ಆ ಕತೆ ಜನರಲ್ಲಿ ಬೇರೂರಿರಬೇಕು. ಈ ಚಂದ್ರಗುಪ್ತನು ಅಶೋಕನ ಅಜ್ಜನಾಗಿರವೆ, ಆತನ ಮೊಮ್ಮಗನಾದ ಸಂಪ್ರತಿ ಚಂದ್ರಗುಪ್ತನೆಂದು ಹಲವರು ವಾದಿಸಿದ್ದಾರೆಂಬುದು ಗಮನಾರ್ಹವಾದರೂ ಇದಮಿತ್ಥಂ ಎಂದು ಹೇಳಲು ಪ್ರಸ್ತುತ ಆಧಾರಗಳಿಂದ ಸಾಧ್ಯವಿಲ್ಲವಾಗಿದೆ.

ಇದರ ಜೊತೆಗೆ ಇನ್ನೊಂದು ಸಾಂಪ್ರದಾಯಿಕ ನಂಬುಗೆಯನ್ನೂ ಇಲ್ಲಿ ಹೇಳಬೇಕಾಗುತ್ತದೆ. 'ಮಹಾವಂಶ', 'ಬೃಹತ್ಕಥಾ', 'ಮುದ್ರಾರಾಕ್ಷಸ' ಮುಂತಾದ ಗ್ರಂಥಗಳಲ್ಲಿನ ಹೇಳಿಕೆಗಳನ್ನು ಇವುಗಳೊಂದಿಗೆ ಮೇಳಯಿಸಿದಾಗ ಸ್ಥೂಲವಾದ ಚಿತ್ರವೊಂದು ನಮ್ಮ ಕಣ್ಣೆದುರು ನಿಲ್ಲುತ್ತದೆ. ನಂದವಂಶದ ಮಹಾಪದ್ಮನಂದನು ಪ್ರಬಲನಾದ ಅರಸನಾಗಿದ್ದನು. ಪುರಾಣಗಳು ಅವನನ್ನು ಸರ್ವಕ್ಷತ್ರಾನ್ತಕನೆಂದೂ ಏಕರಾಟ್ ಎಂದೂ ವರ್ಣಿಸಿವೆ. ಅಲೆಕ್ಸಾಂಡರನೊಡಗೂಡಿ ಬಂದ ಗ್ರೀಕ್ ಲೇಖಕರೂ ಮತ್ತಿತರರೂ ಆತನ ಸಾಮ್ರಾಜ್ಯದ ಸಾಮರ್ಥ್ಯವನ್ನು ಕುರಿತು ಬರೆದಿರುವುದು ಇದಕ್ಕೆ ಪುಷ್ಟಿಕೊಡುತ್ತದೆ. ಕರ್ಣಾಟಕದಲ್ಲಿ ದೊರೆತ, ಕ್ರಿ.ಶ. ೧೨ನೆಯ ಶತಮಾನದ ಶಾಸನಗಳಲ್ಲಿ ಕುಂತಲವು ನಂದ ಸಾಮ್ರಾಜ್ಯದ ಒಂದು ಭಾಗವೆಂದಿರುವುದನ್ನು ಇವುಗಳೊಡನೆ ಗಮನಿಸಬೇಕು. ಅಶೋಕನಂತೆಯೇ ಚಂದ್ರಗುಪ್ತನು ಸಹ ದಕ್ಷಿಣ ಭಾರತದ—ದಖನ್ ಪ್ರಸ್ಥಭೂಮಿಯ—ಪ್ರದೇಶದವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನೆಂದು ಹೇಳಲು ಯಾವ ಆಧಾರವೂ ಇಲ್ಲ. ಎಂದಮೇಲೆ ಕರ್ನಾಟಕವು ನಂದರಿಂದ ಗೆದ್ದುಕೊಂಡ ಸಾಮ್ರಾಜ್ಯದ ಒಂದು ಭಾಗವಾಗಿದ್ದಿರಬಹುದೆಂಬ ಊಹೆಯನ್ನು ಅಲ್ಲಗಳೆಯುವಂತಿಲ್ಲ. ಅಂದಿನಿಂದಲೇ, ಎಂದರೆ ಕ್ರಿ.ಪೂ. ೩ನೆಯ ಶತಮಾನದಿಂದಲೇ, ಕನ್ನಡನಾಡು ವೈಶಿಷ್ಟ್ಯವನ್ನು ಪಡೆದುಕೊಂಡಿತ್ತು.

ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಸುವರ್ಣಗಿರಿಯಲ್ಲಿದ್ದ ಆರ್ಯಪುತ್ರ ಹಾಗೂ ಮಹಾಮಾತ್ರರು ಇಸಿಲದ ಮಹಾಮಾತ್ರರಿಗೆ ನೀಡಿದ ನಿರ್ದೇಶವಿದೆ. ಆರ್ಯಪುತ್ರ ಎಂಬುದು ರಾಜಪುತ್ರ ಯುವರಾಜನಿಗೆ ಸಂಬಂಧಿಸಿದ ಪದ. ಎಂದಮೇಲೆ ಈ ಭಾಗ ಸಾಮ್ರಾಜ್ಯದ ಆಡಳಿತ ಪ್ರಾಂತಗಳಲ್ಲೊಂದಾಗಿದ್ದು ಇಲ್ಲಿ ಒಬ್ಬ ರಾಜಪುತ್ರನು ಆಡಳಿತಕ್ಕಾಗಿ ನೇಮಕಗೊಂಡಿದ್ದನೆಂದಾಗುತ್ತದೆ. ಈ 'ಇಸಿಲ' ಎಂಬ ಪದ ಕನ್ನಡದ ಅತಿ ಪ್ರಾಚೀನ ಪದಗಳಲ್ಲೊಂದೆಂದು ದಿವಂಗತ ಡಿ. ಎಲ್. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ. ಪ್ರಾಚೀನ ಕನ್ನಡದ ಎಸಿಲ್ (ಕೋಟೆ) ಎಂಬ ಪದದ ಆರ್ಯೀಕರಣ ಮಾಡಲ್ಪಟ್ಟ ಪದವಿದೆಂದೂ ತಮಿಳಿನ 'ಎಯಿಲ್'ಗೆ ಸಮಾನವಾದ ಅತಿ ಪ್ರಾಚೀನ ಕನ್ನಡ ಪದವೆಂದೂ ಅವರು ಊಹಿಸಿದ್ದಾರೆ.[1] ಇಸಿಲ ಎಂಬುದೊಂದು ಸ್ಥಳನಾಮ. ಸುವರ್ಣಗಿರಿ ಆತನ ಮುಖ್ಯಸ್ಥಳ. ಇದು ಈಗಿನ ಮಾಸ್ಕಿ ಸಮೀಪದ ಕನಕಗಿರಿಯೆಂದು ಕೆಲವರೂ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಜೊನ್ನಗಿರಿ ಎಂದು ಇತರರೂ ಊಹಿಸಿದ್ದಾರೆ. ಇದು ಬ್ರಹ್ಮಗಿರಿಯೇ ಹೌದೆಂಬ ಅಭಿಪ್ರಾಯವಿದೆ. ಇಲ್ಲಿ ಮಹಾಮಾತ್ರನೊಬ್ಬ ರಾಜಪುತ್ರನ ಅಧೀನದಲ್ಲಿ ಆಳುತ್ತಿದ್ದು ಇದರಿಂದ ಮೌರ್ಯ ಸಾಮ್ರಾಜ್ಯದ ಪ್ರಾಂತವಾಗಿ ಕರ್ನಾಟಕ ಅಂದು ಮೆರೆದಿತ್ತೆಂಬುದಂತೂ ನಿರ್ವಿವಾದ.

## ಸಾತವಾಹನರು

ಹೀಗೆ ಕ್ರಿ.ಪೂ. ೪-೩ನೆಯ ಶತಮಾನಗಳ ವೇಳೆಗಾಗಲೇ ರಾಜಕೀಯವಾಗಿ ಕರ್ನಾಟಕ ತಲೆ ಎತ್ತಿತ್ತು. ಮೌರ್ಯ ಸಾಮ್ರಾಜ್ಯದಲ್ಲಿ ಆಳಿದ ಕಾಣ್ವಾಯನ ವಂಶದ ಕೊನೆಯ ಅರಸನಾದ ಸುಶರ್ಮನನ್ನು ಆಂಧ್ರನಾದ ಸೀಮುಕನು ಸದೆಬಡಿದು ಮಗಧ ಸಾಮ್ರಾಜ್ಯದ ಅವನತಿಗೆ ಕಾರಣನಾದನು. ಆದರೆ ಸ್ವತಃ ಸೀಮುಕನು ಅಲ್ಲಿ ನೆಲೆಗೊಂಡು ಆಳಲಿಲ್ಲ. ಈತನು ಆಂಧ್ರ ಅರಸರ ಮೂಲಪುರುಷ. ದಖನ್ ಪ್ರಸ್ಥಭೂಮಿಯಲ್ಲಿ ಮೌರ್ಯರ ನಂತರ ತಲೆಯೆತ್ತಿದ ಅರಸು ಮನೆತನ ಸಾತವಾಹನರದು. ಇವರನ್ನು ದಕ್ಷಿಣಾಪಥದ ಅಧಿಪತಿಗಳೆಂದು ಕರೆಯಲಾಗಿದೆ. ದಕ್ಷಿಣಾಪಥ ಎಂಬ ಮಾತು ವಿಂಧ್ಯ ಪರ್ವತದ ದಕ್ಷಿಣಕ್ಕಿದ್ದ ಭಾರತದ ಭೂಭಾಗವೆಂಬುದು ಈ ಮಾತಿನ ವಿಶಾಲವಾದ ಅರ್ಥ ವಾದರೂ ಸಾತವಾಹನರ ಕಾಲಕ್ಕೆ ಅನ್ವಯಿಸಿದಂತೆ ದಕ್ಷಿಣಾಪಥವು ಈಗಿನ ಮಹಾರಾಷ್ಟ್ರ ಹಾಗೂ ಅದರ ಪೂರ್ವ ಮತ್ತು ಪಶ್ಚಿಮಕ್ಕಿರುವ ಪರಿಸರ ಪ್ರದೇಶಗಳಿಗೆ ಮಾತ್ರ ಅನ್ವಯಿಸಿ ದಂತೆ ತೋರುತ್ತದೆ. ಅದರಲ್ಲಿಯೂ ಸಾತವಾಹನ ವಂಶದ ಮೊದಲ ಅರಸರ ರಾಜ್ಯ ಈ ಪ್ರದೇಶಕ್ಕಷ್ಟೇ ಸೀಮಿತವಾಗಿದ್ದುದರಿಂದ ಅಂದು ಬಳಕೆಯಲ್ಲಿದ್ದ ದಕ್ಷಿಣಾಪಥ ಎಂಬ ಪದವನ್ನು ಸೀಮಿತವಾಗಿಯೇ ಅರ್ಥೈಸಬೇಕಾಗುತ್ತದೆ.

ಶಾಸನಗಳಲ್ಲಿ ಸಾತವಾಹನ ಕುಲಕ್ಕೆ ಸೇರಿದವರೆಂದು ಹೇಳಲಾದ ಈ ವಂಶದ ಅರಸ ರನ್ನು ಪುರಾಣಗಳಲ್ಲಿ ಆಂಧ್ರ ಅಥವಾ ಆಂಧ್ರಭೃತ್ಯರೆಂದು ಕರೆಯಲಾಗಿದೆ. ಈ ವ್ಯತ್ಯಾಸ ಆಂಧ್ರರೂ ಸಾತವಾಹನರೂ ಭಿನ್ನರೆಂಬ ಒಂದು ವಾದಕ್ಕೆ ಎಡೆಕೊಟ್ಟಿದೆ. ಆಂಧ್ರಭೃತ್ಯ ಎಂಬ ಪದದ ವಿಶ್ಲೇಷಣೆಯನ್ನು ಕುರಿತೇ ಭಿನ್ನಾಭಿಪ್ರಾಯಗಳಿವೆ. ಮೂಲತಃ ಮೌರ್ಯ ಅಥವಾ ಶುಂಗ ಮನೆತನದ ಅರಸರ ಭೃತ್ಯರಾಗಿದ್ದವರೆಂಬ ಕಾರಣ ಇವರು ಆಂಧ್ರಭೃತ್ಯರೆನಿಸಿಕೊಂಡರು ಎಂಬುದೊಂದು ವಾದ. ಆಂಧ್ರರಿಗೆ ಭೃತ್ಯರಾಗಿದ್ದವರು ಎಂಬರ್ಥದಲ್ಲಿ ಆಂಧ್ರಭೃತ್ಯರು ಆಂಧ್ರರಾಗಿರದೆ ಅವರ ಭೃತ್ಯ ರಾದ ಸಾತವಾಹನರಾಗಿದ್ದಿರಬಹುದೆಂಬ ಅಥವಾ ಆಂಧ್ರರ ಅಧೀನದಲ್ಲಿದ್ದ ಆಭೀರರೇ ಆಂಧ್ರಭೃತ್ಯರೆಂಬ ವಾದಗಳೂ ಇವೆ. ಈ ವಾದವಿವಾದಗಳಾವುವಕ್ಕೂ ಖಚಿತವಾದ ಆಧಾರಗಳಿಲ್ಲದಿರುವ ಕಾರಣ ಅವುಗಳೆಲ್ಲಾ ಊಹೆಗಳಾಗಿಯೇ ಉಳಿದಿವೆ.

ಆದರೆ ಸಾತವಾಹನರ ಶಾಸನಗಳಲ್ಲಿ ಹಾಗೂ ಪುರಾಣಗಳಲ್ಲಿ ಉಕ್ತರಾದ ಆಂಧ್ರರಿಗೆ ಸಂಬಂಧಿಸಿದ ಹೇಳಿಕೆಗಳ ತುಲನಾತ್ಮಕ ದೃಷ್ಟಿಯಿಂದ ಹೇಳಬೇಕಾದಲ್ಲಿ, ಪುರಾಣಗಳು ರೂಪುಗೊಳ್ಳುವ ವೇಳೆಗೆ ಆಂಧ್ರಪ್ರದೇಶದಲ್ಲಿ ಹೊರಗಿನಿಂದ ಬಂದ ಇವರು ಸ್ಥಿರವಾಗಿ ನೆಲೆಸಿದ್ದ ಕಾರಣ ಇವರನ್ನು ಆಂಧ್ರರೆಂದು ಕರೆಯುವ ಪರಿಸ್ಥಿತಿ ಪುರಾಣಗಳಲ್ಲಿ ಉದ್ಭವಿಸಿ ತೆಂದು ಹೇಳಬಹುದು.

ಸಾತವಾಹನ ಎಂದರೇನು ? ಸಾತ ಎಂಬುದಕ್ಕೆ ಸೂಕ್ಷ್ಮವಾದ ಅಥವಾ ವೇಗವಾದ ಎಂದು ಅರ್ಥವಿರುವುದರಿಂದ ಸಾತವಾಹನ ಎಂದರೆ ಶೀಘ್ರಗಾಮಿನಿಯನ್ನೇರುವವ, ಕುದುರೆಯನ್ನೇರುವವ ಎಂದಾಗುತ್ತದೆ. ಅಂತೆಯೇ ಸಾತಕರ್ಣಿ ಎಂದರೆ ಸೂಕ್ಷ್ಮವಾದ

ಕರ್ಣಗಳನ್ನುಳ್ಳವನೆಂದಾಗುತ್ತದೆ. ಈ ಸಾತವಾಹನರ ಮೂಲಸ್ಥಾನವಾವುದು ? ಇದನ್ನು ಕುರಿತೂ ಖಚಿತವಾದ, ಸರ್ವಸಮ್ಮತವಾದ ತೀರ್ಮಾನಕ್ಕೆ ಬರಲು ಸಾಧ್ಯವಾಗಿಲ್ಲ. ಆಂಧ್ರದೊಡನೆ ಸಂಬಂಧವನ್ನು ಸೂಚಿಸಬಯಸುವ ಪಂಡಿತರು ಹಲವರು ಕೃಷ್ಣಾ ಗೋದಾವರೀ ನದಿಗಳ ನಡುವಣ ಆಂಧ್ರಪ್ರದೇಶದ ಭಾಗ ಇವರ ಮೂಲಸ್ಥಾನವೆಂದೂ ಅಲ್ಲಿಂದ ಇವರು ಕ್ರಮೇಣ ಪಶ್ಚಿಮದಿಕ್ಕಿನಲ್ಲಿ ತಮ್ಮ ಪ್ರಭಾವವನ್ನು ಬೆಳಸುತ್ತಾ ಹೋದರೆಂದೂ ಕೃಷ್ಣಾ ನದೀತೀರದ ಶ್ರೀಕಾಕುಳಂ ಇವರ ರಾಜಧಾನಿಯಾಗಿತ್ತೆಂದೂ ವಾದಿಸಿದ್ದಾರೆ. ಇದನ್ನು ಸುಮತಿ ಎಂಬ ಅರಸು ತನ್ನ ನೆಲೆವೀಡನ್ನಾಗಿ ಮಾಡಿಕೊಂಡನೆಂಬುದೊಂದು ಸಾಂಪ್ರದಾಯಿಕ ಹೇಳಿಕೆ. ಸುಮತಿಯೇ ಸೀಮುಕನಾಗಿರಬಹುದೆಂದು ಊಹಿಸಿ, ಆಂಧ್ರರ ಮೊದಲ ದೊರೆಯಾದ ಈ ಸೀಮುಕನು ಶ್ರೀಕಾಕುಳವನ್ನು ರಾಜಧಾನಿಯಾಗಿ ಮಾಡಿಕೊಂಡನೆಂದು ಹೇಳಲಾಗಿದೆ. ಆದರೆ ಕಾಲಕ್ರಮದಲ್ಲಿ ಧಾನ್ಯಕಟಕ (ಈಗಿನ ಧರಣಿಕೋಟೆ) ಸಹ ಅವರ ರಾಜಧಾನಿಯಾಗಿತ್ತೆಂದೂ ಹೇಳಿದೆ.

ಆದರೆ ಸಾತವಾಹನರ ಇದುವರೆಗೆ ದೊರೆತಿರುವ ಶಾಸನಗಳ ಮತ್ತು ನಾಣ್ಯಗಳ ಆಧಾರದಿಂದ ಇವರು ಮೊದಲು ದಖನ್ನಿನ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ನೆಲಸಿದ್ದು ಕ್ರಮೇಣ ಅಲ್ಲಿನ ತಮ್ಮ ರಾಜ್ಯ ಶತ್ರುಗಳ ವಶವಾದಂತೆಲ್ಲಾ ಪೂರ್ವಾಭಿಮುಖವಾಗಿ ಜರುಗುತ್ತಾ ಹೋದರೆಂದೂ ಪುರಾಣಗಳನ್ನು ಅಂತಿಮವಾಗಿ ಕ್ರೋಡೀಕರಿಸಿದ ಕ್ರಿ.ಶ. ೪-೫ನೆಯ ಶತಮಾನಗಳ ವೇಳೆಗೆ ಇವರು ಆಂಧ್ರ ಪ್ರದೇಶದಲ್ಲಿ ನೆಲಸಿದ್ದರೆಂದೂ ಆದ್ದರಿಂದಲೇ ಇವರನ್ನು ಪುರಾಣಗಳಲ್ಲಿ ಆಂಧ್ರರೆಂದು ಕರೆಯಲಾಗಿದೆಯೆಂದೂ ಇತರರ ವಾದ. ಈ ಎರಡನೆಯ ವಾದದಲ್ಲಿ ಹುರುಳಿಲ್ಲದಿಲ್ಲ.

ಖಾರವೇಲನ ಹಾಥಿಗುಂಫಾ ಶಾಸನದಲ್ಲಿ ತನ್ನ ರಾಜ್ಯದ ಪಶ್ಚಿಮಕ್ಕೆ ರಾಜ್ಯವನ್ನಾಳುತ್ತಿದ್ದ ಸಾತಕರ್ಣಿಯನ್ನು ಲೆಕ್ಕಿಸದೆ ಅವನು ತನ್ನ ಹಿರಿದಾದ ಸೇನೆಯನ್ನು ಪಶ್ಚಿಮಾಭಿಮುಖವಾಗಿ ಕಳುಹಿಸಿದನೆಂಬ ಹೇಳಿಕೆ ಇದೆ. ಇದರಿಂದ ಸಾತಕರ್ಣಿಯ ರಾಜ್ಯ ಕಳಿಂಗ ದೇಶದ ಪಶ್ಚಿಮಕ್ಕಿತ್ತೆಂಬುದು ಸ್ಪಷ್ಟ. ಇವರ ಪ್ರಾಚೀನ ಶಾಸನಗಳು, ನಾಣ್ಯಗಳು ದೊರೆತಿರುವುದು ಪಶ್ಚಿಮ ದಖನ್ನಿನ ನಾನಾಘಾಟ್, ನಾಸಿಕ್ ಗುಹೆಗಳಲ್ಲಿ ಮತ್ತು ಸುತ್ತಲಿನ ಪ್ರದೇಶದಲ್ಲಿ. ಕ್ರಿ.ಶ. ೨ನೆಯ ಶತಮಾನದಲ್ಲಿ ಗೌತಮೀಪುತ್ರ ಶಾತಕರ್ಣಿಯ ಮಗ ವಾಸಿಷ್ಠೀಪುತ್ರ ಶ್ರೀ ಪುಳುಮಾವಿಯ ಆಳಿಕೆಯ ಕಾಲಕ್ಕೆ ಇವರು ಪಶ್ಚಿಮದ ಭಾಗಗಳನ್ನು ಕಳೆದುಕೊಂಡು ಪೂರ್ವಕ್ಕೆ ಸರಿದರು. ಆದ್ದರಿಂದ ಪ್ರತಿಷ್ಠಾನ ಅಥವಾ ಈಗಿನ ಪೈಠಣವನ್ನು ಮೊದಲ ರಾಜಧಾನಿಯಾಗಿ ಹೊಂದಿದ ಸಾತವಾಹನರು ದಕ್ಷಿಣಾಪಥದ ಪಶ್ಚಿಮದಲ್ಲಿ ನೆಲಸಿದ್ದು ನಂತರ ಪೂರ್ವಾಭಿಮುಖವಾಗಿ ಗಮಿಸಿ ಆಂಧ್ರ ಪ್ರದೇಶದ ಭಾಗದಲ್ಲಿ ನೆಲಸಿದರೆಂಬ ಊಹೆ ಹೆಚ್ಚು ಸಾಧಾರವಾದ್ದಾಗಿದೆ ಎನ್ನಬಹುದು.

ಇನ್ನು ಸಾತವಾಹನರ ಆಳಿಕೆಯ ಕಾಲಾವಧಿ, ಅರಸರ ಆಳಿಕೆಯ ಅನುಕ್ರಮ, ಅವರು ಆಳಿದ ಕಾಲ—ಈ ಕುರಿತು ಸಹ ನಿಶ್ಚಿತವಾಗಿ ಏನನ್ನೂ ಹೇಳಲಾಗದು. ಇವುಗಳಿಗೆ ಹೆಚ್ಚಾಗಿ ಪುರಾಣಗಳಲ್ಲಿ ಕಂಡುಬರುವ, ಇವರನ್ನು ಕುರಿತಿರುವ ವಂಶಾವಳಿ

ಮುಂತಾದ ಹೇಳಿಕೆಗಳೇ ಮೂಲಾಧಾರಗಳು. ಈ ಪುರಾಣಗಳಲ್ಲಿ ಮತ್ಸ್ಯ, ವಾಯು, ವಿಷ್ಣು ಮತ್ತು ಭಾಗವತ ಪುರಾಣಗಳು ಪ್ರಮುಖವಾದವು. ಇವುಗಳಲ್ಲಿನ ಹೇಳಿಕೆಗಳಲ್ಲಿ ಮೇಲ್ನೋಟಕ್ಕೆ ಹೊಂದಾಣಿಕೆಗಳಿದ್ದಂತೆ ಕಂಡುಬಂದರೂ ಅರಸರನ್ನು ಕುರಿತ ವಿವರಗಳನ್ನು ನೀಡುವಾಗ ಆ ಹೇಳಿಕೆಗಳಲ್ಲಿನ ಆಭಾಸಗಳು ವ್ಯಕ್ತವಾಗುತ್ತವೆ.

ಸಾತವಾಹನರ ಮೊದಲ ಅರಸನಾದ ಸಿಮುಕನು ಕ್ರಿ.ಪೂ. ೨೮ (೩೦)ರ ಸುಮಾರಿಗೆ ಮಗಧ ರಾಜ್ಯದ ಕಾಣ್ವ ಮನೆತನದ ಸುಶರ್ಮನನ್ನು ಕೊಂದು ಅವರ ಆಳಿಕೆಯನ್ನು ಕೊನೆಗಾಣಿಸಿದನು. ಚಂದ್ರಗುಪ್ತಮೌರ್ಯನು ಆಳತೊಡಗಿದುದು ಕ್ರಿ.ಪೂ. ೩೨೨ (೩೨೪)ರಲ್ಲಿ. ೧೩೭ ವರ್ಷಗಳ ಬಳಿಕ ಶುಂಗರು ಮೌರ್ಯ ರಾಜ್ಯವನ್ನು ಪಡೆದರು. ಇವರು ೧೧೨ ವರ್ಷಗಳ ಕಾಲ ಆಳಿದ ನಂತರ ಕಣ್ವರು ೪೫ ವರ್ಷಗಳು ಅಧಿಕಾರದಲ್ಲಿದ್ದರು. ಆದ್ದರಿಂದ ಸಿಮುಕನು ಸುಶರ್ಮನನ್ನು ಕೊಂದುದು ಕ್ರಿ.ಪೂ. ೨೮ (೩೦)ರಲ್ಲಿ ಎಂಬುದೊಂದು ಹೇಳಿಕೆ. ಶುಂಗರ ಆಳಿಕೆಯ ೧೧೨ ವರ್ಷಗಳಲ್ಲಿ ಕಣ್ವರ ೪೫ ವರ್ಷಗಳು ಸಹ ಸೇರಿದೆ ಎಂಬ ಪುರಾಣದ ಹೇಳಿಕೆಯೊಂದನ್ನು ಅರ್ಥೈಸಿ ಸಿಮುಕನು ಕ್ರಿ.ಪೂ. ೭೩ರಲ್ಲಿ ಅಧಿಕಾರಕ್ಕೆ ಬಂದನೆಂದು ಡಾ. ಭಂಡಾರ್ಕರ್ ವಾದಿಸಿದ್ದಾರೆ. ಕ್ರಿ.ಪೂ. ೨೮ರಲ್ಲಿ ಸಿಮುಕನು ಆಳತೊಡಗಿದನೆಂದಲ್ಲಿ ಸಾತವಾಹನರ ಆಳಿಕೆಯ ಕಾಲ ಕ್ರಿ.ಶ. ೫ನೆಯ ಶತಮಾನದವರೆಗೂ ಹೋಗುತ್ತದೆ. ಆದರೆ ಈ ವೇಳೆಗೆ ಅವರ ಅಧಿಕಾರ ದಕ್ಷಿಣಾಪಥದಲ್ಲಿ ಕುಸಿಯಿತು. ಇದನ್ನು ಗಮನಿಸಿ ಸುಶರ್ಮನನ್ನು ಕೊಂದವನು ಸಿಮುಕನಾಗಿರದೆ, ನಂತರ ಆಳಿದ ಪುಲುಮಾವಿ I ಎಂದೂ ಇವನಿಗೂ ಮೊದಲೇ ಸಿಮುಕ ಮತ್ತು ಇತರರು ಆಳಿದ್ದರೆಂದೂ ಕೆಲವರು ಊಹಿಸಿದ್ದಾರೆ. ಈ ವಾದವಿವಾದಗಳು ಸಾತವಾಹನರ ಇತಿಹಾಸದ ನಿರೂಪಣೆ ಸಮಸ್ಯಾತ್ಮಕವಾಗಿದೆ ಎಂಬುದನ್ನು ತೋರಿಸುತ್ತದೆ.

ಈ ಭಿನ್ನಾಭಿಪ್ರಾಯಗಳ ವಿವರಗಳಿಗೆ ಹೋಗದೆ, ಹೆಚ್ಚು ಸಮ್ಮತವಾದ ಇವರ ಇತಿಹಾಸದ ಕೆಲವು ವಿವರಗಳನ್ನು ಇಲ್ಲಿ ನೀಡಿದೆ. ಸಿಮುಕನಿಗೆ ಸಾತವಾಹನನೆಂಬ ಬಿರುದಿದ್ದಿರಬಹುದು. ಅದರಿಂದಾಗಿ ಅವನ ವಂಶ ಆ ಹೆಸರಿನಿಂದಲೇ ಮುಂದೆ ಬಂದಿತು. ಅಥವಾ ಸಿಮುಕನ ಪೂರ್ವಜನೊಬ್ಬ ಸಾತವಾಹನನಿದ್ದು ಅವನ ಹೆಸರು ವಂಶಕ್ಕೆ ಬಂದಿರಬಹುದೆಂಬ ಇನ್ನೊಂದು ಊಹೆಯೂ ಇದೆಯಾದರೂ ಇದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಸಿಮುಕ ಮತ್ತು ಅವನ ನಂತರ ಆಳಿದ ಕೃಷ್ಣ ಮತ್ತು ಸಾತಕರ್ಣಿ ಇವರ ಆಡಳಿತದ ಒಟ್ಟು ಕಾಲ ೯೬ ವರ್ಷಗಳು; ಎಂದರೆ ಕೃಷ್ಣನು ಆಳತೊಡಗಿದಾಗ ಕ್ರಿಸ್ತಶಕಾರಂಭವಾಯಿತು. ಸಾತಕರ್ಣಿ ಹೆಚ್ಚು ಶೌರ್ಯಶಾಲಿ. ರಥಿಕರು, ಭೋಜಕರು ಮುಂತಾದವರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು. ರಾಜಸೂಯ ಅಶ್ವಮೇಧಾದಿ ವೈದಿಕ ಯಜ್ಞಗಳನ್ನು ಮಾಡಿದನು. ಇವನನ್ನು ದಕ್ಷಿಣಾಪಥದ ಅಧಿಪತಿಯೆಂದು ವರ್ಣಿಸಲಾಗಿದೆ. ಈತನ ಪತ್ನಿ ನಾಗನಿಕ ಮಹಾರಥಿ ಕುಲದವಳು. ಇವನ ರಾಜ್ಯ ದಖನ್ನಿನ ಉತ್ತರಭಾಗ, ಮಧ್ಯ ಹಾಗೂ ಪಶ್ಚಿಮ ಕೊಂಕಣಗಳನ್ನೊಳಗೊಂಡಿತ್ತು.

ಆದರೆ ಅಷ್ಟರಲ್ಲಿ ಶಕರು ಪ್ರಬಲರಾಗಿ ಈ ಪ್ರದೇಶಗಳಲ್ಲಿ ತಮ್ಮ ಒತ್ತಡವನ್ನು

ಹೇರಲಾರಂಭಿಸಿದರು. ಪರಿಣಾಮವಾಗಿ ಸಾತಕರ್ಣಿಯ ಉತ್ತರಾಧಿಕಾರಿಗಳ ಪ್ರಾಬಲ್ಯ ಕುಗ್ಗಿ ಗ್ರಹಣಕಾಲ ಆರಂಭವಾಯಿತು. ೨ನೆಯ ಶತಮಾನ ಆರಂಭವಾದ ಮೇಲೆ ಗೌತಮೀಪುತ್ರ ಸಾತಕರ್ಣಿ ಪಟ್ಟಕ್ಕೆ ಬಂದಾಗ ಪುನಃ ತಮ್ಮ ಬಲವನ್ನು ತೋರಿದ ಇವರು ಮತ್ತೊಮ್ಮೆ ಪ್ರಸಿದ್ಧರಾದರು. ಶಾಸನಗಳು ಈ ಅರಸನನ್ನು 'ಶಕಯವನಪಹ್ಲವ ನಿಸೂದನ,' 'ಕ್ಷಹರಾತವಂಶನಿರವಶೇಷಕರ,' 'ಶಾತವಾಹನಕುಲಯಶಃಪ್ರತಿಷ್ಠಾಪನಕರ' ಎಂದೆಲ್ಲ ಬಣ್ಣಿಸಿವೆ. ಇದರಿಂದ ಈತನು ಶಕ, ಪಹ್ಲವ, ಯವನರನ್ನು ಸೋಲಿಸಿ ಕ್ಷಹರಾತರನ್ನು ಸದೆಬಡಿದನೆಂಬುದು ಸ್ಪಷ್ಟ. ಈ ಕ್ಷಹರಾತನು ನಹಪಾಣ. ಈ ಘಟನೆ ಸುಮಾರು ಕ್ರಿ.ಶ. ೧೨೪-೨೫ರಲ್ಲಿ ನಡೆಯಿತೆಂದು ಊಹಿಸಲಾಗಿದೆ. ನಹಪಾಣನ ಕಾಲವೂ ಖಚಿತವಾಗಿಲ್ಲ. ಭಿನ್ನ ಆಧಾರಗಳನ್ನೂ ವಾದಗಳನ್ನೂ ಮುಂದೂಡಿ, ಗೌತಮೀ ಪುತ್ರನು ಕ್ರಿ.ಶ. ೬೨ರಿಂದ ೮೬ರ ವರೆಗೆ ಆಳಿದನೆಂಬ ಇನ್ನೊಂದು ಅಭಿಪ್ರಾಯವನ್ನೂ ಇಲ್ಲಿ ನೆನೆಪಿನಲ್ಲಿಡಬೇಕು.

ನಾಸಿಕದಲ್ಲಿ ದೊರೆತ ಈತನ ಮಗ ವಾಸಿಷ್ಠೀಪುತ್ರ ಪುಳುಮಾವಿಯ ಶಾಸನದಲ್ಲಿ ಗೌತಮೀಪುತ್ರನ ಈ ವಿಜಯಗಳನ್ನು ಹಾಡಿ ಹೊಗಳಲಾಗಿದೆ. ಯುದ್ಧರಂಗದಲ್ಲಿದ್ದಷ್ಟೇ ಉತ್ಸಾಹ, ಆಸಕ್ತಿ ಈತನಿಗೆ ರಾಜ್ಯಭಾರದಲ್ಲಿ, ಪ್ರಜೆಗಳ ಪೋಷಣೆಯಲ್ಲಿ ಇದ್ದುವು. ಧರ್ಮ, ಅರ್ಥ ಕಾಮಗಳೆಂಬ ತ್ರಿವರ್ಗಗಳ ಸಾಧನೆಗಾಗಿ ಶ್ರಮಿಸಿದ ಈತನು ಪ್ರಜೆಗಳ ಕಷ್ಟಸುಖಗಳಲ್ಲಿ ಭಾಗಿಯಾಗಿ ಅವರ ನೆರವಿಗೆ ಎಂದೆಂದೂ ಸಿದ್ಧನಾಗಿರುತ್ತಿದ್ದನು. ಸಹಜ ವಾಗಿಯೇ ಈತನ ರಾಜ್ಯದಲ್ಲಿ ಸುಭಿಕ್ಷವಿತ್ತು. ಪ್ರಜೆಗಳು ನೆಮ್ಮದಿಯಿಂದ ಬಾಳಿದರು.

ಇಂತಹವನೂ ಆಳಿಕೆಯ ಕೊನೆಗಾಲದಲ್ಲಿ ಘೋರವಿಪತ್ತೊಂದನ್ನು ಎದುರಿಸ ಬೇಕಾಯಿತು. ಕ್ಷತ್ರಪ ನಹಪಾಣನನ್ನು ಸೋಲಿಸಿದ ಈತನು ಗಿರಿನಗರ ಪ್ರದೇಶದಲ್ಲಿ ಆಳುತ್ತಿದ್ದ ಮಹಾಕ್ಷತ್ರಪ ರುದ್ರದಾಮನನ್ನು ಎದುರಿಸಬೇಕಾಯಿತು. ಸೇಡುತೀರಿಸ ಲೆಂಬಂತೆ ಮಹತ್ತರವಾದ ಸೇನೆಯೊಡನೆ ನುಗ್ಗಿಬಂದ ಶತ್ರುಸೇನಾಪ್ರವಾಹವನ್ನು ಇವನು ತಡೆಗಟ್ಟಲಾರದೆ ಹೋದನು. ಯುದ್ಧದಲ್ಲಿ ಸೋತ ಸಾತವಾಹನರು ತಮ್ಮ ರಾಜ್ಯದ ಉತ್ತರ ಹಾಗೂ ದಕ್ಷಿಣಭಾಗಗಳ ಪ್ರದೇಶಗಳನ್ನು ಶತ್ರುಗಳಿಗೊಪ್ಪಿಸಿ ಪೂರ್ವಾಭಿಮುಖ ವಾಗಿ ಹಿಮ್ಮೆಟ್ಟಿದರು (ಕ್ರಿ.ಶ. ೧೩೦). ವಾಸಿಷ್ಠೀಪುತ್ರ ಪುಳುಮಾವಿ (ಕ್ರಿ.ಶ.೧೩೦-೬೯) ತನ್ನ ರಾಜ್ಯವನ್ನು ಪೂರ್ವದ ಕೃಷ್ಣಾನದೀಮುಖದವರೆಗೆ ವಿಸ್ತರಿಸಿದನು. ಈ ಸುಮಾರಿನಲ್ಲಿ ಸಾತವಾಹನರು ದಖನ್ ಪ್ರದೇಶಕ್ಕೂ ದಕ್ಷಿಣಕ್ಕೆ ಬಂದು ಬಳ್ಳಾರಿ ಜಿಲ್ಲೆಯ ಸುತ್ತಲಿನ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡರು.

ವಾಸಿಷ್ಠೀಪುತ್ರ ಪುಳುಮಾವಿ (ಪುಳುಮಾಯಿ)ಯನ್ನು ದಕ್ಷಿಣಾಪಥೇಶ್ವರನೆಂದು ನಾಸಿಕದಲ್ಲಿನ ಗೋತಮಿ ಬಾಲಶ್ರೀಯ ಶಾಸನ ಕರೆದಿದೆ. ಸ್ವಲ್ಪಮಟ್ಟಿಗೆ ಚೇತರಿಸಿ ಕೊಂಡ ಈತನು ತನ್ನ ರಾಜ್ಯದ ದಕ್ಷಿಣಕ್ಕಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡನೆಂದೂ ಈ ಸಂದರ್ಭದಲ್ಲಿ ಕರ್ನಾಟಕದ ಬಳ್ಳಾರಿ ಜಿಲ್ಲೆ ಮುಂತಾದ ಉತ್ತರ ಪ್ರದೇಶಗಳು ಸಾತವಾಹನರ ಸ್ವಾಧೀನವಾಯಿತೆಂದೂ ಊಹಿಸಲಾಗಿದೆ. ಆದರೆ ಇದನ್ನು ಅಲ್ಲಗಳೆದು,

ಈ ಸಾಧನೆಗಳನ್ನೆಲ್ಲಾ ಈತನ ತಂದೆಯಾದ ಗೌತಮೀಪುತ್ರ ಸಾತಕರ್ಣಿಗೇ ಆರೋಪಿಸ ಲಾಗಿದೆ. ನಾಸಿಕದಲ್ಲಿನ ಈತನ ಶಾಸನದಲ್ಲಿ ಆಗ ಈತನು ವೈಜಯಂತಿಯ ನೆಲೆವೀಡಿನಲ್ಲಿದ್ದ ನೆಂದು ಹೇಳಿದೆ. ಈ ವೈಜಯಂತಿ ಎಂಬುದು ಕಾರವಾರ ಜಿಲ್ಲೆಯ ಈಗಿನ ಬನವಾಸಿ. ಕದಂಬ ಶಾಂತಿವರ್ಮನ ತಾಳಗುಂದ ಶಾಸನದಲ್ಲಿ ಅಲ್ಲಿನ ಪ್ರಣವೇಶ್ವರನನ್ನು ಸಾತಕರ್ಣಿಯೇ ಮುಂತಾದ ಅರಸರು ಪೂಜಿಸಿದರೆಂದು ಹೇಳಿದೆ. ಈ ಸಾತಕರ್ಣಿ ಗೌತಮೀಪುತ್ರ ಸಾತಕರ್ಣಿಯಾಗಿರಬಹುದೆಂದು ಊಹಿಸಲಾಗಿದೆ.

ವಾಸಿಷ್ಠೀಪುತ್ರ ಪುಳುಮಾವಿಯ ಬಳಿಕ ಆಳತೊಡಗಿದವನು ಶಿವಶ್ರೀ ಸಾತಕರ್ಣಿ. ಈತನ ನಾಣ್ಯಗಳು ಆಂಧ್ರಪ್ರದೇಶದ ಕೃಷ್ಣಾ ಗೋದಾವರೀ ಜಿಲ್ಲೆಗಳಲ್ಲಿಯೂ ಮಹಾ ರಾಷ್ಟ್ರದ ಕೆಲವು ಕಡೆಗಳಲ್ಲಿಯೂ ದೊರೆತಿವೆ. ಪುರಾಣಗಳ ಹೇಳಿಕೆಯಂತೆ ಈತನು ಏಳು ವರ್ಷಗಳ ಕಾಲ ಆಳಿದನು. ಇದೀಗ ತಾನೆ (ಜುಲೈ ೧೯೭೪) ಬನವಾಸಿಯಲ್ಲಿ ಸು. ೨ನೆಯ ಶತಮಾನದ ಮಧ್ಯಭಾಗಕ್ಕೆ ಸೇರಬಹುದಾದ ಸಿವಸಿರಿ ಪುಳುಮಾವಿಯ ಶಾಸನ ವೊಂದು ದೊರೆತಿದೆ. ಎರಡು ಸಾಲಿನ ಈ ಶಾಸನ "ವಾಸಿಠೀಪುತಸ ಸಿವಸಿರಿ ಪುಳುಮಾವಿಸ" ಮಹಾದೇವಿಯ ಸ್ಮಾರಕಶಿಲೆ ಅದು ಎಂದು ತಿಳಿಸುತ್ತದೆ.[2] ಇದರಲ್ಲಿ ಉಕ್ತನಾದ ಸಿವಸಿರಿಯು ವಾಸಿಷ್ಠೀಪುತ್ರ ಪುಳುಮಾವಿಯ ಮಗನೆಂಬುದು ಈಗ ಖಚಿತಗೊಂಡಿದೆ ಯಲ್ಲದೆ, ಈತನ ಆಳಿಕೆ ಬನವಾಸಿಯವರೆಗೂ ಹಬ್ಬಿತ್ತೆಂದು ಅದರಿಂದ ವ್ಯಕ್ತವಾಗಿದೆ. ಅಲ್ಲದೆ ಸಾತವಾಹನರ ರಾಜ್ಯ ಕರ್ಣಾಟಕದ ಈ ಭಾಗಗಳನ್ನೊಳಗೊಂಡಿತ್ತೆಂದೂ ಅದರ ಮೂಲ ಮನೆತನದ ಅರಸರು ಈ ಪ್ರದೇಶವನ್ನು ಆಳುತ್ತಿದ್ದರೆಂದೂ ಹೇಳಲು ಈಗ ಖಚಿತವಾದ ಆಧಾರ ದೊರಕಿದಂತಾಗಿದೆ.

ಸಾತವಾಹನರ ಹಲವು ಶಾಖೆಗಳವರು ಬೇರೆ ಬೇರೆ ಕಡೆ ಸಣ್ಣ ಪ್ರಾಂತಗಳ ಅಧಿಪತಿ ಗಳಾಗಿ ಆಳುತ್ತಿದ್ದರೆನ್ನಲು ಆಧಾರಗಳಿವೆ. ಆ ಅರಸರ ಹೆಸರುಗಳನ್ನು ಸಹ ಮೂಲ ಮನೆ ತನದ ಅರಸರ ಜೊತೆಗೆ ಕೂಡಿಸಿದುದರಿಂದಲೇ ಆ ವಂಶದ ೩೦ ಅರಸರು ಆಳಿದರೆಂಬ ಹೇಳಿಕೆ ಹಲವು ಪುರಾಣಗಳಲ್ಲಿ ಕಂಡುಬಂದಿರುವುದು. ಇಂತಹ ಶಾಖೆಗಳಲ್ಲಿ ಕರ್ಣಾಟಕದ ಶಾಖೆಯೂ ಒಂದು. ಈ ಶಾಖೆಯ ಕೆಲವರು ಕುಂತಲನಾಡಿನಲ್ಲಿ ಅಧಿಕಾರ ಪಡೆದಿದ್ದರು. ಕುಂತಲ ಶಾತಕರ್ಣಿ ಅವರಲ್ಲಿ ಒಬ್ಬ. ಈತನ ಹೆಸರೇ ಅದು ಎಂಬುದಕ್ಕಿಂತ ಈತನು ಕುಂತಲಾಧಿಪತಿಯಾದ ಕಾರಣ, ಕುಂತಲಶಾತಕರ್ಣಿ ಎನಿಸಿಕೊಂಡನೆಂಬುದು ಹೆಚ್ಚು ಸೂಕ್ತವಾದೀತು. ವಾತ್ಸ್ಯಾಯನನ 'ಕಾಮಸೂತ್ರ'ದಲ್ಲೂ ಪುರಾಣಗಳಲ್ಲೂ ಈತನು ಉಲ್ಲೇಖಿತನಾಗಿದ್ದಾನೆ. 'ಕಾವ್ಯಮೀಮಾಂಸಾ'ದ ಕರ್ತೃವಾದ ರಾಜಶೇಖರನು ಸಹ ಕುಂತಲದ ಅರಸನೊಬ್ಬನನ್ನು ಶಾತವಾಹನನೆಂದಿದ್ದಾನೆ. 'ಗಾಥಾಸಪ್ತಶತಿ'ಯ ಕರ್ತೃ ವಾದ ಹಾಲನು ಕುಂತಲಾಧಿಪನಾಗಿದ್ದನೆಂಬ ವಿಷಯ ಸರ್ವಗ್ರಾಹ್ಯವಾಗಿದೆ. ಬಳ್ಳಾರಿಯ ಸಮೀಪದ ಮ್ಯಾಕಡೋಣಿಯಲ್ಲಿ ಶಾತವಾಹನರ ಪುಳುಮಾವಿಯ ಶಾಸನವಿದೆ. ಇದರಲ್ಲಿ ಸಾತವಾಹನಿಹಾರವೆಂಬ ಪ್ರಾಂತವನ್ನೂ ಹೆಸರಿಸಿದೆ. ಇಲ್ಲಿ ಮಹಾಸೇನಾಪತಿ ಖಂಡ ನಾಗನು ಅರಸನ ಪ್ರಾಂತಾಧಿಕಾರಿಯಾಗಿ ಆಳುತ್ತಿದ್ದನು. ಶಾಸನೋಕ್ತ ಪುಳುಮಾವಿಯು

ಗೌತಮಿಾಪುತ್ರನ ಮಗನಾದ ವಾಸಿಷ್ಠೀಪುತ್ರ ಪುಳುಮಾವಿ ಎಂದು ಕೆಲವರೂ ಯಜ್ಞಶ್ರೀ ಸಾತಕರ್ಣಿಯ ನಂತರ ಆಳಿದ ಮುಮ್ಮಡಿ ಪುಳುಮಾವಿ ಎಂದು ಇತರರೂ ವಾದಿಸಿದ್ದಾರೆ. ಹಿರೇಹಡಗಳ್ಳಿಯಲ್ಲಿ ದೊರೆತ ಪಲ್ಲವ ಶಿವಸ್ಕಂದವರ್ಮನ ತಾಮ್ರಶಾಸನ ದಲ್ಲಿ ಆ ಸುತ್ತಲಿನ ಪ್ರದೇಶ ಸಾತಾಹನಿರಟ್ಟ (ಸಾತವಾಹನ ರಾಷ್ಟ್ರ)ಕ್ಕೆ ಸೇರಿದ್ದೆಂದು ಹೇಳಿದೆ. ಈಗ ಲಭಿಸಿರುವ ಸಿವಸಿರಿ ಪುಳುಮಾವಿಯ ಶಾಸನ ಈ ಸಾತವಾಹನರು ಕುಂತಲಾಧಿಪತಿಗಳೂ ಆಗಿದ್ದರೆಂಬುದನ್ನು ಖಚಿತಗೊಳಿಸುತ್ತದೆ.

ಈ ಘಟನೆಗಳ ಕಾಲ ಸು. ಕ್ರಿ.ಶ. ೨ನೆಯ ಶತಮಾನ. ಕನ್ನಡ ಭಾಷೆ ಈ ವೇಳೆಗೆ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದು ಪುಷ್ಟವಾಗಿ ಬೆಳೆದ ಭಾಷೆಯಾಗಿತ್ತೆನ್ನಲು ಸಾಕ್ಷ್ಯಾಧಾರಗಳಿವೆ. ಹಾಲನ ಪ್ರಾಕೃತ ಗ್ರಂಥವಾದ 'ಗಾಥಾಸಪ್ತಶತಿ'ಯಲ್ಲಿಯೇ ಪೊಟ್ಟ, ತುಪ್ಪ ಎಂಬ ಕನ್ನಡ ಪದಗಳ ಪ್ರಯೋಗವಿದೆ; ತೀರ್ ಮತ್ತು ಪಿಟ್ಟು ಎಂಬ ಧಾತು ರೂಪಗಳಿವೆ. ಟಾಲೆಮಿ ಎಂಬ ಭೂಗೋಳಶಾಸ್ತ್ರಜ್ಞನು (ಕ್ರಿ.ಶ. ೨ನೆಯ ಶ.) ಪೌನ್ನಾಟ ಎಂಬ ಪ್ರದೇಶವನ್ನುಲ್ಲೇಖಿಸಿದ್ದಾನೆ. ಇದು ಪುನ್ನಾಟದ ವಿಕೃತರೂಪ. ಪುನ್ನಾಟ, ಪುನ್ನಾಡು ಎಂಬುದು ಈಗಿನ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಸುತ್ತಲಿನ ಪ್ರದೇಶಕ್ಕೆ ಆ ದಿನಗಳಲ್ಲಿದ್ದ ಹೆಸರು. ನಮಗೆ ಶಾಸನಾಧಾರ ಗಳಿಂದಲೂ ಈ ವಿಷಯ ತಿಳಿದಿದೆ. ಸಿರ್‌ಪೊಲೆಮೈಯೊ ಎಂಬುದು ಟಾಲೆಮಿ ಉಲ್ಲೇಖಿ ಸಿರುವ ಅರಸನೊಬ್ಬನ ಹೆಸರು. ಇದು ಪುಲಿಮೆಯ್ (ಶ್ರೀ ಪುಳುಮಾವಿ) ಎಂಬು ದೆಂದು ಮಾಡಿರುವ ಊಹೆ ಸಹೇತುಕವೆನಿಸಿದೆ. ಪುಲಿಮೆಯ್ ಕನ್ನಡದ ಹೆಸರು. ಇವುಗಳೆಲ್ಲ ವರಿಂದ ಪ್ರಾಯಃ ಕರ್ಣಾಟಕದ ದಕ್ಷಿಣಭಾಗ—ಕುಂತಲ ಪ್ರದೇಶವಷ್ಟಾದರೂ—ಸಾತ ವಾಹನರ ಅಧೀನದ ಆಳಿಕೆಗೊಳಪಟ್ಟಿತ್ತೆಂದೂ ಕರ್ಣಾಟಕದೊಡನೆ ಅವರ ಬಾಂಧವ್ಯ ನಿಗೂಢವಾಗಿತ್ತೆಂದೂ ಅಂದು ಕನ್ನಡ ಭಾಷೆ ಅಭಿವೃದ್ಧಿಗೆ ಬರುತ್ತಿತ್ತೆಂದೂ ಊಹಿಸುವುದು ತಪ್ಪೇನಲ್ಲ. ಒಂದು ಹೆಜ್ಜೆ ಮುಂದೆ ಹೋಗಿ ಈ ಸಾತವಾಹನರು ಕರ್ಣಾಟಕದವರೇ, ಕನ್ನಡಿಗರೇ ಹೌದೆಂಬ ವಾದವನ್ನು ಕೆಲವರು ಪಂಡಿತರು ಮುಂದೂಡಿರುವುದುಂಟು. ಆದರೆ ಇದಕ್ಕೆ ಇನ್ನೂ ಪ್ರಬಲವಾದ ಆಧಾರಗಳು ಬೇಕೆನಿಸುತ್ತದೆ.

ಸಾತವಾಹನರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡ ಸಮಯದಲ್ಲಿ ಕರ್ಣಾಟಕದ ಶಿವಮೊಗ್ಗ ಕಾರವಾರ ಮುಂತಾದ ಪರಿಸರದ ಪ್ರದೇಶಗಳಲ್ಲಿ ಅವರ ಸಾಮಂತರಾಗಿದ್ದ ಚುಟುಕುಲದ ಮಾಂಡಲಿಕರು ಆಳುತ್ತಿದ್ದರು. ಇವರ ಎರಡು ಶಾಸನಗಳು—ಮಳವಳ್ಳಿ ಯಲ್ಲೊಂದು, ಬನವಾಸಿಯಲ್ಲೊಂದು—ದೊರಕಿವೆ. ಲಿಪಿಶಾಸ್ತ್ರವನ್ನಾಧರಿಸಿ ಬನವಾಸಿ ಶಾಸನ ಕಾಲಕ್ರಮದಲ್ಲಿ ಮೊದಲನೆಯದೆಂದು ಹೇಳಬಹುದು. ಬನವಾಸಿಯ ಶಾಸನದಲ್ಲಿ ವಿಣ್ಹುಕಡ ಚುಟುಕಲಾನಂದ ಸಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀಯ ಮತ್ತು ಯುವರಾಜನಾಗಿದ್ದ ಆಕೆಯ ಮಗನ ಪ್ರಸ್ತಾಪವಿದೆ. ಆತನ ಹೆಸರನ್ನು ಮಾತ್ರ ಹೇಳಿಲ್ಲ. ಮಳವಳ್ಳಿ ಶಾಸನದಲ್ಲಿ ಉಕ್ತನಾದ ಬನವಾಸಿಯ ಅರಸನಾದ ವಿಣ್ಹುಕಡ ಚುಟುಕು ಲಾನಂದ ಸಾತಕರ್ಣಿ II ಈ ನಾಗಶ್ರೀಯ ಮಗನಾಗಿದ್ದಿರಬಹುದು. ಕಾರವಾರ ಜಿಲ್ಲೆ

ಯಲ್ಲಿ ಚುಟುಕುಲಾನಂದನೆಂಬಾತನ, ಸುಮಾರು ಇದೇ ಕಾಲಕ್ಕೆ (ಕ್ರಿ.ಶ. ೩ನೆಯ ಶ.) ಸೇರಿದ, ನಾಣ್ಯಗಳು ದೊರೆತಿವೆ.

ಆದರೆ ಕ್ರಮೇಣ, ಈ ವೇಳೆಗೆ, ದಕ್ಷಿಣ ಭಾರತದಲ್ಲಿ ಪಲ್ಲವರು ತಮ್ಮ ಪ್ರಭಾವವನ್ನು ಬೆಳಸಿಕೊಂಡು ಹಿಂದೆ ಸಾತವಾಹನರಿಗೆ ಸೇರಿದ್ದ ಅನೇಕ ಭಾಗಗಳನ್ನು ಸ್ವಾಧೀನಮಾಡಿಕೊಂಡಿದ್ದರು. ಬಳ್ಳಾರಿ ಜಿಲ್ಲೆಯ ಹಿರೇಹಡಗಳ್ಳಿಯಲ್ಲಿ ದೊರೆತ ತಾಮ್ರಶಾಸನ ಪಲ್ಲವ ಶಿವಸ್ಕಂದವರ್ಮನದು. ಕದಂಬ ವಂಶದ ಮೂಲ ಪುರುಷನಾದ ಮಯೂರಶರ್ಮನು ಪಶ್ಚಿಮ ಸಮುದ್ರಕ್ಕೂ ಪ್ರೇಹಾರಕ್ಕೂ ನಡುವಣ ಪ್ರದೇಶವನ್ನು ಪಲ್ಲವರಿಂದ ಕಸಿದುಕೊಂಡನೆಂದು ತಾಳಗುಂದದಲ್ಲಿನ ಶಾಂತಿವರ್ಮನ ಶಾಸನದಿಂದ ತಿಳಿದುಬರುತ್ತದೆ. ಇವುಗಳಿಂದ ಈ ಪ್ರದೇಶ ಪಲ್ಲವರ ಆಳಿಕೆಗೊಳಪಟ್ಟಿತ್ತೆಂಬುದು ಖಚಿತವಾಗುತ್ತದೆ. ಅಲ್ಲದೆ, ಅವರು ಸಾತವಾಹನರ ಉತ್ತರಾಧಿಕಾರಿಗಳಾಗಿ ಅವರ ರಾಜ್ಯದ ಬಹುಭಾಗದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರೆಂಬುದೂ ತಿಳಿದುಬರುತ್ತದೆ. ಹೀಗೆ ಅವರ ವಶವಾದ ಪ್ರದೇಶಗಳಲ್ಲಿ ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಹಾಗೂ ಬಹುಶಃ ಉತ್ತರ ಕನ್ನಡ (ಕಾರವಾರ) ಜಿಲ್ಲೆಯ ಪ್ರದೇಶಗಳು ಇದ್ದುವೆಂದು ತೋರುತ್ತವೆ. ಆದರೆ ಈ ಕುರಿತಾದ ಹೆಚ್ಚು ವಿವರಗಳು ಇನ್ನೂ ಲಭ್ಯವಾಗಿಲ್ಲ.

## ಗಂಗರು

ಉತ್ತರ ಕರ್ಣಾಟಕದಲ್ಲಿ ಕದಂಬರೂ ದಕ್ಷಿಣದಲ್ಲಿ ತಲಕಾಡಿನ ಗಂಗರೂ ರಾಜ್ಯಗಳನ್ನು ಕಟ್ಟಿ ಆಳತೊಡಗಿದಂದಿನಿಂದ ಕರ್ಣಾಟಕದ ಇತಿಹಾಸ ಹೆಚ್ಚು ಸ್ಪಷ್ಟವಾಗುತ್ತದೆ. ಇದಕ್ಕೆ ಮುಖ್ಯವಾದ ಕಾರಣ ಅವರ ಶಾಸನಗಳು. ಕದಂಬರ ಹಾಗೂ ಗಂಗರ ಅನೇಕ ಶಾಸನಗಳು ದೊರೆತಿವೆ. ಅವುಗಳಲ್ಲಿ ಹೆಚ್ಚಿನವು ತಾಮ್ರಶಾಸನಗಳು. ಗಂಗ ಮನೆತನದ ಮೊದಲ ಅರಸರು ನೀಡಿದ ತಾಮ್ರಶಾಸನಗಳ ನೈಜತೆಯನ್ನು ಕುರಿತು ಡಾ. ಜೆ.ಎಫ್. ಫ್ಲೀಟ್ ಹಾಗೂ ಬಿ. ಎಲ್. ರೈಸ್‌ಅವರ ನಡುವೆ ತೀವ್ರವಾದ ಭಿನ್ನಾಭಿಪ್ರಾಯಗಳುಂಟಾಗಿ ವಾದವಿವಾದಗಳಾದುವು. ಫ್ಲೀಟ್ ಆರಂಭದಲ್ಲಿ ಗಂಗ ಶ್ರೀಪುರುಷನವರೆಗಿನ ಯಾವ ತಾಮ್ರಶಾಸನವೂ ನಂಬಲರ್ಹವಲ್ಲವೆಂಬ ಅಭಿಪ್ರಾಯವನ್ನು ಹೊಂದಿದ್ದರು. ಪ್ರತಿಯಾಗಿ ಅವರ ಯಾವ ಶಾಸನಗಳೂ ಕೃತಕವಲ್ಲ ಎಂಬ ಅಭಿಪ್ರಾಯವನ್ನು ರೈಸ್ ಮುಂದೂಡಿದ್ದರು. ಆದರೆ ಇವುಗಳ ಕೂಲಂಕಷ ವಿಚಾರಣೆಯನ್ನು ಮಾಡಿದಾಗ ಈ ಎರಡು ವಾದಗಳೂ ಉತ್ಪ್ರೇಕ್ಷೆಯಿಂದ ಕೂಡಿದುವು ಎನಿಸುತ್ತವೆ. ಗಂಗರ ಶಾಸನಗಳಲ್ಲಿ ಹಲವು ಕೃತಕ ಶಾಸನಗಳಿರುವುದು ನಿಜವಾದರೂ ಹಾಗೆಂದು ಎಲ್ಲ ಶಾಸನಗಳನ್ನೂ ತಳ್ಳಿಬಿಡಲಾಗದೆಂದು ಈಗ ನಮಗೆ ತಿಳಿದಿದೆ. ಅಂತೆಯೇ ಗಂಗ ದುರ್ವಿನೀತನಿಗೆ ಮೊದಲು ಆಳಿದ ಅರಸರ, ಫ್ಲೀಟ್ ಕೃತಕವೆಂದಿರುವ, ಹಲವಾರು ಶಾಸನಗಳನ್ನು ಒರೆಗೆ ಹಚ್ಚಿ ನೋಡಿದಾಗ ಅವು ತಮ್ಮ ನೈಜತೆಯನ್ನು ಸಿದ್ಧಪಡಿಸಿಕೊಂಡ ಉದಾಹರಣೆಗಳಿವೆ.

ಗಂಗ ಅರಸರ ವಂಶಾವಳಿ ಹಾಗೂ ಆಳಿಕೆಯ ಕಾಲಗಳನ್ನು ಕುರಿತು ಇದುವರೆಗೆ

ಖಚಿತವಾಗಿ ಯಾವ ನಿರ್ಣಯಕ್ಕೂ ಬರಲಾಗಿಲ್ಲ. ಇವರ ಶಾಸನಗಳಲ್ಲಿ ಕಾಲನಿರ್ದೇಶನ ಸ್ಪಷ್ಟವಾಗಿಲ್ಲದಿರುವುದು, ಹಾಗೆ ಕಾಲನಿರ್ದೇಶನವಿರುವ ಒಂದೆರಡು ಶಾಸನಗಳು ಕೃತಕ ವಾಗಿರುವುದು–ಈ ಹಾದಿಯಲ್ಲಿರುವ ಮುಖ್ಯ ತೊಡಕುಗಳು. ಕರ್ನಾಟಕದಲ್ಲಿ ತಲಕಾಡಿನ ಸುತ್ತಲಿನ ಪ್ರದೇಶದಲ್ಲಿ ಗಂಗರು ಆಳತೊಡಗಿದ್ದು ಎಂದಿನಿಂದ? ಗಂಗರಿಗೆ ತಮಿಳು ನಾಡಿನ ಪಲ್ಲವರ ಪ್ರೋತ್ಸಾಹ ಬೆಂಬಲಗಳು ಬಹಳವಾಗಿ ಲಭಿಸಿತ್ತು. ಗಂಗವಂಶದ ಮೊದಲ ಅರಸರಲ್ಲಿ ಒಬ್ಬನಾದ ಹರಿವರ್ಮನನ್ನು ಪಲ್ಲವ ಸಿಂಹವರ್ಮನು ರಾಜ್ಯದಲ್ಲಿ ನೆಲೆಗೊಳಿಸಲು ಕಾರಣನಾದನೆಂದು ಇವರ ಶಾಸನಗಳಿಂದ ತಿಳಿದಿದೆ. ಅಂತೆಯೇ ಇಮ್ಮಡಿ ಮಾಧವನಿಗೆ ಪಲ್ಲವ ಸ್ಕಂದವರ್ಮನು ಸಹಾಯಕನಾಗಿದ್ದನು. 'ಲೋಕವಿಭಾಗ'ವೆಂಬ ಜೈನಗ್ರಂಥದಲ್ಲಿ ಪಲ್ಲವ ಸಿಂಹವರ್ಮನ ಆಳಿಕೆಯ ೨೨ನೆಯ ವರ್ಷವು ಶಕ ೩೮೦ನೆಯ ವರ್ಷಕ್ಕೆ ಸಮವಾದುದೆಂಬ ಹೇಳಿಕೆಯೊಂದಿದೆ. ಇದರ ಆಧಾರದ ಮೇಲೆ ಶಕ ೩೮೦ ಎಂದರೆ ಕ್ರಿ.ಶ. ೪೫೮ನೆಯ ವರ್ಷ ಸಿಂಹವರ್ಮನ ಆಳಿಕೆಯ ೨೨ನೆಯ ವರ್ಷವೆಂದರೆ, ಆತನು ಆಳತೊಡಗಿದುದು ಕ್ರಿ.ಶ. ೪೩೬ರಿಂದ ಎಂದಾಗುತ್ತದೆ. ಈ ಸಿಂಹವರ್ಮನು ಇಮ್ಮಡಿ ಸಿಂಹವರ್ಮನೆಂದೂ ಗಂಗವಂಶದ ಇಮ್ಮಡಿ ಮಾಧವನ ಪೆನುಗೊಂಡ ತಾಮ್ರ ಶಾಸನದಲ್ಲಿ ಆತನನ್ನೂ ಆತನ ತಂದೆಯಾದ ಆಯ್ಯ (ಆರ್ಯ)ವರ್ಮನನ್ನೂ ಕ್ರಮ ವಾಗಿ ಪಲ್ಲವರ ಸ್ಕಂದವರ್ಮ ಮತ್ತು ಸಿಂಹವರ್ಮರು ಸಿಂಹಾಸನದ ಮೇಲೆ ಕುಳ್ಳಿರಿಸಿದ ರೆಂದೂ ಹೇಳಿರುವುದಕ್ಕನುಗುಣವಾಗಿ ಸ್ಕಂದವರ್ಮ ಮತ್ತು ಸಿಂಹವರ್ಮರು ಪಲ್ಲವ ವಂಶದಲ್ಲಿ ಆಳಿದ ಆ ಹೆಸರಿನ ದೊರೆಗಳೆಂದೂ ಇತ್ತೀಚೆಗೆ ಡಾ. ಟಿ. ವಿ. ಮಹಾಲಿಂಗಂ ತೋರಿಸಲು ಯತ್ನಿಸಿದ್ದಾರೆ. ಡಾ. ಎಸ್. ಶ್ರೀಕಂಠಶಾಸ್ತ್ರಿಯವರು ಸಹ 'ಲೋಕವಿಭಾಗ' ದಲ್ಲಿ ಸೂಚಿಸಿದ ಕಾಲನಿರ್ದೇಶವನ್ನೇ ಆಧರಿಸಿ ಅದರಂತೆ ಗಂಗ ಅರಸರ ಆಳಿಕೆಯ ಕಾಲ ಗಳನ್ನು ಸೂಚಿಸಿದ್ದಾರೆ.

ಆದರೆ ಇಲ್ಲಿ ಒಂದೆರಡು ಅಂಶಗಳನ್ನು ಅವಶ್ಯವಾಗಿ ಗಮನಿಸಬೇಕಾಗಿದೆ. ಪಲ್ಲವ ಮತ್ತು ಗಂಗ ಅರಸರಲ್ಲಿ ನಿಕಟವಾದ ಸಂಬಂಧವಿತ್ತು ಎಂಬುದು ತಿಳಿದಿದೆ. ಅದರಂತೆಯೇ ಪಲ್ಲವ ಕದಂಬರ ನಡುವೆಯೂ ಸಂಬಂಧಗಳಿದ್ದುವು. ಕದಂಬ ಮಯೂರಶರ್ಮನು ಪಲ್ಲವ ಅರಸನನ್ನು ವಿರೋಧಿಸಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಕೊನೆಗೆ ಪಲ್ಲವರ ಮನ್ನಣೆಯನ್ನು ಪಡೆದನೆಂಬುದು ಸಹ ತಿಳಿದ ವಿಷಯವೇ. ಇವುಗಳನ್ನು ಗಮನಿಸಿದರೆ ಈ ಮೂರೂ ಮನೆತನಗಳ ಅರಸರ ಆಳಿಕೆಯ ಕಾಲಗಳಲ್ಲಿ ಹೊಂದಾಣಿಕೆ ಏರ್ಪಡವೆ, ಒಂದೊಂದೇ ಮನೆತನದ ಅರಸರ ಆಳಿಕೆಯನ್ನು ನಿರ್ಧರಿಸುವುದು ಸಮಂಜಸವಲ್ಲವೆನಿಸು ತ್ತದೆ.

ಕದಂಬರ ಆಳಿಕೆಯ ಕಾಲವನ್ನು ನಿಶ್ಚಯಿಸಲು ಈಗ ಕೆಲವು ಶಾಸನಾಧಾರಗಳು ಲಭ್ಯವಾಗಿವೆ. ಇವರಲ್ಲಿ ಮುಖ್ಯವಾದುದು ಬಾದಾಮಿಯಲ್ಲಿ ದೊರೆತ ಚಾಲುಕ್ಯ ಮೊದಲನೆಯ ಪುಲಕೇಶಿಯ ಕ್ರಿ.ಶ. ೫೪೩ನೆಯ ವರ್ಷದ ಶಾಸನ. ಅಶ್ವಮೇಧಾದಿ ಯಜ್ಞಗಳನ್ನು ಮಾಡಿ, ಬಾದಾಮಿಯಲ್ಲಿ ಬಲವಾದ ಕೋಟೆಯೊಂದನ್ನು ಈತನು ಕಟ್ಟಿದ

ನೆಂದು ಇದು ಹೇಳುತ್ತದೆ. ಚಾಲುಕ್ಯರು ಕದಂಬರ ರಾಜ್ಯದ ಉತ್ತರಾಧಿಕಾರಿಗಳೆಂದ ಮೇಲೆ ಈ ವೇಳೆಗೆ ಕದಂಬರು ಅವರಿಂದ ಸೋಲಿಸಲ್ಪಟ್ಟಿರಬೇಕು. ಈ ಶಾಸನ ಹುಟ್ಟುವ ೨-೩ ವರ್ಷಗಳ ಮೊದಲೇ ಚಾಲುಕ್ಯರು ರಾಜ್ಯ ಸ್ಥಾಪಿಸಿರಬಹುದಾದಲ್ಲಿ ಕದಂಬರ ಕೊನೆಯ ಅರಸನಾದ ಇಮ್ಮಡಿ ಕೃಷ್ಣವರ್ಮನು ಕ್ರಿ.ಶ. ೫೪೦ರವರೆಗೆ ಆಳಿರಬೇಕು. ಕದಂಬ ಕಾಕುಸ್ಥನ ನಂತರ ಆ ರಾಜ್ಯ ಇಬ್ಭಾಗವಾಗಿ ಸಹೋದರರಾದ ಶಾಂತಿವರ್ಮ ಮತ್ತು ಒಂದನೆಯ ಕೃಷ್ಣವರ್ಮರು ಕ್ರಮವಾಗಿ ಬನವಾಸಿ ಮತ್ತು ತ್ರಿಪರ್ವತಗಳಿಂದ ಆಳತೊಡಗಿದರು. ಹೀಗೆ ಒಡೆದ ರಾಜ್ಯವನ್ನು ಇಮ್ಮಡಿ ಕೃಷ್ಣವರ್ಮನು ಒಟ್ಟುಗೂಡಿಸಿದನು. ಬನವಾಸಿಯಲ್ಲಿ ಆಳಿದ ಕೊನೆಯ ಅರಸ ಹರಿವರ್ಮ. ಕೃಷ್ಣವರ್ಮನ ಆಳಿಕೆಯ ೧೫ನೆಯ ವರ್ಷದ ಶಾಸನದಲ್ಲಿ ವೈಜಯಂತಿ (ಬನವಾಸಿ)ಯ ಉಲ್ಲೇಖವಿದೆ. ಆದರೆ ಆತನ ೭ನೆಯ ವರ್ಷದ ಶಾಸನದಲ್ಲಿ ಇಂತಹ ಉಲ್ಲೇಖವಿಲ್ಲ. ಕದಂಬ ಹರಿವರ್ಮನ ಸಂಗೊಳ್ಳಿ ತಾಮ್ರಶಾಸನ ಆತನ ಆಳಿಕೆಯ ಎಂಟನೆಯ ವರ್ಷ, ಆಶ್ವಯುಜ ಅಮಾವಾಸ್ಯೆಯ ದಿನದಂದು ಹುಟ್ಟಿದೆ. ಈ ಶಾಸನದ ತೇದಿಯ ವಿವರಗಳು ಕ್ರಿ.ಶ.೫೪೫ ಸೆಪ್ಟಂಬರ್ ೨೧ಕ್ಕೆ ಸರಿಹೊಂದುವುದಾಗಿ ಶ್ರೀ ದೀಕ್ಷಿತರು ತಿಳಿಸಿದ್ದಾರೆ. ಆದರೆ ೫೪೦ರ ವೇಳೆಗೆ ಕದಂಬರ ರಾಜ್ಯ ಅಸ್ತಂಗತವಾಯಿತೆಂದು ಮೇಲೆ ಹೇಳಿದ್ದೇವೆ. ತತ್ಕಾರಣ ಈ ಶಾಸನ ೫೪೫ರಲ್ಲಿ ಹುಟ್ಟಿರುವ ಸಾಧ್ಯತೆಯೇ ಇಲ್ಲ.

ಇದರ ತೇದಿಯ ವಿವರಗಳು ಕ್ರಿ. ಶ. ೫೨೬ಕ್ಕೂ ಸರಿಹೋಗುತ್ತದೆ. ಆದ್ದರಿಂದ ಈ ವರ್ಷವು ಸಂಗೊಳ್ಳಿಯ ಶಾಸನದ ತೇದಿಯಾಗಿರಬಹುದೆನಿಸುತ್ತದೆ. ಇದು ಹರಿವರ್ಮನ ಆಳಿಕೆಯ ೮ನೆಯ ವರ್ಷ. ಎಂದಮೇಲೆ ಆತನು ಕ್ರಿ.ಶ. ೫೧೯ರಿಂದ ಆಳತೊಡಗಿದನು. ಕ್ರಿ.ಶ. ೫೨೬ ಇದುವರೆಗೆ ತಿಳಿದಂತೆ ಹರಿವರ್ಮನ ಆಳಿಕೆಯ ಇತ್ತೀಚಿನ ಕಾಲ. ಇದಾದ ೩-೪ ವರ್ಷಗಳಾದರೂ ಆತನು ಆಳಿರಬಹುದೆಂದು ಊಹಿಸಿದ ಪಕ್ಷಕ್ಕೆ ಆತನ ಆಳಿಕೆಯ ಕಾಲ ಕ್ರಿ.ಶ. ೫೧೯ರಿಂದ ೫೩೦ ಆಗುತ್ತದೆ. ನಂತರ ಇಮ್ಮಡಿ ಕೃಷ್ಣವರ್ಮನು ಹರಿವರ್ಮನ ರಾಜ್ಯವನ್ನು ಸ್ವರಾಜ್ಯಕ್ಕೆ ಸೇರಿಸಿ ಕದಂಬ ರಾಜ್ಯ ಒಟ್ಟುಗೂಡುವಂತೆ ಮಾಡಿ ಸುಮಾರು ೫೪೦ರವರೆಗೂ ಆಳಿದನು.

ಈ ಆಧಾರದ ಮೇಲೆ ಕದಂಬ ಹಾಗೂ ಗಂಗ ಮನೆತನದ ಅರಸರ ಆಳಿಕೆಯ ಕಾಲಗಳನ್ನು ಇತ್ತೀಚೆಗೆ ನಿರ್ಧರಿಸಲಾಗಿದೆ. ಪಲ್ಲವ ಅರಸರ ಆಳಿಕೆಯ ಕಾಲಗಳಲ್ಲೂ ಕೆಲವು ಮಾರ್ಪಾಡುಗಳಾಗಿವೆ. ಹೊಸದಾಗಿ ದೊರೆತ ಸಿಂಹವಿಷ್ಣು ಮಹೇಂದ್ರವರ್ಮರ ಶಾಸನಗಳ, ಅವರು ಕಟ್ಟಿಸಿದ ಗುಹಾಲಯಗಳ ಸೂಕ್ಷ್ಮಾವಲೋಕನದ ಆಧಾರದ ಮೇಲೆ ಅವರ ಕಾಲಗಳನ್ನು ಕುರಿತು ಹೊಸದಾಗಿ ಹಲವು ಊಹೆಗಳನ್ನು ಮಾಡಲಾಗಿದ್ದು, ಆ ಕಾಲಗಳು ಹೆಚ್ಚುಕಡಮೆ ಮೇಲೆ ಸೂಚಿಸಿದ ಕದಂಬ ಗಂಗ ಮನೆತನಗಳ ಅರಸರ ಆಳಿಕೆಯ ಕಾಲಗಳೊಡನೆ ಏಕೀಭವಿಸುತ್ತವೆ. ಇವರುಗಳಲ್ಲಿದ್ದ ಪರಸ್ಪರ ವೈಷಮ್ಯ, ಸೌಹಾರ್ದ ಬಾಂಧವ್ಯಗಳನ್ನು ನಿರೂಪಿಸುವುದರಲ್ಲಿಯೂ ಈ ಕಾಲನಿರ್ದೇಶನ ಪೋಷಕವಾಗಿದೆ. ಆದ್ದರಿಂದ ಇದುವರೆಗೆ ಇತರ ಅನೇಕರು ಸೂಚಿಸಿರುವ ಕಾಲಗಳನ್ನು ಒಪ್ಪಿಕೊಳ್ಳಲು

ಅಡಚಣೆಗಳಿದ್ದು, ಇತ್ತೀಚೆಗೆ ಮಾಡಲಾದ ಊಹೆಗಳು ಹೆಚ್ಚು ಸಮರ್ಥನೀಯವೆಂದು ತೋರುತ್ತವೆ.

ತಲಕಾಡಿನ ಗಂಗರು : ಗಂಗರು ಜಾಹ್ನವೇಯಕುಲಸಂಭೂತರೆಂದೂ ಕಾಣ್ವಾಯನ ಗೋತ್ರಜರೆಂದೂ ಶಾಸನಗಳಲ್ಲಿ ಹೇಳಲಾಗಿದೆ. ಈ ವಂಶದ ಮೊದಲ ಅರಸ ಕೊಂಗಣಿ (ಕೊಂಗುಣಿ)ವರ್ಮ. ಹತ್ತನೆಯ ಶತಮಾನದ ಇಸರ ಕೆಲವು ಶಾಸನಗಳಲ್ಲಿ ಈ ಗಂಗ ವಂಶದ ಮೂಲಪುರುಷರು ಮೊದಲು ಉತ್ತರದ ಅಯೋಧ್ಯಾಪುರದಿಂದಲೂ ನಂತರ ಅಹಿಚ್ಛತ್ರಪುರದಿಂದಲೂ ಆಳುತ್ತಿದ್ದರೆಂದೂ, ಇವರಲ್ಲಿ ದಡಿಗ ಮತ್ತು ಮಾಧವ ಎಂಬಿಬ್ಬರು ರಾಜಕುಮಾರರು ಕ್ರಮೇಣ ದಕ್ಷಿಣಕ್ಕೆ ವಲಸೆ ಬಂದು ಈಗಿನ ಆಂಧ್ರ ಪ್ರದೇಶದ ಕಡಪ ಜಿಲ್ಲೆಯ ಗಂಗಪೇರೂರಿನಲ್ಲಿ ನೆಲಸಿದರೆಂದೂ, ಕ್ರಮೇಣ ತೊಂಬತ್ತಾರು ಸಾವಿರದ ವಿಸ್ತಾರವಾದ ರಾಜ್ಯವನ್ನು ತಮ್ಮ ವಶಪಡಿಸಿಕೊಂಡು ಕುವಳಾಲಪುರ (ಈಗಿನ ಕೋಲಾರ) ರಾಜಧಾನಿಯಿಂದ ಆಳುತ್ತ ನಂದಗಿರಿ (ಈಗಿನ ಕೋಲಾರ ಜಿಲ್ಲೆಯಲ್ಲಿರುವ ನಂದಿಬೆಟ್ಟ) ನಾಥರೆನಿಸಿಕೊಂಡರೆಂದೂ, ಆದರೆ ಕೆಲಕಾಲದ ಬಳಿಕ ತಮ್ಮ ರಾಜಧಾನಿಯನ್ನು ಮೊದಲು ಮಣ್ಣೆ ಅಥವಾ ಮಾನ್ಯಪುರಕ್ಕೂ ನಂತರ ತಲಕಾಡಿಗೂ ಬದಲಾಯಿಸಿ ಸ್ವಶಕ್ತಿಯಿಂದ ಕಟ್ಟಿದ ರಾಜ್ಯವನ್ನು ಆಳತೊಡಗಿದರೆಂದೂ ಶಾಸನಗಳಿಂದ ತಿಳಿದಿದೆ. ಆದರೆ ಇವರ ಮೊದಲಿನ ಶಾಸನಗಳಲ್ಲಿ ಈ ಪ್ರಸ್ತಾಪಗಳಾವುವೂ ಇಲ್ಲ. ಮೊದಲನೆಯ ಅರಸನಾದ ಕೊಂಗುಣಿವರ್ಮನು ಜಾಹ್ನವೇಯ ಕುಲದವನೆಂದಿದೆ. ಈತನು ಸ್ವಬಾಹುಬಲದಿಂದ ರಾಜ್ಯವೊಂದನ್ನು ಕಟ್ಟಿದನು. ಈ ಕಾರ್ಯದಲ್ಲಿ ಈತನಿಗೆ ಜೈನಗುರು ಸಿಂಹನಂದಿ ಬಹಳವಾಗಿ ಸಹಾಯ ಮಾಡಿದನು. ಉತ್ತರ ಕರ್ನಾಟಕದಲ್ಲಿ ಕದಂಬರ ರಾಜ್ಯ ಅಸ್ತಿತ್ವಕ್ಕೆ ಬಂದ ಸಮಯದಲ್ಲಿಯೇ ದಕ್ಷಿಣದಲ್ಲಿ ಗಂಗರ ರಾಜ್ಯ ಸಹ ಸ್ಥಾಪಿಸಲ್ಪಟ್ಟಂತೆ ತೋರುತ್ತದೆ. ಇದು ಕ್ರಿ.ಶ. ಸು. ೩೫೦ರಲ್ಲಿ. ಆದರೆ ಸಮಕಾಲೀನ ಶಾಸನಗಳಲ್ಲಿ ಈ ವಿವರಗಳಾವುವೂ ಸಿಗುವುದಿಲ್ಲ; ದಡಿಗನ ಹೆಸರೇ ಕಾಣಬರುವುದಿಲ್ಲ.

ಕೊಂಗುಣಿವರ್ಮನ ಮಗ ಮೊದಲನೆಯ ಮಾಧವ. ಈತನಿಗೆ ಹರಿವರ್ಮ, ಆರ್ಯವರ್ಮ ಮತ್ತು ಕೃಷ್ಣವರ್ಮರೆಂಬ ಮಕ್ಕಳಿದ್ದರು. ಇವರು ಮೂವರೂ ಗಂಗಮನೆತನದ ಮೂರು ಶಾಖೆಗಳಾದ ಪರುವಿ, ಕೈವಾರ ಹಾಗೂ ತಲಕಾಡುಗಳಿಂದ ಕ್ರಮವಾಗಿ ಆಳತೊಡಗಿದರೆಂದು ಡಾ. ಶ್ರೀಕಂಠಶಾಸ್ತ್ರೀ ಮುಂತಾದವರು ಸೂಚಿಸಿದ್ದಾರೆ. ಆದರೆ ಈ ಕುರಿತು ಖಚಿತವಾಗಿ ಹೇಳಲಾಗದು. ಈ ಮೂರು ಹೆಸರುಗಳೂ ಒಬ್ಬನದೇ ಆಗಿವೆ ಎಂದು ಇನ್ನು ಕೆಲವರು ಸೂಚಿಸಿದ್ದಾರೆ. ಪ್ರಸ್ತುತ ಇಲ್ಲಿ ಇದನ್ನು ಅನುಸರಿಸಿದೆ.

ಮಾಧವನು 'ದತ್ತಕಸೂತ್ರ'ವೆಂಬ ಗ್ರಂಥಕ್ಕೆ ವೃತ್ತಿಯನ್ನು ಬರೆದಿರುವುದಾಗಿ ನಂತರದ ಶಾಸನಗಳಲ್ಲಿ ಹೇಳಿದೆ. ಇವನ ಮಗನನ್ನು ಪಲ್ಲವರ ಸಿಂಹವರ್ಮನು ಸಿಂಹಾಸನದ ಮೇಲೆ ಕುಳ್ಳಿರಿಸಿದನಂತೆ. ಆದರೆ ಇದನ್ನು ಕುರಿತ ಹೆಚ್ಚಿನ ವಿವರಗಳಾಗಲಿ, ಈ ಘಟನೆಗೆ ಕಾರಣಗಳಾಗಲಿ ಸ್ಪಷ್ಟವಾಗಿಲ್ಲ. ತಮ್ಮನಾದ ಕೃಷ್ಣವರ್ಮನು ಈತನ ಪ್ರತಿಸ್ಪರ್ಧಿಯಾದ ಕಾರಣ ಈತನು ಪಲ್ಲವರ ನೆರವನ್ನು ಪಡೆಯಬೇಕಾಯಿತೆಂಬುದೊಂದು ಊಹೆ. ಈತನಿಗೆ

ಹರಿವರ್ಮನೆಂಬ ಇನ್ನೊಂದು ಹೆಸರಿತ್ತೆಂದೂ ಹೇಳಲಾಗಿದ್ದು ಹರಿವರ್ಮ, ಆರ್ಯವರ್ಮ ಮತ್ತು ಕೃಷ್ಣವರ್ಮ ಎಂಬವು ನಾವು ಒಬ್ಬನೇ ಅರಸನ ಹೆಸರುಗಳಾಗಿತ್ತೆಂಬ ಸೂಚನೆಯನ್ನು ಅವಲಂಬಿಸಿರುವುದರಿಂದ ಈ ಮೇಲಿನ ಊಹೆಯನ್ನು ಒಪ್ಪಲಾಗದು.

ವಾದಿಮದಗಜೇಂದ್ರನೆಂದು ಬಿರುದಾಂಕಿತನಾದ ಬೌದ್ಧಪಂಡಿತನೊಬ್ಬನು ತಲವನಪುರದಲ್ಲಿ ತರ್ಕ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ತನಗಿಂತ ಮಿಗಿಲಾದ ಪಂಡಿತರಾರೂ ಇಲ್ಲವೆಂದು ಘೋಷಿಸಿಕೊಂಡಾಗ, ಆತನನ್ನು ಬ್ರಾಹ್ಮಣನೊಬ್ಬನು ವಾದಕ್ಕೆಳೆದು ಸೋಲಿಸಿದನೆಂದೂ ಇದರಿಂದ ಪ್ರೀತನಾದ ಅರಸನು ಆ ಬ್ರಾಹ್ಮಣನಿಗೆ ವಾದೀಭಸಿಂಹನೆಂಬ ಬಿರುದನ್ನಿತ್ತನೆಂದೂ ಹರಿವರ್ಮನ ತಂಜಾವೂರು ಶಾಸನದಲ್ಲಿ ಹೇಳಿದೆ. ಗಂಗರ ರಾಜಧಾನಿಯನ್ನು ಹರಿವರ್ಮನೇ ತಲಕಾಡಿಗೆ ಬದಲಿಸಿದನೆಂದೂ ಹೇಳಿದೆ. ಈತನ ತಗಡೂರು ತಾಮ್ರಶಾಸನದಲ್ಲಿ, ಹೊಂಜೇರು ಕದನದಲ್ಲಿ ಪ್ರಮುಖಪಾತ್ರವಹಿಸಿದ್ದ ಶೂರನಾದ ಒಬ್ಬ ಗಾವುಂಡನಿಗೆ ಅಪ್ಪೊಗಲ್ ಗ್ರಾಮವನ್ನು ಅರಸನು ದಾನವಾಗಿ ನೀಡಿದನೆಂದು ಹೇಳಿಕೆಯಿದೆ. ಆದರೆ ಹರಿವರ್ಮನದೆನ್ನಲಾದ, ಇದುವರೆಗೆ ದೊರೆತ ತಾಮ್ರಶಾಸನಗಳೆಲ್ಲ ಕೃತಕ ಶಾಸನಗಳೇ. ಆದ್ದರಿಂದ ಇವರಲ್ಲಿನ ಈ ಹೇಳಿಕೆಗಳ ಬೆಲೆ ಸಂದಿಗ್ಧ.

ಹರಿವರ್ಮನ ನಂತರ ಪಟ್ಟಕ್ಕೆ ಬಂದವನು ಇಮ್ಮಡಿ ಮಾಧವ. ಇವನಿಗೆ ಸಿಂಹವರ್ಮನೆಂಬ ಇನ್ನೊಂದು ಹೆಸರೂ ಇದ್ದಿತು. ಈತನು ಪಲ್ಲವರ ದೊರೆಯಾದ ಸ್ಕಂದವರ್ಮನ ಸಹಾಯದಿಂದ ಸಿಂಹಾಸನಾರೂಢನಾದನೆಂದು ಹೇಳಿದೆ. ಈತನಿಗೆ ವಿಷ್ಣುಗೋಪ ಮತ್ತು ವೀರವರ್ಮರೆಂಬ ಇಬ್ಬರು ಸೋದರರು ಇದ್ದರು. ಇಮ್ಮಡಿ ಮಾಧವನ ಬಳಿಕ ವಿಷ್ಣುಗೋಪನು ಸುಮಾರು ೨೦ ವರ್ಷಗಳ ಕಾಲ ಆಳಿದನು. ಮುಮ್ಮಡಿ ಮಾಧವನೇ ಈ ವಿಷ್ಣುಗೋಪನ ಮಗ. ಈತನನ್ನು ತಡಂಗಾಲ ಮಾಧವನೆಂದೂ ಕರೆಯಲಾಗಿದೆ. ಕದಂಬರು ಪಲ್ಲವರೊಡನೆ ವೈರತ್ವವನ್ನು ಬೆಳಸಿದ್ದ ಕಾರಣ ಗಂಗರಿಗೂ ಕದಂಬರಿಗೂ ನಡುವೆ ವೈಮನಸ್ಯವೇರ್ಪಡುವ ಸಂಭವವಿದ್ದಿತು. ಬಹುಶಃ ಇದನ್ನು ತಡೆಯಲೆಂದೇ ಮಾಧವನಿಗೆ ಕದಂಬ ವಂಶದ ಕಾಕುತ್ಸ್ಥವರ್ಮನ ಮಗಳನ್ನು ಮದುವೆಮಾಡಿಕೊಡಲಾಗಿತ್ತು. ಈಕೆ ಮೊದಲನೆಯ ಕೃಷ್ಣವರ್ಮನ ಸೋದರಿ. ಈ ಗಂಗ ಕದಂಬ ದಂಪತಿಗಳಿಗೆ ಜನಿಸಿದವನು ಅವಿನೀತ.

ಅವಿನೀತನು ಇನ್ನೂ ತಾಯಿಯ ಮಡಿಲಲ್ಲಿದ್ದಾಗಲೇ ಅವನಿಗೆ ರಾಜ್ಯಾಭಿಷೇಕವಾಯಿತೆಂದು ಕೆಲವು ಶಾಸನಗಳಲ್ಲಿ ಹೇಳಿದೆ. ಆಗ ಬಹುಶಃ ಆತನಿಗೆ ಒಂದೆರಡು ವರ್ಷಗಳ ವಯಸ್ಸಾಗಿರಬೇಕು. ಆದರೂ ಅವನು ತನ್ನ ಆಳಿಕೆಯ ಕಾಲಗಣನೆಯನ್ನು ಮಾತ್ರ ರಾಜ್ಯಾಡಳಿತವನ್ನು ಸ್ವತಃ ವಹಿಸಿದಂದಿನಿಂದಲೇ ಗಣಿಸಿರುವನೆಂಬುದು ಶಾಸನಗಳಲ್ಲಿ ಸ್ಪಷ್ಟವಾಗುತ್ತದೆ. ಇದು ಕ್ರಿ.ಶ. ೪೬೯ರಿಂದ. ಪುನ್ನಾಟದ ದೊರೆಯಾದ ಇಮ್ಮಡಿ ಸ್ಕಂದವರ್ಮನ ಮಗಳು ಜ್ಯೇಷ್ಠಾದೇವಿ ಈತನ ಪತ್ನಿ. ಪಲ್ಲವ ಸಿಂಹವಿಷ್ಣುವಿನ ತಾಯಿ ಗಂಗರ ರಾಜ್ಯದಲ್ಲಿ ಕಟ್ಟಿಸಿದ ಬಸದಿಯೊಂದಕ್ಕೆ ಈತನು ದತ್ತಿಯನ್ನು ಬಿಟ್ಟುದಾಗಿ ಈತನ ಆಳಿಕೆಯ ೧೨ನೆಯ ವರ್ಷದ ಹೊಸಕೋಟೆಯ ಶಾಸನ ತಿಳಿಸುತ್ತದೆ.

ಅವಿನೀತನಿಗೂ ಈಕೆಗೂ ಇದ್ದ ಸಂಬಂಧವೆಂತಹುದೆಂದು ತಿಳಿಯದು. ಆದರೆ ಸಾಧಾರಣ ವಾಗಿ ವಿಷ್ಣು ಅಥವಾ ಶಿವನ ಭಕ್ತರಾದ ಪಲ್ಲವರ ರಾಜಮಾತೆ ಗಂಗರಾಜ್ಯದಲ್ಲಿ ಬಸದಿ ಯೊಂದನ್ನು ಕಟ್ಟಿಸಿದ್ದು ಗಮನಿಸಿದರೆ ಆಕೆ ಬಹುಶಃ ಗಂಗವಂಶಕ್ಕೆ ಸೇರಿದವಳಾ ಗಿರಬಹುದೆಂಬಷ್ಟನ್ನು ಮಾತ್ರ ಸೂಚಿಸಬಹುದು. ಶಾಸನಗಳು ಇವನನ್ನು ಹರಚರಣಾರ ವಿಂದಪ್ರಸೂತನೆಂದು ವರ್ಣಿಸಿದೆ. ಈತನ ಗುರು ಜೈನ ವಿಜಯಕೀರ್ತಿ ಎಂಬುದೂ ತಿಳಿದಿದೆ. ಆದ್ದರಿಂದ ಈತನು ವೈಯಕ್ತಿಕವಾಗಿ ಜೈನಮತಾವಲಂಬಿಯಾದರೂ ಸಮನ್ವಯ ದೃಷ್ಟಿಯಿಂದ ಪ್ರಜೆಗಳ ಒಲವನ್ನು ಸಂಪಾದಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ತನ್ನ ಆಳಿಕೆಯ ೨೦ನೆಯ ವರ್ಷದೊಳಗಾಗಿಯೇ ದುಷ್ಟರಾದ ಸಾಮಂತರನ್ನು ಸದೆಬಡಿದು ರಾಜ್ಯದಲ್ಲಿ ಸ್ಥಿರತೆ ನೆಲಸುವಂತೆ ಮಾಡಿದನು. ಇನ್ನೂ ಹಲವಾರು ವಿಜಯಗಳನ್ನು ಈತನು ಸಾಧಿಸಿದನೆಂದು ಹೇಳಿದೆ. ಆದರೂ ಅವುಗಳನ್ನು ಕುರಿತು ಹೆಚ್ಚಿನ ವಿವರಗಳು ತಿಳಿದಿಲ್ಲ. ಈತನು ೬೦ ವರ್ಷಗಳ ಕಾಲ, ಕ್ರಿ.ಶ. ೫೨೯ರವರೆಗೆ ಆಳಿದನು.

ಅವಿನೀತನಿಗೆ ಜ್ಯೇಷ್ಠಾದೇವಿಯಲ್ಲಿ ಜನಿಸಿದವನು ದುರ್ವಿನೀತ. ಆದರೆ ಈತನು ತಂದೆಗೆ ಬೇರೊಬ್ಬ ರಾಣಿಯಲ್ಲಿ ಜನಿಸಿದ ಸೋದರನೊಬ್ಬನೊಡನೆ ಹೋರಾಡಿದ ಬಳಿಕವೇ ಸಿಂಹಾಸನವನ್ನೇರಬೇಕಾಯಿತು. ಎಂದರೆ ಆಲತ್ತೂರು, ಪೊರುಳಱೆ, ಪೆರ್ನಗರ ಮುಂತಾದ ಕಡೆಗಳಲ್ಲಿ ನಡೆದ ಕದನಗಳಲ್ಲಿ ಈತನು ಪಾಲ್ಗೊಂಡನು. ಈತನು ಪುನ್ನಾಡಾಧಿಪತಿಯೂ ಆಗಿದ್ದನೆಂದು ಶಾಸನಗಳು ಹೇಳುವುದರಿಂದ ಈತನ ಮಾತಾಮಹನಾದ ಸ್ಕಂದವರ್ಮನ ರಾಜ್ಯವು ಇವನ ವಶವಾಯಿತೆಂದು ತೋರುತ್ತದೆ. ಇಮ್ಮಡಿ ಸ್ಕಂದವರ್ಮನಿಗೆ ರವಿದತ್ತ ನೆಂಬೊಬ್ಬ ಮಗನಿದ್ದನೆಂದು ತಿಳಿದಿದೆ. ಆದರೆ ಈತನು ಕ್ರಿ.ಶ. ೫೫೦ಕ್ಕೂ ಮೊದಲೇ ಮರಣ ಹೊಂದಿದಂತೆ ತೋರುತ್ತದೆ. ಈತನ ಉತ್ತರಾಧಿಕಾರಿಗಳಾರೂ ಇಲ್ಲದ ಕಾರಣ ಈತನ ರಾಜ್ಯ ಸೋದರಳಿಯನಾದ ದುರ್ವಿನೀತನ ವಶವಾಯಿತು. ಪುನ್ನಾಟವು ಕಾವೇರಿ ಮತ್ತು ಕಪಿಲಾನದಿಗಳಿಂದ ಪಾವನವಾದ ಪ್ರದೇಶವೆಂದು ತಾಮ್ರಶಾಸನವೊಂದು ಹೇಳಿದೆ. ಪುಂರಾಷ್ಟ್ರವೆಂದೂ ಕರೆಯಲಾದ ಈ ನಾಡಿನ ರಾಜಧಾನಿ ಕೀರ್ತಿಪುರ (ಈಗಿನ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿರುವ ಕಿತ್ತೂರು). ಪುನ್ನಾಡಿನ ಜೊತೆಗೆ ದುರ್ವಿನೀತನು ಪಾನ್ನಾಡನ್ನೂ ಆಳುತ್ತಿದ್ದನೆಂದು ಶಾಸನಗಳು ಹೇಳಿವೆ. ಆದರೆ ಈ ಪಾನ್ನಾಡು ಯಾವುದು ಎಂಬುದು ಸ್ಪಷ್ಟವಾಗಿಲ್ಲ; ಇದು ಬಾಣನಾಡಾಗಿರಬಹುದೆಂದು ಎಸ್. ಎಲ್. ರಾಯರು ಅಭಿಪ್ರಾಯಪಟ್ಟಿದ್ದಾರೆ.

ದುರ್ವಿನೀತನ ಇತರ ರಾಜಕೀಯ ಸಾಧನೆಗಳ ಬಗೆಗೆ ಹೆಚ್ಚಿಗೆ ಏನೂ ತಿಳಿಯದು. ಐದಾರು ಶತಮಾನಗಳ ಬಳಿಕ ಕ್ರಿ.ಶ. ೧೦೬೬ರಲ್ಲಿ ಹುಟ್ಟಿದ ನಗರ ಶಾಸನದಲ್ಲಿ ಕಾಡು ವೆಟ್ಟಿಯನ್ನು ಸೋಲಿಸಿ ತನ್ನ ದೌಹಿತ್ರನನ್ನು ಜಯಸಿಂಹವಲ್ಲಭನ ಸಿಂಹಾಸನದ ಮೇಲೆ ಕುಳ್ಳಿರಿಸಿದನೆಂದು ಹೇಳಿದೆ. ಇದು ದುರ್ವಿನೀತನು ಬಾದಾಮಿಯ ಚಾಲುಕ್ಯರೊಂದಿಗೆ ಹೊಂದಿದ್ದ ಸಂಬಂಧವನ್ನು ಸೂಚಿಸುತ್ತದೆಯೆಂದು ಕೆಲವರು ಊಹಿಸಿದ್ದಾರೆ. ಈ ಜಯಸಿಂಹವಲ್ಲಭನು ಮೊದಲನೆಯ ಪುಲಕೇಶಿಯ ಪಿತಾಮಹನಾದ ಜಯಸಿಂಹನೆಂದೂ

ಇಮ್ಮಡಿ ಪುಲಕೇಶಿಯ ಮಗನಾದ ವಿಕ್ರಮಾದಿತ್ಯನನ್ನೇ ದುರ್ವಿನೀತನು ಸಿಂಹಾಸನಾರೂಢನಾಗಿಸಿದನೆಂದೂ ಒಂದು ಊಹೆ.

ದಂಡಿಕವಿಯ 'ಅವಂತಿಸುಂದರೀ ಕಥಾ'ದಲ್ಲಿ ಹೇಳಲಾದ ಕತೆಯೊಂದನ್ನಾಧರಿಸಿ, ದಾಮೋದರನೆಂಬ ಬ್ರಾಹ್ಮಣ ಕವಿ, ಭಾರವಿ. ಇಮ್ಮಡಿ ಪುಲಕೇಶಿಯ ತಮ್ಮನಾದ ರಾಜಸೂನುವೆನಿಸಿದ ವಿಷ್ಣುವರ್ಧನ, ಗಾಂಗೇಯ ಕುಲಧ್ವಜನಾದ ದುರ್ವಿನೀತ ಮತ್ತು ಕಾಂಚೀಪುರಾಧೀಶನಾದ ಸಿಂಹವಿಷ್ಣು–ಇವರೆಲ್ಲ ಸಮಕಾಲೀನರೆಂದು ಇನ್ನೊಂದು ವಾದವನ್ನು ಎನ್. ಎಲ್. ರಾಯರು ಪ್ರತಿಪಾದಿಸಿದ್ದಾರೆ. ಈ ಊಹೆ ದುರ್ವಿನೀತನು ಕ್ರಿ.ಶ. ೬೦೫ರವರೆಗೆ ಆಳಿರಬಹುದೆಂಬ ಅವರ ವಾದಕ್ಕೆ ಪುಷ್ಟಿಯನ್ನಿತ್ತಿದೆ. ಆದರೆ ಈ ವೇಳೆಗೆ ಪುಲಕೇಶಿಯೇ ಇನ್ನೂ ಪಟ್ಟಕ್ಕೆ ಬಂದಿರುವುದಿಲ್ಲ; ಪ್ರಾಪ್ತವಯಸ್ಕನಾಗಿರುವುದಿಲ್ಲ. ಪಲ್ಲವ ಸಿಂಹವಿಷ್ಣುವಿನ ಆಳಿಕೆ ಕ್ರಿ.ಶ. ೫೮೦ಕ್ಕೇ ಮುಗಿಯಿತೆಂಬುದನ್ನೊಪ್ಪಿದರೆ, ದುರ್ವಿನೀತನ ಆಸ್ಥಾನದಿಂದ ಸಿಂಹವಿಷ್ಣುವಿನ ಆಸ್ಥಾನಕ್ಕೆ ದಾಮೋದರನು ಹೋದುದು ಕ್ರಿ.ಶ. ೫೮೦ಕ್ಕೂ ಮೊದಲೇ ಎಂದು ಹೇಳಬೇಕಾಗುತ್ತದೆ. ಅದಕ್ಕೂ ಮೊದಲೇ ವಿಷ್ಣುವರ್ಧನನೊಡನೆ ಇವನು ಬೇಟೆಯಾಡಲು ಹೋದನೆಂಬುದು ಅಸಂಭಾವ್ಯವಾಗುತ್ತದೆ.

ಡಾ. ಮಹಾಲಿಂಗಂ ರಾಯರ ವಾದವನ್ನು ಒಪ್ಪಿದ್ದಾರೆ. ಸಿಂಹವಿಷ್ಣುವಿನ ಆಳಿಕೆ ೫೭೫ರಿಂದ ೬೦೦ರವರೆಗೆ ಎಂಬುದು ಇನ್ನೂ ಅನಿಶ್ಚಿತವಾಗಿಯೇ ಇದ್ದು, ಆತನು ಕ್ರಿ.ಶ. ೬೦೦ರ ಬಳಿಕವೂ ಕೆಲವರ್ಷಗಳು ಆಳಿರಬಹುದಾದ ಸಾಧ್ಯತೆ ಇದೆ. ವಿಷ್ಣುವರ್ಧನನೂ ಸ್ವತಂತ್ರನಾಗಿ ಪೂರ್ವ ಚಾಲುಕ್ಯ ರಾಜ್ಯವನ್ನು ಏಳನೆಯ ಶತಮಾನದ ಪೂರ್ವಾರ್ಧದಲ್ಲಿ, ೬೩೦ರ ಬಳಿಕ ಆಳಿದರೂ ಅದಕ್ಕೂ ಮೊದಲು ಆತನು ಯುವರಾಜನಾಗಿದ್ದು ಇಮ್ಮಡಿ ಪುಲಿಕೇಶಿಯೊಡನೆ ಕದನಗಳಲ್ಲಿ ಪಾಲ್ಗೊಂಡಿರಬಹುದು. 'ಅವಂತಿಸುಂದರೀಕಥೆ'ಯ ವಿಷ್ಣುವರ್ಧನ ಈತನೇ ಆಗಿರಬಹುದು ಎಂದು ಇವರು ತರ್ಕಿಸಿದ್ದಾರೆ. ಆದರೆ ಈಗ ನಾವು ಸೂಚಿಸಿರುವ ಕಾಲಾನುಪೂರ್ವಿಯಂತೆ ದುರ್ವಿನೀತನು ೫೭೯ರ ಸುಮಾರಿಗೆ ತನ್ನ ಆಳಿಕೆಯನ್ನು ಮುಗಿಸಿದ್ದನಾದ್ದರಿಂದ, ಈ ಘಟನೆಗಳನ್ನು ಒಂದಕ್ಕೊಂದು ಹೊಂದಿಸುವುದು ಸಾಧ್ಯವಾಗುವುದಿಲ್ಲ. ಗಂಗ ಪಲ್ಲವ ಅರಸರ ಆಳಿಕೆಯ ಕಾಲಗಳು ಖಚಿತವಾಗುವವರೆಗೆ ಇವು ಕೇವಲ ಊಹೆಗಳಾಗಿಯೇ ಉಳಿಯುತ್ತವೆ. ಪ್ರಸ್ತುತ ನಾವು ದುರ್ವಿನೀತನು ಕ್ರಿ.ಶ. ೫೨೯ರಿಂದ ೫೭೯ರವರೆಗೆ ಆಳಿದನೆಂದು ಹೇಳಿರುವ ಕಾರಣ, ಈತನು ಚಾಲುಕ್ಯ ಜಯಸಿಂಹವಲ್ಲಭನ ಸಮಕಾಲೀನನಾಗುವ ಸಾಧ್ಯತೆ ಇದೆ. ಆದರೆ ಇಲ್ಲಿಯೂ ಸ್ಪಷ್ಟವಾಗಿ ಏನನ್ನೂ ಹೇಳಲಾಗದು. ನಮಗೆ ಇದು ತಿಳಿದಿರುವುದು ಸು. ೫ ಶತಮಾನಗಳ ನಂತರ ಹುಟ್ಟಿದ ಶಾಸನವೊಂದರಿಂದ. ಅದರಲ್ಲೂ ಹೇಳಿಕೆಗಳು ಅಸ್ಪಷ್ಟ. ಆದ್ದರಿಂದ ಈ ಕುರಿತು ಸದ್ಯದ ಪರಿಸ್ಥಿತಿಯಲ್ಲಿ ನಿರ್ದಿಷ್ಟವಾಗಿ ಏನನ್ನೂ ಹೇಳಲಾಗದು.

ಸಾಹಿತ್ಯಕ್ಷೇತ್ರದಲ್ಲಿ ದುರ್ವಿನೀತನಿಗೆ ಹಿರಿಯ ಸ್ಥಾನವಿದೆಯೆಂಬುದು ಸಾಹಿತ್ಯಾಧಾರ

ಗಳಿಂದ ತಿಳಿದುಬಂದಿದೆ. ದುರ್ವಿನೀತ ಹಾಗೂ ಭಾರವಿ ಸಮಕಾಲೀನರು, ಭಾರವಿಯ 'ಕಿರಾತಾರ್ಜುನೀಯ'ದ ೧೫ನೆಯ ಸರ್ಗಕ್ಕೆ ದುರ್ವಿನೀತನು ಟೀಕೆಯೊಂದನ್ನು ಬರೆದನೆಂದೂ ಪೈಶಾಚೀಭಾಷೆಯ ಬೃಹತ್ಕಥೆಯ ಸಂಸ್ಕೃತ ರೂಪಾಂತರ ಈತನದೇ ಎಂದೂ 'ಶಬ್ದಾವತಾರ'ವೆಂಬ ವ್ಯಾಕರಣ ಗ್ರಂಥವನ್ನು ಕೂಡ ಈತ ಬರೆದನೆಂದೂ ಹೇಳಲಾಗಿದೆ. ಇವುಗಳಲ್ಲಿ 'ಶಬ್ದಾವತಾರ' ಆತನ ಗುರುಗಳಾದ ಪೂಜ್ಯಪಾದರು ರಚಿಸಿದ್ದ ಅದೇ ಹೆಸರಿನ ಪಾಣಿನೀಯ ಸೂತ್ರವೃತ್ತಿಗೆ ಬರೆದ ಇನ್ನೊಂದು ಟೀಕೆ ಎಂದೂ ಇದು ಬಹುಶಃ ಕನ್ನಡ ಭಾಷೆಯಲ್ಲಿ ರಚಿತವಾಗಿರಬಹುದೆಂದೂ ಹೇಳಲಾಗಿದೆ. ಇವುಗಳಿಂದ ದುರ್ವಿನೀತನು ಬಹುಶ್ರುತನೂ ಕವಿಗಳಿಗೆ ಪಂಡಿತರಿಗೆ ಆಶ್ರಯದಾತನೂ ಸ್ವತಃ ಗ್ರಂಥಕರ್ತನೂ ಆಗಿದ್ದನೆಂಬಷ್ಟು ಮಾತ್ರ ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಇವನನ್ನು ಮುಕ್ತಕಂಠದಿಂದ ಹೊಗಳಲಾಗಿದೆ. ಇದು ಈತನು ಅಂದಿನ ಅರಸರಲ್ಲಿ ಖ್ಯಾತನಾಗಿದ್ದನೆಂಬುದನ್ನು ಸೂಚಿಸುತ್ತದೆ.

ದುರ್ವಿನೀತನ ಕಾಲದಲ್ಲಿ ಮತ್ತು ಆ ನಂತರ ಗಂಗರ ರಾಜಕೀಯ ಹೊಂದಾಣಿಕೆಗಳಲ್ಲಿ ಬದಲಾವಣೆಯನ್ನು ಕಾಣುತ್ತೇವೆ. ಮೊದಮೊದಲು ಪಲ್ಲವರೊಡನೆ ಸೌಹಾರ್ದಯುತವಾದ ಬಾಂಧವ್ಯವನ್ನು ಪಡೆದಿದ್ದ ಇವರು, ಕ್ರಮೇಣ ಕರ್ನಾಟಕದಲ್ಲಿ ತಲೆಯೆತ್ತಿ ಆ ಪ್ರಾಂತವನ್ನೆಲ್ಲ ಸೇರಿಸಿ ಒಂದು ರಾಜ್ಯವನ್ನು ಕಟ್ಟಿದ ಬಾದಾಮಿಯ ಚಾಲುಕ್ಯರ ಮಾಂಡಲಿಕತ್ವವನ್ನು ಒಪ್ಪಿಕೊಂಡರು. ತಮಗೆ ಪ್ರತಿಸ್ಪರ್ಧಿಗಳಂತಿದ್ದ ಕದಂಬರು ಅಳಿದುದು ಇದಕ್ಕೊಂದು ಕಾರಣವಾಗಿರಬಹುದು. ಚಾಲುಕ್ಯ ಪಲ್ಲವರ ನಡುವಣ ವೈಷಮ್ಯ ತೀವ್ರವಾದಂತೆಲ್ಲ ತಾವು ಸ್ವತಂತ್ರರಾಗಿ ತಮ್ಮ ರಾಜ್ಯವನ್ನಾಳಿಕೊಂಡಿರಬಹುದೆಂಬ ಮನೋಭಾವವೂ ಇದಕ್ಕೆ ಕಾರಣವಾಗಿರಬಹುದು.

ದುರ್ವಿನೀತನಿಗೆ ಮೂವರು ಗಂಡುಮಕ್ಕಳು. ಇವರಲ್ಲಿ ಮುಷ್ಕರ ಮತ್ತು ಪೊಲವೀರ ಇಬ್ಬರ ಹೆಸರುಗಳು ಮಾತ್ರ ಲಭ್ಯವಾಗಿವೆ. ಮುಷ್ಕರನು ಸಿಂಧುರಾಜನ ಮಗಳನ್ನು ಮದುವೆಯಾಗಿದ್ದನೆಂದು ಹೇಳಿದೆ. ಮುಷ್ಕರನ ಶಾಸನಗಳಾವುವೂ ದೊರೆತಿಲ್ಲ. ಈತನಿಗೆ ಕೊಂಗಣಿ ವೃದ್ಧರಾಜನೆಂಬ ಇನ್ನೊಂದು ಹೆಸರಿದ್ದಿತು. ಪೊಲವೀರನು ಅಧಿಕಾರ ವಹಿಸಲು ಕಾಡುವೆಟ್ಟಿ ಮತ್ತು ಪಲ್ಲವರಸರ ನೆರವು ಆವಶ್ಯಕವಾಯಿತು. ಇವರು ಕ್ರಮವಾಗಿ ಪಲ್ಲವ ಮತ್ತು ಚಾಲುಕ್ಯ ಮನೆತನಗಳ ಅರಸರಾಗಿರಬಹುದು. ಪೊಲವೀರನಿಗೂ ಕಿರಿಯನೊಬ್ಬ ಸೋದರನಿದ್ದು, ಬಹುಶಃ ಆತನು ಮಲಸೋದರನಾಗಿರಬೇಕು. ಆತನಿಂದ ಪೊಲವೀರನ ರಾಜ್ಯಾಭಿಷೇಕಕ್ಕೆ ಅಡಚಣೆಗಳುಂಟಾದಾಗ ಪೊಲವೀರನು ಈ ಇಬ್ಬರು ಅರಸರ ನೆರವನ್ನು ಪಡೆದಿರಬೇಕು ಎಂದು ತರ್ಕಿಸಲಾಗಿದೆ. ಆದರೆ ಈ ಊಹೆಗೆ ಪ್ರಬಲವಾದ ಆಧಾರಗಳಿಲ್ಲ.

ಮುಷ್ಕರನ ಮಗನಾದ ಶ್ರೀವಿಕ್ರಮನು ಪೊಲವೀರನ ಉತ್ತರಾಧಿಕಾರಿ. ಈತನಿಗೆ ಭೂವಿಕ್ರಮ ಮತ್ತು ಶಿವಮಾರರೆಂಬ ಇಬ್ಬರು ಮಕ್ಕಳಿದ್ದರು. ಮನೋವಿನೀತನೆಂಬ ಬಿರುದನ್ನು ಪಡೆದ ಭೂವಿಕ್ರಮನನ್ನು ವಲ್ಲಭನೆಂದೂ ವರ್ಣಿಸಲಾಗಿದೆ. ಶಿವಮಾರನು

ಕ್ರಿ.ಶ. ೬೭೯ರಲ್ಲಿ ಪಟ್ಟಕ್ಕೆ ಬಂದನು. ಈತನ ಅಧೀನನಾಗಿ ಎಚ್ಚಗಂಗನು ಕೊಂಗಲ್ನಾಡು ೨೦೦೦, ತೊರೆಯನಾಡು ೫೦೦ ಮತ್ತು ಮಲೆ ೧೦೦೦ ಪ್ರದೇಶಗಳನ್ನಾಳುತ್ತಿದ್ದನು. ಪಲ್ಲವೋಲರಸ ಮತ್ತು ತುಪ್ಪೂರಾಲರಸರು ಇವನ ಇನ್ನಿಬ್ಬರು ಸಾಮಂತರು. ಈತನ ಹಳ್ಳಿಗೆರೆ ತಾಮ್ರಶಾಸನದಲ್ಲಿ (ಕ್ರಿ.ಶ. ೬೯೩-೯೪) ಪಲ್ಲವ ಯುವರಾಜನ ಪ್ರಿಯತನಯರಾದ ಜಯ ಮತ್ತು ವೃದ್ಧಿ ಪಲ್ಲವಾಧಿರಾಜರ ವಿಜ್ಞಾಪನೆಯ ಮೇರೆಗೆ ಈತನು ನೀಡಿದ ದಾನವೊಂದನ್ನು ಹೇಳಿದೆ. ಈ ಪಲ್ಲವ ಯುವರಾಜನು ಪಲ್ಲವರ ಇಮ್ಮಡಿ ನರಸಿಂಹವರ್ಮನ ಮಗನಾದ ಮುಮ್ಮಡಿ ಮಹೇಂದ್ರವರ್ಮನಾಗಿದ್ದು, ಜಯ ಮತ್ತು ವೃದ್ಧಿ ಪಲ್ಲವಾಧಿರಾಜರು ಈತನ ಮಕ್ಕಳೆಂದು ಊಹಿಸಲಾಗಿದೆ. ಪಲ್ಲವ ರಾಜ್ಯದಲ್ಲಿ ಆಗ ಅಂತಃಕಲಹಗಳೇರ್ಪಟ್ಟು, ಈ ಇಬ್ಬರ ಪರವಾಗಿ ಶಿವಮಾರನೂ ಚಾಲುಕ್ಯ ವಿಕ್ರಮಾದಿತ್ಯನೂ ಪಲ್ಲವರೊಡನೆ ಕಾದಿರಬಹುದೆಂದು ಊಹಿಸಲಾಗಿದೆ. ಇವು ಇನ್ನೂ ಖಚಿತಗೊಂಡಿಲ್ಲ. ಶಿವಮಾರನಿಗೆ ಶಿಷ್ಟಪ್ರಿಯ, ಅವನಿಮಹೇಂದ್ರ, ಸ್ಥಿರವಿನೀತ, ಲೋಕಧೂರ್ತ, ನವರಾಜ ಇತ್ಯಾದಿ ಬಿರುದುಗಳಿದ್ದುವು. ನವಕಾಮನೆಂಬುದು ಈತನ ಪ್ರತಿನಾಮ. ಇವನ ಆಳಿಕೆಯ ಕಾಲದಲ್ಲಿಯೇ ಇವನ ಮಗನು ಮರಣಹೊಂದಿರಬಹುದಾದ ಕಾರಣ, ಮೊಮ್ಮಗನಾದ ಶ್ರೀಪುರುಷನು ಇವನ ನಂತರ ಪಟ್ಟಕ್ಕೆ ಬಂದನು.

ಶ್ರೀಪುರುಷನು ಸುಮಾರು ೬೦ ವರ್ಷಗಳಷ್ಟು ಸುದೀರ್ಘಕಾಲ (೭೨೬-೮೮) ಆಳಿದನು. ಈತ ಆಳತೊಡಗಿದಾಗ ಸಮಕಾಲೀನ ಪಲ್ಲವ ರಾಜ್ಯದಲ್ಲಿ ಅಂತಃಕಲಹಗಳ ಪರಿಣಾಮವಾಗಿ ಅರಾಜಕತ್ವ ತಲೆದೋರಿತು. ಆಗ ಅಲ್ಲಿ ನಡೆದ ರಾಜಕೀಯ ಘಟನೆಗಳ ವಾಸ್ತವಿಕ ಚಿತ್ರ ಇನ್ನೂ ಸ್ಪಷ್ಟವಾಗಿಲ್ಲ. ಪಲ್ಲವ ಅರಸರ ಕಾಲಾನುಪೂರ್ವಿಯ ವಿಷಯದಲ್ಲೂ ಸಾಕಷ್ಟು ಗೊಂದಲಗಳಿವೆ. ಕ್ರಿ.ಶ. ೬೯೦-೭೨೮ರ ವರೆಗೆ ಆಳಿದ ಇಮ್ಮಡಿ ನರಸಿಂಹವರ್ಮನು ಶ್ರೀಪುರುಷನ ಪಲ್ಲವ ಸಮಕಾಲೀನರಲ್ಲಿ ಮೊದಲಿಗನು. ಬಾದಾಮಿಯ ಚಾಲುಕ್ಯ ಮನೆತನದ ವಿಜಯಾದಿತ್ಯ, ವಿಕ್ರಮಾದಿತ್ಯ (II) ಮತ್ತು ಕೀರ್ತಿವರ್ಮರು (II) ಸಹ ಈತನ ಸಮಕಾಲೀನರು. ಪಲ್ಲವ ಅರಸನಾದ ಇಮ್ಮಡಿ ನರಸಿಂಹವರ್ಮನನ್ನು ಶ್ರೀಪುರುಷನು ಕದನದಲ್ಲಿ ಎದುರಿಸಿದನೆಂದು ಹೇಳಬಹುದು. ಗುಂಡ್ಲುಪೇಟೆ ತಾಲ್ಲೂಕಿನ ಪಲ್ಲೂರಿನಲ್ಲಿ ದೊರೆತ ಹೊಸ ಶಾಸನವೊಂದರಲ್ಲಿ ಸಿಂಗವರ್ಮರಸನು ಶ್ರೀಪುರುಷನ ರಾಜ್ಯದ ಮೇಲೆ ದಾಳಿ ನಡೆಸಿದಾಗ ಅವನನ್ನು ಶ್ರೀಪುರುಷನು ಹಿಮ್ಮೆಟ್ಟಿಸಿದನೆಂದು ಹೇಳಿರುವುದನ್ನು ಆಧರಿಸಿ, ಆತನು ಪಲ್ಲವ ಇಮ್ಮಡಿ ನರಸಿಂಹವರ್ಮನಾಗಿರಬಹುದೆಂದು ಸೂಚಿಸಲಾಗಿದೆ. ತಮಿಳುನಾಡಿನಲ್ಲಿ ಹೊಸದಾಗಿ ದೊರೆತ ಕೆಲವು ವೀರಗಲ್ಲುಗಳಲ್ಲಿನ ಹೇಳಿಕೆಗಳು ಇದಕ್ಕೆ ಪುಷ್ಟಿಯನ್ನಿತ್ತಿವೆ.[3]

ಇಮ್ಮಡಿ ನರಸಿಂಹವರ್ಮನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ಪರಮೇಶ್ವರವರ್ಮನನ್ನು ಶ್ರೀಪುರುಷನು ವಿಳಂದೆಯ ಕದನದಲ್ಲಿ ಸೋಲಿಸಿದನು. ಈ ಕದನದಲ್ಲಿ ಪಲ್ಲವ ಅರಸನು ಮಡಿದನೆಂದು ಊಹಿಸಲಾಗಿದೆ. ಇದರ ಪರಿಣಾಮವಾಗಿ ಪಲ್ಲವ ರಾಜ್ಯದಲ್ಲಿ ಅರಾಜಕತ್ವ ಉಂಟಾಗಿ, ಭಿನ್ನಶಾಖೆಗೆ ಸೇರಿದ ನಂದಿವರ್ಮ ಪಲ್ಲವಮಲ್ಲನನ್ನು

ಅರಸನಾಗಿ ಆರಿಸಲಾಯಿತು (ಕ್ರಿ.ಶ ೭೩೧–೩೨).

ಉಳ್ಚಾಲದಲ್ಲಿ ದೊರೆತ ಶಾಸನದಲ್ಲಿನ ಹೇಳಿಕೆಯನ್ವಾಧರಿಸಿ ಯುವರಾಜನಾಗಿದ್ದ ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯನು ಪರಮೇಶ್ವರವರ್ಮನೊಡನೆ ಕಾದಿದನೆಂದೂ ಂದಿರುಗುವಾಗ ಉಳ್ಚಲು ಮತ್ತು ಪರಿಯಲು ಗ್ರಾಮಗಳನ್ನು ದುರ್ವಿನೀತ ಎಱೆಯಪ್ಪ ಕೊಂಗಣಿಗೆ ದಾನವಾಗಿ ನೀಡಿದನೆಂದೂ ಈ ದುರ್ವಿನೀತ ಎಱೆಯಪ್ಪನು ಶ್ರೀಪುರುಷನ ಮಗನಾದ ದುಗ್ಗಮಾರನೆಂದೂ ಊಹೆಗಳನ್ನು ಮಾಡಲಾಗಿದೆ. ಬಹುಶಃ ಇದರಲ್ಲಿ ಂಗರು ವಿಕ್ರಮಾದಿತ್ಯನಿಗೆ ಸಹಾಯ ನೀಡಿದ್ದರಿಂದ, ತದನಂತರ ಅವರನ್ನು ಶಿಕ್ಷಿಸಲು ಲ್ಲವ ಪರಮೇಶ್ವರವರ್ಮನು ಶ್ರೀಪುರುಷನ ಮೇಲೆ ದಂಡೆತ್ತಿದಾಗ ನಡೆದ ಕದನದಲ್ಲಿ ಲ್ಲವನು ಸಾವನ್ನಪ್ಪಿದನೆಂದೂ ಹೇಳಲಾಗಿದೆ.

ನಂದಿವರ್ಮ ಪಲ್ಲವಮಲ್ಲನು ಕಾಂಚೀಪುರದಲ್ಲಿ ಅಭಿಷಿಕ್ತನಾದ ತರುಣದಲ್ಲಿಯೇ ಚಾಲುಕ್ಯ ವಿಕ್ರಮಾದಿತ್ಯನು ಇನ್ನೊಮ್ಮೆ ಪಲ್ಲವರ ಮೇಲೆ ದಂಡೆತ್ತಿ ಕಾಂಚೀಪುರವನ್ನು ಕ್ರಮಿಸಿ, ಅಲ್ಲಿ ತನ್ನ ಕನ್ನಡ ಶಾಸನವೊಂದನ್ನು ಕೊರೆಯಿಸಿದನು. ಈ ಸಂದರ್ಭದಲ್ಲಿ ಈತ ಗೆ ಬೆಂಬಲ ನೀಡಿದ ಶ್ರೀಪುರುಷನ ಮೇಲೆ ಸೇಡು ತೀರಿಸಿಕೊಳ್ಳಲೆಂದು ನಂದಿವರ್ಮನು ನಂತರದ ವರ್ಷಗಳಲ್ಲಿ ಗಂಗರಾಜ್ಯದ ಮೇಲೆ ನುಗ್ಗಿದನು. ಹಿಂದೆ ಭೂವಿಕ್ರಮನು ರಮೇಶ್ವರವರ್ಮನಿಂದ (I) ಕಸಿದುಕೊಂಡಿದ್ದ ಉಗ್ರೋದಯವೆಂಬ ರತ್ನಖಚಿತ ಂಠಾಭರಣವು ಇನ್ನೂ ಗಂಗರ ವಶದಲ್ಲಿಯೇ ಇತ್ತು. ಇದನ್ನು ಶ್ರೀಪುರುಷನಿಂದ ರಳಿ ಪಡೆದನೆಂದೂ ಆಗ ಶ್ರೀಪುರುಷನನ್ನು ಸೋಲಿಸಿ ಗಂಗವಾಡಿ ೬೦೦೦ ಪ್ರಾಂತ ನ್ನು ಸಹ ಸ್ವಾಧೀನ ಮಾಡಿಕೊಂಡು ಆ ಪ್ರಾಂತವನ್ನು ತನ್ನ ಸಾಮಂತನಾಗಿದ್ದ ಬಾಣ ಜನಿಗೆ ಕೊಟ್ಟನೆಂದೂ ಪಲ್ಲವರ ಶಾಸನಗಳಿಂದ ತಿಳಿಯುತ್ತದೆ. ಹಿಂದೊಮ್ಮೆ ಈ ಎರಡು ನ್ಯಗಳೂ ಎದುರಿಸಿದ್ದ ವಿಳಂದೆಯಲ್ಲಿಯೇ ಇನ್ನೊಮ್ಮೆ ಅವು ಎದುರುಗೊಂಡವು. ಪುರುಷನಿಗೆ ಸೇರಿದ ಹಿರೇಗುಂಡಗಲ್ಲು, ಹೊಸಕೋಟೆ ಮುಂತಾದ ಕಡೆಗಳಲ್ಲಿ ದೊರೆತ ರಗಲ್ಲುಗಳೊಡನೆ ಮೇಲಿನ ವಿವರಗಳನ್ನು ಅನ್ವಯಿಸಿ ನೋಡಿದಾಗ ಈ ಹೋರಾಟ ಹು ತೀವ್ರ ಸ್ವರೂಪದ್ದಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಈ ವೀರಗಲ್ಲುಗಳಲ್ಲಿ ವಾಮುಟ್ಟಿರೊಡನೆ ಘೋರವಾಗಿ ಹೋರಾಡಿ ಅಸುನೀಗಿದ ಶ್ರೀ ಪಲ್ಲವ ಕೊಂಗುಣಿ ುತ್ತರಸನ ಸೈನಿಕರ, ಎಂದರೆ ಶ್ರೀಪುರುಷನ ಸೈನಿಕರ, ಶೌರ್ಯ ಚಿತ್ರಿತವಾಗಿದೆ. ಹೋರಾಟ ಡೆದ ಈ ಪ್ರದೇಶಗಳು ಶ್ರೀಪುರುಷನ ಆಳಿಕೆ ಮುಗಿಯುವವರೆಗೆ ಅವನ ಅಧೀನದಲ್ಲಿಯೇ ದ್ದುದು ತನ್ನ ರಾಜ್ಯವನ್ನು ರಕ್ಷಿಸಿಕೊಳ್ಳುವದರಲ್ಲಿ ಆತನು ಯಶಸ್ವಿಯಾದನೆಂಬುದನ್ನು ಚಿಸುತ್ತದೆ. ಪಲ್ಲವರು ಗಂಗವಾಡಿ ೬೦೦೦ ವನ್ನು ವಶಪಡಿಸಿಕೊಂಡರೆಂಬುದು ವಲ ಹಾರಿಕೆಯ ಮಾತು.

ಗಂಗರಾಜನ ಮಗಳನ್ನು ಪೂರ್ವರಾಜರು ಬಲವಂತವಾಗಿ ಒಯ್ದು ಪಾಂಡ್ಯ ಮನೆ ನದ ಪರಾಂತಕ ನೆಡುಂಜಡೈಯನ ತಂದೆಯಾದ ತೇಮಾರನಿಗೆ ಕೊಟ್ಟರೆಂದು ವೆಳ್ವಿ ಡಿ ಶಾಸನದಲ್ಲಿ ಹೇಳಿದೆ. ತೇಮಾರನ ಸಮಕಾಲೀನನಾದ ಗಂಗರಾಜನು ಶ್ರೀಪುರುಷನೇ.

ಎಂದಮೇಲೆ ಇವನ ಮಗಳನ್ನು ಪೂರ್ವರಾಜರು—ಅವರು ಯಾರೆಂಬುದು ತಿಳಿಯದಾಗಿದೆ—ಒಯ್ದು ಬಳಿಕ, ಗಂಗರಿಗೂ ಪಾಂಡ್ಯರಿಗೂ ನಡುವೆ ನಡೆದ ಕದನದಲ್ಲಿ ಗಂಗರ ಸಹಾಯಕ್ಕೆ ವಲ್ಲಭರು ಬಂದರೆಂದು ಹೇಳಿದೆ. ವೆಣ್ಬೈ ಎಂಬಲ್ಲಿ ನಡೆದ ಈ ಕದನದಲ್ಲಿ ವಲ್ಲಭನು ಶ್ರೀಪುರುಷನ ಸಹಾಯಕ್ಕೆ ಧಾವಿಸಿರಬೇಕೆಂದು ಊಹಿಸಲಾಗಿದೆ. ವಲ್ಲಭ ಎಂಬುದು ಅಂದು ಚಾಲುಕ್ಯ ಅರಸರು ಹೊತ್ತಿದ್ದ ಘನತೆವೆತ್ತ ಬಿರುದು.

ಶ್ರೀಪುರುಷನಿಗೆ, ಮಾಲವರಾಜಪುತ್ರಿಯಲ್ಲಿ ಜನಿಸಿದ ಕೋನರ್ಕ ಎಂಬ ಮಗಳನ್ನು ಪಾಂಡ್ಯವಂಶದ ರಾಜಸಿಂಹನ ಮಗನಾದ ಜಟಿಲ ಪರಾಂತಕನಿಗೆ ಮದುವೆ ಮಾಡಿಕೊಡಲಾಗಿತ್ತೆಂದು ಹೇಳಿದೆ. ಆದರೆ ಈ ವಿವರಗಳನ್ನು ಕುರಿತಾದ ಸ್ಪಷ್ಟವಾದ ಆಧಾರಗಳು ಲಭಿಸಿಲ್ಲ. ಆಗಿನ ದಕ್ಷಿಣ ಭಾರತದ ಅವ್ಯವಸ್ಥಿತ ರಾಜಕೀಯ ಪರಿಸ್ಥಿತಿಗಳ ಉಪಯೋಗ ಪಡೆದವರು ಸಾಮಂತ ಅರಸರು. ಮೊದಲು ಗಂಗರ ಸಾಮಂತರಾಗಿದ್ದ ಬಾಣರೂ ನೊಳಂಬರೂ ಈಗ ಪಲ್ಲವರ ಅಧೀನತೆಯನ್ನು ಒಪ್ಪಿಕೊಂಡು ಗಂಗರೊಡನೆ ಕದನಗಳಲ್ಲಿ ತೊಡಗಿದರು. ನಂದಿವರ್ಮ ಪಲ್ಲವಮಲ್ಲನು ಪಾಂಡ್ಯರೊಡನೆಯೂ ರಾಷ್ಟ್ರಕೂಟ ದಂತಿದುರ್ಗನೊಡನೆಯೂ ಕೂಡಿಕೊಂಡು ಚಾಲುಕ್ಯ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿದನೆಂದು ಹೇಳಿದೆ. ಕೀರ್ತಿವರ್ಮ ಬಾದಾಮಿಯ ಚಾಲುಕ್ಯರ ಕೊನೆಯ ಅರಸ.

ಬಾದಾಮಿಯ ಚಾಲುಕ್ಯರಿಗೂ, ಗಂಗರಿಗೂ ನಡುವೆ ಉತ್ತಮವಾದ ಬಾಂಧವ್ಯವಿದ್ದಿತು. ಚಾಲುಕ್ಯ ರಾಜ್ಯದ ಆಗ್ನೇಯದಲ್ಲಿ ಪ್ರಭಾವಶಾಲಿಗಳಾಗಿದ್ದ ಗಂಗರು ಮೊದಲಿನಿಂದಲೂ ಚಾಲುಕ್ಯರಿಗೆ ಬೆಂಬಲ ನೀಡಿ, ಅವರಿಂದಲೂ ಉಪಕೃತರಾಗಿದ್ದರೆಂದು ತಿಳಿದುಬರುತ್ತದೆ. ಒಂದು ವಿಧದಲ್ಲಿ ಗಂಗರು ಚಾಲುಕ್ಯರ ಮಾಂಡಲಿಕರಾಗಿದ್ದರೆಂದೇ ಹೇಳಬೇಕು. ಎಂತಲೇ, ಚಾಲುಕ್ಯರು ಪಲ್ಲವರನ್ನು ಎದುರಿಸಿದ ಸಂದರ್ಭದಲ್ಲಿ ಶ್ರೀಪುರುಷನು ಅವರಿಗೆ ಸಹಾಯ ಮಾಡಿ, ಪಲ್ಲವರನ್ನು ಸೋಲಿಸಲು ಕಾರಣವಾದನು. ಪಾಂಡ್ಯರಾಜರ ವಿರುದ್ಧ ನಡೆದ ಕದನದಲ್ಲಿಯೂ ಚಾಲುಕ್ಯರು ಶ್ರೀಪುರುಷನಿಗೆ ಬೆಂಬಲ ನೀಡಿದರು. ಆದರೆ ಇಮ್ಮಡಿ ಕೀರ್ತಿವರ್ಮನ ಬಳಿಕ ರಾಷ್ಟ್ರಕೂಟರು ಚಾಲುಕ್ಯ ರಾಜ್ಯವನ್ನು ವಶಪಡಿಸಿಕೊಂಡಾಗ ಚಾಲುಕ್ಯನಿಗೆ ವಿಧೇಯನಾಗಿದ್ದ ಶ್ರೀಪುರುಷನು ರಾಷ್ಟ್ರಕೂಟರ ವಿರೋಧವನ್ನು ಕಟ್ಟಿಕೊಂಡನು. ಇದು ಆಳಿಕೆಯ ಉತ್ತರಭಾಗದಲ್ಲಿ ಶ್ರೀಪುರುಷನು ಅವರೊಡನೆ ಕಾದಬೇಕಾದ ಪ್ರಸಂಗಗಳಿಗೆ ಎಡೆಮಾಡಿದವು.

ಚಾಲುಕ್ಯರನ್ನು ಸೋಲಿಸಿ ಕರ್ನಾಟಕದಲ್ಲಿ ಆಳಿದ ರಾಷ್ಟ್ರಕೂಟ ದಂತಿದುರ್ಗನ ದಾಯಾದಿಗಳಾದ, ಅದೇ ಮನೆತನದ, ಇನ್ನೊಂದು ಶಾಖೆಯವರು ಬಾದಾಮಿಯ ಚಾಲುಕ್ಯರೊಡನೆಯೂ ಗಂಗರೊಡನೆಯೂ ರಕ್ತಸಂಬಂಧವನ್ನು ಬೆಳಸಿದ್ದರು. ಅವರ ಬಾಂಧವ್ಯ ಹೀಗಿದೆ : ರಾಷ್ಟ್ರಕೂಟ : ನನ್ನಪ → ಶಿವರಾಜ—ಗೋವಿಂದರಾಜ (ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯನ ಮಗಳು ವಿನಯವತಿ ಇವನ ಪತ್ನಿ) → ಇಂದ್ರರಾಜ —ಕಂಚಿಯಬ್ಬೆ (ಗಂಗ ಶ್ರೀಪುರುಷನ ಪತ್ನಿ).

ದಂತಿದುರ್ಗನ ದಾಯಾದಿಗಳೂ ಚಾಲುಕ್ಯ ಗಂಗರ ಸಂಬಂಧಿಕರೂ ಆದ ಈ ರಾಷ್ಟ್ರಕೂಟರು ಚಾಲುಕ್ಯರಿಗೆ ಸಹಾಯವಾಗಿ ನಿಂತಿದ್ದರು. ಶ್ರೀಪುರುಷನೂ ಚಾಲುಕ್ಯರ ಬೆಂಬಲಿಗನೇ. ಈ ಕಾರಣದಿಂದ ದಂತಿದುರ್ಗನ ನಂತರ ಪಟ್ಟಕ್ಕೆ ಬಂದ ರಾಷ್ಟ್ರಕೂಟ ೧ನೆಯ ಕೃಷ್ಣನು ಶ್ರೀಪುರುಷನ ವಿರುದ್ಧ ಸೇಡು ತೀರಿಸಿಕೊಳ್ಳಲು ದಂಡೆತ್ತಿ ಹೋದನು. ಸ್ವಲ್ಪಸ್ವಲ್ಪವಾಗಿ ಉತ್ತರದಿಂದ ದಕ್ಷಿಣಕ್ಕೆ ಸರಿಯುತ್ತ ಚಾಲುಕ್ಯರಾಜ್ಯವನ್ನು ಆಕ್ರಮಿಸಿದ ಕೃಷ್ಣನು ಕ್ರಿ.ಶ. ೭೬೮ರಲ್ಲಿ ಗಂಗರ ನೆಲೆವೀಡಾಗಿದ್ದ ಮಣ್ಣೆನಗರದಲ್ಲಿ ಸೈನ್ಯಸಮೇತ ಬೀಡುಬಿಟ್ಟಿದ್ದನು. ಈತನ ತಲೆಗಾಂವ್ ತಾಮ್ರ ಶಾಸನದಲ್ಲಿ ಮಣ್ಣೆನಗರವನ್ನು ವಿಜಯಸ್ಕಂಧಾವಾರವೆಂದು ವರ್ಣಿಸಿದೆ. ಗಂಗರ ಶಾಸನಗಳಿಂದ ಶ್ರೀಪುರುಷನ ಸೈನಿಕರು ಪಿಂಛನೂರು, ಬಾಗೆಯೂರು ಮುಂತಾದ ಕಡೆಗಳಲ್ಲಿ ಬಲ್ಲಹ (೧ನೆಯ ಕೃಷ್ಣ) ನನ್ನು ಎದುರಿಸಿದರೆಂದು ಹೇಳಿದೆ. ತುಮಕೂರು ಜಿಲ್ಲೆಯ ಮೂಲಕ ಮಣ್ಣೆಯವರೆಗೂ ಸಾಗಿಬಂದಿದ್ದ ರಾಷ್ಟ್ರಕೂಟರನ್ನು ಶ್ರೀಪುರುಷನು ಧೈರ್ಯದಿಂದ ಎದುರಿಸಿ, ಸಾಹಸದಿಂದ ಹಿಮ್ಮೆಟ್ಟಿಸಿದನು. ರಾಯಚೂರು ಜಿಲ್ಲೆಯ ಕಂಪಿಲಿಯವರೆಗೂ ಈತನ ಸೈನ್ಯ ಶತ್ರುಗಳನ್ನು ಅಟ್ಟಿಸಿಕೊಂಡು ಹೋದಂತೆ ತೋರುತ್ತದೆ. ಈ ಸಂದರ್ಭದಲ್ಲಿ ೧ನೆಯ ಕೃಷ್ಣನ ವಶವಾಗಿದ್ದ ನಿರ್ಗುಂದನಾಡು ಮುಂತಾದ ಹಲವು ಪ್ರದೇಶಗಳನ್ನು ಶ್ರೀಪುರುಷನು ಮರಳಿ ಪಡೆದುಕೊಂಡನು.

ಪೆರ್ಮಾನಡಿ ಎಂದು ಬಿರುದಾಂಕಿತನಾದ ಶ್ರೀಪುರುಷನನ್ನು ಶಾಸನಗಳು ರಣಭಾಜನ, ರಾಜಕೇಸರಿ, ಭೀಮಕೋಪ ಎಂದೆಲ್ಲ ಬಣ್ಣಿಸಿವೆ. ಚಾಲುಕ್ಯರ ವಂಶದ ವಿಜಯಮಹಾದೇವಿ, ನೊಳಂಬಕುಲದ ನೊಳಂಬಮಾಧವೆ ಇವನ ಅರಸಿಯರು. ಈತನು ಗಜಶಾಸ್ತ್ರವೆಂಬ ಗ್ರಂಥದ ಕರ್ತೃವೆಂದು ೧೧ನೆಯ ಶತಮಾನದ ಶಾಸನವೊಂದರಲ್ಲಿ ಹೇಳಿದೆ. ದುಗ್ಗಮಾರ ಎಱೆಯಪ್ಪ, ಇಮ್ಮಡಿ ಶಿವಮಾರ ಮತ್ತು ವಿಜಯಾದಿತ್ಯರು ಇವನ ಮಕ್ಕಳು. ಸೀಯಗಳ್ಳನೆಂಬ ಈತನ ಇನ್ನೊಬ್ಬ ಮಗನು ತಂದೆ ಜೀವಿಸಿದ್ದಾಗಲೇ ಮರಣಹೊಂದಿದ್ದನು.

೧ನೆಯ ಕೃಷ್ಣನ ಬಳಿಕ ಮೊದಲು ಆಳತೊಡಗಿದ ಆತನ ಹಿರಿಯ ಮಗನಾದ ಇಮ್ಮಡಿ ಗೋವಿಂದನೂ ನಂತರ ಪಟ್ಟಕ್ಕೆ ಬಂದ ಈತನ ಅನುಜ ಧ್ರುವನೂ ಗಂಗರನ್ನು ಬಗ್ಗು ಬಡಿಯಲು ಮೇಲಿಂದ ಮೇಲೆ ಪ್ರಯತ್ನಗಳನ್ನು ನಡಸಿದರು. ಆದರೆ ಅತಿಪರಾಕ್ರಮಶಾಲಿಯಾದ ಶ್ರೀಪುರುಷನ ಕಾಲದಲ್ಲಿ ಇವರ ಯೋಜನೆ ಸಫಲಗೊಳ್ಳಲಿಲ್ಲ. ಅವನು ಇವರ ಅಧೀನತೆಯನ್ನು ಒಪ್ಪಿಕೊಳ್ಳಲಿಲ್ಲ. ಶ್ರೀಪುರುಷನ ನಂತರ ಅವನ ಇಬ್ಬರು ಹಿರಿಯ ಮಕ್ಕಳಲ್ಲಿ ರಾಜ್ಯಕ್ಕಾಗಿ ಕದನಗಳಾದವು. ನೊಳಂಬರ ಸಿಂಗಪೋತನು ಶಿವಮಾರನ ಬೆಂಬಲಿಗನಾಗಿ ದುಗ್ಗಮಾರನನ್ನು ಸೋಲಿಸಿ ಶಿವಮಾರನಿಗೆ ರಾಜ್ಯ ದಕ್ಕುವಂತೆ ಮಾಡಿದನು.

ರಾಷ್ಟ್ರಕೂಟ ಕೃಷ್ಣನ ಮರಣಾನಂತರ ಅವನ ಹಿರಿಯ ಮಗ ಗೋವಿಂದನು ಪಟ್ಟಕ್ಕೆ ಬಂದನು (ಕ್ರಿ.ಶ. ೭೭೪). ಆದರೆ ಈತನು ವಿಷಯಲಂಪಟನೂ ಸ್ವೇಚ್ಛಾಚಾರಿಯೂ

ಆಗಿದ್ದು ಪ್ರಜಾನುರಾಗವನ್ನು ಕಳೆದುಕೊಂಡನು. ಕಿರಿಯನಾದ ಧ್ರುವನು ಇವನ ವಿರುದ್ಧ ದಂಗೆಯೆದ್ದು ಈತನನ್ನು ಹೊರದೂಡಿ ಸ್ವತಃ ಆಳತೊಡಗಿದನು. ಅಧಿಕಾರಾರೂಢನಾದ ಬಳಿಕ ಧ್ರುವನು ತನ್ನ ಹಿರಿಯ ಸೋದರನನ್ನು ಬೆಂಬಲಿಸಿದ್ದ ಸಾಮಂತರನ್ನೂ ನೆರೆಹೊರೆಯ ಅರಸರನ್ನೂ ಶಿಕ್ಷಿಸಲೆಂಬಂತೆ ಅವರ ವಿರುದ್ಧ ದಂಡೆತ್ತಿದನು ಎಂದು ಹೇಳಿದೆ. ಸೋದರರಲ್ಲಿ ಪರಸ್ಪರ ಜಗಳಗಳಾಗಲಿಲ್ಲ; ಸ್ವೇಚ್ಛೆಯಿಂದಲೇ ಗೋವಿಂದನು ಸಿಂಹಾಸನವನ್ನು ತಮ್ಮನಿಗೆ ಬಿಟ್ಟುಕೊಟ್ಟನು ಎಂಬ ಅಭಿಪ್ರಾಯವೂ ಇದೆ. ಅದೇನಿದ್ದರೂ ಧ್ರುವನು ದಂಡಯಾತ್ರೆ ಕೈಕೊಂಡುದಂತೂ ಸ್ಪಷ್ಟ. ತನ್ನ ಸಾಮಂತಿಕೆಯನ್ನೊಪ್ಪದ ಗಂಗ ಶ್ರೀಪುರುಷನನ್ನು ದಮನಮಾಡಲು ಕೈಗೊಂಡ ಯತ್ನಗಳು ಫಲಿಸಲಿಲ್ಲ. ಆದರೆ ಶ್ರೀಪುರುಷನು ಸತ್ತ ಕೂಡಲೇ (ಕ್ರಿ.ಶ. ೭೮೮) ಶಿವಮಾರನ ವಿರುದ್ಧ ಧ್ರುವನು ದಂಡೆತ್ತಿ ಬಂದನು. ಮುದುಗುಂದೂರು ಎಂಬಲ್ಲಿ ನಡೆದ ಕದನದಲ್ಲಿ ಶಿವಮಾರನು ಸೋತನು. ಇಷ್ಟಕ್ಕೇ ತೃಪ್ತನಾಗದ ರಾಷ್ಟ್ರಕೂಟನು ಆತನನ್ನು ಬೆಂಬಲಿಸಿ ಸೆರೆಹಿಡಿದು ಸೆರೆಗೆ ಕಳಿಸಿದನು. ಗಂಗವಾಡಿ ಪ್ರದೇಶದಲ್ಲಿ ಧ್ರುವನ ಹಿರಿಯ ಮಗನಾದ ಕಂಬಯ್ಯನು ಪ್ರಾಂತಾಧಿಕಾರಿಯಾಗಿ ನೇಮಕಗೊಂಡನು.

ಧ್ರುವನು ಪಟ್ಟಕ್ಕೆ ಬಂದುದು ಸುಮಾರು ೭೮೦ರಲ್ಲಿ. ಆಗ ಇನ್ನೂ ಶ್ರೀಪುರುಷನು ಬದುಕಿದ್ದನು. ಆದರೆ ಮುಪ್ಪಡರಿದ್ದ ಆತನು ರಾಜ್ಯಭಾರದ ಹೊಣೆಯನ್ನು ಶಿವಮಾರನಿಗೆ ಒಪ್ಪಿಸಿದ್ದನು. ಅಧಿಕಾರಕ್ಕೆ ಬಂದ ಕೂಡಲೇ ಗಂಗವಾಡಿಯನ್ನು ಮುತ್ತಿದ ಧ್ರುವನು ಅಲ್ಲಿ ಎದುರಿಸಿ ಸೋಲಿಸಿದುದು ಶಿವಮಾರನನ್ನು. ಸೆರೆಹಿಡಿದದ್ದೂ ಈತನನ್ನೇ. ಇದು ನಡೆದುದು ಸುಮಾರು ೭೮೮ರಲ್ಲಿ ಎಂಬ ಅಭಿಪ್ರಾಯವನ್ನು ಕೆಲವರು ಮುಂದೊಡಿದ್ದಾರೆ. ಗಂಗರ ಶಾಸನಗಳಲ್ಲಿ ಶಿವಮಾರನು ರಾಷ್ಟ್ರಕೂಟ, ಚಾಲುಕ್ಯ ಮತ್ತು ಹೈಹಯರನ್ನೊಳಗೊಂಡ ವಲ್ಲಭ ಸೇನೆಯನ್ನು ಸೋಲಿಸಿದನೆಂದು ಹೇಳಿದ್ದರೂ ಇದು ಬಹುಶಃ ಕದನದ ಆರಂಭದ ದೆಸೆಯಲ್ಲಿ ಈತನು ಗಳಿಸಿದ ಒಂದೆರಡು ಗೆಲವುಗಳಿಗೆ ಸಂಬಂಧಿಸಿರಬೇಕು. ಶಿವಮಾರನು ಸೋತು ಸೆರೆಮನೆಗೆ ಹೋದ. ಗಂಗವಾಡಿಯಲ್ಲಿ ಕಂಬಯ್ಯ ಆಳತೊಡಗಿದ.

ಧ್ರುವ ಮರಣಹೊಂದಿದ ಮೇಲೆ ರಾಜ್ಯಕ್ಕಾಗಿ ಅವನ ಇಬ್ಬರು ಮಕ್ಕಳಾದ ಕಂಬಯ್ಯ ಮತ್ತು ಮುಮ್ಮಡಿ ಗೋವಿಂದರ ನಡುವೆ ಜಗಳಗಳಾದವು. ಇಬ್ಬರಲ್ಲಿ ಹೆಚ್ಚು ಸಮರ್ಥನಾದ ಗೋವಿಂದನು ತಂದೆಯ ಬಯಕೆಯಂತೆ ರಾಜ್ಯವನ್ನು ಪಡೆದನಾದರೂ (ಕ್ರಿ.ಶ. ೭೯೩) ತನ್ನ ಹಿರಿಯ ಸೋದರನಿಂದ ತೊಂದರೆಯುಂಟಾಗಬಹುದೆಂದು ನಿರೀಕ್ಷಿಸಿ, ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ತನ್ನ ಸಾಮಂತರ ಒಲವನ್ನೂ ಒತ್ತಾಸೆಯನ್ನೂ ಪಡೆಯಲು ಯತ್ನಿಸಿದನು. ಈ ಕಾರಣ ಶಿವಮಾರನು ಬಂಧವಿಮುಕ್ತನಾಗಿ ಗಂಗವಾಡಿಯನ್ನು ಹಿಂದಕ್ಕೆ ಪಡೆದನು. ಆದರೆ ಸ್ವಾತಂತ್ರ್ಯಾಪೇಕ್ಷಿಯಾಗಿದ್ದ ಶಿವಮಾರನು ಸೋದರನ ವಿರುದ್ಧ ದಂಗೆ ಏಳುವ ಸನ್ನಾಹದಲ್ಲಿದ್ದ ಕಂಬಯ್ಯನಿಗೆ ಬೆಂಬಲವಾಗಿ ನಿಂತು, ಗೋವಿಂದನ ಸಾಮಂತಿಕೆಯನ್ನು ನಿರಾಕರಿಸಿದನು. ತತ್ಫಲವಾಗಿ ಗೋವಿಂದನು ಪುನಃ ಶಿವಮಾರನನ್ನು ಸೆರೆಹಿಡಿದು ಬಂಧನದಲ್ಲಿಟ್ಟನು. ಗಂಗವಾಡಿ

ಪ್ರಾಂತ್ಯದ ಅಧಿಕಾರ ಶಿವಮಾರನ ಮಗನಾದ ಯುವರಾಜನಾಗಿದ್ದ ಮಾರಸಿಂಹನಿಗೆ ಕ್ಕಿತು (ಕ್ರಿ.ಶ. ೭೯೬). ಆದರೆ ಇದಾದ ಒಂದೆರಡು ವರ್ಷಗಳಲ್ಲಿಯೇ ಗೋವಿಂದನು ಂಬಯ್ಯನನ್ನು ಸೋಲಿಸಿದನು. ಕಂಬಯ್ಯನು ಇದಕ್ಕಾಗಿ ಬಹಳ ವ್ಯವಸ್ಥೆಗಳನ್ನು ಮಾಡಿಕೊಂಡು ಪಲ್ಲವ ದಂತಿಗ ಮತ್ತಿತರರ ಸಹಾಯದಿಂದ ತಮ್ಮನನ್ನು ಎದುರಿಸಿದನು. ದರೆ ಸೋತನು. ಗೋವಿಂದನಾದರೋ ಅಣ್ಣನನ್ನು ಕ್ಷಮಿಸಿ, ಆತನನ್ನು ಪುನಃ ಗಂಗ ಾಡಿಯ ಪ್ರಾಂತಾಧಿಪತಿಯಾಗಿ ನೇಮಿಸಿದನು. ಕ್ರಿ.ಶ. ೭೯೯ರ ಶಾಸನದಲ್ಲಿ ಗಂಗ ಾರಸಿಂಹನ ಪ್ರಸ್ತಾಪವಿದೆ. ಕ್ರಿ.ಶ.೮೦೨ರಲ್ಲಿ ಕಂಬಯ್ಯನು ಪುನಃ ಗಂಗವಾಡಿಯನ್ನು ಂದಕ್ಕೆ ಪಡೆದನೆಂದು ತಿಳಿದಿದೆ. ಈ ನಡುವಣ ೨–೩ ವರ್ಷಗಳಲ್ಲಿ ಈ ರಾಜಕೀಯ ದಲಾವಣೆಗಳುಂಟಾಗಿರಬೇಕು.

ಶಿವಮಾರನು ಗಂಗ ಅರಸರಲ್ಲಿ ಪ್ರತಿಭಾಸಂಪನ್ನನಾದವನಾದರೂ ದುರದೃಷ್ಟಶಾಲಿ. ತಂದೆ ುಂದ ಬಳುವಳಿಯಾಗಿ ಪಡೆದ ಸ್ವಾತಂತ್ರ್ಯಾಪೇಕ್ಷೆಯನ್ನು ಬೆಳಸಿಕೊಂಡು, ಎಂತಹ ಷ್ಟಪರಿಸ್ಥಿತಿಗಳಲ್ಲಿಯೂ ತನ್ನ ಆ ಅಭಿಲಾಷೆಯನ್ನು ಬಿಟ್ಟುಕೊಡಲಿಲ್ಲ. ಜೀವನದ ುಖ್ಯ ಕಾಲವನ್ನು ಸೆರೆಮನೆಯಲ್ಲಿಯೇ ಕಳೆದರೂ ರಾಷ್ಟ್ರಕೂಟರ ಸಾಮಂತಿಕೆಯನ್ನೊ ದಿದ್ದುದು ಅವನ ಸ್ವಾಭಿಮಾನಕ್ಕೆ ಸಾಕ್ಷಿ. ಕುಮ್ಮಡವಾಡದಲ್ಲಿ ಈತನು ಜೈನ ಬಸದಿ ಂದನ್ನು ಕಟ್ಟಿಸಿದನು. ಜೈನಧರ್ಮಾವಲಂಬಿಯಾಗಿದ್ದರೂ ಹಿಂದು ದೇವಾಲಯ ಗೂ ಅಗ್ರಹಾರ ಮುಂತಾದ ಸಂಘಸಂಸ್ಥೆಗಳಿಗೂ ಅಪಾರವಾದ ದತ್ತಿಗಳನ್ನು ನೀಡಿ ನು. 'ಗಜಾಷ್ಟಕ'ವೆಂಬ ಗ್ರಂಥವನ್ನು ರಚಿಸಿದನು. 'ಸೇತುಬಂಧ'ವೆಂಬ ಇನ್ನೊಂದು ತಿಯೂ ಈತನದೆಂದು ಹೇಳಲಾಗಿದೆ.

ರಾಷ್ಟ್ರಕೂಟ ೧ನೆಯ ಅಮೋಘವರ್ಷನು ಪಟ್ಟಕ್ಕೆ ಬಂದಾಗ ಶಿವಮಾರನೇ ಗಂಗ ಾಡಿಯಲ್ಲಿ ಪ್ರಾಂತಾಧಿಪತಿಯಾಗಿದ್ದನೆಂದು ಕೆಲವರು ಹೇಳಿದ್ದಾರೆ. ಆದರೆ ಇದು ದೇಹಾಸ್ಪದ. ಕ್ರಿ.ಶ. ೭೯೯ರಲ್ಲಿ ಶಿವಮಾರನ ಮಗ ಮಾರಸಿಂಹನು ಅಧಿಕಾರದಲ್ಲಿದ್ದು ತರ ಗಂಗವಾಡಿ ಕಂಬಯ್ಯನ ಆಳಿಕೆಗೆ ಒಳಪಟ್ಟಿತೆಂದು ನೋಡಿದ್ದೇವೆ. ಸೆರೆಮನೆ ಲ್ಲಿದ್ದ ಶಿವಮಾರನ ಗತಿ ಏನಾಯಿತೋ ತಿಳಿಯದು. ಅಂತೆಯೇ ಮಾರಸಿಂಹನ ಬಯ ಕೂಡ ಹೆಚ್ಚಿನದೇನೂ ತಿಳಿದಿಲ್ಲ. ಮಾರಸಿಂಹನ ತಮ್ಮನಾದ ಪೃಥ್ವೀಪತಿಯು ಲ್ಪವಯಸ್ಕನಾಗಿದ್ದ ಕಾರಣ ಶಿವಮಾರನ ಸೋದರನಾದ ವಿಜಯಾದಿತ್ಯನಿಗೆ ಧಿಕಾರ ಕೊಡಲ್ಪಟ್ಟಿತು. ಆದರೆ ವಿಜಯಾದಿತ್ಯನು ತನಗೆ ದೊರಕಿದ ಅಧಿಕಾರವನ್ನು ಪ್ಪಿಕೊಳ್ಳದೆ ಆ ಜೋಕೆಯನ್ನು ತನ್ನ ಮಗನಾದ ರಾಜಮಲ್ಲ (I)ನಿಗೆ ವಹಿಸಿದನು.

ರಾಜಮಲ್ಲನು ಪುನಃ ಸ್ವತಂತ್ರವಾಗಿ ಆಳಲು ಸನ್ನಾಹಗಳನ್ನು ಮಾಡಿದನು. ಅಮೋಘ ರ್ಷನು ಆಳತೊಡಗಿದ ತರುಣದಲ್ಲಿ ರಾಜ್ಯದಲ್ಲಿ ಅಶಾಂತಿಯುತ ವಾತಾವರಣ ಉಂಟಾ ದ್ದು ದಂಗೆಗಳುಂಟಾದವು. ಈ ಪರಿಸ್ಥಿತಿಯ ಪ್ರಯೋಜನವನ್ನು ರಾಜಮಲ್ಲನು ಪಡೆದನು. ಹಳ ಕಾಲ ರಾಷ್ಟ್ರಕೂಟರ ವಶದಲ್ಲಿದ್ದ ಈತನ ಪೂರ್ವಜರ ರಾಜ್ಯವನ್ನು ವಿಷ್ಣು ವರಾಹ ಪಿಯಾಗಿ ಪೃಥ್ವಿಯನ್ನು ಮೇಲೆತ್ತಿದಂತೆ ಈತನೂ ಮುಕ್ತಗೊಳಿಸಿದನೆಂದು ಶಾಸನಗಳು

ಹೇಳಿವೆ. ನೊಳಂಬರು ಕೆಲವು ಕಾಲ ಗಂಗರ ವಿರೋಧಿಗಳಾಗಿದ್ದರೂ ಅವರೊಡನೆ ಉತ್ತಮ ಬಾಂಧವ್ಯವನ್ನು ಹೊಂದಿ ಅವರ ನೆರವು ಪಡೆಯಲೆಂದು ತನ್ನ ಮಗಳಾದ ಜಾಯಬ್ಬೆಯನ್ನು ಪೊಳಲ್ಚೋರ ನೊಳಂಬನಿಗೆ ಮದುವೆಮಾಡಿಕೊಟ್ಟನು. ಅಮೋಘವರ್ಷನು ತನ್ನ ದಂಡನಾಯಕನಾದ ಬಂಕೇಶನನ್ನು ರಾಜಮಲ್ಲನ ವಿರುದ್ಧ ಕಳುಹಿಸಿದನು. ಒಂದು ಘಟ್ಟದಲ್ಲಿ ಬಂಕೇಶನು ರಾಜಮಲ್ಲನನ್ನು ಕಾವೇರಿಯ ದಕ್ಷಿಣ ತೀರದವರೆಗೂ ಓಡಿಸಿದ. ಆದರೆ ರಾಜಮಲ್ಲನನ್ನು ಸಂಪೂರ್ಣವಾಗಿ ಸೋಲಿಸಲಾಗಲಿಲ್ಲ. ರಾಜಮಲ್ಲನು ಸಹ ಗಂಗವಾಡಿಯನ್ನೆಲ್ಲಾ ಸಂಪೂರ್ಣವಾಗಿ ತನ್ನ ಅಂಕೆಯೊಳಗೆ ತರುವುದರಲ್ಲಿ ಅಯಶಸ್ವಿಯಾದನು.

ರಾಜಮಲ್ಲನ ನಂತರ ೮೭೦ರಿಂದ ಆಳತೊಡಗಿದ ಆತನ ಮಗ ನೀತಿಮಾರ್ಗ ಎಱೆಯಗಂಗನು ತಂದೆಯ ಪ್ರಯತ್ನಗಳನ್ನು ಮುಂದುವರಿಸಿದನು. ಅಮೋಘವರ್ಷನಿಗೆ ಇವನನ್ನು ಸೋಲಿಸುವುದು ಸಾಧ್ಯವಾಗಲಿಲ್ಲ. ಮೊದಲು ಬಾಣರೊಡನೆ ಕದನಹೂಡಿ ಅವರನ್ನು ಸೋಲಿಸಿದ ಎಱೆಗಂಗನು ಆ ಬಳಿಕ ರಾಷ್ಟ್ರಕೂಟ ಬಂಕೇಶನನ್ನು ರಾಜಾರಾಮಡು ಎಂಬಲ್ಲಿ ಎದುರಿಸಿದನು. ಘೋರವಾದ ಕದನದ ಫಲಿತಾಂಶ ಮಾತ್ರ ಶೂನ್ಯವಾಗಿತ್ತು. ಕೊನೆಗೆ ವೈರದಿಂದ ಗಂಗರನ್ನು ಮಣಿಸುವುದು ಕಷ್ಟವೆಂದರಿತ ರಾಷ್ಟ್ರಕೂಟ ಅರಸನು ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ಎಱೆಯಗಂಗನ ಕಿರಿಯ ಮಗನಾದ ಬೂತುಗನಿಗೆ ವಿವಾಹ ಮಾಡಿಕೊಟ್ಟನು. ಇದು ರಾಷ್ಟ್ರಕೂಟ ಹಾಗೂ ಗಂಗರ ನಡುವಣ ಸಂಬಂಧಗಳಲ್ಲಿ ಒಂದು ಪ್ರಮುಖವಾದ ಘಟ್ಟ. ಈ ರಕ್ತಸಂಬಂಧ ಅವರ ಬಾಂಧವ್ಯವನ್ನು ಮಧುರಗೊಳಿಸಿತು.

ಈ ನಡುವೆ ಇಮ್ಮಡಿ ಶಿವಮಾರನ ಹಿರಿಯ ಮಗನಾದ ಪೃಥ್ವೀಪತಿಯು ಬಾಣಕುಲದ ಮಂಡಲಿಕರೊಡನೆ ಬಾಂಧವ್ಯ ಬೆಳಸಿದ್ದನು. ಇವನ ಮಗ ನನ್ನಿಯ ಗಂಗನು ಕ್ರಮಾಗತವಾಗಿ ತನಗೆ ಲಭಿಸಬೇಕಾದ ಗಂಗ ಮಂಡಲವನ್ನು ಪಡೆಯಲೆಂದು ಬಾಣರ ಹಾಗೂ ವೈದುಂಬರ ನೆರವನ್ನು ಪಡೆದನು. ಇವರೆಲ್ಲ ಕೂಡಿ ಗಂಗರ ಹಾಗೂ ಅವರ ಸಹಾಯಕರಾಗಿ ನಿಂತ ನೊಳಂಬರ ವಿರುದ್ಧ ದಂಡೆತ್ತಿದರು. ಮಣ್ಣೆ ೭೦೦, ಗಂಗ ೬೦೦೦ ಮುಂತಾದ ಪ್ರಾಂತಗಳು ಕೆಲಕಾಲ ಬಾಣರ ವಶವಾದವು. ವೈದುಂಬರಿಗೆ ಸೇರಿದ ಪುಲಿನಾಡು ಸಹ ಇವರ ಸ್ವಾಧೀನಕ್ಕೆ ಬಂದಿತು. ಆದರೆ ಈ ಯಶಸ್ಸು ಚಿರಕಾಲದ್ದಾಗಿರಲಿಲ್ಲ. ಸೋರೆಮಡಿಯಲ್ಲಿ ನಡೆದ ಭೀಕರ ಕಾಳಗದಲ್ಲಿ ನೊಳಂಬ ಮಹೇಂದ್ರನು ಬಾಣರನ್ನು ಸೋಲಿಸಿ ಓಡಿಸಿದನು. ಮಹೇಂದ್ರನ ಈ ವಿಜಯ ಅವನು ಗಂಗರ ವಿರುದ್ಧವೇ ನಿಂತು, ಅವರ ರಾಜ್ಯವನ್ನೇ ಕಸಿಯುವ ಯತ್ನಮಾಡಲು ಪ್ರೇರಿಸಿತು. ಆದರೆ ಹಿರಿಯೂರು, ಸಾಮಿಯೂರು, ಸೊಳೂರುಗಳಲ್ಲಿ ಕ್ರಮವಾಗಿ ನಡೆದ ಕದನಗಳಲ್ಲಿ ಇವನು ಗಂಗರ ಬೂತುಗನಿಂದ ಸೋಲಿಸಲ್ಪಟ್ಟನು. ಇಷ್ಟಾದರೂ ಈ ಹೋರಾಟಗಳು ನಿಲ್ಲಲ್ಲೇ ಇಲ್ಲ. ಗಂಗಮಂಡಲ ೯೬,೦೦೦ವನ್ನು ಆಳುತ್ತಿದ್ದನೆಂದು ಮಹೇಂದ್ರನ ಹಲವು ಶಾಸನಗಳು ಹೇಳುತ್ತವೆ. ಸು. ೮೯೧ರಲ್ಲಿ ಈತನು ರಾಚೆಯ ಗಂಗ ಎಂಬಾತನನ್ನು ಸೋಲಿಸಿ ಕೊಂದನು. ರಾಚೆಯ ಗಂಗನು ಗಂಗರ

ಪರವಾಗಿ ಹೋರಾಡಿದನೆಂದು ಊಹಿಸಲಾಗಿದೆ. ಆದರೆ ಕ್ರಿ.ಶ. ೮೯೫ರಲ್ಲಿ ಬೂತುಗನ ಮಗನಾದ ಎಱೆಯಪ್ಪನು ಮಹೇಂದ್ರನನ್ನು ಸೋಲಿಸಿ ಕೊಂದು ಅವನ ವಶದಲ್ಲಿದ್ದ ಸೊಳೂರು, ನಿಡುಗಣಿ, ತಿಪ್ಪೇಱು, ಹೆಂಜೇರು, ಮಿಡಿಗೆ, ಸೂಳಿಶೈಲೇಂದ್ರ ಮುಂತಾದ ಕೋಟೆಗಳನ್ನು ಕಸಿದುಕೊಂಡನು. ಅಂದಿನಿಂದ ನೊಳಂಬರು ಗಂಗರ ಸಾಮಂತಿಕೆಯನ್ನು ಪುನಃ ಒಪ್ಪಿಕೊಂಡರು. ಎಱೆಯಪ್ಪನು ಮಹೇಂದ್ರಾಂತಕನೆಂಬ ಬಿರುದನ್ನು ಧರಿಸಿದನು.

ಇಮ್ಮಡಿ ರಾಜಮಲ್ಲನಿಗೆ ಮಕ್ಕಳಿರಲಿಲ್ಲ. ೮೭೦ರಲ್ಲಿ ಅಧಿಕಾರಕ್ಕೆ ಬಂದ ರಾಜಮಲ್ಲನು ಸುಮಾರು ೮೮೬ರಿಂದಲೇ ತನ್ನ ತಮ್ಮ ಬೂತುಗನ ಮಗನಾದ ಎಱೆಯಪ್ಪನನ್ನು ಯುವರಾಜ ಪದವಿಗೇರಿಸಿ ತನ್ನೊಡನೆ ಆಡಳಿತ ಸೂತ್ರಗಳನ್ನು ವಹಿಸುವಂತೆ ಮಾಡಿದ್ದನು. ದೊಡ್ಡಪ್ಪನೊಡನೆ ಇತರ ಕದನಗಳಲ್ಲಿ ಭಾಗವಹಿಸಿದ್ದ ಈ ಎಱೆಯಪ್ಪನು ವೆಂಗಿ ಚಾಲುಕ್ಯರ ಅರಸನಾದ ಅಮ್ಮರಾಜ (I) ನನ್ನು ಒಮ್ಮೆ ಕದನದಲ್ಲಿ ಎದುರಿಸಬೇಕಾಯಿತು. ಅಮ್ಮರಾಜನು ನೊಳಂಬವಾಡಿಯನ್ನು ಮುತ್ತಿದನು. ಆದರೆ ನೊಳಂಬರು ಈಗ ಗಂಗರ ಮಾಂಡಲಿಕರೂ ಸಂಬಂಧಿಗಳೂ ಆಗಿದ್ದ ಕಾರಣ ಎಱೆಯಪ್ಪನು ತನ್ನ ಸೈನ್ಯವನ್ನು ನೊಳಂಬ ಅಯ್ಯಪನ ಸಹಾಯಕ್ಕೆ ಕಳಿಸಿದನು. ತುಂಬೆಪಾಡಿ ಕದನದಲ್ಲಿ ಅಯ್ಯಪನು ಬಹಳ ಶ್ರಮದಿಂದ ಕಾದಬೇಕಾಯಿತು. ಆದರೆ ವೆಂಗಿಯ ಸೈನ್ಯ ಮಾತ್ರ ಹಿಮ್ಮೆಟ್ಟಿತು.

ಎಱೆಯಪ್ಪನನ್ನು ಶಾಸನಗಳಲ್ಲಿ ಕಾಮದ, ಜಯದಂಕಕಾರ, ಜನೋದಯ, ತ್ರಿಭುವನಾಭರಣ, ಕುಮಾರಬೆಡಂಗ ಇತ್ಯಾದಿಯಾಗಿ ವರ್ಣಿಸಲಾಗಿದೆ. ಗೇಯವಾದ್ಯ ನೃತ್ಯಾದಿ ವಿದ್ಯೆಗಳಲ್ಲಿ ಭರತನಂತಿದ್ದ ಎಱೆಯಪ್ಪನಿಗೆ ವ್ಯಾಕರಣ ಶಾಸ್ತ್ರದಲ್ಲಿಯೂ ಪಾಂಡಿತ್ಯವಿತ್ತೆಂದು ನಂತರದ ಶಾಸನಗಳಲ್ಲಿ ಹೇಳಿದೆ. ಚಾಲುಕ್ಯವಂಶದ ನಿಜಗಲಿರಾಜನ ಮಗಳಾದ ಜಾಕಾಂಬೆ ಈತನ ಪತ್ನಿ. ನರಸಿಂಹ, ರಾಜಮಲ್ಲ ಮತ್ತು ಬೂತುಗ ಎಂಬುವರು ಮಕ್ಕಳು.

ಎಱೆಯಪ್ಪನ ಬಳಿಕ ಹಿರಿಯ ಮಗ ನರಸಿಂಹನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿಯೂ ಇವನ ನಂತರ ಆಳಿದ ರಾಜಮಲ್ಲ (III) ನ ಕಾಲದಲ್ಲಿಯೂ ಇವರ ಅಧೀನರಾಗಿದ್ದ ನೊಳಂಬರು ಸ್ವತಂತ್ರರಾಗಲು ಯತ್ನಿಸಿದರು. ಮೊದಲು ಅಯ್ಯಪದೇವನೂ ನಂತರ ರಾಜಮಲ್ಲನ ಕಾಲದಲ್ಲಿ ಅಣ್ಣಿಗನೂ ದಂಗೆ ಎದ್ದರು. ಆದರೆ ಇವರನ್ನು ಸೋಲಿಸಿ ಇವರ ದಂಗೆಯನ್ನು ಅಡಗಿಸಲಾಯಿತು.

ಕಚ್ಚೆಯ ಗಂಗನೆನಿಸಿದ ರಾಜಮಲ್ಲ(III)ನು ವಿಷವೃಕ್ಷದಂತೆ ದುಷ್ಟನಾಗಿದ್ದನೆಂದು ಶಾಸನಗಳ ಹೇಳಿಕೆ. ನೊಳಂಬರ ಅಣ್ಣಿಗನನ್ನು ಇವನು ಸೋಲಿಸಿದ್ದರೂ ಅವನಿಗೆ ಅಭಯದಾನ ಮಾಡಿದ್ದ ಇವನನ್ನು ಸಿಂಹಾಸನದಿಂದ ಹೊರದೂಡಲು ಬೂತುಗ(II)ನು ಹವಣಿಸಿದನು. ಅದಕ್ಕೆಂದು ಆತನು ರಾಷ್ಟ್ರಕೂಟರ ನೆರವನ್ನು ಕೋರಿದನು. ಆಗ ರಾಷ್ಟ್ರಕೂಟ ರಾಜ್ಯದಲ್ಲಿ ಅಮೋಘವರ್ಷ ಬದ್ದೆಗನು ಆಳುತ್ತಿದ್ದು, ಆತನಿಗೆ ಬೂತುಗನ ಬೆಂಬಲ ಅವಶ್ಯಕವಾಗಿತ್ತು. ಯುವರಾಜ ಮುಮ್ಮಡಿ ಕೃಷ್ಣನು ಹೂಡಿದ ಕದನಗಳಲ್ಲಿ

ಬೂತುಗನು ಪ್ರಮುಖವಾದ ಪಾತ್ರವನ್ನು ವಹಿಸಿದ್ದನು. ರಟ್ಟರಮೇಲೆ ಬಿದ್ದಿದ್ದ ದಂತಿಗ ವಪ್ಪುಗರನ್ನೂ ಅಚಳಪುರದ ಕಕ್ಕನನ್ನೂ ಸೋಲಿಸುವುದರಲ್ಲಿ ಬೂತುಗನು ಕೃಷ್ಣನಿಗೆ ಸಹಾಯ ನೀಡಿದ್ದನು. ಇವನ ಶೌರ್ಯಕ್ಕೆ ಮೆಚ್ಚಿದ ಬದ್ದೆಗನು ತನ್ನ ಮಗಳಾದ ರೇವಕ ನಿಮ್ಮಡಿಯನ್ನು ಇವನಿಗೆ ವಿವಾಹ ಮಾಡಿಕೊಟ್ಟನು (ಕ್ರಿ.ಶ. ೯೩೩). ಆಗ ಬೆಳ್ವೊಲ, ಪುಲಿ ಗೆಱೆ, ಬಾಗೆನಾಡು, ಕಿಸುಕಾಡು ಪ್ರಾಂತಗಳು ಇವನಿಗೆ ಬಳುವಳಿಯಾಗಿ ಬಂದುವು. ಸು. ೯೩೬ರಲ್ಲಿ ಕೃಷ್ಣನ ಸಹಾಯದಿಂದ ಬೂತುಗನು ಸೋದರನಾದ ರಾಜಮಲ್ಲ ನನ್ನು ಸೋಲಿಸಿ ಕೊಂದು ತಾನೇ ಗಂಗಮಂಡಲಾಧಿಪತಿಯಾದನು. ಈಗಲಿಂದ ಗಂಗರು ರಾಷ್ಟ್ರಕೂಟರ ನಂಬುಗೆಯ ಸಾಮಂತರಾದರು. ಕೃಷ್ಣನು ಪಟ್ಟಕ್ಕೆ ಬರಲು ಲಲ್ಲೆಯ ರಾಜನಿಂದ ಉಂಟಾಗಿದ್ದ ತೊಂದರೆಗಳನ್ನು ನೀಗಿಸಿ, ಕೃಷ್ಣನು ದಕ್ಷಿಣದಲ್ಲಿ ಹೂಡಿದ್ದ ತಕ್ಕೋಲಂ ಕದನದಲ್ಲಿ ಆತನಿಗೆ ಸಹಾಯಮಾಡಿ ಜೋಳರಾಜಧಾನಿಯಾದ ತಂಜಾವ್ರಿ ಯನ್ನು ಸುಟ್ಟ ಬೂತುಗನು ಮೆಚ್ಚುಗೆಯಾಗಿ ಬನವಾಸಿ ಪ್ರಾಂತದ ಆಧಿಪತ್ಯವನ್ನು ಸಹ ರಾಷ್ಟ್ರಕೂಟರಿಂದ ಪಡೆದನು.

ಸತ್ಯವಾಕ್ಯ, ಗಂಗಗಾಂಗೇಯ, ಗಂಗನಾರಾಯಣ, ಜಯದುತ್ತರಂಗ, ನನ್ನಿಯ ಗಂಗ ಇತ್ಯಾದಿ ಬಿರುದಾಂಕಿತನಾದ ಬೂತುಗನಿಗೆ ರೇವಕನಿಮ್ಮಡಿಯಲ್ಲದೆ, ಕಲ್ಲಬ್ಬರಸಿ, ಪದ್ದಬ್ಬರಸಿ ಎಂಬ ಇನ್ನಿಬ್ಬರು ಪತ್ನಿಯರು, ಮರುಳ, ಮಾರಸಿಂಹ ಮತ್ತು ನೀತಿಮಾರ್ಗ ಗೋವಿಂದರಸರೆಂಬ ಮಕ್ಕಳೂ ಇದ್ದರು.

ಬೂತುಗನ ನಂತರ ಅವನ ಕಿರಿಯ ಮಗ ಮರುಳನು ಕೇವಲ ಎರಡು ವರ್ಷಗಳು ಅಧಿಕಾರದಲ್ಲಿದ್ದ ಬಳಿಕ, ಆತನ ತಮ್ಮ ಇಮ್ಮಡಿ ಮಾರಸಿಂಹನು ಗಂಗಾಧಿಪತಿಯಾದನು (ಕ್ರಿ.ಶ. ೯೬೩). ಇನೆಯ ಕೃಷ್ಣನು ಉತ್ತರ ದಿಗ್ವಿಜಯಕ್ಕೆ ಹೋಗುವ ಮುನ್ನ ಮಾರಸಿಂಹನಿಗೆ ಪಟ್ಟಾಭಿಷೇಕ ಮಾಡಿದನು. ಶ್ರವಣಬೆಳಗೊಳದ ಶಾಸನದಲ್ಲಿ ಮಾರ ಸಿಂಹನ ಸಾಧನೆಗಳ ವಿವರಗಳನ್ನು ಕೊಡಲಾಗಿದೆ. ತನ್ನ ಅಧಿರಾಜ ಕೃಷ್ಣನು ಗೂರ್ಜರರ ಮೇಲೆ ನಡಸಿದ ಯುದ್ಧಗಳಲ್ಲಿ ಭಾಗವಹಿಸಿ ಗೂರ್ಜರಾಧಿರಾಜನೆನಿಸಿಕೊಂಡನು. ಅಲ್ಲನ ದರ್ಪವನ್ನಡಗಿಸಿದನು. ಶಬರನಾಯಕನೆನಿಸಿದ ನರಗನನ್ನೂ ವನವಾಸಿ ದೇಶದ ರಾಜ ನನ್ನೂ ಸೋಲಿಸಿದನು. ಗೋಣೂರು, ಉಚ್ಚಂಗಿ, ಪಾಭಸೆಯ ಕೋಟೆ ಮುಂತಾದ ಕಡೆಗಳಲ್ಲಿ ನಡಸಿದ ಯುದ್ಧಗಳಲ್ಲಿ ಜಯಗಳಿಸಿದನು. ಚಾಲುಕ್ಯ ರಾಜಾದಿತ್ಯನನ್ನು ನಿರ್ಮೂಲಮಾಡಿದನು. ಕ್ರಿ.ಶ. ೯೭೧ರಲ್ಲಿ ಪರಮಾರ ಸೀಯಕನು ಖೊಟ್ಟಿಗನಿಂದ ಕಸಿದುಕೊಂಡಿದ್ದ ರಾಜಧಾನಿ ಮಾನ್ಯಖೇಟ ನಗರವನ್ನು ಬಹುಪರಾಕ್ರಮದಿಂದ ಮಾರ ಸಿಂಹನು ಸ್ವಾಧೀನಪಡಿಸಿಕೊಂಡನು.

ಕ್ರಿ.ಶ. ೯೬೭ರಲ್ಲಿ ಮುಮ್ಮಡಿಕೃಷ್ಣನು ಗತಿಸಿದ ಬಳಿಕ ರಾಷ್ಟ್ರಕೂಟರ ಅವನತಿ ಆರಂಭವಾಗಿ, ಒಂದು ದಶಕದೊಳಗಾಗಿ ಅವರು ತಮ್ಮ ರಾಜ್ಯವನ್ನು ಕಳೆದುಕೊಂಡರು. ಕೃಷ್ಣನ ಮೊಮ್ಮಗನಾದ ನಾಲ್ಕನೆಯ ಇಂದ್ರನನ್ನು ಸಿಂಹಾಸನದಲ್ಲಿ ಸ್ಥಾಪಿಸಲು ಬಹ ವಾಗಿ [illegible]ಸಿದವರು ಈ ಮಾರಸಿಂಹ ಹಾಗೂ ಈತನ ಮಂತ್ರಿಯಾಗಿದ್ದ ಚಾಮುಂ

ರಾಯ. ಇದಕ್ಕಾಗಿ ಇವರು ಪಾತಾಳಮಲ್ಲಾನುಜನಾದ ವಜ್ಜಳ, ನೊಳಂಬರು, ರಣಸಿಂಗರಾಜ ಮುಂತಾದವರ ವಿರುದ್ಧ ಹೋರಾಡಿದರು. ಬಂಕಾಪುರದಲ್ಲಿ ಇಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಆದರೆ ಇವರ ಶ್ರಮಗಳೆಲ್ಲ ವ್ಯರ್ಥವಾದವು. ಮಾರಸಿಂಹನು ೯೭೪ರಲ್ಲಿ ಬಂಕಾಪುರದಲ್ಲಿ ಕಾಲವಾದನು. ಇಂದ್ರನು ೯೮೨ರಲ್ಲಿ ತೀರಿಕೊಂಡನೆಂದು ಶ್ರವಣಬೆಳಗೊಳದ ಶಾಸನ ತಿಳಿಸುತ್ತದೆ.

ಮಾರಸಿಂಹನಿಗೆ ಸತ್ಯವಾಕ್ಯ, ಗಂಗಕಂದರ್ಪ, ಗಂಗವಿದ್ಯಾಧರ, ಗಂಗಚೂಡಾಮಣಿ, ಗಂಗಮಾಂಡಲಿಕ, ಗಂಗವಜ್ರ, ಗುತ್ತಿಯಗಂಗ, ನೊಳಂಬಾಂತಕ, ಚಲದುತ್ತರಂಗ, ಜಗದೇಕವೀರ, ಮಂಡಲಿಕತ್ರಿಣೇತ್ರ ಇತ್ಯಾದಿ ಬಿರುದುಗಳಿವೆ. ಬ್ರಹ್ಮಕ್ಷತ್ರಿಯ ಕುಲದಲ್ಲಿ ಹುಟ್ಟಿದ, ಜೈನಗುರುವಾದ ಅಜಿತಸೇನನ ಶಿಷ್ಯನಾದ, ಚಾವುಂಡರಾಯನು ಈತನ ಮಂತ್ರಿ. ಪಂಚಲದೇವನು ಆತನ ಇನ್ನೊಬ್ಬ ಪಾದಪದ್ಮೋಪಜೀವಿ ಎನಿಸಿದ ಮಾಂಡಲಿಕ. ಈತನು ಮಾರಸಿಂಹನ ಅಧೀನದಲ್ಲಿ ಸೆಬ್ಬಿ ೩೦ ಮತ್ತು ೯೬ ನಾಡುಗಳನ್ನು ಆಳುತ್ತಿದ್ದನು.

ಮಾರಸಿಂಹನಿಗೆ ಸತ್ಯವಾಕ್ಯ, ರಾಜಮಲ್ಲ, ರಕ್ಕಸಗಂಗ, ಮತ್ತು ಅರುಮೊಳಿದೇವ ಎಂಬ ಮಕ್ಕಳಿದ್ದರು. ಗಂಗಮನೆತನದ ಅರಸರು ಅನುಕ್ರಮವಾಗಿ ಸತ್ಯವಾಕ್ಯ ಮತ್ತು ನೀತಿಮಾರ್ಗ ಎಂಬ ಬಿರುದುಗಳನ್ನು ಧರಿಸುತ್ತ ಬಂದಿರುವ ಕಾರಣ ಮಾರಸಿಂಹನ ಬಳಿಕ ಸತ್ಯವಾಕ್ಯ ರಾಜಮಲ್ಲನಿಗೂ ಮೊದಲು ಒಬ್ಬ ನೀತಿಮಾರ್ಗನು ಸ್ವಲ್ಪಕಾಲವಾದರೂ ಆಳಿರಬೇಕು ಎಂಬ ಊಹೆಯೊಂದಿದೆ. ರಾಜಮಲ್ಲನು (IV) ಅಧಿಕಾರವಹಿಸುವ ಮುನ್ನ ಅವನ ಪ್ರತಿಸ್ಪರ್ಧಿಗಳನ್ನು ಮಂತ್ರಿಪದವಿಯಲ್ಲಿ ಮುಂದುವರಿದಿದ್ದ ಚಾವುಂಡರಾಯನು ಸೋಲಿಸಿದನೆಂದು ಹೇಳಿರುವುದು ಈ ಊಹೆಗೆ ಪುಷ್ಟಿಯನ್ನಿತ್ತಿದೆ. ಈತನು ಮಾರಸಿಂಹನ ತಮ್ಮನಾದ ನೀತಿಮಾರ್ಗನೆನಿಸಿದ ಗೋವಿಂದರಸನಾಗಿರಬಹುದು.

ಈ ವೇಳೆಗೆ ಚಾಲುಕ್ಯರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದ ಇಮ್ಮಡಿ ತೈಲಪನು ಗಂಗವಾಡಿಯ ಉತ್ತರ ಭಾಗದ ಹಲವಾರು ಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದನು. ೯೮೫ರ ವೇಳೆಗೆ ರಕ್ಕಸಗಂಗ ರಾಜಮಲ್ಲನು ನಾಲ್ವಡಿ ರಾಜಮಲ್ಲನ ಉತ್ತರಾಧಿಕಾರಿಯಾದನೆಂದು ಹೇಳಿದ್ದಾರೆ. ನಾಗವರ್ಮನು 'ಛಂದೋಂಬುಧಿ'ಯಲ್ಲಿ ರಕ್ಕಸಗಂಗನು ತನ್ನ ಪೋಷಕನೆಂದು ಹೇಳಿಕೊಂಡಿರುವುದನ್ನಾಧರಿಸಿ, ರಕ್ಕಸಗಂಗನು ಈತನೇ ಎಂದು ಹೇಳಲಾಗಿದೆ. ಆದರೆ ನಾಲ್ವಡಿ ರಾಜಮಲ್ಲನೇ ಕ್ರಿ.ಶ. ೯೯೯ರ ವರೆಗೂ ರಾಜ್ಯದಲ್ಲಿ ಮುಂದುವರಿದು, ನಂತರ ಚೋಳರು ಅಳಿದುಳಿದ ಗಂಗವಾಡಿ ಪ್ರದೇಶವನ್ನು ತಮ್ಮ ವಶಪಡಿಸಿಕೊಂಡಾಗ ಗಂಗರ ಆಳಿಕೆ ಅಂತ್ಯಗೊಂಡಿತು ಎಂಬ ಇನ್ನೊಂದು ಅಭಿಪ್ರಾಯವೂ ಇದೆ. ಏನಿದ್ದರೂ ೧೦ನೆಯ ಶತಮಾನ ಮುಗಿಯುತ್ತಿದ್ದಂತೆಯೇ ಗಂಗರ ಆಳಿಕೆಯೂ ಮುಗಿಯಿತು. ನಂತರದ ಕಾಲದಲ್ಲಿ ಆಗೊಮ್ಮೆ, ಈಗೊಮ್ಮೆ ಒಬ್ಬೊಬ್ಬರು ಮಾಂಡಲಿಕರು ಗಂಗವಂಶಕ್ಕೆ ಸೇರಿದವರೆಂದು ಹೇಳಿಕೊಂಡಿರುವುದು ತಿಳಿದಿದೆಯಾದರೂ ಅವರಿಗೂ ಈ ತಲಕಾಡಿನ ಗಂಗರಿಗೂ ಇದ್ದ ಸಂಬಂಧವ್ಯವೆಂತಹುದೆಂಬುದು ತಿಳಿಯದು.

## ಬನವಾಸಿಯ ಕದಂಬರು

ತಲಕಾಡಿನ ಗಂಗರು ಕರ್ಣಾಟಕದ ದಕ್ಷಿಣ ಭಾಗದಲ್ಲಿ ಆಳುತ್ತಿದ್ದ ಸಮಯದಲ್ಲಿಯೇ ಉತ್ತರ ಭಾಗದಲ್ಲಿ, ಉತ್ತರ ಕನ್ನಡ ಶಿವಮೊಗ್ಗ ಧಾರವಾಡ ಬೆಳಗಾಂ ಜಿಲ್ಲೆಗಳಿಗೆ ಸೇರಿದ ಪ್ರದೇಶದಲ್ಲಿ. ಬನವಾಸಿಯನ್ನು ರಾಜಧಾನಿಯಾಗಿ ಹೊಂದಿದ್ದ ಕದಂಬರು ಆಳುತ್ತಿದ್ದರು. ಈ ಎರಡು ಮನೆತನಗಳ ಆಳಿಕೆಯ ಕಾಲವನ್ನು ಕುರಿತು ಮೇಲೆ ಚರ್ಚಿಸಿದೆ.

ಕದಂಬರ ಮೂಲವನ್ನು ಕುರಿತು ಹಲವಾರು ಕತೆಗಳು ೧೧-೧೨ನೆಯ ಶತಮಾನಗಳಲ್ಲಿ ಹೆಣೆಯಲ್ಪಟ್ಟಿವೆ. ಆಗ ಹುಟ್ಟಿದ ಶಾಸನಗಳಲ್ಲಿ ಈ ಕತೆಗಳು ಇವೆ. ಆ ವೇಳೆಗೆ ಬನವಾಸಿಯಲ್ಲಿ ಆಳುತ್ತಿದ್ದ ಕದಂಬರು ಕಣ್ಮರೆಯಾಗಿದ್ದು, ಧಾರವಾಡ ಜಿಲ್ಲೆಯ ಹಾನಗಲ್ಲು ಹಾಗೂ ಗೋವೆಯ ಸುತ್ತಲಿನ ಪ್ರದೇಶಗಳಲ್ಲಿ ಕ್ರಮವಾಗಿ ಎರಡು ಬೇರೆ ಕದಂಬ ವಂಶದ ಶಾಖೆಗಳಿಗೆ ಸೇರಿದ ಮಾಂಡಲಿಕರು ಅಧಿಕಾರದಲ್ಲಿದ್ದರು. ವಾಸ್ತವಿಕವಾಗಿ ಇವರಿಗೂ ಬನವಾಸಿಯ ಕದಂಬರಿಗೂ ನಡುವಣ ಸಂಬಂಧವೆಂತಹುದು ಎಂಬುದು ಇನ್ನೂ ತಿಳಿಯದು. ಒಂದೇ ವಂಶದ ಭಿನ್ನ ಶಾಖೆಗಳಿಗೆ ಸೇರಿದವರೆಂಬಷ್ಟು ಮಾತ್ರ ಈಗ ಹೇಳಬಹುದಾಗಿದೆ.

ಈಚಿನ ಶಾಸನಗಳಲ್ಲಿಯ ಕದಂಬ ವಂಶದ ಮೂಲಪುರುಷನನ್ನು ಕುರಿತ ಹೇಳಿಕೆಗಳು ಎಷ್ಟರಮಟ್ಟಿಗೆ ಸತ್ಯವಾದವು ಎಂದು ಹೇಳಲಾಗದು. ನಮಗೆ ಇದುವರೆಗೂ ತಿಳಿದಿದ್ದಂತೆ ಮಯೂರಶರ್ಮ (ವರ್ಮ) ಈ ವಂಶದ ಮೂಲಪುರುಷನು. ಆದರೆ ನಂತರದ ಶಾಸನಗಳಲ್ಲಿ ಈತನಿಗೂ ಮೊದಲು ಜಯಂತ, ಮಧುಕೇಶ್ವರ, ಮಲ್ಲಿನಾಥ ಮತ್ತು ಚಂದ್ರವರ್ಮರೆಂಬ ಅರಸರು ಆಳಿದರೆಂದೂ, ಚಂದ್ರವರ್ಮನಿಗೆ ಅದೇ ಹೆಸರಿನ ಒಬ್ಬ ಮಗನೂ (ಇಮ್ಮಡಿ ಚಂದ್ರವರ್ಮ) ಪುರಂದರ ಎಂಬ ಇನ್ನೊಬ್ಬ ಮಗನೂ ಇದ್ದರೆಂದೂ ಇವರಲ್ಲಿ ಹಿರಿಯನೇ ಮಯೂರವರ್ಮನೆಂದು ಪ್ರಸಿದ್ಧನಾದನೆಂದೂ ಹೇಳಿದೆ. ಆದರೆ ಈ ಹೆಸರನ್ನು ಹೊಂದಿದ್ದ ಬನವಾಸಿಯ ಕದಂಬ ಅರಸರು ಯಾರೂ ಇದುವರೆಗೆ ತಿಳಿದುಬಂದಿಲ್ಲ.

ಮೂರು ಕಣ್ಣುಗಳನ್ನೂ ನಾಲ್ಕು ಕೈಗಳನ್ನೂ ಹೊಂದಿದ್ದ ತ್ರಿಲೋಚನ (ಮುಕ್ಕಣ್ಣ) ಕದಂಬನೆಂಬವನು ಈ ವಂಶದ ಮೂಲಪುರುಷನೆಂದೂ ತ್ರಿಪುರಾಸುರನನ್ನು ಕೊಂದ ಬಳಿಕ ಶಿವನ ಹಣೆಯಿಂದ ಕದಂಬ ವೃಕ್ಷವೊಂದರ ಬುಡದಲ್ಲಿ ಬಿದ್ದ ಬೆವರಿನಿಂದ ಈತನು ಹುಟ್ಟಿದನೆಂದೂ, ಕದಂಬ ವೃಕ್ಷದ ಕೆಳಗೆ ಜನಿಸಿದವನಾದ ಕಾರಣ ಕದಂಬನೆನಿಸಿಕೊಂಡನೆಂದೂ ಒಂದು ಕತೆ ಗೋವೆಯ ಕದಂಬರ ಶಾಸನಗಳಲ್ಲಿ ಉಕ್ತವಾಗಿದೆ. ಹೀಗೆಯೇ ಇನ್ನೂ ಕೆಲವು ಕತೆಗಳಿವೆ. ಬನವಾಸಿಯ ಕದಂಬರ ಸಮಕಾಲೀನ ಶಾಸನಗಳಲ್ಲಿ ಅವರನ್ನು ಕುರಿತು ನೀಡಲಾದ ವಿವರಗಳಿಗೂ ಈ ಕತೆಗಳಿಗೂ ಯಾವ ವಿಧವಾದ ಸಂಬಂಧವೂ ಇಲ್ಲ. ಒಂದು ಅಂಶದಲ್ಲಿ ಮಾತ್ರ ಏಕಾಭಿಪ್ರಾಯವಿದೆ. ಅದು ಈ ವಂಶದ ಹೆಸರಾದ ಕದಂಬಕ್ಕೂ ಕದಂಬ ವೃಕ್ಷಕ್ಕೂ ಇರುವ ಸಂಬಂಧ. ನಂತರದ ಕತೆಗಳಲ್ಲೂ ಕದಂಬ ವೃಕ್ಷಕ್ಕೆ ಸ್ಥಾನವನ್ನು ಕೊಡಲಾಗಿದೆ. ತಾಳಗುಂದದಲ್ಲಿನ ಕಾಕುತ್ಸ್ಥವರ್ಮನ ಶಾಸನದಲ್ಲಿ, ಈ ವೃಕ್ಷ ಅವರ ಮನೆಗೆ ಹೊಂದಿದಂತೆ ಇತ್ತು ಎಂದು ಸ್ಪಷ್ಟವಾಗಿ ಹೇಳಿರುವ ಕಾರಣ ಕದಂಬ ಎಂಬುದು

ಈ ವಂಶದವರ ಉಪನಾಮ ಅಥವಾ ಕುಲನಾಮ ಎಂಬುದು ಖಚಿತ. ಉಳಿದ ವಿವರಗಳೆಲ್ಲ ಕತೆಗಳೇ.

ಕದಂಬ ವೃಕ್ಷ ಅವರ ಮನೆಯಬಳಿ ಇದ್ದುದು ಅದೊಂದೇ ('ಗೃಹಸಮೀಪದೇಶಸಂರೂಢ ವಿಕಸತ್ಕದಂಬೈಕಪಾದಪಮ್') ಎಂದು ತಾಳಗುಂದ ಶಾಸನದಲ್ಲಿ ಹೇಳಿದೆ. ಈ ಮಾತನ್ನಾಧರಿಸಿ, ಮೂಲತಃ ಈ ಕದಂಬರು ಕದಂಬವೃಕ್ಷ ಹೇರಳವಾಗಿ ಬೆಳೆಯುತ್ತಿದ್ದ ಪ್ರದೇಶದಿಂದ ಅದು ಅಪರೂಪವಾಗಿರುವ ಪ್ರದೇಶಕ್ಕೆ ವಲಸೆಹೋಗಿರಬಹುದೆಂದೂ ಕೊಂಕಣದಲ್ಲಿ ಈ ವೃಕ್ಷ ಅಂದು ಬೆಳೆಯುತ್ತಿರಲಿಲ್ಲವೆಂದೂ ಆದ್ದರಿಂದ ಕದಂಬರು ಕೊಂಕಣದವರಾಗಿರದೆ, ಅಲ್ಲಿಗೆ ಹೊರಗಿನಿಂದ ಬಂದವರೆಂದೂ ಇತ್ತೀಚೆಗೆ ಒಂದು ಸೂಚನೆ ಬಂದಿದೆ.[4] ಪಲ್ಲವರಾಜಧಾನಿಯಿಂದ ಮಯೂರಶರ್ಮನು ಶ್ರೀಪರ್ವತಕ್ಕೆ ಹೋದನೆಂದು ಶಾಸನದಲ್ಲಿ ಹೇಳಿದೆ. ಈ ಶ್ರೀಪರ್ವತ ಆಂಧ್ರಪ್ರದೇಶದ ಶ್ರೀಶೈಲವಾಗಿರಬಹುದೆಂಬುದು ಇದುವರೆಗಿನ ಊಹೆ. ಇದು ಯಾವುದಾದರೂ ಮಲೆನಾಡು ಪ್ರದೇಶಕ್ಕೆ ಅನ್ವಯಿಸಬಹುದಾದ ಸಾಮಾನ್ಯ ನಾಮವಾಗಿದ್ದು ಮಯೂರಶರ್ಮನು ಸ್ವಸ್ಥಳವಾದ ದಕ್ಷಿಣಕನ್ನಡ ಜಿಲ್ಲೆಗೆ ಹೋಗಿರಬಹುದೆಂಬುದು ಇತ್ತೀಚಿನ ಊಹೆ. ಇದೂ ಕದಂಬರು ಮೂಲತಃ ಕರ್ಣಾಟಕದವರೆಂಬ ವಾದವನ್ನೇ ಎತ್ತಿಹಿಡಿಯುತ್ತದೆ.

ಬನವಾಸಿಯ ಕದಂಬರನ್ನು ಕುರಿತ ಅತಿಸ್ಪಷ್ಟ ವಿವರಣೆ ಮೊದಲು ದೊರೆಯುವುದು ತಾಳಗುಂದದ ಶಾಸನದಲ್ಲಿಯೇ. ಮಾನವ್ಯ ಗೋತ್ರಕ್ಕೆ ಸೇರಿದ ಹಾರಿತೀಪುತ್ರರೆನಿಸಿದ ಈ ಬ್ರಾಹ್ಮಣರು ತಾಳಗುಂದದಲ್ಲಿದ್ದರು. ಇವರು ಶ್ರುತಿಗಳನ್ನು ಕ್ರಮವಾಗಿ ಅಧ್ಯಯನ ಮಾಡುವುದರಲ್ಲಿ ಪರಿಣತರು. ತಾಳಗುಂದ ಶಾಸನದ ಹೇಳಿಕೆಯಂತೆ ಮಯೂರಶರ್ಮನು ತನ್ನ ಗುರುವಾದ ವೀರಶರ್ಮನೊಂದಿಗೆ ಉನ್ನತ ವ್ಯಾಸಂಗಕ್ಕಾಗಿ ಅಂದು ಪ್ರಸಿದ್ಧವಾಗಿದ್ದ ತಮಿಳುನಾಡಿನ ಕಾಂಚೀಪುರದ ಘಟಿಕಾಸ್ಥಾನಕ್ಕೆ ಹೋದನು. ಇದು ಪಲ್ಲವರ ರಾಜಧಾನಿಯೂ ಪ್ರತಿಷ್ಠಿತ ವಿದ್ಯಾಕೇಂದ್ರವೂ ಆಗಿದ್ದಿತು. ಆದರೆ ಅಲ್ಲಿ ಅಧ್ಯಯನ ನಿರತನಾಗಿದ್ದ ಈತನಿಗೂ 'ಪಲ್ಲವ ಅಶ್ವಸಂಸ್ಥೆ'ಗೂ ಭಿನ್ನಾಭಿಪ್ರಾಯ ಉಂಟಾಗಿ, ಅವಮಾನಿತನಾದ ಮಯೂರಶರ್ಮನು ವಿದ್ಯಾಭ್ಯಾಸವನ್ನು ನಿಲ್ಲಿಸಿ ಕ್ಷಾತ್ರವೃತ್ತಿಯನ್ನವಲಂಬಿಸಿ ಶಸ್ತ್ರಧಾರಣೆ ಮಾಡಿದನು. ಪಲ್ಲವರ ಅಂತಪಾಲರನ್ನು ಸೋಲಿಸಿ ಶ್ರೀಪರ್ವತದವರೆಗಿನ ಪ್ರದೇಶವನ್ನು ಆಕ್ರಮಿಸಿ, ಬೃಹದ್ಬಾಣ ಮುಂತಾದ ಇತರರನ್ನು ಸದೆಬಡಿದು ಅವರಿಂದ ಕಪ್ಪಕಾಣಿಕೆಗಳನ್ನು ಪಡೆದನೆಂದೂ ಇವನನ್ನು ಹತ್ತಿಕ್ಕಲು ಕಳುಹಲ್ಪಟ್ಟ ಪಲ್ಲವ ಸೇನೆಯನ್ನು ಸೋಲಿಸಿ ಓಡಿಸಿದನೆಂದೂ ಇವನ ಬಲವನ್ನು ಮುರಿಯಲು ಅಸಮರ್ಥರಾದ ಪಲ್ಲವರು ಇವನೊಡನೆ ಸ್ನೇಹದಿಂದಿರುವುದು ಉಚಿತವೆಂದರಿತು ಇವನನ್ನು ಸೇನಾಧಿಪತಿಯೆಂದು ಮಾನ್ಯಮಾಡಿದರೆಂದೂ ನಂತರ ಪೂರ್ವದಲ್ಲಿ ಪ್ರೇಹಾರ ಮತ್ತು ಪಶ್ಚಿಮದಲ್ಲಿ ಸಮುದ್ರ ಇವುಗಳ ನಡುವಣ ಪ್ರದೇಶವನ್ನು ಇವನಿಗೆ ಒಪ್ಪಿಸಿ ಇವನನ್ನು ಸಾಮಂತನೆಂದು ಸ್ವೀಕರಿಸಿದರೆಂದೂ ಅಲ್ಲಿ ಹೇಳಿದೆ. ಹೀಗೆ ಸ್ವಬಾಹುಬಲದಿಂದ ರಾಜ್ಯವನ್ನು ಕಟ್ಟಿದ ಮಯೂರಶರ್ಮನು ಕದಂಬರ ಮೂಲಪುರುಷನಾದನು. ಇದು ನಮಗೆ

ಇದುವರೆಗೆ ತಿಳಿದಿದ್ದ ವಿಷಯ.

ಆದರೆ ಇತ್ತೀಚೆಗೆ ಬನವಾಸಿಯ ಸಮೀಪದ ಗುಡ್ನಾಪುರ ಎಂಬ ಗ್ರಾಮದಲ್ಲಿ ದೊರೆತ ಶಾಸನವೊಂದರಲ್ಲಿ ಮಯೂರಶರ್ಮನಿಗೂ ಹಿಂದಿನ ಅರಸರನ್ನು ಪ್ರಸ್ತಾಪಿಸಿದೆ. ಇದರಂತೆ ಮಯೂರಶರ್ಮನ ತಂದೆಯ ಹೆಸರು ಬಂಧುಷೇಣ, ತಾತ ವೀರಶರ್ಮ. ದ್ವಿಜೋತ್ತಮನೂ ವೇದಕುಲಮತಿಯೂ ಆದ ಈತನು ಕದಂಬ ಕುಲದಲ್ಲಿ ಜನಿಸಿದನು. ಈತನ ಹಿರಿಯ ಮಗನಾದ ಬಂಧುಷೇಣನು ಕ್ಷಾತ್ರವೃತ್ತಿಯನ್ನವಲಂಬಿಸಿದವನಾಗಿದ್ದನು. ಆತನ ಮಗ ಮಯೂರಶರ್ಮನಿಗೆ ತ್ರಿದಶಸೇನಾನಿಯಾದ ಕುಮಾರ, ಎಂದರೆ ಷಣ್ಮುಖನು ರಾಜ್ಯಾಭಿಷೇಕಮಾಡಿದ್ದನಂತೆ. ಈತನ ನಂತರ ಇತರ ಅರಸರ ಪ್ರಸ್ತಾಪ ಕೂಡ ಈ ಶಾಸನದಲ್ಲಿ ಕ್ರಮವಾಗಿ ಬಂದಿದೆ. ಆದರೆ ತಾಳಗುಂದ ಶಾಸನದಲ್ಲಿ ಹೇಳಲಾದ ಪಲ್ಲವರೊಡನೆ ಮಯೂರಶರ್ಮನು ಹೂಡಿದ ಕಾಳೆಗ ಇತ್ಯಾದಿ ವಿವರಗಳು ಇಲ್ಲಿಲ್ಲ. ದ್ವಿಜೋತ್ತಮನಾದ ತಾತ ವೀರಶರ್ಮನೇ ಬಹುಶಃ ಅವನ ಗುರುವಾಗಿರಬೇಕು. ಎಂದೇ ತಾಳಗುಂದ ಶಾಸನದಲ್ಲಿ ವೀರಶರ್ಮನನ್ನು ಗುರುವೆಂದಿದೆ. ಗುಡ್ನಾಪುರ ಶಾಸನದಿಂದ ಮಯೂರಶರ್ಮನಿಗೆ ಹಿಂದಿನ ಎರಡು ತಲೆಮಾರಿನವರ ಹೆಸರುಗಳು ಈಗ ತಿಳಿದುಬಂದಿವೆ.

ಬಹುಶಃ ಮಯೂರಶರ್ಮನ ತಂದೆ ಬಂಧುಷೇಣನು ವೀರಕ್ಷತ್ರಿಯನಾಗಿ ತಾಳಗುಂದ ಬನವಾಸಿಗಳ ಸುತ್ತಲೂ ಚಿಕ್ಕ ಪಾಳೆಯವೊಂದನ್ನು ಕಟ್ಟಿಕೊಂಡಿರಬೇಕು. ಈತನ ಮಗ ಮಯೂರಶರ್ಮನು ತಾತನಿಂದ ವಿದ್ಯಾಭ್ಯಾಸವನ್ನು ಪಡೆದು, ತಾತನೊಡನೆಯೇ ಕಾಂಚೀಪುರಕ್ಕೆ ಹೋಗಿರಬೇಕು. ಅಲ್ಲಿ ಉಂಟಾದ ಘಟನೆ ಅವನನ್ನು ಘಾಸಿಗೊಳಿಸಿತು. ತಂದೆಯ ಮೂಲಕ ತನ್ನ ರಕ್ತದಲ್ಲಿ ಹುದಿದ್ದ ಕ್ಷಾತ್ರಮನೋಭಾವ ಆತನು ಪಲ್ಲವರನ್ನು ಧಿಕ್ಕರಿಸಿ ಸ್ವತಂತ್ರವಾದ ರಾಜ್ಯವೊಂದನ್ನು ಕಟ್ಟಲು ಪ್ರೇರಿಸಿತು. ಅಂದು ದಕ್ಷಿಣ ಭಾರತದಲ್ಲಿ ಪಲ್ಲವರು ಪ್ರಬಲರಾಗಿದ್ದರು. ತಲಕಾಡಿನ ಗಂಗರು ಸಹ ಅವರ ಪ್ರಭಾವಕ್ಕೊಳಗಾಗಿದ್ದನ್ನು ನೋಡಿದ್ದೇವೆ. ಆದರೆ ಈ ಘಟನೆ ಕದಂಬರು ಪಲ್ಲವ ವಿರೋಧಿಗಳಾಗುವುದಕ್ಕೆ ದಾರಿಮಾಡಿತು.

ಕನ್ನಡಿಗರಲ್ಲದ ಪಲ್ಲವರು ಕನ್ನಡದ ನೆಲವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡುದೇ ಅಲ್ಲದೆ, ಕನ್ನಡಿಗರನ್ನೇ ಅವಮಾನಗೊಳಿಸಲು ಹಿಂಜರಿಯದಿದ್ದುದು ಮಯೂರಶರ್ಮನ ಸಹಜ ಕ್ಷಾತ್ರಸ್ವಭಾವವನ್ನು ಕೆಣಕಿತು. ಇದರಿಂದ ರೋಸಿದ ಆತನು ಕನ್ನಡಿಗರದೇ ಆದ ರಾಜ್ಯವೊಂದನ್ನು ಕಟ್ಟಬಯಸಿದ್ದು ಆಶ್ಚರ್ಯವೇನಲ್ಲ. ಇವನ ವೀರಾವೇಶವನ್ನೆದುರಿಸಲಾಗದ ಪಲ್ಲವರು ತಮ್ಮ ಬಲವನ್ನು ಕಾಪಾಡಿಕೊಳ್ಳಲೆಂಬಂತೆ, ಪ್ರತಿಸ್ಪರ್ಧಿಗಳಾಗಿ ಕರ್ನಾಟಕದ ದಕ್ಷಿಣದಲ್ಲಿ ತಲೆಯೆತ್ತಿದ್ದ ಗಂಗರನ್ನು ಪ್ರೋತ್ಸಾಹಿಸಿ, ಅವರಿಗೆ ಬೆಂಬಲವಾಗಿ ನಿಂತುದನ್ನು ಈ ದೃಷ್ಟಿಯಿಂದ ಗಮನಿಸಿದಲ್ಲಿ ಪಲ್ಲವರ ರಾಜನೀತಿ ಅರ್ಥವಾಗುತ್ತದೆ.

ಪಲ್ಲವರು ಮಯೂರಶರ್ಮನನ್ನು ತಮ್ಮ ಸಾಮಂತನೆಂದು ಒಪ್ಪಿದರೂ ಅವನು

ಅಷ್ಟಕ್ಕೇ ತೃಪ್ತನಾದಂತೆ ತೋರುವುದಿಲ್ಲ. ಚಂದ್ರವಳ್ಳಿಯಲ್ಲಿ ದೊರೆತ ಪ್ರಾಕೃತ ಭಾಷೆಯಲ್ಲಿರುವ ಈತನ ಶಾಸನದಿಂದ ಈತನು ತ್ರೈಕೂಟಕ, ಆಭೀರ, ಪಲ್ಲವ, ಪಾರಿಯಾತ್ರಕ, ಶಕಸ್ಥಾನ, ಮೊಕರಿ, ಪುನ್ನಾಟ ಮತ್ತು ಸಯಿಂದಕ ರಾಜರನ್ನು ಜಯಿಸಿದನೆಂದು ತಿಳಿದುಬರುತ್ತದೆ. ಕರಾವಳಿ ಮತ್ತು ವಿಂಧ್ಯಪರ್ವತಗಳ ನಡುವಣ ಪ್ರದೇಶ ಪಾರಿಯಾತ್ರಕವೆನಿಸಿತ್ತು. ಸಯಿಂದಕರು ಶಿವಮೊಗ್ಗ ಜಿಲ್ಲೆಯ ಸುತ್ತಲಿನ ಭಾಗದಲ್ಲಿ ಆಳುತ್ತಿದ್ದ ಸೇಂದ್ರಕರು. ಪುನ್ನಾಟ ಪರಿಚಿತವೇ. ತ್ರೈಕೂಟವು ಉತ್ತರ ಕೊಂಕಣದ ಭಾಗ. ಇವರು ಮೊದಲು ಆಭೀರರ ಸಾಮಂತರಾಗಿದ್ದರು. ಶಕಸ್ಥಾನ ಹಾಗೂ ಮೊಕರಿಗಳು ಕ್ರಮವಾಗಿ ಉಜ್ಜಯಿನಿ ಹಾಗೂ ರಾಜಾಸ್ಥಾನ ಪ್ರದೇಶಗಳು. ಈ ಎಲ್ಲ ಪ್ರದೇಶಗಳೂ ಮಯೂರಶರ್ಮನ ಸ್ವಾಧೀನವಾದುವೆಂದು ಹೇಳುವುದು ಕಷ್ಟವಾಗುತ್ತದೆ. ಶಾಸನದಲ್ಲಿ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆಯೂ ಇದ್ದಿರಬಹುದು. ಆದರೂ ಇದು ಮಯೂರಶರ್ಮನ ಅಧಿಕಾರಸೂಚಕವಾಗಿದೆ. ಮಳವಳ್ಳಿಯಲ್ಲಿನ ಇನ್ನೊಂದು ಪ್ರಾಕೃತಶಾಸನದ ಮೇಲ್ಭಾಗದಲ್ಲಿ ಚುಟುಕುಲದ ಅರಸನು ನೀಡಿದ ದತ್ತಿಯ ಉಲ್ಲೇಖವಿದ್ದು, ಅದರ ಕೆಳಗೆ ಶಿವಸ್ಕಂದವರ್ಮನು ಹಿಂದೆ ಮಳವಳ್ಳಿ ದೇವರಿಗೆ ಕೊಟ್ಟಿದ್ದ ದತ್ತಿ ಅಂತರಿಸಿದ್ದು ಅದನ್ನು ಕದಂಬರಾಜನು ಪುನರುಜ್ಜೀವನಗೊಳಿಸಿದನೆಂದು ಹೇಳಿದೆ. ಈ ಶಾಸನವೂ ಮಯೂರಶರ್ಮನದೇ ಎಂದು ಹಲವರ ಅಭಿಪ್ರಾಯ. ಇದರಲ್ಲಿ ಸಂದೇಹಕ್ಕೆ ಆಸ್ಪದವಿದೆ.

ಮಯೂರಶರ್ಮನು ಕ್ರಿ.ಶ. ೩೪೫ ರಿಂದ ಸು. ೩೫ ವರ್ಷಗಳ ಕಾಲ ಆಳಿದನು. ಈತನ ಮಗನಾದ ಕಂಗವರ್ಮನು ಸಾಮಂತರಾಜಪೂಜಿತನಾಗಿದ್ದನು. ಮೊಮ್ಮಗ ಭಗೀರಥ, ನಂತರ ಅವನ ಮಗ ರಘು ಇವರು ಕ್ರಮವಾಗಿ ಆಳಿದರು. ರಘುವು ಅನೇಕ ಸಮರಗಳಲ್ಲಿ ಕಾದಿ ರಾಜ್ಯವನ್ನು ನಿಷ್ಕಂಟಕವಾಗಿ ಆಳಿದನು. ಕವಿಯೂ ಕಲಾಕುಶಲನೂ ಪ್ರಜಾಪ್ರಿಯನೂ ಆಗಿದ್ದನೆಂದು ನಂತರದ ಶಾಸನಗಳು ತಿಳಿಸುತ್ತವೆ. ಈ ಮೂವರ ಶಾಸನಗಳಾವುವೂ ದೊರೆತಿಲ್ಲ. ರಘುವಿನ ತಮ್ಮ ಕಾಕುತ್ಸ್ಥವರ್ಮ. ಈತನ ಕಾಲದಲ್ಲಿ ಕದಂಬರಾಜ್ಯ ಪ್ರಸಿದ್ಧಿಯನ್ನು ಹೊಂದಿತು. ಈತನ ಸಮಕಾಲೀನರಾಗಿ ದಖನ್ ಪ್ರದೇಶದಲ್ಲಿ ವಾಕಾಟಕರೂ ಉತ್ತರದಲ್ಲಿ ಗುಪ್ತವಂಶದ ಇಮ್ಮಡಿ ಚಂದ್ರಗುಪ್ತನೂ ಆಳುತ್ತಿದ್ದರು. ವಾಕಾಟಕ ನರೇಂದ್ರಸೇನನು ಕುಂತಲೇಶ್ವರನ ಮಗಳಾದ ಅಜಿತಭಟ್ಟಾರಿಕೆಯನ್ನು ಮದುವೆಯಾಗಿದ್ದನು. ಈ ಕುಂತಲೇಶ್ವರನು ಕಾಕುತ್ಸ್ಥನೇ. ಇವನ ತಾಳಗುಂದ ಶಾಸನದಲ್ಲಿ ಗುಪ್ತರೇ ಮೊದಲಾದ ಪ್ರಸಿದ್ಧರಾದ ಅರಸರು ಈತನೊಂದಿಗೆ ರಕ್ತಸಂಬಂಧ ಬೆಳೆಸಿದರೆಂದು ಹೇಳಿದೆ. ಇವರಲ್ಲಿ ಗುಪ್ತರ ಅರಸನೆಂದರೆ ಸಮಕಾಲೀನನಾದ ಕುಮಾರಗುಪ್ತನ ಮಗನಾದ ಸ್ಕಂದಗುಪ್ತನು ಮತ್ತು ಮಾಂಡಲಿಕರ ನಾಯಕನಾಗಿದ್ದ ಭಟಾರಿ ವಂಶದ ಪಶುಪತಿ ಇನ್ನೊಬ್ಬ ಕದಂಬ ರಾಜಕುಮಾರಿಯನ್ನು ಮದುವೆಯಾಗಿದ್ದವನು. ಅಲ್ಲದೆ ಗಂಗವಂಶದ ಇಮ್ಮಡಿ ಮಾಧವನು ಕಾಕುತ್ಸ್ಥವರ್ಮನ ಅಳಿಯಂದಿರಲ್ಲಿ ಒಬ್ಬನೆಂದು ಶಾಸನಾಧಾರಗಳಿಂದ ಊಹಿಸಲಾಗಿದೆ. ಇದು ಸರಿಯಾದರೆ, ಇವನ ಮಗನಾದ ಅವಿನೀತನು ಕಾಕುತ್ಸ್ಥನ ದೌಹಿತ್ರ.

ಒಮ್ಮೆ ತಾಳಗುಂದಕ್ಕೆ ಭೇಟಿಕೊಟ್ಟ ಕಾಕುತ್ಸ್ಥವರ್ಮನು ಅಲ್ಲಿದ್ದ, ಹಿಂದೆ ಸಾತಕರ್ಣಿ ಮುಂತಾದ ರಾಜರು ಪೂಜಿಸಿದ್ದ, ಈಶ್ವರಾಲಯವನ್ನು ಕಂಡು ಆ ದೇವನನ್ನು ಅರ್ಚಿಸಿ, ಆ ದೇವಾಲಯದ ಸಮೀಪದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂದು ಅಲ್ಲಿನ ಶಾಸನ ತಿಳಿಸುತ್ತದೆ. ಕಾಕುತ್ಸ್ಥವರ್ಮನ ಔರಸಪುತ್ರನಾದ ಶಾಂತಿವರ್ಮನ ಆಜ್ಞಾನುಸಾರವಾಗಿ ಕುಬ್ಜನೆಂಬ ಕವಿ ಈ ಶಾಸನವನ್ನು ಬರಸಿದನೆಂದು ಇದರಲ್ಲಿ ಹೇಳಿದೆ.

ಕಾಕುತ್ಸ್ಥವರ್ಮನಿಗೆ ಶಾಂತಿವರ್ಮ ಮತ್ತು ಕೃಷ್ಣವರ್ಮ (I)ರೆಂಬ ಇಬ್ಬರು ಮಕ್ಕಳಿದ್ದರು. ಇವರಿಬ್ಬರೂ ತಂದೆಯ ಮರಣಾನಂತರ ಸ್ವತಂತ್ರರಾಗಿ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಆಳತೊಡಗಿದರು. ನಂತರದ ಒಂದು ಶತಮಾನದ ಕಾಲ (ಕ್ರಿ.ಶ. ೪೩೦ರಿಂದ ೫೩೦ರ ವರೆಗೆ) ಈ ಎರಡು ಶಾಖೆಗಳವರೂ ಸ್ವತಂತ್ರವಾಗಿ ಆಳುತ್ತಿದ್ದು, ಇಮ್ಮಡಿ ಕೃಷ್ಣವರ್ಮನ ಕಾಲದಲ್ಲಿ ಪುನಃ ಕದಂಬರಾಜ್ಯ ಒಬ್ಬನೇ ಅರಸನ ಅಧೀನಕ್ಕೊಳಪಟ್ಟಿತ್ತು. ಶಾಂತಿವರ್ಮ ಮತ್ತು ಕೃಷ್ಣವರ್ಮರು ಮಲಸಹೋದರರು. ತಾಳಗುಂದದ ಶಾಸನ ಕಾಕುತ್ಸ್ಥವರ್ಮನ ಆಳ್ವಿಕೆಯ ಕಾಲದಲ್ಲಿ ಹುಟ್ಟಿದ್ದರೂ ಅದರಲ್ಲಿ ಶಾಂತಿವರ್ಮನನ್ನು ನೃಪತಿ ಎಂದು ಕರೆದಿರುವುದನ್ನು ನೋಡಿದರೆ, ಬಹುಶಃ ಶಾಂತಿವರ್ಮನು ತಂದೆಯ ಜೀವಿತಕಾಲದಲ್ಲಿಯೇ ತಂದೆಯೊಡನೆ ಕೆಲವು ವರ್ಷಗಳು ರಾಜ್ಯಭಾರ ಮಾಡಿರಬಹುದೆಂದು ಅನಿಸುತ್ತದೆ.

ಕೃಷ್ಣವರ್ಮ (I)ನ ಮಗನಾದ ವಿಷ್ಣುವರ್ಮನ ಶಾಸನದಲ್ಲಿನ ಹೇಳಿಕೆಯೊಂದನ್ನಾಧರಿಸಿ ಈತನನ್ನು ಈತನ ದೊಡ್ಡಪ್ಪನಾದ ಶಾಂತಿವರ್ಮನೂ ಪಲ್ಲವ ಅರಸನೂ ಸಿಂಹಾಸನದಲ್ಲಿ ಕುಳ್ಳಿರಿಸಿದರೆಂದು ಅರ್ಥೈಸಲಾಗಿದೆ. ಕೃಷ್ಣವರ್ಮನು ತನ್ನ ಭ್ರಾತೃವನ್ನು ನಿರ್ಲಕ್ಷಿಸಿ, ರಾಜ್ಯಭಾರಮಾಡಿ ಅಶ್ವಮೇಧಯಾಗ ಮಾಡಿದನೆಂದೂ ತನ್ನ ಹಿರಿಯ ಮಗನಾದ ವಿಷ್ಣುವರ್ಮನನ್ನು ಕಡೆಗಣಿಸಿ, ಕಿರಿಯನಾದ ದೇವವರ್ಮನನ್ನು ಯುವರಾಜನೆಂದು ಆರಿಸಿದನೆಂದೂ ಆದ್ದರಿಂದ ವಿಷ್ಣುವರ್ಮನು ಶಾಂತಿವರ್ಮನ ಮತ್ತು ಪಲ್ಲವ ಅರಸನ ಸಹಾಯವನ್ನು ಕೋರಿದನೆಂದೂ ಹೇಳಿದೆ. ಈ ಪಲ್ಲವನು ಸಿಂಹವರ್ಮನೆಂದೂ ಅವನ ಉರುವಪಲ್ಲೆ ಶಾಸನದಲ್ಲಿ ಉಕ್ತನಾದ ಸೇನಾಪತಿ ವಿಷ್ಣುವರ್ಮನು ಕದಂಬ ರಾಜಕುಮಾರನೆಂದೂ ಗುರುತಿಸಲಾಗಿದೆ. ಆದರೆ ಇವು ಇನ್ನೂ ಖಚಿತವಾಗಬೇಕಾಗಿವೆ. ವಿಷ್ಣುವರ್ಮನ ಬೀರೂರು ಶಾಸನದಲ್ಲಿ ಆತನ ದೊಡ್ಡಪ್ಪನಾದ, ವೈಜಯಂತೀವಿಭೂಷಿತ ಸಮಸ್ತಕರ್ಣಾಟಕದ ಅಧಿಪತಿಯಾದ ಶಾಂತಿವರ್ಮನ ಅಪ್ಪಣೆ ಪಡೆದು ವಿಷ್ಣುವರ್ಮನು ದಾನವೊಂದನ್ನು ಮಾಡಿದನೆಂದಿದೆ.

ಶಾಂತಿವರ್ಮನು ತುಂಗ ಗಂಗರನ್ನು ಎದುರಿಸಬೇಕಾಯಿತೆಂದೂ ಈ ಕದನಗಳಲ್ಲಿ ಯುವರಾಜನಾದ ಮೃಗೇಶವರ್ಮನು ಪ್ರಮುಖಪಾತ್ರ ವಹಿಸಿದನೆಂದೂ ಹೇಳಿದೆ. ಬಹುಶಃ ಅಣ್ಣತಮ್ಮಂದಿರಿಬ್ಬರಲ್ಲೂ ರಾಜ್ಯ ಹಂಚಿಹೋದ ಕಾರಣ, ಗಂಗರೂ ಪಲ್ಲವರೂ ಇವರನ್ನು ಸುಲಭವಾಗಿ ಸೋಲಿಸಬಹುದೆಂದೂಹಿಸಿ ಇವರ ಮೇಲೆ ದಾಳಿಮಾಡಿರ

ಬೇಕು. ಶಾಂತಿವರ್ಮನು ಕ್ರಿ.ಶ. ೪೩೦ರಿಂದ ೪೫೫ರವರೆಗೂ ಆಳಿದ ಬಳಿಕ ಆತನ ಮಗ ಮೃಗೇಶವರ್ಮನು ಪಟ್ಟಕ್ಕೆ ಬಂದನು. ತಂದೆಯ ಕಾಲದಲ್ಲಿಯೇ ಗಂಗ ಪಲ್ಲವರ ವಿರುದ್ಧ ಹೆಣಗಿದ ಈತನು ಈ ಕದನಗಳನ್ನು ಮುಂದುವರಿಸಿದಂತೆ ತೋರುತ್ತದೆ. ಕದಂಬರ ರಾಜ್ಯವಿಸ್ತರಣಾಕಾಂಕ್ಷೆ ಸಹ ಇದಕ್ಕೊಂದು ಕಾರಣವಾಗಿರಬಹುದು. ಪಲಾಶಿಕಾ (ಬೆಳಗಾಂ ಜಿಲ್ಲೆಯ ಹಲಸಿ) ಈಗ ಇವರ ಇನ್ನೊಂದು ನೆಲೆವೀಡಾಯಿತು.

ಮೃಗೇಶವರ್ಮನ ಆಳ್ವಿಕೆಯ ೩ನೆಯ ಹಾಗೂ ೪ನೆಯ ವರ್ಷದ ಶಾಸನಗಳಲ್ಲಿ ಆತನ ಸೈನ್ಯಾಚರಣೆಗಳ ಉಲ್ಲೇಖವಿಲ್ಲ. ಆದರೆ ೭ನೆಯ ವರ್ಷದ ಹುಣಸೂರು ಶಾಸನ ಹಾಗೂ ೮ನೆಯ ವರ್ಷದ ಹಲಸಿ ಶಾಸನಗಳಿಂದ ಹೆಚ್ಚಿನ ವಿವರಗಳು ತಿಳಿದು ಬಂದಿವೆ. ಹಲಸಿ ಶಾಸನದಲ್ಲಿ ಈತನನ್ನು ಪಲ್ಲವಪ್ರಲಯಾನಲನೆಂದು ವರ್ಣಿಸಿದೆ. ಇತ್ತೀಚೆಗೆ ಬನವಾಸಿಯಲ್ಲಿ ದೊರೆತ ಈತನ ಶಾಸನದಲ್ಲಿ ಗಂಗರ ಬಲ ಅನೇಕ ಹಸ್ತ್ಯಶ್ವ ಪದಾತಿಯೋಧರನ್ನೊಳಗೊಂಡಿತ್ತೆಂದೂ ಪಲ್ಲವ ಅರಸನ ಜಯಶ್ರೀಯನ್ನು ಈತನು ಕಸಿದನೆಂದೂ ಹೇಳಿವೆ. ಇದರಿಂದ ಗಂಗರೊಡನೆಯೂ ಪಲ್ಲವರೊಡನೆಯೂ ಮೃಗೇಶನು ಕಾದಿದನೆಂದು ಹೇಳಬಹುದಾದರೂ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

ಸಾಮಂತರಾಜರಾಗಿದ್ದ ಕೇಕಯ ಮನೆತನದ ರಾಜಕುಮಾರಿ ಪ್ರಭಾವತಿ ಈತನ ರಾಣಿ. ಇವರಿಗೆ ಜನಿಸಿದವನೇ ನಂತರ ಆಳಿದ ರವಿವರ್ಮ. ಜ್ಯೇಷ್ಠ ತನಯನೆನಿಸಿಕೊಂಡ ಮೃಗೇಶನಿಗೆ ಕಿರಿಯರಾದ ಸೋದರರಿದ್ದಿರಬೇಕು. ವಿಜಯಶಿವಮಾಂಧಾತೃವರ್ಮನು ಅವರಲ್ಲಿ ಒಬ್ಬನೆಂದು ಹೇಳಲಾಗಿದೆ. ರವಿವರ್ಮ, ಭಾನುವರ್ಮ, ಶಿವರಥ ಈ ಮೂವರೂ ಮೃಗೇಶನ ಮಕ್ಕಳು. ಮೃಗೇಶನ ಬಳಿಕ ಶಿವಮಾಂಧಾತೃವು ಸುಮಾರು ಐದುವರ್ಷಗಳ ಕಾಲ ಆಳಿದನು. ನಂತರ ರವಿವರ್ಮನು ಪ್ರಾಪ್ತವಯಸ್ಕನಾದ ಕಾರಣ ರಾಜ್ಯ ಅವನಿಗೆ ಹಿಂದಕ್ಕೆ ಕೊಡಲ್ಪಟ್ಟಿತ್ತು (ಕ್ರಿ.ಶ. ೪೮೫).

ರವಿವರ್ಮನ ಕಾಲದಲ್ಲಿ ಪಲ್ಲವರೊಡನೆ ಕಾದಾಟಗಳು ಮುಂದುವರಿದಿದ್ದವು. ವಿಷ್ಣುವರ್ಮ ಮೊದಲಾದ ಅರಸರನ್ನು ಕೊಂದ ಈ ಅರಸನು ಕಾಂಚೀಪತಿಯಾದ ಚಂಡದಂಡನನ್ನು ಸಹ ನಿರ್ಮೂಲಗೊಳಿಸಿದನೆಂದು ಶಾಸನಗಳು ಹೇಳಿವೆ. ಇವರಲ್ಲಿ ವಿಷ್ಣುವರ್ಮನು ಮೃಗೇಶನ ಚಿಕ್ಕಪ್ಪನ ಮಗನೂ ತ್ರಿಪರ್ವತರಾಜ್ಯಾಧಿಪತಿಯೂ ಆಗಿದ್ದ ವಿಷ್ಣುವರ್ಮನೆಂದು ಹಲವರು ಊಹಿಸಿದ್ದಾರೆ. ಆದರೆ ಇದು ಸಮರ್ಥನೀಯವಲ್ಲ. ಚಂಡದಂಡನು ಕಾಂಚೀಪತಿ ಎಂದು ಹೇಳಲಾಗಿದೆಯಾಗಿ ಆತನು ಪಲ್ಲವನಾಗಿರಬೇಕು. ವಿಷ್ಣುವರ್ಮನು ಸಹ ಪಲ್ಲವ ವಿಷ್ಣುಗೋಪವರ್ಮನೋ ಅವನ ಸೇನಾಪತಿ ವಿಷ್ಣುವರ್ಮನೋ ಆಗಿರಬಹುದೆಂದು ಡಾ. ಫ್ಲೀಟರು ಸೂಚಿಸಿದ್ದಾರೆ. 'ತುಂಗ' ಎಂಬ ಮಾತಿಗೆ ರಾಷ್ಟ್ರಕೂಟ ಎಂಬ ಅರ್ಥವನ್ನು ಮಾಡಿ ಕದಂಬರು ಪ್ರಾಚೀನ ರಾಷ್ಟ್ರಕೂಟರೊಡನೆ ಕಾದಿದರೆಂದೂ ಈ ರಾಷ್ಟ್ರಕೂಟರು ಮಧ್ಯಪ್ರಾಂತದಲ್ಲಿ ಆಳುತ್ತಿದ್ದ ಮಾನಾಂಕನೆಂಬ ರಾಷ್ಟ್ರಕೂಟ ಅರಸನಿಗೆ ಸಂಬಂಧಿಸಿದವರಾಗಿರಬಹುದೆಂದೂ ಪಂಚಮುಖಿಯವರು ಊಹಿಸಿದ್ದಾರೆ.[6] ಆದರೆ ಇದು ಇನ್ನೂ ವಿವಾದಾಸ್ಪದವಾಗಿಯೇ ಇದೆ.

ಇತ್ತೀಚೆಗೆ ಗುಡ್ನಾಪುರದಲ್ಲಿ ದೊರೆತ ಶಾಸನ ಈ ಅರಸನದೇ. ಇದರಲ್ಲಿ ಈತನು ವಿಷ್ಣುದಾಸ ನೃಪನನ್ನು ಕೊಂದನೆಂದೂ ಅಷ್ಟಾದಶ ಮಾಂಡಲಿಕರ ಪ್ರಭುವಾದನೆಂದೂ ಅಲ್ಲದೆ ಬಾಲರಾಜನೊಬ್ಬನನ್ನು ಮೃತ್ಯುವಶಮಾಡಿದನೆಂದೂ ಹೇಳಿದೆ. ಈ ಬಾಲರಾಜ ಯಾರೆಂಬುದು ತಿಳಿಯದು. ವಿಷ್ಣುದಾಸನು ಮೇಲೆ ಹೇಳಿದ ವಿಷ್ಣುವರ್ಮನೇ ಆಗಿರ ಬಹುದು. ಶಸ್ತ್ರಾಸ್ತ್ರವಿದನಾಗಿದ್ದ ಈ ಅರಸನು ಕುದುರೆಗಳನ್ನೂ ಆನೆಗಳನ್ನೂ ಏರಿ ಅವುಗಳನ್ನು ಸ್ವಾಧೀನಮಾಡಿಕೊಳ್ಳುವುದರಲ್ಲಿ ಶಕ್ತನಾಗಿದ್ದನು. ಗಂಗ, ಪುನ್ನಾಟ, ಕೊಂಗಾಳ್ವ, ಪಾಂಡ್ಯ, ಆಳುಪ ಮುಂತಾದ ಅರಸರು ಇವನ ಸಾಮಂತಿಕೆಯನ್ನು ಒಪ್ಪಿ ಕೊಂಡು ಭೂಮಿಯನ್ನೂ ಸಂಪತ್ತನ್ನೂ ದಂಡಾದಾಯವನ್ನೂ ಇವನ ಆಜ್ಞಾನುಸಾರ ವಾಗಿ ಸಂಗ್ರಹಿಸುತ್ತಿದ್ದರಂತೆ. ಈ ಶಾಸನದಲ್ಲಿ ಆಳುಪರಿಗೆ ಸಂಬಂಧಿಸಿದ ಅತಿಪ್ರಾಚೀನ ಉಲ್ಲೇಖವಿದೆ. ಈ ಮೊದಲು ಇಮ್ಮಡಿ ಪುಲಿಕೇಶಿಯ ಶಾಸನದಲ್ಲಿ ಮೊದಲ ಬಾರಿಗೆ ಆಳುಪರು ಹೆಸರಿಸಲ್ಪಟ್ಟಿದ್ದರು. ಅದರಂತೆಯೇ ಕೊಂಗಾಳ್ವ ಮನೆತನದವರ ಪ್ರಥಮ ಉಲ್ಲೇಖ ಸಹ ಈ ಶಾಸನದಲ್ಲಿದೆ. ಅರಸನು ಕಾಮ ಜಿನಾಲಯವೊಂದನ್ನು ಕಟ್ಟಿಸಿ ಅಲ್ಲಿ ಪೂಜಾಂಗಳಿಗೂ ಉತ್ಸವಗಳ ಆಚರಣೆಗಳಿಗೂ ಭೂಮಿದಾನವನ್ನು ಮಾಡಿದ ನೆಂದು ಶಾಸನ ಹೇಳುತ್ತದೆ. ಕಾಮಜಿನನು ಮನ್ಮಥನೆಂದು ವರ್ಣಿಸಲಾದ ಬಾಹುಬಲಿ ಯೆಂದೂ ಈ ಕಾಮ ಜಿನಾಲಯವೆಂಬುದು ಬಾಹುಬಲಿಗಾಗಿ ಕಟ್ಟಲಾದ ಆಲಯ ವೆಂದೂ ಊಹಿಸಲಾಗಿದೆ.[7]

ರವಿವರ್ಮನು ಸುಮಾರು ೩೫ ವರ್ಷಗಳ ಕಾಲ ಆಳಿದ ಬಳಿಕ ಕದಂಬರಾಜ್ಯ ಆತನ ಮಗನಾದ ಹರಿವರ್ಮನಿಗೆ ದಕ್ಕಿತು. ಸೇಂದ್ರಕವಂಶದ ಭಾನುಶಕ್ತಿಯು ಹರಿವರ್ಮನ ಸಾಮಂತರಲ್ಲೊಬ್ಬನಾಗಿದ್ದನು. ಮಕ್ಕಳಿಲ್ಲದ ಹರಿವರ್ಮನು ತನ್ನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ತ್ರಿಪರ್ವತದಿಂದ ರಾಜ್ಯವಾಳುತ್ತಿದ್ದ ಈ ಮನೆತನದ ಸೋದರಸಂಬಂಧಿ ಯಾದ ಇಮ್ಮಡಿ ಕೃಷ್ಣವರ್ಮನ ದಾಳಿಯನ್ನೆದುರಿಸಬೇಕಾಯಿತು. ಈ ಸಂದರ್ಭದಲ್ಲಿ ಹರಿವರ್ಮನು ಸೋತನು. ಕೃಷ್ಣವರ್ಮನು ಬನವಾಸಿಯನ್ನು ಆಕ್ರಮಿಸಿದನು.

ಇಮ್ಮಡಿ ಕೃಷ್ಣವರ್ಮನ ಶಾಖೆಯ ಮೊದಲ ಅರಸನು ಅವನ ಮುತ್ತಜ್ಜನಾದ ಕೃಷ್ಣ ವರ್ಮನು. ಅನಂತರ ಕದಂಬರಾಜ್ಯ ಇಬ್ಭಾಗವಾಗಿ ಒಡೆದು ತ್ರಿಪರ್ವತದಿಂದ ಈ ಕೃಷ್ಣವರ್ಮನು ಆಳತೊಡಗಿದನೆಂದು ಮೇಲೆ ಹೇಳಿದೆ. ಕ್ರಿ.ಶ. ೪೩೦ರಿಂದ ೪೬೦ರ ವರೆಗೆ ಆಳಿದ ಈತನು ಪಲ್ಲವರ ವಿರುದ್ಧ ಸೆಣಸಿ ನಣಕ್ಕಾಸ ಪಲ್ಲವನೆಂಬವನನ್ನು ಸೋಲಿಸಿದ ನೆಂದು ತಿಳಿದಿದೆ. ಈ ನಣಕ್ಕಾಸ ಪಲ್ಲವ ಯಾರು—ಎಂಬುದು ಇನ್ನೂ ಖಚಿತವಾಗಿ ತಿಳಿದುಬಂದಿಲ್ಲ. ಆದರೆ ಈತನು ಕಾಂಚೀಪುರದಲ್ಲಿ ಆಳುತ್ತಿದ್ದ ಪಲ್ಲವ ಅರಸಂಗೆ ಸಂಬಂಧಿಸಿದವನಾಗಿರಬೇಕೆಂದು ಮಾತ್ರ ಊಹಿಸಲಾಗಿದೆ. ಇವರ ನಡುವಣ ಕದನದಲ್ಲಿ ಶಿವಸ್ಕಂದವರ್ಮನೆಂಬ ಕೇಕಯ ಮನೆತನದ ಮಾಂಡಲಿಕನು ಮರಣವನ್ನಪ್ಪಿದನು. ಈತನು ಕೃಷ್ಣವರ್ಮನ ಪತ್ನಿಯ ಸಂಬಂಧಿಯಾಗಿರಬೇಕು. ಇದರಂತೆಯೇ ಕೃಷ್ಣ ವರ್ಮನು ಎದುರಿಸಿ ಸೋಲಿಸಿದ ಇನ್ನೊಬ್ಬ ಶತ್ರು ನಾಗಕುಲದವನು. ಈ ನಾಗರು

ಸೇಂದ್ರಕರೇ ಆಗಿರಬಹುದು. ಹರಿವರ್ಮನಿಗೆ ಈ ಮನೆತನದ ಭಾನುಶಕ್ತಿ ಒಬ್ಬ ಮಾಂಡಲಿಕನಾಗಿದ್ದುದನ್ನು ಗಮನಿಸಿದ್ದೇವೆ; ಬಹುಶಃ ಈತನ ಪೂರ್ವಜನೊಬ್ಬ ಕೃಷ್ಣವರ್ಮನ ವಿರುದ್ಧ ದಂಗೆಯೆದ್ದು ಅವನಿಂದ ಸೋಲಿಸಲ್ಪಟ್ಟಿರಬೇಕು.

ಕೃಷ್ಣವರ್ಮನ ಸೋದರಿಯೊಬ್ಬಳನ್ನು ಗಂಗವಂಶದ ಮಾಧವನಿಗೆ (III) ಮದುವೆ ಮಾಡಿಕೊಡಲಾಗಿತ್ತು. ವಿಷ್ಣುವರ್ಮ ಹಾಗೂ ದೇವವರ್ಮರು ಕೃಷ್ಣವರ್ಮನ ಮಕ್ಕಳು. ಕಿರಿಯನಾದ ದೇವವರ್ಮನು ಯುವರಾಜನೆನಿಸಿಕೊಂಡಿದ್ದನು. ಅವನ ಹೆಸರಿನಲ್ಲಿ ನೀಡಲಾದ ದೇವಗಿರಿ ತಾಮ್ರಶಾಸನದಲ್ಲಿ ಕೃಷ್ಣವರ್ಮನು ಅಶ್ವಮೇಧಯಾಗವನ್ನು ಮಾಡಿದನೆಂದು ಹೇಳಿದೆ. ಈ ವಿಷಯ ವಿಷ್ಣುವರ್ಮನ ಮತ್ತು ಇಮ್ಮಡಿ ಕೃಷ್ಣವರ್ಮನ ಶಾಸನಗಳಿಂದಲೂ ತಿಳಿದಿವೆ. ವಿಷ್ಣುವರ್ಮನು ಕೃಷ್ಣವರ್ಮನ ಹಿರಿಯ ಮಗನೆಂದು ಶಾಸನದಲ್ಲಿ ಸ್ಪಷ್ಟವಾಗಿ ಹೇಳಿದೆಯಾಗಿ, ಕಿರಿಯನಾದ ದೇವವರ್ಮನು ಯುವರಾಜನಾದುದು ಹೇಗೆ ಎಂಬುದು ಅರ್ಥವಾಗುವುದಿಲ್ಲ. ಮೇಲೆಹೇಳಿದಂತೆ ವಿಷ್ಣುವರ್ಮನು ತನ್ನ ಹಕ್ಕನ್ನು ಸ್ಥಾಪಿಸಲು ಪಲ್ಲವರ ನೆರವನ್ನು ಪಡೆದನೆಂದು ಊಹಿಸಲಾಗಿದೆ.

ಕೃಷ್ಣವರ್ಮನ ನಂತರ ಕ್ರಮವಾಗಿ ವಿಷ್ಣುವರ್ಮ, ಅವನ ಮಗ ಸಿಂಹವರ್ಮ ಮತ್ತು ಆತನ ಮಗ ಇಮ್ಮಡಿ ಕೃಷ್ಣವರ್ಮರು ಆಳಿದರು. ಇವರಲ್ಲಿ ಕೊನೆಯವನು ವೈಜಯಂತಿ(ಬನವಾಸಿ)ಯಲ್ಲಿ ಆಳುತ್ತಿದ್ದ ದಾಯಾದಿಯಾದ ಹರಿವರ್ಮನ ವಿರುದ್ಧ ದಂಡೆತ್ತಿ ಅವನನ್ನು ಸೋಲಿಸಿ ಬನವಾಸಿಯನ್ನು ಆಕ್ರಮಿಸಿದನು. ಇದರ ಪರಿಣಾಮವಾಗಿ ಕದಂಬರಾಜ್ಯ ಪುನಃ ಒಂದುಗೂಡಿತು. ಈ ವಿಜಯ ಕ್ರಿ.ಶ. ಸು. ೫೪೫–೫೬೫ರ ನಡುವೆ ಲಭಿಸಿರಬೇಕೆಂದು ಈ ಮೊದಲು ಊಹಿಸಲಾಗಿತ್ತು; ಆದರೆ ಇದು ಕ್ರಿ.ಶ.ಸು. ೫೩೦ರ ವೇಳೆಗೆ ಆಗಿರಬಹುದೆಂದು ಈಗ ಹೇಳಬಹುದು. ಇದಾದ ನಂತರ ಸು. ಹತ್ತು ವರ್ಷಗಳ ಕಾಲ ಕೃಷ್ಣವರ್ಮನು ಆಳಿದನು.

ಇವನಿಗೆ ಅಜವರ್ಮ ರವಿವರ್ಮರೆಂಬ ಇಬ್ಬರು ಮಕ್ಕಳಿದ್ದರು. ಅಜವರ್ಮನು ತಂದೆಯ ರಾಜ್ಯಕ್ಕೆ ಉತ್ತರಾಧಿಕಾರಿಯಾದನು. ಇವನ ಮಗ ಭೋಗಿವರ್ಮ. ಆದರೆ ಈ ಇಬ್ಬರು ಆಳುವ ವೇಳೆಗೆ ಕದಂಬರಾಜ್ಯ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದ್ದು, ಇವರು ಕೇವಲ ಸಾಮಂತರಾಗಿ ಆಳುತ್ತಿದ್ದರೆನ್ನಬೇಕು. ಕ್ರಿ.ಶ. ೫೪೦ರ ಸುಮಾರಿಗೆ ತಲೆಯೆತ್ತಿದ್ದ ಚಾಲುಕ್ಯರ ಒಂದನೆಯ ಪುಲಿಕೇಶಿಯು ಚಾಲುಕ್ಯ ರಾಜ್ಯವನ್ನು ಸ್ಥಾಪಿಸಿ ಬಾದಾಮಿಯಲ್ಲಿ ಅಭೇದ್ಯವಾದ ಕೋಟೆಯನ್ನು ಕಟ್ಟಿಸಿದನು. ಇದನ್ನು ತಿಳಿಸುವ ಬಾದಾಮಿಯ ಶಾಸನದ ಕಾಲ ಕ್ರಿ.ಶ. ೫೪೩. ಶಾಸನದಲ್ಲಿ ಈತನು ಅಶ್ವಮೇಧಾದಿ ಯಜ್ಞಗಳನ್ನು ಮಾಡಿದನೆಂದು ಹೇಳಿರುವ ಕಾರಣ, ಇವನು ಕದಂಬರನ್ನೂ ಇತರ ಶತ್ರುಗಳನ್ನೂ ಸೋಲಿಸಿದ ಬಳಿಕ ಮಾಡಿದ ಯಾಗವಾಗಿರಬೇಕು ಅದು. ಕದಂಬರನ್ನು ಚಾಲುಕ್ಯರು ಸೋಲಿಸಿದರೆನ್ನಲು ನೇರವಾದ ಯಾವ ಆಧಾರಗಳೂ ಇಲ್ಲ.

ಭೋಗಿವರ್ಮನೊಂದಿಗೆ ಕದಂಬರ ಆಳಿಕೆ ಮುಗಿಯುತ್ತದೆ. ಆದರೂ ಈ ಮನೆತನಕ್ಕೆ ಸೇರಿದ ಹಲವರು ಅಲ್ಲಲ್ಲಿ ಸಣ್ಣ ಸಣ್ಣ ಪಾಳೆಯಗಳನ್ನು ರಚಿಸಿಕೊಂಡು ಅರಸಂಗೆ

ಕಿರುಕುಳವನ್ನು ಕೊಡುತ್ತಿದ್ದಂತೆ ತೋರುತ್ತದೆ. ಚಾಲುಕ್ಯ ಕೀರ್ತಿವರ್ಮ, ಮಂಗಲೇಶ ಇಮ್ಮಡಿ ಪುಲಕೇಶಿಗಳು ಸಹ ಮೇಲಿಂದ ಮೇಲೆ ಕದಂಬರ ವಿರುದ್ಧ ದಂಡೆತ್ತಿ ಅವರನ್ನು ಸೋಲಿಸಿದರೆಂದು ಅವರ ಶಾಸನಗಳು ಹೇಳಿವೆ. ಇದು ಕದಂಬರು ಸ್ವಾತಂತ್ರ್ಯಕ್ಕಾಗಿ ಮಾಡುತ್ತಿದ್ದ ಪ್ರಯತ್ನಗಳ ಸೂಚಕವೆನ್ನಬಹುದು. ಭೋಗಿವರ್ಮನಿಗೆ ವಿಷ್ಣುವರ್ಮನೆಂಬ ಮಗನೊಬ್ಬನಿದ್ದುದು ತಗರೆ ಶಾಸನದಿಂದ ತಿಳಿದರೂ ಅವನ ಗತಿ ಏನಾಯಿತು ಎಂಬುದು ತಿಳಿದಿಲ್ಲ. ಕುಮಾರವರ್ಮ ಮಹಾರಾಜನ ಮಗನಾದ ಮಾಂಧಾತರಾಜನು ಉಚ್ಚಂಗಿಯಲ್ಲಿ ಆಳುತ್ತಿದ್ದ ಇನ್ನೊಬ್ಬ ಕದಂಬ. ಕದಂಬ ಕುಲದ ದಾಮೋದರನೆಂಬವನ ಉಲ್ಲೇಖ ಒಂದು ಶಾಸನದಲ್ಲಿದೆ. ಇನ್ನೊಬ್ಬ, ಮಧುವರ್ಮನ ಹೆಸರೂ ಲಭ್ಯವಿದೆ. ಆದರೆ ಇವರ ಸಂಬಂಧವಾಗಲಿ, ಸಾಧನೆಗಳಾಗಲಿ ಅಗೋಚರವಾಗಿಯೇ ಉಳಿದಿವೆ. ಚಾಲುಕ್ಯರು ಎದುರಿಸಿದ ಕದಂಬ ಅರಸರಲ್ಲಿ ಇವರೂ ಸೇರಿರಬಹುದೇನೋ?

ಸು. ಎರಡು ಶತಮಾನಗಳಿಗೂ ಹೆಚ್ಚಿನ ಕಾಲ ಆಳಿದ ಕದಂಬ ವಂಶದ ರಾಜ್ಯವು ಈಗಿನ ಬೆಳಗಾಂ, ಕಾರವಾರ, ಉತ್ತರ ಕನ್ನಡ, ಶಿವಮೊಗ್ಗ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನೊಳಗೊಂಡಿತ್ತು. ಕದಂಬರು ಹಿಂದು ಹಾಗೂ ಜೈನಧರ್ಮಗಳಿಗೆ ಸಮಾನವಾದ ಆಶ್ರಯವನ್ನು ನೀಡಿದ್ದರು. ಗಂಗರು ಸ್ವತಃ ಜೈನಧರ್ಮಾವಲಂಬಿಗಳಾಗಿದ್ದರೂ ಅನೇಕ ಬ್ರಹ್ಮದೇಯ ದಾನಗಳನ್ನು ಮಾಡಿರುವುದು ಅವರ ಶಾಸನಗಳಿಂದ ಕಂಡುಬಂದಿದೆ. ಕದಂಬ ಕೃಷ್ಣವರ್ಮನು ಅಶ್ವಮೇಧಯಾಗ ಮಾಡಿದುದು ಅವನ ವೈದಿಕಧರ್ಮಶ್ರದ್ಧೆಗೆ ಸಾಕ್ಷಿ. ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ, ಅಹರಿಷ್ಟಿ ಮೊದಲಾದ ಸಂಘಗಳು ಇದ್ದುದು ಕಂಡುಬರುತ್ತದೆ. ಬಂಧುಷೇಣ, ವಾರಿಷೇಣ, ಧರ್ಮನಂದಿ ಮುಂತಾದವರು ಅರಸರಿಂದ ಪ್ರೋತ್ಸಾಹಿತರಾಗಿದ್ದರು.

ಈ ಕಾಲದ ಕನ್ನಡ ಸಾಹಿತ್ಯವನ್ನು ಕುರಿತ ಹೆಚ್ಚಿನ ವಿವರಗಳು ತಿಳಿದಿಲ್ಲ. ಪ್ರಾಚೀನತಮ ಕನ್ನಡ ಶಾಸನವೆನಿಸಿದ ಹಲ್ಮಿಡಿ ಶಾಸನವು ಕದಂಬ ಕಾಕುತ್ಸ್ಥವರ್ಮನದೆಂದು ಹಲವರು ಭಾವಿಸಿದ್ದಾರೆ. ಆದರೆ ಈ ಕಾಲದಲ್ಲಿ ಹುಟ್ಟಿದ ಅನೇಕ ಶಾಸನಗಳು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿವೆ. ಮಯೂರಶರ್ಮನವೆನ್ನಲಾದ ಚಂದ್ರವಳ್ಳಿಯ ಶಾಸನ ಪ್ರಾಕೃತ ಭಾಷೆಯಲ್ಲಿದೆ. ಪ್ರಾಕೃತ ಭಾಷೆಗೆ ಹೆಚ್ಚಿನ ಮಟ್ಟಿಗೆ ಪ್ರೋತ್ಸಾಹ ದೊರೆತುದು ಜೈನಧರ್ಮೀಯರಿಂದ. ಅವರು ಮೊದಲು ತಮ್ಮ ಗ್ರಂಥಗಳನ್ನು ರಚಿಸಿದುದು ಆ ಭಾಷೆಯಲ್ಲಿಯೇ. ಅನಂತರದಲ್ಲಿ ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಅವರ ಕೊಡುಗೆ ಅಪಾರವಾಗಿ ಸಂದಿದೆ.

ತಾಳಗುಂದ ಶಾಸನದ ಕರ್ತೃ ಕುಬ್ಜನೆಂಬ ಕವಿ. ಮಹಾಕಾವ್ಯಗಳ ಭಾಷೆಯೂ ಅಲಂಕಾರಗಳೂ ವೃತ್ತಗಳೂ ಈ ಶಾಸನದಲ್ಲಿ ಕಂಡುಬಂದಿವೆ. ಶಾಸನಗಳಲ್ಲಿ ಇತರ ಸಾಹಿತಿಗಳ, ಅವರ ಕೃತಿಗಳ ಉಲ್ಲೇಖಗಳಿದ್ದರೂ ಆ ಕೃತಿಗಳು ನಮಗೆ ಲಭ್ಯವಾಗದೇ ಇರುವುದು ದುರದೃಷ್ಟಕರ.

ಕದಂಬರ ಕೊನೆಯ ಅರಸನಾದ ಇಮ್ಮಡಿ ಕೃಷ್ಣವರ್ಮನನ್ನು ಚಾಲುಕ್ಯ ಪುಲಕೇಶಿಯು

ಸೋಲಿಸಿರಬಹುದು. ಪುಲಕೇಶಿಯ ಪೂರ್ವಜರು ಬಹುಶಃ ಕದಂಬರ ಅಧೀನದಲ್ಲಿ ಅಧಿಕಾರಿಗಳೋ ಸಾಮಂತರೋ ಆಗಿದ್ದಿರಬಹುದು. ಕದಂಬರ ಶಕ್ತಿ ಕುಸಿಯುತ್ತಿದ್ದುದನ್ನು ಕಂಡುಕೊಂಡ ಪುಲಕೇಶಿ ಸೂಕ್ತ ಸಮಯದಲ್ಲಿ ಕದಂಬರನ್ನು ಬದಿಗೊತ್ತಿ ಸ್ವತಂತ್ರ ರಾಜ್ಯವೊಂದನ್ನು ಕಟ್ಟಿದನು. ಈ ರಾಜ್ಯ ಕರ್ನಾಟಕದಲ್ಲಿ ಇದುವರೆಗೆ ಆಳಿದ ಎರಡು ಅರಸುಮನೆತನಗಳಿಗಿಂತ ಹೆಚ್ಚು ಸತ್ತ್ವಶಾಲಿಯಾಗಿದ್ದು ತನ್ನ ಕ್ಷೇತ್ರವನ್ನು ವಿಸ್ತರಿಸಿಕೊಂಡಿತು. ಉತ್ತರದ ನರ್ಮದೆಯಿಂದ ದಕ್ಷಿಣದ ಕಾವೇರಿವರೆಗೆ ಕನ್ನಡಿಗರು ಅಜೇಯರಾಗಿ ಮೆರೆದರು. ತುಂಗಭದ್ರೆಯ ದಕ್ಷಿಣಕ್ಕೆ ಗಂಗರು ಇನ್ನೂ ಅಧಿಕಾರದಲ್ಲಿದ್ದ ತಮ್ಮ ರಾಜ್ಯವನ್ನು ಅಷ್ಟಕ್ಕೇ ಸೀಮಿತಗೊಳಿಸಿಕೊಂಡಿದ್ದರು. ಆಗಿಂದಾಗ್ಗೆ ಇವರು ಚಾಲುಕ್ಯರ ವಿರುದ್ಧ ಕಾದಿದರೂ ಅವರನ್ನು ಸೋಲಿಸಲಾಗದೆ ಅವರೊಡನೆ ಮಿತ್ರಭಾವದಿಂದ ತಮ್ಮ ಸಂಬಂಧವನ್ನು ಬೆಳಸಿದರು. ಇದರಲ್ಲಿ ಇಬ್ಬರ ಹಿತವೂ ಅಡಗಿತ್ತು. ಹೆಚ್ಚು ಶಕ್ತಿಯುತರಾದರೂ ಚಾಲುಕ್ಯರು ಗಂಗರನ್ನು ಅನುನಯದಿಂದ ಕಂಡರು. ಆದರೂ ಒಮ್ಮೊಮ್ಮೆ ತಲೆಯೆತ್ತುತ್ತಿದ್ದ ಗಂಗರನ್ನು ಅವರು ಹತೋಟಿಯಲ್ಲಿಟ್ಟುಕೊಳ್ಳಬೇಕಾಗಿತ್ತು. ಆದರೆ ಇದು ಆರಂಭದ ದೆಸೆಯಲ್ಲಿ. ತದನಂತರ ಗಂಗರು ಚಾಲುಕ್ಯರಿಗೆ ವಿಧೇಯರಾದ ಸಾಮಂತರೆನಿಸಿದರು.

ಗಂಗರ ಆಳಿಕೆಯ ಕಾಲ ೬ ಶತಮಾನಗಳಿಗೂ ಮೀರಿದ್ದು. ಈ ದೀರ್ಘಾವಧಿಯಲ್ಲಿ ಅವರು ಸ್ವತಂತ್ರರಾಗಿ ಆಳಿದುದು ದುರ್ವಿನೀತನ ಆಳಿಕೆಯ ಕೊನೆಯವರೆಗೆ ಮಾತ್ರ. ಅನಂತರ ಅವರು ಚಾಲುಕ್ಯರಿಗೆ ಸಾಮಂತರಾದರು. ಶ್ರೀಪುರುಷ ಮತ್ತು ಇಮ್ಮಡಿ ಶಿವಮಾರರು ಚಾಲುಕ್ಯರ ನಂತರ ಅವರ ಉತ್ತರಾಧಿಕಾರಿಗಳಾದ ರಾಷ್ಟ್ರಕೂಟರ ಸಾಮಂತಿಕೆಯನ್ನು ಒಪ್ಪದೆ ಅವರ ವಿರುದ್ಧ ಹೋರಾಡಿದರು. ಆದರೆ ಹತ್ತನೆಯ ಶತಮಾನದ ಆರಂಭದಿಂದ ಇವರು ರಾಷ್ಟ್ರಕೂಟರ ಬೆಂಬಲಿಗರಾದರು. ಇವುಗಳನ್ನು ಹಿಂದೆ ವಿವರಿಸಲಾಗಿದೆ.

## ಬಾದಾಮಿಯ ಚಾಲುಕ್ಯರು

ಕ್ರಿ.ಶ. ೬ನೆಯ ಶತಮಾನ ಕರ್ಣಾಟಕದ ಇತಿಹಾಸದಲ್ಲಿ ಒಂದು ನೂತನ ಅಧ್ಯಾಯಕ್ಕೆ ನಾಂದಿಯಾಯಿತು ಆ ಶತಮಾನದ ಆರಂಭದಲ್ಲಿ ಹಿರಿದಾದ, ಶಕ್ತಿಯುತವಾದ ರಾಜ್ಯವೊಂದು ಹುಟ್ಟಿಕೊಂಡಿತು. ಕನ್ನಡದ ಜನ ಅಂದಿನಿಂದ ಒಂದುಗೂಡಿದರು. ಕರ್ಣಾಟಕದ ಸಾಹಿತ್ಯ, ಸಂಸ್ಕೃತಿ ಹಾಗೂ ಕಲೆಗಳು ಕೀರ್ತಿಶಿಖರವನ್ನೇರಿದುವು.

ಚಾಲುಕ್ಯ ವಂಶದ ಗನೆಯ ಪುಲಕೇಶಿ ಇಮ್ಮಡಿ ಕೃಷ್ಣವರ್ಮನನ್ನು ಸೋಲಿಸಿ ಚಾಲುಕ್ಯ ರಾಜ್ಯವನ್ನು ಸ್ಥಾಪಿಸಿದನೆಂದು ಹೇಳಿದೆ. ಇವನ ಮತ್ತು ಇವನ ನಂತರ ಆಳಿದ ಇವನ ವಂಶಸ್ಥರ ರಾಜಧಾನಿ ಬಾದಾಮಿಯಾದ್ದರಿಂದ ಈ ಅರಸರನ್ನು ಇತಿಹಾಸದಲ್ಲಿ 'ಬಾದಾಮಿಯ ಚಾಲುಕ್ಯರು' ಎಂದು ಕರೆಯಲಾಗಿದೆ. 'ಚಾಲುಕ್ಯ' ಎಂಬ ಹೆಸರನ್ನು ಕುರಿತು ಕೆಲವು ವಿವೇಚನೆಗಳನ್ನಿಲ್ಲಿ ಮಾಡಬಹುದು : ಬಾದಾಮಿಯಲ್ಲಿ ಆಳಿದ ಇವರ

ಹೆಸರನ್ನು ಚಲುಕ್ಯ ಎಂದೇ ಶಾಸನಗಳಲ್ಲಿ ಸಾಮಾನ್ಯವಾಗಿ ಕರೆಯಲಾಗಿದೆ; ರಾಷ್ಟ್ರಕೂಟರ ನಂತರ ಕಲ್ಯಾಣದಲ್ಲಿ ಆಳಿದವರನ್ನು ಚಾಲುಕ್ಯರೆಂದು ಹೆಸರಿಸಲಾಗಿದೆ. ಬಹಳ ಹಿಂದೆಯೇ ಡಾ. ಫ್ಲೀಟ್ ಈ ವಿಷಯವನ್ನು ಪ್ರಸ್ತಾಪಿಸಿ, ಬಾದಾಮಿಯಲ್ಲಿ ಆಳಿದ ಈ ಮನೆತನದ ಮೊದಲ ಅರಸರನ್ನು ಚಲುಕ್ಯರೆಂದೇ ಕರೆಯಬೇಕೆಂದು ಹೇಳಿದ್ದಾರೆ.

ಚಾಲುಕ್ಯ ಎಂಬ ಹೆಸರು ಚಳ್ಕಿ, ಚಳುಕಿ, ಚಳುಕ್ಯ, ಚಬುಕ್ಯ, ಚಲುಕ್ಯ, ಚಾಳುಕ್ಯ ಮುಂತಾದ ರೂಪಗಳಲ್ಲಿಯೂ ಕಂಡುಬರುತ್ತದೆ. ಇವುಗಳ ಅರ್ಥವೇನು ಎಂಬುದು ಸ್ಪಷ್ಟವಾಗಿಲ್ಲ. ಇದೊಂದು ವ್ಯಕ್ತಿನಾಮವಾಗಿರಬಹುದು ಅಥವಾ ದ್ರಾವಿಡರ ಒಂದು ಪಂಗಡದ ಅಥವಾ ಜನಾಂಗದ ಹೆಸರಾಗಿರಬಹುದು. ಕ್ರಿ.ಶ. ೩ನೆಯ ಶತಮಾನಕ್ಕೆ ಸೇರಿದ, ನಾಗಾರ್ಜುನಿಕೊಂಡದಲ್ಲಿ ದೊರೆತ, ಶಾಸನವೊಂದರಲ್ಲಿ ಖಂದಚಲಿಕಿ ರೆಮ್ಮಣಕನೆಂಬ ಹೆಸರು ಕಂಡುಬಂದಿದೆ. ಇವನಿಗೂ ಚಾಲುಕ್ಯರಿಗೂ ನಡುವೆ ಯಾವ ಸಂಬಂಧವನ್ನೂ ಕಲ್ಪಿಸಲಾಗದಾದರೂ, ಆ ಹೆಸರಿನ ಪ್ರಾಚೀನ ರೂಪವಿದು ಎಂಬಷ್ಟನ್ನು ಮಾತ್ರ ಹೇಳಬಹುದು.

೧೧ನೆಯ ಶತಮಾನದಲ್ಲಿ ಮತ್ತು ನಂತರ ಹುಟ್ಟಿದ ಶಾಸನಗಳು ಈ ಹೆಸರಿನ ವ್ಯುತ್ಪತ್ತಿಯನ್ನು ಕುರಿತು ಹಲವಾರು ಕತೆಗಳನ್ನೇ ಹೆಣೆದಿವೆ. 'ಚುಲುಕ' ಎಂಬ ಸಂಸ್ಕೃತ ಪದದಿಂದ ಚಲುಕ್ಯ, ಚಾಲುಕ್ಯ ಉದ್ಭವಿಸಿತೆಂದು ಒಂದು ಹೇಳಿಕೆ. 'ಚುಲುಕ' ಎಂದರೆ ಎರಡು ಅಂಗೈಗಳನ್ನೂ ಕೂಡಿಸಿದಾಗ ಉಂಟಾಗುವ ಬೊಗಸೆ. ಬಿಲ್ಹಣಕವಿ ವಿರಚಿತ 'ವಿಕ್ರಮಾಂಕದೇವಚರಿತ'ವೆಂಬ ಐತಿಹಾಸಿಕ ಕಾವ್ಯದಲ್ಲಿ ಆತನು ಈ ಕುರಿತ ಒಂದು ಕತೆಯನ್ನು ಹೇಳಿದ್ದಾನೆ: ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಸಂರಕ್ಷಿಸಲು ನಾಡಿಗೆ ಒಬ್ಬ ಮಹಾಪುರುಷನ ಆವಶ್ಯಕತೆ ಇದೆ—ಎಂಬ ಕಾರಣದಿಂದ ಅಂತಹ ಒಬ್ಬ ಪುರುಷನನ್ನು ಸೃಷ್ಟಿಸಬೇಕೆಂದು ಇಂದ್ರನು ಬ್ರಹ್ಮನನ್ನು ಪ್ರಾರ್ಥಿಸಿದ. ಇದಕ್ಕೆ ಒಪ್ಪಿದ ಬ್ರಹ್ಮನು ಸಂಧ್ಯಾಕಾಲದಲ್ಲಿ ಅರ್ಘ್ಯವನ್ನು ಬಿಡುವಾಗ ತನ್ನ ಚುಲುಕದಲ್ಲಿದ್ದ ನೀರನ್ನು ದೃಷ್ಟಿಸಿದ. ಆಗ ಆ ಬೊಗಸೆಯಿಂದ ವೀರನೊಬ್ಬನು ಉದಯಿಸಿದ. ಚುಲುಕದಿಂದ ಬಂದವನಾದುದರಿಂದ ಇವನೇ ಚಲುಕ್ಯ, ಚಾಲುಕ್ಯನೆನಿಸಿಕೊಂಡನು.

ಇದೇ ಕಾಲದ ಶಾಸನಗಳಲ್ಲಿ ಇವರನ್ನು ಕುರಿತು ಇನ್ನೊಂದು ಹೇಳಿಕೆ ಇದೆ. ಅದರಂತೆ ಇವರು ಉತ್ತರ ಭಾರತದ ಪವಿತ್ರ ಕ್ಷೇತ್ರವಾದ ಅಯೋಧ್ಯೆಯಿಂದ ದಕ್ಷಿಣಕ್ಕೆ ಬಂದವರು. ಅಯೋಧ್ಯೆಯಲ್ಲಿ ಈ ವಂಶದ ೫೯ ಮಂದಿ ಅರಸರು ಆಳಿದರು. ನಂತರ ಇವರು ದಕ್ಷಿಣಕ್ಕೆ ಸರಿದರು. ಆಗ ಇನ್ನೂ ೧೬ ಅರಸರು ದಕ್ಷಿಣಾಪಥದಲ್ಲಿ ಆಳಿದರು. ನಂತರ ಸ್ವಲ್ಪ ಕಾಲ ಇವರು ಸತ್ತ್ವಹೀನರಾಗಿದ್ದರು. ಈ ವಂಶದ ಜಯಸಿಂಹನೆಂಬುವನು ಪುನಃ ಬಲಸಂವರ್ಧನೆ ಮಾಡಿಕೊಂಡು ರಾಷ್ಟ್ರಕೂಟ ಮನೆತನದ ಕೃಷ್ಣನ ಮಗನಾದ ಇಂದ್ರನನ್ನು ಸೋಲಿಸಿ ಚಾಲುಕ್ಯರಾಜ್ಯ ಸ್ಥಾಪನೆಗೆ ಕಾರಣನಾದನು—ಎಂಬುದು ಈ ಹೇಳಿಕೆಯ ಸಾರಾಂಶ. ಆದರೆ ಈ ಚಾಲುಕ್ಯರು ಸೋಲಿಸಿದ ರಾಷ್ಟ್ರಕೂಟರು ಯಾರು ಎಂಬುದು ತಿಳಿಯದು. ಅಂತಹವರಾರೂ ಕರ್ನಾಟಕದಲ್ಲಿ ಈ ಕಾಲದಲ್ಲಿ ಕಂಡುಬಂದಿಲ್ಲ.

ಜಯಸಿಂಹನಿಗೆ ಹಿಂದೆ ಕೆಲವು ಕಾಲ ಚಾಲುಕ್ಯರು ಸತ್ತ್ವಹೀನರಾಗಿದ್ದು ಅದಕ್ಕೂ ಮೊದಲು ೧೬ ಜನ ದಕ್ಷಿಣಾಪಥದಲ್ಲಿ ಆಳಿದರೆಂಬ ಮಾತನ್ನು ಗಮನಿಸಿದಾಗ, ಮೊದಲನೆಯ ಜಯಸಿಂಹನೆಂಬವನು ಪುಲಕೇಶಿಯ ತಾತನಾಗಿದ್ದು, ಅವನು ಸುಮಾರು ಕ್ರಿ.ಶ. ೫೦೦ರಿಂದ ೫೨೦ರವರೆಗೆ ಆಳಿದನೆಂದೂ ಅವನಿಗೆ ಹಿಂದಿನ ಅರಸರು ಸತ್ತ್ವಹೀನರಾಗಿದ್ದರೆಂದಾಗ ಸು. ೪೫೦ರಿಂದ ೫೦೦ರ ವರೆಗೆ ಅವರು ಆ ಪರಿಸ್ಥಿತಿಯಲ್ಲಿದ್ದರೆಂದೂ ಊಹಿಸಬಹುದು. ೪೫೦ರ ವೇಳೆಗೆ ೧೬ ಜನ ಅರಸರು ಆಳಿದರೆಂದಿದೆ; ಒಬ್ಬೊಬ್ಬರಿಗೂ ಸುಮಾರು ೨೦ ವರ್ಷಗಳ ಆಳಿಕೆಯನ್ನು ಕೊಟ್ಟರೆ (೧೬ × ೨೦ = ೩೨೦), ದಕ್ಷಿಣಾಪಥದಲ್ಲಿ ಇವರ ಆಳಿಕೆ ಕ್ರಿ.ಶ. ಸು. ೧೩೦ರ ವೇಳೆಗೆ ಆರಂಭವಾಯಿತೆನ್ನಬೇಕಾಗುತ್ತದೆ. ಇವರ ಪೂರ್ವಜರು ೫೪ ಜನ ಅಯೋಧ್ಯೆಯಲ್ಲಿ ಆಳಿದರೆಂಬ ಮಾತು ಬೇರೆ. ಎಂದಮೇಲೆ, ಒಬ್ಬೊಬ್ಬರಿಗೂ ಕೇವಲ ೧೦ ವರ್ಷಗಳ ಆಳಿಕೆಯನ್ನು ಯೋಜಿಸಿದರೂ ಇವರು ಕ್ರಿ.ಪೂ. ೪೧೦ ಸುಮಾರಿಗೆ ಅಸ್ತಿತ್ವಕ್ಕೆ ಬಂದರೆನ್ನಬೇಕು. ಇದು ನಮಗೆ ತಿಳಿದ ಇತಿಹಾಸಕ್ಕಿಂತ ಭಿನ್ನವಾದ್ದು. ಹೀಗಾಗಿ ಈ ಹೇಳಿಕೆ ಸಂಪೂರ್ಣ ಕಲ್ಪನೆಯೆಂದೂ ಸತ್ಯದೂರವೆಂದೂ ನಿಸ್ಸಂದೇಹವಾಗಿ ಹೇಳಬಹುದು.

ಇತ್ತೀಚೆಗೆ ಮುಂದೊಡ್ಡಲಾದ ಒಂದು ಸಲಹೆಯನ್ನು ಇಲ್ಲಿ ಸೂಚಿಸಬಹುದು. ಕಲ್ಯಾಣದಲ್ಲಿ ಆಳಿದ ಚಾಲುಕ್ಯರ ವಂಶಾವಳಿಯನ್ನು ನೀಡುವ ಶಾಸನಗಳಲ್ಲೆಲ್ಲ ಮೂಲತಃ ಈ ಚಾಲುಕ್ಯರು ಉತ್ತರದ ಅಯೋಧ್ಯೆಯಿಂದ ಬಂದವರೆಂದು ಹೇಳಿದೆಯಷ್ಟೆ. ರಾಷ್ಟ್ರಕೂಟ ಅಮೋಘವರ್ಷ (I)ನ ಸಂಜಾನ್ ತಾಮ್ರಶಾಸನದಲ್ಲಿ ಕೃಷ್ಣ (I)ನನ್ನು ಕುರಿತು ಪ್ರಸ್ತಾಪಿಸುವಾಗ ಆತನು ಅಯೋಧ್ಯೆಯ ಸಿಂಹಾಸನಾಧೀಶ್ವರನನ್ನು ಸೋಲಿಸಿ ಉನ್ನತಿಗೇರಿದನೆಂಬ ಮಾತೊಂದಿದೆ. ಇದನ್ನು ಹೆಚ್ಚಾಗಿ ಯಾರೂ ಗಮನಿಸಿಲ್ಲ. ಕಲ್ಯಾಣದ ಚಾಲುಕ್ಯರಿಗೂ ಮೊದಲು ಬಂದ ಈ ರಾಷ್ಟ್ರಕೂಟರು, ತಾವು ಸೋಲಿಸಿ ಓಡಿಸಿದ ಅರಸರು ಮೊದಲು ಅಯೋಧ್ಯೆಯ ಸಿಂಹಾಸನಾಧೀಶ್ವರರಾಗಿದ್ದರೆಂದು ಹೇಳಿಕೊಂಡಿರುವುದು, ಚಾಲುಕ್ಯರಿಗೂ ಅಯೋಧ್ಯೆಗೂ ಇದ್ದಿರಬಹುದಾದ ಸಂಬಂಧವನ್ನು ಸೂಚಿಸುತ್ತದೆ. ಇವರ ಮೊದಲ ಅರಸನಾದ ಜಯಸಿಂಹನು ಸೋಲಿಸಿದನೆಂದು ಹೇಳಲಾದ ರಾಷ್ಟ್ರಕೂಟ ಇಂದ್ರನು ಗುಜರಾತಿನಲ್ಲಿ ಆಳುತ್ತಿದ್ದು, ಈ ಚಾಲುಕ್ಯರು ಅಯೋಧ್ಯೆಯಿಂದ ಗುಜರಾತಿನ ಮೂಲಕ ಕರ್ನಾಟಕಕ್ಕೆ ಬಂದು ನೆಲಸಿರಬಾರದೇಕೆ—ಎಂಬುದು ಚಾಲುಕ್ಯರು ಮೂಲತಃ ಕನ್ನಡಿಗರಲ್ಲವೆಂದು ಹೇಳಹೊರಟ ವಾದ. ಆದರೆ ಇದು ಕಾಲಾನುಪೂರ್ವಿಯ ದೃಷ್ಟಿಯಿಂದ ದೋಷಪೂರಿತವೆಂದು ಮೇಲೆ ತೋರಿಸಿದೆ.

ಈ ಸಂದರ್ಭದಲ್ಲಿ ಇನ್ನೊಂದು ಊಹೆಯನ್ನು ಗಮನಿಸಬಹುದು : ಅದೆಂದರೆ ಅವರ ಮೂಲನಾಮವು ಚಲುಕಿ, ಚಲ್ಕಿ ಅಥವಾ ಸಲ್ಕಿ ಎಂಬ ಕನ್ನಡ ಪದ. ಇದು ಹಾರೆಯಂತಹ ಒಂದು ಕೃಷಿಯ ಉಪಕರಣದ ಹೆಸರು. ಈ ಮನೆತನದ ಮೂಲಪುರುಷನು ಇದನ್ನು ತನ್ನ ಅಂಕಿತನಾಮವಾಗಿ ಸ್ವೀಕರಿಸಿರಬೇಕು. ಈ ರೀತಿ ಹೆಸರಿಟ್ಟುಕೊಳ್ಳುವುದು ಈಗಲೂ ಕರ್ನಾಟಕದಲ್ಲಿ ಬಳಕೆಯಲ್ಲಿದೆ. ಸಲ್ಕೆಪ್ಪ, ಗುದ್ದೆಪ್ಪ ಎಂಬ ಹೆಸರುಗಳು ಬಹಳ

ಸಾಮಾನ್ಯ. ಕೃಷಿಯುಪಕರಣದ ಜೊತೆಗೆ 'ಅಪ್ಪ' (ಆರ್ಯ) ಎಂಬ ಗೌರವದ ಪದ ಜೋಡಿಸುವುದು ಇಲ್ಲಿ ವಾಡಿಕೆ. ಮೂಲತಃ ಚಾಲುಕ್ಯರು ಕೆಲಬಲದಲ್ಲಿ ವಾಸಿಸುವ ಒಕ್ಕಲಿಗರ ಬಣಕ್ಕೆ ಸೇರಿದವರಿರಬೇಕು. ಆದರೆ ಬರುಬರುತ್ತ ಈ ಮನೆತನ ಪ್ರಬಲವಾಗಿ ವಿಶಾಲ ಪ್ರದೇಶಗಳನ್ನು ಆಳಲು ಪ್ರಾರಂಭಿಸಿದಾಗ, ಈ ಮನೆತನಕ್ಕೆ ಪೌರಾಣಿಕತೆ ಪಾವಿತ್ರ್ಯಗಳನ್ನು ಕೊಡುವುದಕ್ಕೋಸ್ಕರ ದಂತಕಥೆ ಹುಟ್ಟಿಕೊಂಡಿರಬೇಕು.[8] ಮೇಲಿನ ಊಹೆ ವಿಚಾರಣೀಯ.

ವಾಸ್ತವಿಕವಾಗಿ ಬಾದಾಮಿಯ ಚಾಲುಕ್ಯರ ಸಮಕಾಲೀನ ಶಾಸನಗಳನ್ನು ಪರೀಕ್ಷಿಸಿದಾಗ, ಈ ಬಗೆಯ ಕತೆಗಳಿಗೆ ಅಲ್ಲಿ ಆಧಾರವಿಲ್ಲ; ಬದಲಿಗೆ ಅವರು ಮೂಲತಃ ಕನ್ನಡಿಗರೇ ಆಗಿದ್ದರೆಂಬ ವಿಷಯ ತಿಳಿದುಬರುತ್ತದೆ. ಕದಂಬರಂತೆ ಇವರೂ ಹಾರಿತೀ ಪುತ್ರರು, ಮಾನವ್ಯಸಗೋತ್ರರು. ಇವರ ಲಾಂಛನ ವರಾಹ. ಸಪ್ತಮಾತೃಕೆಯರಿಂದಲೂ ಕಾರ್ತಿಕೇಯನಿಂದಲೂ ಪರಿರಕ್ಷಿಸಲ್ಪಟ್ಟ ಇವರು ಭಗವನ್ನಾರಾಯಣನ ಕೃಪಾಪಾತ್ರರು. ಈ ಅರಸರ ಪುಲಕೇಶಿ, ಬಿಟ್ಟರಸ ಮುಂತಾದ ಹೆಸರುಗಳನ್ನೂ 'ನೋಡುತ್ತೆ ಗೆಲ್ವೊಂ', 'ಪ್ರಿಯಗಳ್ಳ' ಇತ್ಯಾದಿ ಬಿರುದುಗಳನ್ನೂ ಕನ್ನಡ ಮತ್ತು ಸಂಸ್ಕೃತ ಭಾಷೆಗಳಿಗೆ ಇವರು ಕೊಟ್ಟ ಪ್ರೋತ್ಸಾಹವನ್ನೂ ಆ ಭಾಷೆ ಹಾಗೂ ಲಿಪಿಗಳಲ್ಲಿ ಇವರು ಕೆತ್ತಿಸಿದ ಶಾಸನಗಳನ್ನೂ ಗಮನಿಸಿದಲ್ಲಿ ಇವರಿಗೆ ಆ ಭಾಷೆಯ ಮೇಲೆ ಮತ್ತು ಲಿಪಿಯ ಮೇಲೆ ಇದ್ದ ಒಲವು ಅರ್ಥವಾಗುತ್ತದೆ. ಈ ಕಾಲದಿಂದ ಕನ್ನಡ ಶಾಸನ ಸಾಹಿತ್ಯ ಹೆಚ್ಚು ಪ್ರೌಢವಾಗ ತೊಡಗಿತು. ಕನ್ನಡದಲ್ಲಿ ಶಾಸನಗಳನ್ನು ಬರಸುವ ಪರಿಪಾಠಿ ಬಲವಾಯಿತು. ಇವರ ನಂತರ ಆಳಿದ ರಾಷ್ಟ್ರಕೂಟರು ಇವರ ಸೇನೆಯನ್ನು 'ಕರ್ನ್ನಾಟಕ ಬಲ'ವೆಂದು ಕರೆದಿರುವುದನ್ನು ಇಲ್ಲಿ ಗಮನಿಸಬಹುದು. ಕ್ರಿ.ಶ. ೮ನೆಯ ಶತಮಾನದಲ್ಲಿ ಪಾಂಡ್ಯರು ಕರ್ಣಾಟಕದ ಈ ಅರಸರೊಂದಿಗೆ ಸಂಬಂಧವನ್ನು ಬೆಳಸಿದ್ದರು. ಪಾಂಡ್ಯವಂಶದ ನೆಡುಂಜಡೈಯನ ಅಜ್ಜನಾದ ಶಡೈಯನನ್ನು ಶಾಸನದಲ್ಲಿ ಮಧುರಕರುನಾಡಗನ್ ಎಂದು ವರ್ಣಿಸಿರುವುದು ಪಾಂಡ್ಯರು ಕರ್ಣಾಟಕದವರೊಡನೆ, ಎಂದರೆ ಚಾಲುಕ್ಯರೊಡನೆ ಹೊಂದಿದ್ದ ಮಧುರವಾದ ಸಂಬಂಧದ ದ್ಯೋತಕವಾಗಿದೆ. ವಿಷ್ಣುವರ್ಧನರಾಜನೆಂಬ ಹೆಸರಿನ ಕನ್ನಡ ರೂಪವಾದ 'ಬಿಟ್ಟರಸ' ಎಂಬುದನ್ನು ತಾಮ್ರಶಾಸನದ ಮೊಹರಿನ ಮೇಲೆ ಕೆತ್ತಲಾಗಿದೆ. ಬುದ್ಧವರಸನ ಬಿರುದು 'ಮದನಂಗಾಶ್ರಯ' ಸ್ಪಷ್ಟವಾಗಿ ಕನ್ನಡದ ಬಿರುದು.

ಈ ಎಲ್ಲ ದೃಷ್ಟಿಗಳಿಂದ ಗಮನಿಸಿದರೆ ಚಾಲುಕ್ಯರು ಮೂಲತಃ ಕನ್ನಡಿಗರೇ ಆಗಿದ್ದು, ಅವರು ಉತ್ತರದ ಅಯೋಧ್ಯೆಯಿಂದ ಬಂದವರೆಂಬ ಮಾತು ನಂತರ ಹೆಣೆಯಲಾದ ಕತೆ ಎಂಬುದು ಸ್ಪಷ್ಟವಾಗುತ್ತದೆ. ೧೦ನೆಯ ಶತಮಾನದ ನಂತರ ದಕ್ಷಿಣ ಭಾರತದಲ್ಲಿ ಆಳಿದ ಅನೇಕ ರಾಜಮನೆತನಗಳು—ಅವು ಸಣ್ಣವೇ ಇರಲಿ, ದೊಡ್ಡವೇ ಇರಲಿ—ಉತ್ತರದಲ್ಲಿ ಹಿಂದೆ ಆಳಿದರೆನ್ನಲಾದ ಪುರಾಣೇತಿಹಾಸ ಪ್ರಸಿದ್ಧವಾದ ರಾಜವಂಶಗಳೊಡನೆ ಸಂಬಂಧವನ್ನು ಕಲ್ಪಿಸಿಕೊಳ್ಳುವ ಪರಿಪಾಠಿ ಬೆಳಸಿಕೊಂಡಿತು ಎಂಬುದು ಅವರ ಶಾಸನಗಳಿಂದ

ವ್ಯಕ್ತವಾಗುತ್ತದೆ. ದೊರೆಗಳು ತಮ್ಮನ್ನು ಸೂರ್ಯವಂಶಜರೆಂದೋ ಚಂದ್ರವಂಶಜರೆಂದೋ ಹೇಳಿಕೊಳ್ಳುವುದಲ್ಲದೆ, ಅಯೋಧ್ಯೆ, ಅಹಿಚ್ಛತ್ರ, ತಗರಪುರ, ಪಾಟಲೀಪುತ್ರ ಮುಂತಾದವು ತಮ್ಮ ಪೂರ್ವಜರ ರಾಜಧಾನಿಗಳಾಗಿದ್ದುವು ಎಂದು ಹೇಳಿಕೊಳ್ಳುವುದನ್ನೂ ಕಾಣುತ್ತೇವೆ. ಬಹುಶಃ ಈ ಸುಮಾರಿಗೆ ದಕ್ಷಿಣ ಭಾರತ ಸ್ವಲ್ಪ ಸ್ವಲ್ಪವಾಗಿ ಸರಕೀಯರ, ಮಹಮ್ಮದೀಯರ ದಾಳಿಗೆ ಈಡಾಗಿ, ಪರಸಂಸ್ಕೃತಿಯೊಂದು ನಮ್ಮ ಸಂಸ್ಕೃತಿಗೆ ಧಕ್ಕೆ ಉಂಟುಮಾಡಬಹುದಾದ ಪರಿಸ್ಥಿತಿಯನ್ನು ಎದುರಿಸಲು ತಮ್ಮದು ಅತಿಪ್ರಾಚೀನ, ಪುರಾಣೋಕ್ತ ಹಾಗೂ ಪವಿತ್ರ ಮನೆತನಗಳು ಎಂದು ಹೇಳಿಕೊಳ್ಳುವ, ಆ ಪಾವಿತ್ರ್ಯವನ್ನು ಕಾಪಾಡಿಕೊಳ್ಳಲು ತಮ್ಮವರನ್ನು ಹುರಿದುಂಬಿಸುವ ಪ್ರಯತ್ನಗಳಾಗಿರಬಹುದು ಇವು. ಇದರ ಜೊತೆಗೆ ವರ್ಣಾಶ್ರಮಗಳ ವ್ಯವಸ್ಥೆಯನ್ನನುಸರಿಸಿ ಕ್ಷತ್ರಿಯರು ಮಾತ್ರ ರಾಜ್ಯವಾಳಲು ಅರ್ಹರೆಂಬ ಭಾವನೆ ಇದ್ದಲ್ಲಿ, ಬಹುಶಃ ಕ್ಷತ್ರಿಯರಲ್ಲದ ತಾವು ತಮ್ಮ ಧಮನಿಗಳಲ್ಲಿ ಪೂರ್ವಜರ ಕ್ಷಾತ್ರರಕ್ತ ಹರಿಯುತ್ತಿದೆ ಎಂಬುದನ್ನು ತೋರಿಸಿಕೊಳ್ಳಬೇಕೆಂಬ, ತನ್ಮೂಲಕ ರಾಜ್ಯವಾಳುವುದು ತಮಗೆ ವಂಶಪಾರಂಪರ್ಯವಾಗಿ ಬಂದ ಹಕ್ಕು ಎಂದು ಹೇಳಿಕೊಳ್ಳಬೇಕೆಂಬ ಮನೋಭಾವವೂ ಇಲ್ಲಿರಬಹುದು.

ಇದು ಏನೇ ಇರಲಿ, ಚಾಲುಕ್ಯರು ಮೂಲತಃ ಕನ್ನಡಿಗರೆಂಬುದು ಸ್ಪಷ್ಟ. ಬಾದಾಮಿಯ ಚಾಲುಕ್ಯರ ಮೊದಲ ಅರಸ ಜಯಸಿಂಹ. ಈತನ ಮಗ ರಣರಾಗ. ಇವರನ್ನು ಕುರಿತು ಹೆಚ್ಚಿನ ಯಾವ ವಿವರಗಳೂ ಲಭ್ಯವಾಗಿಲ್ಲ. ಜಯಸಿಂಹನು ಕದಂಬರ ಅಧೀನದಲ್ಲಿ ಒಬ್ಬ ಅಧಿಕಾರಿಯೋ ಮಾಂಡಲಿಕನೋ ಆಗಿದ್ದಿರಬಹುದು. ಮಾನಪುರದಲ್ಲಿ ಆಳಿದ ರಾಷ್ಟ್ರಕೂಟ ಮನೆತನದ ಅಭಿಮನ್ಯುವಿನ ಮಾಂಡಲಿಕನೊಬ್ಬನು ಜಯಸಿಂಹನೆಂಬ ಹೆಸರನ್ನು ಹೊಂದಿದ್ದು, ಈ ಇಬ್ಬರೂ ಅಭಿನ್ನರೆಂಬ ಒಂದು ಊಹೆ ಇದೆ. ಆದರೆ ಇದನ್ನು ಒಪ್ಪಲು ಪ್ರಬಲವಾದ ಆಧಾರಗಳಿಲ್ಲ. ರಾಷ್ಟ್ರಕೂಟ ಕೃಷ್ಣನ ಮಗ ಇಂದ್ರನೆಂಬವನನ್ನು ಈತನು ಸೋಲಿಸಿ ರಾಜ್ಯವನ್ನು ಪಡೆದನೆಂಬ ಹೇಳಿಕೆ ನಿರಾಧಾರವಾದುದೆಂಬುದನ್ನು ಮೇಲೆ ತೋರಿಸಿದೆ. ಜಯಸಿಂಹನಂತೆಯೇ ರಣರಾಗ ಸಹ. ಈತನ ಕುರಿತು ಸಹ ನಮಗೆ ಹೆಚ್ಚಿನ ವಿವರಗಳು ತಿಳಿಯದು. ಇವರಿಬ್ಬರ ಕಾಲವನ್ನು ಕ್ರಿ.ಶ. ಸು. ೫೦೦–೫೨೦ ಹಾಗೂ ಸು. ೫೨೦–೫೪೦ ಎಂದು ಸೂಚಿಸಬಹುದು.

ರಣರಾಗನ ಮಗ ಪುಲಕೇಶಿ. ಚಾಲುಕ್ಯ ಮನೆತನದ ಮೂಲಪುರುಷನೆಂದು ಈತನನ್ನು ಪರಿಗಣಿಸಬಹುದು. ಈತ ಸ್ವತಂತ್ರವಾದ ರಾಜ್ಯಕ್ಕೆ ಅಡಿಪಾಯ ಹಾಕಿದನು. ಕದಂಬರನ್ನು ಸೋಲಿಸಿದ ಬಳಿಕ ಬಾದಾಮಿಯನ್ನು ತನ್ನ ರಾಜಧಾನಿಯನ್ನಾಗಿ ಆರಿಸಿಕೊಂಡು, ಅಲ್ಲಿನ ಗುಡ್ಡದ ಮೇಲೆ ಅಜೇಯವಾದ ಕೋಟೆಯೊಂದನ್ನು ಕಟ್ಟಿಸಿದನು. ಬಾದಾಮಿಯಲ್ಲಿ ದೊರೆತ ಶಕ ೪೬೫ರ (ಕ್ರಿ.ಶ. ೫೪೩) ಇವನ ಶಾಸನ ಈತನನ್ನು ಚಲಿಕ್ಯವಲ್ಲಭೇಶ್ವರನೆಂದು ಕರೆದಿದೆ. ಚಾಲುಕ್ಯ ಅರಸರು ನಂತರದ ಕಾಲದಲ್ಲಿ 'ವಲ್ಲಭ' ರೆಂಬ ಬಿರುದನ್ನು ಪಡೆದು ಆ ಬಿರುದಿನಿಂದಲೇ ಪ್ರಸಿದ್ಧರಾದರು. ಪೃಥ್ವೀವಲ್ಲಭ ಅವರ ಬಿರುದುಗಳಲ್ಲಿ ಒಂದು. ವಲ್ಲಭ ಬಿರುದನ್ನು ಮೊದಲು ಧರಿಸಿದವನೇ ಪುಲಕೇಶಿ. ನಂತರದ

ಕೆಲವು ಶಾಸನಗಳಲ್ಲಿ ಕೇವಲ ವಲ್ಲಭನೆಂಬ ಹೆಸರಿನಿಂದ ಸೂಚಿತವಾದವನು ಈತನೇ ಆಗಿರಬಹುದೆಂಬ ಒಂದು ಸಲಹೆಯನ್ನು ಈಗ ಮುಂದೊಡಲಾಗಿದೆ. ರಣವಿಕ್ರಮನೆಂಬುದು ಈತನ ಇನ್ನೊಂದು ಹೆಸರು. ಮೊದಲನೆಯ ಕೀರ್ತಿವರ್ಮನ ಹಾಗೂ ಮಂಗಲೇಶನ ಶಾಸನಗಳು ಅವರ ತಂದೆಯಾದ ಈತನನ್ನು ಆ ಹೆಸರಿನಿಂದಲೇ ಉಲ್ಲೇಖಿಸಿವೆ. ಕೀರ್ತಿವರ್ಮನ (I) ಗೊಡಚಿ ಶಾಸನದಲ್ಲಿ ಮತ್ತು ಮಂಗಲೇಶನ ಮಹಾಕೂಟ ಸ್ತಂಭಶಾಸನದಲ್ಲಿ ಇವನನ್ನು 'ರಣವಿಕ್ರಮ'ನೆಂದು ಕರೆಯಲಾಗಿದೆ. ಈತನು ಕೇವಲ 'ಮಹಾರಾಜ'ನೆನಿಸಿಕೊಂಡಿದ್ದನು. ಗೊಡಚಿ ಶಾಸನ ಈತನನ್ನು ಧರ್ಮಮಹಾರಾಜನೆಂದೂ ಕರೆದಿದೆ. ಈ ಧರ್ಮರಾಜ, ಧರ್ಮಮಹಾಧಿರಾಜ, ಧರ್ಮಮಹಾರಾಜಾಧಿರಾಜ ಮುಂತಾದ ಬಿರುದುಗಳು ಚಾಲುಕ್ಯರಿಗೆ ಮೊದಲು ಆಳಿದ ಗಂಗ, ಕದಂಬ ಮನೆತನಗಳ ಅರಸರು ಧರಿಸಿದ ಇದೇ ತೆರದ ಬಿರುದುಗಳಿಂದ ಪ್ರಭಾವಿತವಾದವು ಎಂಬ ಊಹೆ ಸಹಜವೇ.

ಪುಲಕೇಶಿ ಅಶ್ವಮೇಧಾದಿ ಯಜ್ಞಗಳನ್ನು ಮಾಡಿದನೆಂದು ಆತನ ಬಾದಾಮಿ ಶಾಸನ ಸಾರುತ್ತದೆ. ಮಂಗಲೇಶನ ಮಹಾಕೂಟ ಶಾಸನದಲ್ಲಿ ಈತನು ಅಗ್ನಿಷ್ಟೋಮ, ಅಗ್ನಿಚಯನ, ವಾಜಪೇಯ, ಬಹುಸುವರ್ಣ, ಪೌಂಡರೀಕ ಮತ್ತು ಹಿರಣ್ಯಗರ್ಭಕ್ರತುಗಳನ್ನು ಆಚರಿಸಿದನೆಂದು ಹೇಳಿದೆ. ಇವನ ಈ ಸಾಧನೆಯನ್ನು ನಂತರದ ಈತನ ವಂಶಜರು ಗೌರವದಿಂದ, ಹೆಮ್ಮೆಯಿಂದ ಸ್ಮರಿಸಿದ್ದಾರೆ. ೧೨ನೆಯ ಶತಮಾನದಲ್ಲಿ ಆಳಿದ ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರನು ತನ್ನ 'ವಿಕ್ರಮಾಂಕಾಭ್ಯುದಯ'ವೆಂಬ ಕಾವ್ಯದಲ್ಲಿ ಇದನ್ನು ಸ್ಮರಿಸಿದ್ದಾನಲ್ಲದೆ, ಈ ಅರಸನು ಷೋಡಶಮಹಾದಾನಗಳನ್ನು ಮಾಡಿದನೆಂದೂ ಹೇಳಿದ್ದಾನೆ. ಇದು ಬಾದಾಮಿಯ ಶಾಸನದಲ್ಲಿನ ಹೇಳಿಕೆಯನ್ನು ಸಮರ್ಥಿಸುತ್ತದೆ. ತನ್ನ ರಾಜ್ಯವನ್ನು ವಿಸ್ತರಿಸಲು ಪುಲಕೇಶಿಯು ಹಲವು ಯತ್ನಗಳನ್ನು ಮಾಡಿದನೆಂದು ಹೇಳಬಹುದು. ಸೇಂದ್ರಕರ ಶ್ರೀವಲ್ಲಭ ಭಾನುಶಕ್ತಿಯು ಈತನ ಕಿರಿಯ ಸಮಕಾಲೀನನಾಗಿದ್ದು, ಸಾಮಂತರಲ್ಲೊಬ್ಬನಾಗಿದ್ದನು. ಪುಲಕೇಶಿಗೆ ಬಪ್ಪುರ ಕುಲದ ದುರ್ಲಭದೇವಿ ಮತ್ತು ಇಂದುಕಾಂತಿ ಎಂಬಿಬ್ಬರು ಪತ್ನಿಯರಿದ್ದರು. ಕೀರ್ತಿವರ್ಮ ಮತ್ತು ಮಂಗಲೇಶ ಇವನ ಮಕ್ಕಳು. ಮುಧೋಳ ತಾಮ್ರಶಾಸನದ ಕರ್ತೃವಾದ ಪೂಗವರ್ಮನು ಈತನ ಇನ್ನೊಬ್ಬ ಮಗನೆಂದೂ ಹಿರಿಯನಾಗಿದ್ದ ಈತ ತಂದೆಯು ಜೀವಿಸಿದ್ದಾಗಲೇ ಮರಣ ಹೊಂದಿದ ಕಾರಣ ನಂತರದ ವಂಶಾವಳಿಗಳಲ್ಲಿ ಇವನ ಉಲ್ಲೇಖ ಕಂಡು ಬರುವುದಿಲ್ಲವೆಂದೂ ಡಾ. ದೇಸಾಯಿ ಸೂಚಿಸಿದ್ದಾರೆ. ಆದರೆ ಇದು ಕೀರ್ತಿವರ್ಮನ ಇನ್ನೊಂದು ಹೆಸರಾಗಿರಬಹುದೆಂಬ ಸೂಚನೆಯೂ ಇದೆ. ಪುಲಕೇಶಿ ಎಂಬ ಹೆಸರು ದ್ರಾವಿಡ 'ಪುಲಿ' ಹಾಗೂ ಸಂಸ್ಕೃತ 'ಕೇಶಿ' ಎಂಬ ಪದಗಳ ಸಂಯೋಜನೆಯಿಂದ ಆದುದು ಎಂದು ಹೇಳಿವೆ. ಇದು ಪೊಲೆಕೇಶಿ 'ಮಿರುಗುವ ಕೂದಲುಳ್ಳ' ಎಂಬ ಅರ್ಥವನ್ನೂ ನೀಡಬಹುದು. ಅಂತೆಯೇ ಪೂಗ ಎಂಬುದು ದ್ರಾವಿಡ ಪುಗಳ್ (ಕೀರ್ತಿ) ಎಂಬ ಪದದ ಸಂಸ್ಕೃತ ರೂಪವಾಗಿದ್ದು ಪೂಗವರ್ಮ ಕೀರ್ತಿವರ್ಮನ ದ್ರಾವಿಡ ನಾಮಧೇಯವಾಗಿರಬಹುದೆಂಬುದು ಈ ಊಹೆ. ಆದರೆ ಇದು ಸಮಂಜಸವೆನಿಸುವುದಿಲ್ಲ. ದುರ್ಲಭ ದೇವಿಯನ್ನು

ಕುರಿತು ಬರೆಯುತ್ತ, ಪಂಚಮುಖಿಯವರು 'ಸ್ವಗುರುಪತ್ನಿ' ಎಂದು ಆಕೆಯನ್ನು ಸಂಬೋಧಿಸಿರುವ ಸಂದರ್ಭವನ್ನು ನೋಡಿದರೆ ಆಕೆಯು ಅಣ್ಣನ (ಗುರು) ಹೆಂಡತಿಯೆಂದು ಅರ್ಥ ಹೇಳುವುದೇ ಹೆಚ್ಚು ಯುಕ್ತವಾಗಿ ತೋರುತ್ತದೆ ಎಂದಿದ್ದಾರೆ. ಆದರೆ ಸ್ವತಃ ಆ ಅಭಿಪ್ರಾಯವನ್ನು ಸ್ವೀಕರಿಸಿದಂತೆ ತೋರುವುದಿಲ್ಲ.

ಪುಲಕೇಶಿಯ ನಂತರ ಅವನ ಹಿರಿಯ ಮಗನಾದ ಕೀರ್ತಿವರ್ಮ ಪಟ್ಟಕ್ಕೆ ಬಂದನು. ಗೊಡಚಿಯ ತಾಮ್ರಶಾಸನದ ಕತ್ತಿಅರಸನು ಕೀರ್ತಿವರ್ಮನೆಂದು ಈಗ ಒಪ್ಪಲಾಗಿದೆ. ಕತ್ತಿಅರಸ ಎಂಬುದು ಕೀರ್ತಿವರ್ಮನೆಂಬ ಹೆಸರಿನ ಕನ್ನಡರೂಪ. ಬಾದಾಮಿಯ ಗುಹೆಯಲ್ಲಿನ ಈತನ ಶಾಸನವೊಂದು ಕ್ರಿ.ಶ. ೫೦೦ರಲ್ಲಿ ಹುಟ್ಟಿದ್ದು, ಅದು ಆತನ ಆಳಿಕೆಯ ೧೨ನೆಯ ವರ್ಷವೆಂದು ಹೇಳಲಾಗಿದೆಯಾದ ಕಾರಣ ಈತನು ಕ್ರಿ.ಶ. ೫೬೬ರಿಂದ ಆಳತೊಡಗಿದನು ಎಂದು ಖಚಿತವಾಗಿ ಹೇಳಬಹುದು. ಪುರುರಣಪರಾಕ್ರಮ, ಪರಾಕ್ರಮೇಶ್ವರ ಇತ್ಯಾದಿಗಳು ಇವನ ಬಿರುದುಗಳು. ಇವನು ಕದಂಬ ನಳ ಮೌರ್ಯರನ್ನೂ ತಲಕಾಡಿನ ಗಂಗರನ್ನೂ ಸೋಲಿಸಿದನು. ಕದಂಬರನ್ನು ಪುಲಕೇಶಿ (I) ಸೋಲಿಸಿ ಅವರ ರಾಜ್ಯವನ್ನು ಕಸಿದುಕೊಂಡನೆಂದು ಹೇಳಲು ಯಾವ ಆಧಾರಗಳೂ ಇಲ್ಲ. ಇಮ್ಮಡಿ ಕೃಷ್ಣವರ್ಮನ ನಂತರ ಬಂದ ಅರಸರು ಶಕ್ತಿಹೀನರಾಗಿದ್ದು, ಅನ್ಯ ಪ್ರಭಾವಶಾಲಿ ಅರಸರು ಬಲಿಷ್ಠರಾಗಲು ಕಾರಣರಾದರು. ಇಂತಹವರಲ್ಲಿ ಪ್ರಮುಖ ಪುಲಕೇಶಿ. ಆತನು ಮಾಡಿದ ಯಜ್ಞಯಾಗಾದಿಗಳ ವಿವರಗಳು ಆತನು ತನ್ನ ನೆರೆಯ ಸುತ್ತಲಿನ ಎಲ್ಲರನ್ನೂ ಸ್ವಾಧೀನ ಮಾಡಿಕೊಳ್ಳುವುದರಲ್ಲಿ ಯಶಸ್ವಿಯಾದನೆಂದು ಸೂಚಿಸುತ್ತದೆ. ಕದಂಬ ವಂಶದ ಹಲವರು ಇನ್ನೂ ಅಲ್ಲಲ್ಲಿ ಅಧಿಕಾರದಲ್ಲಿ ಮುಂದುವರಿದಿದ್ದರು. ರಾಜ್ಯವಿಸ್ತರಣೆಯಲ್ಲಿ ತೊಡಗಿದ ಕೀರ್ತಿವರ್ಮನು ಕದಂಬರ ರಾಜ್ಯವನ್ನು ಪಡೆಯುವ ಸಲುವಾಗಿಯೇ ಅವರ ಮೇಲೆ ದಂಡೆತ್ತಿರಬೇಕು. ಮೌರ್ಯರು ಕೊಂಕಣದಲ್ಲಿಯೂ ನಳರು ಬಳ್ಳಾರಿ ಕರ್ನೂಲು ಪ್ರದೇಶದಲ್ಲಿಯೂ ಅಧಿಕಾರದಲ್ಲಿದ್ದರು. ಈತನ ಸಮಕಾಲೀನನಾಗಿ ಗಂಗರ ದುರ್ವಿನೀತನು ಆಳುತ್ತಿದ್ದನು. ಮಹಾಕೂಟದ ಶಾಸನದಲ್ಲಿ ಕೀರ್ತಿವರ್ಮನು ದ್ರಮಿಳ ಚೋಳ ಪಾಂಡ್ಯ ಕೇರಳ ಮೂಷಕ ಮತ್ತು ಆಳುಪರನ್ನೂ ಉತ್ತರದಲ್ಲಿ ಅಂಗ ವಂಗ ಕಳಿಂಗ ಮಗಧ ಮದ್ರಕ ದೇಶಗಳ ಅರಸರನ್ನೂ ಗೆದ್ದನೆಂದು ಹೇಳಿದೆ. ಇವನ ಉತ್ತರ ದಿಗ್ವಿಜಯಕ್ಕೆ ಸಂಬಂಧಿಸಿದ ಈ ಹೇಳಿಕೆ ಬೇರಾವ ಶಾಸನದಲ್ಲೂ ಉಕ್ತವಾಗಿಲ್ಲ. ಅಲ್ಲದೆ ಇನ್ನೂ ಹೊಸದಾಗಿ ಸ್ಥಾಪಿಸಲಾದ ರಾಜ್ಯದ ಬಲಸಂವರ್ಧನೆಗೂ ಮೊದಲೇ ಕೀರ್ತಿವರ್ಮನು ದೂರದ ಮಗಧ ಅಂಗ ವಂಗದೇಶಗಳವರೆಗೆ ದಂಡೆತ್ತಿ ಹೋದನೆಂದು ಊಹಿಸುವುದು ಸಮಂಜಸವಾಗಿ ತೋರುವುದಿಲ್ಲ. ಅಂತೆಯೇ ದಕ್ಷಿಣದ ಅರಸರನ್ನು ಕುರಿತು ಹೆಚ್ಚಿನ ವಿವರಗಳು ಲಭಿಸಿಲ್ಲ. ಆಳುಪರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಧಿಕಾರದಲ್ಲಿದ್ದು, ಅವರೊಡನೆ ಚಾಲುಕ್ಯರು ಗಾಢವಾದ ಸಂಬಂಧವನ್ನು ಈ ನಂತರದ ಕಾಲದಲ್ಲೂ ಹೊಂದಿದ್ದರೆನ್ನುವುದು ನಮಗೆ ತಿಳಿದಿದೆಯಾಗಿಬಹುದು: ಆಳುಪರು ಮೊದಲು ಇವರನ್ನು ವಿರೋಧಿಸಿ ನಂತರ ಮೈತ್ರೀಭಾವವನ್ನು ಹೊಂದಿದರೆಂದು ಹೇಳಬಹುದು.

ಕದಂಬರ ಮಾಂಡಲಿಕರಾಗಿದ್ದ ಸೇಂದ್ರಕರು ಚಾಲುಕ್ಯರ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಆ ಮನೆತನದ ಶ್ರೀವಲ್ಲಭಸೇನಾನಂದ ರಾಜನು ತನ್ನ ಸೋದರಿಯನ್ನು ಕೀರ್ತಿವರ್ಮನಿಗೆ ಲಗ್ನಮಾಡಿಕೊಟ್ಟನು. ಈಕೆಯು ಮಗನೇ ಇಮ್ಮಡಿ ಪುಲಕೇಶಿ. ವಿಷ್ಣುವರ್ಧನ, ಧಾರಾಶ್ರಯ ಜಯಸಿಂಹ ಮತ್ತು ಬುದ್ಧವರಸ ಎಂಬ ಇನ್ನೂ ಮೂವರು ಕೀರ್ತಿವರ್ಮನ ಮಕ್ಕಳು. ಬಹುಸುವರ್ಣ, ಅಗ್ನಿಷ್ಟೋಮ ಮುಂತಾದ ಯಾಗಗಳನ್ನು ಮಾಡಿ ಪುಣ್ಯಯಶೋಭಿವೃದ್ಧಿಯನ್ನು ಪಡೆದಿದ್ದ ಈತನು ವಾತಾಪಿಯ ಗುಹೆಯೊಂದರಲ್ಲಿ ಅದ್ಭುತವಾದ ವಿಷ್ಣುಗೃಹವೊಂದನ್ನು ನಿರ್ಮಿಸಲು ತಮ್ಮನಾದ ಮಂಗಲೇಶನಿಗೆ ಆದೇಶವಿತ್ತನು. ಅದರಂತೆ ಮಂಗಲೇಶನು ಮಹಾವಿಷ್ಣು ಗೃಹವನ್ನು ನಿರ್ಮಿಸಿ ಅಲ್ಲಿ ಬಲಿ, ಪೂಜಾ ನಿಮಿತ್ತವಾಗಿ ಲಾಂಜಿಗೇಶ್ವರವೆಂಬ ಗ್ರಾಮವನ್ನು ದತ್ತಿಯಾಗಿ ಬಿಟ್ಟನು.

ಈ ಸಂದರ್ಭದಲ್ಲಿ ಇಲ್ಲಿ ಒಂದು ಮಾತನ್ನು ಹೇಳುವುದು ಉಚಿತ. ಕೀರ್ತಿವರ್ಮನನ್ನು ಕುರಿತಾದ ಈ ವಿವರಗಳನ್ನು ನೀಡುವ ಬಾದಾಮಿಯ ವೈಷ್ಣವ ಗುಹೆಯ ಶಾಸನದಲ್ಲಿ ದಾನ ನೀಡಿದಾತ ಮಂಗಲೇಶ. ಈತನು ನಾರಾಯಣ ಬಲಿಯನ್ನು ನೀಡಿ ಆ ಸಂದರ್ಭದಲ್ಲಿ ಷೋಡಶ ಬ್ರಾಹ್ಮಣರ ಉಪಹಾರಾರ್ಥವಾಗಿ ಗ್ರಾಮವನ್ನು ದಾನಮಾಡಿದನೆಂದಿದೆ. 'ಗೃಹ್ಯಸೂತ್ರ'ಗಳಲ್ಲಿ ನಾರಾಯಣಬಲಿ ಎಂಬ ಕರ್ಮವನ್ನು ಆತ್ಮಹತ್ಯೆ ಮಾಡಿಕೊಂಡವನ, ಅಸ್ವಾಭಾವಿಕ ಪರಿಸ್ಥಿತಿಯಲ್ಲಿ ಮರಣಿಸಿದವನ ಅಥವಾ ಮರಣಾನಂತರ ದಹನಯೋಗ್ಯವಲ್ಲದವನ ಉತ್ತರಕ್ರಿಯೆಗಳ ಬದಲಾಗಿ ಮಾಡುವ ಕರ್ಮವೆಂದು ವಿವರಿಸಿದೆ. ಹಾಗಿದ್ದಲ್ಲಿ ಕೀರ್ತಿವರ್ಮನು ಇಂತಹ ಯಾವುದಾದರೊಂದು ಪರಿಸ್ಥಿತಿಗೆ ಸಿಲುಕಿರಬೇಕು. ಬಹುಶಃ ಅಸ್ವಾಭಾವಿಕ ಪರಿಸ್ಥಿತಿಯಲ್ಲಿ ಆಕಸ್ಮಿಕವಾಗಿ ಮರಣ ಹೊಂದಿದ್ದು, ಆತನ ಆತ್ಮಶಾಂತಿಗಾಗಿ ತಮ್ಮನು ಈ ನಾರಾಯಣಬಲಿಯನ್ನು ನೀಡಿರಬೇಕು. ಇದನ್ನು ಒಪ್ಪಿದಲ್ಲಿ ಶಾಸನದ ಕಾಲವಾದ ಕ್ರಿ.ಶ. ೫೭೮ರ ವೇಳೆಗೆ ಕೀರ್ತಿವರ್ಮನು ಮರಣ ಹೊಂದಿದನೆಂದು ಹೇಳಬೇಕಾಗುತ್ತದೆ. ಬಹುಶಃ ಆ ವೇಳೆಗೆ ಆತನ ಮಗನಾದ ಇಮ್ಮಡಿ ಪುಲಕೇಶಿ ಇನ್ನೂ ಹಸುಗೂಸಾಗಿದ್ದಿರಬೇಕು. ಈ ಊಹೆ ಒಪ್ಪಿತವಾದಲ್ಲಿ ಕೀತಿವರ್ಮ ಹಾಗೂ ಮಂಗಲೇಶರ ಆಳಿಕೆಯ ಕಾಲಗಳಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಬೇಕಾಗುತ್ತದೆ. ನಮಗೆ ಲಭ್ಯವಾಗಿರುವ ಶಿಲಾಶಾಸನ ಇದೊಂದೇ. ಗೊಡಚಿಯ ತಾಮ್ರಶಾಸನದ ಕತ್ತಿಯರಸನು ಮೊದಲನೆಯ ಕೀರ್ತಿವರ್ಮನೆಂದು ಗುರುತಿಸಿದೆ. ಈ ಶಾಸನದ ಕಾಲ ಸಹ ಕ್ರಿ.ಶ. ೫೭೮. ಆದರೆ ಮಹಾಕೂಟದ ಶಾಸನದ ಕಾಲ ಅವನ ಆಳಿಕೆಯ ಐದನೆಯ ವರ್ಷಕ್ಕೆ ಸಮನಾದ ಸಿದ್ಧಾರ್ಥಿ ಸಂವತ್ಸರ ಕ್ರಿ.ಶ. ೬೦೧ಕ್ಕೆ ಸರಿಹೋಗುತ್ತದೆ ಎಂಬಂಶವನ್ನು ಇಲ್ಲಿ ಗಮನದಲ್ಲಿಟ್ಟುಕೊಳ್ಳಬೇಕು.

ಕೀರ್ತಿವರ್ಮನ ನಂತರ ಆತನ ತಮ್ಮನಾದ ಮಂಗಲೇಶನು ರಾಜ್ಯದ ಸೂತ್ರಗಳನ್ನು ವಹಿಸಿಕೊಂಡನು. ಯುವರಾಜನಾಗಿದ್ದ ಇಮ್ಮಡಿ ಪುಲಕೇಶಿಯು ಇನ್ನೂ ಅಲ್ಪವಯಸ್ಕನಾಗಿದ್ದ ಕಾರಣ ಈ ಜವಾಬ್ದಾರಿಯನ್ನು ಮಂಗಲೇಶನು ವಹಿಸಿದನು. ಸಮಕಾಲೀನ ಶಾಸನಗಳು ಈ ವಿಷಯವನ್ನು ಪ್ರಸ್ತಾಪಿಸದೆ ಕೀರ್ತಿವರ್ಮನ ನಂತರ ಅವನಿಗೆ ಕಿರಿಯ

ನಾದ ಮಂಗಲೇಶನು ರಾಜ್ಯವಾಳಿದನೆಂದಷ್ಟೇ ಹೇಳುತ್ತವೆ. ಆದರೆ ತದನಂತರದ, ೧೧ನೆಯ ಶತಮಾನದ, ನೀಲಗುಂದ ಶಾಸನದಲ್ಲಿ ಮಾತ್ರ ಅವನ ಆಳಿಕೆಗೆ ಮೇಲಿನ ಕಾರಣವನ್ನು ಕೊಟ್ಟು ಮುಂದೆ ಪುಲಕೇಶಿಯು ಪ್ರಾಯಕ್ಕೆ ಬಂದಾಗ ಆ ರಾಜ್ಯವನ್ನು ಅವನಿಗೆ ಮಂಗಲೇಶನು ಒಪ್ಪಿಸಿದನೆಂದು ಹೇಳಿದೆ. ಈ ಮಾತುಗಳು ಸಹ ಸಂಪೂರ್ಣ ಸತ್ಯವನ್ನು ಸೂಚಿಸುವುದಿಲ್ಲ. ವಾಸ್ತವಿಕವಾಗಿ ಅಧಿಕಾರದ ರುಚಿಯನ್ನು ಅರಿತ ಮಂಗಲೇಶನು ಪುಲಕೇಶಿಗೆ ರಾಜ್ಯವನ್ನು ಹಿಂದಿರುಗಿಸಲು ಒಪ್ಪದೆ, ತನ್ನ ಮಗನಿಗೆ ಚಿಕ್ಕಪ್ಪನು ತನ್ನ ಅರಸೊತ್ತಿಗೆ ಬರಬೇಕೆಂದು ಸಂಕಲ್ಪಿಸಿದನು. ಐಹೊಳೆ ಶಾಸನದಲ್ಲಿ ಪುಲಕೇಶಿಯು ತನ್ನ ವಿಷಯದಲ್ಲಿ ಅಸೂಯೆಯುಳ್ಳವನಾಗಿದ್ದುದರಿಂದ ತಾನು ವಂಚಿತ ನಾದೆನೆಂದು ತಿಳಿದು ಅವನ ವಿರುದ್ಧ ಹೋರಾಡಿ ಅವನನ್ನು ಸೋಲಿಸಿ ರಾಜ್ಯವನ್ನು ಪಡೆದನೆಂದು ಹೇಳಿದೆ.

ಉರುರಣ ಪರಾಕ್ರಮ ಎಂಬುದು ಮಂಗಲೇಶನ ಬಿರುದು. ಈತನು ಪರಾಕ್ರಮ ಶಾಲಿಯಾದ ಅರಸನಾಗಿದ್ದನು. ಆಳಿಕೆಯ ಐದನೆಯ ವರ್ಷದಲ್ಲಿ ಉತ್ತರದ ದಿಗ್ವಿಜಯ ವನ್ನು ಮಾಡಿ ಭಾಗೀರಥೀ ತೀರದಲ್ಲಿ ಜಯಸ್ತಂಭವೊಂದನ್ನು ನೆಡಬೇಕೆಂದಿದ್ದ ಈತನು, ನಂತರ ಆ ಯೋಜನೆಯನ್ನು ಬಿಟ್ಟು ಸ್ವರಾಜ್ಯದಲ್ಲಿಯೇ ಮಹಾಕೂಟದ ಮಕುಟೇಶ್ವರ ದೇವಾಲಯದ ಮುಂದೆ ಧರ್ಮಸ್ತಂಭವನ್ನು ನಿಲ್ಲಿಸಿದ. ಆ ವಿಜಯಯಾತ್ರೆಯಲ್ಲಿ ಶೇಖರಿ ಸಿದ್ದ ಹಣವೆಲ್ಲ ವೆಚ್ಚವಾಗಿದ್ದ ಕಾರಣ ಹಾಗೂ ತನ್ನ ತಂದೆ ಮತ್ತು ಅಣ್ಣಂದಿರು ಮಕುಟೇಶ್ವರನಿಗೆ ಈ ಮೊದಲು ಕೊಟ್ಟಿದ್ದ ದತ್ತಿಯು ಸಾಲದೇ ಇದ್ದುದರಿಂದಲೂ ಕಿಸುವೊಳಲ್, ಕೆಂದೂರು, ನಂದಿಗ್ರಾಮ, ವ್ರೀಹಿಮುಖ, ಶ್ರೀಯಂಬಾಟಕ ಮುಂತಾದ ಗ್ರಾಮಗಳನ್ನು ತನ್ನ ಮಲತಾಯಿಯಾದ ದುರ್ಲಭದೇವಿಯ ಅನುಮತಿಯಿಂದ ದೇವರಿಗೆ ದಾನ ಮಾಡಿದನೆಂದು ಇವನ ಮಹಾಕೂಟದ ಸ್ತಂಭಶಾಸನ ತಿಳಿಸುತ್ತದೆ.

ಈತನು ಉತ್ತರ ದಂಡಯಾತ್ರೆಯಲ್ಲಿ ಸೋಲಿಸಿದ ಅರಸರಲ್ಲಿ ಕಲತ್ಸುರಿ (ಕಲಚೂರಿ) ವಂಶದ ಶಂಕರಗಣ ಹಾಗೂ ಬುದ್ಧವರ್ಮರು ಪ್ರಮುಖರು. ಶಂಕರಗಣನು ಯುದ್ಧ ದಲ್ಲಿ ಮಡಿದು ಅವನ ಮಗನಾದ ಬುದ್ಧವರ್ಮನು ಸೋಲಿಸಲ್ಪಟ್ಟನು. ಇದು ಕ್ರಿ.ಶ.ಸು. ೬೦೧ರಲ್ಲಿ ನಡೆಯಿತೆನ್ನಲಾಗಿದೆ. ಈ ಕಲಚುರಿಯರ ವಿರುದ್ಧದ ಯುದ್ಧವು ೧ನೆಯ ಪುಲಕೇಶಿ ಬದುಕಿದ್ದಾಗ ನಡೆಯಿತೆಂದು ಪಂಚಮುಖಿಯವರು ಊಹಿಸಿದ್ದಾರೆ. ಇದು ಸಂದೇಹಾಸ್ಪದ. ಚಾಳುಕ್ಯವಂಶದ ಸ್ವಾಮಿರಾಜನೆಂಬುವವನು ೧೮ ಕದನಗಳಲ್ಲಿ ಜಯವನ್ನು ಸಂಪಾದಿಸಿದ್ದು, ಇಂತಹವನೂ ಮಂಗಲೇಶನಿಂದ ಸೋಲಿಸಲ್ಪಟ್ಟನು. ಈತನು ರೇವತೀದ್ವೀಪ—ಈಗಿನ ರತ್ನಗಿರಿ ಜಿಲ್ಲೆಯಲ್ಲಿ ವೆಂಗುರ್ಲಕ್ಕೆ ದಕ್ಷಿಣಕ್ಕಿರುವ ರೇಡಿ—ವನ್ನು ಆಳುತ್ತಿದ್ದನೆಂದೂ ಈ ಪ್ರದೇಶ ನಂತರ ಮಂಗಲೇಶನಿಂದ ನಿಯಮಿತನಾದ ಧ್ರುವರಾಜ ಇಂದ್ರವರ್ಮನ ಅಧಿಕಾರದ ವ್ಯಾಪ್ತಿಗೊಳಪಟ್ಟಿತ್ತೆಂದೂ ಶಾಸನದಿಂದ ತಿಳಿದಿದೆ.

ಮಂಗಲೇಶನ ವ್ಯಕ್ತಿತ್ವದ ವರ್ಣನೆ ಮಹಾಕೂಟ ಶಾಸನದಲ್ಲಿ ಸೊಗಸಾಗಿ ಮೂಡಿ

ಬಂದಿವೆ. ಈತನು ಮಹೇಂದ್ರನಂತೆ ದುರ್ಧರ್ಷನೂ ರಾಮನಂತೆ ಅಪರಾಜಿತನೂ ಶಿಬಿಯಂತೆ ದಾತಾರನೂ ಯುಧಿಷ್ಠಿರನಂತೆ ಸತ್ಯಸಂಧನೂ ವಾಸುದೇವನಂತೆ ಶ್ರೀಮಂತನೂ ಸಮುದ್ರನಂತೆ ಗಂಭೀರನೂ ಪೃಥ್ವಿಯಂತೆ ಕ್ಷಮಾಶೀಲನೂ ಆಗಿದ್ದನಂತೆ. ಇಂತಹ ಅರಸನು ಸಹ ಅಧಿಕಾರಲಾಲಸೆಗೆ ಬಲಿಯಾಗಿ ಪ್ರಾಪ್ತವಯಸ್ಕನಾದ ಪುಲಕೇಶಿಗೆ ರಾಜ್ಯವನ್ನು ಹಿಂದಿರುಗಿಸಲಿಲ್ಲ. ಸುತ್ತಲಿನ ಪರಿಸ್ಥಿತಿಯನ್ನು ಅರಿತ ಪುಲಕೇಶಿ ತನ್ನ ಬೆಂಬಲಿಗರ ಸಹಾಯದಿಂದ ಕದನಕ್ಕೆ ಸಿದ್ಧನಾದನು. ಈತನು 'ಅಪಮುದ್ಧ ಚರಿತ ವ್ಯವಸಾಯ ಬುದ್ಧಿ'ಯಾದನೆಂದು ಐಹೊಳೆ ಶಾಸನ ಹೇಳುತ್ತದೆ. ಇದನ್ನು 'ಓಡಿ ಕಾಡಿಗೆ ಸೇರಿದನು' ಎಂದು ಈ ಮೊದಲು ಅರ್ಥೈಸಲಾಗಿದ್ದು, ಇದಕ್ಕಿಂತ 'ದಂಗೆಯೆದ್ದು ಹಕ್ಕನ್ನು ಸ್ಥಾಪಿಸಿದನು' ಎಂಬ ಅರ್ಥ ಹೆಚ್ಚು ಸಮಂಜಸವಾದುದೆಂದು ಇತ್ತೀಚೆಗೆ ತೋರಿಸಲಾಗಿದೆ. ಈ ಕದನದಲ್ಲಿ ಚಿಕ್ಕಪ್ಪನು ಮರಣಹೊಂದಿದನು.

ಪೆದ್ದವಡಗೂರಿನಲ್ಲಿ ದೊರೆತ ಸಮಕಾಲಿನ ಕನ್ನಡ ಶಾಸನವೊಂದು ಈ ಕುರಿತು ಬೆಳಕನ್ನು ಚೆಲ್ಲಿದೆ. "ನಡನೂರೊಳ್ ರಣವಿಕ್ರಮನನ್ ಎಱೆಯತಿಯಡಿಗಳೆಳ್ಪತ್ತು ಸಿಂಬಿಗೆ ಕಾಳಗವೊಳ್ವಿಲೆ ಎಱಿದು ಗೆಲ್ದು" ಅಲ್ಲಿನ ಮಹಾಜನರನ್ನೂ ತಮ್ಮ ಜೀವಿತಕ್ಕಾಗಿ ಬೇಕಾದ ಭೂಮಿಯನ್ನು ಕೇಳಿಕೊಳ್ಳಿರೆಂದು ಆಜ್ಞಾಪಿಸಿದಾಗ ಅವರು ನಡನೂರು ಗ್ರಾಮವನ್ನೇ ಸರ್ವಮಾನ್ಯವಾಗಿ ಬಿಡಬೇಕೆಂದು ಬಯಸಿದರಂತೆ. ಎಱೆಯ ಎಂಬುದು ಪುಲಕೇಶಿ ಇನ್ನೂ ಅರಸನಾಗುವ ಮುನ್ನ ಪಡೆದಿದ್ದ ನಾಮಧೇಯ. ಶಾಸನದಲ್ಲಿ ಇದನ್ನು ಸತ್ಯಾಶ್ರಯ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಭಟ್ಟಾರರ ದತ್ತಿ ಎಂದು ಹೇಳಿದೆ. ಇದರಿಂದಲೂ ದಾನಿಯು ಇಮ್ಮಡಿ ಪುಲಕೇಶಿ ಎಂಬುದು ಖಚಿತವಾಗುತ್ತದೆ. ಲಕ್ಷ್ಮೇಶ್ವರದ ೧೧ನೆಯ ಶತಮಾನದ ಶಾಸನದಲ್ಲಿ ಈತನನ್ನು ಎರೆಯಮ್ಮನೆಂದು ಹೆಸರಿಸಿರುವುದೂ ಇಲ್ಲಿ ಗಮನಾರ್ಹ. ಮಂಗಲೇಶನಿಗೆ ರಣವಿಕ್ರಾಂತನೆಂಬ ಬಿರುದಿದೆ. ಸ್ವಭುಜಬಲದಿಂದ ರಣವಿಕ್ರಮನೆಂಬ ಹೆಸರನ್ನು ಧರಿಸಿದವನು ಎಂದು ಪುಲಕೇಶಿಯ ಲೋಹನೇರ್ ತಾಮ್ರ ಶಾಸನದಲ್ಲಿ ಹೇಳಿರುವುದನ್ನು ಗಮನಿಸಿ ರಣವಿಕ್ರಮ ಎಂಬುದು ಮಂಗಲೇಶನ ಬಿರುದಾಗಿರಬಹುದೆಂದು ಊಹಿಸಬಹುದು. ರಣವಿಕ್ರಾಂತ, ರಣವಿಕ್ರಮ ಎಂಬುವು ಸಮಾನಾರ್ಥಕ ಪದಗಳು. ಇವುಗಳನ್ನೆಲ್ಲ ಆಧರಿಸಿ ಡಾ. ಕೆ. ವಿ. ರಮೇಶ್ ಪುಲಕೇಶಿಗೂ ಮಂಗಲೇಶನಿಗೂ ಬಾಣ ರಾಜ್ಯದ ಎಳ್ಪತ್ತು ಸಿಂಬಿಗೆಯಲ್ಲಿ ಕದನವಾಗಿರಬಹುದೆಂದು ಸೂಚಿಸಿದ್ದಾರೆ. ಶಾಸನದಲ್ಲಿ ಹೇಳಿದಂತೆ ಎಱೆಯಪನು ಮಂಗಲೇಶನನ್ನು ಇರಿದುಕೊಂದ. ಎಂತಲೇ ಸತ್ಯಾಶ್ರಯ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಭಟಾರನೆಂಬ ಬಿರುದನ್ನೂ ಅಲ್ಲಿಯೇ ಆತ ಧರಿಸಿದನು.

ತಂದೆ ಹಾಗೂ ಚಿಕ್ಕಪ್ಪನಂತೆ ಪುಲಕೇಶಿಯೂ ಅಪ್ರತಿಮವೀರನಾಗಿದ್ದನು. ಜೊತೆಗೆ ತರುಣರಕ್ತ ಇವನ ಧಮನಿಗಳಲ್ಲಿ ಹರಿಯುತ್ತಿತ್ತು. ವಂಶದ ಹಿರಿಯರು ಕಟ್ಟಿದ ರಾಜ್ಯದ ರಕ್ಷಣೆಯ ಹೊಣೆ ಇವನದಾಯಿತು. ನ್ಯಾಯವಾಗಿ ತನಗೆ ಸೇರಬೇಕಾದ ರಾಜ್ಯವನ್ನು ಶೌರ್ಯದ ಮೂಲಕವೇ ಪಡೆದು ಅದನ್ನು ಕಾಪಾಡಿಕೊಳ್ಳುವ ಹಾಗೂ ಚಾಲುಕ್ಯ

ರಾಜ್ಯವನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸುವ ಕಾರ್ಯವನ್ನು ಕೈಗೊಂಡನು. ಅರಮನೆಯಲ್ಲಿ ಆಂತರಿಕ ಕಲಹ ಉಂಟಾಗಿ ಶಾಂತಿಯು ಕದಡಿದ ಸಂದರ್ಭವನ್ನು ಉಪಯೋಗಿಸಿಕೊಂಡು ರಾಜ್ಯದ ವೈರಿಗಳು ಆಕ್ರಮಣಶೀಲರಾದರು. ಮಹಾಕೂಟದ ಮಂಗಲೇಶನ ಶಾಸನದಲ್ಲಿ ಗಂಗ, ಮೂಷಕ, ಪಾಂಡ್ಯ, ದ್ರಮಿಳ, ಚೋಳ, ಅಳುಕ, ವೈಜಯಂತ ಮುಂತಾದ ರಾಜರನ್ನು ಅವನು ಸೋಲಿಸಿದನೆಂದು ಹೇಳಿದೆ. ಇವರೆಲ್ಲ ಸೇಡು ತೀರಿಸಿಕೊಳ್ಳಲು ಕಾದಿದ್ದರು. ಪುಲಕೇಶಿಯು ಇವರೊಡನೆ ಸ್ನೇಹ ಬೆಳಸಿ ತನ್ಮೂಲಕ ಮಂಗಲೇಶನನ್ನು ಸೋಲಿಸಲು ಸಮರ್ಥನಾದನೆಂದೂ ಆದರೆ ತಾನು ರಾಜನಾದ ಬಳಿಕ ಇವರನ್ನು ಕರಗತಮಾಡಿಕೊಳ್ಳಬೇಕೆಂದು ಇವರ ವಿರುದ್ಧವೇ ದಂಡಯಾತ್ರೆ ಮಾಡಿದನೆಂದೂ ಕೆಲವರು ಪಂಡಿತರು ಊಹಿಸಿದ್ದಾರೆ. ಇದು ಎಷ್ಟರಮಟ್ಟಿಗೆ ಸತ್ಯವೋ ಹೇಳಲಾಗದು. ಆದರೆ ಕ್ರಿ.ಶ. ೬೩೪ರಲ್ಲಿ ಬರೆಯಲಾದ ಐಹೊಳೆಯಲ್ಲಿರುವ ಶಾಸನ ಇವನ ದಿಗ್ವಿಜಯ ಯಾತ್ರೆಯ ವಿವರಗಳನ್ನು ಕೊಟ್ಟಿದೆ.

ಹೊರಗಿನ ಶತ್ರುಗಳೇ ಅಲ್ಲದೆ ರಾಜ್ಯದೊಳಗೇ ಕೆಲವರು ಸಾಮಂತರು ಆಗಿನ ಅರಾಜಕತೆಯನ್ನು ಹಿಡಿದು ಪುಲಕೇಶಿಯ ವಿರುದ್ಧ ದಂಗೆ ಎದ್ದರು. ಇವರಲ್ಲಿ ಅಪ್ಪಾಯಿಕ ಮತ್ತು ಗೋವಿಂದ ಎಂಬವರಿಬ್ಬರು. ಇವರು ತಮ್ಮ ಗಜಸೈನ್ಯದೊಂದಿಗೆ ಭೀಮಾನದಿಯ ಉತ್ತರ ತೀರದಲ್ಲಿ ನುಗ್ಗಿದರು. ಆದರೆ ಇವರನ್ನು ಎದುರಿಸಲು ಬಂದ ಪುಲಕೇಶಿಯ ಸೈನ್ಯಬಲವನ್ನು ನೋಡಿಯೇ ಅಪ್ಪಾಯಿಕನು ಹೆದರಿ ಓಡಿಹೋದನು, ಇನ್ನೊಬ್ಬನು ಸೋತು ಶರಣಾಗತನಾದನು. ಹೀಗೆ ತನ್ನ ವಿರುದ್ಧ ದಂಗೆಯೆದ್ದ ಶತ್ರುಗಳನ್ನು ಸೋಲಿಸಿದ ಪುಲಕೇಶಿಯು, ಇತರ ರಾಜರೂ ಮಾಂಡಲಿಕರೂ ಇದೇ ರೀತಿಯಲ್ಲಿ ದಂಗೆ ಏಳಲು ಅವಕಾಶ ಕೊಡಬಾರದೆಂದು ಯೋಚಿಸಿ ತಾನೇ ದಂಡೆಯಾತ್ರೆಯನ್ನು ಕೈಗೊಂಡನು. ಈ ಅಪ್ಪಾಯಿಕ ಮತ್ತು ಗೋವಿಂದರನ್ನು ಗುರುತಿಸಲು ಸಾಧ್ಯವಾಗಿಲ್ಲ. ಅವರಲ್ಲಿ ಒಬ್ಬನಾದರೂ ಮಂಗಲೇಶನ ಮಗನಾಗಿರಬಹುದೆಂಬ ಊಹೆ ಇದೆ.

ಐಹೊಳೆಯ ಶಾಸನದ ಕವಿಯಾದ ರವಿಕೀರ್ತಿ ಪುಲಕೇಶಿಯು ಕಾದಿದ ಎಲ್ಲ ಯುದ್ಧಗಳನ್ನೂ ಸೇರಿಸಿ ಪ್ರಶಸ್ತಿಯನ್ನು ಬರೆದಂತೆ ತೋರುತ್ತದೆ. ಇದರ ಪ್ರಕಾರ ಪುಲಕೇಶಿಯು ತನ್ನ ಯಾತ್ರೆಯನ್ನು ಪಶ್ಚಿಮದಿಂದ ಆರಂಭಿಸಿ ಉತ್ತರದ ಕಡೆಗೆ ಹೋಗಿ, ನಂತರ ಪೂರ್ವಕ್ಕೆ ತಿರುಗಿ ಅಲ್ಲಿಂದ ದಕ್ಷಿಣಾಭಿಮುಖವಾಗಿ ಹೋಗಿ ಕೊನೆಗೆ ರಾಜಧಾನಿಗೆ ಹಿಂತಿರುಗಿದನೆಂದು ತಿಳಿಯುವುದು. ಆದರೆ ಈ ದಂಡಯಾತ್ರೆ ಒಂದೇ ಬಾರಿಗೆ ನಡೆಯಿತೆಂದು ಹೇಳುವುದು ಕಷ್ಟ. ಹಾಗೆಯೇ ರವಿಕೀರ್ತಿ ಹೇಳಿದ ಕ್ರಮದಲ್ಲಿಯೇ ಪುಲಕೇಶಿ ತನ್ನ ಶತ್ರುಗಳನ್ನು ದಮನಮಾಡಿದನೆಂದು ಹೇಳುವುದೂ ಕಠಿನವಾಗುತ್ತದೆ.

ಪುಲಕೇಶಿಯು ಮೊದಲು ದಂಡೆತ್ತಿ ಹೋದುದು ಬನವಾಸಿಗೆ. ಇವನ ತಂದೆಯಾದ ಕೀರ್ತಿವರ್ಮನು ಸಹ ಕದಂಬರನ್ನು ಸೋಲಿಸಿದನೆಂದು ಹೇಳಿದ್ದೇವೆ. ಆಗ ಅವರು ಅವನ ಮಾಂಡಲಿಕತ್ವವನ್ನು ಒಪ್ಪಿಕೊಂಡರು. ಆದರೆ ಮಂಗಳೇಶನಿಗೂ ಪುಲಕೇಶಿಗೂ ನಡುವಣ ವಿರಸದ ಘಟನೆಯ ಸಂದರ್ಭದಲ್ಲಿ ಅವರು ಪುನಃ ಬನವಾಸಿಯಲ್ಲಿ ಸ್ವತಂತ್ರ

ವಾಗಿ ಆಳಲು ಯತ್ನಿಸಿದರೆಂದು ಕಾಣುತ್ತದೆ. ಆದ್ದರಿಂದಲೇ ಪುಲಕೇಶಿಯು ಕದಂಬರ ವಿರುದ್ಧ ಕಾದು ಅವರನ್ನು ಸದೆಬಡಿದನು; ಬನವಾಸಿ ಮತ್ತು ಇತರ ದುರ್ಗಗಳನ್ನು ವಶಪಡಿಸಿಕೊಂಡನು. ನಂತರ ಬನವಾಸಿಗೆ ಹೊಂದಿಕೊಂಡಿದ್ದ ತುಳುನಾಡಿನ ಆಳುಪರನ್ನು ಸೋಲಿಸಿದನು. ಆಳುಪೇಂದ್ರನು ಎಲ್ಲ ಕಾಲವೂ ಪುಲಕೇಶಿಯ ಸನ್ನಿಧಾನದಲ್ಲೇ ಇದ್ದು ಅವನ ಸೇವೆಯನ್ನು ಸಲ್ಲಿಸುತ್ತ ಕೃತಕೃತ್ಯನಾದನೆಂದು ಕವಿ ಹೇಳಿದ್ದಾನೆ. ಆಳುಪರಂತೆಯೇ ಗಂಗರೂ ಸಹ ಪುಲಕೇಶಿಗೆ ಶರಣಾಗಿ ತಮ್ಮ ಕೋಶವನ್ನು ಇವನಿಗೆ ಅರ್ಪಿಸಿದರು. ಗಂಗ ಅರಸನು ಮುಷ್ಕರನ ತಮ್ಮನಾದ ಪೊಲವೀರನೆಂದು ಊಹಿಸಬಹುದು.

ಕೊಂಕಣದಲ್ಲಿ ಆಳುತ್ತಿದ್ದ ಮೌರ್ಯಕುಲದ ಸಾಮಂತರು ಇವನನ್ನು ಎದುರಿಸಲಾರದೆಹೋದರು. ಅಲ್ಲಿಂದ ಮುಂದೆ ಪಶ್ಚಿಮ ಸಮುದ್ರದಲ್ಲಿನ ಪುರಿ ಬಂದರನ್ನು ಪುಲಕೇಶಿ ಆಕ್ರಮಿಸಿದನು. ಈ ಸಂದರ್ಭದಲ್ಲಿ ಅವನು ತನ್ನ ನೌಕಾಬಲವನ್ನು ಉಪಯೋಗಿಸಿದನು. ಮದಗಜಗಳಂತೆ ಭೀಕರವಾಗಿದ್ದ ದೊಡ್ಡ ನಾವೆಗಳ ಸೈನ್ಯದಿಂದ ಆ ಬಂದರನ್ನು ಮುತ್ತಿದನಂತೆ. ಈ ಪುರಿ ಎಂಬ ಬಂದರು ಮುಂಬಯಿಯ ಸಮೀಪದಲ್ಲಿರುವ ಎಲಿಫಾಂಟಾ ಎಂಬ ದ್ವೀಪ. ಪುಲಕೇಶಿಯ ಈ ವಿಜಯಗಳನ್ನು ಕಂಡ ಲಾಟ ಮತ್ತು ಮಾಳವ ದೇಶದ ಅರಸರು ಅವನ ಸಾಮಂತರಾಗಿರಲು ಒಪ್ಪಿಕೊಂಡರು. ಗುಜರಾತ ದೇಶ ಚಾಲುಕ್ಯ ರಾಜ್ಯದ ಒಂದು ಪ್ರಾಂತವಾಗಿ ಮಾರ್ಪಟ್ಟಿತು.

ಉತ್ತರ ಹಿಂದುಸ್ಥಾನದಲ್ಲಿ ಪುಲಕೇಶಿಗೆ ಸಮಕಾಲೀನನಾಗಿ ಕನೋಜದ ರಾಜಧಾನಿಯಿಂದ ಶ್ರೀಹರ್ಷನು ಆಳುತ್ತಿದ್ದನು. ಇವನ ಕಾಲದಲ್ಲಿ ಮತ್ತೊಮ್ಮೆ ಉತ್ತರ ಭಾರತವೆಲ್ಲ ಏಕಸಾಮ್ರಾಜ್ಯಾಧಿಪತ್ಯಕ್ಕೆ ಒಳಪಟ್ಟಿದ್ದು, ಸಕಲೋತ್ತರಾಪಥೇಶ್ವರ ಎಂಬ ಸಾರ್ಥಕವಾದ ಬಿರುದನ್ನು ಆತ ಧರಿಸಿದ್ದನು. ಈ ಅರಸನು ದಕ್ಷಿಣ ಭಾರತವನ್ನು ಸಹ ಆಕ್ರಮಿಸಿ ಅಖಂಡ ಭಾರತದ ಸಾರ್ವಭೌಮನಾಗುವ ಕನಸನ್ನು ಕಾಣುತ್ತಿದ್ದನು. ಆದಕಾರಣ ತನ್ನ ರಾಜ್ಯದಲ್ಲಿನ ಅಪ್ರತಿಮ ಭಟರನ್ನೆಲ್ಲ ಒಂದುಗೂಡಿಸಿ, ಉಕ್ಕಿಬರುವ ಮಹಾಸಮುದ್ರದಂತಹ ಅಸಂಖ್ಯಾತ ಸೇನಾಬಲದೊಡನೆ ಸಾಗಿದನು. ಆದರೆ ದಂಡಯಾತ್ರೆ ಕೈಗೊಂಡಿದ್ದ ಪುಲಕೇಶಿಯ ಸಾಮರ್ಥ್ಯವನ್ನು ಇವನು ಗಣನೆಗೆ ತಂದುಕೊಂಡಿರಲಿಲ್ಲ. ಪುಲಕೇಶಿಯ ಹಂಬಲವೇನೂ ಕಡಿಮೆಯದಾಗಿರಲಿಲ್ಲ. ಉತ್ತರ ದಿಗ್ವಿಜಯಕ್ಕಾಗಿ ಅವನೂ ಮುಂದೆ ಸಾಗಿದ್ದನು. ಈ ಮಲ್ಲರಿಬ್ಬರೂ ಒಬ್ಬರನ್ನೊಬ್ಬರು ಎದುರಿಸಿದರು. ನರ್ಮದಾನದಿಯ ತೀರ ಇವರ ರಣಭೂಮಿಯಾಯಿತು.

ಎದೆಗುಂದದೆ ಕಾದಿದ ಕರ್ಣಾಟಕದ ಸಿಂಹದ ಮುಂದೆ ಉತ್ತರಾಪಥದ ಮದಿಸಿದಾನೆಯ ಆಟ ಸಾಗಲಿಲ್ಲ. ತನ್ನ ಎಲ್ಲ ಆಸೆಗಳನ್ನೂ ಬದಿಗೊತ್ತಿ ಜೀವದಾಸೆಗಾಗಿ ರಣರಂಗದಿಂದ ಓಡಬೇಕಾಯಿತು, ಈ ಉತ್ತರಾಪಥೇಶ್ವರ. ಇದನ್ನು ಐಹೊಳೆಯ ಶಾಸನದ ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಈ ಘಟನೆಯನ್ನು ಕುರಿತಾದ ಆ ಪದ್ಯ ಹೀಗಿದೆ :

ಅಪರಿಮಿತವಿಭೂತಿಸ್ಫೀತಸಾಮಂತಸೇನಾ
ಮಕುಟಮಣಿಮಯೂಖಾಕ್ರಾಂತಪಾದಾರವಿಂದಃ
ಯುಧಿಪತಿತಗಜೇಂದ್ರಾನೀಕಬೀಭತ್ಸಭೂತಃ
ಭಯವಿಗಲಿತ ಹರ್ಷೋ ಯೇನ ಚಾಕಾರಿ ಹರ್ಷಃ ॥

ಅನೇಕಾನೇಕ ಸಾಮಂತರಿಂದ ಓಲೈಸಲ್ಪಡುತ್ತಿದ್ದ ಹರ್ಷನು ತನ್ನ ಗಜದಳ ಅಸಹಾಯಕವಾಗಿ ಹತವಾಗಿ ಬೀಳುತ್ತಿದ್ದುದನ್ನು ಕಂಡು ಭಯದಿಂದ ಕಂಗೆಟ್ಟ. ಹರ್ಷ ಎಂಬುದು ಅವನ ಹೆಸರಾದರೂ ಅವನಿಗೆ ಕಾದಿಟ್ಟದ್ದು ದುಃಖವೇ. ಇಲ್ಲಿ ಹರ್ಷ ಎಂಬ ಪದದ ಮೇಲಿನ ಶ್ಲೇಷೆ ಗಮನಾರ್ಹ. ಅಲ್ಲದೆ ಇದು ಆ ಕದನದ ಗಂಭೀರತೆಯನ್ನು ಸಹ ತೋರಿಸುತ್ತದೆ. ಭಾರತದ ಎರಡು ಭಾಗಗಳ, ಉತ್ತರಾಪಥ ಹಾಗೂ ದಕ್ಷಿಣಾಪಥಗಳ, ನಡುವೆ ಹಿರಿಮೆಗಾಗಿ ನಡೆದ ಹೋರಾಟವಿದು. ಕರ್ಣಾಟಕದ ಇತಿಹಾಸದಲ್ಲಿ ಇದೊಂದು ಪ್ರಮುಖವಾದ ಘಟನೆ.

ಇದರ ಪರಿಣಾಮವಾಗಿ ಪುಲಿಕೇಶಿಯು ೯೯,೦೦೦ ಗ್ರಾಮಗಳನ್ನೊಳಗೊಂಡ ಮೂರು ಮಹಾರಾಷ್ಟ್ರಕಗಳಿಗೆ ಅಧಿಪತಿಯಾದನು. ಕೆಲವರು ಪುಲಕೇಶಿಯು ಹರ್ಷನನ್ನು ಸೋಲಿಸಿದ ಮೇಲೆ ಮಹಾರಾಷ್ಟ್ರಕತ್ರಯವನ್ನು ಗೆದ್ದನೆಂದೂ ಅದಕ್ಕಾಗಿಯೇ ವಿಂಧ್ಯ ಪರ್ವತದ ಬಳಿ ನರ್ಮದಾ ತೀರದಲ್ಲಿ ತಂಗಿದ್ದನೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಇದು ಹೇಗೇ ಇರಲಿ, ಮಹಾರಾಷ್ಟ್ರಕತ್ರಯ ಯಾವುದು ? ಎಂಬುದರ ವಿಷಯವಾಗಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಶಾಸನದಲ್ಲಿ ಪುಲಕೇಶಿಯು

ಅಗಮದಧಿಪತಿತ್ವಂ ಯೋ ಮಹಾರಾಷ್ಟ್ರಕಾಣಾಂ ।
ನವನವತಿ ಸಹಸ್ರಗ್ರಾಮಭಾಜಾಂ ತ್ರಯಾಣಾಂ ॥

ಎಂದು ಹೇಳಿರುವುದರಿಂದ ಮಹಾರಾಷ್ಟ್ರಕತ್ರಯದಲ್ಲಿ ೯೯,೦೦೦ ಗ್ರಾಮಗಳಿದ್ದುದು ಸ್ಪಷ್ಟವಾಗುತ್ತದೆ. ಪುಲಕೇಶಿಯು ತನ್ನ ವಿರುದ್ಧ ದಂಗೆ ಎದ್ದವರನ್ನೂ ಶತ್ರುರಾಜರನ್ನೂ ದಮನ ಮಾಡಿದ ನಂತರ ರಾಜ್ಯಾಭಿಷೇಕ ಮಾಡಿಕೊಂಡನೆಂದು ಹೇಳಬೇಕು. ಈ ಮಹಾರಾಷ್ಟ್ರಕತ್ರಯ ಆಡಳಿತದ ಸೌಕರ್ಯಕ್ಕಾಗಿ ಮಾಡಿಕೊಂಡ ಮೂರು ದೊಡ್ಡ ದೇಶಭಾಗಗಳು. ಇವು ಮಹಾರಾಷ್ಟ್ರ, ಕರ್ಣಾಟಕ ಹಾಗೂ ಪಶ್ಚಿಮ ತೀರದ ಕೊಂಕಣಗಳಾಗಿರಬಹುದು.

ಹರ್ಷನನ್ನು ಸೋಲಿಸಿದ ನಂತರ ಪುಲಕೇಶಿ ಪೂರ್ವ ದಿಕ್ಕಿಗೆ ತಿರುಗಿದನು. ಕೋಸಲ ಮತ್ತು ಕಲಿಂಗ ದೇಶಗಳ ಅರಸರು ಇವನ ಸೈನ್ಯದ ಸುಳುಹನ್ನು ಕೇಳಿ ಭಯಗ್ರಸ್ತರಾದರು. ಕೋಸಲದೇಶ (ಮಧ್ಯಭಾರತ)ದಲ್ಲಿ ಪಾಂಡುವಂಶಿಗಳೂ ಕಲಿಂಗ (ಈಗಿನ ಒರಿಸ್ಸಾ) ಪ್ರಾಂತದಲ್ಲಿ ಪೂರ್ವಗಂಗರೂ ಆಳುತ್ತಿದ್ದರು. ಇವರನ್ನು ಹಿಮ್ಮೆಟ್ಟಿಸಿದ ಬಳಿಕ ಪುಲಕೇಶಿ ಪಿಷ್ಟಪುರದ (ಈಗಿನ ಆಂಧ್ರಪ್ರದೇಶದ ಗೋದಾವರಿ ಜಿಲ್ಲೆಯ ಪೀಠಾಪುರಂ) ಕೋಟೆಯನ್ನು ವಶಪಡಿಸಿಕೊಂಡನು. ಕುನಾಲ ಪ್ರದೇಶ (ಏಲೂರಿನ ಬಳಿ ಇರುವ ಕೊಲ್ಲೇರು) ಆಗ ವೆಂಗಿದೇಶದ ಭಾಗವಾಗಿತ್ತು. ಪುಲಕೇಶಿಯ ದಿಗ್ವಿಜಯಕ್ಕೆ

ಮೊದಲು ವಿಷ್ಣುಕುಂಡಿನ್ ಮನೆತನದವರು ಅಲ್ಲಿ ಆಳುತ್ತಿದ್ದರು. ಆದರೆ ಇತ್ತೀಚಿಗೆ ದೊರೆತ ಶಾಸನಾಧಾರಗಳಿಂದ ಪುಲಿಕೇಶಿ ಕೊಲ್ಲೇರುವಿಗೆ ಬಂದಾಗ ಅಲ್ಲಿ ವಿಷಮ ಪರಿಸ್ಥಿತಿಯಿದ್ದು ಅದು ಅನಾಥವಾಗಿತ್ತು ಎಂದು ತಿಳಿದಿದೆ. ಇದು ಸಹ ಪುಲಕೇಶಿಯ ಕೈವಶವಾಯಿತು.

ಪುಲಕೇಶಿಯ ಕೊನೆಯ ಹೋರಾಟ ನಡೆದುದು ಪಲ್ಲವ ಅರಸನೊಡನೆ. ದಿಗ್ವಿಜಯದ ಮುಕ್ಕಾಲು ಭಾಗವನ್ನು ಮುಗಿಸಿ ದಕ್ಷಿಣಕ್ಕೆ ಬಂದಿದ್ದ ಪುಲಕೇಶಿಗೆ ಕಾಂಚೀಪುರದಲ್ಲಿ ಆಳುತ್ತಿದ್ದ ಪಲ್ಲವರ ಅರಸನು ಪ್ರಬಲ ವಿರೋಧಿಯಾದನು. ಆದರೆ ಪುಲಕೇಶಿಯ ಉನ್ಮತ್ತವಾದ ಸೈನ್ಯದ ಮುಂದೆ ಪಲ್ಲವರ ಆಟ ಸಾಗಲಿಲ್ಲ.

ಕವಿ ರವಿಕೀರ್ತಿ ಈ ಘಟನೆಯನ್ನು ಕುರಿತು ಹೀಗೆಂದಿದ್ದಾನೆ:

ಉದ್ಧೂತಾಮಲಚಾಮರಧ್ವಜಶತಚ್ಛತ್ರಾಂಧಕಾರೈರ್ಬಲೈಃ
ಶೌರ್ಯೋತ್ಸಾಹರಸೋದ್ಧತಾರಿಮಥನೈರ್ಮೌಲಾದಿಭಿಃ ಷಡ್ವಿಧೈಃ
ಆಕ್ರಾಂತಾತ್ಮಬಲೋನ್ನತಿಂ ಬಲರಜಸ್ಸಂಛನ್ನಕಾಂಚೀಪುರ
ಪ್ರಾಕಾರಾಂತರಿತಪ್ರತಾಪಮಕರೋದ್ಯಃ ಪಲ್ಲವಾನಾಂ ಪತಿಂ (ಪ. ೨೯)

ಪುಲಕೇಶಿಯ ಸೈನ್ಯ ಶೌರ್ಯ ಉತ್ಸಾಹಗಳಿಂದ ಉದ್ಧತರಾದ ಶತ್ರುಗಳನ್ನು ನಿಗ್ರಹಿಸಿದಂತಹ ಷಡ್ವಿಧ ಸೇನಾಬಲಗಳಿಂದ ಕೂಡಿದ್ದು. ಅದು ಮುನ್ನಡೆದಾಗ ಎದ್ದ ಧೂಳಿನಿಂದಲೇ ಕಾಂಚೀಪುರ ಆವೃತವಾಯಿತು. ಅಲ್ಲದೆ ಆ ಸೇನೆಯಲ್ಲಿ ನೂರಾರು ಚಾಮರ ಧ್ವಜ ಛತ್ರ ಮೊದಲಾದುವುಗಳನ್ನು ಮೇಲಕ್ಕೆ ಎತ್ತುವುದರಿಂದ ಉಂಟಾದ ಅಂಧಕಾರದಿಂದ ಪಲ್ಲವಪತಿಯ ಪ್ರತಾಪಶಾಲಿಯಾದ ಸೈನ್ಯವು ಕೋಟೆಯೊಳಗಡೆಯೇ ಇರುವಂತೆ ಆಯಿತಂತೆ. ಇದು ಉತ್ಪ್ರೇಕ್ಷೆಯಿರಬಹುದು. ಆದರೆ ಚಾಲುಕ್ಯರಿಗೂ ಪಲ್ಲವರಿಗೂ ನಡುವೆ ನಡೆದ ಹೋರಾಟದ ತೀವ್ರತೆಯನ್ನು ಇದು ಸೂಚಿಸುತ್ತದೆ.

ದಕ್ಷಿಣ ಭಾರತದ ಇತಿಹಾಸದಲ್ಲಿ ಚಾಲುಕ್ಯ ಹಾಗೂ ಪಲ್ಲವರ ನಡುವೆ ನಡೆದ ಈ ಯುದ್ಧ ಒಂದು ಮಹತ್ತ್ವದ ಘಟನೆಯಾಯಿತು. ಮುಂದಿನ ಕೆಲ ಶತಮಾನಗಳವರೆಗೆ ಈ ಘಟನೆ ಪರಿಣಾಮಕಾರಿಯಾಗಿ ಕರ್ನಾಟಕ ಹಾಗೂ ತಮಿಳು ನಾಡುಗಳ ಇತಿಹಾಸಗಳ ಮೇಲೆ ತನ್ನ ಪ್ರಭಾವವನ್ನು ಬೀರಿತು. ಚಾಲುಕ್ಯ ಪಲ್ಲವರ ನಡುವೆ ಅಂದು ಆರಂಭವಾದ ವೈಷಮ್ಯ, ಹೋರಾಟ ಕರ್ನಾಟಕದಲ್ಲಿ ಈ ಚಾಲುಕ್ಯರ ನಂತರ ಆಳಿದ ರಾಜಮನೆತನದವರ ಮತ್ತು ತಮಿಳುನಾಡಿನಲ್ಲಿ ಪಲ್ಲವರ ನಂತರ ಆಳಿದ ವಂಶಸ್ಥರ ನಡುವೆ ಮುಂದುವರಿದು. ಇದು ವಂಶಪಾರಂಪರ್ಯವಾಗಿ ನಡೆದುಬಂದ ಹೋರಾಟವಾಗಿ ಪರಿಣಮಿಸಿತು.

ಪಲ್ಲವರನ್ನು ಸೋಲಿಸಿದ ಬಳಿಕ ಪುಲಕೇಶಿ ಕಾವೇರೀ ನದಿಯನ್ನು ದಾಟಿ, ಚೋಳ ಕೇರಳ ಪಾಂಡ್ಯ ಮೇಲಿದ್ದ ಅವರ ವರ್ಚಸ್ಸನ್ನು ತೆಗೆದುಹಾಕಿ ಸಂತೋಷಗೊಳಿಸಿದನು. ಇಲ್ಲಿಗೆ ಪುಲಕೇಶಿಯ ದಿಗ್ವಿಜಯ ಯಾತ್ರೆ ಮುಗಿದಂತಾಯಿತು. ನಂತರ ಇವನು ದೇವಬ್ರಾಹ್ಮಣರನ್ನು ಪೂಜಿಸಿ ರಾಜಧಾನಿಯಾದ ವಾತಾಪಿ ಪಟ್ಟಣವನ್ನು ಹೊಕ್ಕನು. ಈ ಯಾತ್ರೆಯ ಪರಿಣಾಮವಾಗಿ ಕರ್ನಾಟಕ ಸಾಮ್ರಾಜ್ಯ ಇವನ ಕಾಲಕ್ಕೆ

ಗುಜರಾತದಿಂದ ಪೀಠಾಪುರದವರೆಗೆ, ನರ್ಮದಾ ನದಿಯಿಂದ ಪೆನ್ನಾರ್‌ವರೆಗೆ ಹಾಗೂ ಇಡೀ ದಕ್ಷಿಣದ ತಪ್ಪಲಿನ (Deccan plateau) ವರೆಗೆ ಹಬ್ಬಿತು.

ಪುಲಕೇಶಿಯ ಈ ದಿಗ್ವಿಜಯಗಳ ಕಾಲಗಳನ್ನು ಕುರಿತು ಭಿನ್ನಾಭಿಪ್ರಾಯಗಳಿವೆ. ಈ ಮೊದಲೇ ಹೇಳಿದಂತೆ ಈ ದಿಗ್ವಿಜಯ ಒಂದೇ ಸಮನೆ ಆರಂಭವಾಗಿ ಮುಕ್ತಾಯಗೊಳ್ಳಲಿಲ್ಲ. ರವಿಕೀರ್ತಿ ಸೂಚಿಸಿರುವ ಕ್ರಮದಲ್ಲಿಯೇ ಅದು ನಡೆಯದೆಯೂ ಇದ್ದಿರಬಹುದು. ಆತನು ಕೊಟ್ಟಿರುವ ವಿವರಗಳನ್ನು ಇತರ ಆಧಾರಗಳೊಂದಿಗೆ ಸಮನ್ವಯಿಸಿದಾಗ ಕೆಲವು ಅಂಶಗಳು ಗೋಚರವಾಗುತ್ತವೆ ಎಂದಿದ್ದಾರೆ ಡಾ. ರಮೇಶ್. ಪುಲಕೇಶಿಯ ಆಳಿಕೆಯ ೩ನೆಯ ವರ್ಷದ ಹೈದರಾಬಾದ್ ತಾಮ್ರಶಾಸನದಲ್ಲಿ ಆತನನ್ನು "ಸಮರಶತಸಂಘಟ್ಟಸಂಸಕ್ತಪರನೃಪತಿಪರಾಜಯೋಪಲಬ್ಧ ಪರಮೇಶ್ವರಾ ಪರನಾಮಧೇಯಃ" ಎಂದು ವರ್ಣಿಸಿದೆ. ಪುಲಕೇಶಿಯ ನಂತರ ಆಳಿದ ಅರಸರ ಶಾಸನಗಳಲ್ಲಿ ಈತನು ಈ ಪರಮೇಶ್ವರನೆಂಬ ಹೆಸರನ್ನು ಹರ್ಷನನ್ನು ಸೋಲಿಸಿದ ಬಳಿಕ ಧರಿಸಿದನೆಂದು ಸೂಚಿತವಾಗಿದೆ. "ಸಮರಸಂಸಕ್ತಸಕಲೋತ್ತರಾಪಥೇಶ್ವರ ಶ್ರೀ ಹರ್ಷವರ್ಧನ ಪರಾಜಯೋಪಾತ್ತ ಪರಮೇಶ್ವರಾಪರನಾಮಧೇಯಃ" ಎಂಬೀ ಮಾತುಗಳನು ಮೇಲಿನ ಮಾತಿನೊಡನೆ ಹೋಲಿಸಿದಾಗ ಪರನೃಪತಿ ಎಂಬುದು ಸಕಲೋತ್ತರಾಪಥೇಶ್ವರನಿಗೆ ಅನ್ವಯಿಸಬಹುದಾದ ಪದವೆಂದಾದೀತು. ಆದ್ದರಿಂದ ಪುಲಕೇಶಿಯು ಆಳಿಕೆಯ ೩ನೆಯ ವರ್ಷದೊಳಗಾಗಿಯೇ ಹರ್ಷನನ್ನು ಎದುರಿಸಿರಬೇಕೆಂಬುದು ಊಹೆ. ಪುಲಕೇಶಿಯ ಕೊಪ್ಪರಂ ತಾಮ್ರಶಾಸನದ ಕಾಲ ಅಕ್ಟೋಬರ್, ೬೩೧. ಅದರಲ್ಲಿ ವಿಷ್ಣುವರ್ಧನನು ಆಂಧ್ರಾಧಿಪತಿ ಎನಿಸಿಕೊಂಡನೆಂದಿದ್ದರೂ ಅವನನ್ನು ಪೃಥ್ವೀ ಯುವರಾಜ ಎಂದು ಕರೆದಿರುವುದರಿಂದ ಈ ಆಂಧ್ರದ ವಿಜಯ ಆಗತಾನೆ, ಸುಮಾರು ೬೩೦–೩೧ರ ನಡುವೆ, ಆಗಿರಬಹುದು; ಬಹಳ ಹಿಂದಿನದಲ್ಲ ಎಂಬುದು ಇನ್ನೊಂದು ವಾದ. ಇವೆರಡು ವಾದಗಳನ್ನೂ ಒಪ್ಪಲು ಆತಂಕಗಳಿವೆ.

ಆದರೆ ಪುಲಕೇಶಿ ಪಲ್ಲವರನ್ನು ಎರಡು ಬಾರಿ ಎದುರಿಸಿದನೆಂಬುದನ್ನೂ, ಮೊದಲ ಬಾರಿ ಮಹೇಂದ್ರವರ್ಮನೂ ಎರಡನೆಯ ಬಾರಿ ನರಸಿಂಹವರ್ಮನೂ ಅವನ ವಿರೋಧಿಗಳಾಗಿದ್ದರೆಂಬುದನ್ನೂ ಒಪ್ಪವೆ, ಪುಲಕೇಶಿ ಹೋರಾಡಿದುದು ನರಸಿಂಹವರ್ಮನೊಡನೆ ಮಾತ್ರ ಎಂದು ಒಂದು ವಾದವನ್ನು ಈಗ ಮುಂದಿಡಲಾಗಿದೆ. ನಂದಿವರ್ಮ ಪಲ್ಲವಮಲ್ಲನ ಕಾಶಾಕ್ಕುಡಿ ಶಾಸನದಲ್ಲಿ ಮಹೇಂದ್ರವರ್ಮನು ತನ್ನ ಎಲ್ಲ ಶತ್ರುಗಳನ್ನೂ ಕಾಂಚೀಪುರಕ್ಕೆ ಸಮೀಪದಲ್ಲಿರುವ ಪುಲ್ಲಲೂರ್ ಕದನದಲ್ಲಿ ಸೋಲಿಸಿದನೆಂಬ ಹೇಳಿಕೆಯನ್ನು ಅರ್ಥೈಸಿ, ಪುಲಕೇಶಿಯನ್ನು ಹೊರತುಪಡಿಸಿ ಆ ಪಲ್ಲವನ ಬೇರಾವ ಸಮಕಾಲೀನನೂ ಕಾಂಚೀಪುರದವರೆಗೆ ಹೋಗುವ ಸಾಮರ್ಥ್ಯ ಹೊಂದಿರಲಿಲ್ಲವೆಂಬ ಕಾರಣದಿಂದ, ಪುಲ್ಲಲೂರಿನಲ್ಲಿ ಅವನನ್ನು ವಿರೋಧಿಸಿದವನು ಪುಲಕೇಶಿಯೇ ಎಂಬ ಊಹೆಯನ್ನು ಇದುವರೆಗೆ ಎಲ್ಲರೂ ಅನುಸರಿಸಿದ್ದಾರೆ. ಆದರೆ ಹಾಗಿಲ್ಲದೆ ಐಹೊಳೆ ಪ್ರಶಸ್ತಿಯನ್ನು ಬರೆದ ಕ್ರಿ.ಶ. ೬೩೪ಕ್ಕೆ ೩–೪ ವರ್ಷಗಳ ಮೊದಲು, ಒಮ್ಮೆ ಮಾತ್ರ ಪುಲಕೇಶಿ ಪಲ್ಲವ ರಾಜ್ಯದ ಮೇಲೆ ದಂಡೆತ್ತಿ ನರಸಿಂಹವರ್ಮನನ್ನು ಸೋಲಿಸಿದನೆಂದು ಹೇಳುವುದು ಹೆಚ್ಚು ಸಮಂಜಸವಾದೀತು.

ಮಣಿಮಂಗಲದಲ್ಲಿ ನಡೆದ ಕದನ ನರಸಿಂಹವರ್ಮನು ಪುಲಕೇಶಿಯನ್ನು ಹಿಮ್ಮೆಟ್ಟಿಸಲು ನಡಸಿದ ಪ್ರಯತ್ನಗಳಲ್ಲೊಂದಾಗಿರಬಹುದು.

ಪುಲಕೇಶಿಯು ಪಿಷ್ಟಪುರವನ್ನು ಕ್ರಿ.ಶ. ೬೧೬ರಲ್ಲಿ ಆಕ್ರಮಿಸಿದ್ದನೆಂದು ಇತ್ತೀಚೆಗೆ ದೊರೆತ ಅವನ ತಾಮ್ರ ಶಾಸನವೊಂದರ ಆಧಾರದಮೇಲೆ ಹೇಳಬಹುದು. ಈ ಶಾಸನ ವಿಕ್ರಮಾದಿತ್ಯನ (I) ಕಾಲದ್ದೆಂದೂ ಅದರ ಕಾಲ ೬೬೩ ಎಂದೂ ಹೇಳುವುದೂ ಸಾಧಾರ ವೆನಿಸದು. ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಪ್ರದೇಶಗಳನ್ನು ಅವನು ಕ್ರಿ.ಶ. ೬೩೧ರ ಸುಮಾರಿಗೆ ವಶಪಡಿಸಿಕೊಂಡನು. ಈ ವೇಳೆಗಾಗಲೇ, ಕ್ರಿ.ಶ. ೬೩೧ಕ್ಕೂ ಮೊದಲೇ, ಪುಲಕೇಶಿಯು ಹರ್ಷವರ್ಧನನನ್ನು ಸೋಲಿಸಿದನು. ಐಹೊಳೆಯ ಶಾಸನದ ಕಾಲ ಕ್ರಿ.ಶ. ೬೩೪-೩೫. ಈ ವೇಳೆಗಾಗಲೇ ಹರ್ಷನು ಪುಲಕೇಶಿಯ ಕೈಯಲ್ಲಿ ಸೋಲನ್ನನುಭವಿಸಿದುದು ಸ್ಪಷ್ಟ. ಆದರೆ ಪುಲಕೇಶಿ ಆಳತೊಡಗಿದ ೩ನೆಯ ವರ್ಷದೊಳಗಾಗಿ ಹರ್ಷನನ್ನು ಸೋಲಿಸುವುದು, ಅಂದಿನ ರಾಜಕೀಯ ಪರಿಸ್ಥಿತಿಗಳಲ್ಲಿ ಅಸಾಧ್ಯವೆನಿಸುವುದು.

ದಿಗ್ವಿಜಯಾನಂತರ ಪುಲಕೇಶಿ ತಾನು ವಶಪಡಿಸಿಕೊಂಡ ಪ್ರದೇಶಗಳ ಆಡಳಿತವನ್ನು ಸ್ಥಿರಗೊಳಿಸುವ ಕಾರ್ಯವನ್ನು ಕೈಗೊಂಡನು. ನಾಸಿಕ ಮತ್ತು ಸುತ್ತಲಿನ ಪ್ರದೇಶಗಳನ್ನು ತನ್ನ ಸೋದರನಾದ ಧರಾಶ್ರಯ ಜಯಸಿಂಹನಿಗೆ ಒಪ್ಪಿಸಿ ಅವನನ್ನು ಪ್ರಾಂತಾಧಿಕಾರಿಯಾಗಿ ನೇಮಿಸಿದನು. ಇನ್ನೊಬ್ಬ ತಮ್ಮನಾದ ಕುಬ್ಜ ವಿಷ್ಣುವರ್ಧನನು ವೆಂಗಿ ಮಂಡಲದ ಅಧಿಪತಿಯಾಗಿ ನೇಮಕಗೊಂಡನು. ಕ್ರಿ.ಶ. ೬೧೬–೧೭ರಲ್ಲಿ ಈತನು ಯುವರಾಜನಾಗಿ ಸಾತಾರೆಯ ಪ್ರಾಂತದಲ್ಲಿ ಆಳುತ್ತಿದ್ದನು. ಈತನ ನೇಮಕ ಪೂರ್ವತೀರದಲ್ಲಿ ನೂತನ ರಾಜ್ಯವೊಂದರ ಉದಯಕ್ಕೆ ನಾಂದಿಯಾಯಿತು. ಕೆಲಕಾಲದ ನಂತರ ಕುಬ್ಜ ವಿಷ್ಣುವರ್ಧನನೂ ನಂತರ ಅವನ ಸಂತತಿಯವರೂ ವೆಂಗಿಯಲ್ಲಿ ಸ್ವತಂತ್ರರಾಗಿ ಆಳತೊಡಗಿದರು. ಅವರು ಇತಿಹಾಸದಲ್ಲಿ ವೆಂಗಿಯ ಪೂರ್ವ ಚಾಲುಕ್ಯರೆಂದು ಪ್ರಸಿದ್ಧರಾಗಿದ್ದಾರೆ. ಇವರ ರಾಜ್ಯ ಪೂರ್ವಸಮುದ್ರ ತೀರದಲ್ಲಿ ಉತ್ತರದಲ್ಲಿ ಗೋದಾವರಿ ಜಿಲ್ಲೆಯಿಂದ ಹಿಡಿದು ದಕ್ಷಿಣದಲ್ಲಿ ನೆಲ್ಲೂರಿನವರೆಗೂ ಹಬ್ಬಿತು. ಈ ರಾಜ್ಯದ ಆಕ್ರಮಣಕ್ಕಾಗಿ ದಕ್ಷಿಣ ಭಾರತದಲ್ಲಿ ಹೆಸರಾದ ಕರ್ಣಾಟಕ ಹಾಗೂ ತಮಿಳುನಾಡು ಅರಸುಮನೆತನಗಳ ನಡುವೆ ಭೀಕರ ಕದನಗಳೇ ನಡೆದವು. ಬಪ್ಪೂರ ಕುಲದ ಸತ್ಯಾಶ್ರಯ ಧ್ರುವರಾಜ ಇಂದ್ರವರ್ಮನು ರೇವತಿ ದ್ವೀಪದಲ್ಲಿದ್ದ ನಾಲ್ಕು ವಿಷಯಗಳನ್ನೂ ಅನೇಕ ಮಂಡಲಗಳನ್ನೂ ಪುಲಕೇಶಿಯ ಅಧೀನದಲ್ಲಿ ಆಳುತ್ತಿದ್ದನು.

ಪುಲಕೇಶಿಯ ರಾಜ್ಯಭಾರ ಸಮಯದಲ್ಲಿ ಪ್ರಸಿದ್ಧನಾದ ಚೀನಾಯಾತ್ರಿಕ ಹುಯೆನ್ ತ್ಸಾಂಗನು ಭಾರತದಲ್ಲಿ ಪ್ರವಾಸಮಾಡುತ್ತಿದ್ದನು. ಕ್ರಿ.ಶ. ೬೪೦ರಲ್ಲಿ ದಕ್ಷಿಣ ಹಿಂದುಸ್ತಾನ ಬೌದ್ಧವಿಹಾರಗಳನ್ನೂ ಯಾತ್ರಾಸ್ಥಳಗಳನ್ನೂ ನೋಡುತ್ತ, ದ್ರಾವಿಡದೇಶದಿಂದ ಉತ್ತರಕ್ಕೆ ಹೊರಟು ಒಂದು ಘೋರಾರಣ್ಯವನ್ನು ದಾಟಿ, ಕುಸ್ತನಪುಲೊ (ಕೊಂಕಣಪುರ)ಎಂಬ ದೇಶವನ್ನು ಸೇರಿದನು. ಈ ಕುಸ್ತನಪುಲೊ ಈಗಿನ ಕಾರವಾರ ಜಿಲ್ಲೆಯ ಬನವಾಸಿ ಮತ್ತು ಸುತ್ತಲಿನ ಕುಂತಲ ದೇಶವೆಂದು ಊಹಿಸಲಾಗಿದೆ. ಇವನು ಕೊಟ್ಟ

ರುವ ವಿವರಣೆಯನ್ನು ನೋಡಿದರೆ ಇವನು ದ್ರಾವಿಡದೇಶದಿಂದ ನೇರಾಗಿ ಕುಂತಲಕ್ಕೆ ಹೋಗದೆ ಬಹುಶಃ ಹಾದಿ ತಪ್ಪಿ ಪೂರ್ವಘಟ್ಟಗಳ ಕಾಡನ್ನು ಹೊಕ್ಕು ಅಲ್ಲಿಂದ ಬಳಸು ದಾರಿಯಲ್ಲಿ ಕುಂತಲಕ್ಕೆ ಹೋದಂತೆ ತೋರುತ್ತದೆ. ಆದುದರಿಂದ ಇವನು ದ್ರಾವಿಡದೇಶ ದೇಶದಿಂದ ಕುಂತಳಕ್ಕೆ ೨೦೦೦ ಲಿ. ಎಂದರೆ ಸು. ೪೦೦ ಮೈಲಿ ಪ್ರಯಾಣ ಮಾಡಿದೆನೆಂದು ಹೇಳಿದ್ದಾನೆ.

ಕುಂತಲಪುರದಿಂದ ಮುಂದೆ ವಾಯುವ್ಯ ದಿಕ್ಕಿನಲ್ಲಿ ೨೫೦೦ ಲಿ. ಎಂದರೆ ಸುಮಾರು ೫೦೦ ಮೈಲಿ, ಪ್ರಯಾಣಮಾಡಿ ಮೊಹೊಲಚ ದೇಶವನ್ನು ಸೇರಿದನೆಂದು, ಅಲ್ಲಿಂದ ಪಶ್ಚಿಮಕ್ಕೆ ೨೦೦ ಮೈಲಿಗಳ ದೂರದಲ್ಲಿ ನರ್ಮದಾ ನದಿಯನ್ನು ದಾಟಿ ಪೊಲುಕುಚ್‌ಪೆನ್–ಭರುಕಚ್ಛವನ್ನು ಪ್ರವೇಶಿಸಿದನೆಂದು, ಅವನ ಸಂಚಾರಕ್ಕೆ ಸಂಬಂಧಿಸಿದ ಟಿಪ್ಪಣಿಗಳಲ್ಲಿ ಹೇಳಿದೆ. ಇವನು ಹೇಳುವ ಮೊಹೊಲಚ ಈಗಿನ ಮಹಾರಾಷ್ಟ್ರದ ಖಾನದೇಶ ಹಾಗೂ ಸತಾರಾ ಜಿಲ್ಲೆಗಳ ನಡುವಣ ಭಾಗ. ಇಲ್ಲಿದ್ದಾಗ ಹುಯೆನ್‌ತ್ಸಾಂಗನು ಪುಲಕೇಶಿಯ ವಿಷಯವನ್ನು ಅರಿತನು. ತನ್ನ ಬರೆವಣಿಗೆಯಲ್ಲಿ ಈ ಪ್ರಯಾಣಿಕನು ಪುಲಕೇಶಿಯ ಸಾಮ್ರಾಜ್ಯ, ರಾಜಧಾನಿ, ಜನರ ಸ್ವಭಾವ ಮುಂತಾದ ವಿವರಗಳನ್ನು ಕೊಟ್ಟಿದ್ದಾನೆ. ಪುಲಕೇಶಿ ಹರ್ಷನೊಡನೆ ಯುದ್ಧಮಾಡಿದಾಗ ನಾಸಿಕವು ಅವನ ನೆಲೆವೀಡಾಗಿದ್ದಿತು. ಇದನ್ನು ಅವನ ರಾಜಧಾನಿ ಎಂದೇ ತಪ್ಪಾಗಿ ಭಾವಿಸಿದ್ದಾನೆ. ಮುಂದುವರಿದು ಆತನ ಬಗೆಗೆ ಹೀಗೆನ್ನುತ್ತಾನೆ :

"ಇಂತಹ ಬಲಿಷ್ಠರಾದ ಸೈನಿಕರೂ ಆನೆಗಳೂ ರಾಜನಲ್ಲಿರುವುದರಿಂದ ನೆರೆಹೊರೆಯ ಅರಸನನ್ನು ಕಂಡರೆ ಲಕ್ಷ್ಯವಿಲ್ಲ. ಇವನು ಕ್ಷತ್ರಿಯನು. ಇವನ ಹೆಸರು ಪುಲೊಕಿಷೆ. ಇವನ ರಾಜ್ಯತಂತ್ರವು ವಿಶಾಲ ವ್ಯಾಪ್ತಿಯುಳ್ಳದ್ದು. ಇವನ ಧರ್ಮಕಾರ್ಯಗಳು ಲೋಕಕ್ಕೆ ಹಿತಕಾರಿಯಾಗಿವೆ. ಪ್ರಜೆಗಳು ಇವನಿಗೆ ಬಹಳ ವಿಧೇಯರಾಗಿದ್ದಾರೆ. ಈಗ ಶೀಲಾದಿತ್ಯ ಮಹಾರಾಜನು ಪೂರ್ವದಿಂದ ಪಶ್ಚಿಮದವರೆಗಿರುವ ದೇಶಗಳನ್ನು ಗೆದ್ದು ದೂರವಲ್ಲಿಯ ಅನ್ಯದೇಶಗಳಿಗೂ ದಂಡೆತ್ತಿ ಹೋಗಿದ್ದಾನೆ. ಆದರೆ ಈ ದೇಶದ ಜನರು ಮಾತ್ರ ಅವನ ಆಧಿಪತ್ಯಕ್ಕೆ ಒಳಪಟ್ಟಿಲ್ಲ. ಇವರನ್ನು ಜಯಿಸಬೇಕೆಂದು ಆವನು ಪಂಚಪ್ರಾಂತಗಳಿಂದಲೂ ದಂಡನ್ನು ಕೂಡಿಸಿ ತಾನೇ ಅದರ ನಾಯಕತ್ವವನ್ನು ವಹಿಸಿ ಅವರ ಮೇಲೆ ಹೋದರೂ ಅವರು ಇವನಿಗೆ ಬಗ್ಗಲಿಲ್ಲ."

ಇಲ್ಲಿ ಉಕ್ತವಾದ ಶೀಲಾದಿತ್ಯ ಮಹಾರಾಜನೇ ಶ್ರೀ ಹರ್ಷವರ್ಧನನು. ಐಹೊಳೆಯ ಶಾಸನದ ಹೇಳಿಕೆಯನ್ನು ಸಮಕಾಲೀನನೂ ಪ್ರತ್ಯಕ್ಷದರ್ಶಿಯೂ ಹರ್ಷವರ್ಧನನಿಂದಲೇ ಗೌರವಿಸಲ್ಪಟ್ಟವನೂ ಆದ ಹುಯೆನ್‌ತ್ಸಾಂಗನ ಹೇಳಿಕೆ ಸ್ಥಿರಪಡಿಸುತ್ತದೆ.

ಪುಲಕೇಶಿಯ ಈ ದಿಗ್ವಿಜಯ ಅವನ ಕೀರ್ತಿಯನ್ನು ದಶದಿಕ್ಕುಗಳಲ್ಲಿಯೂ ಮೊಳಗಿಸಿತು. ಭಾರತದೇಶವನ್ನೂ ಮೀರಿ, ದೂರದ ಇರಾಣ ದೇಶಕ್ಕೂ ಇವನ ಖ್ಯಾತಿ ಹಬ್ಬಿತು. ಆ ದೇಶದ ರಾಜನಾದ ಇಮ್ಮಡಿ ಖುಸ್ರು ಪುಲಕೇಶಿಯೊಡನೆ ಪತ್ರವ್ಯವಹಾರ ನಡಸಿದನೆಂದೂ ಪುಲಕೇಶಿಯು ಇರಾಣಕ್ಕೆ ತನ್ನ ರಾಯಭಾರಿಯೊಬ್ಬನನ್ನು ಕಳುಹಿಸಿದ

ನೆಂದೂ ಟಬರಿ ಎಂಬ ಅರಬ್‌ದೇಶದ ಇತಿಹಾಸಕಾರನ ಬರೆವಣಿಗೆಯಿಂದ ತಿಳಿದಿದೆ.

ಖುಸ್ರುವಿನ ಮಗ ಷಿರಿಯ. ಇವನು ತಾನೇ ರಾಜ್ಯಭಾರ ಮಾಡಬೇಕೆನ್ನುವ ಅವಸರದ ಆಶೆಯಲ್ಲಿ ತಂದೆಯನ್ನು ದೂರೀಕರಿಸಲು ಅವನ ಮೇಲೆ ಕೆಲವು ಅಪಾದನೆಗಳನ್ನು ಹೊರಿಸಿದ ಸಂದರ್ಭದಲ್ಲಿ ಖುಸ್ರುವು ತಾನು ನಿರಪರಾಧಿ ಎಂದು ತೋರಿಸಿಕೊಂಡಾಗ ತನ್ನ ಮಗನಿಗೆ ಹೀಗೆ ಹೇಳಿದನಂತೆ : "ಎರಡು ವರ್ಷಗಳ ಹಿಂದೆ ಹಿಂದು ದೇಶದ ಅರಸನಾದ ಪುಲಕೇಶಿಯು ನಮ್ಮ ರಾಜ್ಯಭಾರದ ೩೬ನೆಯ ವರ್ಷದಲ್ಲಿ ನಮಗೊಂದು ಪತ್ರವನ್ನೂ ನಿಮ್ಮೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಪತ್ರಗಳನ್ನೂ ಪಾರಿತೋಷಕಗಳನ್ನೂ ರಾಯಭಾರಿಗಳ ಮೂಲಕ ಕಳುಹಿಸಿದ್ದನು. ನಿನಗೆ ಅವನು ಕತ್ತಿ ಪಾರಿವಾಳಗಳನ್ನು ಕಳುಹಿಸಿದ್ದನ್ನು ಮರೆತುಬಿಟ್ಟೆಯಾ? ನಿನಗೆ ಬರೆದಿದ್ದ ಪತ್ರದಮೇಲೆ 'ರಹಸ್ಯ'ವೆಂದು ಹಿಂದುದೇಶದ ಭಾಷೆಯಲ್ಲಿ ಬರೆದಿದ್ದುದನ್ನು ಕುರಿತು ಅದನ್ನು ನಿನಗೆ ಕೊಡದೆ ನಾವೇ ಆ ಭಾಷೆಯನ್ನರಿತವನನ್ನು ಕರೆಯಿಸಿ ಓದಿದೆವು. ಅದರಲ್ಲಿ 'ಸಂತೋಷವಾಗಿರು, ಎದೆಗುಂದಬೇಡ, ಖುಸ್ರುವಿನ ೪೮ನೆಯ ವರ್ಷದಲ್ಲಿ ನೀನು ಇರಾಣದ ಸಾರ್ವಭೌಮನಾಗುವೆ—ಪುಲಕೇಶಿ' ಎಂದಿದ್ದಿತು." ಈ ಘಟನೆಯನ್ನು ಟಬರಿ ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಇದರಿಂದ ಕರ್ಣಾಟಕವು ಆಗ ಇರಾಣ ದೇಶದೊಡನೆ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿತ್ತೆಂದು ತಿಳಿದುಬರುತ್ತದೆ.

ಔರಂಗಬಾದ್ ಸಮೀಪದಲ್ಲಿ ಸುಪ್ರಸಿದ್ಧವಾದ ಅಜಂತಾ ಗುಹೆಗಳಲ್ಲಿ ಕಾಣಬರುವ ಚಿತ್ರಗಳಲ್ಲೊಂದರಲ್ಲಿ ಇರಾಣ ದೇಶದ ರಾಯಭಾರಿಯನ್ನು ಪುಲಕೇಶಿಯು ತನ್ನ ಸಭೆಗೆ ಬರಮಾಡಿಕೊಳ್ಳುವ ಒಂದು ಸಂದರ್ಭವನ್ನು ತೋರಿಸಲಾಗಿದೆ. ಇದರಲ್ಲಿ ಇರಾಣ ದೇಶದ ರಾಯಭಾರಿಯು ತೊಟ್ಟಿದ್ದ ಉಡುಪುಗಳು ಗಮನಾರ್ಹವಾಗಿವೆ. ಈ ಚಿತ್ರ ಟಬರಿ ಹೇಳುವ ಘಟನೆಗೆ ಸಂಬಂಧಪಟ್ಟುದೆಂದು ಊಹಿಸಲಾಗಿದೆ.

ಆದರೆ ಪುಲಕೇಶಿಯ ಕೀರ್ತಿ ಏರಿದಷ್ಟು ತೀವ್ರಗತಿಯಲ್ಲಿಯೇ ಇಳಿಮುಖವೂ ಆಯಿತು. ಯುದ್ಧದಲ್ಲಿ ಸೋತು ರಾಜಧಾನಿಯಿಂದ ಓಡಿದ ಪಲ್ಲವರ ನರಸಿಂಹವರ್ಮನು ಸೋಲಿನ ಸೇಡನ್ನು ತೀರಿಸಿಕೊಳ್ಳಲು ಸುಮಾರು ಒಂದು ದಶಕದ ಕಾಲ ಸಕಲ ಸಿದ್ಧತೆಗಳನ್ನೂ ಮಾಡಿಕೊಂಡನು. ಆ ಬಳಿಕ ಪ್ರಬಲವಾದ ಸೇನೆಯೊಡನೆ ಹೊರಟ ನರಸಿಂಹವರ್ಮನು ಆಂಧ್ರಪ್ರದೇಶದ ಕರ್ನೂಲಿನ ಸಮೀಪದ ಪರಿಯಳ ಮತ್ತು ಅನಂತಪುರದ ಸಮೀಪದ ಸುರಮರ ಎಂಬೆರಡು ಕದನರಂಗಗಳಲ್ಲಿ ಪುಲಕೇಶಿಯನ್ನು ಸೋಲಿಸಿದನು. ಇದರಿಂದಲೇ ತೃಪ್ತನಾಗದ ಪಲ್ಲವನು ಚಾಲುಕ್ಯನನ್ನು ಬೆಂಬತ್ತಿ ಹೋಗಿ ಅವನ ರಾಜಧಾನಿಯಾದ ವಾತಾಪಿಯನ್ನು ವಶಪಡಿಸಿಕೊಂಡನು. ಪಲ್ಲವರ ಪ್ರತೀಕಾರದ ಉರಿಯನ್ನು ಈ ಬಾರಿ ಚಾಲುಕ್ಯರ ಬಲ ಎದುರಿಸಲಾರದೆ ಹೋಯಿತು. ಪುಲಕೇಶಿ ಕೊನೆಗೊಮ್ಮೆ ಸೋಲನ್ನು ಒಪ್ಪಿಕೊಳ್ಳಬೇಕಾಗಿ ಬಂದಿತು. ನರಸಿಂಹವರ್ಮನು ಚಾಲುಕ್ಯರ ರಾಜಧಾನಿಯಾದ ವಾತಾಪಿ (ಬಾದಾಮಿ)ಯನ್ನು ಸೂರೆಗೊಂಡು 'ವಾತಾಪಿಕೊಂಡ'ಎಂಬ ಬಿರುದನ್ನು ಧರಿಸಿದನು. ದಿಗ್ವಿಜಯಾನಂತರ, ಪುಲಕೇಶಿಯು ಬಾದಾಮಿಯಲ್ಲಿ ಸ್ಥಾಪಿಸಿದ್ದ ಜಯಸ್ತಂಭವನ್ನು ಕಿತ್ತುಹಾಕಿ ವಿಜಯದ ಸ್ಮಾರಕವೆಂದು ತನ್ನದೊಂದು ಶಾಸನ

ವನ್ನು ಬರೆಯಿಸಿದನು. ಅಂದು, ಸುಮಾರು ಕ್ರಿ.ಶ. ೬೪೩ನೆಯ ವರ್ಷದಲ್ಲಿ, ಹುಟ್ಟಿದ ಶಾಸನ ಇಂದೂ ಅಲ್ಲಿವೆ. ಕ್ರಿ.ಶ. ೬೪೩ರಿಂದ ೬೫೫ರ ವರೆಗೆ ೧೨ ವರ್ಷಕಾಲ ಚಾಲುಕ್ಯ ರಾಜ್ಯವು ಪಲ್ಲವರ ಸ್ವಾಧೀನವಾಯಿತು. ಬಹುಶಃ ಈ ಹೋರಾಟದಲ್ಲಿ ಪುಲಕೇಶಿ ಸಾವನ್ನಪ್ಪಿರಬಹುದು.

ಕರ್ಣಾಟಕದ ಇತಿಹಾಸದಲ್ಲಿಯೇ, ದಕ್ಷಿಣ ಭಾರತದ ಇತಿಹಾಸದಲ್ಲಿಯೇ, ಪುಲಕೇಶಿಯ ಸ್ಥಾನ ಹಿರಿದಾದುದು. ಕರ್ಣಾಟಕದಲ್ಲಿ ಮೊದಲ ಸಾಮ್ರಾಜ್ಯ ಸ್ಥಾಪಕನಿವನು. ತಾನು ಅಧಿಕಾರಕ್ಕೆ ಬಂದಾಗ ದೇಶದಲ್ಲಿ ಅರಾಜಕತೆ ತುಂಬಿತ್ತು. ಸಾಮಂತರಾಜರು ಸ್ವತಂತ್ರ ರಾಗಲು ಯತ್ನಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಅರಸನಾಗಿ ಆಳಲು ಬಂದ ಪುಲ ಕೇಶಿಯು ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿ ಚಾಲುಕ್ಯರ ಖ್ಯಾತಿಯು ದೇಶ ವಿದೇಶಗಳಲ್ಲಿ ಹರಡುವಂತೆ ಮಾಡಿದನು. ಇವನು ಕಟ್ಟಿದ ಸೈನ್ಯ ಶೌರ್ಯಸಾಹಸಗಳಿಂದ ಕೂಡಿದ್ದು 'ಕರ್ನ್ನಾಟಕಬಲ'ವೆಂಬ ವಿಶಿಷ್ಟ ಹೆಸರನ್ನು ಪಡೆದಿತ್ತು. 'ಕರ್ನ್ನಾಟಕಬಲ' ಎಂದರೆ ಚಾಲುಕ್ಯರ ಸೇನಾಬಲ ಎನ್ನುವಷ್ಟು ಪ್ರಸಿದ್ಧಿ ಪಡೆದಿತ್ತು.

ಪುಲಕೇಶಿಗೆ ಕದಂಬಾ ಎಂಬ ಹೆಸರಿನ ಪತ್ನಿ ಇದ್ದಳೆಂದು ಇತ್ತೀಚೆಗೆ ದೊರೆತ ಅವನ ಮೊರಟೂರ ಶಾಸನದಿಂದ ತಿಳಿದಿದೆ. ಈಕೆ ಆಳುಪ ವಂಶದ ಮಹಾರಾಜನ ಮಗಳೆಂದು ತೋರುತ್ತದೆ. ಪುಲಕೇಶಿಯು ಪಿಷ್ಟಪುರವನ್ನು ವಶಪಡಿಸಿಕೊಂಡು ಕೊಲ್ಲೇರುವಿನಲ್ಲಿದ್ದಾಗ ಆಳುಪ ಮಹಾರಾಜನು ಮಂಗಲಪುರದಿಂದ (ಎಂದರೆ ಈಗಿನ ಮಂಗಳೂರು) ಕಲೂರ ಪುರಕ್ಕೆ, ಎಂದರೆ ಕೊಲ್ಲೇರುವಿಗೆ ಬಂದನೆಂದೂ ಅಲ್ಲಿಯೇ ಮಡಿದನೆಂದೂ ಹೇಳಿದೆ. ಬಹುಶಃ ಪುಲಕೇಶಿಯು ಸಹಾಯಕ್ಕೆಂದು ಬಂದ ಈತನು ಅಲ್ಲಿನ ಕದನವೊಂದರಲ್ಲಿ ಸಾವನ್ನ ಪ್ಪಿರಬೇಕು. ರಾಣಿಯಾದ ಕದಂಬಾಳನ್ನು ಅಗ್ರಿಮಮಹಾದೇವಿ (ಅಗ್ರಮಹಿಷಿ) ಎಂದು ಕರೆದಿರುವುದರಿಂದ ಪುಲಕೇಶಿಗೆ ಇತರ ರಾಣಿಯರಿರಬೇಕು ಎಂದು ಊಹಿಸಬಹುದು.

ಆದಿತ್ಯವರ್ಮ, ಚಂದ್ರಾದಿತ್ಯ, ವಿಕ್ರಮಾದಿತ್ಯ, ರಣರಾಗವರ್ಮ ಮತ್ತು ಧರಾ ಶ್ರಯ ಜಯಸಿಂಹವರ್ಮ ಇವರು ಪುಲಕೇಶಿಯ ಮಕ್ಕಳು. ಅಂಬೇರಾ ಎಂಬ ಒಬ್ಬ ಹೆಣ್ಣುಮಗಳೂ ಇದ್ದಳೆಂದು ಹೇಳಲಾಗಿದೆ. ಆದಿತ್ಯವರ್ಮನ ಮಗ ಅಭಿನವಾದಿತ್ಯ ಚಂದ್ರಾದಿತ್ಯನು ಸಾವಂತವಾಡಿಯ ಪ್ರದೇಶವನ್ನೂ ಧರಾಶ್ರಯ ಜಯಸಿಂಹವರ್ಮನು ಲಾಟಮಂಡಲ (ಗುಜರಾತ)ವನ್ನೂ ಆಳುತ್ತಿದ್ದರು. ಚಂದ್ರಾದಿತ್ಯನ ಪತ್ನಿಯೇ ಖ್ಯಾತಿ ವೆತ್ತ ಸಂಸ್ಕೃತ ಕವಯಿತ್ರಿ ವಿಜಯಭಟ್ಟಾರಿಕಾ ಎಂಬವಳು.

ಕ್ರಿ.ಶ. ೬೪೩ ರಿಂದ ೬೫೫ರವರೆಗಿನ ಹನ್ನೆರಡು ವರ್ಷಗಳು ಚಾಲುಕ್ಯರಾಜ್ಯದ ದುರ್ದಿನಗಳು. ಪಲ್ಲವ ನರಸಿಂಹವರ್ಮನು ಬಹುಶಃ ಆಗ ಚಾಲುಕ್ಯರಾಜ್ಯವನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದನು. ಪುಲಕೇಶಿಯ ಮಕ್ಕಳು ರಾಜಧಾನಿಯಿಂದ ಹೊರಗಿದ್ದು, ತಮ್ಮ ರಾಜ್ಯವನ್ನು ಹಿಂದಕ್ಕೆ ಪಡೆಯಲು ಪ್ರಯತ್ನಿಸುತ್ತಿದ್ದರು. ಆದರೂ ಈ ವರ್ಷ ಗಳಲ್ಲಿ ನಡೆದ ಘಟನೆ ಯಾವುದೂ ತಿಳಿಯದು. ಪುಲಕೇಶಿಯ ನಂತರ ಜ್ಯೇಷ್ಠನಾದ

ಆದಿತ್ಯವರ್ಮನು ಅವನ ಉತ್ತರಾಧಿಕಾರಿಯಾದನು. ಅವನ ಶಾಸನದಲ್ಲಿ 'ಮಹಾರಾಜಾಧಿರಾಜ' ಮುಂತಾದ ಬಿರುದುಗಳನ್ನು ಅವನು ಧರಿಸಿದ್ದಾನೆ. ಆದರೆ ಪಲ್ಲವರನ್ನು ರಾಜ್ಯದಿಂದ ಹೊಡೆದಟ್ಟಿ ಚಾಲುಕ್ಯರಾಜ್ಯವನ್ನು ಪುನಃ ಸ್ಥಾಪಿಸಿದ ಕೀರ್ತಿ ಪುಲಕೇಶಿಯ ಎರಡನೆಯ ಮಗನಾದ ವಿಕ್ರಮಾದಿತ್ಯನದಾಗಿದೆ.

ಚಾಲುಕ್ಯರ ಸಾಮಂತರಲ್ಲಿ ಪ್ರಮುಖರಾದವರು ಸೇಂದ್ರಕರು. 'ಶಕ್ತಿ' ಎಂಬ ಸಾಮಾಂತ್ಯವನ್ನು ಪಡೆದಿದ್ದ ಇವರು ಮೊದಲು ಕದಂಬರ ಸಾಮಂತರೂ ಆಗಿದ್ದರು. ಹರಿವರ್ಮನ ಸಾಮಂತ ಭಾನುಶಕ್ತಿ ಎಂಬಾತ. ಇತ್ತೀಚೆಗೆ ದೊರೆತ ಮಂಗಲೇಶನ ಹೊಲಿ ತಾಮ್ರ ಶಾಸನದಲ್ಲಿ ಕನ್ನಶಕ್ತಿಯ ಮಗನಾದ ರವಿಶಕ್ತಿಯ ಪ್ರಸ್ತಾಪವಿದೆ. ಕೀರ್ತಿವರ್ಮನೂ ಸೇಂದ್ರಕವಂಶದ ರಾಜಪುತ್ರಿಯನ್ನು ಮದುವೆಯಾಗಿದ್ದನು. ಶ್ರೀವಲ್ಲಭ ಸೇನಾನಂದರಾಜನು ಇಮ್ಮಡಿ ಪುಲಕೇಶಿಯ ಸೋದರಮಾವನೆಂದು ಚಿಪ್ಲೂನ್ ಶಾಸನದಿಂದ ತಿಳಿದಿದೆಯಾಗಿ ಈ ಊಹೆ. ಬಾದಾಮಿಯ ಶಾಸನದಲ್ಲಿನ ಭೀಮಶಕ್ತಿ, ಸಿರುಗುಪ್ಪಿ ಶಾಸನದಲ್ಲಿ ಬರುವ ವಾನಶಕ್ತಿ ಮತ್ತು ಕುಂದಶಕ್ತಿ, ಲಕ್ಷ್ಮೇಶ್ವರ ಶಾಸನದಲ್ಲಿ ಉಲ್ಲೇಖವಾಗಿರುವ ವಿಜಯಶಕ್ತಿಯ ಮಗ ಕುಂದಶಕ್ತಿಯ ಮಗ ದುರ್ಗಶಕ್ತಿ ಇವರುಗಳ ಪರಸ್ಪರ ಸಂಬಂಧಗಳು ತಿಳಿಯವಾದರೂ ಈ ಸೇಂದ್ರಕರು ಚಾಲುಕ್ಯರೊಡನೆ ಹೊಂದಿದ್ದ ಸಂಬಂಧಗಳನ್ನು ಇವು ಸೂಚಿಸುತ್ತವೆ. ಸಿರುಗುಪ್ಪಿ, ಬಾದಾಮಿ, ಅರಳಿಕೊಂಡ ಶಾಸನಗಳು ಪುಲಿಕೇಶಿಯ ಮರಣಾನಂತರ ಇವರಲ್ಲಿ ಹಲವರು ಸ್ವತಂತ್ರವಾಗಿ ಶಾಸನಗಳನ್ನು ಹಾಕಿಸಿಕೊಂಡರೆಂದೂ ಇದು ಅಂದಿನ ಅನಿಶ್ಚಿತ ಪರಿಸ್ಥಿತಿಗೆ ನಿದರ್ಶನವೆಂದೂ ಊಹಿಸಲಾಗಿದೆ. ಅರಳಿಕೊಂಡ ಶಾಸನದಲ್ಲಿ ಪಿಟ್ಟಿಯಮ್ಮನೆಂಬ ಒಬ್ಬ ಆಳುತ್ತಿದ್ದನೆಂದು ಹೇಳಿದೆ. ಈ ಶಾಸನಗಳಲ್ಲಿ ಕಾಲ ನಿರ್ದೇಶನಗಳಿಲ್ಲದಿದ್ದರೂ ಇವುಗಳಲ್ಲಿ ಹಲವು ಬಾದಾಮಿಯನ್ನು ಪಲ್ಲವರು ಆಕ್ರಮಿಸಿದ್ದ ಕಾಲಕ್ಕೆ ಸೇರಿದವುಗಳಾಗಿದ್ದಿರಬಹುದು.

ವಿಕ್ರಮಾದಿತ್ಯ: ವಿಕ್ರಮಾದಿತ್ಯನು ಕ್ರಿ.ಶ. ೬೫೫ರಲ್ಲಿ ಪಟ್ಟಕ್ಕೆ ಬರುವ ಮೊದಲು ಅವನಿಪತಿತ್ರಿತಯಾಂತರಿತವಾಗಿದ್ದ ರಾಜ್ಯವನ್ನು ತಿರುಗಿ ಸಂಪಾದಿಸಿದನೆಂದು ಅವನ ಶಾಸನಗಳಿಂದ ತಿಳಿಯುತ್ತದೆ. ಚಾಲುಕ್ಯ ರಾಜ್ಯಕ್ಕೆ ಮೂವರು ರಾಜರುಗಳಿಂದ ಗ್ರಹಣ ಹಿಡಿದಿತ್ತೆಂದರೆ, ಆ ಮೂವರು ರಾಜರು ಯಾರು ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಆದರೆ ಇದಕ್ಕೆ ಸ್ಪಷ್ಟವಾದ ಉತ್ತರ ದೊರೆತಿಲ್ಲ. ವಿಕ್ರಮಾದಿತ್ಯನ ಸೋದರರೇ ಆಗಿದ್ದ ಆದಿತ್ಯವರ್ಮ ಮತ್ತು ಚಂದ್ರಾದಿತ್ಯರು ಪಲ್ಲವ ನರಸಿಂಹವರ್ಮನೊಡಗೂಡಿದ್ದರೆಂದೂ ಇವರೇ ಆ ಮೂವರು ಅವನಿಪತಿಗಳೆಂದೂ ಒಂದು ಸೂಚನೆ. ಆದರೆ ವಿಕ್ರಮಾದಿತ್ಯನಿಗೂ ಅವನ ಸೋದರರಿಗೂ ನಡುವೆ ವೈಮನಸ್ಯಕ್ಕೆ ಕಾರಣವಿರಲಿಲ್ಲ. ಪುಲಕೇಶಿ ತನ್ನ ದಿಗ್ವಿಜಯದ ಅಂತ್ಯದಲ್ಲಿ ದಕ್ಷಿಣದಲ್ಲಿ ಚೋಳ, ಕೇರಳ ಪಾಂಡ್ಯರನ್ನು ಸೋಲಿಸಿದನಷ್ಟೆ. ಬಹುಶಃ ಅವರು ತದನಂತರ ಪಲ್ಲವರೊಡಗೂಡಿ ಪುಲಕೇಶಿಯನ್ನು ಸೋಲಿಸಲು ಪ್ರಯತ್ನಿಸಿದಂತೆ ತೋರುತ್ತದೆ. ಈ ಮೂವರೇ ಆ ಅರಸರು ಎಂದು ಊಹಿಸುವುದು ಹೆಚ್ಚು ಸಮಂಜಸವಾದೀತು.

ಚಾಲುಕ್ಯರಾಜ್ಯವನ್ನು ಪಲ್ಲವರಿಂದ ಮುಕ್ತಗೊಳಿಸಿದ ಕೀರ್ತಿ ವಿಕ್ರಮಾದಿತ್ಯನಿಗೆ

ಸಲ್ಲುತ್ತದೆ. ಈತನ ಈ ಯತ್ನದಲ್ಲಿ ಗಂಗರ ದುರ್ವಿನೀತನು ಈತನಿಗೆ ಬೆಂಬಲವಾಗಿದ್ದನೆಂಬ ಊಹೆ ಸಹೇತುಕವಾಗಿಲ್ಲವೆಂದು ಈಗಾಗಲೇ ತೋರಿಸಿದೆ. ವಿಕ್ರಮಾದಿತ್ಯನ ಶಾಸನಗಳಿಂದ ಈತನು ಮೂವರು ಪಲ್ಲವ ಅರಸರನ್ನು ಎದುರಿಸಿದನೆಂದು ತಿಳಿದುಬರುತ್ತದೆ. ಗದ್ವಾಲ್, ಹೈದರಾಬಾದ್ ಶಾಸನಗಳಲ್ಲಿ ಈತನು ನರಸಿಂಹವರ್ಮನ ಯಶಸ್ಸನ್ನು ಹೋಗಲಾಡಿಸಿ, ಮಹೇಂದ್ರನ ಪ್ರತಾಪವನ್ನೂ ಅಡಗಿಸಿ, ರಾಜನೀತಿಯಿಂದ ಈಶ್ವರಪೋತರಾಜನನ್ನು ಸೋಲಿಸಿದನೆಂದು ಹೇಳಿದೆ. ಇವರು ಕ್ರಮವಾಗಿ ನರಸಿಂಹವರ್ಮ ಮಹೇಂದ್ರವರ್ಮ (II) ಮತ್ತು ಪರಮೇಶ್ವರವರ್ಮ ಎಂಬ ಪಲ್ಲವ ಅರಸರು. ವಿಕ್ರಮಾದಿತ್ಯನು ಕರ್ನೂಲು, ಅನಂತಪುರ ಜಿಲ್ಲೆಗಳನ್ನೊಳಗೊಂಡಿದ್ದ ಕರ್ಮರಾಷ್ಟ್ರವನ್ನು ನರಸಿಂಹವರ್ಮನಿಂದ ಹಿಂದಕ್ಕೆ ಕಸಿದನು. ಸು. ೭ನೆಯ ಶತಮಾನಕ್ಕೆ ಸೇರಿದ ಗೆದ್ದೆಮನೆ ಶಾಸನದಲ್ಲಿ ಉಲ್ಲೇಖಿತನಾದ ಶೀಲಾದಿತ್ಯನು ಕನೌಜಿನ ಶ್ರೀಹರ್ಷನೆಂದು ಊಹಿಸಲಾಗಿತ್ತು. ಇದು ವಿವಾದಾಸ್ಪದವೂ ಆಗಿತ್ತು. ವಿಕ್ರಮಾದಿತ್ಯನ ಸೋದರರಲ್ಲಿ ಒಬ್ಬನಾದ ಧರಾಶ್ರಯ ಜಯಸಿಂಹವರ್ಮನನ್ನು ಗುಜರಾತ್ ಪ್ರಾಂತದಲ್ಲಿ ನೆಲೆಗೊಳಿಸಿದ ಯಶಸ್ಸು ವಿಕ್ರಮಾದಿತ್ಯನದಾಗಿದೆ. ಈ ಧರಾಶ್ರಯನ ಮಗ ಶ್ರ್ಯಾಶ್ರಯ ಶೀಲಾದಿತ್ಯ. ಈತನು ಯುವರಾಜನಾಗಿದ್ದಾಗಲೇ ತಂದೆಗೆ ಸಹಾಯಕವಾಗಿ ಕದನಗಳಲ್ಲಿ ಪಾಲ್ಗೊಂಡಿದ್ದನು. ತನ್ನ ಹೆಸರಿನಲ್ಲಿಯೇ ಶಾಸನ ಹೊರಡಿಸಿದ್ದ ಈತನು ತಂದೆ ಜೀವಿಸಿದ್ದಾಗಲೇ ಮೃತಿ ಹೊಂದಿದನು. ದೊಡ್ಡಪ್ಪನಿಂದ ಸಹಾಯಪಡೆದು, ಆತನಿಗೆ ಸಹಾಯಕನಾಗಿದ್ದು ಚಾಲುಕ್ಯ ರಾಜ್ಯದ ಉತ್ತರ ಭಾಗದ ರಕ್ಷಣೆಯ ಹೊಣೆಯನ್ನು ಹೊತ್ತಿದ್ದ ಈ ಶ್ರ್ಯಾಶ್ರಯ ಶೀಲಾದಿತ್ಯನೇ ಗೆದ್ದೆಮನೆ ಶಾಸನದ ಶೀಲಾದಿತ್ಯನಾಗಿರಬಹುದೆಂಬ ಊಹೆ ಮೊದಲಿನ ಊಹೆಗಿಂತ ಹೆಚ್ಚು ಯುಕ್ತವಾಗಿದೆ.

ಕ್ರಿ.ಶ. ೬೭೦–೭೧ರಲ್ಲಿ ತನ್ನ ಸೇನೆಯೊಡನೆ ಕಾಂಚೀಪುರದ ಪಶ್ಚಿಮಕ್ಕಿದ್ದ ಮಹಾಸ್ಕಂಧಾವಾರ ಮಲ್ಲಿಯೂರಲ್ಲಿದ್ದ ವಿಕ್ರಮಾದಿತ್ಯನು ೬೭೪ರಲ್ಲಿ ಚೋಳಿಕ ವಿಷಯದಲ್ಲಿ, ಕಾವೇರಿಯ ದಕ್ಷಿಣಕ್ಕಿದ್ದ ಉರಗಪುರ (ಉರೈಯೂರ್)ದಲ್ಲಿ ಬೀಡುಬಿಟ್ಟಿದ್ದನು. ಪಲ್ಲವರ ಶಾಸನಗಳಲ್ಲಿ ಈಶ್ವರಪೋತನು ರಣರಸಿಕಪಟ್ಟಣ (ಬಾದಾಮಿ)ವನ್ನೂ ಮುತ್ತಿ ಹಿಡಿದುಕೊಂಡನೆಂದೂ ವಿಕ್ರಮಾದಿತ್ಯನನ್ನು ಪೆರುವಳನಲ್ಲೂರಿನ ಕದನದಲ್ಲಿ ಸೋಲಿಸಿದನೆಂದೂ ಹೇಳಿದೆ. ಇವುಗಳನ್ನು ಗಮನಿಸಿದರೆ ವಿಕ್ರಮಾದಿತ್ಯನು ತನ್ನ ಆಳಿಕೆಯ (ಕ್ರಿ.ಶ. ೬೫೫–೬೮೧) ಬಹುಕಾಲವನ್ನು ಪಲ್ಲವರ ವಿರುದ್ಧದ ಕದನಗಳಲ್ಲಿಯೇ ವ್ಯಯಿಸಿರಬೇಕೆನಿಸುತ್ತದೆ. ಈತ ತನ್ನ ಮಗನನ್ನು, ಮೊಮ್ಮಗನನ್ನು ಯುದ್ಧಕಲೆಯಲ್ಲಿ ಪ್ರವೀಣತರನ್ನಾಗಿ ತರಬೇತಿಮಾಡಿದನು. ಅವರನ್ನು ತನ್ನೊಡನೆ ಯುದ್ಧರಂಗಕ್ಕೆ ಒಯ್ದನು. ಮಗನಾದ ವಿನಯಾದಿತ್ಯನು ತಂದೆಯು ರಾಜಧಾನಿಯಿಂದ ಹೊರಗೆ ಕದನಗಳಲ್ಲಿ ನಿರತನಾಗಿದ್ದಾಗ, ರಾಜ್ಯದ ಆಡಳಿತದ ಜವಾಬ್ದಾರಿಯನ್ನೂ ವಹಿಸಿದ್ದನು. ಸ್ವತಃ ತಂದೆಯ ಆಜ್ಞೆಯ ಮೇರೆಗೆ ಸೈನ್ಯಾಧಿಪತ್ಯವನ್ನು ವಹಿಸಿ ಶತ್ರುಗಳನ್ನು ಸೋಲಿಸಿದನು. ಇವನಿಗೆ ಇವನ ಮಗ ವಿಜಯಾದಿತ್ಯನೂ ನೆರವು ನೀಡಿದನು.

ವಿಕ್ರಮಾದಿತ್ಯನಿಗೆ ಶ್ರೀವಲ್ಲಭ, ಅನಿವಾರಿತರಣರಸಿಕ, ರಾಜಮಲ್ಲ ಮುಂತಾದ ಬಿರುದುಗಳಿದ್ದವು. ರನ್ನನು ಈತನನ್ನು ಕೊಕ್ಕುಲಿ ವಿಕ್ರಮಾದಿತ್ಯನೆಂದು[10] ಕರೆದಿದ್ದಾನೆ. ಈ ಕಾಲಕ್ಕೆ ಸೇರಿದ ಚಿಕ್ಕನಂದಿಹಳ್ಳಿ ಶಾಸನಗಳಲ್ಲಿ ಉಕ್ತನಾದ ಕೊಕ್ಕುಲಿ ಇವೇ ವಿಕ್ರಮಾದಿತ್ಯ(I) ನಾಗಿರಬೇಕು. ಈತನು ೨೫ ವರ್ಷಗಳೂ ಮಿಕ್ಕಿ, ಸುಮಾರು ಕ್ರಿ.ಶ. ೬೮೧ರ ವರೆಗೂ ಆಳಿ ಚಾಲುಕ್ಯರಾಜ್ಯವು ಪುನಃ ತನ್ನ ಹಿಂದಿನ ವೈಭವಗಳನ್ನು ಮೆರಸುವಂತೆ ಮಾಡಿದನು. ಇದಕ್ಕಾಗಿ ಇವನು ಅವಿಶ್ರಾಂತನಾಗಿ ಕದನಗಳನ್ನು ಹೊಡಬೇಕಾಯಿತು. ಶ್ರಮಕ್ಕೆ ತಕ್ಕ ಪ್ರತಿಫಲ ದೊರೆತು, ತನ್ನ ಹಿರಿಯರು ಕಟ್ಟಿದ ರಾಜ್ಯವನ್ನು ಪುನಃ ಪಡೆಯುವುದರಲ್ಲಿ ಯಶಸ್ವಿಯಾದನು. ಸೇಂದ್ರಕರೂ ಗುಜರಾತಿನಲ್ಲಿ ಆಳುತ್ತಿದ್ದ ಚಾಲುಕ್ಯರೂ ಇವನ ಮಂಡಲಿಕರಾಗಿದ್ದರು. ಸೇಂದ್ರಕ ವಂಶದವನು ದೇವಶಕ್ತಿ. ಸೇಂದ್ರಕ ವಂಶದ ಇನ್ನೊಬ್ಬ ಮಾಂಡಲಿಕ ಜಯಶಕ್ತಿ. ಇವನ ತಂದೆ ಸಿಕುಂಭಿಲ್ಲ ಶಕ್ತಿ, ಅಜ್ಜ ಆದಿತ್ಯಶಕ್ತಿ, ಮುತ್ತಜ್ಜ ಶ್ರೀವಲ್ಲಭ ಭಾನುಶಕ್ತಿ. ಈ ಸೇಂದ್ರಕರು ಇಮ್ಮಡಿ ಪುಲಕೇಶಿಯ ನಂತರ ಸ್ವತಂತ್ರವಾಗಿ ಆಳಲು ಯತ್ನಿಸಿರಬಹುದೆಂದು ಮೇಲೆ ಹೇಳಿದ್ದೇವೆ. ವಿಕ್ರಮಾದಿತ್ಯನು ಇವರನ್ನು ತನ್ನ ಅಧೀನಕ್ಕೆ ತಂದುಕೊಂಡಂತೆ ತೋರುತ್ತದೆ.

ವಿನಯಾದಿತ್ಯ : ವಿಕ್ರಮಾದಿತ್ಯನ ಮಗ ವಿನಯಾದಿತ್ಯನು ಕ್ರಿ.ಶ. ೬೮೧ರಲ್ಲಿ ಪಟ್ಟಕ್ಕೆ ಬಂದನು. ಇವನು ೧೫ ವರ್ಷಗಳ ಕಾಲ, ೬೯೬ರವರೆಗೆ, ಆಳಿದನು. ಈತನ ಆಳಿಕೆಯ ಕಾಲ ಸಾಮ್ರಾಜ್ಯದಲ್ಲಿ ಶಾಂತಿ ಸುಭಿಕ್ಷಗಳ ಕಾಲ. ತಂದೆ ಜೀವಿಸಿದ್ದಾಗಲೇ ಇವನನ್ನು ಯುವರಾಜಪದವಿಗೇರಿಸಿದ್ದನು. ಆದ್ದರಿಂದ ಇವನಿಗೆ ಆಡಳಿತದ ಜವಾಬ್ದಾರಿಯನ್ನು ಹೊರುವುದು ಕಷ್ಟವಾಗಲಿಲ್ಲ. ರಣರಂಗದಲ್ಲಂತೂ ನುರಿತ ಸೈನಿಕನಾಗಿದ್ದನು. ಪಲ್ಲವರೊಡನೆ ನಡೆದ ಕದನಗಳಲ್ಲಿ ತಂದೆಗೆ ಸಹಾಯಕನಾಗಿದ್ದನು. ಜೊತೆಗೆ ತಂದೆ ರಾಜಧಾನಿಯಿಂದ ಹೊರಗಡೆ ಇದ್ದಾಗ ಆಡಳಿತದ ಹೊಣೆಯನ್ನು ಹೊರುವುದರ ಮೂಲಕವೂ ಅವನಿಗೆ ಸಹಾಯ ಮಾಡಿದನು.

ಈತನ ಮಗನ ಕೆಲವು ಶಾಸನಗಳಲ್ಲಿಯೂ ನಂತರ ಹುಟ್ಟಿದ ಶಾಸನಗಳಲ್ಲಿಯೂ ಉತ್ತರಾಪಥದ ಅರಸರ ಮೇಲೆ ಜಯವನ್ನು ಸಾಧಿಸಿ ಅವರಿಂದ ಗಂಗಾ, ಯಮುನಾ, ಪಾಳಿಧ್ವಜ ಮುಂತಾದ ಪಾರಮೈಶ್ವರ್ಯ ಸೂಚಕ ಚಿಹ್ನೆಗಳನ್ನು ತೆಗೆದುಕೊಂಡನೆಂದು ಬರೆದಿದೆ. ಒಂದು ಊಹೆಯ ಮೇರೆಗೆ ಆ ಉತ್ತರಾಪಥದ ರಾಜರಲ್ಲಿ ಒಬ್ಬ ಕನೋಜಿನ ಅರಸ ಯಶೋವರ್ಮ. ಇವನನ್ನು ವಿನಯಾದಿತ್ಯ ಗಂಗಾ ಯಮುನಾ ನದೀತೀರದಲ್ಲಿ ಸೋಲಿಸಿದನೆಂದು ಊಹೆ ಮಾಡಲಾಗಿದೆ. ಕೆಲವರು ಇದಕ್ಕೆ ಬದಲಾಗಿ ಉತ್ತರಾಪಥದ ಅರಸನು ವಜ್ರಟನಾಗಿರಬಹುದೆಂದಿದ್ದಾರೆ. ರಾಷ್ಟ್ರಕೂಟರ ಶಾಸನಗಳಲ್ಲಿ ಈ ಅರಸು ಚಾಲುಕ್ಯರಿಂದ ಸೋಲಿಸಲ್ಪಟ್ಟನೆಂದು ಹೇಳಿದೆ.

ವಿನಯಾದಿತ್ಯನು ದಕ್ಷಿಣದ ಕವೇರ, ಪಾರಸಿಕ ಮತ್ತು ಸಿಂಹಳದ ಅರಸರನ್ನು ಸೋಲಿಸಿದನೆಂದು ಸಹ ಹೇಳಿದೆ. ಕವೇರ ಎಂಬುದು ಕಾವೇರೀ ನದಿಯ ತೀರದ ಪ್ರದೇಶವಾಗಿರಬೇಕು. ಇದು ವಿನಯಾದಿತ್ಯನು ಪಲ್ಲವರ ವಿರುದ್ಧ ಪಡೆದ ವಿಜಯವನ್ನು ಸೂಚಿಸು

ತ್ತದೆ—ಎಂದು ಹಲವರು ವಿದ್ವಾಂಸರು ಸೂಚಿಸಿದ್ದಾರೆ. ಆದರೆ ಶಾಸನದಲ್ಲಿ "ತ್ರೈರಾಜ್ಯ ಕಾಂಚೀಪತಿಬಲಂ ಅವಷ್ಟಭ್ಯ ಕರದೀಕೃತ ಕವೇರ ಪಾರಸಿಕ ಸಿಂಹಳಾದಿ ದ್ವೀಪಾಧಿಪಸ್ಯ ವಿನಯಾದಿತ್ಯಸ್ಯ" ಎಂದು ವಿನಯಾದಿತ್ಯನನ್ನು ವರ್ಣಿಸಲಾಗಿದೆ. ಕಾಂಚೀಪತಿಯನ್ನು ಸೋಲಿಸಿದ ಬಳಿಕ ಕವೇರ, ಪಾರಸಿಕ, ಸಿಂಹಳ ದ್ವೀಪಾಧಿಪರಿಂದ ಕಪ್ಪಕಾಣಿಕೆಗಳನ್ನು ಪಡೆದನೆಂದು ಇದರಿಂದ ಸೂಚಿತವಾಗುತ್ತದೆ. ಇವರನ್ನು ದ್ವೀಪಾಧಿಪರು ಎಂದು ಹೇಳಿರುವುದು, ಜೊತೆಗೆ ಈ ಶಾಸನಗಳಲ್ಲಿ ಒಂದರಲ್ಲಿ ಮಾತ್ರ ಕವೇರ ಎಂಬ ಪದವಿದ್ದು ಉಳಿದವುಗಳಲ್ಲಿ ಕಮೇರ ಎಂದಿರುವುದು—ಈ ಕೆಲವು ಕಾರಣಗಳಿಂದ ಕವೇರ ಎಂಬುದು ಕಾವೇರೀತೀರದ ಪ್ರದೇಶವಾಗಿರದೆ, ಆಗ್ನೇಯ ಏಷ್ಯಾದ ಕಾಂಬೋಡಿಯಾ ದ್ವೀಪವಾಗಿದೆ ಎಂದು ಈಗ ಕೆಲವರು ಸೂಚಿಸಿದ್ದಾರೆ. ಈ ದ್ವೀಪದ ಜನರನ್ನು ಖ್ಮೇರ್ ಎಂದು ಕರೆಯಲಾಗಿದೆ. ಕಮೇರ ಖ್ಮೇರ್ ಪದದ ರೂಪಾಂತರ ಇರಬಹುದು. ಪಲ್ಲವ ಮಹೇಂದ್ರವರ್ಮನು ಕಾಂಬೋಡಿಯಾದ (ಕಂಬುಜದ್ವೀಪ) ಅರಸನನ್ನು ತನ್ನ ಸಾಮಂತನನ್ನಾಗಿ ಮಾಡಿಕೊಂಡಿದ್ದನು. ಪಲ್ಲವರಿಗೆ ಈ ದ್ವೀಪದ ಜನರೊಡನೆ ಅರಸನೊಡನೆ ವ್ಯವಹಾರವಿದ್ದಿತು. ಆದ್ದರಿಂದ ಪಲ್ಲವರನ್ನು ಸೋಲಿಸಿದ ವಿನಯಾದಿತ್ಯನು ಕಮೇರರನ್ನೂ ತನ್ನ ಅಧೀನರನ್ನಾಗಿ ಮಾಡಿಕೊಂಡುದು ಆಶ್ಚರ್ಯವೇನಲ್ಲ. ವಿನಯಾದಿತ್ಯನು ಚೀನಾದೇಶಕ್ಕೆ ತನ್ನ ರಾಯಭಾರಿಗಳನ್ನು ಕಳುಹಿದನೆಂದು ಹೇಳಲಾಗಿದೆ. ಬಹುಶಃ ಅವರನ್ನು ಕಾಂಬೋಡಿಯಾದ ಮೂಲಕ, ಕಮೇರರನ್ನು ಸೋಲಿಸಿದ ನಂತರ, ಕಳುಹಿರಬಹುದು. ಈ ವಿವರಣೆ ಹೆಚ್ಚು ಸಮಂಜಸ.[11]

ವಿನಯಾದಿತ್ಯನಿಗೆ ರಾಜಾಶ್ರಯ ಮತ್ತು ಯುದ್ಧಮಲ್ಲ ಎಂಬ ಬಿರುದುಗಳಿದ್ದುವು. ರನ್ನ ಕವಿಯು ತನ್ನ 'ಗದಾಯುದ್ಧ'ದಲ್ಲಿ ಚಾಲುಕ್ಯರ ವಂಶಾವಳಿಯನ್ನು ಕೊಡುವಾಗ ಇವನನ್ನು ದುರ್ಧರಮಲ್ಲನೆಂದು ವರ್ಣಿಸಿದ್ದಾನೆ. ಈತನ ಪತ್ನಿ ವಿನಯವತಿ. ಪತಿಯ ಮರಣಾನಂತರವೂ ಕೆಲಕಾಲ ಜೀವಿಸಿದ್ದು ಕ್ರಿ.ಶ. ೬೯೯ರಲ್ಲಿ ಬಾದಾಮಿಯಲ್ಲಿ ತ್ರಿಮೂರ್ತಿಗಳ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದಳು. ವಿನಯಾದಿತ್ಯನಿಗೆ ಕುಂಕುಮಮಹಾದೇವಿ ಎಂಬ ಮಗಳೂ ಇದ್ದಳು. ಈಕೆಯನ್ನು ಆಳುಪ ವಂಶದ ಚಿತ್ರವಾಹನನಿಗೆ ಲಗ್ನಮಾಡಿ ಕೊಡಲಾಗಿತ್ತು. ಈ ಚಿತ್ರವಾಹನನು ಆಳುಪ ಮಹಾರಾಜನ ಮಗನೆಂದು ತೋರುತ್ತದೆ. ಇವನು ಕದಂಬ ಮಂಡಲದ ಅಧಿಪತಿಯಾಗಿದ್ದ. ಕುಂಕುಮ ಮಹಾದೇವಿಯು ಪುರಿಗೆಱೆ ನಗರ (ಲಕ್ಷ್ಮೇಶ್ವರ)ದಲ್ಲಿ ಒಂದು ಜಿನಬಸದಿ (ಆನೆಸೆಜ್ಜೆಯ ಬಸದಿ)ಯನ್ನು ಕಟ್ಟಿಸಿದಳು.

ವಿಜಯಾದಿತ್ಯ: ಕ್ರಿ.ಶ. ೬೯೬ರಲ್ಲಿ ಇವನು ಪಟ್ಟಕ್ಕೆ ಬಂದನು. ತಂದೆಯ ಮರಣದ ಕಾಲದಲ್ಲಿ ಇವನು ಉತ್ತರ ಭಾರತದಲ್ಲಿ ಸೆರೆಯಲ್ಲಿದ್ದು, ಅಲ್ಲಿಂದ ತಪ್ಪಿಸಿಕೊಂಡು ಬಂದು ರಾಜ್ಯಸೂತ್ರಗಳನ್ನು ವಹಿಸಿಕೊಂಡನು. ಅಜ್ಜನಾದ ವಿಕ್ರಮಾದಿತ್ಯನ ಕಾಲದಿಂದಲೇ ಇವನು ರಣಾಂಗಣದಲ್ಲಿ ಹೋರಾಡಿದ್ದನು. ತಂದೆಗೆ ಸಹ ಬೆನ್ನುಲುಬಾಗಿದ್ದನು. ಅವನ ಉತ್ತರ ದೇಶದ ದಂಡಯಾತ್ರೆಯಲ್ಲಿ ಇವನು ಭಾಗವಹಿಸಿದ್ದು ಅವನಿಗಿಂತ ಮೊದಲೇ ಶತ್ರುಸೇನೆಯನ್ನು ಹೊಕ್ಕು ಅವರಿಂದ ಗಂಗಾ, ಯಮುನಾ, ಪಾಳಿಧ್ವಜ, ಪದಢಕ್ಕಾ

ಮಹಾಶಬ್ದ ಚಿಹ್ನೆಗಳನ್ನೂ ಮಾಣಿಕ್ಯ ಮತಂಗಜಾದಿಗಳನ್ನೂ ಕಸಿದುಕೊಂಡನು. ಪಟ್ಟಕ್ಕೆ ಬಂದ ಕೂಡಲೇ ರಾಜ್ಯದಲ್ಲಿ ಪುಂಡರ ಹಾವಳಿಯನ್ನು ತಗ್ಗಿಸಿ ಸಾಹಸರಸಿಕ, ನಿರವದ್ಯ ಇತ್ಯಾದಿ ಬಿರುದುಗಳಿಂದ ಶೋಭಿಸಿದನು. ಸು. ೩೭ ವರ್ಷಗಳ ಕಾಲ ರಾಜ್ಯವಾಳಿದ ಈತನ ಕಾಲದಲ್ಲಿಯೂ ರಾಜ್ಯದಲ್ಲಿ ಶಾಂತಿ ನೆಲಸಿತ್ತು. ಕಲೆಗೆ ಪ್ರೋತ್ಸಾಹವಿತ್ತ ಈತನು ಪಟ್ಟದಕಲ್ಲಿನಲ್ಲಿ ಸುಂದರವಾದ ವಿಜಯೇಶ್ವರ (ಈಗ ಸಂಗಮೇಶ್ವರ) ದೇವಾಲಯವನ್ನು ಕಟ್ಟಿಸಿದನು. 'ಜೈನೇಂದ್ರ ವ್ಯಾಕರಣ'ದ ಕರ್ತೃವಾದ ಪೂಜ್ಯಪಾದನ ಶಿಷ್ಯ ನಿರವದ್ಯ ಅಥವಾ ಉದಯದೇವ ಪಂಡಿತ, ವಿನಯಾದಿತ್ಯನ ಗುರು. ಈತನಿಗೆ ವಿಜಯಾದಿತ್ಯನು ಪುರಿಕರ ನಗರದ ಸಮೀಪದಲ್ಲಿದ್ದ ಕರ್ದಮ ಎಂಬ ಗ್ರಾಮವನ್ನು ಅಲ್ಲಿನ ಶಂಖಜಿನೇಂದ್ರಾಲಯದಲ್ಲಿದ್ದ ಅರ್ಚಕರಿಗೋಸ್ಕರವಾಗಿ ದಾನಮಾಡಿದನು. ಕ್ರಿ.ಶ. ೭೦೭ರಲ್ಲಿ ಈತನು ತನ್ನ ಸೋದರಿಯನ್ನೂ ಆಕೆಯ ಗಂಡನಾದ ಚಿತ್ರವಾಹನನನ್ನೂ ಕಂಡು ಬರಲು ಬನವಾಸಿಗೆ ಹೋಗಿದ್ದಾಗ ಅಲ್ಲಿ ಚಿತ್ರವಾಹನನ ಬೇಡಿಕೆಯ ಪ್ರಕಾರ ಪುಲಿಗೆರೆಯಲ್ಲಿ ಕುಂಕುಮ ಮಹಾದೇವಿ ಕಟ್ಟಿಸಿದ ಜಿನಭವನಕ್ಕೆ ಗುಡ್ಡಿಗೆರೆ (ಈಗಿನ ಗುಡಗೇರಿ) ಗ್ರಾಮವನ್ನು ದಾನ ಮಾಡಿದನು.

ಒಮ್ಮೆ ಮಾತ್ರ ಇವನು ಪಲ್ಲವರೊಡನೆ ಹೋರಾಡಬೇಕಾಯಿತು. ಆ ಸಂದರ್ಭದಲ್ಲಿ ಇವನಿಗೆ ಇವನ ಮಗನಾದ ಯುವರಾಜ ಇಮ್ಮಡಿ ವಿಕ್ರಮಾದಿತ್ಯನು ಸಹಾಯಕನಾಗಿದ್ದನು. ಬಹುಶಃ ಆತನೇ ಸೇನೆಯ ನಾಯಕತ್ವವನ್ನೂ ವಹಿಸಿದ್ದನು. ಭೀಮ ಪರಾಕ್ರಮನು ವಿಜಯಾದಿತ್ಯನ ಕಿರಿಯಮಗ. ಈತನ ವಂಶಸ್ಥರೇ ಸು. ೨೨೦ ವರ್ಷಗಳ ಬಳಿಕ ಖ್ಯಾತಿವೆತ್ತ ಕಲ್ಯಾಣದ ಚಾಲುಕ್ಯರು.

ವಿಜಯಾದಿತ್ಯನ ಪಟ್ಟದ ರಾಣಿಯ ಹೆಸರು ತಿಳಿಯದು. ಆದರೆ ಅವನ ಪ್ರಾಣವಲ್ಲಭೆ ಎನಿಸಿಕೊಂಡ ಸೂಳೆ ವಿನಾಪೋಟಿ ಎಂಬುವಳು ಮಾತ್ರ ಒಂದು ಶಾಸನದಲ್ಲಿ ಕಾಣಿಸಿಕೊಂಡಿದ್ದಾಳೆ. ಈಕೆ ಗುಣಸಂಪನ್ನೆ, ದೈವಭಕ್ತೆ. ಮಹಾಕೂಟದಲ್ಲಿ ಮಕುಟೇಶ್ವರ ನಾಥನಿಗೆ ರತ್ನಪೀಠವನ್ನೂ ಬೆಳ್ಳಿಯ ಪೀಠವನ್ನೂ ಮಾಡಿಸಿಕೊಟ್ಟುದಲ್ಲದೆ ಪೂಜಾಂಗಳಿಗೆಂದು ಭೂಮಿಯನ್ನೂ ದಾನಮಾಡಿದಳು.

ಇಮ್ಮಡಿ ವಿಕ್ರಮಾದಿತ್ಯ : ಕ್ರಿ.ಶ ೭೩೩ರಲ್ಲಿ ಪಟ್ಟಕ್ಕೆ ಬಂದ ಈತನು ೧೨ ವರ್ಷಗಳ ಕಾಲ ಮಾತ್ರ ರಾಜ್ಯವಾಳಿದನು. ಈ ಅಲ್ಪಕಾಲದಲ್ಲಿಯೇ ಈತನು ಕದನಗಳಲ್ಲಿ ಹೋರಾಡಿ ಖ್ಯಾತಿವೆತ್ತನು. ಕ್ರಿ.ಶ. ೭೧೦–೧೧ರ ಕರುವ ಶಾಸನದಲ್ಲಿ ವಿಜಯಾದಿತ್ಯನು ವಿಕ್ರಮಾದಿತ್ಯನ ಪ್ರಾರ್ಥನೆಯನ್ನು ಮನ್ನಿಸಿ ಕರುವ ಗ್ರಾಮವನ್ನು ದಾನಮಾಡಿದನೆಂದಿದೆ. ಲಕ್ಷ್ಮೇಶ್ವರದ ಶಾಸನದಲ್ಲಿ ವಿಕ್ರಮಾದಿತ್ಯನು ಯುವರಾಜನಾಗಿದ್ದಾಗಲೇ ಅಲ್ಲಿನ ಪೌರಾಡಳಿತಕ್ಕೆ ಸಂಬಂಧಿಸಿದ ಕೆಲವು ನಿಯಮಾವಳಿಗಳನ್ನು ರೂಪಿಸಿದನೆಂದು ಹೇಳಿದೆ. ಆದ್ದರಿಂದ ಸುಮಾರು ೭೧೦ರಿಂದಲೇ ಈತನು ತಂದೆಗೆ ಬೆನ್ನೆಲುಬಾಗಿ ನಿಂತು ರಾಜ್ಯಾಡಳಿತದ ಹೊಣೆ ಹೊತ್ತಿರಬೇಕು.

ವಿಕ್ರಮಾದಿತ್ಯನು ಪಲ್ಲವರ ವಿರುದ್ಧ ಮೂರು ಸಲ ದಂಡೆತ್ತಿದನು. ಮೊದಲನೆಯದು

ಅವನಿನ್ನೂ ಯುವರಾಜನಾಗಿದ್ದಾಗಿನದು. ಇದು ಸು. ೭೩೦-೩೧ರಲ್ಲಿ ನಡೆದಿರಬಹುದಾದ ಕದನ. ಈ ಸಂದರ್ಭದಲ್ಲಿಯೇ ದುರ್ವಿನೀತ ಎಜಿತಯಪ್ಪನಿಗೆ ಉಳ್ಚಲು ಗ್ರಾಮವನ್ನು ದಾನವಾಗಿ ನೀಡಿದುದು. ಇದನ್ನು ಕುರಿತು ಈಗಾಗಲೇ ಹೇಳಿದೆ. ಈತನು ಎರಡನೆಯ ಸಲ ಪುನಃ ಅವರ ವಿರುದ್ಧ ದಾಳಿಮಾಡಿದನು. 'ಪ್ರಕೃತಿಮಿತ್ರ'ರಾದ ಪಲ್ಲವರನ್ನು ನಿರ್ಮೂಲನವಾಗಿ ನಾಶಮಾಡಬೇಕೆಂದು ನಿಶ್ಚಯಿಸಿ ತುಂಡಾಕ ವಿಷಯವನ್ನು ಪ್ರವೇಶಿಸಿ ಅಲ್ಲಿ ತನಗೆದುರಾದ ಪಲ್ಲವ ನಂದಿಪೋತವರ್ಮ (ನಂದಿವರ್ಮ ೨ನೆಯ ಪಲ್ಲವಮಲ್ಲ)ನನ್ನು ಸೋಲಿಸಿದನು. ಕಟಮುಖವಾದಿತ್ರ, ಸಮುದ್ರಘೋಷ ಎಂಬ ವಿಶೇಷ ವಾದ್ಯಗಳನ್ನೂ ಖಟ್ವಾಂಗಧ್ವಜ ಎಂಬ ರಾಜಚಿಹ್ನವನ್ನೂ ಆನೆಗಳನ್ನೂ ಮಾಣಿಕ್ಯ ರಾಶಿಯನ್ನೂ ಕಸಿದುಕೊಂಡನು. ರಾಜಧಾನಿಯಾದ ಕಾಂಚೀಪುರವನ್ನು ಸಹ ಪ್ರವೇಶಿಸಿದನು. ಹಿಂದೆ ನರಸಿಂಹವರ್ಮನು ಬಾದಾಮಿಯಲ್ಲಿ ತನ್ನ ಶಾಸನವೊಂದನ್ನು ಕೆತ್ತಿಸಿದನು. ಅವನ ನಂತರದ ಅರಸರ ಶಾಸನಗಳಲ್ಲಿ ಅವನು ಬಾದಾಮಿಯನ್ನು ಸೂರೆಗೊಂಡು ನಾಶಮಾಡಿದಂತೆ ಉಲ್ಲೇಖಗಳಿವೆ. ಸೇಡು ತೀರಿಸಿಕೊಳ್ಳುವ ಅನುಕೂಲ ಈಗ ವಿಕ್ರಮಾದಿತ್ಯನಿಗೆ ದೊರಕಿತ್ತು. ಕಾಂಚೀಪುರದಲ್ಲಿ ವೈಭವೋಪೇತವಾದ ರಾಜಸಿಂಹೇಶ್ವರಾಲಯ (ಈಗಿನ ಕೈಲಾಸನಾಥ)ವನ್ನು ಇವನು ನೋಡಿದನು. ಪಲ್ಲವರ ರಾಜಧಾನಿಯಲ್ಲಿ ತನ್ನದೊಂದು ಶಾಸನವನ್ನು ಕೆತ್ತಿಸಲು ನಿಶ್ಚಯಿಸಿದನು. ಆದರೆ ಪಲ್ಲವನಂತೆ ವಿನಾಶಕೃತ್ಯಗಳಲ್ಲಿ ತೊಡಗದೆ ಆ ದೇವಾಲಯದ ಧನಕನಕಗಳನ್ನು ಪರೀಕ್ಷಿಸಿ, ದೇವರಿಗೆ ಅದನ್ನು ಪುನರ್ದತ್ತಿಮಾಡಿ ಇತರ ಧರ್ಮಕಾರ್ಯಗಳಿಗಾಗಿ ಸುವರ್ಣರಾಶಿಯನ್ನು ವಿನಿಯೋಗಿಸಿದನು. ಅವನ ಈ ಉದಾರತೆಯನ್ನು ಸಾರುವ ಕಾಂಚೀಪುರದಲ್ಲಿಯ ಕನ್ನಡ ಶಾಸನ ಹೀಗಿದೆ:

> ವಿಕ್ರಮಾದಿತ್ಯ ಸತ್ಯಾಶ್ರಯ ಪೃಥ್ವೀವಲ್ಲಭ ಮಹಾರಾಜಾಧಿ
> ರಾಜಪರಮೇಶ್ವರ ಭಟ್ಟಾರರ್ ಕಂಚಿಯಮ್ ಕೊಂಡು ರಾಜಸಿಂಹೇಶ್ವರರ
> ಧನಮಮ್ ಕಂಡು ಮಗುಳ್ದು ದೇವರ್ಗೆ ಬಿಟ್ಟಾರ್ ಇನ್ತು ಬಿಟ್ಟ
> ಭಟಾರರಾ ಧರ್ಮಸ್ಥಿತಿಯುಂ ಈ ಅಕ್ಷರಂಗಳುಮಮ್ ಅಜಿವಾರಿೀಯೂರ
> ಘಟಿಗೆಯಾ ಮಹಾಜನಮಮ್ ಕೊನ್ದಾರ ಲೋಕಕ್ಕೆ ಸನ್ದಾರಪ್ಪರ್

ಅವನ ಈ ಶಾಸನ ಅವನ ಧರ್ಮಬುದ್ಧಿ ವಿಶಾಲ ಮನೋಭಾವಗಳಿಗೆ ಮೂಕಸಾಕ್ಷಿ ಹಾಗೂ ಕನ್ನಡಿಗರ ಸಂಸ್ಕೃತಿಯ ಪ್ರತೀಕ. ವಿಕ್ರಮಾದಿತ್ಯನ ಈ ಸಾಧನೆಯನ್ನು ನರವನ್, ಕೆಂದೂರು, ವಕ್ಕಲೇರಿ ತಾಮ್ರಶಾಸನಗಳೂ ಉಲ್ಲೇಖಿಸುತ್ತವೆ. 'ಪಟ್ಟಾಭಿಷೇಕ ಸಮಯಾನಂತರ ಸಮುಪಜಾತ ಮಹೋತ್ಸಾಹ'ದಲ್ಲಿ 'ತ್ವರಯಾ' ಈತನು ಪಲ್ಲವರ ವಿರುದ್ಧ ದಂಡೆತ್ತಿ ಹೋದನೆಂದು ಹೇಳಿರುವ ಕಾರಣ ಇದು ಕ್ರಿ.ಶ. ಸು. ೭೩೪-೩೫ರಲ್ಲಿ ನಡೆದ ಘಟನೆ ಎಂದು ಹೇಳಬಹುದು. ಇದರಲ್ಲಿ ಗಂಗ ಶ್ರೀಪುರುಷನು ಸಹ ಈತನಿಗೆ ಸಹಾಯಕನಾಗಿದ್ದಂತೆ ತೋರುತ್ತದೆ. ವಿಕ್ರಮಾದಿತ್ಯನ ಆಳಿಕೆಯ ಕಾಲದಲ್ಲಿ ಅವನ ಮಗನಾದ ಇಮ್ಮಡಿ ಕೀರ್ತಿವರ್ಮನು ಪಲ್ಲವರ ವಿರುದ್ಧ ದಂಡೆತ್ತಿ

ಹೋದನು. ಇದು ಪಲ್ಲವರೊಡನೆ ವಿಕ್ರಮಾದಿತ್ಯನ ಮೂರನೆಯ ಯುದ್ಧ. ಪಲ್ಲವರನ್ನು ಸೋಲಿಸಿದ ವಿಕ್ರಮಾದಿತ್ಯನಿಗೆ ಸಮಸ್ಕಂಧರಿರಲಿಲ್ಲ. ವಾಸ್ತವಿಕವಾಗಿ ಸಮಕಾಲೀನರಾದ ಚೋಳ ಪಾಂಡ್ಯ ಚೇರರು ಇನ್ನೂ ಪ್ರಾಮುಖ್ಯವನ್ನು ಪಡೆದಿರಲಿಲ್ಲ. ವೇಂಗಿಯಲ್ಲಿ ಮುಮ್ಮಡಿ ವಿಷ್ಣುವರ್ಧನನು ಅರಸನಾಗಿದ್ದರೂ ಈತ ಸತ್ತ್ವಹೀನನಾಗಿದ್ದ. ಉತ್ತರದಲ್ಲಿ ಕೂಡ ಯಾರೂ ಪ್ರಬಲರಿರಲಿಲ್ಲ. ಆದರೆ ಈ ಪರಿಸ್ಥಿತಿ ಅವನನ್ನು ವಿಜಯೋತ್ಸಾಹಿಯಾಗಿ ಮೆರೆಯುವ ಬದಲು ಸಂತೃಪ್ತ ಮನೋಭಾವದಿಂದಿರುವಂತೆ ಮಾಡಿತು.

ಸು. ೭೩೯ರಲ್ಲಿ ತಾಜಿಕರು ರಾಜ್ಯದ ವಾಯುವ್ಯಭಾಗದಲ್ಲಿ ದಾಳಿಮಾಡಲಾರಂಭಿಸಿದ್ದರು. ಗುಜರಾತಿನಲ್ಲಿದ್ದ ಈತನ ಅಧೀನನಾದ ಅವನಿಜನಾಶ್ರಯ ಪುಲಕೇಶಿಯ ನವಸಾರಿ ತಾಮ್ರಶಾಸನದಿಂದಲೂ ಮಹಮ್ಮದೀಯರ ಬರವಣಿಗೆಗಳಿಂದಲೂ ಈ ತಾಜಿಕರು ಕೇವಲ ಕೊಳ್ಳೆಹೊಡೆಯುವುದಕ್ಕೆ ಬದಲು ದಕ್ಷಿಣಾಪಥಕ್ಕೆ ನುಗ್ಗಿ ಅಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿದ್ದರೆಂಬುದು ಸ್ಪಷ್ಟವಾಗಿದೆ. ಇವರ ಉದ್ದೇಶ ಗುಜರಾತಿನ ಪ್ರಾಂತಾಧಿಕಾರಿಗೂ ಬಹಳಮಟ್ಟಿಗೆ ವಿಕ್ರಮಾದಿತ್ಯನಿಗೂ ತಿಳಿದಿತ್ತು. ಆದರೂ ವಿಕ್ರಮಾದಿತ್ಯನು ಈ ವಿಷಯದಲ್ಲಿ ಯಾವ ಆಸಕ್ತಿಯನ್ನೂ ಪ್ರಕಟಿಸದೆ ನಿರುತ್ಸಾಹದಿಂದಿದ್ದನೆಂಬುದು ಆಶ್ಚರ್ಯಕರ. ತನ್ನ ಪ್ರಾಂತಾಧಿಕಾರಿಗೆ ಬೇಕಾದ ಸೇನಾನೆರವನ್ನೂ ಈತನು ಕೊಡಲಿಲ್ಲ. ಅವನಿಜನಾಶ್ರಯ ಪುಲಕೇಶಿಯು ಅರಬ್ಬರನ್ನು ಹೊರದೂಡಿದಾಗ ತನ್ನ ಮೆಚ್ಚುಗೆಯನ್ನು ಸೂಚಿಸಲು ಅವನಿಗೆ ದಕ್ಷಿಣಾಪಥಸಾಧಾರ, ಚಾಲುಕ್ಯ ಕುಲಾಲಂಕಾರ, ಅನಿವರ್ತಕನಿವರ್ತಯಿತೃ, ಪೃಥ್ವೀವಲ್ಲಭ ಇತ್ಯಾದಿ ಬಿರುದುಗಳನ್ನಿತ್ತು ತೃಪ್ತನಾದ. ಈತನ ಈ ನಿರ್ಲಕ್ಷ್ಯಮನೋಭಾವ ಸಾಮಂತರು ಸ್ವತಂತ್ರರಾಗಲು ಉತ್ತೇಜನ ಕೊಟ್ಟಿತು. ಬಹುಶಃ ಈ ನೀತಿ ಚಾಲುಕ್ಯರ ಅವನತಿಗೂ ಕಾರಣವಾಯಿತೆಂದು ಎಸ್. ನಾಗರಾಜು ಅವರು ಅಭಿಪ್ರಾಯಪಟ್ಟಿದ್ದಾರೆ.[12]

ಹೈಹಯ ವಂಶದ ರಾಜಕುಮಾರಿಯರಾಗಿದ್ದ ಲೋಕಮಹಾದೇವಿ ಹಾಗೂ ತ್ರೈಲೋಕ್ಯ ಮಹಾದೇವಿಯರಿಬ್ಬರನ್ನೂ ವಿಕ್ರಮಾದಿತ್ಯನು ಮದುವೆಯಾಗಿದ್ದನು. ಹಿರಿಯಳಾದ ಲೋಕಮಹಾದೇವಿ ಪಟ್ಟದಕಲ್ಲಿನಲ್ಲಿ ಲೋಕೇಶ್ವರಾಲಯವನ್ನು ಕಟ್ಟಿಸಿದಳು. ಇದೇ ಈಗಿನ ವಿರೂಪಾಕ್ಷಾಲಯ. ಕಿರಿಯಳಾದ ತ್ರೈಲೋಕ್ಯಮಹಾದೇವಿಯು ತ್ರೈಲೋಕ್ಯೇಶ್ವರಾಲಯವನ್ನು ಕಟ್ಟಿಸಿದಳು. ಈ ಗುಡಿ ಈಗಿಲ್ಲ, ಹಾಳಾಗಿದೆ. ಲೋಕೇಶ್ವರಾಲಯವನ್ನು ಕಟ್ಟಿದ ಶಿಲ್ಪಿ ಅನಿವಾರಿತಾಚಾರಿ ಗುಂಡ. ಇವನಿಗೆ ತ್ರಿಭುವನಾಚಾರಿ ಎಂಬ ಬಿರುದನ್ನು ಲೋಕಮಹಾದೇವಿ ಕೊಟ್ಟಳು. ಆ ದೇವಾಲಯಕ್ಕೆ ಸರೆಯುಂಗಲ್ಲಿನ ಪನ್ನಾಯ(ಒಂದು ಸುಂಕ)ವನ್ನು ದಾನವಾಗಿ ಕೊಟ್ಟಳು.

ಇಮ್ಮಡಿ ಕೀರ್ತಿವರ್ಮ: ತ್ರೈಲೋಕ್ಯ ಮಹಾದೇವಿಯ ಮಗನಾದ ಈತನು ಬಾದಾಮಿಯಲ್ಲಿ ಆಳಿದ ಚಾಲುಕ್ಯರಲ್ಲಿ ಕೊನೆಯವನು. ಈತನು ಆಳತೊಡಗಿದಾಗ ಪಲ್ಲವ ರಾಜ್ಯದಲ್ಲಿ ಅನಾಯಕತ್ವ ಉಂಟಾಗಿ ಪರಿಸ್ಥಿತಿ ಅನಿಶ್ಚಿತವಾಗಿತ್ತು. ರಾಜನಾಗಿ ಆಯ್ಕೆಗೊಂಡ ನಂದಿವರ್ಮ ಪಲ್ಲವಮಲ್ಲನು ಒಮ್ಮೆ ಆಗಲೇ ವಿಕ್ರಮಾದಿತ್ಯನ ಕೈಯಲ್ಲಿ ಸೋಲನ್ನನು

ಭವಿಸಿದ್ದನು. ತನ್ನ ರಾಜ್ಯವನ್ನು ಸಹ ಪ್ರತಿಸ್ಪರ್ಧಿಯಾದ ಚಿತ್ರಮಯನಿಗೆ ಬಿಟ್ಟು ಕೊಡಬೇಕಾಯಿತು. ಆದರೆ ಅವನ ಸೇನಾನಿಯಾದ ಉದಯಚಂದ್ರನು ನಂದಿವರ್ಮ ನಿಗೆ ಸಹಾಯಕನಾಗಿ ಆತನನ್ನು ರಕ್ಷಿಸಿದನು. ಯುವರಾಜನಾಗಿದ್ದಾಗಲೇ ಎರಡನೇ ಕೀರ್ತಿವರ್ಮನು ಪಲ್ಲವ ರಾಜಧಾನಿಯನ್ನು ಮುತ್ತಿದನೆಂಬುದನ್ನು ನೋಡಿದ್ದೇವೆ. ೭೪೫ರಲ್ಲಿ ಪಟ್ಟಕ್ಕೆ ಬಂದ ಕೀರ್ತಿವರ್ಮನು ತನ್ನ ಅಧಿಕಾರವನ್ನು ಒಂದು ವರ್ಷದೊಳ ಗಾಗಿ ಕಳೆದುಕೊಂಡನೆಂದು ಕೆಲವರು ಊಹಿಸಿದ್ದಾರೆ. ಆಂಧ್ರಪ್ರದೇಶದ ಮಲ್ಲಂ ಗ್ರಾಮದಲ್ಲಿ ದೊರೆತ ಕ್ರಿ.ಶ. ೭೪೫–೪೬ನೆಯ ವರ್ಷದ ಶಾಸನದಲ್ಲಿ ಆಳುವರಸನು ನಂದಿಪೋತ್ತರಸನನ್ನು ದಾನ ಒಂದನ್ನು ನೀಡುವಂತೆ ಪ್ರಾರ್ಥಿಸಿದನೆಂದಿದೆ. ಇದರಲ್ಲಿ ಚಾಲುಕ್ಯ ಅರಸನು 'ಆಜ್ಞಪ್ತಿ'ಯಾಗಿ ಕಾಣಿಸಿಕೊಂಡಿದ್ದಾನೆ. ಆಳುವರಸನು ಆಳುಪ ವಂಶಕ್ಕೆ ಸೇರಿದವನು, ನಂದಿಪೋತನು ಪಲ್ಲವನಂದಿವರ್ಮ. ಆದರೆ ಚಾಳುಕ್ಯ ಅರಸನು ಇಮ್ಮಡಿ ವಿಕ್ರಮಾದಿತ್ಯನಾಗಿರಬಹುದೆಂಬ ನೀಲಕಂಠಶಾಸ್ತ್ರಿಗಳ ಊಹೆಯನ್ನು ಅಲ್ಲಗಳೆ ದಿರುವ ಡಾ. ಮಹಾಲಿಂಗಂ ಈತನು ಇಮ್ಮಡಿ ಕೀರ್ತಿವರ್ಮನೆಂದು ಸೂಚಿಸಿದ್ದಾರೆ.[13] ಆದರೆ ಈ ಊಹೆ ನಿರಾಧಾರವಾದುದು. ಆಜ್ಞಪ್ತಿ ಎನಿಸಿಕೊಂಡ ಈತನು ನಂದಿವರ್ಮನ ಮಾಂಡಲಿಕನಾಗಿದ್ದನೆನ್ನಬೇಕಾಗುತ್ತದೆ. ಕಲಕಾಲ ಈತನು ರಾಜ್ಯಭ್ರಷ್ಟನಾಗಿದ್ದ ಎನ್ನುವ ಯಾವ ಆಧಾರವೂ ಇಲ್ಲ. ಪಲ್ಲವ ಅರಸನ ಪರಿಸ್ಥಿತಿಯೇ ಚಿಂತಾಜನಕ ವಾಗಿದ್ದ ಸಮಯ ಅದು. ಆದರೆ ಇದರಿಂದ ಒಂದು ವಿಷಯ ಮಾತ್ರ ಸ್ಪಷ್ಟವಾಗುತ್ತದೆ. ಆಳುಪರು ಅದುವರೆಗೂ ಚಾಲುಕ್ಯರ ಸಾಮಂತರಾಗಿದ್ದು ಈಗ ಪಲ್ಲವರ ಸಾರ್ವಭೌಮತ್ವ ವನ್ನು ಒಪ್ಪಿಕೊಂಡರು.

ಗುಜರಾತಿನ ಅವನಿಜನಾಶ್ರಯ ಪುಲಕೇಶಿಯು ತಾಜಿಕರನ್ನು ಸೋಲಿಸಿದಾಗ, ಆತನಿಗೆ ರಾಷ್ಟ್ರಕೂಟ ದಂತಿದುರ್ಗನು ಬೆಂಬಲವನ್ನಿತ್ತನು. ಖಡ್ಗಾವಲೋಕ ಮತ್ತು ಪೃಥ್ವೀವಲ್ಲಭ ಎಂಬ ಬಿರುದುಗಳನ್ನು ಈತನು ವಿಕ್ರಮಾದಿತ್ಯನಿಂದ ಪಡೆದನೆಂದು ಊಹಿಸಲಾಗಿದೆ. ಆದರೆ ಕ್ರಮೇಣ ಗುಜರಾತಿನ ಆ ಚಾಲುಕ್ಯರನ್ನೇ ದಂತಿದುರ್ಗನು ಸೋಲಿಸಿ ನವಸಾರಿಯನ್ನು ಆಕ್ರಮಿಸಿದನು. ವಿಕ್ರಮಾದಿತ್ಯನ ತಾಟಸ್ಥ್ಯನೀತಿ ಹಾಗೂ ಕೀರ್ತಿವರ್ಮನ ಕುಗ್ಗಿದ ಬಲ ದಂತಿದುರ್ಗನಿಗೆ ಪ್ರೋತ್ಸಾಹ ನೀಡಿತು. ಪಲ್ಲವನಂದಿವರ್ಮನ ವಿರುದ್ಧ ಕೀರ್ತಿವರ್ಮನು ಕಾಂಚಿಗೆ ದಂಡೆತ್ತಿದಾಗ ದಂತಿದುರ್ಗನು ಅವನೊಡನಿದ್ದ ನೆಂದೂ ಆದರೆ ರಾಜ್ಯವನ್ನು ಕಳೆದುಕೊಂಡ ಪಲ್ಲವನು ದಂತಿದುರ್ಗನ ಆಶ್ರಯ ಸಹಾಯ ಗಳನ್ನು ಪಡೆದನೆಂದೂ ಊಹಿಸಲಾಗಿದೆ. ಆದರೆ ಇವು ಸಹೇತುಕವಲ್ಲ. ನವಸಾರಿಯ ಚಾಲುಕ್ಯನನ್ನು ದಂತಿದುರ್ಗನು ಹೊರದೂಡಿ ಆ ಪ್ರದೇಶವನ್ನು ಆಕ್ರಮಿಸಿದುದು ಚಾಳುಕ್ಯ ಹಾಗೂ ರಾಷ್ಟ್ರಕೂಟರ ನಡುವಣ ಯುದ್ಧಕ್ಕೆ ಮುಖ್ಯ ಕಾರಣವೆನ್ನಲಾಗಿದೆ.

ಅಂದಿನ ರಾಜಕೀಯ ಪರಿಸ್ಥಿತಿ ಚಾಲುಕ್ಯರಿಗೇ ಹೆಚ್ಚು ಅನುಕೂಲವಾಗಿದ್ದರೂ ಕೀರ್ತಿವರ್ಮ ಅದರ ಉಪಯೋಗ ಪಡೆಯಲಾಗದೆ ಹೋದನು. ಅವನ ಸಾಮಂತ ನಾಗಿದ್ದ ದಂತಿದುರ್ಗನು ಹೆಚ್ಚು ದಕ್ಷನೂ ಕರ್ತೃತ್ವಶಾಲಿಯೂ ಆಗಿದ್ದನು. ನವಸಾರಿ

ಯನ್ನು ಆಕ್ರಮಿಸಿದ ನಂತರ ಮಾಲವ ಹಾಗೂ ಮಹಾಕೋಸಲಗಳನ್ನು ಸ್ವಾಧೀನಪಡಿಸಿಕೊಂಡ ದಂತಿದುರ್ಗನು ಅಂತಿಮವಾಗಿ ಚಾಲುಕ್ಯನನ್ನು ಎದುರಿಸಿದನು. ರಾಷ್ಟ್ರಕೂಟನ ಕೈ ಮೇಲಾಯಿತು. ಅಜೇಯವೆನಿಸಿದ್ದ ಕರ್ನಾಟಕ ಬಲವನ್ನು ಜಯಿಸಿದ ಕೀರ್ತಿ ಈತನದಾಯಿತು (ಕ್ರಿ. ಶ. ೭೫೩). ಆದರೆ ಕ್ರೂರವಿಧಿ ದಂತಿದುರ್ಗನನ್ನು ಕಾಡಿತ್ತು. ಈ ವಿಜಯದ ನಂತರ ಕಿರಿಯ ವಯಸ್ಸಿನಲ್ಲಿಯೇ ಅತನು ತೀರಿಕೊಂಡನು.

ದಂತಿದುರ್ಗನ ಉತ್ತರಾಧಿಕಾರಿ ಕೃಷ್ಣ (I). ಈತನು ಮತ್ತೊಮ್ಮೆ ಕರ್ನಾಟಕ ರಾಜ್ಯವನ್ನು ವಶಪಡಿಸಿಕೊಳ್ಳಲು ಕಾದಬೇಕಾಯಿತು. ರಾಹಪ್ಪನೆಂಬಾತನನ್ನು ಸೋಲಿಸಿ ಆತನಿಂದ ಪಾಳಿಧ್ವಜವನ್ನೂ ವಲ್ಲಭನೆಂಬ ಬಿರುದನ್ನೂ ಕಸಿದುಕೊಳ್ಳುವುದರ ಮೂಲಕ ರಾಜಾಧಿರಾಜ ಪರಮೇಶ್ವರನೂ ಆದನೆಂದು ಶಾಸನದ ಹೇಳಿಕೆ. ಈ ರಾಹಪ್ಪನು ರಾಷ್ಟ್ರಕೂಟ ಮನೆತನಕ್ಕೆ ಸೇರಿದವನಾಗಿರಬಹುದೆಂದು ಮೊದಲು ಮಾಡಿದ್ದ ಊಹೆಗೆ ಬದಲು, ಈತನು ಚಾಲುಕ್ಯ ವಂಶಕ್ಕೇ ಸೇರಿದ ಬೇರಾವುದಾದರೂ ಶಾಖೆಯ ಅರಸನೋ ಸಾಮಂತನೋ ಆಗಿರಬಹುದೆಂದು ಹೇಳಲಾಗಿದೆ. ವಲ್ಲಭ ಎಂಬುದು ಚಾಲುಕ್ಯರು ಧರಿಸಿದ್ದ ಬಿರುದು. ಅದಕ್ಕೂ ಮಿಗಿಲಾಗಿ ಪಾಳಿಧ್ವಜ ಚಾಲುಕ್ಯರ ವಿಶಿಷ್ಟವಾದ ಲಾಂಛನ. ಆದ್ದರಿಂದ ಇವುಗಳನ್ನು ಹೊಂದಿದ್ದ ರಾಹಪ್ಪ ಚಾಲುಕ್ಯನಾಗಿರಬಹುದೆಂಬುದು ಹೆಚ್ಚು ಸಮಂಜಸವಾದೀತು. ರಾಹಪ್ಪ ಎಂಬುದು ಕೀರ್ತಿವರ್ಮನ ಇನ್ನೊಂದು ಹೆಸರೆಂದು ಕೆಲವರು ಊಹಿಸಿದ್ದಾರೆ. ಕೀರ್ತಿವರ್ಮನ ಹೆಸರು ಕತ್ತಿಯರ ಎಂದಿದ್ದಿತೆಂಬುದು ತಿಳಿದಿದೆ. ಬಹುಶಃ ರಾಹಪ್ಪ ಎಂಬುದೂ ಆತನ ಹೆಸರಾಗಿರಬಹುದು. ಇದು ಪರಿಶೀಲನಾರ್ಹ. ದಂತಿದುರ್ಗನು ಸೋಲಿಸಿದ ವಲ್ಲಭನನ್ನು ಕೀರ್ತಿವರ್ಮನೆಂದು ಗುರುತಿಸಲಾಗಿದೆ. ಕೃಷ್ಣನು ಸೋಲಿಸಿದ ವಲ್ಲಭನೂ ಈತನೇ ಯಾಕಾಗಕೂಡದು?

ದೀರ್ಘಕಾಲ ರಣರಂಗದಲ್ಲಿ ಸತತವಾಗಿ ಹೋರಾಡಿದ ಚಾಲುಕ್ಯ ಪಲ್ಲವರ ಸೇನೆಗಳೆರಡರ ಶಕ್ತಿಯೂ ಕುಂದಿದ್ದು, ಎರಡು ಮನೆತನಗಳ ಅರಸರೂ ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಪಲ್ಲವ ನಂದಿವರ್ಮನು ಸ್ವಲ್ಪಕಾಲದ ನಂತರ ಚೇತರಿಸಿಕೊಂಡರೂ ಮೊದಲಿನ ತೇಜಸ್ಸು ಪಲ್ಲವರಲ್ಲಿಯೂ ಕಾಣಿಸಲಿಲ್ಲ. ಕೀರ್ತಿವರ್ಮನು ಮಾತ್ರ ರಾಜ್ಯವನ್ನೇ ಕಳೆದುಕೊಂಡನು. ಈತನ ವಕ್ಕಲೇರಿಯ ಶಾಸನದ ಕಾಲ ಕ್ರಿ.ಶ. ೭೫೭. ನಂತರದ ಒಂದೆರಡು ವರ್ಷಗಳಲ್ಲಿಯೇ ಚಾಲುಕ್ಯ ರಾಜ್ಯ ಅಸ್ತಮಿಸಿತು.

ಕೀರ್ತಿವರ್ಮ ಕ್ರಿ. ಶ. ೭೫೭ರ ವರೆಗೆ ಆಳಿದನು. ಇವನ ಕಾಲದಲ್ಲಿ ಗಂಗಾನದಿಯ ಉತ್ತರ ತೀರದಲ್ಲಿದ್ದ ಮೃಗಥಣಿಕಾಹಾರ ವಿಷಯದಲ್ಲಿ ವಾಸಮಾಡುತ್ತಿದ್ದ ಶಾಂಡಿಲ್ಯ ಗೋತ್ರದ ಶುಭದೇವರೂಪ ಅಲ್ಲಿಂದ ಪಟ್ಟದಕಲ್ಲಿಗೆ ಬಂದು ಇಲ್ಲಿ ವಿಜಯೇಶ್ವರಾಲಯದಲ್ಲಿ ವಾಸಮಾಡತೊಡಗಿದನು. ಇವನು ಶಿವಶಾಸನಾಂಕ ಭಗವತ್ಪೂಜ್ಯ ಪಯೋಭಕ್ಷಿಪಾದ ಪ್ರಶಿಷ್ಯನ ಶಿಷ್ಯನು. ಇವನ ತಂದೆ ಶಿವರೂಪ, ಅಜ್ಜ ಶಿವವರ್ಧಮಾನರೂಪ. ಇಲ್ಲಿಗೆ ಬಂದ ಬಳಿಕ ಇವನು ಜ್ಞಾನಶಿವಾಚಾರ್ಯನೆಂಬ ಹೆಸರಿನಿಂದ ಪ್ರಸಿದ್ಧನಾದನು. ಈತನು ವಿಜಯೇಶ್ವರ, ಲೋಕೇಶ್ವರ ಮತ್ತು ತ್ರೈಲೋಕ್ಯೇಶ್ವರ ದೇವಾ

ಮಾಡಲು ಪ್ರಾಣವನ್ನಾದರೂ ತೊರೆಯುವರು. ವಿಪತ್ತಿಗೀಡಾದವರು ಇವರ ಸಹಾಯವನ್ನು ಕೋರಿದರೆ ಅವರಿಗೆ ನೆರವಾಗುವ ಭರದಲ್ಲಿ ತಮ್ಮ ಸ್ವಾರ್ಥವನ್ನು ಎಣಿಸುವುದೇ ಇಲ್ಲ. ಶತ್ರುಗಳ ಮೇಲೆ ಸೇಡನ್ನು ತೀರಿಸಿಕೊಳ್ಳುವ ಮೊದಲು ಅವರಿಗೆ ಎಚ್ಚರ ಕೊಡುವರು. ಶತ್ರು ಪಲಾಯನ ಮಾಡಿದರೆ ಅವನ ಬೆನ್ನಟ್ಟುವರು ; ಆದರೆ ಶರಣಾಗತರಾದವರನ್ನು ಕೊಲ್ಲುವುದಿಲ್ಲ...."

## ರಾಷ್ಟ್ರಕೂಟರು

ಚಾಲುಕ್ಯ ಇಮ್ಮಡಿ ಕೀರ್ತಿವರ್ಮನ ವಿರುದ್ಧ ದಂಗೆಯೆದ್ದು ಅವನನ್ನು ಸೋಲಿಸಿದ ದಂತಿದುರ್ಗನು ರಾಷ್ಟ್ರಕೂಟ ಮನೆತನಕ್ಕೆ ಸೇರಿದವನು. ಇವನ ತಂದೆ ಇಂದ್ರರಾಜನು ಭವನಾಗಾ ಎಂಬ ರಾಜಕುಮಾರಿಯನ್ನು ರಾಕ್ಷಸವಿವಾಹ ಪದ್ಧತಿಯಲ್ಲಿ ಮದುವೆಯಾದನು. ಇದಕ್ಕಾಗಿ ಅವನು ಖೇಟಕಮಂಡಪದಲ್ಲಿ ಒಂದು ಕದನವನ್ನೇ ಹೂಡಬೇಕಾಯಿತು. ಈ ಖೇಟಕಮಂಡಪ ಉತ್ತರ ಗುಜರಾತದಲ್ಲಿನ ಈಗಿನ ಖೈರ. ಈ ಚಾಲುಕ್ಯನು ಯಾರು ಎಂದಾಗಲಿ, ಮೈತ್ರಕವಂಶದವರಿಗೆ ಸೇರಿದ್ದ ಖೇಟದಲ್ಲಿ ಈತನ ಮದುವೆಯಾದುದು ಹೇಗೆ ಎಂಬುದಾಗಲಿ ತಿಳಿಯದು. ಬಹುಶಃ ಮೈತ್ರಕರ ರಾಜಕುಮಾರನನ್ನು ವರಿಸಲು ಏರ್ಪಡಿಸಲಾಗಿದ್ದ ಸ್ವಯಂವರದಲ್ಲಿ ಇಂದ್ರನು ಈಕೆಯನ್ನು ಅಪಹರಿಸಿರಬಹುದೆಂದು ಊಹಿಸಲಾಗಿದೆ. ಏನೇ ಇದ್ದರೂ ಈ ವೇಳೆಗೆ (ಸು. ಕ್ರಿ.ಶ. ೭೧೫) ಇಂದ್ರನು ಪ್ರಭಾವಶಾಲಿಯಾಗಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈತ ಸು. ೭೩೫ರವರೆಗೆ ಆಳಿದನು. ಚಾಲುಕ್ಯ ವಿಜಯಾದಿತ್ಯನ ಸಾಮಂತನಾಗಿದ್ದ ಈತನ ಮಗನೇ ದಂತಿದುರ್ಗ. ತಂದೆಯ ಉತ್ತರಾಧಿಕಾರಿಯಾಗಿ ಅಧಿಕಾರಕ್ಕೆ ಬಂದ ಈತನು ಕ್ರಮೇಣ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡು ಚಾಲುಕ್ಯ ಇಮ್ಮಡಿ ಕೀರ್ತಿವರ್ಮನನ್ನು ವಿರೋಧಿಸಿದನೆಂಬುದನ್ನು ಮೇಲೆ ಹೇಳಿದೆ.

ರಾಷ್ಟ್ರಕೂಟರು ಯಾರು ? ಈ ಪ್ರಶ್ನೆಗೆ ಬೇರೆಬೇರೆ ರೀತಿಯಲ್ಲಿ ಉತ್ತರಗಳನ್ನು ನೀಡಲಾಗಿದೆ. ಮೂಲತಃ 'ರಾಷ್ಟ್ರಕೂಟ' ಎಂಬುದು ಅಧಿಕಾರ ಸೂಚಕ ಪದ. ಮೌರ್ಯರ ಕಾಲದಲ್ಲಿ ರಠಿಕ, ರಾಷ್ಟ್ರಿಕ ಎಂಬ ಅಧಿಕಾರಿಗಳು ಪ್ರಾಂತಗಳ ಆಡಳಿತ ಹೊಣೆಯನ್ನು ಹೊತ್ತಿದ್ದರೆಂಬ ವಿಷಯ ತಿಳಿದದ್ದೇ. ರಾಷ್ಟ್ರಕೂಟ ಎಂಬುದು ರಾಷ್ಟ್ರ ಮತ್ತು ಕೂಟಗಳೆಂಬ ಎರಡು ಪದಗಳಿಂದ ಆದ ಸಮಸ್ತಪದ. ರಾಷ್ಟ್ರ ಎಂಬುದು ಒಂದು ಭೌಗೋಳಿಕ ಪ್ರದೇಶವನ್ನು ಸೂಚಿಸಿದರೆ ಕೂಟ ಎಂಬುದು ಅದರ ನಾಯಕ ಅಥವಾ ಮುಖ್ಯ (ಅಥವಾ ಅಧಿಕಾರಿ) ಎಂಬ ಅರ್ಥವನ್ನು ಹೊಂದಿದೆ. ಗ್ರಾಮಕೂಟ ಎನ್ನುವುದು ಗ್ರಾಮಾಧಿಕಾರಿಗೆ ಅನ್ವಯಿಸುವ ಪದವಾಗಿರುವಂತೆ ರಾಷ್ಟ್ರಕೂಟ ಎಂಬುದು ಪ್ರಾಂತಾಧಿಕಾರಿಗೆ ಅನ್ವಯಿಸುವ ಪದವಾಗಿರಬಹುದು.

ಈ ಮನೆತನದ ಮೊದಲ ಅರಸರು ಖೇಟಕಮಂಡಪದ ಚಾಲುಕ್ಯರೊಡನೆ ಸಂಬಂಧ ಹೊಂದಿದ್ದುದು, ಇವರ ರಾಜಕೀಯ ಚಟುವಟಿಕೆಗಳು ಗುಜರಾತಿಗೆ ಸೀಮಿತವಾಗಿದ್ದು

ಅಲ್ಲಿಯೇ ತಮ್ಮ ಪ್ರಾಬಲ್ಯವನ್ನು ಇವರು ಬೆಳಸಿಕೊಂಡುದು—ಇವು ಮೂಲತಃ ಇವರು ಗುಜರಾತಿನ ಸುತ್ತಲ ಪ್ರದೇಶದಲ್ಲಿದ್ದವರೆಂದೂ ಅನಂತರ ಕ್ರಮೇಣ ದಕ್ಷಿಣಕ್ಕೆ ಸರಿದು ಕರ್ಣಾಟಕಾಧಿಪತಿಗಳಾದರೆಂದೂ ಊಹಿಸಲು ಇರುವ ಕಾರಣಗಳು.

ಆಂಧ್ರಪ್ರದೇಶದ ಕಡಪ ಜಿಲ್ಲೆಯಲ್ಲಿ ದೊರೆತ ಸುಮಾರು ಆನೆಯ ಶತಮಾನದ ಶಿಲಾಶಾಸನಗಳಲ್ಲಿ ಸಲ್ಕಿರಟ್ಟಗುಡ್ಲು, ಪಲ್ಲವರಟ್ಟಗುಡ್ಲು, ಚೋಳರಟ್ಟಗುಡ್ಲು ಎಂಬ ಅಧಿಕಾರ ಸೂಚಕ ಶಬ್ದಗಳಿವೆ. ಇದು ಸಲ್ಕಿಗಳ (ಚಲುಕ್ಯರ), ಪಲ್ಲವರ, ಚೋಳರ ಅಧೀನದಲ್ಲಿದ್ದ ರಟ್ಟಗುಡ್ಲು ಅಥವಾ ರಟ್ಟಗುಡಿ ಎಂಬ ಅಧಿಕಾರಿಯ ಅಧಿಕಾರವನ್ನು ಸೂಚಿಸುವ ಪದಗಳೆಂದು ಅರ್ಥೈಸಲಾಗಿದೆ. ರಟ್ಟ ಎಂಬುದು ರಾಷ್ಟ್ರ ಎಂಬ ಪದದ ಪ್ರಾಕೃತರೂಪವೆಂದು ಕೆಲವರೂ ಅಲ್ಲವೆಂದು ಇತರರೂ ಹೇಳಿದ್ದಾರೆ. ಈ ವಿಷಯದ ಚರ್ಚೆ ಇಲ್ಲಿ ಅಪ್ರಕೃತ. 'ರಾಷ್ಟ್ರಕೂಟ' ಪದದಂತೆಯೇ 'ರಟ್ಟ' ಎಂಬ ಪದವೂ ಪ್ರಾಚೀನ ಕಾಲದಲ್ಲಿ ಉಪಯೋಗದಲ್ಲಿತ್ತೆಂಬುದೂ ಅದು ಅಧಿಕಾರ ಸೂಚಕಪದ ವೆಂಬುದೂ ಬಹಳಮಟ್ಟಿಗೆ ಈಗ ಮಾನ್ಯವಾದ ಅಭಿಪ್ರಾಯಗಳು.

ರಟ್ಟರು ಮೊದಲಿನಿಂದಲೂ ದಕ್ಷಿಣ ಭಾರತದ ನಿವಾಸಿಗಳಾಗಿದ್ದರೆಂಬುದು ಮೇಲೆ ಹೇಳಿದ ಕಡಪ ಶಾಸನಗಳಿಂದ ಸಿದ್ಧವಾಗುತ್ತದೆ. ಪ್ರಸ್ತುತ, ಕರ್ಣಾಟಕದಲ್ಲಿ ಆಳಿದ ರಾಷ್ಟ್ರಕೂಟರು ತಾವು ರಟ್ಟವಂಶದವರೆಂದೂ ಲತ್ತಲೂರ್ಪುರವರಾಧೀಶ್ವರರೆಂದೂ ಕರೆದು ಕೊಳ್ಳುವುದನ್ನು ಅವರ ಶಾಸನಗಳಲ್ಲಿ ಕಾಣುತ್ತೇವೆ. ೧೦ನೆಯ ಶತಮಾನದ ನಂತರ ಬೆಳಗಾಂ ಜಿಲ್ಲೆಯ ಸವದತ್ತಿಯಲ್ಲಿ ರಟ್ಟರೆಂಬ ಹೆಸರಿನ ಮಾಂಡಲಿಕರು ಅಧಿಕಾರದಲ್ಲಿ ದ್ದರು. ಅವರು ಸಹ ಲತ್ತಲೂರ್ಪುರವರಾಧೀಶ್ವರರೆಂದು ತಮ್ಮನ್ನು ಕರೆದುಕೊಂಡಿದ್ದಾರೆ. ಈ ಲತ್ತಲೂರ್ ಉಸ್ಮಾನಾಬಾದ್ ಜಿಲ್ಲೆಯ ಈಗಿನ ಲಾತೂರು. ಈ ಪ್ರದೇಶ ಇಂದು ಮಹಾರಾಷ್ಟ್ರದಲ್ಲಿದ್ದರೂ ನಾವು ವಿವೇಚಿಸುತ್ತಿರುವ ಕಾಲದಲ್ಲಿ ಕರ್ಣಾಟಕದ ಭಾಗ ವಾಗಿಯೇ ಅದು ಇದ್ದಿತು. ಈ ಪ್ರದೇಶದ ಅನೇಕ ಗ್ರಾಮಗಳ ಹೆಸರುಗಳೂ ಅಲ್ಲಿ ದೊರಕುವ ಕನ್ನಡ ಶಾಸನಗಳೂ ಈ ಪ್ರತಿಪಾದನೆಗೆ ಮೂಲವಾಗಿದೆ. ಈ ಲತ್ತ ಎಂಬುದು ರಟ್ಟ ಪದದ ಪ್ರಾಕೃತರೂಪ. ಲತ್ತಲೂರು (ಮೂಲ: ರಟ್ಟನ ಊರು) ಕ್ರಮೇಣ ಲತ್ತನ ಊರು>ಲತ್ತಊರು>ಲಾತೂರು ಆಗಿದೆ. ಗುಜರಾತಿನಲ್ಲಿ ಆಳು ತ್ತಿದ್ದ ರಾಷ್ಟ್ರಕೂಟರ ಶಾಖೆಗೆ ಸೇರಿದ ಮಾಂಡಲಿಕರ ಶಾಸನಗಳ ಕೊನೆಯಲ್ಲಿ "ಶ್ರೀ ಮದಿಂದ್ರರಾಜಸುತಸ್ಯ ಶ್ರೀ ಕಕ್ಕರಾಜಸ್ಯ", "ಮತಮ್ಮಮ ಶ್ರೀಧ್ರುವರಾಜದೇವಸ್ಯ" "ಶ್ರೀ ಕರ್ಕರಾಜದೇವಸುತಸ್ಯ ಯದುಪರಿಲಿಖಿತಂ"—ಎಂಬಿವೇ ಮುಂತಾದ ಅರಸರ ಅಂಕಿತಗಳು ಕನ್ನಡ ಲಿಪಿಯಲ್ಲಿರುವುದನ್ನು ಗಮನಿಸಿದಾಗ ದೂರದ ಗುಜರಾತ್‌ನಲ್ಲಿ ಅಧಿಕಾರ ಸಲ್ಲಿಸಿದ್ದ ಇವರು ಮೂಲತಃ ಕನ್ನಡಿಗರೇ ಆಗಿದ್ದರೆಂಬ ಅಂಶ ಸ್ಪಷ್ಟವಾಗುತ್ತದೆ.

ಈ ರಾಷ್ಟ್ರಕೂಟರ ವೈಯಕ್ತಿಕ ಹೆಸರುಗಳಲ್ಲಿಯೂ ಕನ್ನಡದ ವಾಸನೆಯನ್ನು ಕಾಣಬಹುದು. ಅಸಗವ್ವೆ, ಅಬ್ಬಲಬ್ಬೆ, ರೇವಕನಿರ್ಮಡಿ (ಇಮ್ಮಡಿ ರೇವಕ್ಕ) ಎಂಬವು ಅಚ್ಚಗನ್ನಡ ಹೆಸರುಗಳು. ಕನ್ನಡಿಗರಾದ ರಾಷ್ಟ್ರಕೂಟರು ಕನ್ನಡ ಸಾಹಿತ್ಯಕ್ಕೆ ಅಪಾರ

ವಾದ ಪ್ರೋತ್ಸಾಹವನ್ನು ಕೊಟ್ಟದ್ದು ಆಶ್ಚರ್ಯವೇನಲ್ಲ. ಅವರಲ್ಲಿಯ ಅರಸನಾದ ಅಮೋಘವರ್ಷ ನೃಪತುಂಗನು 'ಕವಿರಾಜಮಾರ್ಗ'ವೆಂಬ ಕಾವ್ಯಲಕ್ಷಣಗ್ರಂಥದ ಕರ್ತೃವೆಂದು ಹೇಳಲಾಗಿದೆ. ರಾಷ್ಟ್ರಕೂಟರ ನೂರಾರು ಶಿಲಾಶಾಸನಗಳು ಕನ್ನಡಲಿಪಿ ಮತ್ತು ಭಾಷೆಗಳಲ್ಲಿವೆ. ಮಹಾರಾಷ್ಟ್ರದ ನಾಗಪುರದ ಸಮೀಪದಲ್ಲಿ ಜುರಾ ಎಂಬಲ್ಲಿ ಈ ಮನೆತನದ ಪ್ರಶಸ್ತಿಪರ ಕನ್ನಡ ಶಾಸನ ದೊರೆತಿರುವುದನ್ನು ಇಲ್ಲಿ ಸ್ಮರಿಸಬಹುದು.

ರಾಷ್ಟ್ರಕೂಟರ ಆರಂಭಕಾಲದ ಶಾಸನಗಳಲ್ಲಿ ಈ ಮನೆತನದ ಮೂಲಪುರುಷರನ್ನು ಕುರಿತು ಯಾವ ಪೌರಾಣಿಕ ಕತೆಗಳನ್ನೂ ಹೇಳಿಲ್ಲ. ನಂತರ ಬಂದವುಗಳಲ್ಲಿ ಇವರನ್ನು ಯದುವಂಶೀಯರೆಂದು ಹೇಳಿದೆ. ಕೆಲವು ಶಾಸನಗಳಲ್ಲಿ ಬ್ರಹ್ಮ, ಅತ್ರಿ ಮೊದಲಾದವರಿಂದ ಮನೆತನದ ವಂಶಾನುಕ್ರಮಣಿ ಪೌರಾಣಿಕವಾಗಿ ಆರಂಭಗೊಂಡು, ಅಲ್ಲಿ ಯಾದವನೆಂಬಾತನು ಆಳಿದನೆಂದೂ ಅವನ ವಂಶದಲ್ಲಿ ಅನೇಕ ರಾಜರಾದಮೇಲೆ ದಂತಿದುರ್ಗನು ಪಟ್ಟಕ್ಕೆ ಬಂದನೆಂದೂ ಹೇಳಿದೆ. ಕರ್ಣಾಟಕದಲ್ಲಿ ಈವರೆಗೆ ಆಳಿದ ಇತರ ಅರಸು ಮನೆತನಗಳ ವಿಚಾರದಲ್ಲಿ ಶತಮಾನಗಳ ನಂತರ ಹುಟ್ಟಿದ ಶಾಸನಗಳು ಹೇಗೆ ಪೌರಾಣಿಕತೆಯನ್ನು ಕಲ್ಪಿಸಿದುವೋ, ಹಾಗೆಯೇ ಇಲ್ಲಿಯೂ.

ರಾಷ್ಟ್ರಕೂಟರ ಲಾಂಛನ ಗರುಡ. ಇದನ್ನು ಅವರ ತಾಮ್ರಶಾಸನಗಳ ಮುದ್ರೆಗಳ ಮೇಲೆ ಸ್ಪಷ್ಟವಾಗಿ ಕಾಣಬಹುದು. ಇವರ ಧ್ವಜ ಪಾಳಿಧ್ವಜ. ಶಾಸನಗಳ ಆರಂಭದಲ್ಲಿ ವಿಷ್ಣು ಮತ್ತು ಶಿವಸ್ತುತಿಯಿದೆ. ಜೈನಧರ್ಮಕ್ಕೆ ಹಾಗೂ ವಾಙ್ಮಯಕ್ಕೆ ಇವರಿಂದ ಸಂದ ಪ್ರೋತ್ಸಾಹ ಮಿಗಿಲು. ಇವರ ಧರ್ಮಸಹಿಷ್ಣುತೆಗೆ ಇದು ಸಾಕ್ಷಿ. ಬಾದಾಮಿಯ ಚಾಲುಕ್ಯರು ಪಡೆದಿದ್ದ 'ಪೃಥ್ವೀವಲ್ಲಭ' ಎಂಬ ಬಿರುದಿನ ಒಂದು ಭಾಗವಾದ 'ವಲ್ಲಭ' ಎಂಬುದನ್ನು ಈ ಮನೆತನದ ಅರಸರೆಲ್ಲರೂ ಪಡೆದಿದ್ದರೆನ್ನಬಹುದು. ಕ್ರಿ.ಶ. ೯–೧೦ನೆಯ ಶತಮಾನಗಳಲ್ಲಿ ಹಿಂದುಸ್ಥಾನಕ್ಕೆ ಬಂದಿದ್ದ ಅರಬ್ಬಿದೇಶದ ಪ್ರವಾಸಿಗರು ಈ ಅರಸರನ್ನು ತಮ್ಮ ಬರೆವಣಿಗೆಗಳಲ್ಲಿ ಅಮರಗೊಳಿಸಿದ್ದಾರೆ. ಬಲ್ಹರಾ (ವಲ್ಲಭರಾಜ) ಎಂಬುದು ಈ ಅರಸರಿಗೆ ಅವರು ಕೊಟ್ಟ ಅಭಿಧಾನ. ಇವರ ರಾಜಧಾನಿ ಮನ್‌ಕೀರ್ (ಮಾನ್ಯಖೇಟ) ಆಗಿತ್ತೆಂದು ಅವರು ಹೇಳಿದ್ದಾರೆ.

ರಾಷ್ಟ್ರಕೂಟ ವಂಶಕ್ಕೆ ಸೇರಿದ ಹಲವರು ಮಂಡಲಿಕರು ೭-೮ನೆಯ ಶತಮಾನಗಳಲ್ಲಿ ದಕ್ಷಿಣಾಪಥದ ಬೇರೆ ಬೇರೆ ಕಡೆಗಳಲ್ಲಿ ಅಧಿಕಾರಾರೂಢರಾಗಿದ್ದರು. ೭ನೆಯ ಶತಮಾನದಲ್ಲಿ ಮಾನ್ಯಪುರದ ಅಭಿಮನ್ಯು ಎಂಬಾತನು, ೮ನೆಯ ಶತಮಾನದಲ್ಲಿ ಅಮರಾವತಿ ಜಿಲ್ಲೆಯ ತೀವರ್ಖೇಡ ಮತ್ತು ಮುಲ್ತಾಯಿಗಳಲ್ಲಿ ಯುದ್ಧಾಸುರ ನನ್ನರಾಜನೆಂಬುವನು ಮತ್ತು ೯ನೆಯ ಶತಮಾನದಲ್ಲಿ ಭೂಪಾಲದ ಸಮೀಪದ ಪ್ರದೇಶದಲ್ಲಿ ಪರಬಲರಾಜನೆಂಬುವನು ಆಳುತ್ತಿದ್ದರೆಂದು ತಿಳಿದಿದೆ. ಇನ್ನೂ ಹಲವರ ಹೆಸರುಗಳು ನಮಗೆ ತಿಳಿದಿವೆ. ಆದರೆ ಪರಸ್ಪರರಿಗಿದ್ದ ಹಾಗೂ ಕರ್ಣಾಟಕದ ರಾಷ್ಟ್ರಕೂಟರಿಗೂ ಇವರಿಗೂ ಇದ್ದ ಸಂಬಂಧಗಳೇನೆಂಬುದು ತಿಳಿದಿಲ್ಲ.

ಬಾದಾಮಿಯ ಚಾಲುಕ್ಯರ ಅವನತಿಗೆ ಕಾರಣನಾದ ದಂತಿದುರ್ಗನ ಎಲ್ಲೋರ ಶಾಸನ

ದಲ್ಲಿ ಅವನ ವಂಶಾವಳಿಯನ್ನು ಹೀಗೆ ನಿರೂಪಿಸಲಾಗಿದೆ :

ದಂತಿವರ್ಮ—ಇಂದ್ರ—ಗೋವಿಂದರಾಜ—ಕರ್ಕ—ಇಂದ್ರ—ದಂತಿದುರ್ಗ. ಆದರೆ ದಂತಿವರ್ಮನಿಗೂ ಹಿಂದೆ ನಾಲ್ವರು (ದುರ್ಗರಾಜ, ಗೋವಿಂದರಾಜ, ಸ್ವಾಮಿಕರಾಜ ಮತ್ತು ನನ್ನರಾಜ) ಆಳಿದರೆಂದೂ ಇವರು ಲತ್ತಲೂರು (ಲಾತೂರು) ಸುತ್ತಲಿನ ಪ್ರದೇಶ ದಲ್ಲಿ ಮೊದಲು ಅಧಿಕಾರದಲ್ಲಿದ್ದರೆಂದೂ ಇವರಲ್ಲಿ ನಾಲ್ಕನೆಯವನಾದ ನನ್ನರಾಜನು ತನ್ನ ಶೌರ್ಯಸಾಹಸಗಳಿಂದ ಇಮ್ಮಡಿ ಪುಲಕೇಶಿಯನ್ನು ಮೆಚ್ಚಿಸಿ ಬೀರಾರ್ ಪ್ರಾಂತಕ್ಕೆ ವಲಸೆಹೋಗಿ ಅಲ್ಲಿ ಚಾಲುಕ್ಯರ ಸಾಮಂತಿಕೆಯನ್ನೂ ಪ್ರಾಂತಾಧಿಕಾರವನ್ನೂ ಪಡೆದು ಕೊಂಡನೆಂದೂ ಅಚಲಪುರ (ಈಗಿನ ಎಲಿಚಪುರ) ಅವನ ರಾಜಧಾನಿಯಾಗಿತ್ತೆಂದೂ ಕೆಲವರು ಹೇಳಿದ್ದಾರೆ. ಆದರೆ ಈ ಅಂಶಗಳು ಇನ್ನೂ ಖಚಿತಗೊಂಡಿಲ್ಲ. ಎಲ್ಲೋರಾ ಶಾಸನದ ಹೇಳಿಕೆಯನ್ನವಲಂಬಿಸಿ ದಂತಿವರ್ಮನೇ ರಾಷ್ಟ್ರಕೂಟರ ಮೂಲಪುರುಷ ಎಂಬುದು ಮಾತ್ರ ಈಗ ಸಾಧಾರಣವಾಗಿ ಮಾನ್ಯವಾದ ಅಭಿಪ್ರಾಯ.

ದಂತಿದುರ್ಗ : ಈತನ ತಂದೆಯಾದ ಇಂದ್ರನು (II) ರಾಕ್ಷಸಪದ್ಧತಿಯ ಮೇರೆಗೆ ಚಾಲುಕ್ಯ ರಾಜಕುಮಾರಿಯಾದ ಭವನಾಗಾಳನ್ನು ಮದುವೆಯಾಗಿದ್ದನೆಂದು ಮೇಲೆ ಹೇಳಿ ದ್ದೇವೆ. ಈ ಚಾಲುಕ್ಯರಾಜನು ಮಾಂಡಲಿಕನಾಗಿದ್ದ ಮಂಗಲರಾಜ ವಿನಯಾದಿತ್ಯನೋ ಅಥವಾ ಅವನ ತಮ್ಮನಾದ ಪುಲಕೇಶಿಯೋ ಆಗಿದ್ದಿರಬಹುದೆಂದು ಊಹಿಸಲಾಗಿದೆ. ದಂತಿದುರ್ಗನಿಗೆ ಸಾಹಸತುಂಗನೆಂಬ ಬಿರುದಿದ್ದಿತು. ಇವನು ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯನ ಸಮಕಾಲೀನನೂ ಆತನ ಸಾಮಂತನೂ ಆಗಿದ್ದನು. ಆಗ ಚಾಲುಕ್ಯ ರಾಜ್ಯದ ಉತ್ತರದಲ್ಲಿ ಹೆಚ್ಚು ಪ್ರಭಾವಶಾಲಿಗಳಾಗುತ್ತಿದ್ದ ಅರಬರನ್ನು ಸ್ವಲ್ಪಕಾಲ ಹಿಮ್ಮೆಟ್ಟಿಸಿದ ಕೀರ್ತಿ ಗುಜರಾತಿನ ಅವನಿಜನಾಶ್ರಯ ಪುಲಕೇಶಿಗೆ ಸಲ್ಲಬೇಕು ; ಆದರೆ ಆತನೊಡನೆ ದಂತಿದುರ್ಗನು ಸಹ ಕದನದಲ್ಲಿ ಭಾಗವಹಿಸಿ ಆ ಕೀರ್ತಿಯ ಪಾಲುದಾರ ನಾದನು. ಎಲ್ಲೋರಾ ಶಾಸನ ಈತನು ಕಾಂಚಿ, ಕಳಿಂಗ, ಕೋಸಲ, ಶ್ರೀಶೈಲ, ಮಾಳವ ಮತ್ತು ಲಾಟಗಳನ್ನು ಜಯಿಸಿದನೆಂದು ಹೇಳುತ್ತದೆ. ಕೀರ್ತಿವರ್ಮನು ಯುವರಾಜ ನಾಗಿದ್ದಾಗ ಪಲ್ಲವರ ವಿರುದ್ಧ ದಂಡೆತ್ತಿದ್ದ ಸಂದರ್ಭದಲ್ಲಿ ದಂತಿದುರ್ಗನು ಸಹ ಅವನೊಡನೆ ಕಾಂಚಿಗೆ ಸೈನ್ಯಸಮೇತವಾಗಿ ಹೋಗಿರಬಹುದು. ಬಹುಶಃ ಆ ದಂಡಯಾತ್ರೆಯಿಂದ ಹಿಂದಿರುಗುವಾಗ ಶ್ರೀಶೈಲದಲ್ಲಿದ್ದ ಅರಸರನ್ನು ಕದನದಲ್ಲಿ ಎದುರಿಸಿರಬೇಕು. ಪಲ್ಲವ ನಂದಿವರ್ಮನ ಸಹಾಯವನ್ನು ಯಾಚಿಸಿ, ಆತನಿಗೆ ತನ್ನ ಮಗಳಾದ ರೇವಾಳನ್ನು ಮದುವೆ ಮಾಡಿಕೊಟ್ಟನೆಂದೂ ಸ್ವತಃ ನಂದಿವರ್ಮನು ರಾಜ್ಯಭ್ರಷ್ಟನಾಗಿದ್ದಾಗ ಅತನಿಗೆ ಆಶ್ರಯನೀಡಿ ಆತನನ್ನು ಕಾಂಚಿಯ ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಿದ ನೆಂದೂ ಮುಂತಾಗಿ ಮಾಡಲಾದ ಊಹೆಗಳು ನಿರಾಧಾರವಾಗಿವೆ. ಉಜ್ಜಯಿನಿಯಲ್ಲಿ ಈತನು ಹಿರಣ್ಯಗರ್ಭದಾನವನ್ನು ಮಾಡಿದುದು ಕ್ರಮೇಣ ಹೆಚ್ಚುತ್ತಿದ್ದ ಇವನ ಪ್ರಾಬಲ್ಯಕ್ಕೆ ಸೂಚಕ. ಇಮ್ಮಡಿ ಕೀರ್ತಿವರ್ಮನ ದುರ್ಬಲತೆಯನ್ನು ಕಂಡುಕೊಂಡ ದಂತಿದುರ್ಗನು ಗುಜರಾತಿನ ಚಾಲುಕ್ಯರನ್ನು ಸೋಲಿಸಿದನು. ಕ್ರಮೇಣ ಮಾಲವ

ಮತ್ತು ಮಹಾಕೋಸಲಗಳು ಇವನ ವಶವಾದುವು. ಕೊನೆಗೊಮ್ಮೆ ಕೀರ್ತಿವರ್ಮನ
ಕವನದಲ್ಲಿ ಈತ ಎದುರಿಸಿ ಸೋಲಿಸಿದನು. ಆದರೆ ಈ ಗೆಲುವನ್ನು ಸಾರ್ಥಕಪ
ಕೊಳ್ಳುವ ಮೊದಲೇ ದಂತಿದುರ್ಗನು ಮೃತನಾದನು.

ಆತ ಸಾಯುವ ಕಾಲಕ್ಕೆ ಇನ್ನೂ ೩೬-೩೭ ವರ್ಷಗಳ ಕಿರಿಯನಾಗಿದ್ದನು. ಆ
ಆವನ ಸಾಧನೆಗಳು ಅಸಾಧಾರಣವಾದವು. ರಾಷ್ಟ್ರಕೂಟ ರಾಜ್ಯದ ಅಸ್ತಿ
ಹಾಕಿದವನು ಈತನೇ. ಇವನ ಪೂರ್ವಜರು ಅಚಲಪುರವನ್ನು ತಮ್ಮ ಕೇಂದ್ರ
ವನ್ನಾಗಿ ಮಾಡಿಕೊಂಡಿರಬಹುದು. ಆದರೆ ಈತನು ಅಧಿಕಾರದಲ್ಲಿದ್ದಾಗ ಎಲ್ಲೋ
ಈತನ ರಾಜಧಾನಿಯಾಗಿದ್ದಂತೆ ತೋರುತ್ತದೆ.

ಕೃಷ್ಣ I: ಕ್ರಿ.ಶ. ಸುಮಾರು ೭೫೬ರಲ್ಲಿ ಅಧಿಕಾರಕ್ಕೆ ಬಂದ ಕೃಷ್ಣನು ದಂತಿದು
ಚಿಕ್ಕಪ್ಪ. ಸಂತಾನವಿಲ್ಲದ ದಂತಿದುರ್ಗನ ನಂತರ ರಾಜ್ಯಾಧಿಕಾರ ಈತನಿಗೇ ಲಭಿಸಿ
ದಕ್ಷಿಣ ಗುಜರಾತಿನಲ್ಲಿ ಆಳುತ್ತಿದ್ದ ಸೋದರಸಂಬಂಧಿಯಾದ ಕರ್ಕ (II)ನೆಂಬಾತನ
ಕೃಷ್ಣನು ಪಟ್ಟಕ್ಕೆ ಬಂದಕೂಡಲೇ ಸೋಲಿಸಿ, ಪ್ರಬಲನಾಗುತ್ತಿದ್ದ ಆತನ ಸೊಕ್ಕ
ಗಿಸಿ, ಆ ಪ್ರದೇಶದಲ್ಲಿ ತನ್ನ ಅಧಿಕಾರಿಗಳನ್ನು ನೇಮಿಸುವುದರ ಮೂಲಕ ಅ
ನೇರವಾಗಿ ತನ್ನ ಆಡಳಿತದ ಕಕ್ಷೆಗೊಳಪಡುವಂತೆ ಮಾಡಿದನು. ಶಾಸನಗಳಲ್ಲಿ ಕೃಷ್ಣ
ಸೋಲಿಸಿದನೆಂದು ಹೇಳಲಾದ ರಾಹಪ್ಪನೆಂಬಾತನೇ ಈ ಕರ್ಕನೆಂದು ಹಲ
ಅಭಿಪ್ರಾಯ.

ಕ್ರಿ.ಶ. ೭೫೬ರಲ್ಲಿ ಸಿಂಹಾಸನವನ್ನೇರಿದ ಕೃಷ್ಣನು ದಂತಿದುರ್ಗನು ಆರಂಭಿ
ಯೋಜನೆಯನ್ನು ಮುಕ್ತಾಯಗೊಳಿಸಲೆಂಬಂತೆ ಇಮ್ಮಡಿ ಕೀರ್ತಿವರ್ಮನ ವಿ
ಎರಗಿಹೋಗಿ ಆವನನ್ನು ಸಂಪೂರ್ಣವಾಗಿ ಸೋಲಿಸಿದನು. ಕೀರ್ತಿವರ್ಮನನ್ನು ಸೋಲಿ
ನಂತರ ಕೃಷ್ಣನು ಕೊಂಕಣದ ಕಡೆಗೆ ದಂಡೆತ್ತಿದನು. ಕೀರ್ತಿವರ್ಮನ ಆಳಿ
ಕೊನೆಯ ವರ್ಷಗಳಲ್ಲಿ ಈ ಪ್ರದೇಶ ಚಾಲುಕ್ಯರ ಅಧೀನತೆಯನ್ನು ಕಳಚಿಕೊ
ಸ್ವತಂತ್ರವಾಗಿದ್ದಿತು. ಇಲ್ಲಿ ಅಧಿಕಾರದಲ್ಲಿದ್ದವರು ಯಾರು ಎಂಬುದು ತಿಳಿಯ
ಆದರೆ ಈ ಪ್ರದೇಶವನ್ನು ಗೆದ್ದುಕೊಂಡ ಕೃಷ್ಣನು ಇಲ್ಲಿ ಶಿಲಾಹಾರರ ಮನೆ
ಸಣಪ್ಪುಲ್ಲನನ್ನು ತನ್ನ ಮಾಂಡಲಿಕನನ್ನಾಗಿ ನೇಮಿಸಿದನು. ನಂತರ ರಾಷ್ಟ್ರಕ
ಸಾಮಂತರಾಗಿ ಇವರು ಅಧಿಕಾರದಲ್ಲಿದ್ದರು.

ಅಲ್ಲಿಂದ ದಕ್ಷಿಣಕ್ಕೆ ಹೊರಳಿದ ಕೃಷ್ಣನು ತಲಕಾಡಿನ ಗಂಗರನ್ನು ಎದುರಿಸಿ
ಈತನ ಸಮಕಾಲೀನನಾದ ಗಂಗ ಶ್ರೀಪುರುಷನು ಇವನೊಡನೆ ತೀವ್ರವಾಗಿ ಹೋ
ದನು. ಆದರೆ ಗಂಗರ ನೆಲೆವೀಡಾಗಿದ್ದ ಮಣ್ಣೆನಗರದವರೆಗೂ ನುಗ್ಗಿದ ಕೃಷ್ಣನ
ಕೊನೆಗೂ ಅಲ್ಲಿಂದ ಹಿಂಜರಿಯಬೇಕಾಯಿತೆಂಬುದನ್ನು ಈ ಮೊದಲೇ ಅರಿತ
ಇದು ಆದುದು ಕ್ರಿ.ಶ. ೭೬೮ರ ಸುಮಾರಿನಲ್ಲಿ. ಈ ಸಂದರ್ಭದಲ್ಲಿ ರಾಷ್ಟ್ರಕ
ಆಕ್ರಮಿಸಿದ್ದ ಹಲವಾರು ಪ್ರದೇಶಗಳನ್ನು ಪುನಃ ಬಿಟ್ಟುಬಿಡಬೇಕಾಯಿತು. ಈ
ಗಳಲ್ಲಿ ಯುವರಾಜನಾದ ಇಮ್ಮಡಿ ಗೋವಿಂದನು ಪ್ರಮುಖ ಪಾತ್ರವನ್ನು ವಹಿಸಿ

ದ ಸುಪ್ರೀತನಾದ ಕೃಷ್ಣನು ವೆಂಗಿದೇಶವನ್ನು ಆಕ್ರಮಿಸಲು ಅವನನ್ನು ಸೇನಾ ನಾಗಿ ಕಳುಹಿಸಿದನು. ಸು. ೭೬೯ರಲ್ಲಿ ವೆಂಗಿಯ ವಿಷ್ಣುವರ್ಧನನನ್ನು ದನು ಸೋಲಿಸಿದನು. ಕೃಷ್ಣಾ ಮೂಸೀ ನದಿಗಳ ಸಂಗಮದ ಬಳಿಯ ಸ್ಕಂಧಾ ಲ್ಲಿ ಗೋವಿಂದನು ಬೀಡುಬಿಟ್ಟಾಗ ವಿಷ್ಣುವರ್ಧನನು (IV) ಅವನನ್ನು ಸಂಧಿಸಿ ಶರಣಾದನೆಂದು ಶಾಸನವೊಂದು ತಿಳಿಸುತ್ತದೆ.

ತಿದುರ್ಗನು ಕೈಗೊಂಡ ಕಾರ್ಯವನ್ನು ಪರಿಪೂರ್ಣಗೊಳಿಸಿ, ಸುಭದ್ರವಾಗಿ ಕ್ಕೆ ಬಂದ ಸಾಮ್ರಾಜ್ಯವನ್ನು ಭದ್ರಗೊಳಿಸಿ, ವಿಸ್ತರಿಸಿದ ಖ್ಯಾತಿ ಕೃಷ್ಣನದಾ ದರೆ ಈತನು ಕರ್ನಾಟಕದ ಇತಿಹಾಸದಲ್ಲಿ ಪ್ರಸಿದ್ಧನಾಗಿರುವುದು, ಎಲ್ಲೋರದ ಕೈಲಾಸನಾಥ ದೇವಾಲಯವನ್ನು ಕೊರೆಯಿಸಿದನೆಂಬ ಕಾರಣದಿಂದ. ಈ ಏಕ ದೇವಾಲಯವು ಅತ್ಯದ್ಭುತವಾದ ಒಂದು ಶಿಲ್ಪಸಾಧನೆ. ಇದರ ಕಾರ್ಯ ಆರಂಭ ದು ಕ್ರಿ.ಶ. ೭೬೦ರಲ್ಲಿ. ಅನಂತರದ ವರ್ಷಗಳಲ್ಲಿ ಇದರ ಇತರ ಭಾಗಗಳು ಕೆಲಸ ಕೂಟ ಆಳಿಕೆ ಕೊನೆಗಾಣುವವರೆಗೆ, ಇಲ್ಲಿನ ಇತರ ಗುಹಾಲಯಗಳ ನಿರ್ಮಾಣದ ಮುಂದುವರಿದಂತೆ ತೋರುತ್ತದೆ. ಅಕಾಲವರ್ಷ, ಶುಭತುಂಗ ಮುಂತಾಗಿ ಂಕಿತನಾದ ಕೃಷ್ಣನು ಕ್ರಿ.ಶ. ಸು. ೭೭೪ರಲ್ಲಿ ದಿವಂಗತನಾದನು.

ನ ಮಗ ಇಮ್ಮಡಿ ಗೋವಿಂದನು ಪಟ್ಟಕ್ಕೇರುವ ಮುನ್ನವೇ ಹೆಸರಾಂತ ಸೇನಾ ದ್ದನು. ಆದುದರಿಂದ ಇವನು ಅರಸನಾದಾಗ ಪ್ರಜೆಗಳು ಇವನನ್ನು ಪ್ರೀತಿ ಸ್ವಾಗತಿಸಿದರು. ಆದರೆ ಅಧಿಕಾರಮದ ಐಶ್ವರ್ಯಮದಗಳು ಇವನನ್ನು ಮತ್ತು ವಿಲಾಸ ಜೀವನಗಳಿಗೆ ಸೆಳೆದವು. ಇದರಿಂದ ನಿರಾಶೆಗೊಂಡ ಪ್ರಜೆಗಳು ತಮ್ಮನಾದ ಧ್ರುವನ ಪಕ್ಷವಹಿಸಿದರೆಂದೂ ಅವನು ಸೋದರನ ವಿರುದ್ಧ ದಂಗೆ ಅವನಿಂದ ಅಧಿಕಾರವನ್ನು ಬಲಾತ್ಕಾರವಾಗಿ ಕಸಿದುಕೊಂಡನೆಂದೂ ಈ ಪರಿಸ್ಥಿತಿ ಗೋವಿಂದನು ಕಾಂಚಿಯ, ವೆಂಗಿಯ ಅರಸರ ಸಹಾಯವನ್ನು ಬಯಸಿದನೆಂದೂ ಲಾಗಿದೆ. ಆದರೆ ಈ ಆಪಾದನೆಯನ್ನು ಅಲ್ಲಗಳೆದು, ತನ್ನ ದೌರ್ಬಲ್ಯವನ್ನು ಸಾಮರ್ಥ್ಯವನ್ನು ಅರಿತ ಗೋವಿಂದನು ಸ್ವಯಂಪ್ರೇರಿತನಾಗಿ ಅಧಿಕಾರವನ್ನು ಗೆ ವಹಿಸಿದನೆಂದೂ ಆದ್ದರಿಂದ ಸದ್ದುಗದ್ದಲವಿಲ್ಲದೆ ಕ್ರಿ.ಶ. ಸು. ೭೮೦ರಲ್ಲಿ ಸಿಂಹಾಸನವನ್ನೇರಿದನೆಂದೂ ಶ್ರೀ ಸುಬ್ರಹ್ಮಣ್ಯ ಅಯ್ಯರ್ ಸೂಚಿಸಿದ್ದಾರೆ.[14] ರಿಶೀಲನಾರ್ಹ.

ವ : ಧಾರಾವರ್ಷ, ನಿರುಪಮ, ಕಲಿವಲ್ಲಭನೆನಿಸಿದ ಧ್ರುವನು ತನ್ನ ಪೂರ್ವಜರ ಯನ್ನನುಸರಿಸಿ ಶೌರ್ಯಪ್ರದರ್ಶನಾಕಾಂಕ್ಷೆಯಿಂದ ಸ್ವಸಾಮ್ರಾಜ್ಯಪರಿಧಿಯಲ್ಲಿ ತೊಡಗಿ ಈತನು ಮೊದಲು ರಾಜ್ಯದ ದಕ್ಷಿಣದಲ್ಲಿದ್ದ ಗಂಗ ಮತ್ತು ಪಲ್ಲವರನ್ನು ಸೋಲಿಸಿ ಉತ್ತರದ ದಿಗ್ವಿಜಯವನ್ನು ಕೈಗೊಂಡನೆಂಬುದು ಕೆಲವರ ಮತ. ಆದರೆ ದ್ಧವಾದ ಅಭಿಪ್ರಾಯವನ್ನು ಇತರರು ತಳೆದಿದ್ದಾರೆ.

ನನು ಪಟ್ಟಕ್ಕೆ ಬಂದಾಗ ಉತ್ತರ ಭಾರತದ ರಾಜಕೀಯದಲ್ಲಿ ಮಹಾಪದ

ಗೂರ್ಜರ ಪ್ರತೀಹಾರರೂ ಬಂಗಾಲದ ಪಾಲರೂ ಪ್ರಬಲರಾಗಿದ್ದರು. ಮಗಧರಾಜ್ಯದ ಯಶಸ್ಸು ಕ್ಷೀಣಿಸಿ ಹರ್ಷವರ್ಧನನು ಆಳುತ್ತಿದ್ದ ಕಾನ್ಯಕುಬ್ಜವು (ಕನೋಜ) ಅಂದಿನ ರಾಜಕೀಯ ಕೇಂದ್ರವಾಗಿತ್ತು. ಕನೋಜದಲ್ಲಿ ಆಯುಧ ಮನೆತನದವರು ಆಳುತ್ತಿದ್ದ ರಾದರೂ ಅವರಲ್ಲಿ ಸೋದರರಿಬ್ಬರ ನಡುವಣ ಮಾತ್ಸರ್ಯ ಹೊರಗಿನವರು ಈ ಅಂತಃ ಕಲಹಗಳಲ್ಲಿ ಪ್ರವೇಶಿಸಲು ಹಾದಿಮಾಡಿಕೊಟ್ಟಿತು. ಮಾಲವದಲ್ಲಿ ಆಳುತ್ತಿದ್ದ ಗೂರ್ಜರ ಪ್ರತೀಹಾರ ಮನೆತನದ ವತ್ಸರಾಜನು ಮಾಳವ ಮತ್ತು ರಾಜಪುತಾನಗಳವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದ್ದನು. ಈತನು ಸುಲಭವಾಗಿಯೇ ಕನೋಜನ್ನು ಆಕ್ರಮಿಸಿದನು. ಇಂದ್ರಾಯುಧನು ಇವನ ಸಾಮಂತಿಕೆಯನ್ನೊಪ್ಪಿಕೊಂಡನು. ಈ ಸಮಯವನ್ನು ಸಾಧಿಸಿ ಬಂಗಾಲದ ಧರ್ಮಪಾಲನು ಸಹ ಕನೋಜನ್ನು ಮುತ್ತಿದನಾದರೂ ವತ್ಸರಾಜನಿಂದ ಸೋಲಿಸಲ್ಪಟ್ಟು ಸ್ವದೇಶಕ್ಕೆ ಓಡಬೇಕಾಯಿತು. ಹೀಗೆ ಆರಂಭವಾದ ಇವರಿಬ್ಬರ ನಡುವಣ ಮತ್ಸರ ಬೆಳೆದು ಅವರ ನಡುವೆ ಇನ್ನೊಮ್ಮೆ ಕದನವುಂಟಾಗುವುದರಲ್ಲಿತ್ತು. ಅಷ್ಟರಲ್ಲಿ ಧ್ರುವನು ಈ ಜಗಳಗಳಲ್ಲಿ ಮೂರನೆಯವನಾಗಿ ತಲೆಹಾಕಿದನು.

ನರ್ಮದೆಯನ್ನು ದಾಟಿ ಕನೋಜಿನ ಕಡೆಗೆ ಧಾವಿಸುತ್ತಿದ್ದ ರಾಷ್ಟ್ರಕೂಟ ಸೈನ್ಯ ವನ್ನು ವತ್ಸರಾಜನು ಮಾರ್ಗದಲ್ಲಿಯೇ ಎದುರಿಸಿದನು. ಆದರೆ ರಾಷ್ಟ್ರಕೂಟರ ಬಲಿಷ್ಠ ವಾದ ಸೇನೆ ಇವನ ಸೈನ್ಯವನ್ನು ಸದೆಬಡಿದು ಓಡಿಸಿತು. ವತ್ಸರಾಜನ ನಂತರ ಧರ್ಮ ಪಾಲನು ಧ್ರುವನನ್ನು ಎದುರಿಸಿದನಾದರೂ ಕರ್ಣಾಟಕ ಬಲದ ಎದುರಿಗೆ ಇವನದೇನೂ ನಡೆಯದಾಯಿತು. ರೋಷದಿಂದ ಹೋರಾಡಿದ ರಾಷ್ಟ್ರಕೂಟರು ಧರ್ಮಪಾಲನ ಬಲವನ್ನು ಮುರಿದರು. ಅವನ ಸೈನ್ಯ ದಿಕ್ಪಾಪಾಲಾಗಿ ಚೆದುರಿತು. ಈ ವಿಜಯಗಳಿಂದ ಧ್ರುವನಿಗೆ ಪ್ರತಿಸ್ಪರ್ಧಿಗಳೇ ಇಲ್ಲದಾದರು. ಈಗ ಈತನು ಕನೋಜನ್ನು ಸುಲಭವಾಗಿ ಸ್ವಾಧೀನ ಪಡಿಸಿಕೊಳ್ಳಬಹುದಿತ್ತು. ಆದರೆ ಆಕ್ರಮಣ ಈತನ ಉದ್ದೇಶವಾಗಿರಲಿಲ್ಲ. ಎಂತಲೇ ಈ ದಿಗ್ವಿಜಯದಿಂದ ತೃಪ್ತಿಯನ್ನು ಪಡೆದು ರಾಷ್ಟ್ರಕೂಟರ ಶೌರ್ಯವನ್ನು ಮೆರಸಿದ ಈ ಅರಸನು ಗಂಗಾ ಯಮುನಾ ತೀರಗಳಲ್ಲಿ ವಿಶ್ರಮಿಸಿ ರಾಜಧಾನಿಗೆ ಹಿಂತಿರುಗಿದನು. ಅಪಾರವಾದ ಸಂಪತ್ತನ್ನೂ ಬಂಗಾಲದ ಅರಸನ ಚಿಹ್ನವನ್ನೂ ಗಂಗಾ ಯಮುನಾ ನದಿಗಳ ಚಿಹ್ನಗಳನ್ನೂ ತನ್ನೊಡನೆ ತಂದನು.

ಹಿಂದಿರುಗುವಾಗ ವೆಂಗಿದೇಶವನ್ನು ಮುತ್ತಿ ವಿಷ್ಣುವರ್ಧನನನ್ನು ಕದನಕ್ಕೆ ಆಹ್ವಾನಿಸಿ ದನು. ಆದರೆ ಈ ಮೊದಲೇ ಗೋವಿಂದನಿಂದ ಸೋಲನ್ನನುಭವಿಸಿದ್ದ ವೆಂಗಿಯ ಅರಸನು ಪುನಃ ಯುದ್ಧಮಾಡಲು ಸಿದ್ಧನಿರಲಿಲ್ಲ. ತನ್ನ ಮಗಳಾದ ಶೀಲಭಟ್ಟಾರಿಕೆಯನ್ನು ಧ್ರುವನಿಗೆ ಮದುವೆಮಾಡಿಕೊಟ್ಟು ಸ್ನೇಹಲಾಭವನ್ನು ಗಳಿಸಿದನು.

ಈಗಾಗಲೇ ಹೇಳಿದಂತೆ ದಕ್ಷಿಣದಲ್ಲಿ ಗಂಗರ ಶ್ರೀಪುರುಷನಾಗಲಿ, ನಂತರ ಅಧಿಕಾರಕ್ಕೆ ಬಂದ ಶಿವಮಾರನಾಗಲಿ ರಾಷ್ಟ್ರಕೂಟರ ಸಾಮಂತಿಕೆಯನ್ನು ಒಪ್ಪಲಿಲ್ಲ. ಇದು ಧ್ರುವನ ದಕ್ಷಿಣ ದಂಡಯಾತ್ರೆಗೆ ಕಾರಣವಾಯಿತು. ಶಿವಮಾರನ ಎಲ್ಲ ಪ್ರಯತ್ನಗಳೂ ವಿಫಲ ವಾಗಿ ಅವನು ಸೆರೆಹಿಡಿಯಲ್ಪಟ್ಟನು. ರಾಷ್ಟ್ರಕೂಟರ ಯುವರಾಜ ಸ್ತಂಭ(ಕಂಬಯ್ಯ)ನು

ಗಂಗರಾಜ್ಯದ ಅಧಿಕಾರಿಯಾಗಿ ನೇಮಿಸಲ್ಪಟ್ಟನು. ಅಲ್ಲಿಂದ ಮುಂದೆ ಪಲ್ಲವ ರಾಜ್ಯದ ಮೇಲೇರಿ ಹೋಗಿ ನಂದಿವರ್ಮಪಲ್ಲವಮಲ್ಲನನ್ನು ಸೋಲಿಸಿ ಧ್ರುವನು ಹಿಂತಿರುಗಿದನು.

ಧ್ರುವನ ದಂಡಯಾತ್ರೆಯ ಕ್ರಮವನ್ನು ಕುರಿತು ಭಿನ್ನಾಭಿಪ್ರಾಯಗಳಿವೆಯಾದರೂ ಇವನು ಮೊದಲು ಉತ್ತರ ದಿಗ್ವಿಜಯವನ್ನು ಮುಗಿಸಿ ನಂತರ ದಕ್ಷಿಣದಂಡಯಾತ್ರೆಯಲ್ಲಿ ತೊಡಗಿದನೆಂಬುದು ಸಮಂಜಸವಾಗಿದೆ. ಪ್ರಚಂಡ ಸೇನಾನಿಯಾದ ಧ್ರುವನು ರಾಷ್ಟ್ರ ಕೂಟ ರಾಜ್ಯವನ್ನು ವಿಸ್ತರಿಸಿದುದೇ ಅಲ್ಲದೆ ಅದರ ಯಶೋದುಂದುಭಿ ಎಲ್ಲೆಡೆಯೂ ಮೊಳಗುವಂತೆ ಮಾಡಿದನು. ಈತನ ಪತ್ನಿ ಶೀಲಮಹಾದೇವಿ ಅಥವಾ ಶೀಲಭಟ್ಟಾರಿಕೆ ಸಕಲಗುಣಸಂಪನ್ನೆಯಾಗಿದ್ದು ಅನೇಕ ರಾಜಕಾರ್ಯಗಳಲ್ಲಿ ತೊಡಗಿದ್ದಳು. ಈಕೆಯ ದಾನಶಾಸನಗಳು ರಾಜ್ಯಾಡಳಿತದಲ್ಲಿ ಈಕೆ ಪತಿಗೆ ನೆರವಾಗುತ್ತಿದ್ದಳೆಂಬುದನ್ನು ಸೂಚಿಸುತ್ತವೆ. ಧ್ರುವನಿಗೆ ಕರ್ಕ, ಸ್ತಂಭ, ಗೋವಿಂದ (III) ಮತ್ತು ಇಂದ್ರರೆಂಬ ನಾಲ್ವರು ಮಕ್ಕಳಿದ್ದರು. ಕರ್ಕನು ಅಲ್ಪಾಯುಷಿಯಾಗಿ ತಂದೆ ಜೀವಿಸಿರುವಾಗಲೇ ಮೃತಿಹೊಂದಿದ್ದನು. ಮೂರನೆಯವನಾದ ಗೋವಿಂದನು ತಂದೆಯ ದಿಗ್ವಿಜಯದಲ್ಲಿ ನೆರವಾಗಿ ತನ್ನ ದಕ್ಷತೆಯನ್ನು ಪ್ರದರ್ಶಿಸಿದನಾದ ಕಾರಣ ಅವನನ್ನು ಉತ್ತರಾಧಿಕಾರಿಯಾಗಿ ಧ್ರುವನು ಆರಿಸಿದ್ದನು. ಸೋದರರಲ್ಲಿ ಕಲಹಗಳುಂಟಾಗದಿರಲೆಂದು ಧ್ರುವನು ತಾನು ಬದುಕಿದ್ದಾಗಲೇ ಗೋವಿಂದನು ಪಟ್ಟಾಭಿಷೇಕಮಾಡಿಕೊಳ್ಳಬೇಕೆಂದು ಬಯಸಿದನಾದರೂ ಅವನ ಆ ಬಯಕೆಯನ್ನು ಗೋವಿಂದನು ತಳ್ಳಿಹಾಕಿದನು.

ಗೋವಿಂದ III : ಕ್ರಿ.ಶ. ೭೯೩ರಲ್ಲಿ ಧ್ರುವನು ಗತಿಸಿದಾಗ ಕಂಬಯ್ಯನು ತಮ್ಮನ ರಾಜ್ಯಾಭಿಷೇಕವನ್ನು ವಿರೋಧಿಸಿದನು. ಅದಕ್ಕಾಗಿ ತನ್ನ ಹನ್ನೆರಡು ಜನಸಾಮಂತರ ಹಾಗೂ ಹಿತೈಷಿಗಳ ಗುಂಪಿನೊಡನೆ ಗೋವಿಂದನ ಮೇಲೇರಿದನು. ಇದನ್ನು ನಿರೀಕ್ಷಿಸಿದ್ದ ಗೋವಿಂದನು ಗಂಗ ಶಿವಮಾರನನ್ನು ಸೆರೆಯಿಂದ ಮುಕ್ತಮಾಡಿ ಕಂಬಯ್ಯನ ವಿರುದ್ಧ ಹೋರಾಡಲು ಪ್ರೇರಿಸಿ ಕಳುಹಿಸಿದನು. ಆದರೆ ಶಿವಮಾರನು ಕಂಬಯ್ಯನ ಮಿತ್ರನಾಗಿ ಗೋವಿಂದನನ್ನೇ ಎದುರಿಸಿದನು. ಪಾಂಡ್ಯ, ಪಲ್ಲವ, ಚೋಳ, ಗಂಗ, ಕೇರಳ, ಆಂಧ್ರ, ವೆಂಗಿ, ಚಾಲುಕ್ಯ, ಮೌರ್ಯ, ಗುರ್ಜರ, ಕೋಸಲ, ಅವಂತಿ ಹಾಗೂ ಸಿಂಹಳದ ಅರಸರು ಕಂಬಯ್ಯನ ಬೆಂಬಲರಾಗಿದ್ದರೆಂದು ನೇಸಾರಿಕಾ ಶಾಸನ ತಿಳಿಸುತ್ತದೆಯಾದರೂ ಈ ಹೇಳಿಕೆ ಉತ್ಪ್ರೇಕ್ಷೆಯಿಂದ ಕೂಡಿದೆಯೆಂಬುದು ಸ್ಪಷ್ಟ. ಇಷ್ಟಾದರೂ ಗೋವಿಂದನು ಹೆದರದೆ ಶತ್ರುವನ್ನು ವಿರೋಧಿಸಿದನು. ಇದೊಂದು ಆಂತರಿಕ ದಂಗೆಯಾಗಿ ಪರ್ಯವಸಾನವಾಯಿತು. ಕಂಬಯ್ಯನನ್ನು ಕ್ಷಮಿಸಿ ಗಂಗವಾಡಿ ಪ್ರಾಂತಾಧಿಪತ್ಯವನ್ನು ಅವನಿಗಿತ್ತು, ಶಿವಮಾರನನ್ನು ಪುನಃ ಸೆರೆಯಲ್ಲಿಟ್ಟನು.

ಆ ಬಳಿಕ ಗೋವಿಂದನು ಉತ್ತರ ದಿಗ್ವಿಜಯೋತ್ಸುಕನಾದನು. ಈ ಮಧ್ಯೆ ಕನೋಜನ್ನು ವಶಪಡಿಸಿಕೊಳ್ಳಲು ಪ್ರತೀಹಾರರ ಪಾಲರ ನಡುವಣ ಹೋರಾಟಗಳು ಎಂದಿನಂತೆಯೇ ಮುಂದುವರಿದಿದ್ದುವು. ಧ್ರುವನು ಹಿಂತಿರುಗಿದ ಬಳಿಕ ಧರ್ಮಪಾಲನು ಮತ್ತೊಮ್ಮೆ ಕನೋಜಕ್ಕೆ ಧಾವಿಸಿ ಇಂದ್ರಾಯುಧನನ್ನು ಸೋಲಿಸಿ, ಅವನ ಪ್ರತಿ

ಸ್ಪರ್ಧಿಯೂ ತನ್ನ ಅಧೀನನೂ ಆಗಿದ್ದ ಚಕ್ರಾಯುಧನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಕನೋಜನ್ನು ಹಿಡಿದನು. ಆದರೆ ಪ್ರತೀಹಾರ ವತ್ಸರಾಜನ ನಂತರ ಆಳಲು ಬಂದ ಇಮ್ಮಡಿ ನಾಗಭಟನು ದಂಡೆತ್ತಿ ಚಕ್ರಾಯುಧನನ್ನು ಹೊರದೂಡಿದನು; ಧರ್ಮಪಾಲನನ್ನು ಸೋಲಿಸಿದನು. ಗೋವಿಂದನು ಉತ್ತರಕ್ಕೆ ಬಂದುದು ಈ ಸಂದರ್ಭದಲ್ಲಿ.

ಈ ದಂಡಯಾತ್ರೆ ಗೋವಿಂದನ ಸೈನ್ಯ ಸಂಚಾಲನಶಕ್ತಿ ಹಾಗೂ ದೂರದೃಷ್ಟಿಗಳ ಪ್ರದರ್ಶನವಾಗಿತ್ತು. ಮುನ್ನೆಚ್ಚರಿಕೆಯ ಕ್ರಮವಾಗಿ ತಮ್ಮನಾದ ಇಂದ್ರನನ್ನು ಗುಜರಾತಿನ ಪ್ರಾಂತಾಧಿಪತಿಯನ್ನಾಗಿ ನೇಮಿಸಿ ತನ್ನ ಗೈರುಹಾಜರಿಯಲ್ಲಿ ರಾಜ್ಯವನ್ನು ಕಾಪಾಡುವ ಹೊಣೆಗಾರಿಕೆಯನ್ನು ಅವನಿಗೆ ವಹಿಸಿದನು. ಮುನ್ನುಗ್ಗಿದ ಇವನ ಸೇನೆ ನಾಗಭಟನ ದಂಡನ್ನು ನುಚ್ಚುನೂರಾಗಿಸಿತು. ನಾಗಭಟನು ಗಂಗಾಬಯಲಿನಿಂದ ಓಡಿದನು; ಚಕ್ರಾಯುಧನು ಶರಣಾದನು. ಪರಿಸ್ಥಿತಿಗಳ ತೀವ್ರತೆಯನ್ನರಿತ ಧರ್ಮಪಾಲನು ಜಾಣ್ಮೆಯಿಂದ ತಲೆಬಾಗಿಸಿ ಹಿಂದಕ್ಕೆ ಸರಿದನು. ಹಿಮಾಲಯದ ತಪ್ಪಲಿನವರೆಗೆ ಉತ್ತರಭಾರತ ರಾಷ್ಟ್ರಕೂಟರ ಬಲಕ್ಕೆ ಕುಸಿಯಿತು. ಇದು ನಡೆದುದು ಕ್ರಿ.ಶ. ಸು. ೮೦೦ರಲ್ಲಿ. ಉತ್ತರದಲ್ಲಿ ಬಹಳ ಕಾಲ ತಂಗಲು ಗೋವಿಂದನಿಗೆ ಸಹಜವಾಗಿಯೇ ಅಸಾಧ್ಯವಾಗಿತ್ತು. ಹಿಂದಿರುಗುವಾಗ ವಿಂಧ್ಯಪರ್ವತದ ತಪ್ಪಲಿನಲ್ಲಿ ಶ್ರೀಭವನ (ಈಗಿನ ಬ್ರೋಚ್ ಜಿಲ್ಲೆಯ ಸರ್ಭಾನ)ದಲ್ಲಿ ಮಹಾರಾಜ ಶರ್ವನು ಅವನನ್ನು ಸ್ವಾಗತಿಸಿ ಅವನಿಗೆ ಶರಣಾದನು. ಇದೇ ಸಮಯದಲ್ಲಿ ರಾಜನಿಗೆ ಪುತ್ರೋತ್ಸವದ ಸಂತಸದ ಸುದ್ದಿಯೂ ತಲುಪಿತು. ಆಗ ಹುಟ್ಟಿದವನೇ ಅಮೋಘವರ್ಷ ನೃಪತುಂಗ.

ವೆಂಗಿಯಲ್ಲಿ ವಿಷ್ಣುವರ್ಧನನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ವಿಜಯಾದಿತ್ಯನು (ಕ್ರಿ.ಶ. ೭೯೯) ಸ್ವತಂತ್ರನಾಗಲು ಹವಣಿಸಿದನು. ಇದನ್ನರಿತ ಗೋವಿಂದನು ಅವನ ಸೋದರನಾದ ಭೀಮಸಳುಕಿಯ ಪರವಾಗಿ ಅವನ ವ್ಯವಹಾರಗಳಲ್ಲಿ ಪ್ರವೇಶಿಸಿ ವೆಂಗಿಯಲ್ಲಿ ಕದನ ಹೂಡಿದನು. ಹೀಗೆ ಆರಂಭವಾದ ಸೋದರರ ನಡುವಣ ಜಗಳಗಳು ೧೨ ವರ್ಷಗಳ ಕಾಲ ಮುಂದುವರಿಯಿತು. ಗೋವಿಂದನು ಅಷ್ಟೋತ್ತರಶತ ರಣಕ್ಷೇತ್ರಗಳಲ್ಲಿ ಶತ್ರುವನ್ನು ಎದುರಿಸಿ ಸೋಲಿಸಿದನೆಂದು ವೆಂಗಿ ಚಾಲುಕ್ಯರ ಶಾಸನಗಳು ತಿಳಿಸಿವೆ. ಗೋವಿಂದನು ಉತ್ತರ ದಿಗ್ವಿಜಯದಲ್ಲಿ ನಿರತನಾಗಿದ್ದ ಸಮಯದಲ್ಲಿ ದಕ್ಷಿಣದಲ್ಲಿ ಗಂಗ ಪಲ್ಲವ ಪಾಂಡ್ಯ ಕೇರಳರು ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ಧಿಕ್ಕರಿಸಲು ಯತ್ನಿಸಿದರು. ಇವರ ಒಕ್ಕೂಟವನ್ನು ಮುರಿಯಲು ಗೋವಿಂದನು ೮೦೩-೦೪ರಲ್ಲಿ ಕಾಂಚಿಯನ್ನು ಮುತ್ತಿದನು. ಇವನ ಶೌರ್ಯವನ್ನು ಕಂಡು ಬೆದರಿದ ಸಿಂಹಳಾಧಿಪತಿ ಇವನಿಗೆ ಶರಣಾಗಿ, ತನ್ನ ಹಾಗೂ ಮಂತ್ರಿಯೊಬ್ಬನ ವಿಗ್ರಹಗಳನ್ನು ಕುರುಹಾಗಿ ನೀಡಿದನು. ಇವು ಕಾಂಚಿಯ ಶಿವಾಲಯದಲ್ಲಿ ಸ್ಥಾಪಿಸಲ್ಪಟ್ಟವು.

ಹೀಗೆ, ಸಾಹಸದಲ್ಲೂ ಸೈನ್ಯಕೀಯ ಚಟುವಟಿಕೆಗಳಲ್ಲೂ ತಂದೆಯನ್ನು ಮೀರಿಸಿದ ಗೋವಿಂದನ ರಾಜ್ಯ ಸ್ವಲ್ಪ ಕಾಲದ ಮಟ್ಟಿಗಾದರೂ ಆಸೇತುಹಿಮಾಚಲಪರ್ಯಂತ ಹಬ್ಬಿತ್ತು. ಭಾರತವರ್ಷದಲ್ಲಿಯೇ ಇವನಿಗೆ ಸಮಾನನಾದ ಮತ್ತೊಬ್ಬ ಅರಸನು ಅಂದು

...ರಲಿಲ್ಲ. ಇಡೀ ದೇಶ ಇವನ ಸೈನ್ಯದ ಪದಾಘಾತಕ್ಕೆ ನಡುಗಿತು. ಇಂತಹ ಅರಸನನ್ನು ...ಾಸನಗಳು ಜಗತ್ತುಂಗ, ಜಗದ್ರುದ್ರ, ಪ್ರಭೂತವರ್ಷ, ಶ್ರೀವಲ್ಲಭ, ಜನವಲ್ಲಭ, ಕೀರ್ತಿ ...ಾರಾಯಣ, ತ್ರಿಭುವನಧವಳ ಎಂದೆಲ್ಲ ಅನ್ವರ್ಥವಾಗಿ ಹೊಗಳಿವೆ.

ಉತ್ತರಾಧಿಕಾರಿಯಾಗಿದ್ದ ಅಮೋಘವರ್ಷನು ಇನ್ನೂ ಕಿರಿಯವನಾಗಿದ್ದ ಕಾರಣ ಅರಸನು ಗುಜರಾತಿನಲ್ಲಿ ಪ್ರಾಂತಾಧಿಕಾರಿಯಾಗಿದ್ದ ತನ್ನ ತಮ್ಮನ ಮಗನಾದ ಕರ್ಕ ಸುವರ್ಣವರ್ಷನನ್ನು ಅವನ ಪೋಷಕನನ್ನಾಗಿ ನೇಮಿಸಿದನು. ಕ್ರಿ.ಶ. ೮೧೪ರಲ್ಲಿ ಗೋವಿಂದನು ದಿವಂಗತನಾದನು.

ಅಮೋಘವರ್ಷ ನೃಪತುಂಗ: ಅಮೋಘವರ್ಷನ ಆಳಿಕೆಯ ಆರಂಭಕಾಲ ಮುಗ್ಗಟ್ಟು...ಗಳಿಂದ ಕೂಡಿದ್ದಾಗಿತ್ತು. ಅವನಿನ್ನೂ ಸುಮಾರು ೧೪ ವರ್ಷದ ಬಾಲಕನಾಗಿದ್ದ ಕಾರಣ ಸುತ್ತಲಿನ ಶತ್ರುಗಳೆಲ್ಲ ರಾಜ್ಯವನ್ನು ಆವರಿಸಿದಂತೆ ಕಾಣುತ್ತದೆ. ರಾಜ್ಯಾಡಳಿತದ ಜವಾಬ್ದಾರಿಯನ್ನು ಹೊತ್ತಿದ್ದ ಕರ್ಕನು ಈ ಸಂದರ್ಭದಲ್ಲಿ ಬಹಳ ತೊಂದರೆಗಳನ್ನು ಎದುರಿಸಬೇಕಾಯಿತು. ಅಮೋಘವರ್ಷನನ್ನು ರಾಜಧಾನಿಯಿಂದ ಹೊರಗೆ ಗುಪ್ತಸ್ಥಾನ ವೊಂದರಲ್ಲಿ ಬಚ್ಚಿಟ್ಟು ಅವನ ಜೀವನವನ್ನು ಕಾಪಾಡಬೇಕಾಗಿ ಬಂತು. ಆಗ ನಡೆದ ಘಟನೆಗಳೆಂತಹವು ಎಂಬ ವಿವರಗಳು ಖಚಿತವಾಗಿ ತಿಳಿದುಬಂದಿಲ್ಲವಾದರೂ ಅಂದು ...ಡುಗುಡದ ಕಾರ್ಮೋಡ ಮುಸುಕಿ ದೇಶ ಕಷ್ಟಕಾಲವನ್ನೆದುರಿಸಿತೆಂಬಷ್ಟು ಮಾತ್ರ ...ಳಿದಿದೆ. ಕ್ರಿ.ಶ. ಸು. ೮೧೮ರಲ್ಲಿ ಆರಂಭವಾದ ಈ ಕಷ್ಟಪರಂಪರೆಗಳನ್ನು ೮೨೧ರ ವೇಳೆಗೆ ಶ್ರಮಪಟ್ಟು ನಿವಾರಿಸಿದ ಕರ್ಕನು ಆ ವರ್ಷ ಅಮೋಘವರ್ಷನನ್ನು ಸಿಂಹಾಸನ ...ದಲ್ಲಿ ಕುಳ್ಳಿರಿಸಿ ಅವನ ರಾಜ್ಯವನ್ನು ಅವನಿಗೆ ಒಪ್ಪಿಸಿದನು.

ಈ ವೇಳೆಗೆ ವೆಂಗಿಯಲ್ಲಿ ವಿಜಯಾದಿತ್ಯನು ಭೀಮ ಸಳುಕಿಯನ್ನು ಹೊರದೂಡಿ ತನ್ನ ಅಧಿಕಾರವನ್ನು ಮರಳಿ ಪಡೆದಿದ್ದನು. ವಿಜಯಾದಿತ್ಯನೊಡನೆ ಹೋರಾಟಗಳು ನಡೆ...ದ್ದಂತೆಯೇ ಗೋವಿಂದನು ಮರಣ ಹೊಂದಿ ಅಮೋಘವರ್ಷನು ಪಟ್ಟಕ್ಕೆ ಬಂದನು. ...ವನ ಪ್ರತಿನಿಧಿಯಾಗಿದ್ದ ಗುಜರಾತಿನ ಕರ್ಕ ಸುವರ್ಣವರ್ಷನು ರಾಜನೀತಿ ಚತುರ...ನಾಗಿದ್ದನು. ತನ್ನ ಸೋದರಿಯಾದ ಶೀಲಮಹಾದೇವಿಯನ್ನು ವಿಜಯಾದಿತ್ಯನ ಮಗ ...ಲಿವಿಷ್ಣುವರ್ಧನನಿಗೆ ವಿವಾಹಮಾಡಿಕೊಟ್ಟು ತನ್ಮೂಲಕ ಈ ಕದನವನ್ನು ಅಂತ್ಯಗೊಳಿಸಿ...ದನು. ಆದರೆ ಇಮ್ಮಡಿ ವಿಜಯಾದಿತ್ಯನ ನಂತರ ಕ್ರಿ.ಶ. ೮೪೪ರಲ್ಲಿ ಪಟ್ಟಕ್ಕೆ ಬಂದ ...ವನ ಮೊಮ್ಮಗನೂ ಶೀಲಮಹಾದೇವಿಯ ಮಗನೂ ಆದ ವಿಜಯಾದಿತ್ಯನು ಈ ಹೋರಾಟಗಳನ್ನು ಮುಂದುವರಿಸಿದನು. ಆತನ ಸೇನಾನಿಯಾದ ಪಾಂಡುರಂಗನು ರಾಷ್ಟ್ರಕೂಟರ ವಶದಲ್ಲಿದ್ದ ಕಡಪ ಕರ್ನೂಲು ಅನಂತಪುರ ಜಿಲ್ಲೆಗಳನ್ನೂ ತೆಲಂಗಾಣ ಪ್ರದೇಶವನ್ನೂ ಪಡೆಯಲು ಯತ್ನಿಸಿದನು. ಆದರೆ ರಾಷ್ಟ್ರಕೂಟರ ಬಲಿಷ್ಠ ಸೈನ್ಯ ...ಂಗವಲ್ಲಿ ಎಂಬಲ್ಲಿ ನಡೆದ ಕದನದಲ್ಲಿ ವಿಜಯಾದಿತ್ಯನನ್ನು ಸೋಲಿಸಿತು. ಆತನು ಅಮೋಘವರ್ಷನ ಸಾಮಂತಿಕೆಯನ್ನು ಒಪ್ಪಿದುದೇ ಅಲ್ಲದೆ, ನಂತರ ಅವನ ಪರವಾಗಿ ...ಂಗರ ವಿರುದ್ಧ ದಂಡೆತ್ತಿ ಸಹ ಹೋದನು. ದಕ್ಷಿಣ ಕರ್ನಾಟಕದಲ್ಲಿ ಗಂಗ ಶಿವಮಾರನ

ನಂತರ ರಾಚಮಲ್ಲನು ಗಂಗವಾಡಿಯನ್ನು ಆಳತೊಡಗಿದ್ದನಾದರೂ ಅವನ ರಾಜ್ಯದ ಉತ್ತರಭಾಗ ರಾಷ್ಟ್ರಕೂಟರ ಸ್ವಾಧೀನದಲ್ಲಿದ್ದು ಅಲ್ಲಿ ಚೆಲ್ಲಕೇತನ ವಂಶದ ಬಂಕೇಶನು ಅಧಿಕಾರದಲ್ಲಿದ್ದನು. ಆ ಭಾಗವನ್ನು ಸಹ ತನ್ನ ಅಧೀನಕ್ಕೆ ತರಲು ರಾಜಮಲ್ಲನು ಮಾಡಿದ ಯತ್ನಗಳು ಫಲಿಸಲಿಲ್ಲ. ರಾಜಮಲ್ಲನ ಬಳಿಕ ಬಂದ ನೀತಿಮಾರ್ಗ ಎಱೆಯಂಗನೂ ಇದೇ ದಿಶೆಯಲ್ಲಿ ತನ್ನ ಯತ್ನಗಳನ್ನು ಮುಂದುವರಿಸಿದನು. ಆ ವೇಳೆಗೆ ಗುಜರಾತಿನಲ್ಲಿ ಕಾಣಿಸಿಕೊಂಡ ದಂಗೆಯೊಂದನ್ನು ಅಡಗಿಸಲು ಬಂಕೇಶನು ಗಂಗವಾಡಿಯಿಂದ ಹಿಂದೆ ಸರಿದ ಸಂದರ್ಭವನ್ನು ಎಱೆಯಂಗನು ಉಪಯೋಗಿಸಿಕೊಂಡು ಆ ಪ್ರಾಂತವನ್ನಾಕ್ರಮಿಸಿದನು. ಆದರೆ ಅಮೋಘವರ್ಷನು ಗುಣಗ ವಿಜಯಾದಿತ್ಯನ ನೆರವಿನಿಂದ ಗಂಗನನ್ನು ಸೋಲಿಸಿದನು. ಹಾದಿಯಲ್ಲಿ ಗುಣಗನು ಮಂಗಿ ಎಂಬ ಒಬ್ಬ ನೊಳಂಬರ ನಾಯಕನನ್ನೂ ನಂತರ ಎಱೆಯಂಗನನ್ನು ಸಹ ಸೋಲಿಸಿದನು. ವೃಥಾ ಕಲಹಗಳಿಗೆ ಆಸ್ಪದ ಕೊಡಲಿಚ್ಛಿಸದ ಅಮೋಘವರ್ಷನು ಎಱೆಯಂಗನನ್ನು ಮನ್ನಿಸಿದುದೇ ಅಲ್ಲದೆ ಅವನ ಮಗ ಬೂತುಗನಿಗೆ ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ವಿವಾಹ ಮಾಡಿಕೊಟ್ಟು ಬಾಂಧವ್ಯವನ್ನು ಮಧುರಗೊಳಿಸಿದನು. ಅಂದಿನಿಂದ ರಾಷ್ಟ್ರಕೂಟ ಹಾಗೂ ಗಂಗರ ನಡುವಣ ವೈಮನಸ್ಯ ಅಳಿದು ಅವರು ಸ್ನೇಹಭಾವದಿಂದಿರತೊಡಗಿದರು.

ಗುಜರಾತಿನ ರಾಷ್ಟ್ರಕೂಟ ಕರ್ಕನು ಅಮೋಘವರ್ಷನ ನೆರವಿಗೆಂದು ಮಾನ್ಯಖೇಟದಲ್ಲಿದ್ದಾಗ ಕೆಲವರ್ಷಗಳು ಅವನ ಕಿರಿಯ ಸೋದರನಾದ ಗೋವಿಂದನು, ನಂತರ ಮಗ ಧ್ರುವನೂ ಗುಜರಾತಿನಲ್ಲಿ ಆಳುತ್ತಿದ್ದರು. ಕ್ರಿ.ಶ. ಸು. ೮೩೫ರ ನಂತರ ಈ ರಾಷ್ಟ್ರಕೂಟರು ವಲ್ಲಭನೆಂಬ ಶತ್ರುವಿನ ಧಾಳಿಗೆ ತುತ್ತಾಗಿ ಮೂವತ್ತು ವರ್ಷಗಳ ಕಾಲ ಸಂದಿಗ್ಧ ಪರಿಸ್ಥಿತಿಯಲ್ಲಿರಬೇಕಾಗಿ ಬಂದಿತು. ಧ್ರುವನು ಆ ಶತ್ರುವಿನಿಂದ ಹತನಾದನು. ಅವನ ಮಗ ಅಕಾಲವರ್ಷನೂ ನಂತರ ಬಂದ ಇಮ್ಮಡಿ ಧ್ರುವನೂ ಹೋರಾಟಗಳನ್ನು ಮುಂದುವರಿಸಿದರು. ಕೊನೆಗೊಮ್ಮೆ ಸು. ೮೬೭-೬೮ರ ವೇಳೆಗೆ ಅವರು ಈ ದುರ್ಘಟನೆಯಿಂದ ಚೇತರಿಸಿಕೊಂಡು ಮತ್ತೊಮ್ಮೆ ಸ್ಥಿರವಾಗಿ ಆಳತೊಡಗಿದರು. ಈ ಕೆಲವು ವಿಷಯಗಳು ಶಾಸನಗಳಿಂದ ತಿಳಿದಿವೆ. ಆದರೆ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

ಶತ್ರುವಾದ ವಲ್ಲಭನು ಯಾರು? ಈತನು ಅಮೋಘವರ್ಷನೆಂದೇ ಕೆಲವರು ಭಾವಿಸಿದ್ದಾರೆ. ಕರ್ಕನು ಈತನ ಬೆನ್ನೆಲುಬಾಗಿ ನಿಂತರೂ ನಂತರ ಗುಜರಾತಿನಲ್ಲಿ ಆಳಿದ ಧ್ರುವ ಮತ್ತು ಅಕಾಲವರ್ಷರು ಹೋರಾಟದ ಮನೋಭಾವವನ್ನು ಹೊಂದಿ ಅಮೋಘವರ್ಷನನ್ನು ಉಪೇಕ್ಷಿಸಿದರೆಂದೂ ಇದು ಅವನನ್ನು ಕೆಣಕಿದಂತಾಗಿ ಆ ದಾಯಾದಿಗಳ ವಿರುದ್ಧ ದೀರ್ಘಕಾಲ ಕದನದಲ್ಲಿ ಈತನು ನಿರತನಾದನೆಂದೂ ಅದಕ್ಕೆಂದೇ ಗಂಗವಾಡಿಯಲ್ಲಿದ್ದ ಬಂಕೇಶನನ್ನು ಗುಜರಾತಿಗೆ ಕಳಿಸಿದನೆಂದೂ ಕೆಲವರು ವಾದಿಸಿದ್ದಾರೆ. ಈ ಮಧ್ಯೆ ಕ್ರಿ.ಶ. ಸು. ೮೬೦ರ ವೇಳೆಗೆ ಕನೋಜಿನ ಭೋಜನು ತನ್ನ ಪೂರ್ವಜರು ರಾಷ್ಟ್ರಕೂಟರ ಕೈಲಿ ಅನುಭವಿಸಿದ ಸೋಲಿನ ಸೇಡನ್ನು ತೀರಿಸಲು ಯುದ್ಧ ಸನ್ನದ್ಧನಾದನೆಂದೂ ಪರಸ್ಪರ ಕಲಹಗಳಲ್ಲಿ ತೊಡಗಿದ್ದ ದಾಯಾದಿಗಳು ಆಗ ಎಚ್ಚೆತ್ತು

ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲೆಂದು ತಮ್ಮೊಳಗಿನ ವೈಮನಸ್ಯಗಳನ್ನು ಮರೆತು ಪುನಃ ಒಂದುಗೂಡಿದರೆಂದು ಸಹ ಹೇಳಲಾಗಿದೆ. ಆದರೆ ಈ ಊಹೆಗಳು ಸಂದೇಹಾಸ್ಪದ. ವಲ್ಲಭ ಎಂಬುದು ಪೃಥ್ವೀವಲ್ಲಭ ಎಂಬ ಬಿರುದಿನ ಕಿರಿದಾದ ರೂಪವೆಂದೂ ಇದು ಸಾಮಾನ್ಯವಾಗಿ ರಾಷ್ಟ್ರಕೂಟರು ಪಡೆದಿದ್ದ ಬಿರುದೆಂದೂ ಹೇಳಿರುವುದು ಇಂತಹ ಊಹೆಗೆ ಪ್ರಬಲವಾದ ಆಧಾರ. ಆದರೆ ವಲ್ಲಭ ಎಂಬುದು ಮಳಖೇಡದ ರಾಷ್ಟ್ರಕೂಟರಿಗೇ ಅನ್ವಯವಾಗುತ್ತಿದ್ದ ಬಿರುದಲ್ಲವೆಂಬ ವಾದವನ್ನು ಗಮನಿಸಬೇಕು. ಅಲ್ಲದೆ ಶಾಂತಿಪ್ರಿಯನೂ ಧರ್ಮಭೀರುವೂ ಆಗಿದ್ದ ಅಮೋಘವರ್ಷನು ತನಗೆ ಬೆಂಬಲವಾಗಿ ನಿಂತಿದ್ದ ದಾಯಾದಿಗಳಿಗೆ ಕೃತಘ್ನನಾಗಿ ಅವರ ಮೇಲೇರಿ ಹೋದನೆಂದರೆ ನಂಬುವುದು ಕಷ್ಟವಾಗುತ್ತದೆ. ವಲ್ಲಭ ಎಂಬುದು ಚಾಲುಕ್ಯರು ಧರಿಸುತ್ತಿದ್ದ ಬಿರುದೂ ಆಗಿದ್ದಿತಾದ ಕಾರಣ, ಗುಜರಾತಿನ ರಾಷ್ಟ್ರಕೂಟರು ಎದುರಿಸಿದ ವಲ್ಲಭನು ಬೇರಾರೋ ಆಗಿರಬಹುದು; ಆ ರಾಷ್ಟ್ರಕೂಟರಿಗೆ ಸಹಾಯ ಮಾಡಲೆಂದೇ ಬಂಕೇಶನು ಗುಜರಾತಿಗೆ ಹೋಗಿರಬಹುದು.

ಅಮೋಘವರ್ಷನು ತಂದೆಯಿಂದ ಪಡೆದಿದ್ದ ರಾಜ್ಯವನ್ನು ಉಳಿಸಿಕೊಳ್ಳುವುದರಲ್ಲಿಯೇ ತನ್ನ ಆಳಿಕೆಯ ಬಹುವರ್ಷಗಳನ್ನು ವ್ಯಯಿಸಬೇಕಾಯಿತು. ಆದ್ದರಿಂದ ಶಾಸನಗಳಲ್ಲಿ ಈತನು ಅಂಗ, ವಂಗ, ಮಗಧ ಮಾಳವಗಳ ಅರಸರನ್ನು ಸೋಲಿಸಿದನೆಂದು ಹೇಳಿರುವ ಮಾತುಗಳು ಕೇವಲ ಔಪಚಾರಿಕವಾದ್ದೇ ಸರಿ. ತಂದೆ ಅಥವಾ ತಾತರಂತೆ ಅಮೋಘವರ್ಷನು ನುರಿತ ಸೇನಾನಿಯೇನೂ ಆಗಿರಲಿಲ್ಲ. ಎಂತಲೇ ರಾಜ್ಯದಲ್ಲಿ ಅಲ್ಲಲ್ಲಿ ತಲೆಯೆತ್ತುತ್ತಿದ್ದ ದಂಗೆಗಳನ್ನು ಅಡಗಿಸಲು ಆತ ಶ್ರಮಿಸಬೇಕಾಯಿತು. ಅಲ್ಲದೆ ಬಹಳ ವರ್ಷಗಳು ಗುಜರಾತಿನ ಕರ್ಕನ ನೆರವಿನಿಂದಲೇ ರಾಜ್ಯವನ್ನು ಆಳಬೇಕಾಯಿತು.

ಆದರೆ ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಈತನ ಹೆಸರು ಚಿರಸ್ಥಾಯಿಯಾಗಿದೆ. ದೀರ್ಘಕಾಲ ಆಳಿ ಬಾಳಿದ ಈತನು ಕ್ರಮೇಣ ಜೈನಮತದ ಕಡೆಗೆ ಒಲಿದು ಅಹಿಂಸಾಪರನಾದನು. ಶಾಂತಿಯುತ ಜೀವನ ಇವನ ಗುರಿಯಾಯಿತು. ಧರ್ಮರಕ್ಷಣೆಯೇ ಅಲ್ಲದೆ ಸಾಹಿತ್ಯ ಕಲೆಗಳ ಪುರೋಭಿವೃದ್ಧಿಗೂ ಹೆಚ್ಚು ಗಮನವಿತ್ತನು. 'ಕವಿರಾಜಮಾರ್ಗ'ವೆಂಬ ಕನ್ನಡ ಅಲಂಕಾರ ಗ್ರಂಥದ ಕರ್ತೃ ಈತನೆಂದು ಹೇಳಲಾಗಿದೆ. ಇದನ್ನೊಪ್ಪದ ಕೆಲವರು ಈತನ ಆಸ್ಥಾನದ ಶ್ರೀವಿಜಯನೆಂಬ ಪಂಡಿತನು ಅದರ ಕರ್ತೃವೆಂದು ಹೇಳುವರು. 'ಪೂರ್ವಪುರಾಣ'ದ ಕರ್ತೃವಾದ ಜಿನಸೇನನು ಈತನ ಗುರುವಾಗಿದ್ದನು. ಆತನ ಇನ್ನೊಂದು ಗ್ರಂಥವಾದ 'ಪಾರ್ಶ್ವಾಭ್ಯುದಯ' ಸಹ ಅಮೋಘವರ್ಷನ ಕಾಲದಲ್ಲಿ ರಚಿತವಾದ್ದೇ. ಶಾಕಟಾಯನನೆಂಬ ಜೈನ ವೈಯಾಕರಣನು 'ಶಬ್ದಾನುಶಾಸನ'ವನ್ನೂ ಅದಕ್ಕೆ ದೊರೆಯ ಹೆಸರಿನ ನೆನಪಿಗೆ 'ಅಮೋಘವೃತ್ತಿ' ಎಂಬ ಟೀಕಾಗ್ರಂಥವನ್ನೂ ರಚಿಸಿದನು. 'ಗಣಿತಸಾರಸಂಗ್ರಹ'ದ ಕರ್ತೃ ಮಹಾವೀರಾಚಾರ್ಯನು ಅಮೋಘವರ್ಷನನ್ನು ಅಂದಿನ ಸಾರ್ವಭೌಮನೆಂದು ಹೇಳಿದ್ದಾನೆ.

ಸ್ವತಃ ಜೈನಮತಾವಲಂಬಿಯಾದರೂ ಎಂದಿನಂತೆ ಅನ್ಯಮತ ಸಹಿಷ್ಣುತೆ ಈತನ ನೀತಿಯಾಗಿತ್ತು. ಬ್ರಾಹ್ಮಣರು ಬಲಿ ಚರು ಅತಿಥಿತರ್ಪಣಾದಿ ವೈದಿಕಕರ್ಮಗಳಲ್ಲಿ

ತೊಡಗಲೆಂದು ಅವರಿಗೆ ಝುರವಲ್ಲಿಕಾ ಎಂಬ ಗ್ರಾಮವನ್ನು ಈತನು ದಾನಮಾಡಿದನು. ಲೋಕೋಪದ್ರವಶಾಂತಿಗಾಗಿ ಮಹಾಲಕ್ಷ್ಮಿ ದೇವತೆಗೆ ಈತನು ತನ್ನ ಒಂದು ಬೆರಳನ್ನೇ ಬಲಿಯಾಗಿ ಅರ್ಪಿಸಿದನೆಂದು ಸಂಜಾನ ಶಾಸನದಲ್ಲಿ ಹೇಳಿದೆ. ಇದೇ ವಿಷಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಭಟ್ಟಾಕಳಂಕನು ತನ್ನ 'ಕರ್ಣಾಟಕ ಶಬ್ದಾನುಶಾಸನ'ದಲ್ಲಿ ತಮ್ಮ ದೇಹ ಅಂಗಗಳನ್ನು ಬಲಿಯಾಗಿತ್ತ ಶಿಬಿ ದಧೀಚಿ ಮುಂತಾದ ಅರಸರಿಗೆ ಈ ಅರಸನನ್ನು ಹೋಲಿಸಿದ್ದಾನೆ. ತಮಗಾಗಿ ಪರರ ರಕ್ತವನ್ನು ಬಸಿಯುವಂತೆ ಮಾಡುವ ಅರಸರೇ ಕಂಡುಬರುವ ಮಾನವೇತಿಹಾಸದಲ್ಲಿ ಅನ್ಯರಿಗಾಗಿ ತಮ್ಮ ರಕ್ತವನ್ನು ಚೆಲ್ಲಿದ ಇಂತಹ ಅರಸರು ಬಹು ವಿರಳ.

ಬೌದ್ಧ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಕಾಣ್ಹೇರಿಯಲ್ಲಿ ಈತನ ಕಾಲದಲ್ಲಿ ಗುಹೆಗಳು ಕೊರೆಯಿಸಲ್ಪಟ್ಟವೆಂದು ಅಲ್ಲಿನ ಶಾಸನಗಳು ತಿಳಿಸುತ್ತವೆ. ಈತನು ರಾಜಧಾನಿಯನ್ನು ಮಾನ್ಯಖೇಟಕ್ಕೆ ಬದಲಾಯಿಸಿದನು. ಆ ನಗರವನ್ನು ನಿಯೋಜಿಸಿ ಅಸ್ತಿತ್ವಕ್ಕೆ ತಂದ ಕೀರ್ತಿ ಈತನಿಗೆ ಸಲ್ಲುತ್ತದೆ.

ಶರ್ವ ಎಂಬುದು ಅಮೋಘವರ್ಷನ ನಿಜನಾಮ. ನೃಪತುಂಗ, ಅತಿಶಯಧವಳ, ವೀರನಾರಾಯಣ, ಶ್ರೀವಲ್ಲಭ, ರಟ್ಟಮಾರ್ತಾಂಡ ಇತ್ಯಾದಿಗಳು ಇವನ ಬಿರುದುಗಳು. ಈತನ ಪತ್ನಿ ಅಸಗವ್ವೆ. ಚಂದ್ರೊಬ್ಬಲಬ್ಬೆಯಲ್ಲದೆ, ಶಂಖಾದೇವಿ ಮತ್ತು ರೇವಕ ನಿರ್ಮಡಿಯೆಂಬ ಇನ್ನಿಬ್ಬರು ಹೆಣ್ಣು ಮಕ್ಕಳೂ ಕೃಷ್ಣರಾಜನೆಂಬ ಮಗನೂ ಈತನ ಮಕ್ಕಳು. ರೇವಕನಿರ್ಮಡಿಯನ್ನು ಗಂಗ ಬೂತುಗನೂ ಶಂಖಾದೇವಿಯನ್ನು ಪಲ್ಲವ ನಂದಿವರ್ಮನೂ ಮದುವೆಯಾಗಿದ್ದರು. ವಿರಕ್ತಿ ಮನೋಭಾವವನ್ನು ಹೊಂದಿದ್ದ ಈ ಅರಸನು ಆಗಾಗ್ಗೆ ರಾಜ್ಯಭಾರದ ಹೊಣೆಯಿಂದ ಮುಕ್ತನಾಗಿ ಜಪತಪಾದಿಗಳಲ್ಲಿ ಮಗ್ನನಾಗಿರುತ್ತಿದ್ದನೆಂದು ತಿಳಿದುಬರುತ್ತದೆ. ಈತನಿಂದ ರಚಿತವಾದ್ದೆನ್ನಲಾದ 'ಪ್ರಶ್ನೋತ್ತರ ರತ್ನಮಾಲಿಕಾ' ಎಂಬ ಸಂಸ್ಕೃತ ಗ್ರಂಥದಲ್ಲಿ ಈತನು ವಿವೇಕದಿಂದ ರಾಜ್ಯವನ್ನು ಬಿಟ್ಟಿದ್ದನೆಂದು ಹೇಳಿದೆ. ಐಹೊಳೆ ಶಾಸನವೊಂದರಲ್ಲಿ ಈತನು ನವರಾಜ್ಯಂ ಗೆಯ್ಯುತ್ತಿದ್ದನೆಂದು ಹೇಳಿರುವುದನ್ನು ಗಮನಿಸಿದರೆ ಅವನು ಹೀಗೆ ಒಮ್ಮೆ ಅಧಿಕಾರ ತ್ಯಜಿಸಿದ್ದು, ಪುನಃ ಆಡಳಿತದ ಹೊಣೆ ಹೊತ್ತನೆಂದು ಊಹಿಸಬೇಕಾಗುತ್ತದೆ. ಈ ಸಂದರ್ಭಗಳಲ್ಲಿ ಇವನ ಮಗ ಕೃಷ್ಣರಾಜ (ಇಮ್ಮಡಿ ಕೃಷ್ಣ)ನು ಆಡಳಿತವನ್ನು ನಡಸುತ್ತಿದ್ದನು. ಸು. ೬೪ ವರ್ಷಗಳ ಕಾಲ ಆಳಿದ ಅಮೋಘವರ್ಷ ನೃಪತುಂಗನು ಕ್ರಿ.ಶ. ಸು. ೮೭೮ರಲ್ಲಿ ಮರಣ ಹೊಂದಿದನು.

ಕೃಷ್ಣ II: ಇವನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ಕೃಷ್ಣನು ೩೬ ವರ್ಷಗಳ ಕಾಲ (ಕ್ರಿ.ಶ. ೮೭೮–೯೧೪) ಆಳಿದರೂ ರಾಜ್ಯದ ಮೇಲೇರಿ ಬಂದ ಶತ್ರುಗಳನ್ನು ನಿವಾರಿಸುವುದರಲ್ಲಿಯೇ ಆತನ ಕಾಲವೆಲ್ಲ ಕಳೆಯಿತು. ಗೋವಿಂದನ ನಂತರ ಸುದೀರ್ಘ ಕಾಲ ಉತ್ತರದ ರಾಜಕೀಯದಲ್ಲಿ ತಲೆ ಹಾಕದಿದ್ದುದು ಪ್ರತೀಹಾರರು ಪ್ರಬಲರಾಗಲು ಅವಕಾಶವನ್ನೊದಗಿಸಿತು. ಆ ವಂಶದ ಭೋಜನು ಕೃಷ್ಣನ ವಿರುದ್ಧ ಏರಿಬಂದನು.

ನರ್ಮದಾ ನದಿಯ ತೀರದಲ್ಲಿ ನಡೆದ ಕದನದಲ್ಲಿ ಕೃಷ್ಣನು ಹಿಮ್ಮೆಟ್ಟಿದನು. ಇದರಿಂದ ಉತ್ಸಾಹಿತನಾದ ಭೋಜನು ಗುಜರಾತ್ ಪ್ರದೇಶವನ್ನು ಆಕ್ರಮಿಸಲು ಯತ್ನಿಸಿದನಾದರೂ ಗುಜರಾತಿನ ರಾಷ್ಟ್ರಕೂಟ ಇಮ್ಮಡಿ ಕೃಷ್ಣನ ಸಾಹಸದ ಮುಂದೆ ಇವನ ಆಟ ಸಾಗಲಿಲ್ಲ. ಉಜ್ಜಯಿನಿಯವರೆಗೆ ಇವನನ್ನು ಆ ಕೃಷ್ಣನು ಅಟ್ಟಿಸಿಕೊಂಡು ಹೋದನು.

ವೆಂಗಿಯ ಗುಣಗ ವಿಜಯಾದಿತ್ಯನು ಸಹ ರಾಷ್ಟ್ರಕೂಟ ಕೃಷ್ಣನನ್ನು ಎದುರಿಸಿದನು. ಚಾಲುಕ್ಯರ ಸೇನಾನಿಯಾದ ಪಾಂಡುರಂಗನು ಈ ಯುದ್ಧದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದನು. ಕೃಷ್ಣನ ಭಾವಮೈದುನನಾದ ಚೇದಿ ಮನೆತನದ ಶಂಕರಗಣನು ಅವನ ನೆರವಿಗೆ ಬಂದರೂ ಪಾಂಡುರಂಗನ ಆಕ್ರಮಣವನ್ನು ಎದುರಿಸಲಾಗದೆ ಕೃಷ್ಣನು ಮಾವನಾದ ಕಲಚುರಿ ಕೊಕ್ಕಲ್ಲನ ರಾಜಧಾನಿಯಲ್ಲಿ ಆಶ್ರಯಪಡೆಯಬೇಕಾಯಿತು. ಅಚಲಪುರ ಮತ್ತು ಕಿರಣಪುರಗಳು ಚಾಲುಕ್ಯರ ವಶವಾದವು. ಅಲ್ಲದೆ ಒಮ್ಮೆ ಕಳೆದುಕೊಂಡಿದ್ದ ಪ್ರದೇಶಗಳನ್ನು ಸಹ ಚಾಲುಕ್ಯರು ಸ್ವಾಧೀನ ಮಾಡಿಕೊಂಡರು. ಗುಣಗ ವಿಜಯಾದಿತ್ಯನು ರಾಷ್ಟ್ರಕೂಟರ ಪೃಥ್ವೀವಲ್ಲಭ, ದಕ್ಷಿಣಪಥಾಧಿಪತಿ ಎಂಬ ಬಿರುದುಗಳನ್ನೂ ಗಂಗಾಯಮುನಾ ಪಾಲಿಧ್ವಜಾದಿ ಸಾಮ್ರಾಜ್ಯ ಚಿಹ್ನೆಗಳನ್ನೂ ಈ ಸಂದರ್ಭದಲ್ಲಿ ಕಸಿದುಕೊಂಡ. ಆದರೆ ತನ್ನ ಈ ವಿಜಯ ಚಿರಕಾಲ ಉಳಿಯುವಂತಹದಲ್ಲವೆಂಬುದನ್ನು ಮನಗಂಡು ರಾಜ್ಯವನ್ನೂ ಆ ಚಿಹ್ನೆಗಳನ್ನೂ ಕೃಷ್ಣನಿಗೇ ಹಿಂದಿರುಗಿಸಿದನೆಂದು ವೆಂಗಿ ಚಾಳುಕ್ಯ ಶಾಸನಗಳಲ್ಲಿ ಹೇಳಿದೆ.

ಗುಣಗ ವಿಜಯಾದಿತ್ಯನು ತನ್ನ ಅಂತಿಮ ಕಾಲದಲ್ಲಿ ಸೋದರನಾದ ವಿಕ್ರಮಾದಿತ್ಯನಿಗೆ ಯೌವರಾಜ್ಯಾಭಿಷೇಕ ಮಾಡಿದನಾದರೂ ವಿಕ್ರಮಾದಿತ್ಯನು ಈತನಿಗೂ ಮೊದಲೇ ಮರಣಹೊಂದಿದನು. ಆತನ ಮಗ ಭೀಮನನ್ನು ಅನಂತರ ತನ್ನ ಉತ್ತರಾಧಿಕಾರಿಯಾಗಿ ನಿಯಮಿಸಿದನು. ಭೀಮನು ಪಟ್ಟಾಭಿಷಿಕ್ತನಾಗುವ ಮೊದಲೇ ಅವನ ವಿರೋಧಿಗಳು ಕೆಲವರು ರಾಷ್ಟ್ರಕೂಟ ಕೃಷ್ಣನನ್ನು ಆಹ್ವಾನಿಸಿದರು. ಹಿಂದೆ ಅನುಭವಿಸಿದ ಸೋಲಿನ ಸೇಡು ತೀರಿಸಿಕೊಳ್ಳಲು ಕೃಷ್ಣನು ವೆಂಗಿಯ ಮೇಲೆ ದಂಡೆತ್ತಿದನು. ವೇಮುಲವಾಡ ಚಾಲುಕ್ಯ ಮನೆತನದ ಬದ್ದೆಗನು ಇವನಿಗೆ ಸಹಾಯಕನಾಗಿ ನಿಂತನು. ಸೋಲದ ಗಂಡನೆಂಬ ತನ್ನ ಬಿರುದನ್ನು ಸಾರ್ಥಕಪಡಿಸಿಕೊಂಡ ಬದ್ದೆಗನು ನೀರಿನಲ್ಲಿ ಮೊಸಳೆಯನ್ನು ಹಿಡಿದಂತೆ ಭೀಮನನ್ನು ಹಿಡಿದನೆಂದು ಪಂಪಕವಿ ಈ ವಿಜಯವನ್ನು ಕುರಿತು ಹೇಳಿದ್ದಾನೆ. ಭೀಮನು ಕದನದಲ್ಲಿ ಸೋತರೂ ಅವನ ಸೇನಾನಿಯಾದ ಮುದಿಗೊಂಡ ಚಾಲುಕ್ಯವಂಶದ ಕುಸುಮಾಯುಧನು ಶೌರ್ಯದಿಂದ ಹೋರಾಡಿ, ಅಂತಿಮವಾಗಿ ಶತ್ರುಗಳನ್ನು ಹಿಮ್ಮೆಟ್ಟಿಸಿದನು. ಶತ್ರುವಶನಾಗಿದ್ದ ಭೀಮನು ಸಹ ತಪ್ಪಿಸಿಕೊಂಡು ಸ್ವದೇಶಕ್ಕೆ ಮರಳಿ ಆಗಲನೆಯ ವರ್ಷದ ಚೈತ್ರ ಬಹುಳ ದ್ವಿತೀಯೆಯಂದು ಪಟ್ಟಾಭಿಷಿಕ್ತನಾದನು. ಈ ಸಂದರ್ಭದಲ್ಲಿ ಕೃಷ್ಣನ ಸೇನಾನಿಯಾದ ಗುಂಡಯ್ಯನು ಸೋತನು. ಕೃಷ್ಣನಿಗೆ ಇದರಿಂದ ಯಾವ ಲಾಭವೂ ಉಂಟಾಗಲಿಲ್ಲ.

ದಕ್ಷಿಣದಲ್ಲಿ ಈ ಸುಮಾರಿಗೆ ಪಲ್ಲವರ ಪ್ರಾಬಲ್ಯ ಕೊನೆಗೊಂಡು ಚೋಳರು ತಲೆ

ಯೆತ್ತುತ್ತಿದ್ದರು. ಅವರ ಸ್ನೇಹ ಬಯಸಿದ ಕೃಷ್ಣನು ಆ ಮನೆತನದ ಆದಿತ್ಯ (I)ನಿಗೆ ಮಗಳನ್ನು ವಿವಾಹವಾಗಿತ್ತನು. ಈ ಸಂಬಂಧದಿಂದ ಜನಿಸಿದವನು ಕನ್ನರ. ಆದರೆ ಆದಿತ್ಯನ ಇನ್ನೊಬ್ಬ ಪತ್ನಿಯ ಮಗನಾದ ಪರಾಂತಕನು ಆದಿತ್ಯನ ಉತ್ತರಾಧಿಕಾರಿಯಾದಾಗ ಮೊಮ್ಮಗನ ಪರವಾಗಿ ಕೃಷ್ಣನು ಅವನೊಡನೆ ಯುದ್ಧ ಹೂಡಿದನು. ಕ್ರಿ.ಶ. ಸು. ೯೧೧ರಲ್ಲಿ ವಲ್ಲಾಳದಲ್ಲಿ ಭೀಕರ ಕದನ ನಡೆಯಿತು. ಆದರೆ ಇದರಿಂದಲೂ ಕೃಷ್ಣನು ಏನನ್ನೂ ಸಾಧಿಸಲಿಲ್ಲ.

ಅತಿಪ್ರಯಾಸದಿಂದ ತನ್ನ ರಾಜ್ಯವನ್ನು ಕಾಪಾಡಿಕೊಳ್ಳಬೇಕಾದ ಪರಿಸ್ಥಿತಿಯನ್ನು ಕೃಷ್ಣನು ಎದುರಿಸಿದನು. ಇವನ ಮಗ ಜಗತ್ತುಂಗನು ಚೇದಿಯ ಶಂಕರಗಣನ ಮಕ್ಕಳಾದ ಲಕ್ಷ್ಮೀ ಮತ್ತು ಗೋವಿಂದಾಂಬಾ ಇವರನ್ನು ಮದುವೆಯಾಗಿದ್ದನು. ತಂದೆ ಜೀವಿಸಿದ್ದಾಗಲೇ ಜಗತ್ತುಂಗನು ಮರಣ ಹೊಂದಿದನು. ತತ್ಫಲವಾಗಿ ರಾಜ್ಯ ಮೊಮ್ಮಗನಾದ ಮುಮ್ಮಡಿ ಇಂದ್ರನ ಪಾಲಿಗೆ ಬಂದಿತು.

ಕೃಷ್ಣನ ಕಾಲದಲ್ಲಿ ತಾಜಿಕ ವಂಶದ ಮಧುಮದೆ (ಮಹಮದ್) ಸಂಜಾನ ಮಂಡಲವನ್ನು ಆಳುತ್ತಿದ್ದನೆಂದು ಸಂಜಾನ ಶಾಸನದಿಂದ ತಿಳಿದಿದೆ. ಈ ಮಧುಮದೆಯ ಹೆಸರು ಸುಗತಿಪ. ಈತನು ಅರಬನು. ಅರಬ್ ಲೇಖಕರು ತಮ್ಮ ಬರಹದಲ್ಲಿ ಬಲ್ಲಹ (ರಾಷ್ಟ್ರಕೂಟರ ಅರಸ)ರನ್ನು ಉಲ್ಲೇಖಿಸಿರುವರೆಂದು ಈ ಮೊದಲೇ ಹೇಳಿದೆ. ಸಂಜಾನ ಪ್ರದೇಶದಲ್ಲಿ ಹೆಚ್ಚಿನ ಮಟ್ಟಿಗೆ ನೆಲಸಿದ್ದ ಮಹಮ್ಮದೀಯರ ಮೇಲ್ವಿಚಾರಣೆಗಾಗಿ ಸುಗತಿಪನನ್ನು ಕೃಷ್ಣನು ಆ ಪ್ರದೇಶದ ಅಧಿಕಾರಿಯಾಗಿ ನೇಮಿಸಿದನೆಂದು ಊಹಿಸಬಹುದು.

ಇಂದ್ರ **III** : ಕೇವಲ ಹದಿನೈದು ವರ್ಷಗಳು ಆಳಿದರೂ ಇಂದ್ರನು ಉತ್ತರದಲ್ಲಿ ರಾಷ್ಟ್ರಕೂಟರ ಕೀರ್ತಿಪತಾಕೆಯನ್ನು ಪುನಃ ಹಾರಿಸುವುದರಲ್ಲಿ ಸಫಲನಾದನು. ಉತ್ಸಾಹಶಾಲಿಯೂ ಶಕ್ತನೂ ಆದ ಈತನು ರಾಜ್ಯದ ಮೇಲೆ ನುಗ್ಗಿದ್ದ ಪರಮಾರ ಉಪೇಂದ್ರನನ್ನು ಸೋಲಿಸಿ, ಅವನಿಂದ ನಾಸಿಕ ಜಿಲ್ಲೆಯ ಗೋವರ್ಧನವನ್ನು ಕಸಿದುಕೊಂಡನು.

ಈ ವಿಜಯದ ನಂತರ ಇಂದ್ರನು ಉತ್ತರ ದಿಗ್ವಿಜಯಕ್ಕಾಗಿ ಯೋಜನೆಯನ್ನು ಹಾಕಿದನು. ಪ್ರತೀಹಾರ ಭೋಜ ಮತ್ತು ಮಹೀಪಾಲರಲ್ಲಿ ಅಂತಃಕಲಹಗಳೇರ್ಪಟ್ಟವು. ಇದರ ಅನುಕೂಲ ಪಡೆದ ಇಂದ್ರನು ಕನೋಜನ್ನು ಮುತ್ತಿದನು. ಮಹೀಪಾಲನು ರಾಜ್ಯವನ್ನು ಬಿಟ್ಟು ಓಡಿದನು. ಈತನ ಈ ದಂಡೆಯಾತ್ರೆಯಲ್ಲಿ ವೇಮುಲವಾಡದಲ್ಲಿ ಆಳುತ್ತಿದ್ದ ಚಾಲುಕ್ಯ ಮನೆತನದ ಇಮ್ಮಡಿ ನರಸಿಂಹನು ಪ್ರಮುಖಪಾತ್ರವನ್ನು ವಹಿಸಿದ್ದನು. ಅರಿಕೇಸರಿಯ ತಂದೆಯಾದ ನರಸಿಂಹನು ಈ ಕದನಗಳಲ್ಲಿ ಸಾಧಿಸಿದ ವಿಜಯವನ್ನು ಪಂಪಕವಿ ಭಾರತದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಸಿಡಿಲಿನಂತೆ ಮೇಲೆರಗುತ್ತಿದ್ದ ನರಸಿಂಹನ ಸೇನೆಗೆ ಹೆದರಿ, ಉಂಡೆಡೆಯಲ್ಲಿ ಉಣ್ಣದೆ, ಮಲಗಿದೆಡೆಯಲ್ಲಿ ಮಲಗದೆ, ನಿಂದೆಡೆಯಲ್ಲಿ ನಿಲ್ಲದೆ ಓಡಿದನಂತೆ ಡಾಹಳಾಧಿಪತಿ ಎನ್ನಿಸಿದ ಮಹೀಪಾಲ. ಆದರೆ ಇಂದ್ರನು ಕನೋಜಿನಲ್ಲಿ ಬಹಳಕಾಲ ನಿಲ್ಲಲಾಗದೆ ಹಿಂತಿರುಗಲೇಬೇಕಾಯಿತು. ಧ್ರುವ ಮತ್ತು ಮುಮ್ಮಡಿ ಗೋವಿಂದರಂತೆ ಇಂದ್ರನು ಸಹ ಅಂದಿನ ಭಾರತದ ರಾಜಕೀಯದಲ್ಲಿ

ಅಪ್ರತಿಹತ ವೀರನೆಂದು ಹೆಸರಾಂತನು.

ವೆಂಗಿಯಲ್ಲಿ ಪೂರ್ವ ಚಾಲುಕ್ಯರ ರಾಜ್ಯದಲ್ಲಿ ಇಂದ್ರನು ಹಸ್ತಕ್ಷೇಪಮಾಡಲು ಯತ್ನಿಸಿದನಾದರೂ ಅವನಿಗೆ ಯಶಸ್ಸು ದೊರಕಲಿಲ್ಲ. ಆನೆಯ ವಿಜಯಾದಿತ್ಯನ ಮರಣಾನಂತರ ಅಲ್ಲಿ ರಾಜ್ಯಕ್ಕಾಗಿ ಸೋದರ ಸಂಬಂಧಿಗಳಲ್ಲಿ ಕಲಹಗಳುಂಟಾಗಿದ್ದು, ಪರಿಸ್ಥಿತಿ ಗೊಂದಲಮಯವಾಗಿತ್ತು. ಈ ಸಂದರ್ಭದಲ್ಲಿ ಒಮ್ಮೆ ಯುದ್ಧಮಲ್ಲ (I)ನ ಪರವಾಗಿ ಅವರ ರಾಜಕೀಯದಲ್ಲಿ ಇಂದ್ರನು ಪ್ರವೇಶಿಸಿದನು. ಆದರೆ ಇದರಿಂದ ಯಾರಿಗೂ ಪ್ರಯೋಜನವಾಗಲಿಲ್ಲ.

ನಿತ್ಯವರ್ಷ, ರಟ್ಟಕಂದರ್ಪ ಎಂಬಿವು ಇಂದ್ರನ ಬಿರುದುಗಳು. ಕಲಚುರಿ ಮನೆತನದ ಅಮ್ಮಣದೇವನ ಮಗಳಾದ ವಿಜಯಾಂಬೆಯನ್ನು ಈತನು ಮದುವೆಯಾಗಿದ್ದನು. ಇಮ್ಮಡಿ ಅಮೋಘವರ್ಷ ಮತ್ತು ನಾಲ್ವಡಿ ಗೋವಿಂದ ಇವನ ಮಕ್ಕಳು. ಕ್ರಿ.ಶ ೯೨೯ರಲ್ಲಿ ಅಮೋಘವರ್ಷನು ಸಿಂಹಾಸನವನ್ನೇರಿದನಾದರೂ ಒಂದು ವರ್ಷದೊಳಗಾಗಿಯೇ ತಮ್ಮನಾದ ಗೋವಿಂದನ ಒಳಸಂಚಿಗೆ ಬಲಿಯಾದನು. ಗೋವಿಂದನು ಅಣ್ಣನಿಂದ ರಾಜ್ಯವನ್ನು ಕಸಿದನು. ಆದರೆ ವಿಷಯಲಂಪಟನೂ ಕ್ರೂರಿಯೂ ಆಗಿದ್ದ ಈತನು ೬ ವರ್ಷಗಳೊಳಗೇ ಪ್ರಜಾನುರಾಗವನ್ನು ಕಳೆದುಕೊಂಡನು. ಹೀಗಾಗಿ ಗಂಗರ ಇಮ್ಮಡಿ ಬೂತುಗ, ವೇಮುಲವಾಡದ ಚಾಲುಕ್ಯರ ಇಮ್ಮಡಿ ಅರಿಕೇಸರಿ ಇವರ ನೇತೃತ್ವದಲ್ಲಿ ನಡೆದ ದಂಗೆಯನ್ನು ಅಡಗಿಸಲು ಗೋವಿಂದನು ಅಶಕ್ತನಾದನು. ಮುಮ್ಮಡಿ ಇಂದ್ರನ ತಮ್ಮನಾದ ಮುಮ್ಮಡಿ ಅಮೋಘವರ್ಷನನ್ನು ವಿರೋಧ ಪಕ್ಷದ ನಾಯಕರು ಸಿಂಹಾಸನ ದಲ್ಲಿ ಕುಳ್ಳಿರಿಸಿದರು. ಈತನ ಮಗಳಾದ ರೇವಕನಿರ್ಮಡಿಯನ್ನು ಬೂತುಗನು ಮದುವೆ ಯಾಗಿದ್ದನು.

ಕೃಷ್ಣ **III** : ಕ್ರಿ.ಶ. ೯೩೬ರಲ್ಲಿ ಪಟ್ಟಕ್ಕೆ ಬಂದ ಅಮೋಘವರ್ಷನು ತಪೋ ನಿರತನಾಗಿದ್ದ, ರಾಜಕೀಯದಲ್ಲಿ ಯಾವ ಆಸಕ್ತಿಯನ್ನೂ ತಳೆದಿರಲಿಲ್ಲ. ಕಲಚುರಿ ರಾಜಕುಮಾರಿಯೊಬ್ಬಳನ್ನು ಲಗ್ನವಾಗಿದ್ದ ಈತನು ತನ್ನ ಬಾಳಿನ ಬಹುಕಾಲವನ್ನು ಮಾನಸ ಮನೆಯಲ್ಲಿ ಕಳೆದಿದ್ದನು. ಆದ್ದರಿಂದ ರಾಜ್ಯದ ಹೊಣೆಯನ್ನು ಇವನ ಮಗ ಮುಮ್ಮಡಿ ಕೃಷ್ಣನೇ ವಹಿಸಿದ್ದನು. ತನ್ನ ತಂದೆಯನ್ನು ಅಧಿಕಾರಕ್ಕೆ ತರುವುದರಲ್ಲಿ ಪ್ರಮುಖಪಾತ್ರವಹಿಸಿದ್ದ ಗಂಗ ಇಮ್ಮಡಿ ಬೂತುಗನು ತನ್ನ ಸೋದರನಾದ ಮುಮ್ಮಡಿ ರಾಚಮಲ್ಲನಿಂದ ರಾಜ್ಯವನ್ನು ಪಡೆಯಲು ಆಶಿಸಿದ್ದ ಕಾರಣ, ಅವನ ನೆರವಿಗೆಂದು ಹಿರಿದಾದ ಸೈನ್ಯದೊಡನೆ ಗಂಗವಾಡಿಯನ್ನು ಮುತ್ತಿದ ಕೃಷ್ಣನು ರಾಚಮಲ್ಲನನ್ನು ಸೋಲಿಸಿ ಕೊಂದು, ಬೂತುಗನನ್ನು ಪಟ್ಟಕ್ಕೇರಿಸಿದನು.

ಕೃಷ್ಣನ ಪತ್ನಿ ಕೂಡ ಕಲಚುರಿ ವಂಶಕ್ಕೆ ಸೇರಿದವಳಾಗಿದ್ದಳು. ಹೀಗೆ ಗಾಢವಾದ ಸಂಬಂಧವಿದ್ದರೂ ಆತನು ಅದನ್ನು ನಿರ್ಲಕ್ಷಿಸಿ ಆ ವಂಶದ ಸಾಹಸತುಂಗನೆಂಬ ರಾಜ ಕುಮಾರನ ಮೇಲೆ ದಂಡೆತ್ತಿ ಹೋಗಿ ಆತನನ್ನು ಸೋಲಿಸಿದನು. ಈ ಘಟನೆ ಇವರ ಬಾಂಧವ್ಯದಲ್ಲಿ ವಿರಸವನ್ನುಂಟುಮಾಡಿತು. ಈ ಗಾಯ ಎಷ್ಟು ತೀವ್ರವಾಗಿತ್ತೆಂದರೆ,

ಮುಂದೆ ಕೃಷ್ಣನೇ ವಿಪತ್ತಿಗೀಡಾದಾಗ ಕಲಚುರಿಗಳು ಇವನ ನೆರವಿಗೆ ಬರಲಿಲ್ಲ. ಅಷ್ಟೇ ಅಲ್ಲದೆ ರಾಷ್ಟ್ರಕೂಟರ ಅಳಿವಿಗೆ ಅವರು ಸಹ ಕಾರಣರಾದರು.

ಕ್ರಿ.ಶ. ೯೩೯ರಲ್ಲಿ ಅಮೋಘವರ್ಷನು ಸತ್ತನು. ಅಂದಿನಿಂದ ಕೃಷ್ಣನು ನ್ಯಾಯಬದ್ಧ ಅರಸನಾದ. ಇವನ ಅಧಿಕಾರವನ್ನು ಪ್ರಶ್ನಿಸಿದ ಲಲ್ಲೆಯನೆಂಬವನನ್ನು ಇಮ್ಮಡಿ ಬೂತುಗನು ಸೋಲಿಸಿದನು. ಆಂತರಿಕ ಕಲಹಗಳನ್ನು ಕೊನೆಗಾಣಿಸಿ, ರಾಜ್ಯದಲ್ಲಿ ಸ್ಥಿರವಾಗಿ ಶಾಂತಿಯುತವಾದ ಆಡಳಿತವನ್ನು ಸ್ಥಾಪಿಸಿ, ತನ್ನ ಪೂರ್ವಜರಂತೆ ತಾನೂ ರಾಷ್ಟ್ರಕೂಟ ಬಲವನ್ನು ಮೆರಸಲು ಉತ್ಸುಕನಾದ ಕೃಷ್ಣನು ದಿಗ್ವಿಜಯಕ್ಕೆ ತೆರಳಿದನು.

ಅಂದು ದಕ್ಷಿಣದಲ್ಲಿ ಪಲ್ಲವರ ಬಲ ಕುಸಿದು ಅವರ ಸ್ಥಾನವನ್ನು ಚೋಳರು ಆಕ್ರಮಿಸಿದ್ದರು. ವಿಜಯಾಲಯ ಈ ಮನೆತನದ ಮೂಲಪುರುಷ. ತಂಜಾವೂರು ರಾಜಧಾನಿ. ಈತನ ಮಗ ಆದಿತ್ಯ(I)ನು ಪಲ್ಲವ ಅಪರಾಜಿತನನ್ನು ಸೋಲಿಸಿ ತೊಂಡೈಮಂಡಲಂ ಎಂದರೆ ಈಗಿನ ನೆಲ್ಲೂರು, ಉತ್ತರ ಮತ್ತು ದಕ್ಷಿಣ ಆರ್ಕಾಟ್ ಹಾಗೂ ಚೆಂಗಲ್ಪೇಟೆ ಜಿಲ್ಲೆಗಳನ್ನೊಳಗೊಂಡ ಪ್ರದೇಶದ ಸ್ವಾಮಿಯಾದನು. ಆದಿತ್ಯನ ಮಗನಾದ ಪರಾಂತಕನು ಸಾಮರ್ಥ್ಯಶಾಲಿಯಾಗಿದ್ದು ರಾಜ್ಯವಿಸ್ತರಣಾಕಾಂಕ್ಷೆಯುಳ್ಳವನಾಗಿದ್ದನು. ಇವನ ರಾಜ್ಯ ರಾಷ್ಟ್ರಕೂಟ ರಾಜ್ಯಕ್ಕೆ ಹೊಂದಿಕೊಂಡಂತಿದ್ದು ದಿಗ್ವಿಜಯಾಕಾಂಕ್ಷಿಗಳಾದ ಇವರಿಬ್ಬರ ನಡುವಣ ಘರ್ಷಣೆ ಅನಿವಾರ್ಯವಾಗಿತ್ತು. ಈ ಮೊದಲೇ ವಲ್ಲಾಳದಲ್ಲಿ ನಡೆದ ಕದನದಲ್ಲಿ ಪರಾಂತಕನು ಇಮ್ಮಡಿ ಕೃಷ್ಣನನ್ನು ಸೋಲಿಸಿದನೆಂಬುದನ್ನು ಅರಿತಿದ್ದೇವೆ. ಈ ಚೋಳ ಅರಸನು ನಾಲ್ವಡಿ ಗೋವಿಂದನಿಗೆ ಆಶ್ರಯವಿತ್ತಿದ್ದನು. ಇದು ಇವರ ನಡುವಣ ದ್ವೇಷವನ್ನು ಮತ್ತಷ್ಟು ತೀವ್ರಗೊಳಿಸಿತು. ಮುಮ್ಮಡಿ ಕೃಷ್ಣನ ದಕ್ಷಿಣದೇಶದ ದಂಡಯಾತ್ರೆಗೆ ಇದು ಮುಖ್ಯ ಕಾರಣ. ಈ ದಾಳಿಯನ್ನು ಪರಾಂತಕನು ನಿರೀಕ್ಷಿಸಿಯೇ ಇದ್ದನು. ಉತ್ತರ ಆರ್ಕಾಟ್ ಜಿಲ್ಲೆಯ ತಕ್ಕೋಲಂ ಎಂಬಲ್ಲಿ ರಾಷ್ಟ್ರಕೂಟರ ಸೈನ್ಯ ಚೋಳರನ್ನು ಎದುರಿಸಿತು. ಚೋಳರ ಯುವರಾಜನಾದ ರಾಜಾದಿತ್ಯ ಹಾಗೂ ಇನ್ನೊಬ್ಬ ರಾಜಕುಮಾರ ಅರಿಕುಲಕೇಸರಿ—ಇವರು ಸೈನ್ಯದ ನಾಯಕತ್ವವನ್ನು ವಹಿಸಿದ್ದರು. ಅಂದಿನ ಭೀಕರ ಕದನದಲ್ಲಿ ಗಂಗ ಬೂತುಗನು ಕೊನೆಯ ಘಟ್ಟದಲ್ಲಿ ಆನೆಯ ಮೇಲೆ ಕುಳಿತಿದ್ದ ರಾಜಾದಿತ್ಯನನ್ನು ಕೊಂದನು. ಶತ್ರುಸೈನ್ಯ ದಿಕ್ಕುಪಾಲಾಗಿ ಚೆದರಿತು. ಚೋಳರಾಜ್ಯ ರಾಷ್ಟ್ರಕೂಟರ ಆಘಾತಕ್ಕೆ ಸಿಲುಕಿತು. ಕೃಷ್ಣನು ಕಾಂಚಿಯಿಂದ ತಂಜಾವೂರುವರೆಗಿನ ಚೋಳ ರಾಜ್ಯವನ್ನು ಆಕ್ರಮಿಸಿ ವಶಪಡಿಸಿಕೊಂಡನು. ಮೇಲ್ಪಾಡಿಯಲ್ಲಿ ಕೆಲಕಾಲ ಸೈನ್ಯಸಮೇತ ತಂಗಿದ್ದ ಇವನು ಬೂತುಗನ ಶೌರ್ಯಕ್ಕೆ ಮೆಚ್ಚಿ ಬನವಾಸಿ ಪನ್ನಿರ್ಚ್ಛಾಸಿರ, ಬೆಳ್ವೊಲ, ಪುಂಗೆರೆ ಪ್ರಾಂತಗಳ ಅಧಿಪತ್ಯವನ್ನು ಸಹ ಅವನಿಗೆ ಒಪ್ಪಿಸಿದನು. ಇದರ ಪರಿಣಾಮವಾಗಿ ಚೋಳರ ಪ್ರಾಬಲ್ಯ ನಶಿಸಿತು. ಸುಮಾರು ಮೂರು ದಶಕಗಳ ಕಾಲ ಅವರು ತೆರೆಯ ಮರೆಯಲ್ಲಿಯೇ ಉಳಿಯುವಂತಾಯಿತು. ಅವರೆಗೂ (ಕ್ರಿ.ಶ. ಸು. ೯೬೭) ರಾಷ್ಟ್ರಕೂಟರು ಚೋಳರ ಈ ಪ್ರದೇಶಗಳ ಅಧಿಪರಾಗಿದ್ದರು.

ಕೃಷ್ಣನ ಉತ್ತರ ದಿಗ್ವಿಜಯದಲ್ಲಿ ಪಾತ್ರ ವಹಿಸಿದವನು ಬೂತುಗನ ಮಗನಾದ

ಇಮ್ಮಡಿ ಮಾರಸಿಂಹ. ಉತ್ತರ ಭಾರತದ ರಾಜಕೀಯದಲ್ಲಿ ಆಗ ಉದಯೋನ್ಮುಖರಾಗಿದ್ದ ಚಂದೇಲರನ್ನು ಸೋಲಿಸಿ ಕಾಲಂಜರ ಮತ್ತು ಚಿತ್ರಕೂಟ ಕೋಟೆಗಳನ್ನು ವಶಪಡಿಸಿಕೊಂಡ ಮಾರಸಿಂಹನು, ನಂತರ ಗೂರ್ಜರ ಪ್ರತೀಹಾರರ ವಿರುದ್ಧ ಹೋಗಿ ಅವರನ್ನು ಸೋಲಿಸಿ ಗೂರ್ಜರಾಧಿರಾಜನೆಂದು ಬಿರುದಾಂಕಿತನಾದನು. ಪರಮಾರ ವಂಶದ ಸೀಯಕ ಹರ್ಷನನ್ನು ಸೋಲಿಸಿದನು. ಜಬ್ಬಲ್ಪುರದ ಸಮೀಪದಲ್ಲಿ ಜುರಾ ಎಂಬಲ್ಲಿ ದೊರೆತ ಪ್ರಶಸ್ತಿ ಶಾಸನವೊಂದು ರಾಷ್ಟ್ರಕೂಟರ ಈ ವಿಜಯವನ್ನು ಸಾರುತ್ತದೆ.

ವೆಂಗಿಯಲ್ಲಿ ಚಾಲುಕ್ಯರ ಅಂತಃಕಲಹಗಳು ಅಂತ್ಯಗೊಂಡಿರಲೇ ಇಲ್ಲ. ಇಮ್ಮಡಿ ಅಮ್ಮನ ಪ್ರತಿಸ್ಪರ್ಧಿಯಾದ ಬಾಡಪನು ಕೃಷ್ಣನ ನೆರವನ್ನಪೇಕ್ಷಿಸಿದನು. ವಾಸ್ತವಿಕವಾಗಿ ಅಮ್ಮನ ಮಲಸೋದರನಾದ ದಾನಾರ್ಣವನಿಗೆ ರಾಜ್ಯ ಸೇರಬೇಕಾಗಿದ್ದಿತು. ಆದರೆ ಬಾಡಪನು ಕೃಷ್ಣನ ಸಹಾಯದಿಂದ ರಾಜ್ಯಾಭಿಷಿಕ್ತನಾದನು. ಅಮ್ಮನು ಮಾತ್ರ ಅದನ್ನು ಪುನಃ ಹಿಂತಿರುಗಿ ಪಡೆಯಲು ತನ್ನ ಯತ್ನಗಳನ್ನು ಮುಂದುವರಿಸುತ್ತಲೇ ಇದ್ದನು. ಒಮ್ಮೆ ಬಾಡಪನ ಸೋದರನಾದ ತಾಳನನ್ನು ಯುದ್ಧದಲ್ಲಿ ಕೊಂದನು. ಇವುಗಳಿಂದ ಉದ್ರಿಕ್ತನಾದ ಕೃಷ್ಣನು ವೆಂಗಿಯ ಮೇಲೆ ದಂಡೆತ್ತಿ ಹೋದನು. ಈ ಒಳಜಗಳಗಳು ದಾನಾರ್ಣವನು ಸಿಂಹಾಸನಾರೋಹಣ ಮಾಡುವುದರೊಂದಿಗೆ ತಾತ್ಕಾಲಿಕವಾಗಿ ಮುಕ್ತಾಯಗೊಂಡಿತು.

ಯುವರಾಜನಾಗಿದ್ದಾಗಲಿಂದಲೇ ಚತುರ ಸೇನಾನಿಯೂ ಆಡಳಿತಪಟುವೂ ಆಗಿದ್ದ ಕೃಷ್ಣನು ಅನೇಕ ಯುದ್ಧಗಳನ್ನು ಹೂಡಿ ಎಲ್ಲದರಲ್ಲೂ ಜಯಲಕ್ಷ್ಮಿಯನ್ನು ವರಿಸಿದ್ದನು. ಇವನ ಆಳಿಕೆಯ ಕಾಲ ರಾಷ್ಟ್ರಕೂಟರ ಉಚ್ಛ್ರಾಯದ ಕಾಲವೆನ್ನಬಹುದು. ಒದಗಿದ ಕುತ್ತನ್ನು ಪರಿಹರಿಸಿ, ರಾಜ್ಯವನ್ನು ಬಲಗೊಳಿಸಿ, ರಾಷ್ಟ್ರಕೂಟರ ಕೀರ್ತಿಪತಾಕೆಯನ್ನು ಹಾರಿಸಿದ ಈತನು ಕರ್ನಾಟಕ ಇತಿಹಾಸದಲ್ಲಿ ಖ್ಯಾತಿವೆತ್ತ ಹಲವು ಅರಸರಲ್ಲೊಬ್ಬನಾಗಿದ್ದಾನೆ. ಈತನ ಕಾಲ ಕನ್ನಡ ಸಾಹಿತ್ಯದಲ್ಲಿ ಚಿರಸ್ಮರಣೀಯವಾದ ಕಾಲವೂ ಹೌದು.

ಕೃಷ್ಣನು ಕ್ರಿ. ಶ. ೯೬೭ರಲ್ಲಿ ಗತಿಸಿದನು. ಇವನು ಅನುಸರಿಸಿದ ರಾಜನೀತಿಯ ಪರಿಣಾಮಗಳು ಕೂಡಲೇ ತಮ್ಮ ಪ್ರಭಾವವನ್ನು ಬೀರಿದುವು. ಅವುಗಳನ್ನೆದುರಿಸುವ ಸಾಮರ್ಥ್ಯವಿಲ್ಲದ ಇವನ ಉತ್ತರಾಧಿಕಾರಿಗಳು ಅಸಹಾಯಕರಾಗಿ ರಾಷ್ಟ್ರಕೂಟರ ಅವನತಿಗೆ ಕಾರಣರಾದರು. ಕೃಷ್ಣನ ಮಗ ಅಲ್ಪವಯಸ್ಕನಾಗಿದ್ದಾಗಲೇ ಸತ್ತನಾದ್ದರಿಂದ ಸಿಂಹಾಸನವು ತಮ್ಮನಾದ ಖೊಟ್ಟಿಗನ ಪಾಲಾಯಿತು. ಐದು ವರ್ಷಗಳ ಬಳಿಕ ಇವನ ತಮ್ಮ ನಿರುಪಮನ ಮಗ ಇಮ್ಮಡಿ ಕರ್ಕನು ಒಂದು ವರ್ಷಕಾಲ ಆಳಿದನು. ಆದರೆ ಕ್ರಿ. ಶ. ೯೭೩ರಲ್ಲಿ ಬಾದಾಮಿಯಲ್ಲಿ ಆಳಿದ ಚಾಲುಕ್ಯ ಮನೆತನಕ್ಕೆ ಸೇರಿದ ಇಮ್ಮಡಿ ತೈಲಪನು ದಂಗೆಯೆದ್ದು ರಾಷ್ಟ್ರಕೂಟರನ್ನು ಸೋಲಿಸಿ ಚಾಲುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸುವುದರಲ್ಲಿ ಯಶಸ್ವಿಯಾದನು. ಕಲಚುರಿಗಳು ರಾಷ್ಟ್ರಕೂಟರ ಸಂಬಂಧಿಗಳಾಗಿದ್ದರೂ ಮುಮ್ಮಡಿ ಕೃಷ್ಣನು ಅವರನ್ನು ತೀವ್ರವಾಗಿ ಘಾಸಿಗೊಳಿಸಿದ್ದ ಕಾರಣ ಅವರು ರಾಷ್ಟ್ರಕೂಟರ ರಾಜಕೀಯದಲ್ಲಿ ಯಾವ ಆಸಕ್ತಿಯನ್ನು ತೋರಿಸಲಿಲ್ಲ. ಪರಮಾರ

ಸೀಯಕ ಹರ್ಷನು ಸೇಡನ್ನು ತೀರಿಸಿಕೊಳ್ಳಲು ಕ್ರಿ. ಶ. ೯೭೨ರಲ್ಲಿ ಮಾನ್ಯಖೇಟವನ್ನು ಮುತ್ತಿದಾಗ ವಿಧೇಯ ಸಾಮಂತನಾಗಿದ್ದ ಗಂಗ ಮಾರಸಿಂಹನು ಅವನನ್ನು ಯಶಸ್ವಿಯಾಗಿ ಎದುರಿಸಿದನು. ಆದರೆ ತೈಲಪನ ಬಲದ ಮುಂದೆ ಗಂಗನ ಯತ್ನಗಳು ಫಲಿಸಲಿಲ್ಲ. ಕೃಷ್ಣನ ಮೊಮ್ಮಗನಾದ ನಾಲ್ಕನೆಯ ಇಂದ್ರನನ್ನು ಬಂಕಾಪುರಕ್ಕೆ ಒಯ್ದು ಅಲ್ಲಿ ಅವನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸುವುದರ ಮೂಲಕ ರಾಷ್ಟ್ರಕೂಟ ರಾಜ್ಯ ಇನ್ನೂ ಅಸ್ತಿತ್ವದಲ್ಲಿದೆ ಎಂದು ತೋರಿಸಿದನಾದರೂ ಕುಸಿಯುತ್ತಿದ್ದ ಮನೆತನವನ್ನು ಮೇಲೆತ್ತಲು ಅವನಿಗೆ ಅಸಾಧ್ಯವಾಯಿತು. ಕ್ರಿ. ಶ. ೯೭೩ರಲ್ಲಿ ರಾಷ್ಟ್ರಕೂಟರ ರಾಜ್ಯ ಅಸ್ತಂಗತವಾಯಿತು.

## ಕಲ್ಯಾಣದ ಚಾಲುಕ್ಯರು

ರಾಷ್ಟ್ರಕೂಟ ಖೊಟ್ಟಿಗನನ್ನು ಸೋಲಿಸಿದ ಇಮ್ಮಡಿ ತೈಲಪನು ಚಾಲುಕ್ಯರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದ ಕೀರ್ತಿಯನ್ನು ಪಡೆದನೆಂದು ಮೇಲೆ ಹೇಳಿದೆ. ಈತ ಬಾದಾಮಿಯಲ್ಲಿ ಆಳಿದ ಚಾಲುಕ್ಯರ ಕುಲದವನು. ಆದರೆ ಈ ವಿಷಯದಲ್ಲಿ ಸ್ವಲ್ಪ ಜಿಜ್ಞಾಸೆಯಿದೆ. ಇಮ್ಮಡಿ ಕೀರ್ತಿವರ್ಮನ ಬಳಿಕ ರಾಷ್ಟ್ರಕೂಟರು ಸು. ೨೨೦ ವರ್ಷಗಳವರೆಗೆ (ಕ್ರಿ.ಶ. ೭೫೭ರಿಂದ ೯೭೩ರ ವರೆಗೆ) ಆಳಿದರು. ಈ ಕಾಲದಲ್ಲಿ ಈತನಿಗೂ ಇಮ್ಮಡಿ ತೈಲಪನಿಗೂ ನಡುವೆ ಏಳು ತಲೆಮೊರೆಗಳು ಕಳೆದಿದ್ದುವು. ತಾವು ಬಾದಾಮಿಯಲ್ಲಿ ಆಳಿದ್ದ ಚಾಲುಕ್ಯ ವಂಶಕ್ಕೆ ಸೇರಿದವರಾಗಿಯೂ ಇಮ್ಮಡಿ ಕೀರ್ತಿವರ್ಮನ ನಂತರ ಆ ವಂಶದ ಏಳು ಜನ ತೆರೆಯ ಮರೆಯಲ್ಲಿ ಬಾಳಿದ ಬಳಿಕ, ಇಮ್ಮಡಿ ತೈಲಪನು ಖೊಟ್ಟಿಗನನ್ನು ಸೋಲಿಸಿ ಚಾಲುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದುದಾಗಿಯೂ ತಮ್ಮ ಶಾಸನಗಳಲ್ಲಿ ಅವರು ಹೇಳಿಕೊಂಡಿದ್ದಾರೆ. 'ಗದಾಯುದ್ಧ'ದ ಕರ್ತೃವಾದ ರನ್ನನು ಸಹ ಇರಿವಬೆಡಂಗ ಸತ್ಯಾಶ್ರಯನ ವಂಶಾವಳಿಯನ್ನು ನಿರೂಪಿಸುವಾಗ ಬಾದಾಮಿಯ ಚಾಲುಕ್ಯರಿಗೂ ತೈಲಪನಿಗೂ ನಡುವಣ ಆ ವಂಶಜರ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಒಂದೆರಡು ಸಣ್ಣ ವಿಷಯಗಳಲ್ಲಿ ಈತನ ಹೇಳಿಕೆ ಶಾಸನೋಕ್ತ ಹೇಳಿಕೆಗಳಿಗಿಂತ ಭಿನ್ನವಾಗಿದ್ದರೂ ಈತನು ನಿರೂಪಿಸಿರುವ ವಂಶಾವಳಿ ಶಾಸನೋಕ್ತ ವಂಶಾವಳಿಯೊಂದಿಗೆ ಹೋಲುತ್ತದೆ.

ಈ ಚಾಲುಕ್ಯರು ಬಾದಾಮಿಯ ಚಾಲುಕ್ಯರ ವಂಶಸ್ಥರೆಂಬ ವಿಷಯವಾಗಿ ಸಂದೇಹವನ್ನು ವ್ಯಕ್ತಪಡಿಸಿರುವವರಲ್ಲಿ ಡಾ. ಫ್ಲೀಟ್ ಒಬ್ಬರು. ಅವರು ಇದಕ್ಕಾಗಿ ಮುಂದೊಡ್ಡಿರುವ ಕಾರಣಗಳಲ್ಲಿ ಮೊದಲನೆಯದು: ಶಾಸನಗಳಲ್ಲಿ ಬಾದಾಮಿಯ ಚಾಲುಕ್ಯರನ್ನು 'ಚಲುಕ್ಯರು' ಎಂದು ಚಕಾರದ ಹ್ರಸ್ವರೂಪವನ್ನು ಬಳಸಿ ಕರೆಯಲಾಗಿದೆ; ಮೊದಲು ಆಳಿದವರು ಚಲುಕ್ಯರು; ನಂತರ ಆಳಿದವರು ಚಾಲುಕ್ಯರು. ಆದ್ದರಿಂದ ಇವರು ಒಂದೇ ವಂಶಕ್ಕೆ ಸೇರಿದವರಲ್ಲ. ಮೇಲ್ನೋಟಕ್ಕೇ ಈ ವಾದ ಅರ್ಥಹೀನವಾದ್ದೆಂಬುದು ಸ್ಪಷ್ಟ. ಇದನ್ನು ಡಾ. ಭಂಡಾರ್ಕರ್ ಅಲ್ಲಗಳೆದಿದ್ದಾರೆ. ಇನ್ನು ಎರಡೂ ವಂಶಗಳ ಆಳಿಕೆಯ

ಕಾಲಗಳ ನಡುವಣ ಅಂತರದಲ್ಲಿ, ೨೨೦ ವರ್ಷಗಳಲ್ಲಿ, ಕೇವಲ ಏಳು ಜನರು ಮಾತ್ರ ಆಳಿದರು ಎಂಬುದು ಸಂದೇಹಕ್ಕೆ ಎಡೆಕೊಡುತ್ತದೆ ಎಂಬುದು ಎರಡನೆಯ ಕಾರಣ. ಸಾಮಾನ್ಯವಾಗಿ ಒಬ್ಬೊಬ್ಬ ಅರಸನ ಆಳಿಕೆಯ ಕಾಲ ೨೫ ವರ್ಷಗಳೆಂದು ಪರಿಗಣಿಸಿದಾಗ ಈ ಅಂತರ ಹೆಚ್ಚಿನದೆಂದು ತೋರುತ್ತದೆ. ಈ ವಂಶಾವಳಿಯಲ್ಲಿ ಎಲ್ಲಿಯೋ ಒಂದೆರಡು ಕೊಂಡಿಗಳು ಕಳಚಿವೆ ಎಂಬುದು ಅವರ ವಾದದ ತಿರುಳು. ಆದರೆ ೨೫ ವರ್ಷಗಳಿಗೂ ಮೀರಿ ೫೦ ವರ್ಷಗಳವರೆಗೂ ರಾಜ್ಯವಾಳಿದ ಅನೇಕ ಅರಸರು ಇತಿಹಾಸದಲ್ಲಿ ಕಾಣಬರುತ್ತಾರೆ. ಉದಾಹರಣೆಗೆ ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನ ಆಳಿಕೆಯ ಕಾಲ ಸುಮಾರು ೬೦ ವರ್ಷ. ಕಲ್ಯಾಣದ ಚಾಲುಕ್ಯರಲ್ಲಿಯೇ ಅರುವಡಿ ವಿಕ್ರಮಾದಿತ್ಯನು ಐವತ್ತು ವರ್ಷಗಳ ಕಾಲ ರಾಜ್ಯವಾಳಿದ್ದು ತಿಳಿದಿದೆ. ರಾಷ್ಟ್ರದ ರಾಜಕೀಯದಲ್ಲಿ ಪ್ರಾಮುಖ್ಯವನ್ನು ಪಡೆದಿದ್ದ ಇಂತಹವರೇ ಹೀಗೆ ದೀರ್ಘಕಾಲ ಆಳಿದಾಗ, ತೆರೆಯ ಮರೆಯಲ್ಲಿ ಸಣ್ಣ ಪುಟ್ಟ ಮಾಂಡಲಿಕರಾಗಿ ಕಾಲವನ್ನು ಸವೆಸಿದವರು ಹೆಚ್ಚುಕಾಲ ಅಧಿಕಾರದಲ್ಲಿ ಮುಂದುವರಿದಿರಬಾರದೇಕೆ? ಒಬ್ಬೊಬ್ಬರೂ ೨೫ ವರ್ಷಗಳ ಬದಲು ೩೦ ವರ್ಷಗಳು ಆಳಿರಬಹುದೆಂದು ಊಹಿಸಿದಲ್ಲಿ ಈ ವಾದ ಸತ್ತ್ವಹೀನವಾದ್ದೆಂಬುದು ಸ್ಪಷ್ಟವಾಗುತ್ತದೆ.

ಬಾದಾಮಿಯ ಚಾಳುಕ್ಯರು ರಾಜ್ಯವನ್ನು ಕಳೆದುಕೊಂಡ ಬಳಿಕ ಸುಮಾರು ೨೨ ದಶಕಗಳು ತೆರೆಯ ಮರೆಯಲ್ಲಿದ್ದ ಇವರ ವಂಶಾವಳಿ ಶಾಸನ ಸಾಕ್ಷ್ಯದಂತೆ ಹೀಗೆ:



ಆದರೆ ರನ್ನನು ತನ್ನ 'ಗದಾಯುದ್ಧ'ದಲ್ಲಿ ಕೊಟ್ಟಿರುವ ಈ ಅರಸರ ವಂಶಾವಳಿ ಇದಕ್ಕಿಂತ ಸ್ವಲ್ಪಮಟ್ಟಿಗೆ ಭಿನ್ನವಾಗಿದೆ. ಶಾಸನಗಳಲ್ಲಿ ಮೊದಲನೆಯ ತೈಲನ ಮಗ ಮುಮ್ಮಡಿ ವಿಕ್ರಮಾದಿತ್ಯನೆಂದು ಹೇಳಿದ್ದರೆ, ಕವಿ ಈ ವಿಕ್ರಮಾದಿತ್ಯನನ್ನು ಭೀಮನ ಮಗನೆಂದು ಹೇಳಿ ಭೀಮನನ್ನು ತೈಲ(I)ನ ಮಗನೆಂದಿದ್ದಾನೆ.

ಪಟ್ಟದಕಲ್ಲಿನಲ್ಲಿ ದೊರೆತ ಶಾಸನವೊಂದರಲ್ಲಿ ಒಬ್ಬ ತೈಲಪನ ಪ್ರಸ್ತಾಪವಿದೆ. ಇಲ್ಲಿ "ಶ್ರೀ ಪೆರ್ಗ್ಗಡೆ ಮಹಾರಾಜ ತೈಲ ಮಹಾಧಿರಾಜ ಪೆಸರು" ಎಂದಿದೆ. ಈ ತೈಲಪನು ಒಬ್ಬ ಅಧಿಕಾರಿ (ಹೆಗ್ಗಡೆ) ಯಾಗಿದ್ದನೆಂದೂ, ಮಹಾರಾಜ, ಮಹಾಧಿರಾಜ ಎಂಬುವು ಆತನ ಬಿರುದುಗಳೆಂದೂ ಹೇಳಲಾಗಿದೆ. ಲಿಪಿಶಾಸ್ತ್ರ ದೃಷ್ಟಿಯಿಂದ ಈ ತೈಲನು ಚಾಲುಕ್ಯ ಮನೆತನದ ಮುಮ್ಮಡಿ ಕೀರ್ತಿವರ್ಮನ ಮಗನಾದ ತೈಲಪ(I)ನೆಂದು ಊಹಿಸಿದೆ. ಭೀಮನನ್ನು "ಮುಕುಂದಿಯ ಕೊಂದ ಭೀಮ"ನೆಂದು ಕವಿ ಕರೆದಿದ್ದಾನೆ. ಆದರೆ ಈ ಮುಕುಂದ ಯಾರು ಎಂಬುದು ತಿಳಿಯದು. ಇಮ್ಮಡಿ ತೈಲಪನ ಅಜ್ಜನಾದ ಅಯ್ಯಣನು ಕೃಷ್ಣನ ಮಗಳನ್ನು ಮದುವೆಯಾದನೆಂದು ಹೇಳಿದೆ. ಈ ಕೃಷ್ಣನು ರಾಷ್ಟ್ರಕೂಟರ ಇಮ್ಮಡಿ ಕೃಷ್ಣನಾಗಿದ್ದಿರಬಹುದು. ಆದರೆ ಈ ವಿಷಯ ಸಹ ವಿವಾದಾಸ್ಪದವಾದ್ದೇ.

ಅಯ್ಯಣನ ಮಗ ನಾಲ್ವಡಿ ವಿಕ್ರಮಾದಿತ್ಯ. ಕಲಚುರಿ ಮನೆತನದ ಲಕ್ಷ್ಮಣರಾಜನ ಮಗಳಾದ ಬೊಂಥಾದೇವಿಯನ್ನು ಈತನು ಮದುವೆಯಾಗಿದ್ದನು. ಇದು ಕ್ರಮವಾಗಿ ಪ್ರಾಬಲ್ಯಕ್ಕೆ ಬರುತ್ತಿದ್ದ ಚಾಲುಕ್ಯರ ಸ್ಥಿತಿಯನ್ನು ಸೂಚಿಸುತ್ತದೆ. ರಾಷ್ಟ್ರಕೂಟರೊಡನೆ ಸಂಬಂಧವೊಂದಿದ್ದ ಕಲಚುರಿಗಳು, ಅವರ ಮಾಂಡಲಿಕರಾಗಿದ್ದ ಚಾಲುಕ್ಯರೊಡನೆ ರಕ್ತಸಂಬಂಧವನ್ನೇರ್ಪಡಿಸಿಕೊಂಡುದು ಕುತೂಹಲಕಾರಿಯಾದ ವಿಷಯ. ಈ ವೇಳೆಗೆ ಮುಮ್ಮಡಿ ಕೃಷ್ಣನು ದಿಗ್ವಿಜಯಿಯಾಗಿ, ತನ್ನ ಸಂಬಂಧಿಗಳಾದ ಕಲಚುರಿಗಳನ್ನು ನಿರ್ಲಕ್ಷಿಸುವ ಮನೋಭಾವವನ್ನು ಬೆಳಸಿಕೊಂಡಿದ್ದನೆಂಬುದು ಗಮನಿಸಬೇಕಾದ ಅಂಶ. ಬಹುಶಃ ಈ ಕಾರಣದಿಂದಲೇ ಚಾಲುಕ್ಯ ವಿಕ್ರಮಾದಿತ್ಯನೊಡನೆ ಕಲಚುರಿಗಳು ಬಾಂಧವ್ಯವನ್ನು ಏರ್ಪಡಿಸಿಕೊಂಡಿರಬಹುದು. ಇದಕ್ಕೆ ಪ್ರಬಲವಾದ ಆಧಾರಗಳಿಲ್ಲದಿದ್ದರೂ ಇದೊಂದು ಪರಿಶೀಲಿಸಬಹುದಾದ ಊಹೆ. ಇವರ ಯಾರೊಬ್ಬರ ಶಾಸನಗಳೂ ದೊರೆತಿಲ್ಲ. ಸೊಂಡೇಕೊಳ ಎಂಬಲ್ಲಿ ದೊರೆತ ಶಾಸನವೊಂದು ಈ ನಾಲ್ಕನೆಯ ವಿಕ್ರಮಾದಿತ್ಯನಿಗೆ ಸೇರಿದುದೆಂದು ರೈಸ್ ಹೇಳಿದ್ದಾರೆ. ಆದರೆ ಅದು ಸಂದೇಹಾಸ್ಪದ. ಅದರಂತೆಯೇ ದೇವಿಹೊಸೂರಿನ ಒಂದು ಶಾಸನವು ಈತನಿಗೆ ಸೇರಿದುವೆಂದು ನೀಲಕಂಠಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅದು ರಾಷ್ಟ್ರಕೂಟ ಅಕಾಲವರ್ಷನಿಗೆ ಸೇರಿರುವ ಸಾಧ್ಯತೆಯಿದೆ.

ಇಮ್ಮಡಿ ತೈಲಪ: ಇಮ್ಮಡಿ ತೈಲಪನನ್ನು ಕುರಿತು ಈಗ ಹಲವಾರು ವಿವರಗಳು ತಿಳಿದಿವೆ. ರಾಷ್ಟ್ರಕೂಟರನ್ನು ಹೊರದೂಡುವ ಮುನ್ನ ಈತನು ಅವರ ಸಾಮಂತರಲ್ಲಿ ಒಬ್ಬನಾಗಿದ್ದನು. ಕ್ರಿ.ಶ. ೯೫೭ನೆಯ ವರ್ಷದ ಕಾಜೋಳ ಶಾಸನದಲ್ಲಿ ಕನ್ನರದೇವ (ಮುಮ್ಮಡಿ ಕೃಷ್ಣ)ನ 'ಪಾದಪದ್ಮೋಪಜೀವಿ' ಎಂದು ಈ ತೈಲಪನನ್ನು ವರ್ಣಿಸ

ಲಾಗಿದೆ. ಆದರೆ ಎಂಟು ವರ್ಷಗಳ ನಂತರದ (ಕ್ರಿ.ಶ. ೯೬೫) ಶಾಸನದಲ್ಲಿ ಸತ್ಯಾಶ್ರಯ ಕುಲತಿಲಕ, ಚಾಲುಕ್ಯರಾಮ, ಆಹವಮಲ್ಲ ಇತ್ಯಾದಿ ಬಿರುದಾಂಕಿತನಾದ ಮಹಾ ಸಾಮಂತ ತೈಲಪರಸನು ತರ್ದವಾಡಿಸಾಸಿರದ ಪ್ರಾಂತವನ್ನಾಳುತ್ತಿದ್ದನೆಂದು ಹೇಳಿದೆ. ಇಲ್ಲಿ ಮಹಾಸಾಮಂತನೆಂದು ಕರೆದಿರುವುದನ್ನು ಗಮನಿಸಬೇಕು. ಇದು ಪದೋನ್ನತಿ ಸೂಚಕ. ಇದಾದ ಇನ್ನೆಂಟು ವರ್ಷಗಳೊಳಗಾಗಿ ಈತನು ರಾಷ್ಟ್ರಕೂಟರನ್ನು ಮೂಳ ಬೇಡದಿಂದ ಹೊರದೂಡಿ ಚಾಲುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದನು. ಕ್ರಮವಾಗಿ ಶಕ್ತಿಯನ್ನು ವರ್ಧಿಸಿಕೊಳ್ಳುತ್ತಿದ್ದ ಈತನು ಮುಮ್ಮಡಿ ಕೃಷ್ಣನ ನಂತರ ಅಶಕ್ತ ಅರಸರು ಅಧಿಕಾರಕ್ಕೆ ಬಂದುದರ ಲಾಭವನ್ನು ಪಡೆದನು. ರಾಜ್ಯದಲ್ಲಿ ತಲೆದೋರಿದ್ದ ಅಸಹಾಯಕ ಪರಿಸ್ಥಿತಿಯನ್ನು ಉಪಯೋಗಿಸಿ ಪರಮಾರ ಸೀಯಕ ಹರ್ಷನು ಮಾನ್ಯಖೇಟವನ್ನು ಮುಕ್ತಿ ರಾಜಧಾನಿಯನ್ನು ಹಾಳುಕೆಡವಿದಾಗ ತೈಲಪನು ನಿರೀಕ್ಷಿಸಿದ್ದ ಸಂದರ್ಭ ಒದಗಿತು. ಗಂಗರ ಮಾರಸಿಂಹನು ಖೊಟ್ಟಿಗನ ನೆರವಿಗೆ ಬಂದರೂ, ಅದರಿಂದ ಏನೂ ಹಿತವಾಗಲಿಲ್ಲ. ಕೃಷ್ಣನ ವಿರೋಧಿಗಳಾಗಿದ್ದವರು ಈಗ ತೈಲಪನ ಸಹಾಯಕ್ಕೆ ಬಂದಂತೆ ತೋರುತ್ತದೆ. ಗದಗಿನ ಆರನೆಯ ವಿಕ್ರಮಾದಿತ್ಯನ ಶಾಸನದಲ್ಲಿ ತೈಲಪನು ಶ್ರೀಮುಖ ಸಂವತ್ಸರದಲ್ಲಿ (ಕ್ರಿ.ಶ. ೯೭೩) ರಾಷ್ಟ್ರಕೂಟ ಕಕ್ಕನನ್ನು ಸೋಲಿಸಿ ಚಾಲುಕ್ಯ ರಾಜ್ಯವನ್ನು ಸ್ಥಾಪಿಸಿ, ನಂತರ ೨೪ ವರ್ಷಗಳ ಕಾಲ ಆಳಿದನೆಂದು ಹೇಳಿದೆ.

ಕಕ್ಕನನ್ನು ಸೋಲಿಸಿದ ತೈಲಪನು ಮಾನ್ಯಖೇಟವನ್ನು ಆಕ್ರಮಿಸಿದನು. ಆದರೆ ರಾಷ್ಟ್ರಕೂಟರ ವಿಧೇಯ ಸಾಮಂತನಾಗಿದ್ದ ಮಾರಸಿಂಹನು ಇವನ ಪ್ರಬಲ ವಿರೋಧಿಯಾದನು. ಆತನು ಸತತವಾಗಿ ತನ್ನ ಸ್ವಾಮಿಯ ಪರವಾಗಿ ಹೋರಾಡಿದನಾದರೂ ಅಂತಿಮ ಯಶಸ್ಸು ತೈಲಪನದೇ ಆಗಿತ್ತು. ಮಾರಸಿಂಹನ ಮರಣದ ನಂತರ ಅವನ ಉತ್ತರಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದ ಗೋವಿಂದ ಮತ್ತು ಪಾಂಚಾಲದೇವ ಇವರು ಸಹ ತೈಲಪನನ್ನು ಎದುರಿಸಿದರು. ಪಾಂಚಾಲದೇವನನ್ನು ಸೋಲಿಸಲು ತೈಲಪನು ಹೆಚ್ಚು ಶ್ರಮಿಸಬೇಕಾಯಿತು. ಆದರೂ ಕ್ರಿ.ಶ. ೯೭೭ರ ವೇಳೆಗೆ ಗಂಗ ಮನೆತನದ ಈ ಮಾಂಡಲಿಕರನ್ನು ತೈಲಪನು ಸೋಲಿಸಿ, ಸಿಂಹಾಸನವನ್ನು ಭದ್ರಪಡಿಸಿಕೊಂಡನು.

ಈ ವೇಳೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿಯೇ ಹಲವು ಪ್ರಮುಖವಾದ ಬದಲಾವಣೆಗಳುಂಟಾದುವು. ಮುಮ್ಮಡಿ ಕೃಷ್ಣನು ಗತಿಸಿದ ಕೂಡಲೇ ಅವನು ಆಕ್ರಮಿಸಿದ್ದ ತೊಂಡೈ ಮಂಡಲ ಪ್ರದೇಶಗಳು ಪುನಃ ಚೋಳರ ವಶವಾದವು. ಮೊದಲು ಸುಂದರಚೋಳ ಇಮ್ಮಡಿ ಪರಾಂತಕನು, ನಂತರ ಉತ್ತಮ ಚೋಳನು ಆ ಭಾಗಗಳನ್ನು ಸ್ವಾಧೀನಪಡಿಸಿಕೊಂಡರು. ಕ್ರಿ.ಶ. ೯೮೫ರಲ್ಲಿ ಚೋಳರಲ್ಲಿ ಖ್ಯಾತಿವೆತ್ತ ರಾಜರಾಜನು ಪಟ್ಟಕ್ಕೆಬಂದನು. ಈತನು ರಾಜ್ಯವಿಸ್ತರಣಾಕಾಂಕ್ಷಿಯಾಗಿದ್ದು ಕ್ರಮೇಣ ಗಂಗವಾಡಿಯನ್ನು ಸಹ ಆಕ್ರಮಿಸಿದನು. ನೊಳಂಬವಾಡಿಯನ್ನು ವಶಪಡಿಸಿಕೊಳ್ಳಲು ಉದ್ಯುಕ್ತನಾದನು. ಹೀಗೆ ರಾಜ್ಯದ ಉತ್ತರ ಹಾಗೂ ಪಶ್ಚಿಮ ಭಾಗಗಳನ್ನು ಗೆಲ್ಲಲು ಚೋಳರ ಅರಸನು ಹೊರಟಾಗಲೇ ತೈಲಪನು ಸಹ ಗಂಗರ ವಿರೋಧವನ್ನು ಹತ್ತಿಕ್ಕಲು ದಕ್ಷಿಣದ ಕಡೆ ನುಗ್ಗಿದನು. ಇದರ ಪರಿಣಾಮ

ವಾಗಿ ಚಾಲುಕ್ಯರೂ ಚೋಳರೂ ಕದನರಂಗದಲ್ಲಿ ಎದುರಾದರು. ಕ್ರಿ.ಶ. ೯೯೨ರ
ಅಹವಮಲ್ಲನು ಚೋಳ ಅರಸನನ್ನು ಸೋಲಿಸಿ, ಅವನಿಂದ ೧೫೦ ಆನೆಗಳನ್ನು ಕಸಿ
ಕೊಂಡನು.

ಪರಮಾರವಂಶದ ಸೀಯಕ ಹರ್ಷನ ಉತ್ತರಾಧಿಕಾರಿ ಮುಂಜ. ಈತನು ತೈಲನನ್ನು
೧೬ ಬಾರಿ ಸೋಲಿಸಿದನೆಂದು ಮೇರುತುಂಗನು ತನ್ನ 'ಪ್ರಬಂಧಚಿಂತಾಮಣಿ'ಯಲ್ಲಿ ಹೇ
ದ್ದಾನೆ. ಆದರೆ ಕೊನೆಯಲ್ಲಿ ಮುಂಜನು ತೈಲನಿಂದ ಸೋಲಿಸಲ್ಪಟ್ಟು ಸೆರೆಸಿಕ್ಕಿ ಬಹು
ಸೆರೆಮನೆಯಲ್ಲಿಯೇ ಅಸುವನ್ನೂ ನೀಗಿದನು. ಇದಕ್ಕೆ ಇತಿಹಾಸದ ಸಾಕ್ಷ್ಯವಿದೆ. ಇದರಲ್ಲಿ
ಸಹ ಯುವರಾಜನಾದ ಸತ್ಯಾಶ್ರಯನು ಪ್ರಮುಖ ಪಾತ್ರವನ್ನು ವಹಿಸಿದನು.

೨೪ ವರ್ಷಗಳ ಕಾಲ ಆಳಿದ ತೈಲಪನು ಕ್ರಿ.ಶ. ೯೯೭ರಲ್ಲಿ ಮರಣಹೊಂದಿದನು
ಗದಗಿನಲ್ಲಿರುವ ಆರನೆಯ ವಿಕ್ರಮಾದಿತ್ಯನ ಶಾಸನ ಈತನ ಸಾಧನೆಗಳನ್ನು ಕ್ರೋಢೀಕ
ಹೀಗೆ ಹೇಳಿದೆ :

ಮೊದಲೊಳ್ ಕೀರ್ತಿಗೆ ರಟ್ಟವರ್ಗಲಘುವನದಟಿಂ ಮುಂಜನಂ ಕೊಂದು ದೋರ್ಗ
ರ್ವದವುರ್ಬಿಂ ಯುದ್ಧದೊಳ್ ಪಂಚಲನ ತಲೆಯುಮಂ ಕೊಂಡು ಚಾಳುಕ್ಯರಾಜ್ಯ
ಸ್ಪದಮಂ ಕೈಕೊಂಡು ನಿಃಕಂಟಕಮೆನಿಸಿದನೇಕಾಂಗದಿಂ ಶ್ರೀಮದಾಬ್ದಂ
ಮೊದಲಾಗಿರ್ಪತ್ತನಾಲ್ಕುಂ ಬರಿಸಮಖಿಳಭೂಚಕ್ರಮಂ ತೈಲಭೂಪಂ

ತೈಲಪನ ಪತ್ನಿ ಜಾಕವ್ವೆ ರಾಷ್ಟ್ರಕೂಟ ಮನೆತನಕ್ಕೆ ಸೇರಿದ ಬಮ್ಮಹನೆಂಬುವನ ಮಗಳ
ಸತ್ಯಾಶ್ರಯ ಮತ್ತು ದಶವರ್ಮ ಆತನ ಇಬ್ಬರು ಮಕ್ಕಳು.

ಇರಿವಬೆಡಂಗ ಸತ್ಯಾಶ್ರಯ : ಹಿರಿಯನಾದ ಇರಿವಬೆಡಂಗ ಸತ್ಯಾಶ್ರಯನ ಕಾಲದ
ಚೋಳರೊಡನೆ ಕದನಗಳು ಮುಂದುವರಿದವು. ರಾಜರಾಜನೂ ನಂತರ ರಾಜೇಂ
ಚೋಳನೂ ಸತ್ಯಾಶ್ರಯನ ರಾಜ್ಯದಮೇಲೆ ನುಗ್ಗಿದರು. ಹೊಟ್ಟೂರಿನ ಕ್ರಿ.ಶ. ೧೦೦೭-೦
ನೆಯ ವರ್ಷದ ಶಾಸನದಲ್ಲಿ ಚೋಳರು ಬಿಜಾಪುರ ಜಿಲ್ಲೆಯ ದೋಣೂರು ವರೆಗೆ ನುಗ್ಗಿ
ರೆಂದೂ ಅವರ ರಾಜನಾದ ನೂರ್ಮಡಿ ಚೋಳ (ರಾಜೇಂದ್ರ)ನು ಒಂಬತ್ತು ಲಕ್ಷ ಸೈ
ದೊಂದಿಗೆ ಬಂದು ದೇಶವೆಲ್ಲವನ್ನೂ ಸೂರೆಗೊಂಡು ಸ್ತ್ರೀವಧೆ ಬಾಲವಧೆ, ಬ್ರಾಹ್ಮಣ
ಗಳನ್ನು ಮಾಡಿದನೆಂದೂ ಮುಂತಾಗಿ ಹೇಳುತ್ತದೆ. ಆದರೆ ಇಂತಹ ರಾಜೇಂದ್ರಚೋಳನ
ಸತ್ಯಾಶ್ರಯನು ಹೊಡೆದೋಡಿಸಿ ಅವನ ವಸ್ತುವಾಹನಗಳನ್ನು ವಶಪಡಿಸಿಕೊಂಡನೆಂ
ಅದೇ ಶಾಸನ ಹೇಳುತ್ತದೆ. ಇಬ್ಬರ ನಡುವೆ ನಡೆದ ಕದನಗಳಲ್ಲಿ ಚಾಲುಕ್ಯ ಯುವರಾಜ ದ
ವರ್ಮನು ಅಸುವನ್ನು ನೀಗಿದನು. ರಾಜರಾಜನು ಚಾಲುಕ್ಯ ರಾಜ್ಯದಿಂದ ಒಯ್ದ ಧನವ
ತಂಜಾವೂರಿನ ದೇವಾಲಯಕ್ಕೆ ಇತ್ತನು. ರನ್ನನ ಮಿತ್ರನೂ ದಂಡನಾಯಕನಾಗಿದ್ದ ಕ
ಸಹ ಈ ಸಂದರ್ಭದಲ್ಲಿ ಒಮ್ಮೆ ಸೆರೆಸಿಕ್ಕಿದ್ದನು. ಇದರ ಪರಿಣಾಮವಾಗಿ ರಾಜ್ಯದ ದಕ್ಷಿ
ಕ್ಕಿದ್ದ, ಚಾಲುಕ್ಯರ ಅಧೀನಕ್ಕೆ ಇನ್ನೂ ಸೇರಿರದಿದ್ದ ಗಂಗವಾಡಿ ಮತ್ತು ನೊಳಂಬವಾಡಿ
ದಕ್ಷಿಣ ಭಾಗಗಳು ಚೋಳರ ವಶವಾದವು. ಆದರೆ ಚಾಲುಕ್ಯರ ಬಲ ಮಾತ್ರ ಕುಗ್ಗಲಿ

ಕೊಂಕಣದಲ್ಲಿ ಮಾಂಡಲಿಕನಾಗಿ, ಇನ್ನೂ ಸ್ವತಂತ್ರನಾಗಿ ಮೆರೆಯುತ್ತಿದ್ದ ಶಿಲಾ
ರ ಅಪರಾಜಿತನನ್ನು ಸೋಲಿಸಿ ಆತನ ರಾಜಧಾನಿಯನ್ನು ಸತ್ಯಾಶ್ರಯನು ಸುಟ್ಟನೆಂಬ
ಯನ್ನು ರನ್ನನು ಸಹ "ಚತುರ್ಥಯುಗದೊಳ್ಚಾಳುಕ್ಯಮಾರ್ತಂಡನಿಂದಪರಾದಿತ್ಯನ
ಂಡಲಾಂಕುನಗರಂ" ಬೆಂದುದು ಎಂದು ವಿವರಿಸಿದ್ದಾನೆ. ಪರಮಾರ ಮುಂಜನನ್ನು
ಯುವರಾಜನಾಗಿದ್ದಾಗಲೇ ಸೋಲಿಸಿದ ಚಾಲುಕ್ಯ ಅರಸನು ನಂತರ ಗುಜರಾತಿನ ಚಾಲುಕ್ಯ
ಮೂಲರಾಜನ ವಿರುದ್ಧ ಸಹ ದಂಡೆತ್ತಿದ್ದಂತೆ ತೋರುತ್ತದೆ. ದಕ್ಷಿಣ ಗುಜರಾತ್ (ಲಾಟ)
ಲ್ಲಿ ಅಧಿಕಾರದಲ್ಲಿದ್ದ ಚಾಲುಕ್ಯ ಮನೆತನದ ಬಾರಪನನ್ನು ಮೂಲರಾಜನು ಸೋಲಿಸಿದುದು
ದಕ್ಕೆ ಕಾರಣ. ಬಾರಪನ ಸ್ಥಾನದಲ್ಲಿ ಆತನ ಮಗನಾದ ಗೊಗ್ಗಿರಾಜನನ್ನು ನಿಲ್ಲಿಸುವುದ
ಲ್ಲಿ ಈತನು ಯಶಸ್ವಿಯಾದನು.

ಇರಿವಬೆಡಂಗ, ಅಕಳಂಕಚರಿತ್ರ, ಸಾಹಸಭೀಮ ಇತ್ಯಾದಿ ಬಿರುದಾಂಕಿತನಾಗಿದ್ದ
ತನು ಕವಿ ರನ್ನನ ಆಶ್ರಯದಾತನು. ಭಾರತದ ಕಥೆಯನ್ನಾಧರಿಸಿ ಈತನ ಕಾವ್ಯ ರಚಿತ
ಗಿದ್ದರೂ ಆಶ್ರಯದಾತನ ಸಾಧನೆಗಳನ್ನೂ ಇದರಲ್ಲಿ ಅನ್ವಯಿಸಿ ಹೇಳಿದೆ. ಕವಿಯೇ
ಳುವಂತೆ "....ಎನಿಸಿದ ಸತ್ಯಾಶ್ರಯದೇವನೆ ಪೃಥ್ವೀವಲ್ಲಭಂ ಕಥಾನಾಯಕನಾಗಸಿಲ
ನೊಳ್ ಪೋಲಿಸಿ ಪೇಳ್ದನೀ ಗದಾಯುದ್ಧಮಂ ಮಹಾಕವಿ ರನ್ನಂ."

ಸತ್ಯಾಶ್ರಯನಿಗೆ ಮಹಾದೇವಿ ಮತ್ತು ಪಂಪಾದೇವಿ ಎಂಬವರು ಪುತ್ರಿಯರು.
ರಿಯಳನ್ನು ನೊಳಂಬಕುಲದ ಘಟಿಯಂಕಕಾರ ಇರಿವನೊಳಂಬರಾಜನಿಗೂ ಕಿರಿಯ
ನ್ನು ಕುಂದಮರಸನಿಗೂ ಮದುವೆ ಮಾಡಿಕೊಡಲಾಗಿತ್ತು. ಕುಂದಮರಸನು ಈತನ
ತನದ ಅರಸರ ವಿಧೇಯನಾದ ಅಧಿಕಾರಿಯಾಗಿ ಬನವಾಸಿ ೧೨೦೦೦ ಮತ್ತು ಇತರ
ಪ್ರಾಂತಗಳನ್ನು ಆಳುತ್ತಿದ್ದನು. ಸತ್ಯಾಶ್ರಯನಿಗೆ ಗಂಡುಮಕ್ಕಳಿಲ್ಲದ ಕಾರಣ ದಶ
ರ್ಮನ ಮಗನಾದ ವಿಕ್ರಮಾದಿತ್ಯ(IV)ನು ಕ್ರಿ.ಶ. ೧೦೦೮ರಲ್ಲಿ ಪಟ್ಟಕ್ಕೆ ಬಂದನು.
ತನು ತಂದೆಯಷ್ಟು ಪ್ರಭಾವಶಾಲಿಯಾಗಿರಲಿಲ್ಲವಾದ ಕಾರಣ ದಕ್ಷಿಣದ ಚೋಳರೂ
ತ್ತರದ ಪರಮಾರವಂಶದ ಅರಸನಾದ ಭೋಜನೂ ಇವನ ರಾಜ್ಯವನ್ನು ಮುತ್ತಿದರು.
ವ್ರಗಳನ್ನು ಕುರಿತು ಹೆಚ್ಚಿನ ವಿವರಗಳು ತಿಳಿದಿಲ್ಲ. ರಾಜ್ಯವನ್ನು ಶತ್ರುಗಳಿಂದ ಕಾಪಾಡಿ
ಳ್ಳುವುದಕ್ಕಾಗಿ ಅರಸನು ಬಹಳವಾಗಿ ಶ್ರಮಿಸಬೇಕಾಯಿತೆಂಬುದು ನಿಜ.

ವಿಕ್ರಮಾದಿತ್ಯನ ಬಳಿಕ ಕ್ರಿ.ಶ. ೧೦೧೪ರ ಅಂತ್ಯದಲ್ಲಿ ಆತನ ಅನುಜನಾದ
ಯ್ಯಣನು ಕೆಲವು ತಿಂಗಳುಗಳ ಕಾಲ ರಾಜ್ಯವಾಳಿದಂತೆ ತೋರುತ್ತದೆ. ಶಾಸನಗಳಲ್ಲಿನ
ಂಶಾವಳಿಗಳಲ್ಲಿ ಅಯ್ಯಣನು ರಾಜ್ಯವಾಳಿದುದರ ಉಲ್ಲೇಖವೇ ಇಲ್ಲದ್ದು ಈ ವಿಷಯದಲ್ಲಿ
ದೇಹಕ್ಕೆ ಎಡೆಕೊಟ್ಟಿತ್ತು. ಆದರೆ ಇತ್ತೀಚೆಗೆ ಬೆಳಕಿಗೆ ಬಂದ 'ಅಯ್ಯಣ ವಂಶಚರಿತ'
ಂಬ ಕಾವ್ಯದಿಂದ, ಆತನು ಕೆಲವು ಮಾಸಗಳು ಮಾತ್ರ ರಾಜ್ಯದ ಹೊಣೆ ಹೊತ್ತು
ತರ ರಾಜಕೀಯವನ್ನು ತೊರೆದನೆಂಬ ವಿಷಯ ತಿಳಿದಿದೆ. ಬಹುಶಃ ಇದು ವಂಶಾವಳಿ
ಲ್ಲಿ ಆತನ ಉಲ್ಲೇಖವಿಲ್ಲದಿರುವುದಕ್ಕೆ ಒಂದು ಕಾರಣವಾಗಿರಬಹುದು.

ಇಮ್ಮಡಿ ಜಯಸಿಂಹ : ಅಯ್ಯಣನ ಬಳಿಕ ಆತನ ತಮ್ಮನಾದ ಇಮ್ಮಡಿ ಜಯಸಿಂಹನು

ಪಟ್ಟಕ್ಕೆ ಬಂದನು (ಕ್ರಿ.ಶ. ೧೦೧೬). ಈತನು ಜಗದೇಕಮಲ್ಲ ಜಯಸಿಂಹನೆಂದು ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾನೆ. ಮಲ್ಲಿಕಾಮೋದನೆಂಬುದು ಈತನಿಗೆ ಪ್ರಿಯವಾದ ಬಿರುದಾಗಿತ್ತು. ಈತನ ಅಗ್ರಮಹಿಷಿ ಸುಗ್ಗಲದೇವಿ. ೧೪-೧೬ನೆಯ ಶತಮಾನಗಳ ಕನ್ನಡ ಸಾಹಿತ್ಯದಲ್ಲಿ ಈಕೆ ಕಾಣಿಸಿಕೊಂಡಿದ್ದಾಳೆ. ದೇವಲದೇವಿ ಮತ್ತು ಲಕ್ಷ್ಮೀದೇವಿ ಈತನ ಇನ್ನಿಬ್ಬರು ಪತ್ನಿಯರು. ಸೋಮಲದೇವಿ ಹಾಗೂ ಅವ್ವಲ್ಲದೇವಿ ಇವನ ಹೆಣ್ಣು ಮಕ್ಕಳು. ಅವ್ವಲ್ಲದೇವಿಯನ್ನು ಸೇಉಣಮನೆತನದ ಭಿಲ್ಲಮನು ಮದುವೆಯಾಗಿದ್ದನು. ಸೋಮೇಶ್ವರ ಹಾಗೂ ಜಯಸಿಂಹದೇವ (III) ಇವನ ಇಬ್ಬರು ಗಂಡುಮಕ್ಕಳು. ಈ ಜಯಸಿಂಹದೇವನನ್ನು ಮೋರಿಂಗೇರಿಯ ಶಾಸನವೊಂದರಲ್ಲಿ ಹೆಸರಿಸಿದೆಯಾದರೂ ಹೆಚ್ಚಿನ ಆಧಾರಗಳಿಲ್ಲದ ಕಾರಣ ಈಯಂಶವನ್ನು ಈವರೆಗೆ ಕಡೆಗಣಿಸಲಾಗಿತ್ತು. ಕೀಳಾರಟ್ಟಿಯಲ್ಲಿ ಈಚೆಗೆ ದೊರೆತ ಮತ್ತೊಂದು ಶಾಸನವು ಈ ಹೆಸರಿನ ಮಗನೊಬ್ಬ ಜಯಸಿಂಹನಿಗೆ ಇದ್ದನೆಂಬುವನ್ನು ದೃಢಪಡಿಸಿದೆ.[15]

ಜಯಸಿಂಹನು ರಾಜ್ಯವಾಳತೊಡಗಿದಂದಿನಿಂದ ರಾಜ್ಯಕ್ಕೆ ಸೂಕ್ತವಾದ ರಾಜಧಾನಿಯೊಂದನ್ನು ಆರಿಸುವ ಕೆಲಸವೂ ಆರಂಭವಾಯಿತೆನ್ನಬಹುದು. ಈತನು ಪಟ್ಟಕ್ಕೆ ಬಂದ ತರುಣದಲ್ಲಿಯೇ ಚಾಲುಕ್ಯಚೋಳರ ನಡುವಣ ಕದನಗಳಲ್ಲಿ ಒಮ್ಮೆ ರಾಜಧಾನಿಯಾಗಿದ್ದ ಮಾನ್ಯಖೇಟ ಶತ್ರುಗಳ ವಶಕ್ಕೆ ಸಿಕ್ಕು ಅವರು ಅದನ್ನು ನಾಶಗೊಳಿಸಿದುದು ಇದಕ್ಕೆ ಪ್ರಬಲವಾದ ಕಾರಣ. ಇದರನಂತರ ಏತಗಿರಿ (ಈಗಿನ ಯಾದ್ಗೀರ್), ಪೊಟ್ಟಳಕೆರೆ ಆಂಧ್ರಪ್ರದೇಶದ (ಈಗಿನ ಪಟನ್‌ಚೆರು ಅಥವಾ ಪೊಟ್ಲಚೆರುವು) ಮತ್ತು ಕೊಳ್ಳಿಪಾಕೆ (ಹೈದರಾಬಾದಿಗೆ ೪೫ ಮೈಲಿ ಅಂತರದಲ್ಲಿರುವ ಈಗಿನ ಕೊಲನುಪಾಕ) ಇವು ಕ್ರಮವಾಗಿ ಜಯಸಿಂಹನ ನೆಲೆವೀಡುಗಳಾಗಿದ್ದುವು. ಕಲ್ಯಾಣವನ್ನು ರಾಜಧಾನಿಯಾಗಿ ಆರಿಸಿ, ಅದನ್ನು ಶ್ರೀಮಂತಗೊಳಿಸಿದ ಯಶಸ್ಸು ಜಯಸಿಂಹನ ಮಗನಾದ ಸೋಮೇಶ್ವರ(I)ನಿಗೆ ಸಲ್ಲಬೇಕು.

ಜಯಸಿಂಹನು ಅಧಿಕಾರಕ್ಕೆ ಬಂದಾಗ ರಾಜ್ಯದ ಎಲ್ಲ ಮೇರೆಗಳಲ್ಲಿಯೂ ಶತ್ರುಗಳು ಯುದ್ಧಸನ್ನದ್ಧರಾಗಿದ್ದರು. ಪರಮಾರ ಭೋಜನು ಮುಂಜನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಉತ್ಸುಕನಾದ ಕಾರಣ, ಆತನು ಕಲಚುರಿಯ ಗಾಂಗೇಯದೇವ ಹಾಗೂ ದಕ್ಷಿಣದ ರಾಜೇಂದ್ರಚೋಳರೊಡನೆ ಕಲೆತು ಕರ್ಣಾಟಕದ ಮೇಲೆ ಎರಗಿದನೆಂದು ಶಾಸನಗಳಿಂದ ತಿಳಿದಿದೆ. ಈ ಮೂರೂ ಶತ್ರುಸೈನ್ಯಗಳನ್ನು ಜಯಸಿಂಹನು ಎದುರಿಸಬೇಕಾಯಿತು. ಈ ಘಟನೆ ಕ್ರಿ.ಶ. ೧೦೧೯ ನೆಯ ಬಳ್ಳಿಗಾವೆ ಶಾಸನದಲ್ಲಿ ಉಕ್ತವಾಗಿರುವುದರಿಂದ ಇವಕ್ಕೂ ಮೊದಲೇ ಶತ್ರುಗಳು ರಾಜ್ಯದ ಮೇಲೆ ದಾಳಿಮಾಡಿರಬೇಕು. ಈ ಯುದ್ಧ ಗೌತಮಗಂಗಾ ಎಂದರೆ ಗೋದಾವರೀ ತೀರದಲ್ಲಿ ನಡೆಯಿತು. ಶತ್ರುಗಳು ಆರಂಭದಲ್ಲಿ ಮೇಲುಗೈಪಡೆದಿದ್ದರು. ಭೋಜನು ಕೊಂಕಣವನ್ನು ಆಕ್ರಮಿಸಿದನು. ರಾಜೇಂದ್ರಚೋಳನು ಚಾಲುಕ್ಯರಾಜಧಾನಿಯನ್ನು ಮುತ್ತಿ ಸುಟ್ಟನು. ಆದರೆ ಕೂಡಲೇ ಚೇತರಿಸಿಕೊಂಡ ಜಯಸಿಂಹನು ಭೋಜನನ್ನು ಸೋಲಿಸಿ ಹಿಂದಕ್ಕೆ ಅಟ್ಟಿದನು. ಕೊಂಕಣ

ವನ್ನು ಪುನಃ ಆಕ್ರಮಿಸಿ ಸಪ್ತ ಕೊಂಕಣಾಧೀಶ್ವರರ ಸಂಪತ್ತನ್ನು ಸೂರೆಗೊಂಡನು. ಸೇಉಣರ ಭಿಲ್ಲಮನನ್ನು ಸೋಲಿಸಿದ ಬಳಿಕ ಆತನಿಗೆ ತನ್ನ ಮಗಳಾದ ಅವ್ವಲ್ಲದೇವಿಯನ್ನು ವಿವಾಹಮಾಡಿಕೊಟ್ಟು ಅವನು ವಿಧೇಯ ಸಾಮಂತನಾಗುವಂತೆ ಮಾಡಿದನು.

ಅಧಿಕಾರಕ್ಕೆ ಬಂದ ಕೂಡಲೇ ರಾಜ್ಯಕ್ಕೊದಗಿದ ವಿಪತ್ತನ್ನು ಹೀಗೆ ಪರಿಹರಿಸಿಕೊಂಡ ಜಯಸಿಂಹನಿಗೆ, ಉತ್ತರದಲ್ಲಿ ಆಳಿದ ಆತನ ಸಮಕಾಲೀನ ಅರಸರಿಂದ ಹೆಚ್ಚಿನ ತೊಂದರೆ ಉಂಟಾಗಲಿಲ್ಲ. ಆದರೆ ದಕ್ಷಿಣದಲ್ಲಿ ರಾಜೇಂದ್ರಚೋಳನು ಮಾತ್ರ ತನ್ನ ಆಕ್ರಮಣಶೀಲತೆಯನ್ನು ಬಿಡಲಿಲ್ಲ.

ಈ ವೇಳೆಗೆ ವೆಂಗಿಮಂಡಲದಲ್ಲಿ ವಿಮಲಾದಿತ್ಯನು ಆಳುತ್ತಿದ್ದನು. ಈತನು ಚೋಳರ ರಾಜರಾಜನ ಮಗಳಾದ ಕುಂದವ್ವೆಯನ್ನು ಲಗ್ನವಾಗಿದ್ದನು. ಇವರಿಗೆ ಜನಿಸಿದವನು ರಾಜರಾಜ. ವಿಮಲಾದಿತ್ಯನ ಬಳಿಕ ಈ ರಾಜರಾಜನು ರಾಜ್ಯವನ್ನಾಳಲು ಯತ್ನಿಸಿದನಾದರೂ ಈತನನ್ನು ಈತನ ಮಲಸೋದರನೂ ವಿಮಲಾದಿತ್ಯನ ಬೇರೊಬ್ಬ ಪತ್ನಿಯಲ್ಲಿ ಜನಿಸಿದವನೂ ಆದ ವಿಜಯಾದಿತ್ಯನು ವಿರೋಧಿಸಿದನು. ಸು. ಕ್ರಿ.ಶ. ೧೦೧೮-೧೯ರಲ್ಲಿ ರಾಜರಾಜನು ಅಧಿಕಾರಕ್ಕೆ ಬಂದನು. ಸುಮಾರು ೩ ವರ್ಷಗಳ ಕಾಲ ಆತನ ಪಟ್ಟಾಭಿಷೇಕವನ್ನು ಮುಂದೂಡಬೇಕಾಯಿತು. ಇದಕ್ಕೆ ವಿಜಯಾದಿತ್ಯನೇ ಕಾರಣ. ಚಾಲುಕ್ಯ ಜಯಸಿಂಹನ ನೆರವನ್ನು ಪಡೆದು ಈತನು ರಾಜರಾಜನನ್ನು ಎದುರಿಸಿದನು. ಸಹಜವಾಗಿಯೇ ಚೋಳರ ರಾಜೇಂದ್ರನು ರಾಜರಾಜನಿಗೆ ಬೆಂಬಲವಿತ್ತು ತನ್ನ ಸೇನಾನಿಯಾದ ಅರೈಯನ್ ರಾಜರಾಜನ್ ವಿಕ್ರಮಚೋಳಚೋಳಿಯವರಯನನ್ನು ರಾಜರಾಜನ ಸಹಾಯಕ್ಕೆ ಕಳುಹಿಸಿದನು. ಆಗ (ಕ್ರಿ.ಶ. ೧೦೨೦) ನಡೆದ ತೀವ್ರವಾದ ಕದನದಲ್ಲಿ ಚಾಲುಕ್ಯನು ಸೋತನು. ಚೋಳರ ಶಾಸನಗಳು ಜಯಸಿಂಹನು ಮುಯಂಗಿ (ಮುಶಂಗಿ) ಯಿಂದ ಓಡಿದನೆಂದೂ ರಾಜೇಂದ್ರಚೋಳನು ರಟ್ಟಪಾಡಿಯನ್ನು ಗೆದ್ದನೆಂದೂ ಹೇಳಿವೆ. ಈ ಮುಯಂಗಿ (ಮುಶಂಗಿ)ಯು ಈಗಿನ ರಾಯಚೂರು ಜಿಲ್ಲೆಯ ಮಾಸ್ಕಿ. ರಾಜೇಂದ್ರಚೋಳನು ರಟ್ಟಪಾಡಿಯನ್ನು ವಶಪಡಿಸಿಕೊಂಡನೆಂಬುದು ಉತ್ಪ್ರೇಕ್ಷೆಯಾದರೂ ಈ ಕದನದಲ್ಲಿ ಆತನು ಗೆದ್ದನೆಂಬುದು ವಾಸ್ತವವೆಂದು ತೋರುತ್ತದೆ. ಜಯಸಿಂಹನನ್ನು ಸೋಲಿಸಿದ ರಾಜೇಂದ್ರನು ಬಹುಶಃ ಆತನಿಗೆ ನೆರವಾಗಿ ಬಂದಿದ್ದ ಕಳಿಂಗದೇಶದ ಸೈನ್ಯವನ್ನು ಬೆನ್ನಟ್ಟಿ ಗಂಗೆಯವರೆಗೂ ತನ್ನ ದಿಗ್ವಿಜಯವನ್ನು ನಡಸಿದನು.

ಆದರೆ ಈ ವಿಜಯ ಕ್ಷಣಿಕವಾದುದಾಗಿತ್ತು. ಶೀಘ್ರದಲ್ಲಿ ಜಯಸಿಂಹನು ಚೇತರಿಸಿಕೊಂಡು ಚೋಳರನ್ನು ತನ್ನ ರಾಜ್ಯದಿಂದ ಹೊರಗೋಡಿಸಿದನು. ತನ್ನ ಆಶ್ರಯವನ್ನು ಬಯಸಿ ಬಂದಿದ್ದ ವೆಂಗಿಯ ವಿಜಯಾದಿತ್ಯನನ್ನು ಮಾಸ್ಕಿಯ ಸುತ್ತಲಿನ ಪ್ರದೇಶದ ಪ್ರಾಂತಾಧಿಕಾರಿಯಾಗಿ ನೇಮಿಸಿದನು. ಆದರೆ ವಿಜಯಾದಿತ್ಯನನ್ನು ವೆಂಗಿಯ ಸಿಂಹಾಸನದ ಮೇಲೆ ಕುಳ್ಳಿರಿಸುವ ಯತ್ನ ನಡೆದೇ ಇತ್ತು. ಕೆಲವರ್ಷಗಳ ಬಳಿಕ ಜಯಸಿಂಹನ ಈ ಪ್ರಯತ್ನಕ್ಕೆ ಯಶಸ್ಸು ಲಭಿಸಿತು. ಕ್ರಿ.ಶ. ೧೦೩೧ರ ಸುಮಾರಿಗೆ ರಾಜರಾಜನನ್ನು

ಹೊರಮೂಡಿದ ವಿಜಯಾದಿತ್ಯನು ವೆಂಗಿಯ ಅರಸನಾದನು. ಇದಕ್ಕಾಗಿ ಇನ್ನೊಮ್ಮೆ ಜಯಸಿಂಹನು ಚೋಳರ ವಿರುದ್ಧ ಹೋರಾಡಬೇಕಾಯಿತು. ಆದರೂ ರಾಜರಾಜನು ಚೋಳರ ಸಹಾಯದಿಂದ ವಿಜಯಾದಿತ್ಯನನ್ನು ದೂಡಿ ರಾಜ್ಯವನ್ನು ಮರಳಿ ಪಡೆದನು.

ಈ ಎಲ್ಲ ಕದನಗಳಲ್ಲಿ ಜಯಸಿಂಹನಿಗೆ ಆತನ ಅಧಿಕಾರಿಗಳೂ ಸೇನಾನಿಗಳೂ ಆದ ಕುಂದಮರಸ ಮತ್ತು ವಾವಣರಸರು ಬಹಳಮಟ್ಟಿನ ಸಹಾಯವನ್ನು ನೀಡಿದರು. ವಾವಣರಸನನ್ನು ಶಾಸನಗಳು ಮಹಾಪ್ರಚಂಡದಂಡನಾಯಕ, ಕನ್ನಡ ಸಂಧಿವಿಗ್ರಹಿ, ಕೊಂಕಣಧೂಮಕೇತು ಮುಂತಾಗಿ ವರ್ಣಿಸಿವೆ. ಈತ ದಂಡನಾಯಕ ಕೇಶಿಯ ಮಗನು. ಬೆಳ್ವೊಲ ಮತ್ತು ಪುರಿಗೆಱೆ ಪ್ರಾಂತಗಳು ಈತನ ಆಡಳಿತಕ್ಕೊಳಪಟ್ಟಿದ್ದವು. ಈತನ ಪತ್ನಿ ರೇವಕಬ್ಬರಸಿ. ಈಕೆಯೂ ಆಡಳಿತದಲ್ಲಿ ಆಸಕ್ತಿವಹಿಸಿದ್ದಳು.

ಅರಸನ ಇನ್ನೊಬ್ಬ ಪ್ರಾಂತಾಧಿಕಾರಿ ಕುಂದಮರಸ. ಈತ ಇಱಿವಬೆಡಂಗನ ಅಳಿಯನೆಂದು ಮೇಲೆ ಹೇಳಿದೆ. ಈತನು ಬನವಾಸಿ ಪನ್ನಿಚ್ಛಾಸಿರ, ಸಾಂತಳಿಗೆ ಸಾಸಿರ, ಹೈವೆ ಐವತ್ತು ಇತ್ಯಾದಿ ಪ್ರಾಂತಗಳನ್ನಾಳುತ್ತಿದ್ದನು. ಅಕ್ಕಾದೇವಿಯು ಜಯಸಿಂಹನ ಸೋದರಿ. ವೈರಿನೃಪಭೈರವಿ, ಏಕವಾಕ್ಯೆ-ಗುಣದ ಬೆಡಂಗಿ ಎಂದು ವರ್ಣಿಸಲ್ಪಟ್ಟಿರುವ ಈಕೆ ಕಿಸುಕಾಡು ಎಪ್ಪತ್ತು ಪ್ರಾಂತವನ್ನು ಆಳುತ್ತಿದ್ದಳು. ಈಕೆಯ ಪತಿ ಕದಂಬ ಕುಲದ ಮಯೂರವರ್ಮ. ಈತನು ಹಾನುಂಗಲ್ಲು ೫೦೦ ವಿಭಾಗದ ಅಧಿಪತಿಯಾಗಿದ್ದನು.

**ಸೋಮೇಶ್ವರ I**: ಜಯಸಿಂಹನು ಕ್ರಿ.ಶ. ೧೦೪೩ರ ವರೆಗೆ ಆಳಿದ ಬಳಿಕ ಅವನ ಹಿರಿಯ ಮಗನಾದ ಸೋಮೇಶ್ವರನು ಪಟ್ಟಕ್ಕೆ ಬಂದನು. ಅಹವಮಲ್ಲ ಮತ್ತು ತ್ರೈಲೋಕ್ಯಮಲ್ಲ ಎಂಬುವು ಈತನ ಬಿರುದುಗಳು. ಈತನು ಆಳಿದ ೪೫ ವರ್ಷಗಳ ಕಾಲವೂ ದಕ್ಷಿಣ ಭಾರತ ಒಂದು ವಿಶಾಲವಾದ ರಣರಂಗವಾಗಿ ಪರಿವರ್ತಿತವಾಯಿತು. ಕರ್ಣಾಟಕದ ಹಾಗೂ ತಮಿಳುನಾಡಿನ ಎರಡು ಪ್ರಮುಖ ಅರಸು ಮನೆತನಗಳ ನಡುವೆ ಈ ವರ್ಷಗಳಲ್ಲಿ ಹಿರಿಮೆಗಾಗಿ ಮೇಲಾಟ ನಡೆಯಿತು.

ಚೋಳರ ರಾಜೇಂದ್ರನು ೧೦೪೪ರಲ್ಲಿ ಮೃತಿಹೊಂದಿದನು. ನಂತರ ೧೦೧೮ರಿಂದಲೇ ಯುವರಾಜ ಪದವಿಯಲ್ಲಿದ್ದು ಆಡಳಿತದಲ್ಲಿ ನುರಿತಿದ್ದ ರಾಜಾಧಿರಾಜನು ೧೦ ವರ್ಷಗಳ ಕಾಲ, ಆ ಬಳಿಕ ಆತನ ಕಿರಿಯ ಸಹೋದರನಾದ ಇಮ್ಮಡಿ ರಾಜೇಂದ್ರನು ೧೦೬೪ರ ವರೆಗೆ, ಅವನ ನಂತರ ಇನ್ನೊಬ್ಬ ಸೋದರನಾದ ವೀರರಾಜೇಂದ್ರನು ೧೦೬೭ರ ವರೆಗೆ ಕ್ರಮವಾಗಿ ಆಳಿದರು. ಈ ಮೂವರೂ ಚಾಲುಕ್ಯ ಸೋಮೇಶ್ವರನ ಸಮಕಾಲೀನರು.

ರಾಜಾಧಿರಾಜನಿಗೂ ಸೋಮೇಶ್ವರನಿಗೂ ನಡುವೆ ೫ ಬಾರಿ ಘರ್ಷಣೆಗಳುಂಟಾದುವೆಂದು ಕೆಲವರು ಸೂಚಿಸಿದ್ದಾರೆ. ಮೊದಲನೆಯ ಘರ್ಷಣೆಯ ಸಂದರ್ಭದಲ್ಲಿ ಇಬ್ಬರೂ ಇನ್ನೂ ಯುವರಾಜರಾಗಿದ್ದರು. ಎರಡನೆಯ ಕದನ ನಡೆದಾಗ ಸೋಮೇಶ್ವರನು ಅರಸು ಪದವಿಗೇರಿದ್ದನು. ಈ ಕದನಗಳೆಲ್ಲಾ ವಿಶೇಷವಾಗಿ ವೆಂಗಿ ಪ್ರದೇಶದ ಆಕ್ರಮಣಕ್ಕಾಗಿ ನಡೆದವು. ಆ ಕಾರಣದಿಂದಲೇ ಇವರ ಸೈನ್ಯಗಳು ಒಮ್ಮೆ ವೆಂಗಿಯಲ್ಲಿ, ಇನ್ನೊಮ್ಮೆ ಕರ್ಣಾಟಕದಲ್ಲಿ ಎದುರಿಸುತ್ತಿದ್ದವು. ವೆಂಗಿಯ ವಿಜಯಾದಿತ್ಯನು ರಾಜ್ಯವನ್ನು ಪಡೆಯಲು

ಈಗ ಸೋಮೇಶ್ವರನಿಗೆ ಶರಣಾದನು. ಈತನ ಪರವಾಗಿ ಸೋಮೇಶ್ವರನು ವೆಂಗಿಯ ರಾಜಕೀಯದಲ್ಲಿ ಪಾಲ್ಗೊಂಡು, ತತ್ಫಲವಾಗಿ ಚೋಳರೊಡನೆ ಹಲವಾರು ಬಾರಿ ಕಾದ ಬೇಕಾಯಿತು.

ಪಟ್ಟಾಭಿಷಿಕ್ತನಾಗುತ್ತಿದ್ದಂತೆಯೇ, ಕ್ರಿ.ಶ. ೧೦೪೩ರಲ್ಲಿ ಸೋಮೇಶ್ವರನು ಚೋಳ ರನ್ನು ದನ್ನಾಡ (ಆಂಧ್ರಪ್ರದೇಶದ ಧಾನ್ಯಕಟಕ ಅಥವಾ ಈಗಿನ ಅಮರಾವತಿ)ದಲ್ಲಿ ಎದುರಿಸಬೇಕಾಯಿತು. ತಮಿಳು ಶಾಸನಗಳು ಈ ಕದನದಲ್ಲಿ ವಿಕ್ಕಿ, ವಿಜಯಾದಿತ್ಯ ಮುಂತಾದವರು ಪಲಾಯನ ಮಾಡಿದರೆಂದೂ ಚೋಳರು ಕೊಳ್ಳಿಪಾಕೆಯನ್ನು ಸುಟ್ಟ ರೆಂದೂ ಹೇಳುತ್ತವೆ. ಇದು ಉತ್ಪ್ರೇಕ್ಷೆ. ಇದೇ ಕಾಲದ ಕನ್ನಡ ಶಾಸನಗಳಲ್ಲಿ ಕೊಳ್ಳಿ ಪಾಕೆಯನ್ನು ಸಿಂಗಣದೇವರಸನು ಕಾಪಾಡಿದನೆಂದು ಹೇಳಿದೆ. ೧೦೪೪ನೆಯ ವರ್ಷದ ಶಾಸನವೊಂದರಲ್ಲಿ ಸೋಮೇಶ್ವರನ ಸೇನಾನಿಯಾದ ಶೋಭನರಸನನ್ನು ವೆಂಗಿಪುರವರೇಶ್ವರ ನೆಂದು ಕರೆದಿರುವುದನ್ನು ಗಮನಿಸಿದಲ್ಲಿ, ವೆಂಗಿಯ ಕೆಲವು ಭಾಗಗಳನ್ನಾದರೂ ಚಾಲುಕ್ಯನು ಆಕ್ರಮಿಸಿದ್ದನೆಂದು ಕಂಡುಬರುತ್ತದೆ.

ಈ ಎರಡು ಬಣಗಳ ನಡುವೆ ಪುನಃ ಪೂಣ್ಡೂರು ಎಂಬಲ್ಲಿ ಇನ್ನೊಮ್ಮೆ ಕದನವಾಯಿತು. ಪರಿಣಾಮ ಶೂನ್ಯ. ಆದರೆ ಕೊಪ್ಪಂ (ಈಗಿನ ರಾಯಚೂರು ಜಿಲ್ಲೆಯಲ್ಲಿನ ಕೊಪ್ಪಳ) ಕದನದಲ್ಲಿ (ಕ್ರಿ.ಶ. ೧೦೫೪) ರಾಜಾಧಿರಾಜನು ಅಸುವನ್ನು ನೀಗಿದನು. ನಂತರದ ತಮಿಳು ಶಾಸನಗಳಲ್ಲಿ ರಾಜಾಧಿರಾಜನನ್ನು ಆನೈಮೇಲ್ ತುಞ್ಜಿಯರುಳಿನ ವಿಜಯ ರಾಜೇಂದ್ರದೇವನೆಂದು ವರ್ಣಿಸಲಾಗಿದೆ. ಸೋಮೇಶ್ವರನ ಶಾಸನಗಳಲ್ಲಿ ಈ ಘಟನೆಯ ನೇರವಾದ ಪ್ರಸ್ತಾಪವೇ ಇಲ್ಲ. ಆದರೆ ಇವನ ಮಗ ಭುವನೈಕಮಲ್ಲನ ಕ್ರಿ.ಶ. ೧೦೭೧–೭೨ನೆಯ ವರ್ಷಗಳ ಶಾಸನ ಇದನ್ನು ಕುರಿತು ಹೀಗೆ ಪ್ರಸ್ತಾಪಿಸಿದೆ :

> ಪೊಲೆಚೋಳಂ ನೆಲೆಗೆಟ್ಟು ತನ್ನ ಕುಳಧರ್ಮಾಚಾರಮಂ ಬಿಟ್ಟು ಬೆ-
> ಳ್ವಲದೇಶಕ್ಕಡಿಯಿಟ್ಟು ದೇವಗೃಹ ಸಂದೋಹಗಳಂ ಸುಟ್ಟು ಕ
> ಯ್ಕಲೆ ಪಾಪಂ ಬೆಳೆವತ್ತೆನಲ್ಕೆ ಧುರದೊಳ್ ತ್ರೈಲೋಕ್ಯಮಲ್ಲಂಗೆ ಪಂ
> ದಲೆಯಂ ಕೊಟ್ಟಸುವಂ ಬಿಸುಟ್ಟು ನಿಜವಂಶೋಚ್ಛಿತ್ತಿಯಂ ಮಾಡಿದಂ

ರಣಭೂಮಿಯಲ್ಲಿ ಆನೆಯ ಮೇಲೆ ಕುಳಿತಿದ್ದಂತೆಯೇ ಅಸುವನ್ನು ನೀಗಿಕೊಂಡವನೆನಿಸಿ ಕೊಂಡ. ಈತನನ್ನು ಕೊಂದವನೆಂದು ಸೋಮೇಶ್ವರನ ದಂಡನಾಯಕನಾದ ಮಹಾಮಂಡ ಲೇಶ್ವರ ಮಾರಪೆರ್ಮಾಳನನ್ನು ಶಾಸನಗಳು ಸೂಚಿಸುತ್ತವೆ. ಆರಂಭದಲ್ಲಿ ಹಿಮ್ಮೆಟ್ಟಿದರೂ ಸೋಮೇಶ್ವರನು ಕೊನೆಗೆ ಚೋಳರನ್ನು ಸೋಲಿಸಿ, ಅವರ ಅರಸನನ್ನು ಕೊಂದನು. ಆದರೆ ತಮ್ಮನಾದ ಜಯಸಿಂಹನು ಯುದ್ಧದಲ್ಲಿ ಹತನಾದನು.

ರಾಜಾಧಿರಾಜನ ನಂತರ ಬಂದ ಇಮ್ಮಡಿ ರಾಜೇಂದ್ರನು ಈ ಹೋರಾಟಗಳನ್ನು ಮುಂದುವರಿಸಿ ಕೊಲ್ಲಾಪುರದವರೆಗೆ ಶತ್ರುಸೇನೆಯನ್ನು ಓಡಿಸಿದನೆಂದೂ ಈತನು ಅಲ್ಲಿ ಜಯಸ್ತಂಭವೊಂದನ್ನು ನೆಡಿಸಿದನೆಂದೂ ಕೆಲವರು ಇತಿಹಾಸಕಾರರು ಅಭಿಪ್ರಾಯಪಟ್ಟಿರು ವರು. ಇದು ಸಂದೇಹಾಸ್ಪದ. ಇತ್ತೀಚೆಗೆ ದೊರೆತ ಬನ್ನಿಗೊಳದ ಶಾಸನದಿಂದ ಮುನ್ನುಗ್ಗ

ತ್ತಿದ್ದ ರಾಜೇಂದ್ರನನ್ನು ಸೋಮೇಶ್ವರನು ತಡೆದುದೇ ಅಲ್ಲದೆ ಅವನನ್ನು ಹಿಂದಕ್ಕೆ ಓಡಿಸಿದಾಗ, ರಾಜೇಂದ್ರನು ಕುಮ್ಮಟದ ಕೋಟೆಯನ್ನು ಮುತ್ತಿದನೆಂದೂ ಆದರೆ ಅಲ್ಲಿ ಅಧಿಕಾರದಲ್ಲಿದ್ದ ಹೊಯ್ಸಳ ವಿನಯಾದಿತ್ಯನ ನೆರವಿಗೆ ಸೋಮೇಶ್ವರನು ಧಾವಿಸಿ ಕೋಟೆಯನ್ನು ನಿಷ್ಕಂಟಕ ಮಾಡಿದನೆಂದೂ ತಿಳಿದಿದೆ. ಇನ್ನೊಮ್ಮೆ ಕ್ರಿ.ಶ. ೧೦೫೫ರಲ್ಲಿ ರಾಜೇಂದ್ರನನ್ನು ಸೋಮೇಶ್ವರನು ತುಂಗಭದ್ರಾನದಿಯ ತೀರದಲ್ಲಿ ಎದುರಿಸಿ ಸೋಲಿಸಿದನು. ಹೀಗೆ ಎರಡೂ ಬಣಗಳ ನಡುವೆ ಹೋರಾಟಗಳು ಎಡೆಬಿಡದೆ ನಡೆದರೂ ಯಾರಿಗೂ ಅಂತಿಮ ಯಶಸ್ಸು ದೊರಕಲಿಲ್ಲ.

ವೆಂಗಿಯಲ್ಲಿ ರಾಜರಾಜನು ೧೦೬೧ರಲ್ಲಿ ಗತಿಸಿದನು. ಕೂಡಲೇ ಸೋಮೇಶ್ವರನು ವಿಜಯಾದಿತ್ಯನ ಮಗನಾದ ಇಮ್ಮಡಿ ಶಕ್ತಿವರ್ಮನನ್ನು ಆ ರಾಜ್ಯದಲ್ಲಿ ನೆಲೆಗೊಳಿಸಲು ಯತ್ನಿಸಿದನು. ರಾಜರಾಜನ ಮಗನಾದ ರಾಜೇಂದ್ರಚೋಳನು ಪುನಃ ಚೋಳರ ಮರೆ ಹೊಗಬೇಕಾಯಿತು. ಈ ಸಂದರ್ಭದಲ್ಲಿ ಸೋಮೇಶ್ವರನು ಸ್ವಲ್ಪಮಟ್ಟಿಗೆ ಯಶಸ್ಸನ್ನು ಸಂಪಾದಿಸಿ ವೆಂಗಿಮಂಡಲದ ಹಲವಾರು ಪ್ರದೇಶಗಳನ್ನು ಆಕ್ರಮಿಸಿದನು. ಈತನ ಮಗನಾದ ಯುವರಾಜ ಇಮ್ಮಡಿ ಸೋಮೇಶ್ವರನು ವೆಂಗಿಪುರವರಾಧೀಶ್ವರನೆಂದು ತನ್ನನ್ನು ಕರೆದುಕೊಂಡಿದ್ದಾನೆ. ಬಹುಶಃ ಇಮ್ಮಡಿ ಶಕ್ತಿವರ್ಮನು ವೆಂಗಿಯ ರಾಜ್ಯವನ್ನು ಸೋಮೇಶ್ವರನಿಂದ ಪಡೆದಂತೆ ತೋರುತ್ತದೆ (ಕ್ರಿ.ಶ. ೧೦೬೧). ಇದರ ಪರಿಣಾಮವಾಗಿ ಕ್ರಿ.ಶ. ೧೦೬೪ರಲ್ಲಿ ಆಳ್ವಿಕೆಗೆ ಬಂದ ಚೋಳವೀರರಾಜೇಂದ್ರನು ಪುನಃ ಸೋಮೇಶ್ವರನನ್ನು ಕೂಡಲಸಂಗಮವೆಂಬ ಸ್ಥಳದಲ್ಲಿ ಎದುರಿಸಿದನು. ಈ ಕದನದಲ್ಲಿ ಸೋಮೇಶ್ವರನ ಇತರ ಮಕ್ಕಳಾದ ವಿಕ್ರಮಾದಿತ್ಯ, ಜಯಸಿಂಹ (IV), ಕೇಶವದಂಡನಾಯಕ, ಮಹಾಸಾಮಂತ ಕೇತರಸ ಮತ್ತು ಮಹಾಮಂಡಲೇಶ್ವರ ಮಾರರಸ ಮುಂತಾದವರು ಪಾಲ್ಗೊಂಡರು.

ಈ ಕದನಗಳ ವಿವರಗಳು ಹೇಗೇ ಇರಲಿ, ಇದರ ಫಲವಾಗಿ ವೆಂಗಿಯು ಇಬ್ಭಾಗವಾಗಿ ಚಾಲುಕ್ಯರ ಮತ್ತು ಚೋಳರ ಆಳಿಕೆಗೆ ಒಳಪಟ್ಟಿತು. ಇಮ್ಮಡಿ ಶಕ್ತಿವರ್ಮನು ಅಲ್ಪಾಯುಷಿಯಾಗಿ ಸತ್ತನು. ಆಗ ಆತನ ತಂದೆ ವಿಜಯಾದಿತ್ಯನು ಪುನಃ ರಾಜ್ಯದ ಹೊಣೆ ಹೊತ್ತನು. ಸೋಮೇಶ್ವರನ ಆಳಿಕೆಯ ಅಂತಿಮ ವರ್ಷಗಳಲ್ಲಿ ನಡೆದ ಈ ಘಟನೆಗಳ ವಿವರಗಳು ಸ್ಪಷ್ಟವಾಗಿಲ್ಲ. ಆಶ್ಚರ್ಯವೆಂದರೆ ಅದುವರೆಗೆ ವಿಜಯಾದಿತ್ಯನ ಹಕ್ಕನ್ನು ನಿರಾಕರಿಸಿದ್ದ ಚೋಳರು ಈ ಘಟ್ಟದಲ್ಲಿ ವಿಜಯಾದಿತ್ಯನ ಆಳಿಕೆಯನ್ನು ಮಾನ್ಯಮಾಡಿದರು. ಇದರಿಂದ ಯಾವ ಉದ್ದೇಶಕ್ಕಾಗಿ ಚಾಲುಕ್ಯ ಚೋಳರ ನಡುವೆ ಕದನಗಳು ಉಂಟಾದುವೋ, ಆ ಉದ್ದೇಶವೇ ಈಡೇರದೆಹೋಯಿತು. ಆದರೆ ಇದು ಅಂದಿನ ರಾಜತಂತ್ರವಾಗಿತ್ತು. ವಿಜಯಾದಿತ್ಯನು ಈ ವೇಳೆಗೆ ಮುಪ್ಪಡರಿದವನಾಗಿದ್ದುದರಿಂದಲೂ ಬಹುಶಃ ಉತ್ತರಾಧಿಕಾರಿಗಳಿಲ್ಲದಿದ್ದುದರಿಂದಲೂ ಚೋಳರು ತಾತ್ಕಾಲಿಕವಾಗಿ ಅವನ ಆಳಿಕೆಯನ್ನು ಒಪ್ಪಿದಂತೆ ತೋರುತ್ತದೆ. ಇದರ ಫಲವಾಗಿ ವಿಜಯಾದಿತ್ಯನ ಮತ್ತು ವೀರರಾಜೇಂದ್ರನ ನಡುವಣ ಬಾಂಧವ್ಯದಲ್ಲಿ ಸ್ಪಷ್ಟವಾದ ಬದಲಾವಣೆಯುಂಟಾಯಿತು. ಈ ಘಟನೆಗಳು ನಡೆಯುತ್ತಿರುವಾಗ ಸೋಮೇಶ್ವರನು ಮೃತಿಹೊಂದಿದನು. ಬಿಲ್ಹಣ ಕವಿ

ಈ ವಿಷಯವನ್ನು ಕುರಿತು ಬರೆಯುತ್ತ, ಉತ್ಕಟವಾದ ದಾಹಜ್ವರಬಾಧೆಯಿಂದ ನರಳುತ್ತಿದ್ದ ಅರಸನು ತನ್ನ ಅಂತ್ಯವನ್ನು ಮನಗಂಡು, ತುಂಗಭದ್ರೆಯಲ್ಲಿ ಜಲಸಮಾಧಿ ಹೊಂದಿದನೆಂದು ಹೇಳಿದ್ದಾನೆ. ಬಳ್ಳಿಗಾವೆಯ ಶಾಸನ ಈ ಹೇಳಿಕೆಯನ್ನು ದೃಢಪಡಿಸುತ್ತದೆ. ೧೦೬೮ನೆಯ ಮಾರ್ಚ್ ೨೯ರಂದು ಅರಸನು ಕುರುವತ್ತಿಯಲ್ಲಿ ಮರಣಹೊಂದಿದನು ಎಂದು ಆ ಶಾಸನದಿಂದ ತಿಳಿಯುವುದು.

ಆಳಿಕೆಯ ಬಹುಭಾಗವನ್ನು ಚೋಳರೊಡನೆ ಕದನಗಳಲ್ಲಿ ಕಳೆದರೂ ಸೋಮೇಶ್ವರನು ಆಗಿಂದಾಗ್ಗೆ ಇತರ ಶತ್ರುಗಳನ್ನೂ ಎದುರಿಸಬೇಕಾಗುತ್ತಿತ್ತು. ಪರಮಾರ ಭೋಜ ಅಂಥವರಲ್ಲಿ ಒಬ್ಬನು. ಇವನ ವಿರುದ್ಧ ದಂಡೆತ್ತಿ ಹೋದ ಚಾಲುಕ್ಯನು ೧೦೫೫ರಲ್ಲಿ ಧಾರಾನಗರವನ್ನು ಸುಟ್ಟು ಮಾಂಡವರ ಕೋಟೆಯನ್ನು ವಶಪಡಿಸಿಕೊಂಡನು. ಇನ್ನೊಮ್ಮೆ ಭೋಜನು ಇವನ ಮೇಲೇರಿ ಬಂದಾಗ, ಚಾಲುಕ್ಯ ಮನೆತನದ ಭೀಮ ಮತ್ತು ಕಲಚುರಿ ಕರ್ಣರೊಡಗೂಡಿ ಭೋಜನನ್ನು ಸೋಮೇಶ್ವರನು ಕದನದಲ್ಲಿ ಎದುರಿಸಿದನು. ಈ ಕದನದಲ್ಲಿ ಭೋಜನು ಹತನಾದಂತೆ ತೋರುತ್ತದೆ. ನಂತರ ಪರಮಾರ ಅರಸೊತ್ತಿಗೆಗೆ ಜಯಸಿಂಹ ಮತ್ತು ಉದಯಾದಿತ್ಯರ ನಡುವೆ ಕಲಹಗಳುಂಟಾದಾಗ ಯುವರಾಜ ವಿಕ್ರಮಾದಿತ್ಯನು ಜಯಸಿಂಹನಿಗೆ ನೆರವು ನೀಡಿದನು. ಅಂತಿಮವಾಗಿ ಉದಯಾದಿತ್ಯನದೇ ಮೇಲುಗೈ ಆಯಿತು.

ಕಲಚುರಿ ಕರ್ಣನನ್ನು ಚಕ್ರಕೋಟದ (ಈಗಿನ ಒರಿಸ್ಸಾದ ಬಸ್ತರ್ ಪ್ರದೇಶದ) ಧಾರಾವರ್ಷನನ್ನು ಸಹ ಸೋಮೇಶ್ವರನು ಯುದ್ಧದಲ್ಲಿ ಎದುರಿಸಬೇಕಾಯಿತು. ರಾಜ್ಯದೊಳಗೇ ದಂಗೆಯ ಸನ್ನಾಹ ನಡಸಿದ್ದ ಶಿಲಾಹಾರ ಮನೆತನದ ಕೊಂಕಣದ ಮುಮ್ಮುಣಿ ಮತ್ತು ಕರಹಾಡದ ಮಾರಸಿಂಹರನ್ನೂ ಸೇಉಣರ ಭಿಲ್ಲಮ (III)ನನ್ನೂ ಸೋಲಿಸಬೇಕಾಯಿತು. ಈ ವಿಜಯಗಳಲ್ಲಿ ಈತನ ಸೇನಾಧಿಪತಿಗಳೂ ಸಾಮಂತರೂ ಆಗಿದ್ದ ದಡಂನಾಯಕ ಗುಂಡಮಯ್ಯ, ಮಧುಸೂದನ, ವಾಜಿಕುಲದ ನಾಗಮಯ್ಯ, ಗೋವೆಯ ಕದಂಬ ಮನೆತನದ ಷಷ್ಠ, ಹೈಹಯ ಕುಲದ ರೇವರಸ, ಮಹಾಸಾಮಂತಾಧಿಪತಿ ನಾಗದೇವ ಮುಂತಾದವರ ಪಾತ್ರ ವಿಶಿಷ್ಟವಾದುದಾಗಿದೆ. ಅವರ ಸಹಾಯವಿತ್ತಂದೇ ಅರಸನು ರಾಜ್ಯವನ್ನು ಆಪತ್ತುಗಳ ಪರಂಪರೆಯಿಂದ ಕಾಪಾಡಿ, ರಾಜ್ಯದಲ್ಲಿ ಸುಖಸಮೃದ್ಧಿಗಳು ನೆಲಸುವಂತೆ ಮಾಡಲು ಶಕ್ತನಾದನು. ಕಲ್ಯಾಣ ಇವನ ಕಾಲದಲ್ಲಿ ಸು. ೧೦೪೭ರ ವೇಳೆಗೆ ರಾಜಧಾನಿಯಾಯಿತು. ಅದನ್ನು ವೃದ್ಧಿಗೆ ತಂದ ಕೀರ್ತಿ ಈತನಿಗೆ ಸಲ್ಲುತ್ತದೆ.

ಈತನಿಗೆ ಬಾಚಲದೇವಿ, ಚಂದಲಕಬ್ಬೆ, ಮೈಳಲದೇವಿ, ಕೇತಲದೇವಿ, ಲೀಲಾದೇವಿ, ಲಚ್ಚಲದೇವಿ, ಹೊಯ್ಸಳದೇವಿ ಮತ್ತು ಚಾಮಲದೇವಿ ಎಂಬುವರು ಪತ್ನಿಯರು. ಸೋಮೇಶ್ವರ (II), ವಿಕ್ರಮಾದಿತ್ಯ (VI), ಮತ್ತು ಜಯಸಿಂಹ (IV) ಇವರು ಮಕ್ಕಳು. ಈ ಮೂವರೂ ಬೇರೆ ಬೇರೆ ಪ್ರಾಂತಾಧಿಕಾರಿಗಳಾಗಿದ್ದು ಆಡಳಿತದಲ್ಲಿ ತರಬೇತಿಯನ್ನು ಪಡೆದಿದ್ದರು.

ಸೋಮೇಶ್ವರ II : ಸೋಮೇಶ್ವರನು (I) ಮಡಿದುದು ಕ್ರಿ.ಶ. ೧೦೬೮ನೆಯ ಮಾರ್ಚಿ ೨೯ರಂದು. ಅದೇ ವರ್ಷದ ಏಪ್ರಿಲ್ ೧೧ರಂದು ಆತನ ಹಿರಿಯ ಮಗನಾದ ಇಮ್ಮಡಿ ಸೋಮೇಶ್ವರನು ಪಟ್ಟಾಭಿಷಿಕ್ತನಾದನು. ಇನ್ನೂ ಆತನು ಕಂಠಿಕೆಯನ್ನು ಧರಿಸುತ್ತಿರುವಂತೆಯೇ ಕದನರಂಗಕ್ಕೆ ಧಾವಿಸಬೇಕಾಯಿತು. ಚೋಳರ ವೀರರಾಜೇಂದ್ರನು ಅವನ ರಾಜ್ಯದ ಮೇಲೆ ಎರಗಿದನು. ಅವನನ್ನು ಓಡಿಸಿದ ಬಳಿಕ ಉತ್ತರದಲ್ಲಿ ಉದಯಾದಿತ್ಯನ ವಿರುದ್ಧ ಹೋರಾಡಬೇಕಾಯಿತು. ಈ ಯುದ್ಧದಲ್ಲಿ ಅವನು ಸೋತನು. ಈ ಕದನದಲ್ಲಿ ಜಯಸಿಂಹನ ಪರವಾಗಿ ಕಲಚುರಿ ಕರ್ಣ ಮತ್ತು ಚಾಲುಕ್ಯ ಕರ್ಣರು ಸಹ ಪಾಲ್ಗೊಂಡಿದ್ದರು.

ಇಮ್ಮಡಿ ಸೋಮೇಶ್ವರನು ದಿಟವಾಗಿ ದಕ್ಷನಾದ ಅರಸನಾಗಿರಲಿಲ್ಲ. ಬಿಲ್ಹಣ 'ವಿಕ್ರಮಾಂಕದೇವ ಚರಿತ'ದಲ್ಲಿ ಈ ಮೂವರು ಕುಮಾರರನ್ನೂ ಕುರಿತು ಪ್ರಸ್ತಾಪಿಸುತ್ತಾ ಅರಸನಾಗಿದ್ದ ಮೊದಲನೆಯ ಸೋಮೇಶ್ವರನು ತನ್ನ ಎರಡನೆಯ ಮಗನಾದ ವಿಕ್ರಮಾದಿತ್ಯನನ್ನು ಯುವರಾಜ ಪದವಿಗೆ ನೇಮಿಸ ಬಯಸಿದನೆಂದೂ, ಆದರೆ ಅದು ತನ್ನ ಅಣ್ಣನಿಗೆ ಸಲ್ಲಬೇಕಾದ ಗೌರವವೆಂದು ಹೇಳಿ ವಿಕ್ರಮಾದಿತ್ಯನು ನಮ್ರತೆಯಿಂದ ಆ ಪದವಿಯನ್ನು ನಿರಾಕರಿಸಿದನೆಂದೂ ಹೇಳಿದ್ದಾನೆ. ಎಡೆಬಿಡದೆ ನಡೆದ ಯುದ್ಧಗಳಲ್ಲಿ ಶೌರ್ಯದಿಂದ ಹೋರಾಡುವ ಶಕ್ತಿ ಹಿರಿಯನಿಗಿಂತ ಎರಡನೆಯವನಲ್ಲಿಯೇ ಅಧಿಕವಾಗಿತ್ತೆಂದು ಅರಸನು ಅರಿತಿದ್ದನಾದ ಕಾರಣ, ರಾಜ್ಯದ ಹಿತದೃಷ್ಟಿಯಿಂದ ಆತನು ಹೀಗೆ ಯೋಚಿಸಿದುದು ಉಚಿತವಾಗಿತ್ತು. ಆದರೆ ಧರ್ಮಾನುರಾಗಿಯಾದ ವಿಕ್ರಮಾದಿತ್ಯನು ಅದನ್ನು ಮನ್ನಿಸಲಿಲ್ಲ. ಇದರ ಪರಿಣಾಮವಾಗಿ ಇಮ್ಮಡಿ ಸೋಮೇಶ್ವರನು ಪಟ್ಟಕ್ಕೆ ಬಂದನು.

ಹೀಗೆ ಅಧಿಕಾರಕ್ಕೆ ಬಂದ ಹಿರಿಯನು ಸಹಜವಾಗಿಯೇ ಕಿರಿಯನ ಚಲನವಲನಗಳನ್ನು ಸಂದೇಹಾತ್ಮಕವಾಗಿ ಗಮನಿಸುತ್ತಿದ್ದನು. ತಂದೆಯು ಜೀವವನ್ನು ತೊರೆದಾಗ ವಿಕ್ರಮಾದಿತ್ಯನು ಉತ್ತರದಲ್ಲಿ, ಪರಮಾರರ ರಾಜಕೀಯದಲ್ಲಿ ಆಸಕ್ತನಾಗಿದ್ದನು. ಅಲ್ಲಿನ ಪ್ರಜೆಗಳ ಅನುರಾಗವನ್ನು ಗಳಿಸಿ ತನ್ನ ವಿರುದ್ಧ ದಂಗೆ ಏಳಬಹುದೆಂಬ ಸಂಶಯದಿಂದ ಅವನನ್ನು ರಾಜಧಾನಿಗೆ ಹಿಂದಕ್ಕೆ ಕರೆಸಲಾಯಿತು. ಆದರೆ ಬಹಳ ಕಾಲ ರಾಜಧಾನಿಯಲ್ಲೇ ಉಳಿಯಲು ವಿಕ್ರಮಾದಿತ್ಯನಿಗೂ ಆಗಲಿಲ್ಲ. ಅಲ್ಲದೆ, ಹಿರಿಯ ಸಹೋದರನಲ್ಲಿದ್ದ ವೈಷಮ್ಯವನ್ನು ಮನಗಂಡು ಕಿರಿಯನು ರಾಜಧಾನಿಯಿಂದ ದೂರವಿರುವುದು ಲೇಸೆಂದು ಭಾವಿಸಿ, ಬನವಾಸಿ ದೇಶಕ್ಕೆ ಹೋದನು. ಇವನನ್ನು ಹಿಂಬಾಲಿಸಿ ಬಂದ ಸೋಮೇಶ್ವರನ ಸೈನ್ಯವನ್ನು ಸೋಲಿಸಿದ ವಿಕ್ರಮಾದಿತ್ಯನು ತುಂಗಭದ್ರಾ ನದಿಯ ಪರಿಸರ ಪ್ರದೇಶದಲ್ಲಿ ಸ್ವಲ್ಪಕಾಲ ಕಳೆದು, ನಂತರ ಗೋವೆಯಲ್ಲಿ ಪ್ರಾಂತಾಧಿಕಾರಿಯಾಗಿದ್ದ ಜಯಕೇಶಿಯ ವಿರುದ್ಧ ಹೋದನು. ಆತ ಇವನಿಗೆ ಶರಣಾದನು. ಅವನ ಸಹಾಯದಿಂದ ವಿಕ್ರಮಾದಿತ್ಯನು ಚೋಳರ ವೀರರಾಜೇಂದ್ರನ ಮೇಲೇರಿ ಹೋದನು. ಇವನನ್ನು ಎದುರಿಸಲಾಗದೆ ಚೋಳನು ತನ್ನ ಮಗಳನ್ನು ಇವನಿಗೆ ಮದುವೆ ಮಾಡಿ ಕೊಟ್ಟನು. ಅಲ್ಲಿಂದ ಹಿಂದಿರುಗಿ ತುಂಗಭದ್ರೆಯ ಪ್ರದೇಶದಲ್ಲಿ ಕೆಲಕಾಲ ನೆಲಸಿದ್ದಾಗ

ವೀರರಾಜೇಂದ್ರನು ಮರಣಹೊಂದಿದ ವಾರ್ತೆಯನ್ನು ಕೇಳಿ, ಆತನ ಭಾವಮೈದುನ ಅಧಿರಾಜೇಂದ್ರನನ್ನು ಸಿಂಹಾಸನದಲ್ಲಿ ಸ್ಥಾಪಿಸಲೆಂದು ಚೋಳ ರಾಜಧಾನಿಗೆ ಹೋಗಿ ಕೃತಕಾರ್ಯನಾಗಿ ಹಿಂತಿರುಗಿದನು. ಆದರೆ ಅಧಿರಾಜೇಂದ್ರನು ಕೆಲವು ದಿನಗಳು ಮಾತ್ರ ಆಳಿದನು. ವೆಂಗಿಯಲ್ಲಿ ವಿಜಯಾದಿತ್ಯನಿಗೆ ಬೇರಾವ ಉತ್ತರಾಧಿಕಾರಿಗಳೂ ಇಲ್ಲದಿದ್ದ ಕಾರಣ ರಾಜರಾಜನ ಮಗನಾದ ರಾಜಿಗ (ಇಮ್ಮಡಿ ರಾಜೇಂದ್ರ) ಸಿಂಹಾಸನಾರೂಢ ನಾಗಿದ್ದನು. ಈ ರಾಜಕುಮಾರನು ಬಹಳ ವರ್ಷಗಳು ಚೋಳರ ರಾಜಧಾನಿಯಲ್ಲಿಯೇ ಇದ್ದನು. ವಿಜಯಾದಿತ್ಯನ ನಂತರ ವೆಂಗಿಯ ಅಧಿಪತಿಯಾದ ಈತನು ಅಧಿರಾಜೇಂದ್ರನು ಸತ್ತ ಕೂಡಲೇ ಚೋಳರ ರಾಜ್ಯದಲ್ಲೂ ತನ್ನ ಹಕ್ಕನ್ನು ಸ್ಥಾಪಿಸಿ, ಕುಲೋತ್ತುಂಗನೆಂಬ ಹೆಸರಿನಿಂದ ಚೋಳ ಮತ್ತು ಪೂರ್ವ ಚಾಲುಕ್ಯ ರಾಜ್ಯಗಳ ಅರಸನಾದನು. ಇದರಿಂದ ಪೂರ್ವ ಚಾಲುಕ್ಯರ ಅರಸು ಮನೆತನ ಕೊನೆಗೊಂಡು ಅವರ ರಾಜ್ಯ ಚೋಳರ ಹಾಗೂ ಪಶ್ಚಿಮ ಚಾಲುಕ್ಯರ ನಡುವೆ ಹಂಚಿಹೋಯಿತು.

ಈ ರಾಜಕೀಯ ಘಟನೆಗಳು ನಡೆಯುತ್ತಿದ್ದಂತೆಯೇ ಚಾಲುಕ್ಯರ ರಾಜ್ಯದಲ್ಲಿ ಇಮ್ಮಡಿ ಸೋಮೇಶ್ವರನ ಅದಕ್ಷತೆಯ ಪರಿಣಾಮವಾಗಿ ಬಿರುಕುಗಳು ಕಾಣಿಸಿಕೊಂಡವು. ಸೋದರನ ಮೇಲಿನ ಈರ್ಷೆಯಿಂದ ಸೋಮೇಶ್ವರನು ಕುಲೋತ್ತುಂಗನ ಪ್ರಯತ್ನಗಳಿಗೆ ಅಡ್ಡಿ ಮಾಡಲಿಲ್ಲ. ಅಲ್ಲದೆ, ವಿಕ್ರಮಾದಿತ್ಯನು ಚೋಳರ ರಾಜಕೀಯದಲ್ಲಿ ಆಸಕ್ತಿ ವಹಿಸಿದಾಗ, ತಾನು ಕುಲೋತ್ತುಂಗನ ಸ್ನೇಹವನ್ನು ಸಂಪಾದಿಸಿದನು. ಅವನ ನೆರವಿನಿಂದ ವಿಕ್ರಮಾದಿತ್ಯನನ್ನು ಮಣಿಸುವ ಯತ್ನ ಮಾಡಿದನು. ಇದು ಸೋದರರ ನಡುವಣ ದ್ವೇಷಕ್ಕೆ ಇಂಬುಕೊಟ್ಟಿತು. ತಂದೆ ಹಾಗೂ ತಾತಂದಿರ ಕಾಲದಿಂದಲೂ ರಾಜ್ಯವನ್ನು ವಿಸ್ತರಿಸಿ, ದಾಯಾದಿಗಳೆನಿಸಿದ ಪೂರ್ವ ಚಾಲುಕ್ಯರ ರಾಜ್ಯವನ್ನು ವಶಪಡಿಸಿಕೊಳ್ಳಲು ನಡಸಿದ ಯತ್ನಗಳೆಲ್ಲಾ ಈಗ ನಿಷ್ಫಲವಾದವು. ತಂದೆಯು ಸಾಮರ್ಥ್ಯದಿಂದ ವೆಂಗಿ ರಾಜ್ಯದ ಅನೇಕ ಭಾಗಗಳನ್ನು ಆಕ್ರಮಿಸಿದ್ದ ; ಈಗ ಇಡೀ ರಾಜ್ಯವನ್ನು ಅವರದಾಗಿಸಿ ಕೊಳ್ಳುವ ವಿಕ್ರಮಾದಿತ್ಯನ ಅಪೇಕ್ಷೆ ಸೋಮೇಶ್ವರನು ಕುಲೋತ್ತುಂಗನೊಡನೆ ಮಾಡಿದ ಸ್ನೇಹದಿಂದ ಮಣ್ಣುಪಾಲಾಯಿತು. ಇಷ್ಟೇ ಅಲ್ಲದೆ ಈ ವೇಳೆಗಾಗಲೇ ಉತ್ತರದಲ್ಲಿ ಒಮ್ಮೆ ಸೋಲನ್ನನುಭವಿಸಿದ ಸೋಮೇಶ್ವರನು ಕ್ರಮಾಗತವಾಗಿ ಬಂದ ರಾಜ್ಯವನ್ನು ಕಳೆದುಕೊಳ್ಳುವನೇನೋ ಎಂಬ ಶಂಕೆ ವಿಕ್ರಮಾದಿತ್ಯನಲ್ಲುಂಟಾಯಿತು. ರಾಜ್ಯದಲ್ಲಿಯೂ ಆಡಳಿತದ ಬಿಗಿ ತಪ್ಪಿ ಅಶಾಂತಿಯ ವಾತಾವರಣವೇರ್ಪಟ್ಟಿತ್ತು.

ಈ ಪರಿಸ್ಥಿತಿಯನ್ನು ಗಮನಿಸಿದ ವಿಕ್ರಮಾದಿತ್ಯನು ಅಣ್ಣನನ್ನು ಸಿಂಹಾಸನದಿಂದ ಹೊರದೂಡಲು ನಿಶ್ಚಯಿಸಿ ಯುದ್ಧಸನ್ನದ್ಧನಾದನು. ಕಿರಿಯನಾದ ಜಯಸಿಂಹ(IV) ಗೋವೆಯ ಕದಂಬರ ಜಯಕೇಶಿ, ಹಾನಗಲ್ಲು ಕದಂಬರ ಕೀರ್ತಿವರ್ಮ ಮುಂತಾದವರು ಈತನಿಗೆ ಬೆಂಬಲಿಗರಾಗಿ ನಿಂತರು. ಅಣ್ಣತಮ್ಮಂದಿರ ನಡುವಣ ಕದನದಲ್ಲಿ ಜಯ ತಮ್ಮನ ದಾಯಿತು. ಗದುಗಿನ ಶಾಸನ ವಿಕ್ರಮಾದಿತ್ಯನ ಕಾರ್ಯವನ್ನು ಸಮರ್ಥಿಸಲೆಂಬಂತೆ ಅಣ್ಣನು ಮದೋನ್ಮತ್ತನಾದುದರಿಂದ ಪ್ರಜಾಬಾಧೆಯನ್ನು ನಿಗ್ರಹಿಸಲು ತಮ್ಮನು

ಈ ಕ್ರಮ ಕೈಗೊಂಡನೆನ್ನುತ್ತದೆ. ಸೋಮೇಶ್ವರನ ಗತಿ ಏನಾಯಿತೆಂಬುದು ತಿಳಿಯದು. ಆತನನ್ನು ಸೆರೆಮನೆಗೆ ದೂಡಲಾಯಿತೆಂದು ಬಿಲ್ಹಣನು ಹೇಳಿದ್ದಾನೆ. ಸೋಮೇಶ್ವರನ ನೆರವಿಗೆ ಧಾವಿಸಿದ ಕುಲೋತ್ತುಂಗನು ರಣರಂಗದಿಂದ ಓಡಿದನು. ಬಿಲ್ಹಣನಹೇಳಿಕೆಯಂತೆ ಈ ಸಲವೂ ವಿಕ್ರಮಾದಿತ್ಯನು ಅಣ್ಣನನ್ನು ಮನ್ನಿಸಿ ರಾಜ್ಯವನ್ನು ಅವನಿಗೇ ಹಿಂತಿರುಗಿಸ ಬೇಕೆಂದು ಬಯಸಿದನಾದರೂ ದೇವರ ಆಣತಿಯಂತೆ ರಾಜ್ಯಭಾರವನ್ನು ತಾನೇ ಹೊರುವ ನಿರ್ಣಯ ಮಾಡಿದನು. ಇದರಲ್ಲಿನ ಸತ್ಯಾಂಶವೇನೇ ಇರಲಿ, ವಿಕ್ರಮಾದಿತ್ಯನು ರಾಜ ನಾದುದಂತೂ ನಿಜ.

ಕಂಚಲದೇವಿ ಮತ್ತು ಮೈಳಲದೇವಿಯರು ಸೋಮೇಶ್ವರನ ಪತ್ನಿಯರು. ಈತನಿಗೆ ಒಬ್ಬ ಮಗಳಿದ್ದು, ಅಯೋಧ್ಯಾ ಪುರವರಾಧೀಶ್ವರನೆನಿಸಿದ್ದ ಮಹಾಮಂಡಲೇಶ್ವರ ರವಿಯ ರಸನಿಗೆ ಆಕೆಯನ್ನು ಮದುವೆಮಾಡಿಕೊಟ್ಟಿದ್ದಂತೆ ತೋರುತ್ತದೆ. ಶಾಸನವೊಂದರಲ್ಲಿ ಅವನನ್ನು ಭುವನೈಕಮಲ್ಲ ಇಮ್ಮಡಿ ಸೋಮೇಶ್ವರ ಮಹಾರಾಜರಳಿಯ ಎಂದು ಕರೆದಿದೆ. ಲಕ್ಷ್ಮರಸನು ಇವನ ಅಧಿಕಾರಿಗಳಲ್ಲಿ ಅತಿಪ್ರಮುಖನು, ರಾಜನ ಸಮೀಪದ ಸಲಹೆಗಾರ ಹಾಗೂ ಹಿತೈಷಿ. ತನ್ನ ಇಬ್ಬರು ತಮ್ಮಂದಿರ ಬಳಿಕ ಈತನೇ ಪ್ರಮುಖನೆಂದು ಅರಸನ ಶಾಸನವೊಂದರಲ್ಲಿ ಹೇಳಿದೆ. ಚಿದ್ದಣಚೋಳ, ಮಹಾಪ್ರಧಾನ ಬಲದೇವಯ್ಯ, ನೊಳಂಬಾಧಿ ರಾಜ, ಸಿಂಗಣದೇವ, ನಾಗಿಮಯ್ಯ, ಖಚರಕುಲದ ಮಹಾಸಾಮಂತ ಕಲಿಯಮ್ಮರಸ, ಮಣಲೇರಾನ್ವಯದ ಮಹಾಸಾಮಂತ ಜಯಕೇಸಿಯರಸ ಮುಂತಾದವರು ಈತನ ಇತರ ಅಧಿಕಾರಿಗಳೂ ಸಾಮಂತರೂ ಆಗಿದ್ದರು.

ಆರನೆಯ ವಿಕ್ರಮಾದಿತ್ಯ: ಈತನು ರಾಜನಾದಂದಿನಿಂದ ತನ್ನ ಹೆಸರಿನಲ್ಲಿ ಒಂದು ಕಾಲಗಣನೆಯನ್ನು ಆರಂಭಿಸಿದನು. ಗದುಗಿನ ಶಾಸನ ಇದನ್ನು ಕುರಿತು ಹೀಗೆ ಹೇಳಿವೆ:

ಎಸೆವ ಶಕವರ್ಷಮಂ ಮಾ
ಣಿಸಿ ವಿಕ್ರಮವರ್ಷಮೆಂದು ತನ್ನಯ ಪೆಸರಂ
ವಸುಮತಿಗೆ ನೆಗಳ್ಚಿದ ಸಾ
ಹಸಿಗಂ ಜಗದೇಕದಾನಿ ಧರ್ಮವಿನೋದಂ

ಇದೇ ಚಾಲುಕ್ಯ ವಿಕ್ರಮಶಕೆ. ಸು. ೧೦೦ ವರ್ಷಗಳ ಕಾಲ ಇದು ಕರ್ಣಾಟಕದಾದ್ಯಂತ ಆಚರಣೆಯಲ್ಲಿದ್ದಿತು. ಕ್ರಿ.ಶ. ೧೦೭೭ನೆಯ ಫೆಬ್ರವರಿ ೨೬ಕ್ಕೆ ಸರಿಹೋಗುವ ಪಿಂಗಳ ಸಂವತ್ಸರದ ಚೈತ್ರ ಶುದ್ಧ ಪ್ರಥಮ ದಿನದಂದು ಈತನು ರಾಜ್ಯಾಭಿಷಿಕ್ತನಾದನು. ಅಂದಿ ನಿಂದ ಈ ಕಾಲಗಣನೆ ಸಹ ಆರಂಭವಾಯಿತೆಂದು ತೋರುತ್ತದೆ. ಈತನ ಈ ಪದ್ಧತಿಯ ನ್ನನುಸರಿಸಿ ನಂತರದ ಅರಸರು ತಮ್ಮ ಹೆಸರಿನಲ್ಲಿ ಕಾಲಗಣನೆಮಾಡಿದರೂ (ಭೂಲೋಕ ಮಲ್ಲವರ್ಷ, ಜಗದೇಕಮಲ್ಲವರ್ಷ ಇತ್ಯಾದಿ) ಅವುಗಳು ಅವರವರ ಆಳಿಕೆಯ ಕಾಲಕ್ಕೆ ಮಾತ್ರ ಸೀಮಿತವಾಗಿದ್ದುವು.

ವಿಕ್ರಮಾದಿತ್ಯನು ೫೦ ವರ್ಷಗಳ ಕಾಲ ರಾಜ್ಯವಾಳಿದನು. ಯುವರಾಜ ಪದವಿಯಲ್ಲಿ ದ್ದಾಗ ಮಿತಿಮೀರಿದ ಚಟುವಟಿಕೆಗಳಿಂದ ಕೂಡಿದ್ದು ಸದಾ ಯುದ್ಧಸನ್ನದ್ಧನಾಗಿ ಕದನ

ಗಳಲ್ಲಿ ಪಾಲುಗೊಂಡಿದ್ದ ಈತನು ಪಟ್ಟಕ್ಕೆಬಂದ ಬಳಿಕ ಹೆಚ್ಚು ಶಾಂತಿಯುತ ಜೀವನವನ್ನು ನಡಸಿದನು. ಇಮ್ಮಡಿ ಪುಲಕೇಶಿಯ ಕಾಲದಿಂದ ತಮಿಳುನಾಡಿನ ಹಾಗೂ ಕರ್ನಾಟಕದ ಅರಸು ಮನೆತನಗಳ ನಡುವೆ ಸಾಗಿಬಂದಿದ್ದ ಪೈಪೋಟಿ ಈಗ ಒಂದು ಘಟ್ಟವನ್ನು ಮುಟ್ಟಿತು. ಒಂದು ಕಡೆ ಕುಲೋತ್ತುಂಗನೂ ಮತ್ತೊಂದು ಕಡೆ ವಿಕ್ರಮಾದಿತ್ಯನೂ ಸಮಾನ ಶೂರರಾಗಿದ್ದು, ಇಬ್ಬರೂ ತಮ್ಮ ತಮ್ಮ ಹಿತಗಳನ್ನು ಸಾಧಿಸಿಕೊಂಡರು. ಯಾರೂ ಮೇಲುಗೈ ಪಡೆಯದೆ ಹೋದರು. ಕುಲೋತ್ತುಂಗನು ಚೋಳರಾಜ್ಯವನ್ನು ಪಡೆಯುವು ದನ್ನು ತಡೆಯಲು ವಿಕ್ರಮಾದಿತ್ಯನು ಸತತವಾಗಿಮಾಡಿದ ಯತ್ನಗಳೂ ಅಂತೆಯೇ ವಿಕ್ರಮಾದಿತ್ಯನನ್ನು ಮಣಿಸಲು ಚೋಳನು ಕೈಗೊಂಡ ಕ್ರಮಗಳೂ ವಿಫಲಗೊಂಡುವು. ತಮ್ಮ ತಮ್ಮ ಶಕ್ತಿಸಾಮರ್ಥ್ಯಗಳನ್ನೂ ಕುಂದುಕೊರತೆಗಳನ್ನೂ ಪರಸ್ಪರ ಅರಿತಿದ್ದ ಈ ಅರಸರು ರಾಜಕೀಯ ಹೋರಾಟಗಳನ್ನು ಕೊನೆಗಾಣಿಸಿ, ಪ್ರಜೆಗಳ ಕ್ಷೇಮಾಭಿವೃದ್ಧಿ ಗಾಗಿ ಶ್ರಮಿಸುವುದು ಹೆಚ್ಚು ಶ್ರೇಯಸ್ಕರವೆಂದು ಭಾವಿಸಿದಂತೆ ತೋರುತ್ತದೆ. ಎಂತಲೇ ಇವರ ನಡುವಣ ಕದನಗಳು ಕೊನೆಗೊಂಡು, ವಿಕ್ರಮಾದಿತ್ಯನ ಆಳಿಕೆಯ ೫೦ ವರ್ಷ ಗಳು ಕರ್ನಾಟಕದಲ್ಲಿ ಒಂದು ಪರ್ವವೆಂದೂ ಶಾಂತಿ ಸುಭಿಕ್ಷಗಳ ಕಾಲವೆಂದೂ ಗಣ್ಯ ವಾಗಿದೆ.

ವಿಕ್ರಮಾದಿತ್ಯನು ರಾಜಕೀಯ ಸಂನ್ಯಾಸವನ್ನು ಸ್ವೀಕರಿಸಿದನೆಂದಾಗಲಿ, ಅವನ ಕಾಲ ದಲ್ಲಿ ಬೇರಾವ ಘಟನೆಗಳೂ ನಡೆಯಲಿಲ್ಲವೆಂದಾಗಲಿ ಇದರ ಅರ್ಥವಲ್ಲ. ಅವನ ಕಿರಿಯ ಸೋದರನಾದ ಜಯಸಿಂಹ (IV)ನೇ ಅವನ ವಿರುದ್ಧ ದಂಗೆ ಎದ್ದನು. ನಂತರ ಹಲವಾರು ಸಾಮಂತರೂ ಸಮ್ರಾಟನ ವಿರುದ್ಧ ಹಂಚು ಹೂಡಿದರು. ಇಮ್ಮಡಿ ಸೋಮೇಶ್ವರನ ವಿರುದ್ಧ ವಿಕ್ರಮಾದಿತ್ಯನು ನಡಸಿದ ಕದನದಲ್ಲಿ ಇವನಿಗೆ ಬೆಂಬಲವಿತ್ತವರಲ್ಲಿ ಪ್ರಮುಖನು ಇವನ ಕಿರಿಯನಾದ ಜಯಸಿಂಹನು. ತಂದೆಯ ಕಾಲದಲ್ಲಿ (ಕ್ರಿ.ಶ. ೧೦೬೪) ತರ್ದವಾಡಿ ಪ್ರಾಂತಾಧಿಪತಿಯಾಗಿದ್ದ ಈತನನ್ನು ಸೋಮೇಶ್ವರನು ಬೆಳ್ವೊಲ, ಪುರಿಗೆರೆ ಪ್ರಾಂತ ಗಳ ಅಧಿಪತಿಯಾಗಿ ನೇಮಿಸಿದ್ದನು. ವಿಕ್ರಮಾದಿತ್ಯನಾದರೋ ಇವನಿಗೆ ಇನ್ನಷ್ಟು ಅಧಿಕಾರವಹಿಸಿ ಕೋಗಳಿ ೧೦೦೦, ಕುಂದೂರು ೧೦೦೦, ಸಾಂತಳಿಗೆ ೧೦೦೦, ಬನವಾಸಿ ೧೨೦೦೦ ಮುಂತಾದ ಪ್ರಾಂತಗಳ ಮೇಲ್ವಿಚಾರಣೆಯ ಹೊಣೆಯನ್ನು ಕೊಟ್ಟಿದ್ದನು. ಇಂಥವನು ಕೆಲಕಾಲಾನಂತರ ಅಣ್ಣನ ವಿರುದ್ಧ ದಂಗೆ ಎದ್ದನೆಂದೂ ಅದಕ್ಕಾಗಿ ಚೋಳ ಕುಲೋತ್ತುಂಗನ ನೆರವನ್ನು ಬಯಸಿದನೆಂದೂ ಆದರೆ ವಿಕ್ರಮಾದಿತ್ಯನು ದಂಡನೀತಿಯಿಂದ ಆತನನ್ನು ಕೊನೆಗೆ ದಮನಗೊಳಿಸಿದನೆಂದೂ ಬಿಲ್ಹಣನು ಹೇಳಿದ್ದಾನೆ. ಶಾಸನಗಳಲ್ಲಿ ಈ ವಿಷಯದಲ್ಲಿ ನೇರವಾದ ಪ್ರಸ್ತಾಪವಿಲ್ಲ. ಕ್ರಿ.ಶ. ೧೧೨೧ರ ಒಂದು ಶಾಸನ ವಿಕ್ರಮಾದಿತ್ಯನು ಜಯಸಿಂಹನ ಗರ್ವಭಂಗ ಮಾಡಿದನೆಂದು ಸೂಚಿಸುತ್ತದೆ. ಜಯ ಸಿಂಹನು ೧೦೮೨ರವರೆಗೆ ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾನೆ. ಅದೇ ವರ್ಷ ವಿಕ್ರಮಾದಿತ್ಯನ ಮಗನಾದ ಮಲ್ಲಿಕಾರ್ಜುನನು ಯುವರಾಜನಾಗಿದ್ದನೆಂದು ಇತರ ಶಾಸನಗಳಿಂದ ತಿಳಿಯಬರುತ್ತದೆ. ಬಹುಶಃ ಅಣ್ಣತಮ್ಮಂದಿರ ನಡುವಣ ಈ ಕದನ

೧೧೮೩ರಲ್ಲಿ ಆಗಿರಬೇಕು. ಯುದ್ಧದಲ್ಲಿ ಸೋಲಿಸಿದ ನಂತರ ತಮ್ಮನನ್ನು ಸೆರೆಹಿಡಿದನೆಂದೂ ಬಳಿಕ ಅವನಿಗೆ ಬುದ್ಧಿವಾದ ಹೇಳಿದನೆಂದೂ ಬಿಲ್ಹಣನು ಹೇಳಿದ್ದಾನೆ. ೧೧೮೩ರ ನಂತರ ಜಯಸಿಂಹನು ಕಾಣಿಸಿಕೊಳ್ಳುವುದಿಲ್ಲ.

ಜಯಸಿಂಹನಂತೆಯೇ ವಿಕ್ರಮಾದಿತ್ಯನ ವಿರುದ್ಧ ದಂಗೆ ಎದ್ದ ಸಾಮಂತರಲ್ಲಿ ಕರಹಾಡದ ಶಿಲಾಹಾರ ಭೋಜನೂ ಒಬ್ಬ. ೧೧೦೫ರಲ್ಲಿ ಒಮ್ಮೆ ಈತನನ್ನು ಸೋಲಿಸಿದ ಅರಸನು ೧೧೧೦ರಲ್ಲಿ ಪುನಃ ಭೋಜನ ವಿರುದ್ಧ ದಂಡೆತ್ತಿ ಬಂದಾಗ ಭೀಮಾ ನದೀ ತೀರದಲ್ಲಿ ತಂಗಿದ್ದನೆಂದು ಹೇಳುವ ಶಾಸನವೊಂದಿದೆ. ಆದ್ದರಿಂದ ಬಹುಶಃ ಸುಮಾರು ಒಂದು ದಶಕಕ್ಕೂ ಮೀರಿದ ಕಾಲ ಭೋಜನು ವಿಕ್ರಮಾದಿತ್ಯನ ವಿರುದ್ಧ ಬಂಡು ಹೂಡಿ ದನಾದರೂ ಕೊನೆಗೊಮ್ಮೆ ಅವನನ್ನು ಸೋಲಿಸಲಾಯಿತು. ಅಂತೆಯೇ ಅಳುಪರ, ಹೈವೆಯ ನಾಗವರ್ಮ ಹಾಗೂ ಗೊಗ್ಗಿಯರ ಬಂಡಾಯವನ್ನು ಸಹ ಅರಸನು ಮುರಿದನು.

ಒಂದು ವಿಧದಲ್ಲಿ ಅನಿರೀಕ್ಷಿತವಾದ ವಿರೋಧ ವಿಕ್ರಮಾದಿತ್ಯನಿಗೆ ಎದುರಾದುದು ಹೊಯ್ಸಳ ವಿಷ್ಣುವರ್ಧನನಿಂದ. ಈ ಹೊಯ್ಸಳರು ಮೊದಲನೆಯ ಸೋಮೇಶ್ವರನ ಕಾಲ ದಿಂದಲೂ ಚಾಲುಕ್ಯರ ವಿಧೇಯ ಸಾಮಂತರಾಗಿದ್ದರು. ಇವರು ತುಂಗಭದ್ರಾನದಿಯ ದಕ್ಷಿಣಕ್ಕೆ, ಗಂಗವಾಡಿಯ ಪಶ್ಚಿಮಕ್ಕೆ, ಹಾಸನ ಚಿಕ್ಕಮಗಳೂರು ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸೇರಿದ ಮಲೆನಾಡು ಪ್ರಾಂತದಲ್ಲಿ ಸಣ್ಣದೊಂದು ಪಾಳೆಯವನ್ನು ಕಟ್ಟಿಕೊಂಡಿದ್ದು, ಚೋಳಚಾಲುಕ್ಯ ರಾಜ್ಯಗಳ ನಡುವೆ ಒಂದು ತಡೆರಾಜ್ಯವನ್ನು ಸ್ಥಾಪಿಸಿದ್ದರು. ಇವರಲ್ಲಿ ಮೊದಲಿಗರಾದ ವಿನಯಾದಿತ್ಯ, ಎರೆಯಂಗ ಮತ್ತು ಅವನ ಮಕ್ಕಳಾದ ಬಲ್ಲಾಳ(I) ಮತ್ತು ವಿಷ್ಣುವರ್ಧನರು ಚಾಲುಕ್ಯರಿಗೆ ಬೆಂಬಲಿಗರಾದರು. ಸೋಮೇಶ್ವರ(I)ನ ಪತ್ನಿಯರಲ್ಲಿ ಒಬ್ಬಳಾದ ಹೊಯ್ಸಳದೇವಿಯು ವಿನಯಾದಿತ್ಯನ ಸೋದರಿ ಯಾಗಿದ್ದಿರಬಹುದೆಂದು ಊಹಿಸಲಾಗಿದೆ. ಎರೆಯಂಗ ಬಲ್ಲಾಳರು ವಿಕ್ರಮಾದಿತ್ಯನ ಉತ್ತರದ ವಿಜಯಗಳಲ್ಲಿಯೂ ಪಾಲುಗೊಂಡಿದ್ದರು. ಆದರೆ ಬಲ್ಲಾಳ ವಿಷ್ಣುವರ್ಧನರು ರಾಜ್ಯವಿಸ್ತರಣಾಕಾಂಕ್ಷೆಯಿಂದ ಮಾಂಡಲಿಕಪದವಿಯನ್ನು ಕಳಚಿ ಸ್ವತಂತ್ರರಾಗಿ ಆಳಬಯ ಸಿದರು. ಎಂತಲೇ ವಿಕ್ರಮಾದಿತ್ಯನು ಶಾಂತಿಯುತವಾಗಿ ಆಳತೊಡಗಿದಾಗ, ಇದು ಆತನ ರಾಜಕೀಯರಂಗದ ದಣಿವನ್ನು ಸೂಚಿಸುತ್ತದೆಯೆಂದು ಇವರು ಭಾವಿಸಿ, ಸ್ವಲ್ಪ ಸ್ವಲ್ಪ ವಾಗಿ ತಮ್ಮ ಪ್ರಾಬಲ್ಯವನ್ನು ಬೆಳಸಿಕೊಳ್ಳುತ್ತಾ ಕೊನೆಗೆ ಸಾಮ್ರಾಟನ ವಿರುದ್ಧ ದಂಗೆ ಎದ್ದರು. ಇತರ ಸಾಮಂತರಾದ ಹಾನುಗಲ್ಲಿನ ಕದಂಬರನ್ನೂ ಉಚ್ಚಂಗಿಯ ಪಾಂಡ್ಯರನ್ನೂ ಆಗಿಂದಾಗ್ಗೆ ಕೆಣಕಿ ಅವರ ಪ್ರಾಂತಗಳಲ್ಲಿಯೂ ದಾಳಿ ನಡಸಿ, ಅವರ ಅಸ್ತಿತ್ವಕ್ಕೆ ಕುಂದುಂಟುಮಾಡಲಾರಂಭಿಸಿದರು. ಮೊದಮೊದಲು ವಿಕ್ರಮಾದಿತ್ಯನು ಇದನ್ನು ತೃಣೀ ಕರಿಸಿದನು. ಆದರೆ ಇವರ ಪುಂಡಾಟಿಕೆ ಹೆಚ್ಚಿದಾಗ ಧಾರಾನಗರದಿಂದ ತನ್ನೊಡನೆ ಬಂದಿದ್ದ ಪರಮಾರ ಜಗದೇವನನ್ನು ಹಿರಿದಾದ ಸೈನ್ಯಸಮೇತ ಇವರ ವಿರುದ್ಧ ಕಳಿಸಿದನು. ಕ್ರಿ.ಶ. ೧೧೯೦ರ ಸುಮಾರಿಗೆ ಒಮ್ಮೆ ಇವರನ್ನು ಮಣಿಸಲು ಬಂದಿದ್ದ ಜಗದೇವನನ್ನು ಹೊಯ್ಸಳರು

ಸೋಲಿಸಿದರು. ಸುಮಾರು ಎರಡು ದಶಕಗಳ ನಂತರ ೧೧೧೭-೧೮ರಲ್ಲಿ ಕಣ್ಣೆಗಾಲದಲ್ಲಿ ನಡೆದ ಕದನದಲ್ಲಿ ಹೊಯ್ಸಳರ ಸೇನಾನಿಯಾದ ಗಂಗರಾಜನು ಚಾಲುಕ್ಯಸೇನೆಯನ್ನು ಸೋಲಿಸಿದನು. ಈ ಸೋಲು ವಿಕ್ರಮಾದಿತ್ಯನನ್ನು ಘಾಸಿಗೊಳಿಸಿತು. ಕ್ರುದ್ಧನಾದ ಅರಸನು ಪ್ರಚಂಡ ಸೈನ್ಯದೊಂದಿಗೆ ನುಗ್ಗಿ ಹೊಯ್ಸಳರನ್ನು ಹಲಸೂರು ಮತ್ತು ಹೊಸವೀಡು ಕದನಗಳಲ್ಲಿ ಸೋಲಿಸಿದನು. ವಿಷ್ಣುವರ್ಧನನ ಸೊಕ್ಕು ಇದರಿಂದ ಮುರಿಯಿತು. ಆತನು ಪುನಃ ಮಾಂಡಲಿಕತ್ವವನ್ನು ಒಪ್ಪಬೇಕಾಯಿತು. ಈ ಕದನದಲ್ಲಿ ಸಿಂದಕುಲದ ಆಚುಗಿ ಮತ್ತು ಪೆರ್ಮಾಡಿಗಳು ಅರಸನಿಗೆ ಬಹಳ ಸಹಾಯಮಾಡಿದರು.

ರಾಜ್ಯದ ಉತ್ತರದಲ್ಲಿ ಪರಮಾರರ ವಿರುದ್ಧ ವಿಕ್ರಮನು ದಂಡೆತ್ತಿ ವಿಜಯಾದಿತ್ಯನನ್ನು ಸೋಲಿಸಿದನು (೧೦೮೮). ಉದಯಾದಿತ್ಯನ ನಂತರ ಪರಮಾರ ರಾಜ್ಯಕ್ಕಾಗಿ ಕಲಹಗಳುಂಟಾದುವು. ಜಗದ್ದೇವನ ಪರವಾಗಿ ವಿಕ್ರಮಾದಿತ್ಯನು ಪುನಃ ಮಾಲವ ದೇಶಕ್ಕೆ ಸೈನ್ಯದೊಡನೆ ಹೋದನು. ಧಾರಾನಗರವನ್ನು ನಿರಾಧಾರಮಾಡಿ ಅಲ್ಲಿಯ ಉದಯಿಯ ಮಕ್ಕಳಾದ ಜಜ್ಜುಗಿ ಜಗದ್ದೇವರಿಗೆ ಕಾಣಿಸಿಕೊಂಡು ಬರುವಾಗ ಗೋದಾವರೀ ನದಿಯ ಕೋಟಿತೀರ್ಥದಲ್ಲಿ ತುಲಾಪುರುಷ ದಾನಮಾಡಿದನೆಂದು ಹುಣಸಿಹಡಗಲಿ ಶಾಸನದಿಂದ ತಿಳಿದಿದೆ. ಅನಂತರ ಜಗದ್ದೇವನು ರಾಜ್ಯವನ್ನು ತ್ಯಜಿಸಿ ವಿಕ್ರಮಾದಿತ್ಯನ ಆಶ್ರಯ ಪಡೆದು ಚಾಲುಕ್ಯರ ರಾಜಧಾನಿಯಲ್ಲಿ ನೆಲಸಿದನು. ಈತನನ್ನು ದೊರೆ ತನ್ನ ಮಕ್ಕಳಲ್ಲೊಬ್ಬನಂತೆ ಪ್ರೀತಿಯಿಂದ ಕಂಡನು. ಈ ದಂಡಯಾತ್ರೆಗಳ ಪರಿಣಾಮವಾಗಿ ಚಾಲುಕ್ಯರಾಜ್ಯ ನರ್ಮದೆಯವರೆಗೆ ವಿಸ್ತರಿಸಿತು.

ವಿಕ್ರಮಾದಿತ್ಯನು ಗುರ್ಜರ ಸಿಂಧುರಾಜನನ್ನು ಒಮ್ಮೆ ಯುದ್ಧರಂಗದಲ್ಲಿ ಎದುರಿಸಿದಂತೆ ತೋರುತ್ತದೆ. ರತ್ನಪುರದ ಕಲಚುರಿ ಜಾಜಲ್ಲದೇವನನ್ನು, ತ್ರಿಪುರಿಯ ಯಶಃಕರ್ಣನನ್ನು ಸಹ ಒಮ್ಮೆ ಸೋಲಿಸಿದನು. ಆಂಧ್ರದಲ್ಲಿ ವೆಂಗಿಮಂಡಲದ ಭಾಗಗಳು ಕುಲೋತ್ತುಂಗನ ಪಾಲಾದುದು ಇವನಿಗೆ ಅಸಮಾಧಾನವನ್ನು ತಂದಿತ್ತು. ಚೋಳರಾಜ್ಯಾಭಿಷಿಕ್ತನಾದ ಕುಲೋತ್ತುಂಗನು ರಾಜಕುಮಾರರಾದ ಮುಮ್ಮಡಿ ಚೋಳ, ವೀರಚೋಳ ಮತ್ತು ರಾಜರಾಜಚೋಳ ಗಂಗರನ್ನು ವೆಂಗಿಮಂಡಲಾಧಿಪತಿಗಳನ್ನಾಗಿ ಒಬ್ಬರ ಬಳಿಕ ಇನ್ನೊಬ್ಬರಂತೆ ನೇಮಿಸಿದನು. ಆದರೆ ಅವರುಗಳು ಯಾರೂ ಅಲ್ಲಿ ಸ್ಥಿರವಾಗಿ ನಿಲ್ಲದೆ ಇದ್ದುದು ವಿಕ್ರಮಾದಿತ್ಯನಿಗೆ ಅನುಕೂಲವಾಗಿ ಪರಿಣಮಿಸಿತು. ಇದರಿಂದ ಅಲ್ಲಿನ ಆಡಳಿತದ ಬಿಗಿತಪ್ಪಿ, ಆ ಪ್ರದೇಶದ ಹಲವಾರು ಭಾಗಗಳು ಕ್ರಮೇಣ ಚಾಲುಕ್ಯನ ಅಧೀನಕ್ಕೆ ಬಂದವು.

ಐವತ್ತು ವರ್ಷಗಳ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಕರ್ನಾಟಕದ ಕೀರ್ತಿ ಭಾರತದಲ್ಲೆಲ್ಲ ವ್ಯಾಪಿಸಿತು. ಶಾಂತಿ ಸಮೃದ್ಧಿಗಳು ತುಂಬಿದ್ದುವು. ಅನೇಕ ದಶಕಗಳು ಚೋಳರೊಡನೆ ನಿರಂತರವಾಗಿ ನಡೆದ ಕದನಗಳು ಕೊನೆಗೊಂಡವು. ಈ ಅರಸನ ನೂರಾರು ಶಾಸನಗಳು ಲಭ್ಯವಾಗಿವೆ. ಅವುಗಳಿಂದ ಈತನ ರಾಜ್ಯವಿಸ್ತಾರ, ಈತನ ಕೈಕೆಳಗಿನ ಅಧಿಕಾರಿಗಳು, ಅಂದಿನ ವೈಭವಯುತ ಜೀವನ ಇತ್ಯಾದಿಗಳ ವಿವರಗಳು ತಿಳಿದುಬಂದಿವೆ.

ಈತನ ಹನ್ನೆರಡಕ್ಕೂ ಹೆಚ್ಚು ರಾಣಿಯರಲ್ಲಿ ಪ್ರಮುಖಳಾದ ಚಂದ್ರಲೇಖೆ (ಚಂದಲದೇವಿ) ಶಿಲಾಹಾರ ಮನೆತನದವಳು. ಸೋಮೇಶ್ವರ (III), ಜಯಕರ್ಣ, ತೈಲಪ (III) ಹಾಗೂ ಮಲ್ಲಿಕಾರ್ಜುನರು ಈಕೆಯಲ್ಲಿ ಜನಿಸಿದವರು. ಕೇತಲದೇವಿ, ಮಲಯಮತಿದೇವಿ, ಪದ್ಮಲದೇವಿ ಮುಂತಾದವರು ಇತರ ಪತ್ನಿಯರು. ಕಲಚುರಿ ಜೋಗಮನ ಮಗಳಾದ ಸಾವಳದೇವಿ ಇನ್ನೊಬ್ಬ ಹೆಸರಿಸಬೇಕಾದ ಪತ್ನಿ. ಇವಳ ಮಗಳಾದ ಮೈಳಲದೇವಿಯನ್ನು ಕದಂಬ ಜಯಕೇಶಿ (VI) ಮದುವೆಯಾಗಿದ್ದನು. ಕಲ್ಯಾಣ (ಈಗಿನ ಬಸವಕಲ್ಯಾಣ) ಇವನ ರಾಜಧಾನಿಯಾಗಿದ್ದರೂ ಸತತವಾಗಿ ರಾಜ್ಯದಲ್ಲೆಲ್ಲ ತಿರುಗಾಡುತ್ತಿದ್ದುದರಿಂದ ರಾಜನಿಗೆ ಇತರ ನೆಲೆವೀಡುಗಳೂ—ಜಯಂತಿಪುರ (ಬನವಾಸಿ), ಕೊಳ್ಳಿಪಾಕೆ, ಪೊಟ್ಟಳಕೆರೆ, ಏತಗಿರಿ, ಮಾನ್ಯಕೆರೆ, ಜಗನ್ನಾಥಪುರ ಇತ್ಯಾದಿ— ಇದ್ದವು. ಅನಂತಪಾಲ, ಆತನ ಸೋದರಳಿಯ ಗೋವಿಂದ ದಂಡನಾಯಕ, ಲಕ್ಷ್ಮಣ ದಂಡನಾಯಕ, ಕಾಳಿದಾಸ, ಸಿಂದ ಪೆರ್ಮಾಡಿ, ಕದಂಬ ಜಯಕೇಶಿ, ಕಾಕತೀಯ ಪ್ರೋಲ ಮುಂತಾದವರು ಇವನ ನಿಷ್ಠಾವಂತ ಸಾಮಂತರು, ಅಧಿಕಾರಿಗಳು.

ಪ್ರಜಾರಂಜಕನಾಗಿ, ಕಲಾಪೋಷಕನಾಗಿ, ಕವಿಗಳಿಗೆ ವಿದ್ವಾಂಸರಿಗೆ ಆಶ್ರಯದಾತನಾಗಿ, ೫೦ ವರ್ಷಗಳ ಕಾಲ (ಕ್ರಿ.ಶ. ೧೧೨೬ರ ವರೆಗೆ) ರಾಜ್ಯಭಾರ ಮಾಡಿದ ವಿಕ್ರಮಾದಿತ್ಯನನ್ನು ಇವನ ಆಸ್ಥಾನದಲ್ಲಿದ್ದ ವಿಜ್ಞಾನೇಶ್ವರನು

> ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ
> ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತಿಃ ಶ್ರೀವಿಕ್ರಮಾರ್ಕೋಪಮಃ

—ಎಂಬುದಾಗಿ 'ಮಿತಾಕ್ಷರಾ' ಎಂಬ ಗ್ರಂಥದಲ್ಲಿ ಹೊಗಳಿದ್ದಾನೆ. ಇವನ ಆಸ್ಥಾನದ ವಿದ್ಯಾಪತಿ ಬಿಲ್ಹಣನಂತೂ ತನ್ನ ಪೋಷಕನ ಮತ್ತು ಅವನ ವಂಶದ ವರ್ಣನೆಯನ್ನೊಳಗೊಂಡ ದೊಡ್ಡ ಕಾವ್ಯವನ್ನೇ ರಚಿಸಿದ್ದಾನೆ. ಅದೇ 'ವಿಕ್ರಮಾಂಕದೇವಚರಿತ'.

ಭೂಲೋಕಮಲ್ಲ ಸೋಮೇಶ್ವರ III : ೧೧೨೬ರ ಫೆಬ್ರುವರಿ ೨೦ರಲ್ಲಿ ವಿಕ್ರಮಾದಿತ್ಯನ ಮಗ ಮುಮ್ಮಡಿ ಸೋಮೇಶ್ವರನು ಪಟ್ಟಾಭಿಷಿಕ್ತನಾದನು. ನನ್ನಯಭಟ್ಟನೆಂಬ ಜೋಯಿಸನು ಅರಸನ ದಿಗ್ವಿಜಯಕ್ಕೆ ೧೧೨೬ರ ಪರಾಭವ ಕಾರ್ತಿಕ ಶುದ್ಧ ನವಮಿ ಶುಭದಿನವೆಂದು ನಿರ್ಣಯಿಸಿಕೊಟ್ಟುದಕ್ಕಾಗಿ ಆತನನ್ನು ತನ್ನ ಪಟ್ಟಾಭಿಷೇಕದ ದಿನದಂದು ಅರಸನು ಗೌರವಿಸಿ, ಆತನಿಗೆ ಭೂದಾನ ಮಾಡಿದನು. ಆದರೆ ವಾಸ್ತವವಾಗಿ ಸೋಮೇಶ್ವರನು ಅಂತಹ ಯಾವ ದಿಗ್ವಿಜಯವನ್ನೂ ಕೈಗೊಳ್ಳಲಿಲ್ಲ. ವಿಕ್ರಮಾದಿತ್ಯನ ಮರಣಾನಂತರ ವೆಂಗಿಯಲ್ಲಿ ಚಾಲುಕ್ಯರ ಪ್ರಭಾವ ಸಡಿಲಗೊಂಡಿತು. ಚೋಳರ ಸಾಮಂತನಾಗಿದ್ದ ವೆಲನಾಡು ಗೊಂಕ(II)ನು ದಕ್ಷಿಣ ವೆಂಗಿಮಂಡಲದ ಕೆಲವು ಭಾಗಗಳನ್ನು ಆಕ್ರಮಿಸಿದನು. ಕೊಳ್ಳಿಪಾಕೆಯ ಪ್ರಾಂತವನ್ನು ಇನ್ನೊಬ್ಬ ಚೋಳರ ಸಾಮಂತನಾದ ನಂಬಯ (ನಂಬಿರಾಜ) ಆಳುತ್ತಿದ್ದನು. ಆದರೂ ಉತ್ತರದ ತೀರಪ್ರದೇಶಗಳು ಇನ್ನೂ ಚಾಳುಕ್ಯರ ಅಧೀನದಲ್ಲಿಯೇ ಇದ್ದಿತು. ಹೊಯ್ಸಳರ ವಿಷ್ಣುವರ್ಧನನು

ಸ್ವತಂತ್ರನಾಗಿ ಆಳುವ ತನ್ನ ಬಯಕೆಯನ್ನು ಈ ಅರಸನ ಕಾಲದಲ್ಲಿ ಪ್ರಕಟಗೊಳಿಸಲಿಲ್ಲ. ೧೧೩೬ರಲ್ಲಿ ಒಮ್ಮೆ ಉಚ್ಚಂಗಿಯ ಪಾಂಡ್ಯರನ್ನೂ ಹಾನಗಲ್ಲಿನ ಕದಂಬರನ್ನೂ ಸೋಲಿಸಿ ಆ ಪ್ರದೇಶಗಳನ್ನು ಆಕ್ರಮಿಸಿದನಾದರೂ ಅವನ್ನು ಪುನಃ ತೆರವುಮಾಡಿ ಕೊಟ್ಟನು. ಬೇರೆ ಯಾವ ಕದನಗಳೂ ಸೋಮೇಶ್ವರನ ಕಾಲದಲ್ಲಿ ನಡೆದಂತೆ ತೋರುವು ದಿಲ್ಲ. ರಾಜ್ಯದಲ್ಲಿ ಶಾಂತಿ ಸಮಾಧಾನಗಳು ನೆಲೆಗೊಂಡಿದ್ದವು. ಸಾಮಂತರು ವಿಧೇಯರಾಗಿದ್ದು, ಯಾವ ರೀತಿಯ ಗಲಭೆಗಳೂ ಉಂಟಾಗಲಿಲ್ಲ. ರಾಜಕೀಯಕ್ಕಿಂತ ಹೆಚ್ಚಾಗಿ ಅರಸನ ಒಲವು ಸಾಹಿತ್ಯ ಕಲೆಗಳ ಕಡೆಗೆ ಇತ್ತು. ಅದಕ್ಕೆ ತಕ್ಕ ಅವಕಾಶವೂ ಅನುಕೂಲವೂ ಈಗ ದೊರೆಯಿತು. ಕ್ರಿ.ಶ. ೧೧೨೯ರಲ್ಲಿ ಈತನು 'ಅಭಿಲಷಿತಾರ್ಥಚಿಂತಾ ಮಣಿ' ಅಥವಾ 'ಮಾನಸೋಲ್ಲಾಸವೆಂದು' ಖ್ಯಾತಿವೆತ್ತ ವಿಶ್ವಕೋಶದಂತೆ ಬಹು ವಿಷಯಕವಾದ ಸಂಸ್ಕೃತ ಗ್ರಂಥವನ್ನು ರಚಿಸಿದನು. ಇದಲ್ಲದೆ 'ವಿಕ್ರಮಾಂಕಾಭ್ಯುದಯ' ವೆಂಬುದು ಈತನು ಬರೆದ ಇನ್ನೊಂದು ಚಂಪೂಕಾವ್ಯ. ಈತನಿಗೆ ಅಮೋಘವೂ ಬಹುಮುಖವೂ ಆದ ಪಾಂಡಿತ್ಯವಿದ್ದುದರಿಂದ ಇವನು 'ಸರ್ವಜ್ಞಚಕ್ರವರ್ತಿ' ಎಂದು ಪ್ರಖ್ಯಾತನಾದನು. ಇವನ ಈ ಪ್ರಾವೀಣ್ಯವನ್ನು ಕುರಿತು ಒಂದು ಶಾಸನವು "ಅಖಿಳ ಕಳಾಸಂಪತ್ಸನ್ನಿಧಿ ತನ್ನೊಳೆಸೆಯೆ ಸರ್ವಜ್ಞಮಹೀಭೃತ್ ಸಂಜ್ಞೆ"ಯನ್ನು ಈತನು ಪಡೆದನೆಂದು ಹೇಳುತ್ತದೆ. ಭೂಲೋಕಮಲ್ಲನೆನಿಸಿದ ಈತನಿಗೆ ಇಮ್ಮಡಿ ಜಗದೇಕ ಮಲ್ಲ ಮತ್ತು ಮುಮ್ಮಡಿ ತೈಲಪನೆಂಬಿಬ್ಬರು ಮಕ್ಕಳಿದ್ದರು. ಇವರ ತಾಯಿ ಎಕ್ಕಲ ದೇವಿ. ಬಮ್ಮಲದೇವಿ ದೊರೆಯ ಇನ್ನೊಬ್ಬ ಪತ್ನಿ.

ಇಮ್ಮಡಿ ಜಗದೇಕಮಲ್ಲ, ಮುಮ್ಮಡಿ ತೈಲಪ: ೧೧೩೮ರಲ್ಲಿ ಪಟ್ಟಕ್ಕೆ ಬಂದ ಜಗದೇಕಮಲ್ಲನು ಶಾಸನಗಳಲ್ಲಿ ಪೆರ್ಮ, ಪೆರ್ಮಾಡಿ ಎಂದು ಕರೆಯಲ್ಪಟ್ಟಿದ್ದಾನೆ. 'ಜಗದೇಕಮಲ್ಲ' ಎಂಬುದು ಈತನ ಬಿರುದೋ ಹೆಸರೋ ತಿಳಿಯದು. ಜಗದೇಕಮಲ್ಲ ಜಯಸಿಂಹನಿಗಿಂತ ಈತನು ಭಿನ್ನನೆಂದು ಸೂಚಿಸಲು ಅನುಕೂಲವಾಗುವಂತೆ ಈತನ ಶಾಸನಗಳಲ್ಲಿ ಪ್ರತಾಪಚಕ್ರವರ್ತಿ ಎಂಬ ಬಿರುದನ್ನೂ ಸೇರಿಸಲಾಗಿದೆ. ಮೇಲ್ನೋಟಕ್ಕೆ ಇವನ ರಾಜ್ಯದಲ್ಲಿ ಯಾವ ತೊಂದರೆಗಳೂ ಇದ್ದಂತೆ ತೋರುವುದಿಲ್ಲ. ಆದರೆ ೧೦ ವರ್ಷಗಳ ಕಾಲದ ಈತನ ಆಳ್ವಿಕೆಯಲ್ಲಿ ರಾಜ್ಯದಲ್ಲಿ ಬಿರುಕುಗಳೇರ್ಪಟ್ಟವು. ತಾತನಾದ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿಯೇ ರಾಜ್ಯಾಡಳಿತದಲ್ಲಿ ಭಾಗವಹಿಸಿದ್ದ ಈತನು ಪಟ್ಟಕ್ಕೆ ಬಂದಾಗ ಬಹಳ ವಯಸ್ಸಾಗಿದ್ದಿತು. ಎಂತಲೇ ಬಿಗಿಯಾದ ಆಡಳಿತ ಇವನಿಂದ ಸಾಧ್ಯವಿರಲಿಲ್ಲ. ವೆಂಗಿಯ ಬಹುಭಾಗ ಸ್ವಲ್ಪಸ್ವಲ್ಪವಾಗಿ ಇವನ ಹತೋಟಿಯಿಂದ ಹೊರತಾಯಿತು. ಕಾಕತೀಯ ಮನೆತನದ ಇಮ್ಮಡಿ ಪ್ರೋಲನು ಪ್ರಬಲನಾಗಿ ತೀರ ಪ್ರದೇಶಗಳನ್ನು ಆಕ್ರಮಿಸತೊಡಗಿದ್ದನು. ಹೊಯ್ಸಳರ ವಿಷ್ಣುವರ್ಧನನು ಈಗ ಪುನಃ ದಂಗೆ ಎದ್ದು ಕದಂಬರನ್ನು ಸೋಲಿಸಿದನು. ಹಾನಗಲ್ಲು ಬಂಕಾಪುರಗಳು ಅವನ ವಶವಾಗಿ ಬನವಾಸಿ ಪ್ರಾಂತದ ಆಧಿಪತ್ಯ ಅವನದಾಗಿತ್ತು. ಆದರೆ ೧೧೪೩ರ ಸುಮಾರಿಗೆ ದಂಡನಾಯಕರಾದ ಬಮ್ಮದೇವಯ್ಯ, ಮಾಧವ ಮುಂತಾದವರ ಸಹಾಯ

ದಿಂದ ಚಾಲುಕ್ಯರಾಜನು ಹೊಯ್ಸಳನನ್ನು ಆಕ್ರಮಿತ ಪ್ರದೇಶಗಳಿಂದ ಹೊರಗಟ್ಟಿ, ದಂಗೆ ಏಳಲು ಸನ್ನಾಹಮಾಡುತ್ತಿದ್ದ ಕದಂಬರನ್ನೂ ಸೋಲಿಸಲು ಶಕ್ತನಾದನು. ಆದರೆ ಕಲಚುರಿ ಮನೆತನದ ಬಿಜ್ಜಳನು ಈ ವೇಳೆಗೆ ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡು ಚಾಲುಕ್ಯ ರಾಜ್ಯವನ್ನು ತಾನೇ ಆಳಲು ಸಕಲ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿದ್ದನು.

ಇಂಥ ಪರಿಸ್ಥಿತಿಯಲ್ಲಿ ಮುಮ್ಮಡಿ ತೈಲಪನು ೧೧೪೯ರಿಂದ ರಾಜ್ಯವಾಳತೊಡಗಿದನು. ಜಗದೇಕಮಲ್ಲನಿಗೆ ಮಕ್ಕಳಿದ್ದಂತೆ ತೋರದು. ಆದ್ದರಿಂದ ರಾಜ್ಯ ಆತನ ಸೋದರನಿಗೆ ಪ್ರಾಪ್ತವಾಯಿತು. ಬಿಜ್ಜಳನಿಗೆ ಇದು ಇಷ್ಟವಾಗಲಿಲ್ಲ. ಇಮ್ಮಡಿ ಜಗದೇಕಮಲ್ಲನ ಅಧೀನತೆಯನ್ನು ಮೊದಲು ಒಪ್ಪಿದ್ದ ಈತ ನಂತರ ಬಂದ ತೈಲನನ್ನೂ ಸಾರ್ವಭೌಮನೆಂದು ಒಪ್ಪಲು ಸಿದ್ಧನಿರಲಿಲ್ಲ. ರಾಜ್ಯದಾಹ ಅವನನ್ನು ಕ್ಷೋಭೆಗೊಳಿಸಿತ್ತು. ಕೊನೆಗೆ ತೈಲನ ವಿರುದ್ಧ ದಂಗೆಯೆದ್ದು ೧೧೬೨ರ ವೇಳೆಗೆ ತನ್ನನ್ನು ಚಕ್ರವರ್ತಿ ಎಂದು ಕರೆದುಕೊಂಡ ಬಿಜ್ಜಳನು ಚಾಲುಕ್ಯರಾಜ್ಯದ ಅವನತಿಗೆ ಮೂಲಕಾರಣನಾದನು. ರಾಜ್ಯದ ಅನೇಕ ಭಾಗಗಳು ಚಾಲುಕ್ಯರ ಅಂಕೆಯಿಂದ ಹೊರಗುಳಿದುವು. ಬನವಾಸಿ ಹಾಗೂ ಸುತ್ತಲಿನ ಪ್ರದೇಶಗಳು ಮಾತ್ರ ಅವರ ಅಧೀನದಲ್ಲೇ ಇದ್ದುವು. ಶಿಲಾಹಾರರು, ಕಾಕತೀಯರು, ಹೊಯ್ಸಳರು ಸಹ ಈ ಪರಿಸ್ಥಿತಿಯ ಲಾಭ ಪಡೆದು ಸ್ವತಂತ್ರವಾಗಿ ಆಳತೊಡಗಿದರು. ಕಾಕತೀಯ ರುದ್ರನು ತೈಲನ ವಿರುದ್ಧ ಕದನ ಹೂಡಿದನು. ಈ ಕದನದಲ್ಲಿ ತೈಲನು ಮಡಿದನೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. ಈ ಕದನದ ಉಲ್ಲೇಖವಿರುವ ಕ್ರಿ.ಶ. ೧೧೬೩ರ ಅನುಮಕೊಂಡ ಶಾಸನ ಹುಟ್ಟುವ ವೇಳೆಗಾಗಲೇ ತೈಲನು ಕೊನೆಯುಸಿರು ಎಳೆದಿದ್ದನು.

ಸಾಯುವ ಮುನ್ನ ತೈಲನು ತನ್ನ ಮಗ ತ್ರಿಭುವನಮಲ್ಲ ಸೋಮೇಶ್ವರ (IV)ನನ್ನು ಉತ್ತರಾಧಿಕಾರಿಯಾಗಿ ನಿಯಮಿಸಿದ್ದ. ಆದರೆ ಇವನೂ ಜಗದೇಕಮಲ್ಲ (III), ಭೂಲೋಕಮಲ್ಲ (II) ಎಂಬಿಬ್ಬರು ರಾಜಕುಮಾರರೂ ಕಲ್ಯಾಣವನ್ನು ಬಿಟ್ಟು ಹೊರಗೆ ಹೋಗಬೇಕಾಯಿತು. ಅನಂತಪುರ, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಅಧಿಕಾರದಲ್ಲಿದ್ದ ನಿಡುಗಲ್ಲಿನ ಚೋಳರು, ಉಚ್ಚಂಗಿಯ ಪಾಂಡ್ಯರು, ಸಾಂತರರು ಸಹ ಇವರಿಗೆ ಆಶ್ರಯವಿತ್ತರು. ಗೋವೆಯ ಕದಂಬರೂ ಇವರಿಗೆ ಬೆಂಬಲವಿತ್ತಂತೆ ತೋರುತ್ತದೆ. ಚಾಲುಕ್ಯ ರಾಜ್ಯ ಕಲಚುರಿಗಳ ವಶವಾಯಿತು. ಆದರೆ ಅದು ಕೇವಲ ೨೦ ವರ್ಷಗಳ ಕಾಲವಷ್ಟೆ. ಅನಂತರ ಸೋಮೇಶ್ವರನು ಪುನಃ ತನ್ನ ನಂಬುಗೆಯ ದಂಡನಾಯಕನ ನೆರವಿನಿಂದ ೧೧೮೩ರಲ್ಲಿ ಚಾಲುಕ್ಯರಾಜ್ಯವನ್ನು ಹಿಂದಕ್ಕೆ ಪಡೆದ. ಇದು ಕೂಡ ನಿರರ್ಥಕಯತ್ನವೇ ಆಗಿತ್ತು. ಒಂದು ಕಡೆ ಹೊಯ್ಸಳರು, ಇನ್ನೊಂದು ಕಡೆ ಸೇಉಣರು, ಮತ್ತೊಂದು ಕಡೆ ಕಾಕತೀಯರು ಪ್ರಬಲಿಸಿ, ಅವರ ನಡುವಣ ಜಗಳಗಳಲ್ಲಿ ಚಾಲುಕ್ಯರಾಜ್ಯ ಹೇಳಹೆಸರಿಲ್ಲದಾಯಿತು.

ಹೀಗೆ ಕ್ರಿ.ಶ. ೯೭೩ರಿಂದ ಸು. ೧೧೫೦ರವರೆಗೆ ವಿಜೃಂಭಿಸಿದ್ದ ಚಾಲುಕ್ಯರಾಜ್ಯ ಮುಂದಿನ ೪೦ ವರ್ಷಗಳೊಳಗೆ ಅಳಿಸಿಹೋದಂತಾಯಿತು.

## ಕರ್ನಾಟಕದ ಕಲಚುರಿಗಳು

ಚಾಲುಕ್ಯ ಮುಮ್ಮಡಿ ತೈಲಪನು ಅಧಿಕಾರಕ್ಕೆ ಬಂದಾಗ ಕಲಚುರಿ ಇಮ್ಮಡಿ ಬಿಜ್ಜಲನು ಬಹಳ ಅಸಮಾಧಾನಗೊಂಡನು. ಪರಿಣಾಮವಾಗಿ, ಆತ ದಂಗೆಯೆದ್ದು ಚಾಲುಕ್ಯನನ್ನು ಹೊರದೂಡಿ ಸ್ವತಃ ರಾಜ್ಯವಾಳತೊಡಗಿದನೆಂದು ಹೇಳಿದೆ.

ಈ ಬಿಜ್ಜಲನ ಮತ್ತು ಈತನ ಉತ್ತರಾಧಿಕಾರಿಗಳ ಆಳಿಕೆಯ ಕಾಲ ಕೇವಲ ೨೦ ವರ್ಷಗಳು. ಆದರೆ ಕರ್ನಾಟಕ ಅಂದು ಕ್ರಾಂತಿಯ ಕೈಗೂಸಾಯಿತು. ಅದು ಕೇವಲ ರಾಜಕೀಯ ಕ್ರಾಂತಿಯಾಗಿರದೆ, ಸಾಮಾಜಿಕ, ಧಾರ್ಮಿಕ ಹಾಗೂ ಸಾಹಿತ್ಯಿಕ ವಿಷಯಗಳೂ ಅದರಲ್ಲಿ ಅಡಕಗೊಂಡಿದ್ದುವು.

ಕಲಚುರಿಗಳ ಕತೆ ಕರ್ನಾಟಕದಲ್ಲಿ ವೈಶಿಷ್ಟ್ಯ ಪಡೆದಿರುವುದು ಅವರ ಆಳಿಕೆಯ ದುಷ್ಪರಿಣಾಮಗಳ ದೃಷ್ಟಿಯಿಂದ. ದಿವಂಗತ ಪಿ. ಬಿ. ದೇಸಾಯರು ಇವರ ಆಳಿಕೆಯನ್ನು ಪ್ರಚಂಡವಾದ ಬಿರುಗಾಳಿಗೆ ಹೋಲಿಸಿದ್ದಾರೆ. ಈ ಮನೆತನ ಅಧಿಕಾರದಲ್ಲಿದ್ದ ೨೦ ವರ್ಷಗಳಲ್ಲಿ ೬ ಜನ ರಾಜ್ಯವಾಳಿದರು. ಅವರೊಳಗಣ ಅಂತಃಕಲಹಗಳ ಪರಿಣಾಮವಾಗಿ ೩ ಬಾರಿ ದೇಶದಲ್ಲಿ ಅನಾಯಕತ್ವ ಉಂಟಾಯಿತು, ಅರಾಜಕತೆ ತಾಂಡವವಾಡಿತು. ಕೊನೆಗೊಮ್ಮೆ ಒಟ್ಟುಗೂಡಿದ್ದ ಕರ್ನಾಟಕ ಛಿದ್ರಗೊಳ್ಳುವಂತಾಯಿತು.

ಮೂಲತಃ ಈ ಕಲಚುರಿಗಳು ಮಧ್ಯಪ್ರದೇಶದಲ್ಲಿ ಆಳಿದ ಕಟಚ್ಚುರಿ ವಂಶಕ್ಕೆ ಸೇರಿದವರು, ಹೈಹಯ ಕುಲೋತ್ಪನ್ನರು. ಇವರಲ್ಲಿ ಅತಿಪ್ರಾಚೀನರು ಕಟಚುರಿಗಳೆಂದು ಕರೆಯಲ್ಪಟ್ಟು, ನಾಸಿಕ್‌ವರೆಗಿನ ಪ್ರದೇಶವನ್ನು ಆಳಿದರು. ಇವರಲ್ಲೊಬ್ಬನಾದ ಬುದ್ಧರಾಜನನ್ನು ಬಾದಾಮಿಯ ಚಾಲುಕ್ಯರ ಮಂಗಲೇಶನು ಯುದ್ಧದಲ್ಲಿ ಸೋಲಿಸಿದನು. ಕಾಲಂಜರಮಂಡಲ ಇವರ ಮೂಲಸ್ಥಾನ. ಕಾಲಂಜರಪುರ ಅದರ ರಾಜಧಾನಿ (ಈಗಿನ ಮಧ್ಯಪ್ರದೇಶದ ಬಾಂಡಾ ಜಿಲ್ಲೆಯಲ್ಲಿರುವ ಕಾಲಂಜರ್). ಕೆಲಕಾಲಾನಂತರ ಉತ್ತರದ ಪ್ರತೀಹಾರರು ಈ ಕಲಚುರಿಗಳನ್ನು ಎದುರಿಸಿ ಸೋಲಿಸಿದಾಗ, ಅವರು ತಮ್ಮ ಅಧಿಕಾರವನ್ನು ಕಳೆದುಕೊಂಡು (೯ನೆಯ ಶತಮಾನ) ಭಾರತದ ಹಲವಾರು ದಿಕ್ಕುಗಳಿಗೆ ಚೆದರಿದರು.

ಮುಂದಿನ ಒಂದೆರಡು ಶತಮಾನಗಳಲ್ಲಿ ಕಲಚುರಿಗಳು ಪುನಃ ತಲೆಯೆತ್ತಿದರು. ಈ ಮನೆತನದ ಹಲವು ಶಾಖೆಗಳವರು ಬೇರೆಬೇರೆ ಕಡೆ ತಮ್ಮ ಪ್ರಭಾವವನ್ನು ಬೆಳಸಿಕೊಂಡು ಅಧಿಕಾರಕ್ಕೆ ಬಂದರು. ಗೋರಖಪುರದ (ಸರಯೂಪಾರ) ಕಲಚುರಿಗಳು, ಡಾಹಲ (ತ್ರಿಪುರ)ದ ಕಲಚುರಿಗಳು ಹಾಗೂ ರತ್ನಪುರದ (ತುಮ್ಮಾನ) ಕಲಚುರಿಗಳು ಎಂದು ಇವರು ಪ್ರಸಿದ್ಧರಾದರು. ಹೀಗೆ ವಲಸೆ ಹೋದವರಲ್ಲಿ ಕರ್ನಾಟಕಕ್ಕೆ ಬಂದ ಕಲಚುರಿಗಳೂ ಸೇರಿದ್ದಾರೆ.

ಹೈಹಯ ಕುಲಕ್ಕೆ ಸೇರಿದ ಕರ್ನಾಟಕದ ಕಲಚುರಿಗಳು ಹೈಹಯ ರಾಜಧಾನಿಯಾದ, ನರ್ಮದಾ ತೀರದ ಮಾಹಿಷ್ಮತಿಯನ್ನು 'ಮಾಹಿಷ್ಮತೀಪುರವರಾಧೀಶ್ವರ' ಎಂಬ ತಮ್ಮ ಬಿರುದಿನ ಮೂಲಕ ಅಮರವನ್ನಾಗಿ ಮಾಡಿದ್ದಾರೆ. ಉತ್ತರದ ಕಾಲಂಜರಪುರದಿಂದ

ಬಂದವರೆಂಬುದನ್ನು ತೋರಿಸಲು 'ಕಾಲಂಜರಪುರವರಾಧೀಶ್ವರ'ರೆಂದೂ ತಮ್ಮನ್ನು ಕರೆದು ಕೊಂಡಿದ್ದಾರೆ. ಸುವರ್ಣವೃಷಭ ಇವರ ಲಾಂಛನ. ಶೈವ ಭಕ್ತರು. ಮೂಲ ಕಟಚುರಿಗಳೂ ಶೈವಭಕ್ತರೇ. ಸಹಜವಾಗಿಯೇ ಕರ್ಣಾಟಕ ಶಾಖೆಯವರೂ ಶೈವಭಕ್ತರೇ.

'ಕಟಚುರಿ', 'ಕಲಚುರಿ' ಎಂಬ ಪದಗಳಿಗೆ ಅರ್ಥವನ್ನು 'ಕತ್ತಿಯ ಕುಶಲ,' 'ಸೂರ್ಯನಂತೆ ಪ್ರಭಾವಶಾಲಿ' ಎಂದು ಮುಂತಾಗಿ ಕೊಡಲಾಗಿದೆ. ಇದು ಆ ಮನೆತನದ ಮೂಲ ಪುರುಷನ ಹೆಸರಾಗಿರಬಹುದು ಎಂದಿದ್ದಾರೆ ಪೇಸಾಯರು. 'ಕಲತ್ಸೂರಿ', 'ಕಳತ್ಸೂರ್ಯ', 'ಕಳತುರ್ಯ', 'ಕಾಲಚುರಿ', 'ಕಳಚುರಿ'—ಎಂಬಿವು ಶಾಸನಗಳಲ್ಲಿ ಲಭಿಸುವ ಈ ಹೆಸರಿನ ಇತರ ರೂಪಗಳು.

ರಾಷ್ಟ್ರಕೂಟರು ಪ್ರತೀಹಾರರನ್ನು ಸೋಲಿಸಿ ಕಾಲಂಜರದ ಕೋಟೆಯನ್ನು ವಶಪಡಿಸಿಕೊಂಡಾಗ ಅಲ್ಲಿದ್ದ ಕಲಚುರಿಗಳು ಅಲ್ಲಿಂದ ಕಾಲ್ತೆಗೆಯಬೇಕಾಯಿತು. ಅವರಲ್ಲಿ ಕೆಲವರು ಕರ್ಣಾಟಕಕ್ಕೆ ಬಂದರು. ಕರ್ಣಾಟಕದಲ್ಲಿ ಇವರು ಬಂದು ನೆಲಸಿದ ಮೊದಲ ತಾಣ ತರಿಕಾಡನಾಡು. ಇದು ಈಗಿನ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಪರಿಸರದ ಪ್ರದೇಶ. ಪಂಢರಪುರದ ಸಮೀಪದ ಮಂಗಳವೇಢೆ (ಮಗಳಿವೇಡ) ಅಂದು ಆ ಪ್ರದೇಶದ ರಾಜಧಾನಿಯಾಗಿದ್ದಿತು.

ಇವರನ್ನು ಕಲ್ಯಾಣದ ಕಲಚುರಿಗಳು ಎಂದು ಕರೆಯುವುದು ಅಷ್ಟು ಸಮಂಜಸವಲ್ಲ. ಕಲ್ಯಾಣದಲ್ಲಿ ಇವರ ಆಳಿಕೆ ಅತ್ಯಲ್ಪಕಾಲದ್ದು ; ಕೊನೆಗೆ ದುರಂತ. ಮಂಗಳವೇಢೆಯಲ್ಲಿ ಇವರು ಚಾಲುಕ್ಯರ ಮಾಂಡಲಿಕರಾಗಿ ಆಳಿದರಷ್ಟೇ; ಆದ್ದರಿಂದ ಇವರನ್ನು ಕರ್ಣಾಟಕದ ಕಲಚುರಿಗಳೆನ್ನುವುದು ಸೂಕ್ತ.

ಮೊದಲ ಅರಸರು : ಕರ್ಣಾಟಕಕ್ಕೆ ವಲಸೆ ಬಂದು ನೆಲಸಿದ ಕಲಚುರಿಗಳಲ್ಲಿ ಪ್ರಮುಖನಾದವನು ಉಚಿತ. ೧೧ನೆಯ ಶತಮಾನದ ಆರಂಭದಲ್ಲಿ ಈತನು ಪ್ರಬಲನಾದಂತೆ ಊಹಿಸಬಹುದು. ಈತನ ತಮ್ಮ ರಾಜ. ಉಚಿತನ ನಂತರ ಕ್ರಮವಾಗಿ ಆತನ ಮಗ ಅಸಗ, ಮೊಮ್ಮಗ ಕನ್ನಮ, ಮತ್ತು ಮರಿಮಗ ಕಿರಿಯಸಗ ಇವರು ಆಳಿದರು. ಕಿರಿಯ ಸಗನಿಗೆ ರಾಜಲ ಮತ್ತು ಬಿಜ್ಜಲ ಮಕ್ಕಳು. ತಂದೆಯ ನಂತರ ಈ ಸೋದರರು ಕ್ರಮವಾಗಿ ಅಧಿಕಾರವಹಿಸಿದರು. ಹಿರಿಯ ಸೋದರನಿಗೆ ಅಮ್ಮುಗಿ ಮತ್ತು ಶಂಖವರ್ಮ (ಸಂಕಮ) ಎಂಬವರು ಮಕ್ಕಳು. ಇವರು ಯಾವ ಹೊಣೆಯನ್ನೂ ಹೊರಲಿಲ್ಲ. ಕಿರಿಯನಾದ ಬಿಜ್ಜಲನ ಮಗ ಇಮ್ಮಡಿ ಕನ್ನಮ (ಕೃಷ್ಣ)ನ ಬಿಜಾಪುರ ಜಿಲ್ಲೆಯ ಚಡಚಣ ಗ್ರಾಮದಲ್ಲಿ ದೊರೆತ, ಕ್ರಿ.ಶ. ೧೦೫೭ನೆಯ ವರ್ಷದ, ಶಾಸನದಲ್ಲಿ ಉಕ್ತನಾಗಿರುವ ಮಹಾಮಂಡಳೇಶ್ವರ ಬಿಜ್ಜ(ಬಿಜ್ಜರಸ)ನು ಈ ಕನ್ನಮನೇ ಎಂದು ನಿರ್ಧರಿಸಲಾಗಿದೆ. ಶಾಸನದಲ್ಲಿ ಈತನನ್ನು 'ಕಾಲಂಜರಪುರವರಾಧಿಪ', 'ಸ್ವರ್ಣವೃಷಭಧ್ವಜ', 'ಡಹಳಬೆಡಂಗ' ಮುಂತಾಗಿ ವರ್ಣಿಸಿದೆ. ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ 'ಕಳಿಂಗ ವೆಂಗೀಭುಜಂಗವೈನತೇಯ', 'ಲಾಳಚೋಳಬಳಜಳಧಿಬಡವಾನಲ' ಎಂದು ಬಿರುದಾಂಕಿತನಾದ ಮಹಾಮಂಡಲೇಶ್ವರ ಕನ್ನಮರಸನು ಕ್ರಿ.ಶ. ೧೦೬೭ರಲ್ಲಿ ಬಿಟ್ಟ ದತ್ತಿಯ

ಸ್ತಾಪವಿದೆ. ಈತನೂ ಮೇಲೆ ಹೇಳಿದ ಬಿಜ್ಜರಸನೂ ಮಂಗಳವೇಢೆಯ ನೆಲೆವೀಡಿನಲ್ಲಿ ಳುತ್ತಿದ್ದರೆಂದಿದೆ. ಕನ್ನಮನು ತನ್ನ ಅಧಿಪನಾದ ಚಾಲುಕ್ಯ ಅರಸನ ದಂಡಯಾತ್ರೆ ಳಲ್ಲಿ ಭಾಗವಹಿಸಿ, ತನ್ಮೂಲಕ ಲಾಳ ಚೋಳರನ್ನು ಸೋಲಿಸಿದ, ಕಳಿಂಗ ವೆಂಗಿಗಳನ್ನು ಕ್ರಮಿಸಿದ ಯಶಸ್ಸಿಗೆ ಪಾಲುದಾರನಾದ.

ಕನ್ನಮನ ಮಗ ಜೋಗನು. ಈತನನ್ನು ತರಿಕಾಡ ಜೋಗಮ ಎಂದು ಕೆಲವು ಶಾಸನ ಳಲ್ಲಿ ಕರೆದಿದೆ. ಸುಮಾರು ಕ್ರಿ.ಶ. ೧೦೮೦ರಿಂದ ೧೧೧೮ರ ವರೆಗೆ ಅಧಿಕಾರದಲ್ಲಿದ್ದ ತನು ೬ನೆಯ ವಿಕ್ರಮಾದಿತ್ಯನ ವಿಧೇಯ ಸಾಮಂತನಾಗಿದ್ದನು. ಅರಸನು ಹೂಡಿದ್ದ ದನಗಳಲ್ಲಿ ಪಾಲ್ಗೊಂಡು ಸಾಮರ್ಥ್ಯದಿಂದ ಹೋರಾಡಿ, ಆತನ ವಿಶ್ವಾಸವನ್ನು ಂಪಾದಿಸಿದ್ದನು. ಫಲವಾಗಿ ಈತನ ಆಡಳಿತ ಕ್ಷೇತ್ರವು ನೆರೆಯ ಕರಹಾಡ ಪ್ರಾಂತಕ್ಕೂ ಸ್ತರಿಸಿತು. ಇದರಿಂದ ಚಾಲುಕ್ಯರಾಜ್ಯದ ಉತ್ತರ ಮೇರೆಯನ್ನು ಕಾಪಾಡುವ ವಾಬ್ದಾರಿ ಈತನದಾಯಿತು. ತನ್ನ ಮಗಳಾದ ಸಾವಳದೇವಿಯನ್ನು ಅರಸನಿಗೆ ಕೊಟ್ಟು ೈತ್ರಿಯನ್ನು ಬಲಪಡಿಸಿದನು.

ಜೋಗಮನ ಮಗ ಪೆರ್ಮಾಡಿ ಈ ಬಾಂಧವ್ಯವನ್ನು ಇನ್ನಷ್ಟು ಸ್ಥಿರಗೊಳಿಸಿದನು. ತ ತರ್ದವಾಡಿ ಸಾಸಿರದ (ಈಗಿನ ಬಿಜಾಪುರ ಜಿಲ್ಲೆ) ಮಂಡಲೇಶ್ವರನಾಗಿದ್ದ. ಹಾರಾಷ್ಟ್ರದ ದಕ್ಷಿಣ ಸತಾರಾ ಜಿಲ್ಲೆಯ ವಳಸಂಗ ಗ್ರಾಮದ ಶಾಸನಾಧಾರದ ಮೇಲೆ ತನು ವಿಕ್ರಮಾದಿತ್ಯನ ಅಗ್ರಮಹಿಷಿ ಎನಿಸಿದ್ದ ಚಂದಲದೇವಿಯ ಮಗಳನ್ನು ಮದುವೆ ಾದನೆಂದೂ ಆ ರಾಜಕುಮಾರಿಯ ಮಗನೇ ಇಮ್ಮಡಿ ಬಿಜ್ಜಲನೆಂದೂ ಹೇಳಲಾಗಿದೆ. ಂದ ಮೇಲೆ, ಪೆರ್ಮಾಡಿಯು ವಿಕ್ರಮಾದಿತ್ಯನ ಅಳಿಯನೆಂದಾಯಿತು. ಚಕ್ರವರ್ತಿ ಮಾರಿ ನಾಗಲದೇವಿ ಇರಬಹುದು ; ಏಕೆಂದರೆ ಅಥಣಿ ತಾಲ್ಲೂಕಿನ ಬಳಗೇರಿ ಶಾಸನ ಲ್ಲಿ ಇಮ್ಮಡಿ ಬಿಜ್ಜಳನ ತಾಯಿ ನಾಗಲದೇವಿ ಎಂದಿದೆ. ರಾಜಲ ಮತ್ತು ಮೈಳುಗಿಯರು ಬಿಜ್ಜಲನ ಕಿರಿಯ ಸೋದರರು.

ಚಾಲುಕ್ಯ ಸಮ್ರಾಟನೊಡನೆ ಪಡೆದಿದ್ದ ರಕ್ತಸಂಬಂಧ[17] ಪೆರ್ಮಾಡಿಯ ಧೋರಣೆ ುನ್ನು ಬದಲಾಯಿಸಿತ್ತು. ಅನೇಕರಂತೆ ತಾನೂ ಒಬ್ಬ ಮಹಾಮಂಡಲೇಶ್ವರನೆಂಬುದನ್ನು ುರೆತು, ಅರಸನ ಅಧೀನನೆಂದು ಹೇಳುವುದು ತನ್ನ ಘನತೆಗೆ ಕುಂದೆಂದು ಆತ ಭಾವಿಸಿ ಂತೆ ತೋರುತ್ತದೆ. ಆದರೆ ಈ ಮನೋಭಾವನನ್ನು ತೋರ್ಪಡಿಸಿಕೊಳ್ಳಲು ಹಿಂಜರಿದನು. ಕ್ರಮಾದಿತ್ಯನ ಮರಣ ಈತನಲ್ಲಿ ಕೊಂಚ ಧೈರ್ಯತಂದಿತು. ನಂತರ ಆಳಲು ಬಂದ ೋಮೇಶ್ವರನಿಗೆ ತನ್ನನ್ನು ಸರೀಕನಾಗಿ ತಿಳಿದ. ಆದ್ದರಿಂದಲೇ ಕ್ರಿ.ಶ. ೧೧೨೯ರ ೊದಲಬಾಗಿ ಶಾಸನದಲ್ಲಿ ಈತನ 'ಮಹಾಮಂಡಲೇಶ್ವರ' ಎಂಬ ಬಿರುದಿಲ್ಲ; ಸಾರ್ವ ೌಮನ ಹೆಸರನ್ನೂ ಉಲ್ಲೇಖಿಸಿಲ್ಲ. ಅದಕ್ಕೆ ಬದಲು ಈ ವರ್ಷ ತನ್ನ ಆಳಿಕೆಯ ನೆಯ ವರ್ಷವೆಂದು ಹೇಳಿಕೊಂಡ. ಇದು ಮುಂದಿನ ಘಟನೆಗಳಿಗೆ ಸೂಚಿ.

ಇಮ್ಮಡಿ ಬಿಜ್ಜಲ : ಇಮ್ಮಡಿ ಬಿಜ್ಜಲನ ಜೀವನ ಪರಿಚಯ ನಮಗೆ ಅವನ ಹಾಗೂ ವನ ನಂತರದ ಅರಸರ ಶಾಸನಗಳಿಂದ ನಿಸ್ಪೃಷ್ಟವಾಗಿ ತಿಳಿಯುತ್ತದೆ. ಒಂದು ವಿಧದಲ್ಲಿ

ಕರ್ನಾಟಕದ ಶಾಸನಗಳಲ್ಲಿ ಈ ಕಲಚುರಿಯರ, ಅದರಲ್ಲಿಯೂ ಈ ಬಿಜ್ಜಳನ ಕುರಿತಾದ ಶಾಸನಗಳು ವಿಶಿಷ್ಟವಾದವು. ಬಿಜ್ಜಳನ ಆಸೆ ನಿರಾಸೆಗಳನ್ನೂ ಸಾಫಲ್ಯ ವೈಫಲ್ಯಗಳನ್ನೂ ಶಾಸನಗಳು ಚೆನ್ನಾಗಿ ಚಿತ್ರಿಸಿವೆ. ಮೇಲೆ ಹೇಳಿದಂತೆ ಸ್ವತಂತ್ರನಾಗಿ ಆಳಬೇಕೆನ್ನುವ ಆಸೆಯು ಅಂಕುರಾರ್ಪಣವಾದ್ದು ಪೆರ್ಮಾಡಿಯ ಕಾಲದಲ್ಲಿ. ಆಗ ಮೊಳಕೆಯೊಡೆದದ್ದು ಈಗ ಹೆಮ್ಮರವಾಯಿತು. ತನ್ನ ಪೂರ್ವಜರು ಹಿಂದೆ ಮಧ್ಯಭಾರತದಲ್ಲಿ ಪಡೆದಿದ್ದ ಸಾರ್ವಭೌಮತ್ವವನ್ನು ಬಿಜ್ಜಳ ಈಗ ಸ್ಮರಿಸಿದ. ಅಂತಹ ಉಜ್ಜ್ವಲವಾದ ವಂಶಕ್ಕೆ ಸೇರಿದ ತಾನು ಸಾಮಂತನಾಗಿರುವುದಾದರೂ ಹೇಗೆ? ಹಿಂದಿನವರು ಬಾಹುಬಲವಿಲ್ಲದೆ ಮಾಂಡಲಿಕರಾಗಿದ್ದಿರಬಹುದು. ಆದರೆ ಶಕ್ತಿಸಂಪನ್ನನಾದ ತಾನೇಕೆ?

ಪೆರ್ಮಾಡಿ ಕ್ರಿ.ಶ.೧೧೩೦ರ ವರೆಗೆ ಅಧಿಕಾರದಲ್ಲಿದ್ದನೆಂದು ಊಹಿಸಿ, ಬಳಿಕ ಬಿಜ್ಜಳನು ಅವನ ಉತ್ತರಾಧಿಕಾರಿಯಾದನೆನ್ನಬಹುದು. ಆದರೆ ಇದಕ್ಕೂ ಮೊದಲೇ ಬಿಜ್ಜಳನು ಅರಸನ ಸ್ನೇಹವನ್ನು ಸಂಪಾದಿಸಿ ಆತನ ಕೃಪಾಪಾತ್ರನಾಗಿದ್ದನು. ೬ನೆಯ ವಿಕ್ರಮಾದಿತ್ಯನ ಕೊನೆಯ ವರ್ಷಗಳಲ್ಲಿ ಈತನು ಮಹಾಮಂಡಲೇಶ್ವರ ಪದವಿಯನ್ನು ಪಡೆದುದು ಇತ್ತೀಚಿನ ಕೆಲವು ಶಾಸನಗಳಿಂದ ತಿಳಿದಿದೆ. ಕೆಲವೊಮ್ಮೆ ಈತನನ್ನು ಕುಮಾರನೆಂದು ಸಂಬೋಧಿಸಲಾಗಿದೆ. ಧಾರವಾಡಜಿಲ್ಲೆಯ ತಂಬೂರಿನಲ್ಲಿ ದೊರೆತ ಕ್ರಿ.ಶ. ೧೧೩೬ನೆಯ ವರ್ಷದ ಶಾಸನದಲ್ಲಿ ತರಿಕಾಡ ಬಿಜ್ಜಲದೇವನು ಹಾನುಂಗಲ್ಲು ಕೋಟೆಯನ್ನು ಮುತ್ತಿದಾಗ ಕೇತಯ ನಾಯಕನೆಂಬ ಸೇನಾನಿಯು ಕೋಟೆಯ ರಕ್ಷಣೆಗಾಗಿ ಅಸುವನ್ನು ನೀಗಿದನೆಂದು ಹೇಳಲಾಗಿದೆ. ಇದರಲ್ಲಿ ಉಕ್ತನಾದ ಬಿಜ್ಜಲದೇವನು ಕಲಚುರಿ ಇಮ್ಮಡಿ ಬಿಜ್ಜಳನೇ. ಈ ವೇಳೆಗೆ ಬಿಜ್ಜಳನು ತನ್ನ ಶಕ್ತಿಯನ್ನು ವರ್ಧಿಸಿಕೊಳ್ಳುತ್ತ, ಚಾಲುಕ್ಯರ ಸಾಮಂತರ ಮೇಲೆರಗಿ ಅವರನ್ನು ತನ್ನ ಬೆಂಬಲಿಗರನ್ನಾಗಿ ಮಾಡಿಕೊಳ್ಳುವ ಯತ್ನ ಮಾಡುತ್ತಿದ್ದನು.

ವಿಕ್ರಮಾದಿತ್ಯನ ಬಳಿಕ ಆಳತೊಡಗಿದ ಭೂಲೋಕಮಲ್ಲನು ಈತನಿಗೆ ಸೋದರಮಾವ. ಸ್ವಲ್ಪಮಟ್ಟಿಗೆ ಗೌರವ ಪಾತ್ರನಾದವನು. ನಂತರ ಬಂದ ಆತನ ಮಗ ಜಗದೇಕಮಲ್ಲನು ಇವನ ಸಮಾನವಯಸ್ಕನಾಗಿರಬೇಕೆಂದು ಇದುವರೆಗೆ ಭಾವಿಸಲಾಗಿತ್ತು. ಆದರೆ ಇತ್ತೀಚೆಗೆ ಆತನು ಬಿಜ್ಜಳನಿಗಿಂತ ವಯಸ್ಸಿನಲ್ಲಿ ಹಿರಿಯನೆಂದು ಹೇಳಲು ಆಧಾರಗಳಿವೆ. ಮುಮ್ಮಡಿ ತೈಲಪನು ಸಹ ಈತನಿಗೆ ಹಿರಿಯ. ಕ್ರಿ.ಶ. ೧೧೫೦ರಲ್ಲಿ ತೈಲಪನು ಅಧಿಕಾರಕ್ಕೆ ಬಂದುದು ಬಿಜ್ಜಳನಿಗೆ ಅತೀವ ಮಾತ್ಸರ್ಯವನ್ನುಂಟುಮಾಡಿತು. ತನ್ನಲ್ಲಿ ಶೌರ್ಯ ಸಾಮರ್ಥ್ಯಗಳಿದ್ದಾಗ, ತನಗಿಂತ ಅಲ್ಪನಾದವನ ಅಧೀನದಲ್ಲಿ ಬಾಳುವುದು ತರವಲ್ಲವೆಂಬ ಧೋರಣೆಯನ್ನು ತಳೆದ ಬಿಜ್ಜಳನು ರಾಜ್ಯಕ್ರಾಂತಿಯ ದಿಶೆಯಲ್ಲಿ ಒಂದೊಂದೇ ಹೆಜ್ಜೆಯನ್ನಿಡುತ್ತ ಹೋದನು. ಮಹಾಮಂಡಲೇಶ್ವರನೆಂಬ ಬಿರುದನ್ನು ಕೈಬಿಟ್ಟು, ಸಮಯ ದೊರೆತಾಗ ತನ್ನ ಹೆಸರಿನಲ್ಲೇ ಶಾಸನಗಳನ್ನು ಹಾಕಿಸಿದ; ಸಾರ್ವಭೌಮನ ಆಳಿಕೆಯ ವಿಷಯವನ್ನೇ ನಿರ್ಲಕ್ಷಿಸಿದ. ಬಿರುದುಗಳನ್ನು ಬದಲಾಯಿಸಿ ಭುಜಬಳಮಲ್ಲ, ಭುವನೈಕವೀರ, ಭುಜಬಳಚಕ್ರವರ್ತಿ ಮುಂತಾಗಿ ಕರೆದುಕೊಳ್ಳತೊಡಗಿದ. ತನ್ನ

ಹೆಸರಿನ ಕಾಲಗಣನೆಯನ್ನೂ ಸ್ಥಾಪಿಸಿದ. ಕ್ರಿ.ಶ. ೧೧೫೭ರ ಶಾಸನದಲ್ಲಿ ಆ ವರ್ಷವು ಬಿಜ್ಜಲದೇವರ ಆಳಿಕೆಯ ಒನೆಯ ವರ್ಷವೆಂದಿದೆ. ಎಂದಮೇಲೆ ೧೧೫೬ರಿಂದಲೇ ಈ ಪದ್ಧತಿಯನ್ನು ಆತ ಜಾರಿಗೆ ತಂದಿರಬೇಕು.

೧೧೫೫ನೆಯ ವರ್ಷದ ಬಳ್ಳಿಗಾವೆ ಶಾಸನದಲ್ಲಿ ಚಾಲುಕ್ಯರ ವಂಶಾವಳಿಯನ್ನು ಮುಮ್ಮಡಿತೈಲಪನವರೆಗೆ ನಿರೂಪಿಸಿ "ಸಮಧಿಗತಪಂಚಮಹಾಶಬ್ದ ಮಹಾರಾಜಾಧಿರಾಜ ಕಾಳಂಜರಪುರವರಾಧೀಶ್ವರ....ಶನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕರಾಮ ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ಭುಜಬಳಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಲದೇವ ಅರಸರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ಧಮಾನಮಾಚಂದ್ರತಾರಂ ಸಲುತ್ತುಮಿರೆ" ಎಂದು ಬಿಜ್ಜಲನ ಆಳಿಕೆಯನ್ನು ಪ್ರಸ್ತಾಪಮಾಡಿದೆ.

ಚಾಲುಕ್ಯ ರಾಜ್ಯದಲ್ಲಿ ಈ ವೇಳೆಗೆ ಅಸ್ಥಿರತೆ ಉಂಟಾಗಿತ್ತು. ಅನೇಕ ಸಾಮಂತರು ಸ್ವತಂತ್ರವಾಗಿ ಆಳುವ ಸನ್ನಾಹ ನಡಸಿದ್ದರು. ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರು, ಕರಹಾಡದಲ್ಲಿ ಶಿಲಾಹಾರ ಮನೆತನದ ವಿಜಯಾದಿತ್ಯ, ಕಾಕತೀಯರ ಪ್ರೋಲ, ಸೇಉಣ ಮನೆತನದ ಇಮ್ಮಡಿ ಮಲ್ಲುಗಿ ಮುಂತಾದವರು ತೈಲನ ವಿರುದ್ಧ ನಿಂತರು. ಇವರು ಬಿಜ್ಜಲನಿಗೆ ಪರೋಕ್ಷವಾಗಿ ಬೆಂಬಲವನ್ನು ನೀಡಿರಬಹುದು. ಈ ಪರಿಸ್ಥಿತಿಯನ್ನು ಎದುರಿಸಲಾಗದ ತೈಲಪನು ಕ್ರಿ.ಶ. ೧೧೫೭ರ ನಂತರ ರಾಜಧಾನಿಯಾದ ಕಲ್ಯಾಣವನ್ನು ತ್ಯಜಿಸಿ, ತನ್ನ ವಿಧೇಯ ಸಾಮಂತರಾದ ಸಿಂದರ ಮತ್ತು ಕದಂಬರ ಆಶ್ರಯ ಪಡೆಯ ಬೇಕಾಯಿತು. ಇದಾದ ೬-೭ ವರ್ಷಗಳಲ್ಲಿಯೇ ಬಿಜ್ಜಲನು ತೈಲನನ್ನು ಸೋಲಿಸಿ, ಕೊಂದು, ಚಾಲುಕ್ಯ ರಾಜ್ಯವನ್ನು ಅತಿಕ್ರಮಿಸಿದನು.

ಮಾಂಡಲಿಕನಾಗಿ ಆಳತೊಡಗಿದ್ದ ಒಬ್ಬ ಸಾಮಾನ್ಯ ಸಾಮ್ರಾಜ್ಯಕ್ಕೊಡೆಯನಾದನು. ದಾವಣಗೆರೆಯ ಒಂದು ಶಾಸನದಲ್ಲಿ ಇದನ್ನು

ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸತೊಡನೆ ದೋರ್ಗರ್ವದಿಂ ಮುನ್ನಿಯರ್ಗುರ್ಬ್ಬ
ಬ್ಬಸಮುಂ ಮುಂ ಮಾಡಿದಂ ಮತ್ತಿರೆಯಿರೆ ಚಲದಿಂ ಮಂಡಳೇಶರ್ಗೆ ಬೇರೊಳ್
ಬಿಸಿನೀರಂ ಪೊಯ್ದುನಂತಸ್ತಿರೆಯಿರೆ ಬಳಿಯುಂ ರಾಯರಂ ಕೂಡೆ ನಿರ್ಮೂ
ಳಿಸಿದಂ ಚಕ್ರಾಧಿನಾಥೋಜ್ಜ್ವಳಮುಖತಿಳಕಂ ಬಿಜ್ಜಲಕ್ಷೋಣಿಪಾಳಂ ॥

ಕೊಡದಿನುದಯಿಸಿದಗಸ್ತ್ಯಂ
ಕಡಲಂ ಪೀರ್ವಂತೆ ಮಂಡಳೇಶ್ವರರಾಜ್ಯ
ಕ್ಕೊಡೆಯನೆನೆ ಪುಟ್ಟಿ ವೀರದಿ
ನೆಡೆಗೊಂಡಂ ಸಕಳಧಾತ್ರಿಯಂ ಬಿಜ್ಜನೃಪಂ ॥

ಎಂದು ವರ್ಣಿಸಿದೆ.

ಇದು ಆದುದು ಕ್ರಿ.ಶ. ೧೧೬೨ರ ವೇಳೆಗೆ. ಆ ವರ್ಷದಿಂದ ಕರ್ನಾಟಕದಲ್ಲಿ ಕಲಚುರಿಗಳ ಆಳಿಕೆ ಆರಂಭವಾಯಿತು.

ಅನಾಯಕತ್ವ-ಅಂತ್ಯ: ಚಾಲುಕ್ಯರಾಜ್ಯಕ್ಕೆ ಉತ್ತರಾಧಿಕಾರಿ ಎನಿಸಿದರೂ ಬಿಜ್ಜಲನ

ರಾಜ್ಯ ಚಾಲುಕ್ಯರಾಜ್ಯವನ್ನೆಲ್ಲ ಒಳಗೊಂಡಿರಲಿಲ್ಲ. ಬನವಾಸಿಮಂಡಲ ರಾಜ್ಯದ ದಕ್ಷಿಣದ ಮೇರೆ. ಅಲ್ಲಿಂದಿತ್ತ ಇತರ ಸಾಮಂತರು ಅಧಿಕಾರದಲ್ಲಿದ್ದರು. ಈ ಸಾಮ್ರಾಜ್ಯ ಪಟ್ಟ ಬಹುಕಾಲ ಉಳಿಯಲಿಲ್ಲ. ೫–೬ ವರ್ಷಗಳ ಕಾಲ ಆಳುವ ವೇಳೆಗೆ ಅವನ ಸಾಮರ್ಥ್ಯ ಉಡುಗಿತು. "ಎಣಿಸಿದುದಕ್ಕಿಂತ ಮುಂಚಿತವಾಗಿ ಅತ್ಯಲ್ಪಕಾಲದಲ್ಲಿಯೇ ಆತನು ಬಿತ್ತಿದ ವಿಷಬೀಜಗಳು ಮರವಾಗಿ ಬೆಳೆದು ಕಹಿಹಣ್ಣುಗಳನ್ನು ನೀಡಿದವು. ಅಷ್ಟೇ ಅಲ್ಲದೆ ಅದು ಶಾಪದಂತೆ ಅವನ ಸಂತತಿಯನ್ನೇ ಸುತ್ತುವರಿಯಿತು."

ಬಿಜ್ಜಲನಿಗೆ ಏಚಲದೇವಿಯಲ್ಲಿ ಜನಿಸಿದ್ದ ವಜ್ರದೇವನೆಂಬ ಮಗ ಅಲ್ಪಾಯುಷಿಯಾಗಿ ತಂದೆ ಜೀವಿಸಿದ್ದಾಗಲೇ ಮೃತನಾದ. ಈತನ ಮಗ ಕರ್ಣ (ಕಲಿದೇವ); ರಾಯ ಮುರಾರಿ ಸೋಮೇದೇವ, ಮಲ್ಲಿಕಾರ್ಜುನ (ಮಲ್ಲುಗಿ), ಸಂಕಮ, ಆಹವಮಲ್ಲ ಮತ್ತು ಸಿಂಘಣರು ಇತರ ಮಕ್ಕಳು. ಕಸಪಯ್ಯನಾಯಕ ಬಿಜ್ಜಲನ ನಿಷ್ಠಾವಂತ ದಂಡ ನಾಯಕ. ಈತನ ಬಂಧುವಾದ ಬಂದಣಿಕೆಯ ಬರ್ಮರಸನು ಬಿಜ್ಜಲನ ಅಳಿಯ. ಬಿಜ್ಜಲನ ಹಿರಿಯ ಮಗಳಾದ ಸಿರಿಯಾದೇವಿ ಸಿಂದವಂಶದ ಚಾವುಂಡನನ್ನು ಮದುವೆಯಾಗಿ ದ್ದಳು. ಬಿಜ್ಜಲನು ಅಧಿಕಾರದಲ್ಲಿದ್ದಾಗಲೇ ಅವನ ಸೋದರರು ಹಾಗೂ ಮಕ್ಕಳಲ್ಲಿ ಸಿಂಹಾಸನಕ್ಕಾಗಿ ಜಗಳಗಳಾರಂಭವಾಗಿದ್ದವು. ಸು. ೧೧೬೭ರಲ್ಲಿ ಬಿಜ್ಜಲನು ಈ ಅಂತಃ ಕಲಹಗಳನ್ನು ಕೊನೆಗಾಣಿಸಲೆಂಬಂತೆ ರಾಯಮುರಾರಿ ಸೋಮೇದೇವನನ್ನು ತನ್ನ ಉತ್ತರಾಧಿಕಾರಿಯಾಗಿ ಘೋಷಿಸಿ ಅವನಿಗೆ ಅಧಿಕಾರವನ್ನು ಬಿಟ್ಟುಕೊಟ್ಟನು. ಇದಕ್ಕೂ ಮೂರು ವರ್ಷಗಳ ಮೊದಲಿನ (೧೧೬೫) ಶಾಸನವೊಂದು, ಸೋಮೇದೇವನಿಗೆ ಸೇರಿದ್ದು, ಅದರಲ್ಲಿ ಆತನು ಎಲ್ಲ ರಾಜಪ್ರಶಸ್ತಿಗಳನ್ನೂ ಧರಿಸಿ ತರ್ದವಾಡಿ ಪ್ರಾಂತವನ್ನು ಆಳು ತ್ತಿದ್ದನೆಂದು ಹೇಳುತ್ತದೆ. ಬಹುಶಃ ಬಿಜ್ಜಲನು ಒತ್ತಡಕ್ಕೊಳಗಾಗಿ ಅಧಿಕಾರವನ್ನು ಬಿಟ್ಟಿರಬೇಕು. ಆದರೆ ಇದು ಅಂತಃಕಲಹಗಳನ್ನು ಕೊನೆಗಾಣಿಸಲಿಲ್ಲ, ತೀಕ್ಷ್ಣಗೊಳಿ ಸಿತು. ಬಿಜ್ಜಲನ ಸೋದರನ ನಂತರ, ಆತನ ಮೊಮ್ಮಗನ ಬೆಂಬಲಕ್ಕೆ ನಿಂತ ಕಸಪಯ್ಯ ನಾಯಕನು ಸೋಮೇದೇವನನ್ನು ಎದುರಿಸಿದನು. ಸೋಮೇದೇವನ ಅಧಿಕಾರಿಯಾದ ಮಾಧವ ದಂಡನಾಥನು ಕಸಪಯ್ಯನನ್ನೆದುರಿಸಿ, ಕರ್ಣನನ್ನು ಕೊಂದು, ಸೋಮೇದೇವನನ್ನು ರಾಜ್ಯ ದಲ್ಲಿ ಸ್ಥಿರಗೊಳಿಸಿದನೆಂದು ಶಾಸನದಿಂದ ತಿಳಿದುಬರುತ್ತದೆ. ಆದರೆ ಸೋಮೇದೇವನು ಆಳಿದ ೬–೭ ವರ್ಷಗಳಲ್ಲಿ ರಾಜ್ಯ ರಾಜಕೀಯ ಸಾಮಾಜಿಕ ಮತ್ತು ವಿಪ್ಲವಗಳನ್ನು ಕಂಡಿತು. ಆತನ ಶಾಂತಿ ಕದಡಿತು. ಆರಂಭದಲ್ಲಿ ಚಿಕ್ಕಪ್ಪ ಹಾಗೂ ಅಣ್ಣನ ಮಗನನ್ನೆ ದುರಿಸಿದ ಈತ, ನಂತರದ ३–४ ವರ್ಷಗಳಲ್ಲಿ ತನ್ನ ಇತರ ಸೋದರರ ದಂಗೆಯನ್ನು ಅಡಗಿಸಬೇಕಾಯಿತು. ಮಲ್ಲಿಕಾರ್ಜುನ, ಸಂಕಮ, ಆಹವಮಲ್ಲ ಮತ್ತು ಸಿಂಘಣರು ಅರಸೊತ್ತಿಗೆಗಾಗಿ ಕಾದಾಡಿದರು. ಕ್ರಿ.ಶ. ೧೧೭೬ರ ನಂತರ ಸೋಮೇದೇವನು ಆಳಲಿಲ್ಲ. ಆತನ ಕೊನೆಯ ವರ್ಷದಲ್ಲಿ ಮಲ್ಲಿಕಾರ್ಜುನನು ಸ್ವತಂತ್ರನಾಗಿ ಆಳಿದಂತೆ ತೋರುತ್ತದೆ. ಇತರರೂ ೧–೨ ವರ್ಷಗಳು ಅಧಿಕಾರದಲ್ಲಿದ್ದರು.

ಈ ವೇಳೆಗೆ ರಾಜ್ಯದಲ್ಲಿ ಅರಾಜಕತೆ ಕಾಲಿಟ್ಟಿತ್ತು. ದಕ್ಷ ನಾಯಕನಿಲ್ಲದೆ ಜನರು

ಬೀಸತ್ತಿದ್ದರು. ತಲೆಮರಸಿಕೊಂಡಿದ್ದ ಚಾಲುಕ್ಯ ನಾಲ್ವಡಿ ಸೋಮೇಶ್ವರನು ಈ ಸಂದರ್ಭವನ್ನುಪಯೋಗಿಸಿ ತನ್ನ ರಾಜ್ಯವನ್ನು ಹಿಂದಕ್ಕೆ ಪಡೆಯಲು ಯತ್ನಿಸಿದನು. ಇವನ ಹೆಸರಿನಲ್ಲಿ ಇತರರು ಕಲಚುರಿಗಳನ್ನು ಸೋಲಿಸಿದರು. ತಾತ್ತ್ವಿಕವಾಗಿ ರಾಜ್ಯ ಸೋಮೇಶ್ವರನಿಗೆ ದಕ್ಕಿತು. ಆದರೆ ಆಗ ಆರಂಭವಾಗಿದ್ದ ವಿಪ್ಲವದ ಪ್ರವಾಹದಲ್ಲಿ ಈತನೂ ಈತನೊಂದಿಗೆ ಚಾಲುಕ್ಯ ರಾಜ್ಯವೂ ಕೊಚ್ಚಿಹೋಯಿತು. ಉತ್ತರ ಕರ್ಣಾಟಕ ದಲ್ಲಿ ಹಲವಾರು ಜನ ಪ್ರಭುತ್ವಕ್ಕಾಗಿ ಹೋರಾಡಿದರು. ಇವರಲ್ಲಿ ಯಶಸ್ವಿಯಾದವರು ಸೇಉಣರು. ಆದರೆ ಈ ವೇಳೆಗೆ ಕರ್ಣಾಟಕ ಇಬ್ಭಾಗವಾಗಿ ಒಡೆದು ತುಂಗಭದ್ರೆ ನಡು ವಣ ಮೇರೆಯಾಯಿತು.

## ದೇವಗಿರಿಯ ಸೇಉಣರು

ಮೂಲ: ತುಂಗಭದ್ರೆಯ ಉತ್ತರದ ಕರ್ಣಾಟಕದಲ್ಲಿ ಚಾಲುಕ್ಯ ರಾಜ್ಯವನ್ನು ವಶ ಪಡಿಸಿಕೊಂಡ ಈ ಸೇಉಣರು ಯಾರು, ಮೂಲತಃ ಯಾವ ಪ್ರದೇಶಕ್ಕೆ ಸೇರಿದವರು— ಎಂಬುದನ್ನು ಕುರಿತು ಭಿನ್ನಾಭಿಪ್ರಾಯಗಳಿವೆ. ಭಾರತದ ಇತಿಹಾಸಕಾರರು ಇದುವರೆಗೆ ಇವರನ್ನು ದೇವಗಿರಿಯ ಯಾದವರೆಂದು ಸಾಮಾನ್ಯವಾಗಿ ಕರೆದಿದ್ದಾರೆ. ಸೋಮ ವಂಶೀಯರಾದ ಇವರು ಪ್ರಸಿದ್ಧ ಯದುಕುಲದ ಯದುವೆಂಬ ಅರಸನ ವಂಶಜರೆಂದು ಹೇಳಿ ಕೊಂಡು, ಶ್ರೀಕೃಷ್ಣನಿಗೆ ಸಂಬಂಧಪಟ್ಟವರೆಂದೂ ವಿಷ್ಣುವಂಶೋದ್ಭವರೆಂದೂ ತಮ್ಮನ್ನು ಶಾಸನಗಳಲ್ಲಿ ಕರೆದುಕೊಂಡಿದ್ದಾರೆ. ದ್ವಾರಕೆ (ದ್ವಾರಾವತೀ) ಇವರ ರಾಜಧಾನಿಯಾಗಿ, ಇವರು 'ದ್ವಾರಾವತೀಪುರವರಾಧೀಶ್ವರ'ರೆನಿಸಿಕೊಂಡರು.

ಆದರೆ ಹೀಗೆ ಯದುಕುಲದೊಡನೆ ಸಂಬಂಧವನ್ನು ಕೂಡಿಸಿಕೊಂಡವರು ಇವರೊಬ್ಬರೇ ಅಲ್ಲ, ಹಿಂದೆ ರಾಷ್ಟ್ರಕೂಟರು ಹೀಗೆ ಮಾಡಿದ್ದರು. ಉಚ್ಚಂಗಿಯ ಪಾಂಡ್ಯರೂ ಚೆಂಗಾಳ್ವರೂ ದ್ವಾರಾವತಿಯೊಡನೆ ತಮ್ಮ ಸಂಬಂಧವನ್ನು ಹೇಳಿಕೊಂಡಿದ್ದಾರೆ. ಸೇಉಣರ ಸಮಕಾಲೀನರಾದ ಹೊಯ್ಸಳ ಅರಸರು ಸಹ 'ಯಾದವನಾರಾಯಣ', 'ದ್ವಾರಾವತೀಪುರವರಾಧೀಶ್ವರ' ಎಂಬ ಬಿರುದುಗಳನ್ನು ಧರಿಸಿದ್ದು ಕಾಣುತ್ತೇವೆ. ಇಷ್ಟ ರಿಂದಲೇ ಹೊಯ್ಸಳರು ಕರ್ಣಾಟಕಕ್ಕೆ ಹೊರಗಿನಿಂದ ಬಂದವರೆಂದು ಹೇಳಲಾಗದು. ಸೇಉಣರ ವಿಚಾರವೂ ಹೀಗೆಯೇ.

ಇವರಲ್ಲಿ ಮೊದಮೊದಲು ಆಳಿದ ದೃಢಪ್ರಹಾರನು ದ್ವಾರಾವತಿಯನ್ನು ತ್ಯಜಿಸಿ, ಚಂದ್ರಾದಿತ್ಯಪುರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಕೆಲವು ಶಾಸನಗಳು ಹೇಳುತ್ತವೆ. ಸೇಉಣರ ಇತಿಹಾಸಕ್ಕೆ ಮುಖ್ಯ ಸಾಹಿತ್ಯಿಕ ಆಧಾರವಾದ ಹೇಮಾದ್ರಿಯ 'ಚತುರ್ವರ್ಗ ಚಿಂತಾಮಣಿ'ಯಲ್ಲಿ ಈ ಚಂದ್ರಾದಿತ್ಯಪುರಕ್ಕೆ ಬದಲು ಶ್ರೀನಗರ (ಮಹಾರಾಷ್ಟ್ರದ ನಾಸಿಕ್ ಜಿಲ್ಲೆಯ ಸಿಂದಿನೇರ—ಸಿನ್ನರ್) ಈತನ ರಾಜಧಾನಿ ಯಾಯಿತೆಂದಿದೆ. ದೃಢಪ್ರಹಾರನ ಮಗ ಸೇಉಣಚಂದ್ರನು ಸೇಉಣಪುರವನ್ನು ಹೊಸ ರಾಜಧಾನಿಯನ್ನಾಗಿ ಮಾಡಿದನೆಂದು ಶಾಸನಗಳು ಹೇಳಿವೆ. ಚಂದ್ರಾದಿತ್ಯಪುರ ತಂದೆಯ

ಕಾಲವಲ್ಲಿ ರಾಜಧಾನಿಯಾಗಿ, ಅತ್ಯಲ್ಪಕಾಲದಲ್ಲಿಯೇ ಪುನಃ ರಾಜಧಾನಿಯನ್ನು ಬದಲಾಯಿಸಲು ಕಾರಣವೇನೋ ತಿಳಿಯದು.

ಆಧುನಿಕ ಇತಿಹಾಸಕಾರರು—ಪ್ರಮುಖವಾಗಿ ಆರ್. ಜಿ. ಭಂಡಾರ್‌ಕರ್ ಮತ್ತು ಅವರನ್ನನುಸರಿಸಿ ಡಂಕನ್ ಡೆರೆಟ್—ಈ ಸೇಉಣರು ಮರಾಠರೆಂದು ಅಭಿಪ್ರಾಯಪಟ್ಟಿದ್ದಾರೆ. ಸೇಉಣರ ಮೊದಲ ಅರಸರು ನಾಸಿಕ್ ಪ್ರದೇಶದಲ್ಲಿ ಅಧಿಕಾರದಲ್ಲಿದ್ದರೆಂಬುದು ಇದಕ್ಕೆ ಮುಖ್ಯ ಕಾರಣ. ಆದರೆ ಈ ವಂಶಿಕರ ದಾಡಿಯಪ್ಪ, ವೇಸುಗಿ, ರಾಜುಗಿ, ವದ್ದಿಗ, ಲಚ್ಚಿಯವ್ವೆ, ಕನ್ನರ, ಸಿಂಘಣ ಮುಂತಾದ ಹೆಸರುಗಳು ಅಂದು ಪ್ರಚಲಿತವಾಗಿದ್ದ ಕನ್ನಡಿಗರ ಹೆಸರುಗಳನ್ನು ಹೋಲುತ್ತವೆ. ಇವರು ಬೆಳಸಿದ ರಕ್ತಸಂಬಂಧಗಳು ಕನ್ನಡಿಗರೊಡನೆ. ವದ್ದಿಗನ ಪತ್ನಿ ರಾಷ್ಟ್ರಕೂಟ ನಿರುಪಮನ ಮಗಳು ವೊದ್ದಿಯವ್ವ. ವೇಸುಗಿ ಚಾಲುಕ್ಯ ಮಾಂಡಲಿಕ ಗೊಗ್ಗಿಯ ಮಗಳನ್ನು ಲಗ್ನವಾಗಿದ್ದನು. ಚಾಲುಕ್ಯ ಇಮ್ಮಡಿ ಜಯಸಿಂಹನ ಮಗಳಾದ ಅವ್ವಲ್ಲದೇವಿ ಭಿಲ್ಲಮನ ಪತ್ನಿ. ಈ ಅರಸರು ಕುಂತಲಾಧಿಪತಿಗಳೆಂದೂ 'ಕರ್ನಾಟರಾಯ', 'ಕರ್ನಾಟರಾಜ್ಯವಂಶಾಭಿರಾಮ' ಎಂದೂ ತಮ್ಮನ್ನು ಕರೆದುಕೊಂಡಿದ್ದಾರೆ. ಸೇಉಣ ಮನೆತನಕ್ಕೆ ಸೇರಿದ ಒಂದು ಶಾಖೆಯವರು ಧಾರವಾಡ ಜಿಲ್ಲೆಯ ಮಾಸವಾಡಿ ಪ್ರಾಂತದ ಅಧಿಪತಿಗಳಾಗಿದ್ದರು; ಇವರ ಶಿಲಾಶಾಸನಗಳೆಲ್ಲ ಬಹುಮಟ್ಟಿಗೆ ಕನ್ನಡಭಾಷೆ ಮತ್ತು ಲಿಪಿಗಳಲ್ಲಿವೆ. ತಾಮ್ರಶಾಸನಗಳು ಸಂಸ್ಕೃತ ಭಾಷೆಯಲ್ಲಿವೆ. ಮರಾಠೀ ಭಾಷೆಯ ಶಾಸನಗಳು ಅತಿ ವಿರಳ. ಅವೂ ನಂತರದ ಕಾಲದ್ದು, ಸೇಉಣ ರಾಜ್ಯದ ಉತ್ತರದ ಗಡಿಪ್ರದೇಶಗಳಲ್ಲಿ ದೊರೆತವು. ಈ ಎಲ್ಲ ಅಂಶಗಳನ್ನೂ ಗಮನಿಸಿದಲ್ಲಿ ಇವರು ಕನ್ನಡಿಗರೇ ಎಂಬುದನ್ನು ಖಚಿತವಾಗಿ ಹೇಳಬಹುದು.

ಹೆಸರು ಮತ್ತು ವಂಶಾವಳಿ : ಬಹಳ ಹಿಂದೆಯೇ ರೈಸ್ ಹಾಗೂ ಫ್ಲೀಟ್ ಅವರು ಸೇಉಣರು ಎಂದು ಇವರನ್ನು ಗುರುತಿಸಿದರಾದರೂ ಅದುವರೆಗೆ ರೂಢಿಯಲ್ಲಿದ್ದ 'ದೇವಗಿರಿಯ ಯಾದವರು' ಎಂಬ ಹೆಸರನ್ನು ಬದಲಿಸಲು ಹಿಂಜರಿದರು. ಮಹಮ್ಮದೀಯ ಇತಿಹಾಸಕಾರರು ಇವರನ್ನು ಯಾದವರೆಂದು ಸಂಬೋಧಿಸಿದ್ದರು. ಅದೇ ಮುಂದುವರಿಯಿತು. ವಾಸ್ತವಿಕವಾಗಿ ಈ ಅರಸರು ಸೇಉಣರಾಯ, ಸೇಉಣ ಚಕ್ರವರ್ತಿ, ಸೇಉಣ ವಂಶ ಶಿಖಾಮಣಿ ಎಂದೆಲ್ಲ ತಮ್ಮನ್ನು ಕರೆದುಕೊಂಡಿರುವುದನ್ನು ಗಮನಿಸಿದಾಗ, ಅದರಲ್ಲಿಯೂ ಇವರ ಸಮಕಾಲೀನರೂ ಯಾದವ ಕುಲದವರೆಂದು ತಮ್ಮನ್ನು ಹೇಳಿಕೊಂಡವರೂ ಆದ ಹೊಯ್ಸಳರೇ ಇವರನ್ನು ಸೇಉಣರೆಂದು ಹೆಸರಿಸಿರುವಾಗ, ನಾವು ಇವರನ್ನು ಸೇಉಣರೆಂದು ಕರೆಯುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಸೇಉಣ ಎಂಬ ಪದದ ಅರ್ಥವೇನೋ ತಿಳಿಯದು. ಇವರ ವಂಶಾವಳಿಯಲ್ಲಿಯೂ ಕೆಲವು ತೊಡಕಿನ ಪ್ರಶ್ನೆಗಳಿವೆ. ಅವು ಇಲ್ಲಿ ಅಪ್ರಸ್ತುತ.

ಮೊದಲ ಅರಸರು : ಸೇಉಣಚಂದ್ರ ಈ ವಂಶದ ಮೊದಲಿಗ. ಸು. ೮೩೫ರಿಂದ ೮೬೦ರ ವರೆಗೆ ಆಳಿದ ಈತನು ಸೇಉಣಪುರವನ್ನು ಸಿಂದಿನೇರ ಪ್ರದೇಶದಲ್ಲಿ ಕಟ್ಟಿಸಿದನು. ರಾಷ್ಟ್ರಕೂಟ ಅಮೋಘವರ್ಷ (I)ನು ಈತನ ಸಮಕಾಲೀನ ಹಾಗೂ ಅಧಿರಾಜ.

ಪದ್ದಿಗ(I)ನು ಧೋರಪ್ಪನ ಮಗಳಾದ ವೊದ್ದಿಯಬ್ಬಳನ್ನು ಮದುವೆಯಾದನೆಂದು ಹೇಳಲಾಗಿದೆ. ಈ ಧೋರಪ್ಪನನ್ನು ಗುರುತಿಸುವುದರಲ್ಲಿ ಭಿನ್ನಾಭಿಪ್ರಾಯವಿದೆ. ಈತ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಸೋದರನಾದ ನಿರುಪಮ ಎಂದೊಂದು ಅಭಿಪ್ರಾಯ. ಇವರ ಮಗ ಭಿಲ್ಲಮ(II)ನ ಕಾಲದಲ್ಲಿ ರಾಷ್ಟ್ರಕೂಟರು ಮರೆಯಾಗಿ ತೈಲಪನು ಚಾಲುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದನು. ಈ ಅನಿಶ್ಚಿತ ಸಂದರ್ಭವನ್ನುಪಯೋಗಿಸಿಕೊಂಡು ಸ್ವತಂತ್ರರಾಗಬಯಸಿದ ಹಲವರಲ್ಲಿ ಭಿಲ್ಲಮ ಒಬ್ಬ. ಇದಕ್ಕಾಗಿ ಈತನು ಶಿಲಾಹಾರ ಅಪರಾಜಿತನ ನೆರವನ್ನು ಪಡೆದಂತೆ ತೋರುತ್ತದೆ. ಆದರೆ ಫಲಿತಾಂಶ ಮಾತ್ರ ಶೂನ್ಯ. ತೈಲಪನ ಮಾಂಡಲಿಕತ್ವವನ್ನು ಒಪ್ಪಿದ ಈತನು ಪರಮಾರ ಮುಂಜನೊಡನೆ ನಡೆದ ಕದನದಲ್ಲಿ ಭಾಗವಹಿಸಿದನು. ಮುಂಜನನ್ನು ಕೊಂದ ಯಶಸ್ಸು ಈತನದೆಂದು ಸಿಂಗನು ನೇರ ತಾಮ್ರಶಾಸನದಲ್ಲಿ ಹೇಳಿದ್ದರೂ ಅದು ಉತ್ಪ್ರೇಕ್ಷೆ.

ಭಿಲ್ಲಮನ ಬಳಿಕ ಆತನ ಮಗ ವೇಸುಗಿ ಒಂದೆರಡು ವರ್ಷಗಳು ಆಳಿ ಮೃತನಾದ. ಅಪ್ರಾಪ್ತ ವಯಸ್ಕನಾದ ಆತನ ಮಗ ಭಿಲ್ಲಮ (III)ನ ಪರ ಇಮ್ಮಡಿ ಭಿಲ್ಲಮನ ಪತ್ನಿ ಲಕ್ಷ್ಮಿ, ರಾಜ್ಯಾಡಳಿತದ ಹೊಣೆ ಹೊತ್ತಿದ್ದಳು. ಸ್ವತಃ ರಾಜ್ಯವಾಳತೊಡಗಿದಾಗ ಭಿಲ್ಲಮ (III)ನು ಪುನಃ ಚಾಲುಕ್ಯರ ವಿರುದ್ಧ ದಂಗೆ ಎದ್ದಂತೆ ತೋರುತ್ತದೆ. ಆದರೆ ಚಾಲುಕ್ಯರ ಸೇನಾನಿಗಳಾದ ಬಿಜ್ಜರಸ ಮತ್ತು ವಾಜಿವಂಶದ ನಾಗವರ್ಮರು ಈತನನ್ನು ಸೋಲಿಸಿದರು. ಚಾಲುಕ್ಯ ಸೋಮೇಶ್ವರ (I)ನು ತನ್ನ ಸೋದರಿಯಾದ ಅವ್ವಲ್ಲದೇವಿಯನ್ನು ಈತನಿಗೆ ಕೊಟ್ಟು ಮದುವೆಮಾಡಿ, ಇವನನ್ನು ನಿಷ್ಠ ಮಾಂಡಲಿಕನನ್ನಾಗಿ ಮಾಡಿಕೊಂಡನು. ಅನಂತರ ಭಿಲ್ಲಮನು ಚಾಲುಕ್ಯನ 'ಪ್ರೌಢ ಅಂಕಕಾರ'ನೆಂದು ತನ್ನನ್ನು ಕರೆದುಕೊಂಡನು.

ಚಾಲುಕ್ಯ ಸೋದರರ ನಡುವೆ ನಡೆದ ಅಂತಃಕಲಹದಲ್ಲಿ ಭಿಲ್ಲಮನ ಮೊಮ್ಮಗನಾದ ಸೇಉಣಚಂದ್ರ (II)ನು ಕಿರಿಯನ ಪಕ್ಷಕ್ಕೆ ಸೇರಿ ಇಮ್ಮಡಿ ಸೋಮೇಶ್ವರನನ್ನು ಎದುರಿಸಿದನು. ಇವನನ್ನು ತೆಲುಗು ಚೋಳ ಮನೆತನದ ಚಿದ್ದಣ ಚೋಳನು ಸೋಲಿಸಿದ. ಆದರೆ ಅಂತಿಮವಾಗಿ ವಿಕ್ರಮಾದಿತ್ಯನು ಯಶಸ್ವಿಯಾದಾಗ, ಸೇಉಣಚಂದ್ರನು ತನ್ನ ಮುಂಚಿನ ಸ್ಥಿತಿಯನ್ನು ಕಾಪಾಡಿಕೊಂಡುದಲ್ಲದೆ, ಅರಸನಿಂದ ಸನ್ಮಾನಿತನಾಗಿ ನರ್ಮದಾ ನದಿಯ ದಕ್ಷಿಣ ಭಾಗದ ಆಧಿಪತ್ಯವನ್ನು ಬಹುಮಾನವಾಗಿ ಪಡೆದನು. ಸು. ೧೧೧೦ರಲ್ಲಿ ಆಳತೊಡಗಿದ ಸಿಂಘಣ(I)ನು ಸೇಉಣ ದೇಶ ಹಾಗೂ ಪಳಿಯಂಡ ನಾಲ್ಸಾಸಿರದ ಮಹಾಮಂಡಲೇಶ್ವರನಾಗಿದ್ದ. ಪಳಿಯಂಡವು ಈಗಿನ ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆಗೆ ಸೇರಿದ ಪರೇಣ್ಡ. ಆದ್ದರಿಂದ ಈತನು ತನ್ನ ಅಧಿಕಾರವನ್ನು ವಿಸ್ತರಿಸಿದ್ದನೆಂದು ತಿಳಿದುಬರುತ್ತದೆ. ಬನವಾಸಿ ಪ್ರಾಂತಕ್ಕೆ ಸೇರಿದ ಹೊನ್ನತ್ತಿ ಅಗ್ರಹಾರವು ಈತನಿಗೆ ವೃತ್ತಿಯಾಗಿ ಲಭಿಸಿತ್ತೆಂದು ಅಲ್ಲಿಯ ಶಾಸನದಿಂದ ಗೊತ್ತಾಗುತ್ತದೆ. ಈತನು ಆರನೆಯ ವಿಕ್ರಮಾದಿತ್ಯನಿಗೆ ನಿಷ್ಠೆ ತೋರಿಸಿ ಅವನ ಮೆಚ್ಚುಗೆ ಗಳಿಸಿದ್ದನು. ಮಲ್ಲುಗಿ (II) ಕ್ರಿ.ಶ. ೧೧೪೫ರಲ್ಲಿ ಅಧಿಕಾರಕ್ಕೆ ಬಂದನು. ಈ ವೇಳೆಗೆ ಕಲಚುರಿ ಬಿಜ್ಜಳನು ಚಾಲುಕ್ಯ

ರಾಜ್ಯವನ್ನಪಹರಿಸಲು ಯತ್ನಗಳನ್ನು ನಡಸಿದ್ದ. ಈ ಸಂದರ್ಭ ನೋಡಿ ಮಲ್ಲುಗಿ ಸ್ವತಂತ್ರನಾದನು. ಬಿಜ್ಜಳನು ಈತನನ್ನು ಅಧೀನಪಡಿಸಿಕೊಳ್ಳಲು ಮಾಡಿದ ಯತ್ನಗಳು ಕೈಗೂಡಲಿಲ್ಲ. ಮಲ್ಲುಗಿಯ ಮಗ ಭಿಲ್ಲಮ(V)ನು ತಂದೆಯ ಮಾರ್ಗದಲ್ಲಿ ನಡೆದು ಸ್ವತಂತ್ರ ಸೇಉಣ ರಾಜ್ಯವನ್ನು ಸ್ಥಾಪಿಸಿದನು.

ಭಿಲ್ಲಮ **V**, ಜೈತುಗಿ **I** : ಭಿಲ್ಲಮ (V)ನ ಆಳಿಕೆ ಆರಂಭವಾದ್ದು ಕ್ರಿ.ಶ. ೧೧೭೩ರಲ್ಲಿ. ಆದರೆ ೧೧೮೭ರ ವರೆಗೆ ಆತ ಸುತ್ತಲಿನ ಶತ್ರುಗಳನ್ನು ಎದುರಿಸಿ ಅವರೊಡನೆ ಹೋರಾಡುತ್ತಿರಬೇಕಾಯಿತು. ಕಲಚುರಿ ಬಿಜ್ಜಲ ಹಾಗೂ ಆತನ ಮಗ ಮೈಲುಗಿ, ಸಿಂದಕುಲದ ಮುಂಜ, ಕಾಕತೀಯ ಪ್ರತಾಪರುದ್ರ, ಚಾಲುಕ್ಯ ನಾಲ್ವಡಿ ಸೋಮೇಶ್ವರ (IV)ನ ಸೇನಾನಿಯಾದ ಬರ್ಮ—ಇವರನ್ನು ಈತನು ಎದುರಿಸಬೇಕಾಯಿತು. ಕಲಚುರಿ ಬಿಜ್ಜಲನ ಬಳಿಕ ಕೆಲವರ್ಷಗಳು ಚಾಲುಕ್ಯರು ಪುನಃ ತಲೆಯೆತ್ತಿದರಾದರೂ ಅದು ಅಲ್ಪಾವಧಿಯದಾಗಿದ್ದು ಸೋಮೇಶ್ವರನು ಕಲ್ಯಾಣವನ್ನು ಬಿಟ್ಟು ಬನವಾಸಿಗೆ ಹೋದಾಗ ಭಿಲ್ಲಮನ ಮಾರ್ಗ ಸುಗಮವಾಯಿತು. ಉಳಿದವರನ್ನು ಸಹ ಸೋಲಿಸಿ ಕ್ರಿ.ಶ. ೧೧೮೭ರ ವೇಳೆಗೆ ಆತ ಸ್ವತಂತ್ರ ಸೇಉಣ ರಾಜ್ಯವನ್ನು ಸ್ಥಾಪಿಸಿದನು.

ಭಿಲ್ಲಮನ ಪ್ರಬಲ ವಿರೋಧಿ ಹೊಯ್ಸಳರ ಇಮ್ಮಡಿ ಬಲ್ಲಾಳ. ಆತನೂ ಸ್ವತಂತ್ರ ರಾಜ್ಯಸ್ಥಾಪನೆ ಮಾಡಿ ಅದನ್ನು ವಿಸ್ತರಿಸಲು ಶ್ರಮಿಸುತ್ತಿದ್ದನು. ಉತ್ತರಾಭಿಮುಖ ವಾಗಿ ರಾಜ್ಯವಿಸ್ತರಣೆಯಲ್ಲಿ ತೊಡಗಿದ್ದ ಆತನು ಸಹಜವಾಗಿಯೇ ಭಿಲ್ಲಮನನ್ನು ಎದುರಿಸ ಬೇಕಾಯಿತು. ಇವರಿಬ್ಬರ ನಡುವೆ ಉಗ್ರಕದನ ಸೊರಟೂರಿನಲ್ಲಿ (ಕ್ರಿ.ಶ. ೧೧೮೯-೯೦) ನಡೆಯಿತು. ಭಿಲ್ಲಮನು ಸೋತನು. ಸೊರಟೂರಿನಿಂದ ಲೊಕ್ಕಿಗುಂಡಿಯವರೆಗೆ ಬಲ್ಲಾಳನು ಭಿಲ್ಲಮನನ್ನು ಬೆನ್ನಟ್ಟಿ ಹೋದನೆಂದು ಶಾಸನದಲ್ಲಿ ಹೇಳಿದೆ. 'ಕೃಷ್ಣವೇಣೀ ನದಿಯವರೆಗೆ' ಎಂದು ನಂತರದ ಶಾಸನದಲ್ಲಿ ಹೇಳಿದ್ದರೂ ಆ ಪ್ರದೇಶ ಕ್ರಿ.ಶ. ೧೧೯೨ರ ವರೆಗೆ ಭಿಲ್ಲಮನ ಆಳಿಕೆಗೊಳಪಟ್ಟಿತ್ತೆಂದು ಬೇರೆ ಶಾಸನಗಳಿಂದ ತಿಳಿದಿದೆ. ಈ ಕದನದಲ್ಲಿ ಭಿಲ್ಲಮನು ಮಡಿದನೆಂದು ಫ್ಲೀಟ್ ಭಾವಿಸಿದ್ದರು. ಆದರೆ ಆತನು ಕ್ರಿ.ಶ. ೧೧೯೨ರ ವರೆಗೆ ಆಳಿದನೆಂದು ಈಗ ತಿಳಿದಿದೆ.[10] ಬಿಜಾಪುರ ಜಿಲ್ಲೆಯ ತದವಲಗ ಈತನ ರಾಜಧಾನಿ. ದೇವಗಿರಿಯೆಂಬ ನೂತನ ರಾಜಧಾನಿಗೆ ಅಸ್ತಿಭಾರ ಹಾಕಿದನಾದರೂ ಆ ನಗರ ಪೂರ್ತಿ ನಿರ್ಮಾಣವಾಗುವವರೆಗೆ ಜೀವಿಸಿರಲಿಲ್ಲ.

ಭಿಲ್ಲಮನ ಮಗ ಜೈತುಗಿ ಕ್ರಿ.ಶ. ೧೧೯೩ರಲ್ಲಿ ಪಟ್ಟಕ್ಕೆ ಬಂದನು. ತಂದೆಯು ಹೊಯ್ಸಳರಿಂದ ಅನುಭವಿಸಿದ ಸೋಲಿನ ಸೇಡನ್ನು ತೀರಿಸಲೆಂಬಂತೆ ಈತನು ಹೊಯ್ಸಳರ ವಿರುದ್ಧ ದಂಡೆತ್ತಿದನು. ಈ ಬಾರಿ ಬಲ್ಲಾಳನು ಹಿಮ್ಮೆಟ್ಟಿ, ಲೊಕ್ಕಿಗೊಂಡಿಯನ್ನು ಉಳಿಸಿಕೊಳ್ಳಲು ಬಹಳ ಶ್ರಮಿಸಬೇಕಾಯಿತು. ಸೇಉಣರ ದಾಳಿಗೆ ಹೆದರಿ, ಆಗಿಂದಾಗ್ಗೆ ಅವನು ಲೊಕ್ಕಿಗುಂಡಿಗೆ ಬಂದು ಬೀಡುಬಿಡುತ್ತಿದ್ದನು. ಆದರೆ ಭಿಲ್ಲಮನು ಹೊಯ್ಸಳನ ಕೈಯಲ್ಲಿ ಸೋಲನ್ನನುಭವಿಸಿದ್ದು ಕಾಕತೀಯ ಪ್ರತಾಪರುದ್ರನಿಗೆ ಧೈರ್ಯನೀಡಿತ್ತು. ಅವನು ಸೇಉಣರ ರಾಜ್ಯದ ಮೇಲೇರಿ ಬಂದನಾದರೂ ಈ ವೇಳೆಗೆ ಪಟ್ಟಕ್ಕೆ ಬಂದಿದ್ದ

ಜೈತುಗಿ ಅವನನ್ನು ಸೋಲಿಸಿದನು. ಪ್ರತಾಪರುದ್ರನ ಬಳಿಕ ಮಹಾದೇವನು ದೇವಗಿರಿಗೆ ದಂಡೆತ್ತಿ ಬಂದನು. ಮೂರು ತಿಂಗಳ ಕಾಲ ದೇವಗಿರಿ ಕೋಟೆಯನ್ನು ಮುತ್ತಿದ್ದ ಕಾಕತೀಯನು ಕೊನೆಗೆ ರಣರಂಗದಲ್ಲಿ ಅಸುನೀಗಿದನು. ಆತನ ಮಗ ಗಣಪತಿ ಸೆರೆಸಿಕ್ಕಿದನು. ಆದರೆ ನಂತರ ಬಿಡುಗಡೆ ಹೊಂದಿ ಕ್ರಿ.ಶ. ೧೧೯೯ರಿಂದ ಕಾಕತೀಯ ಅರಸನಾಗಿ ಆಳತೊಡಗಿದನು.

ಸಿಂಘಣ II : ಸೇಉಣರಲ್ಲಿ ಖ್ಯಾತಿವೆತ್ತ ಈತ ಜೈತುಗಿ ಚೇಲಾದೇವಿಯರ ಮಗ. ೧೧೯೯–೧೨೦೦ರಲ್ಲಿ ಸಿಂಹಾಸನಾರೂಢನಾದ ಈತ ರಾಜ್ಯವನ್ನು ಮಲಪ್ರಭಾ ನದಿಯ ದಕ್ಷಿಣಕ್ಕೆ ವಿಸ್ತರಿಸಿದನು. ಈತನ ಶಾಸನಗಳಲ್ಲಿ ಈತನ ಆಳಿಕೆಯ ವರ್ಷಗಳ ಗಣನೆ ಇದೆ. ಇವುಗಳನ್ನು ವಿಶ್ಲೇಷಿಸಿದಾಗ ಮಲಪ್ರಭಾದ ಉತ್ತರಕ್ಕಿರುವ ಪ್ರದೇಶಗಳಲ್ಲಿ ಈತನ ಆಳಿಕೆಯನ್ನು ೧೧೯೯–೧೨೦೦ರಿಂದ, ದಕ್ಷಿಣದ ಪ್ರದೇಶಗಳಲ್ಲಿ ೧೨೧೦–೧೧ರಿಂದ ಗಣನೆ ಮಾಡಲಾಗಿದೆ ಎಂಬುದು ಕಂಡುಬರುತ್ತದೆ.

ಈತನು ಪಟ್ಟಕ್ಕೆ ಬರುವ ವೇಳೆಗೆ ಉತ್ತರದಲ್ಲಿ ಗುರ್ಜರರ, ಪರಮಾರರ ಮತ್ತು ಮುಹಮ್ಮದೀಯರ ದಾಳಿಯನ್ನು ಎದುರಿಸಬೇಕಾಗಿದ್ದಿತು. ಅಲ್ಲದೆ ಅವರಲ್ಲಿಯೇ ಲಾಟ ಮಂಡಲದ (ಈಗಿನ ಭಡೋಚದ ಸುತ್ತಲಿನ ಪ್ರದೇಶ) ಒಡೆತನಕ್ಕಾಗಿ ಜಗಳಗಳಾಗುತ್ತಿದ್ದವು. ಅಲ್ಲಿನ ಅಧಿಪತಿಯಾದ ಶಂಖನು ತನ್ನ ಸ್ವಾಯತ್ತತೆಯನ್ನು ಕಾಪಾಡಿಕೊಳ್ಳಲು ಹೆಣಗುತ್ತಿದ್ದನು. ಇಂತಹ ಪರಿಸ್ಥಿತಿಯಲ್ಲಿ ಸಿಂಘಣನು ಮೂರು ಬಾರಿ ಆ ದೇಶವನ್ನು ಮುತ್ತಿದನು. ಮೊದಲ ಬಾರಿ ಗೆದ್ದು, ನಂತರ ಸೋತು, ಪುನಃ ಗೆದ್ದನಾದರೂ ಅದು ಅವನ ಕೈಸೇರಲಿಲ್ಲ.

ಜೈತುಗಿಯ ಕಾಲದಲ್ಲಿ ಮಲಪ್ರಭಾ ನದಿಯನ್ನು ಹೊಯ್ಸಳರ ಹಾಗೂ ಸೇಉಣರ ನಡುವಣ ಮೇರೆಯೆಂದು ಸಾಮಾನ್ಯವಾಗಿ ಪರಿಗಣಿಸಲಾಗಿತ್ತು. ಆದರೆ ರಾಜ್ಯವಿಸ್ತರಣಾಕಾಂಕ್ಷಿಯಾದ ಸಿಂಘಣ ಇದರಿಂದ ತೃಪ್ತನಾಗದೆ ಮೊದಲು ಉತ್ತರದಲ್ಲಿದ್ದ ಹೊಯ್ಸಳರ ಮಾಂಡಲಿಕರನ್ನು ತನ್ನ ಕಡೆ ಒಲಿಸಿಕೊಂಡು ನಂತರ ಹೊಯ್ಸಳರನ್ನು ಸೋಲಿಸುವ ಆಲೋಚನೆ ಮಾಡಿ, ಗೋವೆಯ ಕದಂಬ ಜಯಕೇಶಿ, ಕೊಲ್ಲಾಪುರದ ಶಿಲಾಹಾರ ಭೋಜ, ಸವದತ್ತಿಯ ರಟ್ಟ ಕಾರ್ತವೀರ್ಯ, ಬನವಾಸಿ ಪ್ರಾಂತದ ಬೆಳಗುತ್ತಿಯ ಸಿಂದ ಈಶ್ವರದೇವ ಮುಂತಾದವರನ್ನು ಕ್ರಮವಾಗಿ ಸೋಲಿಸಿದನು. ಆಗಲೇ ಹೊಯ್ಸಳರು ದಕ್ಷಿಣದಲ್ಲಿ ಚೋಳರ ರಾಜಕೀಯದಲ್ಲಿ ತಲೆಹಾಕಿ ಅವರ ಬೆಂಬಲಕ್ಕೆ ಹೋಗಬೇಕಾಗಿ ಬಂದಿತು. ತತ್ಫಲವಾಗಿ ಸಿಂಘಣನ ದಾಳಿ ಯಶಸ್ವಿಯಾಯಿತು. ಕೆಲವು ಕಾಲ ಬೆಳ್ವೊಲ ಪುಲಿಗೆರೆ ಪ್ರಾಂತಗಳು ಸೇಉಣರ ಸ್ವಾಧೀನದಲ್ಲುಳಿದವು. ಇಮ್ಮಡಿ ಬಲ್ಲಾಳ, ಇಮ್ಮಡಿ ನರಸಿಂಹ ಹಾಗೂ ಸೋಮೇಶ್ವರರು ಅವನ್ನು ಹಿಂದೆ ಪಡೆಯಲು ಮಾಡಿದ ಯತ್ನ ಕೈಗೂಡಲಿಲ್ಲ. ತುಂಗಭದ್ರೆ ಕೆಲಕಾಲ ಈ ಎರಡೂ ರಾಜ್ಯಗಳ ನಡುವಣ ಮೇರೆಯಾಗಿ ಉಳಿಯಿತು. ಸೇಉಣ ರಾಜ್ಯದ ಪೂರ್ವದಲ್ಲಿ ಕಾಕತೀಯರಿದ್ದರು. ಆ ವಂಶದ ಗಣಪತಿಯನ್ನು ಸೇಉಣ ಜೈತುಗಿ ಸೆರೆಹಿಡಿದು, ಬಂಧಮುಕ್ತನಾಗಿ ಮಾಡಿ ಕಾಕತೀಯ ರಾಜ್ಯ

ದಲ್ಲಿ ಪುನಃ ಸಲ್ಲಿಸಿದನೆಂದು ಹೇಳಿದ್ದೇವೆ. ಇದಾದ ಬಳಿಕ, ಈ ಅವಮಾನಕರ ಪ್ರಸಂಗದ ಸೇಡು ತೀರಿಸಲೆಂಬಂತೆ ಗಣಪತಿ ಸೇಉಣರ ಮೇಲೆ ದಾಳಿ ನಡಸಿದನಾದರೂ ಅದು ಯಾವ ಫಲವನ್ನೂ ನೀಡಲಿಲ್ಲ.

ಸಿಂಘಣನು ದಕ್ಷಿಣದ ಹಾಗೂ ಪೂರ್ವದ ರಾಜ್ಯಗಳೊಡನೆ ಕದನನಿರತನಾಗಿದ್ದ ಸಮಯದಲ್ಲಿ ಆತನ ದಂಡನಾಯಕನಾದ ಖೋಲೇಶ್ವರನು ಗುಜರಾತಿನ ಮೇಲೆ ದಂಡೆತ್ತಿದನು. ಲಾಟದ ಶಂಖನು ಸಿಂಘಣನ ನೆರವಿಗೆ ಬಂದನು. ಆದರೆ ಮಂತ್ರಿಗಳಾದ ವಸ್ತುಪಾಲ ಮತ್ತು ತೇಜಪಾಲರು ಭೇದೋಪಾಯದಿಂದ ಇವರಿಬ್ಬರ ಮೈತ್ರಿಯನ್ನು ಮುರಿದರು. ಶಂಖನು ಹಿಂಪಕ್ಕೆ ಸರಿದನು. ಸಿಂಘಣನು ಹಿಂದಿರುಗಬೇಕಾಯಿತು. ಎರಡು ಬಾರಿಯೂ ವಿಫಲಗೊಂಡ ಸಿಂಘಣನು ಮೂರನೆಯ ಸಲ ಖೋಲೇಶ್ವರನ ಮಗನಾದ ರಾಮನ ನೇತೃತ್ವದಲ್ಲಿ ದಂಡೊಂದನ್ನು ಕಳಿಸಿದ; ಆದರೆ ಕದನದಲ್ಲಿ ರಾಮನು ಮಡಿದನು.

ದಕ್ಷಿಣದಲ್ಲಿ ಬೆಳ್ವೊಲ ಪ್ರಾಂತ, ಪಶ್ಚಿಮಕ್ಕೆ ಗೋವೆ ಮತ್ತು ಕೊಂಕಣಗಳನ್ನೊಳಗೊಂಡಂತೆ ಅರಬ್ಬೀ ಸಮುದ್ರ, ಉತ್ತರಕ್ಕೆ ನರ್ಮದೆ ಮತ್ತು ಪೂರ್ವಕ್ಕೆ ಆಂಧ್ರ ಪ್ರದೇಶದ ಅನಂತಪುರ ಕರ್ನೂಲ್ ಜಿಲ್ಲೆ—ಈ ಸೀಮೆಯ ವಿಸ್ತಾರವಾದ ರಾಜ್ಯವನ್ನು ಸುದೀರ್ಘ ಕಾಲ ಆಳಿದ ಸಿಂಘಣನು ಸೇಉಣರಲ್ಲಿ ಅತಿಪ್ರಖ್ಯಾತನಾದ ಅರಸನು. ಬೀಚಿಸೆಟ್ಟಿ, ಲಕ್ಷ್ಮಯನಾಯಕ, ಖೋಲೇಶ್ವರ, ಆರ್ಯ ಮಲ್ಲಿಸೆಟ್ಟಿ, ಹೊನ್ನಬೊಮ್ಮಿಸೆಟ್ಟಿ, ಬಂಕುವರಾಹುತ ಮುಂತಾದವರು ಇವನ ವಿಧೇಯ ಸೇನಾನಿಗಳಾಗಿದ್ದರು. ತರ್ದವಾಡಿ ಮುಂತಾದ ಪ್ರದೇಶಗಳ ಆಡಳಿತದ ಹೊಣೆ ಹೊತ್ತಿದ್ದ ಪರಮ ವಿಶ್ವಾಸಿ ಸರ್ವಾಧಿಕಾರಿ ಎನಿಸಿದ ಭಾಗೂಬಾಯಿ ಅರಸನ ಅಪರೂಪದ ಸ್ತ್ರೀ ಅಧಿಕಾರಿ. ಈಕೆಯ ಪತಿ ದೇವರ್ಗನಾಯಕ, ಮಗ ವೇಸುಗಿದೇವ.

ನಂತರದ ಅರಸರು: ಸಿಂಘಣನ ಪತ್ನಿ ಜೇತಾದೇವಿ, ಮಗ ಜೈತುಗಿ. ಈತನು ಅಲ್ಪವಯಸ್ಕನಾಗಿದ್ದಾಗಲೇ ಮೃತಿಹೊಂದಿದನಾದ ಕಾರಣ ಸಿಂಘಣನ ಬಳಿಕ ಜೈತುಗಿಯ ಮಗ ಕನ್ನರನು ಅರಸನಾದನು. ಕ್ರಿ.ಶ. ೧೨೪೭–೬೧ರ ವರೆಗೆ ಆಳಿದ ಈತನ ನಂತರ ಸೋದರನಾದ ಮಹದೇವನು ರಾಜ್ಯಸೂತ್ರಗಳನ್ನು ವಹಿಸಿದನು. ಈತನೂ ಒಂದು ದಶಕ ಕಾಲ ಅಧಿಕಾರದಲ್ಲಿದ್ದನು. ಮಹದೇವನ ಕಾಲದ ಮಹತ್ತ್ವದ ಘಟನೆಯೆಂದರೆ ಈತನು ಕಾಕತೀಯ ರಾಣಿ ರುದ್ರಾಂಬಳ ಕೈಯಲ್ಲಿ ಅನುಭವಿಸಿದ ಸೋಲು. ಗಣಪತಿಯ ನಂತರ ಸಿಂಹಾಸನವನ್ನೇರಿದ್ದ ಈಕೆ ಹೆಣ್ಣು ತಾನೇ ಎಂಬ ಭಾವನೆ ಕಾಕತೀಯ ರಾಜ್ಯವನ್ನು ಮುತ್ತಲು ಮಹದೇವನನ್ನು ಪ್ರೇರಿಸಿತು. ೧೫ ದಿನಗಳ ಪರ್ಯಂತ ಕೋಟೆಯನ್ನು ಮುತ್ತಿಯೂ ಆಕೆಯನ್ನು ಎದುರಿಸಲಾಗದೆ ಆತ ಹಿಂದಿರುಗಿದನು. ಇವನನ್ನು ಬೆಂಕೊಂಡ ಆಕೆ ಸೇಉಣ ರಾಜಧಾನಿಯನ್ನು ಮುತ್ತಿದಳು. ಒಂದು ಕೋಟಿ ಸುವರ್ಣ ನಾಣ್ಯಗಳ ಕಪ್ಪವನ್ನು ಸಲ್ಲಿಸುವುದರ ಮೂಲಕ ಶಾಂತಿಯ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು ಸೇಉಣರಸ. ಇದರಲ್ಲಿ ರುದ್ರಾಂಬೆಯ ದಂಡನಾಯಕನಾದ ಭೈರವನ ಪಾತ್ರ ಹಿರಿದಾದ್ದು.

ದಕ್ಷಿಣದಲ್ಲಿ ಕದಂಬ ಕಾವದೇವನನ್ನು ಸೋಲಿಸಿ ಹೊಯ್ಸಳರ ಮೇಲೆ ದಂಡೆತ್ತಿ ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳನ್ನು ಮಹಾದೇವನು ಪಡೆದುಕೊಂಡನು. ಈ ವೇಳೆಗೆ ಹೊಯ್ಸಳರ ರಾಜ್ಯ ಸೋದರರಿಬ್ಬರಲ್ಲಿ ಹಂಚಿಹೋಗಿದ್ದು, ಮಹದೇವನ ಯತ್ನ ಸುಲಭವಾಗಿ ಕೈಗೂಡಿತು. ಪಶ್ಚಿಮ ಕರಾವಳಿಯಲ್ಲಿ ಕೊಂಕಣದ ಶಿಲಾಹಾರ ಸೋಮೇಶ್ವರನನ್ನು ಸೋಲಿಸಲು ಈತನು ಒಂದು ನೌಕಾಯುದ್ಧವನ್ನು ಹೂಡಬೇಕಾಯಿತು.

ಮಹಾದೇವನ ಶ್ರೀಕರಣಾಧಿಪನಾಗಿದ್ದವನು ಖ್ಯಾತಿವೆತ್ತ ಹೇಮಾದ್ರಿ, ಧರ್ಮಶಾಸ್ತ್ರ ಗ್ರಂಥಕರ್ತೃ. ಈ ಕಾಲದಲ್ಲಿ ಈ ಭಾಗದಲ್ಲಿ ಕಟ್ಟಲಾದ ವಾಸ್ತು ಹೇಮಾಡ ಪಂತಿ ಎಂಬ ಸ್ವನಾಮಾಂಕಿತ ಶೈಲಿಯಲ್ಲಿ ಕಟ್ಟಲಾದವು. ವೈಜಾಯಿ ಮಹಾದೇವನ ಪತ್ನಿ. ಪೈಠಣದ ವೈಜನಾಥಾಲಯವನ್ನು ಈಕೆ ಕಟ್ಟಿಸಿದಳು.

ಮಹದೇವನ ನಂತರದವನು ಈತನ ಮಗ ಆಮಣ. ಆದರೆ ಕನ್ನರನ ಮಗನಾದ ರಾಮಚಂದ್ರ ತನ್ನ ಹಕ್ಕನ್ನು ಸ್ಥಾಪಿಸಿ ಆಮಣನನ್ನು ಹೊರದೂಡಿ ರಾಜ್ಯವನ್ನು ವಶಪಡಿಸಿಕೊಂಡನು (ಕ್ರಿ.ಶ. ೧೨೭೧). ರಾಮಚಂದ್ರ ಸಹ ಉಳಿದೆಲ್ಲರಂತೆ ತನ್ನ ನೆರೆಯರಸರೊಡನೆ ಕದನಗಳಲ್ಲಿ ತೊಡಗಿದ. ಸೇಉಣರ ಬಲ ಕುಗ್ಗಿತ್ತು. ಕಾಕತೀಯ ರುದ್ರಾಂಬೆಯ ರಾಜ್ಯದಲ್ಲಿ ಅಂಬದೇವನೆಂಬಾತನು ದಂಗೆಯೆದ್ದಾಗ ಆತನಿಗೆ ರಾಮಚಂದ್ರನು ಸಹಾಯ ಮಾಡಿದ್ದರ ಫಲವಾಗಿ, ಅಂಬದೇವನನ್ನು ಸದೆಬಡಿದ ಬಳಿಕ ಕಾಕತೀಯ ದಂಡನಾಯಕರಾದ ವಿಠಲ, ಪ್ರೋಲ, ಮನುಮಗಂಡ ಗೋಪಾಲ ಮುಂತಾದವರು ರಾಮಚಂದ್ರನನ್ನೂ ಸೋಲಿಸಿದರು. ವಿಠಲನು ಆದವಾನಿ, ತುಂಬುಲ, ಹಾಲುವ, ಮನವ ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡು ರಾಯಚೂರನ್ನು ಆಕ್ರಮಿಸಿ ಅಲ್ಲಿ ಬಲವಾದ ಕೋಟೆ ಕಟ್ಟಿಸಿದನು (೧೨೯೧-೯೨). ಹೊಯ್ಸಳನೊಡನೆ ಹಗೆತನ ಮುಂದುವರಿಯಿತು. ಸಾಳುವ ತಿಕ್ಕಮ, ಹರಿಪಾಲ, ಜೋಯಿದೇವ ಮುಂತಾದ ಸೇಉಣ ದಂಡನಾಯಕರು ದೋರಸಮುದ್ರವನ್ನು ಮುತ್ತಲು ಯತ್ನಿಸಿದರು. ಆದರೆ ಹೊಯ್ಸಳರ ಪರ ಹೋರಾಡಿದ ಕೇತಯ ದಂಡನಾಯಕ, ಅಂಕನಾಯಕ, ಕಂಪಿಲಿಯ ಮುಮ್ಮಡಿ ಸಿಂಗೆಯ ನಾಯಕನ ಮಗ ಖಂಡೆಯರಾಯ ಮುಂತಾದವರು ಸೇಉಣರನ್ನು ಯಶಸ್ವಿಯಾಗಿ ಹೊರದೂಡಿದರು. ಕುಮ್ಮಟವನ್ನು ಆಕ್ರಮಿಸಲು ಸೇಉಣರು ಮಾಡಿದ ಯತ್ನಗಳು ನಿಷ್ಫಲವಾದವು.

ಈ ವೇಳೆಗೆ ಉತ್ತರ ಭಾರತದಲ್ಲಿ ಮಹಮ್ಮದೀಯರ ದಾಳಿಗಳು ಯಶಸ್ವಿಯಾಗಿ ಖಿಲ್ಜಿ ಮನೆತನದ ಅಲ್ಲಾಉದ್ದೀನನು ದೆಹಲಿಯಲ್ಲಿ ಮಹಮ್ಮದೀಯರ ಆಳಿಕೆಗೆ ಅಸ್ತಿಭಾರವನ್ನು ಹಾಕಿದನು. ಅದಕ್ಕೆ ಮೊದಲು ದಾಳಿಮಾಡಿದ್ದ ಘಜ್ನಿ ಹಾಗೂ ಘೋರಿ ಮಹಮ್ಮದರು ಕೇವಲ ಕೊಳ್ಳೆ ಹೊಡೆಯಲೆಂದು ಭಾರತಕ್ಕೆ ಬಂದಿದ್ದರು. ಘೋರಿ ಮಹಮ್ಮದನಿಗೆ ಭಾರತದಲ್ಲಿ ಮಹಮದೀಯ ರಾಜ್ಯವನ್ನು ಸ್ಥಾಪಿಸುವ ಆಸೆ ಇದ್ದಿತು. ಆದರೆ ಇವನ ಯತ್ನಗಳ ಫಲವನ್ನನುಭವಿಸಿದವನು ಇವನ ಪ್ರತಿನಿಧಿ ಐಬಕ್. ಇವನು ಭಾರತದಲ್ಲಿ ಮೊದಲ ಮುಸ್ಲಿಮ್ ರಾಜ್ಯದ ಸ್ಥಾಪಕ. ಇವನ ವಂಶಸ್ಥರ ಬಳಿಕ

ಖಿಲ್ಜಿ ಮನೆತನದ ಆಳಿಕೆ ದೆಹಲಿಯಲ್ಲಿ ಆರಂಭವಾಯಿತು. ಜಲಾಲುದ್ದೀನ್ ಖಿಲ್ಜಿಯ ಅಣ್ಣನ ಮಗನಾದ ಅಲ್ಲಾಉದೀನನು ರಾಜ್ಯವನ್ನು ಕಸಿಯಲು ಹೊಂಚುಹಾಕಿದ್ದನು. ಅದಕ್ಕೆ ಬೇಕಾದ ಸೈನ್ಯಶಕ್ತಿ ಸಂಚಯಕ್ಕಾಗಿ ದಕ್ಷಿಣ ಭಾರತದ ಹಿಂದು ರಾಜ್ಯಗಳಲ್ಲಿನ ಅತುಲೈಶ್ವರ್ಯ ಅವನನ್ನಾಕರ್ಷಿಸಿತು.

ದಕ್ಷಿಣ ಭಾರತದ ರಾಜ್ಯಗಳಾದರೋ ಅವಿಶ್ರಾಂತವಾದ ಹೋರಾಟಗಳಿಂದ, ಅಸಮರ್ಥ ರಾಜರ ಆಳಿಕೆಯಿಂದ ತಮ್ಮ ಶಕ್ತಿಯನ್ನು ಕಳೆದುಕೊಂಡಿದ್ದುವು. ಇದರಿಂದ ಅಲ್ಲಾ ಉದೀನನಿಗೆ ಅನುವಾಯಿತು. ಕ್ರಿ.ಶ. ೧೨೯೪ರಲ್ಲಿ ಅವನ ಸೈನ್ಯವು ಸೇಉಣ ದೇಶಕ್ಕೆ ಬಂದಾಗ ಖಾನ್ನಾ ಎಂಬ ಸೇನಾನಿ ಅದನ್ನು ತಡೆದನು. ಆದರೆ ಸೇಉಣರ ಸೈನ್ಯದ ಬಹುಭಾಗ ರಾಜಕುಮಾರ ಸಿಂಘಣ (III)ನ ನೇತೃತ್ವದಲ್ಲಿ ರಾಜ್ಯದಿಂದ ಹೊರಗೆ ಹೋಗಿದ್ದ ಕಾರಣ ಶತ್ರುವನ್ನು ಎದುರಿಸಲಾಗದ ರಾಮಚಂದ್ರನು ಅಪಾರಸಂಪತ್ತನ್ನು ನೀಡಿ ಶತ್ರುವನ್ನು ಹಿಂದಿರುಗಿಸಿದನು. ಈ ವೇಳೆಗೆ ಹಿಂದಿರುಗಿದ್ದ ಸಿಂಘಣನು ವಿಷಯ ವನ್ನರಿಯದೆ ಖಿಲ್ಜಿಯ ಮೇಲೆ ಬಿದ್ದು ಅವನಿಂದ ಸೋತನು. ಇದರ ಫಲವೆಂದರೆ ಮತ್ತಷ್ಟು ಸಂಪತ್ತಿನ ಕೊಡುಗೆ ಹಾಗೂ ಎಲಿಚಪುರದ ವಾರ್ಷಿಕ ಕಂದಾಯವನ್ನು ಖಿಲ್ಜಿಗೆ ನೀಡಿ ಅಲ್ಲಿ ಅವನ ಸೈನ್ಯದ ತುಕಡಿಯೊಂದನ್ನು ಇಡಲು ಒಪ್ಪಿಗೆ.

ಇದು ಸೇಉಣರನ್ನಾಗಲಿ ಇತರರನ್ನಾಗಲಿ ಎಚ್ಚರಗೊಳಿಸದಿದ್ದುದು ನಾಡಿನ ದೌರ್ಭಾಗ್ಯ. ಶತ್ರುವಿನ ಬೆನ್ನು ಕಂಡೊಡನೆ ಪುನಃ ಪರಸ್ಪರ ಕಚ್ಚಾಟಗಳಲ್ಲಿ ತೊಡಗಿದ ದಕ್ಷಿಣದ ಹಿಂದು ಅರಸರು ತಮಗೊದಗಲಿದ್ದ ವಿಪತ್ತಿನ ಬಗ್ಗೆ ಯೋಚಿಸಲಿಲ್ಲ. ಕ್ರಿ.ಶ. ೧೩೦೭ರಲ್ಲಿ ಅಲ್ಲಾಉದೀನನು ಪುನಃ ದಂಡೆತ್ತಿ ಬಂದನು. ರಾಮಚಂದ್ರನು ಸೆರೆಸಿಕ್ಕಿದ; ಅವನ ಮಗ ಸಿಂಘಣನು ಪಲಾಯನ ಮಾಡಿದ. ದೆಹಲಿಗೆ ಒಯ್ಯಲ್ಪಟ್ಟ ಸೇಉಣನು ಗೌರವದಿಂದ ಹಿಂದಿರುಗಿದ. ಆದರೆ ಸ್ವಾತಂತ್ರ್ಯ ಕಳೆದುಕೊಂಡು ಖಿಲ್ಜಿಯ ಕೈಗೊಂಬೆ ಯಾದ. ಕ್ರಿ.ಶ. ೧೩೦೯ರಲ್ಲಿ ಕಾಕತೀಯರ, ೧೩೧೧ರಲ್ಲಿ ಹೊಯ್ಸಳ ಪಾಂಡ್ಯರ ವಿರುದ್ಧ ದಂಡೆತ್ತಿದ ಖಿಲ್ಜಿಯ ಸೇನಾಪತಿಯಾದ ಮಲ್ಲಿಕ್ ಕಾಫರನಿಗೆ ರಾಮಚಂದ್ರನು ನೆರವು ನೀಡಿದನು.

ಈ ಘಟನೆಗಳು ರಾಮಚಂದ್ರನನ್ನು ಘಾಸಿಗೊಳಿಸಿತ್ತು; ಎಲ್ಲ ವಿಧದಲ್ಲೂ ಪರಾಜಿತ ನಾದ ಅವನು ಕ್ರಿ.ಶ. ೧೩೧೨ರಲ್ಲಿ ಸತ್ತನು. ನಂತರ ಈತನ ಮಗ ಸಿಂಘಣನು ಪಟ್ಟಕ್ಕೆ ಬಂದನು. ಸೇಉಣರ ಇತಿಹಾಸ ಇವನೊಂದಿಗೆ ಮುಗಿಯಿತೆಂದೇ ಹೇಳಬೇಕು. ಸಿಂಘಣನ ಮಗ ಮುಮ್ಮಡಿ ಮಲ್ಲುಗಿ ೧೩೩೪ರಲ್ಲಿ ಮಹಮದ್ ತೊಘಲಕನ ಅಧೀನನಾಗಿದ್ದನೆಂದು ಶಾಸನವೊಂದರಿಂದ ತಿಳಿದಿದೆ. ಒಂದು ವಿಧದಲ್ಲಿ ಸೇಉಣರೊಡನೆ ಉತ್ತರ ಕರ್ನಾಟಕದ ಇತಿಹಾಸವು ಮುಗಿದಂತೆಯೇ. ವ್ಯಕ್ತಿತ್ವವನ್ನು ಕಳೆದುಕೊಂಡ ಈ ಪ್ರದೇಶ ಮಹಮ್ಮದೀ ಯರ ದಾಳಿಗಳಿಗೆ ತುತ್ತಾಗಿ, ಅನೇಕ ಪಾಳೆಯಗಾರರೂ ನಾಯಕರೂ ಈ ಭಾಗಗಳಲ್ಲಿ ಈಗ ಕಾಣಿಸಿಕೊಂಡರು. ವಿಜಯನಗರದ ಸಾಮ್ರಾಜ್ಯದಲ್ಲಿ ಇದರ ಕೆಲವು ಭಾಗಗಳು ಮಾತ್ರ ಹಿಂದು ಅರಸರ ವಶವಾಗಿ, ಉಳಿದ ಪ್ರದೇಶಗಳಲ್ಲಿ ಸುಲ್ತಾನರ ಅಧಿಕಾರ ನಡೆದಿದ್ದಿತು.

## ಹೊಯ್ಸಳರು

ಕರ್ನಾಟಕ ಇತಿಹಾಸದಲ್ಲಿ ಚಾಲುಕ್ಯರು ವಹಿಸಿದ ಪಾತ್ರ ಒಂದು ರೀತಿಯದಾದರೆ, ಹೊಯ್ಸಳರದು ಇನ್ನೊಂದು ರೀತಿ. ಚಾಲುಕ್ಯರು ಕರ್ನಾಟಕ ರಾಜ್ಯವನ್ನು ಕಟ್ಟಿದರು ; ಕನ್ನಡಿಗರನ್ನು ಒಗ್ಗೂಡಿಸಿದರು. ಇಂದಿನ ಕರ್ನಾಟಕ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಇನ್ನೂ ವಿಸ್ತಾರವಾಗಿತ್ತೆಂಬುದನ್ನು ಮನಗಂಡಲ್ಲಿ ಅವರು ಸಮಗ್ರ ಕರ್ನಾಟಕದ ಏಕೀಕರಣಕ್ಕಾಗಿ ಶ್ರಮಿಸಿ ಯಶಸ್ವಿಯಾದರು ಎಂಬುದು ಸ್ಪಷ್ಟವಾಗುತ್ತದೆ.

ಚಾಲುಕ್ಯರ ನಂತರ, ಕಲ್ಯಾಣದಲ್ಲಿ ಉಂಟಾದ ಕ್ರಾಂತಿಯ ಪರಿಣಾಮವಾಗಿ ಅವ್ಯವಸ್ಥೆ ತಲೆದೋರಿ ಕರ್ನಾಟಕ ಪುನಃ ಇಬ್ಭಾಗವಾಯಿತು. ತುಂಗಭದ್ರೆ ಅವುಗಳ ಮೇರೆಯಾಯಿತು. ತುಂಗಭದ್ರೆಯ ಉತ್ತರದಲ್ಲಿ ಸೇಉಣರು ಪ್ರಬಲರಾಗಿ ಕೆಲಕಾಲ ಆಳಿದರು. ಆದರೆ ೧೩-೧೪ನೆಯ ಶತಮಾನಗಳಲ್ಲಿ ಭಾರತದಲ್ಲಿ ಮುಹಮ್ಮದೀಯರು ದಾಳಿಮಾಡಿ ಉತ್ತರದಲ್ಲಿ ತಮ್ಮ ರಾಜ್ಯವೊಂದನ್ನು ಸ್ಥಾಪಿಸಿದರು. ಚಾಲುಕ್ಯ ರಾಜ್ಯ ಪತನವಾದಾಗ ಉತ್ತರದ ದೆಹಲಿಯಲ್ಲಿ ಸುಲ್ತಾನರ ಮನೆತನ ಅಸ್ತಿತ್ವಕ್ಕೆ ಬಂದಿತ್ತು. ಇದು ಒಮ್ಮಿಂದೊಮ್ಮೆ ಉಂಟಾದ ಘಟನೆಯಲ್ಲ; ಇದಕ್ಕೂ ಸುಮಾರು ೩ ಶತಮಾನಗಳ ಮೊದಲಿನಿಂದ ಮುಹಮ್ಮದೀಯರು ಆಗಿಂದಾಗ್ಗೆ ಭಾರತದ ಮೇಲೆ ದಾಳಿ ನಡಸಿದ್ದರು, ಇಲ್ಲಿಯ ಸಂಪತ್ತನ್ನು ಸೂರೆಗೊಂಡಿದ್ದರು.

ಮುಹಮ್ಮದೀಯರು ಸಹ ಭಾರತಕ್ಕೆ ಬಂದುದು ವರ್ತಕರಂತೆಯೇ. ಇಲ್ಲಿನ ಅಪಾರ ಐಶ್ವರ್ಯ ಅವರನ್ನು ಆಕರ್ಷಿಸಿತು. ವ್ಯಾಪಾರಕ್ಕಾಗಿ ಬಂದವರು ಖಡ್ಗವನ್ನು ಹಿಡಿದುದಲ್ಲದೆ, ಇಸ್ಲಾಂ ಧರ್ಮವನ್ನು ಪ್ರಚಾರ ಮಾಡಲು ಶ್ರಮಿಸಿದರು. ಇತರ ಪರಕೀಯರ ಹಾಗಲ್ಲದೆ, ಇವರು ಬರುವಾಗಲೇ ತಮ್ಮ ಧರ್ಮದ ಪ್ರಚಾರ ಹಾಗೂ ಮತಾಂತರಕಾರ್ಯಗಳಿಗೆ ಹೆಚ್ಚು ಪ್ರಾಮುಖ್ಯ ಕೊಟ್ಟು ಅನ್ಯಮತದ್ವೇಷವನ್ನು ಬೆಳಸಿಕೊಂಡರು. ಈ ಪ್ರವೃತ್ತಿ ಭಾರತದ ಇತಿಹಾಸದಲ್ಲಿ ಮುಹಮ್ಮದೀಯರ ಕಾಲವೆನಿಸಿದ ೧೩ನೆಯ ಶ.ದಿಂದ ೧೭ನೆಯ ಶತಮಾನದವರೆಗಿನ ಮಧ್ಯಯುಗದಲ್ಲಿ ನಡೆದ ಮಹತ್ತ್ವದ ಘಟನೆಗಳಿಗೆ ಹೇತುವಾಯಿತು.

ಇಂತಹ ಸಂದರ್ಭದಲ್ಲಿ ಒಮ್ಮೆ ವಿಂಧ್ಯಪರ್ವತವನ್ನು ದಾಟಿ ದಕ್ಷಿಣದ ರಾಜ್ಯಗಳ ಮೇಲೆ ಆಕ್ರಮಣ ಮಾಡಿದ ಮುಹಮ್ಮದೀಯರು ಅಲ್ಲಿನ ಅತುಲೈಶ್ವರ್ಯದಿಂದ ಸಹಜವಾಗಿ ಆಕರ್ಷಿತರಾದರು. ಇದರ ಆರಂಭ ಅಲ್ಲಾಉದೀನ್ ಖಿಲ್ಜಿಯ ಕಾಲದಲ್ಲಿ. ಆತನಿಗೆ ದಕ್ಷಿಣದ ರಾಜ್ಯಗಳ ಸಂಪತ್ತಿನಮೇಲಷ್ಟೇ ಕಣ್ಣಿತ್ತು. ಸೇಉಣರೂ ಕಾಕತೀಯರೂ ಅಂತಃಕಲಹಗಳಲ್ಲಿ ನಿರತರಾಗಿದ್ದರು. ಅವುಗಳಲ್ಲಿ ಹೊಯ್ಸಳರೂ ಭಾಗಿಗಳಾಗಿದ್ದರು. ತತ್ಪರಿಣಾಮವಾದ ಬಲಹೀನತೆ ಮುಹಮ್ಮದೀಯರ ದಾಳಿಗಳಿಗೆ ದಾರಿಮಾಡಿತು. ತುಂಗಭದ್ರೆಯ ಕೆಳಗೆ ಇನ್ನೂ ಉಸಿರಾಡುತ್ತಿದ್ದ ಹಿಂದು ರಾಜ್ಯಗಳು ತಮ್ಮ ಉತ್ತರದ ಮಿತ್ರರು ಪಟ್ಟಪಾಡಿನಿಂದ ಪಾಠ ಕಲಿಯಬಹುದಾಗಿತ್ತು. ಆದರೆ ಅವರು ಹಾಗೆ ಮಾಡದೆ ತಮ್ಮ ಅಂತಃಕಲಹಗಳನ್ನು ಮುಂದುವರಿಸಿದರು. ಶತ್ರು ಮೇಲೆ ಬಿದ್ದಾಗೊಮ್ಮೆ ಅವನನ್ನು ಹೊರದೂಡುವ ಪ್ರಯತ್ನ ಮಾಡಿದರೇ ವಿನಾ ಅವರ ಸತತವಾದ ದಾಳಿ

ಗಳನ್ನು ತಡೆಗಟ್ಟಲು ಶ್ರಮಿಸಲಿಲ್ಲ. ಆದರೂ ಅಪಾಯದ ಗಂಟೆ ಬಾರಿಸಿದಾಗ, ಚೇತರಿಸಿಕೊಂಡ ಹೊಯ್ಸಳರು ತಮ್ಮ ಶಕ್ತಿ ಸ್ಥೈರ್ಯಗಳನ್ನೆಲ್ಲ ಒಟ್ಟುಗೂಡಿಸಿ ಧರ್ಮರಕ್ಷಣೆಗಾಗಿ ಕಂಕಣ ಕಟ್ಟಿದರು. ಇದರಲ್ಲಿ ಅವರು ಯಶಸ್ವಿಗಳಾಗದಿದ್ದರೂ ಅವರ ಈ ಆಶಯವನ್ನು ಅವರ ಅಧೀನದಲ್ಲಿದ್ದ ಅಧಿಕಾರಿಗಳು ಕೈಗೂಡುವಂತೆ ಮಾಡಿದರು. ಎಂತಲೇ ಹಿಂದುಧರ್ಮದ ರಕ್ಷಣೆಗಾಗಿ ವಿಜಯನಗರ ಸಾಮ್ರಾಜ್ಯ ಹುಟ್ಟಿಕೊಂಡಿತು. ಈ ಸಾಮ್ರಾಜ್ಯಕ್ಕೆ ಮೊದಲ ಬುನಾದಿ ಹಾಕಿದವರು ಹೊಯ್ಸಳ ವಂಶದ ಕೊನೆಯ ಅರಸರು. ಈ ದೃಷ್ಟಿಯಲ್ಲಿ ಕರ್ನಾಟಕದ, ದಕ್ಷಿಣ ಭಾರತದ ಇತಿಹಾಸದಲ್ಲಿ ಹೊಯ್ಸಳರ ಪಾತ್ರ ವಿಶಿಷ್ಟವಾದುದಾಗಿದೆ.

ಸಳ : ಗಂಗ ಮನೆತನದ ಅರಸರ ಆಳಿಕೆಯ ಬಳಿಕ ಗಂಗವಾಡಿಯ ಹಲವಾರು ದಕ್ಷಿಣದ ಭಾಗಗಳು ಚೋಳರ ವಶವಾದವು. ೧೦–೧೧ನೆಯ ಶತಮಾನಗಳಲ್ಲಿ ಚೋಳರ ಅಧೀನದಲ್ಲಿ ಅಲ್ಲಿ ಅಧಿಕಾರದಲ್ಲಿದ್ದ ಚೆಂಗಾಳ್ವರು, ಕೊಂಗಾಳ್ವರು ಹಾಗೂ ಇತರ ಸಣ್ಣ ವಂಶಗಳವರು ಆಳುತ್ತಿದ್ದರು. ೧೧ನೆಯ ಶತಮಾನದ ಮಧ್ಯಭಾಗದಲ್ಲಿ ಹೊಯ್ಸಳರು ಈ ಪ್ರದೇಶದಲ್ಲಿ ತಲೆಯೆತ್ತಿದರು. ಮೊದಲು ಮಾಂಡಲಿಕರಾಗಿ ಆಳಿದ ಇವರು ನಂತರ ಸ್ವತಂತ್ರರಾದರು. ಸೇಉಣರಂತೆಯೇ 'ಯಾದವನಾರಾಯಣ', 'ದ್ವಾರಾವತೀಪುರವರಾಧೀಶ್ವರ' ಇತ್ಯಾದಿ ಬಿರುದುಗಳನ್ನು ತಳೆದಿದ್ದ ಇವರು ಸಹ ತಮ್ಮನ್ನು ಯದುಕುಲಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಆದರೆ ಸೇಉಣರಂತೆ ಇವರೂ ಉತ್ತರದಿಂದ ಬಂದವರೆಂಬ ಊಹೆಗಳನ್ನು ಯಾರೂ ವಿಶೇಷವಾಗಿ ಮಾಡಿಲ್ಲ. ಈ ವಂಶದ ಮೂಲಪುರುಷನ ಹಾಗೂ ಅವನಿದ್ದ ಸ್ಥಳದ ಬಗೆಗೆ ಭಿನ್ನಾಭಿಪ್ರಾಯಗಳುಂಟು. ಹೊಯ್ಸಳ ಎಂಬ ಹೆಸರನ್ನು ಪೊಯ್ + ಸಳ ಎಂದು ವಿಭಜಿಸಿದೆ. ಸೊಸೆವೂರಿನ ವಾಸಂತಿಕಾ ದೇವಾಲಯದಲ್ಲಿ ಹುಲಿಯೊಂದು ಕಾಣಿಸಿಕೊಂಡಾಗ 'ಪೊಯ್ ಸಳ' ಎಂದು ಗುರು ತನ್ನ ಶಿಷ್ಯ ಸಳನಿಗೆ ಆದೇಶ ನೀಡಿದನೆಂದೂ ಹೀಗೆ ಹುಲಿಯನ್ನು ಹೊಯ್ದು ಕೊಂದ ಸಳನು ನಂತರ ಹೊಯ್ಸಳವಂಶದ ಸ್ಥಾಪಕನಾದನೆಂದೂ ಕಥೆಯಿದೆ. ಇದನ್ನು ಶಾಸನಗಳಲ್ಲಿ ಬೇರೆ ಬೇರೆ ರೀತಿಗಳಲ್ಲಿ ಹೇಳಿದೆ. ಹುಲಿಯನ್ನು ಮೊಲ ಬೇಟೆಯಾಡಿದ ಸ್ಥಳ ವೀರಕ್ಷೇತ್ರ ಎಂದು ಭಾವಿಸಿದ ಸಳ ಒಬ್ಬ ದಿವ್ಯ ಋಷಿಯ ಆದೇಶದಂತೆ ಅಲ್ಲಿ ರಾಜ್ಯವೊಂದನ್ನು ಸ್ಥಾಪಿಸಿದನೆಂದು ಹೇಳಲಾಗಿರುವುದು ಈ ಕಥೆಯ ಇನ್ನೊಂದು ರೂಪ.

ಈ ಕಥೆಗಳಲ್ಲಿ ಕಂಡುಬರುವ ವ್ಯತ್ಯಾಸಗಳೇನೇ ಇದ್ದರೂ ಮೂಲತಃ ಯದುವಂಶಕ್ಕೆ ಸೇರಿದ ಇವರು ಹೊಯ್ಸಳರೆಂದೆನಿಸಿಕೊಂಡುದಕ್ಕೆ ಕಾರಣಗಳನ್ನು ಕೊಡಲು ಈ ಕಥೆಗಳ ಮೂಲಕ ಯತ್ನಿಸಿರುವಂತೆ ತೋರುತ್ತದೆ.

ಹುಲಿ ಇವರ ಲಾಂಛನ. ಹೊಯ್ಸಳ ಇವರ ವಂಶದ ಹೆಸರು. ಬಹುಶಃ ಮೇಲಿನ ಕಥೆಗಳಲ್ಲಿ ಮೊದಲನೆಯದನ್ನು ನಿರೂಪಿಸಲೆಂಬಂತೆ ಇವರ ಲಾಂಛನದಲ್ಲೂ ವೀರನೊಬ್ಬ ಹುಲಿಯನ್ನು ಇರಿಯುತ್ತಿರುವ ಚಿತ್ರವಿದೆ. ಆ ಲಾಂಛನವನ್ನು ಅಂಗೀಕರಿಸುವ ವೇಳೆಗಾಗಲೇ ಹೊಯ್ಸಳರ ಮೂಲವನ್ನು ಕುರಿತ ಆ ಆಖ್ಯಾಯಿಕೆ ಪ್ರಚಾರದಲ್ಲಿತ್ತೆಂಬುದು ಸ್ಪಷ್ಟ.

ಈ ಘಟನೆ ನಡೆದುದು ಶಶಕಪುರದಲ್ಲಿ. ಇದನ್ನು ಗುರುತಿಸುವುದರಲ್ಲಿ ಭಿನ್ನಾಭಿಪ್ರಾಯ ದೆ. ಸೊಸೆವೂರು ಎಂಬುದು ಅದರ ಇನ್ನೊಂದು ಹೆಸರು. ಅದು ಹಳೇಬೀಡು ದು ಕೆಲವರ ಅಭಿಪ್ರಾಯ. ಚಿಕ್ಕಮಗಳೂರು ಜಿಲ್ಲೆಯ ಈಗಿನ ಅಂಗಡಿ ಎಂಬ ಗ್ರಾಮ ದು ಕೆಲವರು. ಸೊಸೆವೂರು ಎಂಬ ಹೆಸರನ್ನು ವಿಶ್ಲೇಷಿಸುತ್ತ, ಚಾಲುಕ್ಯ ಒಂದನೆಯ ಮೇಶ್ವರನು ವಿನಯಾದಿತ್ಯನ ಸೋದರಿಯಾದ ಹೊಯ್ಸಳ ರಾಜಕುಮಾರಿಯನ್ನು ಮನೆಯಾಗಿದ್ದ ಕಾರಣ, ಆಕೆ ಚಾಲುಕ್ಯರ ಸೊಸೆಯಾದಳೆಂದೂ ಶಶಕಪುರ ಅಥವಾ ಸೆವೂರು ಎಂದು ಹೆಸರು ಬರಲು ಅದು ಕಾರಣವಿರಬಹುದೆಂದೂ ಎಂ. ಹನುಮಂತ ಯರು ಸೂಚಿಸಿದ್ದಾರೆ.[20] ಸಳ ಯಾರು? ಇದು ಇನ್ನೂ ಸರಿಯಾಗಿ ತಿಳಿಯದು. ಹ್ಯಾದ್ರಿಯ ಗುಡ್ಡಗಾಡು ಪ್ರದೇಶಕ್ಕೆ ಸೇರಿದ ಈ ಭಾಗದ ಜನ ಸಹಜವಾಗಿಯೇ ರರೂ ಕಷ್ಟಸಹಿಷ್ಣುಗಳೂ ಆಗಿದ್ದು, ತಮ್ಮದೇ ಆದ ಒಂದು ಗುಂಪನ್ನು ಕಟ್ಟಿ ಂಡರು. ಕ್ರಮೇಣ ಸುತ್ತಲಿನ ಪ್ರದೇಶಗಳ ಒಡೆತನವನ್ನು ವಹಿಸಿ ಅಲ್ಲಿನ ಪಾಳೆಯಗಾರ ದರು. ರಾಷ್ಟ್ರಕೂಟರೊಂದಿಗೆ ಗಂಗರೂ ಕಣ್ಮರೆಯಾದಾಗ ಗಂಗವಾಡಿ ಹಲವಾರು ಳೆಯಗಾರರ ಪಾಲಾಯಿತು. ದಕ್ಷಿಣದಲ್ಲಿ ತಲೆಯೆತ್ತುತ್ತಿದ್ದ ಚೋಳರು ತಮ್ಮ ರಾಜ್ಯ ನ್ನು ವಿಸ್ತರಿಸುತ್ತ, ಗಂಗವಾಡಿಯ ಭಾಗಗಳನ್ನು ಆಕ್ರಮಿಸಲು ಉತ್ಸುಕರಾದರು. ಶ್ಚಿಮ ಚಾಲುಕ್ಯ ತೈಲಪನೂ ಅವನ ವಂಶಜರೂ ಇದನ್ನು ತಡೆಯಲು ಪ್ರಯತ್ನಿಸಿದರು. ಂತಹ ಪರಿಸ್ಥಿತಿಯಲ್ಲಿ ನಡುವಣ ಪ್ರದೇಶದಲ್ಲಿ ಪ್ರಬಲರಾಗಿದ್ದ ಹೊಯ್ಸಳರು ತಡೆ ಜ್ಯವೊಂದನ್ನು ಸ್ಥಾಪಿಸಿ ಚೋಳರನ್ನು ತಡೆಗಟ್ಟುವುದು ಚಾಲುಕ್ಯರಿಗೂ ಅಪೇಕ್ಷಣೀಯ ಗಿತ್ತಾಗಿ ಹೊಯ್ಸಳರಿಗೆ ಚಾಲುಕ್ಯರೂ ಪ್ರೋತ್ಸಾಹವನ್ನು ನೀಡಿದರು. ಹೀಗೆ ಅಸ್ತಿತ್ವಕ್ಕೆ ದಿತು ಹೊಯ್ಸಳ ರಾಜ್ಯ.

ನೃಪಕಾಮ: ಹೊಯ್ಸಳರ ಮೊದಲ ಅರಸ ಕಾಮ ಅಥವಾ ನೃಪಕಾಮ. ಈ ಯ್ಸಳನು ಚೋಳರ ದಂಡನಾಯಕನಾದ ಅಪ್ರಮೇಯನನ್ನು ಸೋಲಿಸಿದನೆಂದು ರೈಸ್ ಮಂತಾದವರು ಭಾವಿಸಿದ್ದರು. ಆದರೆ ಈ ವಿಷಯವನ್ನೊಳಗೊಂಡ ಶಾಸನ ಇತ್ತೀಚೆಗೆ ರಿಷ್ಕೃತವಾಗಿ ಪ್ರಕಟವಾಗಿದೆ. ಇದು ಅಪ್ರಮೇಯನ ವಿಜಯವನ್ನು ಸೂಚಿಸುವ ಜಯ ಂಭವೆಂದು ತಿಳಿದಿದೆ. ಶಾಸನದಲ್ಲಿ ಹೊಯ್ಸಳನ ಉಲ್ಲೇಖ ೪ ಬಾರಿ ಬಂದಿದೆ. ಕಲಿಯೂರಿನ ಕದನದಲ್ಲಿ ಇತರ ಸಾಮಂತಾದಿಗಳೊಂದಿಗೆ ಕೂಡಿ ಅಪ್ರಮೇಯನನ್ನು ಎದುರಿಸುವಲ್ಲಿ ಯ್ಸಳನು ಪ್ರಮುಖಪಾತ್ರ ವಹಿಸಿದನು. ತಲಕಾಡಿನ ಸಮೀಪದ ಕಲಿಯೂರಿನ ಕದನ ಚೋಳರ ಮುನ್ನಡೆಗೆ ಇತರರು ಒಡ್ಡಿದ ಮೊದಲ ತಡೆ ಎಂದು ಊಹಿಸ ಹುದು. ಇದರಲ್ಲಿ ಹೊಯ್ಸಳನ ಹೆಸರು ಹೇಳಿಲ್ಲವಾದರೂ ಆತನು ನೃಪಕಾಮನಾಗಿರ ಹುದೆಂಬುದು ಊಹೆ. ಈತ ಕ್ರಿ.ಶ. ೧೦೦೬ರಲ್ಲಿ, ೩೦ ವರ್ಷಗಳ ನಂತರ ಮತ್ತೊಮ್ಮೆ ಳರನ್ನು ಎದುರಿಸಿದನು. ಈ ಸಲ ಚೋಳರ ಸಾಮಂತನಾಗಿದ್ದ ರಾಜೇಂದ್ರಚೋಳ ಂಗಾಳ್ವನು ನೃಪಕಾಮನನ್ನು ಮಣ್ಣೆಯ ಸಮೀಪದಲ್ಲಿ ಎದುರಿಸಿದನು. ಈ ಸಲವೂ ಮನು ಗೆಲ್ಲಲಿಲ್ಲ. ಆದರೆ ಅವನ ಶಕ್ತಿಯೂ ಕುಗ್ಗಲಿಲ್ಲ.

ವಿನಯಾದಿತ್ಯ, ಎಱೆಯಂಗ: ನೃಪಕಾಮನ ಮಗ ವಿನಯಾದಿತ್ಯ. ಈತ ಕ್ರಿ.ಶ. ಸು. ೧೦೪೫ರಲ್ಲಿ ಅಧಿಕಾರಕ್ಕೆ ಬಂದನು. ನಡುವಣ ೨೦ ವರ್ಷಗಳ (೧೦೨೬–೧೦೪೭) ಹೊಯ್ಸಳರ ಇತಿಹಾಸ ತಿಳಿಯದು. ವಿನಯಾದಿತ್ಯನ ಮೊದಲ ಶಾಸನದ ಕಾಲ ೧೦೪೭. ಈ ವೇಳೆಗೆ ಚಾಲುಕ್ಯರಾಜ್ಯ ಸ್ಥಿರವಾಗಿ, ಮೊದಲನೆಯ ಸೋಮೇಶ್ವರನು ರಾಜ್ಯವಾಳುತ್ತಿದ್ದನು. ಈತನಿಗೆ ಹೊಯ್ಸಳರೊಡನೆ ಸೌಹಾರ್ದಯುತ ಸಂಬಂಧವನ್ನು ಹೊಂದುವುದು ಅವಶ್ಯವಾಗಿತ್ತೆಂತಲೇ ಹೊಯ್ಸಳ ಮಹಾದೇವಿಯನ್ನು ಆತ ಮದುವೆಯಾಗಿದ್ದ. ಈಕೆ ವಿನಯಾದಿತ್ಯನ ಸೋದರಿಯೋ ಮಗಳೋ ಆಗಿರಬೇಕು. ಕೊಪ್ಪಂ ಕದನದ ಬಳಿಕ ಸ್ವದೇಶಕ್ಕೆ ಧಾವಿಸುತ್ತಿದ್ದ ರಾಜೇಂದ್ರಚೋಳನು ದಾರಿಯಲ್ಲಿ ಕುನ್ನುಟದ ಕೋಟೆಯನ್ನು ಮುತ್ತಿದಾಗ ಹೊಯ್ಸಳರ ಆ ಕೋಟೆಯ ರಕ್ಷಣೆಗೆ ಸೋಮೇಶ್ವರನು ಸೇನಾಸಮೇತ ಬಂದನು. ಇದರಿಂದ ವಿನಯಾದಿತ್ಯನು ವಿರೋಧಿಗಳಾದ ಚೋಳರ ಕಾಟ ತಡೆಯಲು ಚಾಲುಕ್ಯರ ಸ್ನೇಹ ಬಯಸಿ ಅವರ ಸಾಮಂತಿಕೆಯನ್ನೊಪ್ಪಿದನೆಂದು ಊಹಿಸಬಹುದು. ಹೀಗೆ ಸಾಮಂತನಾಗಿದ್ದು, ಇಮ್ಮಡಿ ಸೋಮೇಶ್ವರನ ವಿರುದ್ಧ ಬಂದ ಪರಮಾರ ಜಯಸಿಂಹನನ್ನು ಸೋಲಿಸುವಲ್ಲಿ ಸಹಾಯವನ್ನು ಮಾಡಿದನು. ವಿನಯಾದಿತ್ಯನ ಮಗನಾದ ಎಱೆಯಂಗನು ಈ ಸಂದರ್ಭದಲ್ಲಿ ವಿಶಿಷ್ಟಪಾತ್ರ ವಹಿಸಿ ಅರಸನ ಮೆಚ್ಚುಗೆ ಪಡೆದನು. ನಂತರ ಚಾಲುಕ್ಯ ಸೋದರರಲ್ಲಿ ವೈಮನಸ್ಯ ತಲೆದೋರಿದಾಗ ವಿಕ್ರಮಾದಿತ್ಯನಿಗೆ ಬೆಂಬಲವನ್ನು ನೀಡಿದ ಎಱೆಯಂಗನು ತನ್ನ ತಂದೆಗೆ ನೆರವಾಗಿ ನಿಂತು ಯುವರಾಜ ಪದದಲ್ಲಿದ್ದನು. ವಿನಯಾದಿತ್ಯನು ಸು. ೫೦ ವರ್ಷಗಳಿಗೂ ಹೆಚ್ಚುಕಾಲ ಆಳಿದನು. ಇವನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ವಾಸ್ತವಿಕವಾಗಿ ಅಧಿಕಾರವಿದ್ದುದೆಲ್ಲ ಎಱೆಯಂಗನ ವಶದಲ್ಲಿಯೇ. ಕ್ರಿ.ಶ. ೧೦೯೮ರ ಸುಮಾರಿಗೆ ಸ್ವತಂತ್ರವಾಗಿ ಆಳತೊಡಗಿದ ಎಱೆಯಂಗನು ೨ ವರ್ಷಗಳೊಳಗೆ ತೀರಿಕೊಂಡನು.

ಭುವನೈಕಮಲ್ಲ ಇಮ್ಮಡಿ ಸೋಮೇಶ್ವರನ ಕಾಲದಲ್ಲಿ ಪರಮಾರರ ವಿರುದ್ಧ ಕಳುಹಲಾದ ಚಾಲುಕ್ಯ ದಂಡನಾಯಕರಲ್ಲಿ ಎಱೆಯಂಗನೂ ಒಬ್ಬನಾಗಿದ್ದ. ಧಾರಾನಗರವನ್ನಲ್ಲದೆ, ಚಕ್ರಗೊಟ್ಟ ಮತ್ತು ಬಳೆಯಪಟ್ಟಣಗಳನ್ನು ಈತನು ಆಕ್ರಮಿಸಿ ಸುಟ್ಟನಂತೆ. ಚಕ್ರಗೊಟ್ಟ ಮಧ್ಯಪ್ರದೇಶದ ಬಸ್ತರ್ ಜಿಲ್ಲೆಯ ಅದೇ ಹೆಸರಿನ ಕೋಟೆ. ಬಳೆಯಪಟ್ಟಣವನ್ನು ಇನ್ನೂ ಗುರುತಿಸಲಾಗಿಲ್ಲ. ಅಲ್ಲದೆ ಪೂರ್ವದ ಕಲಿಂಗವನ್ನೂ ದಕ್ಷಿಣದಲ್ಲಿ ಚೋಳನನ್ನೂ ಈತನು ಸೋಲಿಸಿದನೆಂದು ಶಾಸನಗಳಲ್ಲಿ ಹೇಳಿದೆ. ಇವೆಲ್ಲ ಚಾಲುಕ್ಯನ ಮಾಂಡಲಿಕನಾಗಿ ಎಱೆಯಂಗನು ಸಾಧಿಸಿದ ವಿಜಯಗಳು. ತನ್ನ ಬೆಂಬಲಿಗನಾಗಿ ನಿಂತ ಎಱೆಯಂಗನನ್ನು ವಿಕ್ರಮಾದಿತ್ಯ ಪ್ರೀತಿ ವಿಶ್ವಾಸಗಳಿಂದಲೇ ಕಂಡನು. ಎಱೆಯಂಗನ ಪತ್ನಿ ಏಚಲದೇವಿ. ಈಕೆಯಲ್ಲಿ ಬಲ್ಲಾಳ ವಿಷ್ಣುವರ್ಧನ ವಿಜಯಾದಿತ್ಯರೆಂಬ ಪುತ್ರರು ಜನಿಸಿದರು.

ಬಲ್ಲಾಳ I: ಬಲ್ಲಾಳನು ಆಳತೊಡಗಿದಾಗ (ಕ್ರಿ.ಶ. ೧೧೦೦) ಆಳ್ವಖೇಡ, ಬಯಲ್ನಾಡು, ತಲಕಾಡು ಮತ್ತು ಸಾವಿಮಲೆಗಳನ್ನೊಳಗೊಂಡ ಹೊಯ್ಸಳ ರಾಜ್ಯಕ್ಕೆ

ಬೇಲೂರು ರಾಜಧಾನಿಯಾಗಿತ್ತು. ಸೊಸೆವೂರಿನಿಂದ ಬೇಲೂರಿಗೆ ಅವರ ಕೇಂದ್ರ ಬದಲಾಗಿತ್ತು. ಈ ವೇಳೆಗೆ ಸ್ವತಂತ್ರವಾದ ರಾಜ್ಯವೊಂದನ್ನು ಕಟ್ಟಬೇಕೆಂಬಾಸೆ ಈ ಹೊಯ್ಸಳ ಸೋದರರಲ್ಲಿ ಮೂಡಿದ್ದಿತು. ಆದರೆ ಚಾಲುಕ್ಯರು ಒಂದು ಕಡೆ, ಚೋಳರು ಇನ್ನೊಂದು ಕಡೆ ಇವರ ಮೇಲ್ಮೆಗೆ ಅಡ್ಡಿಯಾಗಿದ್ದರು. ಚೋಳರು ಶತ್ರುಗಳು, ಚಾಲುಕ್ಯರು ಸಮ್ರಾಟರು. ಇವರನ್ನು ವಿರೋಧಿಸಿದರೆ ಹೇಗೆ? ಇವರ ಪೂರ್ವಜರು ವಿಧೇಯ ಸಾಮಂತರಾಗಿದ್ದುದಲ್ಲದೆ ಚಕ್ರವರ್ತಿಯ ಸೇವೆಗಾಗಿ, ಹಿತಕ್ಕಾಗಿ ತಮ್ಮ ಜೀವಗಳನ್ನೇ ಮುಡುಪಾಗಿಟ್ಟವರು.

ಈ ಪರಿಸ್ಥಿತಿಯಲ್ಲಿ ಚಕ್ರವರ್ತಿಯನ್ನು ಎದುರಿಸುವ ಮುನ್ನ ತಮ್ಮ ಸ್ವಂತ ಬಲವನ್ನು ವೃದ್ಧಿಗೊಳಿಸಿಕೊಳ್ಳಬೇಕು. ಇದಕ್ಕೆ ಒಂದು ಮಾರ್ಗವೆಂದರೆ ನೆರೆಯಲ್ಲಿದ್ದ ಇತರ ಸಾಮಂತರನ್ನು ಕೆಣಕಿ, ಅರಸನ ಪ್ರತಿಕ್ರಿಯೆ ಏನು ಎಂಬುದನ್ನರಿಯುವುದು. ಆತನ ದಿಗ್ವಿಜಯಗಳಲ್ಲಿ ಸಹಾಯನೀಡಿ ತಮ್ಮ ಒಳಗುಟ್ಟನ್ನು ತೋರಗೊಡದಿರುವುದು. ಇದು ಬಲ್ಲಾಳ ಹಾಗೂ ಆತನ ಸೋದರರು ಹೂಡಿದ ಹಂಚಿಕೆ. ಅಧಿಕಾರದಲ್ಲಿದ್ದ ಕೆಲವು ವರ್ಷಗಳಲ್ಲಿ ಬಲ್ಲಾಳ ( I )ನು ಚಾಲುಕ್ಯ ಅರಸನ ಪರವಾಗಿ, ಆತ ಉತ್ತರದಲ್ಲಿ ಹೂಡಿದ ಕದನಗಳಲ್ಲಿ ಪಾಲ್ಗೊಂಡಿದ್ದ. ಜತೆಗೇ ನೆರೆಯಲ್ಲಿದ್ದ ಮಾಂಡಲಿಕನನ್ನೂ ಕೆಣಕಿದ್ದ. ಹಾಗೆ ಈತನಿಂದ ಆಕ್ರಮಣಕ್ಕೊಳಗಾದವರಲ್ಲಿ ಪ್ರಮುಖರು ಚೆಂಗಾಳ್ವರು. ಚೋಳರ ಸಾಮಂತರಾಗಿದ್ದ ಇವರ ವಿರುದ್ಧ ಬಲ್ಲಾಳನು ದಂಡೆತ್ತಿಹೋದುದು ತನ್ನ ಸತ್ತ್ವ ಪರೀಕ್ಷೆಗಾಗಿ. ನಂತರ ಉಚ್ಚಂಗಿದುರ್ಗದ ಪಾಂಡ್ಯರನ್ನು ಬಲ್ಲಾಳನು ಕೆಣಕಿ ಅವರನ್ನು ಸೋಲಿಸಿದನು. ಇದರಿಂದ ಉತ್ಸಾಹಭರಿತನಾಗಿ ತೀರಪ್ರದೇಶದ ಆಳ್ವಖೇಡವನ್ನು ಆಕ್ರಮಿಸಿದನು. ತುಂಗಭದ್ರೆಯನ್ನು ದಾಟಿ ಬೆಳ್ವೊಲವನ್ನು ಸ್ವಾಧೀನ ಮಾಡಿಕೊಳ್ಳಲು ಯತ್ನಿಸಿದನು. ಇವನ ಈ ಚಟುವಟಿಕೆಗಳನ್ನು ಗಮನಿಸುತ್ತಿದ್ದ ವಿಕ್ರಮಾದಿತ್ಯನು ಪರಮಾರ ವಂಶದ ರಾಜಕುಮಾರನಾಗಿದ್ದ ಜಗದೇವನನ್ನು ಇವನನ್ನು ಹತ್ತಿಕ್ಕಲು ನಿಯಮಿಸಿದನು. ಆದರೆ ಬಲ್ಲಾಳ ಮತ್ತು ವಿಷ್ಣುವರ್ಧನರು ಶೌರ್ಯದಿಂದ ಅವನನ್ನು ಎದುರಿಸಿ ಸೋಲಿಸಿದರು.

ಇದುವರೆಗೆ ಬಲ್ಲಾಳ ಸೋದರರ ಚಟುವಟಿಕೆಗಳನ್ನು ಸ್ವಲ್ಪ ನಿರ್ಲಕ್ಷ್ಯದಿಂದಲೇ ಕಾಣುತ್ತಿದ್ದ ಚಾಲುಕ್ಯ ಅರಸನು ಬಲ್ಲಾಳನ ದುರುದ್ದೇಶ ಸ್ಪಷ್ಟವಾದಾಗ ತನ್ನ ಇತರ ಸಾಮಂತರನ್ನು ಒಟ್ಟುಗೂಡಿಸಿ ಹೊಯ್ಸಳರ ವಿರುದ್ಧ ಕಳುಹಿಸಿದ. ಇದರಲ್ಲಿ ಸಿಂದ ವಂಶದ ಆಚುಗಿ ಗಣ್ಯ. ಈಗ ಬಲ್ಲಾಳ ಸೋತ. ಇದು ನಡೆದುದು ಕ್ರಿ. ಶ. ಸು. ೧೧೧೦ರ ವೇಳೆಗೆ. ಇದಾದ ೪ ವರ್ಷಗಳಲ್ಲಿ ಬಲ್ಲಾಳನು ಮರಣ ಹೊಂದಿದನು (ಕ್ರಿ. ಶ. ೧೧೧೪).

ವಿಷ್ಣುವರ್ಧನ: ಬಲ್ಲಾಳನ ತಮ್ಮ ವಿಷ್ಣುವರ್ಧನ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಈತನ ಹೆಸರು ಖ್ಯಾತವಾದ್ದು. ಅಣ್ಣನ ಆಶಯಗಳನ್ನೇ ಹೊಂದಿದ್ದ ಈತ ಆತನ ಹೆಜ್ಜೆಗುರುತುಗಳಲ್ಲಿಯೇ ನಡೆದನು. ಸ್ವತಂತ್ರ ರಾಜ್ಯವೊಂದರ ಸ್ಥಾಪಕನಾಗುವ ಕನಸು ಕಂಡನು. ಚಾಲುಕ್ಯ ಅರಸನ ಕೈಲಿ ಅನುಭವಿಸಿದ ಸೋಲಿನ ಪರಿಣಾಮವಾಗಿ ಕೆಲವು

ಕಾಲ ಆಸೆಯನ್ನು ಬದಿಗಿರಿಸಿ ತಟಸ್ಥನಾಗಿರಬೇಕಾಯಿತು, ನಿಜ. ಆದರೆ ಈಗ ತನ್ನ ದೃಷ್ಟಿಯನ್ನು ದಕ್ಷಿಣ ರಾಜ್ಯಗಳ ಕಡೆ ಹರಿಸಿದನು.

ಗಂಗವಾಡಿಯ ಅರಸನೆನಿಸಿಕೊಂಡರೂ ಅದರ ದಕ್ಷಿಣ ಭಾಗಗಳಾದ ತಲಕಾಡು ಕೋಲಾರಗಳು ಇವರ ಅಧೀನದಲ್ಲಿರಲಿಲ್ಲ. ಅವು ಚೋಳರಿಗೆ ಸೇರಿದ್ದುವು. ತಲಕಾಡು ಪ್ರದೇಶದಲ್ಲಿ ತಗಡೂರಿನ ಅಡಿಗೈಮಾನ್ ನಾಯಕನು ಚೋಳರ ಸಾಮಂತನಾಗಿ ಆಳುತ್ತಿದ್ದನು. ಹೊಯ್ಸಳ ಸೇನಾಧಿಪತಿಯಾದ ಗಂಗರಾಜನಿಗೆ ಶರಣಾಗಲು ಒಪ್ಪದ ಅಡಿಯಮನು ಚೋಳ ಸೈನ್ಯದೊಡನೆ ಗಂಗರಾಜನನ್ನು ಎದುರಿಸಿದನು. ಆತನ ದಳಪತಿಗಳಾದ ದಾಮೋದರ ಮತ್ತು ನರಸಿಂಹವರ್ಮರು ವೀರಾವೇಶದಿಂದ ಕಾದಿದರಾದರೂ ಕೊನೆಗೆ ದಾಮೋದರನು ರಣರಂಗದಿಂದ ಕಾಂಚಿಗೆ ಓಡಿಹೋದನು. ಇನ್ನೊಬ್ಬನು ಸಾವನ್ನಪ್ಪಿದನು. ಈ ವಿಜಯದ ಬಳಿಕ ಕೋಲಾರ ಮತ್ತು ನಂಗಲಿಗಳು ಸುಲಭವಾಗಿ ಇವನ ವಶವಾದುವು. ತದನಂತರ ಈತನು ಚೋಳರ ರಾಜಧಾನಿಯಾದ ಕಾಂಚೀಪುರವನ್ನು ವಶಪಡಿಸಿಕೊಂಡು ಅಲ್ಲಿಂದ ಮುಂದೆ ರಾಮೇಶ್ವರದವರೆಗೂ ಹೋದನೆಂದು ಕೆಲವು ಶಾಸನಗಳಲ್ಲಿ ವರ್ಣಿಸಿದೆ. ಚೋಳರ ಮೇಲಿನ ವಿಜಯ ಇವನನ್ನು ಕಾಂಚೀಪುರದವರೆಗೂ ಮುಂದುವರಿಯಲು ಪ್ರೋತ್ಸಾಹಿಸಿರಬಹುದು. ಆದರೆ ಆತನು ಕಾಂಚಿಯನ್ನು ವಶಪಡಿಸಿಕೊಂಡನೆಂಬ, ರಾಮೇಶ್ವರದವರೆಗೆ ಹೋದನೆಂಬ ಮಾತುಗಳು ಪ್ರಾಯಃ ಉತ್ಪ್ರೇಕ್ಷಿತ. ಅಲ್ಲದೆ ಗಂಗವಾಡಿ ಸಹ ಬಹಳಕಾಲ ಇವನ ವಶದಲ್ಲಿರಲಿಲ್ಲವೆಂದು ತಿಳಿದುಬರುತ್ತದೆ. ಕೊಂಗುನಾಡು ಪುನಃ ಸ್ವತಂತ್ರವಾಗಿ, ಅದನ್ನು ಆಕ್ರಮಿಸಲು ಇವನು ಹಲವಾರು ಯತ್ನಗಳನ್ನು ಮಾಡಬೇಕಾಯಿತು.

ಈ ವೇಳೆಗೆ (ಕ್ರಿ.ಶ. ೧೧೧೬) ಇವನು ಪಟ್ಟಕ್ಕೆ ಬಂದು ಸು. ೧೦ ವರ್ಷಗಳಾಗಿದ್ದುವು. ಆಗ ಚಾಲುಕ್ಯನಿಗೆ ಮುಪ್ಪಡರಿತ್ತು. ಆತನು ಅನುಸರಿಸಿದ್ದ ಶಾಂತಿಯ ನೀತಿ ವಿಷ್ಣುವರ್ಧನನನ್ನು ಇನ್ನೊಮ್ಮೆ ಕಾರ್ಯಪ್ರವೃತ್ತನಾಗುವಂತೆ ಮಾಡಿತು. ಮೊದಲ ಹೆಜ್ಜೆ ಉಚ್ಚಂಗಿ ಪಾಂಡ್ಯರ ವಿರುದ್ಧ ಈತನು ದಂಡೆತ್ತಿದ್ದು. ನೊಳಂಬವಾಡಿ ಪ್ರಾಂತಾಧಿಪತಿಗಳಾಗಿದ್ದ ಇವರು ದುಮ್ಮೆ ಎಂಬಲ್ಲಿ ಹೊಯ್ಸಳರನ್ನು ಎದುರಿಸಿದರು. ಹೊಯ್ಸಳ ಸೇನಾನಿ ಗಂಗರಾಜನು ಈ ಕದನದಲ್ಲಿ ಪ್ರಮುಖಪಾತ್ರ ವಹಿಸಿದನು. ಈ ವಿಜಯದಿಂದ ವಿಷ್ಣುವರ್ಧನ 'ನೊಳಂಬವಾಡಿಗೊಂಡ' ಎನಿಸಿದ.

ನೊಳಂಬವಾಡಿಯ ಆಕ್ರಮಣ ಹೊಯ್ಸಳರಿಗೆ ಚಾಲುಕ್ಯರಾಜ್ಯದ ಪ್ರವೇಶ ದೊರಕಿಸಿತು. ಕ್ರಮೇಣ ವಿಷ್ಣುವರ್ಧನ ಬಳ್ಳಾರಿಯ ಕೋಟೆಯನ್ನು ಹಿಡಿದು ತುಂಗಭದ್ರೆಯನ್ನು ದಾಟಿ ಕುಮ್ಮಟದ ಕೋಟೆಯನ್ನೂ ವಶಪಡಿಸಿಕೊಂಡ. ಈ ಮೊದಲು ವಿನಯಾದಿತ್ಯನ ಕಾಲದಲ್ಲಿ ಈ ಕೋಟೆ ಹೊಯ್ಸಳರ ಆಳ್ವಿಕೆಗೊಳಪಟ್ಟಿದ್ದರೂ ಕಾರಣಾಂತರಗಳಿಂದ ಅನಂತರದಲ್ಲಿ ಅವರ ಕೈತಪ್ಪಿಹೋಗಿತ್ತು. ಅಲ್ಲಿಂದ ಪಶ್ಚಿಮಮುಖವಾಗಿ ತೆರಳಿದ ವಿಷ್ಣು ಬೆಳ್ವೊಲ ಪ್ರಾಂತವನ್ನು ಆಕ್ರಮಿಸಿದ. ಗದಗಿನಲ್ಲಿ ಇವನ ಶಾಸನವೊಂದಿರುವುದು ಇದಕ್ಕೆ ಸಾಕ್ಷಿ.

ಮತ್ತೊಮ್ಮೆ ವಿಕ್ರಮಾದಿತ್ಯನನ್ನು ಇದು ಎಚ್ಚರಿಸಿತು. ಆತ ಸಾಮಂತ ಬಲವನ್ನು ಒಟ್ಟುಗೂಡಿಸಿ ವಿಷ್ಣುವರ್ಧನನ ಮೇಲೆ ಕಳುಹಿದ. ಸೇನೆ ದಂಡನಾಯಕ ಗಂಗರಾಜನ ಶಕ್ತಿಯ ಮುಂದೆ ಕುಸಿಯಿತು. ಕ್ರಿ.ಶ. ೧೧೧೮ರಲ್ಲಿ ಕಣ್ಣೇಗಾಲದಲ್ಲಿ ನಡೆದ ಕದನದಲ್ಲಿ ಹೊಯ್ಸಳ ಗೆದ್ದನು. ಈ ವೇಳೆಗೆ ಇವನಂತೆಯೇ ಸ್ವಾತಂತ್ರ್ಯಾಪೇಕ್ಷಿಗಳಾಗಿದ್ದ ಉಚ್ಚಂಗಿಯ ಪಾಂಡ್ಯರೂ ಗೋವೆಯ ಕದಂಬರೂ ಇವನ ಹಾದಿಯನ್ನೇ ಹಿಡಿದರು. ಹೊಯ್ಸಳನು ಹಾನಗಲ್ಲಿನ ಮೇಲೇರಿ ಅಲ್ಲಿನ ಕದಂಬರನ್ನು ಸೋಲಿಸಿ, ಹಾನಗಲ್ಲು ಕೋಟೆಯನ್ನು ವಶಪಡಿಸಿಕೊಂಡನು. ಬನವಾಸಿಯ ಸಮೀಪದ ಮಂಡಲಿ ಪ್ರಾಂತದ ಅಧಿಕಾರಿಯಾಗಿದ್ದ ಚಾಲುಕ್ಯಸಾಮಂತ ಭುಜಬಲಗಂಗ ಪೆರ್ಮಾಡಿ ದೇವನಿಗೂ ಚಾಲುಕ್ಯ ಸೇನಾನಿಯಾಗಿದ್ದು ನಂತರ ವಿಷ್ಣುವರ್ಧನನ ಆಶ್ರಯ ಪಡೆದಿದ್ದ ಬಪ್ಪಣನಿಗೂ ಶಿವಮೊಗ್ಗ ಜಿಲ್ಲೆಯ ಹಲಸೂರಿನಲ್ಲಿ ಘೋರವಾದ ಕದನವೇರ್ಪಟ್ಟು ಭುಜಬಲಗಂಗನ ಮಗ ನನ್ನಿ-ಗಂಗನು ಕದನದಲ್ಲಿ ಮರಣಹೊಂದಿದನು. ಇದು ವಿಷ್ಣುವರ್ಧನನ ಆಕ್ರಮಣಗಳ ವಿಜೃಂಭಣೆಗೆ ಸಾಕ್ಷಿ.

ಈ ಘಟನೆಗಳಿಂದ ವಿಕ್ರಮಾದಿತ್ಯನ ತಾಳ್ಮೆ ಮೀರಿತು. ಚಾಲುಕ್ಯ ರಾಜ್ಯವನ್ನೇ ಅಲುಗಾಡಿಸಲು ನೋಡಿದ ವಿಷ್ಣುವರ್ಧನನ ಯತ್ನಕ್ಕೆ ಅವನನ್ನು ಪೂರ್ತಿ ಸದೆಬಡಿಯುವುದೇ ಶಿಕ್ಷೆ ಎಂದು ಆತ ಭಾವಿಸಿದ. ತನ್ನ ಮೊಮ್ಮಗನಾದ ಇಮ್ಮಡಿ ಜಗದೇಕಮಲ್ಲ, ತನ್ನ ಸಾಮಂತರಾಗಿದ್ದ ಸಿಂದವಂಶದ ಆಚುಗಿ ಮತ್ತು ಅವನ ಮಗ ಪೆರ್ಮಾಡಿ ಇವರ ನೇತೃತ್ವದಲ್ಲಿ ಬಲವಾದ ಸೈನ್ಯವೊಂದನ್ನು ಕಳುಹಿದನು. ಆಚುಗಿಯು ಪಾಂಡ್ಯ, ಮಲೆಪ ಇವರೆಲ್ಲರನ್ನೂ ಬಗ್ಗು ಬಡಿದ. ಪೆರ್ಮಾಡಿಯಂತೂ ವಿಷ್ಣುವರ್ಧನನನ್ನು ಬೇಲೂರಿನವರೆಗೆ ಬೆನ್ನಟ್ಟಿದ.

ಇದರ ಪರಿಣಾಮವಾಗಿ ಪುನಃ ವಿಷ್ಣುವರ್ಧನನು ಚಾಳುಕ್ಯಸಾಮಂತಿಕೆಯನ್ನು ಒಪ್ಪಿಕೊಂಡು ಸುಮ್ಮನಿರಬೇಕಾಯಿತು. ಮತ್ತೊಂದು ಆಘಾತವೂ ಕಾದಿತ್ತು. ಚೋಳರ ಕುಲೋತ್ತುಂಗನು ಗಂಗವಾಡಿಯನ್ನು ಪುನಃ ವಶಪಡಿಸಿಕೊಳ್ಳಲು ದಂಡೆತ್ತಿ ಬಂದನು. ಗಂಗವಾಡಿಯನ್ನು ಆಳುತ್ತಿದ್ದ ವಿಷ್ಣುವರ್ಧನನ ತಮ್ಮನಾದ ವಿಜಯಾದಿತ್ಯನು ಶತ್ರುವನ್ನು ಸಾಹಸದಿಂದ ಎದುರಿಸಿ ಸೋಲಿಸಿದ. ಆದರೆ ಸ್ವತಃ ಕದನದಲ್ಲಿ ಮಡಿದ. ವಿಷ್ಣುವರ್ಧನನ ಚೈತನ್ಯವನ್ನು ಇದು ಕುಗ್ಗಿಸಿತು. ಆದರೆ ಚಾಲುಕ್ಯ ಭೂಲೋಕಮಲ್ಲನ ಆಳಿಕೆಯ ಕೊನೆಗಾಲದ ವೇಳೆಗೆ ಚೇತರಿಸಿಕೊಂಡ ವಿಷ್ಣು ಪುನಃ ತನ್ನ ಆಸೆಯನ್ನು ಪೂರೈಸಲು ಉಚ್ಚಂಗಿ ಹಾನಗಲ್ಲು ಕೋಟೆಗಳನ್ನು ಮುತ್ತಿದನು. ಕ್ರಿ.ಶ. ೧೧೩೭ರಲ್ಲಿ ಬಂಕಾಪುರವೂ ೧೧೪೦ರ ವೇಳೆಗೆ ಹಾನಗಲ್ಲೂ ಇವನ ವಶವಾದುವು. ಈ ಸಮಯದಲ್ಲಿ ಇಮ್ಮಡಿ ಜಗದೇಕಮಲ್ಲನು ಭೂಲೋಕಮಲ್ಲನ ಉತ್ತರಾಧಿಕಾರಿಯಾಗಿ ಆಳಲು ಆರಂಭಿಸಿದ್ದ. ಈತನ ಹಾಗೂ ನಂತರ ಆಳಿದ ತೈಲನ ಕಾಲದಲ್ಲಿ ಚಾಲುಕ್ಯ ರಾಜ್ಯದಲ್ಲಿ ಬಿರುಕುಗಳು ಕಂಡು, ಸಾಮಂತರು ಸ್ವತಂತ್ರರಾಗತೊಡಗಿದ್ದರೆಂಬುವನ್ನು ಈಗಾಗಲೇ ಹೇಳಿದೆ. ಅದರ ಪರಿಣಾಮವಾಗಿ ಕದಂಬರು ಬನವಾಸಿ ಮತ್ತು ಹಾನಗಲ್ಲುಗಳನ್ನು

ವಿಷ್ಣುವರ್ಧನನಿಂದ ಹಿಂದಕ್ಕೆ ಪಡೆದರು.

ಸ್ವತಂತ್ರ ಹೊಯ್ಸಳ ರಾಜ್ಯವನ್ನು ಕಾಣುವ ಆಸೆ ಫಲಿಸಲಿಲ್ಲವಾದರೂ ಅದಕ್ಕಾಗಿ ಭದ್ರ ಬುನಾದಿಯನ್ನು ಹಾಕಿದ ಕೀರ್ತಿ ವಿಷ್ಣುವರ್ಧನನಿಗೆ ಸಲ್ಲುತ್ತದೆ. ಈತ ರಾಜಕೀಯವಾಗಿ ಬಲಯುತನಾಗಿದ್ದುದಲ್ಲದೆ, ಪ್ರಜಾಹಿತೈಷಿ ಕಲಾಭಿಮಾನಿ ಧರ್ಮಾಭಿಮಾನಿ ಕೂಡ ಆಗಿದ್ದ. ಈತನ ಪತ್ನಿ ಶಾಂತಲದೇವಿ ಕರ್ಣಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಸ್ಮರಣೀಯಳು. ಬೇಲೂರಿನ ವಿಜಯನಾರಾಯಣ ದೇವಾಲಯದ ನಿರ್ಮಾಣ ಆರಂಭವಾದ್ದು, ಶ್ರೀವೈಷ್ಣವಧರ್ಮ ಪ್ರಾಬಲ್ಯಕ್ಕೆ ಬಂದದ್ದು ಈ ಕಾಲದಲ್ಲಿ. ಮೊದಲು ಜೈನನಾಗಿದ್ದು ನಂತರ ರಾಮಾನುಜರ ಪ್ರಭಾವಕ್ಕೆ ಒಳಗಾಗಿ ಶ್ರೀವೈಷ್ಣವ ಧರ್ಮವನ್ನು ಈತ ಅವಲಂಬಿಸಿದನೆಂಬ ಕಥೆಯೊಂದು ಪ್ರಚಾರದಲ್ಲಿದ್ದರೂ ಅದರ ಐತಿಹಾಸಿಕತೆ ವಿಚಾರಣೀಯ. ಈತನು ಪರಮವೈಷ್ಣವನೂ ಈತನ ಪತ್ನಿ ಶಾಂತಲೆ ಜೈನಧರ್ಮ ಪರಾಯಣೆಯೂ ಆಗಿದ್ದರಲ್ಲದೆ ಅನ್ಯಮತ ಸಹಿಷ್ಣುತೆಗೆ ಒಳ್ಳೆಯ ಮಾದರಿಯಾಗಿದ್ದಾರೆ.

ಲಕ್ಷ್ಮೀದೇವಿ ಮತ್ತು ಬೊಮ್ಮಲದೇವಿ ವಿಷ್ಣುವಿನ ಇನ್ನಿಬ್ಬರು ಪತ್ನಿಯರು. ಲಕ್ಷ್ಮೀದೇವಿಯಿಂದ ಈತನಲ್ಲಿ ಜನಿಸಿದವನೇ ನರಸಿಂಹ. ಬಲ್ಲಾಳನೆಂಬ ಇನ್ನೊಬ್ಬ ಪುತ್ರನು ತಂದೆ ಜೀವಿಸಿದ್ದಾಗಲೇ ತೀರಿಕೊಂಡನು. ಇನ್ನೊಬ್ಬ ರಾಣಿ ಬಮ್ಮಲದೇವಿ ಆಡಳಿತದಲ್ಲಿ ನುರಿತಿದ್ದಳಾಗಿ, ಆಕೆಗೆ ಆಸಂದಿ ೫೦೦, ನೀರ್ಗುಂದ ೫೦೦ರ ಆಡಳಿತವನ್ನು ವಹಿಸಿದ್ದಿತು.

ವಿಜಯನಾರಸಿಂಹ (ನರಸಿಂಹ I)ನು ತನ್ನ ಹೆಸರನ್ನು ಸಾರ್ಥಕಗೊಳಿಸಲಿಲ್ಲ. ತಂದೆಯ ಮರಣಾನಂತರ ಕ್ರಿ.ಶ. ೧೧೫೨ರಲ್ಲಿ ಪಟ್ಟಕ್ಕೆ ಬಂದ. ಆದರೆ ಸುಖಲೋಲುಪನಾಗಿದ್ದುದರಿಂದ ನೊಳಂಬವಾಡಿ ಇವನ ಕೈಯಿಂದ ನುಣಿಚಿತು. ಚೆಂಗಾಳ್ವ ಕೊಂಗಾಳ್ವರೂ ಇವನ ಅಧೀನರಾಗಲಿಲ್ಲ. ಕಲಚುರಿ ಬಿಜ್ಜಲನ ಸಾಮಂತ ಬೊಮ್ಮರಸನು ನರಸಿಂಹನನ್ನು ಸೋಲಿಸಿ, ಬನವಾಸಿ ಪ್ರದೇಶವನ್ನು ಆಕ್ರಮಿಸಿದನು. ದಂಡನಾಯಕ ಬೋಕಿಮಯ್ಯ, ಮಹಾಸಾಮಂತ ಉತ್ತಮಚೋಳರಂತಹ ಸಮರ್ಥ ಅಧಿಕಾರಿಗಳಿದ್ದರೆಂದು ರಾಜ್ಯ ಉಳಿದಿತ್ತು. ಈ ಘಟನೆಗಳಿಂದ ಬೇಸತ್ತ ಯುವರಾಜ ಇಮ್ಮಡಿ ಬಲ್ಲಾಳನು ಗತ್ಯಂತರವಿಲ್ಲದೆ ತಂದೆಯ ವಿರುದ್ಧ ದಂಗೆಯೆದ್ದು, ಕ್ರಿ.ಶ. ೧೧೭೩ರಲ್ಲಿ ತಾನೇ ಸಿಂಹಾಸನವನ್ನೇರಿದನು. ಇದಕ್ಕೆ ಅನೇಕ ಸಾಮಂತರ, ಪ್ರಜೆಗಳ ಬೆಂಬಲವಿದ್ದುದರಿಂದ ನರಸಿಂಹನು ಮಣಿದನು. ಕ್ರಿ.ಶ. ೧೧೭೪, ೧೧೭೯ರ ಶಾಸನಗಳು ಇವನನ್ನು ಹೆಸರಿಸುತ್ತವೆ; ಆದರೆ ಆ ವೇಳೆಗೆ ಬಲ್ಲಾಳನು ಅರಸನಾಗಿದ್ದನು.

ಬಲ್ಲಾಳ II : ತಾತನ ಬಯಕೆ ಮೊಮ್ಮಗನಿಂದ ಈಡೇರಿತು. ಹೊಯ್ಸಳರು ಸ್ವತಂತ್ರರಾದರು. ವಿರೋಧಿಸಿದ ಚೆಂಗಾಳ್ವ ಕೊಂಗಾಳ್ವರನ್ನು ಸೋಲಿಸಿದ ಬಳಿಕ, ಉಚ್ಚಂಗಿ ಪಾಂಡ್ಯರನ್ನು ಸೋಲಿಸಿ ಉಚ್ಚಂಗಿ ದುರ್ಗವನ್ನು ವಶಪಡಿಸಿಕೊಂಡನು. ಆದರೆ ನಂತರ ಅದನ್ನು ಪಾಂಡ್ಯನಿಗೇ ಹಿಂತಿರುಗಿಸಿ, ಅವನು ತನ್ನ ಅಧೀನತೆ ಒಪ್ಪಿಕೊಳ್ಳುವಂತೆ ಮಾಡಿದನು. ನಂತರ ಬನವಾಸಿಯನ್ನು ಆಕ್ರಮಿಸಲು ಯತ್ನಿಸಿದ. ಆದರೆ ಕಲಚುರಿ ಸಂಕಮನ

ಸೈನ್ಯವನ್ನು ಎದುರಿಸಲಾಗದೆ ಹಿಮ್ಮೆಟ್ಟಬೇಕಾಯಿತು. ಈ ಸಂದರ್ಭದಲ್ಲಿ ಹಾನಗಲ್ಲೂ ಕೈಬಿಟ್ಟಿತು.

ಆದರೆ ಶೀಘ್ರಗತಿಯಲ್ಲಿ ಬದಲಿಸುತ್ತಿದ್ದ ಕರ್ನಾಟಕದ ರಾಜಕೀಯ ಘಟನೆಗಳು ಬಲ್ಲಾಳನಿಗೆ ಅನುಕೂಲವಾದುವು. ಹೋರಾಟಗಳಲ್ಲಿ ಕೊನೆಗುಳಿದವರಿಬ್ಬರೇ : ಸೇಉಣ ಭಿಲ್ಲಮ ಮತ್ತು ಹೊಯ್ಸಳ ಬಲ್ಲಾಳ. ಈಗ ತನ್ನ ಸೈನ್ಯವನ್ನು ತುಂಗಭದ್ರೆ ದಾಟಿಸಿ, ಹಳ್ಳೂರಿನ ನೆಲೆವೀಡಿನಲ್ಲಿ ನಿಂತ ಬಲ್ಲಾಳನು ಅಲ್ಲಿಂದ ಬೆಳ್ವೊಲವನ್ನು ಆಕ್ರಮಿಸಿದನು. ದಕ್ಷಿಣಾಭಿಮುಖವಾಗಿ ಧಾವಿಸುತ್ತಿದ್ದ ಭಿಲ್ಲಮನ ಸೈನ್ಯವನ್ನು ಸೊರಟೂರಿನಲ್ಲಿ ಎದುರಿಸಿದನು (ಕ್ರಿ.ಶ. ೧೧೯೦). ವಿಜಯಶ್ರೀ ಬಲ್ಲಾಳನನ್ನು ಒಲಿದಳು.

ಹೊಯ್ಸಳನು ಭಿಲ್ಲಮನ ಸೈನ್ಯವನ್ನು ಲೊಕ್ಕಿಗುಂಡಿಯವರೆಗೆ ಅಟ್ಟಿದನು. ಬಳಿಕ ಅಲ್ಲೇ ಕೆಲಕಾಲ ನೆಲಸಿ ಅದನ್ನು ಒಂದು ನೆಲೆವೀಡಾಗಿ ಮಾಡಿಕೊಂಡನು. ಇದರ ಪರಿಣಾಮವಾಗಿ ಬೆಳ್ವೊಲ ಬಲ್ಲಾಳನ ಕೈ ಸೇರಿತು. ಆದರೆ ಅವನ ರಾಜ್ಯ ಕೃಷ್ಣಾನದಿ ವರೆಗೆ ಹಬ್ಬಿತ್ತೆಂಬ ಅಥವಾ ಭಿಲ್ಲಮನನ್ನು 'ಸೊರಟೂರಿಂ ಕೃಷ್ಣವೇಣೀ ನದಿಯ ತಡಿವರಂ' ಬೆನ್ನಟ್ಟಿದನೆಂಬ ನಂತರದ ಕಾಲದ ಶಾಸನೋಕ್ತ ಹೇಳಿಕೆಗಳು ಉತ್ಪ್ರೇಕ್ಷಿತ.

ಬಲ್ಲಾಳನ ಈ ವಿಜಯ ಸ್ಥಿರವಾದುದಾಗಿರಲಿಲ್ಲ. ಸು. ಕ್ರಿ.ಶ. ೧೨೧೨ರ ವರೆಗೆ ಬೆಳ್ವೊಲಾಧಿಪತಿಯಾದ ಈತನು ಇನ್ನೊಮ್ಮೆ ಸೇಉಣರ ಸೈನ್ಯವನ್ನೆದುರಿಸಬೇಕಾಯಿತು. ಆದರೆ ಈಗ ಅಲ್ಲಿ ಇಮ್ಮಡಿ ಸಿಂಘಣನು ಆಳತೊಡಗಿದ್ದು, ಆತನು ಬಲ್ಲಾಳನನ್ನು ತೀಕ್ಷ್ಣವಾಗಿ ವಿರೋಧಿಸಿ ಬೆಳ್ವೊಲದಿಂದ ಕಾಲ್ತೆಗೆಯುವಂತೆ ಮಾಡಿದನು. ಸಿಂಘಣನ ಈ ಚಟುವಟಿಕೆಗಳನ್ನು ಈಗಾಗಲೇ ಗಮನಿಸಿದ್ದೇವೆ. ಇಬ್ಬರಿಗೂ ಬೆಳ್ವೊಲ ಪ್ರತಿಷ್ಠೆಯ ಪ್ರದೇಶವಾಗಿತ್ತು. ಬಲ್ಲಾಳನ ಯತ್ನಗಳಿಗೆ ಅಡ್ಡಿಯನ್ನೊಡ್ಡಿದವನು ಬೆಳಗುತ್ತಿಯ ಸಿಂದ ವಂಶದ ಈಶ್ವರದೇವ. ಮೊದಲು ಚಾಲುಕ್ಯರ ಸಾಮಂತರಾಗಿದ್ದ ಈ ಸಿಂದರು ನಂತರ ಬೇರಾರ ಅಧೀನತೆಯಲ್ಲೂ ಇರಲಿಚ್ಛಿಸಲಿಲ್ಲ. ಆದರೆ ಸು. ೧೧೯೯ರಲ್ಲಿ ಇವರ ಮೇಲೆ ಜಯ ಸಾಧಿಸಿದ ಬಲ್ಲಾಳನು ಮುಂದೆ ೪-೫ ವರ್ಷಗಳ ಕಾಲ ಇವರನ್ನು ತನ್ನ ಅಂಕೆಯಲ್ಲಿಟ್ಟುಕೊಂಡನು. ಆದರೆ ಸೇಉಣರು ಬೆಳ್ವೊಲವನ್ನು ಸ್ವಾಧೀನಪಡಿಸಿಕೊಳ್ಳಲು ತೊಡಗಿದಾಗ ಸಿಂದರ ನಾಯಕನು ಅವರಿಗೆ ಬೆಂಬಲ ನೀಡುವುದರ ಮೂಲಕ ತಾನು ಸ್ವತಂತ್ರನಾಗಲು ಯತ್ನಿಸಿದನು. ಆದರೆ ಹೊಯ್ಸಳರನ್ನು ವಿರೋಧಿಸಿ ಸೇಉಣರ ಸಾಮಂತಿಕೆಯನ್ನು ಈತನು ಒಪ್ಪಬೇಕಾಯಿತು. ಈ ಕದನಗಳಲ್ಲಿ ಬಲ್ಲಾಳನ ಅರಸಿಯಾದ ಉಮಾದೇವಿಯ ಪಾತ್ರ ವಿಶಿಷ್ಟವಾದುದಾಗಿದೆ. ಸಿಂದರ ವಿರುದ್ಧ ದಂಡೆತ್ತಿದ ಸೈನ್ಯದ ಆಧಿಪತ್ಯದ ಹೊಣೆಯನ್ನು ಈಕೆ ಹೊತ್ತಿದ್ದಳು.

ದಕ್ಷಿಣಮೇರೆಯ ಚೋಳ ಪಾಂಡ್ಯ ರಾಜ್ಯಗಳಲ್ಲಿ ಈ ಸಮಯದಲ್ಲಿ ಹಲವಾರು ಮಾರ್ಪಾಡುಗಳಾದವು. ಇದುವರೆಗೆ ದಕ್ಷಿಣ ಭಾರತದ ರಾಜಕೀಯದಲ್ಲಿ ಹಿರಿದಾದ ಸ್ಥಾನವನ್ನು ಪಡೆದಿದ್ದ ಚೋಳರಿಗೆ ಪಾಂಡ್ಯರು ಪ್ರಬಲರಾದ ಪ್ರತಿಸ್ಪರ್ಧಿಗಳಾದರು. ಚೋಳರೊಡನೆ ಹೊಯ್ಸಳ ಬಲ್ಲಾಳನು ರಕ್ತಸಂಬಂಧವನ್ನು ಬೆಳಸಿದ್ದನು. ಚೋಳರ

ಅರಸನಾದ ಮುಮ್ಮಡಿ ಕುಲೋತ್ತುಂಗನ ಪತ್ನಿಯರಲ್ಲೊಬ್ಬಳಾದ ಸೋಮಲದೇವಿ ಹೊಯ್ಸಳಾಧಿಪನ ಮಗಳು. ಬಲ್ಲಾಳನ ಪತ್ನಿಯಾದ ಚೋಳಮಹಾದೇವಿಯೂ ಆ ವಂಶಕ್ಕೆ ಸೇರಿದವಳಿರಬಹುದು. ಈ ಬಾಂಧವ್ಯ ತಮಿಳುನಾಡಿನ ರಾಜಕೀಯದಲ್ಲಿ ಹೊಯ್ಸಳನು ಕೈಹಾಕುವಂತೆ ಮಾಡಿತು. ಚೋಳರ ಸಾಮಂತನಾಗಿದ್ದ ಮಾರವರ್ಮ ಸುಂದರಪಾಂಡ್ಯನು ಈಗ ದಂಗೆಯೆದ್ದು ಮುಮ್ಮಡಿ ಕುಲೋತ್ತುಂಗನನ್ನು ಹೊರದೂಡಿದನು. ಚೋಳರ ನೆರವಿಗೆ ಬಲ್ಲಾಳನು ತನ್ನ ಮಗನಾದ ಇಮ್ಮಡಿ ನರಸಿಂಹನನ್ನು ಕಳುಹಿಸಿದನು. ಈ ಯುವರಾಜನ ಸಹಾಯದಿಂದ ಚೋಳನು ತನ್ನ ಅಧಿಕಾರವನ್ನು ಪುನಃ ಪಡೆದನು. ಇದು ಬಲ್ಲಾಳನಿಗೆ 'ಚೋಳರಾಜ್ಯಪ್ರತಿಷ್ಠಾಚಾರ್ಯ'ನೆಂಬ ಬಿರುದನ್ನು ತಂದಿತು.

ಮೇಲ್ನೋಟಕ್ಕೆ ಬಲ್ಲಾಳನ ಆಳಿಕೆಯ ಕೊನೆಯ ವರ್ಷದಲ್ಲಿ ನಡೆದ ಈ ಘಟನೆಗಳು ಅತಿ ಸಾಮಾನ್ಯದ್ದೆಂದು ಕಂಡರೂ ಕರ್ಣಾಟಕದ ಇತಿಹಾಸದಲ್ಲಿ ಒಂದು ನೂತನ ಕ್ಷಿತಿಜ ಕಾಣಿಸಿತು. ಅದು ಕರ್ಣಾಟಕ ಹಾಗೂ ತಮಿಳುನಾಡುಗಳ ನಡುವಣ ಬಾಂಧವ್ಯ. ಇದುವರೆಗೆ ತಮಿಳುನಾಡಿನ ಅರಸರು ಕರ್ಣಾಟಕದ ರಾಜಕೀಯದಲ್ಲಿ ಆಸಕ್ತರಾಗಿ ಕರ್ಣಾಟಕದ ಪ್ರದೇಶಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡು ಶತ್ರುಗಳಂತೆ, ಪ್ರತಿಸ್ಪರ್ಧಿಗಳಂತೆ ಇದ್ದರು. ೬ನೆಯ ವಿಕ್ರಮಾದಿತ್ಯನ ಆಳಿಕೆಯ ಕಾಲದಿಂದ ಎರಡೂ ಪ್ರದೇಶಗಳ ನಡುವೆ ಶಾಂತಿ ಏರ್ಪಟ್ಟಿತ್ತು. ಈಗ ಕರ್ಣಾಟಕ ತಮಿಳುನಾಡಿನ ರಾಜಕೀಯದಲ್ಲಿ ತಲೆಹಾಕಿ, ಕರ್ಣಾಟಕ ರಾಜ್ಯ ದಕ್ಷಿಣದಲ್ಲಿ ಕಾವೇರಿಯನ್ನು ದಾಟಿ ತಮಿಳುನಾಡಿನ ಪ್ರದೇಶಗಳನ್ನೂ ಆಕ್ರಮಿಸುವ ನೂತನ ಪರಿಸ್ಥಿತಿ ಏರ್ಪಟ್ಟಿತು.

ಇಮ್ಮಡಿ ನರಸಿಂಹನ ೧೫ ವರ್ಷಗಳ ಆಳಿಕೆಯಲ್ಲಿ ಬಹುಭಾಗ, ಚೋಳರ ರಾಜ್ಯದಲ್ಲಿಯೇ ಕಳೆಯಿತು. ಚೋಳ ಕುಲೋತ್ತುಂಗನು ಕ್ರಿ.ಶ. ೧೨೧೮ರಲ್ಲಿ ಮರಣಹೊಂದಿದನು. ಆತನ ಬಳಿಕ ಮುಮ್ಮಡಿ ರಾಜರಾಜನು ಅಧಿಕಾರಸೂತ್ರವನ್ನು ವಹಿಸಿದನು. ಮಾರವರ್ಮ ಸುಂದರಪಾಂಡ್ಯನನ್ನು ಅಲಕ್ಷಿಸಿ ಅವನಿಗೆ ತೆರಬೇಕಾಗಿದ್ದ ಕಾಣಿಕೆಗಳನ್ನು ರಾಜರಾಜನು ತಡೆಹಿಡಿದ ಕಾರಣ ಪಾಂಡ್ಯನು ಅವನನ್ನು ಶಿಕ್ಷಿಸಲು ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ಅವನ ಪಟ್ಟಮಹಿಷಿಯನ್ನು ಸೆರೆಯಲ್ಲಿಟ್ಟನು. ಹೊಯ್ಸಳರ ನೆರವನ್ನಪೇಕ್ಷಿಸಿ ನರಸಿಂಹನನ್ನು ಸೇರಿಕೊಳ್ಳಲು ಧಾವಿಸುತ್ತಿದ್ದ ರಾಜರಾಜನನ್ನು ಕಾಡವನಾಯಕನಾದ ಕೋಪ್ಪೆರುಂಜಿಂಗನು ತೆಳ್ಳಾರು ಕದನದಲ್ಲಿ ಸೋಲಿಸಿ ಬಂಧಿಸಿದನು. ಅವನನ್ನು ಶೇಂದಮಂಗಲಂ ಸೆರೆಮನೆಯಲ್ಲಿ ಇಡಲಾಯಿತು.

ನರಸಿಂಹನಿಗೆ ಸೋಮೇಶ್ವರನೆಂಬ ಮಗನು ಜನಿಸಿದ ೩-೪ ವರ್ಷಗಳಲ್ಲಿಯೇ ಅವನ ಅರಸಿ ಕಾಳಲೆ ಮಡಿದಳು. ಮಕ್ಕಳಿಲ್ಲದ ಚೋಳರ ಅರಸಿ ಸೋಮಲೆ ಸೋದರನ ಮಗನ ಪೋಷಣೆಯ ಜವಾಬ್ದಾರಿಯನ್ನು ಹೊತ್ತಳು. ಎಂತಲೇ ಚಿಕ್ಕವಯಸ್ಸಿನಿಂದಲೇ ಹೊಯ್ಸಳ ಸೋಮೇಶ್ವರನು ಚೋಳರ ರಾಜ್ಯದಲ್ಲಿ ನೆಲಸಿದನು. ನರಸಿಂಹನು ತನ್ನ ಮಗಳೊಬ್ಬಳನ್ನು ಚೋಳರ ಮುಮ್ಮಡಿ ರಾಜರಾಜನಿಗೆ ಮದುವೆಮಾಡಿಕೊಟ್ಟಂತೆ

ತೋರುತ್ತದೆ. ರಾಜರಾಜನ ಮಗನಾದ ಮುಮ್ಮಡಿ ರಾಜೇಂದ್ರನು ಸೋಮೇಶ್ವರನನ್ನು ಮಾಮಡಿ (ಸೋದರಮಾವ) ಎಂದು ಸಂಬೋಧಿಸುವುದನ್ನು ಕಾಣುತ್ತೇವೆ. ಈ ಬಾಂಧವ್ಯ ನರಸಿಂಹನನ್ನು ಚೋಳರ ರಾಜಕೀಯದಲ್ಲಿ ಹೆಚ್ಚು ಹೆಚ್ಚು ಸಿಲುಕುವಂತೆ ಮಾಡಿತು.

ವಾಸ್ತವಿಕವಾಗಿ ರಾಜರಾಜನು ಹೊಯ್ಸಳರ ಹಂಗಿಗೊಳಗಾಗಬಾರದೆಂಬ ಮನೋಭಾವನೆಯನ್ನು ಹೊಂದಿದ್ದವನಾದರೂ ಅದಕ್ಕೆ ತಕ್ಕ ಶಕ್ತಿಸಾಮರ್ಥ್ಯಗಳು ಅವನಲ್ಲಿರಲಿಲ್ಲ. ನರಸಿಂಹನಾದರೋ ತನ್ನ ಅಳಿಯನೇ ಪೇಚಿಗೆ ಸಿಕ್ಕಿರುವುದನ್ನು ನೋಡುತ್ತ ಸುಮ್ಮನಿರದಾದ. ಪರಿಣಾಮವಾಗಿ ಪುನಃ ರಾಜರಾಜನ ನೆರವಿಗೆ ಧಾವಿಸಿದ. ಮೊದಲು ತಮಿಳುನಾಡಿನ ಸೇಲಂ ಮತ್ತು ದಕ್ಷಿಣ ಆರ್ಕಾಟ್ ಜಿಲ್ಲೆಗಳನ್ನೊಳಗೊಂಡು ಮಗಧ ರಾಜ್ಯದ ಅರಸನನ್ನು ಸೋಲಿಸಿದ. ಅಲ್ಲಿಂದ ಶ್ರೀರಂಗಂಗೆ ತೆರಳಿದ. ಅರಸನ ಆಜ್ಞೆಯನ್ನು ಅಕ್ಷರಶಃ ಪಾಲಿಸಿದ ಅಪ್ಪಣ್ಣ ಮತ್ತು ಗೋಪಯ್ಯ ದಂಡನಾಯಕರು ಶತ್ರುವಿಗೆ ಸೇರಿದ ಅನೇಕ ಸ್ಥಳಗಳನ್ನು ವಶಪಡಿಸಿಕೊಂಡು ಶತ್ರುವನ್ನು ಮರ್ದಿಸಿ, ಅವನಿಗೆ ಬೆಂಬಲನೀಡಿದ ಸಿಂಹಳದ ಯುವರಾಜನಾದ ಪರಾಕ್ರಮಬಾಹುವನ್ನೂ ರಾಜರಾಜನ ಕೃತಘ್ನ ಅಧಿಕಾರಿಗಳನ್ನೂ ಶಿಕ್ಷಿಸಿ ಚಿದಂಬರಂ ಪಟ್ಟಣವನ್ನು ಆಕ್ರಮಿಸಿದರು. ಇಷ್ಟರಲ್ಲಿ ಕೋಪ್ಪೆರುಂಜಿಂಗನು ನರಸಿಂಹನಿಗೆ ಶರಣಾದನು. ರಾಜರಾಜನನ್ನು ರಾಜ್ಯದಲ್ಲಿ ನೆಲೆಗೊಳಿಸಲಾಯಿತು (೧೨೩೧). ನರಸಿಂಹನು ಸ್ವತಃ ಹೂಡಿದ ಮಹೇಂದ್ರಮಂಗಲಂ ಕದನದಲ್ಲಿ ಸುಂದರಪಾಂಡ್ಯನನ್ನು ಸೋಲಿಸಿದನು. ಇದರ ಫಲವಾಗಿ ಕಣ್ಣಾನೂರು ಕೊಪ್ಪಂನ ಸುತ್ತಲಿನ ಪ್ರದೇಶ ಹೊಯ್ಸಳರ ಆಳಿಕೆಗೊಳಪಟ್ಟಿತು. ಈ ವಿಜಯ ನರಸಿಂಹನಿಗೆ ಅಮಿತವಾದ ಕೀರ್ತಿಯನ್ನು ತಂದಿತು.

ಉತ್ತರದಲ್ಲಿ ಹೊಯ್ಸಳರಿಗೂ ಸೇಉಣರಿಗೂ ನಡೆದ ಕದನಗಳು ಮಾತ್ರ ಇವನು ನಿರೀಕ್ಷಿಸಿದ ಫಲಗಳನ್ನು ನೀಡಲಿಲ್ಲ. ಮೂರು ಬಾರಿ (೧೨೨೩, ೧೨೨೪, ೧೨೩೦ರಲ್ಲಿ) ಸಿಂಘಣನನ್ನು ಕದನದಲ್ಲಿ ಎದುರಿಸಿದರೂ ಫಲಿತಾಂಶ ಶೂನ್ಯ. ಇದರೊಂದಿಗೆ ಉತ್ತರದಲ್ಲಿ ತನ್ನ ರಾಜ್ಯವನ್ನು ತುಂಗಭದ್ರೆಗೇ ಸೀಮಿತಗೊಳಿಸಬೇಕಾದ ಅಂಶವನ್ನು ನರಸಿಂಹನು ಮನಗಂಡನು.

ಸೋಮೇಶ್ವರನು ಕ್ರಿ.ಶ. ೧೨೩೫ರಲ್ಲಿ ಪಟ್ಟಾಭಿಷಿಕ್ತನಾದನು. ಮೊದಲಿನಿಂದಲೂ ಚೋಳರ ನಾಡಿನಲ್ಲಿಯೇ ಬೆಳೆದ ಈತನು ಹೊಯ್ಸಳ ರಾಜ್ಯದ ಉತ್ತರದಲ್ಲಿನ ಘಟನೆಗಳಿಂದ ವಿಚಲಿತನಾಗಲಿಲ್ಲ; ಅದರಲ್ಲಿ ಆಸಕ್ತಿಯನ್ನೂ ತೋರಲಿಲ್ಲ. ಅಷ್ಟೇ ಅಲ್ಲದೆ ದೋರ-ಸಮುದ್ರದಿಂದ ತನ್ನ ನೆಲೆವೀಡನ್ನು ಕಣ್ಣಾನೂರಿಗೆ ಬದಲಿಸಿ, ಆಗಿಂದಾಗ್ಗೆ ಮೊದಲ ರಾಜಧಾನಿಗೆ ಭೇಟಿಯನ್ನು ನೀಡುತ್ತಿದ್ದನು. ಇದರ ಪರಿಣಾಮವಾಗಿ ಸೇಉಣರು ತುಂಗಭದ್ರೆಯನ್ನು ದಾಟಿ, ಅದರ ದಕ್ಷಿಣದ ಪರಿಸರದ ಕೆಲವು ಪ್ರದೇಶಗಳನ್ನು ಆಕ್ರಮಿಸಿದರು. ಮುಮ್ಮಡಿ ರಾಜರಾಜನ ನಂತರ ೧೨೪೬ರಲ್ಲಿ ಮುಮ್ಮಡಿ ರಾಜೇಂದ್ರನು ಅರಸನಾದನು. ಈತನು ಚೋಳರ ಕೀರ್ತಿಯನ್ನುಳಿಸಲು ಯತ್ನಿಸಿದನು. ಮಾರವರ್ಮ ಸುಂದರಪಾಂಡ್ಯ

ನನ್ನು ಸೋಲಿಸಿದನು. ಆದರೆ ಇದು ಸೋಮೇಶ್ವರನಿಗೆ ರುಚಿಸಲಿಲ್ಲ. ಚೋಳರ ಈ ಸ್ವಾವಲಂಬನೆಯನ್ನು ಕೊನೆಗಾಣಿಸಲು ಹೊಯ್ಸಳನು ಈ ಬಾರಿ ಪಾಂಡ್ಯರ ಪಕ್ಷವಹಿಸಿ ಚೋಳನನ್ನು ವಿರೋಧಿಸಿದನು. ನೆಲ್ಲೂರು ಪ್ರಾಂತದ ಅಧಿಪತಿಯಾಗಿದ್ದ ತೆಲುಗು ಚೋಳ ವಂಶದ ತಿಕ್ಕ ಮತ್ತು ಆತನ ಮಗ ಮನುಮಸಿದ್ಧಿ ಗಂಡಗೋಪಾಲರು ರಾಜೇಂದ್ರನ ಬೆಂಬಲಿಗರಾದರು. ಆದರೆ ರಾಜೇಂದ್ರನ ದುರದೃಷ್ಟವೆಂಬಂತೆ ಇದೇ ಸಮಯದಲ್ಲಿ ಕಾಕತೀಯ ಗಣಪತಿ ಸಹ ಕಾಂಚಿಯನ್ನು ಮುತ್ತಿದನು. ಅನ್ಯಮಾರ್ಗವಿಲ್ಲದೆ ರಾಜೇಂದ್ರನು ಸೋಮೇಶ್ವರನ ಸ್ನೇಹವನ್ನುಳಿಸಿಕೊಳ್ಳಬೇಕಾಯಿತು.

ಸೋಮೇಶ್ವರನಿಗೆ ಬಿಜ್ಜಲ ಮತ್ತು ದೇವಲ ಎಂಬ ಇಬ್ಬರು ಪತ್ನಿಯರಲ್ಲಿ ಕ್ರಮವಾಗಿ ಮುಮ್ಮಡಿ ನರಸಿಂಹ ಹಾಗೂ ರಾಮನಾಥರು ಜನಿಸಿದರು. ಈ ಸೋದರರು ಚಿಕ್ಕಂದಿನಿಂದಲೇ ಪರಸ್ಪರ ದ್ವೇಷಾಸೂಯೆಗಳಿಂದ ಕಾದಾಡುತ್ತಿದ್ದರು. ಬಾಳಿನ ಬಹುಕಾಲ ತಮಿಳುನಾಡಿನಲ್ಲೇ ಕಳೆದ ಸೋಮೇಶ್ವರನಿಗೂ ಎರಡು ರಾಜಧಾನಿಗಳ ನಡುವೆ ಓಡಾಡುವುದು ಕಷ್ಟವಾಗತೊಡಗಿ ರಾಜ್ಯವನ್ನು ಇಬ್ಭಾಗ ಮಾಡಿ ರಾಜ್ಯದ ಉತ್ತರಭಾಗವನ್ನು ನರಸಿಂಹನಿಗೂ ದಕ್ಷಿಣಭಾಗವನ್ನು ರಾಮನಾಥನಿಗೂ ಹಂಚಿಕೊಟ್ಟನು. ಇದು ಹೊಯ್ಸಳರ ಪ್ರಾಬಲ್ಯಕ್ಕೆ ಕುಂದುಂಟುಮಾಡಿತು. ಸೋಮೇಶ್ವರನು ಚೋಳರ ವಿರುದ್ಧ ಅನುಸರಿಸಿದ ನೀತಿ ಅವರ ನಡುವಣ ಬಾಂಧವ್ಯವನ್ನು ಕೆಡಿಸಿತ್ತು. ಪಾಂಡ್ಯವಂಶದಲ್ಲಿ ಮಾರವರ್ಮನ ಬಳಿಕ ಆಳತೊಡಗಿದ ಜಟಾವರ್ಮ ಸುಂದರಪಾಂಡ್ಯನು (೧೨೫೧) ಚೋಳರಾಜ್ಯವನ್ನು ಮುತ್ತಿದನು. ರಾಮನಾಥನೂ ಸೋಮೇಶ್ವರನೂ ಸೋತು ಓಡಿದರು. ಕಣ್ಣಾನೂರಿನ ವರೆಗಿನ ಚೋಳರ ರಾಜ್ಯ ಪಾಂಡ್ಯನ ವಶವಾಯಿತು. ಈ ಕದನ ತಮಿಳುನಾಡಿನಲ್ಲಿ ಹೊಯ್ಸಳರ ಪ್ರಾಬಲ್ಯಕ್ಕೆ ದೊಡ್ಡ ಪೆಟ್ಟನ್ನಿತ್ತಿತು. ಸೋಮೇಶ್ವರನು ಹತಾಶನಾಗಿ ಸಾವನ್ನಪ್ಪಿದನು. ರಾಜ್ಯವನ್ನು ಕಳೆದುಕೊಂಡ ರಾಮನಾಥನು ಪುನಃ ಸೋದರರೊಡನೆ ಕಾದಾಟಗಳಲ್ಲಿ ತೊಡಗಿದನು. ತನ್ನ ನೆಲೆವೀಡನ್ನು ಕುಂದಾನೆಗೆ ಬದಲಿಸಿಕೊಂಡನು. ನರಸಿಂಹನು ಶತ್ರುಗಳನ್ನೆದುರಿಸಿ ಬಹು ಕಷ್ಟದಿಂದ ಪಿತ್ರಾರ್ಜಿತ ರಾಜ್ಯವನ್ನು ಉಳಿಸಿಕೊಂಡನು. ೧೨೯೧ರಲ್ಲಿ ಇವನ ಮಗ ಮುಮ್ಮಡಿ ಬಲ್ಲಾಳನು ಅಧಿಕಾರಕ್ಕೆ ಬಂದನು. ರಾಮನಾಥನೂ ಅವನ ಮಗ ವಿಶ್ವನಾಥನೂ ಕೆಲವರ್ಷಗಳು ಬಲ್ಲಾಳನೊಡನೆ ದ್ವೇಷ ಸಾಧಿಸಿದರಾದರೂ ಕೊನೆಗೆ ಸು. ೧೩೦೦ರ ವೇಳೆಗೆ ಬಲ್ಲಾಳನು ದಾಯಾದಿಗಳನ್ನು ಸೋಲಿಸಿ ಹೊಯ್ಸಳರಾಜ್ಯ ಪುನಃ ಏಕಚಕ್ರಾಧಿಪತ್ಯಕ್ಕೆ ಒಳಗಾಗುವಂತೆ ಮಾಡಿದನು.

ಮುಮ್ಮಡಿ ಬಲ್ಲಾಳ: ಬಲ್ಲಾಳನ ಆಳಿಕೆಯ ಕಾಲ ಕರ್ಣಾಟಕದ, ಅಷ್ಟೇಕೆ ದಕ್ಷಿಣ ಭಾರತದ, ಇತಿಹಾಸದಲ್ಲಿಯೇ ಒಂದು ಪರ್ವ ಕಾಲ. ಉತ್ತರದಲ್ಲಿನ ಮಹಮ್ಮದೀಯರು ದಕ್ಷಿಣದ ಧನಕನಕಗಳಿಂದ ಮೋಹಿತರಾಗಿ ಮೇಲಿಂದಮೇಲೆ ಇಲ್ಲಿನ ರಾಜ್ಯಗಳ ಮೇಲೆ ದಾಳಿನಡಸಿದರು, ಬೊಕ್ಕಸವನ್ನು ದೋಚಿದರು. ೧೨೯೬ರಲ್ಲಿ ದೇವಗಿರಿಯನ್ನು ಮುತ್ತಿದ ಅಲ್ಲಾಉದ್ದೀನನು ರಾಮಚಂದ್ರನನ್ನು ಸೋಲಿಸಿ ರಾಜ್ಯವನ್ನು ಸೂರೆಗೊಂಡನು. ೧೩೧೨–

೧೩೮ರ ವೇಳೆಗೆ ಸೇಉಣರಾಜ್ಯ ಅಸ್ತಂಗತವಾಯಿತು. ಮಲ್ಲಿಕ್‌ಕಾಫರ್ ದೋರಸಮುದ್ರವನ್ನು ಮುತ್ತಿದನು. ಅಲ್ಲಿಂದ ಒರೆಯೂರವರೆಗೆ ಹೋಗಿ ಪಾಂಡ್ಯರ ರಾಜಧಾನಿಯಾದ ಮಧುರೆಯನ್ನು ಆಕ್ರಮಿಸಿ ಸಂಪತ್ತನ್ನು ಸೂರೆಮಾಡಿ ಹಿಂದಿರುಗಿದನು. ಆಂಧ್ರಪ್ರದೇಶದಲ್ಲಿ ಕಾಕತೀಯರ ಪ್ರತಾಪರುದ್ರನೂ ಇವರ ದಾಳಿಗಳಿಗೆ ತುತ್ತಾದನು.

ಮಹಮ್ಮದೀಯರು ದಕ್ಷಿಣ ಭಾರತದ ತಮ್ಮ ನೀತಿಯನ್ನು ಬದಲಿಸಿ, ಅಲ್ಲಿನ ರಾಜ್ಯಗಳನ್ನು ತಮ್ಮದಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದಾಗ ದಕ್ಷಿಣದ ಹಿಂದು ಅರಸರಿಗೆ ಘೋರವಾದ ವಿಪತ್ತು ಕಾದಿತ್ತು. ಅದನ್ನು ಎದುರಿಸುವ ಶಕ್ತಿ ಬಲ್ಲಾಳನಿಗಲ್ಲದೆ ಮತ್ತಾರಿಗೂ ಇರಲಿಲ್ಲ. ಇತರ ಹಿಂದೂ ರಾಜ್ಯಗಳನ್ನೆಲ್ಲಾ ಕಬಳಿಸಿದ ಮಹಮ್ಮದೀಯರು ಹೊಯ್ಸಳರನ್ನು ಮಾತ್ರ ಹತ್ತಿಕ್ಕದೆ ಹೋದರು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಎದೆಗುಂದದೆ ಹಿಂದು ರಾಜ್ಯವನ್ನೂ ಹಿಂದು ಧರ್ಮವನ್ನೂ ಉಳಿಸುವ ಯತ್ನಮಾಡಿದ ಯಶಸ್ಸು ಬಲ್ಲಾಳನದು.

೧೩೦೧, ೧೩೦೨, ೧೩೦೩ನೆಯ ವರ್ಷಗಳಲ್ಲಿ ಸತತವಾಗಿ ಸೇಉಣ ರಾಮಚಂದ್ರನ ಸೇನಾನಿಯಾದ ಎಬರನಾಯಕನ ಹಾಗೂ ಸಾಮಂತನಾದ ಕಂಪಿಲದೇವನ ದಾಳಿಗಳನ್ನು ಎದುರಿಸಿದ ಬಲ್ಲಾಳನು ಕದಂಬ ಕಾವದೇವನೊಡನೆಯೂ ಕಾದಬೇಕಾಯಿತು. ಕ್ರಿ.ಶ. ೧೩೦೬ರಲ್ಲಿ ನಾಕಿಗುಂಡಿ ಕೋಟೆಯನ್ನು ಮುತ್ತಿ ರಾಮಚಂದ್ರನನ್ನು ಬಲ್ಲಾಳನು ಸೋಲಿಸಿದನು.

೧೨೬೮ರಲ್ಲಿ ಸುಂದರಪಾಂಡ್ಯನ ಬಳಿಕ ಮಾರವರ್ಮ ಕುಲಶೇಖರನು ಮಧುರೆಯಲ್ಲಿ ಆಳುತ್ತಿದ್ದನು. ೧೩೧೦ರಲ್ಲಿ ಈತನು ಸತ್ತಾಗ, ರಾಜ್ಯಕ್ಕಾಗಿ ಇವನ ಇಬ್ಬರು ಮಕ್ಕಳಾದ ಸುಂದರಪಾಂಡ್ಯ ಮತ್ತು ವೀರಪಾಂಡ್ಯರ ನಡುವೆ ಕಲಹಗಳಾದವು. ವೀರಪಾಂಡ್ಯನು ಅಧರ್ಮಸಂತಾನಿಯಾದರೂ ಅರಸನಿಗೆ ಪ್ರೀತಿಪಾತ್ರನಾಗಿದ್ದನು. ಸುಂದರಪಾಂಡ್ಯನು ಬಲ್ಲಾಳನ ಸಹಾಯ ಕೋರಿದನು. ತನ್ನ ಪೂರ್ವಜರು ಕಳೆದುಕೊಂಡಿದ್ದ ಪ್ರದೇಶಗಳನ್ನು ಮರಳಿ ಪಡೆಯುವ ಆಸೆಯಿಂದ ಬಲ್ಲಾಳನು ದಕ್ಷಿಣಕ್ಕೆ ತೆರಳಿದನು. ಈ ಸಮಯದಲ್ಲಿ ಮಲ್ಲಿಕ್ ಕಾಫರ್ ಮತ್ತೊಮ್ಮೆ ದಂಡೆತ್ತಿ ಸೇಉಣರ ನೆರವಿನೊಡನೆ ದೋರಸಮುದ್ರವನ್ನು ಮುತ್ತಿದನು. ಅರಸನಿಲ್ಲದ ರಾಜಧಾನಿ ಮಲ್ಲಿಕನಿಗೆ ಸುಲಭವಾಗಿ ವಶವಾಯಿತು. ಈ ಸುದ್ದಿಯನ್ನು ಕೇಳಿದ ಕೂಡಲೆ ಹಿಂದಿರುಗಿದ ಬಲ್ಲಾಳನು ಗತ್ಯಂತರವಿಲ್ಲದೆ ಅವನಿಗೆ ಕಪ್ಪಕಾಣಿಕೆಗಳನ್ನಿತ್ತು ಗೌರವಿಸಬೇಕಾಯಿತು. ಅಷ್ಟೇ ಅಲ್ಲದೆ ಕಾಫರ್ ಪಾಂಡ್ಯರ ಮೇಲೆ ಮುಂದುವರಿದಾಗ ಅವನಿಗೆ ಸಹಾಯವನ್ನು ನೀಡಬೇಕಾಯಿತು. ಕಾಂಚೀಪುರ ಮಧುರೆಗಳು ಕಾಫರನ ದೌರ್ಜನ್ಯಕ್ಕೆ ಎರವಾದವು. ಪಾಂಡ್ಯ ಸೋದರರು ಈಗ ಒಟ್ಟಾಗಿ ಶತ್ರುವನ್ನು ಕುಟಿಲೋಪಾಯಗಳಿಂದ ಎದುರಿಸಿ ಘಾಸಿಗೊಳಿಸಿದರು. ಕಾಫರನು ಅಲ್ಲಿಂದ ಕಾಲ್ತೆಗೆದನಾದರೂ ಅಪಾರ ಸಂಪತ್ತು ಅವನದಾಯಿತು ಬಲ್ಲಾಳನು ಮಗನನ್ನು ದೆಹಲಿಗೆ ಕಳುಹಬೇಕಾಯಿತು. ಆದರೆ ದೆಹಲಿಯ ಸುಲ್ತಾನನು ಯುವರಾಜನನ್ನು ಆದರದಿಂದ ಕಂಡು ಹಿಂದಕ್ಕೆ ಕಳುಹಿಸಿಕೊಟ್ಟನು.

೧೩೧೮ರಲ್ಲಿ ಮತ್ತೊಮ್ಮೆ ದಕ್ಷಿಣಕ್ಕೆ ಕಳುಹಲ್ಪಟ್ಟ ಕಾಫರನು ದೇವಗಿರಿಯಲ್ಲಿ ಮಹಮ್ಮದೀಯ ಪ್ರಾಂತಾಧಿಕಾರಿಯನ್ನು ನಿಯಮಿಸಿದನು. ಸೇಉಣ ರಾಜ್ಯ ಅದರೊಂದಿಗೆ ಅಸ್ತಂಗತವಾಯಿತು. ಅವರ ಆಧೀನದಲ್ಲಿದ್ದ ಹಲವು ರಾಜರು ಸ್ವತಂತ್ರರಾದರು. ಅವರಲ್ಲಿ ಕಂಪಿಲಿಯ ಕಂಪಿಲದೇವನು ಪ್ರಮುಖ. ಕುಮ್ಮಟ ಇವನ ರಾಜಧಾನಿ. ಬಳ್ಳಾರಿ, ರಾಯಚೂರು ಧಾರವಾಡ ಜಿಲ್ಲೆಗಳ ಭಾಗಗಳನ್ನೊಳಗೊಂಡ ಈ ಸಣ್ಣ ರಾಜ್ಯ ಸಿಂಗೆಯ ನಾಯಕನ ನೇತೃತ್ವದಲ್ಲಿ ಪ್ರಬಲವಾಗಿ ಆತನ ಮಗ ಕಂಪಿಲದೇವನ ಕಾಲದಲ್ಲಿ ಸ್ವತಂತ್ರವಾಯಿತು. ಚಿತ್ರದುರ್ಗ ಶಿವಮೊಗ್ಗ ಅನಂತಪುರ ಜಿಲ್ಲೆಗಳ ಕೆಲವು ಭಾಗಗಳನ್ನು ಕಂಪಿಲದೇವನು ವಶಪಡಿಸಿಕೊಂಡನು.

ದೆಹಲಿಯಲ್ಲಿ ಖಿಲ್ಜಿಮನೆತನ ಕ್ರಿ.ಶ. ೧೩೨೦ರಲ್ಲಿ ಕೊನೆಗೊಂಡು ತೊಘಲಕ್ ಸಂತತಿಯ ಸುಲ್ತಾನ ಘಿಯಾಸುದ್ದೀನ್ ಪಟ್ಟಕ್ಕೆ ಬಂದ. ೧೩೨೩ರಲ್ಲಿ ಆತನ ಮಗ ಉಲುಘ್‌ಖಾನ್ ದಕ್ಷಿಣಕ್ಕೆ ದಂಡೆತ್ತಿಬಂದ. ಓರಂಗಲ್ ಇವನ ಮೊದಲ ಗುರಿ. ಪ್ರತಾಪರುದ್ರನು ಸೋತನು. ಅವನನ್ನು ಬಂಧಿಸಿ ದೆಹಲಿಗೆ ಕರೆದೊಯ್ಯುವಾಗ ಅವಮಾನವನ್ನು ಭರಿಸಲಾರದೆ ಆತನು ದಾರಿಯಲ್ಲಿ ಆತ್ಮಹತ್ಯೆಮಾಡಿಕೊಂಡನು. ಕಾಕತೀಯರ ರಾಜ್ಯ ಮಹಮದೀಯರ ವಶವಾಯಿತು ಕ್ರಿ ಶ. ೧೩೨೫ರಲ್ಲಿ ಉಲುಘ್‌ಖಾನನು ಮಹಮದ್ ತೊಘಲಕನೆಂಬ ಹೆಸರಿನಿಂದ ಸುಲ್ತಾನನಾಗಿ ಆಳತೊಡಗಿದ. ಕೂಡಲೇ ಪುನಃ ದಕ್ಷಿಣಕ್ಕೆ ಸೇನೆಯೊಂದನ್ನು ಕಳುಹಿಸಿದನು. ಮಹಮದ್ ತೊಘಲಕನು ಕೇವಲ ಕೊಳ್ಳೆಯಲ್ಲಿ ತೊಡಗುವುದಕ್ಕಿಂತ ದಕ್ಷಿಣದ ಈ ರಾಜ್ಯಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳುವುದು ಹೆಚ್ಚು ಪ್ರಯೋಜನಕಾರಿ ಎಂದು ಭಾವಿಸಿದ. ಕೊಳ್ಳೆ ಹೊಡೆದು ಹಿಂದಿರುಗುವ ಬದಲು, ಹೋದಲ್ಲಿ ನೆಲೆಯೂರಿ ನಿಲ್ಲುವ ಈತನ ಈ ರಾಜಕೀಯ ನೀತಿ ದಕ್ಷಿಣದ ಹಿಂದು ಅರಸರಿಗೆ ಮೃತ್ಯುಸ್ವರೂಪಿಯಾಯಿತು. ಮಹಮದನ ಸೇನೆ ದೋರಸಮುದ್ರವನ್ನು ಆಕ್ರಮಿಸಿತು. ಬಲ್ಲಾಳನು ತಿರುವಣ್ಣಾಮಲೈಗೆ ಓಡಿದನು. ದೋರಸಮುದ್ರದಿಂದ ಮುಂದುವರಿದ ಸೈನ್ಯ ಮಧುರೆಯನ್ನು ಮುತ್ತಿತು. ಪಾಂಡ್ಯರ ಅರಸ ಓಡಿಹೋಗಿದ್ದ. ಮಧುರೆಯಲ್ಲಿ ತೊಘಲಕನ ಪ್ರತಿನಿಧಿಯೊಬ್ಬ ಪ್ರಾಂತಾಧಿಕಾರಿಯಾಗಿ ನೇಮಿಸಲ್ಪಟ್ಟ. ಹೀಗೆ ಕ್ರಿ.ಶ. ೧೩೩೦ರ ವೇಳೆಗೆ ದಕ್ಷಿಣ ಭಾರತದ ಬಹಳ ಪ್ರದೇಶಗಳು ಮಹಮದನ ಆಳಿಕೆಗೆ ಒಳಪಟ್ಟವು. ಕಂಪಿಲಿಯ ಸಣ್ಣ ಸಂಸ್ಥಾನ ಹಾಗೂ ಹೊಯ್ಸಳ ರಾಜ್ಯ ಹೆಸರಿಗಾಗಿಯಾದರೂ ಸ್ವತಂತ್ರ ಹಿಂದು ರಾಜ್ಯಗಳಾಗಿ ಉಳಿದಿದ್ದುವು.

ಆದರೆ ಬಹು ಬೇಗನೆ ಕಂಪಿಲಿ ಸಹ ಮಹಮ್ಮದೀಯರ ದಾಳಿಗೆ ತುತ್ತಾಯಿತು. ಗುಲ್ಬರ್ಗದ ಸಮೀಪದ ಸಾಗರದಲ್ಲಿ ಪ್ರಾಂತಾಧಿಕಾರಿಯಾಗಿ ಅಧಿಕಾರ ನಿರ್ವಹಿಸುತ್ತಿದ್ದ ದೆಹಲಿಯ ಸುಲ್ತಾನನ ಸೋದರಳಿಯನಾದ ಬಹಾಉದ್ದೀನ್ ಗುರ್‌ಷಾಸ್ಪ ಸಮಯ ಸಾಧಿಸಿ ಸೋದರಮಾವನ ವಿರುದ್ಧ ದಂಗೆಯೆದ್ದ. ಈ ಮೊದಲೇ ದೇವಗಿರಿಯಲ್ಲಿದ್ದ ಮಲ್ಲಿಕ್ ಯಾಕ್ಲಾಖೀ ಎಂಬಾತನು ದಂಗೆಯೆದ್ದಿದ್ದು ಅವನನ್ನು ಹಿಂದಿನ ದೆಹಲಿಯ ಸುಲ್ತಾನನು ಸದೆಬಡಿದಿದ್ದನು. ದೆಹಲಿಯು ದಕ್ಷಿಣಕ್ಕೆ ಬಹಳ ದೂರದಲ್ಲಿದ್ದ ಕಾರಣ ಇಲ್ಲಿನ

ಅಧಿಕಾರಿಗಳು ಸಹಜವಾಗಿಯೇ ಸ್ವತಂತ್ರವಾಗಿ ವರ್ತಿಸುತ್ತಿದ್ದರು. ಗುರ್‌ಷಾಸ್ಪನು ದಂಗೆಯೆದ್ದಾಗ ಮಹಮದನು ಅವನನ್ನು ಅಡಗಿಸಲು ಸೈನ್ಯವನ್ನು ಕಳುಹಿಸಿದನು. ದಂಗೆಕೋರನು ಕಂಪಿಲಿಗೆ ಹೋಗಿ ಅಲ್ಲಿನ ಅರಸನಿಗೆ ಶರಣಾದನು. ಇದರ ಫಲವಾಗಿ ಕಂಪಿಲಿ ತೊಘಲಕನ ಸೇನೆಯನ್ನು ಎದುರಿಸಬೇಕಾಯಿತು. ಶರಣುಬಂದ ಮುಸ್ಲಿಮನನ್ನು ಬಲ್ಲಾಳನ ರಾಜಧಾನಿಗೆ ಕಳುಹಿಸಿ, ಶತ್ರುಗಳನ್ನು ಕಂಪಿಲಿಯವರು ಎದುರಿಸಿದರು. ಸ್ವತಂತ್ರವಾಗಿದ್ದ ಕಂಪಿಲಿ ಈಗ ಮಹಮ್ಮದೀಯರ ಪಾಲಾಯಿತು. ಅಲ್ಲಿಂದ ಮಹಮದನ ಸೇನೆ ಬಲ್ಲಾಳನ ಮೇಲೆ ನುಗ್ಗಿದಾಗ ಈ ಕುತ್ತಿನಿಂದ ಪಾರಾಗಲು ಬಲ್ಲಾಳನು ದಂಗೆಕೋರನನ್ನು ಸುಲ್ತಾನನಿಗೆ ಒಪ್ಪಿಸಿದನು. ಕಂಪಿಲಿ ಅಸ್ತಿತ್ವವನ್ನು ಕಳೆದುಕೊಂಡ ಬಳಿಕ ಉಳಿದದ್ದು ಕೇವಲ ಹೊಯ್ಸಳ ರಾಜ್ಯ ಮಾತ್ರ.

ಬಲ್ಲಾಳನ ರಾಜ್ಯ ಉತ್ತರದ ಹಂಪಿ ತುಂಗಭದ್ರೆಗಳಿಂದ ಆರಂಭಿಸಿ ಹೆಚ್ಚುಕಡಮೆ ದಕ್ಷಿಣದ ರಾಮೇಶ್ವರದವರೆಗೆ ಹರಡಿತ್ತು. ಮಹಮ್ಮದೀಯರು ಕೇವಲ ಧನದಾಹ ಅಧಿಕಾರಗಳಿಂದ ತೃಪ್ತರಾಗದೆ ತಮ್ಮ ಧರ್ಮವನ್ನು ವಿಶ್ವದಾದ್ಯಂತ ಪ್ರಚಾರಮಾಡಿ ಮತಾಂತರಗೊಳಿಸುವ ಮನೋಭಾವವನ್ನು ಹೊಂದಿದ್ದರು. ವಿಗ್ರಹಭೇದನ ಪವಿತ್ರ ಕರ್ತವ್ಯಗಳಲ್ಲೊಂದೆಂದು ಅವರು ಭಾವಿಸಿದ್ದರು. ಇದನ್ನರಿತು ಎಚ್ಚೆತ್ತುಕೊಂಡವರಲ್ಲಿ ಬಲ್ಲಾಳನೇ ಮೊದಲಿಗನೆಂದು ಹೇಳಬೇಕು. ಆದರೆ ಆ ವೇಳೆಗಾಗಲೇ ಇತರ ಹಿಂದು ರಾಜ್ಯಗಳು ಮಹಮ್ಮದೀಯರ ಸ್ವಾಧೀನವಾಗಿದ್ದುವು. ಪವಿತ್ರ ಸ್ಥಾನಗಳೆನಿಸಿದ್ದ ದೇವಾಲಯಗಳು ಮಹಮ್ಮದೀಯರಿಂದ ಭಗ್ನಗೊಳಿಸಲ್ಪಟ್ಟವು. ಮಹಮ್ಮದೀಯರ ಈ ಪ್ರವೃತ್ತಿಗೆ ತಡೆಹಾಕುವುದು ಅತ್ಯವಶ್ಯವಾಗಿತ್ತು. ಇದಕ್ಕಾಗಿ ದಕ್ಷಿಣದ ಹಿಂದುಗಳು ಸ್ವಾತಂತ್ರ್ಯಯುದ್ಧವನ್ನೇ ಹೂಡಬೇಕಾಯಿತು. ಸಮಯ ಮೀರಿದ್ದರೂ ಬಲ್ಲಾಳನು ಕೊನೆಗಾದರೂ ಈ ಕಾರ್ಯದ ಹೊಣೆಯನ್ನು ಹೊತ್ತ. ಆಂಧ್ರಪ್ರದೇಶದಲ್ಲಿ ಪ್ರೋಲ ನಾಯಕ ಮತ್ತು ಕಾಪಯ್ಯನಾಯಕರು ಇಂತಹುದೇ ಕಾರ್ಯದಲ್ಲಿ ಪ್ರವೃತ್ತರಾಗಿದ್ದು, ಬಲ್ಲಾಳನ ನೆರವನ್ನಪೇಕ್ಷಿಸಿದರು. ಬಲ್ಲಾಳನಿತ್ತ ನೆರವಿನಿಂದ ತೆಲಂಗಾಣದ ಪ್ರಾಂತಾಧಿಕಾರಿಯಾಗಿದ್ದ ಮಲ್ಲಿಕ್ ಮಖ್ಬೂಲನನ್ನು ಸೋಲಿಸಿ ಓಡಿಸಿದರು. ದಕ್ಷಿಣದಲ್ಲಿ ಮಾಬರ್ ಪ್ರದೇಶ ಮಹಮ್ಮದೀಯರ ಕೈಗೆ ಸಿಕ್ಕಿತ್ತು. ಬಲ್ಲಾಳನು ಚಾತುರ್ಯದಿಂದ ಅಲ್ಲಿದ್ದ ಮಹಮ್ಮದೀಯ ಸೈನ್ಯವನ್ನು ಸೋಲಿಸಿ ಓಡಿಸಿ, ಅಲ್ಲಿ ಶಂಭುವರಾಯ ಮನೆತನದವನನ್ನು ಅಧಿಕಾರಿಯಾಗಿ ನೇಮಿಸಿದನು. ಆತ ಆರಂಭಿಸಿದ ಈ ಹೋರಾಟ ಕ್ರಿ.ಶ. ೧೩೩೦ರ ವೇಳೆಗೆ ಸಮಗ್ರ ದಕ್ಷಿಣ ಭಾರತವನ್ನು ವ್ಯಾಪಿಸಿತ್ತು. ಪರಿಸ್ಥಿತಿ ಅಲ್ಲೋಲಕಲ್ಲೋಲವಾಗಿತ್ತು. ಬಲ್ಲಾಳನ ವಯಸ್ಸೂ ಶಕ್ತಿಯೂ ಕ್ಷೀಣಿಸುತ್ತಿದ್ದವು. ತನ್ನ ಮಗ ವಿರೂಪಾಕ್ಷನು ತನ್ನ ಹೊಣೆಯನ್ನು ನಿರ್ವಹಿಸುವ ಶಕ್ತಿ ಹೊಂದಿರಲಿಲ್ಲವೆಂಬುದನ್ನರಿತಿದ್ದನು. ಎಂತಲೇ ತನ್ನ ಜೀವನದ ಕೊನೆಯ ವರ್ಷಗಳಲ್ಲಿ ವಿಸ್ತಾರವಾದ ತನ್ನ ರಾಜ್ಯದ ವಿವಿಧ ಭಾಗಗಳ ಕ್ಷೇಮಾಭಿವೃದ್ಧಿಯನ್ನು ಅಲ್ಲಲ್ಲಿಯ ಪ್ರಾಂತಾಧಿಕಾರಿಗಳಿಗೆ ವಹಿಸಿಕೊಟ್ಟನು.

ದೋರಸಮುದ್ರ ಒಮ್ಮೆ ಕಾಫರನಿಂದ ನೆಲಸಮಮಾಡಲ್ಪಟ್ಟಾಗ ಕೆಲಕಾಲ ರಾಜಧಾನಿಯನ್ನು ಬೇಲೂರಿಗೆ ಬದಲಿಸಿ, ಬಲ್ಲಾಳನು ದಕ್ಷಿಣ ಆರ್ಕಾಟ್ ಜಿಲ್ಲೆಯ ಅರುಣಸಮುದ್ರ ಅಥವಾ ಉಣ್ಣಾಮಲೈ ಪಟ್ಟಣವೆಂದು ಪ್ರಸಿದ್ಧವಾದ ತಿರುವಣ್ಣಾಮಲೈಯನ್ನು ತನ್ನ ರಾಜಧಾನಿಗಳಲ್ಲೊಂದನ್ನಾಗಿ ಮಾಡಿಕೊಂಡನು. ರಾಜ್ಯದ ಉತ್ತರ ಮೇರೆಯಲ್ಲಿ ಹಂಪಿ ಸಹ ಇವನ ರಾಜಧಾನಿಗಳಲ್ಲಿ ಒಂದಾಗಿ ಪರಿವರ್ತಿತವಾಯಿತು. ೧೩೪೦ರಲ್ಲಿ ಮಧುರೆಯಲ್ಲಿ ಮಾತ್ರ ಇನ್ನೂ ಅಧಿಕಾರದಲ್ಲಿದ್ದ ಅಲ್ಲಾಉದೀನ್ ಉದೌಜಿ ಹೊಯ್ಸಳರ ಮೇಲೆ ದಂಡೆತ್ತಿದ್ದನು. ಆಕಸ್ಮಿಕವಾಗಿ ತಗುಲಿದ ಬಾಣ ಒಂದರ ಆಘಾತಕ್ಕೆ ಶತ್ರು ಒಳಗಾದಾಗ ವಿಜಯಶ್ರೀ ಬಲ್ಲಾಳನನ್ನಪ್ಪಿದಳು. ಇದರ ಉಪಯೋಗ ಪಡೆದು ೧೩೪೩ರಲ್ಲಿ ಬಲ್ಲಾಳನು ಕಣ್ಣಾನೂರು ಕೋಟೆಯನ್ನು ವಶಪಡಿಸಿಕೊಂಡನು. ಮುಹಮ್ಮದೀಯರು ಶರಣಾಗಿ ಒಪ್ಪಂದಮಾಡಿಕೊಳ್ಳಲು ಸಿದ್ಧರಾದರು. ಆದರೆ ಅವರು ಹೂಡಿದ್ದ ಒಳಸಂಚು ಬಲ್ಲಾಳನಿಗೆ ಅರ್ಥವಾಗಲಿಲ್ಲ. ಸಂಧಾನಕ್ಕೆ ಸಂಬಂಧಿಸಿದ ಷರತ್ತುಗಳ ಬಗ್ಗೆ ಒಮ್ಮತಕ್ಕೆ ಬರುವ ನೆಪದಲ್ಲಿ ಮಧುರೆಯಿಂದ ಹೆಚ್ಚಿನ ಸೈನ್ಯದ ನೆರವನ್ನು ಪಡೆದ ಸುಲ್ತಾನನು ಅನಿರೀಕ್ಷಿತವಾಗಿ ಬಲ್ಲಾಳನನ್ನು ಮುತ್ತಿ ಸೆರೆಹಿಡಿದನು. ಘಿಯಾಸುದ್ದೀನ್ ಬಲ್ಲಾಳನನ್ನು ಕೊಲ್ಲಬೇಕೆಂದು ಆಜ್ಞಾಪಿಸಿದನು. ಪ್ರವಾಸಿ ಇಬನ್ ಬತೂತ ಈ ಘಟನೆಯನ್ನು ವಿವರಿಸುತ್ತ, ಬಲ್ಲಾಳನ ಚರ್ಮವನ್ನು ಸುಲಿದು ಹುಲ್ಲಿನಿಂದ ಮುಚ್ಚಿ ಕೋಟೆಯ ಬಾಗಿಲಿಗೆ ನೇತುಹಾಕಲಾಯಿತೆಂದು ಹೇಳಿದ್ದಾನೆ. ಹೀಗೆ ಬಲ್ಲಾಳ ತನ್ನ ೮೦ನೆಯ ವಯಸ್ಸಿನಲ್ಲಿ ೧೩೪೩ ಸೆಪ್ಟೆಂಬರ್ ೪ರಂದು ಅಸುವನ್ನು ನೀಗಿದನು. ಇವನೊಂದಿಗೆ ಹೊಯ್ಸಳ ರಾಜ್ಯ ಸಹ ಮುಳುಗಿತು. ಆದರೆ ಬಲ್ಲಾಳನು ಬಿತ್ತಿದ ಬೀಜ ಹೆಮ್ಮರವಾಗಿ ಬೆಳೆಯುವ ಸೂಚನೆ ಒಂದು ದಶಕದಲ್ಲಿಯೇ ಕಂಡುಬಂದಿತ್ತು. ಹೊಸದಾಗಿ ಕಣ್ತೆರೆದ ವಿಜಯನಗರ ಸಾಮ್ರಾಜ್ಯ ಬಲ್ಲಾಳನ ಬಯಕೆಯ ಪ್ರತಿನಿಧಿಯಾಗಿತ್ತು. ಇದು ಹಿಂದುಗಳ, ಹಿಂದು ಧರ್ಮದ ಅದೃಷ್ಟವೆಂದೇ ಹೇಳಬೇಕು. ಈ ದೃಷ್ಟಿಯಿಂದ ಕರ್ಣಾಟಕದ ಇತಿಹಾಸದಲ್ಲಿ ಮುಮ್ಮಡಿ ಬಲ್ಲಾಳನ ಸ್ಥಾನ ಬಹಳ ಮಹತ್ವವನ್ನು ಗಳಿಸಿದೆ.

## ವಿಜಯನಗರ ಸಾಮ್ರಾಜ್ಯ

ಸಾಮ್ರಾಜ್ಯ ಸ್ಥಾಪನೆ: ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಭಾರತದ ಇತಿಹಾಸದಲ್ಲಿಯೇ ಒಂದು ಅಪೂರ್ವ ಘಟನೆ. ಉತ್ತರ ಭಾರತದಲ್ಲಿ ಮುಹಮ್ಮದೀಯರ ಆಳಿಕೆ ಆರಂಭವಾಗಿದ್ದು, ದಕ್ಷಿಣ ಭಾರತವನ್ನು ಅವರು ಆಕ್ರಮಿಸಲು ಬಯಸಿದಾಗ ಕೊನೆಯ ಗಳಿಗೆಯಲ್ಲಿಯಾದರೂ ಎಚ್ಚೆತ್ತು ಅವರ ಆಕ್ರಮಣವನ್ನು ತಡೆಯಲು ಯತ್ನಿಸಿದ ಬಲ್ಲಾಳನು ತನ್ನ ಯತ್ನಗಳಲ್ಲಿ ಬಹುಮಟ್ಟಿಗೆ ಯಶಸ್ವಿಯಾದನು.

೧೪ನೆಯ ಶತಮಾನದ ಮೊದಲ ೩-೪ ದಶಕಗಳು ಮಹತ್ತ್ವಪೂರ್ಣ ಘಟನೆಗಳಿಂದ ಕೂಡಿದ್ದರೂ ಅಂದಿನ ಅನಿಶ್ಚಿತ ಪರಿಸ್ಥಿತಿಗಳ ಫಲವಾಗಿ ಆ ಘಟನೆಗಳ ವಾಸ್ತವಿಕ ಚಿತ್ರ ಇನ್ನೂ ದೊರೆತಿಲ್ಲ. ಸಮಕಾಲೀನ ಶಾಸನಾಧಾರಗಳಿಲ್ಲ. ನಂತರದ ದಶಕಗಳಲ್ಲಿ ಬಂದ

ಮುಹಮ್ಮದೀಯ ಹಾಗೂ ಇತರ ಪ್ರವಾಸಿಗಳು ತಮ್ಮ ಬರವಣಿಗೆಗಳಲ್ಲಿ ತಾವು ಕಂಡದ್ದನ್ನು ಕೇಳಿದ್ದನ್ನು ತಾವು ಅರ್ಥಮಾಡಿಕೊಂಡಂತೆ ಬರೆದಿಟ್ಟಿದ್ದಾರೆ. ಅನೇಕ ಸಂದರ್ಭಗಳಲ್ಲಿ ಮುಹಮ್ಮದೀಯರ ಬರವಣಿಗೆಗಳು ಸಹಜವಾಗಿಯೇ ಪಕ್ಷಪಾತ ಪೂರಿತವಾಗಿವೆ. ಲಭ್ಯ ವಿರುವ ಆಧಾರಗಳ ಮೇಲೆ ಅಂದಿನ ಘಟನೆಗಳನ್ನು ಜಾಗರೂಕತೆಯಿಂದ ವಿಶ್ಲೇಷಿಸಿ ಅವು ಗಳ ರೂಪರೇಷೆಯನ್ನು ಪಡೆಯಬೇಕಾಗಿದೆ.

ವಿಜಯನಗರಸಾಮ್ರಾಜ್ಯ ಸ್ಥಾಪಕರು ಯಾರು, ಅವರಿಗೂ ಅಂದು ಅಧಿಕಾರದಲ್ಲಿದ್ದ ಇತರ ಅರಸರಿಗೂ ನಡುವೆ ಯಾವ ತೆರನ ಬಾಂಧವ್ಯವಿತ್ತು—ಇತ್ಯಾದಿ ಪ್ರಶ್ನೆಗಳು ಚರ್ಚಾಸ್ಪದವಾಗಿವೆ. ಪ್ರಾಂತೀಯ ಅಭಿಮಾನದಿಂದ ಪ್ರೇರಿತವಾದ ದೃಷ್ಟಿಯಿಂದ ಮೂಲಾಧಾರಗಳನ್ನು ಅರ್ಥೈಸಲು ಸಂಶೋಧಕರು ಹಲವರು ಯತ್ನಿಸಿದ್ದಾರಾಗಿ ಅವರ ಹೇಳಿಕೆಗಳೂ ತೀರ್ಮಾನಗಳೂ ಸಹಜವಾಗಿಯೇ ದೋಷಪೂರಿತವಾಗಿವೆ. ಸಾಮ್ರಾಜ್ಯ ಸ್ಥಾಪಕರೆನಿಸಿದ ಸಂಗಮ ಸಹೋದರರಿಗೂ ಬಲ್ಲಾಳನಿಗೂ ವೈಮನಸ್ಯ ಶತ್ರುತ್ವ ಗಳಿದ್ದು ಕಾಕತೀಯರ ಮಾಂಡಲಿಕರಾಗಿದ್ದ ಆ ಸೋದರರು ಬಲ್ಲಾಳನೊಡನೆ ವಿರೋಧ ಬೆಳಸಿ, ಆಗಿಂದಾಗ್ಗೆ ಕಾದಾಡುತ್ತಿದ್ದರು ಎಂಬುದೊಂದು ವಾದವಿದೆ. ಆದರೆ ಶಾಸನ ಗಳನ್ನು ಜಾಗರೂಕತೆಯಿಂದ ಪರಿಶೀಲಿಸಿದಾಗ, ಅದು ಸಾಧಾರವಲ್ಲವೆಂಬುದು ಮನವರಿಕೆ ಯಾಗುತ್ತದೆ.

ಸ್ವದೇಶರಕ್ಷಣೆಗಾಗಿ ಅನೇಕ ಮುಂಜಾಗರೂಕತೆಯ ಕಾರ್ಯಕ್ರಮಗಳನ್ನು ಕೈ ಗೊಂಡ ಬಲ್ಲಾಳ ತುಂಗಭದ್ರೆಯ ಉತ್ತರ ತೀರದ ಹೊಸದುರ್ಗ (ವಿರೂಪಾಕ್ಷ ಹೊಸ ದುರ್ಗ; ಹೊಸಬೆಟ್ಟ; ಹೊಸಪಟ್ಟಣ)ವೆಂಬ ಬಲವಾದ ಕೋಟೆ ಕಟ್ಟಿದನು. ಕೆಲಕಾಲದ ನಂತರ ಹರಿಹರನು ತುಂಗಭದ್ರೆಯ ದಕ್ಷಿಣಕ್ಕೆ ಕಟ್ಟಿದ್ದ ಹೊಸ ರಾಜಧಾನಿಗಿಂತ ಇದು ಭಿನ್ನವಾದ್ದು ಎಂಬುದನ್ನು ಗಮನಿಸಬೇಕು. ಸು. ೧೩೩೦ರಿಂದ ೪೦ರ ವರೆಗೆ ಬಲ್ಲಾಳನು ತಾನು ಕಟ್ಟಿಸಿದ ರಾಜಧಾನಿಯಲ್ಲಿ ನೆಲಸಿದನು. ಆಡಳಿತದಲ್ಲಿ ಮಹತ್ತರ ಬದಲಾವಣೆಗಳನ್ನು ಮಾಡಿದರೂ ತನ್ನೊಡನೆ ಇತರ ಅಧಿಕಾರಿಗಳನ್ನೂ ಸಂಬಂಧಿಕರನ್ನೂ ಸೇರಿಸಿಕೊಂಡು ಅವರಿಗೂ ಹೆಚ್ಚಿನ ಸಮಾನಾಧಿಕಾರವನ್ನು ನೀಡುವುದರ ಮೂಲಕ ಆಡಳಿತದ ವಿಕೇಂದ್ರೀಕರಣಮಾಡಿದನು. ಕೆಲವು ಶಾಸನಗಳಲ್ಲಿ ಈತನು ತನ್ನ ಮಹಾ ಪ್ರಧಾನರೊಡಗೂಡಿ ರಾಜ್ಯವಾಳುತ್ತಿದ್ದನೆಂದಿರುವ ಹೇಳಿಕೆಗಳು ಈ ಸಂದರ್ಭದಲ್ಲಿ ಗಮನಾರ್ಹ. ಮುಳುಗುತ್ತಿದ್ದ ಧರ್ಮದ ನಾವೆಯನ್ನು ರಕ್ಷಿಸಲು ಇದೊಂದೇ ಆತನಿಗಿದ್ದ ಮಾರ್ಗ. ಸ್ವತಃ ತನ್ನ ಮಗನು ಆ ಜವಾಬ್ದಾರಿಯನ್ನು ಹೊರಲಾರನೆಂಬುದನ್ನು ಅರಿತಿದ್ದ. ಇತರರ ಜೊತೆಗೂಡಿ ನಾಡಿನ ರಕ್ಷಣೆಗೆ ತೊಡಗಿದ.

ಹೀಗೆ ಸಹಕಾರ ನೀಡಿದವರಲ್ಲಿ ಹರಿಯಪ್ಪವೊಡೆಯ (ಹರಿಹರ) ಒಬ್ಬನು. ವಿಜಯ ನಗರ ಸಾಮ್ರಾಜ್ಯವನ್ನು ಸ್ಥಾಪಿಸಲು ಹರಿಹರ ಸಹೋದರರು ಕಾರಣರೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅವರ ಮೂಲಸ್ಥಾನ ಪೂರ್ವಸಂಬಂಧಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಅಂದಿನ ವಿವರಗಳನ್ನು ಕುರಿತ ಹೇಳಿಕೆಗಳು ಮುಸ್ಲಿಮ್ ಲೇಖಕ

ರಿಂದ ಲಭ್ಯವಾಗಿವೆ. ಈ ಲೇಖಕರಲ್ಲಿ ಪ್ರಮುಖರು ಬರನಿ (೧೩೫೧–೮೮), ಇಬ್ನ ಬತೂತ ಹಾಗೂ ಇಸಾಮಿ. ಬರನಿಯು ಫಿರೋಜ್‌ಷಹ ತೊಘಲಕನ ಆಸ್ಥಾನಿಕ. ಸಾಮ್ರಾಜ್ಯ ಸ್ಥಾಪನೆಯಾದ ಎರಡು ದಶಕಗಳ ನಂತರ ಈತನು ಆ ಘಟನೆಗಳನ್ನು ಕುರಿತು ಬರೆದಿದ್ದಾನೆ. ಇಬ್ನ ಬತೂತ ಮಹಮದ್ ತೊಘಲಕನ ಕಾಲದಲ್ಲಿ ಭಾರತಕ್ಕೆ ಬಂದ ಯಾತ್ರಿಕ. ಇಲ್ಲಿ ತಾನು ಕಂಡು ಕೇಳಿದ ವಿದ್ಯಮಾನಗಳನ್ನು ಕುರಿತು ಸ್ವದೇಶವಾದ ಆಫ್ರಿಕಾಕ್ಕೆ ಹಿಂತಿರುಗಿದ ಬಳಿಕ ಸುಮಾರು ೧೩೭೦ರಲ್ಲಿ ತನ್ನ ವರದಿಯನ್ನು ಬರೆದನು. ಇಸಾಮಿ ಬಹುಮನಿ ರಾಜ್ಯದ ಆಶ್ರಯ ಪಡೆದಿದ್ದವನು. ಸಹಜವಾಗಿಯೇ ಅವನದು ಪಕ್ಷಪಾತದ ಬರೆವಣಿಗೆ.

'ವಿದ್ಯಾರಣ್ಯ ಕಾಲಜ್ಞಾನ', 'ವಿದ್ಯಾರಣ್ಯವೃತ್ತಾಂತ', 'ರಾಜಕಾಲನಿರ್ಣಯ', ಶಿವತತ್ತ್ವರತ್ನಾಕರ', 'ಕೆಳದಿನೃಪವಿಜಯ' ಮುಂತಾದ ೧೬–೧೭ನೆಯ ಶತಮಾನಗಳ ಅವಧಿಯಲ್ಲಿ ರಚಿತವಾದ ಸಾಹಿತ್ಯಕೃತಿಗಳಲ್ಲಿ ಹೇಳಲಾದ ಕೆಲವು ಸಾಂಪ್ರದಾಯಿಕ ಕತೆಗಳನ್ನೂ ಆಖ್ಯಾಯಿಕೆಗಳನ್ನೂ ಮಹಮ್ಮದೀಯರ ಬರೆವಣಿಗೆಗಳೊಡನೆ ಮೇಳಯಿಸಿ, ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಸ್ಥಾಪಕರು ಇತ್ಯಾದಿಗಳ ಬಗೆಗೆ ಆಧುನಿಕ ಇತಿಹಾಸಕಾರರು ಬರೆದಿದ್ದಾರೆ. ಈ ಸಾಹಿತ್ಯಾಧಾರಗಳು ನಂಬಲನರ್ಹ. ಕೇವಲ ದಂತಕತೆಗಳನ್ನೂ ಕಾಲಜ್ಞಾನಗಳನ್ನೂ ಒಳಗೊಂಡದ್ದಾಗಿವೆ ಎಂಬುದನ್ನು ನೆನಪಿನಲ್ಲಿಡಬೇಕು.

ಇವುಗಳಲ್ಲಿಯ ವಿವರವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು: ಹರಿಹರ ಬುಕ್ಕರು ಕಾಕತೀಯ ಪ್ರತಾಪರುದ್ರನ ಅಧೀನದಲ್ಲಿ ಮಂತ್ರಿ ಹಾಗೂ ಭಂಡಾರಿಗಳಾಗಿ ಇದ್ದರು. ಓರಂಗಲ್ಲಿನ ಪತನಾನಂತರ ಅವರು ಹಂಪಿಗೆ ಓಡಿದರು. ಅಲ್ಲಿ ಬಲ್ಲಾಳನೊಡನೆ ಕಾದಿದರು. ಕಂಪಿಲಿಯ ಅರಸನಲ್ಲಿ ಅಧಿಕಾರ ಸ್ವೀಕರಿಸಿದರು. ಕಂಪಿಲಿ ಮಹಮದನ ವಶವಾದಾಗ ಸೆರೆಸಿಕ್ಕು ದೆಹಲಿಗೆ ಒಯ್ಯಲ್ಪಟ್ಟರು. ಅವರ ನಿಷ್ಠೆಗೆ ಮೆಚ್ಚಿದ ಸುಲ್ತಾನನು ಕಂಪಿಲಿಯ ದಂಗೆಯನ್ನು ಅಡಗಿಸಲು ಕಳುಹಿಸಿದನು. ಅವರು ಕಂಪಿಲಿಗೆ ಬರುವಾಗ ವಿದ್ಯಾರಣ್ಯರನ್ನು ಕಂಡು ಅವರ ಪ್ರಭಾವಕ್ಕೆ ಒಳಗಾಗಿ ಅವರ ಆಶೀರ್ವಾದದ ಬಲದಿಂದ ಆನೆಗೊಂದಿಯಲ್ಲಿ ತುಂಗಭದ್ರಾತೀರದ ಮೇಲೆ ರಾಜ್ಯವೊಂದಕ್ಕೆ ಅಸ್ತಿಭಾರ ಹಾಕಿದರು.

ಕ್ರಿ.ಶ. ೧೬ನೆಯ ಶತಮಾನಕ್ಕೆ ಸೇರಿದ ಕುಮಾರರಾಮನ ಕಥೆ ಕಂಪಿಲಿಯ ರಾಮನಾಥನಿಗೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ರಾಮನಾಥನ ಭಾವನಾಗಿ ಒಬ್ಬ ಭಾವ ಸಂಗಮನೂ ಆತನ ಇಬ್ಬರು ಮಕ್ಕಳಾದ ಭಂಡಾರಿ ಹರಿಹರ ಮತ್ತು ಭಂಡಾರಿ ಬುಕ್ಕರೂ ಕಾಣಿಸಿಕೊಳ್ಳುತ್ತಾರೆ. ಈ ಇಬ್ಬರೂ ವಿಜಯನಗರದ ಹರಿಹರ ಬುಕ್ಕರೆಂದು ಕೆಲವರ ವಾದ. ಆದರೆ ಹೆಸರಿನ ಸಾಮ್ಯವನ್ನುಳಿದು ಬೇರಾವ ವಿಧದಲ್ಲೂ ಇವರಿಗೆ ಸಂಬಂಧವಿಲ್ಲ. ರಾಮನಾಥನ ಚರಿತ್ರೆಗೆ ಸಂಬಂಧಿಸಿದ ಇನ್ನೆರಡು ಕತೆಗಳಲ್ಲಿ ಈ ಯಾರೊಬ್ಬರ ಪ್ರಸ್ತಾಪವೂ ಬರುವುದಿಲ್ಲ. ಹರಿಹರ ಬುಕ್ಕರು ಪ್ರತಾಪರುದ್ರನ ಅಧಿಕಾರಿಗಳೆಂಬುದೂ ನಿಜವಲ್ಲ. ಆಂಧ್ರ ಪ್ರದೇಶದ ಗೋಜಲವೀಡು ಎಂಬಲ್ಲಿ ದೊರೆತ ಶಾಸನದಲ್ಲಿ ಹೆಸರಿಸಲಾದ

ಬುಕ್ಕನು ಸಂಗಮನ ತಂದೆಯಾದ ಬುಕ್ಕನೆಂದೂ ಅದು ಕಾಕತೀಯರ ಶಾಸನವೆಂದೂ ಕೆಲವರು ವಾದಿಸಿದ್ದರು. ಆದರೆ ಆ ಶಾಸನವನ್ನು ಈಗ ಪರಿಶೋಧಿಸಲಾಗಿದ್ದು, ಅದು ವಿಜಯನಗರದ ಮೊದಲನೆಯ ಬುಕ್ಕನ ಶಾಸನವೆಂದು ಖಚಿತಗೊಂಡಿದೆ. ಕಾಕತೀಯರಿಗೆ ಸಂಬಂಧವನ್ನು ಕಲ್ಪಿಸುವ ಯಾವ ಅಂಶಗಳೂ ಅದರಲ್ಲಿ ಇಲ್ಲ.[21]

ಮುಹಮ್ಮದೀಯ ಲೇಖಕರ ಹೇಳಿಕೆಗಳು ವಿಭಿನ್ನವಾಗಿವೆ ಎಂದು ಹೇಳಿದೆ. ಸಂಗಮನಿಗೆ ಹನ್ನೊಂದು ಮಕ್ಕಳಿದ್ದು ಅವರೆಲ್ಲ ದೆಹಲಿಗೆ ಒಯ್ಯಲ್ಪಟ್ಟರೆಂಬುದು ಒಂದು ಹೇಳಿಕೆ. ವಿಜಯನಗರದ ಸಂಗಮನಿಗೆ ಐವರೇ ಮಕ್ಕಳಿದ್ದುದು ತಿಳಿದ ವಿಷಯ. ಆದ್ದರಿಂದ ಮುಹಮ್ಮದೀಯರ ಹೇಳಿಕೆಗಳು ಸತ್ಯದೂರ. ಹರಿಹರಾದಿ ಐವರು ಸೋದರರು ಸಂಗಮನ ಮಕ್ಕಳೆಂದೂ ಕರ್ಣಾಟ ದೇಶದವರೆಂದೂ ಸಂಗಮನು ಯದುವಂಶದಲ್ಲಿ ಹುಟ್ಟಿದವನು, ಹಂಪೆಯ ಪರಿಸರ ಪ್ರದೇಶಗಳಲ್ಲಿ ಊರ್ಜಿತನಾದವನು, ಕರ್ಣಾಟಕ ರಾಜ್ಯಲಕ್ಷ್ಮಿಗೆ ತಿಲಕಪ್ರಾಯನಾಗಿದ್ದವನು ಎಂದೂ ಶಾಸನಗಳು ವರ್ಣಿಸಿವೆ.

ಮುಮ್ಮಡಿ ಬಲ್ಲಾಳನು ಊದಿದ ಸ್ವಾತಂತ್ರ್ಯಕಹಳೆಗೆ ಆಂಧ್ರದ ರೆಡ್ಡಿಕುಲದ ಹಲವು ನಾಯಕರು ಓಗೊಟ್ಟರು; ಪ್ರೋಲಯನಾಯಕ ಮತ್ತು ಕಾಪಯ ನಾಯಕರು ನೇತೃತ್ವವನ್ನು ವಹಿಸಿದರು. ಬಲ್ಲಾಳನ ಪ್ರೋತ್ಸಾಹ ಪುರಸ್ಕಾರಗಳಿಂದ ಅವರು ನೆಲ್ಲೂರು ಹಾಗೂ ಸುತ್ತಲಿನ ಪೂರ್ವಕರಾವಳಿ ಪ್ರದೇಶವನ್ನು ಮುಹಮ್ಮದೀಯರಿಂದ ಹಿಂದಕ್ಕೆ ಪಡೆಯುವುದರಲ್ಲಿ ಯಶಸ್ವಿಯಾದರು. ಅದರಂತೆಯೇ ಹೊಯ್ಸಳ ರಾಜ್ಯದ ಉತ್ತರ ಮತ್ತು ಪಶ್ಚಿಮಭಾಗಗಳಲ್ಲಿ ಬಲ್ಲಾಳನ ಸಾಮಂತರು ಸಜ್ಜಾಗಿದ್ದರು. ಅವರಲ್ಲಿ ಪ್ರಮುಖನು ಹರಿಹರ; ಬಲ್ಲಾಳನಿಗೆ ಬಂಧು ಕೂಡ. ಬಲ್ಲಾಳನ ಸೋದರಳಿಯ ಬಲ್ಲಪದಣ್ಣಾಯಕನು ಹರಿಹರನ ಅಳಿಯ. ಇವರ ಸಂಬಂಧ ಸೌಹಾರ್ದಪೂರಿತ. ಇವರ ನಡುವೆ ದ್ವೇಷವಿದ್ದಿತೆಂಬ, ಕದನಗಳು ನಡೆದುವೆಂಬ ಹೇಳಿಕೆಗಳು ಅರ್ಥರಹಿತವಾದವು.

ಈಗಾಗಲೇ ತೋರಿಸಿದಂತೆ ಮುಪ್ಪಡರುತ್ತಿದ್ದ ಬಲ್ಲಾಳನು ತನ್ನ ಅಧಿಕಾರಿಗಳಿಗೂ ಸಾಮಂತರಿಗೂ ಆಡಳಿತದಲ್ಲಿ ಪಾಲ್ಗೊಳ್ಳುವ ಅವಕಾಶ ಮಾಡಿಕೊಟ್ಟಿದ್ದ. ಹೀಗೆ ಹೊಣೆಹೊತ್ತವರಲ್ಲಿ ಹರಿಹರನೂ ಒಬ್ಬ.

ಹರಿಹರನ ಜೀವನದ ವಿವಿಧಘಟ್ಟಗಳನ್ನು ತಿಳಿಯುವುದು ಸಾಧ್ಯವಾಗಿಲ್ಲ. ಸಂಗಮಪುತ್ರನಾದ ಈತನು ಬಲ್ಲಾಳನ ಅಧಿಕಾರಿಗಳಲ್ಲೊಬ್ಬನಾಗಿದ್ದು ಕ್ರಮೇಣ ಮಹಾಮಂಡಲೇಶ್ವರ ಪದವಿಗೆ (೧೩೩೯–೪೦) ಏರಿದನು. ೧೩೩೬ರಲ್ಲಿಯೇ ಪಶ್ಚಿಮ ಕರಾವಳಿಯ ಬಾರಕೂರಿನಲ್ಲಿ ಕೋಟೆಯೊಂದನ್ನು ಕಟ್ಟಿಸಿದನು. ೧೩೪೦ರಲ್ಲಿ ಈತನ ಅಧಿಕಾರಿ ಚಾಮರಸನು ಬಾದಾಮಿಯ ದುರ್ಗವನ್ನು ಕಟ್ಟಿದನೆಂದು ತಿಳಿದಿದೆ. ಶತಮಾನಗಳ ಹಿಂದೆ ಕಟ್ಟಿಸಿದ್ದನ್ನು ಜೀರ್ಣೋದ್ಧಾರಗೊಳಿಸಿರಬೇಕು. ಅದೇ ವರ್ಷದ ಇನ್ನೊಂದು ಶಾಸನದಲ್ಲಿ ಹರಿಹರನನ್ನು 'ಚತುಃಸಮುದ್ರಾಧಿಪತಿ'ಯೆಂದು ಕರೆದಿದೆ. ೧೩೪೩ರಲ್ಲಿ ಪಶ್ಚಿಮದ ಹೊನ್ನಾವರದಲ್ಲಿದ್ದ ಮುಸ್ಲಿಮರ ಅಧಿಕಾರಿಯು ಹರಿಹರನ ಅಧೀನನಾಗಿದ್ದನೆಂದು

ಇಬ್ಬ ಬತೂತನ ಹೇಳಿಕೆಯಿಂದ ತಿಳಿಯುತ್ತದೆ. ೧೩೪೬ರ ಶಾಸನದಲ್ಲಿ ಈತನನ್ನು ಮಹಾ ರಾಜಾಧಿರಾಜ, ರಾಜಪರಮೇಶ್ವರನೆಂದಿದೆ. ೧೩೪೪ರಲ್ಲಿ ಇವನ ಸೋದರ, ಪ್ರಾಂತಾಧಿ ಕಾರಿ ಬುಕ್ಕನು ಸಹ ಸಾರ್ವಭೌಮತ್ವದ ಬಿರುದುಗಳನ್ನು ತಳೆದ

ಹರಿಹರನು ಕ್ರಮಕ್ರಮವಾಗಿ ಬಲಗೊಳ್ಳುತ್ತಿದ್ದುದನ್ನು ಈ ರೇಖೆಗಳು ಸೂಚಿಸು ತ್ತವೆ. ಒಂದು ದಶಕದೊಳಗಾಗಿ ಆತ ಸ್ವತಂತ್ರ ರಾಜ್ಯವನ್ನು ಕಟ್ಟಿದನು. ೧೩೪೬ರ ವೇಳೆಗೆ ಈ ದಿಶೆಯಲ್ಲಿ ವಿಜಯ ಸಾಧಿಸಿದ ಈತನು ತನ್ನ ಸಹೋದರರೊಡಗೂಡಿ ಶೃಂಗೇರಿಗೆ ಹೋಗಿ ಅಲ್ಲಿಯ ಗುರುಗಳಾದ ಭಾರತೀತೀರ್ಥರಿಗೆ ದತ್ತಿಗಳನ್ನು ಸಲ್ಲಿಸಿ ದನು. ಈತನ ಸಹೋದರರಾದ ಕಂಪಣ್ಣೊಡೆಯ, ಬುಕ್ಕಣ್ಣೊಡೆಯ, ಮಾರಪ್ಪೊಡೆಯ ಮತ್ತು ಮುದ್ದಪ್ಪೊಡೆಯ ಹಾಗೂ ಅಳಿಯನಾದ ಬಲ್ಲಪ ದಣ್ಣಾಯಕ ಇವರು ಸಹ ಶೃಂಗೇರಿಯಲ್ಲಿ ಈತನು ಆಚರಿಸಿದ ಉತ್ಸವದಲ್ಲಿ ಭಾಗಿಗಳಾದರು. ಪರಂಪರಾಗತ ಐತಿಹ್ಯದಂತೆ ಶಕ ೧೨೫೮ನೆಯ ಧಾತು ಸಂವತ್ಸರದ ವೈಶಾಖ ಶುಕ್ಲ ಸಪ್ತಮಿ ಆದಿತ್ಯ ವಾರದಂದು (ಕ್ರಿ.ಶ. ೧೩೩೬, ಏಪ್ರಿಲ್ ೧೮ರಂದು) ಹರಿಹರನು ವಿಜಯನಗರ ರಾಜ್ಯವನ್ನು ಸ್ಥಾಪಿಸಿದನು. ಇದಾದ ಆರು ವರ್ಷಗಳಲ್ಲಿ ಬಲ್ಲಾಳನು ಮರಣ ಹೊಂದಿ ದನು. ಆತನ ಮಗ ವಿರೂಪಾಕ್ಷನು ಆತನ ಉತ್ತರಾಧಿಕಾರಿಯಾಗಿ ನಾಲ್ವಡಿ ಬಲ್ಲಾಳ ನೆನಿಸಿಕೊಂಡರೂ ಆತನು ೧-೨ ವರ್ಷಗಳು ಮಾತ್ರ ಆಳಿರಬಹುದು. ಆದ್ದರಿಂದ ೧೩೪೬ರಲ್ಲಿ ಕರ್ನಾಟಕದಲ್ಲಿ ರಾಜ್ಯವೊಂದರ ಸ್ಥಾಪನೆಯ ದಶಕವನ್ನು ಆಚರಿಸಿದ ಯಶಸ್ಸು ಹರಿಹರನದಾಗಿದೆ. ಶೃಂಗೇರಿಯ ಶಾಸನ ಈ ಸಹೋದರರ ಸಾಹಸಗಳು ಫಲಪ್ರದವೆಂದು ಸಾರುವ, ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯನ್ನು ಘೋಷಿಸುವ ವಿಜಯಶಾಸನವಿದ್ದಂತಿದೆ.

ವಿಜಯನಗರ ಸ್ಥಾಪನೆಯಲ್ಲಿ ಪ್ರಮುಖಪಾತ್ರವಹಿಸಿದವರು ಶೃಂಗೇರಿಯ ಗುರು ವರ್ಯರಾದ ವಿದ್ಯಾರಣ್ಯರು, ಅವರೇ ಹರಿಹರ ಸೋದರರಿಗೆ ತಕ್ಕ ಪ್ರೇರಣೆ ಪ್ರೋತ್ಸಾಹ ಗಳನ್ನು ನೀಡಿದವರು ಎಂಬ ಕೆಲವು ಸಾಂಪ್ರದಾಯಿಕ ಕತೆಗಳು ಪ್ರಚಾರದಲ್ಲಿವೆ. ವಿದ್ಯಾ ರಣ್ಯರು ಶಂಕರಾಚಾರ್ಯರು ಶೃಂಗೇರಿಯಲ್ಲಿ ಸ್ಥಾಪಿಸಿದ ಅದ್ವೈತ ಮಠದ ಅಧಿಪತಿ ಗಳಾಗಿದ್ದರೆಂಬುದು ನಿಜವೇ. ಆದರೆ ಅವರು ಆ ಪೀಠವನ್ನೇರುವ ವೇಳೆಗಾಗಲೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ಎರಡು ದಶಕಗಳು ಸಂದಿದ್ದುವು. ಶೃಂಗೇರಿಯ ಶಾಸನದಲ್ಲಿ ಹರಿಹರಾದಿಗಳಿಗೆ ಗುರುಗಳಾಗಿದ್ದವರು ಭಾರತೀತೀರ್ಥ ಶ್ರೀಪಾದರೆಂದಿದೆ. ಆ ಸಂದರ್ಭದಲ್ಲಿ ವಿದ್ಯಾರಣ್ಯರು ಶೃಂಗೇರಿಯಲ್ಲಿ ಇರಲೇ ಇಲ್ಲ. ೧೩೫೬ರ ಸುಮಾರಿಗೆ ಬುಕ್ಕ (I)ನ ಪ್ರಾರ್ಥನೆಯ ಮೇರೆಗೆ, ವಿದ್ಯಾತೀರ್ಥರ ಆದೇಶದಂತೆ ಆಗ ವಾರಣಾಸಿಯಲ್ಲಿದ್ದ ವಿದ್ಯಾರಣ್ಯರು ವಿಜಯನಗರಕ್ಕೆ ಬಂದು, ಅಲ್ಲಿಂದ ಶೃಂಗೇರಿಗೆ ತೆರಳಿದರು. ಅವರು ಶೃಂಗೇರಿಯ ಮಠಾಧಿಪತ್ಯವನ್ನು ಸ್ವೀಕರಿಸಿದುದು ೧೩೮೦ರಲ್ಲಿ; ದೈವಾಧೀನರಾದುದು ೧೩೮೬ರಲ್ಲಿ. ಇವರ ಕಾಲದಲ್ಲಿ ಬುಕ್ಕ ಮತ್ತು ಇಮ್ಮಡಿ ಹರಿಹರರು ಶೃಂಗೇರಿಯ ಮಠಕ್ಕೆ ಅನೇಕಾನೇಕ ದತ್ತಿಗಳನ್ನು ಬಿಟ್ಟರು.

ಇದರಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಬಳಿಕ ಆ ಅರಸರ ಮೊದಲ ಗುರುಗಳಾಗಿದ್ದವರು ವಿದ್ಯಾತೀರ್ಥ ಶ್ರೀಪಾದರೆಂಬುದು ಸ್ಪಷ್ಟ. ಆಗಿನ್ನೂ ಕಿರಿಯ ಸಂನ್ಯಾಸಿಗಳಾಗಿದ್ದ ವಿದ್ಯಾರಣ್ಯರು ಅಧ್ಯಯನಕ್ಕೆಂದು ವಾರಣಾಸಿಯಲ್ಲಿ ನೆಲಸಿದ್ದರು. ಆದ್ದರಿಂದ ವಿದ್ಯಾರಣ್ಯರನ್ನು ಕುರಿತು ಪ್ರಚಲಿತವಾಗಿರುವ ಕತೆಗಳಲ್ಲಿ ಐತಿಹಾಸಿಕ ಸತ್ಯವಿಲ್ಲ. ಶೃಂಗೇರಿಯ ಮಠಾಧಿಪತಿಗಳೇ ಅಲ್ಲದೆ ಕಾಳಾಮುಖ ಸಂಪ್ರದಾಯದ ಕಾಶೀವಿಲಾಸ ಕ್ರಿಯಾಶಕ್ತಿ ಎಂಬ ಋಷಿವರ್ಯರು ಸಹ ವಿಜಯನಗರದ ಅರಸರಿಗೆ ಗುರುಗಳಾಗಿದ್ದರು. ಇವರನ್ನು ರಾಜಗುರುಗಳೆಂದು ಶಾಸನಗಳಲ್ಲಿ ಸಂಬೋಧಿಸಲಾಗಿದೆ.

ಪರರಾಜ್ಯ ಪರಧರ್ಮ ಪರಸಂಸ್ಕೃತಿಗಳು ಸ್ವರಾಜ್ಯ ಸ್ವಧರ್ಮ ಸ್ವಸಂಸ್ಕೃತಿಗಳಿಗೆ ಗಂಡಾಂತರವನ್ನುಂಟುಮಾಡುವ ಸಂದರ್ಭದಲ್ಲಿ ಸ್ವಶಕ್ತಿಯನ್ನು ಸಂವರ್ಧಿಸಿ ಹಿಂದು ಧರ್ಮವನ್ನೂ ಭಾರತೀಯ ಸಂಸ್ಕೃತಿಯನ್ನೂ ಪುನರುಜ್ಜೀವನಗೊಳಿಸುವುದು ಈ ನವೋದಿತ ರಾಜ್ಯದ ವಿಶಿಷ್ಟ ಧ್ಯೇಯವಾಗಿತ್ತು. ಇದಕ್ಕಾಗಿ ಎಲ್ಲ ಧರ್ಮಪಂಥಗಳನ್ನೂ ಪೋಷಿಸುವ, ಪರಂಪರಾಗತ ಜ್ಞಾನಶಾಖೆಗಳನ್ನು ಊರ್ಜಿತಗೊಳಿಸುವ, ಸ್ವಭಾಷೆ ಸಾಹಿತ್ಯ ಕಲೆಗಳಿಗೆ ಪ್ರೋತ್ಸಾಹನೀಡುವ ಅಭಿಲಾಷೆಯನ್ನು ಈ ಸಾಮ್ರಾಜ್ಯದ ಅರಸರು ಹೊಂದಿದ್ದರು.

ಈ ಅರಸರ ಅಧಿದೇವತೆ ಶ್ರೀವಿರೂಪಾಕ್ಷ. ತಾಮ್ರಶಾಸನಗಳ ಕೊನೆಯಲ್ಲಿ ಚೊಕ್ಕ ಕನ್ನಡ ಅಕ್ಷರಗಳಲ್ಲಿ ಅದನ್ನು ಅಂಕಿಸಿರುತ್ತಿದ್ದಿತು. ಇವರ ಲಾಂಛನ ವರಾಹ. ಧರ್ಮಕ್ಕೆ ಚ್ಯುತಿ ಬಂದು ಮುಳುಗುತ್ತಿದ್ದಾಗ ವರಾಹರೂಪಿಯಾದ ವಿಷ್ಣು ಭೂಮಿಯನ್ನು ಸಾಗರದಿಂದ ಮೇಲೆತ್ತಿದಂತೆ ಇವರು ದೇಶದ ಅರಾಜಕಸ್ಥಿತಿಯನ್ನು ನೀಗಿ, ಹಿಂದು ರಾಜ್ಯವನ್ನೂ ಹಿಂದು ಧರ್ಮವನ್ನೂ ಕಾಪಾಡಿದರು ಎಂಬುದಕ್ಕೆ ಈ ಚಿಹ್ನೆ ಸಾಂಕೇತಿಕ.

ಸಂಗಮವಂಶದ ಅರಸರು: ಹರಿಹರನು ಈ ವಂಶದ ಮೊದಲ ಅರಸು (೧೩೩೬–೫೬) ಈತನು ರಾಜ್ಯದ ಅಸ್ತಿಭಾರವನ್ನು ಹಾಕಿದನು. ಕಡಿದಾದ ಬೆಟ್ಟಗಳ ನಡುವಣ ಹಂಪೆಯಲ್ಲಿ ಹೊಸ ರಾಜಧಾನಿಯನ್ನು (ವಿಜಯನಗರವನ್ನು) ಕಟ್ಟಿಸಿದ ಕೀರ್ತಿ ಈತನದು. ಇದಕ್ಕೆ ಹೊಂದಿದಂತೆ ತುಂಗಭದ್ರೆಯ ಉತ್ತರತೀರದಲ್ಲಿ ಆನೆಗೊಂದಿ. ಇಲ್ಲಿನ ಕೋಟೆಕೊತ್ತಲಗಳನ್ನು ಈ ಮೊದಲೇ ಬಲ್ಲಾಳನು ಭದ್ರಗೊಳಿಸಿದ್ದನು.

ರಾಜಧಾನಿ ಪ್ರದೇಶವೆನಿಸಿದ ಪಂಪಾಕ್ಷೇತ್ರ ಶತಮಾನಗಳ ಹಿಂದಿನಿಂದ ಪವಿತ್ರ ಕ್ಷೇತ್ರ, ರಾಮಾಯಣದಲ್ಲಿ ವರ್ಣಿಸಲಾದ ಪಂಪಾಸರೋವರ, ವಾನರರ ರಾಜಧಾನಿಯಾದ ಕಿಷ್ಕಿಂಧೆ ಈ ಪ್ರದೇಶದಲ್ಲಿದ್ದುವೆಂಬುದು ಸ್ಥಳೀಯ ನಂಬಿಕೆ. ಬಾದಾಮಿಯ ಚಾಲುಕ್ಯ ವಿನಯಾದಿತ್ಯನ ಶಾಸನವೊಂದರಲ್ಲಿ ಇದನ್ನು ಪಂಪಾಕ್ಷೇತ್ರವೆಂದಿದೆ. ಈ ಕ್ಷೇತ್ರದ ಅಧಿದೈವ ವಿರೂಪಾಕ್ಷ. ಪಂಪಾಪತಿ ಮಹಾಕಾಲನೆಂದು ೧೧ನೆಯ ಶತಮಾನದಲ್ಲಿ ಶಾಸನದಲ್ಲಿ ವರ್ಣಿಸಿದೆ. ಆನೆಗೊಂದಿ, ವಿರೂಪಾಕ್ಷಪುರ, ಹೊಸಪಟ್ಟಣ, ಹಂಪೆ.

ಹೊಸ ಹಂಪೆಯುಪಟ್ಟಣ, ಹಸ್ತಿನಾವತಿ, ಹಂಪೆ ಹಸ್ತಿನಾವತಿ, ವಿದ್ಯಾನಗರ ಮುಂತಾದ ಹೆಸರಿನಲ್ಲಿ ಈ ಕ್ಷೇತ್ರ ಪ್ರಸಿದ್ಧ.

'ಹಿಂದೂರಾಯಸುರತ್ರಾಣ' ಎಂಬುದು ಇವನ ಮತ್ತು ಇವನ ನಂತರದ ಇತರ ಅರಸರ ವಿಶಿಷ್ಟವಾದ ಬಿರುದು. ಸುರತ್ರಾಣ ಪರ್ಷಿಯನ್ ಭಾಷೆಯ ಸುಲ್ತಾನ ಎಂಬುದರ ಸಂಸ್ಕೃತರೂಪ.

ಹರಿಹರನು ೨೦ ವರ್ಷಗಳ ಕಾಲ ಆಳಿದನು. ಇವನ ಉಳಿದ ಸೋದರರು ರಾಜ್ಯದ ಇತರ ಪ್ರಾಂತಗಳ ಸಂರಕ್ಷಣೆಯ ಹೊಣೆಯನ್ನು ಹೊತ್ತಿದ್ದರು. ಆಂಧ್ರಪ್ರದೇಶದಲ್ಲಿ ನೆಲ್ಲೂರು ಮತ್ತು ಕಡಪಾ ಜಿಲ್ಲೆಗಳನ್ನೊಳಗೊಂಡ ಉದಯಗಿರಿ ರಾಜ್ಯಕ್ಕೆ ಪ್ರಾಂತಾಧಿಕಾರಿಯಾಗಿ ಕಂಪಣ್ಣೊಡೆಯನು ಆಳುತ್ತಿದ್ದನು. ಮೂರನೆಯವನಾದ ಬುಕ್ಕನು ಯುವರಾಜ ಪದವಿಯನ್ನು ಪಡೆದು ಮಧ್ಯಭಾಗವಾದ ದೋರಸಮುದ್ರದ ಸುತ್ತಲಿನ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದ. ಮಾರಪ್ಪನು ಕೊಂಕಣವನ್ನೊಳಗೊಂಡ ಮಲೆರಾಜ್ಯವನ್ನು ರಾಜಧಾನಿ ಚಂದ್ರಗುತ್ತಿಯಿಂದ ಆಳುತ್ತಿದ್ದನು. ಕೊನೆಯವನಾದ ಮುದ್ದಪ್ಪನು ಮುಳುಬಾಗಿಲು ಪ್ರಾಂತದ ಅಧಿಕಾರಿಯಾಗಿದ್ದನು. ಈತನು ಚಿಕ್ಕಂದಿನಲ್ಲೇ ಅಸುನೀಗಿದನು.

ಸ್ವತಂತ್ರ ಹಿಂದು ರಾಜ್ಯವನ್ನು ಸ್ಥಾಪಿಸಿದ ಹರಿಹರನು ಅನೂಚಾನವಾಗಿ ನಡದು ಬಂದ ಪದ್ಧತಿಗಳನ್ನು ಕೈಬಿಡದೆ, ಹಿಂದಿದ್ದ ಅಧಿಕಾರಿಗಳ, ನಾಯಕರ ಮನವೊಲಿಸಿ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿದ್ದ ಎಲ್ಲ ಪ್ರದೇಶಗಳೂ ಈಗ ತನ್ನ ವಶವಾಗುವಂತೆ ಮಾಡಿದನು. ದಕ್ಷಿಣದಲ್ಲಿ ಮಧುರೆಯನ್ನು ಆಕ್ರಮಿಸಿದ್ದ ಮಹಮ್ಮದೀಯರನ್ನು ಅಲ್ಲಿಂದ ಹೊರದೂಡುವ ಕಾರ್ಯ ಮಾತ್ರ ಈತನಿಂದ ಆಗಲಿಲ್ಲ. ಅಲ್ಲದೆ ತೊಂಡೈಮಂಡಲದಲ್ಲಿದ್ದ ಶಂಬುವರಾಯ ಮನೆತನಕ್ಕೆ ಸೇರಿದ ನಾಯಕನು ಸಹ ಇವನ ಸಾರ್ವಭೌಮತ್ವವನ್ನು ಒಪ್ಪದೆ ಸ್ವತಂತ್ರನಾಗಿ ಆಳತೊಡಗಿದನು.

ಕ್ರಿ.ಶ. ೧೩೪೬ರಲ್ಲಿ ಶೃಂಗೇರಿಯಲ್ಲಿ ಹರಿಹರನು ರಾಜ್ಯಸ್ಥಾಪನೆಯ ವಿಜಯೋತ್ಸಾಹವನ್ನು ಆಚರಿಸುತ್ತಿದ್ದಂತೆಯೇ ದಕ್ಷಿಣ ಭಾರತದಲ್ಲಿ ಮತ್ತೊಂದು ಮಹತ್ತ್ವಪೂರ್ಣ ಘಟನೆಯುಂಟಾಯಿತು. ಅದೆಂದರೆ ಗುಲ್ಬರ್ಗದಲ್ಲಿ ಬಹಮನಿ ರಾಜ್ಯದ ಉದಯ. ಈ ಮಹಮ್ಮದೀಯ ರಾಜ್ಯದ ಸ್ಥಾಪಕ ಅಲ್ಲಾಉದ್ದೀನ್ ಹಸನ್‌ಷಹ. ಆಗಸ್ಟ್ ೩, ೧೩೪೭ ರಂದು ತಲೆಯೆತ್ತಿದ ಈ ರಾಜ್ಯ ವಿಜಯನಗರದ ಮುನ್ನಡೆಗೆ ತಡೆಯನ್ನೊಡ್ಡಿತು. ಅದರಲ್ಲೂ ರಾಜ್ಯದ ಉತ್ತರಭಾಗದಲ್ಲಿನ ಈ ಪರಕೀಯರ ಆಡಳಿತ ರಾಜ್ಯಕ್ಕೆ ಕಂಟಕವಾಗಿ, ಅಂದಿನಿಂದ ಆಗಿಂದಾಗ್ಗೆ ಅವರೊಡನೆ ವಿಜಯನಗರದ ಅರಸರು ಯುದ್ಧಗಳನ್ನು ನಡಸಬೇಕಾದ ಸಂದರ್ಭಗಳೇರ್ಪಟ್ಟವು.

ಅಲ್ಲಾಉದ್ದೀನನು ರಾಜ್ಯವಿಸ್ತಾರಣಾಕಾಂಕ್ಷಿಯಾಗಿ ಓರಂಗಲ್ ಮೇಲೆ ದಾಳಿ ನಡಸಿದನು. ಜೊತೆಗೆ ರಾಯಚೂರಿನ ನದೀಪ್ರದೇಶದ ಮೇಲೂ ಕಣ್ಣು ಹಾಯಿಸಿದನು. ಸಮೀಪದ ಸಾಗರದಲ್ಲಿ ಎದ್ದ ದಂಗೆಯನ್ನು ಅಡಗಿಸುವ ನೆಪದಲ್ಲಿ ಹಿಂದು ರಾಜ್ಯದ

ಸೀಮೆಗೆ ಬಂದ ಸೇನಾನಿ ಮುಬಾರಕನು ರಾಯಚೂರಿನಲ್ಲಿ ಹರಿಹರನನ್ನು ಎದುರಿಸಿದನು. ಆದರೆ ಜಯಲಕ್ಷ್ಮಿ ಯಾರಿಗೂ ಒಲಿಯಲಿಲ್ಲ. ಆದರೆ ಇವು ಅಂದಿನಿಂದ ಮುಂದೆ ವರ್ಷಾಂತರಗಳ ಕಾಲ ನಡೆದ ಎರಡೂ ಪಕ್ಷಗಳ ನಡುವಣ ಯುದ್ಧಗಳಿಗೆ ನಾಂದಿಯಾಯಿತು.

ಹರಿಹರನ ಎರಡನೆಯ ಸೋದರ ಬುಕ್ಕನು ಅಣ್ಣನ ಸ್ಥಾನಕ್ಕೆ ಬರುವ ವೇಳೆಗಾಗಲೇ ಆಡಳಿತದಲ್ಲಿ ಸಾಕಷ್ಟು ಅನುಭವವನ್ನು ಪಡೆದಿದ್ದನು. ಯುವರಾಜನಾಗಿದ್ದು ಅಣ್ಣನ ಕಾರ್ಯಗಳಲ್ಲಿ ಜೊತೆಜೊತೆಯಾಗಿ ಭಾಗವಹಿಸಿದ ಈತನು ಗುತ್ತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ೧೩೫೬ರಲ್ಲಿ ಈತನು ಸಿಂಹಾಸನಾರೂಢನಾದನು. ಬಹಳ ಕಷ್ಟದಿಂದ ಸ್ಥಾಪಿಸಿದ ರಾಜ್ಯವನ್ನು ಉಳಿಸಿ ಬೆಳಸಿಕೊಳ್ಳುವ ಕರ್ತವ್ಯ ಈತನ ಪಾಲಿಗೆ ಬಂದಿತು.

ತಮಿಳುನಾಡಿನ ಚೆಂಗಲ್ಪೇಟೆ, ಉತ್ತರ ದಕ್ಷಿಣ ಆರ್ಕಾಟ್ ಜಿಲ್ಲೆಗಳನ್ನೊಳಗೊಂಡ ತೊಂಡೈಮಂಡಲಂನ ಒಂದು ಭಾಗ ರಾಜಗಂಭೀರರಾಜ್ಯ. ಇಲ್ಲಿ ಶಂಬುವರಾಯ ಮನೆತನದ ನಾಯಕನು ಆಳುತ್ತಿದ್ದನು. ಕಾಂಚಿಗೆ ಸಮೀಪದ ರಾಜಗಂಭೀರನ್‌ಮಲೈ ಇವರ ರಾಜಧಾನಿ. ಸಮಕಾಲೀನ ನಾಯಕ ರಾಜಗಂಭೀರನಾರಾಯಣ. ಈತನ ಉಪದ್ರವನನ್ನು ಕೊನೆಗಾಣಿಸಲು ಬುಕ್ಕನು ತನ್ನ ಮಗ ಕಂಪಣನನ್ನು ಸೈನ್ಯಸಮೇತ ಕಳುಹಿಸಿದನು. ಈ ಯುವರಾಜನು ಶಂಬುವರಾಯನನ್ನು ಎದುರಿಸಿ, ಆತನನ್ನು ಸೆರೆಹಿಡಿದು, ಆತನು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಶಂಬುವರಾಯನು ಪರಿಸ್ಥಿತಿಗೆ ತಲೆಬಾಗಿ ಅಂಕಿತನಾಯಕನಾಗಿ ತನ್ನ ರಾಜ್ಯವನ್ನು ಹಿಂದಕ್ಕೆ ಪಡೆದನು.

ಇಲ್ಲಿಂದ ಮುಂದೆ ಕಂಪಣನು ಮಧುರೆಯತ್ತ ತೆರಳಿದನು. ಮಧುರೆಯಲ್ಲಿ ದೆಹಲಿಯ ಸುಲ್ತಾನನ ಪ್ರತಿನಿಧಿಯಾಗಿದ್ದ ಜಲಾಲುದ್ದೀನ್ ಅಹ್‌ಸನ್‌ಷಹ ಎಂಬಾತನು ೧೩೩೪ರ ಬಳಿಕ ದಂಗೆಯೆದ್ದು ಸ್ವತಂತ್ರವಾಗಿ ಆಳತೊಡಗಿದ್ದನು. ಬಲ್ಲಾಳನು ಸಾವನ್ನಪ್ಪಿದುದು ಇವನಿಂದಲೇ. ಈ ಸುಲ್ತಾನನು ಅಲ್ಲಿನ ದೇವಾಲಯವನ್ನು ಧ್ವಂಸಮಾಡಿ ಸೂರೆಹೊಡೆದು ಕಂಟಕನಾಗಿದ್ದನು. ಈಗ ಕುಮಾರ ಕಂಪಣನು ಈ ಸುಲ್ತಾನನ ವಿರುದ್ಧ ನಡೆದು ಚೆಂಜಿಕೋಟೆಯನ್ನು ಮುತ್ತಿದನು. ಸಮಯವರಂನಲ್ಲಿ ನಡೆದ ಕದನದಲ್ಲಿ ಸುಲ್ತಾನನ ಸೈನ್ಯ ಸೋತು ಓಡಿತು. ಕಣ್ಣಾನೂರು ಕೊಪ್ಪಂ ಕೋಟೆ ಇವನ ವಶವಾಯಿತು. ಬಹುಕಾಲದಿಂದ ತಿರುಪತಿಯಲ್ಲಿ ಅಜ್ಞಾತವಾಸದಲ್ಲಿದ್ದ ಶ್ರೀರಂಗನಾಥನ ಮೂರ್ತಿಯನ್ನು ಕಂಪಣನು ಮರಳಿ ತಂದು ಶ್ರೀರಂಗದಲ್ಲಿ ಪ್ರತಿಷ್ಠಾಪನೆಮಾಡಿದನು. ಕಣ್ಣಾನೂರು ಕೊಪ್ಪಂನಲ್ಲಿ ಹೊಯ್ಸಳೇಶ್ವರನನ್ನು ಸ್ಥಾಪಿಸಲಾಯಿತು. ಇಲ್ಲಿಂದ ಮುಂದೆ ಮಧುರೆಗೆ ನುಗ್ಗಿದ ಕಂಪಣನ ಸೈನ್ಯ ಘೋರ ಕದನದಲ್ಲಿ ಸುಲ್ತಾನನನ್ನು ಸೋಲಿಸಿತು. ಸುಲ್ತಾನನು ಅಸುವನ್ನು ನೀಗಿದನು. ಮಧುರೆ ಕಂಪಣನ ವಶವಾಯಿತು. ೬೦ ವರ್ಷಗಳ ಸುಲ್ತಾನರ ಆಳಿಕೆ ಕೊನೆಗೊಂಡಿತು (೧೩೭೮). ಕಂಪಣನ ಈ ಯಶಸ್ಸನ್ನು ಆತನ ಪತ್ನಿ

ಗಂಗಾದೇವಿಯ 'ಮಧುರಾವಿಜಯಂ' ಅಥವಾ 'ವೀರಕಂಪರಾಯಚರಿತಂ'ನಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾಳೆ.

ಕೃಷ್ಣಾತುಂಗಭದ್ರಾ ನಡುವಣ ಪ್ರದೇಶ ಈಗ ವಿಜಯನಗರ ಮತ್ತು ಬಹಮನಿ ಅರಸರ ನಡುವಣ ಕಲಹಗಳಿಗೆ ಕಾರಣವಾಯಿತು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಕಾಲದಿಂದಲೂ ಅದು ತಮ್ಮ ವಶದಲ್ಲಿತ್ತೆಂದೂ ನಂತರಬಂದ ಬಹಮನಿಯ ಸುಲ್ತಾನರದು ಅತಿಕ್ರಮಣ ನೀತಿಯೆಂದೂ ವಿಜಯನಗರದ ಅರಸರು ವಾದಿಸಿದರು. ಇದು ನಿಜವೂ ಹೌದು. ಆದರೆ ಒಡೆತನ ಎರಡೂ ಪಕ್ಷಗಳಿಗೆ ಅರ್ಥಿಕದೃಷ್ಟಿಯಿಂದ ಹಿತಕರವಾಗಿತ್ತು. ಇಬ್ಬರೂ ಅದರ ಮೇಲೆ ತಮ್ಮ ಹಕ್ಕನ್ನು ಸಾಧಿಸುತ್ತಿದ್ದರು. ಕದನ ವಿವರಗಳು ನಮಗೆ ತಿಳಿದು ಬರುವುದು ಮಹಮ್ಮದೀಯರ ಬರವಣಿಗೆಯಿಂದಲೇ. ಮಹಮದ್ ಕಾಸಿಂ ಫೆರಿಸ್ತಾನ ಇತಿಹಾಸ ಇದರಲ್ಲಿ ಪ್ರಮುಖವಾದ್ದು. ಇದನ್ನು ಆತನು ೧೬೦೬ರಲ್ಲಿ ಬಿಜಾಪುರದ ಇಮ್ಮಡಿ ಇಬ್ರಾಹಿಂ ಅದಿಲ್‌ಷಹನ ಆಸ್ಥಾನದಲ್ಲಿ ಬರೆದು ಮುಗಿಸಿದನು. ಈ ಬರೆವಣಿಗೆ ಹಲವು ದೃಷ್ಟಿಗಳಿಂದ ಕಲುಷಿತ. ಬುಕ್ಕ ಮತ್ತು ಬಹಮನಿಯ ಸುಲ್ತಾನರ ನಡುವಣ ಕದನಗಳು ತೀವ್ರಸ್ವರೂಪ ತಾಳಿದವು. ಈ ಮಧ್ಯೆ ಓರಂಗಲ್ಲಿನಲ್ಲಿದ್ದ ವಿನಾಯಕ ದೇವನು ಇದರಲ್ಲಿ ಭಾಗವಹಿಸಿದ. ಇಮ್ಮಡಿ ಪ್ರತಾಪರುದ್ರನ ಮೊಮ್ಮಗನಾದ ವಿನಾಯಕದೇವನೊಡನೆ ಬುಕ್ಕನು ಸಖ್ಯ ಬೆಳಸಿದನು. ಕಾಕತೀಯರಿಗೆ ಸೇರಿದ್ದ ಪ್ರದೇಶಗಳನ್ನು ತೆರವು ಮಾಡಬೇಕೆಂದು ಈ ಇಬ್ಬರೂ ಮಹಮದ್‌ಷಹನನ್ನು ಕೇಳಿದರು. ಪರಿಣಾಮವಾಗಿ ಷಹನು ಓರಂಗಲ್ಲನ್ನು ಎರಡುಬಾರಿ ಮುತ್ತಿದನು. ಎರಡನೆಯ ಮುತ್ತಿಗೆ ಕಾಲದಲ್ಲಿ ವಿನಾಯಕದೇವನು ಮಡಿದನಾದರೂ ಅವನ ಸೈನ್ಯ ಷಹನನ್ನು ಓಡಿಸಿತು. ಆದರೂ ಅಂತಿಮವಾಗಿ ಷಹನು ಗೋಲಕೊಂಡವನ್ನು ಆಕ್ರಮಿಸಿದನು.

೧೩೬೬ರಿಂದ ಸು. ೧೦ ವರ್ಷಗಳವರೆಗೆ ಬಹಮನಿ ವಿಜಯನಗರಗಳ ನಡುವೆ ಕದನಗಳು ನಡೆದುವು. ಅಂತಿಮ ವಿಜಯ ಬುಕ್ಕನದಾಯಿತು. ಬಹುಜನರ ಸಾವಿನಿಂದ ವಿಹ್ವಲಗೊಂಡ ಬುಕ್ಕನು ನಿರಾಯುಧಪ್ರಾಣಿಗಳನ್ನೂ ಕದನದಲ್ಲಿ ಪಾಲ್ಗೊಳ್ಳದವರನ್ನೂ ಕೊಲ್ಲಬಾರದೆಂಬ ಷರತ್ತಿಗೆ ತನ್ನ ಪ್ರತಿಸ್ಪರ್ಧಿಯನ್ನು ಒಡಂಬಡಿಸಿ ಒಪ್ಪಂದಮಾಡಿಕೊಂಡ.

ಬುಕ್ಕನು ಇತಿಹಾಸದಲ್ಲಿ ಅಮರನಾಗಿರುವುದು ರಣರಂಗದ ಸಾಧನೆಗಳಿಗಿಂತ ಮಿಗಿಲಾಗಿ ಧರ್ಮಜ್ಞಾನಕ್ಕಾಗಿ, ಪರಮತ ಸಹಿಷ್ಣುತೆಗಾಗಿ. ಸರ್ವಮತಗಳೂ ಸಾರುವ ತತ್ವ ಒಂದೇ ಎಂಬುದನ್ನರಿತ ಈ ಅರಸ ಜೈನ ಮತ್ತು ಶ್ರೀವೈಷ್ಣವರ ನಡುವೆ ಒಮ್ಮೆ ಶ್ರವಣಬೆಳಗೊಳದಲ್ಲಿ ನಡೆದ ಪರಸ್ಪರ ವಿವಾದದಲ್ಲಿ ಎರಡು ಮತಗಳ ಪ್ರಮುಖರನ್ನೂ ಕರಸಿ, ಅವರ ನಡುವಣ ಭಿನ್ನಾಭಿಪ್ರಾಯವನ್ನು ಹೋಗಲಾಡಿಸಿದ. ಇತರರ ಮತವನ್ನು ತೆಗಳುವುದು ತಮ್ಮ ಮತವನ್ನು ತೆಗಳಿಕೊಂಡಂತೆಯೆ ಎಂದು ಅವರಿಗೆ ಬೋಧಿಸಿದ. ವಿವೇಚನಾಪರರಾದ ಹಿಂದುಗಳ ಮನಸ್ಸಿನಲ್ಲಿ ಇವನ ಈ ಸಲಹೆ ಅಚ್ಚಳಿಯದೆ ನಿಂತಿತು. ಹಿಂದುಧರ್ಮಕ್ಕೆ ಚ್ಯುತಿಯುಂಟಾದ ಆ ಕಾಲದಲ್ಲಿ ಅದು ಸಮಯೋಚಿತವಾಗಿತ್ತು ; ಇದರಿಂದ ಈ ದೊರೆ 'ಹಿಂದುರಾಯಸುರತ್ರಾಣ'ನಾದ್ದು ಆಶ್ಚರ್ಯವೇನಲ್ಲ.

ಹಿಂದುಧರ್ಮದ ಆಚಾರವಿಚಾರಗಳಿಗೆ ಅಧಿಷ್ಠಾನವಾದ ವೇದಸಾಹಿತ್ಯದ ವ್ಯಾಸಂಗವನ್ನು ಈ ಅರಸು ಪ್ರೋತ್ಸಾಹಿಸಿದನು. ಸಕಲವೇದಪಾರಂಗತರಾದ ಪಂಡಿತರನ್ನು ಒಟ್ಟುಗೂಡಿಸಿ ಕುಲಗುರುಗಳಾದ ಸಾಯಣಾಚಾರ್ಯ ಮತ್ತು ಮಾಧವಾಚಾರ್ಯರ ನಿರ್ದೇಶನದಲ್ಲಿ ವೇದಗಳಿಗೆ ಭಾಷ್ಯಗಳನ್ನು ಬರೆಯಿಸುವ ಕಾರ್ಯವನ್ನು ಆರಂಭಿಸಿದನು. ಸು. ೨೦ ವರ್ಷಗಳ ಪರಿಶ್ರಮದ ಬಳಿಕ ವೇದಭಾಷ್ಯಗಳು ಸಿದ್ಧವಾದವು. 'ವೇದಮಾರ್ಗ ಪ್ರತಿಷ್ಠಾಪಕ' 'ವೇದಮಾರ್ಗ ಪ್ರವರ್ತಕ' ಎಂಬ ಬಿರುದುಗಳು ಈತನಿಗೆ ಸಂದುವು. ಇವನ ಸೊಸೆ ಗಂಗಾದೇವಿಯ 'ಮಧುರಾವಿಜಯಂ' ಸಂಸ್ಕೃತ ಸಾಹಿತ್ಯಕ್ಕೆ ಆಕೆ ಸಲ್ಲಿಸಿದ ಕಾಣಿಕೆ. 'ಬಸವಪುರಾಣ'ದ ಕರ್ತೃವಾದ ಭೀಮಕವಿ, 'ಧರ್ಮನಾಥಪುರಾಣ'ದ ಬಾಹುಬಲಿ ಪಂಡಿತ ಮತ್ತು 'ಖಗೇಂದ್ರಮಣಿ ದರ್ಪಣ'ದ ಮಂಗರಾಜ ಇವರು ಇವನ ಕಾಲದ ಪ್ರಮುಖ ಲೇಖಕರು.

ಬುಕ್ಕನ ನಂತರ ಕ್ರಮವಾಗಿ ಇಮ್ಮಡಿ ಹರಿಹರ (ಕ್ರಿ.ಶ. ೧೩೭೭–೧೪೦೪), ಇಮ್ಮಡಿ ಬುಕ್ಕ (ಕ್ರಿ.ಶ. ೧೪೦೪–೧೪೦೬), ದೇವರಾಯ (ಕ್ರಿ.ಶ. ೧೪೦೬–೨೨), ವಿಜಯರಾಯ (ಕ್ರಿ.ಶ. ೧೪೨೨–೨೪), ಇಮ್ಮಡಿ ದೇವರಾಯ (ಕ್ರಿ.ಶ. ೧೪೨೪–೪೬) ಈ ದೊರೆಗಳು ಆಳಿದರು. ಪಿತ್ರಾರ್ಜಿತವಾಗಿ ಬಂದ ರಾಜ್ಯವನ್ನು ಧರ್ಮದಿಂದ ಆಳಿ ರಾಜ್ಯಾಭಿವೃದ್ಧಿಗೆ ಇವರು ಕಾರಣರಾದರು. ಇವರಲ್ಲಿ ಇಮ್ಮಡಿ ದೇವರಾಯ ಪ್ರಸಿದ್ಧನು. ಈತನ ತಂದೆ ವೀರ ವಿಜಯರಾಯನು ಅಷ್ಟೇನೂ ಸಮರ್ಥನಾಗಿರಲಿಲ್ಲ. ಆತನಿಗೆ ರಾಜಕೀಯ ವ್ಯವಹಾರಗಳಲ್ಲಿ ಆಸಕ್ತಿಯಿರಲಿಲ್ಲ. ಆದುದರಿಂದ ಹಿರಿಯ ಮಗನಿಗೆ ರಾಜ್ಯದ ಹೊಣೆಯನ್ನು ವಹಿಸಿ ತಾನು ನಿವೃತ್ತನಾದನು. ತಂದೆಯ ಸ್ಥಾನಕ್ಕೆ ಬಂದ ದೇವರಾಯನನ್ನು ಪ್ರೌಢದೇವರಾಯ, ಪ್ರತಾಪದೇವರಾಯ, ಅಭಿನವದೇವರಾಯ, ಗಜಬೇಂಟೆಕಾರ ಮುಂತಾದ ಬಿರುದುಗಳಿಂದ ವರ್ಣಿಸಲಾಗಿದೆ.

ಇಮ್ಮಡಿ ದೇವರಾಯನು ಕನಿಷ್ಠ ಮೂರು ಬಾರಿಯಾದರೂ ಬಹಮನಿ ಅರಸರೊಂದಿಗೆ ಕಾದಿದನು. ಇದಕ್ಕೆ ಹಿನ್ನೆಲೆಯಲ್ಲಿ ಹೊಸದಾಗಿ ತಲೆಯೆತ್ತಿದ್ದ ರೆಡ್ಡಿ ಮನೆತನಗಳ ನಾಯಕರು ಹಾಗೂ ಒರಿಸ್ಸಾದ ಗಜಪತಿ ಅರಸರೂ ಇದ್ದರು. ಕರ್ನೂಲು ಜಿಲ್ಲೆಯ ಅಹೋಬಲ, ವಿನುಕೊಂಡ ಮುಂತಾದ ನಗರಗಳನ್ನೂ ದುರ್ಗಗಳನ್ನೂ ಬುಕ್ಕನು ಪಾಕನಾಡಿನ ರೆಡ್ಡಿ ಪ್ರೋಲಯವೇಮನಿಂದ ಕಸಿದುಕೊಂಡಿದ್ದನು. ಬುಕ್ಕನ ನಂತರ ಬಂದ ಅರಸರಿಗೆ ಪೂರ್ವತೀರದ ಕೊಂಡವೀಡು ಮುಂತಾದ ಕೋಟೆಗಳ ಮೇಲೆ ಕಣ್ಣಿತ್ತಾದರೂ ಈ ರೆಡ್ಡಿ ವಂಶಜರು ಅಲ್ಲಿ ಅಧಿಕಾರದಲ್ಲಿದ್ದರು. ಅನವೇಮಾ ರೆಡ್ಡಿಯ ಕಾಲದಲ್ಲಿ ಅಣ್ಣತಮ್ಮಂದಿರಲ್ಲಿ ಕಂಡುಬಂದ ವೈಮನಸ್ಯ ದೇವರಾಯನು ಅವರ ವ್ಯವಹಾರಗಳಲ್ಲಿ ತಲೆಹಾಕುವಂತೆ ಮಾಡಿತು. ಆದರೆ ಬಹಮನಿಯ ಸುಲ್ತಾನನು ಸಹ ಈ ರಾಜಕೀಯದಲ್ಲಿ ಆಸಕ್ತಿ ತೋರಿದನು. ಅನವೇಮನ ನಂತರ ಬಂದ ಕುಮಾರಗಿರಿಯು ತನ್ನ ರಾಜ್ಯವನ್ನು ಇಬ್ಭಾಗಮಾಡಿ ರಾಜಮಹೇಂದ್ರವರವನ್ನೊಳಗೊಂಡ ಉತ್ತರಭಾಗವನ್ನು ತನ್ನ ಮಂತ್ರಿಯೂ ಮೈದುನನೂ ಆದ ಕಾಟಯವೇಮನಿಗೂ ದಕ್ಷಿಣದ ಕೊಂಡವೀಡು ಮತ್ತು ಸುತ್ತಲಿನ ಭಾಗವನ್ನು

ಸೋದರ ಸಂಬಂಧಿಯಾದ ಪೆದ್ದ ಕೋಮಟಿವೇಮನಿಗೂ ಹಂಚಿದನು. ಆದರೂ ಇದರಿಂದ ಕಲಹಗಳು ಕೊನೆಗಾಣಲಿಲ್ಲ. ಬಹಮನಿ ಸುಲ್ತಾನನೂ ವಿಜಯನಗರದ ಅರಸನೂ ಆವರ ಕಲಹಗಳು ಮತ್ತಷ್ಟು ತೀವ್ರಗೊಳ್ಳುವಂತೆ ಮಾಡಿದರು. ಸತತವಾಗಿ ಮಹಮ್ಮದೀಯರ ಭಯದಿಂದ ವಿಜಯನಗರದ ಅರಸರಿಗೆ ಸಹಧರ್ಮಿಯರೇ ಆದ ಇನ್ನೊಬ್ಬರು ತಮ್ಮ ಪ್ರತಿಸ್ಪರ್ಧಿಗಳಾಗುವುದಾಗಲಿ, ವಿರೋಧಿಗಳಾಗುವುದಾಗಲಿ ಅಪಾಯಕಾರಿಯಾಗುತ್ತ ದೆಂಬ ಹೆದರಿಕೆಯೂ ಇದ್ದಿತು.

ಇಮ್ಮಡಿ ದೇವರಾಯನು ಪಟ್ಟಕ್ಕೆ ಬಂದಾಗ ಕಲಿಂಗದೇಶ(ಒರಿಸ್ಸಾ)ದ ಗಜಪತಿ ಭಾನುದೇವನು ದಕ್ಷಿಣಾಭಿಮುಖವಾಗಿ ತನ್ನ ರಾಜ್ಯವನ್ನು ವಿಸ್ತರಿಸತೊಡಗಿದನು. ಫಲ ವಾಗಿ ರಾಜಮಹೇಂದ್ರಿಯ ರೆಡ್ಡಿಗಳು ಮತ್ತು ಅವರ ಬೆಂಬಲಿಗರಾದ ವಿಜಯನಗರದ ಅರಸರೂ ಈತನಿಗೆ ವಿರೋಧಿಗಳಾದರು. ರಾಜಮಹೇಂದ್ರಿಯಲ್ಲಿಯೇ ಆಗ ಅಂತಃಕಲಹ ಗಳೇರ್ಪಟ್ಟು ದೇವರಾಯನು ಕುಮಾರಗಿರಿಯ ಪಕ್ಷವನ್ನು ವಹಿಸಿದ್ದ ಭಾನುದೇವನನ್ನು ಸೋಲಿಸಿ ಅವನು ಆಕ್ರಮಿಸಿದ್ದ ರಾಜಮಹೇಂದ್ರವರಂ ಮತ್ತು ಇತರ ಪ್ರದೇಶಗಳನ್ನು ತನಗೆ ಶರಣಾಗಿದ್ದ ವೀರಭದ್ರನಿಗೆ ವಹಿಸಿ ಅವನು ತನ್ನ ಮಾಂಡಲಿಕನಾಗಿರುವಂತೆ ಮಾಡಿ ದನು (೧೪೨೭). ರಾಜಮಹೇಂದ್ರಿಯ ಈ ರೆಡ್ಡಿಗಳು ಕ್ರಿ.ಶ. ೧೪೪೪ರ ವರೆಗೆ ಅಧಿಕಾರ ದಲ್ಲಿದ್ದರು. ಆದರೆ ಆಗ ಒರಿಸ್ಸಾ ಹಾಗೂ ವಿಜಯನಗರದ ಅರಸರ ನಡುವಣ ಕದನಗಳ ನಡುವೆ ಸಿಲುಕಿದ ಇವರು ಕೊನೆಗೆ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡರು.

ಕ್ರಿ.ಶ. ೧೪೨೦ರ ಅಂತ್ಯದಲ್ಲಿ ವಿಜಯನಗರದ ಮೇಲೆ ದಂಡೆತ್ತಿಬಂದ ಬಹಮನಿಯ ಸುಲ್ತಾನ ಅಹಮದ್‌ಷಹ (I) ಮೇಲಿಂದ ಮೇಲೆ ಸೋತನು. ಈ ಸೋಲುಗಳಿಗೆ ವಿಜಯ ನಗರಕ್ಕೆ ಅತಿಸಮೀಪದಲ್ಲಿ ತಮ್ಮ ರಾಜಧಾನಿ ಇದ್ದುದು ಒಂದು ಕಾರಣವೆಂದು ಬಗೆದು ರಾಜಧಾನಿಯನ್ನು ಇನ್ನೂ ಒಳಪ್ರದೇಶದ ಬಿದರೆಗೆ ಬದಲಾಯಿಸಿದನು (೧೪೨೩). ಇಲ್ಲಿನ ಹೆಚ್ಚು ಹಿತಕರ ವಾತಾವರಣ ಅವನು ಬಹಿರಂಗವಾಗಿ ಮುಂದೊಡ್ಡಿದ ಕಾರಣ ಗಳಲ್ಲಿ ಒಂದು. ಕ್ರಿ.ಶ. ೧೪೩೫–೩೬ರಲ್ಲಿ, ಪುನಃ ೧೪೪೩–೪೪ರಲ್ಲಿ ಬಹಮನಿ ಸುಲ್ತಾನನು ದೇವರಾಯನ ಮೇಲೆ ನುಗ್ಗಿದನಾದರೂ ಪ್ರತಿಫಲವೇನೂ ದೊರಕಲಿಲ್ಲ. ಕ್ರಿ.ಶ. ೧೪೪೩ರಲ್ಲಿ ವಿಜಯನಗರದ ಅರಮನೆಯಲ್ಲಿ ದೇವರಾಯನನ್ನು ಕೊಲೆಮಾಡುವ ಸಂಚು ಹೂಡಲಾಗಿದ್ದು ಅದು ವಿಫಲಗೊಂಡಿತು. ಆ ಸಂದರ್ಭದಲ್ಲಿ ಏರ್ಪಟ್ಟ ಕೋಲಾ ಹಲವನ್ನುಪಯೋಗಿಸಿ ಸುಲ್ತಾನನು ರಾಜಧಾನಿಯನ್ನು ದಾಳಿಮಾಡಿದ. ಆದರೆ ಹತಾಶ ನಾಗಿ ಹಿಂದಿರುಗಿದ.

ಇದೇ ಸಮಯದಲ್ಲಿ ದೇವರಾಯನ ದಂಡಾಧಿಪನಾದ ಲಕ್ಕಣ್ಣನು ಸಿಂಹಳದ್ವೀಪದ ಮೇಲೆ ದಂಡೆತ್ತಿ ಬಂದನು. ಸಿಂಹಳದ ಅರಸರನ್ನು ಹಿಂದೆ ಇಮ್ಮಡಿ ಹರಿಹರನು ಸೋಲಿಸಿ ಅವರಿಂದ ಕಪ್ಪವನ್ನು ಪಡೆಯುವ ವ್ಯವಸ್ಥೆಯನ್ನು ಏರ್ಪಡಿಸಿದ್ದನು. ದಕ್ಷಿಣದಿಂದ ಯಾವ ವಿಧವಾದ ಗಂಡಾಂತರವೂ ಉಂಟಾಗಕೂಡದೆಂಬ ದೃಷ್ಟಿಯಿಂದ ಮಾಡಿದ ಕಾರ್ಯಾ ಚರಣೆ ಇದು. ಆದರೆ ಈಗ ಅಲ್ಲಿ ದಂಗೆಯೊಂದು ತಲೆದೋರಿತು. ಅದಕ್ಕಾಗಿ ಲಕ್ಕಣ್ಣನು

ನೌಕಾದಳದೊಡನೆ ಹೋಗಿ ಸಿಂಹಳದ ಅರಸನನ್ನು ಸೋಲಿಸಿದನು. ಸಿಂಹಳೀಯರ ಜಾನಪದ ಗೀತೆಗಳಲ್ಲೂ ಈ ಘಟನೆಯ ಛಾಯೆ ಕಂಡುಬಂದಿದೆ. ಇದರ ಫಲವಾಗಿ 'ದಕ್ಷಿಣಸಮುದ್ರಾಧೀಶ್ವರ'ನೆಂಬ ಸಾರ್ಥಕ ಬಿರುದನ್ನು ಲಕ್ಕಣ್ಣನಿಗೆ ನೀಡಲಾಯಿತು.

ಮೇಲಿಂದ ಮೇಲೆ ನುಗ್ಗಿ ಬರುತ್ತಿದ್ದ ಮಹಮ್ಮದೀಯರನ್ನು ತಡೆಗಟ್ಟಲು ಹೆಚ್ಚು ವ್ಯವಸ್ಥಿತವಾದ ಸೈನ್ಯದ ಆವಶ್ಯಕತೆಯನ್ನು ಕಂಡುಕೊಂಡ ಅರಸನು ಸೈನ್ಯ ಪದ್ಧತಿಯಲ್ಲಿ ಹಲವಾರು ಮಹತ್ತ್ವದ ಬದಲಾವಣೆಗಳನ್ನು ಮಾಡಿದನು. ಅಶ್ವಬಲವನ್ನು ಹೆಚ್ಚಿಸಿಕೊಂಡನು. ಪರಿಸ್ಥಿತಿಗನುಗುಣವಾಗಿ ದೇವರಾಯನು ಅನೇಕ ಮಹಮ್ಮದೀಯ ಬಿಲ್ಲಾಳುಗಳನ್ನೂ ದಂಡನಾಯಕರನ್ನೂ ತನ್ನ ಸೈನ್ಯಕ್ಕೆ ಸೇರಿಸಿಕೊಂಡು ಹೊಸ ವಿಧಾನದ ಕಾರ್ಯಾಚರಣೆಗಳಲ್ಲಿ ತನ್ನ ಸೈನಿಕರಿಗೆ ತರಬೇತಿ ಕೊಡಿಸಿದನು.

ಇಮ್ಮಡಿ ದೇವರಾಯನ ಕಾಲದಲ್ಲಿ ವಿಜಯನಗರದ ಕೀರ್ತಿ ಪ್ರತಿಷ್ಠೆಗಳು ಸರ್ವತ್ರ ವ್ಯಾಪಿಸಿದವು. ಆಂತರಿಕ ನೆಮ್ಮದಿ, ಸಾಮಾಜಿಕ ಸದ್ಭಾವನೆ, ತೃಪ್ತಪ್ರಜೆ, ಸಂಪದಭಿವೃದ್ಧಿ, ಅಧಿಕ ವ್ಯವಸಾಯ ಉತ್ಪಾದನೆ, ಒಳಹೊರ ವಾಣಿಜ್ಯ ವ್ಯವಹಾರಗಳಲ್ಲಿ ಯಶಸ್ಸು ಇವು ಅಂದಿನ ಭವ್ಯ ಜೀವನದ ಅಂಶಗಳು. ಅದರಲ್ಲಿಯೂ ಸದಾ ಯುದ್ಧ ನಿರತನಾದ ಅರಸನ ಪ್ರಜೆಗಳು ಶತ್ರುಹಾವಳಿಗಳನ್ನು ಕಡೆಗಣಿಸಿ ಸುಖಸಂಪದ್ಯುಕ್ತರಾಗಿದ್ದುದು ಆತನ ದಕ್ಷತೆಗೆ ಸಾಕ್ಷಿ.

ಈತನ ಕಾಲದಲ್ಲಿ ದೂರದ ಇಟಲಿದೇಶದಿಂದ ನಿಕೊಲೊ ಕೊಂಟಿ ಎಂಬ ಯಾತ್ರಿಕನು ವಿಜಯನಗರಕ್ಕೆ ಬಂದಿದ್ದನು (ಕ್ರಿ.ಶ. ೧೪೨೦–೨೧). ವಿಜಯನಗರವನ್ನು ಬಿಜ್ನೆಗೆಲಿಯ ಎಂದು ಕರೆಯುವ ಈತನು ಅದರ ವೈಭವವನ್ನು ವರ್ಣಿಸಿದ್ದಾನೆ. ವಿಜಯನಗರಕ್ಕೆ ಬಂದ ಇನ್ನೊಬ್ಬ ಇರಾನ್ ರಾಯಭಾರಿಯಾದ ಅಬ್ದುಲ್ ರಜಾಕ್ ಕ್ರಿ.ಶ. ೧೪೪೩ರಲ್ಲಿ ವಿಜಯನಗರಕ್ಕೆ ಬಂದು ಇಲ್ಲಿ ಸು. ೭ ತಿಂಗಳಿದ್ದ. ಈತನು ಪ್ರಪಂಚದಲ್ಲಿ ಇಂಥ ಅದ್ಭುತವಾದ ಇನ್ನೊಂದು ಪಟ್ಟಣವನ್ನು ಕಂಡಿಲ್ಲ, ಕೇಳಿಲ್ಲ; ಇಲ್ಲಿಯ ಅರಸನು ಭಾರತದಲ್ಲಿಯೇ ಶ್ರೇಷ್ಠನು; ಇಲ್ಲಿಯ ಜನ ಸೊಗಸುಗಾರರು, ಗುಲಾಬಿ ಹೂ ಎಂದರೆ ಅವರಿಗೆ ಪ್ರಾಣ; ಇಲ್ಲಿಯ ಅಂಗಡಿ ಬೀದಿಗಳೂ ಪೇಟೆಗಳೂ ವಿಸ್ತೀರ್ಣವೂ ಜನನಿಬಿಡವೂ ಆದವು; ಮುಕ್ತಪೇಟೆಯಲ್ಲಿ ರತ್ನಪಡಿ ವ್ಯಾಪಾರಸ್ಥರು ಮುತ್ತು ಮಾಣಿಕ್ಯ ಚಿನ್ನ ವಜ್ರಗಳನ್ನು ಮಾರುತ್ತಾರೆ—ಎಂದೆಲ್ಲ ವರ್ಣಿಸಿದ್ದಾನೆ.

ಸರ್ವಧರ್ಮಸಮನ್ವಯ ನೀತಿಯಂತೆ ಎಲ್ಲರನ್ನೂ ಸಮನಾಗಿ ಕಂಡ ದೇವರಾಯನು ತನ್ನ ಅರಮನೆಯ ನೆರೆಯಲ್ಲಿ ಜೈನ ಬಸದಿಯೊಂದನ್ನು ಕಟ್ಟಿಸಿದನು. ಮಹಮ್ಮದೀಯರನ್ನು ಗೌರವದಿಂದ ಕಂಡು ಅವರು ತನ್ನ ರಾಜ್ಯದಲ್ಲಿ ನೆಲಸಲು ಆವಶ್ಯಕ ಅನುಕೂಲಗಳನ್ನು ಕೊಡಿಸಿ, ಅವರಿಗಾಗಿಯೇ ಒಂದು ಮಸೀದಿಯನ್ನೂ ಕಟ್ಟಿಸಿದನು. ತನ್ನ ಸಿಂಹಾಸನಕ್ಕೆ ಬಾಗುವಾಗ ಅವರ ಮನಸ್ಸು ನೋಯಬಾರದೆಂದು ಸಿಂಹಾಸನದ ಮುಂದೆ ಉಚ್ಚಾಸನದಲ್ಲಿ ಕುರಾನಿನ ಒಂದು ಪ್ರತಿಯನ್ನಿರಿಸುತ್ತಿದ್ದನು.

ಪ್ರಜೆಗಳಿಗೂ ಆಶ್ರಿತರಿಗೂ ಕವಿಗಳಿಗೂ ಔದಾರ್ಯ ತೋರಿ ಅವರನ್ನು ಸನ್ಮಾನಿಸುವ

ಹಿರಿಯ ಗುಣ ಆತನಲ್ಲಿತ್ತು. ಪ್ರಜೆಗಳಿಗೆ ಸುಂಕ ತೆರಿಗೆಗಳಲ್ಲಿ ವಿನಾಯಿತಿ ತೋರಿಸುವುದು ಒಂದು ಮುಖವಾದರೆ, ಅನರ್ಘ್ಯರತ್ನಗಳಿಂದ ತುಲಾಭಾರ ಮಾಡಿಸಿಕೊಂಡು ಅದನ್ನು ಬ್ರಾಹ್ಮಣರಿಗೂ ಇತರ ಅರ್ಹವ್ಯಕ್ತಿಗಳಿಗೂ ದಾನಮಾಡುವುದು ಇನ್ನೊಂದು ಮುಖ.

ಇಂತಹ ಅರಸನು ಕ್ರಿ.ಶ. ೧೪೪೬ರ ಮೇ ೨೪, ಮಂಗಳವಾರದಂದು ದಿವಂಗತನಾದನು. "ದುಷ್ಟ ಕ್ಷಯ ಸಂವತ್ಸರದಲ್ಲಿ ದುರಂತದ ದ್ವಿತೀಯ ವೈಶಾಖಮಾಸದಲ್ಲಿ ಅಮಂಗಳದ ಮಂಗಳವಾರದಲ್ಲಿ ಕೃಷ್ಣಪಕ್ಷದ ಚತುರ್ದಶಿಯಂದು ಅಪ್ರತಿಮವೀರ ಪ್ರತಾಪದೇವರಾಯ ಪರಂಧಾಮವನ್ನು ಸೇರಿದನು, ಅಯ್ಯೋ ವಿಧಿಯೇ" ಎಂಬ ಪ್ರಲಾಪ ಶ್ರವಣಬೆಳಗೊಳದ ಒಂದು ಶಾಸನದಲ್ಲಿದೆ.

ಇಮ್ಮಡಿ ದೇವರಾಯನ ನಂತರ ವಿಜಯನಗರದ ವೈಭವ ತಾತ್ಕಾಲಿಕವಾಗಿ ಇಳಿಮುಖವಾಗತೊಡಗಿತು. ಈತನ ನಂತರ ಆಳಿದ ಮಲ್ಲಿಕಾರ್ಜುನ ಮತ್ತು ಮುಮ್ಮಡಿ ವಿರೂಪಾಕ್ಷರ ಅದಕ್ಷತೆ ಇದಕ್ಕೆ ಮುಖ್ಯಕಾರಣ. ವಿರೂಪಾಕ್ಷನಂತೂ ಭೋಗಾಸಕ್ತ, ವಿಷಯಲಂಪಟ ಆಗಿದ್ದ. ಅರಾಜಕತೆ ತಾಂಡವವಾಡಿತು. ಬಹಮನಿಯ ಸುಲ್ತಾನನು ಬೆಳಗಾವಿ, ಗೋವ ಮುಂತಾದ ಆಯಕಟ್ಟಿನ ಪ್ರದೇಶಗಳನ್ನೂ ರೇವನ್ನೂ ವಶಪಡಿಸಿಕೊಂಡನು. ಪೂರ್ವದಲ್ಲಿ ಗಜಪತಿಕಪಿಲೇಂದ್ರ (೧೪೫೬) ಮತ್ತು ಆತನ ಮಗ ಹಮ್ಮೀರ (೧೪೬೩) ಬಲಿಷ್ಠರಾಗಿ ರಾಜಮಹೇಂದ್ರ, ಉದಯಗಿರಿ ಮುಂತಾದ ಪ್ರಮುಖ ಕೋಟೆಗಳನ್ನು ಆಕ್ರಮಿಸಿದರು. ಹಮ್ಮೀರನ ಸೈನ್ಯ ನಿರಾತಂಕವಾಗಿ ರಾಜ್ಯದೊಳಗೆ ಮುನ್ನಡೆದು ದಕ್ಷಿಣದ ಕಾಂಚೀಪುರದವರೆಗೂ ನುಗ್ಗಿತು. ಈ ಸಂದರ್ಭದಲ್ಲಿ ದಂಡನಾಯಕನಾದ ಸಾಳುವ ನರಸಿಂಹನು ಶತ್ರುವನ್ನೆದುರಿಸಿ ಹೊಡೆಮೋಡಿಸುವುದರಲ್ಲಿ ಯಶಸ್ವಿಯಾದನು. ಆದರೆ ಪ್ರಜೆಗಳು ಈ ರಾಜಕೀಯ ಪರಿಸ್ಥಿತಿಯಿಂದ ಬೇಸತ್ತಿದ್ದರು. ವಿರೂಪಾಕ್ಷನನ್ನು ಸ್ವತಃ ಅವನ ಮಗನೇ ಕೊಂದನು. ಆದರೆ ರಾಜ್ಯದ ಹೊಣೆಯನ್ನು ತನ್ನ ಸೋದರನಾದ ಪ್ರೌಢರಾಯನಿಗೆ ಒಪ್ಪಿಸಿದನು. ಈತನೂ ಕೈಲಾಗದವನೇ. ಈ ಪರಿಸ್ಥಿತಿಯಲ್ಲಿ ಸಾಳುವ ನರಸಿಂಹನು ಸೈನ್ಯಸಮೇತ ರಾಜಧಾನಿಗೆ ಬಂದು ರಾಜನನ್ನು ಹೊರದೂಡಿ ಸ್ವತಃ ರಾಜ್ಯಭಾರ ಮಾಡಲಾರಂಭಿಸಿದನು (೧೪೮೫). ಅಂದಿಗೆ ವಿಜಯನಗರ ಸಾಮ್ರಾಜ್ಯದ ಮೊದಲ ವಂಶ ಸಂಗಮ ಮನೆತನ ತೆರೆಮರೆಗೆ ಸೇರಿತು. ಸಾಳುವವಂಶ ಸಾಮ್ರಾಜ್ಯ ರಂಗಸ್ಥಲವನ್ನು ಪ್ರವೇಶಿಸಿತು.

**ಸಾಳುವ ನರಸಿಂಹ** : ಸಾಳುವರು ಹಿಂದಿನಿಂದ ಖ್ಯಾತ ನಾಯಕರು. ಇವರಲ್ಲಿ ಮಂಗು ಎಂಬಾತನು ಹಿಂದೆ ಬುಕ್ಕ (I)ನ ಕಾಲದಲ್ಲಿ ಕಂಪಣನ ದಕ್ಷಿಣದ ದಂಡಯಾತ್ರೆಯಲ್ಲಿ ಪಾಲ್ಗೊಂಡಿದ್ದನು. ಇದಕ್ಕೂ ಹಿಂದೆ ಸಾಳುವ ತಿಕ್ಕ ಸೇಉಣ ರಾಮಚಂದ್ರನ ಸೇನಾನಿಯಾಗಿದ್ದ. ಇವರ ನಡುವಣ ಸಂಬಂಧಗಳು ತಿಳಿಯದಾದರೂ, ಇವರೆಲ್ಲ ಸಾಳುವ ವಂಶಸ್ಥರೇ. ನರಸಿಂಹನ ತಂದೆ ಸಾಳುವ ಗುಂಡ. ನರಸಿಂಹನು ಮಲ್ಲಿಕಾರ್ಜುನನ ಆಳಿಕೆಯ ಕಾಲದಲ್ಲಿ ಚಂದ್ರಗಿರಿಯ ಮಹಾಮಂಡಲೇಶ್ವರನಾಗಿದ್ದನು. ಗಜಪತಿ ವಿಜಯ

ನಗರದ ಮೇಲೆ ದಾಳಿಟ್ಟು ದಕ್ಷಿಣದ ಕಾಂಚಿವರೆಗೆ ಹೋದಾಗ ಅವನನ್ನು ಓಡಿಸಿದವನೀತನು. ಈ ಸಮಯದಲ್ಲಿ ಉದಯಗಿರಿಯನ್ನೂ ವಶಪಡಿಸಿಕೊಂಡನು. ಅಷ್ಟರಲ್ಲಿ ಮಧುರೆಯಲ್ಲಿ ತಲೆಯೆತ್ತಿದ ಆಂತರಿಕ ದಂಗೆಯನ್ನಡಗಿಸಲು ಹಿಂದಿರುಗಿದನು. ನಂತರ ಬಹಮನಿ ಸುಲ್ತಾನನನ್ನು ಸೋಲಿಸಿ, ಮಚಲೀಪಟ್ಟಣದ ಬಂದರನ್ನೂ ಕೊಂಡವೀಡು ದುರ್ಗವನ್ನೂ ಸ್ವಾಧೀನಮಾಡಿಕೊಂಡನು.

ಹೀಗೆ ಸಾಮ್ರಾಜ್ಯಕ್ಕೆ ನಿಷ್ಠಾವಂತನಾಗಿ ಅಪರಿಮಿತವಾದ ಸೇವೆಯನ್ನು ಸಲ್ಲಿಸಿದ ನರಸಿಂಹನು ಪ್ರೌಢದೇವರಾಯನ ಅಶಕ್ತತೆಯನ್ನು ಲಕ್ಷಿಸಿ, ಕುಸಿಯುತ್ತಿದ್ದ ರಾಜ್ಯವನ್ನು ನಿಲ್ಲಿಸಲೆಂದು ಗತ್ಯಂತರವಿಲ್ಲದೆ ಸೈನ್ಯಸಮೇತ ರಾಜಧಾನಿಗೆ ಬಂದು ರಾಜ್ಯವನ್ನು ಅವನಿಂದ ಕಸಿದನು (೧೪೮೫). ಇದೊಂದು ರಾಜ್ಯಕ್ರಾಂತಿ ಎನಿಸಿದರೂ ರಾಜ್ಯದ ಹಿತದೃಷ್ಟಿಯಿಂದ ಸಮರ್ಥನೀಯ.

ರಾಜ್ಯಸೂತ್ರಗಳನ್ನು ವಹಿಸಿಕೊಂಡ ನರಸಿಂಹನಿಗೆ ತಾನು ಸಾಧಿಸಬೇಕಾದುದನ್ನು ಸಾಧಿಸಲಾಗಲಿಲ್ಲ. ಕೇವಲ ೬ ವರ್ಷಗಳ ಕಾಲ ಆಳಿದ ಈತನು ಈ ವೇಳೆಗೆ ರಾಜ್ಯದಲ್ಲಿ ಅರಸನ ಅದಕ್ಷತೆಯ ಫಲವಾಗಿ ಕಾಣಿಸಿಕೊಂಡ ದಂಗೆಗಳನ್ನು ಅಡಗಿಸುವುದರಲ್ಲಿಯೇ ಬಹಳ ವೇಳೆಯನ್ನು ಕಳೆದನು. ದಕ್ಷಿಣ ಮೈಸೂರಿನ ಉಮ್ಮತ್ತೂರಿನ ಪಾಳೆಯಗಾರರು ಹೀಗೆ ದಂಗೆಯೆದ್ದವರಲ್ಲಿ ಪ್ರಮುಖರು. ಈತನು ಹೀಗೆ ಅನ್ಯಕಾರ್ಯನಿರತನಾಗಿದ್ದಾಗ ಉತ್ತರದಲ್ಲಿ ಕಪಿಲೇಂದ್ರನ ಮಗನಾದ ಪುರುಷೋತ್ತಮನು ಆಂಧ್ರದ ತೀರ ಪ್ರದೇಶಗಳನ್ನು ಗೆದ್ದು, ಉದಯಗಿರಿಯನ್ನು ಮುತ್ತಿ ವಶಪಡಿಸಿಕೊಂಡನು. ಇದು ನರಸಿಂಹನನ್ನು ಘಾಸಿಗೊಳಿಸಿತು. ಅದನ್ನು ಪುನಃ ಪಡೆಯಲು ಯತ್ನಿಸುತ್ತಿದ್ದಾಗಲೇ ನರಸಿಂಹನು ಗತಿಸಿದನು.

ನರಸಿಂಹನು ತನ್ನ ಮಂತ್ರಿಯಾಗಿ, ಸರ್ವಾಧಿಕಾರಿಯಾಗಿ ತುಳುವ ಮನೆತನದ ನರಸನಾಯಕನನ್ನು ನೇಮಿಸಿದ್ದನು. ಅವನು ಜೀವಿಸಿದ್ದಾಗಲೇ ಆಡಳಿತ ಸೂತ್ರಗಳನ್ನು ಹಿಡಿದಿದ್ದ ಈತನು, ನಂತರ ಅವನ ಇಬ್ಬರು ಅಪ್ರಾಪ್ತವಯಸ್ಕರಾದ ಮಕ್ಕಳ ಪೋಷಕಪ್ರತಿನಿಧಿಯಾಗಿ ರಾಜ್ಯವಾಳತೊಡಗಿದನು. ಇಬ್ಬರು ಮಕ್ಕಳಲ್ಲಿ ಹಿರಿಯನಾದ ತಿಮ್ಮನು ಕೊಲೆಗೀಡಾದನು. ಕಿರಿಯನಾದ ಇಮ್ಮಡಿ ನರಸಿಂಹನು ಸಾಂಪ್ರದಾಯಿಕವಾಗಿ ಸಿಂಹಾಸನಾರೂಢನಾದನು. ಆದರೆ ಈತನು ನರಸನಾಯಕನನ್ನು ವಿರೋಧಿಸಿದ ಕಾರಣ ಇವನನ್ನು ಪೆನುಗೊಂಡೆಯಲ್ಲಿ ಬಂಧನದಲ್ಲಿಟ್ಟು ಇವನ ಹೆಸರಿನಲ್ಲಿ ನರಸನಾಯಕನೇ ಅಧಿಕಾರವಹಿಸಿದನು.

ದಕ್ಷಿಣದಲ್ಲಿ ಉಮ್ಮತ್ತೂರಿನ ಪಾಳೆಯಗಾರರ ವಿರುದ್ಧ ಇನ್ನೊಮ್ಮೆ ದಂಡೆತ್ತಿ ನರಸನಾಯಕನು ಶ್ರೀರಂಗಪಟ್ಟಣದ ಕೋಟೆಯನ್ನು ಆಕ್ರಮಿಸಿದನು. ಬಹಮನಿಯ ಸುಲ್ತಾನರಲ್ಲಿ ಕಂಡುಬಂದ ವೈಮನಸ್ಯಗಳ ಲಾಭ ಪಡೆದು ರಾಯಚೂರ್ ಮುದಗಲ್ ಪ್ರಾಂತಗಳನ್ನು ಆಕ್ರಮಿಸಿದನು. ಗಜಪತಿ ಪ್ರತಾಪರುದ್ರನನ್ನು ಹಿಮ್ಮೆಟ್ಟಿಸಿದನು. ಕ್ರಿ.ಶ. ೧೫೦೩ ರಲ್ಲಿ ನರಸನಾಯಕನು ಸತ್ತನು. ಈತನ ಮಗ ವೀರನರಸಿಂಹನು ತಂದೆಯ ಸ್ಥಾನ ಪದವಿಗಳನ್ನು ವಹಿಸಿಕೊಂಡನು. ಸಾಳುವ ಇಮ್ಮಡಿ ನರಸಿಂಹನನ್ನು ಉಪೇಕ್ಷಿಸಿ,

ಸ್ವತಃ ಅಧಿಕಾರವನ್ನು ಚಲಾಯಿಸಿದನು. ಕೊನೆಗೆ ಕ್ರಿ.ಶ. ೧೪೮೫ರ ವೇಳೆಗೆ ಸಾಳುವ ನರಸಿಂಹನು ಸಂದೇಹಾಸ್ಪದ ರೀತಿಯಲ್ಲಿ ಸತ್ತಾಗ ತಾನೇ ಸಿಂಹಾಸನವನ್ನೇರಿದನು.

ಇದು ವಿಜಯನಗರದ ಸಾಮ್ರಾಜ್ಯದಲ್ಲಾದ ದ್ವಿತೀಯ ರಾಜ್ಯಕ್ರಾಂತಿ. ಮೊದಲನೆಯದು ಸಮರ್ಥನೀಯವೆಂದೆವು. ನರಸನಾಯಕನು ನರಸಿಂಹನಂತೆಯೇ ದಕ್ಷನಾಗಿದ್ದು ರಾಜ್ಯವನ್ನು ಪರಕೀಯರಿಂದಲೂ ಆಂತರಿಕ ಶತ್ರುಗಳಿಂದಲೂ ರಕ್ಷಿಸಿದನೆಂಬುದು ನಿಜ. ಆದರೆ ಸಾಳುವ ನರಸಿಂಹನು ಎದುರಿಸಿದಂತಹ ಗತ್ಯಂತರ ಪರಿಸ್ಥಿತಿ ಇವನದಾಗಿರಲಿಲ್ಲ. ಸರ್ವಾಧಿಕಾರಿಯಾದರೂ ಹಕ್ಕುದಾರಿಕೆಯನ್ನು ಹೊಂದಿದ್ದ ಇಮ್ಮಡಿ ನರಸಿಂಹನನ್ನು ಉಪೇಕ್ಷಿಸಿದ್ದು ಈತನ ತಪ್ಪು. ನರಸನಾಯಕನ ಅಲ್ಪಕಾಲದ ಆಳಿಕೆ ರಾಜ್ಯಕ್ಕೆ ಒಳಿತನ್ನುಂಟುಮಾಡಿತೆಂಬುದು ನಿಜ. ನರಸನಾಯಕನು ಈ ಮಾರ್ಗವನ್ನನುಸರಿಸದಿದ್ದಲ್ಲಿ ಇತಿಹಾಸದಲ್ಲಿ ನಂತರ ಬಂದ ಮಹಾನ್ ವ್ಯಕ್ತಿ ಕೃಷ್ಣದೇವರಾಯ ಇರುತ್ತಲೇ ಇರಲಿಲ್ಲವೇನೋ ಎಂಬುದೂ ಸರಿಯೇ. ಆದರೂ ಈತ ಹಿಡಿದ ಮಾರ್ಗ ಸಮರ್ಥನೀಯವಲ್ಲ. ಇದು ನಂತರದವರಿಗೆ ಕೆಟ್ಟ ಮಾದರಿ ಆಯಿತು.

ತುಳುವ ವಂಶ ವಿಜಯನಗರದ ಸಾಮ್ರಾಜ್ಯದಲ್ಲಿ ಮೂರನೆಯ ವಂಶ. ಯದುಕುಲ ಸಂಭೂತರೆಂದು ಇವರು ಹೇಳಿಕೊಂಡಿದ್ದಾರೆ. ಈ ವಂಶದ ಮೊದಲಿಗರನ್ನು ಕುರಿತು ಏನೂ ತಿಳಿಯದು. ಮೊದಲು ಕಾಣಿಸಿಕೊಳ್ಳುವವನು ಈಶ್ವರನಾಯಕ. ಸಾಳುವ ನರಸಿಂಹ ಚಂದ್ರಗುತ್ತಿಯಲ್ಲಿದ್ದಾಗ ಅವನ ಸಹಾಯಕನಾಗಿದ್ದ ಈತನು ದಕ್ಷ ಸೇನಾನಿಯಾಗಿದ್ದನು. ಈತನ ಮಗ ನರಸನಾಯಕ, ಮೊಮ್ಮಗ ಕೃಷ್ಣದೇವರಾಯ. ವೀರನರಸಿಂಹನು ಕೃಷ್ಣದೇವರಾಯನಿಗೆ ಅಣ್ಣ, ಅಚ್ಯುತರಾಯನಿಗೆ ತಮ್ಮ.

ತುಳುವ ಕೃಷ್ಣದೇವರಾಯ: ಕ್ರಿ.ಶ. ೧೫೦೯ನೆಯ ವರ್ಷದ ಕೃಷ್ಣಜನ್ಮಾಷ್ಟಮಿಯಂದು ಕೃಷ್ಣದೇವರಾಯನು ವಿಜಯನಗರ ಸಿಂಹಾಸನಾರೂಢನಾದನು. ನವತಾರುಣ್ಯದಲ್ಲಿದ್ದ ಈ ಅರಸನನ್ನು ಕಣ್ಣಾರೆ ಕಂಡವರಲ್ಲಿ ಒಬ್ಬನಾದ ಪೋರ್ಚುಗೀಸ್ ರಾಯಭಾರಿ ಹೀಗೆ ಬರೆದಿದ್ದಾನೆ: "ಸಾಧಾರಣ ಎತ್ತರದ, ಸೌಮ್ಯವರ್ಣದ, ಅಷ್ಟೇನೂ ನೀಳಾಂಗನಾಗಲಿ ಭಾರಾಂಗನಾಗಲಿ ಆಗಿರದೆ, ಗೌರಾಂಗನಾದ ಸುಂದರನಾಗಿದ್ದನು. ಮುಖದ ಮೇಲೆ ಸಿಡುಬಿನ ಕಲೆಗಳಿದ್ದುವು. ಅರಿಭಯಂಕರನೂ ಪರಮ ಶ್ರೇಷ್ಠ ಸಾರ್ವಭೌಮನೂ ನಯನಮನೋಹರ ಮಂದಸ್ಮಿತ ಸುಂದರವದನನೂ ಆಗಿದ್ದನು. ವಿದೇಶೀಯರನ್ನು ವಿಶ್ವಾಸದಿಂದ ಬರಮಾಡಿಕೊಂಡು ಆದರದ ಆತಿಥ್ಯ ನೀಡಿ ಸತ್ಕರಿಸಿ ಅವರ ಯೋಗಕ್ಷೇಮವನ್ನು ವಿಚಾರಿಸುವ ಸೌಜನ್ಯಮೂರ್ತಿಯಾಗಿದ್ದನು. ಆಡಳಿತ ನಿಪುಣನೂ ನ್ಯಾಯ ದುರಂಧರನೂ ಆಗಿದ್ದನು. ನಿರಂತರ ಅಂಗಸಾಧನೆ, ಕುದುರೆಸವಾರಿ, ಕತ್ತಿವರಸೆ ಮೊದಲಾದ ಸಾಧನೆಗಳಿಂದ ದೃಢಾಂಗನೆನ್ನಿಸಿದ್ದನು."

ಇವನು ಅಧಿಕಾರ ವಹಿಸಿಕೊಂಡಾಗ ರಾಜ್ಯದ ಆರ್ಥಿಕಪರಿಸ್ಥಿತಿ ಹದಗೆಟ್ಟಿತ್ತು. ಅದಕ್ಷತೆಯ ಫಲವಾಗಿ ಆಡಳಿತ ಸಡಿಲಗೊಂಡು, ಅಧಿಕಾರಿಗಳು ದರ್ಪಿಷ್ಠರಾಗಿ, ಪ್ರಜೆಗಳಿಗೆ ಅವರು ಕಂಟಕರಾಗಿ ವರ್ತಿಸುತ್ತಿದ್ದರು. ವಿಪರೀತ ತೆರಿಗೆಗಳನ್ನು ಹೇರಲಾಗಿತ್ತು. ಆದರೆ

ಅವಕ್ಕೆ ತಕ್ಕಂತೆ ಜೀವನ ಸೌಲಭ್ಯಗಳಿರಲಿಲ್ಲ. ಹೀಗಾಗಿ ಪ್ರಜಾಬೆಂಬಲವಿಲ್ಲದೆ ತನ್ನ ಯಾವ ಕಾರ್ಯವೂ ಸಫಲಗೊಳ್ಳುವುದಿಲ್ಲವೆಂಬುದನ್ನು ಅರಿತು ಕೃಷ್ಣದೇವರಾಯನು ಅವರ ಹಿತಕ್ಕಾಗಿ ಕೆಲವು ಕಾರ್ಯಕ್ರಮಗಳನ್ನು ಕೈಗೊಂಡನು. ಅದರಲ್ಲಿ ಮುಖ್ಯವಾದ್ದು ಮದುವೆಯ ಸುಂಕವನ್ನು ರದ್ದುಗೊಳಿಸಿದ್ದು. ಇದರ ಜೊತೆಗೆ ಅಲ್ಲಲ್ಲಿ ಇನ್ನು ಕೆಲವು ಸುಂಕಗಳನ್ನೂ ತೆರಿಗೆಗಳನ್ನೂ ರದ್ದು ಮಾಡಿದನು. ಇದರಿಂದ ಪ್ರಜೆಗಳು ಚೇತರಿಸಿಕೊಂಡು ಹೊಸ ದೊರೆಯನ್ನು ಹರಸಿದರು. ರಾಜ್ಯದ ಆರ್ಥಿಕಾಭಿವೃದ್ಧಿಗಾಗಿ ನೀರಾವರಿ ಸೌಲಭ್ಯಗಳನ್ನೊದಗಿಸಿದ್ದಲ್ಲದೆ ಕಾಡುಮೇಡುಗಳನ್ನು ಸಂಸ್ಕರಿಸಿ ಅಲ್ಲಿ ಬೇಸಾಯ ಕಾರ್ಯವನ್ನಾರಂಭಿಸುವಂತೆ ಮಾಡಿದನು. ಕರ್ತವ್ಯಭ್ರಷ್ಟರಾಗಿದ್ದ ಸಾಮಂತರಿಗೆ ಸೂಕ್ತ ಎಚ್ಚರಿಕೆಯನ್ನು ನೀಡಿ ಅವರು ನಿಗದಿಯಾದ ಸಂಖ್ಯೆಯಲ್ಲಿ ಕೇಂದ್ರಸೈನ್ಯಕ್ಕೆ ಸೈನಿಕರನ್ನು ತುಂಬಿಕೊಡುವಂತೆ ಮಾಡಿದನು. ದಂಡನೀತಿಯ ಮೂಲಕ ಸಾಮಂತರೂ ಪ್ರಾಂತಾಧಿಕಾರಿಗಳೂ ವಿಧೇಯರಾಗಿ ನಡೆಯುವಂತೆ ಮಾಡಿದನು. ಹೀಗೆ ದೊರೆತ ಸೈನ್ಯದ ನೆರವಿನಿಂದ ಸ್ವಸೈನ್ಯವನ್ನು ವರ್ಧಿಸಿ, ವಿಶಿಷ್ಟ ತರಬೇತಿ ನೀಡಿ ಅದನ್ನು ಸಜ್ಜುಗೊಳಿಸಿದನು.

ಇವುಗಳಿಂದ ಅರಸನು ಅಜೇಯನೂ ಸಮೃದ್ಧನೂ ಆದನು. ರಾಜ್ಯದಲ್ಲಿ ಅಲ್ಲಲ್ಲಿ ದಂಗೆಕೋರ ಸಾಮಂತರಿದ್ದರು. ಉಮ್ಮತ್ತೂರಿನ ಪಾಳೆಯಗಾರರು ಅವರಲ್ಲಿ ಪ್ರಮುಖರು. ಸಾಳುವ ನರಸಿಂಹನ ಕಾಲದಿಂದಲೂ ಅವರು ಕಾವೇರಿಯ ತೀರದ ಪ್ರದೇಶಗಳಲ್ಲಿ ಸ್ವತಂತ್ರರಾಗಿ ಆಳತೊಡಗಿ, ವಿಜಯನಗರದ ಅರಸನನ್ನೂ ಕಡೆಗಣಿಸಿದ್ದರು. ಕೃಷ್ಣದೇವರಾಯನ ಸಮಕಾಲೀನನಾದ ನಂಜರಾಯನು[೨೭] ಪೆನುಗೊಂಡೆಯವರೆಗೆ ದಂಡೆತ್ತಿ ಆ ಕೋಟೆಯನ್ನು ಆಕ್ರಮಿಸಿದ್ದನು. ಅರಸನು ಅವನನ್ನು ಅಣೆದು ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರಗಳನ್ನು ವಶಪಡಿಸಿಕೊಂಡನು; ಪ್ರಾಂತಾಧಿಕಾರಿಯಾಗಿ ಕೆಂಪೇಗೌಡನನ್ನು ನೇಮಿಸಿದನು.

ನರಸನಾಯಕನು ಸರ್ವಾಧಿಕಾರಿಯಾಗಿದ್ದ ಸಮಯದಲ್ಲಿಯೇ ದಕ್ಷಿಣ ಭಾರತದ ಪಶ್ಚಿಮಕರಾವಳಿಗೆ ಪೋರ್ಚುಗೀಸರು ಕಾಲಿಟ್ಟರು. ಮೊದಲು ಬಂದ ವಾಸ್ಕೋಡಗಾಮ ಕ್ರಿ.ಶ. ೧೪೯೮ರಲ್ಲಿ ಕಾಲಿಕಟ್ ರೇವಿಗೆ ಬಂದು ಅಲ್ಲಿ ವಾಣಿಜ್ಯ ವ್ಯವಹಾರಗಳನ್ನು ಆರಂಭಿಸಿದನು. ತಡೆಯನ್ನೆದುರಿಸಿ ಕ್ರಿ.ಶ. ೧೫೦೩ರಲ್ಲಿ ಕಾರ್ಯಾಲಯವೊಂದನ್ನು ಸ್ಥಾಪಿಸಿದನು. ನಂತರ ಬಂದ ಆಲ್ಮೀಡಾ ಭಟ್ಕಳದಲ್ಲಿ ಒಂದು ಕೋಠಿಯನ್ನು ಕಟ್ಟಿಕೊಳ್ಳಲು ಅರಸನ ಅಪ್ಪಣೆಯನ್ನು ಬೇಡಿದನು (೧೫೦೫). ಪೋರ್ಚುಗೀಸರಿಗೆ ವ್ಯಾಪಾರದಲ್ಲಿ ಮುಹಮ್ಮದೀಯರು ಪ್ರತಿಸ್ಪರ್ಧಿಗಳಾಗಿದ್ದರು. ಮುಹಮ್ಮದೀಯರ ಸೈನ್ಯಬಲ ಬಹಳ ಮಟ್ಟಿಗೆ ಅವರ ಅಶ್ವಪಡೆಯನ್ನವಲಂಬಿಸಿತ್ತು. ಆದ್ದರಿಂದ ಅವರು ಹೊರಗಿನಿಂದ ಅಶ್ವಗಳನ್ನು ತರಿಸಿಕೊಳ್ಳಲು ಸುಲಭವೂ ಸುಗಮವೂ ಆಗಲೆಂದು ತೀರಪ್ರದೇಶದ ಗೋವೆಯನ್ನು ವಿಜಯನಗರದ ಅರಸರಿಂದ ಕಸಿದಿದ್ದರು. ಸರ್ವವಿಧದಲ್ಲಿಯೂ ಅನುಕೂಲವಾಗಿದ್ದ ಈ ರೇವುಪಟ್ಟಣದ ಮೇಲೆ ಹಿಡಿತ ಪೋರ್ಚುಗೀಸರಿಗೂ ಅಷ್ಟೇ ಆವಶ್ಯಕವಾಗಿತ್ತು. ಆದ್ದರಿಂದ ವಿಜಯನಗರದ ಅರಸರಿಗೆ ಕುದುರೆಗಳನ್ನು ಸರಬರಾಜು ಮಾಡುವ

ಒಪ್ಪಂದದ ಆಧಾರದ ಮೇಲೆ ಗೋವೆಯನ್ನು ಮುಹಮ್ಮದೀಯರಿಂದ ಕಸಿಯಲು ತನಗೆ ನೆರವು ನೀಡಬೇಕೆಂದು ಆಲ್ಬುಕರ್ಕನು ಕೃಷ್ಣರಾಯನನ್ನು ಕೇಳಿದನು. ರಾಯನು ಈ ಸಂದರ್ಭದಲ್ಲಿ ಏನನ್ನೂ ಹೇಳಲಾಗದೆ ಮೌನತಾಳಿದನು. ಪೋರ್ಚುಗೀಸರು ಗೋವೆಯನ್ನು ಬಲಾತ್ಕಾರದಿಂದ ಕಸಿದುಕೊಂಡಾಗ ಅವರನ್ನು ಅಭಿನಂದಿಸುವುದು ಹೊರತು ಮತ್ತಾವ ರೀತಿಯ ಉತ್ಸಾಹವನ್ನೂ ಅರಸನು ತೋರಿಸಲಿಲ್ಲ: ಇದರಿಂದ ಬಿಜಾಪುರದ ಆದಿಲ್‌ಷಹನನ್ನು ಕೆಣಕಿದಂತಾಗುತ್ತದೆ ಎಂಬುದು ರಾಯನ ಯೋಚನೆ. ಇಷ್ಟರಲ್ಲಿ ಆದಿಲ್‌ಷಹ ಗೋವೆಯನ್ನು ಹಿಂದಕ್ಕೆ ಪಡೆಯಲು ಯತ್ನಿಸಿ, ಕೊನೆಗೆ ವಿಫಲನಾದನು. ಎರಡನೆಯ ಬಾರಿಗೆ ಗೋವೆ ಪೋರ್ಚುಗೀಸರ ಕೈ ಸೇರಿತು. ಮೊದಲಿನಿಂದಲೂ ಗೋವೆ ವಿಜಯನಗರಕ್ಕೆ ಸೇರಿತ್ತು. ಸಂಗಮರ ಆಳಿಕೆಯ ಅಂತಿಮವರ್ಷಗಳಲ್ಲಿ ಮುಹಮ್ಮದೀಯರ ಪಾಲಾದ ಈ ಬಂದರನ್ನು ಪುನಃ ಪಡೆಯಲು ರಾಯನು ಹವಣಿಸಿದನು. ಆದರೆ ಇತ್ತ ಪೋರ್ಚುಗೀಸರ ಸಖ್ಯ ಆವಶ್ಯಕವಾಗಿದ್ದ ಕಾರಣ ಅಸಹಾಯಕನಾಗಿ ತನ್ನ ಆಸೆಯನ್ನು ಅದುಮಿಕೊಳ್ಳಬೇಕಾಯಿತು. ಈಗ ಮುಂದಿನ ಹೆಜ್ಜೆಯಿಡಬಹುದೆಂದು ಬಗೆದು ಪೋರ್ಚುಗೀಸರು ಭಟ್ಕಳದಲ್ಲಿ ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿಯನ್ನು ನೀಡಿದನು. ವಾರ್ಷಿಕವಾಗಿ ೩೦೦೦ ಕ್ರೂಜಾಡೋ ನಾಣ್ಯಗಳನ್ನು ಅರಸನು ಪೋರ್ಚುಗೀಸರಿಗೆ ಕೊಡಬೇಕು. ಅವರು ಆತನಿಗೆ ಆವಶ್ಯವಾದ ಕುದುರೆಗಳನ್ನು ಪೂರಯಿಸಿಕೊಡುವುದಲ್ಲದೆ, ಆತನ ಶತ್ರುಗಳಾದ ಮಹಮ್ಮದೀಯರಿಗೆ ಕೊಡಬಾರದು ಮುಂತಾದ ಒಡಂಬಡಿಕೆಯ ಮಾತು ನಡೆಯಿತು (೧೫೧೪).

ಬಹಮನಿಯ ಸುಲ್ತಾನನಾದ ಇಮ್ಮಡಿ ಮಹಮೂದನು ತನ್ನ ರಾಜ್ಯ ಛಿದ್ರವಾಗುತ್ತಿರುವುದನ್ನು ಅಸಹಾಯಕತೆಯಿಂದ ನೋಡುತ್ತಿರಬೇಕಾಯಿತು. ಈ ವೇಳೆಗೆ ರಾಜ್ಯದಲ್ಲಿ ಹೊರಗಿನಿಂದ ಬಂದವರು ಮತ್ತು ದಖನ್ ಮುಸ್ಲಿಮರು ಎಂಬ ಭೇದಗಳೇರ್ಪಟ್ಟು ಅದರ ಪರಿಣಾಮವಾಗಿ ಅನೈಕ್ಯ ಉಂಟಾಗಿತ್ತು. ಐದು ಜನ ಸುಲ್ತಾನರ ಪ್ರಧಾನರಾಗಿದ್ದವರು ಐದು ಬೇರೆ ಬೇರೆ ರಾಜ್ಯಗಳನ್ನು ಸ್ವತಂತ್ರವಾಗಿ ಆಳುವ ಹವಣಿಕೆಯಲ್ಲಿದ್ದರು. ಅವರನ್ನು ಒಟ್ಟುಗೂಡಿಸುವುದು ಸುಲಭವಾಗಿರಲಿಲ್ಲ. ಆದ್ದರಿಂದ ಮಹಮೂದನು ಹಿಂದೂಗಳ ವಿರುದ್ಧ ಪವಿತ್ರ ಯುದ್ಧ (ಜಿಹಾದ್)ವನ್ನು ಆರಂಭಿಸಬೇಕೆಂಬ ಕರೆಯನ್ನು ನೀಡಿದನು. ಬಿಜಾಪುರದ ಯುಸಫ್ ಆದಿಲ್‌ಖಾನನು ಇವನನ್ನು ಕೂಡಿಕೊಂಡನು. ಎರಡು ಬಾರಿ ಕದನಗಳುಂಟಾದುವು. ಕೋವಲಕೊಂಡ ಕದನದಲ್ಲಿ ರಾಯನು ಇವರ ಸೈನ್ಯವನ್ನು ಸೋಲಿಸಿದ್ದಲ್ಲದೆ ಬಿಜಾಪುರದ ಸುಲ್ತಾನನನ್ನು ಕೊಂದನು.

ಬಿಜಾಪುರದ ಸುಲ್ತಾನನ ವಶವಾಗಿದ್ದ ರಾಯಚೂರು ಮುದುಗಲ್ ಕೋಟೆಗಳ ಆಕ್ರಮಣ ಕೃಷ್ಣರಾಯನ ಮಹದಾಶಯಗಳಲ್ಲಿ ಸೇರಿತ್ತು. ೧೫೨೦ರಲ್ಲಿ ಬಿಜಾಪುರದ ಆದಿಲ್‌ಷಹನನ್ನು ಸೋಲಿಸಿ ರಾಯಚೂರನ್ನು ವಶಪಡಿಸಿಕೊಂಡನು. ಆ ಕೋಟೆ ಅಭೇದ್ಯವಾದುದಾಗಿದ್ದು ಅದಕ್ಕಾಗಿ ಪೋರ್ಚುಗೀಸರ ಬಂದೂಕುದಳದ ನೆರವನ್ನು ಅರಸನು ಪಡೆದನು. ಮೂರನೆಯ ಬಾರಿ ಬಿಜಾಪುರದ ಸುಲ್ತಾನನನ್ನು ಕ್ರಿ.ಶ. ೧೫೨೩ರಲ್ಲಿ ಸಾಗರ

(ಗುಲ್ಬರ್ಗ ಸಮೀಪ)ದ ರಣರಂಗದಲ್ಲಿ ಎದುರಿಸಿ ಓಡಿಸಿದನು. ಅಲ್ಲಿಂದ ರಾಯನ ಸೈನ್ಯ ಕಲುಬುರ್ಗಿಗೆ ತೆರಳಿ ಅಲ್ಲಿ ಬಂಧನದಲ್ಲಿದ್ದ ಇಮ್ಮಡಿ ಮಹಮೂದನ ಮೂವರು ಮಕ್ಕಳನ್ನು ಮುಕ್ತಗೊಳಿಸಿತು. ಹಿರಿಯನನ್ನು ಗುಲ್ಬರ್ಗದಲ್ಲಿ ಸ್ಥಾಪಿಸಿ, ಇನ್ನಿರ್ವರನ್ನು ತನ್ನೊಡನೆ ರಾಜಧಾನಿಗೆ ಕರೆದೊಯ್ದು ಅವರನ್ನು ಗೌರವಪೂರ್ವಕವಾಗಿ ಕಂಡನು. ಈ ವಿಜಯದ ಸಂಕೇತವೆಂದು ಯವನರಾಜ್ಯ ಸ್ಥಾಪನಾಚಾರ್ಯನೆಂಬ ಬಿರುದನ್ನು ಸಹ ಧರಿಸಿದನು (೧೫೨೦).

ಗಜಪತಿಯ ವಿರುದ್ಧ ಕಲಿಂಗ ಯಾತ್ರೆಯನ್ನು ಕೃಷ್ಣದೇವರಾಯ ಕೈಗೊಂಡುದು ಸಾಮ್ರಾಜ್ಯದ ವಿಸ್ತರಣೆಯ ಉದ್ದೇಶಕ್ಕಿಂತಲೂ ಹೆಚ್ಚಾಗಿ ಹಿಂದೂಗಳೇ ಆದ ಅವರು ಸ್ವಾರ್ಥಪರರಾಗಿ, ಮಹಮ್ಮದೀಯರ ಕುತಂತ್ರದ ಕೈಗೊಂಬೆಗಳಾಗಿ, ನಾಡಿನ, ಸಂಸ್ಕೃತಿಯ ವಿನಾಶಕ್ಕೆ ಕಾರಣರಾಗುತ್ತಿದ್ದುದನ್ನು ತಡೆಗಟ್ಟಬೇಕು ಎಂದು. ಕಲಿಂಗವು ದುರ್ಭೇದ್ಯವಾದ ಕೋಟೆ ಕೊತ್ತಲಗಳಿಂದಲೂ ಕಠಿಣ ಮಾರ್ಗಗಳಿಂದಲೂ ಕೂಡಿದ್ದು ಗೆಲ್ಲಲು ಅಸಾಧ್ಯವೆನಿಸುತ್ತಿತ್ತು. ಅಲ್ಲದೆ ಗಜಪತಿ ಹಿಂದೊಮ್ಮೆ ವಿಜಯನಗರಕ್ಕೆ ಸೇರಿದ್ದ ಉದಯಗಿರಿ, ಕೊಂಡವೀಡು, ಕೊಂಡಪಲ್ಲಿ ಮುಂತಾದವುಗಳನ್ನು ವಶಮಾಡಿಕೊಂಡಿದ್ದ. ಈಗ ಅವುಗಳನ್ನೂ ರಾಜಮಹೇಂದ್ರಿ ಕಟಕ್ ಮುಂತಾದ ಕೋಟೆಗಳನ್ನೂ ರಾಯನು ಪುನಃ ವಶಪಡಿಸಿಕೊಂಡನು.

ಕಲಿಂಗದ ವಿಜಯವನ್ನು ಅರಸನು ೫ ಘಟ್ಟಗಳಲ್ಲಿ ಸಾಧಿಸಿದನು. ಕ್ರಿ.ಶ. ೧೫೧೩ರಲ್ಲಿ ಉದಯಗಿರಿ ಕೋಟೆಯನ್ನು ಮುತ್ತುವುದರೊಡನೆ ವಿಜಯಯಾತ್ರೆ ಆರಂಭವಾಯಿತು. ಗಜಪತಿಯು ಈ ಸೈನ್ಯವನ್ನು ಬೆನ್ನಟ್ಟಿ ಹಿಂದಿನಿಂದ ಆಕ್ರಮಿಸುವಂತೆ ತನ್ನ ಸೈನ್ಯವೊಂದನ್ನು ಕಳುಹಿಸಿದನಾದರೂ ರಾಯನ ಸೇನಾಬಲದ ಮುಂದೆ ಅದು ನಿಲ್ಲಲಾರದೆ ಹೋಯಿತು. ಮುತ್ತಿದ ಸೈನ್ಯವನ್ನು ಕೊಂಡವೀಡುವರೆಗೂ ಅಟ್ಟಲಾಯಿತು. ಉದಯಗಿರಿ ಕೋಟೆ ಸುಮಾರು ಒಂದು ವರ್ಷದ ದೀರ್ಘಮುತ್ತಿಗೆಯ ಬಳಿಕ ಸ್ವಾಧೀನವಾಯಿತು. ಗಜಪತಿಯ ಚಿಕ್ಕಪ್ಪನಾದ ತಿರುಮಲರಾಯನು ಸೆರೆಸಿಕ್ಕನು. ಉದಯಗಿರಿಯಲ್ಲಿದ್ದ ಬಾಲಕೃಷ್ಣನ ವಿಗ್ರಹವನ್ನು ಅರಸನು ರಾಜಧಾನಿಗೆ ಒಯ್ದು ಅದನ್ನು ಕೃಷ್ಣಸ್ವಾಮಿ ದೇವಾಲಯದಲ್ಲಿ ಪ್ರತಿಷ್ಠಾಪಿಸಿದನು.

ರಾಯನ ಸೈನ್ಯ ಸಾಳುವ ತಿಮ್ಮರಸನ ನೇತೃತ್ವದಲ್ಲಿ ಕೊಂಡವೀಡಿಗೆ ಧಾವಿಸಿತು. ಹಾದಿಯಲ್ಲಿ ಕಂದುಕೂರು, ಅದ್ದಂಕಿ, ವಿನುಕೊಂಡ, ಬೆಲ್ಲಂಕೊಂಡ, ನಾಗಾರ್ಜುನಿಕೊಂಡ, ಕೇತವರಂ ಮುಂತಾದ ಸಣ್ಣ ಕೋಟೆಗಳು ತಿಮ್ಮನ ವಶವಾದವು. ರಾಯನು ರಾಜಧಾನಿಗೆ ಹಿಂದಿರುಗಿ ಅಲ್ಲಿನ ಆಡಳಿತ ವಿಷಯಗಳತ್ತ ಗಮನಹರಿಸಿ ಕೊಂಡವೀಡಿಗೆ ಬಂದು ಸೇನೆಯ ನಾಯಕತ್ವವನ್ನು ಪುನಃ ವಹಿಸಿದನು. ಕೊಂಡವೀಡಿನ ಸಂರಕ್ಷಣೆಗೆ ಗಜಪತಿ ೫ ಲಕ್ಷ ಕಾಲಾಳು, ೨೦ ಸಹಸ್ರ ಕುದುರೆ, ೧೩೦೦ ಆನೆಗಳನ್ನು ಸಿದ್ಧಗೊಳಿಸಿದ್ದನು. ಬಿಜಾಪುರದ ಆದಿಲ್‌ಷಹ ಸಹ ಮಲ್ಲೂಖಾನ ಮತ್ತು ಉದ್ದಂಡಖಾನರೆಂಬ ಇಬ್ಬರು ಸೇನಾನಾಯಕರನ್ನು ಕಳುಹಿದ್ದನು. ಆದರೂ ವಿಜಯನಗರದ ಸೈನ್ಯ ಅಳುಕದೆ ಕಾದಿತು.

ಗಜಪತಿ ಓಡಿದನು. ಕೋಟೆಯನ್ನು ಎರಡು ತಿಂಗಳು ಮುತ್ತಿದನಂತರ, ಏಣಿಗಳನ್ನೇರಿ ಕೋಟೆಯನ್ನು ವಶಪಡಿಸಿಕೊಳ್ಳಲಾಯಿತು. ಇಲ್ಲಿಂದ ಮುಂದೆ ವಿಜಯವಾಡ, ಕೊಂಡ ಪಲ್ಲಿ, ಅನಂತಗಿರಿ, ನಲ್ಗೊಂಡ, ಖಮ್ಮಮೆಟ್ಟ ಕೋಟೆಗಳು ಸಹ ರಾಯನ ವಶವಾದವು (೧೫೧೭). ನಲ್ಗೊಂಡ ಓರಂಗಲ್ಲುಗಳಲ್ಲಿ ರಾಯನು ಪಿತಬ್ ಖಾನ್ ಎಂಬ ಸರದಾರ ನನ್ನು ಎದುರಿಸಬೇಕಾಯಿತು.

ಮುಂದಿನಗುರಿ ರಾಜಮಹೇಂದ್ರಿ. ಸಿಂಹಾಚಲಂ ರಾಯನ ವಶವಾಯಿತು. ಪೋತ್ನೂರು ಕೋಟೆಯನ್ನು ಸಾಧಿಸಿದ ನಂತರ ಅಲ್ಲಿ ಧ್ವಜಸ್ತಂಭವನ್ನೂ ನೆಟ್ಟನು. ಸಿಂಹಾಚಲದ ಸಿಂಹಾದ್ರಿನಾಥನನ್ನು ಅರ್ಚಿಸಿ, ಹೇರಳ ದಾನಗಳನ್ನಿತ್ತು, ಆಡಳಿತ ವ್ಯವಸ್ಥೆಗಳಿ ಗಾಗಿ ಮತ್ತೊಮ್ಮೆ ರಾಜಧಾನಿಗೆ ಹಿಂದಿರುಗಿದನು. ಗಜಪತಿ ರಾಜಧಾನಿಯಾದ ಕಟಕ್‌ನಲ್ಲಿ ಆಶ್ರಯ ಪಡೆದನು. ಕಟಕಪುರಿಯು ರಾಯನ ಪ್ರತಾಪಾಗ್ನಿಗೆ ಆಹುತಿಯಾಗಿ ದಗದಗನೆ ಸುಡಲಾರಂಭಿಸಿತು. "ಪ್ರತಾಪರುದ್ರನ ರುದ್ರಪ್ರತಾಪದ ಕೊಬ್ಬೆಲ್ಲ ಕರಗಿ ನೀರುನೀರಾ ಯಿತು !" ಗಜಪತಿಗೆ ಶರಣಾಗದೆ ಅನ್ಯಥಾಮಾರ್ಗವೇ ಇರಲಿಲ್ಲ. ೧೫೧೮ರಲ್ಲಿ ಮಾಡಿ ಕೊಳ್ಳಲಾದ ಒಪ್ಪಂದದ ಪ್ರಕಾರ ಜಗನ್ಮೋಹಿನಿ ಎಂಬ ತನ್ನ ಮಗಳನ್ನು ಗಜಪತಿಯು ರಾಯನಿಗೆ ಮದುವೆ ಮಾಡಿಕೊಟ್ಟನು. ರಾಯನು ತನ್ನ ಸೆರೆಯಲ್ಲಿದ್ದ ಗಜಪತಿಯ ಪತ್ನಿಯನ್ನೂ ತಾನು ಅದುವರೆಗೆ ಗೆದ್ದಿದ್ದ ಕೃಷ್ಣಾನದಿ ಉತ್ತರದಲ್ಲಿದ್ದ ಆತನ ರಾಜ್ಯ ವನ್ನೂ ಉದಾರ ಮನಸ್ಸಿನಿಂದಲೇ ಆತನಿಗೆ ಹಿಂತಿರುಗಿಸಿದನು. ಮೊದಲು ವೈರಿಗಳಾಗಿದ್ದ ವರು ಈಗ ಅಳಿಯಮಾವಂದಿರಾದರು.

ಹೀಗೆ ಕ್ರಿ.ಶ. ೧೫೧೩ರಿಂದ ೧೫೧೮ರ ವರೆಗೆ ಪೂರ್ವ ನಿಯೋಜಿತ ರೀತಿಯಲ್ಲಿ ಕೈಗೊಂಡ ಕೃಷ್ಣದೇವರಾಯನ ಕಲಿಂಗದ ದಂಡಯಾತ್ರೆ ಯಶಸ್ವಿಯಾಗಿ ಮುಗಿಯಿತು. ಈ ಸಮಯದಲ್ಲಿ ೨೪೦೦ ಕಿ. ಮೀ. ಪ್ರದೇಶ ಅವನ ಕೈಸೇರಿತು. ಗಜಪತಿಗೆ ಹಿಂದಿರುಗಿಸಿದ ಪ್ರದೇಶಗಳನ್ನು ಹೊರತುಪಡಿಸಿ, ವಿಜಯವಾಡವರೆಗಿನ ಪೂರ್ವತೀರ ಪ್ರದೇಶವೆಲ್ಲವೂ ರಾಯನ ಆಳಿಕೆಗೊಳಪಟ್ಟಿತು. ಅಲ್ಲಿ ಆಡಳಿತಕ್ಕಾಗಿ ಯೋಗ್ಯ ಅಧಿ ಕಾರಿಗಳು ನಿಯೋಜಿತರಾದರು. ಕೊಂಡವೀಡನ್ನು ಕಸಿಯಲು ಗೋವಳ ಕೊಂಡದ ಷಹನು ಮಾಡಿದ ಯತ್ನಗಳು ಫಲಿಸಲಿಲ್ಲ.

ಲಂಕಾದ್ವೀಪದಲ್ಲಿ ರಾಜ್ಯಕ್ರಾಂತಿ ತಲೆದೋರಿ ವಿಜಯಬಾಹು ಪದಚ್ಯುತನಾದನು. ಅವನ ಮಕ್ಕಳಲ್ಲಿ ಕಲಹಗಳೇರ್ಪಟ್ಟುವು. ಆಗ ಹಿರಿಯನಾದ ಭುವನೈಕಬಾಹುವಿನ ಪ್ರಾರ್ಥನೆಯನ್ನು ಮನ್ನಿಸಿ ಕೃಷ್ಣದೇವರಾಯನು ಸೇನೆಯೊಂದನ್ನು ಅಲ್ಲಿಗೆ ಕಳುಹಿ ಸಿದನು. ವಿರೋಧಿಗಳನ್ನು ದಮನಮಾಡಿ ಭುವನೈಕಬಾಹುವಿಗೆ ಪಟ್ಟಾಭಿಷೇಕ ಮಾಡಿ ಸಿದನು. ಅಲ್ಲಿ ಶಾಂತಿ ನೆಲೆಗೊಂಡಿತು (೧೫೨೨-೨೩). ಮರುವರ್ಷ ಪಶ್ಚಿಮತೀರದ ಗೋವೆಯನ್ನು ಅಸದ್ ಖಾನನು ಪೋರ್ಚುಗೀಸರಿಂದ ಕಸಿದುಕೊಂಡನು. ಈ ಬಾರಿ ಮಾತ್ರ ಪೋರ್ಚುಗೀಸರ ನೆರವಿಗೆ ಧಾವಿಸಿದ ಸಾಳುವ ತಿಮ್ಮರಸನು ಸೋಲನ್ನೆದುರಿಸಿ ಹಿಂದಿರುಗಬೇಕಾಯಿತು.

ಚೆನ್ನಾದೇವಿ, ತಿರುಮಲದೇವಿ ಮತ್ತು ಜಗನ್ಮೋಹಿನಿ ರಾಣಿಯರಲ್ಲಿ ಪ್ರಮುಖರು. ಇಬ್ಬರು ಹೆಣ್ಣುಮಕ್ಕಳ ಮತ್ತು ಇಬ್ಬರು ಗಂಡುಮಕ್ಕಳ ತಂದೆಯಾದ ಈತನು ಹಿರಿಯ ಮಗನಾದ ತಿರುಮಲರಾಯನನ್ನು ಆರು ವರ್ಷ ವಯಸ್ಸಾಗಿರುವಾಗಲೇ ಯುವರಾಜ ಪದವಿಗೇರಿಸಿದನು. ಆದರೆ ಒಂದು ವರ್ಷದೊಳಗಾಗಿಯೇ ಈತನು ವಿಷಪ್ರಾಶನಕ್ಕೊಳಗಾಗಿ ಮೃತನಾದನು. ತನ್ನ ನಚ್ಚಿನ ಪ್ರಧಾನಿಯಾಗಿದ್ದ ಸಾಳುವ ತಿಮ್ಮರಸನ ಮಗನಾದ ತಿಮ್ಮದಣ್ಣಾಯಕನು ಇದಕ್ಕಾಗಿ ಒಳಸಂಚು ಹೂಡಿದನೆಂಬ ಸಂದೇಹದ ಮೇಲೆ, ಪ್ರಧಾನಿಯನ್ನೂ ಆತನ ಇಬ್ಬರು ಮಕ್ಕಳನ್ನೂ ಸೆರೆಯಲ್ಲಿಟ್ಟನು. ಆದರೆ ತಿಮ್ಮಣ್ಣನು ತಪ್ಪಿಸಿಕೊಂಡು ದಂಗೆಯೆದ್ದಾಗ ಅವನನ್ನು ಪುನಃ ಬಂಧನಕ್ಕೀಡುಮಾಡಿ, ಈ ಬಾರಿ ಆ ಮೂವರ ಕಣ್ಣುಗಳನ್ನೂ ಕೀಳಿಸಿದನು.

ಆದರೆ ರಾಯನಿಗೇ ಇದು ತಡೆಯಲಾರದ ಆಘಾತವಾಯಿತು. ಆ ಸಮಯದಲ್ಲಿ (೧೫೨೪) ಅವನಿಗೆ ಇನ್ನೂ ಎರಡನೆಯ ಮಗನು ಜನಿಸಿರಲಿಲ್ಲ. ಮನೋವ್ಯಾಧಿಗೀಡಾದ, ದೈಹಿಕರೋಗಕ್ಕೂ ಒಳಗಾದ. ಒಂದೆರಡು ವರ್ಷಗಳಲ್ಲಿ ತನಗೆ ಪುತ್ರೋತ್ಸವವಾದರೂ ಚೇತರಿಸಿಕೊಳ್ಳದೆ ಕ್ರಿ.ಶ. ೧೫೩೦ರಲ್ಲಿ ದಿವಂಗತನಾದ. ಆಗ ಮಗನಿಗಿನ್ನೂ ೧೮ ತಿಂಗಳು. ಹೆಣ್ಣುಮಕ್ಕಳಾದ ತಿರುಮಲಾಂಬೆ ಮತ್ತು ವೆಂಗಲಾಂಬೆಯರನ್ನು ಆರವೀಡು ಮನೆತನದ ರಾಮರಾಜ ಮತ್ತು ಆತನ ತಮ್ಮ ತಿರುಮಲದೇವರಾಯರು ಮದುವೆಯಾಗಿದ್ದರು.

ವಿಜಯನಗರದ ಪತನ, ಅಚ್ಯುತರಾಯ: ಹೀಗೆ ಮೆರೆದ ಸಾಮ್ರಾಜ್ಯ ಕೃಷ್ಣದೇವ ರಾಯನು ಮಡಿದ ೩೫ ವರ್ಷಗಳೊಳಗಾಗಿಯೇ ಅಸ್ತಂಗತವಾಯಿತು. ಮೇಲೆ ನೋಡಿದಂತೆ ಅರಸನ ಅಂತಿಮಕಾಲಕ್ಕೆ ಉಳಿದವನು ೧೮ ತಿಂಗಳ ಹಸುಗೂಸು. ಈಗ ಸಂಪನ್ನ ರಾಜ್ಯದ ಒಡೆತನಕ್ಕಾಗಿ ಕಲಹಗಳಾರಂಭವಾದುವು.

ಮಗುವಿನ ಹಕ್ಕನ್ನು ಎತ್ತಿಹಿಡಿದು ಅವನ ಪರವಾಗಿ ಅಧಿಕಾರ ವಹಿಸಬೇಕೆಂದು ಬಯಸಿದ ಮಗುವಿನ ಸೋದರಮಾವನಾದ ಹುಚ್ಚತಿರುಮಲನೊಂದು ಕಡೆ; ತಾನೂ ಹಕ್ಕುದಾರಿಕೆಯ ವಾದವನ್ನೇ ಎತ್ತಿಹಿಡಿದ ಅರಸನ ತಮ್ಮ ಅಚ್ಯುತರಾಯನೊಂದು ಕಡೆ; ಇವರಿಬ್ಬರಿಗೂ ಪ್ರತಿಸ್ಪರ್ಧಿಯಾಗಿ ಅರಸಿಯರಾದ ತಿರುಮಲಾಂಬ ಮತ್ತು ವೆಂಗಳಾಂಬರ ಸಹಾಯದಿಂದ ಸಿಂಹಾಸನವನ್ನೇರಬಯಸಿದ ಆರವೀಡು ಮನೆತನದ ರಾಮರಾಯ ಮತ್ತು ಆತನ ತಮ್ಮ ತಿರುಮಲರಾಯರು ಮತ್ತೊಂದು ಕಡೆ; ಹೀಗೆ ರಾಜ್ಯಕ್ಕಾಗಿ ಹಲವರು ಬಯಸಿದರು.

ವಾಸ್ತವವಾಗಿ ಕೃಷ್ಣದೇವರಾಯನಿದ್ದಾಗಲೇ ಆತ ಅಚ್ಯುತನನ್ನು ಸಂದೇಹಿಸಿದ್ದ. ಕೆಲಕಾಲ ಸೆರೆಯಲ್ಲಿಟ್ಟಿದ್ದ. ಆದರೆ ಕೊನೆಗೆ ಬಿಡುಗಡೆಮಾಡಿ ಅವನನ್ನೇ ಉತ್ತರಾಧಿಕಾರಿಯನ್ನಾಗಿ ಹೆಸರಿಸಿದ್ದ. ಈ ಕಲಹಗಳಾರಂಭವಾದಾಗ ಪರಿಸ್ಥಿತಿಯನ್ನರಿತ ರಾಮರಾಯನು ಅಚ್ಯುತರಾಯನೊಡನೆ ಒಪ್ಪಂದ ಮಾಡಿಕೊಂಡನು. ಹುಚ್ಚ ತಿರುಮಲನು ಬಿಜಾಪುರದ ಆದಿಲ್‌ಷಹನನ್ನು ನೆರವಿಗೆಂದು ಆಹ್ವಾನಿಸಿದನು. ರಾಯಚೂರು ಮುದುಗಲ್ ಕೋಟೆಗಳು ಷಹನ ವಶವಾದುವು. ತಿರುಮಲನು ಕೊನೆಗೆ ಬಾಲರಾಜನನ್ನು

ಕೊಂದು ತಾನೇ ಸಿಂಹಾಸನವನ್ನೇರಲುದ್ಯುಕ್ತನಾದನು. ಈಗ ಪ್ರಜೆಗಳು ಅವನನ್ನು ವಿರೋಧಿಸಿದರು. ಹೀಗೆ ಆರು ವರ್ಷಗಳ ಅಂತಃಕಲಹಗಳ ನಂತರ ಹುಚ್ಚತಿರುಮಲನು ಆತ್ಮಹತ್ಯೆಮಾಡಿಕೊಂಡನು. ಅಚ್ಯುತರಾಯನ ಸ್ಥಾನ ಭದ್ರವಾಯಿತು.

ಅಚ್ಯುತರಾಯನು ರಾಜ್ಯಾಡಳಿತದ ಹೊಣೆಯನ್ನು ತನ್ನ ಬೀಗರೂ ಬೆಂಬಲಿಗರೂ ಆದ ಸಲಕ ತಿರುಮಲರಿಗೆ ವಹಿಸಿ ತಾನು ಹೆಚ್ಚು ಕಾಲವನ್ನು ಭೋಗದಲ್ಲಿ ಕಳೆದನು. ದಂಗೆಯೆದ್ದಿದ್ದ ಕಾಂಚಿಯಲ್ಲಿ ಪ್ರಾಂತಾಧಿಕಾರಿಯಾಗಿದ್ದ ಚೆಲ್ಲಪ್ಪನಾಯಕನನ್ನೂ ಕೇರಳ (ಚೇರ) ರಾಜ್ಯದ ತಿರುವಡಿಯನ್ನೂ ಉಮ್ಮತ್ತೂರಿನ ಪಾಳೆಯಗಾರರನ್ನೂ ಸಲಕ ಸೋದರರು ಸೋಲಿಸಿದರು. ಸೋತ ಪಾಂಡ್ಯನು ತನ್ನ ಮಗಳಾದ ವರದಾಂಬಿಕೆಯನ್ನು ಅಚ್ಯುತರಾಯನಿಗೆ ಮದುವೆಮಾಡಿಕೊಟ್ಟನು. ಗಜಪತಿಯೂ ಗೋಲ್ಕೊಂಡದ ಕುತುಬ್ ಷಹನೂ ದಂಡೆತ್ತಿ ಬಂದಾಗ ಅವರನ್ನು ರಾಯನು ಸೋಲಿಸಿ, ವಿಜಯವಾಡದವರೆಗೂ ಅವರನ್ನು ಅಟ್ಟಿಸಿಕೊಂಡು ಹೋದನು.

ದೈವಭಕ್ತನಾದ ಅರಸನು ದೇವಾಲಯಗಳಿಗೆ ಬೇಕಾದಷ್ಟು ದತ್ತಿಗಳನ್ನು ನೀಡಿದನು. ಆನಂದನಿಧಿ ಎಂಬ ಒಂದು ಧನಸಂಗ್ರಹವನ್ನೇ ಇಟ್ಟು, ಅದರಿಂದ ಅನೇಕ ದಾನಗಳನ್ನು ಮಾಡಿದನು. ಆದರೆ ಅಪರಿಮಿತವಾದ ವೆಚ್ಚಗಳನ್ನು ಸರಿದೂಗಿಸಲು ಪ್ರಜೆಗಳಿಂದ, ನಾಯಕರುಗಳಿಂದ ಹೆಚ್ಚಿನ ಹಣವನ್ನು ತೆರಿಗೆ ಕಾಣಿಕೆ ಇತ್ಯಾದಿಗಳ ಮೂಲಕ ಸಂಗ್ರಹಿಸುತ್ತಿದ್ದನು. ಈತನ ಈ ಧನದಾಶೆ ಇವನಿಗೆ ನವಕೋಟಿ ನಾರಾಯಣನೆಂಬ ಬಿರುದು ತಂದಿತು. ಹಿಂದಿನ ಅರಸನ ಬಿಗಿಯಾಗಲಿ ದಕ್ಷತೆಯಾಗಲಿ ಈತನಲ್ಲಿರಲಿಲ್ಲವಾಗಿ ಆಡಳಿತ ದುರ್ಬಲಗೊಂಡಿತು. ಸಾಮ್ರಾಜ್ಯದ ಸುತ್ತಲೂ ಶತ್ರುಗಳು ಸಿದ್ಧರಾದರು. ಸಾಮ್ರಾಜ್ಯದ ವಿಸ್ತಾರವನ್ನು ಅಚ್ಯುತರಾಯನು ಉಳಿಸಿಕೊಂಡರೂ ಆದರ ಪ್ರಭಾವ ಮತ್ತು ಗೌರವಗಳು ಮಾತ್ರ ಈಗ ಕಳೆಗುಂದಿದ್ದುವು.

**ಸದಾಶಿವರಾಯ, ಅಳಿಯ ರಾಮರಾಯ :** ಅಚ್ಯುತರಾಯನು ಕ್ರಿ.ಶ. ೧೫೪೨ರಲ್ಲಿ ದೈವಾಧೀನನಾದಾಗ ಇನ್ನೊಮ್ಮೆ ರಾಜ್ಯದಾಹದ ಕಲಹ ಮರುಕಳಿಸಿತು. ಸಲಕ ತಿರುಮಲನ ಸೋದರಿ ವರದಾಂಬಿಕೆಯಲ್ಲಿ ಅಚ್ಯುತನಿಗೆ ವೆಂಕಟಾದ್ರಿಯೆಂಬ ಮಗನಿದ್ದು ರಾಣಿಯ ಇಚ್ಛೆಯ ಮೇರೆಗೆ ಅವನನ್ನು ಪಟ್ಟದಲ್ಲಿ ಕುಳ್ಳಿರಿಸಿ ತಿರುಮಲನು ಸರ್ವಾಧಿಕಾರಿಯಾದನು. ಆದರೆ ಅಂತರಂಗದಲ್ಲಿ ಸ್ವತಃ ತಾನೇ ಅರಸನಾಗಬೇಕೆಂದು ಬಯಸಿದನು. ತಿರುಮಲನ ಸಂಚು ತಿಳಿದಾಗ ಆತನ ಸೋದರಿ ಅದಿಲ್‌ಷಹನ ನೆರವನ್ನು ಕೋರಿದಳು. ಅಳಿಯ ರಾಮರಾಯನಾದರೋ ಅಚ್ಯುತರಾಯನ ಸೋದರನಾದ ರಂಗನ ಮಗ ಸದಾಶಿವರಾಯನ ಹಕ್ಕನ್ನು ಎತ್ತಿಹಿಡಿದು ಅವನ ಪಕ್ಷವನ್ನು ವಹಿಸಿದನು. ತಿರುಮಲನಿಗೂ ರಾಮರಾಯನಿಗೂ ನಡೆದ ಕದನದಲ್ಲಿ ತಿರುಮಲನ ಕೈಮೇಲಾಗಿ ರಾಮರಾಯನು ತಲೆಮರಸಿಕೊಂಡನು. ಸದಾಶಿವರಾಯನನ್ನು ಸೆರೆಯಿಂದ ಬಿಡಿಸಿಕೊಂಡು ಕೊಂಡವೀಡು ದುರ್ಗದಲ್ಲಿ ಸಂರಕ್ಷಿಸಿ, ಸ್ವತಃ ತನ್ನ ಬೆಂಬಲಿಗರನ್ನು ಕೂಡಿಸಿಕೊಂಡು, ಪೆನುಗೊಂಡ ಆದವಾನಿ ಮುಂತಾದ ಕೋಟೆಗಳನ್ನು ಆಕ್ರಮಿಸಿ ಕೊನೆಗೆ ತಿರುಮಲನನ್ನು ತುಂಗಭದ್ರಾತೀರ

ದಲ್ಲಿ ಎದುರಿಸಿದನು. ಈ ಮಧ್ಯೆ ವೆಂಕಟನನ್ನು ತಿರುಮಲನು ಕೊಂದನು, ಯುದ್ಧದಲ್ಲಿ ತಾನೂ ಮಡಿದನು. ಹೀಗೆ ಕಲಹಗಳು ಅಂತ್ಯಗೊಂಡ ಬಳಿಕ ರಾಮರಾಯನು ಸದಾಶಿವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಸರ್ವಾಧಿಕಾರಿಯಾದನು.

ಕ್ರಿ.ಶ. ೧೫೪೩ರಿಂದ ೧೫೫೦ರ ವರೆಗೆ ರಾಮರಾಯನು ನಿರಂಕುಶಾಧಿಕಾರಿಯಾಗಿ ಆಳಿದನು. ಆ ಬಳಿಕ ವಯಸ್ಸಿಗೆ ಬಂದ ಸದಾಶಿವನು ಸ್ವತಃ ರಾಜ್ಯಾಡಳಿತವನ್ನು ನಿರ್ವಹಿಸಲು ಬಯಸಿದಾಗ, ಅದನ್ನು ರಾಮರಾಯನು ವಿರೋಧಿಸಿ ರಾಜಧಾನಿಯಲ್ಲಿಯೇ ಅವನನ್ನು ಬಂಧನದಲ್ಲಿರಿಸಿ, ಅವನ ಹೆಸರಿನಲ್ಲಿ ತನ್ನ ಆಡಳಿತವನ್ನು ಮುಂದುವರಿಸಿದನು. ರಾಮರಾಯನ ಸೋದರನಾದ ತಿರುಮಲ ಮತ್ತು ವೆಂಕಟಾದ್ರಿ ಕ್ರಮವಾಗಿ ಪ್ರಧಾನಿ ಹಾಗೂ ಸೇನಾಪತಿ ಪದವಿಗಳನ್ನು ವಹಿಸಿದರು.

ರಾಮರಾಯನು ರಾಜ್ಯದ ಆಡಳಿತದಲ್ಲಿ ಕೆಲವು ಮಾರ್ಪಾಡುಗಳನ್ನು ತಂದನು. ವಂಶಪಾರಂಪರ್ಯವಾಗಿ ಅಧಿಕಾರದಲ್ಲಿದ್ದವರನ್ನು ತೆಗೆದು, ತನಗೆ ನಿಷ್ಠರಾದ ಇತರರನ್ನು ಅವರ ಸ್ಥಳಗಳಲ್ಲಿ ನೇಮಿಸಿದನು. ಅನೇಕ ಮಹಮ್ಮದೀಯರನ್ನು ತನ್ನ ಸೇವೆಗೆ ನೇಮಿಸಿಕೊಂಡನು. ಹೀಗಾಗಿ ಅಧಿಕಾರವನ್ನು ಕಳೆದುಕೊಂಡವರು ಇವನ ವೈರಿಗಳಾದರು. ಮಹಮ್ಮದೀಯರು ಕ್ರಮೇಣ ಸೈನ್ಯದ ಒಳಗುಟ್ಟನ್ನರಿತು, ಇವನಿಗೆ ನಿಷ್ಠರಾಗದೆ, ಸ್ವಧರ್ಮೀಯರ ಹಿತವನ್ನೇ ಕೋರಿದರು. ಆದರೆ ರಾಮರಾಯನಿಗೆ ಇದರಿಂದ ಆದ ತತ್‌ಕ್ಷಣದ ಲಾಭವೆಂದರೆ ಸೈನ್ಯ ಬಲಿಷ್ಠವಾದ್ದು. ಅಂತಃಕಲಹಗಳಲ್ಲಿ ತೊಡಗಿದ್ದ ಸುಲ್ತಾನರು ಅವನ ಮುಂದೆ ನಿಲ್ಲದಾದರು. ಇವನು ಈಗ ಹೊಸ ರಾಜಕೀಯ ನೀತಿಯನ್ನವಲಂಬಿಸಿ ಸುಲ್ತಾನರ ರಾಜಕೀಯದಲ್ಲಿ ಪ್ರವೇಶಿಸಿದನು. ಮೊದಲು ಅದನ್ನು ಅಪೇಕ್ಷಿಸಿದ ಸುಲ್ತಾನರು ಅದರಿಂದ ತಮ್ಮ ಬಲವೇ ಕುಗ್ಗಿಹೋಗುವುದನ್ನು ಮನಗಂಡ ಮೇಲೆ ಇವನ ವಿರುದ್ಧ ಒಟ್ಟುಗೂಡಿದರು. ಅಷ್ಟರಲ್ಲಿ ಈಗ ವಿಜಯನಗರ ಸಾಮ್ರಾಜ್ಯ ಕೃಷ್ಣೆಯನ್ನು ದಾಟಿ ಭೀಮಾನದಿಯವರೆಗೆ ವಿಸ್ತರಿಸಿತ್ತು; ಕಲ್ಯಾಣ, ಕಲಬುರ್ಗಿ, ಕೋವಲಕೊಂಡ, ಘನಪುರ, ಪಾನಗಲ್, ಆಡಕೆ, ಯಾದಗಿರಿ, ಜಲದುರ್ಗ ಮುಂತಾದ ಸುಲ್ತಾನರ ಕೋಟೆಗಳು ಈಗ ಇವನ ವಶವಾಗಿದ್ದವು.

ದಕ್ಷಿಣ ಭಾರತದಲ್ಲಿ ಅಲ್ಲಲ್ಲಿ ದಂಗೆಗಳೆದ್ದುವು. ಆದರೆ ತನ್ನ ಸೋದರ ಸೇನಾನಿಗಳ ದಕ್ಷ ನೆರವಿನಿಂದ ರಾಮರಾಯನು ಅವುಗಳನ್ನೆಲ್ಲ ಅಡಗಿಸಿದನು. ಸಿಂಹಳದ ಅರಸನು ಕಪ್ಪಕಾಣಿಕೆಗಳನ್ನು ನೀಡಿದನು. ಪೋರ್ಚುಗೀಸರು ಸಹ ರಾಮರಾಯನ ದೃಷ್ಟಿಗೆ ಬಿದ್ದರು. ಈ ಮೊದಲು ವಿಜಯನಗರದವರೊಡನೆ ಸ್ನೇಹದಿಂದಿದ್ದ ಇವರು ಕ್ರಮೇಣ ಆಕ್ರಮಣಶೀಲ ಪ್ರವೃತ್ತಿಯನ್ನು ತೋರಿಸಿದಾಗ ರಾಮರಾಯನು ಇವರನ್ನು ಶಿಕ್ಷಿಸಿದ್ದನು. ಮದ್ರಾಸಿನ ಸ್ಯಾಂಟ್ ಥಾಮಸ್ ಪಾಂಟ್‌ನಲ್ಲಿ ಇವರು ದೊಂಬಿಯೆದ್ದು ಪ್ರಜೆಗಳನ್ನು ಹಿಂಸಿಸಿದಾಗ ರಾಮರಾಯ ಆ ಕೋಠಿಯನ್ನು ಮುತ್ತಿ ಇವರ ಚಟುವಟಿಕೆಗಳಿಗೆ ತಡೆಹಾಕಿದನು.

ಐವರು ಸುಲ್ತಾನರಲ್ಲಿ ಇಬ್ಬರು, ಅಹಮದ್‌ನಗರದ ನಿಜಾಮ್‌ಷಹ ಮತ್ತು ಬಿಜಾಪುರದ ಆದಿಲ್‌ಷಹರು ಕ್ರಿ.ಶ. ೧೫೪೨ರಿಂದ ೬೪ರ ವರೆಗೆ ಸತತವಾಗಿ ರಾಯಚೂರು,

ಮುದಗಲ್, ಕಲ್ಯಾಣ, ಷೋಲಾಪುರ ಕೋಟೆಗಳ ಒಡೆತನಕ್ಕಾಗಿ ಕಾದಿದರು. ಇವರ ಕಲಹದಲ್ಲಿ ರಾಮರಾಯನೂ ಸೇರಿಕೊಂಡ. ಗೋಲ್ಕೊಂಡದ ಕುತುಬ್‌ಷಹ ಮತ್ತು ಬೀದರಿನ ಬರೀದ್‌ಷಹ ಹೆಚ್ಚು ಕಡಮೆ ತಾಟಸ್ಥ್ಯನೀತಿ ಹಿಡಿದರು. ರಾಮರಾಯನ ಪಾತ್ರ ವಿಶಿಷ್ಟವಾದ್ದಾಗಿತ್ತು. ಆತ ಸ್ವತಃ ಈ ಪ್ರದೇಶಗಳನ್ನಾಕ್ರಮಿಸುವ ಇಚ್ಛೆ ಇದ್ದವನಾದ ಕಾರಣ, ಮೊದಲು ಅಹಮದ್‌ನಗರಕ್ಕೆ ಬೆಂಬಲನೀಡಿ, ನಂತರ ಬಿಜಾಪುರದ ಪಕ್ಷವಹಿಸಿದನು. ಈ ಪಗಡೆಯಾಟದಲ್ಲಿ ಇವನು ನಡಸಿದಂತೆ ಕಾಯಿಗಳು ನಡೆಯತೊಡಗಿದುವು.

ಕೊನೆಗೊಮ್ಮೆ ಕ್ರಿ.ಶ. ೧೫೬೪ರಲ್ಲಿ ಮುಹಮ್ಮದೀಯ ಸುಲ್ತಾನರು ತಮ್ಮ ದುಃಸ್ಥಿತಿಯನ್ನರಿತರು. ತಮ್ಮಲ್ಲಿನ ವೈಷಮ್ಯ ರಾಮರಾಯನ ಮೇಲುಗೈಗೆ ಕಾರಣವೆಂದು ತಿಳಿದಾಗ ಅವರು ಒಟ್ಟುಗೂಡಿದರು. ಎಲ್ಲವೂ ನಿರೀಕ್ಷಿಸಿದಂತೆಯೇ ನಡೆಯದಿದ್ದರೂ ಈ ಸಂದರ್ಭ ದಕ್ಷಿಣಭಾರತದ ಇತಿಹಾಸದಲ್ಲಿಯೇ ಅತಿಭೀಷಣವಾದ ತಾಳಿಕೋಟೆ (ರಕ್ಕಸತಂಗಡಿ) ಕದನಕ್ಕೆ ನಾಂದಿಯಾಯಿತು. ರಾಮರಾಯನು ಈಗ ಮದೋನ್ಮತ್ತನಾಗಿದ್ದು, ಪರಿಸ್ಥಿತಿಯ ಗಭೀರತೆಯನ್ನರಿಯದೆಹೋದನು. ಕ್ರಿ.ಶ. ೧೫೬೫ನೆಯ ಜನವರಿ ೨೩ರಂದು ನಡೆದ ಭೀಕರ ಯುದ್ಧದಲ್ಲಿ ರಾಮರಾಯನ ಮುಹಮ್ಮದೀಯ ಸೇನಾನಿಗಳು ಅವನನ್ನು ಮೋಸಗೊಳಿಸಿ ಶತ್ರುಪಕ್ಷ ಸೇರಿದರು. ಎಷ್ಟೇ ಧೈರ್ಯದಿಂದ ಹೋರಾಡಿದರೂ ರಾಮರಾಯನಿಗೆ ಜಯವಾಗಲಿಲ್ಲ. ಸೆರೆಸಿಕ್ಕ ರಾಮರಾಯನನ್ನು ನಿಜಾಮುಷಹನು ಕೊಂದನು.

ಹಿಂದು ಸೈನ್ಯ ತತ್ತರಿಸಿತು. ವೆಂಕಟಾದ್ರಿ ತಿರುಮಲರು ರಣರಂಗದಿಂದ ಕಾಲ್ತೆಗೆದರು. ತಿರುಮಲನು ರಾಜಧಾನಿಗೆ ಹಿಂದಿರುಗಿ ಸದಾಶಿವನನ್ನೂ ರಾಣೀವಾಸದವರನ್ನೂ, ಬಂಧುವರ್ಗದವರನ್ನೂ ಸಾಧ್ಯವಾದಷ್ಟು ಧನಕನಕಗಳನ್ನೂ ೧೫೫೦ ಆನೆಗಳ ಮೇಲೆ ಹೇರಿ ಚಂದ್ರಗಿರಿಗೆ ಸಾಗಿಸಿದನು. ಬೆನ್ನಟ್ಟಿಬಂದ ಶತ್ರುಸೇನೆ ರಾಜಧಾನಿಯನ್ನು ಸುಲಿಗೆಗೀಡು ಮಾಡಿತು. ಇನ್ನೂರುವರ್ಷಗಳ ಪರಿಶ್ರಮದಿಂದ ಸಕಲೈಶ್ವರ್ಯ ಸೌಂದರ್ಯಗಳಿಗೆ ನೆಲೆವೀಡಾಗಿ ವಿಶ್ವವಿಖ್ಯಾತಿಪಡೆದ ಸಾಮ್ರಾಜ್ಯಶ್ರೀ ಮದಾಂಧ ಹೂಣರ ಸ್ವೈರ ಉಪಭೋಗದ ವಸ್ತುವಾಯಿತು. ಅವರ ಅತ್ಯಾಚಾರಗಳಿಗೆ ಬಲಿಯಾಯಿತು. ಸುಂದರವಾದ ಮಂದಿರಗಳು, ಉತ್ತುಂಗ ದೇವಾಲಯಗಳು, ಮನೋಹರ ಮೂರ್ತಿಗಳು ಎಲ್ಲವೂ ಛಿನ್ನವಿಚ್ಛಿನ್ನವಾದವು; ಅಗ್ನಿನಾರಾಯಣನಿಗೆ ಆಹುತಿಯಾದವು.

ಇದರೊಂದಿಗೆ ಸ್ವತಂತ್ರ ಕರ್ಣಾಟಕದ ಇತಿಹಾಸವೂ ಪರಿಸಮಾಪ್ತಿ ಹೊಂದಿತು. ದಕ್ಷಿಣಭಾರತ ಅನೇಕ ನಾಯಕರ ಪಾಳೆಯಗಾರರ ಅಧೀನಕ್ಕೆ ಸಿಕ್ಕಿ ಒಡೆದುಹೋಯಿತು. ಕೊನೆಗೊಮ್ಮೆ ಪರಕೀಯರಾದ ಬ್ರಿಟಿಷರ ಪಾಲಾಯಿತು.

## ಬಹಮನಿ ರಾಜ್ಯ

ದಖನ್ ಹಾಗೂ ಉತ್ತರ ಕರ್ಣಾಟಕಗಳನ್ನೊಳಗೊಂಡ ಕೃಷ್ಣಾನದಿಯ ಉತ್ತರಭಾಗ

ದಲ್ಲಿ ಬಹಮನಿ ರಾಜ್ಯ ಉದಯಿಸಿ, ವಿಜಯನಗರದ ಪ್ರತಿಸ್ಪರ್ಧಿಯಾಗಿತ್ತು. ಮಹಮದ್ ತೊಘಲಕನ ವಿರುದ್ಧ ದಂಗೆಯೆದ್ದು ಸ್ವತಂತ್ರನಾಗಿ ಆಳತೊಡಗಿದವರಲ್ಲಿ ದೌಲತಾಬಾದಿನಲ್ಲಿದ್ದ ಅಮಿರಾರ್ ಹಸನ್ ಎಂಬಾತನು ಒಬ್ಬನು. ಗುಲ್ಬರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡ ಈತನು ೧೩೪೭ರಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದನು. ಫಿರಿಸ್ತಾ ಈತನನ್ನು ಕುರಿತ ಕತೆಯೊಂದನ್ನು ಹೇಳಿದಿದ್ದಾನೆ. ಬ್ರಾಹ್ಮಣ ಜ್ಯೋತಿಷಿಯಾದ ಗಂಗೂ ನೌಕರನಾಗಿದ್ದ ಹಸನ್ ಮುಂದೆ ಪ್ರಖ್ಯಾತಿ ಹೊಂದುತ್ತಾನೆಂದು ಅತನಿಗೆ ಹೇಳಿದ್ದ. ಅದರಂತೆ ರಾಜ್ಯವನ್ನು ಸ್ಥಾಪಿಸಿದ ಹಸನ್ ತನ್ನ ಒಡೆಯನ ನೆನಪಿಗಾಗಿ ಬಹಮನ್‌ಷಹ ಗಂಗೂ ಎಂಬ ಹೆಸರನ್ನು ಪಡೆದನಂತೆ. ಬಹಮನ್ ಎಂಬುದು ಬ್ರಾಹ್ಮಣ ಪದದಿಂದಾದ್ದು. ಆದರೆ ಈ ಕತೆಯನ್ನು ಇತರರು ಅಲ್ಲಗಳೆದಿದ್ದಾರೆ. ಪರ್ಷಿಯಾ ದೇಶದಲ್ಲಿ ಬಹ್ಮನ್‌ಷಹ ಎಂಬ ಖ್ಯಾತ ಅರಸನಿದ್ದನೆಂಬ ಐತಿಹ್ಯವಿದ್ದು, ಅವನ ನೆನಪಿನಲ್ಲಿ ಹಸನ್ ರಾಜ್ಯವನ್ನು ಬಹಮನಿ ಎಂದು ಹೆಸರಿಸಿದನೆಂಬುದು ಇನ್ನೊಂದು ಊಹೆ. ರಾಜ್ಯವನ್ನು ಸ್ಥಾಪಿಸಿದ ಬಳಿಕ ಈತನು ಅಲ್ಲಾಉದೀನ್ ಹಸನ್ ಬಹಮನ್‌ಷಹ ಎಂಬ ಹೆಸರನ್ನು ಧರಿಸಿದನೆಂಬುದು ನಿಜ.

ಒಂದು ದಶಕದ ಕಾಲ (೧೩೪೭–೫೮) ಆಳಿದ ಈತನು ರಾಜ್ಯವಿಸ್ತರಣಾಕಾಂಕ್ಷಿಯಾಗಿದ್ದನು. ಗೋವಾದ ಭೋಲ್‌ಗಳನ್ನೊಳಗೊಂಡಂತೆ ಪಶ್ಚಿಮದಲ್ಲಿ ಸಮುದ್ರತೀರ, ಪೂರ್ವಕ್ಕೆ ಭೋಂಗೀರ್, ಉತ್ತರಕ್ಕೆ ಪನ್‌ಗಂಗ ಮತ್ತು ದಕ್ಷಿಣಕ್ಕೆ ಕೃಷ್ಣಾನದಿ ಇವನು ವಿಸ್ತರಿಸಿದ ರಾಜ್ಯದ ಮೇರೆಗಳಾದುವು. ಆಡಳಿತ ಸೌಕರ್ಯಕ್ಕಾಗಿ ಈತನು ರಾಜ್ಯವನ್ನು ನಾಲ್ಕು ತರಫ್‌ಗಳಾಗಿ ವಿಂಗಡಿಸಿ ಒಂದೊಂದಕ್ಕೂ ಒಬ್ಬೊಬ್ಬ ರಾಜ್ಯಪಾಲನನ್ನು ನೇಮಿಸಿದನು. ಗುಲ್ಬರ್ಗ, ದೌಲತಾಬಾದ್, ಬಿದರ್ ಮತ್ತು ಬೀರಾರ್ ಈ ತರಫ್‌ಗಳು. ಗುಲ್ಬರ್ಗ ರಾಜ್ಯದ ರಾಜಧಾನಿ. ಇಲ್ಲಿ ಹೊಸದಾಗಿ ಹಸನ್ ಅನೇಕ ಕೋಟೆಗಳನ್ನೂ ಕಟ್ಟಡಗಳನ್ನೂ ಕಟ್ಟಿಸಿ ನಗರವನ್ನು ಸುಂದರಗೊಳಿಸಿದನು.

ಗುಲ್ಬರ್ಗದ ಹೆಸರು ಹಿಂದಿನಕಾಲದಲ್ಲಿ, ೧೧ನೆಯ ಶತಮಾನದ ಶಾಸನಗಳಲ್ಲಿ ಕಲುಂಬುರಿಗೆ ಎಂದು ಕಾಣಿಸಿಕೊಂಡಿದೆ. ಇದು ನಂತರ ಕಲುಬರಿಗೆ, ಕಲ್ಬುರಿಗೆ, ಕಲ್ಬುರ್ಗಿ ಎಂದೆಲ್ಲ ರೂಪಾಂತರಗೊಂಡಿದೆ. ಗುಲ್‌ಬರ್ಗ ಎಂಬ ಹೆಸರು ಮಹಮದೀಯರ ಆಳ್ವಿಕೆಯಲ್ಲಿ ಪ್ರಚಾರಕ್ಕೆ ಬಂತು. ಗುಲ್ಬರ್ಗ ಎಂದರೆ ಹೂದೋಟ. ಗುಲ್ಬರ್ಗದ ಕೋಟೆ ೧೫ ಬುರುಜುಗಳನ್ನೂ ೨೦ ತುಪಾಕಿಗೋಪುರಗಳನ್ನೂ ಅಳವಡಿಸಿಕೊಂಡು ನಗರವನ್ನು ಸುತ್ತುವರಿದಿದೆ.

ಅಲ್ಲಾಉದೀನನ ಉತ್ತರಾಧಿಕಾರಿ ಆತನ ಮಗ ಮುಹಮದ್‌ಷಹ(I). ೧೩೫೮ರಿಂದ ೧೩೭೫ರ ವರೆಗೆ ಆಳಿದ ಈತನು ದಕ್ಷ ಆಡಳಿತಗಾರ. ಈತನಿಗೆ ಪ್ರಧಾನಿಯಾಗಿ ಈತನ ತಂದೆಯ ಕಾಲದಲ್ಲಿಯೂ ಅದೇ ಪದವಿಯಲ್ಲಿದ್ದ ಸೈಫುದ್ದೀನ್ ಘೋರಿ ಅಧಿಕಾರದಲ್ಲಿ ಮುಂದುವರಿದನು. ಮುಹಮದ್‌ಷಹನು ಗುಲ್ಬರ್ಗದ ಕೋಟೆಯೊಳಗೆ ಜಮಿ ಮಸೀತಿಯನ್ನು ಕಟ್ಟಿಸಿದನು.

ಮುಂದಿನ ಮುಖ್ಯ ಸುಲ್ತಾನರು ಅಲ್ಲಾಉದ್ದೀನನ ಮೊಮ್ಮಗನಾದ ಇಮ್ಮಡಿ ಮುಹಮದ್ (೧೩೭೮–೯೭) ಮತ್ತು ಆತನ ಉತ್ತರಾಧಿಕಾರಿಯೂ ಸೋದರಸಂಬಂಧಿಯೂ ಆದ

ಫಿರೂಜ್‌ಷಹ (೧೩೯೭–೧೪೨೨). ಇವರು ಹೆಚ್ಚು ಶಾಂತಿಪ್ರಿಯರಾಗಿದ್ದರು. ಫಿರೂಜನು ೧೪೦೧ರಲ್ಲಿ ತೈಮೂರನ ಆಸ್ಥಾನಕ್ಕೆ ರಾಯಭಾರವನ್ನು ಕಳುಹಿಸಿ ಅವನಿಂದ ದಖನ್, ಗುಜರಾತ್ ಮತ್ತು ಮಾಲವಾಗಳ ಮೇಲಿನ ಅಧಿಕಾರದ ಹಕ್ಕನ್ನು ಪಡೆದನು. ೧೪೨೨ರಿಂದ ಆಳಿದ ಅಹಮದನು ಓರಂಗಲ್ ಮೇಲೆ ದಾಳಿಮಾಡಿ ಅದನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಮಾಲವಾ ಗುಜರಾತ್‌ಗಳ ಮೇಲೂ ದಂಡೆತ್ತಿದನು. ಆದರೆ ವಿಜಯನಗರದ ಸತತವಾದ ದಾಳಿಗಳಿಂದ ದೂರವಿರಲು ರಾಜಧಾನಿಯನ್ನು ಬಿದರ್‌ಗೆ ಬದಲಾಯಿಸಿದನು (೧೪೨೩). ಬೀರಾರ್ ಪ್ರಾಂತವನ್ನು ಬಹುಕಷ್ಟದಿಂದ ಉಳಿಸಿಕೊಂಡನು (೧೪೩೧). ಯುದ್ಧಾಸಕ್ತನಾದರೂ ಈತನು ದಯಾಳುವೂ ಆಗಿದ್ದನು. ೧೪೨೩–೨೪ರಲ್ಲಿ ಭೀಕರ ಕ್ಷಾಮ ರಾಜ್ಯವನ್ನು ಆವರಿಸಿದಾಗ ದೇವರಿಗೆ ಪ್ರಾರ್ಥನೆಗಳನ್ನು ಪ್ರಜೆಗಳ ಪರವಾಗಿ ನಿಷ್ಠೆಯಿಂದ ಸಲಿಸಿದನು. ನಂತರದ ಮಳೆ ರಾಜ್ಯದಲ್ಲಿ ಸುಭಿಕ್ಷವನ್ನು ತಂದಿತು. ಇದರಿಂದ ಪ್ರಜೆಗಳು ಇವನಿಗೆ ಸಂತ (ವಾಲಿ)ನೆಂಬ ಮನ್ನಣೆಯನ್ನು ನೀಡಿದರು. ಈತನ ಕಾಲದಲ್ಲಿ ದಖನೀ ಮುಸ್ಲಿಮರಿಗೂ ಹೊರಗಿನಿಂದ ಬಂದವರಿಗೂ ಉಂಟಾಗುತ್ತಿದ್ದ ಕಲಹಗಳು ಸ್ಪಷ್ಟವಾದ ರೂಪವನ್ನು ತಾಳಿದುವು. ದಖನಿಗಳು ಮೊದಲಿನಿಂದಲೂ ಇಲ್ಲಿ ನೆಲಸಿದ್ದ, ಮತಾಂತರಗೊಂಡಿದ್ದ ಸುನ್ನೀ ಪಂಗಡಕ್ಕೆ ಸೇರಿದ ಪ್ರಜೆಗಳು. ಇತರರು ದೂರದ ಅರೇಬಿಯಾ, ಪರ್ಷಿಯಾ, ಮಧ್ಯ ಏಷಿಯಾ ದೇಶಗಳಿಂದ ಬಂದು ನೆಲಸಿದ್ದವರು. ಇವರಲ್ಲಿ ಬಹುಪಾಲು ಷಿಯಾ ಪಂಗಡಕ್ಕೆ ಸೇರಿದವರಾಗಿದ್ದರು. ಇವರಿಗೆ ರಾಜ್ಯದ ಆಡಳಿತದಲ್ಲೂ ಸೇನೆಯಲ್ಲೂ ಉಚ್ಚವಾದ ಅಧಿಕಾರಗಳು ಪದವಿಗಳೂ ದೊರೆತಿದ್ದುದೇ ಈ ಕಲಹಕ್ಕೆ ಕಾರಣ. ಈ ಕಲಹಗಳು ಮುಂದಿನ ಎರಡು ಮೂರು ದಶಕಗಳಲ್ಲಿ ಉತ್ಕಟವಾದವು. ೧೪೫೮ರ ವರೆಗೆ ಆಳಿದ ಹುಮಾಯೂನ್ ಅತಿ ಕ್ರೂರಿಯಾಗಿದ್ದು ತನ್ನ ಪ್ರಜೆಗಳನ್ನು ಬಹಳವಾಗಿ ಹಿಂಸಿಸಿದ. ಈತನ ಮಗ ನಿಜಾಮನು ಪಟ್ಟಕ್ಕೆ ಬಂದಾಗ ಇನ್ನೂ ಚಿಕ್ಕವನು. ಆದ್ದರಿಂದ ರಾಜ್ಯದ ಹೊಣೆಯನ್ನು ರಾಜಮಾತೆ, ಖ್ವಾಜಾಜಹಾನ್ ಮತ್ತು ಮಹಮೂದ್ ಗವಾನರ ನೆರವಿನಿಂದ ಹೊತ್ತಳು (೧೪೬೧–೬೩).

ಖ್ವಾಜಾಜಹಾನನು ಸ್ವಾರ್ಥಿಯಾಗಿ ಅಧಿಕಾರವನ್ನು ಕಸಿಯುವ ಉದ್ದೇಶವನ್ನು ಹೊಂದಿದ್ದನು. ಆದರೆ ಈತನ ಯತ್ನಗಳು ಕೈಗೂಡದೆ. ಅಪಾದನೆಗೆ ಗುರಿಯಾಗಿ ಮರಣ ದಂಡನೆಗೊಳಗಾದನು. ನಂತರ ರಾಜಮಾತೆ ಸಾರ್ವಜನಿಕ ಜೀವನದಿಂದ ನಿವೃತ್ತಿಹೊಂದಿದಳು. ರಾಜನ ಪ್ರತಿನಿಧಿಯಾಗಿ ಮಹಮೂದ್ ಗವಾನ ರಾಜ್ಯದ ಹೊಣೆಹೊತ್ತನು. ಈ ವೇಳೆಗೆ ಮುಮ್ಮಡಿ ಮುಹಮದನು ಸುಲ್ತಾನನಾಗಿದ್ದನು. ಮೂಲತಃ ಪರ್ಷಿಯಾ ದೇಶದವನಾದ ಗವಾನನು ೧೪೪೭ರಲ್ಲಿ ಬಿದರೆಗೆ ಬಂದನು. ಸ್ವಸಾಮರ್ಥ್ಯ, ದಕ್ಷತೆ ಹಾಗೂ ಉತ್ತಮ ನಡೆವಳಿಕೆಗಳಿಂದ ಸುಲ್ತಾನನ ಪ್ರೀತಿಯನ್ನು ಗಳಿಸಿದ ಈತನು ಕ್ರಮೇಣ ಆಡಳಿತದ ಸಮಗ್ರಪರಿಚಯ ಪಡೆದು ಅದರಲ್ಲಿ ಪರಿಣತನಾದನು. ರಾಜಕುಮಾರನಿಗೆ ಆಡಳಿತ ವಿಷಯದಲ್ಲಿ ಸೂಕ್ತವಾದ ತರಬೇತಿಯನ್ನು ನೀಡಿದನು.

ಸುಲ್ತಾನನಿಗೆ ಬೆಂಬಲವಾಗಿ ನಿಂತು ಗವಾನನು ಗೋವೆಯನ್ನು ಪುನಃ ಪೋರ್ಚುಗೀಸ

ರಿಂದ ಕಸಿದನು (೧೪೭೨). ಹಣಕಾಸು, ನ್ಯಾಯಾಂಗ ಹಾಗೂ ವಿದ್ಯಾ ಇಲಾಖೆಗಳಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಭೂಮಿಯನ್ನು ಸರಿಯಾಗಿ ಅಳೆದು, ಬೆಲೆಕಟ್ಟಿ ಸೂಕ್ತ ಗುತ್ತಿಗೆಗಳನ್ನು ಪಡೆಯುವುದರ ಮೂಲಕ ರಾಜ್ಯದ ಬೊಕ್ಕಸವನ್ನು ಹೆಚ್ಚಿಸಿದನು. ಸೈನಿಕರಿಗೆ ತೃಪ್ತಿಕರವಾಗಿ ಸಂಬಳಗಳನ್ನು ನೀಡಿ, ಅಲ್ಲಿಯೂ ಸುಧಾರಣೆಗಳನ್ನು ಜಾರಿಗೆ ತಂದನು. ಲಂಚಗುಳಿತನವನ್ನು ನಿರ್ಮೂಲಗೊಳಿಸಿ ಬಡವರ ಬವಣೆಯನ್ನು ತಪ್ಪಿಸಿದನು. ಸ್ವತಃ ವಿದ್ವಾಂಸನಾಗಿದ್ದ ಈತ ಅನೇಕ ಪಂಡಿತರೊಡನೆ ಚರ್ಚಿಸಿ, ಅವರ ನೆರವು ಪಡೆದು ಉಚ್ಚ ಶಿಕ್ಷಣಕೇಂದ್ರ(ಮದರಸಾ)ವೊಂದನ್ನು ಸ್ಥಾಪಿಸಿದನು(೧೪೭೨). ಮೂರು ಮಹಡಿಗಳ ಈ ಕಟ್ಟಡದಲ್ಲಿ ಪ್ರಾಧ್ಯಾಪಕರೂ ೧೦೦೮ ವಿದ್ಯಾರ್ಥಿಗಳೂ ಇರಲು ಅವಕಾಶವಿದ್ದಿತು. ಉತ್ತಮವಿಜ್ಞಾನಿಗಳನ್ನು ಇಲ್ಲಿಗೆ ಕರಸಲಾಗಿತ್ತು. ಸ್ವತಃ ಗವಾನನೇ ಇಲ್ಲಿ ವಿದ್ಯಾರ್ಥಿಗಳಿಗೆ ಪಾಠಗಳನ್ನು ಹೇಳುತ್ತಿದ್ದನು. ಅವನ ಸ್ವಂತ ಪುಸ್ತಕ ಭಂಡಾರದಲ್ಲಿ ಸಾವಿರಕ್ಕೂ ಮಿಕ್ಕ ಹಸ್ತಪ್ರತಿಗಳಿದ್ದವು. ಮದರಸಾದ ಗ್ರಂಥ ಭಂಡಾರದಲ್ಲಿ ೩೦೦೦ಕ್ಕೂ ಹೆಚ್ಚು ಪುಸ್ತಕಗಳಿದ್ದುವು.

ಗವಾನನ ಪ್ರಗತಿಯನ್ನು ಸಹಿಸದ ದಖನೀ ಮುಸ್ಲಿಮರು ಹೂಡಿದ ಕುತಂತ್ರಕ್ಕೆ ಸುಲ್ತಾನ್ ತುತ್ತಾದನು. ಗವಾನನು ಬರೆದನೆನ್ನಲಾದ ಸೃಷ್ಟನೆಯ ಪತ್ರವೊಂದನ್ನು ಕಂಡು ಕಡುಕೋಪಗೊಂಡ ಸುಲ್ತಾನನು ಆತನನ್ನು ರಾಜದ್ರೋಹಿಯೆಂದು ಬಗೆದು ಕೊಲ್ಲಿಸಿದನು (೧೪೮೧). ಅಂತ್ಯಕಾಲಕ್ಕೆ ಗವಾನನಿಗೆ ೭೧ವರ್ಷ ವಯಸ್ಸಾಗಿತ್ತು. ಆದರೆ ನಂತರ ಸುಲ್ತಾನನು ವಸ್ತುಸ್ಥಿತಿಯನ್ನರಿತು ದುಃಖಿಸಿದನು. ಮರುವರ್ಷವೇ ಮರಣ ಹೊಂದಿದನು.

ಮುಮ್ಮಡಿ ಮುಹಮ್ಮದನ ಬಳಿಕ ಆಳಲು ಬಂದ ಇಮ್ಮಡಿ ಮಹಮೂದನು ದಖನಿಗಳ ಕೈಗೊಂಬೆಯಾಗಿದ್ದನು. ರಾಜ್ಯದ ಪ್ರಬಲ ಶ್ರೀಮಂತರು ತಮ್ಮ ತಮ್ಮ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಆಳಲು ಹವಣಿಸಿದರು. ಬಿಜಾಪುರದ ಯೂಸುಫ್ ಅದಿಲ್‌ಖಾನ್ ಮತ್ತು ಬಿದರ್‌ನ ಕಾಸೀಂ ಬರೀದ್ ಪರಸ್ಪರ ಜಗಳವಾಡಿ, ಕೊನೆಗೆ ಅದಿಲ್‌ಖಾನನು ಬಿಜಾಪುರಕ್ಕೆ ಓಡಿದನು. ಮಹಮೂದನ ಬಳಿಕ ಅವನ ನಾಲ್ವರು ಮಕ್ಕಳು ಆಳಿದರು (೧೫೧೮–೨೭). ಆದರೆ ಅದು ನಾಮಮಾತ್ರಕ್ಕೆ. ೧೫೨೭ರಲ್ಲಿ ಬಹಮನಿ ರಾಜ್ಯ ಅಳಿಯಿತು. ಅದರ ಸ್ಥಾನದಲ್ಲಿ ಬಿಜಾಪುರ, ಬಿದರ್, ಗೋಲ್ಕಂಡ, ಬೀರಾರ್ ಮತ್ತು ಅಹಮದ್ ನಗರಗಳಲ್ಲಿ ಸ್ವತಂತ್ರ ಸುಲ್ತಾನರ ಆಳಿಕೆ ಆರಂಭವಾಯಿತು.

ಬಹಮನಿ ರಾಜ್ಯ ಒಂದು ದೃಷ್ಟಿಯಲ್ಲಿ ಅದರ ಉದ್ದೇಶವನ್ನು ಸಾಧಿಸಿತೆನ್ನಬೇಕು. ಪ್ರಜೆಗಳೊಡನೆ ಹೆಚ್ಚು ಮತ್ಸರವನ್ನು ಬೆಳಸದಿದ್ದರೂ ಸುಲ್ತಾನರ ಸುತ್ತ ಅವರ ಪಂಗಡದ ಅಧಿಕಾರಿಗಳೇ ತುಂಬಿದ್ದರು. ಇಸ್ಲಾಂಧರ್ಮ ಸಂಸ್ಕೃತಿಗಳಿಗೆ ಇವರಿಂದ ಪ್ರೋತ್ಸಾಹ ದೊರೆಯಿತು. ಎಂತಲೇ ಉತ್ತರ ಕರ್ನಾಟಕದ ಭಾಗದಲ್ಲಿ ಪರ್ಷಿಯನ್ ಹಾಗೂ ತೊಘಲಕ್ ಶೈಲಿಗಳ ವಾಸ್ತುಗಳು ಕಟ್ಟಲ್ಪಟ್ಟವು. ಈ ಸಂಪ್ರದಾಯಗಳ ಸಮೀಕರಣ ಮಾಡಿದ ಬಹಮನೀ ಶೈಲಿಯೊಂದು ತಲೆಯೆತ್ತಿತು. ಸಹಜವಾಗಿಯೇ ಹಿಂದುಧರ್ಮ ಸಂಸ್ಕೃತಿ ಆಚಾರ ವ್ಯವಹಾರಗಳಿಗೆ ಪ್ರೋತ್ಸಾಹವಾಗಲಿ ಪುರಸ್ಕಾರವಾಗಲಿ ದೊರೆಯಲಿಲ್ಲ. ಕನ್ನಡ ಭಾಷೆ

ಸಾಹಿತ್ಯಗಳಂತೂ ಪೂರ್ಣವಾಗಿ ಕಡೆಗಣಿಸಲ್ಪಟ್ಟುವು. ಒಮ್ಮೆ ತಿರುಳ್ಗನ್ನಡನಾಡಿನ ಭಾಗವಾಗಿದ್ದ ಈ ಪ್ರದೇಶದ ಪ್ರಜೆಗಳು ಆ ಸಂಸ್ಕೃತಿಯನ್ನು ಪೋಷಿಸಲು ಶಕ್ತಿಹೀನರಾದರು. ಇದೊಂದು ಅನಸ್ಥಾ ಪರಿವರ್ತನ ಯುಗವೆನಿಸಿತು.

ಬಹಮನಿ ರಾಜ್ಯದ ಸ್ಥಾನದಲ್ಲಿ ಐದು ಸ್ವತಂತ್ರ ಸುಲ್ತಾನರ ರಾಜ್ಯಗಳು ಹುಟ್ಟಿಕೊಂಡವು. ಅವು ಬೀರಾರ್‌ನ ಇಮದ್‌ಷಾಹಿ, ಅಹಮದ್‌ನಗರದ ನಿಜಾಮುಷಾಹಿ, ಗೋಲ್ಕೊಂಡದ ಕುತುಬ್‌ಷಾಹಿ, ಬಿದರೆಯ ಬರೀದ್‌ಷಾಹಿ ಮತ್ತು ಬಿಜಾಪುರದ ಆದಿಲ್‌ಷಾಹಿ ಮನೆತನಗಳು. ಇವಗಳಲ್ಲಿ ಕೊನೆಯ ಎರಡೂ ಕರ್ಣಾಟಕಕ್ಕೆ ಸೇರಿದವುಗಳಾದರೂ ಅದರಲ್ಲಿ ಖ್ಯಾತಿ ಹೊಂದಿದ, ಒಂದು ಶತಮಾನಕ್ಕೂ ಹೆಚ್ಚಿನ ಕಾಲ ಆಳಿದ, ಮನೆತನ ಆದಿಲ್‌ಷಾಹಿಗಳದು.

ಆದಿಲ್‌ಷಾಹಿಗಳು: ಯೂಸುಫ್ ಆದಿಲ್‌ಖಾನ್ ಸಂಸ್ಥಾಪಕ (೧೪೮೯). ಪರ್ಷಿಯದ ರಾಜಕುಮಾರನಿವನೆಂದೂ ಭಾರತಕ್ಕೆ ಬಂದು ಗವಾನನ ಬಳಿ ಕೆಲಸದಲ್ಲಿ ತರಬೇತಿ ಪಡೆದನೆಂದೂ ಫಿರಿಸ್ತಾ ಹೇಳಿದ್ದಾನೆ. ಆದರೆ ಇದು ಸಂದೇಹಾಸ್ಪದ. ಮಹಾರಾಷ್ಟ್ರದ ಸ್ತ್ರೀಯೊಬ್ಬಳನ್ನು ಲಗ್ನವಾಗಿದ್ದ ಈತ ಸಾಹಿತ್ಯ ಮತ್ತು ಕಲೆಗಳ ಅಭಿಮಾನಿಯಾಗಿದ್ದ. ಮತಾಂಧತೆ ಇವನನ್ನು ಕಾಡಲಿಲ್ಲ. ಇವನ ಅನೇಕ ಅಧಿಕಾರಿಗಳು ಹಿಂದುಗಳೇ ಆಗಿದ್ದರು. ಸ್ವತಂತ್ರನಾದ ನಂತರ ಗೋವೆಯನ್ನು ಪೋರ್ಚುಗೀಸರಿಂದ ಈತನು ಕಸಿದುಕೊಂಡನು (೧೫೧೦).

ನಂತರ ಬಂದ ಅಲ್ಪವಯಸ್ಕನಾದ ಇಸ್ಮಾಯಿಲನ ಅಧಿಕಾರವನ್ನು ಕಿತ್ತುಕೊಳ್ಳಲು ರಾಜಪ್ರತಿನಿಧಿಯಾದ ಕಮಾಲ್‌ಖಾನ್ ಯತ್ನಿಸಿ, ವಿಫಲನಾಗಿ ಹತನಾದನು. ರಾಯಚೂರು ಇಸ್ಮಾಯಿಲ್ ಕಾಲದಲ್ಲಿ ಪುನಃ ಬಿಜಾಪುರದ ವಶವಾಯಿತು. ೧೫೩೫ರಿಂದ ಆಳಿದವನು ಇಬ್ರಾಹಿಂ ಪ್ರಧಾನಿ ಅಸದ್‌ಖಾನ್. ಕುಟಿಲಬುದ್ಧಿಯ ಈತನು ಅನುಸರಿಸಿದ ನೀತಿಯ ಪರಿಣಾಮವಾಗಿ ಅಹಮದ್‌ನಗರ, ಬಿದರ್ ಮತ್ತು ಗೋಲ್ಕೊಂಡದ ಸುಲ್ತಾನರ ವಿರುದ್ಧ ಇಬ್ರಾಹಿಂ ಕಾದಬೇಕಾಯಿತು.

ಇಬ್ರಾಹಿಮನ ಮಗ ಆಲಿ ರಾಮರಾಯನ ಆಪ್ತಮಿತ್ರ ಇದರಿಂದ ಆಲಿ ಮೊದಮೊದಲು ರಾಮರಾಯನ ವಿರುದ್ಧ ಯುದ್ಧ ಮಾಡಲು ಸಮ್ಮತಿಸಲಿಲ್ಲ. ಆದರೆ ಇತರರು ಇವನ ಮನ ವೊಲಿಸಿದರು. ಅಹಮದ್‌ನಗರದ ನಿಜಾಮ್‌ಷಹನ ಮಗಳಾದ ಚಾಂದ್‌ಬೀಬಿಯನ್ನು ತಾನು ಲಗ್ನವಾಗಿ ತನ್ನ ಸೋದರಿ ಬೀಬಿ ಹದಿಯ ಬೇಗಮಳನ್ನು ಹುಸೇನನ ಮಗ ಮುರ್ತುಜಾ ನಿಜಾಮ್‌ಷಹನಿಗೆ ಮದುವೆ ಮಾಡಿಕೊಟ್ಟ ಈ ಒಂದು ರಕ್ತಸಂಬಂಧ ಆಲಿಯನ್ನು ರಾಮರಾಯನ ವಿರುದ್ಧ ಸೈನ್ಯಾಚರಣೆಯಲ್ಲಿ ತೊಡಗಲು ಪ್ರೇರಿಸಿತು. ಪರಿಣಾಮ ತಾಳಿಕೋಟೆ ಕದನದಲ್ಲಿ ರಾಮರಾಯನ ಸೋಲು. ಈ ಸ್ಥಾನಾಂತರ ವಿಜಯನಗರದ ಸೋಲಿಗೆ ಪ್ರಮುಖವಾದ ಕಾರಣಗಳಲ್ಲಿ ಒಂದು.

೧೫೮೦ರಲ್ಲಿ ಆಲಿ ಗತಿಸಿದಾಗ ಅವನ ಮಗ ಇನ್ನೂ ಕಿರಿಯ. ಆದ್ದರಿಂದ ಕೆಲಕಾಲ ಆಡಳಿತದ ಹೊಣೆಯನ್ನು ರಾಣಿ ಚಾಂದ್‌ಬೀಬಿ ಹೊತ್ತಿದ್ದಳು. ಇಮ್ಮಡಿ ಇಬ್ರಾಹಿಂ ಇನ್ನೊಬ್ಬ ಸಮರ್ಥ ಸುಲ್ತಾನ. ಇವನು ತನ್ನ ಹಿಂದು ಪ್ರಜೆಗಳನ್ನು ಬಹಳ ವಿಶ್ವಾಸ

ದಿಂದ ನೋಡಿಕೊಂಡುದರ ಫಲವಾಗಿ ಅವರು ಇವನನ್ನು ಮೆಚ್ಚಿಕೊಂಡಿದ್ದರು. ಬಿಜಾಪುರದ ಇಬ್ರಾಹಿಂ ರೋಜಾ ಇವನ ಕಾಲವ ಕಟ್ಟಡ. ಈತನ ಮಗ ಮಹಮದನು ಮೊಗಲರ (ಷಾಹಜಹಾನನ) ದಾಳಿಯನ್ನೆದುರಿಸಬೇಕಾಯಿತು. ಅವನಿಂದ ಸೋಲಿಸಲ್ಪಟ್ಟು ಕಪ್ಪ ಕಾಣಿಕೆಗಳನ್ನು ಕೊಡಲು ಒಪ್ಪಿಕೊಂಡನು. ಬಿಜಾಪುರದ ವಿಶ್ವವಿಖ್ಯಾತ ಗೋಲಗುಮ್ಮಟ (ಗೋಲ್‌ಗುಂಬಜ್) ಇವನ ಕಾಲದಲ್ಲಿ ಕಟ್ಟಲಾದ ಕಟ್ಟಡ.

ಇಮ್ಮಡಿ ಅಲಿ ಅದಿಲ್‌ಷಹ ಧೈರ್ಯಶಾಲಿ. ಜೈಸಿಂಗನ ನೇತೃತ್ವದಲ್ಲಿ ಮುತ್ತಿದ ಮೊಘಲ್ ಸೈನ್ಯವನ್ನು ಸೋಲಿಸಿ ಓಡಿಸಿದನು. ತನ್ನ ರಾಜ್ಯದಲ್ಲಿ ಏರುತ್ತಿದ್ದ ಶಿವಾಜಿಯ ಅಧಿಕಾರವನ್ನು ತಗ್ಗಿಸಿದನು. ಬಿದನೂರಿನ ನಾಯಕನನ್ನು ಸೋಲಿಸಿದನು.

ಇವನೊಂದಿಗೆ ಬಿಜಾಪುರದ ವೈಭವವೂ ಕುಗ್ಗಿತು. ೧೬೭೨ರ ಬಳಿಕ ಅಂತಃಕಲಹ ಗಳು ಹೆಚ್ಚಿ ಅಲ್ಲಿನ ಪ್ರಧಾನಿಗಳು ಹೆಚ್ಚು ಅಧಿಕಾರ ಪಡೆದು, ಸುಲ್ತಾನನನ್ನು ಮೂಲೆ ಗುಂಪುಮಾಡಿದರು. ೧೬೭೨–೮೬ರ ವರೆಗಿನ ೧೪ ವರ್ಷಗಳಲ್ಲಿ ಸುಲ್ತಾನ ಸಿಕಂದರನು ಬಹುವರ್ಷಗಳನ್ನು ದೌಲತಾಬಾದಿನ ಸೆರೆಮನೆಯಲ್ಲಿ ಕಳೆದನು. ೧೭೦೦ರ ವರೆಗೆ ಅಲ್ಲಿಂದಿಲ್ಲಿಗೆ ಅವನನ್ನು ಸ್ಥಳಾಂತರಿಸಲಾಯಿತು.

ಆಗ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿದ್ದ ಮರಾಠರ ಪ್ರಭಾವಕ್ಕೆ ಬಿಜಾಪುರ ಬಹಳಮಟ್ಟಿಗೆ ಒಳಪಟ್ಟಿತ್ತು. ಅಂದಿನಿಂದ ಮರಾಠೀ ಭಾಷೆ ಈ ಪ್ರದೇಶದಲ್ಲಿ ಹೆಚ್ಚು ಪ್ರಚುರವಾಯಿತು. ಷಹಜೀ ಬಿಜಾಪುರದ ಸುಲ್ತಾನನ ಅಧೀನದಲ್ಲಿ ಒಬ್ಬ ಜಹಗೀರು ದಾರನಾಗಿದ್ದು, ಮಹಮದನು ರಣದುಲ್ಲಾ ಖಾನನ ನಾಯಕತ್ವದಲ್ಲಿ ದಕ್ಷಿಣಕ್ಕೆ ಕಳು ಹಿಸಿದ ಸೇನೆಯಲ್ಲಿ ಒಬ್ಬ ಪ್ರಮುಖ ಸರದಾರನಾಗಿದ್ದನು. ೧೬೩೯ರಲ್ಲಿ ಈತ ಬೆಂಗಳೂರನ್ನು ಕೆಂಪೇಗೌಡನಿಂದ ಪಡೆದುಕೊಂಡನು. ಶ್ರೀರಂಗಪಟ್ಟಣದ ಕಂಠೀರವ ನರಸರಾಜನನ್ನು ಸೋಲಿಸಿದನು. ಕೋಲಾರ, ಬಳ್ಳಾಪುರಗಳಲ್ಲಿ ಓಲಗ ಗೊಟ್ಟು ವೈಭವವನ್ನು ಮೆರೆದನು. ತನ್ನೊಡನೆ ಅನೇಕ ಮಹಾರಾಷ್ಟ್ರೀಯ ಕುಟುಂಬಗಳನ್ನು ಕರೆತಂದು ಈ ಪ್ರದೇಶಗಳಲ್ಲಿ ನೆಲಸುವಂತೆ ಮಾಡಿದನು.

ಮೊದಲು ಶಿವಾಜಿ, ನಂತರ ಪೇಶ್ವೆಗಳು ಧನದಾಸೆಯಿಂದ ಮೈಸೂರಿನ ಪ್ರದೇಶಗಳಿಗೆ ಮುತ್ತಿಗೆ ಹಾಕಿದಾಗ ಪ್ರತಿಭಟನೆ ತಲೆದೋರಿತು. ಮೈಸೂರು ಮರಾಠರ ನಡುವಣ ಕದನ ಗಳಲ್ಲಿ, ನಂತರ ಮೈಸೂರು ಹಾಗೂ ಇಂಗ್ಲೀಷರ ನಡುವಣ ಕದನಗಳಲ್ಲಿ ಅಂತಿಮ ಜಯ ಬ್ರಿಟಿಷರದಾಗಿ ಅವರು ಕೊನೆಗೆ ಇಬ್ಬರನ್ನೂ ಕಬಳಿಸಿದರೆಂಬುದು ಸರ್ವವಿದಿತ. ಹೀಗೆ ಉತ್ತರ ಕರ್ನಾಟಕದ ಭಾಗ ಮಹಮ್ಮದೀಯರ ನಂತರ ಮಹರಾಷ್ಟ್ರದ ಪಾಲಿಗೆ ದೊರೆತು ಕೊನೆಗೆ ಬ್ರಿಟಿಷರಿಗೆ ಸೇರಿತು.

## ಆರವೀಡು ಮನೆತನ

ತಾಳಿಕೋಟೆ ಕದನದ ಕೊನೆಗೆ ವೆಂಕಟಾದ್ರಿ ಮತ್ತು ತಿರುಮಲರು ಸಾಧ್ಯವಿದ್ದಷ್ಟು ಧನಕನಕಗಳನ್ನು ಹೊತ್ತು ರಾಜಧಾನಿಯಿಂದ ಪೆನುಗೊಂಡೆಗೆ ಓಡಿದರಷ್ಟೆ. ಸು. ಆರು ತಿಂಗಳಕಾಲ ವಿಜಯನಗರ ಸೂರೆ ಸುಲಿಗೆಗಳಿಗೆ ತುತ್ತಾಯಿತು. ಇತಿಹಾಸದಲ್ಲಿ ಕೇಳರಿಯ

ದಷ್ಟು ಸೇಡಿನ ಜ್ವಾಲೆ ನಗರವನ್ನು ದಹಿಸಿತು. ಎಲ್ಲೆಲ್ಲಿಯೂ ವಿಚ್ಛೇದ, ವಿನಾಶ, ಭ್ರಷ್ಟಾಚಾರ. ಬೇಡರು, ಪುಂಡರು, ಕಳ್ಳರು ಕೊಲೆಸುಲಿಗೆಗಳ ಹಾವಳಿ ಎಬ್ಬಿಸಿದರು. ಕೊನೆಗೊಮ್ಮೆ ನಿಸ್ಸತ್ತ್ವವಾದ ಪಟ್ಟಣ ಅಗ್ನಿನಾರಾಯಣನಿಗೆ ಆಹುತಿಯಾಯಿತು.

ತಿರುಮಲನು ರಾಜಧಾನಿಗೆ ಪುನಃ ಹಿಂದಿರುಗುವ ಆಸೆ ಹೊಂದಿದ್ದನಾದರೂ ಅದು ಈಡೇರಲಿಲ್ಲ. ವಿಜಯನಗರ ಹಾಳುಹಂಪೆಯಾಯಿತು. ಸದಾಶಿವರಾಯನು ೧೫೭೦ರ ವರೆಗೂ ಬದುಕಿದ್ದನು. ಆದರೆ ಬಂಧನದಲ್ಲಿದ್ದ ಅವನೊಂದಿಗೆ ವಿಜಯನಗರದ ಮೂರನೆಯ ಮನೆತನ ಅಸ್ತಂಗತವಾಗಿ ಆರವೀಡು ಮನೆತನ ಈಗ ಅಸ್ತಿತ್ವಕ್ಕೆ ಬಂದಿತು. ಚಂದ್ರವಂಶೀಯರಾದ ಈ ಮನೆತನದ ಅರಸರ ಐತಿಹಾಸಿಕ ಮೂಲಪುರುಷ ತಾತ ಪಿನ್ನಮ. ಈತನಿಂದ ಏಳನೆಯ ತಲೆಮೂರಿನವನು ತಿರುಮಲ ಶ್ರೀರಂಗನ ಮಗ; ರಾಮರಾಜನ ಅನುಜ, ವೆಂಕಟಾದ್ರಿಯ ಅಗ್ರಜ. ತಾಳಿಕೋಟೆ ಕದನದಿಂದ ಸುಲ್ತಾನರ ಅಂತಃಕಲಹಗಳು ಕೊನೆಗಾಣಲಿಲ್ಲ. ಗೋಲ್ಕೊಂಡ ಬಿಜಾಪುರಗಳು ಪರಸ್ಪರ ಕದನಗಳನ್ನು ಮುಂದುವರಿಸಿದವು. ತಿರುಮಲನಿಗೆ ರಾಜ್ಯವಾಳಲು ಇದು ಅವಕಾಶವನ್ನೊದಗಿಸಿತು. ೧೫೭೩ರಲ್ಲಿ ಬಿಜಾಪುರದ ಅಲಿಯು ಪಶ್ಚಿಮದ ತೊರಗಲ್, ಧಾರವಾಡ, ಬಂಕಾಪುರಗಳನ್ನು ವಶಪಡಿಸಿಕೊಂಡನು. ತಿರುಮಲನು ತನ್ನ ಮೂವರು ಮಕ್ಕಳಾದ ಶ್ರೀರಾಮ, ಶ್ರೀರಂಗ ಹಾಗೂ ವೆಂಕಟಪತಿಗಳನ್ನು ಮೂರು ಭಾಷಾಪ್ರಾಂತಗಳ ಮಂಡಲೇಶ್ವರರಾಗಿ ನೇಮಿಸಿದನು. ಶ್ರೀರಂಗನು ಉದಯಗಿರಿಯಲ್ಲಿದ್ದು ಕೊಂಡವೀಡು, ವಿನುಕೊಂಡ ಮುಂತಾದ ಕೋಟೆಗಳನ್ನು ಆಕ್ರಮಿಸಿ, ಕ್ರಮೇಣ ಪೆನುಗೊಂಡೆಗೆ ಬಂದು ನೆಲಸಿದನು. ಎರಡನೆಯವನಾದ ರಾಮದೇವನು ಕರ್ಣಾಟಕದ ಶ್ರೀರಂಗಪಟ್ಟಣದಲ್ಲಿ ಆಳತೊಡಗಿದನು. ವೆಂಕಟಪತಿಯ ರಾಜಧಾನಿ ಚಂದ್ರಗಿರಿ. ಆತ ಅಲ್ಲಿಂದ ಜಿಂಜಿ, ತಂಜಾವೂರು, ಮಧುರೆ ಮೊದಲಾದ ಪ್ರದೇಶಗಳ ಒಡೆತನವನ್ನು ನೋಡಿಕೊಂಡನು. ಈ ವ್ಯವಸ್ಥೆಯಿಂದ ರಾಜ್ಯದಲ್ಲಿ ಸ್ವಲ್ಪಮಟ್ಟಿಗೆ ಸುಭದ್ರತೆ ನೆಲೆಸಿದಂತಾಯಿತು. ತಮಿಳುನಾಡಿನ, ಕರ್ಣಾಟಕದ ನಾಯಕರು ನಿಷ್ಠೆಯಿಂದಿರುವಂತಾಯಿತು.

ತಿರುಮಲನ ಬಳಿಕ ಮೊದಲು ಶ್ರೀರಂಗ, ನಂತರ ವೆಂಕಟಪತಿ ಆಳಿದರು. ಇವರು ಸುಲ್ತಾನರ ದಾಳಿಗಳನ್ನು ಮೇಲಿಂದ ಮೇಲೆ ಎದುರಿಸಬೇಕಾಯಿತು. ಒಳಗಿನ ನಾಯಕರ ಪಾಳೆಯಗಾರರ ದಂಗೆಗಳು ಬೇರೆ. ಆದರೂ ತಂಜಾವೂರಿನ ರಘುನಾಥನಾಯಕ, ವೇಲುಕೋಟೆಯ ಕಸ್ತೂರಿ ರಂಗಪ್ಪ ಮತ್ತು ಆತನ ಮಗ ಎಚ್ಚಮನಾಯಕ ಮುಂತಾದವರ ಸಹಾಯ ವೆಂಕಟಪತಿಗೆ ಲಭಿಸಿತು. ಈ ವೇಳೆಗೆ ಡಚ್ಚರು ಭಾರತಕ್ಕೆ ಬಂದು ಪೂರ್ವತೀರ ಪ್ರದೇಶದಲ್ಲಿ ಅಲ್ಲಲ್ಲಿ ಕೋಠಿಗಳನ್ನು ಕಟ್ಟಿಕೊಳ್ಳಲು ಅನುಮತಿ ಬೇಡಿದರು. ವೆಂಕಟಪತಿ ಒಪ್ಪಲಿಲ್ಲ. ಆದರೆ ಕ್ರಮೇಣ ಡಚ್ಚರೂ ಅವರನ್ನನುಸರಿಸಿ ಬ್ರಿಟಿಷರೂ ಒತ್ತಡಗಳನ್ನು ಹೇರತೊಡಗಿದರು.

ವೆಂಕಟಪತಿಯ ನಂತರ ರಾಜ್ಯಕ್ಕಾಗಿ ಅಂತಃಕಲಹಗಳಾದವು. ಹಕ್ಕುದಾರನಾದ ಪುತ್ರ ಈ ಅರಸರಿಗಿಲ್ಲದಿದ್ದುದೊಂದು ಈ ಕಲಹಗಳಿಗೆ ಕಾರಣ. ಈ ವೇಳೆಗೆ ಶ್ರೀರಂಗಪಟ್ಟಣದ ರಾಜ ಒಡೆಯನು ಪ್ರಾಂತಾಧಿಪತಿ ತಿರುಮಲನ ವಿರುದ್ಧ ಬಂಡೆದ್ದು ಸ್ವತಂತ್ರನಾದನು.

ಆದರೆ ಅದು ಶ್ರೀರಂಗಪಟ್ಟಣದ ಒಡೆತನಕ್ಕೆ ಸಂಬಂಧಿಸಿದಂತೆ ಮಾತ್ರ. ಅನ್ಯತಃ ಅವನು ವೆಂಕಟಪತಿಗೆ ವಿಧೇಯನಾಗಿದ್ದನು. ಇದರಂತೆ ಕೆಳದಿಯಲ್ಲಿ ವೆಂಕಟಪ್ಪನಾಯಕನು ಸಹ ವರ್ತಿಸಿದನು. ಆದರೆ ಮೈಸೂರು ಹಾಗೂ ಕೆಳದಿಯ ಅರಸರು ನಂತರ ಪ್ರತಿಸ್ಪರ್ಧಿಗಳಾದರು.

ವೆಂಕಟಪತಿ ತಿರುಪತಿಯ ವೆಂಕಟೇಶನ ಭಕ್ತ. ಇವನು ಶ್ರೀ ವೆಂಕಟೇಶ ಎಂಬ ಹೊಸ ಮುದ್ರಿಕೆಯೊಂದಿಗೆ ತನ್ನ ಶಾಸನಗಳನ್ನು ಹೊರಡಿಸತೊಡಗಿದನು. ತಂಜಾವೂರು, ಮಧುರೆ, ತಿರುಪತಿ ಮುಂತಾದ ಕ್ಷೇತ್ರಗಳು ಸಾಹಿತ್ಯ ಹಾಗೂ ಕಲೆಗಳ ಕೇಂದ್ರಗಳಾದವು. ತಾತಾಚಾರ್ಯರು ಅರಸನ ಗುರುಗಳು. 'ಕುವಲಯಾನಂದ'ದ ಕರ್ತೃವಾದ ಅಪ್ಪಯ್ಯ ದೀಕ್ಷಿತ, ತೆಲುಗು ಕವಿ ತೆನಾಲಿರಾಮಕೃಷ್ಣ, ದಂಡನಾಯಕ ಮಾಟ್ಲ ಅನಂತ, 'ಶಬ್ದಾನುಶಾಸನ'ದ ಭಟ್ಟಾಕಳಂಕ, ಗೋವಿಂದ ದೀಕ್ಷಿತ, ವಿಜಯೀಂದ್ರತೀರ್ಥ, 'ಚೆನ್ನಬಸವ ಪುರಾಣ'ದ ವಿರೂಪಾಕ್ಷಪಂಡಿತ ಮುಂತಾದವರು ಈ ಕಾಲದ ಖ್ಯಾತ ಕವಿಗಳು, ಪಂಡಿತರು.

ಅಂತಃಕಲಹಗಳ ಪರಿಣಾಮವಾಗಿ ಮೂರು ನಾಲ್ಕು ವರ್ಷಗಳ ಅನಾಯಕತ್ವ. ನಿಷ್ಠಾವಂತರಾದ ರಘುನಾಥ, ಎಚ್ಚಮನಾಯಕ ಮುಂತಾದವರೊಂದು ಕಡೆ, ದ್ರೋಹಿಗಳಾದ ಜಗರಾಯ, ಮುತ್ತು ವೀರಪ್ಪ ಮುಂತಾದವರು ಇನ್ನೊಂದು ಕಡೆ. ಅರಮನೆಯಲ್ಲಿ ರಾಜಕುಮಾರರ, ರಾಣೀವಾಸದವರ ಅಮಾನುಷ ಹತ್ಯಾಕಾಂಡಗಳು. ೧೬೧೪ರ ವರೆಗೆ ನಾಲ್ವಡಿ ರಾಮದೇವರಾಯನು ಆಳಿದನು. ಎಚ್ಚಮನಾಯಕನು ರಾಜಪ್ರತಿನಿಧಿಯಾಗಿ ರಾಜ್ಯಭಾರ ನಡಸಿಕೊಂಡು ಹೋದನು. ಅರಸನು ಪ್ರಬುದ್ಧನಾದಮೇಲೆ ಅಳಿಯ ರಾಮರಾಯನ ಮೊಮ್ಮಗ ವೆಂಕಟಪತಿ ಯುವರಾಜನಾದನು. ಕೆಳದಿ, ಮೈಸೂರು, ತಂಜಾವೂರಿನ ನಾಯಕರು ನಿಷ್ಠೆಯಿಂದಿದ್ದು ಶಾಂತಿ ತಲೆದೋರಿತು. ಆದರೆ ಪೋರ್ಚುಗೀಸ್, ಡಚ್ ಹಾಗೂ ಇಂಗ್ಲಿಷರು ಕ್ರಮೇಣ ಎರಡೂ ತೀರಪ್ರದೇಶಗಳಲ್ಲಿ ಒಡೆತನ ಸಾಧಿಸಲಾರಂಭಿಸಿ, ಅವರೊಡನೆ ತಿಕ್ಕಾಟಗಳಾದುವು.

ರಾಮದೇವರಾಯನ ಬಳಿಕ ಪುನಃ ಸಿಂಹಾಸನಕ್ಕಾಗಿ ಕಾದಾಟಗಳಾದುವು. ಪುನಃ ಅಸ್ಥಿರತೆ ಕಾಣಿಸಿಕೊಂಡಿತು. ಕೊನೆಗೆ ಮೂರನೆಯ ವೆಂಕಟಪತಿ ಅರಸನಾದನು. ಇದೇ ಸಮಯದಲ್ಲಿ ಬಿಜಾಪುರದ ರಣದುಲ್ಲಾಖಾನನು ಇಕ್ಕೇರಿಯನ್ನು ಮುತ್ತಿದನು. ಬೆಂಗಳೂರಿನ ಕೆಂಪೇಗೌಡನನ್ನು ಸೋಲಿಸಿದನು. ಆದರೆ ಶ್ರೀರಂಗಪಟ್ಟಣವನ್ನು ಮುತ್ತಿದಾಗ ಕಂಠೀರವ ನರಸರಾಜನು ಅವನನ್ನು ಹಿಂದಿರುಗಿಸಿದನು. ವೆಂಕಟಪತಿಯ ಮರಣಾನಂತರ ಪುನಃ ಜ್ಞಾತಿಯುದ್ಧ ಆರಂಭ. ಕೊನೆಗೆ ಶ್ರೀರಂಗರಾಯನು ಅಧಿಕಾರಕ್ಕೆ ಬಂದನು. ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸನೀತ.

ಗೋಲ್ಕೊಂಡದ ಸುಲ್ತಾನನು ವೆಲ್ಲೂರನ್ನು ಮುತ್ತಿದನು. ಜಿಂಜಿ ಮತ್ತು ಮಧುರೆಯ ನಾಯಕರು ಸುಲ್ತಾನನನ್ನು ಬೆಂಬಲಿಸಿದರು. ಒಮ್ಮೆ ೧೬೪೭ರಲ್ಲಿ, ನಂತರ ೧೬೫೭ರಲ್ಲಿ ಅರಸನು ವೆಲ್ಲೂರನ್ನು ತ್ಯಜಿಸಿ ಓಡಬೇಕಾಯಿತು. ಮೊದಲು ಕೆಳದಿಯ ಶಿವಪ್ಪನಾಯಕನ ಆಶ್ರಯ; ನಂತರ ಮೈಸೂರಿನ ಕಂಠೀರವ ನರಸರಾಜನು ಇವನಿಗೆ ಆಶ್ರಯವಿತ್ತನು.

ಆದರೆ ಮಧುರೆಯ ನಾಯಕರಿಗೂ ಮೈಸೂರಿನ ಅರಸರಿಗೂ ನಡೆದ ಕದನ ಶ್ರೀರಂಗರಾಯನ ಪರಿಸ್ಥಿತಿಯನ್ನು ಚಿಂತಾಜನಕಗೊಳಿಸಿತು. ಮೈಸೂರು ಸೋತಾಗ ಶ್ರೀರಂಗರಾಯನು ಬೇಲೂರಿಗೆ ಓಡಿದನು. ಈ ವೇಳೆಗೆ ದಕ್ಷಿಣ ಭಾರತ ಮರಾಠರ ಮತ್ತು ಬಿಜಾಪುರ ಸುಲ್ತಾನರ ದಾಳಿಗಳಿಗೀಡಾಗಿತ್ತು. ಕವಡಿದ ರಾಜಕೀಯ ಪರಿಸ್ಥಿತಿಗಳು ಶ್ರೀರಂಗರಾಯನನ್ನು ಕಂಗೆಡಿಸಿದವು. ೧೬೮೧ರಲ್ಲಿ ಶ್ರೀರಂಗರಾಯನು ಮಡಿದಾಗ ಅವನದೆನ್ನುವ ರಾಜ್ಯವಾವುದೂ ಇರಲಿಲ್ಲ.

## ಕೆಳದಿಯ ನಾಯಕರು

೧೬ನೆಯ ಶತಮಾನದ ನಂತರ ಕರ್ಣಾಟಕದ ಮಲೆನಾಡಿನ ಪ್ರದೇಶದಲ್ಲಿ ರಾಜ್ಯವನ್ನು ಕಟ್ಟಿ, ವಿಜಯನಗರ ಸಾಮ್ರಾಜ್ಯದ ಧ್ಯೇಯಧೋರಣೆಗಳನ್ನು ಮುಂದುವರಿಸಿಕೊಂಡು ಬಂದವರಿವರು. ಶಿವಮೊಗ್ಗ ಜಿಲ್ಲೆಯ ಕೆಳದಿಯ ಸುತ್ತಲೂ ಬೆಳೆದ ರಾಜ್ಯ ಇವರದು. ಚೌಡಪ್ಪಗೌಡನೆಂಬ ಒಕ್ಕಲಿಗ ಈ ಮನೆತನದ ಮೂಲಪುರುಷ. ಆಕಸ್ಮಿಕವಾಗಿ ದೊರೆತ ನಿಧಿಯಿಂದ ಪಾಳೆಯವೊಂದನ್ನು ರಚಿಸಿಕೊಂಡು ಪ್ರಬಲನಾದ ಈತನಿಗೆ ಕೃಷ್ಣದೇವರಾಯನಿಂದ ಮನ್ನಣೆ ದೊರೆಯಿತು. ಈತ ಕೆಳದಿಯ ಚೌಡಪ್ಪನಾಯಕನೆನಿಸಿಕೊಂಡ (ಸು. ೧೫೦೦–೩೦). ಈತನ ಮಗ ಸದಾಶಿವ ಅಳಿಯ ರಾಮರಾಯನಿಗೆ ಬೆಂಬಲವಾಗಿ ಬಿಜಾಪುರದ ಇಬ್ರಾಹಿಮನನ್ನು ಎದುರಿಸಿ ಸೋಲಿಸಿದ. ಕಲ್ಯಾಣದ ಕೋಟೆಯನ್ನು ವಶಪಡಿಸಿಕೊಂಡ. ಇಮ್ಮಡಿ ಸದಾಶಿವನಾಯಕನೆಂಬ ಬಿರುದನ್ನೂ ಚಂದ್ರಗುತ್ತಿ, ಬಾರಕೂರು, ಮಂಗಳೂರು ಪ್ರಾಂತಗಳ ಒಡೆತನವನ್ನೂ ಸಂಪಾದಿಸಿದ. ಸಮೀಪದ ಇಕ್ಕೇರಿ ಇವನ ರಾಜಧಾನಿಯಾಯಿತು (೧೫೩೦–೬೭). ಈತನ ಮಗ ಚಿಕ್ಕಸಂಕಣನಾಯಕ (೧೫೬೭–೮೨) ಬಿಜಾಪುರದ ಸಲಬತ್‌ಖಾನ್, ಗೇರುಸೊಪ್ಪೆಯ ಭೈರಾದೇವಿ ಮತ್ತು ಅರಸಪ್ಪನಾಯಕ ಇವರನ್ನು ಸೋಲಿಸಿದನು.

ಈ ವೇಳೆಗಾಗಲೇ ತಾಳಿಕೋಟೆ ಕದನ ಮುಗಿದು ಈ ನಾಯಕರು ಸ್ವತಂತ್ರರಾಗಿದ್ದರು. ಆದರೂ ವಿಜಯನಗರದ ಅರಸನಿಗೆ ತಮ್ಮ ನಿಷ್ಠೆಯನ್ನು ತೋರಿಸಿದರು. ವೆಂಕಟಪ್ಪನಾಯಕ (I) (೧೫೮೨–೧೬೨೯) ಪಶ್ಚಿಮ ತೀರದಲ್ಲಿದ್ದ ಚೌಟ, ಬಂಗ ಮುಂತಾದ ಸಣ್ಣ ಸಣ್ಣ ಮಾಂಡಲಿಕರನ್ನು ಸೋಲಿಸಿ ಆ ಪ್ರದೇಶಗಳ ಸ್ವಾಮಿತ್ವ ಪಡೆದನು. ಇದರಿಂದ ಹೊರದೇಶ ವ್ಯಾಪಾರದ ಮೇಲೆ ಈತನಿಗೆ ಹತೋಟಿ ಲಭಿಸಿತು. ಪೋರ್ಚುಗೀಸರು ಇವನ ಸ್ನೇಹ ಬಯಸಿದರು. ಬಿಜಾಪುರದ ಸುಲ್ತಾನನು ರಣದುಲ್ಲಾಖಾನನೊಡನೆ ಕಳುಹಿದ ಸೈನ್ಯ ಸೋತು ಓಡಿತು. ಮೆಣಸಿನ ರಾಣಿ ಎಂದು ಪ್ರಸಿದ್ಧಳಾದ ಗೇರುಸೊಪ್ಪೆಯ ಭೈರಾದೇವಿ ಸಹ ಸೋತಳು. ಸ್ವತಃ ವೀರಶೈವನಾದ ನಾಯಕನು ಶೃಂಗೇರಿ ಮಠಕ್ಕೆ ಅನೇಕ ಕೊಡುಗೆಗಳನ್ನು ನೀಡಿದನು. ತನ್ನ ರಾಜ್ಯದಲ್ಲಿನ ಮುಹಮ್ಮದೀಯ ಪ್ರಜೆಗಳಿಗಾಗಿ ಭುವನಗಿರಿಯ ದುರ್ಗದಲ್ಲಿ ಮಸೀದಿಯೊಂದನ್ನು ಕಟ್ಟಿಸಿದನು. ಇಟಲಿ ದೇಶದ ಯಾತ್ರಿಕ ಪೆಟ್ರೊ ಡೆಲ್ಲವಲ್ಲೆ ಇವನ ಕಾಲದಲ್ಲಿ ಕೆಳದಿ ರಾಜ್ಯ

ದಲ್ಲಿ ಸಂಚರಿಸಿದನು. ವೆಂಕಟಪ್ಪನು ರಾಜಧಾನಿಯನ್ನು ಬಿದನೂರಿಗೆ ಬದಲಿಸಿದನು.

ಇನ್ನೊಬ್ಬ ಪ್ರಮುಖ ನಾಯಕ ಶಿವಪ್ಪ (೧೬೪೫–೬೦). ಈತನ ಕಾಲದಲ್ಲಿ ಈ ಸಣ್ಣ ರಾಜ್ಯ ಮತ್ತಷ್ಟು ವಿಸ್ತರಿಸಿತು. ಹಾಸನ, ಚಿಕ್ಕಮಗಳೂರು ಜಿಲ್ಲೆಗಳನ್ನೊಳಗೊಂಡಿತು. ಬಿಜಾಪುರ ಗೋಲ್ಕೊಂಡಗಳ ಸುಲ್ತಾನರು ಶ್ರೀರಂಗರಾಯನ ವಿರುದ್ಧ ವೆಲ್ಲೂರನ್ನು ಮುತ್ತಿದಾಗ ಶಿವಪ್ಪನು ಆ ಕೋಟೆಯನ್ನು ರಕ್ಷಿಸಿದನು. ಪೋರ್ಚುಗೀಸರು ದೌರ್ಜನ್ಯದಿಂದ ಕರಾವಳಿ ಪ್ರದೇಶಗಳನ್ನು ಆಕ್ರಮಿಸಲು ಯತ್ನಿಸಿದಾಗ ಅವರನ್ನು ಮಂಗಳೂರು, ಕುಂದಾಪುರ, ಗಂಗೊಳ್ಳಿ, ಹೊನ್ನಾವರ ಮುಂತಾದ ತೀರಪ್ರದೇಶಗಳಿಂದ ಹೊರದೂಡಿದನು. ಶ್ರೀರಂಗನು ಅಂತಿಮವಾಗಿ ಸುಲ್ತಾನನಿಂದ ಸೋಲಿಸಲ್ಪಟ್ಟು ನೆಲೆಯಿಲ್ಲದೆ ಓಡಿದಾಗ ನಿಷ್ಠಾವಂತ ಸೇವಕನಾದ ಶಿವಪ್ಪನು ಅವನಿಗೆ ಆಶ್ರಯವನ್ನಿತ್ತಿದ್ದನು.

ರಾಜ್ಯದಲ್ಲಿ ಭದ್ರತೆ ಮತ್ತು ಸ್ಥಿರತೆಗಳನ್ನು ಉಂಟುಮಾಡಲು ಈತನು ಶಿಸ್ತು ಎಂಬ ಹೆಸರಿನಲ್ಲಿ ಭೂಕಂದಾಯ ಪದ್ಧತಿಯೊಂದನ್ನು ಜಾರಿಗೆ ತಂದನು. ಶಿವಪ್ಪನ ಶಿಸ್ತು ಎಂದು ಹೆಸರಾಂತ ಇದು ಇವನ ನಂತರವೂ ಬಹಳ ಕಾಲ ಆ ರಾಜ್ಯಕ್ಕೆ ಸೇರಿದ ಪ್ರದೇಶಗಳಲ್ಲೆಲ್ಲ ರೂಢಿಯಲ್ಲಿತ್ತು. ಭೂಮಿಯನ್ನು ಅದರ ಶಕ್ಯಾನುಸಾರ ಕ್ರಮವಾಗಿ ಐದು ಭಾಗಗಳಾಗಿ ವಿಂಗಡಿಸಿ, ಅಳೆದು ಅವುಗಳ ವಾರ್ಷಿಕ, ಪಂಚವಾರ್ಷಿಕ ಉತ್ಪನ್ನಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಅದರನ್ವಯ ಆ ಭೂಮಿಯ ತೆರಿಗೆಗಳನ್ನು ನಿರ್ಧರಿಸುವುದು ಈ ಶಿಸ್ತು ಪದ್ಧತಿ. ಇದು ಮೊಗಲರ ಕಾಲದಲ್ಲಿ ತೋದರಮಲ್ ವ್ಯವಸ್ಥೆಗೊಳಿಸಿದ ಪದ್ಧತಿಯನ್ನು ಹೋಲುತ್ತದೆ. ಇದು ಭೂಮಿಗೆ ಮಾತ್ರ ಮೀಸಲಾಗಿರದೆ, ಅಡಕೆ ಮುಂತಾದ ಇತರ ಉತ್ಪನ್ನಗಳಿಗೂ ಅನ್ವಯಿಸುತ್ತಿತ್ತು.

ಶಿವಪ್ಪನಾಯಕನ ನಂತರ ರಾಜ್ಯದಲ್ಲಿ ಶೈಥಿಲ್ಯ ಕಾಣಿಸಿತು. ಒಂದು ಕಡೆ ಬಿಜಾಪುರದ ಸುಲ್ತಾನರು ಹಾಗೂ ಮರಾಠರು, ಇನ್ನೊಂದು ಕಡೆ ಮೈಸೂರಿನ ಒಡೆಯರು ಹೆಚ್ಚು ಪ್ರಬಲರಾಗಿ, ಕೊನೆಗೊಮ್ಮೆ ೧೭೬೩ರಲ್ಲಿ ಕೆಳದಿ ರಾಜ್ಯ ನಾಶವಾಯಿತು. ಆದರೂ ಇಲ್ಲಿ ಹೆಸರಿಸಬಹುದಾದ ಇನ್ನೊಬ್ಬ ವ್ಯಕ್ತಿಯೆಂದರೆ ರಾಣಿ ಚನ್ನಮ್ಮಾಜಿ (೧೬೭೦–೯೭). ಈಕೆ ಮೈಸೂರಿನ ಚಾಮರಾಜನೊಡನೆ ಕಾದಿದಳು. ಅರಕಲಗೂಡಿನ ಕದನ(೧೬೯೫)ದಲ್ಲಿ ಸೋತರೂ ಕೆಚ್ಚಿನಿಂದ ಕಾದಿದ ಧೈರ್ಯ ಈಕೆಯದು. ಅಂತೆಯೇ ತನಗೆ ಶರಣಾಗಿ ಬಂದ ಶಿವಾಜಿಯ ಮಗ ರಾಜಾರಾಮನಿಗೆ ರಕ್ಷಣೆಯನ್ನು ಒದಗಿಸಿ, ಬೆನ್ನಟ್ಟಿಬಂದ ಔರಂಗಜೇಬನ ಸೈನ್ಯವನ್ನು ಸೋಲಿಸಿ ಓಡಿಸಿದಳು (೧೬೯೦).

ಈ ಮನೆತನದ ಅರಸರು ವೀರಶೈವರಾದರೂ ಅದ್ವೈತ ಕೇಂದ್ರವಾದ ಶೃಂಗೇರಿಯ ಹಾಗೂ ದ್ವೈತ ಕೇಂದ್ರವಾದ ಉಡುಪಿಯ ಮಠಗಳಿಗೆ ಹೇರಳವಾಗಿ ದತ್ತಿಗಳನ್ನು ನೀಡಿದರು. ಇವರ ಸಮನ್ವಯ ನೀತಿಗೆ ಇದು ಸಾಕ್ಷಿ. ಕ್ರೈಸ್ತರನ್ನೂ ಮಹಮದೀಯರನ್ನೂ ಉದಾರತೆಯಿಂದ ಕಂಡರು. ಶಿವಪ್ಪನಾಯಕನು ತನ್ನ ಪ್ರಜೆಗಳನ್ನು ಮತಾಂತರಗೊಳಿಸಲು ಕ್ರೈಸ್ತ ಪಾದ್ರಿಗಳಿಗೆ ಅನುಮತಿನೀಡಿ ಅವರಿಗೆ ಸೇವೆ ಸಲ್ಲಿಸಲು ಒಬ್ಬ ಭಾರತೀಯ ಪಾದ್ರಿಯನ್ನು ನೇಮಿಸಬೇಕೆಂದು ಸೂಚಿಸಿದನು. ಇಕ್ಕೇರಿಯ ಅಘೋರೇಶ್ವರ ದೇವಾ

ಲಯ ಇವರು ವಾಸ್ತುಶಿಲ್ಪಕ್ಕೆ ನೀಡಿದ ಕೊಡುಗೆ. 'ಶಿವತತ್ತ್ವರತ್ನಾಕರ' ಈ ಕಾಲದ ವಿಶ್ವಕೋಶ. ಇದರ ಕರ್ತೃ ಬಸವಪ್ಪನಾಯಕ (೧೬೯೬-೧೭೧೪). ಈತನ ಇನ್ನೊಂದು ಗ್ರಂಥ ಸಂಸ್ಕೃತದ 'ಸುರದ್ರುಮ.' ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ' ಅನೇಕ ವಿವರಗಳಿಗೆ 'ಶಿವತತ್ವರತ್ನಾಕರ'ವನ್ನಾಧರಿಸಿದೆ.

## ಮೈಸೂರಿನ ಒಡೆಯರು

ತಾಳಿಕೋಟೆ ಕದನಾನಂತರ ಹಿಂದುಧರ್ಮ ಸಂಸ್ಕೃತಿಗಳ ಪೋಷಣೆಯ ಹೊರೆಯನ್ನು ಹೊತ್ತು ಸ್ವತಂತ್ರವಾಗಿ ಆಳಿದವರು ಮೈಸೂರಿನ ಅರಸರು. ಈ ಮನೆತನದ ಮೂಲಪುರುಷರು ಚಂದ್ರವಂಶೀಯರೆಂಬುದು ಸಾಂಪ್ರದಾಯಿಕ ಕತೆ. ಉತ್ತರದ ದ್ವಾರಕೆಯಿಂದ ಬಂದ ಕೆಲವು ಯಾದವ ರಾಜಕುಮಾರರು ಮೇಲುಕೋಟೆಯ ತಿರುನಾರಾಯಣನ ದರ್ಶನ ಮಾಡಿದ ಬಳಿಕ ಹಿಂದಿರುಗದೆ ಅಲ್ಲಿಯೇ ನಿಂತರೆಂದೂ ಅವರಲ್ಲಿ ವಿಜಯ, ಕೃಷ್ಣ ಎಂಬಿಬ್ಬರು ಸೇರಿದ್ದರೆಂದೂ ಹಿರಿಯನಾದ ವಿಜಯ ಮೈಸೂರಿನ ರಾಜಕುಮಾರಿಯನ್ನು ಕಾರುಗಹಳ್ಳಿ ನಾಯಕನ ಕುತಂತ್ರದಿಂದ ಪಾರುಮಾಡಿ ಅವಳನ್ನು ಮದುವೆಯಾದನೆಂದೂ ಒಂದು ಕತೆ ಪ್ರಚಾರದಲ್ಲಿದೆ.

ಮೊದಲ ಅರಸರನ್ನು ಕುರಿತ ಹೆಚ್ಚಿನ ವಿವರಗಳು ತಿಳಿಯವು. ತಾಳಿಕೋಟೆ ಕದನದ ಸಮಯದಲ್ಲಿ 'ಬಿರುದಂತೆಂಬರ ಗಂಡ'ನೆಂದು ವರ್ಣಿಸಲಾದ ತಿಮ್ಮರಾಜ ಒಡೆಯ ಆಳುತ್ತಿದ್ದನು (೧೫೫೩-೭೨). ಈ ಬಿರುದು ಹದಿನಾಡಿನ ಈ ಪ್ರಭುವಿಗೆ ಮಾತ್ರ ಸಲ್ಲತಕ್ಕದೆಂದೂ ಇತರರು ಇದನ್ನು ಧರಿಸಕೂಡದೆಂದೂ ಆಜ್ಞಾಪಿಸಿದನು. ಇವನ ತಮ್ಮ ಬೋಳ ಚಾಮರಾಜ ಒಡೆಯನು (೧೫೭೨-೭೬). ಸಿಡಿಲೊಂದು ಇವನ ಮೇಲೆರಗಿ ತಲೆಯ ಕೂದಲು ಉದುರಿದುದರಿಂದ ಇವನಿಗೆ ಹಾಗೆ ಅಡ್ಡ ಹೆಸರಾಯಿತು. ಮೈಸೂರು ನಗರಕ್ಕೆ ಕೋಟೆ ಕಟ್ಟಿಸಿದ. ವಿಜಯನಗರಕ್ಕೆ ಸಲ್ಲಿಸಬೇಕಾದ ಕಪ್ಪವನ್ನು ಸಲ್ಲಿಸದೆ ಆ ರಾಜ್ಯದ ಪ್ರತಿನಿಧಿಯನ್ನು ಓಡಿಸಿದ.

೧೫೭೮ರಲ್ಲಿ ಅಧಿಕಾರಕ್ಕೆ ಬಂದ ರಾಜ ಒಡೆಯ ಅತಿಪ್ರಮುಖ. ಕಾರುಗ ಹಳ್ಳಿಯ ವೀರರಾಜಯ್ಯನನ್ನು ಸೋಲಿಸಿ, ಅವನ ಪ್ರದೇಶಗಳನ್ನು ಆಕ್ರಮಿಸಿದ. ಮೈಸೂರು ಜಿಲ್ಲೆಯ ದಕ್ಷಿಣ ಭಾಗವನ್ನೊಳಗೊಳ್ಳುವಂತೆ ರಾಜ್ಯವನ್ನು ವಿಸ್ತರಿಸಿದ. ೧೬೧೦ರಲ್ಲಿ ವಿಜಯನಗರದ ವೆಂಕಟಪತಿರಾಯನಿಂದ ಸ್ವತಂತ್ರನಾದ ದೊರೆ ಎಂಬ ಮನ್ನಣೆಯನ್ನು ಪಡೆದ. ರಾಜಧಾನಿಯನ್ನು ಶ್ರೀರಂಗಪಟ್ಟಣಕ್ಕೆ ಬದಲಿಸಿದ. ವಿಜಯನಗರ ಸಾಮ್ರಾಜ್ಯದ ಕೆಲವು ಸಂಪ್ರದಾಯಗಳನ್ನೂ ಆಚರಣೆಗಳನ್ನೂ ಮುಂದುವರಿಸಿದ. ಅಂತಹವುಗಳಲ್ಲಿ ನವರಾತ್ರಿ ಉತ್ಸವವೂ ಒಂದು. ಹೊಸ ದೇವಾಲಯಗಳನ್ನು ಕಟ್ಟಿಸಿ, ಹಳತನ್ನು ಜೀರ್ಣೋದ್ಧಾರಗೊಳಿಸಿದ. ಮೇಲುಕೋಟೆಯ ದೇವರಿಗೆ ತನ್ನ ಹೆಸರಿನಲ್ಲಿ ಒಂದು ರತ್ನಖಚಿತ ಕಿರೀಟ (ರಾಜಮುಡಿ)ವನ್ನು ಮಾಡಿಸಿಕೊಟ್ಟ.

ಇವನ ನಂತರ ಬಂದ ಚಾಮರಾಜ ಒಡೆಯನು ರಾಜ್ಯವನ್ನು ಚನ್ನಪಟ್ಟಣದ

ವರೆಗೂ ವಿಸ್ತರಿಸಿದ. ಈ ಅರಸನು ಬರೆದ 'ಚಾಮರಾಜೋಕ್ತಿವಿಲಾಸ' ವಾಲ್ಮೀಕಿ ರಾಮಾಯಣದ ಕನ್ನಡ ಭಾಷಾಂತರ. ೧೬೩೮ರಿಂದ ೫೯ರವರೆಗೆ ಆಳಿದ ಕಂಠೀರವ ನರಸರಾಜ ಒಡೆಯ ಅತಿ ಸಾಹಸಿ. ಯುವರಾಜನಾಗಿದ್ದಾಗಲೇ ವೇಷಾಂತರದಲ್ಲಿ ತಿರುಚನಾಪಳ್ಳಿಗೆ ಹೋಗಿ ಅಲ್ಲಿನ ಪ್ರಸಿದ್ಧ ಜಟ್ಟಿಯನ್ನು ಸೋಲಿಸಿ ಬಂದ ಶೂರ. ಬಿಜಾಪುರದ ರಣದುಲ್ಲಾಖಾನನು ಶ್ರೀರಂಗಪಟ್ಟಣಕ್ಕೆ ದಂಡೆತ್ತಿಬಂದಾಗ ಅವನನ್ನು ಸೋಲಿಸಿ ಹೊರದೂಡಿ, ಅನಂತರ ಸ್ವತಃ ದಂಡೆತ್ತಿ ದಕ್ಷಿಣದಲ್ಲಿ ದಣ್ಣಾಯಕನ ಕೋಟೆ ಸತ್ಯಮಂಗಲಗಳನ್ನೂ ಪಶ್ಚಿಮದಲ್ಲಿ ಅರಕಲಗೂಡು ಬೆಟ್ಟದಪುರಗಳನ್ನೂ ವಶಪಡಿಸಿಕೊಂಡನು. ಮಾಗಡಿ ಕೆಂಪೇಗೌಡನಿಂದ ಕಪ್ಪ ಕಾಣಿಕೆಗಳನ್ನು ವಸೂಲ್ಮಾಡಿದನು. ೧೬೪೬ರಲ್ಲಿ ವಿಜಯನಗರದ ಶ್ರೀರಂಗರಾಯನಿಗೆ ಆಶ್ರಯವನ್ನಿತ್ತನು. ದೇವಾಲಯಗಳಿಗೆ ಹೇರಳ ದಾನಗಳನ್ನು ನೀಡಿ ಪ್ರಬಲರಾದ ಪಾಳೆಯಗಾರರಿಂದ ಅಪಾರ ಕಾಣಿಕೆಗಳನ್ನು ಪಡೆದು ಅದರಿಂದ ರಕ್ಷಣಾವ್ಯವಸ್ಥೆಯನ್ನು ಉತ್ತಮಪಡಿಸಿಕೊಂಡು, ಶ್ರೀರಂಗಪಟ್ಟಣದಲ್ಲಿ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿದನು. ಟಂಕಸಾಲೆಯನ್ನು ನಿರ್ಮಿಸಿ ಕಂಠೀರವ ನಾಣ್ಯಗಳನ್ನು ಅಚ್ಚುಹಾಕಿಸಿದನು.

ನಂತರ ಬಂದ ದೊಡ್ಡದೇವರಾಜ ಒಡೆಯನು (೧೬೫೯–೧೬೭೩) ದಾಳಿಮಾಡಿದ್ದ ಕೆಳದಿಯ ಶಿವಪ್ಪನಾಯಕ, ದಕ್ಷಿಣದ ಮಧುರೆಯ ನಾಯಕ ಮುಂತಾದವರನ್ನು ಸೋಲಿಸಿ ರಾಜ್ಯವನ್ನು ಪೂರ್ವದಲ್ಲಿ ಸೇಲಂ, ಪಶ್ಚಿಮದಲ್ಲಿ ಸಕ್ಕರೆಪಟ್ಟಣ, ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ ಮತ್ತು ದಕ್ಷಿಣದಲ್ಲಿ ಧಾರಾಪುರಂವರೆಗೂ ವಿಸ್ತರಿಸಿದನು. ಚಾಮುಂಡಿಬೆಟ್ಟಕ್ಕೆ ಮೆಟ್ಟಿಲುಗಳನ್ನು ಕಟ್ಟಿಸಿದ. ೧೬೭೪–೧೭೦೪ರವರೆಗೆ ಆಳಿದ ಚಿಕ್ಕದೇವರಾಜ ಒಡೆಯನು ಪ್ರಖ್ಯಾತಿ ಪಡೆದ ಅರಸನು. ರಾಜ್ಯದಲ್ಲಿ ಆಡಳಿತವನ್ನು ಸುಧಾರಿಸಿ, ಉತ್ತರ ಭಾರತದಲ್ಲಿದ್ದ ಮೊಗಲ್ ಪದ್ಧತಿಯನ್ನು ಜಾರಿಗೆ ತಂದನು. ಮಧುರೆ ಇಕ್ಕೇರಿ ನಾಯಕರು, ಬಿಜಾಪುರದ ಸುಲ್ತಾನ ಮತ್ತು ಶಿವಾಜಿ—ಇವರ ದಾಳಿಗಳನ್ನೆದುರಿಸಿ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸಿ, ಸ್ವತಃ ಮಾಗಡಿ, ಮಧುಗಿರಿ, ಕೊರಟಗೆರೆ ಮುಂತಾದ ಪ್ರಾಂತಗಳನ್ನು ಗೆದ್ದನು. ೧೬೮೨ರಲ್ಲಿ ಇನ್ನೊಮ್ಮೆ, ಸಾಂಬಾಜಿ, ದಾದಾಜಿ, ನಿಂಬಾಜಿಯರನ್ನೊಳಗೊಂಡ ಮರಾಠಾ ಸೈನ್ಯವನ್ನು ಸೋಲಿಸಿ ಅಪಾರ ಸಂಪತ್ತನ್ನು ಗಳಿಸಿದನು.

ದೊಡ್ಡದೇವರಾಜ ಒಡೆಯನ ಕಾಲದಲ್ಲಿ ಭಾಸ್ಕರನ 'ಬೇಹಾರಗಣಿತ', ತಿಮ್ಮರಸನ 'ಮಾರ್ಕಂಡೇಯ ರಾಮಾಯಣ' ಮತ್ತು ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ'ಗಳು ರಚಿಸಲ್ಪಟ್ಟವು. ಚಿಕ್ಕದೇವರಾಜನ ಕಾಲದಲ್ಲಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಮಲ್ಲರಸ, ಸಂಚಿ ಹೊನ್ನಮ್ಮ, ಶೃಂಗಾರಮ್ಮ ಮುಂತಾದ ಅನೇಕ ಕವಿಗಳೂ ಕವಯಿತ್ರಿಯರೂ ಇದ್ದರು. ಈತನು ಕಟ್ಟಿಸಿದ ಶ್ರೀರಂಗಪಟ್ಟಣದ ಶ್ವೇತವರಾಹ, ಹರದನಹಳ್ಳಿಯ ಗೋಪಾಲಕೃಷ್ಣ, ಒರಕೋಡಿನ ವರದರಾಜ, ಗೂಡಲಿನ ಪರವಾಸುದೇವ ದೇವಾಲಯಗಳು—ಇವು

ಮೈಸೂರು ಅರಸರ ವಾಸ್ತುಶಿಲ್ಪಕ್ಕೆ ಸಾಕ್ಷಿ.

೧೭೦೪ರಿಂದ ೧೭೬೧ರವರೆಗೆ ಸಂಸ್ಥಾನ ದಳವಾಯಿಗಳ ಆಡಳಿತಕ್ಕೊಳಪಟ್ಟಿತು. ಅನಂತರ ಹೈದರ್ ಸರ್ವಾಧಿಕಾರಿಯಾದ. ಹೈದರಾಬಾದಿನ ನಿಜಾಮ, ಮರಾಠರು ಹಾಗೂ ಬ್ರಿಟಿಷರೊಡನೆ ಅವ್ಯಾಹತವಾಗಿ ಸೆಣಸಿ ಮೈಸೂರಿನ ಸ್ವಾತಂತ್ರ್ಯವನ್ನುಳಿಸಿ ಕೊಂಡ ಹಿರಿಮೆ ಈತನದು. ಎರಡು ದಶಕಗಳ ಕಾಲ ಅಧಿಕಾರ ಸೂತ್ರಗಳನ್ನು ಪಡೆದಿದ್ದ ಈತನು ಆಡಳಿತವನ್ನು ಬಿಗಿಗೊಳಿಸಿ, ದಂಗೆಗಳನ್ನು ಅಡಗಿಸಿ, ಪ್ರಜಾ ಸೌಕರ್ಯಕ್ಕಾಗಿ ಶ್ರಮಿಸಿದ. ಪರಮತಸಹಿಷ್ಣುತೆಯನ್ನು ಸಾಧಿಸಿದುದಲ್ಲದೆ ಜಾತ್ಯತೀತ ನೀತಿಯನ್ನು ಪಾಲಿಸಿದ.

ಈತನ ನಂತರ ಅಧಿಕಾರಸೂತ್ರಗಳನ್ನು ವಹಿಸಿದ ಈತನ ಮಗ ಟಿಪ್ಪುವಿನ ಮನೋ ಭಾವ ಬೇರೆಯಾದ್ದು. ಈತ ಆಂಗ್ಲದ್ವೇಷಿಯಾಗಿ ಅವರನ್ನು ತೊಲಗಿಸಲು ಫ್ರೆಂಚರ ನೆರವನ್ನು ಬಯಸಿದ. ಬೆಂಬಲ ಇವನಿಗೆ ಸಕಾಲದಲ್ಲಿ ದೊರೆತಿದ್ದಲ್ಲಿ ಇತಿಹಾಸದ ಗತಿ ಬದಲಿಸುತ್ತಿತ್ತೇನೋ! ಆದರೆ ನಿರಾಶೆ ಅವನಿಗೆ ಕಾದಿತ್ತು. ಹೂಡಿದ ಎರಡು ಕದನಗಳ ಲ್ಲಿಯೂ ಬ್ರಿಟಿಷರಿಂದ ಸೋಲನ್ನನುಭವಿಸಿ, ಮೊದಲ ಬಾರಿ ಅರ್ಧರಾಜ್ಯವನ್ನೂ ಅಪಾರ ಧನವನ್ನೂ ಕಳೆದುಕೊಂಡ; ಎರಡನೆಯ ಬಾರಿ ತಾನೇ ಹತನಾದ (ಮೇ ೪, ೧೭೯೯). ಸ್ವಧರ್ಮಾಭಿಮಾನಿಯಾದರೂ ಪರಧರ್ಮಗಳನ್ನು ತೃಣೀಕರಿಸಲಿಲ್ಲ. ಶೃಂಗೇರಿಯ ಗುರು ಗಳಿಗೆ ಬರೆದ ಪತ್ರವೊಂದರಲ್ಲಿ "ನೀವು ಜಗದ್ಗುರುಗಳು; ಲೋಕೋದ್ಧಾರಕ್ಕೂ ಮಾನವ ಕಲ್ಯಾಣಕ್ಕೂ ಯಾವಾಗಲೂ ತಪಸ್ಸನ್ನಾಚರಿಸುತ್ತಿದ್ದೀರಿ; ನಮ್ಮ ಏಳಿಗೆ ಮತ್ತು ಅಭಿ ವೃದ್ಧಿಗಾಗಿ ಪ್ರಾರ್ಥಿಸಿ; ನಿಮ್ಮಂತಹ ಪವಿತ್ರಜೀವಿಗಳು ಯಾವ ನಾಡಿನಲ್ಲಿ ವಾಸಿಸುತ್ತಿರಲಿ, ಆ ನಾಡು ಒಳ್ಳೆಯ ಮಳೆಬೆಳೆಗಳಿಂದ ವರ್ಧಿಸುತ್ತದೆ"—ಎಂದಿದ್ದಾನೆ. ಆದರೆ ದುಡುಕಿನ ಪ್ರವೃತ್ತಿಯ ಈತನು ವಿಪರೀತವಾದ ವ್ಯಾಮೋಹದಿಂದ ಒಡೆಯರನ್ನು ಅಲ್ಲಗಳೆದು, ಪ್ರಜೆ ಗಳ ಮೆಚ್ಚುಗೆ ಗಳಿಸಲಾರದೆಹೋದನು.

ಟಿಪ್ಪುವಿನ ಪತನಾನಂತರ ಬ್ರಿಟಿಷರ ಅಧೀನಕ್ಕೊಳಗಾದ ರಾಜ್ಯಕ್ಕೆ ನ್ಯಾಯ ದೊರಕ ಲಿಲ್ಲ. ಪಶ್ಚಿಮತೀರ ಪ್ರದೇಶಗಳೆಲ್ಲ ಅವರಿಗೆ ಸೇರಿದವು. ಈಶಾನ್ಯದ ಭಾಗ ನಿಜಾಮನಿಗೆ ದೊರೆಯಿತು. ಪೂರ್ವದ ಭಾಗಗಳೂ ಬ್ರಿಟಿಷರಿಗೆ ಸೇರಿ ಕಡಲಿನ ಸಂಪರ್ಕ ತಪ್ಪಿತು. ಸಹಾಯಕ ಸೈನ್ಯಪದ್ಧತಿ ಮೈಸೂರಿನಲ್ಲೂ ಅಸ್ತಿತ್ವಕ್ಕೆ ಬಂದು, ಬ್ರಿಟಿಷರ ಸೈನ್ಯವನ್ನು ಒಡೆಯರ ಸರ್ಕಾರ ಸಾಕಬೇಕಾಯಿತು. ಕರ್ಣಾಟಕ ಜನತೆ ಈಗ ಮರಾಠರ, ಮುಸ್ಲಿ ಮರ, ತೆಲುಗರ, ತಮಿಳರ, ಕ್ರೈಸ್ತರ ಪ್ರಭಾವಕ್ಕೊಳಗಾಗಿ ಅಲ್ಲಿನ ಜನ ತಮ್ಮ ಭಾಷೆ ಯನ್ನಂತಿರಲಿ, ತಾವು ಕನ್ನಡಿಗರೆಂಬುದನ್ನೇ ಮರೆಯುವಂತಹ ಪರಿಸ್ಥಿತಿಗೊಳಗಾದರು.

ಟಿಪ್ಪುವಿನ ನಂತರ ಪೂರ್ಣಯ್ಯನ ಅಧಿಕಾರ ೧೮೧೧ರ ವರೆಗೆ. ನಂತರದ ೨೦ ವರ್ಷಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಆಳಿಕೆ. ಇವರ ಮೇಲೆ ಆಧಾರರಹಿತ ಆಪಾದನೆಯನ್ನು ಮಾಡಿದುದರ ಫಲವಾಗಿ ಬೆಂಟಿಂಕನ ಸಲಹೆಯಂತೆ ರಾಜ್ಯ ಬ್ರಿಟಿಷರ ಆಡಳಿತಕ್ಕೆ ಸೇರಿತು. ಅವರು ನೇಮಿಸಿದ ರೆಸಿಡೆಂಟ್ ಆಡಳಿತಾಧಿಕಾರಿಯಾದ. ಈ ವ್ಯವಸ್ಥೆ

ಅರ್ಧಶತಮಾನದ ವರೆಗೆ (೧೮೩೧–೮೧). ಆ ಸಮಯದಲ್ಲಿ ಒಡೆಯರು ಬ್ರಿಟಿಷರಿಗೆ ತಮ್ಮ ಮೇಲಿನ ಆಪಾದನೆ ನಿರಾಧಾರವೆಂದು ತೋರಿಸಿಕೊಡಲು ಶ್ರಮಿಸಿ ಯಶಸ್ವಿಯಾದರು. ಪುನಃ ರಾಜ್ಯ ಚಾಮರಾಜ ಒಡೆಯರ ವಶಕ್ಕೆ ಬಂದಿತು. ಇವರ ಪ್ರಧಾನಿ ದಿವಾನ್ ರಂಗಾಚಾರ್ಲು ರಾಜ್ಯದಲ್ಲಿ ಪ್ರಜಾಪ್ರಭುತ್ವ ಪದ್ಧತಿಗೆ ಅಡಿಪಾಯ ಹಾಕಿದರು. ಪ್ರಜಾಪ್ರತಿನಿಧಿ ಸಭೆಯೊಂದು ರಚಿತವಾಯಿತು. ನಂತರ ದಿವಾನ್ ಶೇಷಾದ್ರಿ ಅಯ್ಯರ್ ಕಾಲದಲ್ಲಿ ಕೈಗಾರಿಕಾ ಪ್ರಗತಿ, ವಿದ್ಯಾಭ್ಯಾಸಕ್ಕಾಗಿ ಶಾಲೆಗಳ ಸ್ಥಾಪನೆ, ರೈಲುಮಾರ್ಗಗಳ ನಿರ್ಮಾಣ, ಜಲಾಶಯಗಳ ನಿರ್ಮಾಣ ಮುಂತಾದ ಪ್ರಜಾ ಸೌಕರ್ಯದ ಕಾರ್ಯಗಳಾದವು. ೧೮೭೬–೭೭ರಲ್ಲಿನ ಭೀಕರ ಬರಗಾಲ ಈ ಕಾರ್ಯಗಳಿಗೆ ಪ್ರೇರಣೆ ನೀಡಿತು. ಆರ್ಥಿಕವಾಗಿ ರಾಜ್ಯ ಬಹಳ ಅಭಿವೃದ್ಧಿಹೊಂದಿತು. ೧೮೯೫ರಿಂದ ೧೯೪೦ರ ವರೆಗೆ ನಾಲ್ವಡಿ ಕೃಷ್ಣರಾಜ ಒಡೆಯರು ಆಳಿದರು. ೧೮೯೫ರಿಂದ ೧೯೦೨ರ ವರೆಗೆ ಅರಸರು ಇನ್ನೂ ಅಲ್ಪವಯಸ್ಕರಾಗಿದ್ದ ಕಾರಣ ವಾಣೀವಿಲಾಸ ಸನ್ನಿಧಾನದವರು ರೀಜೆಂಟರಾಗಿ ಆಳಿದರು. ೧೯೦೨ರಲ್ಲಿ ಆಡಳಿತ ಸೂತ್ರಗಳನ್ನು ವಹಿಸಿದ ಒಡೆಯರು ೧೯೦೭ರಲ್ಲಿ ಲೆಜಿಸ್ಲೆಟಿವ್ ಕೌನ್ಸಿಲ್ ರಚಿಸಿದರು. ಇತರ ಅನೇಕ ಅಭಿವೃದ್ಧಿ ಕಾರ್ಯಗಳೂ ಆದವು. ಕೃಷ್ಣಮೂರ್ತಿ, ಮಾಧವರಾವ್, ಆನಂದರಾವ್, ವಿಶ್ವೇಶ್ವರಯ್ಯ, ಬ್ಯಾನರ್ಜಿ, ಮಿರ್ಜಾ ಇಸ್ಮಾಯಿಲ್ ಮುಂತಾದ ದಕ್ಷ ದಿವಾನರ ಸಮರ್ಥ ಆಡಳಿತದ ಫಲವಾಗಿ ಮೈಸೂರು ಮಾದರಿ ಸಂಸ್ಥಾನವೆನಿಸಿಕೊಂಡಿತು. ೧೯೪೦ರಲ್ಲಿ ಜಯಚಾಮರಾಜೇಂದ್ರ ಒಡೆಯರು ಸಿಂಹಾಸನಾರೂಢರಾದರು. ದೇಶಕ್ಕೆ ಸ್ವಾತಂತ್ರ್ಯ ಲಭಿಸಿ ಪ್ರಜಾಸರ್ಕಾರಗಳು ಸ್ಥಾಪಿತವಾದಾಗ, ತಮ್ಮ ಸ್ಥಾನವನ್ನು ಬಿಟ್ಟುಕೊಟ್ಟು ಪ್ರಜಾಸರ್ಕಾರ ಸ್ಥಾಪನೆಗೆ ಹಾದಿಮಾಡಿದರು.

ಕರ್ಣಾಟಕ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗೆ ಅವರು ಮಾಡಿರುವ ಸೇವೆ ಸ್ಮರಣಾರ್ಹವಾದುದು. ಜಯಚಾಮರಾಜೇಂದ್ರ ಗ್ರಂಥರತ್ನಮಾಲೆ ಎಂಬ ಹೆಸರಿನಲ್ಲಿ ಋಗ್ವೇದ ಉಪನಿಷತ್ತುಗಳು ಪುರಾಣಗಳು ಮೊದಲಾದ ಆರ್ಷೇಯ ಗ್ರಂಥರಾಶಿಯನ್ನು ಕನ್ನಡಕ್ಕೆ ಅನುವಾದ ಮಾಡಿಸಿದ್ದಾರೆ. ಸ್ವತಃ ಗಣ್ಯಸಾಹಿತಿಗಳೂ ವೇದಾಂತಿಗಳೂ ವಾಗ್ಗೇಯಕಾರರೂ ಆಗಿ ಹೆಸರು ಗಳಿಸಿದ್ದಾರೆ. ಅವರ ನಿಧನ (ಸೆಪ್ಟಂಬರ್ ೨೩, ೧೯೭೪)ದಿಂದ ಮೈಸೂರು ರಾಜಮನೆತನದ, ಯದುವಂಶದ ಇತಿಹಾಸ ಮುಕ್ತಾಯಗೊಂಡಿತು.

ಈಗ ನಾವು ಕಾಣುವುದು ಕಾಂಗ್ರೆಸ್ ಮಂತ್ರಿಮಂಡಲಗಳನ್ನು. ೧೯೫೬ರಲ್ಲಿ ಕರ್ಣಾಟಕ ಏಕೀಕರಣ ಚಳವಳಿಯ ಫಲವಾಗಿ ಇಂದಿನ ಕರ್ಣಾಟಕ ಮೈಸೂರು ಎಂಬ ಅಭಿಧಾನದಿಂದಲೇ ಅಸ್ತಿತ್ವಕ್ಕೆ ಬಂದಿತು. ಚೆದರಿಹೋಗಿದ್ದ ಭಾಗಗಳು ಒಂದಾದವು. ೧೬ ವರ್ಷಗಳ ಬಳಿಕ, ೧೯೭೩ರ ನವೆಂಬರ್ ೧ರಂದು 'ಕರ್ಣಾಟಕ' ಎಂಬ ಹೆಸರು ಪುನಃ ಲಭಿಸಿದೆ.

## ಅಡಿಟಿಪ್ಪಣಿಗಳು

1 'ಕರ್ನಾಟಕದ ಪರಂಪರೆ', ಸಂ. ೧, ಪು. ೬೦–೬೧.
2 ಬನವಾಸಿಯಲ್ಲಿ ಶಾತವಾಹನರ ಆಳ್ವಿಕೆ ಕಾಲದ ಶಿಲಾಶಾಸನ ಪತ್ತೆ, 'ಪ್ರಜಾವಾಣಿ', ೨೦–೭–೧೯೭೪.
3 *EC.*, III, 1974, Intro.
4 *Srikaṇṭhika*, Mysore, 1973, pp. 99-102.
5 ಪು. ೩೩೩, ವಾಕ್ಯಪುಂಜ ೧ರ ಆಕರ: *Studies in Indian History and Culture*, Dharwar, 1971, p. 60.
6 ಆರ್. ಎಸ್. ಪಂಚಮುಖಿ, 'ಕರ್ನಾಟಕ ಇತಿಹಾಸ', ಪು. ೧೩–೩೨.
7 *Srikaṇṭhika*, Mysore, 1973, pp. 63–68.
8 'ಕರ್ನಾಟಕದ ಪರಂಪರೆ', ಸಂ. ೧, ಪು. ೨೩೮.
9 Pulakesi II, Seminar on Chalukyas of Badami, held at Mythic Society, Bangalore, August 1974 (To be published).
10 *Annual Report on Indian Epigraphy*, 1960–61, App. B. No. 406–07.
11 Chalukya Vinayaditya's Intervention in Cambodian Politics, *Studies in Indian History and Culture*, Dharwar, 1971, pp. 222–24.
12 Vikramaditya II, Seminar on Chalukyas of Badami, held at Mythic Society, Bangalore, August 1974 (To be published).
13 Dr. T. V. Mahalingam, *Kanchipuram in Early South Indian History*, 1969, pp. 170–71.
14 K. V. Subrahmanya Aiyer, *Three Lectures*, KRI., Dharwar, 1941, pp. 79–81.
15 *EI.*, XXXV, pp. 37 ff.
16 ಪು. ೪೦೧, ವಾಕ್ಯಪುಂಜ ೧ರ ಆಕರ: P. B. Desai, *Jainism in South India*, pp. 244–45.
17 P. B. Desai, *Basaveśvara and his Times*, p. 22.
18 'ಮಾನವಿಕ ಕರ್ನಾಟಕ', ೩–೪, ಆಗಸ್ಟ್ ೧೯೭೪, ಪು. ೨೯–೩೨.
19 Dr. Shrinivas Ritti, *The Seunas*, p. 85.
20 Ed. Dr. B. Sheik Ali, *The Hoysala Dynasty*, pp. 31–37.
21 *JKU.*, (*Soc. Sc.*), VII, pp. 174–77.
22 *EC.*, III, 1974, Intro.

ಅಧ್ಯಾಯ ಆರು

# ಕರ್ಣಾಟಕದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜನಜೀವನ

## ಸಾಮಾಜಿಕ ಜನಜೀವನ

ದ್ರಾವಿಡ ಹಾಗೂ ವೈದಿಕ ಪ್ರವಾಹಗಳು ಸಂಗಮಿಸಿ ಒಂದು ದೊಡ್ಡ ಪ್ರವಾಹವಾಗಿ, ಮತ್ತೆ ಒಡೆದು ಸೀಳುಸೀಳಾಗಿ ಹರಿದು, ಕನ್ನಡ ಸಂಸ್ಕೃತಿಯ ಹೊಳೆ ಚರಿತ್ರಪೂರ್ವ ಕಾಲದಿಂದ ಹರಿಯುತ್ತ ಬಂದಿದೆ. ಆ ಪ್ರವಾಹಕ್ಕೆ ಆಶ್ರಯವನ್ನಿತ್ತವರು ಕನ್ನಡ ನಾಡಿನ ಅನೇಕ ರಾಜಾಧಿರಾಜರು ಮಾಂಡಲಿಕರು ಮನ್ನೆಯರು, ಅವರಿಗೆ ಸಹಾಯಕರಾಗಿ ಮಂತ್ರಿಗಳು, ವಿಷಯಪತಿಗಳು, ಗ್ರಾಮಪತಿಗಳು. ಈ ಎಲ್ಲರ ಜೀವನದ ಸಮಗ್ರ ಚಿತ್ರವೇ ಕರ್ಣಾಟಕ ಸಂಸ್ಕೃತಿ.

ಈ ಅಧ್ಯಾಯದಲ್ಲಿ ಕನ್ನಡದ ಸರ್ವಾಂಗೀಣ ಜನಜೀವನದ ಕೆಲವು ಮುಖಗಳನ್ನು ಸಂಕ್ಷೇಪವಾಗಿ ಪರಿಚಯ ಮಾಡಿಕೊಳ್ಳುವುದು ನಮ್ಮ ಉದ್ದೇಶ.

ಮೌರ್ಯರ ತರುವಾಯ ಕನ್ನಡನಾಡಿನ ಚರಿತ್ರೆಯಲ್ಲಿ ಮೊದಲು ಗಣ್ಯರಾಗಿ ಕಾಣಿಸಿಕೊಂಡ ರಾಜರೆಂದರೆ ಸಾತವಾಹನರು. ಮೌರ್ಯರ ಸಾಮ್ರಾಜ್ಯ ಕೊನೆಗೊಂಡಾಗ ದಕ್ಷಿಣಾಪಥದಲ್ಲಿ ಪ್ರತಿಷ್ಠಾನವನ್ನು ಎಂದರೆ ಇಂದಿನ ಪೈಠಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸಾತವಾಹನರು ರಾಜ್ಯವನ್ನು ಆಳಿದರು. ಇವರು ಬೌದ್ಧಧರ್ಮಾವಲಂಬಿಗಳಾಗಿ, ಬೌದ್ಧ ಭಿಕ್ಷುಗಳಿಗೂ ಚೈತ್ಯಾಲಯ ಮತ್ತು ವಿಹಾರಗಳಿಗೂ ಅನೇಕ ದತ್ತಿಗಳನ್ನು ಹಾಕಿಕೊಟ್ಟರು. ನಾನಾಘಾಟ್, ಕಾರ್ಲೆ, ಕನ್ಹೇರಿ, ಬೆಡ್ಸಾ, ನಾಸಿಕಗುಹೆಗಳಲ್ಲಿ ಕೆತ್ತಲ್ಪಟ್ಟ ಲಿಪಿಗಳಿಂದ ಇದು ತಿಳಿಯುತ್ತದೆ. ಇವರು ವೈದಿಕಧರ್ಮದ ಪೋಷಕರೂ ಆಗಿದ್ದರು. ನಾನಾಘಾಟ್‌ನ ನಾಗನಿಕೆಯ ಶಾಸನದಲ್ಲಿ ವೈದಿಕ ದೇವತೆಗಳಾದ ಇಂದ್ರ, ವರುಣ, ಕುಬೇರ, ಸಂಕರ್ಷಣ, ವಾಸುದೇವ, ಯಮ, ಚಂದ್ರಸೂರ್ಯರ ಸ್ತುತಿಯಿರುವುದು ಈ ಅಂಶವನ್ನು ಪೋಷಿಸುತ್ತದೆ. ರಾಜಸೂಯ, ಅಶ್ವಮೇಧ, ಅಗ್ನ್ಯಾಧೇಯ, ಆಪ್ತೋರ್ಯಾಮ ಮೊದಲಾದ ಯಜ್ಞಗಳನ್ನು ಮಾಡಿಸಿದ್ದು ಕೂಡ ಸ್ಪಷ್ಟವಾಗಿ ಅವರ ವೈದಿಕ ಧರ್ಮಾನುರಕ್ತಿಯನ್ನು ಸಾರುತ್ತದೆ. ರಾಜಮನೆತನ ಮೌರ್ಯರದಾಗಿರಲಿ, ಶಾತವಾಹನರದಾಗಿರಲಿ,

ಕದಂಬರದಾಗಿರಲಿ, ಚಾಲುಕ್ಯರದಾಗಿರಲಿ ಕರ್ಣಾಟಕದ ಅರಸರಿಗೆ ಸರ್ವಧರ್ಮ ಸಹಿಷ್ಣುತೆ ಒಂದು ಸಾಮಾನ್ಯ ಧರ್ಮವಾಗಿತ್ತು.

'ಯಥಾ ರಾಜಾ ತಥಾ ಪ್ರಜಾ' ಎಂಬ ಲೋಕೋಕ್ತಿ ಆಯಾ ಕಾಲದ ಜನಮನೋಧರ್ಮವನ್ನು ಪ್ರತಿಪಾದಿಸುತ್ತದೆ. ರಾಜನದು ಭಾರತೀಯ ಹಾಗೂ ಕನ್ನಡನಾಡಿನ ಜನಜೀವನದಲ್ಲಿ ಬಹು ಮಹತ್ತ್ವದ ಪಾತ್ರ. ಒಂದು ದೇಶದ ಜನಜೀವನವೇ ರಾಜನನ್ನು ಅವಲಂಬಿಸಿದ್ದಿತು. ರಾಜನಿಲ್ಲದಿದ್ದರೆ ಜನಕ್ಕೆ ಜೀವನ ನಿರ್ವಹಣೆ ಅಸಾಧ್ಯ. ಅನ್ನದಿಂದ ಜಗತ್ತು; ಮಳೆಯಿಂದ ಅನ್ನ. ಮಳೆ ಜಗತ್ತಿಗೆ ಆಧಾರ: "ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ." ಹಾಗೆಯೇ ರಾಜನು ಕೂಡ ಪ್ರಜಾವತ್ಸಲ.

ಅರಯ್ಯೆ ಸರ್ವಭೂತಾ
ಧಾರಂ ಮೞೆಯುಂ ನೃಪೇಂದ್ರನುಂ ಮೞೆಗಾಲಂ।
ಬಾರದೊಡಂ ನಿರ್ವಹಿಸುವ
ರಾರುಂ ನೃಪನಿಲ್ಲದಂದು ನಿರ್ವಹಿಸುವರೇ॥[1]

ನಮ್ಮ ಜನತೆ ರಾಜನಿಗೆ ಕೊಟ್ಟ ಸ್ಥಾನಮಾನ, ಮಳೆಬೆಳೆಗಿಂತ ಮೇಲೆ. ಹೀಗಾಗಿ ರಾಜ್ಯದ ಏಳುಬೀಳುಗಳು ರಾಜನನ್ನೇ ಅನುಸರಿಸುತ್ತಿದ್ದುದರಿಂದ, ರಾಜನಿಗೆ ವಿದ್ಯೆ ಅತ್ಯವಶ್ಯವಾಗಿತ್ತು. ಹಾಗೆಂದೇ ಅಂದು ರಾಜಕುಮಾರರ ವಿದ್ಯಾಭ್ಯಾಸಕ್ಕೆ ವಿಶೇಷ ಗಮನವನ್ನು ಕೊಡಲಾಗುತ್ತಿತ್ತು. ಇದರ ಮಾದರಿ ಚಿತ್ರ ನಮಗೆ ಪಂಪಕವಿಯ 'ವಿಕ್ರಮಾರ್ಜುನ ವಿಜಯ'ದ ನಾಯಕನಾದ ಅರ್ಜುನನ (ಅರಿಕೇಸರಿಯ) ವಿದ್ಯಾಭ್ಯಾಸದ ವರ್ಣನೆಯಲ್ಲಿ ದೊರೆಯುತ್ತದೆ:

ಅಂತು ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋವೃತ್ತಿಯೊಳಂ ಶಬ್ದಾಲಂಕಾರ ನಿಶ್ರಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ ನಾಂದೀಪ್ರರೋಚ[ನಾ]ಪ್ರಸ್ತಾವ[ನೇ]ತಿ ವೃ[ತ್ತ]ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳವಾಜಂಗಸೋಳಮಯ್ದು ತೆಱದ ಮಂತ್ರಂಗಳೊಳ[ಮಾ]ಱುಂ ದರ್ಶನದೊಳಂ ಪ್ರತ್ಯಕ್ಷಾನುಮಾನ ಪ್ರಮಾಣಂಗಳೊಳಂ ಭರತ ಪ್ರಣೀತ ನೃತ್ಯಶಾಸ್ತ್ರದೊಳಂ ನಾರದಾದಿ ಪ್ರಣೀತ ಗಾಂಧರ್ವ ವಿದ್ಯಾವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ವಾಕಿ ಪಾಳಕಾಪ್ಯ ಸುಪತಿ ಶ್ರೀಹರ್ಷಾದಿ ಪುರಾಣ ಪುರುಷವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗ್ರಹಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವ ಯಂತ್ರಪ್ರಯೋಗ ವಿ[ಷಾ]ಪಹರಣ ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪಚಕ್ರ ಪರಶುಕೃಪಾಣ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣ[ನು]ಮಾರೂಢಸರ್ವಜ್ಞ ಮಹೇಂದ್ರ ಜಾಣ[ನು]ಮಾಗಿ[2]—

ಹೀಗೆಯೇ "ಸಮಧಿಗಮ ಸಕಲಶಾಸ್ತ್ರಾರ್ಥತತ್ತ್ವಃ"[3] 'ಸಮ್ಯಕ್ ಪ್ರಜಾಪಾಲನ ಮಾತ್ರಾಧಿಗತ ರಾಜ್ಯಪ್ರಯೋಜನಃ ವಿದ್ವತ್ಕವಿಕಾಂಚನನಿಕಷೋಪಲಭೂತಃ ನೀತಿ ಶಾಸ್ತ್ರಸ್ಯ ವಕ್ತೃಪ್ರಯೋಕ್ತೃಕುಶಲ...."[4] ಮುಂತಾದ ಶಾಸನೋಕ್ತಿಗಳು ರಾಜ ಕುಮಾರನು ಹೊಂದಿರುತ್ತಿದ್ದ ಶಿಕ್ಷಣದ ರೀತಿನೀತಿಗಳನ್ನು ಸೂಚಿಸುತ್ತವೆ.

ವಿದ್ಯಾವಂತನೂ ದಕ್ಷನೂ ಆದ ರಾಜಕುಮಾರನು ಪಟ್ಟವನ್ನಲಂಕರಿಸಬೇಕಾದರೆ ಸಾಮಾನ್ಯವಾಗಿ ೨೪ ವರ್ಷದವನಾಗಿರಬೇಕಾಗಿತ್ತು.[5] ಆದರೆ ಇದಕ್ಕೆ ಅಪವಾದಗಳಿರ ಲಿಲ್ಲವೆಂದಲ್ಲ. ರಾಷ್ಟ್ರಕೂಟ ನೃಪತುಂಗನು ಪಟ್ಟವೇರಿದಾಗ ಚಿಕ್ಕಹರೆಯದವನು. ಪಟ್ಟವು ಸಾಮಾನ್ಯವಾಗಿ ಜ್ಯೇಷ್ಠಪುತ್ರನಿಗೆ ಸಲ್ಲುತ್ತಿತ್ತು. ಆದರೆ ಇಲ್ಲಿ ಕೂಡ ಕ್ರಮವಿಪರ್ಯಾಯ ಆದುದುಂಟು. ಸ್ವತಃ ತಂದೆಯೇ ದಕ್ಷನಾದ ಮಗನಿಗೆ ರಾಜ್ಯದ ಅಧಿಕಾರವಿತ್ತುದುಂಟು. ಉದಾಹರಣೆಗೆ, ರಾಷ್ಟ್ರಕೂಟ ದೊರೆ ೩ನೆಯ ಗೋವಿಂದ. ೬ನೆಯ ವಿಕ್ರಮಾದಿತ್ಯನಿಗೆ ತಂದೆಯಿಂದ ದೊರೆತನ ಒಪ್ಪಿಕೊಳ್ಳುವ ಆದೇಶ ಬಂದಾಗ ಜ್ಯೇಷ್ಠನಿಗೆ ಸಲ್ಲಲಿ ಎಂದು ತಾನು ಹಿಂದೆಗೆದಂತೆ ತೋರುತ್ತದೆ. ರಾಜನು ಅಧಿಕಾರದಲ್ಲಿರುವಾಗಲೇ ಯೌವರಾಜ್ಯ ಪದವಿಯನ್ನು ಜ್ಯೇಷ್ಠಪುತ್ರನಿಗೆ ಸಾಮಾನ್ಯವಾಗಿ ಸಲ್ಲಿಸುತ್ತಿದ್ದನು. ಯೌವರಾಜ್ಯ ಪದವಿ ಭಾರತದಲ್ಲಿ ಅನಾದಿಕಾಲದಿಂದ ನಡೆದುಬಂದ ಪದ್ಧತಿ. ಮಹಾಭಾರತದಲ್ಲಿಯೇ ಅದಕ್ಕೆ ಸೂಚನೆಗಳಿವೆ. ದೊರೆಯ ಮಕ್ಕಳು ಚಿಕ್ಕವರಿರುವಾಗ ಹಿರಿಯ ತಮ್ಮನಿಗೆ ರಾಜ್ಯಾಭಿಷೇಕ ಜರುಗಿದುದುಂಟು. ಕೀರ್ತಿವರ್ಮನ ಮರಣಾನಂತರ ಆತನ ತಮ್ಮ ಮಂಗಳೇಶನು ಇಮ್ಮಡಿ ಪುಲಿಕೇಶಿಯ ಸ್ಥಾನದಲ್ಲಿ ಪಟ್ಟವನ್ನಲಂಕರಿಸಿದುದು ಹೀಗೆ.

ರಾಜಕುಮಾರನು ಸಿಂಹಾಸನವೇರುವ ಸಡಗರ ಪಟ್ಟಬಂಧೋತ್ಸವ. ಈ ಸಂದರ್ಭ ದಲ್ಲಿ ರಾಜರೂ ಅವರಿಗೆ ಬೇಕಾದವರೂ ಶುಭೋದಯಕ್ಕಾಗಿ ದಾನದತ್ತಿಗಳನ್ನು ದೇವ ದ್ವಿಜರಿಗೆ ಬಿಡುತ್ತಿದ್ದರು. ರಾಜಧಾನಿಯಲ್ಲೇ ಈ ಉತ್ಸವ ನಡೆಯುತ್ತಿದ್ದುದು ಪದ್ಧತಿ. ಆದರೆ ಕೆಲವುಸಲ ಬೇರೆ ಸ್ಥಳಗಳಲ್ಲಿ, ಕ್ಷೇತ್ರಗಳಲ್ಲಿ ಅದು ಜರುಗಿದ್ದುಂಟು. ಉದಾಹರಣೆಗೆ ೩ನೆಯ ಇಂದ್ರನ ರಾಜ್ಯಾಭಿಷೇಕದ ಉತ್ಸವ ನಡೆದದ್ದು ಕುರುಂದಕದಲ್ಲಿ.[6]

ರಾಜನ ಆಡಳಿತ ಕೇಂದ್ರ ರಾಜಧಾನಿ. ಇದಕ್ಕೆ ನೆಲೆವೀಡು, ಅಧಿಷ್ಠಾನ ಎಂದೂ ಹೇಳುತ್ತಿದ್ದರು. ಬೀಡುಗಳನ್ನು ವಿಜಯಸ್ಕಂಧಾವಾರ ಎಂದು ಹೇಳಲಾಗುತ್ತಿತ್ತು. ಈ ಮಾತಿಗೆ ರಾಜಧಾನಿಯೆಂಬ ಅರ್ಥವೂ ಇದೆ.[7] ಒಡ್ಡೋಲಗ, ಸಿಂಹಾಸನ, ಅಲ್ಲಿ ಮಂಡಿ ಸಿದ ನೃಪತಿ, ಛತ್ರಚಾಮರಗಳು, ಅಲ್ಲಲ್ಲಿ ದಂಡಧರರು, ಸಭಾಂಗಣ, ಅಲ್ಲಿ ಮಕುಟ ಬದ್ಧರು ಮಾಂಡಲಿಕರು ಮುಂತಾದ ಸಭಾಸದರು—ಇಂಥ ಚಿತ್ರಗಳು ಸಾಮಾನ್ಯ. ಮಾತನಾಡುವ ಸಭ್ಯರಿಗೆ 'ರಾಜನು ನುಡಿದರೆ ನುಡಿಯಿರಿ, ಇಲ್ಲದಿದ್ದರೆ ಇಲ್ಲ, ಇದ್ದ ಸ್ಥಳ ದಲ್ಲಿಯೇ ಇರಿ' ಎಂಬ ಎಚ್ಚರವನ್ನು ವೇತ್ರಧರರು ಕೊಡುತ್ತಿದ್ದರಂತೆ. ಗಣಿಕೆಯರು, ವೈತಾಳಿಕರು, ವಿಪ್ರರು ಮುಂತಾಗಿ ಸೇರಿದ್ದ ಸಭೆಯ ಚಿತ್ರ ಹೀಗೆ ಮುಂದುವರಿಯುತ್ತದೆ.

ರಾಜನಿಂದ ಸಭೆಯ ಆರಂಭದಲ್ಲಿಯೇ ದ್ವಿಜನಿಕರಕ್ಕೆ, ಆಸೆಪಟ್ಟು ಬಂದ ಯಾಚಕ ವೃಂದಕ್ಕೆ, ಅವರ ಇಚ್ಛೆಯ ದಾನಸಂತರ್ಪಣೆಗಳು. ಇಲ್ಲಿ ಸಭೆಯ ಕಾರ್ಯಕಲಾಪದ

ವರ್ಣನೆಯುಂಟು. ಆಸ್ಥಾನದಲ್ಲಿ ಮಂತ್ರಿಗಳ, ಕವಿಗಮಕಿ ವಾದಿವಾಗ್ಮಿಗಳ, ವಿದ್ಯಾಪರೀಕ್ಷಕರ ಗೋಷ್ಠಿಗಳು ಮುಂತಾದ ಕಾವ್ಯಕಲಾಪಗಳು ಅಲ್ಲಿ ಜರುಗುತ್ತಿದ್ದುವು. "ಸಂಗೀತಪ್ರಸಂಗಭಂಗೀಸಂಗತಚತುರ ಭರತನುಂ ತರ್ಕವಿದ್ಯಾ ವಿಶಾರದ ವಿಚಾರನಿರತನುಂ ಶಬ್ದವಿದ್ಯಾಸಮಗ್ರಲಕ್ಷಣ ಸುಶಿಕ್ಷನುಂ ವಿವಿಧವಿದ್ಯಾಪರೀಕ್ಷಾದಕ್ಷನುಂ, ಸಕಳಪುರಾಣಪ್ರಜಿತಾರ್ಥರತ್ನಕೋಶನುಂ ಕವಿತ್ವತತ್ವನಿಶಿತಬುದ್ಧಿಯುಂ ಅನವದ್ಯಮಂತ್ರಸಿದ್ಧಿಯುಂ ಕಾಂಭೋಜವಾಜಿರಾಜಿಸಂಚರಣತರಳಧರಾತಳಯುಗನುಂ"—ಎಂಬ ವಿದ್ವತ್ಪರ್ಷದ ಬೇಲೂರು ಶಾಸನದ ವರ್ಣನೆಯನ್ನು ಈ ಸಂದರ್ಭದಲ್ಲಿ ನೆನೆಯಬಹುದು.[8]

ರಾಜ್ಯಸೂತ್ರವನ್ನು ಹಿಡಿದ ರಾಜನಿಗೆ ಕರ್ತವ್ಯಗಳು ನಾಲ್ಕು: ದುಷ್ಟಶಿಕ್ಷಣ, ಶಿಷ್ಟರಕ್ಷಣ, ಆತ್ಮರಕ್ಷಣ ಮತ್ತು ಧರ್ಮಯುದ್ಧ. ಇವು ಪ್ರಾಚೀನ ಕನ್ನಡನಾಡಿನ ರಾಜರ ಆದರ್ಶಗಳು. ಅವರಿಗೆ ಪಟ್ಟಾಭಿಷೇಕದ ಸಮಯದಲ್ಲಿ ಸದ್ವರ್ತನೆಯ ಬಗೆಗೆ ರಾಜಗುರುಗಳಿಂದ ಉಪದೇಶವೂ ಆಗುತ್ತಿದ್ದಂತೆ ತೋರುತ್ತದೆ.[9] "ದೀನಾನಾಥ ಜನಾಹ್ಲಾದನಕರ ದಾನನಿರತನುಮೆನಿಸುತ್ತಿ" ರಾಜರ ಕರ್ತವ್ಯವಾಗಿತ್ತು.[10] ರಾಜನು ರಾಜ್ಯದಲ್ಲಿ ಪ್ರಜೆಗಳ ಯೋಗಕ್ಷೇಮ ವಿಚಾರಿಸಲು ಆಗಾಗ್ಗೆ ಸಂಚಾರ ಹೋಗುತ್ತಿದ್ದುದುಂಟು. ಅಂಕೇಸ, ಹೊಯ್ಸಳ ವಿನಯಾದಿತ್ಯ ಇವರು ಹೀಗೆ ಮಾಡಿದ್ದಾರೆ. ಪಾಂಡವರು ವಾರಣಾವತಕ್ಕೆ ಹೋಗುವಾಗ್ಗೆ ಕಳಿಸಲು ಬಂದ ಭೀಷ್ಮಾದಿಗಳ ಉಪದೇಶ ಪಡೆದು ಮುಂದೆ ದಾರಿಯಲ್ಲಿಗೆಯ್ದ ಕಾರ್ಯಗಳು ಗಮನಾರ್ಹವಾಗಿವೆ. ಉದಾ: "ತಾವಾದಿಗರ್ಭೇಶ್ವರರಪ್ಪುದಜಾಂ ತಳರ್ದೆಡೆಯೆಡೆಯ ಪುರಂಗಳ ತೊಱೆಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ ಮಹಾಗ್ರಹಾರಂಗಳ ಮಹಾಜನಂಗಳ ಕೊಟ್ಟ ಪೊನ್ನ ಜನ್ನವಿರಂಗಳುಮನವರ ಪರಕೆಯುಮಂ ಕೆಯ್ಕೊಳುತ್ತುಮವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತುಂ ಕಾಲೂರ್ಗಳ ಗಂಡರಸೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆನಗುತ್ತುಂ ಪಳ್ಳಿಗಳ್ಗೆಡೆದ ಕೆಱೆಗಮುಂಬಾರಾಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ ಬೀಡುವಾಡಂಗಳೊಳಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ ಬಂದು"[11]—

ಪಂಪನ ಕಾಲದಲ್ಲಿ ದೇಶಾಟನೆಗೆ ಹೊರಟ ರಾಜರೂ ಅವರ ಸಾಮಂತ ಮಾಂಡಳಿಕರೂ ಇತರ ಅಧಿಕಾರಿಗಳೂ ಸಾಮಾನ್ಯವಾಗಿ ಮಾಡುತ್ತಿದ್ದ ಜನೋಪಕಾರಕ ಕಾರ್ಯಗಳು ಪ್ರಾಯಃ ಹೀಗಿರುತ್ತಿದ್ದವೆಂದು ತೋರುತ್ತದೆ. ಇನ್ನು ರಾಜರು ತಮ್ಮ ಪ್ರಜೆಗಳು ಒಳ್ಳೆಯ ಕೆಲಸ ಮಾಡಿದಾಗ ತಮ್ಮ ಬಿರುದುಗಳನ್ನೂ ಹೆಸರುಗಳನ್ನೂ ಅವರಿಗೆ ಕೊಟ್ಟುದುಂಟು. ನೊಳಂಬಸೆಟ್ಟಿ, ಹೊಯ್ಸಳಸೆಟ್ಟಿ, ತ್ರಿಭುವನಮಲ್ಲ ಮುಂತಾದುವು ಹಾಗೆ ದತ್ತವಾದ ಹೆಸರುಗಳು.[12] ಗುಣಾರ್ಣವನ ಪ್ರೀತಿಪಾತ್ರನಾದ ಪಂಪಕವಿ ಕವಿತಾಗುಣಾರ್ಣವನೆನಿಸಿದ್ದು ಹೀಗೆ. ಪೊನ್ನ ರನ್ನ ಜನ್ನರು ಕವಿಚಕ್ರವರ್ತಿಗಳೆಂಬ ಬಿರುದು ತಳೆದದ್ದು ಹೀಗೆ.

ರಾಜಮಾತೆಯರೂ ರಾಜಪತ್ನಿಯರೂ ಸಮಯ ಬಂದಾಗ ತಾವೇ ರಾಜಧರ್ಮವನ್ನು ಪಾಲಿಸಿದರು. ಆಗ ಅವರು ಅಂತಃಪುರದಲ್ಲಿದ್ದುಕೊಂಡು 'ಅಸೂರ್ಯಂಪಶ್ಯೆ'ಯರಾಗಿಯೇ

ಪಿಯಾಗಿರಲಿಲ್ಲ. ಸಾತವಾಹನರ ಕಾಲದಲ್ಲಿ ಗೋತಮಿ ಬಲಸಿರಿ ಬೌದ್ಧ ಭದ್ರಾಯ ಣೀಯ ಸಂಘಗಳಿಗೆ ಲೇಣಗಳನ್ನು ಕೆತ್ತಿಸಿ ದತ್ತಿ ಹಾಕಿಕೊಟ್ಟುದು ನಾಸಿಕ ಮೊದಲಾದ ಳಗಳಲ್ಲಿನ ಗುಹಾಶಾಸನಗಳಿಂದ ಸುವಿದಿತ.[13] ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಷ್ಟೇ ಅಲ್ಲ, ರಾಜಕೀಯ ಜೀವನದಲ್ಲೂ ಅವರು ಸಕ್ರಿಯ ಪಾತ್ರವನ್ನು ವಹಿಸು ದ್ದರು. ಬಾದಾಮಿಯ ಚಾಲುಕ್ಯವಂಶದ ಚಂದ್ರಾದಿತ್ಯನ ಹೆಂಡತಿ ವಿಜಯಭಟ್ಟಾರಿಕೆ, ಷ್ಟ್ರಕೂಟ ಅಮೋಘವರ್ಷನ ರಾಣಿಯರಾದ ಲೋಕೇತಿಸಿಮ್ಮಬ್ಬಿ, ಶಂಖಾದೇವಿ ನಗಬ್ಬೆಯರು, ೨ನೆಯ ಜಯಸಿಂಹನ ಹೆಂಡತಿ ಸುಗ್ಗಲದೇವಿ, ೫ನೆಯ ವಿಕ್ರಮಾದಿತ್ಯನ ೋದರಿ ಅಕ್ಕಾದೇವಿ, ೬ನೆಯ ವಿಕ್ರಮಾದಿತ್ಯನ ರಾಣಿಯರಾದ ತ್ರೈಲೋಕ್ಯಮಹಾ ೕವಿ, ಮೈಳಲದೇವಿ ಮೊದಲಾದವರು, ಹೊಯ್ಸಳ ೨ನೆಯ ಬಲ್ಲಾಳನ ರಾಣಿ ಉಮಾದೇವಿ ಮೊದಲಾದವರು ಸ್ವತಃ ರಾಜ್ಯವಾಳಿದುದು ಅವರ ಶಾಸನಗಳಿಂದ ಸ್ಪಷ್ಟವಿದೆ. ಲೋಕ ಮಹಾದೇವಿ, ತ್ರೈಲೋಕ್ಯ ಮಹಾದೇವಿ, ಶಾಂತಲದೇವಿ ಮೊದಲಾದವರ ಹೆಸರುಗಳು ಟ್ಟದಕಲ್ಲು, ಬೇಲೂರು, ಶ್ರವಣಬೆಳಗೊಳ ಮೊದಲಾದ ಸ್ಥಳಗಳಲ್ಲಿನ ದೇವಾಲಯ ಳಿಂದ, ಜಿನಬಸದಿಗಳಿಂದ ಚಿರಸ್ಥಾಯಿಯಾಗಿವೆ.

ಪ್ರಾಚೀನ ಕಾಲದ ಕನ್ನಡನಾಡಿನ ರಾಜರೂ ಮಹಾಮಂಡಳೇಶ್ವರರೂ ದೊಡ್ಡ ದೊಡ್ಡ ಸೈನ್ಯಗಳನ್ನು ಹೊಂದಿದ್ದರೂ ಕೇವಲ ಸೈನ್ಯಬಲದಿಂದ ರಾಜ್ಯಾಡಳಿತ ನಡಸಲಿಲ್ಲ. ರಾಜನಿಗೆ ರಾಜಕುಮಾರರೂ ರಾಣಿಯರೂ ಅಂತರಂಗದ ಸಹಾಯವಾದರೆ, ಸಪ್ತಾಂಗದಲ್ಲಿ ಒಂದು ಭಾಗವಾದ ಮಂತ್ರಿಮಂಡಲವು ಬಹಿರಂಗ ಸಹಾಯಸಾಧನವಾಗಿತ್ತು. ರಾಜನ ಆಜ್ಞೆಗೂ ಪ್ರಜೆಗಳ ಆಶಯಕ್ಕೂ ಮಧ್ಯವರ್ತಿಯಾಗಿ ಕೆಲಸಮಾಡಬೇಕಾದ ಅಧಿಕಾರೀ ವರ್ಗವೇ ಮಂತ್ರಿಮಂಡಲ. ಮಂತ್ರಿಪದವಿ ಕೆಲವುಸಲ ವಂಶಪಾರಂಪರ್ಯವಾಗಿ, ಕೆಲವುಸಲ ವ್ಯಕ್ತಿಯ ದಕ್ಷತೆಯ ಮೇಲೆ ದೊರೆಯುತ್ತಿತ್ತು. ಮಂತ್ರಿಗಳು ಕುಶಲರೂ ದಕ್ಷರೂ ಧರ್ಮಿಷ್ಠರೂ ಉತ್ಸಾಹಿಗಳೂ ಆಗಿರಬೇಕಿತ್ತು. ದೇಶ, ಜನ್ಮ, ಆಚಾರ, ಕುಲ ಎಂಬ ನಾಲ್ಕು ಉಪಧೆಗಳ ಶುದ್ಧಿ ಅವರಿಗೆ ಅವಶ್ಯವಿತ್ತು.[14] ಸೌಜನ್ಯಶೌಚ ಉಜ್ವಲಕೀರ್ತಿ ಉದಾರಚರಿತೆ ಮುಂತಾದ ದ್ಗುಣಕ್ಕೆ ದರ್ಪಣನಾದ ಕೊಪ್ಪಣ ಅಥವಾ ಕೊಪ್ಪದೇವನು ೨ನೆಯ ಜಯಸಿಂಹಭೂಪ ನನ್ನು "ಉಪಧಾವಿಶುದ್ಧಿಯಿಂ ಮೆಚ್ಚಿಸಿ" ಭಂಡಾರ ಕರಣಿಕ ಸ್ಥಾನವನ್ನು ಪಡೆದನೆಂದು ವೂರಲ್ಲಿನ ಸ್ವಯಂಭೂದೇವನ ಮಂದಿರದಲ್ಲಿನ ಒಂದು ಶಾಸನದಲ್ಲಿದೆ.[15] ಆತನ ಮಗನೇ ನೆಯ ವಿಕ್ರಮಾದಿತ್ಯನ ನಚ್ಚಿನ ಮಂತ್ರಿ ರವಿಗಚಮೂಪ. ಅನೇಕ ವಿದ್ಯಾವಿಭವ ಸಂಪನ್ನ ನಾದ ಈತ ಆಹವಮಲ್ಲಾದಿಗಳನ್ನು ಮೆಚ್ಚಿಸಿ 'ಲಾಳಸಂಧಿವಿಗ್ರಹಿ', ಸೈನ್ಯಾಧಿಪತ್ಯ ದೊಡನೆ 'ಹೇರಿ ಸಂಧಿವಿಗ್ರಹಿ' ಮತ್ತು 'ಸಕಲರಾಜಚಿಹ್ನಂಗಳ ಜೊತೆಗೆ ಮಹಾಮಾತ್ಯ ಪದವಿ' ಎಂಬ ಮರ್ಯಾದೆಗಳನ್ನು ಪಡೆದನು. ಮಂತ್ರಿಮಂಡಲ ಅಥವಾ ಅಮಾತ್ಯಸಮಿತಿ ಸದಸ್ಯರ ಸಂಖ್ಯೆ ಎಷ್ಟು ಎಂಬುದರ ಬಗೆಗೆ ನಮಗೆ ಖಚಿತ ವಿವರಗಳು ದೊರಕುತ್ತಿಲ್ಲ. ಂದ ೨೦ರವರೆಗೆ ಇದ್ದಂತೆ ಕಾಣುತ್ತದೆ. ಸೋಮದೇವ ಸೂರಿಯು ಮಂತ್ರಿಗಳ ಸಂಖ್ಯೆ ., ೫ ಅಥವಾ ೭ ಎಂಬುದಾಗಿ 'ನೀತಿವಾಕ್ಯಾಮೃತ'ದಲ್ಲಿ ಹೇಳಿದ ವಿಷಯ ಸಮಕಾಲೀನ

ಶಾಸನಗಳಿಂದ ಪುಷ್ಟಿ ಹೊಂದಿವೆ. ಪಂಪನ ಸಮಕಾಲೀನನೂ ಅದೇ ರಾಜಮನೆತನದಲ್ಲಿ ಆಶ್ರಯಪಡೆದವನೂ ಆದ ಆತ ಸಮಕಾಲೀನ ವಿಷಯಗಳನ್ನೇ ಆಧರಿಸಿ ವಿವರಿಸಿರಬಹುದು. ಮಹಾಪ್ರಧಾನಿಯಲ್ಲದೆ ಇತರ ಮಂತ್ರಿಗಳು, ದಂಡನಾಯಕ, ಸರ್ವಾಧಿಕಾರಿ, ಭಂಡಾರಿ, ಸಂಧಿವಿಗ್ರಹಿ, ಸೇನಾಧಿಪತಿ, ಧರ್ಮಾಧಿಕರಣ ಈ ಕೆಲವರೂ ರಾಜ್ಯಾಡಳಿತದ ಸಿಬ್ಬಂದಿಯಲ್ಲಿದ್ದರು.

ಮಹಾಮಾತ್ಯರೇ ದಂಡನಾಯಕ ಪದವಿಯನ್ನೂ ಎಷ್ಟೋ ಸಲ ನೋಡಿಕೊಳ್ಳುತ್ತಿದ್ದರು. ಮಹಾಮಾತ್ಯ ದಂಡನಾಯಕ ನಾಗದೇವಯ್ಯನೆಂಬವನು ಬೇರೆ ಬೇರೆ ಪ್ರದೇಶಗಳನ್ನು ಆಳುತ್ತಿದ್ದ ವಿಷಯ ಶಾಸನವೊಂದರಲ್ಲಿ ಬಂದಿದೆ.[16] ದಂಡನಾಯಕ, ಪ್ರಚಂಡ ದಂಡನಾಯಕ, ಮಹಾಪ್ರಚಂಡ ದಂಡನಾಯಕ ಎಂದೂ ಈ ಅಧಿಕಾರಿಗಳನ್ನು ಸಂಬೋಧಿಸಿದೆ. ದಂಡನಾಯಕರು ಕೆಲವು ಸಲ ಮಹಾಸಾಮಂತಾಧಿಪತಿಗಳೆಂದೂ ಕರಸಿಕೊಂಡುದುಂಟು.

ಮಂತ್ರಿಗಳ ಮಂಡಲದಲ್ಲಿ ಮತ್ತೊಬ್ಬ ಪ್ರಮುಖವ್ಯಕ್ತಿ ಸಂಧಿವಿಗ್ರಹಿ. ಈ ಪದವಿ ಈ ಕಾಲದ ವಿದೇಶಾಂಗ ಖಾತೆಯನ್ನು ಪ್ರಾಯಶಃ ಹೋಲುತ್ತದೆ. ಸರ್ವಭಾಷೆಗಳನ್ನೂ ಲಿಪಿಗಳನ್ನೂ ಓದಲು, ಬರೆಯಲು, ಅರ್ಥೈಸಲು ಬಲ್ಲವನಾಗಿರಬೇಕು. ಸ್ವಪರ ಸ್ಥಿತಿಗಳನ್ನು ತೋಲನ ಮಾಡಬಲ್ಲ ಶಕ್ತಿಯನ್ನು ಈತ ಹೊಂದಿರಬೇಕು ಎಂದು ಸೋಮದೇವನು ವಿವರಿಸಿದ್ದಾನೆ.[17] ದಾನದತ್ತಿಯ ಶಾಸನಗಳ ಪಾಠವನ್ನು ಸಿದ್ಧಪಡಿಸುವುದೂ ಕಡತಕ್ಕೆ ತರುವುದೂ ಈತನದೇ ಕೆಲಸ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಇದರ ಪ್ರಸ್ತಾಪವಿದೆ. "ಮಹಾಸಂಧಿವಿಗ್ರಹಿ ಶ್ರೀರಾಮಪುಣ್ಯವಲ್ಲಭೇನ ಲಿಖಿತಮಿದಂ ಶಾಸನಂ—"[18] ಎಂದು ಮುಂತಾಗಿ ಬಾದಾಮಿಯ ಚಾಲುಕ್ಯರ ಕಾಲದಿಂದ ಬಳಕೆಯಲ್ಲಿದ್ದುದು ಸ್ಪಷ್ಟವಿದೆ.

ಇನ್ನೊಂದು ಮುಖ್ಯಸ್ಥಾನ ಕೋಶಾಧಿಕಾರಿ ಅಥವಾ ಭಂಡಾರಿಯದು. ಬಸವಣ್ಣನವರು ಪ್ರಾರಂಭದಲ್ಲಿ ಕಲಚುರಿ ಬಿಜ್ಜಳನಲ್ಲಿ ಒಬ್ಬ ಭಂಡಾರಿಗರಾಗಿದ್ದರು. ಶಿಲಾಹಾರ ಅನಂತದೇವನ ಪ್ರಧಾನಮಂತ್ರಿ ಖಜಾನೆಯ ಅಧಿಕಾರಿಯೂ ಆಗಿದ್ದನು. ಸೇಉಣ ಚಂದ್ರನ (ಕ್ರಿ. ಶ. ೧೦೭೫) ಮಂತ್ರಿ ರಾಜ್ಯದ ಉತ್ಪತ್ತಿಶಾಖೆಯನ್ನೂ ಹೊಂದಿದ್ದನು.

ಅಕ್ಷಪಟಲಕ, ರಜ್ಜುಕ, ನಿಯೋಗಿ—ಮೊದಲಾದವರು ಇತರ ರಾಜ್ಯಾಧಿಕಾರಿಗಳು. ಅಕ್ಷಪಟಲಕನು ಬಲುಮಟ್ಟಿಗೆ ಸಂಧಿವಿಗ್ರಹಿಯ ಶಾಸನ ರಕ್ಷಿಸುವ ಕೆಲಸವನ್ನು ಮಾಡುತ್ತಿದ್ದನು. ಅಶೋಕನ ಶಾಸನಗಳಲ್ಲಿ ಬಳಕೆಯಲ್ಲಿದ್ದ 'ರಜ್ಜುಕ' ಎಂಬುದು ಕ್ರಿ.ಶ. ೨ನೆಯ ಶತಮಾನದ ಶಿಕಾರಿಪುರ ಶಾಸನವೊಂದರಲ್ಲಿ ಮಾತ್ರ ಕಾಣಿಸಿಕೊಂಡಿದೆ.[19] ನಿಯೋಗ, ಬಾಹತ್ತರ ನಿಯೋಗ, ನಿಯೋಗಿ ಇವು ಕಲ್ಯಾಣದ ಚಾಲುಕ್ಯರ ಕಾಲದಿಂದ ಪ್ರಯೋಗದಲ್ಲಿ ಬಂದವು. 'ನಿಯೋಗಿ' ಎಂಬ ಮಾತಿಗೆ, 'ದೂತ' ಎನ್ನುವ ಅರ್ಥ ಶಾಸನಗಳಲ್ಲಿ ಕಾಣುತ್ತದೆ. ದಂಡನಾಯಕರಂತಹ ಹಿರಿಯ ಅಧಿಕಾರಿಗಳೂ ನಿಯೋಗಿಗಳಾಗಿ ಹೋಗಿ ಬರುತ್ತಿದ್ದರು.[20]

ಪ್ರತಿಯೊಂದು ರಾಜಮನೆತನವೂ ತನಗೆ ವಿಶಿಷ್ಟವಾದ ವಾದ್ಯ, ಧ್ವಜ, ಲಾಂಛನ

ಗಳನ್ನೂ ಗುಡಿ ಚಾಮರ ಮೊದಲಾದ ರಾಜಚಿಹ್ನೆಗಳನ್ನೂ ಪಡೆದಿರುತ್ತಿತ್ತು. ಯುದ್ಧದಲ್ಲಿ ಗೆದ್ದವರು ಸೋತವರ ರಾಜಚಿಹ್ನೆಗಳನ್ನು ಕಿತ್ತುಕೊಂಡು ಹೋಗುತ್ತಿದ್ದುದುಂಟು.[21] ಸಕಲ ಉತ್ತರಾಪಥವನ್ನೂ ಗೆದ್ದುಕೊಂಡು ಬಾದಾಮಿಯ ಚಾಲುಕ್ಯರು ಪಾಳಿಧ್ವಜ ಪದಫಕ್ಕೆಗಳನ್ನು ಕರ್ಣಾಟಕಕ್ಕೆ ತಂದರು. ಮುಂದೆ ರಾಷ್ಟ್ರಕೂಟರು ಚಾಲುಕ್ಯರನ್ನು ಗೆದ್ದುಕೊಂಡಾಗ ಅವು ಆ ಮನೆತನವನ್ನು ಸೇರಿದವು. ಪಾಳಿಧ್ವಜ, ಪಂಚಮಹಾಶಬ್ದ ಮುಂತಾದವು ವಿಶಿಷ್ಟ ಚಿಹ್ನೆಗಳಾಗಿದ್ದವು. ಈ ರಾಜಚಿಹ್ನೆಗಳು ಜೈನ ತೀರ್ಥಂಕರರ ಅಲಂಕರಣದಲ್ಲೂ ದೇವಾಲಯಗಳ ನಿತ್ಯನೇಮಗಳಲ್ಲೂ ಜನ ಬಳಕೆಯಲ್ಲೂ ಸೇರ್ಪಡೆಯಾದವು. ಕೆಲ ರಾಜವಂಶಗಳ ವಾದ್ಯ ಧ್ವಜ ಲಾಂಛನಗಳ ಸಣ್ಣ ಪಟ್ಟಿಯೊಂದನ್ನು ಕೆಳಗೆ ಕೊಡುತ್ತೇವೆ.

ಕದಂಬರು—ಪೆರ್ಮಟ್ಟಿ ತೂರ್ಯ ವಾದ್ಯ, ಕಪಿಧ್ವಜ, ಸಿಂಹಲಾಂಛನ; ಬಾದಾಮಿ ಚಾಲುಕ್ಯರು—ಪದಫಕ್ಕಾ ವಾದ್ಯ, ಪಾಳಿಧ್ವಜ, ವರಾಹ ಲಾಂಛನ; ಬಾಣರು—ಪೈಶಾಚಿಕಪಟಹ ವಾದ್ಯ, ಕೃಷ್ಣಧ್ವಜ, ವೃಷಭಲಾಂಛನ; ರಾಷ್ಟ್ರಕೂಟರು—ಪದಫಕ್ಕಾ ತಿವಳಿವಾದ್ಯ, ಗರುಡಧ್ವಜ, ಗರುಡ ನೇಗಿಲು ಲಾಂಛನ; ನಾಗವಂಶ—ವಿಜಯಪಟಹ ವಾದ್ಯ, ನಾಗಧ್ವಜ, ವ್ಯಾಘ್ರಲಾಂಛನ; ಗಂಗರು—ಪಿಂಛಧ್ವಜ, ಮದಗಜ ಲಾಂಛನ; ಕಲ್ಯಾಣ ಚಾಲುಕ್ಯರು—ವರಾಹಧ್ವಜ; ಸೇಉಣರು–ಗರುಡಧ್ವಜ, ಗರುಡ ಹನುಮಂತ ಲಾಂಛನ; ಹೊಯ್ಸಳರು—ಹುಲಿಯನ್ನು ಕೊಲ್ಲುತ್ತಿರುವ ಸಳ ಲಾಂಛನ; ಕಲಚುರಿಗಳು—ಸುವರ್ಣ ವೃಷಭಧ್ವಜ, ವೃಷಭ ಲಾಂಛನ; ವಿಜಯನಗರ—ವರಾಹ ಲಾಂಛನ; ಮೈಸೂರರಸರು—ಗಂಡಭೇರುಂಡ ಲಾಂಛನ.

ಕರ್ಣಾಟಕದಲ್ಲಿ ಅನೇಕ ಮಾಂಡಲಿಕರೂ ಮಹಾಮಂಡಳೇಶ್ವರರೂ ಆಗಿಹೋಗಿದ್ದು ರಾಷ್ಟ್ರಕೂಟ ರಾಜರ ಕಾಲದಿಂದ "ಸಮಧಿಗತ ಪಂಚಮಹಾಶಬ್ದ" ಪದ ಅನೇಕ ಮನೆತನಗಳಿಗೆ ಸಂದಿತ್ತು. ಸಾಮಾನ್ಯವಾಗಿ ಸಾಮಂತರಾಜರು ತಮ್ಮ ತಮ್ಮ ಸಂಸ್ಥಾನಗಳಲ್ಲಿ ಪರಮಾಧಿಕಾರಿಗಳಾಗಿರುತ್ತಿದ್ದರು. ಅವರೂ ಅಧಿರಾಜರಂತೆ ಮಂತ್ರಿಮಂಡಲ, ಸೇನೆ ಮತ್ತು ಅಧಿಕಾರವರ್ಗಗಳನ್ನು ಹೊಂದಿರುತ್ತಿದ್ದರು. ಮಂಡಲೇಶ್ವರರಿಗೂ ಸಾಮಂತರಿಗೂ ಹೆಚ್ಚು ವ್ಯತ್ಯಾಸವಿದ್ದಿಲ್ಲ. ಸಾಮಂತರು ವಂಶಪಾರಂಪರ್ಯವಾಗಿ ಆಳುತ್ತ ಬಂದವರು, ಸಮಯಸಿಕ್ಕಾಗ ಸ್ವತಂತ್ರರಾಗಲು ಹವಣಿಕೆಯುಳ್ಳವರು; ಮಂಡಲೇಶ್ವರರು ಅಧಿರಾಜನಿಂದ ನೇಮಿಸಲ್ಪಟ್ಟು ಸಂಪೂರ್ಣವಾಗಿ ಆತನ ಅಧೀನದಲ್ಲಿರುವವರು. ಯುದ್ಧಕಾಲದಲ್ಲಿ ಈ ಸಾಮಂತರೂ ಮಂಡಲೇಶ್ವರರೂ ಅಧಿರಾಜನಿಗೆ ಸಹಾಯ ಮಾಡುತ್ತಿದ್ದರು.

ಸಾಮ್ರಾಜ್ಯವನ್ನು ಸೌಕರ್ಯದೃಷ್ಟಿಯಿಂದ ಭೌಗೋಳಿಕವಾಗಿ ಮೂರು ಭಾಗಗಳಲ್ಲಿ ವಿಭಜಿಸಿದೆ: ಮಂಡಲ, ನಾಡು, ಊರು. ರಾಜಧಾನಿಯ ಸುತ್ತಮುತ್ತಲಿನ ಪ್ರದೇಶಗಳನ್ನು ರಾಜನೇ ನೇರವಾಗಿ ಆಳುತ್ತಿದ್ದನು. ಮಂಡಲಕ್ಕೆ ಮಂಡಲೇಶ್ವರ, ನಾಡಿಗೆ ನಾಡಪ್ರಭು ಮತ್ತು ನಾಡಗಾವುಂಡಗಳು, ಊರಿಗೆ ಗಾವುಂಡಗಳು ಅಧಿಪತಿಗಳಾಗಿರುತ್ತಿದ್ದರು. ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟಕ, ಆಯುಕ್ತಕ, ಅಧಿಕಾರಿಕ, ಮಹತ್ತರ ಎಂಬ ಅಧಿಕಾರಿಗಳೂ ಇದ್ದ ಬಗೆಗೆ ೬ನೆಯ ವಿಕ್ರಮಾದಿತ್ಯನ ಶಾಸನವೊಂದರಿಂದ ತಿಳಿದುಬರುತ್ತದೆ.[22]

ರಾಜನೂ ಅವನ ಪ್ರತಿನಿಧಿಗಳೂ ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ದಂಡನೀತಿಯನ್ನೂ ಬಳಸುತ್ತಿದ್ದರು. ಇದೇ ನ್ಯಾಯ ಪರಿಪಾಲನೆ. ರಾಜನು ಪ್ರಜೆಗಳ ನೀತಿ ಮತ್ತು ನಡತೆಗೆ ಸಂಬಂಧಿಸಿದಂತೆ ಆಜ್ಞೆ ಘೋಷಣೆಗಳನ್ನು ಹೊರಡಿಸುತ್ತಿದ್ದನು. ದಾಳಿಗಳಿಂದ ನಾಡು ಹಾಳಾದಾಗ ಕೆಲವರು ರಾಜರು ಪ್ರಜೆಗಳ ಯೋಗಕ್ಷೇಮಕ್ಕಾಗಿ ಮತ್ತೆ ನೇರ್ಪಡಿಸಿದ್ದು ಉಂಟು.[23] ಮಾನುಷ ಪ್ರಮಾಣಗಳು ಇಲ್ಲದಾಗ ನ್ಯಾಯಪರಿಪಾಲಕರು ದಿವ್ಯಗಳನ್ನು ನಡಸುತ್ತಿದ್ದರು. ಈ ವಿಧಾನವನ್ನು ಸಣ್ಣಪುಟ್ಟ ವಿವಾದಗಳಿಗೆ ಬಳಸುತ್ತಿದ್ದಿಲ್ಲ. ಶ್ರುತಿ ಸ್ಮೃತಿಗಳು ಮತ್ತು ಇವುಗಳ ಮೇಲೆ ಬರೆಯಲಾದ ಟೀಕೆ ಟಿಪ್ಪಣಿಗಳು ನ್ಯಾಯನಿರ್ಣಯ ಕಾರ್ಯದಲ್ಲಿ ಆಧಾರಗ್ರಂಥಗಳಾಗಿದ್ದವು. 'ದಂಡಂ ಧರ್ಮಂ ವಿದುರ್ಬುಧಾಃ' ಎಂಬುದು ಮನುವಿನ ಮಾತು. ದಂಡಾಧಿಕಾರಿಗಳು ನ್ಯಾಯನಿರ್ವಾಹವನ್ನು ಮಾಡುತ್ತಿದ್ದರು. ಇವರಿಗೆ 'ಧರ್ಮಾಧ್ಯಕ್ಷ' ಎಂಬ ವಿಶೇಷಣವಿರುತ್ತಿತ್ತು. ವಿಷಯದ ಪರಿಷ್ಕಾರವನ್ನು ಮಾಡಿ ನಿರ್ಣಯಕ್ಕೆ ಬರಲಾಗುತ್ತಿತ್ತು. ನ್ಯಾಯತೀರ್ಮಾನ ತೃಪ್ತಿಕರವಾಗಿಲ್ಲದಿದ್ದರೆ ರಾಜನವರೆಗೂ ದೂರು ಹೋಗುತ್ತಿತ್ತು. ಅಪರಾಧಕ್ಕೆ ಶಿಕ್ಷೆ ತಪ್ಪಿದ್ದಲ್ಲ. ಕಳ್ಳಕಾಕರನ್ನು ಅಂಗಹೀನರನ್ನಾಗಿಸುವುದು, ರಾಜದ್ರೋಹಿಗಳಿಗೆ ಶಿರಚ್ಛೇದನ ಮಾಡಿಸುವುದು ಮುಂತಾಗಿ ಶಿಕ್ಷೆಗಳು ಘೋರವಾಗಿರುತ್ತಿದ್ದವು. ಅಧಿರಾಜನ ಪದ್ಧತಿಯೇ ನಾಡು ಮಂಡಲಗಳ ಅಧಿಪತಿಗಳಿಗೆ ಅನುಕರಣೀಯ. ಮಂಡಲಗಳು ವಾಡಿ ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದ್ದುವು. ಉದಾ: ಗಂಗವಾಡಿ, ನೊಳಂಬವಾಡಿ. ವಿಷಯ, ರಾಷ್ಟ್ರ ಇವು ಬಹುಮಟ್ಟಿಗೆ ಒಂದೇ. ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರವೇ ದೊಡ್ಡದು, ವಿಷಯ ಸಣ್ಣದು. ಅದಕ್ಕೆ ಮೊದಲು 'ವಿಷಯ' ಎಂಬುವೇ ದೊಡ್ಡದು, ರಾಷ್ಟ್ರ ಸಣ್ಣದು. ದಂತಿದುರ್ಗನ ಸಾಮನಗಡ ಶಾಸನದಲ್ಲಿ ಪಂಚಶತ(೫೦೦) ಭುಕ್ತಿಗಳ ಉಲ್ಲೇಖವಿದೆ. ಭುಕ್ತಿ ಎಂಬುದು ವಿಷಯದ ಹಾಗೆ ವ್ಯಾಪ್ತಿಯುಳ್ಳ ದೇಶವಾಚಕ ಶಬ್ದ.

ಮಂಡಲಗಳ ತರುವಾಯದ್ದು ಊರುಗಳ ಆಡಳಿತ. ಊರುಗಳು ರಾಜನ ಆಡಳಿತದಿಂದ ಹೊರಗಲ್ಲವಾದರೂ ಅವುಗಳದೊಂದು ವಿಶಿಷ್ಟ ಪದ್ಧತಿ. ಇದನ್ನು ಪಟ್ಟಣಗಳ, ಅಗ್ರಹಾರಗಳ ಮತ್ತು ಹಳ್ಳಿಗಳ ಆಡಳಿತ ಎಂದು ಮೂರು ಭಾಗ ಮಾಡಲಾಗಿದೆ.[24] 'ಮಾನಸಾರ'ದ ಪ್ರಕಾರ ಒಂದು ಊರು 'ಪುರ' ಎನ್ನಿಸಿಕೊಳ್ಳಬೇಕಾದರೆ ಅದು ತೋಟಗಳಿಂದ, ಬಹುವಿಧದ ಜನರಿಂದ, ಕೊಡುವ ಕೊಳ್ಳುವ ಹರದರಿಂದ, ಜನರಿಂದ ಶಬ್ದಾಯಮಾನವಾಗಿರಬೇಕು. ಸಪ್ತದೇವತೆಗಳ ದೇವಾಯತನಗಳಿಂದ ಕೂಡಿರಬೇಕು. ರಾಜ್ಯದಲ್ಲಿ ಇಂಥ ಪಟ್ಟಣಗಳಿರುತ್ತಿದ್ದವು. ಪಟ್ಟಣ ವ್ಯಾಪಾರದ ಕೇಂದ್ರವಾಗಿರುತ್ತಿತ್ತು. ಮುನ್ನೂರು ಸೆಟ್ಟಿ ಗಾವುಂಡಗಳೂ ನೂರಿಪ್ಪತ್ತು ಮಹಾಜನರೂ ಐವತ್ತೆರಡು ಸಾಲಿಗರೂ ನೂರಿಪ್ಪತ್ತೆರಡು ತೆಲ್ಲಿಗರೂ ಐವತ್ತೆಂಟು ಮಾಲೆಗಾರರೂ ಪಂಚಮಠ ಸ್ಥಾನಾಧಿಪತಿಗಳೂ ಇದ್ದರು ಎಂದು ಮುಂತಾಗಿ ಪಟ್ಟಣಗಳ ವರ್ಣನೆಯಲ್ಲಿ ಬರುವುದು ಸಾಮಾನ್ಯ. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ 'ನಗರ' ಅಥವಾ 'ನಖರ' ಎಂಬ ವರ್ತಕಶ್ರೇಣಿ ಮುಖ್ಯವಾಗಿರುತ್ತಿತ್ತು. ಇವರ ಸಂಘವಿರುತ್ತಿತ್ತು. ಕೆಲವು ಸಲ ಇವರೂ ವಿಶಿಷ್ಟ ಧ್ವಜಗಳನ್ನು ಹೊಂದಿರುತ್ತಿದ್ದರು. ಅಯ್ಯಾವೊಳೆ

ಐನೂರ್ವರು ಗುಡ್ಡಧ್ವಜವನ್ನೂ ಡಮರುಗ ಪಱೆಯೆಂಬ ವಾದ್ಯಗಳನ್ನೂ ಹೊಂದಿರುತ್ತಿದ್ದರು.[25] ಅಧಿರಾಜರ ಬಿರುದುಗಳನ್ನು ಒಮ್ಮೊಮ್ಮೆ ಇವರು ಹೊಂದಿರುತ್ತಿದ್ದರು. ನಖರರೊಂದಿಗೆ ಬ್ರಾಹ್ಮಣರೂ ಸಾಮೂಹಿಕ ಸಭೆಗಳಲ್ಲಿ ಪ್ರತಿಷ್ಠಾವಂತರಾಗಿದ್ದರು. ಮುಳಗುಂದ ಪಟ್ಟಣಕ್ಕೆ ವೈದಿಕ ಬ್ರಾಹ್ಮಣನಾದ ಸೋಯಿಮಯ್ಯನು ಊರೊಡೆಯನಾಗಿದ್ದನೆಂದು ಅಲ್ಲಿನ ಒಂದು ಶಾಸನದಿಂದ ವಿದಿತವಾಗುತ್ತದೆ.[26] ನಗರ, ನಖರ, ನಗರ್ತ, ತಮಿಳಿನ ನಗರತ್ತಾರ್ ಇವು ಒಂದೇ ಮೂಲದ ಶಬ್ದಗಳು. ನಗರರು ತಮ್ಮನ್ನು ವೈಶ್ಯರೆಂದು ಹೇಳಿಕೊಳ್ಳುತ್ತಾರೆ. ಇವರಲ್ಲಿ ಶೈವ ನಗರ್ತ ಮತ್ತು ನಾಮಧಾರಿ ನಗರ್ತ ಎಂದು ಎರಡು ಬಗೆ.[27]

ರಾಜ್ಯದ ದೊಡ್ಡ ಘಟಕ ಪಟ್ಟಣವಾದರೆ ಅತಿ ಚಿಕ್ಕ ಘಟಕ ಹಳ್ಳಿ. ಆಡಳಿತವರ್ಗ ಪ್ರತಿಯೊಂದು ಹಳ್ಳಿಯ ಗಡಿಗೆರೆಗಳನ್ನೂ ಕೆರೆ, ಹಳ್ಳ, ದಿಣ್ಣೆ, ಮರ, ಕಲ್ಲುರಾಶಿ, ನೆಟ್ಟ ಕಲ್ಲು, ದಾರಿ, ಗುಡ್ಡ, ಬೆಟ್ಟ, ನದಿ ಇತ್ಯಾದಿಗಳಿಂದ ಗುರುತಿಸುತ್ತಿದ್ದಿತು. ಸೀಮಾರೇಖೆ ನಿಶ್ಚಿತಗೊಂಡ ಹಳ್ಳಿಗಳು ರಾಜನಿಗೆ ಸಲ್ಲಬೇಕಾದ ತೆರಿಗೆಗಳನ್ನು ಸಲ್ಲಿಸಿದರೆ ತಮ್ಮಷ್ಟಕ್ಕೆ ತಾವು ಒಂದು ಸ್ವತಂತ್ರ ರಾಜ್ಯವೆಂಬಂತೆ ಬದುಕಬಹುದಾಗಿತ್ತು. ಊರಿನಲ್ಲಿ ಆಯಾ ವೃತ್ತಿಯ ಜನರು ಸಾಧಾರಣವಾಗಿ ಒಂದು ಓಣಿ ಅಥವಾ ಕೇರಿಯಲ್ಲಿ ವಾಸಿಸುತ್ತಿದ್ದರು. ಊರಿಗೆ ಒಂದು ಹೆಬ್ಬಾಗಿಲು. ಎಲ್ಲ ಊರುಗಳಿಗಲ್ಲದಿದ್ದರೂ ಹೆಚ್ಚಿನವಕ್ಕೆ ಕೋಟೆಗಳಿರುತ್ತಿದ್ದವು. ಪ್ರಾಚೀನಕಾಲದಲ್ಲಿ ಪ್ರತಿಯೊಂದು ಊರಿನವರೂ ತಮ್ಮ ರಕ್ಷಣೆಯನ್ನು ತಾವೇ ನೋಡಿಕೊಳ್ಳುತ್ತಿದ್ದರು. ಕೋಟೆಯ ಬಾಗಿಲೇ ಹೆಬ್ಬಾಗಿಲು ಅಥವಾ ಅಗಸೆ ಬಾಗಿಲು. ಅದು ಸ್ಥಿರವಾದುದರಿಂದ ತಾಯಂದಿರು ಮಕ್ಕಳಿಗೆ ಎರೆದು ಹರಸುವಾಗ 'ಅಗಸಿ ಬಡಗಲ್ಲಾಗು' ಎಂದೂ ಹೇಳುವುದುಂಟು. ಊರ ಹೆಬ್ಬಾಗಿಲಲ್ಲಿ ಸಿಂಹದ ಹಾಗೆ ನಿಂತು ಕಾದಾಡಿ ಮಡಿದ ವೀರನ ವಿಷಯ ಶಾಸನವೊಂದರಲ್ಲಿದೆ.[28]

ಇನ್ನು ಈ ಹಳ್ಳಿಗಳುದೇವಸ್ಥಾನದ ಸುತ್ತಮುತ್ತ ವಿಶೇಷವಾಗಿ ಹುಟ್ಟಿ ಹಬ್ಬಿ ಬೆಳೆದುದೂ ಉಂಟು. ದೇವಾಲಯಕ್ಕೆ ಆನಿಕೊಂಡು ಒಂದೆಡೆ ಅರ್ಚಕರ ಭಕ್ತರ ನಿವಾಸಗಳೂ ಇನ್ನೊಂದೆಡೆ ದೇವಾಲಯಕ್ಕೆ ಬೇಕಾದ ಪುಷ್ಪವಾಟಿಗಳೂ ಇರುತ್ತಿದ್ದವು. ಊರುಗಳ ಭದ್ರ ಆಡಳಿತವೇ ಕೇಂದ್ರದ ಆಡಳಿತಕ್ಕೆ ತಳಪಾಯ. ಅವನ್ನು ಗೌಂಡರು ನೋಡಿಕೊಳ್ಳುತ್ತಿದ್ದರು, ಇಲ್ಲವೆ ಅವರ ಸಮೂಹ ನೋಡಿಕೊಳ್ಳುತ್ತಿದ್ದಿತು. 'ಗ್ರಾಮಕೂಟ' ಎಂಬುದು ಗೌಂಡ (>ಗೌಡ)ಶಬ್ದದ ಮೂಲ. ಊರಿನ ಉಸ್ತುವಾರಿಯೆಲ್ಲ ಗೌಡನದು. ಊರಿನ ಮುಖ್ಯ ಪ್ರತಿನಿಧಿ ಆವನು. ಅಲ್ಲಿಯ ಪಂಚಾಯಿತಿಗಳೆಲ್ಲ ಆತನ ಸಮಕ್ಷದಲ್ಲಿ ಜರಗುತ್ತಿದ್ದವು. ನಾಕಿಗಾವುಂಡನೆಂಬವನ ಈ ಚಿತ್ರ ನೋಡಿ:

ಖಳರ [ರ]ಪಂ ಕಳಲ್ಚಿದುದು ಕಳ್ಳರ ಕೊಳ್ಳಿಯ ಬಾಧೆಯಿಂ ಬೆಗಳ್ದಳಱ³ ತೆರಳಿ ತೂಳ್ದಿದುದು, ಮನ್ನೆಯರನ್ನೆಯಮುಂ ನಿರಾಕುಳಂ ...ವದು ಭೀತಿಯಿಂ ಮಱಗೆಪಂದವರಂ ನೆಱ ಕಾದುಪೆಂಡಡಾರಳವಿಯೊ ಧಾತ್ರಿಯೊಳ್ ನೆಗಟ್ದ ನಾಕಿಗವುಂಡನ ಬಾಹು ವಿಕ್ರಮಂ.[29]

ಗ್ರಾಮಾಡಳಿತಕ್ಕೆ ಸಂಬಂಧಪಟ್ಟ ಇತರ ವ್ಯಕ್ತಿಗಳೆಂದರೆ ಸೇನಬೋವ ಮತ್ತು ತಳವಾರರು. ಸೇನಬೋವ ವಿದ್ಯಾವಂತ, ಗ್ರಾಮದ ಕಂದಾಯದ ಲೆಕ್ಕ ಪತ್ರಗಳನ್ನು ಇಡುತ್ತಿದ್ದ ವ್ಯಕ್ತಿ. ತಳವಾರ ಊರಿನ ರಕ್ಷಣೆಯ ಹೊಣೆಗಾರ. ಗೌಡ, ಕುಲಕರಣಿ, ತಳಾರ, ಚೌಧರಿ ಮೊದಲಾದವರು ಊರ ವತನದಾರರು. ಇವರಿಗೆ ರಾಜ ಉಂಬಳಿ ಭೂಮಿಯನ್ನು ಬಿಡುತ್ತಿದ್ದನು. ಇದೇ ಈಚೆಯ ರೂಢಿಯಲ್ಲಿ 'ಇನಾಮ್ ಜಮೀನು.' ಈ ಅಧಿಕಾರಿಗಳೇ ಗ್ರಾಮದ ಸರ್ವಸಾಮಾಜಿಕ ಕಾರ್ಯಗಳಿಗೂ ಮೇಲ್ವಿಚಾರಕರು.

ಅಗ್ರಹಾರ, ಬ್ರಹ್ಮಪುರಿ, ಶಿವಪುರ, ಮಂಗಲ—ಇವು ಸಾಮಾನ್ಯವಾಗಿ ರಾಜರು ಬ್ರಾಹ್ಮಣರಿಗೆ ದತ್ತಿಯಾಗಿ ಕೊಡುತ್ತಿದ್ದ ಊರುಗಳು. ದತ್ತಿ ಪಡೆದ ಬ್ರಾಹ್ಮಣರೇ ಅಲ್ಲಿನ ಮಹಾಜನರು. ಸರ್ವಬಾಧಾಪರಿಹಾರವಾಗಿಸಿದ ದತ್ತಿಗಳನ್ನು ಪಡೆದಿರುತ್ತಿದ್ದ ಕಾರಣದಿಂದ ಅಲ್ಲಿ ರಾಜನ ಸಿಬ್ಬಂದಿಯಾಗಲಿ ಇತರರಿಗಾಗಲಿ ಯಾವ ಬಗೆಯ ಕಿರುಕುಳ ಕೊಡುವಂತಿದ್ದಿಲ್ಲ. ಅಗ್ರಹಾರದ ಆದಾಯ ಬ್ರಾಹ್ಮಣರಿಗೆ ಸಲ್ಲುತ್ತಿತ್ತು. ಎಂದರೆ ರಾಜಾದಾಯಕ್ಕೆ ಸಲ್ಲಬೇಕಾಗಿದ್ದ ಕಂದಾಯರೂಪದ ಸಂಪತ್ತನ್ನು ಬ್ರಾಹ್ಮಣರು ಅನುಭೋಗಿಸುತ್ತಿದ್ದರು. ಕನ್ನಡನಾಡಿನಲ್ಲಿ ಅಗ್ರಹಾರಗಳ ಚರಿತ್ರೆ ಕ್ರಿ.ಶ. ೪-ನೆಯ ಶತಮಾನದಷ್ಟು ಹಳೆಯದಿರಬಹುದು. ತಾಳಗುಂದ ಮೊದಲಾದವು ಅನಾದಿ ಅಗ್ರಹಾರಗಳಾಗಿದ್ದುವು. ಕೆಲವು ಅಗ್ರಹಾರಗಳಲ್ಲಿ ೨೦೦ರಿಂದ ೧೦೦೦ದ ವರೆಗೆ ಮಹಾಜನರು ಇರುತ್ತಿದ್ದರು. ದೊಡ್ಡ ವಿದ್ವಾಂಸರಾಗಿರುತ್ತಿದ್ದ ಅವರಿಗೆ ಊರಿನಲ್ಲಿ ವಿಶೇಷ ಗೌರವ ಸಲ್ಲುತ್ತಿದ್ದಿತು. ದೇವಾಲಯ, ವಿದ್ಯಾಕೇಂದ್ರ ಮತ್ತು ಘಟಿಕಾಸ್ಥಾನಗಳ ರಕ್ಷಕರು ಇವರು. ಸತ್ತ ವೀರನ ಸ್ಮಾರಕದ ನೆನಪಿಗೆ ವೀರಗಲ್ಲನ್ನು ಹಾಕಿಸುವುದು, ದಾನದತ್ತಿಗಳನ್ನು ಸ್ವೀಕರಿಸುವುದು, ಬಂದ ಹಣವನ್ನು ಬಡ್ಡಿಗೆ ಕೊಟ್ಟು ಆ ಆದಾಯದಲ್ಲಿ ಧರ್ಮಕಾರ್ಯಗಳನ್ನು ಮಾಡುವುದು, ಭೂಮಿಯ ಮೇಲಿನ ಆದಾಯವನ್ನು ನಿರ್ದಿಷ್ಟ ಧಾರ್ಮಿಕ ಕಾರ್ಯಕ್ಕಾಗಿ ಬಳಸುವುದು—ಈ ಮೊದಲಾದುವು ಇವರ ಕರ್ತವ್ಯಗಳು. ಒಂದು ಊರನ್ನು ಅಗ್ರಹಾರವನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನಕೊಟ್ಟರೆ ಪುಣ್ಯವೆಂಬ ಭಾವನೆ ರಾಜರಲ್ಲಿತ್ತು.

ದತ್ತಿ ಪಡೆದ ಮಹಾಜನರು ಅಧ್ಯಯನ ಅಧ್ಯಾಪನಾದಿ ಷಟ್ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು. ಪ್ರಾಚೀನಕಾಲದಲ್ಲಿ ಈ ಅಗ್ರಹಾರಗಳು ಮತ್ತು ಇಂತಹ ಕೇಂದ್ರಗಳು ವಿದ್ಯಾಭ್ಯಾಸದ ಹೊಣೆಯನ್ನು ಹೊತ್ತಿದ್ದವು. ಅಗ್ರಹಾರಗಳ ನಿರ್ಮಾಣ ಅಲ್ಲಿಯ ಸದಸ್ಯರ ಜೀವನೋಪಾಯವನ್ನು ಸಾಧಿಸಿಕೊಟ್ಟಿತು. ವಿದ್ಯೆಯ ಬೆಳವಣಿಗೆಯನ್ನೂ ನಿರಾತಂಕವಾಗಿ ಸಾಧಿಸಿತು. ಜೈನಗ್ರಂಥಗಳಲ್ಲಿ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖಗಳೆಂಬ ಮಾತು ಆಗಾಗ್ಗೆ ಕಾಣಿಸಿಕೊಳ್ಳುತ್ತವೆ. ಇದು ಕೌಟಿಲ್ಯನ ಅರ್ಥಶಾಸ್ತ್ರಕ್ಕನುಸರಿಸಿ ಬರುತ್ತದೆ.

ಗ್ರಾಮ—೧೦೦-೫೦೦ರ ಮಧ್ಯೆ ವಾಸಮಾಡುವ ಕುಟುಂಬಗಳನ್ನುಳ್ಳ ಹಳ್ಳಿ; ನಗರ—ರಾಜಧಾನಿ; ಖೇಡ—ಎತ್ತರವಾದ ಕೋಟೆಯನ್ನುಳ್ಳ ಊರು; ಖರ್ವಡ—ಕ್ಷುಲ್ಲಕ ಪ್ರಾಕಾರವಿರುವ ಊರು; ಮಡಂಬ—ದೂರದಲ್ಲಿರುವ ಊರು ಅಥವಾ ಸೀಮಾಂತರ

ದಲ್ಲಿರುವ ಪುರ; ಪತ್ತನ—ಬಂಡಿ ಇಲ್ಲವೆ ನಾವೆಗಳಲ್ಲಿ ಪ್ರಯಾಣಮಾಡಿ ಸೇರಬಹುದಾದ ಪುರ; ದ್ರೋಣಾಮುಖ—ಜಲಸ್ಥಲ ಮಾರ್ಗಗಳನ್ನುಳ್ಳ ಪುರ. ಪಂಪನು ಈ ವಿಷಯವನ್ನು ಹೀಗೆ ವಿವರಿಸಿದ್ದಾನೆ:

ಕ್ರೋಶದ್ವಿಕ್ರೋಶ ಸೀಮಾಭಾಗಯೋಜನ ಪಂಚಶತ ಕುಟುಂಬಿ ಕುಲಾವಿರ್ಭಾವಿತಾಧಮೋತ್ತಮಭೇದಂಗಳುಮಂ ಸರಿದ್ಗಿರಿದರೀ ಭೂರುಹ ಸೇತುವನ ಸೀಮೋಪಲಕ್ಷಿತಂಗಳುಮಪ್ಪ ಮಹಾಗ್ರಾಮಂಗಳುಮಂ ಪೂರ್ವೋತ್ತರಾಂಭಃಪ್ಲವಂಗಳುಮಂ ಪರಿಖಾವಪ್ರಪ್ರಾಕಾರ ಗೋಪುರಾಟ್ಟಾಲ ಪರಿವೃತಂಗಳುಮಂ ನಾನಾಭವನ ವಿನ್ಯಾಸೋದ್ಯಾನಲೀಲಾ ಜಲಾಶಯಂಗಳುಮಂ ಪ್ರಧಾನಪುರುಷಾಧ್ಯಾಸಿತಂಗಳಪ್ಪ ಪುರಂಗಳುಮಂ ಗಿರಿಸರಿತ್ಸಂರುದ್ಧಂಗಳಪ್ಪ ಖೇಟಂಗಳುಮಂ ಉರ್ವೀಧರ ನಿರುದ್ಧಂಗಳಪ್ಪ ಖರ್ವಡಂಗಳುಮಂ ಪಂಚಶತಗ್ರಾಮ ಪರೀತಂಗಳಪ್ಪ ಮಡಂಬಂಗಳುಮಂ ಸಮುದ್ರೋತ್ಕೀರ್ಣನಿವಾಸಂಗಳಪ್ಪ ಪಟ್ಟಣಂಗಳುಮಂ ನಿಮ್ನಗಾತಟ ನಿಕಟವರ್ತಿಗಳಪ್ಪ ಮಹಾದ್ರೋಣಾಮುಖಂಗಳುಮಂ"[30]

ರಾಜ್ಯದ ಆರ್ಥಿಕ ವ್ಯವಸ್ಥೆಯು ಜನಜೀವನದ ಸುಸ್ಥಿತಿಯ ರೂಪರೇಷೆಗಳನ್ನು ಗುರುತಿಸುವಲ್ಲಿ, ರಾಜ್ಯದ ಹಿರಿಮೆಗರಿಮೆಗಳನ್ನು ಹೇಳುವಲ್ಲಿ ಒಂದು ಮುಖ್ಯ ಅಂಶ. ರಾಜನಿಗೆ 'ಪ್ರಜೆಗಳ ಸುಖವೇ ಸುಖ, ಪ್ರಜೆಗಳ ಹಿತವೇ ಹಿತ; ಆತ್ಮಸುಖ ಸುಖವಲ್ಲ; ಪ್ರಜೆಗಳಿಗೆ ಹಿತವಾದುದೇ ತನಗೆ ಪ್ರಿಯವಾದುದು.' ಇದು ಅರ್ಥಶಾಸ್ತ್ರದ ಮಾತು. ಧರ್ಮ ಹಾಗೂ ಕಾಮಗಳಿಗೆ ಅರ್ಥವೇ ಮೂಲವೆಂದು ಕೌಟಿಲ್ಯನು ಅಂದು ಸಾರಿದುದು ಅನೂಚಾನವಾಗಿ ನಮ್ಮ ನಾಡಿನ ಜನಜೀವನದಲ್ಲಿ ಬೆರೆತುಬಂದಿದೆ. ಯಾವುದೇ ಒಂದು ಸಂಸ್ಥೆ ಅಸ್ತಿತ್ವಕ್ಕೆ ಬಂದರೆ, ಅದರ ನಿರ್ವಹಣೆಗಾಗಿ ಆರ್ಥಿಕ ಬೆಂಬಲವನ್ನು ಪ್ರಾರಂಭದಲ್ಲಿಯೇ ಜನರು ನೀಡುತ್ತಿದ್ದರು. ಸಂಘ, ಸಂಸ್ಥೆ, ದೇವಾಲಯ ಯಾವುದೇ ಇರಲಿ ಕಟ್ಟಿಸಿದ ಪ್ರಾರಂಭದಲ್ಲಿಯೇ ಅದಕ್ಕೆ ದಾನ ದತ್ತಿಗಳ ಮೂಲಕ ಭದ್ರತೆಯನ್ನು ಕೊಡುತ್ತಿದ್ದರು. ರಾಜ್ಯದಲ್ಲಿನ ಉತ್ಪಾದನೆ, ವ್ಯಾಪಾರ ಮತ್ತು ಆಯವ್ಯಯ ಇವು ಆರ್ಥಿಕ ಸ್ಥಿತಿಯ ಬುನಾದಿ.

## ಉತ್ಪಾದನೆ

ಕರ್ನಾಟಕದಲ್ಲಿ ಉತ್ಪಾದನೆಯ ಮುಖ್ಯ ಅಂಗ ವ್ಯವಸಾಯ. ಪಶುಪಾಲನೆ ಕುರಿಸಾಕಣೆಗಳೂ ಆಗೀಗ ಉಪವೃತ್ತಿಗಳಾಗಿ ಇದ್ದಿರಬಹುದು. ಕುರುಬರಿಗೆ ಕುರಿಸಾಕಣೆ ಈ ಶತಮಾನದ ಪ್ರಾರಂಭದವರೆಗೂ ಮುಖ್ಯ ವೃತ್ತಿಯಾಗಿತ್ತು. ಕೃಷಿಗೆ ಮೂಲವಾದ ಭೂಮಿಯನ್ನು ಶತಮಾನಗಳಿಂದ ತಮ್ಮ ತಾಯಿಯ ಹಾಗೆ ಎಂದು ಕರ್ನಾಟಕದ ಜನ ಭಾವಿಸಿಕೊಂಡು ಬಂದಿದ್ದಾರೆ. ಮಳೆಯ ನೀರಿನಿಂದ ಬೆಳೆಯುವ ಭೂಮಿ ದೇವಮಾತೃಕ, ತೊರೆಯ ನೀರಿನಿಂದ ಬೆಳೆಯುವ ಭೂಮಿ ನದೀಮಾತೃಕ ಎನ್ನಿಸಿದೆ. ಬೆಳೆಯ ಭೇದಗಳಿಗೆ ತಕ್ಕಂತೆ ಗದ್ದೆ, ಬೆದ್ದಲು, ತೋಟ ತುಡಿಕೆಗಳು ಎಂದು ಆ ನೆಲ ಹಲ ವಿಧ.

ತರಿ, ಖುಷ್ಕಿ, ಬಾಗಾಯ್ತು ಇವು ಈಗಿನ ಮಾತುಗಳು. ಎರೆ, ಕರಿಯಕೆಯಿ, ಕಿಸುಕಾಡು, ಕೆಂಗಾಡು, ಹೊಂಗೆ, ಹರಳಕೆಯಿ—ಇತ್ಯಾದಿಯಾದವು ಮಣ್ಣಿನ ಗುಣಕ್ಕೆ ತಕ್ಕಂತೆ ಹೇಳಿರುವ ಭೇದಗಳು. ಕಟ್ಟೆಯಿದ್ದರೆ ಗದ್ದೆ, ಮಳೆಯು ನೀರಿನ ಆಧಾರವಿರುವುದು ಬೆದ್ದಲು, ಬಾವಿಯಿದ್ದಲ್ಲಿ ತೋಟ ತುಡಿಕೆ. ಪ್ರಾಚೀನ ಕರ್ಣಾಟಕದಲ್ಲೂ ಈಗ ಬೆಳೆಯುತ್ತಿರುವ ಬೆಳೆಗಳೇ : ಬತ್ತ, ಕಬ್ಬು, ತೆಂಗು, ಕಂಗು, ಬಾಳೆ, ವೀಳೆ, ಮಾವು, ಹಲಸು, ನಿಂಬೆ ಈಳೆ. ಹೂದೋಟಗಳಲ್ಲಿ ನಾನಾಬಗೆಯ ಹೂಗಳನ್ನು ಬೆಳೆಯುತ್ತಿದ್ದರು. ಬೆದ್ದಲು ಎರೆ ಭೂಮಿಗಳಲ್ಲಿ ಜೋಳ, ಹತ್ತಿ, ಹರಳು, ಸಾಸವೆ, ಕೊತ್ತುಂಬರಿ, ಸಜ್ಜೆ, ನವಣೆ, ಸಾಮೆ, ಬರಗು, ಹಾರಕ, ಅಗಸೆ, ಕುಸುಬೆ, ಗೋದಿ, ಕಡಲೆ, ತೊಗರಿ, ಹೆಸರು, ಅಲಸಂದಿ, ಎಳ್ಳು ಮುಂತಾದ ದಿನಸುಗಳನ್ನು ಬೆಳೆಯುತ್ತಿದ್ದರು.

## ನೀರಾವರಿ

'ಕವಿರಾಜಮಾರ್ಗ'ದ ಕಾಲದಿಂದ ಕನ್ನಡ ಕಾವ್ಯಗಳಲ್ಲಿ ಪುರಾಣಗಳಲ್ಲಿ ಗದ್ದೆ ತೋಟಗಳ ಬೆಳೆಗಳು, ಅವು ಕಣ್ಮನಗಳಿಗೆ ಮಾಡುವ ಹಬ್ಬ—ಇವು ಆಕರ್ಷಕವಾಗಿ ವರ್ಣಿತವಾಗಿವೆ. ದೇವಾಲಯಗಳ ಸುತ್ತಮುತ್ತ ದೇವರ ಪೂಜೆಗೆಂದು ಬೆಳಸಿದ ಹೂದೋಟಗಳು ಹರಿಹರಾದಿ ಕವಿಗಳೂ ಅಕ್ಕಮಹಾದೇವಿಯಂತಹ ವಚನಕಾರರೂ ಕಟ್ಟಿಕೊಡುವ ಚಿತ್ರಗಳಿಂದ ನಮ್ಮ ಕಣ್ಮನಗಳ ಮುಂದೆ ಸುಳಿಯುತ್ತವೆ. ಬೆದ್ದಲು ಭೂಮಿಗೆ ಮಳೆ ಆಧಾರವಾದರೆ, ಗದ್ದೆ ತೋಟ ತುಡಿಕೆಗಳಿಗೆ ನೀರಾವರಿ ಆಧಾರ. ನದಿ, ಕೆರೆ ಬಾವಿಗಳನ್ನೇ ಜನತೆ ನೀರಾವರಿಗೆ ಅವಲಂಬಿಸಿದ್ದಿತು. ರಾಜರೂ ಶ್ರೀಮಂತರೂ ಇತರರೂ ಕೆರೆ ಕಟ್ಟಿಸುವುದು, ಬಾವಿ ತೋಡಿಸುವುದು, ನದಿಗೆ ಸೇತುವೆ ಹಾಕಿಸುವುದು ಮುಂತಾದ ಧರ್ಮಕಾರ್ಯಗಳಿಂದ ನಾಡು ಸಂಪನ್ನವಾಗುವಂತೆ ಮಾಡುತ್ತಿದ್ದರು. ಕಟ್ಟಿದ ಸೇತುವೆಗಳನ್ನು ರಕ್ಷಿಸುವುದೂ ಒಡೆದ ಸೇತುವೆಗಳನ್ನು ಪುನಃ ಕಟ್ಟಿಸುವುದೂ ಪುಣ್ಯಕಾರ್ಯವೆಂದು ಅವರು ಭಾವಿಸಿದ್ದರು.[31] ಕೆರೆ ಕಟ್ಟಿಸುವುದು ಕನ್ನಡ ನಾಡಿನಲ್ಲಿ ಕದಂಬರ ಕಾಲದಿಂದಲೂ ಸುಪ್ರಸಿದ್ಧ. ಮಯೂರಶರ್ಮನ ಚಂದ್ರವಳ್ಳಿಯ ಶಾಸನ ಮತ್ತು ಶಾಂತಿವರ್ಮನ ತಾಳಗುಂದದ ಶಾಸನ ಇತ್ಯಾದಿಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.[32]

ಅಲ್ಲಮಪ್ರಭುಗಳ ಒಂದು ವಚನದಲ್ಲಿಯ ಕೆರೆಯ ಸುಂದರ ಚಿತ್ರ ನಮ್ಮ ಮುಂದೆ ಉಪಮಾಲಂಕಾರದಲ್ಲಿ ನಿಲ್ಲುತ್ತದೆ: "ತನುವೆಂಬ ಏರಿಗೆ ಮನವೆಂಬ ಕಟ್ಟೆ ಆಚಾರವೆಂಬ ಸೋಪಾನ ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲವರನಾರನೂ ಕಾಣೆ ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ."[33] ಕೆರೆ ದೇಗುಲಗಳನ್ನು ಕಟ್ಟಿಸುವುದು ಪೂರ್ವಕಾಲದಿಂದಲೂ ಬಂದ ಸಂಪ್ರದಾಯವೆನ್ನುವುದು ಅಲ್ಲಮಪ್ರಭುವಿನ ಇನ್ನೊಂದು ವಚನಭಾಗದಿಂದಲೂ ವ್ಯಕ್ತವಾಗುತ್ತವೆ: "ಕೆರೆ ದೇಗುಲಂಗಳೆಲ್ಲವು ಹಿಂದಣ ಅಡಿವಜ್ಜೆಗೊಳಗು." ಕೆರೆ ಕುಂಟೆ ಬಾವಿಗಳನ್ನು ಯಾರೇ ಕಟ್ಟಿಸಲಿ ಅವುಗಳ ಯೋಗಕ್ಷೇಮದ ಹೊಣೆ ತರುವಾಯದವರದಾಗಿರುತ್ತಿತ್ತು. ಕೆರೆಗಳನ್ನು ಕಟ್ಟಿಸಿದಾಗಲೇ ದುರಸ್ತಿಯ

ಸಂಬಂಧದಲ್ಲೂ ಕಟ್ಟಿಸಿದ ವ್ಯಕ್ತಿಗಳು ಭೂಮಿಯೊಂದಿಷ್ಟನ್ನು ದತ್ತಿ ಬಿಟ್ಟುಕೊಟ್ಟಿರುತ್ತಿದ್ದರು. ಜನತೆ ನಡೆಯಿಸಿಕೊಂಡು ಹೋಗುತ್ತಿತ್ತು. ಊರಿನ ಮಹಾಜನರೂ ಊರಿನಲ್ಲಿ ವಿವಾಹ, ಉಪನಯನ, ಪ್ರಾಯಶ್ಚಿತ್ತ ಇತ್ಯಾದಿಗಳಿಂದ ಬಂದ ಹಣದಲ್ಲಿ ಸ್ವಲ್ಪ ಭಾಗವನ್ನು ಕೆರೆಯ ದುರಸ್ತಿಗೆ ಮೀಸಲಾಗಿಡುತ್ತಿದ್ದರೆಂದು ಒಂದು ಶಾಸನದಿಂದ ತಿಳಿದುಬರುತ್ತದೆ :

ಪನ್ನಿರ್ವರ್ತ್ತರ್ ಕೆಯ್ಯಂ
ಮಾನ್ಯಂಗುಡುಗೆಂದು ಪೇೞೆವೋ (?) ರನ ಬೆಸದೊಳ್
ನನ್ನಿವೆಡಂಗಂ ಲಿ (ಂಗಮ್ ?)
ತನ್ನೞ್ತಿಯೆ ಕೊಟ್ಟು ಕೆಱೆಗೆ ಯಶಮುಂ ಪಡೆದಂ....॥

ಪ್ರಾಯಶ್ಚಿತ್ತ ನಿಮಿತ್ತದೊ
ಳಾಯದ ಪಣಮೆನಿತನಿತ್ತುಮೂರೊಳ್ ಸಹಿರ
ಣ್ಯಾಯದ ಪಣಮುಂ ಪೆರ್ಗೆಱೆ
ಗಾಯಮಿದೆಂದೊಸೆದು ಕೊಟ್ಟರೀದ್ವಿಜಮುಖ್ಯರ್ ॥

ನೆಱೆಯೆ ಗುಣಾಢ್ಯರ್ ಕಂಠಮ
ಗೆಱೆಗಿನಿತುಂ ದ್ರವ್ಯದಾಯಮುಂ ಕೊಟ್ಟವರ್ಗಳ್
ತಱಿಸಂದೀ ಶಾಸನಮಂ
ನಿಱಿಸಿವರಾಚಂದ್ರತಾರಕಾಂತಂಬರೆಗಂ ॥

ಮಾತಿನೊಳೇನೀ ಸ್ಥಿತಿಯಂ।
ಘಾತಿಸಿ ಕಿಡಿಸಿದ ನರಂ ಚಿರಂ ಪಂಚಮಹಾ।
ಪಾತಕನ ಪೋದ ಲೋಕ
ಕ್ಕಾತಂ ತಾಂ ಪೋಕುಮೆಂದೊಡದುವೇಂ ಪಿರಿದೇ[34]

ದುರಸ್ತಿಗಾಗಿ ಹೀಗೆ ಕೆರೆ ಕೆಳಗೆ ಬಿಟ್ಟ ಭೂಮಿಯೇ ಬಿತ್ತುವಾಟ. ಮಾರಸಿಂಹನ ಕಾಲದ ದಂಡನಾಯಕ ಬಿಕ್ಕೆಯನ ನಂಜನಗೂಡು ತಾಲ್ಲೂಕಿನ 'ಪಿರಿಯ ಕೆರೆ' ಮತ್ತು 'ದೇವಿಕೆರೆ'ಗಳ ದುರಸ್ತಿಗಾಗಿ ನಾಲ್ಕು ಖಂಡುಗ ಬಿತ್ತುವಟ್ಟ ಬಿಟ್ಟುದಾಗಿ ನಂಜನಗೂಡು ಶಾಸನದಿಂದ ತಿಳಿದುಬರುತ್ತದೆ.[35] ದುರಸ್ತು ಮಾಡಿಸು ಎಂಬ ಮಾತಿಗೆ 'ಪಡಿಸಲಿಸು' ಎಂಬ ಪಾರಿಭಾಷಿಕ ಶಬ್ದವೊಂದಿದೆ. ಇದೇ ಸಂದರ್ಭದಲ್ಲಿ 'ಕೆರೆಕೊಡುಗೆ' 'ಕಟ್ಟುಕೊಡಿಗೆ' (ಕಟ್ಟೆಕೊಡುಗೆ)ಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕೆರೆಯ ನೀರನ್ನು ತೂಬಿನ ಮೂಲಕ ಕಾಲುವೆಯಲ್ಲಿ ಹರಿಸಿಕೊಂಡು ಹೋಗುತ್ತಿದ್ದು, ಆಗೊಮ್ಮೆ ಈಗೊಮ್ಮೆ ಆಕಸ್ಮಿಕವಾಗಿ ಹಳ್ಳಿಗಳಲ್ಲಿ ಖಾಡಾಖಾಡಿಯಾಗಿ ಕಾವಲುಗಾರರ ಪ್ರಾಣ ಹೋದುದೂ ಉಂಟು.[36]

ಗಂಗರ ಕಾಲದ ದಂಡನಾಯಕ ಬಿಕ್ಕೆಯ, ಅತ್ತಿಗಾಲದ ಚವುಟ್ಟರ, ಅಕಲೇ ಸಮುದ್ರದ ಅಕಲೇತಿ, ನಾಗಯ್ಯನ ಮಗ ಮಾಧವಯ್ಯ ಇವರು ಕಟ್ಟಿಸಿದ ಕೆರೆಗಳೂ ರಾಷ್ಟ್ರಕೂಟರ ಕಾಲದ ದೋರಸಮುದ್ರ, ಕಂಠಮಗೆರೆ, ಕೊಂಡಲಗೆರೆ, ಅಣ್ಣಿಗೆರೆಗಳೂ ಆಲಕೆರೆ

ಕಲ್ಯಾಣದ ಚಾಲುಕ್ಯರ ಕಾಲದ, ಅವರ ಪೂರ್ವಜರಾದ ಬಾದಾಮಿಯ ಚಾಲುಕ್ಯರ ಕಾಲದ ಕೆರೆಗಳೂ ನೀರಾವರಿಯ ಏರ್ಪಾಟಿನಿಂದ ಕಟ್ಟಲಾದ ಬಹುಸಂಖ್ಯೆಯ ಕೆರೆಗಳು. ಒಂದೇ ಶಾಸನದಲ್ಲಿ ಹಲವು ಕೆರೆಗಳ ಪ್ರಸ್ತಾಪವನ್ನು ಕಾಣಬಹುದು.[37] ಕೆರೆ, ಕೊಳ, ಸಮುದ್ರ, ತಟಾಕ, ಕನ್ನಡನಾಡಿನಲ್ಲಿ ವಿಪುಲ. ಪಂಪನ ಒಂದು ಮಾತಿನಲ್ಲಿ ಹೇಳುವುದಾದರೆ "ಗಗನ ತಳಮೆ ಪಱಿದು ಬಿಬ್ದುದೆನಿಪ ಬಹುತಟಾಕದಿಂ"[38] ಆ ನಾಡು ಸುಂದರವಾಗಿತ್ತು. ಹೊಯ್ಸಳರ ಕಾಲದಲ್ಲೂ ಜಿನಬಸದಿಗಳ ಜೊತೆಗೆ ಗಂಗರಾಜನು ಅನೇಕ ತಟಾಕಗಳನ್ನು ಕಟ್ಟಿಸಿದು ದಕ್ಕೆ ಆಧಾರಗಳಿವೆ. ಶ್ರವಣಬೆಳ್ಗೊಳದ ಸುತ್ತುಮುತ್ತಲಿನ ಕೆರೆಗಳು ಹೊಯ್ಸಳರ ಕಾಲದಲ್ಲಿಯೇ ವಿಶೇಷವಾಗಿ ಕಟ್ಟಲಾದವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಉದಾ: ಗಂಗಸಮುದ್ರ, ನಾಗಸಮುದ್ರ, ಚಿಕ್ಕನ ಕೆರೆ ಇತ್ಯಾದಿ.[39] ವಿಜಯನಗರದ ಕಾಲದಲ್ಲಂತೂ ಅನೇಕ ನೀರಾವರಿ ಯೋಜನೆಗಳು ಅಸ್ತಿತ್ವಕ್ಕೆ ಬಂದುವು. ಅವುಗಳಲ್ಲಿ ಕೆಲವು ಇಂದಿಗೂ ಉಪಯೋಗದಲ್ಲಿವೆ. ಹಂಪೆಯ ಪಶ್ಚಿಮಕ್ಕೆ ಸುಮಾರು ೧ ಮೈಲಿ ಅಂತರದಲ್ಲಿ ತುಂಗಭದ್ರಾನದಿಗೆ ಕಟ್ಟಿದ ಅಣೆಕಟ್ಟಿನಿಂದ ಹರಿಯಿಸಿದ ತುರ್ತನಾಲೆಯನ್ನು ಜನರು ಇಂದಿಗೂ ಬಳಸುತ್ತಿದ್ದಾರೆ. ಪ್ರಧಾನ ಮಾದರಸ ಸಾಯಣರು "ತೋಡದ ಬಾವಿಯಲ್ಲಿ, ಮರೆತುಟ್ಟದ ಪೆರ್ಗೆರೆಯಿಲ್ಲ" ಎಂದು ವರ್ಣಿತರಾಗಿದ್ದಾರೆ.[40] ಪ್ರೌಢದೇವ ರಾಯನ ಮಂತ್ರಿಯಾದ ಲಕ್ಷ್ಮೀಧರನು ಕಟ್ಟಿಸಿದ ಕೆರೆಗಳ ಉಪಕೃತಿಯನ್ನು ಬಗೆಗೆ ತಂದ ಕವಿ ಮಧುರನು ಅದನ್ನು ಹೀಗೆ ಚೆಲುವಾಗಿ ಹೇಳಿದ್ದಾನೆ:

> ಕೆಱೆಯುಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ
> ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
> ರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ
> ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್. ಲಕ್ಷ್ಮೀಧರಾಮಾತ್ಯನಾ ॥[41]

ಲಕ್ಷ್ಮೀಧರನನ್ನು ಹಡೆದು ಬೆಳಸಿದ ತಾಯಿ ಆ ಶಿಶುವಿಗೆ ಬಾಲ್ಯದಲ್ಲಿಯೇ ಸಂಸ್ಕೃತಿಯ ಹಾಲನ್ನೂ ಉಣಿಸಿ ಬೆಳಸಿದಳಂತೆ! ಕೆರೆ, ಬಾವಿ ದೇವಾಲಯಗಳನ್ನು ನಿರ್ಮಿಸುವುದು; ಸೆರೆಯಲ್ಲಿ ಸಿಕ್ಕ ಅನಾಥರನ್ನು ಬಿಡಿಸುವುದು, ಸ್ನೇಹಿತರಿಗೆ ಸಹಾಯಕನಾಗುವುದು; ನಂಬಿದವರಿಗೆ ಇಂಬುಕೊಡುವುದು; ಶಿಷ್ಟರನ್ನು ಸಂರಕ್ಷಿಸುವುದು--ಇವು ಪ್ರಧಾನಿಗಿರ ಬೇಕಾದ ಪ್ರಧಾನಗುಣಗಳು ತಾನೇ! ಇನ್ನು ಮೈಸೂರರಸರ ನೀರಾವರಿಯ ನೆನಪಿಗೆ ಬೃಂದಾವನವನ್ನುಳ್ಳ ಕೃಷ್ಣರಾಜಸಾಗರವೊಂದು ಸಾಕು!

ಬದುಕಿನಲ್ಲಿ ಕೃಷಿಗೆ ಪ್ರಾಮುಖ್ಯವಿದೆ. ಈ ಮಾತು ಸಿದ್ಧರಾಮೇಶ್ವರನ ವಚನವೊಂದ ರಲ್ಲಿ ಹೀಗೆ ಬಂದಿದೆ:

"ಕೃಷಿಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೋ? ಕರ್ಮಯೋಗವ ಮಾಡದೆ ನಿರ್ಮಲಸುಚಿತ್ತವನರಿವಪರಿ ಇನ್ನೆಂತೋ? ಬೇಯದೆ ಅಶನವನುಂಬ ಠಾವಾವುದು ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ. ಕೃಷಿಯ ಬೆಳವಣಿಗೆಯನ್ನು ರಾಜಮನೆತನಗಳು, ಜನತೆ ಹೇಗೆ ನಡಸಿಕೊಂಡು ಬಂದುವೆಂದು ನೋಡುವುದಷ್ಟೇ ನಮ್ಮ ದೃಷ್ಟಿ. ನೇಗಿಲು ಹೊರತು

ಕೃಷಿಯ ಇತರ ಉಪಕರಣಗಳ ಹೆಸರು ಶಾಸನಗಳಲ್ಲಿ ಅಪರೂಪ. ಹೊಸ ಹೊಲಗಳ, ಹೊಸ ಊರುಗಳ ನಿರ್ಮಾಣದ ಬಗೆಗೆ ಆಗಾಗ ರಾಜರು, ಜನರು, ಸಂಸ್ಥೆಗಳು ಮಾಡಿದ ಏರ್ಪಾಡುಗಳು ಶಾಸನಗಳ ಮೂಲಕ ತಿಳಿದು ಬರುತ್ತದೆ. ಧಾರ್ಮಿಕ ಪ್ರವೃತ್ತಿಯೇ ಇದರ ಮೂಲ.

ಈಗ ತೋಟಗಾರಿಕೆಯ ಬಗೆಗೆ ಒಂದು ಮಾತು : ತೋಟತುಡಿಕೆಗಳಲ್ಲಿ ನೀರನ್ನೆತ್ತಲು ಏತಗಳನ್ನು ಬಳಸುತ್ತಿದ್ದರು[42] ತೋಟಗಾರಿಕೆಯ ವಿವರಣೆ ರೂಪಕಾಲಂಕಾರದ ಮೂಲಕ ಅಲ್ಲಮಪ್ರಭುಗಳ ವಚನವೊಂದರಲ್ಲಿ ಸೊಗಸಾಗಿ ಬಂದಿದೆ : "ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆವೆನಯ್ಯ ಭ್ರಾಂತಿಯ ಬೇರೊಡೆದು. ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯ ಬ್ರಹ್ಮದ ಬೀಜವ. ಅಖಂಡಮಂಡಲವೆಂಬ ಬಾವಿ, ಪವನವೇ ಜಾಟಾಳ. ಸುಷುಮ್ನನಾಳದಿಂದವೆ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹರೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ, ಆವಾಗಳೂ ಈ ತೋಟ ದೊಳಗೆ ಜಾಗರವಿದ್ದು ಸಸಿಯ ಸಲಹಿದೆ ಕಾಣಾ ಗೋಗೇಶ್ವರ."[43]

ಊರಿನ ದನಗಳಿಗೆ ಮೇಯಲು ಪ್ರತಿಯೊಂದು ಊರಿನಲ್ಲೂ ಸಾರ್ವಜನಿಕವಾದ ಹುಲ್ಲುಗಾವಲಿದ್ದಿತು. ಅದೇ 'ಗೋಮಾಳ.' ಪರ ಊರಿನ ಜನರು ಬಳಸಿದರೆ ಹುಲ್ಲಬನ್ನಿ (<ಪುಲ್ಲಪನ್ನಿಯ ?) ಕೊಡುತ್ತಿದ್ದರು. ಊರಿನ ದನಗಳಿಗೆ ಗಬ್ಬ ಕಟ್ಟಿಸುವುದಕ್ಕಾಗಿ ಗೂಳಿ ಗಳನ್ನು ಸಾಕುತ್ತಿದ್ದರು. ಈಗಲೂ ಹಳ್ಳಿಗಳಲ್ಲಿ ದೇವತೆಗಳಿಗೆ ಬಿಡುವ ಹೋರಿ, ಕೋಣ ಕುದುರೆಗಳನ್ನು ಇಲ್ಲಿ ಸ್ಮರಣಕ್ಕೆ ತಂದುಕೊಳ್ಳಬಹುದು. ಆ ಗೂಳಿಗಳು ಊರಿನ ಯಾವ ಹೊಲದಲ್ಲಾದರೂ ನಿರ್ಬಂಧವಿಲ್ಲದೆ ಮೇಯಬಹುದಾಗಿತ್ತು[44]. ಉಳುಮೆಗೆ, ಏತ ಎಳೆಯುವುದಕ್ಕೆ, ಸಾಮಾನು ಸಾಗಣೆಗೆ ಎತ್ತುಗಳನ್ನು ಬಳಸುತ್ತಿದ್ದರು. ಕೋಣ ಗಳನ್ನೂ ಬಳಸುತ್ತಿರಬಹುದು. ಧರ್ಮದ ಏತಗಳನ್ನು ದತ್ತಿಕೊಟ್ಟ ಉದಾಹರಣೆಗಳುಂಟು.[45]

ಪ್ರಾಚೀನ ಕಾಲದಲ್ಲಿ ಭೂಮಿ ಉಳುವ ರೈತನದೇ, ರಾಜನದೇ ಎಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಕನ್ನಡ ನಾಡಿನಲ್ಲಿ ರಾಜರು ರೈತರಿಂದ ಹೊಲಗಳನ್ನು ಕಿತ್ತುಕೊಂಡ ಉದಾಹರಣೆಗಳಿಲ್ಲ. ರೈತರಿಗೆ ತಮ್ಮ ಭೂಮಿಯ ಮೇಲೆ ಸಂಪೂರ್ಣ ಹಕ್ಕಿದ್ದಿತು. ತಮ್ಮನ್ನು ರಕ್ಷಿಸುವ ರಾಜನ ಕಾರ್ಯಕ್ಕೆ ಪ್ರತಿಯಾಗಿ ಅವರು ಕಂದಾಯ ಕೊಡುತ್ತಿದ್ದರು. ಸಾಮಾನ್ಯವಾಗಿ ಸಿದ್ಧಾಯ ಉತ್ಪಾದನೆಯ $\frac{1}{6}$ ಭಾಗವಾಗಿ ದೊರೆಗೆ ಸಲ್ಲುತ್ತಿತ್ತು. ಅಲ್ಲಲ್ಲಿ ಪತ್ತೊಂದಿ ಅಯ್ದೊಂದಿಗಳ ಪ್ರಸಕ್ತಿಯೂ ಬರುತ್ತದೆ. ಜಮೀನು ದಾರರು ಭೂಮಿಯನ್ನು ಪಾಲಿಗೆ ಕೊಡುವುದೇ 'ಕೋರು', 'ಕೌಲು'. ಶಾಸನವೊಂದರಲ್ಲಿ 'ಪತ್ತೊಂಡಿಯ ಕೋರು' ಎಂದಿದೆ.[46] ಎಂದರೆ ಕೋರಿನ ನಿಯಮ ಇದ್ದಿರಬಹುದು. 'ಕಟ್ಟುಗುತ್ತಿಗೆ' ಇತ್ಯಾದಿಗಳ ಪ್ರಯೋಗ ದೊರೆಯದಿದ್ದರೂ ಬಳಕೆಯಲ್ಲಿದ್ದಿರಬಹುದು. ಕೃಷಿಯ ಕಾರ್ಯಗಳ ಒಂದು ಸುಂದರ ವಿವರಣೆ 'ಧರ್ಮಾಮೃತ'ದಲ್ಲಿ (೧೧೫೩-೧೧೧೨)[47] ಬಂದಿದೆ. ಭೂಮಿಯನ್ನು 'ಲಾವಣಿ'ಗೆ ಕೊಡುವ ಪದ್ಧತಿಯೂ ಇದ್ದಿತು. ಶಾಸನವೊಂದರಲ್ಲಿ 'ಲಾವಣಿಗೆಯ ಪಣ' ಪ್ರಯೋಗದಲ್ಲಿ ಬಂದಿದೆ.

## ವೃತ್ತಿಗಳು

ನೆಯ್ಗೆಯ ವೃತ್ತಿ ವಿಶೇಷ ಅಭಿವೃದ್ಧಿಯನ್ನು ಹೊಂದಿತ್ತು. ಹತ್ತಿಯ ಬಟ್ಟೆಗಳ ಜೊತೆಗೆ ಚೀನ, ದುಕೂಲ, ಪಟ್ಟು ಎಂಬ ರೇಷ್ಮೆಯ ನವುರಾದ ಬಟ್ಟೆಗಳನ್ನೂ ನೇಯುತ್ತಿದ್ದರು. ನೆಯ್ಗೆಯ ಮಗ್ಗಗಳ ಮೇಲಿನ ತೆರಿಗೆ 'ಮಗ್ಗದೆಜು.' ಜೇಡರ ದಾಸಿಮಯ್ಯನ ಒಂದು ವಚನ ಆ ಕಾಯಕವನ್ನು ಹೀಗೆ ವಿವರಿಸುತ್ತದೆ:

ಉಂಕೆಯ ನಿಗುಚಿ, ಸರಿಗೆಯ ಸಮಗೊಳಿಸಿ, ಸಮಗಾಲ ನಿಕ್ಕಿ ಅಣಿಯೊಳು ಏಳ ಮೆಟ್ಟಿದೆ. ಹಿಡಿದ ಲಾಳಿಯ ಮುಳ್ಳು ಕಂಡಿಕೆಯು ನುಂಗಿತ್ತು. ಈ ಸೀರೆಯ ನೈದವ ನಾನೋ ನೀನೋ ರಾಮನಾಥ"[48]

ಬಟ್ಟೆ ಹೊಲೆಯುವ ವೃತ್ತಿ ಚಿಪ್ಪಿಗರದು (ಸಿಂಪಿ, ಸಿಂಪಿಗರು.):

"ಮುನ್ನಮೆಂಬ ಬಚಿಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪನಾನೆ ದಾರದವ್ರೊಲಾದುವು ರಾಜಕುಮಾರನಾನೆಗಳ್ ಸೂಜಿಯ ಪೋಣಿಸಿ ದಾರವ ಮರೆದಡೆ ಹೊಲಿಗೆ ಬಿಚ್ಚಿತ್ತು ಗುಹೇಶ್ವರ ಸೂಜಿಯ ಬಚಿಯ ದಾರದಂತೆ ವಸ್ತ್ರಖಂಡಿತ ಶೃಂಗಾರ ಚಿತ್ರೋದ್ಭವರ್."[49]

ಇಂಥ ಉಲ್ಲೇಖಗಳಲ್ಲಿ ಆ ಕಲೆಯ ಸೂಚನೆಯಿದೆ. ಹೀಗೆಯೇ ಚಿಪ್ಪಿಗರ ಗೋಷ್ಠಿಗಳೂ ಇದ್ದವು.[50] ಸೂಜಿಕಾಯಕದ ರಾಮಿತಂದೆಯೆಂಬ ವಚನಕಾರನನ್ನು ಸ್ಮರಿಸಿಕೊಳ್ಳಬಹುದು.

ಮಡಕೆಮಾಡುವುದು ಅನಾದಿಕಾಲದಿಂದ ಬಂದ ವೃತ್ತಿ. ಕುಂಬಾರರು ತಿಗರಿ ಅಥವಾ ಕೋವರ ಚಕ್ರವನ್ನು ಬಳಸಿ ನೆನೆಸಿದ ಜೇಡಿಮಣ್ಣಿನಿಂದ ಹಲವು ಬಗೆಯ ಪಾತ್ರೆಗಳನ್ನು ಮಾಡಿ ಆವುಗೆಯಲ್ಲಿ ಸುಡುತ್ತಿದ್ದರು. ಕುಂಬರ ಗುಂಡಯ್ಯನ ಹೆಸರು ಪರಿಚಿತ. ಬಸವಣ್ಣನ ವಚನ "ಮಡಕೆಯ ಮಾಡುವರೆ ಮಣ್ಣೆ ಮೊದಲು", ದಾಸಿಮಯ್ಯನ "ಘಟವನೊಡೆದು ಬಯಲ ನೋಡಲದೇಕೆ" ಎಂಬ ಉಕ್ತಿಗಳಲ್ಲಿ ಆ ವೃತ್ತಿಯ ಸೂಚನೆಯಿದೆ.

ಕಬ್ಬಿನ ರಸದಿಂದ ಬೆಲ್ಲ ಸಕ್ಕರೆಗಳನ್ನು ತಯಾರಿಸಲಾಗುತ್ತಿತ್ತು. ಕಬ್ಬಿನಿಂದ ಹಾಲು ತೆಗೆದು ಬೆಲ್ಲಮಾಡುವ ಸ್ಥಳಕ್ಕೆ ಆಲೆಮನೆಯೆಂದು ಹೆಸರು. 'ಆಲೆದೆರೆ' ಎಂಬ ಒಂದು ತೆರಿಗೆಯೂ ಇದ್ದಿತು.[51] ಬೆಲ್ಲ ಸಕ್ಕರೆಗಳ ಪ್ರಸ್ತಾಪ ಬಸವಣ್ಣನವರು ಆದ್ಯರ ವಚನಗಳ ಹಿರಿಮೆಯನ್ನು ವರ್ಣಿಸುವ ಸಂದರ್ಭದಲ್ಲಿ ಹೇಳಿದ ಒಂದು ವಚನದಲ್ಲಿದೆ: "ಹಾಲ ತೊರೆಗೆ ಬೆಲ್ಲದಂತಹ ಕೆಸರು ಸಕ್ಕರೆಯಂತಹ ಮಳಲು ತವರಾಜದಂತಹ ನೊರೆತೊರೆಗಳು ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪ ನೀರ ಸವಿದಂತಾಯಿತ್ತಯ್ಯ ಎನ್ನ ಯುಕ್ತಿ ನಿಮ್ಮ ವಚನಗಳ ಕೇಳದೆ ಅನ್ಯಪುರಾಣಗಳ ಕೇಳಿ ಕೆಟ್ಟೆನಯ್ಯ ಕೂಡಲಸಂಗಮದೇವ." ಅಕ್ಕಮಹಾದೇವಿಯ ಒಂದು ವಚನದಲ್ಲಿ ಸಕ್ಕರೆಯನ್ನು ತಯಾರಿಸುವ ಕಿಂಚಿದ್ ವಿಧಾನ ಬಂದಿದೆ: "ಸಂದು ಸಂದನು ಕಡಿದ ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕಗೊಳೆ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೇ?"[52]

ಎಣ್ಣೆ ತೆಗೆಯುವುದೂ ಒಂದು ವೃತ್ತಿ. ಗಾಣಗಳಲ್ಲಿ ಎತ್ತಿನ ಗಾಣ ಮತ್ತು ಕೈಗಾಣ

ಎಂದು ಎರಡು ವಿಧ.[53] ಎಳ್ಳು, ಕುಸುಬಿ, ಹರಳು ಮುಂತಾದುವುಗಳನ್ನು ಗಾಣದಲ್ಲಿ ಹಾಕಿ ಎಣ್ಣೆ ತೆಗೆಯುತ್ತಿದ್ದರು. ಎಳ್ಳು ಕುಸುಬಿಗಳ ಹಿಂಡಿಯನ್ನು ಪಶುಗಳಿಗೆ ಉಪಯೋಗಿಸುತ್ತಿದ್ದರು. ದೀಪಕ್ಕೆ ಹರಳೆಣ್ಣೆ, ಕಮ್ಮೆಣ್ಣೆಯ ಪ್ರಸ್ತಾಪ ಹರಿಹರನ ಬಸವರಾಜದೇವರ ರಗಳೆಯಲ್ಲಿ ಬಂದಿದೆ.[54] ಊರೂರಿನಲ್ಲಿದ್ದ ಸಹಸ್ರಾರು ದೇವಾಲಯಗಳಿಗೆ ಗಾಣಗಳನ್ನು ದತ್ತಿ ಬಿಟ್ಟುದೂ ಅನೇಕ ಶಾಸನಗಳಿಂದ ತಿಳಿದುಬರುತ್ತದೆ.

ಬಳೆಗಳನ್ನು ತಯಾರಿಸುವುದೇ ಒಂದು ವೃತ್ತಿಯಾಗಿತ್ತು. ಸ್ತ್ರೀಯರು ಮುತ್ತೈದೆತನದ ಸೂಚಕವಾಗಿ ಬಳೆಗಳನ್ನು ಧರಿಸುತ್ತಿದ್ದುದು ಸಂಪ್ರದಾಯ. ಬಳೆಗಾರರ ಕುಲವೇ ಇರುತ್ತಿತ್ತು. ಪಂಚಾಳ ಕುಲಕ್ಕೆ ಸೇರಿದ ಅಕ್ಕಸಾಲಿಗರು, ಬಡಗಿಗಳು, ಕಮ್ಮಾರರು ತಮ್ಮ ವೃತ್ತಿಗಳನ್ನು ನಡೆಯಿಸಿಕೊಂಡು ಬರುತ್ತಿದ್ದರು. ಅಕ್ಕಸಾಲಿಗರನ್ನು ಸುವರ್ಣಕಾರರೆಂದೂ ಬಡಗಿಗಳನ್ನು ವಿಶ್ವಕರ್ಮರೆಂದೂ ಈ ಮೂವರನ್ನೂ ಓಜರೆಂದೂ ಹೇಳುತ್ತಿದ್ದರು. 'ಕಮ್ಮಟಿಯೋಜ'ನ ಪ್ರಸಕ್ತಿ ಪಂಪ ರನ್ನರ ಕಾವ್ಯಗಳಲ್ಲಿದೆ.[55] ಬಸವಣ್ಣನವರ ಒಂದು ಪ್ರಸಿದ್ಧ ವಚನದಲ್ಲಿ 'ಕಾಸಿ ಕಮ್ಮರನಾದ' ಎಂಬ ಪ್ರಯೋಗವಿದೆ.[56] ಅವರದೇ ಇನ್ನೊಂದು ವಚನದಲ್ಲಿ ಅಕ್ಕಸಾಲಿಗರ ಕಾಯಕದ ವಿವರ ಆನುಷಂಗಿಕವಾಗಿ ಬಂದಿದೆ: "ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿನೋಡಯ್ಯಾ ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವ."[57] ಚಿನ್ನದ ಕೆಲಸವನ್ನು ಬಹು ಪುರಾತನ ಕಾಲದಿಂದಲೂ ಕನ್ನಡ ಜನರು ಬಲ್ಲವರಾಗಿದ್ದರು ಎನ್ನುವುದು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಮತ್ತು ತೆಕ್ಕಲಕೋಟೆಗಳ ನವಶಿಲಾಯುಗದ ನಿವೇಶನಗಳ ಅಗೆತದಲ್ಲಿ ತಿಳಿದು ಬಂದಿದೆ. ಅಲ್ಲಿ ದೊರೆತ ಆಭರಣಗಳೇ ಈ ಮಾತಿಗೆ ಸಾಕ್ಷಿ.

ಕಂಚುಗಾರಿಕೆಯೂ ಒಂದು ವೃತ್ತಿಯಾಗಿತ್ತೆಂಬುದಕ್ಕೆ ಬಸವಣ್ಣನವರ "ಉಂಬ ಬಟ್ಟಲು ಬೇರಿಲ್ಲ ಕಂಚಲ್ಲ ನೋಡುವ ದರ್ಪಣ ಬೇರೆ ಕಂಚಲ್ಲ ಭಾಂಡ ಒಂದೆ ಭಾಜನ ಒಂದೆ ಬೆಳಗೆ ಕನ್ನಡಿಯೆನಿಸಿತ್ತಯ್ಯಾ"[58]—ಎಂಬ ವಚನದಲ್ಲಿ ಸೂಚನೆ ಇದೆ. ಈ ವೃತ್ತಿಯ ವಿವರ ದೇವರ ದಾಸಿಮಯ್ಯನ ವಚನದಲ್ಲಿ ಹೀಗೆ ಬಂದಿದೆ. "ನೆರೆದರೆ ಗಣಂಗಳು ಹರದರೆ ಕಂಚುಗಾರರು ಲಿಂಗನ ಮಾರಿ ಉಂಬರೆ ಬೋಗಾರರು ತಮ್ಮ ತಳಿಗೆಯ ಕೊಂಡು ಹೋಗಿ ಅನ್ಯರ ಮನೆಯಲುಂಬ ಕುನ್ನಿಗಳನಾನೆಂಬೆ ರಾಮನಾಥಾ"[59]

ಮೇದರ ವೃತ್ತಿಯನ್ನು ಕುರಿತು "ಬಿದಿರಲಂದಣವಕ್ಕು ಬಿದಿರ ಸತ್ತಿಗೆಯಕ್ಕು ಬಿದಿರಲ್ಲಿ ಗುಡಿಯು ಗೂಡಾರವಕ್ಕು ಬಿದಿರಲ್ಲಿ ಸಕಲಸಂಪದವೆಲ್ಲವು ಬಿದಿರದವರ ಮೆಚ್ಚ ನಮ್ಮ ಕೂಡಲಸಂಗಮದೇವ" ಎಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ. ಮೇದರು ಕೊಡಬೇಕಾದ ತೆರಿಗೆ 'ಮೇದಾರದೆರೆ'[60]. ಮೇದಾರಕೇತಯ್ಯ ಎಂಬ ಒಬ್ಬ ವಚನಕಾರನೂ ಇದ್ದ. ಬಿದಿರಿನ ಕೆಲಸದಂತೆ ಈಚಲಮರದ ಗರಿಗಳಿಂದ ಬುಟ್ಟಿ, ಚಾಪೆ, ತಟ್ಟೆ, ಕಸಪೊರಕೆ ಇತ್ಯಾದಿಗಳನ್ನು ತಯಾರಿಸಲಾಗುತ್ತದೆ. ಈ ಉದ್ಯಮವನ್ನು ವಿಶೇಷವಾಗಿ ಕೆಲವೆಡೆಯಲ್ಲಂತೂ ಕೊರವ ಹಾಗು ವಡ್ಡರು ಎಂಬ ಜನಾಂಗದವರು ತಮ್ಮ

ಕುಲಕಸುಬು ಎಂಬ ಭಾವನೆಯಿಂದ ನಡೆಯಿಸಿಕೊಂಡು ಬರುತ್ತಿದ್ದಾರೆ.

ಉಪ್ಪಿನ ಮಾಳಿಗಳ ಮೂಲಕ ಉಪ್ಪು ತಯಾರಿಸುವ ವಿಧಾನವು ಬಹುಕಾಲದಿಂದ ಬಳಕೆಯಲ್ಲಿದ್ದಿರಬಹುದು. ಉಪ್ಪು ಪಾಣಿನಿಯ ಕಾಲದಿಂದಲೂ ವ್ಯಾಪಾರದ ವಸ್ತುವಾಗಿತ್ತು.[61] ಉಪ್ಪನ್ನು ಮನುಷ್ಯರು ಉಪಯೋಗಿಸುವಂತೆ ದನಗಳಿಗೂ ನೀರನ್ನು ಕುಡಿಸುವಾಗ ಬೆರೆಸಲು ಉಪಯೋಗಿಸುವ ವಾಡಿಕೆಯುಂಟು. ಉಪ್ಪನ್ನು ಬಳಸುವ ಪಶುವನ್ನು ಪಾಣಿನಿಯು 'ಲವಣಸ್ಯತಿ' ಎಂದು ಹೇಳುತ್ತಿದ್ದುದನ್ನು ಉಲ್ಲೇಖಿಸಿದ್ದಾನೆ.[62] ಗುಲ್ಬರ್ಗ ಜಿಲ್ಲೆಯ ವಿಭಾಗದಲ್ಲಿ 'ಉಪ್ಪಾರರು' ಎಂಬ ಒಂದು ಜನಾಂಗವೂ ಉಂಟು. ಇಂದಿಗೂ ಉಪ್ಪಿನ ಮಾಳಿಯಲ್ಲಿ ಉಪ್ಪನ್ನು ತಯಾರಿಸಿ ಮಾರುವ ರೂಢಿ ಕೆಲವೆಡೆಗಳಲ್ಲಿಯಾದರೂ ಕಾಣಬಹುದು. ಅಲ್ಲಿಯೂ ಸಮುದ್ರದ ಉಪ್ಪು ಮಾರಲು ಬರುತ್ತಿರುವುದರಿಂದ, ಮಾಳಿ ಉಪ್ಪಿಗಿಂತ ಕಡಿಮೆ ಬೆಲೆಯಲ್ಲಿಯೇ ದೊರೆಯುತ್ತಿರುವುದರಿಂದ, ಆ ಉದ್ಯಮ ಈಗ ಕಣ್ಮರೆಯಾಗುತ್ತಲಿದೆ.

ಚಮ್ಮಾರ ವೃತ್ತಿಯನ್ನು ಕುರಿತಂತೆ "ಎಮ್ಮೆಗೊಂದು ಚಿಂತೆ ಸಮ್ಮಗಾರನಿಗೊಂದು ಚಿಂತೆ"[63] ಎಂಬ ಅಕ್ಕಮಹಾದೇವಿಯ ವಚನ ಭಾಗವನ್ನಿಲ್ಲಿ ನೆನಪುಮಾಡಿಕೊಳ್ಳಬಹುದು. ಇವರು ಈಗಿನ ಹಾಗೆ ವ್ಯಾಪಾರದ ಉದ್ದಿಮೆಯನ್ನು ಮಾಡುತ್ತಿರಲಿಲ್ಲ. ಊರೂರುಗಳಲ್ಲಿಯೂ ಇವರ ಮನೆಗಳಿದ್ದು ಆಯಾ ಊರಿನ ಸಂಪೂರ್ಣ ಬೇಡಿಕೆಗಳನ್ನು ಅಲ್ಲಿನವರೇ ಪೂರೈಸುತ್ತಿದ್ದರು. ಊರಿನ ಆಯಗಾರರಲ್ಲಿ ಚರ್ಮಗಾರರೂ ಒಬ್ಬರಾಗಿದ್ದರು.

ಗಣಿಕೆಲಸಗಳು : ಕನ್ನಡಿಗರಿಗೆ ಪ್ರಾಚೀನಕಾಲದಿಂದ ಚಿನ್ನ, ಬೆಳ್ಳಿ, ಕಂಚು, ಕಬ್ಬಿಣ ಮುಂತಾದ ಲೋಹಗಳೂ ನಾನಾ ಬಗೆಯ ರತ್ನಗಳೂ ಪರಿಚಯದ ಖನಿಜಗಳು. ಕೋಲಾರ, ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಬಂಗಾರದ ಗಣಿಗಳು ಇದ್ದುದಕ್ಕೆ ಸಾಕ್ಷಿಗಳಿವೆ. ಬಳ್ಳಾರಿ ಜಿಲ್ಲೆಯ ಬಲ್ಲಕುಂದೆನಾಡು

ಬೆಳೆಗೆಯ್ಯಿಂ ಪೊಂಗಣಿಯಿಂ
ಫಲತರುವಿಂದೊಳ್ಪಯಂಗಳಿಂ ಕುಸುಮರಜಃ
ನಿಳನಿಂ....

ಶೋಭಾಯಮಾನವಾಗಿತ್ತೆಂದು ಒಂದು ಶಾಸನ (ಕ್ರಿ.ಶ. ೧೧೪೭) ಹೇಳುತ್ತದೆ.[64] ಅದೇ ಸೀಮೆಯ ವಜ್ರಕರೂರು ಇಂದಿಗೂ ವಜ್ರಗಳಿಗಾಗಿ ಪ್ರಸಿದ್ಧವಾಗಿದೆ.

ವಚನಗಳು ಚಿನ್ನವನ್ನು ಮಣ್ಣುಕಲ್ಲುಗಳಿಂದ ಶೋಧಿಸಿ ತೆಗೆಯುವ ಕೆಲಸವನ್ನು ಹೇಳುತ್ತವೆ: "ಶಿಲೆಯ ಮರೆಯ ಹೇಮದಂತೆ" (ಅಕ್ಕಮಹಾದೇವಿ): "ಎನ್ನ ಮನವು ನಿಧಾನವನೊಲ್ಲದೆ ಜಲಗ ಮೆಚ್ಚಿತ್ತು ನೋಡಾ" (ಬಸವಣ್ಣ) "ಮೇರುಮಂದಿರದೊಳಗಿದ್ದು ಜರಗ ತೊಳೆವ ಚಿಂತೆಯೇಕೆ?" (ಅಲ್ಲಮಪ್ರಭು); "ಕಲ್ಲೊಳ್ಮಸುಗುವ ಪೊನ್" (ಬ್ರಹ್ಮಶಿವ) ಇತ್ಯಾದಿ.[65]

ಗಣಿಯಲ್ಲಿ ಕೆಲಸ ಮಾಡುವವನನ್ನು 'ಖನಕ' ಎಂದು ಕರೆಯುತ್ತಿದ್ದರು. 'ಜರಗಿನ ತೆರೆ' ಒಂದು ಬಗೆಯ ತೆರೆ.[66] ಮಣ್ಣಿನಲ್ಲಿನ ಬಂಗಾರವನ್ನು ತೊಳೆಯುವವರು 'ಜಲಗಾರರು'

ಈ ಸಂಬಂಧದ ಒಬ್ಬ ಅಧಿಕಾರಿ 'ಜಲಗಿನಧಿಕಾರಿ.'[67] ನದಿಯ ಮಳಲನ್ನು ಶೋಧಿಸಿ ಪ್ರಾಯಃ ಚಿನ್ನವನ್ನು ತೆಗೆಯುತ್ತಿದ್ದಿರಬಹುದು. ಚಿನ್ನದ ಅಲಂಕಾರಿಕ ವಸ್ತುಗಳನ್ನು ಸ್ತ್ರೀಪುರುಷರೆಲ್ಲರೂ ಧರಿಸುತ್ತಿದ್ದರು. ಸುವರ್ಣ ಒಂದು ನಾಣ್ಯವೂ ಆಗಿತ್ತು. ಉಷಭದಾತನ ಶಾಸನದಿಂದ ಕಾಹಪಣ [(ಕಾರ್ಷಪಣ) (ಬೆಳ್ಳಿಯ)] ೧ರ ಬೆಲೆ ೧/೩೫ ಸು. ಎಂದರೆ ೧ ಸುವರ್ಣಕ್ಕೆ ೩೫ ಕಾಹಪಣಗಳು—ಎಂದು ತಿಳಿದು ಬರುತ್ತದೆ. ಹೇಮಾಗಿರಿ, ಸುವರ್ಣಪ್ರಸ್ತರ ಇವುಗಳನ್ನು ಕಿಂಚಿದ್ ವಿಶ್ಲೇಷಿಸಿದರೆ ಬಂಗಾರದ ಮೂಲದತ್ತ ನಮ್ಮನ್ನು ಒಯ್ಯುತ್ತದೆ. ಪಾಣಿನಿಯು ಗಣಿದೆರೆಯನ್ನು 'ಆಕರಿಕ' ಎಂದು ಉಲ್ಲೇಖಿಸಿದ್ದಾನೆ.[68] 'ಆಕರ ಮಾಂಡಲಿಕ'ನ ಹೆಸರು ಒಂದು ಶಾಸನದಲ್ಲಿ ಬಂದಿದೆ.[69] ಗಣಿದ್ರವ್ಯಗಳನ್ನು ನೋಡಿಕೊಳ್ಳುವ ರಾಜ್ಯಾಧಿಕಾರಿಯನ್ನು 'ಕಾರ್ಮಾಂತಿಕ' ಎಂದು ಹೇಳುತ್ತಿದ್ದುದಾಗಿ ಅರ್ಥಶಾಸ್ತ್ರವು ತಿಳಿಸುತ್ತದೆ.[70]

ಗಣಿಗಳಿಂದ ರಾಜ್ಯಕ್ಕೆ ತುಂಬಾ ಆದಾಯವಿದ್ದಿರಬೇಕು. ಅವುಗಳ ಮೇಲೆ ರಾಜರು ತೆರಿಗೆ ಹಾಕಬೇಕೆಂದು ಮನು ಮೊದಲಾದ ಸ್ಮೃತಿಕಾರರು ಹೇಳಿದ್ದಾರೆ. ಕರ್ಣಾಟಕದ ಮಾನಸೋಲ್ಲಾಸಕಾರನು ಈ ಅಭಿಪ್ರಾಯವನ್ನು ಎಂದರೆ ಚಿನ್ನದ ಗಣಿ, ಬೆಳ್ಳಿಯ ಗಣಿ, ರತ್ನಗಳ ಗಣಿಗಳ ಮೇಲೆ ತೆರಿಗೆಯನ್ನು ಹಾಕುವುದು ಸರಿಯೆಂದು ವಿಧಿಸಿದ್ದಾನೆ.[71] ವರ್ತಕರು ಇಂದ್ರನೀಲ, ಚಂದ್ರಕಾಂತ, ಮುತ್ತು, ಮಾಣಿಕ್ಯ, ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಪದ್ಮರಾಗ ಮೊದಲಾದ ರತ್ನಗಳನ್ನು ವ್ಯಾಪಾರ ಮಾಡುತ್ತಿದ್ದ ವಿವರಗಳು ಹೊಯ್ಸಳರ ಕಾಲದ ಶಾಸನಗಳಲ್ಲಿ, ವಿಜಯನಗರದ ಕಾಲದ ಮಾರ್ಕೊ-ಪೋಲೊ, ಇಬ್ನ ಬಟೂಟ, ತವೆರ್ನಿಯರ್, ಅಬ್ದುಲ್ ರಜಾಕ್ ಮೊದಲಾದ ಪ್ರವಾಸಿಗರ ಬರೆಹಗಳಲ್ಲಿ ದೊರೆಯುತ್ತವೆ.

## ವ್ಯಾಪಾರ

ಪ್ರಾಚೀನ ಕರ್ಣಾಟಕದಲ್ಲಿ ಎರಡು ಬಗೆಯ ವ್ಯಾಪಾರ ರೂಢಿಯಲ್ಲಿತ್ತು. ನಗರ ವ್ಯಾಪಾರವು ಅಂಗಡಿಗಳಲ್ಲಿ, ಸಂತೆಯ ವ್ಯಾಪಾರವು ಹರದರಲ್ಲಿ. ವ್ಯಾಪಾರ ವ್ಯವಹಾರಗಳು ಪಾಣಿನಿಯ ಕಾಲದಿಂದಲೂ 'ಪಣ' ಎಂಬ ಹೆಸರಿನಿಂದ ಪ್ರಸಿದ್ಧ (II ೩. ೫೭). ಪಂಪನು ಹಸ್ತಿನಾವತಿಯಲ್ಲಿ "ಬಚ್ಚರಾಪಣಂಗಳ್" ಕುಬೇರನ ಸದನಗಳ ಹಾಗೆ ಇದ್ದುದನ್ನೂ "ಧನದರನ್ನರಿವರೆನಿಪ ಪರದರಿಂ" ಎಂದು ವ್ಯಾಪಾರಿಗಳನ್ನೂ ವರ್ಣಿಸಿದ್ದಾನೆ. ಪಸರದ ಅರ್ಥ ವಿಸ್ತರಿಸಿದ್ದು ಇಂದಿಗೂ ಸಂತೆಗೆ ಬರುವ ಪಸಾರದವರನ್ನು ಹಳ್ಳಿಗಳಲ್ಲಿ ಕಾಣಬಹುದು. ಈಗಿನಂತೆ ಇನ್ನೂ ಕೆಲವು ಊರುಗಳಲ್ಲಿ ತೋರಬರುವ ಅಂಗಡಿಗಳೂ ಸಂತೆಯೂ ಕೆಲವೆಡೆಗಳಲ್ಲಿ ಇದ್ದಿರಬಹುದು. ಒಟ್ಟಿ ವ್ಯಾಪಾರ ಸಾಮಾನ್ಯವಾಗಿ ಒಂದು ಬಗೆಯ ಜಾತಿ ಅಥವಾ ಜನಾಂಗದವರ ವೃತ್ತಿಯಾಗಿ ಬೆಳೆದಿತ್ತು. ಅವರೆಲ್ಲ ಒಂದು ಸಂಘವೆಂಬ ಭಾವದಿಂದ ನಡೆದುಕೊಳ್ಳುತ್ತಿದ್ದರು. ಈ ಗುಂಪುಗಳೇ ಸಂಘ ಶ್ರೇಣಿಗಳಾದವು. ಸಂಘ, ಶ್ರೇಣಿ, ಕೊತ್ತಳಿ, ನಖರ (ನಗರ ಅಥವಾ ನಕರ) ಮತ್ತು ಸೆಟ್ಟಿಕಾರ ಇವು ವರ್ತಕರ

ಸಂಸ್ಥೆಗಳು. ಬಣಜಿಗರೆಂದರೆ ವರ್ತಕರು. ಇವರ ಸಂಸ್ಥೆಗಳೇ ಸಂತೆಗಳು. ಅಕ್ಕಮಹಾದೇವಿಯ ವಚನ "ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ" ಎಂಬುದರಿಂದ ಅವುಗಳ ವಹಿವಾಟದ ಗದ್ದಲ ಹೆಚ್ಚು ಎನಿಸುತ್ತದೆ. ಇವರಲ್ಲಿ ಸೆಟ್ಟಿ, ಸೆಟ್ಟಿಗುತ್ತ, ಬೀರವಣಿಗ, ವೇಳೆಕಾರ, ಮುಮ್ಮರಿದಂಡ, ಗವರೆ, ಗಾತ್ರಿಗ ಮುಂತಾಗಿ ಹಲವು ಪಂಗಡಗಳುಂಟು. 'ಅಯ್ಯಾವೊಳೆಯ ಐನೂರ್ವರ್', 'ಬಣಜಿಗರಯ್ನೂರ್ವರ್', 'ಗವರೆಗಳಯ್ನೂರ್ವರ್', 'ಐನೂರ್ವರ್'—ಇಂಥವು ವರ್ತಕಶ್ರೇಣಿಯನ್ನು ಸೂಚಿಸುತ್ತವೆ.

ವರ್ತಕರಲ್ಲಿ ಅವರವರ ಕಾಲದ ಪ್ರಭಾವದಂತೆ ಸಂಸ್ಕೃತಿಯಲ್ಲಿ ಇನಿತು ಮಾರ್ಪಾಡುಗಳಾಗಿರಬಹುದು. ಕುಲಗೋತ್ರಗಳು, ರೀತಿನೀತಿಗಳು, ಆಚಾರ ವಿಚಾರಗಳು ಮತ್ತು ಸಂಪ್ರದಾಯಗಳು ವ್ಯತ್ಯಾಸ ಹೊಂದಿರಬೇಕು. ಕೆಲವರು ಜೈನರಾಗಿರಬೇಕು, ಈಚೆಗೆ ಕೆಲವರು ವೀರಶೈವರಾಗಿರಬೇಕು, ಕೆಲವರು ಹಿಂದು ಸಂಪ್ರದಾಯದಲ್ಲಿಯೇ ಸ್ಥಿರವಾಗಿ ಉಳಿದಿರಬೇಕು. ಶ್ರವಣಬೆಳಗೊಳದ 'ನಖರಜಿನಾಲಯ', ಬಳ್ಳಿಗಾವಿಯ ಪಟ್ಟಣಸ್ವಾಮಿಜಿನಾಲಯ ಮುಂತಾದುವು ಕೆಲವು ವರ್ತಕರು ಜೈನರಾಗಿದ್ದರೆನ್ನುವುದಕ್ಕೆ ಆಧಾರಗಳನ್ನೊದಗಿಸುತ್ತವೆ. ಅವರಲ್ಲಿ ಕೆಲವರು ತಮ್ಮನ್ನು ಗುಡ್ಡಶಾಸ್ತ್ರದವಯವ ಲಕ್ಷಣಗಳರಿತವರೆಂದೂ ಗುಡ್ಡಧ್ವಜವುಳ್ಳವರೆಂದೂ ಹೇಳಿಕೊಂಡಿದ್ದಾರೆ. ಇದು ವಿಚಾರಣೀಯ.

ವರ್ತಕರು ಒಂದು ದೃಷ್ಟಿಯಿಂದ ರಾಜ್ಯದ ಆರ್ಥಿಕ ಸ್ಥಿತಿಗತಿಯನ್ನು ತಮ್ಮ ಅಂಕೆಯಲ್ಲಿ ಇಟ್ಟುಕೊಂಡ ಸಂಸ್ಥಾನಿಕರು, ಪಟ್ಟಣದ ಮೂಲಸ್ತಂಭರು. ಅವರು ಇಂದಿನ ಕಾಮರ್ಸ್ ಛೇಂಬರ್ಸ್‌ಗಳ ಹಾಗೆ ಆ ವರ್ತಕರೂ ಸಮಸ್ಯೆಗಳು ಉದ್ಭವಿಸಿದಾಗ 'ಅಶೇಷನಗರಮಿರ್ದು', 'ಮಹಾನಾಡಾಗಿ ಕುಳ್ಳಿರ್ದು', 'ನಕರಮುಮಿರ್ದು'—ಎಂದರೆ ಸಭೆ ಸೇರಿಸಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. "ಸಮಯ ಧರ್ಮಕ್ಕ(ಂ) ಕೂಡಿದ ಸಂಘಾತಕ್ಕಂ ಮಾಡಿದ ವ್ಯವಸ್ಥೆಗಂ ತಪ್ಪುವರಲ್ಲ."[72] ಎಂಬ ನಿರ್ಣಯಕ್ಕೆ ಮುಟ್ಟುತ್ತಿದ್ದರು. ಈ ವರ್ತಕರ ಸಂಘಸಂಸ್ಥೆಗಳು ಪಾಶ್ಚಾತ್ಯ ದೇಶಗಳಾದ ಗ್ರೀಸ್ ರೋಮ್ ದೇಶಗಳ ರಾಜ್ಯಗಳಲ್ಲಿದ್ದ ತದ್ರೂಪ ಸಂಘಸಂಸ್ಥೆಗಳಲ್ಲ. ಅಲ್ಲಿನವು ವಿಶೇಷವಾಗಿ ಚುನಾವಣಾ ಪದ್ಧತಿಯ ಮೇಲೆ ನಿಂತವು. ಆ ಸಂಘಸಂಸ್ಥೆಗಳ ಕಾರ್ಯವಿಧಾನ ಸ್ವಲ್ಪ ಬೇರೆ ತೆರನಾದ್ದು. ಅವುಗಳಿಗೆ ಸ್ವಯಮಾಡಳಿತದ ಹಕ್ಕು ಬಾಧ್ಯತೆಗಳಿದ್ದುವು. ಅಲ್ಲಿನ ಜನತೆ ಸಂಘಸಂಸ್ಥೆಗಳ ಚಾಲಕರಾದರೆ, ಕನ್ನಡ ನಾಡಿನಲ್ಲಿ ರಾಜರು ವರ್ತಕಸಂಘಗಳಿಗೆ ಪಟ್ಟಣಸ್ವಾಮಿಗಳನ್ನು ಆರಿಸುತ್ತಿದ್ದಿರಬಹುದು. ಆ ಸಂಘ ಸಂಸ್ಥೆಗಳಂತೆ ಇಲ್ಲಿನವೂ ತೆರಿಗೆ ಸಂಗ್ರಹಿಸುವ ಅಧಿಕಾರ ಹೊಂದಿದ್ದವು. ಈ ಸಂಘಸಂಸ್ಥೆಗಳು ಪರಸ್ಥಳದಿಂದ ಬಂದ ವರ್ತಕ ಸಮುದಾಯಕ್ಕೆ ಆಶ್ರಯವನ್ನೂ ಕಲ್ಪಿಸುತ್ತಿದ್ದವು. ಕನ್ನಡ ನಾಡಿನ ವರ್ತಕರು ಅನೇಕ ಪ್ರದೇಶಗಳ ವರ್ತಕರೊಂದಿಗೆ ಸಂಪರ್ಕ ಹೊಂದಿದ್ದರು. ಬೆಳಗಾವಿಯ ಕ್ರಿ.ಶ. ೧೧೦೪ರ ಶಾಸನದಲ್ಲಿ ಆ ವೇಣುಗ್ರಾಮದಲ್ಲಿ ಅಲ್ಲಿನ ಮುಮ್ಮುರಿದಂಡಗಳಲ್ಲದೆ ಲಾಳ ವ್ಯವಹಾರಿಗಳೂ ಮಲಯಾಳ ವ್ಯವಹಾರಿಗಳೂ ಬಸದಿಗೆ ದತ್ತಿಬಿಟ್ಟುದು ಸ್ಪಷ್ಟವಿದೆ. ಬೆಳಗಾವಿಯ ವರ್ತಕರು ಚೋಳ, ಚೇರ, ಮಗಧ, ಸೌರಾಷ್ಟ್ರ

ಗಳೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು.[73] ನಾನಾದೇಶೀಯ ವರ್ತಕರು 'ಮಹಾನಾಡಾಗಿ' ಕುಳಿತ ಉದಾಹರಣೆಯೂ ಉಂಟು. ವರ್ತಕರನ್ನು ಅವರು ವ್ಯವಹಾರಗೈಯುವ ದಿನಸು, ದೇಶ ಇತ್ಯಾದಿಗಳನ್ನು ಲಕ್ಷ್ಯದಲ್ಲಿಟ್ಟು ಹೆಸರಿಸಲಾಗುತ್ತಿತ್ತು. ಅವರು ವ್ಯವಹರಿಸುವ ಸಾಮಗ್ರಿಗಳೂ ನಾನಾ ಬಗೆಯವಾಗಿದ್ದವು. ವಿವಿಧ ಬಗೆಯ ರತ್ನಗಳು, ಆನೆ ಕುದುರೆಗಳು, ಏಲಕ್ಕಿ, ಲವಂಗ, ಅಡಕೆ, ಕರ್ಪೂರ, ಕಸ್ತೂರಿ, ಶ್ರೀಗಂಧ, ಅರಿಷಿಣ, ಕುಂಕುಮ, ಜೀರಿಗೆ, ಸಾಸವೆ, ಕೊತ್ತುಂಬರಿ, ಇಂಗು, ಶುಂಠಿ, ಬೆಲ್ಲ, ಸಕ್ಕರೆ, ಔಷಧಿಯ ಜಿನಸುಗಳು; ಕಿತ್ತಳೆ, ಬಾಳೆ, ನಿಂಬೆ, ಮಾವು ಮುಂತಾದ ಫಲಗಳು; ಅಕ್ಕಿ, ಬತ್ತ, ಗೋಧಿ ಮತ್ತು ಬೇಳೆಯ ಧಾನ್ಯಗಳು; ಎಲೆ, ಎಳ್ಳು, ಎಣ್ಣೆ, ಉಪ್ಪು, ಹತ್ತಿಯ ನೂಲು, ಬಣ್ಣದ ನೂಲು, ಬಟ್ಟೆಗಳು, ರೇಷ್ಮೆಯ ವಸ್ತ್ರಗಳು, ಮರದ ಹಲಗೆಗಳು, ಬಿದಿರನ ಸಾಮಾನುಗಳು, ಲೋಹದ ಪಾತ್ರೆಗಳು, ವಿಗ್ರಹಗಳು, ಬರೆಹದ ಕಂಠ ಪತ್ರಗಳು—ಇತ್ಯಾದಿ.

ಕನ್ನಡ ನಾಡಿನ ವರ್ತಕರು ಒಳದೇಶದ ವರ್ತಕರೊಂದಿಗೆ ಹೊಂದಿದಂತೆ ಹೊರದೇಶದ ವರ್ತಕರೊಂದಿಗೂ ಸಂಪರ್ಕ ಹೊಂದಿದ್ದರು. ಕ್ರಿ.ಪೂ. ೨ನೆಯ ಶತಮಾನದಲ್ಲಿ ಆಳುತ್ತಿದ್ದ ಚೀಣಾದೇಶದ ಹನ್‌ವತಿ ದೊರೆಯ, ಕ್ರಿ.ಶ. ೧೪ರಲ್ಲಿ ಸ್ವರ್ಗಸ್ಥನಾದ ರೋಮನ್‌ಚಕ್ರವರ್ತಿ ಅಗಸ್ಟಸ್‌ನ ನಾಣ್ಯಗಳೂ ಕಾವ್ಯಗಳಲ್ಲಿ ಮತ್ತು ಶಾಸನಗಳಲ್ಲಿ ಬರುವ ದೀನಾರ ದ್ರಮ್ಮ ಇವು ವ್ಯಾಪಾರದ ಯಾತಾಯಾತಾದ ಕುರುಹುಗಳು. ಪರ್ಷಿಯಾ (ಪಾರಸಿ) ತುರ್ಕಿಸ್ಥಾನ (ತುರ್ಕಿ) ಮುಂತಾದ ಉಲ್ಲೇಖಗಳೂ ಇವೆ. ಸು. ಕ್ರಿ.ಶ. ೩ನೆಯ ಶತಮಾನದ ನಾಗಾರ್ಜುನಿಕೊಂಡದ ಇಕ್ಷ್ವಾಕುವಂಶದ ವೀರಪುರುಷದತ್ತನ ಶಾಸನ ಕಾಲದಿಂದಲೂ 'ದೀನಾರ' ದಕ್ಷಿಣಭಾರತದಲ್ಲಿ ಬಳಕೆಯಲ್ಲಿದ್ದುದು ಇತಿಹಾಸಜ್ಞರಿಗೆ ತಿಳಿದ ವಿಷಯ. ರೋಮ್‌ದೇಶ ಲ್ಯಾಟಿನ್ ಭಾಷೆಯ ಡಿನೇರಿಯಸ್ (Denarius) ನಾಣ್ಯವೇ 'ದೀನಾರ.' ದ್ರಮ್ಮ>ದಮ್ಮ ಎಂಬುದು ದ್ರಕ್ಮ (Drachma) ಎಂಬ ಪುರಾತನ ಕಾಲದ ಗ್ರೀಕ್ ನಾಣ್ಯ. ಹಡಗುಕಟ್ಟಿ ವ್ಯಾಪಾರಮಾಡುತ್ತಿದ್ದುದು ಗೋವೆಯ ಕದಂಬರ ಶಾಸನಗಳಲ್ಲಿ ಬಂದಿದೆ.[74] ಕತ್ತೆ, ಕೋಣ, ಎತ್ತು, ಕುದುರೆ, ಬಂಡಿ ಇವು ವಸ್ತುಗಳನ್ನು ಸಾಗಿಸುವ ಸಾಧನಗಳಾಗಿದ್ದವು. ಹಡಗುಗಳಲ್ಲಿ ಆನೆ, ಮಾಣಿಕ್ಯ ಮೊದಲಾದವುಗಳನ್ನು ಹೇರಿ 'ಜಳ ಸ್ಥಳಯಾತ್ರೆ'ಗಳನ್ನು ತೇರದಾಳ ವರ್ತಕರು ಮಾಡುತ್ತಿದ್ದರೆಂದು ಶಾಸನದಲ್ಲಿ ಬಂದಿದೆ[75]. ರಸ್ತೆಗಳು ರಾಜಾಧೀನ. ಅಲ್ಲಿ ಸುಂಕದ ಕಟ್ಟೆಗಳಿದ್ದವು. ವ್ಯಾಪಾರವು ಮುಖ್ಯವಾಗಿ ಭೂಮಾರ್ಗ ಮತ್ತು ಜಲಮಾರ್ಗಗಳ ಮೂಲಕ ನಡೆಯುತ್ತಿತ್ತು. ಪ್ರಮುಖ ವ್ಯಾಪಾರ ಕೇಂದ್ರಗಳ ಮಧ್ಯೆ ಹೆಬ್ಬಟ್ಟೆಗಳಿದ್ದವು.[76] ಪಸರ,[77] ಹಸುಬೆ (ಪಸುಂಬೆ), ಗೋಣಿಯ ಚೀಲ, ವಸ್ತುಗಳನ್ನು ಸಾಗಿಸುವಲ್ಲಿ ಉಪಯೋಗಿಸುವ ಸಾಧನಗಳಾಗಿದ್ದವು. ವ್ಯಾಪಾರ ಮತ್ತು ಇತರ ವೃತ್ತಿಗಳು ಸರಿಯಾದ ರೀತಿಯಲ್ಲಿ ನಡೆಯಬೇಕಾದರೆ ಬೇಕಾದ ಹಣದ ಏರ್ಪಾಡು ಸಾಲದ ಸೌಲಭ್ಯ ಪತ್ರಮುಖೇನ ಮತ್ತು ಬಾಯಿಮಾತಿನ ಮೇಲೆ ನಡೆಯುತ್ತಿತ್ತು. ಶ್ರೀಮಂತರು,

ಗ್ರಾಮಸಭೆಗಳು, ಮಹಾಜನರ ಗೋಷ್ಠಿಗಳು, ದೇವಸ್ಥಾನಗಳು ಹಣವನ್ನು ಬಡ್ಡಿಗೆ ಕೊಟ್ಟು, ಬಂದ ಹಣದಲ್ಲಿ ಎಷ್ಟೋ ಸಲ ಅಲ್ಲಿನ ಕಾರ್ಯಗಳನ್ನು ನಡಸಿಕೊಂಡು ಹೋಗುತ್ತಿದ್ದರು. ಸಾಲ ಕೊಡುವ ಹಣದ ಬಡ್ಡಿದರವೂ ಹೆಚ್ಚೆಂದು ತೋರುತ್ತದೆ. ವ್ಯಾಪಾರದ, ಅದರ ತೆರಿಗೆಯ ವಿಷಯಗಳನ್ನು ವಿವರಿಸುವ ಒಂದು ಶಾಸನವನ್ನು ಮಾದರಿಗೆ ಇಲ್ಲಿ ಉದ್ಧರಿಸಬಹುದು :

"ಮತ್ತಂ ಸ್ವಸ್ತ್ಯನೇಕಗುಣಗಣಾಳಂಕೃತಸತ್ಯಶೌಚಾಚಾರನಯವಿನಯಸಂಪನ್ನರು ಮಾಶ್ರಿತಜನಪ್ರಸನ್ನರುಂ ಮಘಪಟ್ಟಪುರ ಪ್ರತಿಷ್ಠಿತಗುಡ್ಡ ಶಾಸ್ತ್ರಕ್ರಮಪರಿಪಾಳಿತ ವೀರ ಬಣಂಜುಧರ್ಮರುಂ ಸಮಾಚರಿತ ಪುಣ್ಯಕರ್ಮರುಂ ಪದ್ಮಾವತೀ ದೇವೀ ಲಬ್ಧವರಪ್ರಸಾದರುಂ ಭಲ್ಲುಂಕಿದಣ್ಡಹಸ್ತರುಮಪ್ಪ ಸಮಯಚಕ್ರವರ್ತಿ ಜಯಪತಿಸೆಟ್ಟಿ ಮುಖ್ಯವಾಗಿ ವೇಣುಗ್ರಾಮದ ಸ್ಥಳದ ಸಮಸ್ತ ಮುಮ್ಮುರಿದಣ್ಡಂಗಳುಂ ಕೂಂಡಿ ಮೂಸಾಸಿರದ ಪಟ್ಟಣಿಗ ಮೊದಲಾದುಭಯ ನಾನಾ ದೇಶಿ ಮುಮ್ಮುರಿದಣ್ಡಂಗಳುಂ ಪರಶುರಾಮನಾಯಕ ಪೊಮ್ಮಣನಾಯಕ ಅಮ್ಮುಗಿನಾಯಕ ಪ್ರಮುಖರಪ್ಪ ಸಮಸ್ತ ಳಾಳವ್ಯವಹಾರಿಗಳುಂ ಪಡಪನಾಯಕ ಕೊಂಡನಂಬಿ ಸೆಟ್ಟಿ ಪೊಱೆಯಚಸೆಟ್ಟಿ ಮೊದಲಾದೆಲ್ಲಾ ಮಲಯಾಳ ವ್ಯವಹಾರಿಗಳುಂ ಮತ್ತಮಾ ವೇಣುಗ್ರಾಮದ ಸ್ಥಳದ ಚಿನ್ನಗೆಯಿಕದವರುಂ ದೂಸಿಗರುಂ ಮುಖ್ಯಮಾಗುಳಿದ ಪರದರುಂ ತೇಲಿಗರುಂ ದಿಂಕಸಾಲಿಗರುಮಿನ್ತಿವರೆಲ್ಲಂ ನೆರೆದಾ ಶಾನ್ತಿನಾಥ ದೇವರ ಬಸದಿಗೆ ಬಿಟ್ಟಾಯಮೆಂತೆಂದೊಡೆ

ಬಡಗಣಿ ಬಂದ ಕುದುರೆಗೆ ನೆಲಮೆಟ್ಟು ಹಾಗವೊಂದು ತೆಂಕಲ್ ನಡೆವವರ್ಕೆ ಸುಂಕ ಹಾಗವೊಂದು ಮಲೆಯಾಳರ ಕುದುರೆಗೆ ಹಾಗವೊಂದು ಅಱುವತ್ತಯ್ದೆತ್ತು ಕೋಣಂಗಳೊಳೇನಂ ಪೇಱಿದೊಡಂ ಸರ್ವ್ವಬಾಧಾಪರಿಹಾರಂ ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ ಮಣಿಗಾರವಸರಕ್ಕೆ ಗಂಧವಣವಸರಕ್ಕೆ ಗಂಧವಣಿಗರಂಗಡಿಗೆ ಅಕ್ಕಸಾಲೆಗಮಟಕ್ಕೆ ಬೇಱೆವೇಱೆ ಬರಿಸದೆಱೆ ಹಿರಿಯ ಹಾಗವೊಂದು ಹೊರಗಣಿ ಬಂದ ಸೀರೆಯ ಕಡಗೆಗೆ ವೀಸವೊಂದು ಹೊಱಗಣ ಬಂದ ಗಂಧವಣಕ್ಕೆ ಕಕ್ಷಭಂಡಕ್ಕೆ ಆ ಭಂಡಂ ಗದ್ಯಾಣಂ ತೂಕವಯ್ದು ಹತ್ತಿಯ ಭಂಡಿಗೆ ತಾರಂ ಮೂಱು ಆ ಪೇಱಿಂಗೆ ಕಾಣಿಯೊಂದು ಭತ್ತದ ಬಂಡಿಗೆ ಭತ್ತಪೊರ್ವ್ವಳ್ಳಂ ಭತ್ತವಸರದಂಗಡಿಗೆ ಭತ್ತನಿಚ್ಚಸೊಲ್ಲಗೆ ಅಕ್ಕಿವಸರಕ್ಕೆ ಅಕ್ಕಿಯದ್ದಂ ಮೆಳಸಿನ ಹೇಱಿಂಗೆ ಮೆಳಸೊರ್ಮಾನಂ ಆ ಜವಳಕ್ಕೆ ಅರೆವಾನಂ ಇಂಗಿನ ಪೆಟ್ಟಗೆಗೆ ಇಂಗು ಗದ್ಯಾಣಂ ತೂಕವಾಱು ಅಲ್ಲ ಅರಿಸಿನದ ಜವಳಕ್ಕೆ ಆ ಭಂಡಂ ಪಲವಯ್ದು ಆ ಹೇಱಿಂಗೆ ಅಲ್ಲ ಅರಿಸಿನಂ ಪಲಂ ಪತ್ತು, ಗಾಣಕ್ಕೆ ನಿಚಟೆಣ್ಣೆಯದ್ದಂ ಅಡಕೆಯ ಹೇಱಿಂಗೆ ಅಡಕೆಯಿಪ್ಪತ್ತಯ್ದು ಆ ಜವಳಕ್ಕೆ ಅಡಕೆ ಹನ್ನೆರಡು ಎಲೆಯ ಹೇಱಿಂಗೆಲೆ ನೂಱು ಹೊಱೆಗೆಲೆಯಯ್ವತ್ತು ತೆಂಗಿನಕಾಯ ಹೇಱಿಂಗಾ ಕಾಯೊಂದು ಓಲೆಯ ಹೇಱಿಂಗೆ ಓಲೆಯ ಸೂಡೆರಡು ಆ ಹೊಱೆಗೆ ಸೂಡೊಂದು ಹೊಱಗಣಿಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನೈದು ಆ ಹೊಱೆಗೆ ಅಚ್ಚೊಂದು ಬಾಳೆಯ ಹೇಱಿಂಗೆ ಕಾಯಾಱು ಆ ಹೊಱೆಗೆ ಕಾಯ್ಮೂಱು

ನೆಲ್ಲಿಯಕಾಯ ಹೇಱುಂಗಾ ಕಾಯ್ಬುಳ್ಳವೊಂದು ಕರ್ಪ್ಪಿನ ಹಗರಕ್ಕೆ ಒಂದು ಕರ್ಪ್ಪೂರ ಬಳಹವ ಹೇಱುಂಗೆ ಬಳಹವೊಪ್ಪ್ರಲಂ ಮತ್ತಮಾ ಶಾನ್ತಿನಾಥ ದೇವರ ಬಸದಿಗೆ ಶ್ರೀಕಾರ್ತ್ತವೀರ್ಯ್ಯದೇವಂ ಕೊಟ್ಟ ಅಂಗಡಿ ಬಡಗಗೇರಿಯ ಬಡಗಣ ಹರಿಯ ಪಡುವಣ ಕಡೆಯೊಳ್ ರಾಜವೀಥಿಯಿಂ ಮೂಡಲ್ ನಾಲ್ಕು...."

ಪಟ್ಟಣಗಳ ವಿವರಕ್ಕಾಗಿ ಬಿಲ್ಹಣನ 'ವಿಕ್ರಮಾಂಕಚರಿತ', ಗಂಗಾದೇವಿಯ 'ಮಧುರಾವಿಜಯ' ಮತ್ತು ವಿದೇಶಿ ಪ್ರವಾಸಿಗಳ ಕೃತಿಗಳನ್ನು ನೋಡಬಹುದು. ವಿಜಯನಗರದ ವೈಭವ ಅಷ್ಟಿಷ್ಟಲ್ಲ; ಪೇಯಾಸ್ ರೋಮ್ ನಗರಕ್ಕಿಂತಲೂ ಅದು ದೊಡ್ಡದಾಗಿತ್ತೆಂದು ಬರೆದಿದ್ದಾನೆ. ಅಲ್ಲಿನ ಅಂಗಡಿಗಳನ್ನು ಕಂಡ ಅಬ್ದುಲ್‌ರಜಾಕ್ ಅಚ್ಚರಿಪಟ್ಟಿದ್ದಾನೆ.

ಕೂಲಿಕುಂಬಳಿ ಎಂಬ ಹಳ್ಳಿಯ ಮಾತೊಂದು ಪುರಾತನ ಕಾಲದಲ್ಲಿನ ಕೂಲಿಯ ರೀತಿನೀತಿಯ ಮೇಲೆ ಬೆಳಕು ಚೆಲ್ಲುತ್ತದೆ. ಕೆರೆಗಳನ್ನೂ ದೇಗುಲಗಳನ್ನೂ ಕಟ್ಟಿಸಲು ಆಳುಗಳನ್ನು ಕೂಲಿಕೊಟ್ಟು ನೇಮಿಸಲಾಗುತ್ತಿತ್ತು. ಆದರೆ ಆ ಕೂಲಿ ಇಂದಿನ ಹಾಗೆ ಇತ್ತೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲ. ಶಿಲ್ಪಿಗಳಿಗೆ, ಉಪಾಧ್ಯಾಯರಿಗೆ ದತ್ತಿ ಕೊಟ್ಟುದು ಹಲವಾರು ಶಾಸನಗಳಿಂದ ಸ್ಪಷ್ಟವಿರುವುದರಿಂದ ಮುಖ್ಯರಾದವರಿಗೆ ದತ್ತಿಯನ್ನೂ ಉಂಬಳಿಯನ್ನೂ ಹಾಕಿಕೊಡುತ್ತಿದ್ದಿರಬಹುದು. ಆದರೆ ಸಾಮಾನ್ಯ ಕೂಲಿಗಳಿಗೆ ಕೂಲಿಯನ್ನೂ ಇನ್ನೂ ಹಳ್ಳಿಗಳಲ್ಲಿ ಬಳಕೆಯಲ್ಲಿರುವಂತೆ ಧಾನ್ಯರೂಪದಲ್ಲಿಯೇ ಕೊಡುತ್ತಿದ್ದಿರಬಹುದು. ತಜ್ಞರ ವೃತ್ತಿಗಳೂ ಬಿತ್ತುವಟ್ಟಗಳೂ ಇದನ್ನೇ ಸೂಚಿಸುತ್ತವೆ. ಆದರೆ ಸಾಮಾನ್ಯ ಕೂಲಿಗೆ ಕೂಲಿ ಏನಿತ್ತೆಂಬುದು ಇನ್ನೂ ಬಿಡಿಸಲಾಗದ ಪ್ರಶ್ನೆ. ತಜ್ಞರನ್ನು ಶಿಲ್ಪಿಗಳೆಂದೂ ಅತಜ್ಞರನ್ನು ಕರ್ಮಕಾರರೆಂದೂ ಪಾಣಿನಿಯಲ್ಲಿ ಕರೆದಿದೆ. ಕರ್ಮಕಾರರಿಗೆ ಕೊಡುತ್ತಿದ್ದ ಹಣವೇ 'ಭೃತಿ.' ಭೃತಿಯನ್ನು ಸ್ವೀಕರಿಸುವವರು ಭೃತ್ಯರು.[78] ಪಾಣಿನಿಯ ಪ್ರಕಾರ ತಜ್ಞರಿಗೆ ವೇತನ, ಅತಜ್ಞರಿಗೆ ಭೃತಿ. 'ಬಿಟ್ಟಿ' ಎಂಬ ಪದವೂ ಇಲ್ಲಿ ಗಮನಿಸಬೇಕಾದುದು. ರಾಜನು ತನಗೆ ಇಷ್ಟಬಂದಂತೆ ಜನರನ್ನು ದುಡಿಸಿಕೊಳ್ಳಬಹುದಾಗಿತ್ತು. ಆ ದುಡಿಮೆಗೆ ಆತನು ಕೊಟ್ಟುದೇ ಪ್ರತಿಫಲ. ಸೈನ್ಯಕ್ಕೆ ದಾರಿಯನ್ನು ಸಿದ್ಧಪಡಿಸುವುದು, ಕುದುರೆ ಎತ್ತುಗಳಿಗೆ ಹುಲ್ಲು ಒದಗಿಸುವುದು, ಆಯುಧಗಳನ್ನು ಹೊತ್ತುಕೊಂಡು ಹೋಗುವುದು, ಯುದ್ಧದಲ್ಲಿ ಗಾಯಗೊಂಡವರನ್ನು ಹೊತ್ತುತರುವುದು—ಇವೆಲ್ಲಾ ಪ್ರಾಯಶಃ ರಾಜನು ಮಾಡಿಸುತ್ತಿದ್ದ 'ಬಿಟ್ಟಿ'ಗಳು. ಅದಕ್ಕೆ ಪ್ರತಿಫಲವಾಗಿ ಆತನು ಉಂಬಳಿಯನ್ನು ಹಾಕಿಕೊಟ್ಟಿರಬಹುದು, ಇಲ್ಲವೆ ಬಿಟ್ಟಿಯೇ ದುಡಿಸಿಕೊಂಡಿರಬಹುದು. ಪಡೆ (ಸೈನ್ಯ) ನೋಡಲು ಬಂದವರನ್ನು ಹಿಡಿದು ಗುಡಿ (ಧ್ವಜ) ಹೊರಿಸಿದುದುಂಟು.[79] ಆಗ್ಗೆ ದಾಸರು, ಆಳುಗಳು ಎಂದು ಕೂಲಿಗಳನ್ನು ಕರೆಯುತ್ತಿದ್ದುದು ರೂಢಿ. ಅವರನ್ನು 'ಭಾಕ್ತ' ಎಂದೂ ಹೇಳುತ್ತಿದ್ದರು. ಜೀತದ ಆಳು, ಒಣಜೀತದ ಆಳು ಆಗಲೂ ಇದ್ದಿರಬಹುದು. ಸ್ವಾಮಿ ಭೃತ್ಯರ ಸಂಬಂಧ ಚೆನ್ನಾಗಿರಬೇಕು—ಎಂಬ ನೀತಿಯ ನುಡಿ ಬಸವಣ್ಣನವರ ವಚನದಲ್ಲಿ ಮೂಡಿಬಂದಿದೆ; "ಸ್ವಾಮಿ ಭೃತ್ಯ ಸಂಬಂಧಕ್ಕೆ ಅವುದು ಪಥವೆಂದರೆ

ದಿಟವ ನುಡಿವುದು ನುಡಿದಂತೆ ನಡೆವುದು ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವ."[80]

ವಸ್ತುಗಳನ್ನು ವಸ್ತುಗಳಿಗೆ ಪ್ರತಿಯಾಗಿ ಕೊಟ್ಟು ತೆಗೆದುಕೊಳ್ಳುವುದೇ 'ನಿಮಾನ ಪದ್ಧತಿ.'[81] ಕನ್ನಡ ಶಾಸನಗಳಲ್ಲಾಗಲಿ ಸಾಹಿತ್ಯದಲ್ಲಾಗಲಿ ಈ ಪದದ ಬಳಕೆಯಿಲ್ಲ. ಆದರೆ ಇಂದಿಗೂ ಹಳ್ಳಿಗಳಲ್ಲಿ ಈ ಪದ್ಧತಿಯಿದೆ. ಆದುದರಿಂದ ಪುರಾತನ ಕಾಲದ ವ್ಯಾಪಾರದಲ್ಲಿ ನಿಮಾನ ಪದ್ಧತಿ ಮುಖ್ಯವಲ್ಲವಾದರೂ ಜೀವಂತವಾಗಿದ್ದ ವಿಧಾನವಾಗಿರಬೇಕು. ಪತಂಜಲಿಯ ಪ್ರಕಾರ ಮೂರು ಬಗೆಯ ಅಳತೆಗಳು ಇದ್ದವು : ಉನ್ಮಾನ, ಪರಿಮಾಣ ಮತ್ತು ಪ್ರಮಾಣ[82]. ಭಾರವಾದ ವಸ್ತುಗಳನ್ನು ಅಳೆಯುವಲ್ಲಿ ಉನ್ಮಾನ ಪದ್ಧತಿ ; ಅದಕ್ಕೆ ತ್ರಾಸು ಬೇಕು. ತ್ರಾಸಿನ ಉಲ್ಲೇಖ ಬಸವಣ್ಣನವರ ಒಂದು ವಚನದಲ್ಲಿ ಬಂದಿದೆ.[83] ರಾಜಮಹಾರಾಜರು ತುಲಾಪುರುಷರಾದ ಅನೇಕ ಉದಾಹರಣೆಗಳಿವೆ. ಹೀಗೆಯೇ ಕೊಳಗ, ಸೊಲಿಗೆ, ಬಳ್ಳ, ಗಡಿಗೆ ಮುಂತಾದ ಅಳತೆಗಳಿದ್ದವು. ಪ್ರಾಂತ ಪ್ರಾಂತಗಳಲ್ಲಿ ಪ್ರಮಾಣಭಿನ್ನತೆಗಳಿವೆ. ಅಳತೆ ತೂಕಗಳ ಪಟ್ಟಿ ರಾಜಾದಿತ್ಯನ ಗಣಿತ ಗ್ರಂಥದಲ್ಲಿ ಇಂತಿದೆ : ಅಳತೆಗಳು : ೧ ಖಂಡುಗ = ೪ ಪಂಚಕ ; ೧ ಪಂಚಕ = ೫ ಕೊಳಗ ; ೧ ಕೊಳಗ = ೪ ಬಳ್ಳ ; ೧ ಬಳ್ಳ = ೪ ಮಾನ ; ೧ ಮಾನ = ೪ ಸೊಲ್ಲಿಗೆ ; ೧ ಸೊಲ್ಲಿಗೆ = ೪ ಗಿದ್ದಗೆ. ತೂಕಗಳು : ೧ ಭಾರ = ೨೦ ತೊಲ ; ೧ ತೊಲ = ೫ ಬೀಸಗೆ ; ೧ ಬೀಸಗೆ = ೨೦ ಪಲ ; ೧ ಪಲ = ೪ ಕರ್ಷ ; ೧ ಕರ್ಷ = ೪ ಸುವರ್ಣ. ಹಳ್ಳಿಗಳಲ್ಲಿ ಈಗಲೂ ಸೊಲಿಗೆ, ಸೇರು, ಅದ್ದನಿಗೆ, ಗಿದ್ದನಿಗೆ, ಚಟಾಕು ಬಳಕೆಗಳಲ್ಲಿವೆ. ಎಣ್ಣೆಯ ಗಾಣಗಳ ಪ್ರಸ್ತಾಪ ಸಾಕಷ್ಟು ಕಡೆ ಇದ್ದರೂ ಅಳತೆಗಳ ವಿವರ ದೊರೆಯುವುದಿಲ್ಲ.

ಭೂಮಿಯನ್ನು ಅಳೆಯುವಲ್ಲಿ ರೇಖಾಮಾನ ಅಥವಾ ಪ್ರಮಾಣ ಪದ್ಧತಿ ಬಳಕೆಯಲ್ಲಿದ್ದಿತು. ಶಾಸನಗಳಲ್ಲಿ ಹೆಚ್ಚು ಪಾಲು ಭೂಮಿ ದಾನಕ್ಕೆ ಸಂಬಂಧಪಟ್ಟದ್ದು, ಅವುಗಳಲ್ಲಿ ಭೂಮಿಯನ್ನು ಅಳೆಯುತ್ತಿದ್ದ ಬಗೆಯನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಅದು ಎರಡು ಬಗೆಯದಾಗಿತ್ತು : ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಮತ್ತು ಅಳತೆಗೋಲುಗಳ ಮೂಲಕ. ರಾಜಾದಿತ್ಯನು ಭೂಮಿಯನ್ನು ಅಳೆಯುವಲ್ಲಿ 'ಘಳೆ' ಅಥವಾ 'ಗಳೆ' ಕೋಲುಗಳನ್ನು ಬಳಸಬೇಕೆನ್ನುತ್ತಾನೆ ; ಊರೂರಿಗೂ ಬೇರೆ ಬೇರೆಯಾದ 'ಗಳೆ'ಗಳು ಇರಬಹುದೆಂದಿದ್ದಾನೆ. ಪ್ರಾಯಃ ಆಯಾ ಊರಿನ ದೇವಸ್ಥಾನದಲ್ಲಿ 'ಗಳೆ'ಯ ಅಳತೆಯನ್ನು ಗೋಡೆಯಲ್ಲಿ ಕೆತ್ತುತ್ತಿದ್ದಿರಬಹುದು. ನಾಗಮಂಗಲದ ಶಾಸನವೊಂದು ಈ ಊಹೆಗೆ ಆಸ್ಪದವೀಯುತ್ತದೆ : "ಯೀ ಅಯ್ವತ್ತು ಗೇಣು ಗಡಿಂಬವ ಸಲಿಸವೆ ಕಿತ್ತವಂಗೆ ಕುಂಭೀನರಕ ಸಂತಾನಕ್ಷಯುವಕ್ಕುಂ."[84] ಊರೂರಿಗೆ 'ಕೋಲು' ಬೇರೆ ಆದಹಾಗೆ ಅವುಗಳ ಅಳತೆಯಲ್ಲಿ ವ್ಯತ್ಯಾಸ ಆದುದುಂಟು. ಉದಾ : ೨೮ ಗೇಣ ಗಳೆ, ೧೬ ಗೇಣ ಗಳೆ, ೫೨ ಗೇಣ ಗಳೆ ; ಊರಿನ ಹೆಸರಿನಿಂದ : ಮರಗುಂಡಿಯ ಕೋಲ್ ; ದೇವಸ್ಥಾನಗಳ ಹೆಸರಿನಿಂದ : ಗಂಡಭೇರುಂಡೇಶ್ವರ ಕೋಲ್, ಭೇರುಂಡಗಳೆ (ಬಳ್ಳಿಗಾವಿ), ನಗರೇಶ್ವರದ ಗಡಿಂಬದ ಕೋಲ್ (ಮುಳಗುಂದ), ಎಳರಾವೆಯ ತೀರ್ಥದ ಘಳೆ (ಏವೂರು) ;

ಇಲ್ಲವೆ ಕೋಲುಗಳನ್ನು ಹೊರಡಿಸಿದ ವ್ಯಕ್ತಿಗಳ ಹೆಸರೋ ಬಿರುದೋ ಅನ್ವಯಿಸಿ: ಒರಂಟೆ ಮಲ್ಲನ ಘಳೆ, ದಾನವಿನೋದನ ಘಳೆ (ಏವೂರು), ಗಂಡರಾದಿತ್ಯನ ಪಿರಿಯ ಕೋಲ್, ಬಂಟರ ಭಾವನ ಕೋಲ್ ಇತ್ಯಾದಿ[85] ಕರೆಯುತ್ತಿದ್ದರು. ಈ ಅಳತೆಗೋಲುಗಳ ಸಹಾಯದಿಂದ ಭೂಮಿಯನ್ನು ಮತ್ತರ (ನಿವರ್ತನ), ವೇಲಿ, ಕುಲಿ, ಕಮ್ಮ ಮುಂತಾಗಿ ಅಳೆಯುತ್ತಿದ್ದರು. ಬಿತ್ತಬಹುದಾದ ಬೀಜದ ಪ್ರಮಾಣದಿಂದ ಸೊಲಗೆ, ಕೊಳಗ, ಖಂಡುಗ, ಭೂಮಿ ಎಂದೂ ಅಳೆಯುತ್ತಿದ್ದರು. 'ಮತ್ತರ'ದ ಲೆಕ್ಕ ಸರಿಯಾಗಿ ತಿಳಿಯದು. ಈಗಿನಂತೆಯೇ ಆಗಲೂ ಅರ್ಥಶಾಸ್ತ್ರದ ಪ್ರಕಾರ ಅಳತೆ ಹಾಗೂ ತೂಕಗಳ ಮೇಲೆ ರಾಜನ ಹತೋಟಿ ಇರಬೇಕಾಗಿತ್ತು. ಈ ವಿಷಯಗಳನ್ನು ನೋಡಿಕೊಳ್ಳುವ 'ತುಲಾಮಾನ ಪೌತವ' ಎಂಬ ಅಧಿಕಾರಿಯಿರುತ್ತಿದ್ದ. ಮತ್ತೆ ಮೋಸ ಕೈತವ ಇವುಗಳೂ ಇದ್ದವೆನ್ನುವುದಕ್ಕೆ 'ಸೆಟ್ಟಿಯ ಬಳ್ಳಂ ಕಿರಿದು.'[86]

> ಪಿರಿದಪ್ಪ ಕೋಲ ಳಿಂದಂ।
> ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂ।
> ಕಿರಿದೆ ಪೆಱರ್ಗೆ ಕುಡುಗೆ ಕುಂದಿಸಿ।
> ಪರದುಗೆಯಲ್ಲಲ್ಲದೆಂದು ನೆಗೞ್ವಂ ಜೈಸಂ॥[87]

ಇತ್ಯಾದಿಗಳು ಸಾಕ್ಷಿಗಳಾಗಿವೆ.

## ಆಯುವ್ಯಯ

ರಾಜ್ಯದ ಸುಖಶಾಂತಿಗಳು ರಾಜ್ಯದ ಆಯ ಹಾಗೂ ವ್ಯಯಗಳ ಮೇಲೆ ನಿಂತಿರುತ್ತವೆ. ತೆರಿಗೆಗಳು ಅತಿಯಾದಾಗ ಕಿರುಕುಳ, ಮಿತಿಮೀರಿದಾಗ ಸಮಾಧಾನ; ತೆರಿಗೆಗೆ ತಕ್ಕಂತೆ ಸೌಲಭ್ಯಗಳನ್ನೊದಗಿಸಿದಾಗ ಸುಖ ಶಾಂತಿಗಳು. ಪ್ರಾಚೀನ ಕಾಲದಲ್ಲಿ ರಾಜ್ಯಾಡಳಿತ ಕಾರರು ರಾಜ್ಯ ಧನ ಕೋಶಕ್ಕೋಸ್ಕರ ಅನೇಕ ಬಗೆಯ ತೆರಿಗೆಗಳನ್ನು ಪ್ರಜೆಗಳ ಮೇಲೆ ಹೊರಿಸುತ್ತಿದ್ದರು. ಆ ಕೋಶವನ್ನು ಇತರ ಆಕರಗಳಿಂದಲೂ (ಅಪುತ್ರಕಧನ, ಕಳ್ಳಕಾಕ ಗನ್ನು ಸದೆಬಡಿದು ತಂದ ಧನ ಮತ್ತು ರಾಜನಿಗೆ ಸೇರಿದ ವೈಯಕ್ತಿಕ ಆಸ್ತಿ) ಸಮೃದ್ಧ ಗೊಳಿಸುತ್ತಿದ್ದರು. ರಾಜ್ಯಕ್ಕೆ ಇರುವ ಆದಾಯದ ಮೂಲಗಳು ಆಯಸ್ಥಾನಗಳು. ಶೌಲ್ಕಿಕ (ಕಟ್ಟಿಸುಂಕಗಳದ್ದು), ಗೌಲ್ಮಿಕ (ಅರಣ್ಯಸಂಪತ್ತಿಗೆ ಸಂಬಂಧಿಸದ್ದು) ಮತ್ತು ಆಕರಿಕ (ಗಣಿ ಗಳ ಮೇಲಿನ ತೆರಿಗೆ ಅಥವಾ ಗಣಿಗಳ ಮೂಲಕ ಬರುವ ಆದಾಯ) ಎಂದು ಅವುಗಳನ್ನು ಪಾಣಿನಿ, ಪತಂಜಲಿ ಮತ್ತು ಕಾತ್ಯಾಯನರ ಕಾಲದಿಂದ ಹೆಸರಿಸುವುದು ರೂಢಿ.[88] ಇವು ಗಳೇ ಮುಂದೆ ರೂಢವಾದ ತೆರಿಗೆಗಳಾದವು. ಬಾದಾಮಿ ಚಾಲುಕ್ಯರ ಕಾಲಕ್ಕೆ ನಿಧಿ, ನಿಕ್ಷೇಪ, ಕ್ಲಪ್ತಉಪರಿಕರ, ಉದ್ರಂಗ, ಪರಿಕರ ಎಂದು ಬಂದಿವೆ. 'ತೆರೆಪೊನ್' ಎಂದೂ ಈ ಆದಾಯಗಳನ್ನು ಕರೆಯಲಾಗುತ್ತಿತ್ತು. ದೇವಾಲಯಗಳ ಅಂಗಭೋಗ ರಂಗಭೋಗಗಳಿಗೆ ಬೇಕಾದ ಹಣವನ್ನು ಕೊಡಿಸುವುದೇ 'ಉದ್ರಂಗ' ಇರಬಹುದು. ಪರಿಕರವು ರಾಜನಿಗೆ ಸೇರ ಬೇಕಾದ ಊರಿನ ಎಲ್ಲ ಬಗೆಯ ಸಣ್ಣಪುಟ್ಟ ತೆರಿಗೆಗಳಾಗಿರಬಹುದು. ಅಂತೂ ಈ ತೆರಿಗೆ

ಗಳು, ಆಗಾಗ ಹಾಕುತ್ತಿದ್ದ ವಿಶೇಷ ತೆರಿಗೆಗಳು, ತಪ್ಪಿತಸ್ಥರಿಗೆ ಹಾಕುತ್ತಿದ್ದ ದಂಡಗಳು, ಸರ್ಕಾರದ ಸ್ವಂತ ಆಸ್ತಿಯ ಉತ್ಪತ್ತಿ ಹಾಗೂ ಸಾಮಂತರ ಕಪ್ಪಕಾಣಿಕೆಗಳು ರಾಜ್ಯದ ಆಯಸ್ಥಾನಗಳಾಗಿದ್ದವು.

ಇವುಗಳನ್ನು ಒಟ್ಟಿನಲ್ಲಿ ಹೀಗೆ ವಿಂಗಡಿಸಬಹುದು : ಜಮೀನಿನ ತೆರಿಗೆ, ಆಸ್ತಿ ತೆರಿಗೆ, ವ್ಯಾಪಾರ ತೆರಿಗೆ, ಉದ್ಯೋಗ ತೆರಿಗೆ, ಕೈಗಾರಿಕೆಯ ತೆರಿಗೆ, ಸೈನ್ಯಕ್ಕಾಗಿ ಕೊಡುಗೆ, ಸಾಮಾಜಿಕ ತೆರಿಗೆ, ದಂಡಗಳು, ಇತರ ತೆರಿಗೆಗಳು.[89] ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಪ್ರತಿಯಾಗಿ ಸಲ್ಲಿಸುವ ಪ್ರತಿಫಲವೇ ತೆರಿಗೆ ಅಥವಾ ಕರ. ಧರ್ಮದಿಂದ ರಾಜ್ಯವನ್ನು ಆಳುವ ರಾಜನಿಗೆ ದೇಶದಲ್ಲಿ ಬೆಳೆಯುವ ಬೆಳೆಯ ೧/೬ನೆಯ ಭಾಗವು ಸಲ್ಲಬೇಕೆಂದು ಸ್ಮೃತಿಗಳ ಕಾಲದಿಂದಲೂ ನಡೆದುಬಂದ ಸಂಪ್ರದಾಯ. ಇದೇ 'ಅರುವಣ' ಆಗಿರಬಹುದು. ಕಾಲ ಕಳೆದಾಗ ಅದು ಒಂದು ಸಾಮಾನ್ಯ ರೂಪವನ್ನು ಹೊಂದಿರಬಹುದು. ಕನ್ನಡನಾಡಿನ ಶಾಸನಗಳನ್ನು ನೋಡಿದರೆ ನಮಗೆ ಅನೇಕ ಬಗೆಯಲ್ಲಿದ್ದ ತೆರಿಗೆಗಳು ಸಿಕ್ಕುತ್ತವೆ. ಈ ಆಧಿಕ್ಯವನ್ನು ನಮ್ಮ ಕವಿಗಳು ಹಾಸ್ಯ ಮಾಡಿದುದುಂಟು,[90] ರಾಜನಲ್ಲಿ ಮನವಿಮಾಡಿಕೊಂಡು ಮುಕ್ತರಾದದ್ದುಂಟು[91], ಹೋರಾಡಿ ಮಡಿದುದುಂಟು.[92] ಒಮ್ಮೊಮ್ಮೆ, ಎಷ್ಟು ಹೆಚ್ಚೆಂದರೆ : ರೈತನು ಮನೆಗೆ, ತಿಪ್ಪೆಗೆ, ಬಣವೆಗೆ, ಹಸುಗಳಿಗೆ, ಎತ್ತುಗಳಿಗೆ, ತೋಟಕ್ಕೆ, ತೋಟದಲ್ಲಿನ ಬಾವಿಗೆ, ತೋಟದಲ್ಲಿ ಬೆಳೆದ ವಸ್ತುಗಳನ್ನು ಮಾರುಕಟ್ಟೆಗೆ ಸಂತೆಗೆ ಎಂದು ಕೊಂಡೊಯ್ದರೆ ಎಲ್ಲೆಲ್ಲೂ ತೆರಿಗೆಗಳನ್ನು ತೆರಬೇಕಾಗಿತ್ತು. ಸುಂಕದ ಕಟ್ಟೆಗೆ ಕೈಕೊಟ್ಟವರೂ ಇದ್ದಿರಬಹುದು. ದಾಸಿಮಯ್ಯನ ಹಾಗೂ ಬಸವಣ್ಣನ ವಚನಗಳಲ್ಲಿ "ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ ಇರುಳೆಲ್ಲ ನಡೆವನಾ ಸುಂಕಕ್ಕಂಜಿ ಕಳವೆಯೆಲ್ಲ ಹೋಗಿ ಬರಿಯ ಗೋಣಿ ಉಳಿದಿತ್ತು" ಎಂದೂ "ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು" ಎಂದೂ ಬರುವ ಮಾತುಗಳಲ್ಲಿ ಅದರ ಹೊಳಹನ್ನು ಕಾಣಬಹುದು.

ಆಯವನ್ನು ಶೇಖರಿಸುವ, ವ್ಯವಸ್ಥಿತವಾದ ಲೆಕ್ಕವನ್ನಿಡುವ, ಅಧಿಕಾರವರ್ಗವೂ ಇದ್ದಿತು. ಸುಂಕವೆರ್ಗಡೆ, ಪಟ್ಟರಾವುಳದ ಸುಂಕವೆರ್ಗಡೆ, ಠಾಣೆಯ ಅಧಿಷ್ಠಾಯಕ ಎಂಬವರು ಅಂಥವರು. ವಿಜಯನಗರ ಕಾಲದಲ್ಲಿ ಅದು ನಾಲ್ಕು ಬಗೆಯಾಗಿತ್ತು : ಸರ್ಕಾರವೇ ಅಧಿಕಾರಿಗಳನ್ನು ನೇಮಿಸಿ ಅವರಿಂದ ತೆರಿಗೆಯನ್ನು ವಸೂಲಿ ಮಾಡಿಸುವುದು; ಗುತ್ತಿಗೆ ಮಾದರಿಯದು ; ಹಳ್ಳಿಯ ಸಂಘ ಸಂಸ್ಥೆಗಳಿಗೆ ವಸೂಲಿ ಕೆಲಸ ಒಪ್ಪಿಸುವುದು ; ನಾಯಕರ ಪದ್ಧತಿ (ರಾಜನು ರಾಜ್ಯದ ಸ್ವಲ್ಪ ಭಾಗವನ್ನು ಪ್ರಮುಖ ನಾಯಕರಿಗೆ ಬಿಟ್ಟುಕೊಡುವುದು. ಆತನು ಅದಕ್ಕೆ ಪ್ರತಿಯಾಗಿ ಪ್ರತಿವರ್ಷವೂ ನಿಗದಿತ ಹಣವನ್ನು ಬೊಕ್ಕಸಕ್ಕೆ ತುಂಬುವುದು).

ಈಗ ತೆರಿಗೆಗಳ ಒಂದು ಪಟ್ಟಿಯನ್ನು ಅದರ ಪ್ರಚುರತೆಯನ್ನು ತಿಳಿಯಲೆಂದು ಇಲ್ಲಿ ಕೊಡಬಹುದು : ಅಟ್ಟದೆಜಿತ ; ಅಡಕಿಲುವಣ ; ಅಡೆಗಚ್ಚು ; ಅಡ್ಡದೆಜಿತ ; ಅರತೆಜಿತ ; ಅರುವಣ ; ಆಯಿಲದೆಜಿತ ; ಆಳಿವಸತಾಯ ; ಉಟ್ಟ ಸಾಮಂತದೆಜಿತ ; ಊರುಟ್ಟಗೆ ;

ಒಸಗೆ, ಕತ್ತರಿವಣ, ಕನ್ನಡಿವಣ, ಕವಣಾಯ, ಕವರ್ತೆ, ಕಳ್ಳವಳಿಕೆ, ಕಾಣಿಕೆ, ಕಾಱುದೆಱೆ, ಕಿಱುಕುಳ, ಕಿಱುದೆಱೆ, ಕುಮಾರಗದ್ಯಾಣ, ಕುಂಬಱಬಿಟ್ಟಿಕಂ ಕುಱುಂಬದೆಱೆ, ಕುಳಿಯ ಸುಂಕ, ಕೊಟಕ, ಕೊಡತಿವಣ, ಕೊಡವೀಸ, ತಳ, ತಳ ಭಂಡದ ಸುಂಕ, ತಳಱ ಸುಂಕ, ತಿಪ್ಪೆಸುಂಕ, ತುಪ್ಪದೆಱೆ, ತೌದೆ, ದಾಯ, ದಂಡದಾಯ, ದೇವಿದೆಱೆ, ಪನ್ನಾಯ, ಪನ್ನಾಸು, ಅಚ್ಚುಪನ್ನಾಯ, ಪರಿಪು, ಪಾರಣೆ, ಪುಲ್ಲುಬ್ಬಿ, ಪೆರ್ಜುಂಕ, ಪೊಗಪೊಗೆ, ಬಣ್ಣಿಗೆ, ಬಳಂಬೆಯ ತೆಱೆ, ಬಾಲವಣ, ಬಿಟ್ಟಿಬೆಸ, ಬಿರ್ದು, ಬಿಲ್ಕೊಡೆ, ಬೀಯ, ಬೀರವಣ, ಮಗ್ಗದೆಱೆ, ಮದುವೆದೆಱೆ, ಮನೆಕರ, ಮನೆದೆಱೆ, ಮನ್ನೆಯದೆಱೆ, ಮಱವಿಟ್ಟಿ, ಮೇಗಲ್ವಣ, ವಡ್ಡರಾವುಳ, ಸಾದ್ದ, ಸಿದ್ಧಾಯ, ಸುರಂದು, ಸೇಸೆ, ಹಡವಳ, ಹಾರಿಕಾಯಸುಂಕ, ಹಾಲಾವು, ಹೊಲೆದೆಱೆ—ಈ ತೆರಿಗೆಗಳಲ್ಲಿ ಅನೇಕ ಶಬ್ದಗಳ ಅರ್ಥ ಸಂದಿಗ್ಧ; ಭಿನ್ನಾಭಿಪ್ರಾಯಕ್ಕೆ ಎಡೆಯುಂಟು. ತೆರಿಗೆಗಳ ವೈವಿಧ್ಯದ ಪರಿಚಯಕ್ಕೆ ಮಾತ್ರ ಈ ಪಟ್ಟಿ. ವಿಜಯನಗರ, ಬಹಮನಿ, ಮೈಸೂರು, ಬಿಜಾಪುರ, ಗೋಲ್ಕಂಡ, ಕೊಡಗು, ಇಕ್ಕೇರಿ, ಸ್ವಾದಿ, ಯಲಹಂಕ, ಸುರಪುರ, ಕೆಳದಿ ಮೊದಲಾದ ಹಿರಿಕಿರಿಯ ರಾಜ್ಯಗಳ ಅರಸರು; ಚಿತ್ರದುರ್ಗ, ನಿಡುಗಲ್, ತರೀಕೆರೆ, ಗುಮ್ಮನಾಯಕನ ಪಾಳ್ಯ, ಕಳಲೆ; ಉಮ್ಮತ್ತೂರು, ಮಧುಗಿರಿ, ಹೊಸಕೋಟೆ, ಚೆನ್ನಪಟ್ಟಣ, ಹಾಗಲವಾಡಿ, ಹರಪನಹಳ್ಳಿ ಪಾಳೆಯಗಾರರು; ಸಾಳುವರು, ಸಾಂತರರು (ಭೈರರಸರು), ಬಂಗರು, ಚೌಟರು, ಬಿಳಗಿಯ ಒಡೆಯರು, ಗೋವೆಯ ಪೋರ್ಚುಗೀಸರು ಇಂಗ್ಲಿಷರು ಈ ಹಲವರ ಆಳ್ವಿಕೆಯ ಕಾಲದಲ್ಲಿ ಈ ಹೆಸರುಗಳು ಅಷ್ಟಿಷ್ಟು ವ್ಯತ್ಯಾಸ ಹೊಂದಿದವು. ಪಾರಸಿ, ಉರ್ದು, ಪೋರ್ಚುಗೀಸ್, ಇಂಗ್ಲಿಷ್ ಇತ್ಯಾದಿ ಭಾಷೆಗಳ ಅನೇಕ ಪಾರಿಭಾಷಿಕ ಶಬ್ದಗಳು ಆಡಳಿತಕ್ಕೆ ಸಂಬಂಧಿಸಿದವು, ಆ ಸಂಸ್ಕೃತಿಗಳ ಜೊತೆಗೆ ಕನ್ನಡದಲ್ಲಿ ಸೇರಿಕೊಂಡವು, ಕನ್ನಡವಾದವು.

ಆಯ ಆಡಳಿತದ ಹಾಗೂ ಜನಜೀವನದ ಒಂದು ಮುಖವಾದರೆ ವ್ಯಯ ಇನ್ನೊಂದು ಮುಖ. ಅರ್ಥಶಾಸ್ತ್ರ ನೀತಿಶಾಸ್ತ್ರಗಳು ಆಯದ ವಿಧಾನದಂತೆ ವ್ಯಯದ ವಿಧಾನಗಳನ್ನೂ ನಿರ್ಬಂಧಗಳನ್ನೂ ನಿರೂಪಿಸಿವೆ. ಜನರಿಂದ ಪಡೆದ ಸಂಪತ್ತನ್ನು ಸರ್ಕಾರ ಜನಹಿತಕ್ಕಾಗಿಯೇ ಖರ್ಚು ಮಾಡುತ್ತಿತ್ತು. ಎಷ್ಟರಮಟ್ಟಿಗೆ ಎಂಬ ಪ್ರಶ್ನೆಯನ್ನು ಬಿಡಿಸಲು ಸಾಮಗ್ರಿ ಸಾಲದು. ಧಾನ್ಯದ ಷಡ್ಭಾಗ, ಪಣ್ಯದ ದಶಭಾಗ ಮತ್ತು ಹಿರಣ್ಯವನ್ನು ಯಥೇಚ್ಛವಾಗಿ ಸ್ವೀಕರಿಸುತಿದ್ದ ರಾಜರು ಪ್ರತಿಯಾಗಿ ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾಗಿದ್ದುದು ಧರ್ಮವಾಗಿತ್ತು.[91] ಅದರಲ್ಲಿ ಸ್ವಪಕ್ಷ ಹಾಗೂ ಪರಪಕ್ಷಗಳೆರಡರ ಹಿತವೂ ಅಡಗಿತ್ತು. ಆ ಯೋಗಕ್ಷೇಮಸಾಧನೆಯೇ ದಂಡನೀತಿಸ್ಥಾಪನೆ. ಮತ್ತೆ ಆ ರಾಜನು ವಿನೀತನೂ ಸರ್ವಹಿತಾಕಾಂಕ್ಷಿಯೂ ಆಗಿರಬೇಕಿತ್ತು.

ವಿದ್ಯಾ ವಿನೀತೋ ರಾಜಾ ಹಿ ಪ್ರಜಾನಾಂ ವಿನಯೇ ರತಃ
ಅನನ್ಯಾಂ ಪೃಥಿವೀಂ ಭುಙ್ತೇ ಸರ್ವಭೂತಹಿತೇರತಃ ॥[92]

'ಶುಕ್ರನೀತಿಸಾರ'ವು ಈ ವ್ಯಯದ ವಿಷಯಗಳನ್ನು ನಾಲ್ಕು ಪ್ರಧಾನವಾದ ಶೀರ್ಷಿಕೆ

ಗಳಲ್ಲಿ ಸಂಗ್ರಹಿಸಿದೆ: ದಾನಧರ್ಮ, ಸ್ವಂತ ಉಪಯೋಗ, ರಾಜ್ಯಾಡಳಿತ, ಜನಹಿತ. ಇವುಗಳಿಗಾಗಿ ಒಟ್ಟು ಉತ್ಪತ್ತಿಯ ಎಷ್ಟೆಷ್ಟು ಭಾಗವನ್ನು ಪ್ರತ್ಯೇಕ ಪ್ರತ್ಯೇಕವಾಗಿಡ ಬೇಕೆಂಬುದನ್ನು ಅದು ವಿಧಿಸುತ್ತದೆ. ಒಟ್ಟು ಉತ್ಪತ್ತಿಯ ಶೇಕಡ ಎಂಟನ್ನು ದಾನ ಧರ್ಮಕ್ಕಾಗಿ ಶೇಕಡ ಎಂಟನ್ನು ಸ್ವಂತ ಉಪಯೋಗಕ್ಕಾಗಿ ತೆಗೆದುಕೊಳ್ಳಬೇಕು, ಮಿಕ್ಕಿನ ದನ್ನು ಆಡಳಿತ ಹಾಗೂ ಜನಹಿತಕ್ಕಾಗಿ ಬಳಸಬೇಕು—ಎಂದು ಆಶಯ.[93] ರಸ್ತೆ ನಿರ್ಮಾಣ, ಶಿಕ್ಷಣ, ಆರೋಗ್ಯ, ಸಾರ್ವಜನಿಕ ಹಿತಕಾರ್ಯಗಳಾದ ಕೆರೆಕಟ್ಟೆಗಳ ನಿರ್ಮಾಣ—ಇವುಗಳ ಮೂಲಕ ಜನಹಿತಕಾರ್ಯ ಆಗುತ್ತಿತ್ತು. ದೇವಾಲಯ ನಿರ್ಮಾಣ, ದಾನ ಶಿಕ್ಷಣಗಳಿಗೆ ತಳಹದಿಯಾಗಿ ರಾಜನಿಗೂ ಪ್ರಜೆಗಳಿಗೂ ಪುರುಷಾರ್ಥ ಲಾಭಕ್ಕೆ ಕಾರಣವಾಗಿತ್ತು. ರಾಜರು, ಆಡಳಿತಗಾರರು, ಮಹಾಜನರು, ಶ್ರೀಮಂತರು, ಅನುಕೂಲಸ್ಥರು ಈ ಕಾರ್ಯವನ್ನು ಬಹು ಶ್ರದ್ಧೆಯಿಂದ ಮಾಡುತ್ತಿದ್ದರು. ಆದರೆ ಎಲ್ಲ ರಾಜರೂ ಕಟ್ಟುನಿಟ್ಟಾಗಿ ಈ ನಿಯಮಗಳನ್ನೇ ಪಾಲಿಸುತ್ತಿದ್ದರೆಂದು ಹೇಳಲು ಬರುವುದಿಲ್ಲ. ರಾಜ್ಯಾದಾಯದಲ್ಲಿ ವಿಶೇಷ ಭಾಗ ರಕ್ಷಣೆಗಾಗಿ ಖರ್ಚಾಗುತ್ತಿತ್ತು. ಕೋಟೆ, ಸೈನ್ಯ, ಆಯುಧಸಂಗ್ರಹ ಇತ್ಯಾದಿಗಳಿಗೆ ವಿಪುಲ ಖರ್ಚಾಗುತ್ತಿದ್ದಿತು. ಮಾರ್ಗಗಳ ನಿರ್ಮಾಣ, ಔಷಧಿಗಳ ಸಂಗ್ರಹ, ಮನುಷ್ಯ ಚಿಕಿತ್ಸೆ, ಪಶು ಚಿಕಿತ್ಸೆ ಇತ್ಯಾದಿಗಳು ಅಶೋಕನ ಶಾಸನ ಗಳಿಂದ ಜನಹಿತಕ್ಕಾಗಿ ನಡೆದುದು ಬೆಳೆದು ಬಂದಿದೆ. ಸಾಹಿತ್ಯ, ಶಿಲ್ಪಕಲೆ, ವಾಸ್ತು ವಿದ್ಯೆ ಒಟ್ಟಾರೆ ಎಲ್ಲ ಕಲೆಗಳ ಬಳ್ಳಿಗಳೂ ರಾಜಾಶ್ರಯವನ್ನು ನೆಮ್ಮಿಕೊಂಡು ಬೆಳೆದುವು. ಕವಿಗಳೂ ಕಲಾವಿದರೂ ತಮ್ಮ ಆಶ್ರಯದಾತೃವಿನ ಕೀರ್ತಿಸ್ತಂಭವನ್ನು ತಮ್ಮ ಕೃತಿಗಳ ಮೂಲಕ ನಿಲ್ಲಿಸಿದರು. ಕೃತಿಕಾರ ಹಾಗೂ ಅವನ ವಂಶಪಾರಂಪರ್ಯದವರು ಸುಖವಾಗಿ ಬದುಕುವಂತೆ ಈತನಾದರೂ ಉಂಬಳಿ ಹಾಕಿಸಿದನು :

ಖ್ಯಾತಾ ನರಾಧಿಪತಯಃ ಕವಿಸಂಶ್ರಯೇಣ
ರಾಜಾಶ್ರಯೇಣ ಚ ಗತಾಃ ಕವಯಃ ಪ್ರಸಿದ್ಧಿಂ
ರಾಜ್ಞಾ ಸಮೋಽಸ್ತಿ ನ ಕವೇಃ ಪರಮೋಪಕಾರೀ
ರಾಜ್ಞೋ ನ ಚಾಸ್ತಿ ಕವಿನಾ ಸದೃಶಃ ಸಹಾಯಃ ॥

"ಕವಿಗಳನ್ನಾಶ್ರಯಿಸಿ ರಾಜರು ಖ್ಯಾತಿಹೊಂದಿದರು ; ರಾಜರನ್ನಾಶ್ರಯಿಸಿ ಕವಿಗಳು ಪ್ರಸಿದ್ಧರಾದರು. ರಾಜನಂಥ ಪರಮೋಪಕಾರಿ ಕವಿಗೆ ಬೇರೆ ಇಲ್ಲ : ರಾಜನಿಗೂ ಕವಿ ಯಂಥ ಸಹಾಯಕ ಬೇರೆ ಇಲ್ಲ."[94] ರವಿಕೀರ್ತಿ, ಪಂಪ, ಪೊನ್ನ, ರನ್ನ, ನಾಗವರ್ಮ, ಜನ್ನ, ನೇಮಿಚಂದ್ರ, ರುದ್ರಭಟ್ಟ, ಕುಮಾರವ್ಯಾಸ, ಕುಮಾರವಾಲ್ಮೀಕಿ, ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಹೊನ್ನಮ್ಮ ಮುಂತಾದ ಅನೇಕ ಕವಿಗಳು ಚಾಲುಕ್ಯ, ರಾಷ್ಟ್ರಕೂಟ, ಗಂಗ, ಯಾದವ, ಹೊಯ್ಸಳ, ವಿಜಯನಗರ, ಮೈಸೂರು ದೊರೆಗಳ ಹಾಗೂ ಅನೇಕ ಸಾಮಂತರ, ಪ್ರಧಾನರ ಆಸ್ಥಾನಗಳಲ್ಲಿ ಆಶ್ರಯಪಡೆದು ಅಂದಂದಿನ ಸಂಸ್ಕೃತಿಯ ಕೆಲವು ಚಿತ್ರಗಳನ್ನು ಉಳಿಸಿಕೊಟ್ಟಿದ್ದಾರೆ. ರೂವಾರಿಗಳು ಅಜಂತ, ಎಲ್ಲೋರ, ಎಲಿಫೆಂಟಾ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಇಟ್ಟಗಿ, ಕುಕ್ಕನೂರು, ನಂದಿ,

ಶ್ರವಣಬೆಳ್ಗೊಳ, ಬಳ್ಳಿಗಾವಿ, ಬೇಲೂರು, ಹಳೆಯಬೀಡು, ದೊಡ್ಡಗದ್ದವಳ್ಳಿ, ಸೋಮನಾಥಪುರ, ತಿರುಪತಿ, ಬಿಜಾಪುರ, ಕಲ್ಬುರ್ಗಿ, ಬೀದರ್, ಶ್ರೀರಂಗಪಟ್ಟಣ ಮುಂತಾದ ಅನೇಕ ಸ್ಥಳಗಳಲ್ಲಿ ಕಲಾಕೃತಿಗಳನ್ನು ರೂಪಿಸಿ ಹೋಗಿದ್ದಾರೆ.

ಸಂಸಾರದಲ್ಲಿ ಸಾರವಾದದ್ದು ಎಂದರೆ ಧರ್ಮ. "ಸಂಸಾರದೊಳ್ಸಾರಮಪ್ಪುದಱಿಂ ಧರ್ಮಮ್" ಎಂಬುದು ಪಂಪನ ಮಾತು. ಧರ್ಮ ಶಬ್ದದ ಅರ್ಥವ್ಯಾಪ್ತಿ ದೊಡ್ಡದು. ಕನ್ನಡನಾಡು ತನ್ನ ಜೀವನದ ಎಲ್ಲ ಮುಖಗಳಲ್ಲಿಯೂ ಎಲ್ಲ ಕಾಲದಲ್ಲಿಯೂ ಧರ್ಮವನ್ನು ಬದುಕಿನ ಅಂಗವಾಗಿ ಅಳವಡಿಸಿಕೊಂಡಿತು. ಪ್ರಾಚೀನ ಕಾಲದಲ್ಲಿ ಒಂದೊಂದು ದೇವಸ್ಥಾನವೂ ಅದರ ಸುತ್ತಮುತ್ತಲಿನ ಜನತೆಯ ಜೀವನವನ್ನು ತುಂಬಿಕೊಂಡ ಸಾಂಸ್ಕೃತಿಕ ಸಂಸ್ಥೆಯಾಗಿತ್ತು. ಈಗ ಅವುಗಳ ಪ್ರಾಮುಖ್ಯ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಕ್ಷೀಣಿಸಿವೆ. ಕ್ರಿ.ಶ.ದ ಆರಂಭದಲ್ಲಿ ಹಾಗೂ ತತ್ಪೂರ್ವದಲ್ಲಿ ಕಟ್ಟಿರಬಹುದಾದ ದೇವಸ್ಥಾನಗಳು ನಾಡಿನಲ್ಲಿ ಇದುವರೆಗೆ ಉಳಿದುಬಂದಿಲ್ಲ. ದೇವಸ್ಥಾನಗಳನ್ನು ಕಟ್ಟುವುದು ಅಶೋಕನ ತರುವಾಯದ ಸಂಪ್ರದಾಯವೆನ್ನುತ್ತಾರೆ ಕೆಲವರು.[95] ಅವರ ಪ್ರಕಾರ ಬೌದ್ಧ ವಿಹಾರಗಳೇ ದೇವಸ್ಥಾನದ ನಿರ್ಮಾಣಕ್ಕೆ ಮಾದರಿಗಳು. ಶ್ರೌತಯಜ್ಞಗಳ ಸ್ಥಾನದಲ್ಲಿ ಅವು ಕಾಣಿಸಿಕೊಂಡುವು. ಸಾತಕರ್ಣಿಯೇ ಮೊದಲಾದವರು ಪ್ರಣವೇಶ್ವರ ಸ್ವಾಮಿಯನ್ನು ಪೂಜಿಸಿವರೆಂದು ತಾಳಗುಂದದಲ್ಲಿಯ ಕ್ರಿ.ಶ. ಸು. ೪-೫ನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ[96]. ಇನ್ನೊಂದು ಶಾಸನದ ಪ್ರಕಾರ ಕ್ರಿ.ಶ. ೨ನೆಯ ಶತಮಾನದಲ್ಲಿ ಮಟ್ಟಪಟ್ಟಿ ಅಥವಾ ಮಳ್ಳಪಳ್ಳಿ ದೇವರಿಗೆ ದತ್ತಿಬಿಟ್ಟ ವಿಷಯ ಉಲ್ಲೇಖಗೊಂಡಿದೆ.[97] ಜೊತೆಗೆ ಪುರಾತತ್ತ್ವಜ್ಞರು ಐಹೊಳೆ ಮತ್ತು ಪಟ್ಟದಕಲ್ಲು ಇವು ಸಾತವಾಹನರ ಕಾಲದಲ್ಲೇ ದೇವಾಲಯಗಳ ಕೇಂದ್ರಗಳಾಗಿದ್ದುವೆಂದು ಗುರುತಿಸಿದ್ದಾರೆ.[98] ಈಗಿರುವ ದೇವಸ್ಥಾನಗಳಲ್ಲಿ ತಾಳಗುಂದದ ಪ್ರಣವೇಶ್ವರ ದೇವಾಲಯವೇ ಪ್ರಾಯಃ ಅತಿಪುರಾತನ. ಅದು ವಿವಿಧ ಬಗೆಯ ಹೋಮ ನಿಯಮಗಳ ದೀಕ್ಷೆಹೊಂದಿದ ಬ್ರಾಹ್ಮಣರಿಂದ, ಸ್ನಾತಕರಿಂದ, ಮಂತ್ರಘೋಷದಿಂದ ತುಂಬಿತ್ತು.[99] ಆ ದೇವಾಲಯ ರಾಜರ ಪ್ರಜೆಗಳ ಶ್ರೇಯಸ್ಸಿಗೆ ಎಂಬುದು ಅಲ್ಲಿ ಸ್ಪಷ್ಟವೇ ಇದೆ. ಆ ಕಾಲದ ಜನತೆಯ ಆದರ್ಶ, ನ್ಯಾಯದಿಂದ ಸಂಪಾದನೆ, ಅದರ ಸದ್ವಿನಿಯೋಗ ಮತ್ತು ದೇವಸ್ಥಾನ ನಿರ್ಮಾಣದಿಂದ ವ್ಯಕ್ತಿಗೆ ಈಶ್ವರನಲ್ಲಿ ಐಕ್ಯವು ಉಂಟಾಗುತ್ತದೆಂಬ ಭಾವನೆ ಇದ್ದಿರಬಹುದು. ಪ್ರಾಯಃ ಆ ಕಾರಣದಿಂದಲೇ ಆಯಾ ದೇವಸ್ಥಾನದ ಈಶ್ವರನಿಗೆ ಕಟ್ಟಿಸಿದವನ ಹೆಸರು ಸೇರುತ್ತಿದ್ದಿರಬಹುದು: ಭೀಮೇಶ್ವರ, ರಾಜರಾಜೇಶ್ವರ, ನೊಳಂಬೇಶ್ವರ, ಸಿಡಿಲೇಶ್ವರ, ಕೊಂಬೇಶ್ವರ, ಬಜ್ಜೇಶ್ವರ, ಮಂಕೇಶ್ವರ, ಮಲ್ಲೇಶ್ವರ, ಒಕ್ಕೇಶ್ವರ, ಚಾಮರಾಜೇಶ್ವರ —ಇತ್ಯಾದಿ. ಇದು ದೇವಸ್ಥಾನಗಳನ್ನು ಕಟ್ಟಿಸುವಲ್ಲಿ ಒಂದು ಕಾರಣವೆಂದು ಮಾತ್ರ ಭಾವಿಸಬೇಕು. ಜೈನರು ಹೀಗೆಯೇ ಶ್ರೀವಿಜಯ ಜಿನಾಲಯ, ಶಂಖ ಜಿನಾಲಯ, ಬದ್ದೆಗ ಜಿನಾಲಯ, ಚಾಮುಂಡರಾಯ ಬಸದಿ, ಶಾಂತೀಶ್ವರ ಬಸದಿ ಮುಂತಾಗಿ ಕರೆದ ಜಿನಬಸದಿಗಳನ್ನು ಕಟ್ಟಿಸಿದುದುಂಟು. ಕೇವಲ ಸ್ಮಾರಕ ಸಂದರ್ಭದಲ್ಲೇ ದೇವಾಲಯಗಳನ್ನು ನಿರ್ಮಿ

ಸುತ್ತಿದ್ದರಿಂದಲ್ಲ; ಧರ್ಮಕ್ಕಾಗಿಯೂ ದೇವಾಲಯಗಳ ನಿರ್ಮಾಣವಾಗುತ್ತಿತ್ತು. ಈ ನಿದರ್ಶನ ಆ ತೆರನಾದ್ದು :

ಪೆರ್ಮಂ ಬಡೆದು ಮಡಗಿದೊ
ಡೊರ್ಮೆಯೆ ತಾಂ ಕಿಡುಗುಮೆಂದು ರೇವುಗಮಂಡಂ
ಧರ್ಮಕ್ಕೆ ತವಿಸಿ ಧನಮಂ
ನಿರ್ಮಿಸಿದಂ ಶಿವಗೃಹಂಗಳಂ ಮುದದಿಂದಂ ॥[100]

ಸಂಪಾದಿಸಿದ ಧನ ಕಳ್ಳರಿಂದ, ಜ್ಞಾತಿಗಳಿಂದ, ನೀಚರಿಂದ, ಭೂಪರಿಂದ, ಕೊಚ್ಚಿನಿಂದ ಕೆಟ್ಟುಹೋಗುತ್ತದೆ. ಕೆಡದ ಸದ್ಗತಿಯೆಂದರೆ ದೇವಸ್ಥಾನದ ನಿರ್ಮಾಣ.[101] ಆದುದರಿಂದ ಅದನ್ನು ಮಾಡಿಸಲು ಉದ್ಯುಕ್ತರಾಗುತ್ತಿದ್ದರು. "ವಸುಧೆಗಾಕಲ್ಪಾಂತಮೆಂಬಂತು ಮಾಡಿಸಿದಂ ಜೈನಗೃಹಂಗಳಂ ಪಲವುಮಂ ಸಂಸಾರಸಾರೋದಯಂ" ಎಂಬ ಪಂಪನ ಮಾತು ಭರತನ ಧರ್ಮಕಾರ್ಯವನ್ನು ಕುರಿತಿದ್ದು.

ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು. ಅಲ್ಲಿ ದೇವಕಾರ್ಯ ಯಾವಾಗಲೂ ನಡೆಯಬೇಕು ಎಂಬುದು ಆ ಜನದ ಅಪೇಕ್ಷೆಯಾಗಿತ್ತು. ಮುಂಬರುವ ಕಾಣಿಕೆಗಳನ್ನು ಅವಲಂಬಿಸದೆ, ಕಟ್ಟಿಸಿದ ಕಾಲದಲ್ಲಿಯೇ ದಾತೃವು ಸಾಕಷ್ಟು ದತ್ತಿಗಳನ್ನು ಬಿಡುತ್ತಿದ್ದ. ಒಮ್ಮೊಮ್ಮೆ ಒಬ್ಬ ದೇವಸ್ಥಾನವನ್ನು ನಿರ್ಮಿಸುತ್ತಿದ್ದ ; ಹತ್ತಾರು ಜನ, ಹಲವಾರು ದತ್ತಿ ಬಿಡುತ್ತಿದ್ದರು. ಅನಂತರವೂ ಭಕ್ತಾದಿಗಳು ಯಥಾಶಕ್ತಿ ದಾನಗಳನ್ನು ನೀಡುತ್ತಲೇ ಇರುತ್ತಿದ್ದರು. ದೇವಭೋಗ ಹೀಗೆ ಬೆಳೆದುಕೊಂಡು ಹೋಗುತ್ತಿತ್ತು. ಹಬ್ಬ ಹರಿದಿನ ಜಾತ್ರೆ ಉತ್ಸವ ಸಮಾರಂಭಗಳಲ್ಲಿ ವಿಶೇಷ ಕಾಣಿಕೆಗಳೂ ಸೇರುತ್ತಿದ್ದುವು. ಪರಿಸರದಲ್ಲಿ ವ್ಯಾಪಾರ ವ್ಯವಹಾರ ನಡಸಿಕೊಂಡು ಹೋಗುತ್ತಿದ್ದವರು ತೆರಿಗೆಗಳನ್ನು ಕೊಡುತ್ತಿದ್ದರು. ಅದು ದೇವರ ಅಂಗಭೋಗ ರಂಗಭೋಗಗಳಲ್ಲಿ ಸೇರುತ್ತಿತ್ತು.

ದಾನದತ್ತಿಗಳನ್ನು ಕೊಡುವ ಕಾಲಕ್ಕೆ ಯಾವ ಯಾವ ಕಾರ್ಯಗಳಿಗೆ ಅದು ವಿನಿಯೋಗವಾಗಬೇಕು ಎಂಬುದನ್ನು ಸಹ ಶಾಸನಗಳಲ್ಲಿ ವಿವರವಾಗಿ ಸೂಚಿಸುತ್ತಿದ್ದರು. ಮಾದರಿಗೆ ಎರಡು ಉಲ್ಲೇಖಗಳು : (1) ಶ್ರೀಮನ್ಮಹಾಪ್ರಧಾನ ಹೇರಿ ಲಾಳ ಸಂಧಿವಿಗ್ರಹಿ ದಂಡನಾಯಕಂ ರವಿಯಣಭಟ್ಟಂ ಬಿನ್ನಪದಿಂ ಅವರ್ ಮಾಡಿಸಿದ ಏವೂರ ಶ್ರೀ ಸ್ವಯಂಭೂ ದೇವರ್ಗೆ ಗಂಧ ಧೂಪ ದೀಪ ನೈವೇದ್ಯಾದ್ಯರ್ಚನಕ್ಕಮ್ ಖಂಡ ಸ್ಫುಟಿತ ಜೀರ್ಣೋದ್ಧಾರ ನವಸುಧಾ ಕರ್ಮಕ್ಕಂ ಪಾವುಳ ವರ್ಗಕ್ಕಮ್ ಓದುವ ಕೇಳುವ ವಿದ್ಯಾರ್ಥಿ ತಪೋಧನರ ಛಾತ್ರರ ಅಸನಾಚ್ಛಾದನಕ್ಕಮ್ ಅವರ್ಗೆ ವಖ್ಖಾಣಿಸುವ ಭಟ್ಟರ್ಗಮ್ ಚೈತ್ರ ಪವಿತ್ರಾಭ್ಯಾಗತಾದಿ ಪೂಜೆಗಳಿಗಮ್ ಸಂಕ್ರಾಂತಿ ಗ್ರಹಣಾದಿ ಪರ್ವ ಹೋಮ ಬಲಿ ಕ್ರಿಯಾದಿಗಳ್ಗಮ್ ಬ್ರಾಹ್ಮಣಾದಿ ದೀನಾನಾಥ ಸಂತರ್ಪಣಕ್ಕಮ್ ....[102] (2) "ಧೂಪ ದೀಪ ಗಂಧ ನೈವೇದ್ಯ ಗೀತ ನೃತ್ಯೋಪಹಾರ ಖಂಡಸ್ಫುಟಿತ ಜೀರ್ಣೋದ್ಧಾರಾದಿ ಯತಿನಾಮ್ ವಿದ್ಯಾರ್ಥಿನಾಮ್ ಚ ಸತ್ರ ನಿಮಿತ್ತಂ"[103].

ಇನ್ನು ದೇವಸ್ಥಾನಗಳನ್ನು ಅನುಕೂಲವಂತರು ಕಟ್ಟಿಸುತ್ತಿದ್ದರು. ಕುಂಬಾರರು ಅಡಿಗೆಯವರು ಭಿಕ್ಷುಕ ವೃತ್ತಿಯ ಜನ ದೇವಾಲಯಗಳನ್ನು ಕಟ್ಟಿಸಿದುದುಂಟು. ಆ ಕಾಲದ ಈ ಪ್ರವೃತ್ತಿಯನ್ನು ಬಸವಣ್ಣನವರ ಒಂದು ವಚನ ಚೆನ್ನಾಗಿ ಪ್ರತಿಬಿಂಬಿಸುತ್ತದೆ: "ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡುವೆ ಬಡವನಯ್ಯಾ ಎನ್ನ ಕಾಲೇ ಕಂಬ ದೇಹವೇ ದೇಗುಲ ಶಿರವೇ ಹೊನ್ನ ಕಳಶವಯ್ಯ ಕೂಡಲಸಂಗಮದೇವಯ್ಯ ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ."[104]

ದೇವಾಲಯದ ದೇವತಾಕಾರ್ಯಗಳು ಸಾಂಗವಾಗಿ ನಡೆಯಲು, ದತ್ತಿಗಳು ಸಾರ್ಥೋದ್ಧಾರವಾಗಿ ನಡೆಯಲು ಧರ್ಮದರ್ಶಿಗಳನ್ನು ಆರಿಸಿ ಅವರಿಗೆ ಅದರ ಹೊಣೆ ಹೊರಿಸುತ್ತಿದ್ದರು. ರಾಜ ಅಧಿಕಾರಿ ಊರ ಗಾವುಂಡ ಹೀಗೆ ಇಡೀ ಊರಿಗೇ ಅದರ ಜವಾಬ್ದಾರಿಯಿತ್ತು. ಕೋಶದಲ್ಲಿ ಹಣವಿದ್ದರೆ ಅದನ್ನು ಬಡ್ಡಿಗೆ ಸಾಲವಾಗಿ ಕೊಟ್ಟು, ಬಂದ ಬಡ್ಡಿಯನ್ನು ಸರಿಯಾಗಿ ವಿನಿಯೋಗಿಸಬೇಕಾಗಿತ್ತು. ಹಾಗೆ ಮಾಡುತ್ತಿದ್ದ ಉದಾಹರಣೆಗಳು ಎಷ್ಟೋ ಇವೆ.

ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥

ಮುಂತಾದುವು ಶಾಸನದಲ್ಲಿ ಮೇಲಿಂದ ಮೇಲೆ ಕಾಣಿಸಿಕೊಳ್ಳುವ ಫಲ ಶ್ರುತಿ. ಪ್ರತಿಯೊಂದು ದೊಡ್ಡ ದೇವಾಲಯವೂ ಪೂಜಾರಿ, ಜ್ಯೋತಿಶ್ಶಾಸ್ತ್ರಜ್ಞ, ಮಾಲೆಕಾರ, ತೋಟದ ಕಾವಲುಗಾರ, ಗಾಯಕರು, ನರ್ತಕರು, ವಾದ್ಯವಾದಕರು, ಬಾಣಸಿಗರು, ಶಿಲ್ಪಿಗಳು, ಅಂಗಜಾವದ ಕಾಹಿನವರು, ಪಲ್ಲಕ್ಕಿ ಧ್ವಜ ಇತ್ಯಾದಿಗಳನ್ನು ಹೊರುವವರು —ಹೀಗೆ ಆಡಳಿತ ವರ್ಗವನ್ನೂ ಹೊಂದಿರುತ್ತಿತ್ತು.

ಪ್ರಾಚೀನ ಕಾಲದಲ್ಲಿ ದೇವಸ್ಥಾನಗಳು, ಮಠಗಳು ಇವು ಕನ್ನಡ ನಾಡಿನಲ್ಲಿ ಒಂದು ಸಂಸ್ಥೆಯ ಅಂಗವಾಗಿ ಬೆಳೆದುಕೊಂಡು ಬಂದುವು. ಆದರೆ ಕ್ರಿ.ಶ.ಸು. ೧೨ನೆಯ ಶತಮಾನ ದಿಂದೀಚೆಗೆ ಮಠಗಳು ದೇವಾಲಯಗಳಿಂದ ಸ್ವಲ್ಪ ದೂರ ಆದುವು. ದೇವಾಲಯಗಳಲ್ಲಿ ಕೇವಲ ದೇವತಾರ್ಚನೆ ನಡೆಯುವುದು ಮತ್ತು ಮಠಗಳು ಕೇವಲ ಧರ್ಮಪ್ರಚಾರವನ್ನು ಮಾಡುವುದು—ಈ ಉದ್ದೇಶಗಳನ್ನು ಮುಂದಿಟ್ಟುಕೊಂಡು ಅವು ಕಾರ್ಯನಿರತವಾದವು. ಇದಕ್ಕೆ ಕಾರಣ ಪ್ರಾಯಃ ವೀರಶೈವಧರ್ಮದ ಚಳವಳಿ ಇರಬಹುದು. ಬ್ರಾಹ್ಮಣರಲ್ಲಿ ಸ್ಥಿರಮಠಗಳೂ ಚರಮಠಗಳೂ ಜನ್ಮವೆತ್ತಿದ್ದು ಶ್ರೀಮನ್ಮಧ್ವಾಚಾರ್ಯರ ಕಾಲದಲ್ಲಿ. ಪ್ರಾಚೀನಕಾಲದಲ್ಲಿ ದೇವಾಲಯಗಳಲ್ಲಿ ಯತಿಗಳೂ ತಪೋಧನರೂ ನೆಲಸಿ ನಿಲ್ಲುತ್ತಿದ್ದರಾದ್ದರಿಂದ ಅವು ಮಠಗಳೂ ಆಗಿ ಪರಿಗಣಿತವಾಗಿದ್ದವು. ಅಲ್ಲಿ ಅವರು ವಿದ್ಯಾದಾನವನ್ನು ಮಾಡುತ್ತಿದ್ದುದರಿಂದ ಅವು ವಿದ್ಯಾಕೇಂದ್ರಗಳಾಗಿಯೂ ಘಟಿಕಾಸ್ಥಾನಗಳಾಗಿಯೂ ಮೆರೆದವು. ಸಾಲೊಟಗಿ, ನಾಗಾಯಿ, ಬಳ್ಳಿಗಾವಿ ಇವು ತುಂಬಾ ಖ್ಯಾತಿಯನ್ನು ಪಡೆದ ವಿದ್ಯಾಕೇಂದ್ರಗಳಾಗಿದ್ದವು.[105] ೯–೧೨ನೆಯ ಶತಮಾನಗಳಲ್ಲಿ ಇದ್ದ ನೂರಾರು ವಿದ್ಯಾಕೇಂದ್ರಗಳ ಚಿತ್ರವನ್ನು ಕಲ್ಪಿಸಿಕೊಡುವ ಮಾದರಿಗಳು ಅವು. ದಾನಧರ್ಮಗಳ ಮೂಲಕ

ದೇವಸ್ಥಾನ, ಮಠ ಮುಂತಾದವುಗಳಲ್ಲಿ ಶಾಸ್ತ್ರೇತ್ಯಾದಿಗಳ ಅಧ್ಯಯನ ನಡೆಯುತ್ತಿತ್ತು. ಆ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲು ಭೂಮಿ, ಕೆರೆ, ಬಾವಿ ಮುಂತಾದವುಗಳ ದಾನ 'ತಳವೃತ್ತಿ.'[106] ಇವೆಲ್ಲಕ್ಕೂ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ರಾಜನ ಸಂಬಂಧವಿರುತ್ತಿತ್ತು.

ಸ್ವಂತ ಉಪಯೋಗಕ್ಕಾಗಿ ರಾಜರು ಸಾಕಷ್ಟು ಹಣವನ್ನು ವ್ಯಯಿಸುತ್ತಿದ್ದರು. ಇದರ ವಿಶೇಷ ವಿವರ ನಮಗೆ ದೊರೆಯದು. ಸ್ವಂತದ ಖರ್ಚಿನ ವಿಷಯಗಳನ್ನು ಲೌಕಿಕ ವ್ಯವಹಾರ ನಡಸುವ ಯಾರು ತಾನೆ ಬಿಟ್ಟುಕೊಡುತ್ತಾರೆ? ರಾಜನ ಪರಿವಾರವೇನು ಸಣ್ಣದಾಗಿರುತ್ತಿರಲಿಲ್ಲ. ಹಲವು ರಾಣಿಯರಿದ್ದಾಗ ಎಷ್ಟೋ ಸಲ ರಾಜ್ಯದ ಭಾಗಗಳಲ್ಲಿ ಅವರನ್ನು ಅಲ್ಲಲ್ಲಿ ಇರುವಂತೆ ಮಾಡಿ, ಅಲ್ಲಿನ ಆದಾಯದ ಅಧಿಕಾರಿಗಳನ್ನಾಗಿ ಮಾಡಿ, ಆ ಭಾಗಗಳನ್ನು ಆಳುವಲ್ಲಿ ಸುಲಭವಾಗುವಂತೆ ನೋಡಿಕೊಳ್ಳುತ್ತಿದ್ದುದಕ್ಕೆ ಉದಾಹರಣೆಗಳಿವೆ. ೬ನೆಯ ವಿಕ್ರಮಾದಿತ್ಯನ ಹಲವು ರಾಣಿಯರು ಭಿನ್ನ ಭಿನ್ನ ಪ್ರಾಂತಗಳಲ್ಲಿ ಒಡತಿಯರಾಗಿ ಆಳುತ್ತಿದ್ದರು. ಜಾಕಲದೇವಿ ಅರಲ್ಖಾನೂಜರಲ್ಲಿನ ಇಂಗಣಿಗೆಯನ್ನು ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳುತ್ತಿದ್ದಳು.[107] ರಾಜಕುಮಾರರು ಪ್ರಾಂತಗಳ ಅಧಿಕಾರಿಗಳಾಗಿ ಕಾರ್ಯ ನಡಸುತ್ತಿದ್ದಾಗ ಅವರ ಖರ್ಚು ಇತ್ಯಾದಿಗಳೂ ಬೇರೆಯೇ ಇರುತ್ತಿರಬೇಕು. ಒಬ್ಬೊಬ್ಬರಿಗೂ ಬೇರೆ ಬೇರೆ ಮನೆವೆರ್ಗಡೆಗಳೂ ಇರುತ್ತಿದ್ದರು. ಅವರೆಲ್ಲರಿಗೂ ಆದಾಯದ ಭಾಗವನ್ನೋ ಭೂಮಾನ್ಯಗಳನ್ನೋ ಕೊಡಲಾಗುತ್ತಿತ್ತು. ಮಾಂಡಲಿಕರಿಗೆ, ಮನ್ನೆಯರಿಗೆ, ಮನೆವೆಗ್ಗಡೆಗಳಿಗೆ, ಭಂಡಾರಿಗಳಿಗೆ—ಎಲ್ಲ ಅಧಿಕಾರಿಗಳಿಗೂ ಅವರವರ ಪಾಲಿನ 'ಅರುವಣ' ಇರುತ್ತಿದ್ದಿರಬಹುದು: ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮಕಾಲದ ೨೭ನೆಯ ನನ್ದನ ಸಂವತ್ಸರದ ಫಾಲ್ಗುಣ ಬಹುಳ ೨೦ ಯಲು ಸೂರ್ಯಗ್ರಹಣನಿಮಿತ್ತವಾಗಿ ಶ್ರೀಸರ್ಬೇಶ್ವರ ದೇವರ್ಗೆ ಶ್ರೀಮತು ರೆಬ್ಬಲದೇವಿಯರು ತಮ್ಮ ಮನೆಯ ಸಾಮ್ಯದರು ವಣಮಂ ಬಿಟ್ಟ ಶಾಸನ ..."[108] ೬ನೆಯ ವಿಕ್ರಮಾದಿತ್ಯನ ಹೆಂಡತಿ ಮಲ್ಲಣಿ ದೇವಿಗೆ, ಆಕೆಯ ಮನೆಯಲ್ಲಿಯೆ ನಾಗವರ್ಮನೆಂಬ ಮಾಣಿಕ ಭಣ್ಡಾರಿ ಇದ್ದುದಾಗಿ ಒಂದು ಶಾಸನದಲ್ಲಿ ಉಲ್ಲೇಖವಿದೆ[109]. ರಾಜ್ಯದ ಆಯವ್ಯಯಗಳ ಲೆಖ್ಖವನ್ನಿಡುವ ಭಂಡಾರಿಗಳು ಇದ್ದುದು ಹರಿಹರ ಕವಿಯ 'ಬಸವರಾಜದೇವರ ರಗಳೆ'ಯಲ್ಲಿ ಸುಂದರವಾಗಿ ಬಂದಿದೆ. ಮಾಂಡಲಿಕರು ರಾಜನಿಗೆ ಸಿದ್ಧಾಯವನ್ನು ಸಲ್ಲಿಸುವ ಕಾಲಕ್ಕೆ ಮಂತ್ರಿ, ಪುರೋಹಿತ ರಾಜಪತ್ನಿ ಮುಂತಾದವರಿಗೆ ಕೂಡ ದ್ರವ್ಯವನ್ನು ಸಲ್ಲಿಸುತ್ತಿದ್ದರೆಂದು 'ಜೈಮಿನಿ ಭಾರತ' ದಿಂದ ವ್ಯಕ್ತವಾಗುತ್ತದೆ. ರಾಜನಿಗೆ ಅರ್ಪಿಸಿದ ದ್ರವ್ಯದ ೧/೧೦ ಭಾಗ ಮಂತ್ರಿಗೆ ಸಂದಾಯವಾಗುತ್ತಿತ್ತೆಂದೂ ಅಲ್ಲಿ ವಿವರಿಸಿದೆ.[110]

ಪ್ರಾಚೀನ ಕರ್ಣಾಟಕ ಶೌರ್ಯಧೈರ್ಯಾದಿಗಳಿಗೆ ಹೆಸರಾದ ನೆಲ. ಕನ್ನಡಿಗರು ಸಕಲೋತ್ತರಾ ಪಥವನ್ನು ಗೆದ್ದವರು;[111] ಹಿಮಗಿರಿಯ ಶೃಂಗದಿಂದ ರಾಮೇಶ್ವರದ ಸಾಗರದ ತರಂಗಗಳವರೆಗೆ ಸೈನ್ಯವನ್ನು ಕಟ್ಟಿಕೊಂಡು ಜೈತ್ರಯಾತ್ರೆ ಮಾಡಿದವರು; ಅದರ ನೆನಪಿಗೆ ಅಲ್ಲಲ್ಲಿ ಕೀರ್ತಿಸ್ತಂಭಗಳನ್ನೂ ಶಿಲಾಶಾಸನಗಳನ್ನೂ ಹಾಕಿಸಿದವರು; ಗಂಗೆ

ಯಮುನೆಯರಲ್ಲಿ ಕರಿಘಟೆಗಳನ್ನು ಇಳಿಸಿ, ತುರಂಗಗಳನ್ನು ಮೀಯಿಸಿ, ಭುಜವಿಜಯಗರ್ವ ಮೆರೆದವರು.[112] ಕರ್ನಾಟಕದ ಬಲವೆಂದರೆ ಸ್ವಪ್ನದಲ್ಲಿಯೂ ಹೆದರುತ್ತಿದ್ದರು ಕನೋಜ ಭಾಗದ ಜನರು, ಉತ್ತರಾಪಥದ ಗೂರ್ಜರ ಪ್ರತಿಹಾರರು, ಅವರ ಸಾಮಂತರು. ಆ ಅಜೇಯ ಬಲವನ್ನು ಕಂಡೇ ರಾಜಶೇಖರನು "ಸಮರ ಕರ್ಮಣಿ ನಿಸರ್ಗೋದ್ಭಟಾಃ" ಎಂದು ಉದ್ಘೋಷಿಸಿದ್ದಾನೆ.[113] ಕನ್ನಡನಾಡಿನ ಜನತೆಯ ಹುಟ್ಟುಗುಣ ತ್ಯಾಗ ಮತ್ತು ವೀರ. ಈ ನಾಡಿನ ಶಾಸನಗಳನ್ನು ಪರಿಶೀಲಿಸಿದರೆ ಅವುಗಳಲ್ಲಿ ಬಹುಪಾಲು ವೀರರಸ ಪ್ರಚುರವಾಗಿವೆ. ಶಾಸನಗಳು, ಜೈನಕಾವ್ಯಗಳು, 'ಕುಮಾರವ್ಯಾಸ ಭಾರತ', 'ರಾಮನಾಥ ಚರಿತೆ', 'ಮೋಹನತರಂಗಿಣಿ', 'ಜೈಮಿನಿಭಾರತ', 'ಕಂಠೀರವ ನರಸರಾಜ ವಿಜಯ' ಮುಂತಾದ ಆಕರಗಳನ್ನು ಒಮ್ಮೆ ಅವಲೋಕಿಸಿದರೆ ಯುದ್ಧ, ಯುದ್ಧದ ಪರಿಕರ ಈ ಸಂಬಂಧವಾದ ವಿಷಯಗಳು ಎದುರಿಗೆ ಚಿತ್ರವತ್ತಾಗಿ ನಿಲ್ಲುತ್ತವೆ. ಭಾರತ ಹಾಗೂ ಜೈನ ಲೌಕಿಕ ಕಾವ್ಯಗಳಲ್ಲಿ ಕೆಲ ಪೌರಾಣಿಕ ವಿವರಗಳಿವೆಯೆಂಬುದನ್ನು ಒಪ್ಪಿದರೂ ಶಾಸನಗಳಲ್ಲಿ ಬರುವ ಉತ್ಪ್ರೇಕ್ಷೆಗಳನ್ನು ತೆಗೆದರೆ ಗಟ್ಟಿಯಾದ ಯುದ್ಧ ಚಿತ್ರಗಳು ಉಳಿಯುತ್ತವೆ. ಯುದ್ಧಗಳಿಗೆ ಕಾರಣವೆಂದರೆ ಅರಸರ ಆತ್ಮರಕ್ಷಣೆ, ಪ್ರಜಾರಕ್ಷಣೆ, ಮಹತ್ವಾಕಾಂಕ್ಷೆ, ಅಸೂಯೆ ಇತ್ಯಾದಿ.

ಈಗಿನಂತೆ ಆಗ ಅಲ್ಲಲ್ಲಿ ಪ್ರತಿಯೊಂದು ಹಳ್ಳಿಗಳಲ್ಲಿ ಸುಸಜ್ಜಿತ ಆರಕ್ಷಕದಳ ಇರಲಿಲ್ಲ; ಆದುದರಿಂದ ದರೋಡೆಕೋರರಿಂದ ಕಳ್ಳರಿಂದ ತಮ್ಮ ಗ್ರಾಮದ ಸಂಪತ್ತನ್ನು, ತುರುಗಳನ್ನು, ಸ್ತ್ರೀಯರನ್ನು ರಕ್ಷಿಸಿಕೊಳ್ಳಲು ಪ್ರತಿಯೊಂದು ಊರಿನಲ್ಲೂ ವೀರರ ಗುಂಪುಗಳು ಸಿದ್ಧವಾಗುತ್ತಿದ್ದವು. ಯಾವುದೋ ನೆಪದಿಂದ ಆಗದವರು ಆತತಾಯಿಗಳ ಕೈಮಾಡಿ ತುರುಗಳನ್ನು, ಸ್ತ್ರೀಯರನ್ನು, ಸಂಪತ್ತನ್ನು ದೋಚಿ ಊರಳಿವನ್ನು ಮಾಡಿದುದುಂಟು. ಅಂತಹ ಉದ್ಯಮಗಳಲ್ಲಿ ಕಾದಿ ಮಡಿದವರಿಗೆ ಮಾನ್ಯ ಮರ್ಯಾದೆಗಳನ್ನೂ ನೆತ್ತರಕೊಡುಗೆಗಳನ್ನೂ ಕೊಟ್ಟು ಸನ್ಮಾನಿಸುತ್ತಿದ್ದರು; ವೀರಗಲ್ಲು, ಮಾಸ್ತಿಕಲ್ಲು ಮುಂತಾದ ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಮಡಿದವರಿಗೆ ಪುಣ್ಯವುಂಟಾಗಲೆಂದು ದೇವಾಲಯಗಳಲ್ಲಿ ನಂದಾದೀವಿಗೆಗಳನ್ನು ಇಡಿಸುತ್ತಿದ್ದರು; ದೇವರ ಅಂಗ ರಂಗ ಭೋಗಗಳಿಗೆ ಧರ್ಮದತ್ತಿಗಳನ್ನು ಕೊಟ್ಟು ಸದ್ಗತಿಯುಂಟಾಗಲೆಂದು ಹಾರೈಸುತ್ತಿದ್ದರು. ಅದೇ ನಿಮಿತ್ತ ದ್ವಿಜರಿಗೆ ದಾನಗಳನ್ನು ಮಾಡುತ್ತಿದ್ದರು.

ಒಂದು ದೃಷ್ಟಿಯಿಂದ ನೋಡಿದರೆ, ಮಹಾಕಾವ್ಯಗಳಲ್ಲಿ ಬರುವ ಅಷ್ಟಾದಶವರ್ಣನೆಗಳ ಕದನಪದ್ಧತಿಯಲ್ಲಿ ಆ ಕಾಲದ ಜನರ ರೀತಿನೀತಿಯ, ಮನೋಭೂಮಿಕೆಯ, ಬದುಕಿನ ಗತಿಯ ಸ್ಥೂಲ ರೂಪರೇಷೆಗಳು ಕೆಲಮಟ್ಟಿಗೆ ತೋರುತ್ತವೆ. ಚತುರನೂ ಉದಾತ್ತನೂ ಆದ ನಾಯಕನ ಮಂತ್ರಾಲೋಚನೆ, ದ್ಯೂತ, ಪ್ರಯಾಣ, ಯುದ್ಧ, ನಾಯಕನ ಜಯಪ್ರಾಪ್ತಿ—ಮುಂತಾದ ಕಾರ್ಯಾಚರಣೆಗಳಲ್ಲಿ ಮತ್ತು ಪರಿಣಾಮಗಳಲ್ಲಿ ಅಂದಂದಿನ ವೀರ ಜೀವನದ ರೇಖಾಚಿತ್ರಗಳು ದೊರೆಯುವುದು ಸಾಧ್ಯವಿದೆ. ಹೀಗೆಯೇ ನಗರಾರ್ಣವಾದಿ ಇತರ ವರ್ಣನಾಂಶಗಳಲ್ಲಿ ಜನಜೀವನದ ಇತರ ಮುಖಗಳ ಪ್ರತಿಫಲನವಿರುವುದು ಸಾಧ್ಯ

ಇದೆ. ಈಗ ಕನ್ನಡಿಗರ ಸಂಸ್ಕೃತಿಯ ಚಿತ್ರದ ಒಂದು ನಿರೂಪಣೆಯನ್ನು ಹೂಯೆನ್ ತ್ಸಾಂಗನ ಬರೆಹದಿಂದ ಸಂಕ್ಷೇಪವಾಗಿ ತಿಳಿಯುವ ಪ್ರಯತ್ನ ಮಾಡೋಣ:

(ಪುಲಿಕೇಶಿಯ ರಾಜ್ಯದ) ಭೂಭಾಗ ಫಲವತ್ತಾದದ್ದು, ಸಂಪದ್ಭರಿತವಾದದ್ದು: ಉಷ್ಣಹವೆ. ಅಲ್ಲಿನ ಜನತೆಯ ನಡೆ ಸಾತ್ವಿಕ ಹಾಗೂ ಸತ್ಯಶೀಲ. ಸರ್ವರೂ ಎತ್ತರದ ನಿಲುವನ್ನೂ ಮುಯ್ಯಿಗೆ ಮುಯ್ಯಿ ತೀರಿಸುವ ಸ್ವಭಾವವನ್ನೂ ಹೊಂದಿದವರು. ಅವರು ಕೃತಜ್ಞತಾ ಸ್ವಭಾವದವರಾಗಿರುವರಲ್ಲದೆ ವೈರಿಯಲ್ಲಿ ಅದಮ್ಯ ವೈರಭಾವವನ್ನು ಹೊಂದಿದವರು. ಹಾನಿಗಳು ಮಾನಭಂಗವಾದಾಗ ಅವರ ಸೇಡಿಗಾಗಿ ತಮ್ಮ ಜೀವದ ಹಂಗನ್ನೂ ತೊರೆಯುವವರು. ಪರೋಪಕಾರ ಸ್ವಭಾವದವರು: ಅದಕ್ಕಾಗಿ ಸಮಯ ಬಂದಾಗ ಪ್ರಾಣದ ಹಂಗನ್ನೂ ತೊರೆಯುವವರು ಹೇಳಿ ಕೇಳಿ ಸೇಡು ತೀರಿಸಿಕೊಳ್ಳುವವರು. ಅವರೆ ಸೋತಾಗ ವೈರಿಯನ್ನು ಒಮ್ಮಿಂದೊಮ್ಮೆಗೆ ಕೊಲ್ಲುವವರಲ್ಲ. ರಣರಂಗದಲ್ಲಿ ಸೋತ ಸೇನಾನಾಯಕನಿಗೆ ಶಿಕ್ಷೆಯನ್ನು ವಿಧಿಸುತ್ತಿದ್ದಿಲ್ಲ. ಆದರೆ ಆತನಿಗೆ ಸ್ತ್ರೀಯ ಉಡುಗೆ ತೊಡುಗೆಗಳನ್ನು ಕೊಡುತ್ತಿದ್ದರು. ಆ ನಿಮಿತ್ತ ಆತ ತಾನೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದ. ಆ ನಾಡಿನಲ್ಲಿ ವೀರರಿಗೆ ಆಶ್ರಯವಿದೆ: ಅವರದೇ ಆದ ಅನೇಕ ಗುಂಪುಗಳಿವೆ. ಅವರು ಮದ್ಯವನ್ನು ಸೇವಿಸುವರು. ಒಬ್ಬೊಬ್ಬ ಸರದಾರನೂ ಮತ್ತನಾಗಿ ಭಲ್ಲೆಯನ್ನು ಹಿಡಿದು ದಶಸಹಸ್ರ ಜನರನ್ನು ಎದುರಿಸುತ್ತಿದ್ದನು. ಅಂತಹ ಸಮಯದಲ್ಲಿ ಆತನು ಯಾವನನ್ನಾದರೂ ಕೊಂದರೆ ಆತನನ್ನು ದಂಡಿಸುತ್ತಿರಲಿಲ್ಲ. ಅಂತಹ ವೀರರು ತಿರುಗಾಡುವಾಗ ಸದಾ ಅವರ ಮುಂದೆ ವಾದ್ಯಗಳನ್ನು ಬಾಜಿಸುವರು. ಅವರು ಅನೇಕ ಆನೆಗಳನ್ನು ಹೊಂದಿರುವವರು. ತಾವೂ ತಮ್ಮ ಗಜಗಳೂ ಮತ್ತರಾಗಿ ಕೋಲಾಹಲವನ್ನೆಬ್ಬಿಸುವರು. ಎಲ್ಲವನ್ನೂ ಧ್ವಂಸ ಮಾಡುವರು. ತತ್ಫಲವಾಗಿ ವೈರಿ ನಿಂತಲ್ಲಿ ನಿಲ್ಲದೆ ಓಡಿಹೋಗುತ್ತಿದ್ದ. ರಾಜನಾದ ಪುಲಕೇಶಿ ಇವರ ಅಧಿಪತಿಯಾಗಿದ್ದು, ಅಕ್ಕಪಕ್ಕದವರನ್ನು ತುಚ್ಛವಾಗಿ ಭಾವಿಸಿ ರಾಜ್ಯವನ್ನು ಆಳುತ್ತಿದ್ದ. ಅವನ ಒಳ್ಳೆಯ ಯೋಜನೆಗಳ, ಒಳ್ಳೆಯ ಕಾರ್ಯಗಳ ಪ್ರಭಾವ ಬಹುದೂರದವರೆಗೆ ಹಬ್ಬಿರುತ್ತದೆ. ಪ್ರಜೆಗಳು ರಾಜನನ್ನು ಗೌರವಭಾವದಿಂದ ಕಾಣುವರು, ಬಾಗಿ ನಡೆಯುವರು. ಶಿಲಾದಿತ್ಯ ಹರ್ಷವರ್ಧನನಿಂದ ಅಜೇಯನಾದ ಈತನೊಬ್ಬನೇ ಆತನಿಗೆ ಶರಣಾಗಿಲ್ಲ. ಅಂತೆಯೇ ಈತನ ಪ್ರಜೆಗಳು ಶೀಲಾದಿತ್ಯನಿಗೆ ಶರಣಾಗತರಾಗಿ ಆತನ ಆಡಳಿತಕ್ಕೆ ಒಳಪಟ್ಟಿಲ್ಲ...."[114] ಇದು ಹೀಗೆಯೇ ಸಾಗಿದೆ.

ಕವಿರಾಜಮಾರ್ಗಕಾರನ ಪ್ರಕಾರ ಕನ್ನಡನಾಡಿನ ಜನತೆ "ಸುಭಟರ್ಕಳ್, ಕವಿಗಳ್, ಸುಪ್ರಭುಗಳ್, ಚೆಲ್ವರ್ಕಳ್, ಅಭಿಜನರ್ಕಳ್, ಗುಣಿಗಳ್, ಅಭಿಮಾನಿಗಳ್, ಅತ್ಯುಗ್ರರ್, ಗಭೀರಚಿತ್ತರ್, ವಿವೇಕಿಗಳ್."[115] ಅಷ್ಟೇ ಅಲ್ಲ. ಮೊದಲಲ್ಲಿಯೇ ಆತ ಹೀಗೆ ತನ್ನ ಮೆಚ್ಚುಗೆಯನ್ನು ತಿಳಿಸಿದ್ದಾನೆ:

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್

ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥[116]

ಜನತೆ ರಾಜನಿಗೆ ಒಸಗೆಯ ವೇಳೆಯಲ್ಲಿ, ಆತ ತಮ್ಮಲ್ಲಿಗೆ ಬಂದಾಗ ಕಪ್ಪ ಕಾಣಿಕೆಗಳನ್ನು ಕೊಡುತ್ತಿದ್ದರು;[117] ಆತನಿಂದ ತನಗೆ ಬಂದ ಗಂಡಾಂತರಗಳನ್ನು ಪರಿಹರಿಸಿಕೊಳ್ಳುತ್ತಿದ್ದರು: ಅರಿನೃಪರನ್ನು ಗೆಲ್ಲೆಂದು ಹಾರೈಸುತ್ತಿದ್ದರು[118].

## ಧಾರ್ಮಿಕ ಜೀವನ

ಕರ್ಣಾಟಕದ ಇತಿಹಾಸ ಆರಂಭವಾಗುವಷ್ಟರಲ್ಲಿ ಈ ನೆಲದಲ್ಲಿ ಚತುಸ್ಸಮಯಗಳೆನಿಸಿದ ಜೈನ, ಶೈವ, ವೈದಿಕ ಹಾಗೂ ಬೌದ್ಧ—ಇವು ಚೆನ್ನಾಗಿ ಕಾಣಿಸಿಕೊಂಡಿದ್ದುವು. ಈ ಚತುಸ್ಸಮಯಗಳ ವಿವರಣೆಯಲ್ಲಿ ಯಾವುದು ಮೊದಲು, ಯಾವುದು ಅನಂತರ ಎಂದು ಖಚಿತವಾಗಿ ಹೇಳುವುದು ಕಷ್ಟ. ಇವು 'ವಾಯುಪುರಾಣ', 'ಜ್ಞಾನಾರ್ಣವ'ಗಳ ಪ್ರಕಾರ ಬ್ರಹ್ಮ, ಶೈವ, ವೈಷ್ಣವ, ಸೌರ, ಶಾಕ್ತ ಮತ್ತು ಆರ್ಹತ ಎಂದು ಷಡ್ದರ್ಶನಗಳಾಗಿ ಮಾರ್ಪಟ್ಟವು. ಕ್ರಿ.ಶ. ೧೦ನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿಯೇ ಇದ್ದ ಸೋಮದೇವಸೂರಿಯು 'ಯಶಸ್ತಿಲಕ ಚಂಪೂ' ಎಂಬ ಗ್ರಂಥದಲ್ಲಿ ಕೂಡ ಚತುಸ್ಸಮಯ ಹಾಗೂ ಷಡ್ದರ್ಶನಗಳ ಪ್ರಸ್ತಾಪಮಾಡಿದ್ದಾನೆ. ಜೈನ, ಜೈಮಿನೀಯ, ಬೌದ್ಧ ಹಾಗೂ ಶೈವಸಮಯಗಳಿಗೆ ಸಾಂಖ್ಯ ಮತ್ತು ಲೋಕಾಯತಗಳನ್ನು ಸೇರಿಸಿದರೆ ಷಡ್ದರ್ಶನಗಳೆಂದು ಶ್ರುತಸಾಗರನು ವಿವರಿಸಿದ್ದಾನೆ. ಪಂಪನು ಬೃಹಸ್ಪತಿಮತ, ವಿಜ್ಞಾನವಾದ ಹಾಗೂ ಶೂನ್ಯವಾದ ಎಂಬವುಗಳನ್ನು ಹೇಳಿದ್ದಾನೆ,[119] ಜೈನಧರ್ಮದ ಉತ್ತಮಿಕೆಯನ್ನು ಸಾರಿದ್ದಾನೆ. ಕ್ರಿ.ಶ. ೧೦ನೆಯ ಶತಮಾನದ ರಾಜಶೇಖರನು 'ಕಾವ್ಯಮೀಮಾಂಸೆ'ಯಲ್ಲಿ 'ಆನ್ವೀಕ್ಷಿಕೀ'ಯಲ್ಲಿ ಎರಡು ಬಗೆಯೆಂದೂ ಆರ್ಹತ್, ಭದಂತ ಲೋಕಾಂತಗಳು ಪೂರ್ವಪಕ್ಷವೆಂದೂ ಸಾಂಖ್ಯ, ನ್ಯಾಯ ವೈಶೇಷಿಕಗಳು ಉತ್ತರ ಪಕ್ಷ ಎಂದೂ ಇವೇ ಷಟ್ತರ್ಕಗಳೆಂದೂ ವಿವರಿಸಿದ್ದಾನೆ. ಕ್ರಿ.ಶ. ಸು. ೧೨ನೆಯ ಶತಮಾನದಲ್ಲಿ, ಪ್ರಾಯಃ ವೀರಶೈವದ ಪ್ರಸಿದ್ಧಿಯ ತರುವಾಯ ಎಲ್ಲ ದರ್ಶನಗಳಲ್ಲಿ ಒಂದು ಬಗೆಯ ಸಮನ್ವಯತೆ ಹುಟ್ಟಿಕೊಂಡಂತೆ ತೋರುತ್ತದೆ. ಬ್ರಹ್ಮ, ವಿಷ್ಣು, ಮಹೇಶ್ವರ, ಬುದ್ಧ ಹಾಗೂ ಜಿನ ಇವರೆಲ್ಲ ಒಂದೇ ಪರಮಾರ್ಥದ ನಾನಾ ಹೆಸರುಗಳೆಂದು ಹೇಳುವ

ಪರಮೇಶಂ ಪರಮೇಷ್ಠಿ ಶಂಭು ಅಭವಂ ಬ್ರಹ್ಮಂ ಶಿವಂ ಶಂಕರಂ
ಸ್ಮರಸಂಹಾರಕನಚ್ಯುತಂ ಮುರಹರಂ ಬುದ್ಧಂ ಜಿನಂ ವಿಷ್ಣು ವೇ

ದರಹಸ್ಯಂ ಪ್ರಭು ಶುದ್ಧನೆಂದು ನೆಗಳ್ದಿಂತಪ್ಪ ನಾಮಾಳಿಯಿಂ
ಪರಮಾರ್ಥಂ [ತ್ರ] ಳಿದರ್ಥಮಪ್ಪುದೆ ಮಲಂ ನಿರ್ವಾಣಲಕ್ಷ್ಮೀಪತಿಃ ॥

ಎಂಬ ಸೂಕ್ತಿಯೂ,[120]

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವೇಶಸ್ಸದಾ ॥

ಎಂಬ ಶಾಸನೋಕ್ತಿಯೂ[121] ಆ ಧರ್ಮಸಮನ್ವಯದ ಹೊಳಹನ್ನು ಮಿಂಚಿಸಿರುವ ಸಾರ ಸೂಕ್ತಿಗಳೇ ಆಗಿವೆ. ಕರ್ಣಾಟಕದ ಧರ್ಮಗಳು ಜೈನ, ಬೌದ್ಧ, ಶೈವ, ವೈಷ್ಣವ— ಎಂಬ ನಾಲ್ಕು ಪ್ರಮುಖ ಧರ್ಮಗಳಲ್ಲಿ ಅಡಕವಾಗುವುದರಿಂದ ಇಲ್ಲಿ ಅದೇ ಕ್ರಮದಲ್ಲಿ ಅವುಗಳ ಚರಿತ್ರೆಯನ್ನು ಕೆಲಮಟ್ಟಿಗೆ ಪರಿಶೀಲಿಸಬಹುದು.

## ಜೈನಧರ್ಮ

"ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ಣಾಟಕದ ಜೈನಧರ್ಮದ ಇತಿಹಾಸವೇ ಆಗಿದೆ" ಎಂಬ ಅಭಿಪ್ರಾಯದಲ್ಲಿ[122] ವಿಶೇಷ ಸತ್ಯಾಂಶವಿದೆ. ಏಕೆಂದರೆ ಜೈನ ಧರ್ಮ ಉತ್ತರದಿಂದ ದಕ್ಷಿಣಕ್ಕೆ ಬಂದು ಮೊದಲು ನೆಲೆನಿಂತದ್ದು ಮುಖ್ಯವಾಗಿ ಅಲ್ಲಿಯ ಶ್ರವಣಬೆಳ್ಗೊಳ ಮತ್ತು ಕೊಪಣತೀರ್ಥಗಳಲ್ಲಿ. ಈ ಎರಡೂ ಸ್ಥಳಗಳ ಇತಿಹಾಸ ಮೌರ್ಯರ ಕಾಲಕ್ಕೆ ಸಂಬಂಧಿಸಿದೆ. ಆ ಕಾಲದ ಶಾಸನಗಳು ಅಶೋಕನ ಅಜ್ಜ ಚಂದ್ರಗುಪ್ತಮೌರ್ಯನು ತನ್ನ ಗುರು ಭದ್ರಬಾಹುವಿನೊಂದಿಗೆ ಶ್ರವಣಬೆಳ್ಗೊಳಕ್ಕೆ ಬಂದು ನೆಲಸಿದ ವಿಷಯವನ್ನು ವಿವರಿಸುತ್ತವೆ. ಶ್ರವಣಬೆಳ್ಗೊಳದ ಚಿಕ್ಕಬೆಟ್ಟಕ್ಕೆ 'ಚಂದ್ರಗಿರಿ' ಎಂಬ ಹೆಸರು ಈತನಿಂದ ಬಂದಿತೆಂದು ಪ್ರತೀತಿ. ಈ ಬೆಟ್ಟದಲ್ಲಿಯ ಚಂದ್ರಗುಪ್ತಬಸದಿ, ಭದ್ರಬಾಹುಗುಹೆ ಮುಂತಾದ ಸ್ಥಳಗಳು ಈ ಪ್ರತೀತಿಯನ್ನು ಪೋಷಿಸಿರುವ ಸಂಗತಿಗಳು. ಈ ಚಂದ್ರಗುಪ್ತನು ಯಾರೆಂಬ ವಿಷಯದಲ್ಲಿ ಭಿನ್ನಮತಗಳಿವೆ. ಸಮಕಾಲೀನ ಸಾಧನ ಸಾಮಗ್ರಿ ದೊರೆಯುವ ವರೆಗೆ ಇದು ಹೀಗೆಯೇ ಎಂದು ಹೇಳಲು ಬರುವುದಿಲ್ಲ. ಡಾ. ಪಿ. ಬಿ. ದೇಸಾಯರು ಭದ್ರ ಬಾಹು ದಕ್ಷಿಣಕ್ಕೆ ಬರುವ ಮುನ್ನವೇ ಇಲ್ಲಿ ಜೈನಧರ್ಮವಿದ್ದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[123] ಕೊಪಣದ ಇತಿಹಾಸ, ಅಶೋಕನ ಕಾಲಾನಂತರ ಕ್ರಿ.ಶ. ೫ನೆಯ ಶತಮಾನದ ವರೆಗೆ ಇನ್ನೂ ಸ್ಪಷ್ಟವಿಲ್ಲ. ಅಲ್ಲಿ ಅನೇಕ ಜಿನಾಲಯಗಳಿದ್ದು, ಅದು ಜೈನಕ್ಷೇತ್ರವಾಗಿದ್ದಿತು ಎನ್ನುವುದಕ್ಕೆ ಸಾಕ್ಷಿಗಳಿವೆ.[124] ನೃಪತುಂಗನ ಕಾಲಕ್ಕಂತೂ ಅದು "ವಿದಿತ ಮಹಾ ಕೊಪಣನಗರ", ತಿರುಳ್ಗನ್ನಡದ ಒಂದು ಗಂಡುಮೆಟ್ಟಿನ ಸ್ಥಳ. ಕುಮಾರಸೇನ ಮೊದಲಾದ ಜೈನಯತಿಗಳು ಅಲ್ಲಿ ನೋಂತು ಸಮಾಧಿಮರಣವನ್ನಪ್ಪಿದರು. ರನ್ನನು "ನೆಗಬ್ದಿ ಕೊಪಣಾಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ" ಎಂದಿದ್ದಾನೆ.[125] ಕರ್ಣಾಟಕದಲ್ಲಿ ಜೈನಧರ್ಮದ ವ್ಯಾಪ್ತಿಯನ್ನು ಶಾಸನವೊಂದು ಸೊಗಸಾಗಿ ಹೀಗೆ ವರ್ಣಿಸಿದೆ:

ಜಿನಧರ್ಮಾವಾಸಮಾದತ್ತಮಳ ವಿನಯುವಾಗಾರಮಾವತ್ತು ಪದ್ಮಾ
ಸನನಿರ್ಪಾ ಸದ್ಮಮಾದತ್ತತಿವಿಶದಯಶೋಧಾಮಮಾದತ್ತು ವಿದ್ಯಾ
ಧನಜನ್ಮಸ್ಥಾನಮಾದತ್ತಸಮತರಳ ಗಂಭೀರ ಸದ್ಗೇಹಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರುಕರ್ನಾಟದೇಶಂ ॥[126]

ಕರ್ಣಾಟಕದ ಜೈನರಲ್ಲಿ ದಿಗಂಬರರು, ಶ್ವೇತಾಂಬರರು, ಯಾಪನೀಯರು ಮತ್ತು ದ್ರವಿಡ ಸಂಘದವರು ಬಹು ಪ್ರಸಿದ್ಧರು. ಕಾಲಕ್ರಮೇಣ ಇವರಲ್ಲಿ ಹಲವರು ದಿಗಂಬರರ ಮೂಲಸಂಘದಲ್ಲಿ ವಿಲೀನವಾದರು. ದಿಗಂಬರ ಪಂಥದ ಚರಿತ್ರೆಗೆ ಮುನ್ನ, ಇತರ ಪಂಥಗಳ ಬಗೆಗೆ ಸ್ವಲ್ಪ ನೋಡಬಹುದು.

ಶ್ವೇತಾಂಬರರು: ಕದಂಬರ ಕಾಲದಲ್ಲಿಯೇ ಶ್ವೇತಾಂಬರರು ಇದ್ದುದಾಗಿ ತಿಳಿದು ಬರುತ್ತವೆ. ಮೃಗೇಶವರ್ಮನು 'ಶ್ವೇತಪಟಮಹಾಶ್ರಮಣಸಂಘ'ಕ್ಕೆ ದತ್ತಿ ಬಿಟ್ಟುದಾಗಿ ದೇವಗಿರಿಯ ಶಾಸನದಲ್ಲಿ ಹೇಳಿದೆ.[127] 'ವಡ್ಡಾರಾಧನೆ'ಯಲ್ಲಿ ಶ್ವೇತಾಂಬರರ ಉಲ್ಲೇಖ ವಿದ್ದು, 'ಅರ್ಧಗಪ್ಪಡ'ವನ್ನು ಧರಿಸಿದವರೆಂದು ಅವರನ್ನು ಹೇಳಲಾಗಿದೆ.[128] ಇಂದ್ರನಂದಿ ಶ್ವೇತಾಂಬರರನ್ನು ಉಲ್ಲೇಖಿಸಿ, ಅದನ್ನು ಜೈನಾಭಾಸನೆಂದು ಹೇಳಿದ್ದಾನೆ.[129] ಅರ್ಹದ್ದಾಸನು (ಕ್ರಿ.ಶ. ೧೩೯೮) ಶ್ವೇತಾಂಬರ ಪಂಥವನ್ನು 'ವಿಪರೀತರೂಪ', 'ವಿಸಂಘ' ಮುಂತಾಗಿ ಹೇಳಿದ್ದಾನೆ :

ಸಿತಾಂಬರಾದೌ ವಿಪರೀತರೂಪೇ ।
ಖಿಲೇ ವಿಸಂಘೇ ವಿತನೋತು ಬೋಧಂ ॥
ತತ್ಸೇನನಂದಿ ತ್ರಿದಿವೇಶ ಸಿಂಹ ।
ಸಂಘೇಷು ಯಸ್ತಂ ಮನುತೇ ಕುದೃಕ್ಸಃ ॥[130]

ಕರ್ಣಾಟಕದಲ್ಲಿ ಅಲ್ಪಸಂಖ್ಯಾತರಾದ ಶ್ವೇತಾಂಬರರು ಇಂಥ ಟೀಕೆಗಳಿಂದಾಗಿ ಪ್ರವೃದ್ಧಿ ಹೊಂದಲಿಲ್ಲವೆಂದು ತೋರುತ್ತದೆ.

ಯಾಪನೀಯರು: ಯಾಪನೀಯ ಸಂಘದ ಅಸ್ತಿತ್ವವೂ ಸುಮಾರು ಶ್ವೇತಾಂಬರ ದಷ್ಟೇ ಪುರಾತನ. ಮೃಗೇಶವರ್ಮನ ಹಲಸಿಯ ತಾಮ್ರಶಾಸನದಲ್ಲಿ ಯಾಪನೀಯ ನಿರ್ಗ್ರಂಥಕೂರ್ಚಕರ ಪ್ರಸ್ತಾಪವಿದೆ. ಅವರಿಗೆ ಆತನು ಜಿನಾಲಯವನ್ನು ಕಟ್ಟಿಸಿ ದತ್ತಿ ಬಿಟ್ಟುದಾಗಿ ಬರೆದಿದೆ.[131] 'ವಡ್ಡಾರಾಧನೆ'ಯಲ್ಲಿ ಇದನ್ನು 'ಜಾಪುಲಿಸಂಘ' ಎಂದಿದೆ. ಶ್ವೇತಭಿಕ್ಷು ಜಾಪುಲಿಸಂಘಕ್ಕೆ ಮೊದಲಿಗನೆಂದು ಹೇಳಿರುವುದರಿಂದ 'ಯಾಪನೀಯ ಸಂಘ' ಮೂಲತಃ ಶ್ವೇತಾಂಬರ ಪಂಗಡದಿಂದ ಭಿನ್ನವಾಗಿ ನಿಂತಂತೆ ತೋರುತ್ತದೆ. ಆದರೆ ಯಾಪನೀಯರು ಉತ್ತರಭಾರತಕ್ಕಿಂತ ದಕ್ಷಿಣಭಾರತದಲ್ಲೇ ವಿಶೇಷವಾಗಿದ್ದರು. ಕರ್ಣಾಟಕದ ಭೀಮಾತಟದವನೇ ಆದ ಸ್ವಯಂಭು, ಅಪಭ್ರಂಶಸಾಹಿತ್ಯದ ಪುಷ್ಪದಂತ ಯಾಪನೀಯ ಸಂಘವನ್ನು 'ಆಪಲಿ ಸಂಘ'ವೆಂದು ಹೇಳಿದ್ದಾರೆ.[132] ಕ್ರಿ.ಶ. ೯೬೩ರಲ್ಲಿ ಇದ್ದ ದೇವಸೇನಸೂರಿ 'ದರ್ಶನಸಾರ'ದಲ್ಲಿ ಈ ಪಂಥವನ್ನು 'ಜವಣಿಸಂಘ' ಎಂದು ಹೇಳಿದ್ದಾನಲ್ಲದೆ ಅದನ್ನು ಶ್ರೀಕಲನೆಂಬ ಶ್ವೇತಾಂಬರ ಸಾಧುವು (ವಿ. ಸ. ೨೦೫; ಕ್ರಿ.ಶ. ೧೪೮ರಲ್ಲಿ) ಕಲ್ಯಾಣದಲ್ಲಿ ಸ್ಥಾಪಿಸಿದನೆಂದು ತಿಳಿಸಿದ್ದಾನೆ :

ಕಲ್ಲಾಣೇ ವರಣಯರೇ ದುಣ್ಣಿಸಏ ಪಂಚ ಉತ್ತರೇ ಜಾದೇ
ಜಾವಣಿಯ ಸಂಘ ಭಾವೋ ಸಿರಿಕಲಸಾದೋದು ಸೇವಡದೋ ॥

ನೃಪತುಂಗನ ಸಭಾಸದನಾದ ಶಾಕಟಾಯನನು 'ಯಾಪನೀಯ ಅಮೋಘ ವೃತ್ತಿ' ಮುಂತಾದ ಕೃತಿಗಳ ಕರ್ತೃ. ಹೀಗೆ ಕದಂಬರ ಕಾಲದಿಂದಲೂ ಯಾಪನೀಯ ಸಂಘ ರಾಜ ಮಾನಿತವಾಗಿತ್ತು. ದಿಗಂಬರ ಪಂಗಡದವರು 'ಶ್ವೇತಾಂಬರ'ದ ಹಾಗೆ ಇದನ್ನೂ 'ಜೈನಾ ಭಾಸ'ವೆಂದು ಕರೆದುದರಿಂದ ಇದೂ ಕಾಲಕ್ರಮೇಣ ಕರ್ನಾಟಕದಿಂದ ಲುಪ್ತವಾಗಿರ ಬಹುದು. ಆದರೆ ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಹಬ್ಬಿದ್ದಿರಬೇಕು. ಗುಲ್ಬರ್ಗ ಜಿಲ್ಲೆಯ ಅಳ್ಳಿ, ಸೇಡಂ; ಬಿಜಾಪುರ ಜಿಲ್ಲೆಯ ಭೀಮಾತಟ; ಬೆಳಗಾಂ ಜಿಲ್ಲೆಯ ಹಲಸಿ; ಧಾರವಾಡ ಜಿಲ್ಲೆಯ ಮೋಣಿ, ನವಿಲ್ಗುಂದ ಮುಂತಾದ ಸ್ಥಳಗಳಲ್ಲಿ ಯಾಪ ನೀಯರ ಕೇಂದ್ರಗಳಿದ್ದುದು ಶಾಸನಗಳ ಮೂಲಕ ತಿಳಿದುಬರುತ್ತದೆ.

ದಿಗಂಬರರು: ಕರ್ನಾಟಕದಲ್ಲಿ ಜೈನಧರ್ಮ ಎಂದರೆ ಬಹ್ವಂಶದಲ್ಲಿ ದಿಗಂಬರ ಸಂಘ. ಶ್ರವಣಬೆಳ್ಗೊಳ, ಕೊಪ್ಪಳ ಇವು ಈ ಸಂಘದ ಆದಿ ತೀರ್ಥಸ್ಥಳಗಳು. ಶ್ರವಣಬೆಳ್ಗೊಳ ಈಗಲೂ ಖ್ಯಾತ ಧಾರ್ಮಿಕ ಕ್ಷೇತ್ರ. ಕೊಪ್ಪಳಕ್ಕೆ ಆ ಖ್ಯಾತಿ ಉಳಿದುಬಂದಿಲ್ಲ. ಜೈನ ಸಾಧು ಗಳು ಇಲ್ಲಿನ ಬೆಟ್ಟಗಳಲ್ಲಿ ತಮ್ಮ ಸಾಧನೆಯನ್ನು ನಡೆಸಿದರು; ಸಮಾಧಿಮರಣವನ್ನ ಪ್ಪಿದರು. ಭಕ್ತರು ಹತ್ತಾರು ಜಿನಾಲಯಗಳನ್ನು ಕಟ್ಟಿದರು. ಕೊಪ್ಪಳ ಒಂದರಲ್ಲಿ ನೂರಾರು ಜಿನಾಲಯಗಳಿದ್ದುವೆಂದು "ಊರಾಗ ೭೭೨ ಬಸ್ತಿ, ಬಾಚಿನಕಲ್ಲ ಮೇಲೊಂದು ಕಿಸ್ತಿ" ಎಂಬ ರೂಢಿಯ ಗಾದೆಮಾತು ಧ್ವನಿಸುತ್ತದೆ. ಹೊಯ್ಸಳ ದೊರೆ ವಿಷ್ಣುವರ್ಧನನ ಮಹಾಪ್ರಧಾನ ದಂಡನಾಯಕ ಗಂಗರಾಜನು ಅನೇಕ ಜಿನಾಲಯಗಳನ್ನು ಅಲ್ಲಿ ಮಾಡಿ ಸಿದ್ದು ಹೀಗೆ ಕೀರ್ತಿಗೆ ಕಾರಣವಾಯಿತಂತೆ.

ಮುತ್ತಿನ ಮಾತನಂತಿರಲಿ ಜೀರ್ಣಜಿನಾಶ್ರಯಕೋಟಿಯಂ ಕ್ರಮಂ
ಬೆತ್ತಿರೆ ಮುನ್ನಿನಂತಿರೆನಿತೂರ್ಗಳೊಳಂ ನೆಱನಾಡಿಸುತ್ತಮು
ತ್ಸೃತ್ತಮಹಾಶ್ರಮಾಸದೊಪನಂ ನೆಱತಿಪ್ಪಿರೆ ಗಂಗವಾಡಿ ತೊಂ
ಬತ್ತಱುಸಾಸಿರಂ ಕೊಪಣಮಾದುದು ಗಂಗಣ ದಂಡನಾಥನಿಂ ॥[133]

ಶ್ರವಣಬೆಳ್ಗೊಳದ ಇತಿಹಾಸ ಗೊಮ್ಮಟ ಸ್ವರೂಪದ್ದು. ಸ್ಥೂಲವಾಗಿ ಹೇಳುವುದಾದರೆ ಉತ್ತರದಲ್ಲಿ ಚಂದ್ರಿಕಾವಾಟ (ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಚಾಂದಕವತೆ) ಗೋದಾವರೀತಟ ಆದಿಯಾಗಿ ಕಾವೇರೀತಟದ ತಲಕಾವೇರಿಯವರೆಗೆ ಜಿನಾಲಯಗಳು ಅಸಂಖ್ಯಾತವಾಗಿದ್ದುವು.[134] ಕಾರ್ಕಳ, ಮೂಡಬಿದರೆ, ವೇಣೂರು ಮುಂತಾದುವು ಕರ್ನಾಟಕದ ಪ್ರಾಚೀನ ಜೈನಧರ್ಮದ ಕ್ಷೇತ್ರಗಳು.

ಉತ್ತರದಲ್ಲಿ ಬೀದರಜಿಲ್ಲೆಯ ಆಚೆ, ದಕ್ಷಿಣದಲ್ಲಿ ಮೂಡಬಿದರೆಯ ಈಚೆ—ಹೀಗೆ ಹಬ್ಬಿಕೊಂಡ ಕರ್ನಾಟಕದಲ್ಲಿನ ದಿಗಂಬರ ಸಂಘ, ಸುಮಾರು ೧೩ನೆಯ ಶತಮಾನದ ವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಅಲ್ಲಿಂದ ಇಳಿಮುಖವಾಗುತ್ತ ಬಂದು ಈಗ ಒಂದು ಅಲ್ಪಸಂಖ್ಯಾತರ ಧರ್ಮವಾಗಿದೆ. ಕನ್ನಡ ಸಾಹಿತ್ಯದ ಸುವರ್ಣಯುಗವೇ ಜೈನಧರ್ಮದ

ಸುವರ್ಣಯುಗವಾಗಿದ್ದಿತು. ಕನ್ನಡ ಸಾಹಿತ್ಯದ ಆರಂಭದ ಬೆಳವಣಿಗೆಗೆ ಅಗ್ರಪೂಜೆ ಸಲ್ಲುವುದಾದರೆ ಅವರಿಗೇ ಸಲ್ಲುತ್ತದೆ. ದಿಗಂಬರ ಪಂಥ ಒಂದೇ ಆದರೂ ಅದರಲ್ಲಿ ಸಂಘ, ಗಣ, ಗಚ್ಛ, ಅನ್ವಯ ಎಂಬ ಭೇದಗಳಿದ್ದವು. ಇಂದ್ರನಂದಿಯು ಸಿಂಹಸಂಘ, ನಂದಿಸಂಘ, ಸೇನಸಂಘ, ದೇವಸಂಘ ಎಂಬ ನಾಲ್ಕು ಸಂಘಗಳನ್ನು ಹೇಳಿ, ಅವುಗಳಲ್ಲಿ ಗಣಗಚ್ಛಗಳೆಂಬ ಒಳಪಂಗಡಗಳು ಇರುತ್ತವೆಯೆಂದಿದ್ದಾನೆ. ಕೆಲವು ಸಲ ಸಂಘಗಳನ್ನು ಗಣಗಳೆಂದೇ ಗಣಿಸಲಾಗಿದೆ. ಒಂದೊಂದಕ್ಕೆ ಎರಡೆರಡು ಹೆಸರುಗಳೂ ಇದ್ದುದುಂಟು. ದೇವಸಂಘ–ಗೌಡಸಂಘ: ಸೇನಸಂಘ—ಸೇನಗಣ ಹಾಗೂ ಪಂಚಸ್ತೂಪಾನ್ವಯ ಇತ್ಯಾದಿ. 'ಶ್ರುತಾವತಾರ'ದಲ್ಲಿ ಇಂದ್ರನಂದಿಯು ಪಂಚಸ್ತೂಪಾನ್ವಯದವರು 'ಸೇನ' ಹಾಗೂ 'ಭದ್ರ' ಸಂಪ್ರದಾಯಗಳಲ್ಲಿ ವಿಲೀನವಾದುದನ್ನು ತಿಳಿಸಿದ್ದಾನೆ.

ಕರ್ನಾಟಕದ ರಾಷ್ಟ್ರಕೂಟ ಚಕ್ರವರ್ತಿಗೆ ಗುರುಗಳಾದ ಜಿನಸೇನರ ಗುರು ವೀರಸೇನರು ಪಂಚಸ್ತೂಪಾನ್ವಯದ ಸೂರ್ಯನೆಂದು ತಮ್ಮನ್ನು ಹೇಳಿಕೊಂಡಿದ್ದಾರೆ. ಇದರಿಂದ ಸೇನಸಂಘ ಹಾಗೂ ಪಂಚಸ್ತೂಪಾನ್ವಯಗಳು ಒಂದರ ಅಂಗ ಇನ್ನೊಂದು ಎಂದು ಗೊತ್ತಾಗುವಂತಿದೆ. ಈ ಸಂಘಗಳು ಮೂಲಸಂಘ, ನಂದಿಸಂಘ, ಯಾಪನೀಯಸಂಘ, ದ್ರವಿಡಸಂಘ, ಕಿತ್ತೂರುಸಂಘ, ನವಿಲೂರುಸಂಘ ಇತ್ಯಾದಿಯಾದವು. ಇನ್ನು ಗಣಗಳಲ್ಲಿ ಸೇನಗಣ, ಸೂರಸ್ತಗಣ, ಕಾಣೂರಗಣ, ಬಲಾತ್ಕಾರಗಣ, ದೇಶೀಯಗಣ, ದ್ರಮಿಳಗಣ, ಕವಾಟ, ಕಾರೆಯ, ಆಜಿ, ವೃಕ್ಷಮೂಲ (ಪುನ್ನಾಗ) ಇತ್ಯಾದಿಯಾದುವು. ಗಚ್ಛಗಳಲ್ಲಿ ಪೊಗದಿ, ಪುಸ್ತಕ, ತಗರಿಗಲ್, ಸರಸ್ವತಿ, ಕರೂರ್, ಚಿತ್ರಕೂಟ, ತಿಂತ್ರಿಣೀಕ (ಹುಣಸಿಹೆಡಗಲಿ), ಮೇಘಪಾಷಾಣ, ಮುಂಡಿತಟ, ವಕ್ರಟ ಇತ್ಯಾದಿಯಾದುವು. ಅನ್ವಯ ಅಥವಾ ಬಳಿ ಕೊಂಡಕುಂದ, ಅರುಂಗಳ, ಇಂಗುಳೇಶ್ವರ, ಹನಸೋಗೆ ಇತ್ಯಾದಿಯಾದುವು. ಹೀಗೆ ಪಂಗಡ ಒಳಪಂಗಡಗಳಾಗಲು, ಅವುಗಳಿಗೆ ಬೇರೆ ಬೇರೆ ಹೆಸರುಗಳು ಬರಲು ಗುರುಗಳೂ ಅವರಿದ್ದ ಸ್ಥಳಗಳೂ ಕಾರಣವೆಂದು ತೋರುತ್ತದೆ. ಈ ಹಲಬಗೆಯ ಪಂಗಡಗಳವರು ತಮತಮಗೆ ಬೇರೆ ಬೇರೆ ಜಿನಾಲಯ ಅಥವಾ ಬಸದಿಗಳನ್ನು ಕಟ್ಟಿಸಿದುದುಂಟು. ಅವು ಪ್ರಾರಂಭದಲ್ಲಿ ವಿಹರಿಸುವ ಜೈನಯತಿಗಳಿಗೆ ತಂಗುವ ತಾತ್ಪೂರ್ತಿಕ ನಿಲ್ದಾಣಗಳಾದರೆ ತರುವಾಯದಲ್ಲಿ ಸದಾ ನೆಲೆಯೂರಿ ನಿಲ್ಲುವ ಸ್ಥಾನಗಳೂ ಆದವು. ರಾಜಮಹಾರಾಜರೂ ವಿನೇಯಜನರೂ ಜೈನದೇವಾಲಯಗಳ ನಿರ್ಮಾಣದಿಂದ ಯಶಸ್ಸೂ ಐಶ್ವರ್ಯವೂ ಉಂಟಾಗುವುವೆಂದು ಜಿನಾಲಯಗಳನ್ನು ಕಟ್ಟಿಸಿದರು.[135] ಈ ಜೈನಬಸದಿಗಳೇ ಜಿನಾಲಯ, ಚೈತ್ಯಾಲಯ, ಚೈತ್ಯ, ಜೇದಿಯ, ಜಿನಮಂದಿರ, ಜಿನಾಗಾರ, ಜಿನಗೇಹ ಮುಂತಾಗಿ ಜನರಿಂದ ಕರೆಯಲ್ಪಟ್ಟವು. ತೀರ್ಥಂಕರರಿಗೆ ಜಿನಾಲಯಗಳನ್ನು ಕಟ್ಟಿಸಿದಂತೆ ಆದಿ ತೀರ್ಥಂಕರನ ಪುತ್ರ ಬಾಹುಬಲಿಗೂ ಜಿನಾಲಯ ಕಟ್ಟಿಸಿದುದುಂಟು.[136] ಶ್ರವಣಬೆಳ್ಗೊಳದ ಬಾಹುಬಲಿಯ ಮಹಾವಿಗ್ರಹದ ನಿರ್ಮಾಣ ಚಾವುಂಡರಾಯನ ಭಕ್ತಿಗೌರವಗಳ ಪ್ರತೀಕವಾಗಿ ಆದುದು. ಕರ್ನಾಟಕದಲ್ಲಿ ಬಾಹುಬಲಿಯ ಶಿಲಾಮೂರ್ತಿಗಳು ಶ್ರವಣಬೆಳ್ಗೊಳ, ಕಾರ್ಕಳ, ವೇಣೂರು, ಗೊಮ್ಮಟಗಿರಿ

ಈ ಕೆಲವೆಡೆಗಳಲ್ಲಿ ದೊರೆತಿವೆ. ಶ್ರವಣಬೆಳ್ಗೊಳದ್ದು ಜಗತ್ಪ್ರಸಿದ್ಧ ಶಿಲ್ಪಕೃತಿಗಳಲ್ಲಿ ಒಂದು.

ಹೀಗೆ ಹಳೆಯ ಬಸದಿಗಳ ಜೀರ್ಣೋದ್ಧಾರ, ಹೊಸ ಬಸದಿಗಳ, ಆರಾಧ್ಯಮೂರ್ತಿಗಳ ನಿರ್ಮಾಣಕಾರ್ಯ ಅವ್ಯಾಹತವಾಗಿ ಸಾಗಿಬಂದಿತು. ಇನ್ನು ಯಕ್ಷಿಣಿಯರಲ್ಲಿ ಪದ್ಮಾವತಿಗೆ ದೇವಾಲಯವಿದ್ದುದು ಗುಡ್ನಾಪುರದ ಶಾಸನದಿಂದ ಸ್ಪಷ್ಟವಿದೆ. ಹುಂಚ, ಉಗಾರ ಮೊದಲಾದ ಎಡೆಗಳಲ್ಲೂ ಪದ್ಮಾವತಿಗೆ ಆಲಯಗಳನ್ನು ಕಟ್ಟಲಾಗಿದೆ. ಆಲಯಗಳನ್ನು ಕಟ್ಟಿಸಿದ ವ್ಯಕ್ತಿಗಳು ಶಂಕುಸ್ಥಾಪನೆಯ ಸಮಯದಲ್ಲಿ ತಮ್ಮ ಗುರುಗಳು, ಹಿರಿಯರು ಮುಂತಾದವರಿಂದ ಅಸ್ತಿಭಾರವನ್ನು ಹಾಕಿಸುತ್ತಿದ್ದರು. ಹುಂಚದಲ್ಲಿ (ಪೊಂಬುಚ) ಚಟ್ಟಲ ದೇವಿಯು ಪಂಚಕೂಟ ಬಸದಿಯನ್ನು ಮಾಡಲು ಆರಂಭಿಸಿದಾಗ ಶ್ರೇಯಾಂಸ ಪಂಡಿತರು ಅದು 'ಚಂದ್ರಾರ್ಕಸ್ಥಾಯಿಯಪ್ಪಂತುನ್ನತಮಪ್ಪೆಡೆಯೊಳ್ ಕೆಸರ್ಕಲ್ಲಿಕ್ಕಿಸಿದರು.[137]

ಸಾಧಾರಣವಾಗಿ ಬಸದಿಗೊಬ್ಬ ತೀರ್ಥಂಕರ. ಆತನ ಯಕ್ಷಯಕ್ಷಿಣಿಯರು, ಬಸದಿಯ ಮುಂದೆ ಮಾನಸ್ತಂಭ ಇಲ್ಲವೆ ಬ್ರಹ್ಮಸ್ತಂಭ, ಬ್ರಹ್ಮದೇವರ ಗುಡಿ—ಇವು ಜೈನದೇವಾಲಯದ ವಾಸ್ತು ಸಂಗತಿಗಳು. ಚಕ್ರೇಶ್ವರಿ, ಪದ್ಮಾವತಿ, ಜ್ವಾಲಾಮಾಲಿನಿ, ಕೂಷ್ಮಾಂಡಿನಿ, ಅಂಬಿಕಾ, ಸಿದ್ಧಾಯಿಕಾ ಇವರು ಕರ್ಣಾಟಕವಲ್ಲಿ ವಿಶೇಷ ಗೌರವವನ್ನು ಪಡೆದ ಜೈನ ಸ್ತ್ರೀ ದೇವತೆಗಳಾಗಿದ್ದಾರೆ. ಹಲವು ರಾಜಮನೆತನದವರು ತಮ್ಮನ್ನು 'ಪದ್ಮಾವತೀ ಲಬ್ಧವರ ಪ್ರಸಾದ'ರೆಂದು ಹೇಳಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು.[137] ಎಂದರೆ ಈ ಆರಾಧನೆ ಸಂಪ್ರದಾಯ ಪ್ರಾಯಃ ತಾಂತ್ರಿಕಪದ್ಧತಿಯ ಪ್ರಭಾವದಿಂದ ಹುಟ್ಟಿಕೊಂಡಿರಬೇಕು. ಜೈನಭಟ್ಟಾರಕರಿಂದ, ಧರ್ಮಶ್ರದ್ಧೆಯ ಜನರಿಂದ ಇದು ಆರಂಭಗೊಂಡಿರಬೇಕು. ಮುಳುಗುಂದದ ಮಲ್ಲಿಷೇಣಸೂರಿ ಹಾಗೂ ಇಂದ್ರನಂದಿ 'ಜ್ವಾಲಾಮಾಲಿನೀಕಲ್ಪ' ಎಂಬ ಹೆಸರಿನ ತಾಂತ್ರಿಕ ಗ್ರಂಥಗಳನ್ನು ಬರೆದಿದ್ದಾರೆ. ಈ ಕಲ್ಪನೆಗಳು ಜೈನಧರ್ಮಕ್ಕೆ ವಿರುದ್ಧವಾದರೂ ಸುತ್ತಿನ ಸಮಾಜದ ಪ್ರಭಾವದಿಂದ ಅದನ್ನು ಜೈನಧರ್ಮ ಸ್ವೀಕರಿಸಿರಬೇಕು. ಹಾಗಾಗಿ ಇಂದಿಗೂ ಕೆಲವು ದಿಗಂಬರ ಜೈನರ ಮನೆಗಳಲ್ಲಿ ಇವರು ಮನೆದೇವತೆಗಳಾಗಿ ಮೆರೆದಿದ್ದಾರೆ.[138]

ಮಧ್ಯಯುಗೀನ ಕಾಲದಲ್ಲಿ ಬಸದಿಗಳು ಜೈನರ ಜೀವನದ ಒಂದು ಬಗೆಯ ಅವಿಭಾಜ್ಯ ಅಂಗವಾಯಿತು. ವೈದಿಕ ಧರ್ಮದ ಪ್ರಭಾವ ಅವುಗಳ ಮೇಲೆ ಮೂಡಿತ್ತು. ಅಂತೆಯೇ ಅಲ್ಲಿ ವಿದ್ಯಾದಾನ, ಶಾಸ್ತ್ರದಾನ, ಅಷ್ಟವಿಧಾರ್ಚನ, ದೇವದಾಸಿಯರ ನರ್ತನ, ಹೋಮ, ಸಲ್ಲೇಖನ ಮುಂತಾದವು ನಡೆಯುತ್ತಿದ್ದವು. ಈ ಬಸದಿಗಳಲ್ಲಿ ಕೆಲವು ತ್ರಿಕೂಟ ಪಂಚಕೂಟಗಳು. 'ಒಡೆಗಲ್ ಬಸದಿ' ಮುಂತಾದ ಕೆಲವು ಆದಿನಾಥ, ನೇಮಿನಾಥ, ಶಾಂತಿನಾಥ ತೀರ್ಥಂಕರತ್ರಯರ ಪ್ರತಿಮೆಗಳನ್ನು ಹೊಂದಿದ್ದು ಹಿಂದು ತ್ರೈಪುರುಷ ದೇವಾಲಯಗಳನ್ನು ನೆನಪಿಗೆ ತರುತ್ತವೆ.

ಇಂಗಿಣಿ ಮರಣಹೊಂದಿದ ಸ್ಥಳದಲ್ಲಿ ಜಿನಬಸದಿ ಎತ್ತಿಸಿರುವುದಕ್ಕೆ ಕೊಪ್ಪಳ ತಾಲ್ಲೂಕಿನ ಬಿಚ್ಚುಕುಂದೆಯ ಬಸದಿಯೊಂದು ಸಾಕ್ಷಿಯಾಗಿದೆ:

ಕಡುತಪಮಿಂಗಿಣಿಮರಣದೊ
ಳೊಡಲಂ ತವೆ ನೋನ್ತು ಸಿಂಹಣಂದ್ಯಾಚಾರ್ಯರ್
ಮುಡಿಪಿದೆಡೆಯೊಳ್ ಬೆಡಂಗಂ
ಪಡೆದಿರೆ ಮಾಡಿಸಿ ಜಿನೇಂದ್ರಚೈತ್ಯಾಳಯಮಂ ॥[139]

ಮಧ್ಯಕಾಲದಲ್ಲಿ ನಿಸದಿಗೆಯ ನಿರ್ಮಾಣ, ಪರೋಕ್ಷ ವಿನಯದ ಕಾರ್ಯ ಸತ್ತಸ್ಥಳದಲ್ಲೂ ಶ್ರವಣಬೆಳ್ಗೊಳದಲ್ಲೂ ನಡೆಯುತ್ತಿದ್ದುವು.[140] ಹೂವಿನಬಾಗೆಯಲ್ಲಿ (ರಾಯ್‌ಬಾಗ) ಸಲ್ಲೇಖನದಿಂದ ಮರಣವನ್ನಪ್ಪಿದ ಭಾನುಕೀರ್ತಿ ಮುನಿಗೆ ಶ್ರವಣಬೆಳ್ಗೊಳದಲ್ಲಿ ನಿಸಿದಿಗೆಯನ್ನು ಮಾಡಲಾಗಿದೆ. ಹೇಮಾವತಿಯಲ್ಲಿ ನೋಂತು ಮರಣ ಹೊಂದಿದ ರಾಷ್ಟ್ರಕೂಟ ನಾಲ್ಕನೆಯ ಇಂದ್ರನಿಗೆ ಶ್ರವಣಬೆಳ್ಗೊಳದಲ್ಲೂ ನಿಸದಿಗೆಯನ್ನು ಹಾಕಿದ್ದಾರೆ. ಹೇಮಾವತಿಯನ್ನುಳ್ಳ ನೊಳಂಬವಾಡಿ ಇಂದ್ರನ ಆಡಳಿತಕ್ಕೊಳಪಟ್ಟಿತ್ತೆಂಬುದು ಚಾವುಂಡರಾಯನ ತ್ಯಾಗದ ಬ್ರಹ್ಮದೇವರ ಕಂಬದಲ್ಲಿನ ಶಾಸನದಿಂದ ಸ್ಪಷ್ಟವಿದೆ. ಈ ಕಾರ್ಯ ಅಪರಕ್ರಿಯೆಗಳಂತಹದಾಗಿತ್ತು.

ಮುಮುಕ್ಷುಜೀವನವನ್ನು ರೂಪಿಸಿಕೊಳ್ಳಲು ಅನುಕೂಲವಾಗುವ ಕಾಲಗಳೇ ಪರ್ವಕಾಲಗಳು. ಆಗ ಆಚರಿಸುವ ವ್ರತಾಚಾರಗಳೇ ನೋಂಪಿಗಳು. ಜೈನದರ್ಶನ ಆಧ್ಯಾತ್ಮಿಕ ಸಾಧನೆಗೆ ಸಹಾಯವಾಗುವಂತೆ ಅಷ್ಟಾಹ್ನಿಕ, ದಶಲಕ್ಷಣ ಮೊದಲಾದ ಪರ್ವದಿನಗಳನ್ನು ಕಲ್ಪಿಸಿಕೊಟ್ಟಿದೆ. ಶ್ರಾವಣ ಕೃಷ್ಣ ಪ್ರತಿಪದೆ, ಭಾದ್ರಪದಮಾಸ, ಆಶ್ವೀಜಮಾಸದಲ್ಲಿ ಜೀವ ದಯಾಷ್ಟಮಿ, ಕಾರ್ತಿಕಮಾಸ (ಕೇವಲಜ್ಞಾನಲಕ್ಷ್ಮೀಪೂಜೆ), ವೈಶಾಖ ಶುದ್ಧ ತೃತೀಯ (ಅಕ್ಷಯತೃತೀಯ), ಶ್ರುತಪಂಚಮಿ (ಜ್ಯೇಷ್ಠ ಶುದ್ಧ ಪಂಚಮಿ), ಮುಂತಾದವು ಪ್ರಸಿದ್ಧ ಪರ್ವಕಾಲಗಳು. ಜೀವದಯಾಷ್ಟಮಿ ಹಾಗೂ ನಂದೀಶ್ವರದಷ್ಟಮಿ ಇವು ಬಹುಮುಖ್ಯ ಹಬ್ಬಗಳೆನಿಸಿವೆ. ಜೀವದಯಾಷ್ಟಮಿಯನ್ನು ದುರ್ಗಾಷ್ಟಮಿಯ ದಿವಸವೇ ಆಚರಿಸಲಾಗುತ್ತದೆ. ಇದು ಹಿಂಸಾದೋಷಗಳನ್ನು ಪರಿಹರಿಸಲು ಆಚರಿಸುವ ನೋಂಪಿ. ನಂದೀಶ್ವರದಷ್ಟಮಿ ವರ್ಷದಲ್ಲಿ ಮೂರು ಸಲ ಆಷಾಢ, ಕಾರ್ತಿಕ ಮತ್ತು ಫಾಲ್ಗುಣ ಮಾಸಗಳಲ್ಲಿ ಆಚರಿಸಲಾಗುತ್ತದೆ. ರತ್ನತ್ರಯಗಳ ಆರಾಧನೆಯಿಂದ ಸಿದ್ಧಪದವಿಯನ್ನು ಪಡೆಯುವುದು ನಂದೀಶ್ವರದ ಉದ್ದೇಶ. ನಂದೀಶ್ವರದಲ್ಲಿ ಪೂಜಿಸಲ್ಪಡುವ ಪ್ರತಿಮೆಯನ್ನು ಲಕ್ಷ್ಮೇಶ್ವರದ ಶಂಖಬಸದಿಯಲ್ಲಿ ಈಗಲೂ ನೋಡಬಹುದಾಗಿದೆ.[141] ಶ್ರುತಪಂಚಮಿಯಂದು ಸರಸ್ವತೀ ಪೂಜೆಯನ್ನು ಮಾಡಲಾಗುತ್ತದೆ. ಷಟ್ಖಂಡಾಗಮ ಸಮಾಪ್ತಿಯಾದಂದಿನಿಂದ ಈ ಹಬ್ಬ ಆಚರಣೆಯಲ್ಲಿ ಬಂದಿತೆಂದು ಹೇಳಲಾಗುತ್ತದೆ.

ಜೈನಧರ್ಮದ ಪ್ರಸಾರ ಕನ್ನಡದಲ್ಲಿ ಅವ್ಯಾಹತವಾಗಿ ನಡೆಯಿತು. ಕನ್ನಡ ಸಾಹಿತ್ಯಕ್ಕೆ ಅಸ್ತಿಭಾರವನ್ನು ಹಾಕಿದ ಕೀರ್ತಿ ಜೈನಪುರಾಣಗಳಿಗೆ ಸಲ್ಲುತ್ತದೆ. ಜೈನಪುರಾಣಗಳು ಜೈನಧರ್ಮ ದರ್ಶನಗಳ ಚಿತ್ರವನ್ನು ಪ್ರತಿಬಿಂಬಿಸುವ ಕನ್ನಡಿಗಳಾಗಿವೆ. ತೀರ್ಥಂಕರರ ಜೀವನ ಚರಿತ್ರೆಗಳು ಮುಖ್ಯವಾಗಿ ಈ ಪುರಾಣಗಳ ಕಥಾವಸ್ತುಗಳಾಗಿವೆ. ಈ ಕೃತಿಗಳಲ್ಲಿ ನ್ಯೂನಾತಿಶಯಗಳಿಂದ ವರ್ಣಿಸುವ ವಿಷಯಗಳೆಂದರೆ; ಲೋಕಾಕಾರ ಕಥನ, ದೇಶನಿವೇಶೋಪ

ದೇಶ, ನಗರ ಸಂಪತ್ಪರಿವರ್ಣನ, ರಾಜ್ಯರಾಮಣೀಯಕಾಖ್ಯಾನ, ತೀರ್ಥಮಹಿಮ ಸಮರ್ಥನ, ಚತುರ್ಗತಿ ಸ್ವರೂಪನಿರೂಪಣ, ತಪೋದಾನವಿಧಾನ ವರ್ಣನ ಮತ್ತು ತತ್ಫಲ ಪ್ರಾಪ್ತಿ ಪ್ರಕಟನೆ—ಎಂಬ ಅಷ್ಟಾಂಗಗಳು.

ಚೈತ್ಯನಿರ್ಮಾಣ ಸಾಹಿತ್ಯನಿರ್ಮಾಣ ಇವು ಪ್ರಾರಂಭದಲ್ಲಿ ಆತ್ಮೋದ್ಧಾರಕ್ಕೆ ಸಾಧನ ಗಳಾದವು. ಆದರೆ ಮುಂದೆ ಜನಮನವನ್ನು ಒಲಿಸಿಕೊಳ್ಳುವಲ್ಲಿ ಪ್ರಾಚೀನತೆಯನ್ನು ಒದಗಿ ಸಲು ಕೆಲವು ಸಲ ಪೌರಾಣಿಕ ವಿಷಯಗಳನ್ನು ಲೌಕಿಕಕ್ಕೆ ಅನ್ವಯಿಸಿದವು. ಉದಾಹರಣೆಗೆ ಹಿಂದುಗಳ ದೇವಸ್ಥಾನಗಳಿಗೆ ರಾಮಾಯಣ ಮಹಾಭಾರತಗಳ ವ್ಯಕ್ತಿಗಳ ಸಂಪರ್ಕ ಸೃಷ್ಟಿ ಸಿದಂತೆ ಜಿನಮಂದಿರಗಳಿಗೂ ಅಂಥ ಸಂಪರ್ಕವನ್ನು ಕಲ್ಪಿಸಿದವು : ಹನಸೋಗೆಯ ಬಸದಿಗೆ ರಾಮ ದತ್ತಿಹಾಕಿದ್ದರೆಂದು ಅಲ್ಲಿನ ಒಂದು ಶಾಸನ ವಿವರಿಸುತ್ತದೆ.[142] ಪಾಂಡವರ ಸಂಪರ್ಕ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ಶಾಸನವೊಂದರಿಂದ ವ್ಯಕ್ತವಾ ಗುತ್ತದೆ. ಘಟಂತಕ ದೇವಿಯ ಪ್ರಸ್ತಾಪ ಧಾರವಾಡ ಜಿಲ್ಲೆಯ ಮೊರಬ ಹಾಗೂ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಕಣೆನೂರು ಶಾಸನ ಇವುಗಳಲ್ಲಿ ಬಂದಿವೆ.[143] ಒಂದು ಸಂಸ್ಕೃತಿ ಇನ್ನೊಂದರ ಮೇಲೆ ಪ್ರಭಾವ ಬೀರುವುದು, ತನ್ನ ಮುದ್ರೆಯನ್ನೊತ್ತುವುದು ಸ್ವಾಭಾವಿಕವೆಂಬುದಕ್ಕೆ ಈ ಕೆಲವು ನಿದರ್ಶನಗಳೇ ಸಾಕ್ಷಿ.

ಕ್ರಿ.ಶ. ಸು. ೧೨ನೆಯ ಶತಮಾನದ ತರುವಾಯ ಜೈನಧರ್ಮ ಇಳಿಗಾಲದ ಸ್ಥಿತಿಯನ್ನು ಅನುಭವಿಸಿತು ಎಂಬುದು ವಿದ್ವಾಂಸರ ಅಭಿಪ್ರಾಯ.[144] ಶ್ರೀವೈಷ್ಣವ, ವೀರಶೈವ ಈ ಹೊಸ ಮತಗಳ ಪ್ರಭಾವ ಈ ಕಾಲದಲ್ಲಿ ಮಿಗಿಲಾಯಿತು. ತುಂಗಭದ್ರೆಯ ಈಚೆಗೆ ಮಾತ್ರ ಶ್ರೀವೈಷ್ಣವದ ಪ್ರಭಾವ. ವೀರಶೈವವಾದರೋ ಆ ತುದಿಯಿಂದ ಈ ತುದಿಯ ವರೆಗೆ ಪಸರಿಸಿ ಅಲ್ಲಲ್ಲಿ ಭದ್ರವಾಗಿ ತಳವೂರಿ ನಿಂತಿತು. ಆಗೀಗ ನಾಡು ಜೈನ ವೈಷ್ಣವ, ಜೈನ ವೀರಶೈವ ಮತಗಳಲ್ಲಿ ಸ್ಪರ್ಧೆಯುಂಟಾಗಿ ಮತ ವೈಷಮ್ಯದ ರಂಗಸ್ಥಲವೇ ಆಯಿತು. ಬಸದಿಗಳು ಈಶ್ವರನ ಆಲಯಗಳಾದವು.[145] ರಾಜರು ಸರ್ವಧರ್ಮಸಹಿಷ್ಣುಗಳಾಗಿ ಈ ವಾದ ವಿವಾದಗಳನ್ನು ಬಗೆಹರಿಸಿ ಸೌಹಾರ್ದತೆಯನ್ನು ಉಂಟುಮಾಡಿದ ಸಂದರ್ಭಗಳೂ ಉಂಟು.[146] ಮತೀಯವಾದ ಮೇಲಾಟಗಳು ಬರಬರುತ್ತ ಅಧಿಕವಾದುದಕ್ಕೆ ಸಾಹಿತ್ಯದಲ್ಲಿ ನಿದರ್ಶನಗಳು ದೊರೆಯುತ್ತವೆ. ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ

ಕಡಿದೊಡೆ ಬಾಣಂ ಕೆಯ್ಯುಂ
ಗಡ ಕೂಡೆ ಕೊನರ್ತುದಾ ಮಯೂರನ ತೊನ್ನಾ
ದೊಡಲುಂ ಸುವರ್ಣಮಾದುದು
ಗಡ ದೇವರ ವರದಿನೆಂದು ಮೂಢರ್ ನುಡಿವರ್ ॥

ಇಂಥ ಪರಮತಗರ್ಹಣೆಯ ಚಿತ್ರಗಳಿರುವುದನ್ನು ಇಲ್ಲಿ ನೆನೆಯಬಹುದು.

ಜೈನಧರ್ಮವು ಇಳಿಮುಖಹೊಂದಲು ಪ್ರಾಯಃ ಇನ್ನೊಂದು ಕಾರಣವೆಂದರೆ ಅಲ್ಲಿ ಭಕ್ತಿ, ದೈವಕಾರುಣ್ಯ ಈ ದೃಷ್ಟಿಗಳ ಅಭಾವವಿದ್ದುದು.

## ಆಜೀವಿಕರು

ಕರ್ನಾಟಕದಲ್ಲಿ ಆಜೀವಿಕ ಪಂಥದವರು ಇದ್ದರೆಂಬುದಕ್ಕೆ ದೊರೆಯುವ ಪುರಾವೆಗಳು ಅತ್ಯಲ್ಪ. ಕೋಲಾರ ಜಿಲ್ಲೆಯಲ್ಲಿ ದೊರೆಯುವ ಕೆಲವು ತಮಿಳು ಶಾಸನಗಳನ್ನು ಬಿಟ್ಟರೆ ಕನ್ನಡ ಶಾಸನಗಳಲ್ಲಿ ಎಲ್ಲಿಯೂ ಇವರ ಬಗ್ಗೆ ಉಲ್ಲೇಖವಿರುವಂತೆ ಕಂಡುಬರುವುದಿಲ್ಲ. ಸೋಮದೇವನ 'ಯಶಸ್ತಿಲಕ ಚಂಪು'ವಿನಲ್ಲಿ ಇವರನ್ನು ಹೆಸರಿಸಿದೆಯೇ ಹೊರತು ಅವರ ತತ್ತ್ವದ ಬಗ್ಗೆಯಾಗಲಿ, ಆಚಾರದ ಬಗ್ಗೆಯಾಗಲಿ ಯಾವ ಮಾಹಿತಿಯನ್ನೂ ಕೊಟ್ಟಿಲ್ಲ. ಆದರೆ ಕರ್ನಾಟಕದ ನೆರೆಯ ರಾಜ್ಯಗಳಾದ ತಮಿಳುನಾಡು ಮತ್ತು ಆಂಧ್ರಗಳಲ್ಲಿ ಇವರು ಇದ್ದರೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. 'ಮಣಿಮೇಖಲೈ' 'ಶಿಲಪ್ಪದಿಕಾರಂ' ಎಂಬ ತಮಿಳು ಪ್ರಾಚೀನ ಕಾವ್ಯಗಳಲ್ಲಿ ಈ ಪಂಥದ ತತ್ತ್ವಗಳನ್ನು ಉಲ್ಲೇಖಿಸಿದೆ.

ಕೋಲಾರ ಜಿಲ್ಲೆಯ ಅವನಿ ಶಾಸನ, ಕಲ್ಲುಹಳ್ಳಿ ಶಾಸನ ಮತ್ತು ಮುಡಿವಾಳಿ ಶಾಸನಗಳಲ್ಲಿ ಆಚುವಿಮುಕ್ಕಳ್, ಆಚುವಕ್ಕಟವ್ವೈ ಎಂಬ ತಮಿಳು ಪದಗಳಲ್ಲಿರುವ 'ಆಚುವ' ಎಂಬುದು ಆಜೀವಿಕ ಪಂಥವನ್ನು ಸೂಚಿಸುತ್ತದೆ ಎಂದು ಹೇಳಿದರೂ ಸಮಕಾಲೀನ ಕನ್ನಡ ಶಾಸನಗಳಲ್ಲಿ ಎಲ್ಲಿಯೂ 'ಆಚುವ' ಪದದ ಬಳಕೆ ಕಂಡುಬರುವುದಿಲ್ಲ. ಆದರೆ ಕನ್ನಡಿಗರಿಗೆ ಈ ಪಂಥದ ಇರುವಿಕೆಯ ಅರಿವಿತ್ತೆಂಬುದಕ್ಕೆ ಕೆಲವು ಮಾಹಿತಿಗಳಿವೆ. ಹಲಾಯುಧನ 'ಅಭಿಧಾನ ರತ್ನಮಾಲೆ'ಯಲ್ಲಿ 'ಆಜೀವಿಕ' (ಸವಣ ಎಂಬ ಅರ್ಥದಲ್ಲಿ)[147] ಮತ್ತು ಮಂಗರಾಜನ ನಿಘಂಟಿನಲ್ಲಿ 'ದಂಡಾಜೀವಿಕ' ಎಂಬ ಪದಗಳು ದೊರೆಯುತ್ತವೆ. ವೀರಣಂದಿಯ 'ಆಚಾರಸಾರ'ದಲ್ಲಿ 'ಆಜೀವಿಕ' ಎಂಬ ಪದಕ್ಕೆ 'ಬೌದ್ಧಭೇದಮಪ್ಪ ಕಾಂಜಿಭಿಕ್ಷು' ಎಂದು ವ್ಯಾಖ್ಯಾನಿಸಿದ್ದಾನೆ.[148] ನೇಮಿಚಂದ್ರನ 'ತ್ರಿಲೋಕಸಾರ'ದ ಕನ್ನಡ ವ್ಯಾಖ್ಯಾನದಲ್ಲೂ ಇವರ ಹೆಸರಿದೆ. ಕನ್ನಡ ಸಾಹಿತ್ಯದಲ್ಲಾಗಲಿ ಶಾಸನಗಳಲ್ಲಾಗಲಿ ಹೆಚ್ಚು ಉಲ್ಲೇಖವಿಲ್ಲದೇ ಇರುವುದರಿಂದ ಕರ್ನಾಟಕದಲ್ಲಿ ಆಜೀವಿಕರು ಅತ್ಯಲ್ಪ ಸಂಖ್ಯಾತರಾಗಿದ್ದಿರಬಹುದೆಂಬ ಅಭಿಪ್ರಾಯವಿದೆ.[149] ಮೌರ್ಯರ ಸುವರ್ಣಯುಗದ ನಂತರ ಎಂದರೆ ಅಶೋಕನ ಮತ್ತು ದಶರಥನ ನಂತರ ಆಜೀವಿಕರ ಪ್ರಭಾವ ಮತ್ತು ಪ್ರಾಮುಖ್ಯ ಕ್ಷೀಣಿಸುತ್ತ ಬಂದು, ಕರ್ನಾಟಕದ ಪೂರ್ವ ಮತ್ತು .ಅದಕ್ಕೆ ಹೊಂದಿಕೊಂಡಂತೆ ಇರುವ ತಮಿಳುನಾಡಿನ ಕೆಲವು ಭಾಗಗಳಲ್ಲಿ ಕೇವಲ ಸ್ಥಳೀಯ ಸಣ್ಣ ಪಂಗಡವಾಗಿದ್ದು, ಅವರು ಕೆಲವು ಕಾಲದ ನಂತರ ಕಾಣದಾಗಿರಬಹುದು.[150]

## ಬೌದ್ಧಧರ್ಮ

ಬೌದ್ಧಧರ್ಮ ಆರಂಭಕಾಲದಲ್ಲಿ ಅಶೋಕ ಚಕ್ರವರ್ತಿಯ ಆಶ್ರಯ ಸಿಕ್ಕಿ ಇಡೀ ಭರತ ಖಂಡದಲ್ಲಿ ಪ್ರಸಿದ್ಧವಾಗಿದ್ದಿತಾದರೂ, ಕರ್ನಾಟಕದಲ್ಲಿ ಅದು ಯಾವಾಗಲೂ ಪ್ರಬಲ ಧರ್ಮವಾಗಿರಲಿಲ್ಲ. ಕ್ರಿ.ಪೂ. ೩ನೆಯ ಶತಮಾನದಲ್ಲಿ ಬೌದ್ಧಮತವನ್ನು ಅಂಗೀಕರಿಸಿದ ಮೌರ್ಯ ಮನೆತನದ ಅಶೋಕ ಮಹಾರಾಜನು ದಕ್ಷಿಣಭಾರತದಲ್ಲಿ ಆ ಮತವನ್ನು ಹಬ್ಬಿಸಲು

ಪ್ರಯತ್ನಿಸಿದನು.[151] 'ಮಹಾವಂಶ' ಮತ್ತು 'ದೀಪವಂಶ'ಗಳ ಪ್ರಕಾರ ಅಶೋಕನ ಕ್ರಿ.ಪೂ. ೩ನೆಯ ಶತಮಾನದಲ್ಲಿ, ಮಹಿಷಮಂಡಲಕ್ಕೆ ಮಹಾದೇವನನ್ನು ಹಾಗೂ ಬನವಾಸಿಗೆ ರಕ್ಷಿತನನ್ನು ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು. ಕರ್ನಾಟಕದಲ್ಲಿ ಮಾಸ್ಕಿ, ಕೊಪ್ಪಳ, ಸಿದ್ಧಾಪುರ, ಜಟಿಂಗರಾಮೇಶ್ವರ ಮತ್ತು ಬ್ರಹ್ಮಗಿರಿಗಳಲ್ಲಿ ಸಿಕ್ಕಿರುವ ಅಶೋಕನ ಕ್ರಿ.ಪೂ. ೩ನೆಯ ಶತಮಾನದ ಶಾಸನಗಳೇ ಬೌದ್ಧಧರ್ಮದ ಅತ್ಯಂತ ಪ್ರಾಚೀನ ಕುರುಹುಗಳು. ಚಂದ್ರವಳ್ಳಿಯ ಶಾಸನಗಳು ಬೌದ್ಧಧರ್ಮ ಕ್ರಿಸ್ತಪೂರ್ವದಲ್ಲಿಯೇ ಕರ್ನಾಟಕದಲ್ಲಿ ಹರಡಿತ್ತೆಂಬುದನ್ನು ಸ್ಪಷ್ಟಪಡಿಸುತ್ತವೆ.

ಕ್ರಿ.ಶ.ದ ಆರಂಭದಲ್ಲಿ ಆಳುತ್ತಿದ್ದ ಸಾತವಾಹನರು ಬೌದ್ಧಧರ್ಮಕ್ಕೆ ಹೆಚ್ಚು ಪ್ರಾಶಸ್ತ್ಯವನ್ನಿತ್ತಿದ್ದರು. ಆ ಕಾಲದಲ್ಲಿಯೇ ಅಮರಾವತಿಯ ಸ್ತೂಪಗಳು ಹಾಗೂ ವಿಹಾರಗಳು ಕಟ್ಟಲ್ಪಟ್ಟವು. ಬನವಾಸಿಯಲ್ಲಿನ ಕ್ರಿ.ಶ. ೩ನೆಯ ಶತಮಾನದ ಪ್ರಾಕೃತ ಶಾಸನದ[152] ಪ್ರಕಾರ ಚುಟುಕುಲದ ಸಾತಕರ್ಣಿಯ ಮಗಳು ಬನವಾಸಿಯಲ್ಲಿ ನಾಗವನ್ನೂ ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿದಳೆಂದು ತಿಳಿದುಬರುತ್ತದೆ. ಬನವಾಸಿಯ ಬ್ರಾಹ್ಮೀಲಿಪಿಯ ಶಾಸನದಲ್ಲಿ ಈ ವಂಶದ ಶಿವಸ್ಕಂದ ನಾಗಶ್ರೀ ಎಂಬ ರಾಜಪುತ್ರಿ ಒಂದು ಬೌದ್ಧ ವಿಹಾರವನ್ನೂ ಕೆರೆಯನ್ನೂ ಕಟ್ಟಿಸಿದಂತೆ ಬಣ್ಣಿಸಿದೆ.[153] ಬಾಣ ಹಾಗೂ ಗಂಗ ವಂಶದ ರಾಜರುಗಳು ಕೂಡ ಇದಕ್ಕೆ ಪೋಷಣೆಯನ್ನು ಕೊಟ್ಟಿದ್ದರೆಂಬುದಕ್ಕೆ ಸಾಕ್ಷಿಗಳಿವೆ. ಕ್ರಿ.ಶ. ೪ನೆಯ ಶತಮಾನದ (ಕ್ರಿ.ಶ. ೩೩೮) ಶಾಸನವೊಂದು[154] ಬಾಣದೊರೆಯನ್ನು 'ಪ್ರಾಣಿಗಳಿಗೆ ದಯೆತೋರುವುದರಲ್ಲಿ ಬೋಧಿಸತ್ವನನ್ನು ಹೋಲುವನು' ಎಂಬುದಾಗಿ ಹೇಳುತ್ತದೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಆಳಿದ ಗಂಗವಂಶದ ತಡಂಗಾಲ ಮಾಧವನು ಬೌದ್ಧವಿಹಾರಕ್ಕೆ ಭೂಮಿಯನ್ನು ದಾನ ಮಾಡಿದ ವಿಷಯವನ್ನು ಹೇಳುವ ಶಾಸನವೊಂದಿದೆ.[155] ಕ್ರಿ.ಶ. ೧೮೪೪ರಲ್ಲಿ ಚಂದ್ರವಳ್ಳಿಯಲ್ಲಿ ದೊರೆತಿರುವ ಶಾತವಾಹನರ ಕಾಲದ ನಾಣ್ಯಗಳ ಮೇಲೆ ಬೋಧಿವೃಕ್ಷದ ಚಿಹ್ನೆಯಿರುವುದು ಕಂಡುಬಂದಿದೆ. ಪಶ್ಚಿಮ ಕರ್ನಾಟಕದ ತಾಮ್ರಪಟವೊಂದರಲ್ಲಿ[156] 'ವಿಹಾರ' ಮತ್ತು 'ಆರ್ಯಸಂಘ'ಗಳಿಗೆ ದೀಪಕ ಎಂಬ ನಾಡಿನ ಸುಂದರಿಕಾ ಎಂಬ ಹೆಸರಿನ ಗ್ರಾಮವನ್ನು ದಾನವಾಗಿ ಕೊಡಲಾಯಿತು ಎಂದಿದೆ. ಕ್ರಿ.ಶ.ದ ಆರಂಭಕ್ಕೆ ಸೇರಿದ್ದಿರಬಹುದಾದ ಧ್ಯಾನಭಂಗಿಯಲ್ಲಿರುವ ಬುದ್ಧನ ಪ್ರತಿಮೆಯೊಂದು ಕರ್ನಾಟಕದ ಪಶ್ಚಿಮಕ್ಕಿರುವ ಗೋವೆಯಲ್ಲಿ ದೊರೆತಿದೆ.

ಹುಯೆನ್‌ತ್ಸಾಂಗನ ಪ್ರಕಾರ ಕ್ರಿ.ಶ. ೭ನೆಯ ಶತಮಾನದಲ್ಲಿ ಕಾಂಚೀಪುರದಲ್ಲಿ ಬೌದ್ಧಧರ್ಮವು ಪ್ರಚಲಿತವಾಗಿತ್ತೆಂದೂ ನೂರು ಸಂಘಾರಾಮಗಳು ಹಾಗೂ ೧೦,೦೦೦ ಭಿಕ್ಷುಗಳು ಅಲ್ಲಿದ್ದುದಾಗಿಯೂ ಅಶೋಕನಿಂದ ಕಟ್ಟಲ್ಪಟ್ಟುದಾಗಿ ಪ್ರತೀತಿ ಇದ್ದ ೧೦೦ ಅಡಿ ಎತ್ತರದ ಸ್ತೂಪವೊಂದು ಕೂಡ ಇದ್ದುದಾಗಿಯೂ ತಿಳಿದುಬರುತ್ತದೆ. ಅವನು ಬನವಾಸಿಯನ್ನು ಕೂಡ ಹೆಸರಿಸಿ, ಅಲ್ಲಿಯೂ ಅನೇಕ ಸಂಘಾರಾಮಗಳು ಹಾಗೂ ಹೀನಯಾನ ಮಹಾಯಾನ ಎಂಬ ಎರಡೂ ಮಾರ್ಗಗಳನ್ನು ಅನುಸರಿಸುತ್ತಿದ್ದ

ಭಿಕ್ಷುಗಳು ಇದ್ದುದಾಗಿ ಹೇಳುತ್ತಾನೆ. ಕಾರ್ಲಾ, ಕನ್ಹೇರಿ ಮುಂತಾದ ಕಡೆ ಬೌದ್ಧ ಗುಹೆಗಳ ರಚನೆಗೆ ಬನವಾಸಿಯ ಕನ್ನಡ ವರ್ತಕರು ಬೇಕಾದಷ್ಟು ದಾನಮಾಡಿದ್ದಾರೆ.[157] ಕೊಪ್ಪಳವೂ ಹುಯೆನ್‌ತ್ಸಾಂಗನ ಪ್ರಕಾರ ಆ ಕಾಲದಲ್ಲಿ ಬೌದ್ಧಕೇಂದ್ರವಾಗಿತ್ತು. ಕಾಡಿಯೂರಿನಲ್ಲಿ ಚತುಸ್ಸಮಯದ ದೇವತಾನಿಳಯಗಳಿದ್ದು, ಅಲ್ಲಿಯ ಪೂಜೆ, ಅಲ್ಲಿಯ ಮುನಿನಾಥರು, ಅಲ್ಲಿಯ ಮಹಾಸಂಪತ್ತು ಆಶ್ಚರ್ಯಕರವಾಗಿದ್ದುವು[158] ಎಂದು ತಿಳಿಯುವುದು. ಮಾಂಸಾಹಾರಿಗಳಾದ ಬೌದ್ಧರನ್ನು 'ಯಶಸ್ತಿಲಕ ಚಂಪು'ವಿನ ಸೋಮದೇವ ಸೂರಿಯು ಹೆಸರಿಸುತ್ತಾನೆ.[159]

ಮತಗಳ ಮೇಲಾಟದಲ್ಲಿ ಬೌದ್ಧರಿಗೂ ಜೈನರಿಗೂ, ಬೌದ್ಧರಿಗೂ ಶೈವರಿಗೂ ಆಗಾಗ್ಗೆ ಘರ್ಷಣೆ ನಡೆಯುತ್ತಿತ್ತೆಂಬುದಕ್ಕೆ ನಿದರ್ಶನಗಳಿವೆ. ಪಾಶುಪತಾಚಾರ್ಯರೊಬ್ಬರನ್ನು 'ಬೌದ್ಧಧ್ವಾ[ನ್ತ]ಭಾನವೇ' ಎಂದು ಹೊಗಳಿರುವುದು ಕಂಡುಬರುತ್ತದೆ.[160] ೫ನೆಯ ಶತಮಾನದ (ಕ್ರಿ.ಶ. ೪೩೦) ತಲಕಾಡಿನ ಶಾಸನವೊಂದು ವಾದಿಮದಗಜೇಂದ್ರನೆಂಬ ಒಬ್ಬ ಬೌದ್ಧನ ಮೇಲೆ ಮಾಧವನು ವಿಜಯ ಸಾಧಿಸಿದುದಾಗಿ ಹೇಳುತ್ತದೆ.[161]

ಶಿವಮೊಗ್ಗ ಜಿಲ್ಲೆಯಲ್ಲಿನ ಬಳ್ಳಿಗಾವಿ ಬೌದ್ಧಮತದ ದೊಡ್ಡ ಕೇಂದ್ರವಾಗಿದ್ದಿತು. ಈ ಗ್ರಾಮದಲ್ಲಿ ಬೌದ್ಧರು ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದು, ಅವರು ಬೌದ್ಧ ವಿಹಾರ ಮತ್ತು ದೇವಾಲಯಗಳನ್ನು ಕಟ್ಟಿಸಿದ್ದರು. ಕಲ್ಯಾಣ ಚಾಲುಕ್ಯ ವಂಶದ ಒಂದನೆಯ ಸೋಮೇಶ್ವರನ ಮಂತ್ರಿಯೂ ದಂಡನಾಯಕನೂ ಆಗಿದ್ದ ರೂಪಭಟ್ಟಯ್ಯನು ಕ್ರಿ.ಶ. ೧೦೬೫ರಲ್ಲಿ ಬಳ್ಳಿಗಾವೆಯಲ್ಲಿ 'ಜಯಂತೀ ಪ್ರಬೌದ್ಧ ವಿಹಾರ' ಎಂಬ ವಿಹಾರವನ್ನು ಕಟ್ಟಿಸಿದನು. ಈ ವಿಹಾರದಲ್ಲಿ ಬುದ್ಧ, ಲೋಕೇಶ್ವರ ಮತ್ತು ತಾರಾ ದೇವಿಯ ವಿಗ್ರಹಗಳು ಸಹವಾಸ ಕುಲದ ನಾಡೆಪೆರ್ಗಡೆ ಹಂಪಾಭಟ್ಟನ ಅರ್ಧಾಂಗಿ ಬಪ್ಪುರ ನಾಗಿಯಕ್ಕನ ಕೊಡುಗೆಯಾಗಿದ್ದಿತು.[162]

ಗದಗ್ ಪಟ್ಟಣದ ದಕ್ಷಿಣದಿಕ್ಕಿನ ಪ್ರದೇಶದಲ್ಲಿನ ನಾಗಾವಿ, ಡಂಬಳ ಮತ್ತು ಕೋಳಿವಾಡ ಗ್ರಾಮಗಳಲ್ಲಿ ಬೌದ್ಧ ಅವಶೇಷಗಳು ದೊರೆತಿವೆ. ನಾಗಾವಿಯಲ್ಲಿ ನಾಗಾರ್ಜುನನ ಗುಡಿಯಿದೆ. ಈತನು ಬೌದ್ಧ ಮಹಾಯಾನ ಪಂಥದ ಆಚಾರ್ಯನೆಂದು ಪ್ರಖ್ಯಾತನಾಗಿದ್ದಾನೆ ಗುಂಟೂರು ಜಿಲ್ಲೆಯಲ್ಲಿನ ನಾಗಾರ್ಜುನಿಕೊಂಡ ಎಂಬ ಸ್ಥಳವು ಬೌದ್ಧ ಅವಶೇಷಗಳಿಂದ ತುಂಬಿದ್ದು ಈತನ ಸ್ಮಾರಕರೂಪವಾಗಿದೆ. ಡಂಬಳದ ಶಾಸನವೊಂದರಲ್ಲಿ[163] ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗವಯ್ಯ ಸೆಟ್ಟಿಯರು ಕಟ್ಟಿಸಿದ ಆರ್ಯ ತಾರಾ ದೇವಿಯ ವಿಹಾರಕ್ಕೂ ಅಲ್ಲಿಯ ಹದಿನಾರು ಶೆಟ್ಟಿಗಳು ಮಾಡಿಸಿದ ಬೌದ್ಧವಿಹಾರಕ್ಕೂ ಅಲ್ಲಿನ ಪೂಜಾದಿಗಳಿಗೂ ಭಿಕ್ಷುಗಳಿಗೂ ದಾನವನ್ನು ಬಿಟ್ಟ ವಿಚಾರವಿದೆ. ಕೋಳಿವಾಡ ಗ್ರಾಮದಲ್ಲಿ ಬೌದ್ಧ ತಾರಾದೇವಿಯ ಭಿನ್ನವಿಗ್ರಹವೊಂದು ದೊರೆತಿದೆ. ಗೋಕರ್ಣಕ್ಕೆ ಎರಡು ಮೈಲಿ ದೂರದಲ್ಲಿರುವ ತೊರ್ಕೆಯೆಂಬ ಗ್ರಾಮದಲ್ಲಿ ಬೌದ್ಧ ಗುಹೆಗಳು ಇವೆ. ೧೨ನೆಯ ಶತಮಾನದ ಹೊಯ್ಸಳ ದೇವಸ್ಥಾನಗಳಲ್ಲಿ ಬುದ್ಧನ ವಿಗ್ರಹಗಳು (ವಿರಳವಾಗಿ ಉಷ್ಣೀಷವಿಲ್ಲದ ವಿಗ್ರಹಗಳು ದೊರಕುತ್ತವೆ.)[164] "ಬಿಜಾಪುರ ಜಿಲ್ಲೆಯ

ಶಾಸನವೊಂದರಲ್ಲಿ ಮಹಾಮಂಡಲೇಶ್ವರ ವಿರುಪರಸನು ಬೌದ್ಧ ಮೊದಲಾದ ಅನ್ಯ ಮತೀಯರನ್ನು ನಾಶಪಡಿಸಿ ಶೈವರ ಪ್ರಶಂಸೆಗೆ ಪಾತ್ರನಾದನೆಂದು ಹೇಳಿದೆ. ಕ್ರಿ.ಶ. ೧೧೯೬ರಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಚಿಕ್ಕಿಂಡಿಯಲ್ಲಿ ಬೌದ್ಧಾಲಯವೂ ಬೌದ್ಧರೂ ಇದ್ದರೆಂದು ಒಂದು ಶಾಸನ ತಿಳಿಸುತ್ತದೆ."[165] ಗುಲ್ಬರ್ಗ ಜಿಲ್ಲೆಯ ಚಿತಾಪುರ ತಾಲ್ಲೂಕಿನ ಭೀಮಾನದಿಯ ಎಡದಂಡೆಯಲ್ಲಿರುವ ಸನ್ನತಿ ಪ್ರಾಚೀನಕಾಲದಲ್ಲಿ ಒಂದು ಬೌದ್ಧ ಕೇಂದ್ರವಾಗಿತ್ತೆಂದೂ ಅದು ಸಾತವಾಹನರ ಕಾಲಕ್ಕೆ ಸೇರಿದ್ದೆಂದೂ ಈಚೆಗೆ ನಡೆದ ಉತ್ಖನನಗಳಿಂದ ತಿಳಿದುಬಂದಿದೆ. ಇಲ್ಲಿ ಪ್ರಾಯಃ ನಾಲ್ಕು ಬೌದ್ಧಸ್ತೂಪಗಳು ಇದ್ದವೆಂದು ಅವಶೇಷಗಳ ಪರಿಶೀಲನೆಯಿಂದ ಗುರುತಿಸಲಾಗಿದೆ; ಗ್ರಾಮದ ವಿವಿಧ ಭಾಗಗಳಲ್ಲಿ ಬುದ್ಧನ ಜೀವನ ಕಥೆಗಳನ್ನು ಸೂಚಿಸುವ ಕೆಲವು ಶಿಲ್ಪಗಳು ಕೂಡ ಕಂಡು ಬಂದಿವೆ.

ಹೀಗೆ ಬೌದ್ಧಧರ್ಮದ ಅವಶೇಷಗಳು ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೩ನೆಯ ಶತಮಾನದವರೆಗೆ ಕರ್ನಾಟಕದಲ್ಲಿ ಸಿಗುತ್ತವೆ. ಕರ್ನಾಟಕದ ಬೌದ್ಧಧರ್ಮದ ಕೊನೆಯ ಉಲ್ಲೇಖವೆಂದರೆ ಹದಿನಾರನೆಯ ಶತಮಾನದ್ದು. ಈ ಕಾಲದ ಶಾಸನವೊಂದರಲ್ಲಿ ಕಲವತಿ[166] ಎಂಬ ಊರನ್ನು 'ಬೌದ್ಧವಸಾಮಹಾಪುರ' ಎಂದಿದೆ.

ಬೌದ್ಧಧರ್ಮದ ಇತಿಹಾಸದಲ್ಲಿ ಹೀನಯಾನ, ಮಹಾಯಾನ ಮತ್ತು ವಜ್ರಯಾನ ವೆಂಬ ಮೂರು ಶಾಖೆಗಳು ಕಂಡುಬರುತ್ತವೆ. "ಇವು ಮೂರು ತಮ್ಮ ಪ್ರಾಬಲ್ಯದ ಕಾಲದಲ್ಲಿ ಕರ್ನಾಟಕದಲ್ಲಿ ತಕ್ಕಮಟ್ಟಿಗೆ ಪ್ರಚಾರದಲ್ಲಿದ್ದವು. ಕ್ರಿಸ್ತಪೂರ್ವದ ಅಶೋಕನ ಕಾಲದ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಧರ್ಮವೆಂದರೆ ಬಹುಶಃ ಬೌದ್ಧಧರ್ಮದ 'ಹೀನ ಯಾನ.' ಕ್ರಿಸ್ತಶಕದ ಆರಂಭದಲ್ಲಿ ಮಹಾಯಾನವು ಪ್ರಚಾರಕ್ಕೆ ಬಂದಿತು....ಬಹುಶಃ ಏಳನೇ ಶತಮಾನದಲ್ಲಿ ನಾಗಾರ್ಜುನನೆಂಬ ಬೌದ್ಧತಾಂತ್ರಿಕನ ಮೂಲಕ ತಾಂತ್ರಿಕ ಬೌದ್ಧಧರ್ಮವು ದಕ್ಷಿಣ ಭಾರತದಲ್ಲಿ ಪ್ರಸಾರವಾಯಿತು. ಈ ವಜ್ರಯಾನದ ಕುರುಹು ಗಳು ಮತ್ತು ತಾಂತ್ರಿಕ ಆಚರಣೆಗಳು ನಮಗೆ ಶಾಸನಗಳಲ್ಲಿ ಸ್ಪಷ್ಟವಾಗಿ ದೊರೆ ದಿದ್ದರೂ, ಬೌದ್ಧದೇವತೆಯಾದ 'ತಾರಾಭಗವತಿ'ಗೆ ಇದ್ದ ಸ್ಥಾನದಿಂದ ಅದನ್ನು ಊಹಿಸಬೇಕಾಗಿದೆ."[167]

ಹೀಗೆ ಬೌದ್ಧಧರ್ಮವು ಕರ್ನಾಟಕದಲ್ಲಿ ಕ್ರಿ.ಪೂ. ೩ನೆಯ ಶತಮಾನದ ಅಶೋಕನ ಕಾಲದಲ್ಲಿ ಕಾಣಿಸಿಕೊಂಡು ನಂತರ ಕ್ರಿ.ಶ. ೧೬ನೆಯ ಶತಮಾನದವರೆಗೆ ಪ್ರಚಲಿತವಾಗಿ ದ್ದಿತು ಎಂದು ಹೇಳಬಹುದು.

## ಶೈವಧರ್ಮ

ಕರ್ನಾಟಕದ ಪ್ರಾಚೀನವೂ ಪ್ರಸಿದ್ಧವೂ ಆದ ಧರ್ಮಗಳಲ್ಲಿ ಶೈವಧರ್ಮವೂ ಒಂದು. ಅದರಲ್ಲಿ ಅನೇಕ ಪಂಗಡಗಳಿದ್ದು ಅವುಗಳನ್ನು ಸ್ಥೂಲವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸುವುದುಂಟು :

ಕಾಪಾಲಂ ಲಾಕುಲಂ ವಾಮಂ ಭೈರವಂ ಪೂರ್ವ ಪಶ್ಚಿಮಂ ।
ಪಾಂಚರಾತ್ರಂ ಪಾಶುಪತಂ ತಥಾನ್ಯಾನಿ ಸಹಸ್ರಶಃ ॥

ಈ ಎಲ್ಲ ಮಾರ್ಗದವರೂ ಕರ್ನಾಟಕದಲ್ಲಿ ಇದ್ದರು. ಅವರಲ್ಲಿ ಮುಖ್ಯರೆಂದರೆ ಲಾಕುಳ ೖವರು (ಪಾಶುಪತರು), ಶೈವ ಸಿದ್ಧಾಂತಿಗಳು, ಶಾಂಕರರು, ಕಾಪಾಲಿಕರು, ಕೌಲರು, ೋರವರು, ಆರಾಧ್ಯರು ಮತ್ತು ವೀರಶೈವರು. ಈ ಶೈವ ಪಂಥಗಳನ್ನು ಹಕ್ಕಿನೋಟ ಂದ ಕೆಳಗೆ ವಿವರಿಸಲಾಗುವುದು.

ಲಕುಲೀಶ-ಪಾಶುಪತ: ಪಾಶುಪತದ ಇತಿಹಾಸ ಮಹಾಭಾರತದಷ್ಟು ಪುರಾತನ.[168] ಿದರ ಪ್ರಕಾರ ಜೀವ ಪಶು, ಅದನ್ನು ಕಟ್ಟಿರುವುದು ಪಾಶ. ಈ ಪಾಶವನ್ನು ತ್ತರಿಸಲು ಒಡೆಯನಾದ ಪಶುಪತಿಗೆ (ಮಹೇಶ್ವರನಿಗೆ) ಪಶು ಶರಣ ಹೋಗಬೇಕು. ದಕ್ಕೆ ಸಾಧನ ಪಾಶುಪತಮಾರ್ಗದ ಅನುಸರಣೆ. ಇದೇ ಪಾಶುಪತವ್ರತ. ಇದನ್ನು ಚರಿಸಿದವರು ಪಾಶುಪತರು ಇಲ್ಲವೆ ಮಾಹೇಶ್ವರರೆಂದು ಹೆಸರಾದವರು. ಲಕುಲೀಶ ಥವಾ ನಕುಲೀಶನಿಂದ ಇದರ ವಿಶೇಷ ಪ್ರಚುರವಾದುದರಿಂದ ಇದು 'ಲಾಕುಳಾಗಮ' ಈ ಪಂಥದ ಅನೇಕ ಶೈವರು ಇದನ್ನು 'ಶ್ರೀಮಲ್ಲಕುಳೀಶ್ವರದೇವ ಮುಖಕಮಳ ನಿರ್ಗತ ಸಕಳಶಾಸ್ತ್ರ'[169] ಎಂದು ಹೇಳಿದುದುಂಟು. ಮಾಧವರ 'ಸರ್ವದರ್ಶನ ಸಂಗ್ರಹ' ್ರಂಥದಲ್ಲಿ ಇದರ ವಿವರಣೆ ಇದೆ. ಈ ಲಕುಲೀಶ ಮತವು ಗುಜರಾತದಿಂದ ಕರ್ನಾಟಕಕ್ಕೆ ಂದಿರಬೇಕು. ಲಕುಲೀಶನು ಸು. ಕ್ರಿ.ಶ. ೨ನೆಯ ಶತಮಾನಕ್ಕಿಂತ ಪೂರ್ವದಲ್ಲಿದ್ದವನು. ವನ ಅವತಾರವೆಂದು 'ಶಿವಪುರಾಣ'ದಲ್ಲಿ ಹೇಳಿದೆ. ಶ್ವೇತನಿಂದ ಲಕುಲಿನ್ ವರೆಗೆ ಶಿವನ ವತಾರಗಳನ್ನು ಅದರಲ್ಲಿ ವಿವರಿಸಿದೆ. ಕರ್ನಾಟಕದಲ್ಲಿ ಇದು ಬಹಳ ಪ್ರಾಚೀನ ಕಾಲ ಂದಲೇ ಬೆಳೆದುಬಂದಿತು. ಲಕುಲೀಶನ ದೇವಸ್ಥಾನಗಳು ಕರ್ನಾಟಕದಲ್ಲಿ ಅನೇಕ ಕಡೆಗೆ ದ್ದುವು. ಬಾದಾಮಿ, ಮಹಾಕೂಟ, ಪಟ್ಟದಕಲ್ಲು, ಎಲ್ಲೋರ ಮೊದಲಾದ ಸ್ಥಳಗಳಲ್ಲಿ ಂದಿಗೂ ಅವು ಕಾಣದೊರೆಯುತ್ತವೆ.[170] ಅಲ್ಲಿರುವ ಲಕುಲೀಶನ ಮೂರ್ತಿಗಳಿಂದ ಈ ಾಗದಲ್ಲಿ ಲಾಕುಳಸಂಸ್ಕೃತಿ ಸಾಕಷ್ಟು ಪ್ರಚಾರದಲ್ಲಿತ್ತೆಂದು ವ್ಯಕ್ತವಾಗುತ್ತದೆ.

ಕದಂಬ, ಬಾದಾಮಿಯ ಚಾಲುಕ್ಯ, ರಾಷ್ಟ್ರಕೂಟ, ಗಂಗ, ಕಲ್ಯಾಣದ ಚಾಳುಕ್ಯ, ೊಯ್ಸಳ, ಕಲಚುರಿ, ಸೇಉಣ, ವಿಜಯನಗರ ಮೊದಲಾದ ಕರ್ನಾಟಕದ ಅರಸು ಮನೆತನಗಳ ರಾಜಮಹಾರಾಜರು, ಅವರ ಮಾಂಡಲಿಕರು ಈ ಪಂಥದವರನ್ನು ್ರೋತ್ಸಾಹಿಸಿದುದಕ್ಕೆ ಅನೇಕ ಶಾಸನಾಧಾರಗಳಿವೆ. ಕದಂಬರ ಕಾಲಕ್ಕೆ ಶೈವಮತ ತ್ತೆಂಬುದಕ್ಕೆ ತಾಳಗುಂದದ ಪ್ರಣವೇಶ್ವರ ದೇವಾಲಯವೇ ಸಾಕ್ಷಿ. ಬಾದಾಮಿ ಾಗೂ ಪಟ್ಟದಕಲ್ಲು ಈ ಮತದ ಕೇಂದ್ರ ಸ್ಥಳಗಳಲ್ಲಿ ಸೇರಿದ್ದವು. ಬಾದಾಮಿಯಲ್ಲಿ ಳುತ್ತಿದ್ದ ಚಾಲುಕ್ಯರು ತಮ್ಮನ್ನು 'ಪರಮಭಾಗವತರು' ಎಂದು ಹೇಳಿಕೊಂಡಂತೆ 'ಪರಮ ಮಾಹೇಶ್ವರರು' ಎಂದೂ ಹೇಳಿಕೊಂಡಿದ್ದಾರೆ.[171] ಪಟ್ಟದಕಲ್ಲು ಶೈವಮತಸ್ಥರಿಗೆ ಒಂದು ಶಿಷ್ಟ ಕೇಂದ್ರವೂ ಆಗಿತ್ತು. 'ಸಿಂಗಿರಾಜಪುರಾಣ', 'ಹಮ್ಮೀರ ಕಾವ್ಯ' ದಕ್ಷಿಣ ಾಶಿಯೆಂದೇ ಅದನ್ನು ವರ್ಣಿಸಿದೆ. ಅದನ್ನು ಅಲ್ಲಿನ ಕ್ರಿ.ಶ. ೧೧೬೨ರ ಶಾಸನವೊಂದೂ

ಇದನ್ನೇ ಸಾರುತ್ತದೆ.[172] ಅಲ್ಲಿನ ಶಾಸನವೊಂದು ದಕ್ಷಿಣ ಹಾಗೂ ಉತ್ತರದಲ್ಲಿ ಪ್ರಚಲಿತ ವಿದ್ದ ಲಿಪಿಗಳಲ್ಲಿ ಬರೆಯಲಾಗಿದ್ದು 'ಜ್ಞಾನಶಿವಾಚಾರ್ಯ' ಎಂಬ ವ್ಯಕ್ತಿ ಉತ್ತರದ 'ಮೃಗಷಣಿಕಾಹಾರ' ಎಂಬಲ್ಲಿಂದ ಬಂದಿದ್ದನೆಂದು ತಿಳಿಸುತ್ತದೆ[173]; ಇದರಿಂದ ಆ ಸ್ಥಳದ ಹಿರಿಮೆ ವ್ಯಕ್ತವಾಗುತ್ತದೆ. ಹೇಮಾವತಿಯಲ್ಲಿನ ಶಾಸನವೊಂದರಲ್ಲಿ ಅಲ್ಲಿನ ಚಿಲ್ಲುಕಾಚಾರ್ಯನನ್ನು ಲಕುಲೀಶನ ಅವತಾರವೆಂದೇ ಹೇಳಲಾಗಿದೆ.[174] ನೊಳಂಬರ ಕಾಲದಲ್ಲಿನ ಈ ಪಂಥದವರು ಕಟ್ಟಿದ ಇಲ್ಲಿನ ದೇವಾಲಯಗಳು ಇಂದಿಗೂ ಪೂಜೆ ಕಾಣುತ್ತಿವೆ. ಇದರ ಪೂಜಾರಿಗಳು ವೀರಶೈವ ಮತದ ಜಂಗಮರೆಂದೂ ಸಿದ್ಧೇಶ್ವರ ದೇವರ ಅರ್ಚಕರ ಮನೆತನ ಸಾಕಷ್ಟು ಪುರಾತನವೆಂದೂ ತಿಳಿದುಬಂದಿತು. ಈಗಿನ ವೀರಶೈವ ಜಂಗಮರಿಗೆ ಕಾಳಾಮುಖ ಗುರುಗಳೇ ಪೂರ್ವಜರು ಎಂಬ ಹೇಳಿಕೆ ಈ ಸಂದರ್ಭದಲ್ಲಿ ಗಮನಾರ್ಹ.[175] ಕೊಂಡಗುಳಿ ಕೇಶಿರಾಜನ ಕೊಂಡಗುಳಿ ಶಾಸನ[176], ಬಸವಣ್ಣನವರ ಅನ್ವಯವನ್ನು ತಿಳಿಸುವ ಅರ್ಜುನವಾಡ ಶಿಲಾಶಾಸನ ಲಾಕುಳ- ಪಾಶುಪತಶೈವರೇ ಮುಂದೆ ವೀರಶೈವರಾದರೆಂಬುದಕ್ಕೆ ಸಾಕ್ಷಿಯಾಗಿವೆ. ಲಕುಲೀಶನ ನಾಲ್ಕು ಮಂದಿ ಶಿಷ್ಯರಲ್ಲಿ ಒಬ್ಬನಾದ ಗರ್ಗನ ಪರಂಪರೆಯ ತ್ರಿಪುರಾಂತಕದೇವ ಎಪ್ಪತ್ತೇಳು ಮಠಗಳಿಗೆ ಅಧಿಪತಿಯಾಗಿದ್ದ. 'ತ್ರಿಪುರಾಂತಕ ಪರಂಪರೆ' ಈ ಗುರುವಿಗೆ ಸಲ್ಲುತ್ತದೆಂದು ತೋರುತ್ತದೆ. ಕೊಂಡಗುಳಿ ಕೇಶಿರಾಜನು ಕಟ್ಟಿಸಿದ ಶಿವಾಲಯದಲ್ಲಿ ಇದ್ದವರು ಲಾಕುಳ ಪಾಶುಪತರೇ. ಈ ಕೊಂಡಗುಳಿ ಕೇಶಿರಾಜನು ಆದ್ಯಶಿವಶರಣರಲ್ಲಿ ಒಬ್ಬನೆಂಬುದು ನೆನಪಿನಲ್ಲಿಡಬೇಕಾದ ಸಂಗತಿ. ವಾಜಿಕುಲದವರು ಕ್ರಿ.ಶ. ೧೧ನೆಯ ಶತಮಾನದಲ್ಲಿ ಕಾಳಾಮುಖ ಪಾಶುಪತ ಪಂಥದವರೆಂಬುದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ.

ಈ ಪಂಥದವರಲ್ಲಿ ಪರ್ಷೆ, ಆಮ್ನಾಯ, ಸಂತತಿ ಎಂಬ ಒಳಭೇದಗಳುಂಟು. ಸಿಂಹ ಪರ್ಷೆ, ಶಕ್ತಿಪರ್ಷೆ, ಶಾಲಾಪರ್ಷೆ (?) ಎಂಬ ಮೂರು ವಿಧಗಳು ಇದ್ದುದಾಗಿ ತಿಳಿದುಬರುತ್ತದೆ. ಏವೂರ ಎರಡು ಶಾಸನಗಳಲ್ಲಿ ಏಳುಮಲೆಯ ಸಿಂಹಪರ್ಷೆಯ ಉಲ್ಲೇಖವಿದೆ.[177] ಅಭಿನವ ಪಾಶುಪತಮಠದ ಸಿಂಹಪರ್ಷೆಯ ಉಲ್ಲೇಖ ಇನ್ನೊಂದು ಶಾಸನದಲ್ಲಿದೆ.[178] ಶಕ್ತಿಪರ್ಷೆಯಲ್ಲಿ ಎರಡು ಆಮ್ನಾಯ ಅಥವಾ ಆವಳಿಗಳು ಇದ್ದುದಾಗಿ ತಿಳಿದು ಬಂದಿವೆ: ಪರ್ವತಾವಳಿ, ಭುಜಂಗಾವಳಿ. ಪರ್ವತಾವಳಿಯಲ್ಲಿ ಶ್ರೀಶೈಲದ 'ಅಗಸ್ತ್ಯೇಶ್ವರದ ಸಂತತಿಯ ಮಠ' ಮತ್ತು ಭುಜಂಗಾವಳಿಯಲ್ಲಿ 'ಇಟ್ಟಿಗೆಯ ಸಂತತಿ' ಬಹು ಪ್ರಸಿದ್ಧ. ಈ ಪರ್ಷೆಯ ಗುರುಗಳನ್ನು ಪಾಶುಪತರೆಂದೂ ಕಾಳಾಮುಖರೆಂದೂ ಕರೆದಿದ್ದು, ಇವರೆಲ್ಲ ಲಕುಳೀಶನ ಭಕ್ತರೆಂದು ತಿಳಿಯುವುದು. ಶ್ರೀಶೈಲದ ಮಲ್ಲಿಕಾರ್ಜುನ ಶಿವಾಲಯದ ವ್ಯವಹಾರಗಳನ್ನೆಲ್ಲ ಈ ಲಾಕುಳ ಶೈವರು ನಡೆಸುತ್ತಿದ್ದರೆಂಬುದಕ್ಕೆ "....ಶ್ರೀಶೈಳ ಪಶ್ಚಿಮ ದ್ವಾರತೋರಣರ್ ಮಲ್ಲಿಕಾರ್ಜುನದೇವದರ್ಶನ ಕಾರಣಪುರುಷರ್"[179] ಎಂದು ಸುರೇಶ್ವರ ಪಂಡಿತಯತಿಗಳನ್ನು ಹೊಗಳಿದುದು ಸಾಕ್ಷಿಯಾಗಿದೆ. ಈಗ ಇಲ್ಲಿಯ ವ್ಯವಹಾರ ವೀರಶೈವ ಜಂಗಮರಿಗೆ ಒಳಪಟ್ಟಿದೆ.

ಕರ್ಣಾಟಕ ಸಂಸ್ಕೃತಿಗೆ ಲಾಕುಳ ಶೈವರ ಮುಖ್ಯ ಕೊಡುಗೆಗಳೆಂದರೆ ಹಳ್ಳಿಹಳ್ಳಿಗೂ

ದೇವಸ್ಥಾನಗಳನ್ನು ನಿರ್ಮಿಸಿದುದು, ಸಂಸ್ಕೃತ ಭಾಷೆಯಲ್ಲಿನ ಜ್ಞಾನದೀಪ್ತಿ ನಂದದ ಹಾಗೆ ಕಾಪಾಡಿಕೊಂಡು ಬಂದುದು ಮತ್ತು ವೀರತತ್ತ್ವಗಳು ಹುಟ್ಟುವುದಕ್ಕಿಂತ ಮುಂಚೆ ಹರಿಹರರಲ್ಲಿ ಭೇದವೆಣಿಸದ ಪದ್ಧತಿಯನ್ನು ಅನುಸರಿಸಿ ಒಂದು ಬಗೆಯ ಸಮನ್ವಯ ಶೀಲವನ್ನು ಮೆರೆದುದು. ದೇವಸ್ಥಾನಗಳನ್ನು ಕಟ್ಟಿಸುವುದು, ಅಲ್ಲಿ ಮಠಗಳನ್ನು ನಡಸುವುದು, ಅವುಗಳನ್ನು ವಿದ್ಯಾಪೀಠಗಳನ್ನಾಗಿ ಮಾಡಿ ಜನತೆಗೆ ವಿದ್ಯೆಯನ್ನು ಧಾರೆಯೆರೆಯುವುದು ಈ ಹಿರಿಮೆ ವಿಶೇಷವಾಗಿ ಅವರಿಗೆ ಸಲ್ಲುತ್ತದೆ. ದೇವಸ್ಥಾನ, ನೈಷ್ಠಿಕಸ್ಥಾನ, ಸ್ಥಾನಪತಿ—ಇವು ಈ ಪಂಥದಿಂದೆ ಹುಟ್ಟಿಬಂದ ಪಾರಿಭಾಷಿಕ ಸಂಪತ್ತು. ಇವರು ಅನೇಕ ರಾಜಮನೆತನಗಳಿಗೆ ಗುರುಗಳಾಗಿದ್ದರು. ತಮ್ಮ 'ಶಸ್ತ್ರಶಾಸ್ತ್ರಪರಿಣತಿ'ಯಿಂದ ಅನೇಕ ರಾಜಕುಲಗಳನ್ನು 'ಸಮುದ್ಧರಣ' ಮಾಡಿದರು. ಇವರ ಅಭ್ಯಾಸ ವಿವಿಧ ವಿಷಯಗಳನ್ನು ಒಳಗೊಂಡಿತ್ತು. ಸಮಾಜದಲ್ಲಿನ ಪುಣ್ಯಕರ್ಮಗಳಿಗೆಲ್ಲ ಸಾಕ್ಷಿಗಳಾಗಿದ್ದ ಇವರ ಸಮ್ಮುಖದಲ್ಲಿ ದಾನದತ್ತಿಗಳೂ ನ್ಯಾಯ ನಿರ್ಣಯಗಳೂ ನಡೆಯುತ್ತಿದ್ದವು. ಈ ದಿಶೆಯಲ್ಲಿ ಲಾಕುಳ ಶೈವರ ಚಟುವಟಿಕೆಗಳನ್ನು ವಿವರಿಸಲು ಬಳ್ಳಿಗಾವಿಯ ಕೇದಾರಮಠ ಅಥವಾ ಕೋಡಿಯ ಮಠ ಒಂದು ಒಳ್ಳೆಯ ನಿದರ್ಶನ.

ಬಳ್ಳಿಗಾವಿ, ಕ್ರಿ.ಶ. ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಒಂದು ಹೆಸರಾದ ಶೈವ ಕೇಂದ್ರವಾಗಿತ್ತು. ಅಲ್ಲಿ ನಾಲ್ಕು ವೇದಗಳ, ಹಲವು ಬಗೆಯ ವ್ಯಾಕರಣಗಳ, ಷಡ್ದರ್ಶನಗಳ, ಲಾಕುಳ ಸಿದ್ಧಾಂತದ, ಪತಂಜಲಿಯ ಯೋಗಶಾಸ್ತ್ರದ, ಅಷ್ಟಾದಶ ಪುರಾಣಗಳ, ಕಾವ್ಯ ನಾಟಕ ಮುಂತಾದ ಸಾಹಿತ್ಯ ಹಾಗೂ ಅದರ ಶಾಸ್ತ್ರಾಂಗಗಳ ಅಧ್ಯಯನ ನಡೆಯುತ್ತಿತ್ತು. ದೇಶದ ನಾನಾ ಭಾಗಗಳಿಂದ ಜನರು ಅಲ್ಲಿಗೆ ಬರುತ್ತಿದ್ದರು. ದೀನರು, ಅನಾಥರು, ಕುರುಡರು, ಕುಂಟರು, ಮೂಕರು, ಕಥಕರು, ಗಾಯಕರು, ವಾದಕರು, ನರ್ತಕರು, ವೈತಾಳಿಕರು, ನಗ್ನಭಗ್ನ ಕ್ಷಪಣಕರು, ಏಕದಂಡಿ, ತ್ರಿದಂಡಿ, ಹಂಸ, ಪರಮಹಂಸ, ಭಿಕ್ಷುಗಳು, ಸಾಧುಜನರು ಮುಂತಾಗಿ ಹಲ ಬಗೆಯ ಜನರು ಅಲ್ಲಿಗೆ ಬಂದು ಅಲ್ಲಿ ದಾನವನ್ನು ಸ್ವೀಕರಿಸುತ್ತಿದ್ದರು. ಅಲ್ಲಿಗೆ ದೂರದೂರದಿಂದ ರೋಗಿಗಳು ಬಂದು ವೈದ್ಯಕೀಯ ಚಿಕಿತ್ಸೆಯನ್ನು ಪಡೆಯುತ್ತಿದ್ದರು.[180] ಈ ಬಗೆಯ ವಿದ್ಯಾಕೇಂದ್ರಗಳು ಕಾಡಿಯೂರು, ಸಾಲೊಟಗಿ, ಕಂದಹಾರ, ನಾಗಾಯಿ ಮುಂತಾದ ಅನೇಕ ಸ್ಥಳಗಳಲ್ಲಿ ಇದ್ದವು.

ಶೈವಸಿದ್ಧಾಂತ: ಶೈವಸಿದ್ಧಾಂತ ಪಂಥ ಸು. ೧೧ನೆಯ ಶತಮಾನದಲ್ಲಿ ರೂಪ ತಳೆಯಿತೆಂದು ಕೆಲವರ ಊಹೆ. ಈ ಪಂಥ ೬೩ ಪುರಾತನರಿಗೆ ವಿಶೇಷ ಮನ್ನಣೆಯನ್ನಿತ್ತಿದೆ. ಅವರೆಲ್ಲರನ್ನೂ ವೀರಶೈವ ಮತ ಒಪ್ಪುತ್ತದೆ. ಬಸವಣ್ಣನವರ ವಚನಗಳಲ್ಲಿ ಹಾಗೂ ಕೆಲವು ಶಾಸನಗಳಲ್ಲಿ, ಹರಿಹರನ ರಗಳೆಗಳಲ್ಲಿ ಇದಕ್ಕೆ ಸಾಕ್ಷ್ಯಗಳಿವೆ.[181] ಈ ೬೩ ಪುರಾತನರ ಚರಿತ್ರೆಯನ್ನು 'ಪೆರಿಯಪುರಾಣ'ದಲ್ಲಿ ವಿವರಿಸಿದೆ. ನಂಜನಗೂಡು ಹಾಗೂ ಚಾಮರಾಜ ನಗರಗಳಲ್ಲಿನ ದೇವಾಲಯಗಳಲ್ಲಿ ಈ ೬೩ ಪುರಾತನರ ಮೂರ್ತಿಗಳಿವೆ. ಇವು ಇತ್ತೀಚಿನವು. ಈ ಪಂಥದಲ್ಲಿ ಮುಂದೆ ಬಂದ ನೀಲಕಂಠ ಹಾಗೂ ಅಪ್ಪಯ್ಯ

ದೀಕ್ಷಿತರು ಬ್ರಹ್ಮಸೂತ್ರಗಳಿಗೆ ಶೈವಸಿದ್ಧಾಂತಪರವಾದ ಭಾಷ್ಯವನ್ನು ಬರೆದು ವೇದಾಗಮಗಳ ಸಮನ್ವಯಮಾಡಲು ಹವಣಿಸಿದರು. ಕನ್ನಡ ನಾಡಿನಲ್ಲಿ ಇದು ವೀರಶೈವದ ಅಂತರ್ಗತವಾಗಿದೆ.

ಕಾಶ್ಮೀರ ಶೈವ: ಇದಕ್ಕೂ ಆಗಮಗಳೇ ಆಧಾರ. ಇದರ ಕೆಲ ಅಂಶಗಳು ವೀರಶೈವ ಧರ್ಮದಲ್ಲಿ ಸೇರಿ ಅದನ್ನು ರೂಪಿಸುವಲ್ಲಿ ತನ್ನ ಕೈವಾಡವನ್ನು ಮೆರೆದಿವೆ. "ಕಾಶ್ಮೀರ ಶೈವಕ್ಕೂ ವೀರಶೈವಕ್ಕೂ ಹೋಲಿಕೆ ಹೆಚ್ಚಾಗಿರುವುದು ಸ್ಮರಣೀಯವಾಗಿದೆ' ಎಂದಿದ್ದಾರೆ ಶಿ. ಶಿ. ಬಸವನಾಳರು.[೧೮೮] ಕಾಶ್ಮೀರ ಶೈವ ಕಾಶ್ಮೀರದಿಂದ ಬಂದ ಸಹವಾಸಿಗಳ ಮೂಲಕ ಕನ್ನಡಿಗರಲ್ಲಿ ಬೆಳೆದಿರಬಹುದು.

ಶಾಂಕರ ಶೈವ: ಬ್ರಹ್ಮತ್ವವನ್ನು ಒಪ್ಪಿಕೊಳ್ಳುವ ಪಂಥ. ಇದರ ಪ್ರಕಾರ ಬ್ರಹ್ಮ ಸದವಿ ಅನ್ವಯ; ಅದೇ ಶಿವ. ಮಾಯಾ ತತ್ತ್ವಂ ಜಗದ್ಬೀಜಮವಿನಾಶ್ಯಂ ಶಿವಾತ್ಮಕಮ್, ಅಹಂ ಬ್ರಹ್ಮಾಸ್ಮಿ: ತತ್ತ್ವಮಸಿ—ಇವು ಇದರ ಧ್ಯೇಯಘೋಷಣೆಗಳು.

ಈ ಶೈವದ ಅನುಯಾಯಿಗಳಿಗೆ ತ್ರಿಮೂರ್ತಿಗಳೂ ಸಮ. ಕರ್ನಾಟಕದಲ್ಲಿ ಶೃಂಗೇರಿಯು ಈ ಪಂಥಿಗಳಿಗೆ ಅತಿಮುಖ್ಯ ಸ್ಥಾನ. ಇಲ್ಲಿಯೇ ಶಂಕರಾಚಾರ್ಯರ ಶಾರದಾ ಪೀಠ. ವಿಜಯನಗರದ ಅರಸರು ಈ ಮಠಕ್ಕೆ ವಿಶೇಷ ಪ್ರೋತ್ಸಾಹವನ್ನು ಇತ್ತರು. ಈ ಮಠದ ಯತಿಗಳೊಬ್ಬರು ಆ ರಾಜ್ಯದ ಸ್ಥಾಪನಾಚಾರ್ಯರು. ಮೈಸೂರು, ಕೆಳದಿ, ಸೋದೆ ಮೊದಲಾದ ರಾಜಮನೆತನಗಳೂ ಪೋಷಿಸಿಕೊಂಡು ಬಂದವು ಎನ್ನುವುದಕ್ಕೆ ದಾಖಲೆಗಳಿವೆ.

ಶಂಕರಾಚಾರ್ಯರ ಅತಿಮುಖ್ಯ ಶಿಷ್ಯರಲ್ಲಿ ಗೋಕರ್ಣದ ಚಿತ್ಸುಖಾಚಾರ್ಯರು ಒಬ್ಬರು. ಸಂಸ್ಕೃತ ಭಾಷೆಯಲ್ಲಿ ಅದ್ವೈತ ತತ್ತ್ವದ ಸಾಹಿತ್ಯ ವಿಪುಲವಾಗಿದೆ. ಕನ್ನಡಿಗರೆದೆಯಲ್ಲಿ ವಿದ್ಯಾರಣ್ಯರ ಹೆಸರಿನ ಹಾಗೆ ಅವರ ಸೋದರರಾದ ಸಾಯಣರ ಹೆಸರೂ ಚಿರಂತನವಾದ ಸ್ಥಾನವನ್ನು ಪಡೆದಿದೆ. ಮಾಧವರ 'ಸರ್ವದರ್ಶನ ಸಂಗ್ರಹ'ವೂ ಸಾಯಣರ ವೇದಭಾಷ್ಯಗಳೂ ಜಗತ್ಪ್ರಸಿದ್ಧವಾಗಿವೆ. 'ಸರ್ವದರ್ಶನ ಸಂಗ್ರಹ'ದಲ್ಲಿ ಚಾರ್ವಾಕನೇ ಆದಿಯಾಗಿ ಹದಿನೈದು ದರ್ಶನಗಳನ್ನು ಸಂಗ್ರಹಿಸಿದೆ. ಮಹಲಿಂಗರಂಗನು 'ಸುಲಿದ ಬಾಳೆಯ ಹಣ್ಣಿನ' ಹಾಗೆ ಈ ತತ್ವಶಾಸ್ತ್ರವನ್ನು ಕನ್ನಡಿಸಿ 'ಅನುಭವಾಮೃತ'ದಲ್ಲಿ ಒದಗಿಸಿದ್ದಾನೆ. ಅನಂತರ ಅವನ ದಾರಿಯಲ್ಲೇ ನಡೆದು 'ಜ್ಞಾನಸಿಂಧು' ಎಂಬ ಗ್ರಂಥದಲ್ಲಿ ಚಿದಾನಂದಾವಧೂತನು ಅದ್ವೈತ ತತ್ತ್ವವನ್ನು ವಿವರಿಸಿದ್ದಾನೆ. ಇದರ ಅನುಯಾಯಿಗಳಲ್ಲಿ ಅನೇಕ ಪಂಗಡಗಳೂ ಉಂಟು.

ಕಾಪಾಲಿಕರು: ಇವರದು ಶೈವಧರ್ಮದಲ್ಲಿ ವಾಮಮಾರ್ಗ. ಈಗ ಈ ಮಾರ್ಗದವರು ಕರ್ನಾಟಕದಲ್ಲಿ ವಿರಳವೆಂದೇ ಹೇಳಬೇಕು. ಕಾಪಾಲಿಕರು ಮಹಾಭೈರವನ ಆರಾಧಕರು. ನಾಸಿಕ್ ಜಿಲ್ಲೆಯ ಇಗತ್‌ಪುರ ಇವರಿಗೆ ಒಂದು ಕೇಂದ್ರ ಸ್ಥಾನವಾಗಿತ್ತು. ಇಮ್ಮಡಿ ಪುಲಿಕೇಶಿಯ ಸೋದರ ನಾಗವರ್ಧನನು ಇಲ್ಲಿನ ಕಾಪಾಲೇಶ್ವರ ದೇವರ ಪೂಜೆಗೆಂದು ಮಹಾವ್ರತಿಗಳಿಗೆ ದಾನ ಬಿಟ್ಟ ಸಂಗತಿ ಶಾಸನವೊಂದರಿಂದ ತಿಳಿದು ಬಂದಿದೆ.[18]

ವಭೂತಿ ವಿವರಿಸಿದ ಕಾಪಾಲಿಕರ ವರ್ಣನೆಯೂ ಆತನು ಕಂಡ ಗೋದಾವರೀ ತೀರದ ನ್ನಡ ನಾಡಿನ ಕಾಪಾಲಿಕರದೇ ಆಗಿರುವುದು ಸಾಧ್ಯ. ವೀರಶೈವರಾದ ಚೆನ್ನಬಸವಣ್ಣ ಲ್ಲಮಪ್ರಭು ಇವರು ಕಾಪಾಲಿಕರನ್ನು ಖಂಡಿಸಿದ್ದಾರೆ. ಇದೇ ಕಾಲದ ಬ್ರಹ್ಮಶಿವನು ಹಾವ್ರತಿಗಳು ರುದ್ರಮಾರ್ಗದಿಂದ ನಡೆಯುತ್ತಾರೆಂದು ವಿವರಿಸಿದ್ದಾನೆ.[184] ಕಾಪಾಲಿಕ ನ್ನು 'ಮಹಾವ್ರತಿ' ಎಂದೂ ಇವರ ಸಿದ್ಧಾಂತವನ್ನು ಸೋಮ ಸಿದ್ಧಾಂತ ಎಂದೂ ೞಲಾಗುತ್ತದೆ. ಪ್ರಭುಲಿಂಗಲೀಲೆ (೧೯–೩೧,೩೩)ಯಿಂದ ಶ್ರೀಶೈಲದಲ್ಲಿ ಕಾಪಾಲಿಕರು ದ್ದರೆಂದೂ ಅವರನ್ನು ಅಲ್ಲಮನು ಜಯಿಸಿದನೆಂದೂ ತಿಳಿದು ಬರುತ್ತದೆ. ಪ್ರಭುವಿನ ೊತೆಗೆ ವಾದ ಹೂಡಿ ಸೋತವರಲ್ಲಿ ಕಾಪಾಲಿಕ ಗೋರಕ್ಷನಾಥನೂ ಒಬ್ಬನೆಂದು ಹೇಳ ಾಗಿದೆ. ಈ ಸಂಪ್ರದಾಯ ಸಿಂದಗಿ ತಾಲೂಕಿನಲ್ಲಿರುವ ಜಕ್ಕಪ್ಪಯ್ಯನವರ ಮಠದ ನುಯಾಯಿಗಳಲ್ಲಿ ಹಲವಾರು ಮಾರ್ಪಾಟುಗಳನ್ನು ಹೊಂದಿದರೂ ಇನ್ನೂ ಉಳಿದು ೊಂಡುಬಂದಿದೆ.

ಕೌಲರು : ಕೌಲರದೂ ವಾಮಮಾರ್ಗ. ಕಾಪಾಲಿಕರು ಕಾಪಾಲಿಕ ಶಿವನ ಅರ್ಚಕ ಾದರೆ ಕೌಲರು ಅದೇ ಪದ್ಧತಿಯ ಶಕ್ತಿಪೂಜಕರು. ಕೌಲಸಿದ್ಧಾಂತದ ಮೂಲಪ್ರವರ್ತಕ ಾಶುಪತ ಗುರುವಾದ ವಿಶ್ವರೂಪನ ಶಿಷ್ಯ ಅಲ್ಲಟ ಅಥವಾ ಭಾವರಕ್ತ. ಕೌಲರಲ್ಲಿ ಎರಡು ಗೆ: ಪೂರ್ವ ಕೌಲ ಹಾಗೂ ಉತ್ತರ ಕೌಲ. ಬ್ರಹ್ಮಶಿವನು ಇವರ ತತ್ವವನ್ನು ಹೀಗೆ ರ್ಣಿಸಿದ್ದಾನೆ:

ಮುರಹರ ಸರಸಿಜಭವ ರು
ದ್ರರುಮೀಶ್ವರನುಂ ಸದಾಶಿವಂ ಬೆರಸಿಂತ
ಯ್ವರುಮೊಂದಿರ್ಪರ್ಚಂಡಿಯ
ಚರಣಂಗಳ ಮೊದೆಲೊಳೆಂದು ಕೌಳರ್ ಪೇೞ್ವರ್ ॥[185]

ನ್ನಬಸವಣ್ಣನವರು 'ಕೌಲಿ ಮರುಳಾಗಿಹೋದ' ಎಂದು ಈ ಪಂಥದವರನ್ನು ಖಂಡಿಸಿ ದುಂಟು. ಕರ್ನಾಟಕದಲ್ಲಿನ ಕೌಲರ ಉಲ್ಲೇಖ 'ಶಂಕರದಾಸಿಮಯ್ಯನ ಪುರಾಣ'ದಲ್ಲೂ ಂದಿದೆ. ಇವರು ವಾಮಾಚಾರವನ್ನು ಬಿಟ್ಟು ಕಾಲಕ್ರಮದಲ್ಲಿ ಶಾಂಕರ ಶೈವದಲ್ಲಿ ವಿಲೀನ ಾದಂತೆ ತೋರುತ್ತದೆ. ಬನಶಂಕರಿ, ತುಳಜಾಪುರ, ಕೊಲ್ಲಾಪುರ, ಸನ್ನತಿ, ಥಾಯಿ ೊದಲಾದವು ಶಾಕ್ತಪೀಠಗಳಾದ ಸ್ಥಳಗಳು.

ಸೌರರು : ಶೈವರಲ್ಲಿ ಸೌರರದು ಒಂದು ಬೇರೆ ವಿಭಾಗ. ಇವರಿಗೆ ಮಾರ್ತಾಂಡನೇ ಧದೇವತೆ. ಬ್ರಹ್ಮಶಿವನ ಸಮಯಪರೀಕ್ಷೆಯಿಂದ ಇವರು ಆ ಕಾಲಕ್ಕೆ ಇದ್ದರೆಂದು ಳಿದು ಬರುತ್ತದೆ :

(೧) ಸೌರಂ [ಕೌ]ಳೋತ್ತರಮುಂ
ಬಾರಾಧನೆಗಳೊಳಮಾಖಿಳವೇದಸ್ಮೃತಿ ತ
ತ್ಪುರಾಣಮೆನಿಪ್ಪವಚಿಖೆೞ್
ಸಾರಮುಖಿಂಬಾಗಿ ನಿಜಶಿಂಬಿ ಶಿವಾತಂ ಬಲ್ಲಂ ॥[186]

(೨) ಪೆಂಡತಿ ಮಾಹೇಶ್ವರಿಂಗದ
ಗಂಡಂ ಜೈನಂ ಗಡವನ ಮಕ್ಕಳ್ಗೆ ಡಮಾ
ರ್ತಂಡಂಗೆ ಭಕ್ತರೆನಿಪಾ
ಭಂಡಂಗುತ್ತಮದ ಜೈನವೆಸರಿಂತೆಸೆಗುಂ ।।[187]

೧೩ನೆಯ ಶತಮಾನದವರೆಗೆ ಕರ್ಣಾಟಕದಲ್ಲಿ ಈ ಸಂಪ್ರದಾಯ ಬಹಳ ಉಚ್ಛ್ರಾಯ
ಸ್ಥಿತಿಯಲ್ಲಿದ್ದಿತು. ಸೂರ್ಯನಿಗಾಗಿ ಅನೇಕ ದೇವಾಲಯಗಳಿದ್ದವು.[188] ಪಂಪನ 'ವಿಕ್ರ
ಮಾರ್ಜುನ ವಿಜಯ'ದಲ್ಲಿನ ಅರಿಕೇಸರಿಯ ಬಿರುದು "ಪ್ರಚಂಡಮಾರ್ತಂಡ"ದ ಮೂಲ
ಈ ಮಾರ್ತಾಂಡನಲ್ಲಿ. ಆತನ ಅಮಾತ್ಯ ಪೆದ್ದನಾರ್ಯ ವೇಮುಲವಾಡದಲ್ಲಿ
ಸೂರ್ಯದೇವಾಲಯವನ್ನು ಕಟ್ಟಿಸಿದುದೂ ಅದಕ್ಕೆ ಅರಿಕೇಸರಿ ದತ್ತಿಬಿಟ್ಟುದೂ ಅಲ್ಲಿನ
ಶಾಸನದಿಂದ ಸುವ್ಯಕ್ತ.[189] ತ್ರಿಕೂಟೇಶ್ವರದಲ್ಲಿ ಹಲವು ಕಡೆ ಸೂರ್ಯನ ಬಿಂಬ ಇದ್ದುದು
ಗಮನಾರ್ಹವಾದ ಸಂಗತಿ. ತ್ರಿಪುರುಷರಲ್ಲಿ ಸೂರ್ಯನೂ ಒಬ್ಬನೆಂದು ಪರಿಗಣಿತ
ನಾದುದು ಈ ದೇವಾಲಯಗಳಿಂದ ಸ್ಪಷ್ಟ. ಅಂತೆಯೇ ಸೌರರು ಶಂಕರರ ಅನುಯಾಯಿ
ಗಳಲ್ಲಿ ವಿಲೀನವಾಗಿ ಹೋದರು, ಕಾಲಕ್ರಮದಲ್ಲಿ.

ಗೊರವರು: ಗೊರವರು ಮೂಲತಃ ಲಾಕುಳಶೈವ ಸಂಪ್ರದಾಯಕ್ಕೆ ಸಂಬಂಧ
ಪಟ್ಟವರು. ಹೂಗಾರರು, ಜೀರರು, ಗೊರವರು—ಎಂದು ಹಲವು ಹೆಸರುಗಳಿಂ
ಇವರನ್ನು ಗುರುತಿಸಲಾಗುತ್ತದೆ. ಇಂದಿಗೂ ಊರಿಗೆ ಒಂದೋ ಎರಡೋ ಕುಟುಂ
ಗಳಂತೆ ಉತ್ತರ ಕರ್ಣಾಟಕದ ಅನೇಕ ಊರುಗಳಲ್ಲಿ ಇದ್ದಾರೆ. ಕೆಲವರು ಲಿಂ
ವಂತ ಧರ್ಮವನ್ನು ಸ್ವೀಕರಿಸಿದರೂ ಇತರ ಲಿಂಗಾಯತರಿಂದ ಬೇರೆಯಾಗಿಯೆ
ಇದ್ದಾರೆ. ಅಲಿಂಗವಂತರು ಯಜ್ಞೋಪವೀತವನ್ನು ಧರಿಸುವುದುಂಟು. 'ಜೀರ ಪೂಜಾರ'
ಎಂದು ಇವರು ಪುರಸ್ಕೃತರು. ಊರಿನಲ್ಲಿ ಸಕಲಕಾರ್ಯಗಳಿಗೂ ಹೂಗಳನ್ನು ಒದಗಿಸ
ವುದು ಇವರ ಕರ್ತವ್ಯ. ಅಂತೆಯೆ ಇವರು ಹೂಗಾರರು. ಕೆಲವೆಡೆ ದೇವಾಲಯ
ಗಳಲ್ಲಿ ಇವರೇ ದೇವರ ಪೂಜಾರರು. ಇನ್ನು ಕೆಲ ಊರುಗಳಲ್ಲಿ ಇವರು ಸ
ಬಜಂತ್ರಿ ಅಥವಾ ಓಲಗದವರೊಡನೆ ಡೋಲು ಇಲ್ಲವೆ ಕಣಿಹಲಗೆ ಒಂದನ್ನು ಬಾರಿಸು
ವೋಲದವರು. ಜೀರರಲ್ಲಿ ಎರಡು ವಿಧ: ಲಿಂಗವಂತರು, ಅಲಿಂಗವಂತರು. ಇವ
ಸಂಪ್ರದಾಯಗಳು ಬೇರೆ ಬೇರೆ. ಜೀರರು, ಗೊರವರು, ಹೂಗಾರರು, ತಮ್ಮಡಿಗಳ
ಪಾತಾಳಿಗಳು, ಪೂಜಾರರು, ಜೋಗಾರರು ಅಲಿಂಗವಂತರಾದಾಗ ಒಂದು ಸಂಗಡ
ಹಲವು ಕಡೆಯಲ್ಲಿ ಸೇರುತ್ತಾರೆ. ಯಜ್ಞೋಪವೀತವನ್ನೂ ಧರಿಸುವುದುಂಟು. ಕೆಲವೆ
ಇವರು ಜೈನರಾಗಿದ್ದುದಕ್ಕೂ ಉದಾಹರಣೆಗಳಿವೆ.

ಆರಾಧ್ಯರು: ಆರಾಧ್ಯ ಸಂಗಡದ ಇತಿಹಾಸ ಸರಿಯಾಗಿ ತಿಳಿಯದು. ಕೆಲ
ಪ್ರಕಾರ ವೀರಶೈವದ ಪ್ರಾರಂಭ ಈ ಆರಾಧ್ಯಸಂಗಡದ ಸಂಚಾಚಾರ್ಯರಿಂ
ಅವರೆಂದರೆ ಕೊಲ್ಲಿಪಾಕೆಯ ರೇವಣಸಿದ್ಧ, ವಟಕ್ಷೇತ್ರದ ಮರುಳಸಿದ್ಧ, ಸುಧಾಕುಂ
ಪಂಡಿತಾರಾಧ್ಯ, ದಾಕ್ಷಾರಾಮದ ಏಕೋರಾಮ ಮತ್ತು ಕಾಶಿ (ವಾರಣಾಸಿ)ಯ ವಿ

ಶಿಷ್ಯ. ಇವರು ಕ್ರಮವಾಗಿ ರಂಭಾಪುರಿ, ಉಜ್ಜಯಿನಿ, ಶ್ರೀಗಿರಿ, ಹಿಮವತ್‌ಕೇದಾರ ಮತ್ತು ಕಾಶಿಯಲ್ಲಿ ಮಠಗಳನ್ನು ಸ್ಥಾಪಿಸಿದರೆಂದು ತಿಳಿದುಬರುತ್ತದೆ. ಬಸವಾದಿ ಪ್ರಮಥರ ವಚನಗಳಲ್ಲಿ ಈ ಆಚಾರ್ಯರ ಪ್ರಸಕ್ತಿ ಇಲ್ಲ. ಶೈವ ಸಂಪ್ರದಾಯದ ಕಡೆಗೇ ಇವರ ಒಲವರ; ಸುಮಾರು ಕ್ರಿ.ಶ. ೧೬ನೆಯ ಶತಮಾನದಲ್ಲಿ ಪ್ರಾಮುಖ್ಯ ವನ್ನು ಪಡೆದರು[190] ಎಂದು ಬಸವನಾಳರ ಅಭಿಪ್ರಾಯ. ಇವರದು ಬ್ರಾಹ್ಮಣ ಹಾಗೂ ವೀರಶೈವ ಧರ್ಮದ ಸಮ್ಮಿಶ್ರ ಸಂಪ್ರದಾಯ ಎಂಬ ಅಭಿಪ್ರಾಯವಿದೆ.[191]

ವೀರಶೈವ: ವೀರಶೈವದ ಉಗಮ ಒಂದು ಸಮಸ್ಯೆ. ಇಂದು ಪ್ರಚಲಿತವಿರುವ 'ವೀರಶೈವ', 'ಲಿಂಗವಂತ', 'ಲಿಂಗಾಯತ'—ಈ ಮಾತುಗಳು ಕಂಡುಬರುವುದು ಕ್ರಿ.ಶ. ಸು. ೧೧೦೦ರಿಂದ ಈಚೆಗೆ, ಬಸವಣ್ಣ ಮೊದಲಾದ ಪ್ರಮಥರ ಕಾಲದಿಂದ. ಇದು ಕರ್ನಾಟಕದಲ್ಲಿಯೇ ಮೊದಲು ರೂಪತಳೆಯಿತೆಂದು ತೋರುತ್ತದೆ. ಹಲವು ಶೈವಪಂಥಗಳ ಆಚಾರವಿಚಾರಗಳ ಸಮನ್ವಯ ಇಲ್ಲಿ ಆಗಿದೆ. ಇದರಲ್ಲಿ ತಮಿಳುನಾಡಿನ ಪುರಾತನರ ಶೈವಪಂಥ, ಕಾಶ್ಮೀರಶೈವದ ಪ್ರತ್ಯಭಿಜ್ಞಾಪಂಥ ಮೊದಲಾದವುಗಳ ಗುಣ ಲಕ್ಷಣಗಳು ಕಂಡುಬರುತ್ತದೆ. ಈ ದೃಷ್ಟಿಯಿಂದ ವೀರಶೈವವು ಶೈವ ಮತದಿಂದಲೇ ಕವಲೊಡೆಯಿತೆಂಬ ಅಭಿಪ್ರಾಯದಲ್ಲಿ ತುಂಬ ಹುರುಳಿದೆ. ಅನುಭಾವ ವೀರಶೈವದ ಜೀವಾಳ, ಅದೇ ಆ ಪಂಥದ ಭಕ್ತಿಬೀಜ.

ವೀರಶೈವಧರ್ಮ, ಕರ್ನಾಟಕದ ಇತಿಹಾಸದಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ಮಹತ್ತ್ವದ ಬದಲಾವಣೆಯನ್ನು ಉಂಟುಮಾಡಿತು. "ಪರಸಮಯ ಗಿರಿವಜ್ರದಂಡರುಂ ಜಗದಲುದ್ದಂಡರುಂ...." ಎಂಬುದಾಗಿ ವೀರಶೈವದ ಹೆಚ್ಚಳವನ್ನು ಹೇಳುವ ಒಂದು ಶಾಸನದಲ್ಲಿ (ತಾಳಿಕೋಟೆಯ ಶಾಸನ) ಆ ಕ್ರಾಂತಿಯ ಹೊಳಹು ಸ್ಪಷ್ಟವಾಗಿದೆ.

ಇದು ಕ್ರಿ.ಶ. ೧೧೮೪ರ ಶಾಸನ. ಎಂದರೆ ಬಸವಣ್ಣನವರ ಕ್ರಾಂತಿಯಲ್ಲಿ ಪಾಲ್ಗೊಂಡ ವರಲ್ಲಿ ಸಿದ್ಧರಾಮ ಮೊದಲಾದವರು ಇನ್ನೂ ಬದುಕಿದ್ದ ಕಾಲದ ಚಿತ್ರ.[192] ಅಂದು ಸಮಾಜದಲ್ಲಿ ಧಾರ್ಮಿಕವಾಗಿಯೂ ಸಾಮಾಜಿಕವಾಗಿಯೂ ಗಟ್ಟಿಗೊಂಡ ಪ್ರತಿಷ್ಠಿತರ ಮೇಲ್ಮೆಯನ್ನು ಪ್ರತಿಭಟಿಸಿ ಒಗ್ಗೂಡುವುದು ಇಲ್ಲಿ ಉದ್ದೇಶವಾಗಿ ತೋರುತ್ತದೆ. ವಚನಗಳ ಮೂಲಕ ಶರಣರೂ ಈ ಕ್ರಾಂತಿಯನ್ನು ಕೈಕೊಂಡರು. ಶರಣರ ಪಂಥ ದಲ್ಲಿ ಸರ್ವರೂ ಸಮ. ಯಾವ ಕಾಯಕವಾದರೂ ಹೀನವಲ್ಲ. ಅಲ್ಲಿ ನೀಚೋಚ್ಚ ಭಾವನೆಯಿಲ್ಲ. ಜಾತಿಭೇದವಿಲ್ಲದೆ, ಸ್ತ್ರೀಪುರುಷರೆಂಬ ಲಿಂಗಭೇದವಿಲ್ಲದೆ, ಸರ್ವರೂ ಮುಕ್ತಿಗೆ ಅರ್ಹರು. ಶರಣರಲ್ಲಿ ಜೇಡ, ಅಂಬಿಗ, ಡೋಹರ, ಹಡಪ, ಮಾದಾರ ಮೊದ ಲಾಗಿ ಹಲವಾರು ಜಾತಿಯ, ವೃತ್ತಿಯ ಜನರಿದ್ದರು. ವಚನಧರ್ಮದಲ್ಲಿ ಇರುವುದು ಎರಡೇ ಪಂಗಡ: ಒಂದು 'ಭವಿ' ಇನ್ನೊಂದು ಭಕ್ತ. 'ಭವಿ' ಎಂದರೆ ಹುಟ್ಟುಸಾವುಗಳ ಚಕ್ರದಲ್ಲಿ ಸಿಲುಕಿಬಿದ್ದವ; 'ಭಕ್ತ'ನೆಂದರೆ ಮುಕ್ತಿಗೆ ಯೋಗ್ಯನಾದವ. ಸಾಧನೆಗೆ ಭಕ್ತಿಯೇ, ಕಾಯಕದಲ್ಲಿದ್ದು ಮಾಡುವ ಶಿವಭಕ್ತಿಯೇ ಮುಖ್ಯ. ಉದಾಹರಣೆಗೆ:

"....ಕಾಸಿ ಕಮ್ಮಾರನಾದ ಬೀಸಿ ಮಡಿವಳನಾದ ಹಾಸನಿಕ್ಕೆ ಸಾಲಿಗನಾದ ವೇದವ ನೋದಿ ಹಾರುವನಾದ....ಇದು ಕಾರಣ ಕೂಡಲಸಂಗಮದೇವಾ ಲಿಂಗಸಂಗವನರಿತ ವನೇ ಕುಲಜನು." ವೀರಶೈವವು ಕಾಯಕಕ್ಕೆ ಮಿಗಿಲಾಗಿ ಸ್ಥಾನಕೊಟ್ಟಿರುವುದೂ ಗಮನಾರ್ಹ. ಉದಾಹರಣೆಗೆ: "ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದಡೂ ಮರೆಯಬೇಕು ಲಿಂಗಪೂಜೆಯಾದಡೂ ಮರೆಯಬೇಕು ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು ಕಾಯಕವೇ ಕೈಲಾಸವಾದಕಾರಣ ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು."[193]

ಶಿವಶರಣರ ಸಂಖ್ಯೆ ದೊಡ್ಡದು. ಅದರಲ್ಲಿ ತ್ರಿಷಷ್ಟಿ ಪುರಾತನರು, ಷೋಡಶರು, ತೇರಸರು, ದಶಗುಣರು, ನೂತನರು ಎಂದು ಹಲವು ಗುಂಪುಗಳು. ಭಕ್ತಿ, ಜ್ಞಾನ, ವೈರಾಗ್ಯ, ಕರ್ಮ, ಶರಣಸತಿ-ಲಿಂಗಪತಿ—ಈ ಬಗೆಯ ಭಾವಗಳಿಗೆ ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ ಮತ್ತು ಅಕ್ಕಮಹಾದೇವಿ ಇವರು ಪ್ರತಿನಿಧಿಗಳೆಂದು ಅಲ್ಲಿ ಮಾನಿತರಾಗಿದ್ದಾರೆ. ಅಂದಿನಿಂದ ಈ ಧರ್ಮ ಬೆಳೆದುದನ್ನು ಮೂರು ಘಟ್ಟಗಳಲ್ಲಿ ಗುರುತಿಸಬಹುದು :

೧೨ನೆಯ ಶತಮಾನದ ಬಸವಾದಿ ಪ್ರಮಥರದು ಪ್ರಥಮ ಘಟ್ಟ; ಹರಿಹರ, ರಾಘವಾಂಕ ಮತ್ತು ಆರಾಧ್ಯರ ಕಾಲದಲ್ಲಿನ ವಿಕಾಸದ ಎರಡನೆಯ ಘಟ್ಟ; ಮತ್ತು ೧೪ನೆಯ ಶತಮಾನದಿಂದ ಈಚಿನದು ಮೂರನೆಯ ಘಟ್ಟ. ವಚನಗಳು, ರಗಳೆಗಳು, ಷಟ್ಪದಿಗಳು, ಹಾಡುಗಳು—ಇವು ಈ ಧರ್ಮದ ಸಂದೇಶ ಹಾಗೂ ಕ್ರಾಂತಿಯ ಪ್ರಣಾಲಿಕೆಗಳು. ಒಂದನೆಯ ಘಟ್ಟದಲ್ಲಿ ವಚನಕಾರರು, ಎರಡನೆಯ ಘಟ್ಟದಲ್ಲಿ ಹರಿಹರ ರಾಘವಾಂಕ ಪಾಲ್ಕುರಿಕೆ ಸೋಮನಾಥ ಆರಾಧ್ಯರು ಮೊದಲಾದವರು, ಮೂರನೆಯ ಘಟ್ಟದಲ್ಲಿ ಲಕ್ಕಣ್ಣದಂಡೇಶ, ಜಕ್ಕಣಮಾತ್ಯ, ಚಾಮರಸ, ಮಗ್ಗೆಯ ಮಾಯಿದೇವ, ಗುರುಬಸವ, ಕುಮಾರ ಬಂಕನಾಥ ಮೊದಲಾದವರು ಈ ಮತವನ್ನು ಸಾರಿದರು; ರಕ್ಷಿಸಿದರು, ಸಂಸ್ಕರಿಸಿದರು.

ಈ ಮತಕ್ಕೆ ಕಲಚುರಿಯರು, ಯಾದವರು, ಹೊಯ್ಸಳರು, ವಿಜಯನಗರದರಸರು, ಕೆಳದಿಯ ಅರಸರು ಮೊದಲಾದವರು ಆಶ್ರಯಕೊಟ್ಟು ಬೆಳಸಿದರು. ಇಮ್ಮಡಿ ವೀರ ಬಲ್ಲಾಳನ ಕಾಲಕ್ಕೆ ಮಂಡ್ಯ ಜಿಲ್ಲೆಯಲ್ಲಿದ್ದ ವೀರಶೈವ ಮಠಕ್ಕೆ ದತ್ತಿಕೊಟ್ಟ ವಿವರವೊಂದು ಶಾಸನದಿಂದ ತಿಳಿದು ಬರುತ್ತದೆ. ಆ ಶಾಸನದಲ್ಲಿ ಷಟ್ಸ್ಥಲ ಪದ್ಧತಿಗೆ ಪ್ರತಿಯಾಗಿ ಸಾಲೋಕ್ಯಾದಿ ಚತುಷ್ಟಯದ ಉಲ್ಲೇಖವಿರುವುದು ಕುತೂಹಲಕರ.[194] ವಿಜಯನಗರದರಸರ ಕಾಲದಲ್ಲಿ, ಲಕ್ಕಣದಂಡೇಶನ ನೇತೃತ್ವದಲ್ಲಿ ನಿಜವಾಗಿಯೂ ವೀರಶೈವ ಸಂಪೂರ್ಣ ಹೊಸರೂಪ ತಳೆದ ಹಾಗೆ ತೋರುತ್ತದೆ. ಆತನ ಕಾಲಕ್ಕೆ ವೀರಶೈವ ಸಾಹಿತ್ಯದ ಸೃಷ್ಟಿಕಾರ್ಯವೂ ವಚನಗಳ ಸಂಕಲನಕಾರ್ಯವೂ ಒಟ್ಟಿಗೆ ನಡೆದವು. ವೀರಶೈವರಲ್ಲಿ ಚೆನ್ನಬಸವಣ್ಣ ಅಲ್ಲಮಪ್ರಭು ಮೊದಲಾದವರಿಂದ ಮೊದಲಾದ ವಿರಕ್ತ ಸಂಪ್ರದಾಯವೊಂದು ನಂತರ ಹಲವಾರು ಶಾಖೆಗಳಾಗಿ ನಾಡಿನ ತುಂಬ ಹಬ್ಬಿ

ಕೊಂಡಿತು. ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೆ ಅಲ್ಲಿ ಇಲ್ಲಿ ತಲೆಯೆತ್ತಿದ ಪಾಳೆಯಗಾರರು ಸಣ್ಣಪುಟ್ಟ ಅರಸು ಮನೆತನಗಳು ಇದನ್ನು ಬೆಳಸಿದವು. ಈ ಶೈವ ಪಂಥದವರಿಗೆ ಬಿಟ್ಟ ದತ್ತಿ ಗ್ರಾಮಗಳನ್ನು 'ಕವಿಳಾಸಪುರ' 'ಅಭಿನವಶ್ರೀಶೈಲ' 'ಮಹದೇವಪುರ' ಮುಂತಾಗಿ ಕರೆಯುವ ರೂಢಿಯೂ ಬಳಕೆಯಲ್ಲಿದ್ದುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಸಜ್ಜನರು, ಶೀಲವಂತರು, ಬಣಜಿಗರು, ಒಕ್ಕಲಿಗರು (ಉತ್ತರ ಕರ್ನಾಟಕದಲ್ಲಿ), ನಾಯಿದರು, ಕುರುಬರು ಮುಂತಾಗಿ ಲಿಂಗವಂತರಲ್ಲಿ ಅನೇಕ ಭೇದಗಳಿವೆ. ಜಂಗಮರೇ ಇವರಿಗೆಲ್ಲ ಗುರುಗಳು. ನಾಡಿನ ಉತ್ತರಭಾಗದಲ್ಲಿ ಊರಿಗೊಂದು ಮಠ ಇಂದಿಗೂ ಇದೆ. ಅವುಗಳ ಕಾರ್ಯವೆಂದರೆ ಭಕ್ತರ ಜೀವನ ರೂಪಿಸುವುದು; ಧಾರ್ಮಿಕ ಸಾಮಾಜಿಕ ಕಾರ್ಯಕಲಾಪಗಳಲ್ಲಿ ಮಾರ್ಗದರ್ಶನಮಾಡುವುದು. ಅವುಗಳನ್ನು ನಡೆಯಿಸಿಕೊಂಡು ಹೋಗುವವರು ಮಠಪತಿಗಳು ಮುಂತಾದವರು.

## ವೈಷ್ಣವಧರ್ಮ

ಕರ್ನಾಟಕದಲ್ಲಿ ವೈಷ್ಣವಧರ್ಮವೂ ಶೈವಧರ್ಮದಷ್ಟೇ ಪುರಾತನವಾದುದು. ಹಲ್ಮಿಡಿಯ ಶಾಸನದಲ್ಲಿ (ಕ್ರಿ.ಶ. ಸು. ೪೫೦) ವೈಷ್ಣವಧರ್ಮದ ಅಸ್ತಿತ್ವವು ಗೋಚರವಾಗುತ್ತದೆ. ಅದರಲ್ಲಿ ಅಚ್ಯುತನ ಸ್ತುತಿಯಿದೆ:

ಜಯತಿ ಶ್ರೀಪರಿಷ್ವಂಗಶಾರ್ಙ್ಗವ್ಯಾನತಿರಚ್ಯುತಃ
ದಾನವಾಕ್ಷ್ಣೋರ್ಯುಗಾಂತಾಗ್ನಿಃ ಶಿಷ್ಟಾನಾನ್ತು ಸುದರ್ಶನಃ ॥[195]

ಕದಂಬರ ರವಿವರ್ಮನ ಕೊರಮಂಗ ಶಾಸನದಿಂದಲೂ ಆ ಕಾಲಕ್ಕೆ ವಿಷ್ಣು, ಲಕ್ಷ್ಮಿ, ಹಾಗೂ ವಿಷ್ಣುವಿನ ಅವತಾರಗಳ ಬಗೆಗೆ, ಆತನು ಗೈದ ದೈತ್ಯರ ಹನನದ ಬಗೆಗೆ ಒಂದು ಬಗೆಯ ಪೂಜ್ಯಭಾವನೆ ಜನತೆಯಲ್ಲಿ ಇದ್ದುದು ಕಂಡುಬರುತ್ತದೆ.[196] ಗಂಗರ ಅನೇಕ ಶಾಸನಗಳು ವಿಷ್ಣುವಿನ ಪಾದದಲ್ಲಿ ಹುಟ್ಟಿದ ಗಂಗೆಯ ಕುಲದವರು ಎಂದು ವಿಷ್ಣುವಿನ ಬಗೆಗೆ ಒಂದು ರೀತಿಯ ಶ್ರದ್ಧೆ ವ್ಯಕ್ತಪಡಿಸಿವೆ. ಯುವರಾಜ ಮಾರಸಿಂಹನ ಆಲೂರ ಶಾಸನದಲ್ಲಿ ಎರಡನೆಯ ಶಿವಮಾರನನ್ನು "ಮಕರಧ್ವಜ ಗುರುಚರಣ ಸರೋಜ ವಿನಮನ ಪವಿತ್ರೀಕೃತೋತ್ತಮಾಂಗಃ" ಎಂದು ವರ್ಣಿಸಿದೆ. ಬಾದಾಮಿಯ ಚಾಲುಕ್ಯರ ಮಂಗಲೇಶ ತನ್ನನ್ನು 'ಮಹಾಭಾಗವತ' ಎಂದು ಹೇಳಿಕೊಂಡಿದ್ದಾನೆ, ವೈಷ್ಣವ ಗುಹಾಲಯವನ್ನು ಕಟ್ಟಿಸಿದ್ದಾನೆ. ಶಾಸನಗಳಲ್ಲಿ ಚಾಲುಕ್ಯರ ಪ್ರಶಸ್ತಿಯು ಬಂದಿರುವ ರೀತಿಯನ್ನು ಪರಿಶೀಲಿಸಿದರೆ, ಅವರು ನಾರಾಯಣನ ಅನುಗ್ರಹದಿಂದ ವರಾಹ ಲಾಂಛನವನ್ನುಳ್ಳವರಾಗಿದ್ದು ಅದರ ಬಲದಿಂದ ಅನೇಕ ರಾಜರನ್ನು ನಿಗ್ರಹಿಸಿದ್ದರೆಂದು ತಿಳಿಯುತ್ತದೆ. ರಾಷ್ಟ್ರಕೂಟರು ವೈಷ್ಣವಧರ್ಮವನ್ನು ಪೋಷಿಸಿದ್ದರೆಂಬುದಕ್ಕೆ ದಶಾವತಾರ ಗುಹಾದೇವಾಲಯ ಇಂದಿಗೂ ಸಾಕ್ಷಿಯಾಗಿ ನಿಂತಿದೆ ಎಲ್ಲೋರದಲ್ಲಿ. ನಾನಾಘಾಟ್ ಹಾಗೂ ನಾಸಿಕದ ಬೌದ್ಧ ಗುಹೆಗಳಲ್ಲಿನ ಶಾಸನಗಳಲ್ಲಿ ಸಂಕರ್ಷಣ, ವಾಸುದೇವ, ರಾಮ ಹಾಗೂ ಕೇಶವರ ದೈವಿಕತೆಯನ್ನು ವರ್ಣಿಸಲಾಗಿದೆ.

ಮಂಗಲೀಶನ ಮಹಾಕೂಟಶಾಸನ ಅವನನ್ನು 'ವಾಸುದೇವ ಇವ ಶ್ರೀಮನ್ತಃ' ಎಂದು ವರ್ಣಿಸಿದೆ. ಅರ್ಥಾತ್ ಕನ್ನಡ ಜನತೆ ವಿಷ್ಣುದೇವತೆಯನ್ನು ಬಹು ಪುರಾತನ ಕಾಲದಿಂದ ಪೂಜಿಸುತ್ತ ಬಂದಿದ್ದಾರೆ. ಅಂದಿನಿಂದ ಇಂದಿನವರೆಗೆ ರಾಜಮಹಾರಾಜರು, ಭಕ್ತಜನರು ವಿಷ್ಣುವಿಗೆ, ಆತನ ಅವತಾರಗಳಿಗೆ ದೇವಾಯತನಗಳನ್ನು ಕಟ್ಟಿಸಿದುದಕ್ಕೆ ಅನೇಕ ಉದಾಹರಣೆಗಳುಂಟು. ಕ್ರಿ.ಶ. ಸು. ೧೨ನೆಯ ಶತಮಾನದ ಉತ್ತರಾರ್ಧದವರೆಗೆ ಜನತೆಯಲ್ಲಿ ಸರ್ವಧರ್ಮಸಹಿಷ್ಣುತೆ, ಮೆಚ್ಚಿದ ಧರ್ಮವನ್ನು ಅನುಸರಿಸುವುದು ರೂಢಿಯಲ್ಲಿ ಇದ್ದಂತೆ ತೋರುತ್ತದೆ.

ವೈಷ್ಣವಧರ್ಮದ ಬೆಳೆವಣಿಗೆಯನ್ನು 'ಭಾಗವತ ಪಂಥ', 'ಶ್ರೀವೈಷ್ಣವಪಂಥ' ಹಾಗೂ 'ದ್ವೈತಪಂಥ' ಎಂಬ ಮೂರು ಶಾಖೆಗಳಲ್ಲಿ ಗುರುತಿಸಬಹುದು.

## ಭಾಗವತ ಪಂಥ

ಭಾಗವತದ ಪ್ರಕಾರ ದಕ್ಷಿಣ ಭಾರತವೇ ಭಕ್ತಿಯ ತವರೂರು. ಭಾಗವತ ಧರ್ಮದ ಮೂಲತತ್ತ್ವ ವಿಷ್ಣುಪಾರಮ್ಯ. ಅದು ಆತನನ್ನು ಹಂಸನಾಮಕ ಪರಮಾತ್ಮ ಎಂದು ಗುರುತಿಸುತ್ತದೆ. ಭಾಗವತ ಸಂಪ್ರದಾಯ ಸುಮಾರು ೫ನೆಯ ಶತಮಾನದಿಂದಲೇ ಪಂಢರಪುರದಲ್ಲಿ ಇದ್ದುದಕ್ಕೆ ಆಧಾರವಿದೆ. ಈ ಸಂಪ್ರದಾಯಕ್ಕೆ ಪಂಢರಪುರದ ಪಾಂಡುರಂಗ ಅಥವಾ ವಿಠ್ಠಲ (< ವಿಷ್ಣು) ಆರಾಧ್ಯದೇವತೆ. ಈ ಪಾಂಡುರಂಗನನ್ನು ಸುಮಾರು ೫ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಅವಿಧೇಯರಾಜನ ಕಾಲದಲ್ಲಿ ದೇವತೆಯೆಂದು ಭಾವಿಸಲಾಗಿತ್ತು. "ಸ್ವಸ್ತಿ ವಸುಧಾಧಿಪತಿ ರಂಗ"[197] ಎಂಬ ಸ್ತುತಿ ಅದರಲ್ಲಿದೆ. ಭಾಗವತ ಪಂಥದವರು ವಿಷ್ಣುವಿನಲ್ಲಿ ಶಿವನ ಐಕ್ಯ ಒಪ್ಪಿಕೊಂಡರೂ ಶಂಕರರ ಮಾಯಾವಾದವನ್ನು ಒಪ್ಪಿಕೊಂಡಿಲ್ಲ. ಅಂತೆಯೇ 'ನಾಥಪಂಥ' ಅಥವಾ 'ವಾರಕರೀಪಂಥ' ಶಂಕರರ ಶೈವದ ಅನುಯಾಯಿಗಳಲ್ಲ. ಜ್ಞಾನದೇವನಾಗಲಿ ತರುವಾಯದವರಾಗಲಿ ಕೃಷ್ಣಪಾರಮ್ಯವನ್ನೇ ಹೇಳಿದ್ದಾರೆ. ಅವರು ಶಂಕರರ ಮಾಯಾವಾದವನ್ನು ಒಪ್ಪರು. ಭಾಗವತಪಂಥ ಶಂಕರರ ಶೈವವೇ ಆಗಿದ್ದರೆ ಅದೊಂದು ಭಿನ್ನ ಪಂಗಡವೇ ಆಗುತ್ತಿದ್ದಿಲ್ಲ. ಶಿವನನ್ನು ನಾಥಪಂಥದವರೂ ಮಾಧ್ವರೂ ಒಪ್ಪುತ್ತಾರೆ. ಆದರೆ ಅಲ್ಲಿ ತಾರತಮ್ಯಭೇದವಿದೆ. ನಾಥಪಂಥದವರಲ್ಲಿ ಶಿವನು ಕೃಷ್ಣನಲ್ಲಿ ಐಕ್ಯವನ್ನು ಪಡೆದಿದ್ದಾನೆ; ಮಾಧ್ವರಲ್ಲಿ ಆತನದು ೫ನೆಯ ಕಕ್ಷೆ. ಭಾಗವತರ ಪ್ರಕಾರ ಹರಿಹರರಲ್ಲಿ ಭೇದಮಾಡಬಾರದು. ಅದು ಪಾಪ. ಹರನ ಸ್ತುತಿ ಹರಿಯ ಅಂಗವಾಗಿಯೇ ಬರುತ್ತದೆ. ಕೃಷ್ಣ ಪಾರಮ್ಯವೇ ಈ ಭಕ್ತಿಪಂಥದ ಬೀಜ. ಕ್ರಿ.ಶ. ೧೧೦೬ರಲ್ಲಿ ಲಕ್ಕುಂಡಿಯಲ್ಲಿ 'ವೈಷ್ಣವಗೀತಿಮನೋಹರರು' ಇದ್ದರೆಂಬುದಕ್ಕೆ ಅಲ್ಲಿನ ಶಾಸನದಲ್ಲಿ ಉಲ್ಲೇಖವಿದೆ.[198] ಚೌಂಡರಸನು ತನ್ನೆರಡು ಕೃತಿಗಳಲ್ಲಿ ಅಭಂಗವಿಟ್ಠಲನನ್ನು ಸ್ತುತಿಸಿದ್ದಾನೆ. ಕರ್ಣಾಟಕದಲ್ಲಿ ವಿಶೇಷತಃ ಉತ್ತರದಲ್ಲಿ ೧೨ನೆಯ ಶತಕದ ಅನಂತರ ಅದು ಮಧ್ವಮತದಲ್ಲಿ ವಿಲೀನವಾಯಿತು, ದಕ್ಷಿಣದಲ್ಲಿ ಶಂಕರರ ಶೈವದಲ್ಲಿ ವಿಲೀನ

ವಾಯಿತು. ಪಂಢರಪುರದ ಸುತ್ತಮುತ್ತಲಿನ ಪ್ರಾಂತದಲ್ಲೇ ಹುಟ್ಟಿದ ಒಂದು 'ನಾಥ ಪಂಥ' ಹಾಗೂ 'ಮಹಾನುಭಾವ' ಪಂಥಗಳು ಮತ್ತು ಮಧ್ವಮತ ಸಹ ಅದರ ಶಾಖೆಗಳೇ ಆಗಿವೆ. ಮಧ್ವಾಚಾರ್ಯರು ವಿಟ್ಠಲನನ್ನು ಪೂಜಿಸಿದುದಕ್ಕೂ ಆಧಾರ ಗಳಿವೆ. ಈ ಪಂಥದಲ್ಲಿ ಲಕ್ಷ್ಮೀಶ, ರುದ್ರಭಟ್ಟ ಹಾಗೂ ಕುಮಾರವ್ಯಾಸ ಮೊದಲಾದ ಶ್ರೇಷ್ಠ ಕವಿಗಳು ಆಗಿಹೋಗಿದ್ದಾರೆ.

## ಶ್ರೀವೈಷ್ಣವಪಂಥ

ಈ ಪಂಥದ ಮೂಲ ತಮಿಳುನಾಡಿನ ಆಳ್ವಾರರುಗಳ ಭಕ್ತಿ ಸಾಧನೆಯಲ್ಲಿ. ಇದು ಕರ್ಣಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಪ್ರಸಾರಹೊಂದಿತು. ಇದೇ ವಿಶಿಷ್ಟಾದ್ವೈತ. ಶ್ರೀ ರಾಮಾನುಜಾಚಾರ್ಯರು ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಕರ್ಣಾಟಕಕ್ಕೆ ಬಂದರೆಂದೂ ಅವರು ಮಂಡ್ಯ ಜಿಲ್ಲೆಯ ತೊಣ್ಣೂರು, ಮೇಲುಕೋಟೆ ಸ್ಥಳಗಳಲ್ಲಿ ಇದ್ದರೆಂದೂ ಪ್ರತೀತಿ. ಹೊಯ್ಸಳ ವಿಷ್ಣುವರ್ಧನನು ಈ ಪಂಥಕ್ಕೆ ಮತಾಂತರ ಹೊಂದಿದನೆಂದು ಹೇಳಲಾಗುತ್ತದೆ. ಮೇಲುಕೋಟೆ ಈ ಪಂಥದವರಿಗೆ ಅತಿ ಮುಖ್ಯ ಸ್ಥಳ. ಮೈಸೂರು, ಮಂಡ್ಯ, ಹಾಸನ, ಬೆಂಗಳೂರು, ಕೋಲಾರ ಈ ಭಾಗಗಳಲ್ಲಿ ವಿಶೇಷ ಪ್ರಸಾರಗೊಂಡಿತು ಈ ಪಂಥ. ಈ ಪಂಥ ಹಾಗೂ ಜೈನಧರ್ಮ ಇವು ಜೊತೆ ಜೊತೆಯಾಗಿ ಇಲ್ಲಿ ಬೆಳೆದವು. ಕೆಲವೊಮ್ಮೆ ಇವಕ್ಕೆ ಘರ್ಷಣೆಗಳಾದುದುಂಟು. ವಿಜಯನಗರದ ಬುಕ್ಕರಾಯನ ಕಾಲಕ್ಕೆ ಇಂಥ ಘರ್ಷಣೆ ಒಂದು ನಡೆದು ರಾಜನು ಆ ನ್ಯಾಯ ಬಗೆಹರಿಸಿದುದು ಪ್ರಸಿದ್ಧ ಸಂಗತಿ. ಶ್ರವಣಬೆಳಗೊಳ ಮೊದಲಾದ ಸ್ಥಳಗಳಲ್ಲಿ ಆ ವಾದವಿವಾದದ ಹಾಗೂ ರಾಜನ ತೀರ್ಪಿನ ಶಾಸನಗಳು ಇಂದಿಗೂ ನಿಂತಿವೆ. ವಿಷ್ಣುವರ್ಧನನ ಹಾಗೆ ಆತನ ವಂಶಜರೂ ಈ ಪಂಥವನ್ನು ಪೋಷಿಸಿಕೊಂಡು ಬಂದರು.

ಮುಂದೆ ವಿಜಯನಗರದ ಅರಸರ ಕಾಲದಲ್ಲೂ ಅದು ಸಾಕಷ್ಟು ಪ್ರೋತ್ಸಾಹ ಪಡೆಯಿತು. ಕೃಷ್ಣದೇವರಾಯನ ಕಾಲಕ್ಕೆ ತಾತಾಚಾರ್ಯ ಎಂಬವರಿಂದ ಅದು ಇನ್ನಷ್ಟು ವಿಸ್ತಾರವಾಯಿತು. ಇವರು ಕನಕದಾಸರಿಗೆ ಪ್ರಾರಂಭದಲ್ಲಿ ಗುರುಗಳೂ ಆಗಿದ್ದರು. ಈ ಪಂಥ ತನ್ನ ಹಿರಿಮೆಯ ತುತ್ತತುದಿಯನ್ನು ಮುಟ್ಟಿದುದು ಮೈಸೂರು ಒಡೆಯರ ಚಿಕ್ಕದೇವರಾಜರ ಕಾಲದಲ್ಲಿ.

ಹೀಗೆ ೧೨ನೆಯ ಶತಮಾನದಲ್ಲಿ ಈ ಧರ್ಮ ಕನ್ನಡನಾಡಿನಲ್ಲಿ ಪ್ರಸಾರವಾದರೂ ಇದರ ಅನುಯಾಯಿಗಳು ಕನ್ನಡದಲ್ಲಿ ಕೃತಿ ರಚಿಸಿದುದು ೧೬ನೆಯ ಶತಮಾನದಿಂದ ಈಚೆಗೆ. ಸು. ೧೬೭೦ರಲ್ಲಿ ಇದ್ದ ರಂಗಾಚಾರ್ಯ ಎಂಬವನೇ ಪ್ರಾಯಃ ಮೊದಲ ಶ್ರೀವೈಷ್ಣವ ಕವಿ. ಅನಂತರದಲ್ಲಿ ಬಾಳಿದ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ ಮೊದಲಾದವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಹೊನ್ನಮ್ಮನ 'ಹದಿಬದೆಯಧರ್ಮ' ಇದೇ ಪರಿಸರದಲ್ಲಿ ಹುಟ್ಟಿತು. ಸಿಂಗರಾರ್ಯ ಆಕೆಯ ಗುರು. ಪಂಥದ ಅನುಯಾಯಿಗಳು ಹಳೆಯ ಮೈಸೂರು ಪ್ರಾಂತದಲ್ಲಿ ವಿಶೇಷವಾಗಿದ್ದಾರೆ. ಇದೇ ಭಾಗದಲ್ಲಿ ಇವರ ಹಲವು

ಮಠಗಳೂ ಇವೆ. ವಡಗಲೈ, ತೆಂಗಲೈ ಮುಂತಾಗಿ ಒಳಪಂಗಡಗಳೂ ಈ ಪಂಥದಲ್ಲಿವೆ.

## ದ್ವೈತಪಂಥ

ಭಾಗವತ ಸಂಪ್ರದಾಯದಿಂದ ಮಧ್ವಾಚಾರ್ಯರ ಕಾಲದಲ್ಲಿ ಈ ಪಂಥ ಕವಲೊಡೆಯಿತು.

ವ್ಯಾಸೇನ ವ್ಯುಪ್ತಬೀಜಃ
ಶ್ರುತಿಭುವಿ ಭಗವತ್ಪಾದ ಲಬ್ಧಾಂಕುರಶ್ರೀಃ
ಪ್ರತ್ನೈರೀಷತ್ಪ್ರಭಿನ್ನೋ
ಜನಿ ಜಯಮುನಿನಾ ಸಮ್ಯಗುದ್ಭಿನ್ನ ಶಾಖಃ ॥

ಮೌನೀಶ ವ್ಯಾಸರಾಜಾತ್
ಉದಿತ ಕಿಸಲಯಃ ಪುಷ್ಪಿತೋಯಮ್ ಜಯೀನ್ದ್ರಾತ್
ಅದ್ಯ ಶ್ರೀ ರಾಘವೇಂದ್ರಾತ್
ವಿಲಸತಿ ಫಲಿತೋಃ ಮಧ್ವಸಿದ್ಧಾಂತಶಾಖೀ ॥[199]

—ಎಂದು ಅದನ್ನು ವಿವರಿಸುವುದುಂಟು. ಮಧ್ವಾಚಾರ್ಯರು ಕ್ರಿ.ಶ. ೧೧೯೯–೧೨೭೮(೮)ರವರೆಗೆ ಬದುಕಿದ್ದರೆಂದು ತಿಳಿದುಬರುತ್ತದೆ. ಕ್ರಿ.ಶ. ೧೨೮೦ರಲ್ಲಿ ನರಹರಿತೀರ್ಥರು ಪೀಠಾಧಿಕಾರಿಗಳಾಗಿದ್ದುದು ಶ್ರೀ ಕೂರ್ಮ ಶಾಸನದಿಂದ[200] ಸ್ಪಷ್ಟವೇ ಇರುವದರಿಂದ ತತ್ಪೂರ್ವದಲ್ಲಿ ಅವರಿದ್ದರು. ಅವರು ವಿಷ್ಣು ಶ್ರೇಷ್ಠ ಎಂದು ಸಾರಿದರು; ತಾರತಮ್ಯದ ಮೂಲಕ ಅದನ್ನು ಸಿದ್ಧಾಂತಿಸಿದರು. ಆ ಸಿದ್ಧಾಂತದಲ್ಲಿ ಪಂಚಭೇದಗಳು: ಜೀವ–ಈಶ, ಜೀವ–ಜೀವ, ಜೀವ–ಜಡ, ಜಡ–ಜಡ, ಜಡ–ಈಶ. ಜಗತ್ತು ಸತ್ಯ, ಮಾಯೆ ಎಂಬುದು ಇಲ್ಲ; ವಿಷ್ಣುವೇ ಸರ್ವಸ್ವ, ಆತನು 'ಬಿಂಬ'. ಭಕ್ತನು 'ಪ್ರತಿಬಿಂಬ'. ಇವು ಈ ಸಿದ್ಧಾಂತದ ಕೆಲ ನಂಬುಗೆಗಳು.

ಉಡುಪಿಯಲ್ಲಿ ಮಧ್ವರು ಶ್ರೀಕೃಷ್ಣನ ಮೂರ್ತಿಯನ್ನು ಪ್ರತಿಷ್ಠೆಗೈದು, ಪೂಜೆಗೆ ಎಂಟು ಮಠಗಳನ್ನು ಸ್ಥಾಪಿಸಿದರು. ಮತಪ್ರಚಾರಕ್ಕೆ ಸ್ವತಃ ದೇಶದ ತುಂಬ ಪ್ರವಾಸ ಮಾಡಿದರು. ಆ ಕಾರ್ಯವನ್ನು ಅವರ ಶಿಷ್ಯರಾದ ಪದ್ಮನಾಭತೀರ್ಥರು, ನರಹರಿತೀರ್ಥರು ಮೊದಲಾದವರು ಮುಂದುವರಿಸಿದರು. ನರಹರಿತೀರ್ಥರು ದಾಸಸಾಹಿತ್ಯದ ಆದ್ಯರೆಂದೂ ಆರಂಭಕಾರರೆಂದೂ ಕೆಲವರ ನಂಬಿಕೆ. ಇವರ ಕೀರ್ತನೆಗಳಲ್ಲಿ ಕೆಲವು ದೊರಕಿವೆ. ತಮ್ಮ ದರ್ಶನವನ್ನು ಸಂಸ್ಕೃತದಲ್ಲೂ ಕನ್ನಡ ಕೀರ್ತನೆಗಳಲ್ಲೂ ಈ ಪಂಥದವರು ಬೆಳಸಿಕೊಂಡು ಬಂದರು. ಕೀರ್ತನೆಗಳ ಮೂಲಕ ದರ್ಶನವನ್ನು ಪ್ರಸಾರಮಾಡಿದ ದಾಸಸಾಹಿತ್ಯದಿಂದ ಸಂಗೀತ, ನೃತ್ಯ ಕಲೆಗಳಿಗೆ ಪ್ರೋತ್ಸಾಹ ದೊರೆಯಿತು; ಮೃದು ಪದ್ಧತಿಯಲ್ಲಿ ಸಾಮಾಜಿಕ ಕುಂದುಕೊರತೆಗಳನ್ನು ತಿದ್ದಲು ಸಾಧ್ಯವಾಯಿತು. ಅದು ಜನಜೀವನವನ್ನು ಕ್ರಾಂತದೃಷ್ಟಿ

ಯಿಂದ ನೋಡಿತು. ಕೀರ್ತನ ಸಾಹಿತ್ಯ ಕನ್ನಡದಲ್ಲಿ ಪುರಂದರದಾಸರ ಕೃತಿಗಳಲ್ಲಿ ತನ್ನ ತುತ್ತತುದಿಯನ್ನು ಮುಟ್ಟಿತು. ಅವರ ಕಾಲದಲ್ಲೇ ಅವರ ಗುರುಗಳಾದ ವ್ಯಾಸರಾಯರಿಂದ ದಾಸಕೂಟ ಹಾಗೂ ವ್ಯಾಸಕೂಟಗಳು ಆರಂಭವಾದುವು. ವ್ಯಾಸರಾಯರು ವಿಜಯನಗರದರಸು ಕೃಷ್ಣದೇವರಾಯನಿಂದ ಪೂಜಿಸಲ್ಪಟ್ಟರು. ಉಡುಪಿ ಮುಂತಾದ ಕಡೆಗಳಲ್ಲಿ ದ್ವೈತಪಂಥದ ಅನೇಕ ಮಠಗಳಿವೆ. ಅವರೆಲ್ಲರ ಗುರಿ, ತಮ್ಮ ಭಕ್ತರ ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳನ್ನು ರೂಪಿಸುವುದು. ಆ ಕಾರ್ಯ ಇಂದಿಗೂ ನಡೆದಿದೆ.

ದಾಸಸಾಹಿತ್ಯ ಜನಜೀವನವನ್ನು ಎಲ್ಲ ಅವಸ್ಥೆಯಲ್ಲೂ ಕಂಡು ಅದನ್ನು ರೂಪಿಸಲು ಪ್ರಯತ್ನಿಸಿತು. ಹುಡುಗರ ಆಟಪಾಟದಿಂದ ಹಿಡಿದು ಸಮಾಧಿಸ್ಥನ ತುರೀಯಾವಸ್ಥೆಯವರೆಗೆ ಅದು ಜನಜೀವನವನ್ನು ವಿವರಿಸಿದೆ. ಚೆಂಡು, ಬುಗುರಿ, ಚಿಣ್ಣಿಕೋಲು, ಗಜ್ಜುಗ, ಲೆತ್ತ, ಪಗಡೆ, ಪಂಜಿ, ಚದುರಂಗಗಳ ಪ್ರಸಕ್ತಿ ಕೀರ್ತನೆಗಳಲ್ಲಿದೆ. ಅರಳೆಲೆ ಮಾಗಾಯಿ, ಕೊರಳ ಮುತ್ತಿನಸರ, ಕಾಲಿನ ಅಂದುಗೆ, ಪಾಗಡ ಬಂದಲಿ, ಬಾವುಲಿ, ಕಿರೀಟ, ಕೊರಳಲ್ಲಿ ಹುಲಿಯುಗುರಿನ ಸರ, ಬೆರಳಲ್ಲಿ ಉಂಗುರ—ಸ್ತ್ರೀಯರಿಗೆ ಸಂಬಂಧಪಟ್ಟ ಕರದ ಕಂಕಣ, ತೋಳಬಂದಿ, ನಡುವಿನ ಒಡ್ಯಾಣ, ಕಡಗ, ಗಗ್ಗರಿ, ಪೆಂಡಿಗೆ, ಹಾವುಗೆ, ಮಾಂಗಲ್ಯ, ಮೂಗುತಿ, ತಾಯತ, ಮುತ್ತಿನಸರ, ಕಟ್ಟಾಣಿ, ಕಿವಿಗೆ ಮುತ್ತಿನ ಓಲೆ ಇತ್ಯಾದಿಗಳನ್ನು ದೇವತೆಗಳಿಗೆ ಇಟ್ಟು ಮೆರೆದ ಕೀರ್ತನೆಗಳಿವೆ. ಸೆಟ್ಟರು, ಒಕ್ಕಲಿಗರು, ಅಂಬಿಗರು, ಜಾಲಗಾರರು, ಕ್ಷತ್ರಿಯರು, ರಾಜರು ಹೇಗೆ ಇರಬೇಕು ಎಂಬುದರ ವಿವರಗಳು ಕೂಡ ಅವುಗಳಲ್ಲಿ ಸಿಕ್ಕುತ್ತವೆ. ಜೀವನದ ಮೂಲತತ್ತ್ವವನ್ನೂ ಸೂತ್ರವನ್ನೂ ಗುರಿಯನ್ನೂ ಗಾದೆಯಂಥ ಚಾಟುಕ್ತಿಗಳಲ್ಲಿ ಸೂಚಿಸಿವೆ. ರೊಕ್ಕ, ರುವ್ವಿ, ದುಡ್ಡು, ಕಾಸು, ಹಾಗ, ನಾಣ್ಯ, ಹೊನ್ನು, ದುಗ್ಗಾಣಿ, ಕನಡೆಗಳ ಪ್ರಸ್ತಾಪ—ಅಂದಿನ ಜನರ ಬಳಕೆಯಲ್ಲಿದ್ದ ನಾಣ್ಯಗಳ ಮಾಹಿತಿಯನ್ನು ಕೊಡುತ್ತದೆ. ಒಟ್ಟಾರೆ ದಾಸಸಾಹಿತ್ಯ ಜೀವನದ ಜೀವಂತಚಿತ್ರ ಕೊಟ್ಟಿದೆ. ಈ ಸಾಹಿತ್ಯದ ನಿರ್ಮಾಪಕರೂ ವಿಪುಲ. ಅವರಲ್ಲಿ ಪುರಂದರದಾಸರು, ಕನಕದಾಸರು, ವಿಜಯದಾಸರು, ಜಗನ್ನಾಥದಾಸರು, ಪ್ರಸನ್ನ ವೆಂಕಟದಾಸರು ಮುಂತಾದವರೂ ಯತಿ ಪರಂಪರೆಯಲ್ಲಿ ಶ್ರೀಪಾದರಾಯ, ವ್ಯಾಸರಾಯ, ವಾದಿರಾಜ ಮತ್ತು ರಾಘವೇಂದ್ರಸ್ವಾಮಿ ಮುಂತಾದವರೂ ಮುಖ್ಯರು. ಅನೇಕ ದಾಸರು ಆಗಿಹೋಗಿದ್ದಾರೆ; ಈಗಲೂ ಆ ಪರಂಪರೆ ಇದೆ.

## ಇಸ್ಲಾಂ ಧರ್ಮ

ದಕ್ಷಿಣ ಭಾರತವೇ ಉತ್ತರ ಭಾರತಕ್ಕಿಂತಲೂ ಮೊದಲು ಇಸ್ಲಾಂ ಧರ್ಮದ ಸಂಪರ್ಕವನ್ನು ಹೊಂದಿತು. ಅದರಲ್ಲೂ ಕರ್ನಾಟಕವೇ ಮೊದಲೆಂದರೆ ತಪ್ಪಾಗದು. ಕ್ರಿ.ಶ. ೬೩೬ರಲ್ಲಿ ಮಹಮ್ಮದೀಯರ ಹಡಗುಪಡೆಯೊಂದು ಠಾಣಾದ (ಗತಕರ್ನಾಟಕದ

ಭಾಗ) ಬಳಿಯ ರೇವನ್ನು ತಲುಪಿತು[201] ಆ ಮುಂದೆ ಅನೇಕ ವ್ಯಾಪಾರಿಗಳು ಆಗಾಗ ಕರ್ಣಾಟಕಕ್ಕೆ ಬಂದುಹೋಗಿದ್ದಾರೆ. ಉರ್ದು ಭಾಷೆಗೆ ದಖನಿ ಉಪಭಾಷೆ (dialect) ಯನ್ನು ಮೊದಲು ಕೊಟ್ಟುದು ಕನ್ನಡನಾಡು. ಅದರ ಉತ್ಪತ್ತಿ ಇಲ್ಲೇ ಎಂದರೂ ತಪ್ಪಾಗದು.[202] ರಾಷ್ಟ್ರಕೂಟರ ಕಾಲಕ್ಕೆ ಇಸ್ಲಾಂ ಧರ್ಮದ ಅನುಯಾಯಿಗಳು ಮಸೀದಿಗಳನ್ನು ಕಟ್ಟಿಕೊಂಡು ಅದರ ಸುತ್ತಮುತ್ತಲೂ ಇರುತ್ತಿದ್ದರೆಂದು ಪ್ರವಾಸಿಗಳ ಬರೆಹದಿಂದ ತಿಳಿದುಬರುತ್ತದೆ. ಅವರ ಕಾಲಕ್ಕೆ ಬಂದ ಅಲ್‌ಇಸ್ತಖ್ರಿಯು ರಾಷ್ಟ್ರ ಕೂಟರ ರಾಜ್ಯದಲ್ಲಿ ಜುಮ್ಮಾಮಸೀದಿಗಳಿದ್ದವೆಂದು ತಿಳಿಸಿದ್ದಾನೆ.[203] ಅಲ್‌ಮಸೂದಿ (ಕ್ರಿ.ಶ. ೯೧೬) ಹಾಗೂ ಇಬ್ನ ಬಟೂಟ (೧೪ನೆಯ ಶತಮಾನ) ಪಶ್ಚಿಮ ಕರಾವಳಿ ಯಲ್ಲಿ ಆ ತುದಿಯಿಂದ ಈ ತುದಿಯವರೆಗೆ ಮಸೀದಿಗಳಿದ್ದ ಬಗೆಗೆ ಬರೆದಿದ್ದಾರೆ. ಇಬ್ನ ಬಟೂಟನ ಪ್ರಕಾರ ಹೊಯ್ಸಳರ ३ನೆಯ ಬಲ್ಲಾಳನ ಸೈನ್ಯದಲ್ಲಿ ೨೦,೦೦೦ ಮುಸ್ಲಿ ಮರು ಇದ್ದರೆಂದು ತಿಳಿದುಬರುತ್ತದೆ. ವಿಜಯನಗರದ ಅರಸರ ಕಾಲದಲ್ಲೂ ಅವರ ಸಂಖ್ಯೆ ವಿಪುಲವಾಗಿತ್ತು. ಅಲ್ಲಾಉದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕ್ ಕಾಫರ್ ದಕ್ಷಿಣದ ಮೇಲೆ ಮಾಡಿದ ಘೋರ ದಂಡಯಾತ್ರೆ ಅನೇಕ ರಾಜಮನೆತನಗಳನ್ನು ಉರುಳಿಸಲು, ರಾಜಕೀಯ ದೃಷ್ಟಿಯಿಂದ ಮುಸ್ಲಿಮ್ ಜನತೆಗೆ ಒಂದು ವಿಶಿಷ್ಟ ಅವಕಾಶ ದೊರೆಯಿತು. ತುಘಲಕರ ಕಾಲದಲ್ಲಿನ ದಾಳಿಗಳೂ ದೇವಗಿರಿಗೆ ಮಹ್ಮದ್ ತುಘಲಕನ ರಾಜಧಾನಿಯ ಬದಲಾವಣೆಯೂ ಅವರು ಇನ್ನಷ್ಟು ಗಟ್ಟಿಯಾಗಿ ಇಲ್ಲಿ ನೆಲೆ ನಿಲ್ಲಲು ಕಾರಣವಾಯಿತು. ಆ ಮುಂದೆ ಬಹಮನಿರಾಜ್ಯ (೧೩೪೭-೧೫೨೭), ಅದರ ಐದು ತುಕಡಿಗಳು, ಅವರಲ್ಲೂ ಆದಿಲ್‌ಷಾಹಿ ಕುತುಬ್‌ಷಾಹಿ ಮತ್ತು ನಿಜಾಮ್‌ಷಾಹಿ ಮನೆತನಗಳು ಕನ್ನಡನಾಡಿನ ಜನತೆಯೊಂದಿಗೆ ನೇರ ಸಂಪರ್ಕ ಹೊಂದಿದ್ದವು. ಅನಂತರ ಮೊಘಲ್ ಸಾಮ್ರಾಜ್ಯದ ಅವಧಿಯಲ್ಲಿಯೂ ಈ ಧರ್ಮಕ್ಕೆ ಪ್ರೋತ್ಸಾಹ ಲಭ್ಯವಾಗಿತ್ತು. ಆ ಸಾಮ್ರಾಜ್ಯ ಹಾಳಾದ ಮೇಲೆ ನೈಜಾಮ್ ಮೊದಲಾದ ನವಾಬರೂ ಮೈಸೂರಿನ ಹೈದರ್ ಹಾಗೂ ಟಿಪ್ಪು ಇವರೂ ಆ ಧರ್ಮವನ್ನು ಸಾಕಷ್ಟು ಬೆಳಸಿದರು.

ರಮ್‌ಜಾನ್, ಬಕರೀ ಈದ್—ಇವು ಮುಸ್ಲಿಮರಿಗೆ ದೊಡ್ಡ ಹಬ್ಬಗಳು. ಮೊಹರಮ್ ಸಂತೋಷದ ಹಬ್ಬವಾಗದಿದ್ದರೂ ಸರ್ವತ್ರ ಆಚರಿಸಲ್ಪಡುತ್ತದೆ. ಕರ್ಣಾಟಕದಲ್ಲಿ ಒಮ್ಮೆ ಮೊಹರಮ್ ಆಚರಣೆ ಬಹಳ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿತ್ತು. ರಾಯ ಚೂರು ಜಿಲ್ಲೆಯ ಮುದ್ಗಲ್ ವಿಶೇಷ ಪ್ರಸಿದ್ಧಿಯನ್ನು ಹೊಂದಿತ್ತು. ಸು. ೧೯೪೭ಕ್ಕೆ ಮುಂಚೆ ಮೊಹರಮ್, ಹಿಂದು ಹಾಗೂ ಮುಸ್ಲಿಮ್ ಜನಾಂಗದವರು ಒಟ್ಟಿಗೆ ಸೇರಿ 'ಅಲಾಯ್' ಆಡುವ ಒಂದು ಸಾಮಾಜಿಕ ಕೂಟವಾಗಿತ್ತು. ಆಗ ವೀರಾವೇಶದಿಂದ ಆಟ ಆಡುತ್ತಿದ್ದರು. ಇದರಲ್ಲಿ ಆಗೊಮ್ಮೆ ಈಗೊಮ್ಮೆ ಕೋಲಾಟವನ್ನು ಆಡುತ್ತಿದ್ದರು. ಅವೆಲ್ಲ ಈಗ ನಿಂತುಹೋಗಿದೆ. ಅದು ಹಿಂದುಗಳ ಆಟದ ಪ್ರಭಾವವೆಂದು ಹೇಳಬಹುದಾಗಿತ್ತು. ತತ್ತ್ವ ಆಚರಣೆಗಳಲ್ಲೂ ಸೂಫಿಮತ, ನಾಥಪಂಥ ಸಂಪ್ರದಾಯದ ಮೂಲಕ ಹಿಂದು ಧರ್ಮದಲ್ಲಿ ನುಸುಳಿಕೊಂಡಿತು. ಬಹಮನಿ ಅರಸು ಅಹಮದ್‌ಷಹ-ಅಲ್-ವಲಿ ಬಹಮನಿ

ಎಂಬಾತನು ಧಾರ್ಮಿಕಪ್ರವೃತ್ತಿಯವನಾಗಿದ್ದು ಕಲ್ಬುರ್ಗಿಯ ಪ್ರಸಿದ್ಧ ಬಂದೇನವಾಜ್ ಎಂಬ ಸಂತನ ಶಿಷ್ಯನಾಗಿದ್ದನು. ಬಂದೇನವಾಜನ ಉರ್ಸು ಇವತ್ತಿಗೂ ನಡೆಯುತ್ತದೆ. ಮುಸ್ಲಿಮ್ ಜನರ ಜೊತೆಗೆ ಅನೇಕ ಹಿಂದುಗಳು ಈ ಯಾತ್ರೆಗೆ ಬರುತ್ತಾರೆ. ಈ ರಾಜನ ಹೆಸರಿನಲ್ಲೂ ಅಷ್ಟೂರಿನಲ್ಲಿ ಇಂದಿಗೂ ಉರ್ಸು ಆಗುತ್ತದೆ. ಆತನ ಗೋರಿಗೆ ಉರ್ಸು ಸಮಯದಲ್ಲಿ ಹಿಂದುಗಳು ತೆಂಗು ಒಡೆಯುವರು, ಮುಸ್ಲಿಮ್ ಜನರು ಫಾತೆ ಕೊಡುವರು. ಕುತೂಹಲದ ಸಂಗತಿಯೆಂದರೆ ಈ ರಾಜನ ಗೋರಿಯ ಮೇಲೆ 'ಅಲಮಪ್ರಭು' ಎಂದು ಬರೆಯಲಾಗಿದೆ. ಮಾಣಿಕಪ್ರಭು, ಬಕಪ್ರಭು ಸಂಪ್ರದಾಯದಲ್ಲಿ ಸೂಫಿಮತದ ನಸಿರುದ್ದೀನನ ಜಯ ಜಯಕಾರವನ್ನು ಮಾಡುತ್ತಾರೆ. (ವೀರಶೈವರ) ಸಾವಳಗಿ ಮಠದಲ್ಲಿ ಮುಸಲ್ಮಾನ ಸಾಧುಗಳ ಹೆಸರುಗಳು ಗುರುಪರಂಪರೆಯಲ್ಲಿ ಬಂದಿವೆ. ಮೈಸೂರು ಪ್ರದೇಶದಲ್ಲಿನ ಬಾಬಾಬುಡನ್‌ಗಿರಿ, ಈ ಬಗೆಯ ಪ್ರಭಾವ ಹೊಂದಿರುವುದು ಪ್ರಸಿದ್ಧ ಸಂಗತಿ.

## ಕ್ರೈಸ್ತಧರ್ಮ

ಕ್ರೈಸ್ತಧರ್ಮದ ಸಂಪರ್ಕ ಕರ್ನಾಟಕಕ್ಕೆ ಸುಮಾರು ೬ನೆಯ ಶತಮಾನದಿಂದಲೇ ಉಂಟಾಯಿತು ಎಂದು ಹೇಳಲಾಗುತ್ತದೆ.[204] ಪಶ್ಚಿಮ ಕರಾವಳಿಯ ಉಡುಪಿಯ ಬಳಿ ಕಲ್ಯಾಣದಲ್ಲಿ ಈ ಸಂಪರ್ಕ ಘಟಿಸಿತೆಂದು ಹೇಳಲಾಗಿದೆ. ಆದರೆ ಅದರ ನಿಜವಾದ ಪ್ರಭಾವ ಹಾಗೂ ಬೆಳವಣಿಗೆ ಇತ್ತೀಚಿನದು.

ಕ್ರೈಸ್ತಧರ್ಮದ ವ್ಯಾಪಾರಿಗಳು ಭಾರತಕ್ಕೆ ಬಂದವರು ಆ ಧರ್ಮವನ್ನು ಇಲ್ಲಿ ಸ್ಥಿರವಾಗಿ ನಿಲ್ಲಿಸಿದರು. ವಿಜಯನಗರದ ಕಾಲದಲ್ಲಿ ಯೆಹೂದ್ಯ, ಕ್ರೈಸ್ತ ಹಾಗೂ ಇಸ್ಲಾಮ್ ಧರ್ಮಗಳು ಇತರ ಧರ್ಮಗಳು ಪಡೆದ ಸ್ಥಾನವನ್ನೇ ಪಡೆದಿದ್ದವು. ಸಣ್ಣ ಕೆಳದಿಯ ರಾಜ್ಯದಲ್ಲಿ ಹಲವಾರು ಜನ ಕ್ರೈಸ್ತರು ಇದ್ದರು. ಬೆಂಗಳೂರು ಜಿಲ್ಲೆಯ ಆನೆ ಕಲ್ಲಿನಲ್ಲಿ ಕ್ರಿ.ಶ. ೧೮೦೦ರ ಗೋರಿಶಾಸನವಿದ್ದು ಅದರ ಅಸ್ತಿತ್ವವನ್ನು ಸೂಚಿಸುತ್ತದೆ.[205] ಹತ್ತೊಂಬತ್ತನೆಯ ಶತಮಾನದಲ್ಲಿ ಲಂಡನ್ ಮಿಷನರಿ ಸಂಸ್ಥೆ, ವೆಸ್ಲಿಯನ್ ಮಿಷನ್, ಬಾಸೆಲ್ ಮಿಷನ್, ಅಮೆರಿಕನ್ ಇವ್ಯಾಂಜಲಿಕಲ್ ಲುಥರ್ನ್ ಮಿಷನ್, ಎಸ್.ಪಿ.ಜಿ. ಮಿಷನ್, ಎಸ್. ಜೆ. ಮುಂತಾದ ಧಾರ್ಮಿಕ ಸಂಸ್ಥೆಗಳು ಈ ಧರ್ಮವನ್ನು ಕರ್ನಾಟಕದ ಮೂಲೆ ಮೂಲೆಗೆ ಕೊಂಡೊಯ್ದವು. ಆ ಸಂಸ್ಥೆಗಳ ಸೇವೆ, ಕನ್ನಡ ಸಾಹಿತ್ಯದ ಹೊಸ ಹುಟ್ಟಿಗೆ ಕೂಡ ಕಾರಣವಾಯಿತೆಂದರೆ ತಪ್ಪಾಗದು. ರೆ. ಎಫ್. ಕಿಟ್ಟೆಲ್, ಬಿಷಪ್ ಕಾಲ್ಡ್‌ವೆಲ್ ಮೊದಲಾದವರನ್ನು ಕನ್ನಡ ಜನ ಮರೆಯುವಂತಿಲ್ಲ. ಕನ್ನಡ ಸಾಹಿತ್ಯಕ್ಕೆ ಕಿಟ್ಟೆಲ್ ಅವರ ಸೇವೆ ಅಮೋಘವಾದುದು. ಇನ್ನು ಬ್ರಿಟಿಷರ ಆಳಿಕೆ ನಡೆಸಲು ಬಂದ ಅನೇಕ ಕ್ರೈಸ್ತ ಅಧಿಕಾರಿಗಳಿಂದಲೂ ಕನ್ನಡಕ್ಕೆ ಸೇವೆ ಸಂದಿದೆ. ಸರಿಯಾದ ಸಾಧನಗಳನ್ನು ಬಳಸಿಕೊಂಡು ನಾಡಿನ ಚರಿತ್ರೆ ಬರೆದವರಲ್ಲಿ ಅವರೇ ಮೊದಲಿಗರು. ಜೆ. ಎಫ್. ಫ್ಲೀಟ್, ಬಿ. ಎಲ್. ರೈಸ್ ಇವರ ಕಾರ್ಯ ಅವಿಸ್ಮರಣೀಯ.

# ಸಾಂಸ್ಕೃತಿಕ ಜನಜೀವನ

## ವಾಸ್ತು ಚಿತ್ರಕಲೆಗಳು

ಸಾಂಸ್ಕೃತಿಕ ಜನಜೀವನದ ಪ್ರಮುಖ ಅಭಿವ್ಯಕ್ತಿ ಮಾಧ್ಯಮ ಎಂದರೆ ಲಲಿತಕಲೆಗಳು. ಅವುಗಳ ಬೆಳವಣಿಗೆಗೆ ಕರ್ನಾಟಕವು ಹೆಚ್ಚು ಅನುಕೂಲಕರವಾದ ಸನ್ನಿವೇಶಗಳನ್ನು ಹೊಂದಿದ್ದು ಇಲ್ಲಿ ವಾಸ್ತು, ಶಿಲ್ಪ, ಸಂಗೀತ ಮೊದಲಾದ ಕಲೆಗಳು ವೈವಿಧ್ಯಮಯವಾಗಿ ಬೆಳೆದಿರುವುದು ಕಂಡುಬರುತ್ತದೆ. ಕರ್ನಾಟಕದ ಪಶ್ಚಿಮಭಾಗದಲ್ಲಿ ಮಿದುವಾದ ಧಾರವಾಡ ಶಿಲಾಪದರವೂ ಪೂರ್ವಭಾಗದಲ್ಲಿ ಗಟ್ಟಿಯಾದ ಗ್ರಾನೈಟ್ ಕಲ್ಲುಗಳೂ ನಡುವೆ ಕೆಂಪು ಮರಳುಶಿಲೆ, ಹಸಿರು ಬೆರೆತ ಬಿಳಿಯ ಸುಣ್ಣಕಲ್ಲೂ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಜಂಬುಕಲ್ಲೂ ಹೇರಳವಾಗಿದ್ದು ಅಲ್ಲಲ್ಲಿ ಬೆಳೆದ ವಾಸ್ತುಶಿಲ್ಪಕ್ಕೆ ಅವು ಮೂಲಸಾಮಗ್ರಿಯನ್ನೊದಗಿಸಿರುವುದರಿಂದ ಕಟ್ಟಡಗಳ ರಚನೆ, ಶಿಲ್ಪಗಳ ಮಾದರಿ ಬೇರೆ ಬೇರೆಯಾಗಿವೆ. ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ಬೀಳುವ ಮಳೆ ಅಲ್ಲಿನ ವಿಶಿಷ್ಟರೀತಿಯ ಕಟ್ಟಡಗಳಿಗೆ ಕಾರಣವಾಗಿದೆ. ಭಾರತದಲ್ಲಿ ಕರ್ನಾಟಕ ಆಯಕಟ್ಟಾದ ನೆಲೆಯಲ್ಲಿರುವುದರಿಂದ ಇಲ್ಲಿ ಔತ್ತರೇಯ ದಾಕ್ಷಿಣಾತ್ಯ ಶೈಲಿಗಳು ಸಂಗಮಿಸಿ ಬೆಳೆದುವಲ್ಲದೆ ಕಾಲಕ್ರಮದಲ್ಲಿ ಆ ಸಮ್ಮಿಳನದಿಂದ ಕೆಲವು ವಿಶಿಷ್ಟಶೈಲಿಗಳೂ ಹುಟ್ಟಿ ಬೆಳೆದುವನ್ನು ಇಲ್ಲಿ ಗಮನಿಸಬಹುದು. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರಗಳಂತಹ ಪ್ರಸಿದ್ಧ ರಾಜಮನೆತನಗಳು ಸುಭದ್ರವಾದ ಸಾಮ್ರಾಜ್ಯಗಳನ್ನು ಕಟ್ಟಿ ಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟದ್ದರಿಂದ ಆ ವಿವಿಧ ಶೈಲಿಗಳ ಬೆಳೆವಣಿಗೆ ಸಾಧ್ಯವಾಯಿತು. ಹಲವು ಮತಧರ್ಮಗಳಿಗೆ ತವರೂ ಆಶ್ರಯ ಸ್ಥಾನವೂ ಆಗಿದ್ದ ಕರ್ನಾಟಕದಲ್ಲಿ ಎಲ್ಲ ಕಲೆಗಳೂ ಮತಧರ್ಮಗಳ ತಳಹದಿಯ ಮೇಲೆಯೇ ಸಹಜವಾಗಿ ಬೆಳೆದು ಬಂದುದನ್ನು ಗಮನಿಸಿದಾಗ, ಕಲೆಗಳ ಪ್ರಾಮುಖ್ಯವನ್ನು ಕಡೆಗಣಿಸುವಂತಿಲ್ಲ. ಬೌದ್ಧ, ಜೈನ, ಶೈವ, ವೈಷ್ಣವ ಮತ್ತು ಇಸ್ಲಾಂ ಮತಗಳನ್ನು ಆಧರಿಸಿ ಕಟ್ಟಿದ ಕಟ್ಟಡಗಳು ಕರ್ನಾಟಕದ ಉದ್ದಗಲಕ್ಕೂ ಹರಡಿರುವುದನ್ನು ಕಾಣಬಹುದು.

ಚರಿತ್ರಪೂರ್ವಕಾಲದ ಬಣ್ಣದ ಗೀರುಚಿತ್ರಗಳಲ್ಲದೆ, ಆಕಾರಗಳನ್ನು ಕೊರೆದಿರುವ ರೇಖಾಚಿತ್ರಗಳೂ ಕರ್ನಾಟಕದಲ್ಲಿ ಹಲವು ಕಡೆ ದೊರೆತಿವೆ. ತೆಕ್ಕಲಕೋಟೆಯಲ್ಲಿ ದೊರೆತಿರುವ ಮಾನವರ ಸಾಲು, ಜಿಂಕೆ ಗೂಳಿಗಳು ಮೊದಲಾದುವು ಕಂಡುಬರುವ ಇಂತಹ ಕೆಲವು ರೇಖಾಚಿತ್ರಗಳು ಬಹುಶಃ ನವಶಿಲಾಯುಗಕ್ಕೆ ಸೇರುತ್ತವೆ. ಇದೇ ರೀತಿ ಬೆಣಚು ಕಲ್ಲಿನವು ಇತಿಹಾಸದ ಆರಂಭಕಾಲಕ್ಕೆ ಸೇರಿದವು. ಕಪ್ಪಗಲ್ಲು ಗೊಂಬೆಗುಡ್ಡಗಳು ಇಂಥ ಚಿತ್ರಗಳಿರುವ ಪ್ರಾಗೈತಿಹಾಸಿಕ ಪ್ರದೇಶಗಳು. ಚಿತ್ರದುರ್ಗದ ಬಳಿಯ ಚಂದ್ರವಳ್ಳಿಯಲ್ಲಿ ಬಂಡೆಯಮೇಲೆ ಮೂಡಿಸಿರುವ ಹುಲಿ, ಜಿಂಕೆ ಕಾಡುಕೋಣಗಳಲ್ಲಿ ಆ ಪ್ರಾಣಿಗಳ ಗುಣ ಲಕ್ಷಣಗಳು ಚೆನ್ನಾಗಿ ಒಡಮೂಡಿವೆ.

ಬೃಹತ್ ಶಿಲಾಯುಗದ ಕಾಲದ ಹಲವು ಸಮಾಧಿಗಳು ಕರ್ನಾಟಕದ ನಾನಾ ಭಾಗಗಳಲ್ಲಿ ದೊರೆತಿವೆ. ದೊಡ್ಡದಾದ ಕಲ್ಲಿನ ಚಪ್ಪಡಿಗಳನ್ನು ಸ್ವಸ್ತಿಕಾಕಾರದಲ್ಲಿ ಜೋಡಿಸಿ ಮೇಲೊಂದು ವಿಶಾಲವಾದ ಹಾಸುಗಲ್ಲನ್ನು ಮುಚ್ಚಿ ನಿರ್ಮಿಸಿರುವ ಶವಪೆಟ್ಟಿಗೆಗಳು ಈಗ ದೊರೆತಿರುವ, ಅತಿ ಪ್ರಾಚೀನವಾದ ಕಟ್ಟಡಗಳೆನ್ನಬಹುದು. ಪೂರ್ವದಿಕ್ಕಿನ ಅಡ್ಡ ಚಪ್ಪಡಿಯಲ್ಲಿ ಗುಂಡು ರಂಧ್ರವಿರುವುದೊಂದು ವಿಶೇಷ. ಇಂಥ ಸಮಾಧಿಗಳ ಸುತ್ತಲೂ ವೃತ್ತಾಕಾರದಲ್ಲಿ ದಪ್ಪ ಗುಂಡುಗಳನ್ನು ಜೋಡಿಸಿರುವುದುಂಟು. ಕಲೆಯ ದೃಷ್ಟಿಯಿಂದ ಗಮನಿಸಬಹುದಾದಂತಹವಲ್ಲದಿದ್ದರೂ ಇವು ಮುಂದಿನ ಕಟ್ಟಡಗಳಿಗೆ ಆದಿಯೆಂದು ಹೇಳಬಹುದು. ಕರ್ನಾಟಕದ ಹಲವು ಭಾಗಗಳಲ್ಲಿ ಹರಡಿರುವ ಪುರಾತನ ನಿವೇಶನಗಳಲ್ಲಿ ಕಂಡುಬರುವ ಮೃತ್ಪಾತ್ರೆಗಳು ಕಲೆಯ ದೃಷ್ಟಿಯಿಂದ ಮುಖ್ಯವಾದುವು. ತಾಮ್ರಯುಗದ ಕಾಲದಿಂದ ಮಾಸಲು ಕೆಂಪು ಬಣ್ಣದ ಮಡಕೆಗಳ ಮೇಲೆ ದಪ್ಪ ಕಪ್ಪು ಗೀರುಗಳಿಂದ ಹಲವು ಬಗೆಯ ಚಿತ್ರಗಳನ್ನು ಮೂಡಿಸಿರುವುದನ್ನು ಕಾಣಬಹುದು. ಇದೇ ರೀತಿ ಕ್ರಿ.ಶ.ದ ಆರಂಭದ ಕಾಲಕ್ಕೆ ಸೇರುವ ಕೆಂಪು ಕಪ್ಪು ಹೊಳಪಿನ ಮಡಕೆಗಳ ಮೇಲೆ ಬಿಳಿಯ ಬಣ್ಣದಿಂದ ರಚಿಸಿರುವ ಬಗೆಬಗೆಯ ರೇಖಾಕೃತಿಗಳು ಅಡ್ಡಾದಿಡ್ಡಿಯಾಗಿ, ಅಲೆಯಲೆಯಾಗಿ, ದಪ್ಪ ಸಣ್ಣ ಚುಕ್ಕೆಗಳಾಗಿ, ಹೂವಿನಂತೆ ಹತ್ತು ಹಲವು ಬಗೆಯಾಗಿ ಚಿತ್ರಿತವಾಗಿ, ಆಗಿನ ಜನರ ಅಭಿರುಚಿಯ ಪ್ರತೀಕಗಳಾಗಿವೆ. ಬ್ರಹ್ಮಗಿರಿ, ಚಂದ್ರವಳ್ಳಿ, ಹೆಮ್ಮಿಗೆ, ಹೇರಕಲ್ಲು, ಪಡಗಾಂವ್, ಮಾಧವಪುರ ಮುಂತಾದ ಹತ್ತಾರು ನಿವೇಶನಗಳಲ್ಲಿ ಇಂತಹ ಚಿತ್ರಿತ ಮೃತ್ಪಾತ್ರೆಗಳು ದೊರೆತಿವೆ. ಚಂದ್ರವಳ್ಳಿಯಲ್ಲಂತೂ ಮಡಕೆಗಳ ಕಂಠಗಳಮೇಲೆ ಅಚ್ಚೊತ್ತಿ ಬಿಡಿಸಿರುವ ಹೂ, ಬಳ್ಳಿ ಮುಂತಾದ ಸುಂದರ ಆಕೃತಿಗಳು ಚಿತ್ತಾಕರ್ಷಕವಾಗಿವೆ.

ಈಗ ದೊರೆತಿರುವ ಆಧಾರಗಳಿಂದ ಕರ್ನಾಟಕದಲ್ಲಿ ಆರಂಭಕಾಲದ ವಾಸ್ತುರೀತಿಯನ್ನು ಗುರುತಿಸುವುದು ಕಠಿಣ. ಬಹುಶಃ ಆಗ ಮರದ, ಮಣ್ಣಿನ ಅಥವ ಇಟ್ಟಿಗೆಯ ಕಟ್ಟಡಗಳನ್ನು ಕಟ್ಟಿ ಮೃಣ್ಮೂರ್ತಿಗಳನ್ನು ಆ ಕಟ್ಟಡಗಳ ಹಿಂಭಾಗದ ಗೋಡೆಗೆ ಸೇರಿದಂತೆ ಅರೆಯುಬ್ಬಿನಲ್ಲಿ ಬಿಡಿಸಿ ಬಣ್ಣಹಾಕುವ ಪದ್ಧತಿ ಇದ್ದಿರಬೇಕು. ಅನೂಚಾನವಾಗಿ ನಡೆದುಕೊಂಡು ಬಂದಿರುವ ಗ್ರಾಮದೇವತೆಗಳು, ಸಪ್ತಮಾತೃಕೆಗಳು ಮುಂತಾದ ಶಕ್ತಿ ದೇವತೆಗಳ ಪೂಜೆಯ ಅಂಗವಾಗಿ ಆ ದೇವತೆಗಳ ಬೃಹದಾಕಾರದ ಮೂರ್ತಿಗಳನ್ನು ಮಣ್ಣಿನಲ್ಲಿಯೇ ನಿರ್ಮಿಸಿ ಬಣ್ಣಹಾಕುವ ಪದ್ಧತಿ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಈಗಲೂ ಉಳಿದುಬಂದಿದೆ. ಇದರೊಂದಿಗೆ ಭೂತಪೂಜೆಯ ಅಂಗವಾಗಿ ಹಲವು ಬಗೆಯ ಪ್ರಾಣಿಗಳ ಮತ್ತು ಮಾನವರ ಮೂರ್ತಿಗಳನ್ನು ಮರದಿಂದ ನಿರ್ಮಿಸಿ ಅವಕ್ಕೆ ಅಂದವಾಗಿ ಬಣ್ಣಹಾಕಿಟ್ಟು ಪೂಜಿಸುವ ಪದ್ಧತಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವ್ಯಾಪಕವಾಗಿ ಹರಡಿದೆ. ಉದ್ಯಾವರ, ಪೊಳಲಿ, ಮೂಡಬಿದರೆ, ಬಾರಕೂರು, ಅನಂತಪುರ ಮುಂತಾದ ಕಡೆಗಳಲ್ಲಿ ಇರುವ ಬೃಹದಾಕಾರದ ಮೃಣ್ಮೂರ್ತಿಗಳೂ ಮೆಕ್ಕೆಕಟ್ಟೆ ಮತ್ತು ಇತರೆಡೆಗಳಲ್ಲಿರುವ ಚಿತ್ರವಿಚಿತ್ರವಾದ ದಾರುಮೂರ್ತಿಗಳೂ ಈಗ ಇರುವ ರೀತಿಯಲ್ಲಿ

ಎಷ್ಟು ಹಿಂದಿನವೆಂದು ಹೇಳಲಾಗದಿದ್ದರೂ ಬಹು ಹಿಂದಿನ ಕಾಲದಲ್ಲಿಯೇ ಆ ಮೂರ್ತಿಗಳನ್ನು ಸ್ಥಾಪಿಸಿದ್ದು, ಕಾಲಕಾಲಕ್ಕೆ ಅವನ್ನು ನವೀಕರಿಸುತ್ತಿದ್ದರೆಂದು ಹೇಳಬಹುದು. ಕಲ್ಲಿನಿಂದ ಕಟ್ಟಡಗಳನ್ನು ಕಟ್ಟುವುದಕ್ಕೆ ನೊದಲಿದ್ದ ಇಂಥ ಕಟ್ಟಡಗಳು ಯಾವುವೂ ಮೂಲರೂಪದಲ್ಲಿ ಈಗ ಉಳಿದುಬಂದಿಲ್ಲ.

ಕರ್ನಾಟಕದಲ್ಲಿ ಮೌರ್ಯರ ಕಾಲದ ವಾಸ್ತುಶಿಲ್ಪ ರೀತಿ ಹೇಗಿತ್ತು ಎನ್ನುವುದು ಸ್ಪಷ್ಟವಾಗಿಲ್ಲ. ಬ್ರಹ್ಮಗಿರಿಯಲ್ಲಿ ಅಶೋಕನ ಶಾಸನದ ಬಳಿ ದೊರೆತ ಚೈತ್ಯಾಕಾರದ ಇಟ್ಟಿಗೆಯ ಕಟ್ಟಡ ಬಹುಶಃ ಆ ಕಾಲಕ್ಕೆ ಸೇರಿದ ಬೌದ್ಧರ ಕಟ್ಟಡವಾಗಿದ್ದು, ಅದರ ಬಹುಭಾಗ ಈಗ ನಾಶವಾಗಿದ್ದರೂ ಕಟ್ಟಡದ ಹಿಂಭಾಗ ಲಾಳಾಕಾರದಲ್ಲಿದ್ದ ಸೂಚನೆ ಸ್ಪಷ್ಟವಾಗಿದೆ. ಬೌದ್ಧಕಾಲೀನ ವಾಸ್ತುಶಿಲ್ಪ ಶೈಲಿ ಹೀಗೆ ಮೌರ್ಯರ ಕಾಲದಲ್ಲಿಯೇ ಇಲ್ಲಿ ಆರಂಭವಾಗಿ, ಸಾತವಾಹನರ ಕಾಲದಲ್ಲಿ ಅಲ್ಲಲ್ಲಿ ಬೆಳೆದುಬಂದಿತು. ಇವುಗಳಲ್ಲಿ ಮುಖ್ಯವಾದವು ಸನ್ನತಿಯಲ್ಲಿ ದೊರೆತ ಅವಶೇಷಗಳು. ಇಲ್ಲಿಯೂ ಚೈತ್ಯ, ಸ್ತೂಪ ಅಥವಾ ವಿಹಾರಗಳು ಯಾವುವೂ ಉಳಿದುಬಂದಿಲ್ಲದಿದ್ದರೂ ಒಂದು ಸ್ತೂಪದ ವೃತ್ತಾಕಾರವಾದ ತಲವಿನ್ಯಾಸ ಮತ್ತು ಅದರ ಸುತ್ತಿನ ಕೆಲವು ಶಿಲ್ಪಫಲಕಗಳು ಮೂಲರಚನೆಯ ಸೂಚನೆಯನ್ನು ಕೊಡುತ್ತವೆ. ಅಲ್ಲಿ ಆ ಕಾಲದ ಅನೇಕ ಶಿಲ್ಪಗಳೂ ಶಾಸನಗಳೂ ಇತರ ಅವಶೇಷಗಳೂ ಹೇರಳವಾಗಿ ಅಸ್ತವ್ಯಸ್ತವಾಗಿದ್ದು ಅವು ಅಮರಾವತಿ, ಭಟ್ಟಿಪ್ರೋಲು ಮೊದಲಾದ ಕಡೆಗಳಲ್ಲಿ ಕಂಡುಬರುವ ಶಿಲ್ಪದ ಮಾದರಿಗಳನ್ನು ಹೋಲುತ್ತವೆ. ಗುಂಡಾದ ಸ್ತೂಪದ ಹೊರಮೈಯನ್ನು ಹಸಿರು ಬೆರೆತ ಬಿಳಿಯ ಸುಣ್ಣಕಲ್ಲಿನ ಶಿಲ್ಪಫಲಕಗಳಿಂದ ಅಲಂಕರಿಸಿದ್ದುದು ಸ್ಪಷ್ಟ. ಶಿಲ್ಪಕ್ಕೆ ಅಷ್ಟೇನೂ ಅನುಕೂಲವಲ್ಲದ ಈ ಸುಣ್ಣಕಲ್ಲಿನ ಹಲಗೆಗಳ ಮೇಲೆ ಬಿಡಿಸಿರುವ ಬುದ್ಧನ ಜೀವನ ಕಥೆಗಳೂ ಹಲವು ಬಗೆಯ ಸಾಂಸಾರಿಕ ಚಿತ್ರಣಗಳೂ ಪ್ರಾಣಿ ಮುಂತಾದವುಗಳ ಮೂರ್ತಿಚಿತ್ರಗಳೂ ಅತ್ಯಂತ ಆಕರ್ಷಕವಾಗಿವೆ. ‘ನಂದಿವಿಶಾಲ ಜಾತಕ’ ಮತ್ತು ಬುದ್ಧನ ಜನನ ಸಂದರ್ಭಗಳು, ಆಯಕಸ್ತಂಭವೊಂದರ ಮೇಲಿರುವ ಸುಖಸಂತೃಪ್ತಿಯಿಂದ ಮಂದಸ್ಮಿತವದನರಾಗಿ ಕುಳಿತಿರುವ ದಂಪತಿಗಳ ಛಾಯಾಶಿಲ್ಪ, ಅತ್ಯಂತ ಸ್ವಾಭಾವಿಕವಾಗಿ ಕಂಡರಣೆಗೊಂಡ ಕೋಣ ಕುದುರೆಗಳು ಇಲ್ಲಿ ದೊರೆತಿರುವ ಶಿಲ್ಪಗಳ ಕೆಲವು ಮಾದರಿಗಳು. ಇವುಗಳೊಂದಿಗೆ ಅಲ್ಲಿ ಹೇರಳವಾಗಿ ದೊರೆತಿರುವ ಅಲ್ಪಪ್ರಮಾಣದ ಮೃಣ್ಮೂರ್ತಿಗಳೂ ದಂತದಲ್ಲಿ ಕೊರೆದಿರುವ ಅತಿ ಸಣ್ಣ ಆಕೃತಿಗಳೂ ಆ ಕಾಲದ ಮೂರ್ತಿಶಿಲ್ಪದ ನೈಪುಣ್ಯವನ್ನು ಪ್ರಕಟಿಸುತ್ತವೆ. ಬನವಾಸಿಯಲ್ಲಿ ಸಾತವಾಹನರ ಕಾಲದ ಹಲವು ಇಟ್ಟಿಗೆ ಕಟ್ಟಡಗಳು ಉತ್ಖನನಗಳ ಮೂಲಕ ಈಚೆಗೆ ಬೆಳಕಿಗೆ ಬಂದಿವೆ. ಇವುಗಳಲ್ಲಿ ಎರಡು ಲಾಳದಾಕೃತಿಯ ದೇವಗೃಹಗಳು ಕ್ರಮವಾಗಿ ಎರಡು ಮತ್ತು ಮೂರು ವಲಯಗಳಲ್ಲಿದ್ದು ಈ ವಲಯಗಳ ನಡುವೆ ಇಕ್ಕಟ್ಟಾದ ಪ್ರದಕ್ಷಿಣಾಪಥವಿದೆ. ಇವುಗಳ ಇಟ್ಟಿಗೆ ಗೋಡೆಗಳ ದಪ್ಪ ಐದು ಅಡಿಗಳು. ಬಾದಾಮಿ ಚಾಲುಕ್ಯರ ಮುಖ್ಯ ನಗರಗಳಾಗಿದ್ದ ಐಹೊಳೆ ಪಟ್ಟದಕಲ್ಲುಗಳಲ್ಲಿಯೂ ಸಾತವಾಹನರ ಕಾಲದ ಕಟ್ಟಡಗಳು ಪತ್ತೆಯಾಗಿವೆ. ಸಂಗಮೇಶ್ವರ ಗುಡಿಯ ಬಳಿ

ಯಲ್ಲಿಯೇ ಎರಡು ಸಾಲುಗಂಬಗಳನ್ನೊಳಗೊಂಡು ವಿಶಾಲವಾದ ಹಜಾರವನ್ನುಳ್ಳ ದೀರ್ಘಚತುರಸ್ರಾಕಾರದ ಇಟ್ಟಿಗೆಯ ದೇವಾಲಯದ ಅವಶೇಷ ಇವುಗಳಲ್ಲೊಂದು. ಇದರ ಪಶ್ಚಿಮ ಗೋಡೆಗೆ ಸೇರಿದಂತೆ ಒಂದು ಗರ್ಭಗೃಹ, ಮುಂಭಾಗದಲ್ಲಿ ಬಾಗಿಲು—ಇವು ಇದ್ದುವು. ಈಗ ಇವುಗಳ ತಲವಿನ್ಯಾಸ ಮಾತ್ರ ಉಳಿದಿದೆ. ಈ ಊರುಗಳಲ್ಲಿ ದೇವಾಲಯಗಳ ರಚನೆ ಸಾತವಾಹನರ ಕಾಲದಲ್ಲಿಯೇ ಆರಂಭವಾಯಿತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಮಳವಳ್ಳಿಯ ಸಾತಕರ್ಣಿಯ ಶಾಸನದಲ್ಲಿ ಮಟ್ಟಪಟ್ಟಿ ದೇವರಿಗೆ ದತ್ತಿಬಿಟ್ಟ ವಿಷಯವಿದೆ. ತಾಳಗುಂದದ ಕದಂಬ ಶಾಂತಿವರ್ಮನ ಶಾಸನದಿಂದ ಪ್ರಣವೇಶ್ವರ ದೇವರನ್ನು ಸಾತಕರ್ಣಿಗಳೂ ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಮಳವಳ್ಳಿಯಲ್ಲಿ ಈಗ ಯಾವ ದೇವಾಲಯವೂ ಉಳಿದುಬಂದಿಲ್ಲ; ತಾಳಗುಂದದ ದೇವಾಲಯ ಅನಂತರದ ದಿನಗಳಲ್ಲಿ ಬಹುಮಟ್ಟಿಗೆ ಬದಲಾವಣೆ ಹೊಂದಿದೆ.

## ಕದಂಬರ ಕಾಲ

ಪ್ರಾಚೀನ ರಾಜಮನೆತನಗಳಲ್ಲಿ ಸಾತವಾಹನರ ನಂತರ ಬನವಾಸಿಯಿಂದ ಆಳಿದ ಕದಂಬರು ತಮ್ಮ ರಾಜಧಾನಿಯಲ್ಲಿಯೂ ಇತರ ಕಡೆಗಳಲ್ಲಿಯೂ ಹಲವು ದೇವಾಲಯಗಳನ್ನು ಕಟ್ಟಿದುದಕ್ಕೆ ಆಧಾರಗಳಿವೆ. ಶಾಸನದ ಆಧಾರದಿಂದ ಮೃಗೇಶವರ್ಮನ ಕಾಲಕ್ಕೆ ಸೇರಿಸಬಹುದಾದ ಹಲಸಿಯ ಜೈನಬಸದಿ ಈಗ ತಿಳಿದಿರುವ ಮಟ್ಟಿಗೆ ಅತ್ಯಂತ ಪ್ರಾಚೀನವಾದ ಕಲ್ಲು ಕಟ್ಟಡ. ಯಾವ ರೀತಿಯ ಅಲಂಕರಣವೂ ಇಲ್ಲದಿರುವ, ಉರುಟು ಕಲ್ಲುಗಳನ್ನು ಪೇರಿಸಿ ಕಟ್ಟಿರುವ, ಈ ದೇವಾಲಯದಲ್ಲಿ ಸುಖನಾಸಿಯು ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಬನವಾಸಿಯ ಮಧುಕೇಶ್ವರ ಕದಂಬರ ಕುಲದೈವ. ಆದರೆ ಈಗ ಇರುವ ಗುಡಿಯು ೭–ಅನೆಯ ಶತಮಾನಕ್ಕಿಂತ ಹಿಂದಕ್ಕೆ ಹೋಗಲಾರದು. ಚಾಲುಕ್ಯ ರೀತಿಯ ಚೌಕ ಕಂಬಗಳನ್ನು ಹೊಂದಿದ್ದು ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣಾಪಥವಿರುವ ಮೂಲದೇವಾಲಯಕ್ಕೆ ಮುಂದೆ ಬೇರೆ ಬೇರೆ ಭಾಗಗಳು ಸೇರಿಕೊಂಡವು. ಗುಡ್ನಾಪುರದಲ್ಲಿ ಕಾಮಜಿನಾಲಯವೊಂದಿದ್ದುದಾಗಿ ಈಚೆಗೆ ಅಲ್ಲಿ ದೊರೆತ ರವಿವರ್ಮನ ಶಾಸನದಿಂದ ವ್ಯಕ್ತವಾಗುತ್ತದೆ. ಆದರೆ ಆ ದೇವಾಲಯದ ಸ್ವರೂಪ ಹೇಗಿತ್ತೆಂಬುದು ತಿಳಿಯದು. ಅನಂತರದ ಕದಂಬರು ೧೦ನೆಯ ಶತಮಾನದಿಂದೀಚೆಗೆ ಕಟ್ಟಿಸಿದ ದೇವಾಲಯಗಳನೇಕವು ಉಳಿದುಬಂದಿದ್ದು, ಅವು ಚಾಲುಕ್ಯ ಅಥವಾ ಹೊಯ್ಸಳ ಶೈಲಿಗನುಗುಣವಾಗಿ ಬೆಳೆದುಬಂದಿವೆ. ಆದರೂ ಕದಂಬರ ಗುಡಿಗಳಲ್ಲಿ ಈ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು: ಪಿರಮಿಡ್ಡಿನಾಕೃತಿಯಲ್ಲಿ ಮೆಟ್ಟಿಲು ಮೆಟ್ಟಿಲಾಗಿ ಮೇಲೆ ಹೋದಂತೆ ಚಿಕ್ಕದಾಗುವ, ಚಪ್ಪಟೆಸ್ತರಗಳಿಂದ ಕೂಡಿದ ಶಿಖರ; ಚತುರಸ್ರಾಕಾರದ ಸರಳವಾದ ಗೋಡೆಯ ಮೇಲೆ ಹೂವಿನ ಅಲಂಕರಣವುಳ್ಳ ದೊಡ್ಡದಾದ ಒಂದು ಅಡ್ಡಪಟ್ಟಿ; ಚಾವಣಿಯ ಸುತ್ತ ಚಪ್ಪಡಿಗಳನ್ನು ಇಳಿಜಾರಾಗಿ ಜೋಡಿಸಿ ಮಾಡಿದ ಕಪೋತಗಳು. ಹಲಸಿಯಲ್ಲಿರುವ ಕಲ್ಲೇಶ್ವರ, ಹತ್ತಿಕೇಶ್ವರ ಮೊದಲಾದ ಗುಡಿಗಳು ಈ ಶೈಲಿಗೆ ಉತ್ತಮ

ಉದಾಹರಣೆಗಳು. ದೇಗಾಂವಿಯಲ್ಲಿರುವ ಕಮಲನಾರಾಯಣನ ಗುಡಿ, ೧೨ನೆಯ ಶತಮಾನದಲ್ಲಿ ಕದಂಬ ಶಿವಚಿತ್ತನ ರಾಣಿ ಕಮಲಾದೇವಿಗಾಗಿ ತಿಪ್ಪೋಜನೆಂಬ ರೂವಾರಿ ಕಟ್ಟಿದ್ದು, ಈ ಶೈಲಿಯ ಅತ್ಯಂತ ಸುಂದರವಾದ ದೇವಾಲಯವೆನ್ನಬಹುದು.

## ಗಂಗರ ಕಾಲ

ಕರ್ನಾಟಕದ ಆಗ್ನೇಯ ಭಾಗದಲ್ಲಿ ಕದಂಬರ ಸಮಕಾಲೀನರಾಗಿ ರಾಜ್ಯವಾಳ ಲಾರಂಭಿಸಿದ ಗಂಗರು ೧೧ನೆಯ ಶತಮಾನದವರೆಗೆ ಆಳುತ್ತಿದ್ದು, ಹಲವು ದೇವಾಲಯ ಗಳನ್ನೂ ಬಸದಿಗಳನ್ನೂ ಕಟ್ಟಿಸಿದರು. ಇವರ ಮೊದಲ ಕಾಲದ ಕಟ್ಟಡಗಳು ಹೆಚ್ಚು ಉಳಿದುಬಂದಿಲ್ಲ. ಹರಿವರ್ಮನ ಕಾಲದ ಮೂಲಸ್ಥಾನೇಶ್ವರ, ಅವಿನೀತನ ಕಾಲದ ವಿನೀತೇಶ್ವರ, ಮಾಧವ ಅವಿನೀತರು ದತ್ತಿ ಬಿಟ್ಟಿದ್ದ ಅರ್ಹತಾಯತನ, ಕಂದಚ್ಚಿ ಕಟ್ಟಿಸಿದ ಜಿನಬಸದಿ, ನೀತಿಮಾರ್ಗೇಶ್ವರ, ಜಲಧರನಗರೇಶ್ವರ, ಶಿವಮಾರೇಶ್ವರ ಮೊದ ಲಾದುವು ಬರಿಯ ಹೆಸರಿನಲ್ಲಿ ಮಾತ್ರ ಉಳಿದಿವೆ. ಇಟ್ಟಿಗೆ, ಗಾರೆ, ಮರಗಳಿಂದ ಕಟ್ಟಿ ದ್ದಿರಬಹುದಾದ ಇವರ ಹಲವು ದೇವಾಲಯಗಳು ನಾಶವಾಗಿರಬೇಕು. ಗರ್ಜೆ, ನೊಣ ಮಂಗಲ, ಅರಳಗುಪ್ಪೆ ಮೊದಲಾದ ಕಡೆ ಇವರು ಕಟ್ಟಿಸಿದ್ದ ಇಟ್ಟಿಗೆ ಗೋಡೆಗಳನ್ನುಳ್ಳ ದೇವಾಲಯಗಳ ಹೊರಗೋಡೆಗಳು ಪುನರ್ನಿರ್ಮಾಣಗೊಂಡಿದ್ದರೂ ಒಳಗಿನ ಕಂಬಗಳ, ಚಾವಣಿಗಳ ಸುಂದರ ಶಿಲ್ಪ ಮಾತ್ರ ಈಗ ಉಳಿದುಬಂದಿವೆ. ದ್ರಾವಿಡ ಶೈಲಿಯಲ್ಲಿ ಕಗ್ಗಲ್ಲಿ ನಲ್ಲಿ ಕಟ್ಟಿರುವ ಇವರ ಕಟ್ಟಡಗಳಲ್ಲಿ ತೆಳುವಾದ ಗುಂಡು ಕಂಬಗಳು, ನವರಂಗದ ವಿಶಾಲವಾದ ನಡುವಿನ ಅಂಕಣದಲ್ಲಿ ಅಷ್ಟದಿಕ್ಪಾಲಕರ ಮತ್ತು ನಡುವೆ ಆಯಾ ದೇವಾ ಲಯದ ಆರಾಧ್ಯದೈವಗಳ ಮೂರ್ತಿಗಳನ್ನು ಬಿಡಿಸಿರುವುದುಂಟು. ಇವುಗಳಲ್ಲೆಲ್ಲಾ ಅರಳ ಗುಪ್ಪೆಯ ಕಲ್ಲೇಶ್ವರ ದೇವಾಲಯದ ಚಾವಣಿಯ ನಟರಾಜ ಮತ್ತು ಅಷ್ಟದಿಕ್ಪಾಲಕರ ಮೂರ್ತಿಶಿಲ್ಪ ಅಪೂರ್ವ ಸುಂದರವಾದ ಕಲಾಕೃತಿ. ಇವರ ಇಟ್ಟಿಗೆಯ ಕಟ್ಟಡಗಳಲ್ಲಿ ಉಳಿದುಬಂದಿರುವ ನರಸಮಂಗಲದ ರಾಮೇಶ್ವರ ದೇವಾಲಯ ೧೨೦೦ ವರ್ಷಗಳಷ್ಟು ಹಳೆಯದಾದರೂ ಮೇಲಿನ ಗಚ್ಚಿನಲ್ಲಿ ನಿರ್ಮಿಸಿರುವ ಸುಂದರ ಮೂರ್ತಿಗಳು ಅಚ್ಚಳಿಯದೆ ಉಳಿದಿವೆ. ಈ ಗಚ್ಚಿನ ಮೂರ್ತಿಗಳು ಪೂರ್ಣರೂಪದಲ್ಲಿ ಬಿಡಿಸಿದ್ದು ವಿಶಾಲ ವಕ್ಷಃ ಸ್ಥಳ, ತೆಳುನಡು, ನೀಳವಾದ ಕೈಕಾಲುಗಳು, ಕೆಲವೇ ಆಭರಣಗಳು, ಸ್ಮಿತಗಂಭೀರ ಮುಖಮುದ್ರೆ, ದಪ್ಪ ಕೆಳದುಟಿ—ಇವುಗಳಿಂದ ನೈಜವಾಗಿಯೂ ಆಕರ್ಷಕವಾಗಿಯೂ ತೋರುತ್ತವೆ. ಗಂಗರ ರಾಜಧಾನಿಗಳಲ್ಲೊಂದಾಗಿದ್ದ ಮಣ್ಣೆಯಲ್ಲಿಯೂ ಕಪಿಲೇಶ್ವರ, ಸೋಮೇಶ್ವರ ಮೊದಲಾದ ಕೆಲವು ಆ ಕಾಲದ ಇಟ್ಟಿಗೆಯ ಗುಡಿಗಳು ಉಳಿದುಬಂದಿದ್ದು, ಈಗ ಜೀರ್ಣಾವಸ್ಥೆಯಲ್ಲಿವೆ. ಗಂಗರ ಶಿಲಾದೇವಾಲಯಗಳಲ್ಲಿ ಮೊದಲಿನವು ಇಲ್ಲಿಯೇ ಹುಟ್ಟಿ ಬೆಳೆದ ಸರಳ ವಾಸ್ತುಶೈಲಿಯವು ಎಂದು ಹೇಳಬಹುದು. ತೋಟಗೆರೆಯಲ್ಲಿರುವ ಅರ್ಜುನೇಶ್ವರ ಗುಡಿ ಮತ್ತು ಸಂಪಿಗೆಪುರದಲ್ಲಿರುವ ಶಿವಾಲಯಗಳು ತೆಳುಚಪ್ಪಡಿಗಳನ್ನು ನಿಲ್ಲಿಸಿ, ಮೇಲೆ ಅದೇ ರೀತಿಯ ಹಾಸುಗಲ್ಲಿನಿಂದ ಮುಚ್ಚಿ ರಚಿಸಿರುವ ದೇವಾಲಯಗಳು.

ಇವು ಬೃಹತ್ ಶಿಲಾಸಮಾಧಿಗಳನ್ನು ನೆನಪಿಗೆ ತರುವಂತಿವೆ. ಮುಂದಿನ ಇವರ ಕಟ್ಟಡಗಳು ದ್ರಾವಿಡ ಶೈಲಿಯಲ್ಲಿ ಪಲ್ಲವ ರೀತಿಯನ್ನನುಕರಿಸಿ ಕಟ್ಟಿದವು. ಗಂಗಾವಾರದಲ್ಲಿರುವ ತಪ್ಲೇಶ್ವರ ಅಥವಾ ಸೋಮೇಶ್ವರ ದೇವಾಲಯವು ತಗ್ಗಾದ ಸರಳವಾದ ಚತುರಸ್ರಾಕಾರದ ದೇವಾಲಯ. ಇದರ ಮೇಲೆ ಚೌಕವಾದ ಒಂದೇ ಅಂತಸ್ತಿನ ಗೋಪುರವಿದೆ. ಕಂಬಗಳಲ್ಲಿ ಪಲ್ಲವ ಶೈಲಿಯನ್ನನುಕರಿಸುವ ಎರಡು ಸಿಂಹಸ್ತಂಭಗಳಿವೆ. ವರುಣದ ಬೂತೇಶ್ವರ ದೇವಾಲಯವೂ ಇದೇ ಮಾದರಿಯ ತಗ್ಗಾದ ಗುಡಿ. ಅದರ ಗೋಪುರ ಈಗ ಉಳಿದುಬಂದಿಲ್ಲ. ಕಿರಿದಾದ ಲೋವೆಯ ಕೆಳಗೆ ತೆಳುವಾಗಿ ಬಿಡಿಸಿರುವ ರಾಮಾಯಣದ ಚಿತ್ರಗಳು ವಿಶಿಷ್ಟವಾಗಿವೆ. ಶ್ರವಣಬೆಳಗೊಳದ ಚಂದ್ರಗುಪ್ತ ಬಸದಿಯೂ ಹೀಗೆಯೇ ಚೌಕವಾದ ಒಂದೇ ಅಂತಸ್ತಿನ ಗೋಪುರವುಳ್ಳ, ಸರಳವಾದ ಗೋಡೆಗಳಿಂದ ಕೂಡಿದ, ಒಂದು ಪುಟ್ಟ ಬಸದಿ. ಗಂಗ ಜಯತೇಜನ ಕಾಲದಲ್ಲಿ ರತ್ನಾವಳಿಯು ಕಟ್ಟಿಸಿದ ನಂದಿಯ ಭೋಗನಂದೀಶ್ವರ ದೇವಾಲಯವು ಚೌಕವಿನ್ಯಾಸವುಳ್ಳದ್ದಾಗಿದ್ದು ಗರ್ಭಗೃಹ, ಸುಕನಾಸಿ ನವರಂಗಗಳಿಂದ ಕೂಡಿ ಹೊರಗೋಡೆಯ ಬುಡದ ದಿಂಡುಗಳ ಮೇಲೆ ಮಕರ, ಆನೆ, ಸಿಂಹ ಮತ್ತು ಕುಬ್ಜರ ಮೂರ್ತಿಗಳೂ ಗೋಡೆಯಮೇಲೆ ಅರೆಗಂಬಗಳ ನಡುವೆ ಬಳ್ಳಿಯ ಸುರುಳಿಯಂತೆ ಕೊರೆದ ಅಲಂಕೃತ ಜಾಲಂಧ್ರಗಳೂ ಜಾಲಂಧ್ರದ ಒಂದೊಂದು ಸುರುಳಿಯಲ್ಲಿಯೂ ನೃತ್ಯಗೀತ ವಾದ್ಯಗಳಲ್ಲಿ ನಿರತರಾದ ಕುಬ್ಜರ ಶಿಲ್ಪಗಳೂ ಲೋವೆಯ ಮೇಲೆ ಅಲ್ಲಲ್ಲಿ ಕೀರ್ತಿಮುಖಗಳೂ ಕುಬ್ಜರ ಸಾಲೂ ಕಂಡುಬರುತ್ತವೆ. ಕೈಪಿಡಿಯ ಸುತ್ತಲೂ ಪಂಜರ ಮತ್ತು ಗಜಪೃಷ್ಠಾಕೃತಿಗಳೂ ಶಿವಲೀಲೆಯ ಹಾಗೂ ಇತರ ಮೂರ್ತಿಗಳೂ ಇವೆ. ಮೂರು ಅಂತಸ್ತುಗಳಲ್ಲಿ ಮೇಲೆದ್ದಿರುವ ಗೋಪುರವಿದ್ದು ಇದೊಂದು ದ್ರಾವಿಡ ಶೈಲಿಯ ಸುಂದರ ದೇವಾಲಯವಾಗಿದೆ. ಇದೇ ದೇವಾಲಯದ ಅಲ್ಪಪ್ರಮಾಣದ ಅನುಕರಣೆಯಂತಿರುವುದು ಬೇಗೂರಿನ ನಾಗೇಶ್ವರ ದೇವಾಲಯ. ಗಂಗರ ಕಾಲದಲ್ಲಿ ಜೈನಮತಕ್ಕೆ ಹೆಚ್ಚು ಪ್ರೋತ್ಸಾಹ ದೊರೆತದ್ದರ ಫಲವಾಗಿ ಶ್ರವಣಬೆಳಗೊಳದಲ್ಲಿ ಹಲವು ಬಸದಿಗಳು ನಿರ್ಮಾಣವಾದವು. ಅವುಗಳಲ್ಲೆಲ್ಲಾ ಅತ್ಯಂತ ಸುಂದರವಾದುದು ಚಾವುಂಡರಾಯನ ಬಸದಿ. ಕ್ರಿ.ಶ. ಸು. ೯೮೨ರಲ್ಲಿ ಗಂಗರ ಮಂತ್ರಿ ಚಾವುಂಡರಾಯನು ಕಟ್ಟಿಸಿದ ಈ ಬಸದಿ ಕರ್ನಾಟಕದಲ್ಲಿಯೇ ಒಂದು ಉತ್ತಮವಾದ ದ್ರಾವಿಡಶಿಲ್ಪದ ಕಟ್ಟಡ. ಎತ್ತರವಾದ ತಳಹದಿಯ ಮೇಲೆ ಗರ್ಭಗೃಹ, ಸುಕನಾಸಿ, ದೊಡ್ಡ ನವರಂಗ, ಸರಳವಾದ ಅರೆಗಂಬಗಳುಳ್ಳ ಹೊರಗೋಡೆಗಳಿಂದ ಕೂಡಿದ್ದು, ಗೂಡುಗಳಿಂದಲಂಕೃತವಾದ ಲೋವೆಯ ಕೆಳಗೆ ಹಂಸಗಳ ಸಾಲೂ ಮೇಲೆ ಕೈಪಿಡಿಗೋಡೆಯ ಪಂಜರವೂ ಗೂಡುಗಳ ಕೆಳಗೆ ಜಿನರ ಇತರ ಮೂರ್ತಿಗಳ ಸುಂದರವಾದ ಸಾಲುಗಳೂ ಕೆತ್ತಲ್ಪಟ್ಟು ಬಸದಿ ಆಕರ್ಷಕವಾಗಿದೆ. ಬಹುತಃ ಶಿವಮಾರನ ಕಾಲದಲ್ಲಿ ಕಟ್ಟಿದ್ದಿರಬಹುದಾದ ಚಂದ್ರಪ್ರಭ ಬಸದಿ ಅನಂತರ ಪುನರ್ನಿರ್ಮಾಣಗೊಂಡಂತೆ ಕಾಣುತ್ತದೆ. ಕಲೆಯ ಪ್ರಪಂಚದಲ್ಲಿ ಗಂಗರಿಗೆ ಶಾಶ್ವತವಾದ ನೆಲೆಯನ್ನು ಕಾಣಿಸಿರುವುದು ದೊಡ್ಡಬೆಟ್ಟದ ಮೇಲೆ ಚಾವುಂಡರಾಯನು ನಿರ್ಮಿಸಿದ ೫೭ ಅಡಿ ಎತ್ತರದ,

ಗೊಮ್ಮಟೇಶ್ವರನೆಂದು ಹೆಸರಾದ, ಬಾಹುಬಲಿಯ ಬೃಹನ್ಮೂರ್ತಿ. ಇದು ಗಂಗರ ಮೂರ್ತಿ ಶಿಲ್ಪದ ಪರಾಕಾಷ್ಠೆ. ವಿಸ್ತಾರವಾದ ಎದೆ ಭುಜಗಳು, ನೇರ ನಿಲವು, ಮುರುಕ ಬೆರೆತ ಕಿರುನಗೆಯ ನೋಟಗಳಿಂದ ಅತ್ಯಂತ ಆಕರ್ಷಕವಾಗಿದೆ ಈ ಮೂರ್ತಿ. ಈಜಿಪ್ಟನ್ನು ಬಿಟ್ಟರೆ ಬೇರೆಲ್ಲಿಯೂ ಇಂತಹ ಅದ್ಭುತವಾದ, ಇಷ್ಟು ಪ್ರಭಾವಯುತವಾದ ಶಿಲ್ಪವಿಲ್ಲ ಎಂದು ಫರ್ಗೂಸನ್ ಅಭಿಪ್ರಾಯಪಟ್ಟಿದ್ದಾನೆ. ಕಂಬದ ಹಳ್ಳಿಯಲ್ಲಿರುವ ಆದಿನಾಥ ಬಸದಿ ಈ ಕಾಲದ ತ್ರಿಕೂಟಾಚಲದ ಮಾದರಿಯ ಬಸದಿ. ಗಂಗರ ಕಾಲದ ಲೋಹಮೂರ್ತಿ ಗಳು ಹೆಚ್ಚು ದೊರೆತಿಲ್ಲ. ಈಗ ಶ್ರವಣಬೆಳಗೊಳದ ಮಠದಲ್ಲಿರುವ ಜಿನವಿಗ್ರಹವೊಂದನ್ನು ಮಾಡಿಸಿದವಳು ಇಮ್ಮಡಿ ಮಾರಸಿಂಹನ ಅಕ್ಕ ಕುಂದಣ ಸೋಮಿದೇವಿ.

## ಚೋಳರ ಕಾಲ

೧೧ನೆಯ ಶತಮಾನದ ಆರಂಭದಲ್ಲಿ ರಾಜರಾಜನ ಆಳ್ವಿಕೆಯಲ್ಲಿ ಪ್ರಬಲರಾದ ಚೋಳರು ಗಂಗಮಂಡಲದ ಬಹುಭಾಗವನ್ನಾಕ್ರಮಿಸಿದರು. ಗಂಗರ ಮೂಲ ಮನೆತನ ಪರಿಸಮಾಪ್ತಿಗೊಂಡಾಗ ಈ ಭಾಗದಲ್ಲಿ ಚೋಳರ ಪ್ರತಿನಿಧಿ ತಲಕಾಡಿನಿಂದಾಳ ಲಾರಂಭಿಸಿ, ಕೋಲಾರ ಬೆಂಗಳೂರು ಜಿಲ್ಲೆಗಳ, ಮಂಡ್ಯ ಮೈಸೂರು ಜಿಲ್ಲೆಗಳ ಭಾಗ ಗಳಲ್ಲಿ ಚೋಳರು ಹಲವಾರು ದೇವಾಲಯಗಳನ್ನು ನಿರ್ಮಿಸಲಾರಂಭಿಸಿದರು. ಇದರೊಂದಿಗೆ ಮೊದಲೇ ಇದ್ದ ಹಲವು ಕಟ್ಟಡಗಳನ್ನು ಪುನರ್ನಿರ್ಮಾಣ ಮಾಡಿದುದು ಕೂಡ ಕಂಡುಬರುತ್ತದೆ. ಮೊದಲು ಗಂಗರಂತೆ ಪಲ್ಲವಶೈಲಿಯನ್ನೇ ಅನುಕರಿಸಿ ಮುಂದೆ ತಮ್ಮದೇ ಆದ ಶೈಲಿಯನ್ನು ಬೆಳಸಿಕೊಂಡ ಚೋಳರು ಚೋಳರಾಜ್ಯದಲ್ಲಿ ನಿರ್ಮಿಸಿ ದಂತೆ ಬೃಹತ್ ದೇವಾಲಯಗಳನ್ನು ನಿರ್ಮಿಸದಿದ್ದರೂ ಮಧ್ಯಮ ಪ್ರಮಾಣದ ಹಾಗೂ ಸಣ್ಣ ಪ್ರಮಾಣದ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಆಗರದಲ್ಲಿರುವ ದುರ್ಗಾದೇವಾಲಯ ಇಂತಹ ದೇವಾಲಯಗಳಲ್ಲಿ ಮುಖ್ಯವಾದುದು. ಈ ದೇವಾಲಯದ ಹೊರಗೋಡೆಗಳ ಮೇಲೆ ಅರೆಗಂಬಗಳು, ಆಳವಿಲ್ಲದ ಅರೆಮಂಟಪಗಳು, ಯಾಳಿ ಅಥವಾ ನೀರ್ಗುದುರೆಗಳ ಸಾಲುಗಳು, ಚಿಕ್ಕದಾಗಿ ಗುಂಡಾಗಿ ಬಾಗಿರುವ ಲೋವೆ, ನವರಂಗದಲ್ಲಿ ತೆಳುವಾದ ಗುಂಡುಕಂಬ, ಗರ್ಭಗೃಹದಲ್ಲಿ ಸಮಭಂಗದಲ್ಲಿ ನಿಂತ ಸುಂದರವಾದ ದುರ್ಗಾದೇವಿಯ ಮೂರ್ತಿ ಚೋಳಶೈಲಿಗೆ ಮಾದರಿ. ಇಲ್ಲಿನ ನರಸಿಂಹ ದೇವಾಲಯದ ಗರ್ಭಗೃಹ ಅಪರೂಪವಾಗಿ ವೃತ್ತಾಕಾರದ ತಲವಿನ್ಯಾಸವನ್ನು ಹೊಂದಿದೆ. ಹಳೆ ಆಲೂರಿನ ದೇಶೇಶ್ವರ ತಳಹದಿಯಿಂದ ಮೇಲೆ ಪೂರ್ತಿಯಾಗಿ ಪುನರ್ನಿರ್ಮಾಣ ಗೊಂಡಿದ್ದರೂ ಅದರ ಕಂಬಗಳು, ದೇವಾಲಯದ ಮುಂದಿರುವ ನಂದಿ ಮಂಟಪ ಮತ್ತು ಅದರ ಬಾಗಿಲುವಾಡದ ಇಕ್ಕೆಲಗಳಲ್ಲಿಯೂ ಇರುವ ವಾದ್ಯಮೇಳದವರ ಶಿಲ್ಪ ಫಲಕಗಳು ಅತ್ಯಂತ ಆಕರ್ಷಕವಾಗಿವೆ. ಗುಂಡುಕಂಬಗಳ ಮೇಲೆ ತೆಳುವಾಗಿ ಬಿಡಿಸಿರುವ ಶಿಲ್ಪಗಳು ರಾಜೇಂದ್ರಚೋಳನ ದಂಡಯಾತ್ರೆಗಳನ್ನು ಸೂಚಿಸುತ್ತವೆ ಎನ್ನಲಾಗಿದೆ. ಮಣೂರು, ಕೂಡ್ಲೂರು, ಮಳೂರು ಪಟ್ಟಣಗಳಲ್ಲಿ ಇವರ ಕಾಲದಲ್ಲಿ ಕಟ್ಟಿಸಿದ್ದ ಹಲವು

ೇವಾಲಯಗಳು ಈಗ ಶಿಥಿಲಾವಸ್ಥೆಯಲ್ಲಿವೆ, ಅಥವಾ ನಾಶವಾಗಿವೆ. ಕೊಡ್ಲೂರಿನ ಲ್ಲಿದ್ದ ಮಂಗಳೇಶ್ವರ ದೇವಾಲಯ ಪೂರ್ತಿ ನಾಶವಾಗಿದ್ದು, ತಳಹದಿಯ ಮೇಲಿದ್ದ ಕೆಲವಾರು ಶಾಸನಗಳು ಮಾತ್ರ ಅಲ್ಲಲ್ಲಿ ಬಿದ್ದಿವೆ. ಇದೇ ದೇವಾಲಯಕ್ಕೆ ಸೇರಿದ್ದ ಕೆಲವು ಲೋಹಮೂರ್ತಿಗಳು ಈಚೆಗೆ ಬೆಳಕಿಗೆ ಬಂದಿವೆ. ಅವುಗಳಲ್ಲಿ ನಟರಾಜ, ಸೋಮಸ್ಕಂದ ಮೂರ್ತಿಗಳು ಪಂಚಲೋಹ ಮೂರ್ತಿಗಳು.

ತಲಕಾಡಿನಲ್ಲಿ ಚೋಳರು ದೇವಾಲಯಗಳನ್ನು ಕಟ್ಟಿಸಿದ್ದಿರಬೇಕು. ಆದರೆ ಈಗ ಅವು ಉಳಿದುಬಂದಿಲ್ಲ. ಅಲ್ಲಿರುವ ವೈದ್ಯೇಶ್ವರ ದೇವಾಲಯವು ಆ ಕಾಲದಲ್ಲಿ ಕಟ್ಟಿದ್ದ ದೇವಾಲಯವಾಗಿದ್ದು, ಮುಂದೆ ವಿಜಯನಗರದ ಕಾಲದಲ್ಲಿ ಪುನರ್ನಿರ್ಮಾಣ ಗೊಂಡಂತೆ ತೋರುತ್ತದೆ. ಆದರೆ ತಲಕಾಡಿಗೆದುರಾಗಿ ಕಾವೇರಿಯ ಬಲದಂಡೆಯ ಮೇಲಿನ ತಡಿಮಾಲಂಗಿಯಲ್ಲಿರುವ ಜನಾರ್ದನ ದೇವಾಲಯ ರಾಜರಾಜನ ಕಾಲದಲ್ಲಿಯೇ ನಿರ್ಮಿತವಾಗಿದ್ದ ಒಂದು ವೈಷ್ಣವದೇವಾಲಯ. ಒಂದೇ ಅಂತಸ್ತಿನ ಗೋಪುರವುಳ್ಳ ಗರ್ಭಗೃಹ, ತಗ್ಗಾದ ಸುಖನಾಸಿ ನವರಂಗಗಳನ್ನುಳ್ಳ ಈ ದೇವಾಲಯ ಚೋಳರ ಆರಂಭದ ಶೈಲಿಗೊಂದು ಉತ್ತಮ ಉದಾಹರಣೆ. ರಾಜೇಂದ್ರಚೋಳನ ಕಾಲದ ಸುಂದರವಾದ ಮತ್ತು ಮುಖ್ಯವಾದ ಕಟ್ಟಡ ಕೋಲಾರದಲ್ಲಿರುವ ಪಿಡಾರಿಯಾರ್ ಅಥವಾ ಕೋಲಾರಮ್ಮನ ದೇವಸ್ಥಾನ. ಇಲ್ಲಿ ಬಹುಶಃ ಗಂಗರ ಕಾಲದಲ್ಲಿಯೇ ನಿರ್ಮಿತವಾಗಿದ್ದ ಇಟ್ಟಿಗೆ ಕಟ್ಟಡಕ್ಕೆ ಬದಲಾಗಿ ಸುಂದರವಾದ ಕಲ್ಲಿನ ದೇವಾಲಯವನ್ನು ನಿರ್ಮಿಸಿದುದಾಗಿ ಅಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಈಗ ಉಳಿದು ಬಂದಿರುವ ಚೋಳ ದೇವಾಲಯಗಳಲ್ಲಿ ದೊಡ್ಡದೂ ಸುಂದರವಾದುದೂ ಆದ ಈ ದೇವಾಲಯದ ಗೋಡೆಯ ಮೇಲೆ ತಮಿಳು ಶಾಸನಗಳು ತುಂಬಿವೆ. ಸಮೀಪದ ನರಸಾಪುರದಲ್ಲಿ, ಈಶ್ವರ ದೇವಾಲಯದಲ್ಲಿ ಈಗ ತಂದಿಟ್ಟಿರುವ ಪಂಚಲೋಹದ ೫ ಅಡಿ ಎತ್ತರದ ನಟರಾಜನ ಮೂರ್ತಿ ಕರ್ನಾಟಕದಲ್ಲಿಯೇ ಅತಿ ಸುಂದರವಾದ ಲೋಹ ಮೂರ್ತಿಗಳ ಲ್ಲೊಂದು. ನಂದಿಯಲ್ಲಿ ಭೋಗನಂದೀಶ್ವರ ದೇವಾಲಯದ ಮುಂದೆ ಬಹುಶಃ ರಾಜೇಂದ್ರ ಚೋಳನ ಕಾಲದಲ್ಲಿ ಕಟ್ಟಿಸಿದ ಕಲ್ಯಾಣಮಂಟಪದ ಕಂಬಗಳು ಕುಸುರಿ ಕೆಲಸದಿಂದ ತುಂಬಿವೆ. ಮತ್ತೊಂದು ಪ್ರಸಿದ್ಧ ದೇವಾಲಯ ಬಿನ್ನಮಂಗಲದ ಮುಕ್ತಿನಾಥೇಶ್ವರ. ಈ ಸರಳವಾದ ದೇವಾಲಯದ ಹೊರಗೋಡೆಗಳ ಮೇಲಿನ ಗೂಡುಗಳಲ್ಲಿರುವ ಕಾಳಿಂಗ ಮರ್ದನ, ನಟರಾಜ ಮೊದಲಾದ ಮೂರ್ತಿಗಳು ಸೂಕ್ಷ್ಮವಾಗಿ ಬಿಡಿಸದಿದ್ದರೂ ಆಕರ್ಷಕ ವಾಗಿವೆ. ಇದರ ನವರಂಗದಲ್ಲಿರುವ ಕಂಬಗಳು ಚೌಕಾಕೃತಿಯಲ್ಲಿದ್ದು, ಹಲವು ಬಗೆಯ ಅಲಂಕರಣೆಗಳಿಂದ ತುಂಬಿವೆ. ಬೇಗೂರಿನಲ್ಲಿರುವ ಚೋಳೇಶ್ವರ ದೇವಾಲಯ ಅಲ್ಲಿ ಗಂಗರ ಕಾಲದಲ್ಲಿಯೇ ನಿರ್ಮಿತವಾಗಿದ್ದ ಸುಂದರವಾದ ನಾಗೇಶ್ವರ ದೇವಾಲಯದ ಪ್ರತಿಕೃತಿ. ನಂದಿಯಲ್ಲಿರುವ ಭೋಗನಂದಿ ಮತ್ತು ಅರುಣಾಚಲೇಶ್ವರ ದೇವಾಲಯಗಳನ್ನು ನೆನಪಿಗೆ ತರುವ ಈ ಜೋಡಿ ದೇವಾಲಯಗಳು ಗಂಗ ಮತ್ತು ಚೋಳರ ಕಾಲದಲ್ಲಿ ಪಲ್ಲವ ಶೈಲಿ ಒಂದೇ ರೀತಿಯಾಗಿ ಬೆಳೆದುಬಂದಿತೆಂಬುದನ್ನು ಸೂಚಿಸುತ್ತದೆ.

## ಬಾದಾಮಿಯ ಚಾಲುಕ್ಯರ ಕಾಲ

ಕರ್ನಾಟಕದಲ್ಲಿ ವಾಸ್ತುಶಿಲ್ಪ ಶೈಲಿಯ ಹಲವು ಬಗೆಯ ಪ್ರಯೋಗಗಳು ನಡೆದುದು ಮುಖ್ಯವಾಗಿ ಬಾದಾಮಿಯ ಚಾಲುಕ್ಯರ ಆಳಿಕೆಯಲ್ಲಿ; ಅವರ ಮುಖ್ಯ ನಗರಗಳಾಗಿದ್ದ ಐಹೊಳೆ, ಬಾದಾಮಿ ಮತ್ತು ಪಟ್ಟದ ಕಲ್ಲುಗಳಲ್ಲಿ. ವಾಸ್ತವವಾಗಿ ಈ ಚಾಲುಕ್ಯರೇ ಕರ್ನಾಟಕದ ವಿಶಿಷ್ಟ ವಾಸ್ತುಶೈಲಿಯ ಆದ್ಯಪ್ರವರ್ತಕರು. ಆಗ ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಿದ್ದ ವಿವಿಧ ಶೈಲಿಗಳನ್ನು ಇಲ್ಲಿ ಬಳಕೆಗೆ ತಂದುದಲ್ಲದೆ, ಅವುಗಳ ಸಂಯೋಜನೆಯಿಂದ ನೂತನ ಶೈಲಿಯೊಂದು ರೂಪುಗೊಳ್ಳಲು ಅವರು ಕಾರಣರಾದರು. ಚಾಲುಕ್ಯರು ವೈದಿಕಮತಾವಲಂಬಿಗಳಾಗಿದ್ದು ಅಲ್ಲಿನವರೆಗೆ ಹೆಚ್ಚು ಪ್ರಚಾರದಲ್ಲಿದ್ದ ಬೌದ್ಧ ಶೈಲಿಯನ್ನು, ಹಿಂದು ದೇವಾಲಯಗಳನ್ನು ನಿರ್ಮಿಸಲು ಅಳವಡಿಸಿಕೊಂಡರು. ಆದರಿಂದ ವೈದಿಕದೇವತೆಗಳ ಬಗೆಬಗೆಯ ಮೂರ್ತಿಶಿಲ್ಪಗಳು ಬೆಳೆಯಲವಕಾಶವಾಯಿತು. ಚಾಲುಕ್ಯರ ಕಾಲದ ವಾಸ್ತುಶಿಲ್ಪದ ಬೆಳೆವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ಮುಖ್ಯವಾಗಿ ಐಹೊಳೆಯಲ್ಲಿ ಈ ಹಂತಗಳ ಮೊದಲ ರೀತಿಯನ್ನು ಗುರುತಿಸಬಹುದು. ಇಲ್ಲಿ ೫ನೆಯ ಶತಮಾನದಲ್ಲಿಯೇ ಕಟ್ಟಿದ ಕೆಲವು ದೇವಾಲಯಗಳಿವೆ. ಗೌಡರ ಗುಡಿ, ಲಾಡ್‌ಖಾನ್, ಕೊಂಟಿಗುಡಿ ಮೊದಲಾದುವು ಈ ಗುಂಪಿಗೆ ಸೇರಿದವು. ಬಹುಶಃ ಅವು ಅಲ್ಲಿ ಆಗಲೇ ಅಸ್ತಿತ್ವದಲ್ಲಿದ್ದ ಸಾತವಾಹನರ ಇಟ್ಟಿಗೆ ಕಟ್ಟಡಗಳ ಮಾದರಿಯನ್ನನುಕರಿಸಿರಬೇಕು. ಲಾಡ್‌ಖಾನ್ ಗುಡಿ ಅಲ್ಲಿನ ಅತ್ಯಂತ ಪುರಾತನ ಕಟ್ಟಡವೆಂದು ಪರಿಗಣಿಸಲ್ಪಟ್ಟಿದ್ದರೂ ಈಚಿನ ಶೋಧನೆಗಳಿಂದ ಗೌಡರಗುಡಿಯೇ ಅದಕ್ಕಿಂತ ಹಳೆಯದಿರಬೇಕೆಂದು ತೋರಿದೆ. ದೀರ್ಘಚತುರಸ್ರಾಕಾರದ ಮಂಟಪದ ನಡುವಣ ಅಂಕಣವನ್ನು ಗೋಡೆಗಳಿಂದ ಮುಚ್ಚಿ, ದೇವಕೋಷ್ಠವಾಗಿ ಪರಿವರ್ತಿಸಿರುವ ಗೌಡರ ಗುಡಿಗೆ ಮುಖಮಂಟಪವಿಲ್ಲ. ಲಾಡ್‌ಖಾನ್ ಸ್ಥೂಲವಾದ ರಚನೆಯನ್ನು ಹೊಂದಿರುವ, ಎರಡು ಸಾಲು ದಪ್ಪ ಚೌಕಕಂಬಗಳಿರುವ, ಸು. ೫೦ ಅಡಿ ಚದರದ ದೊಡ್ಡ ಹಜಾರ. ಇದರ ಹಿಂದಿನ ಅಂಕಣವನ್ನು ಗರ್ಭಗುಡಿಯಾಗಿ ಮಾರ್ಪಡಿಸಿ ಮುಂದೆ ಮೂರಂಕಣದ ಮುಖಮಂಟಪವನ್ನು ನಿರ್ಮಿಸಿದೆ. ಗೋಡೆಯಲ್ಲಿರುವ ಜಾಲಂಧ್ರಗಳು ಸುಂದರವಾಗಿವೆ. ನಡುವಣ ಅಂಕಣದ ಮೇಲೆ ಮೇಲಂತಸ್ತಿನ ಗುಡಿಯೊಂದಿದೆ. ಇದರ ಸುತ್ತಲೂ ಇಳಿಜಾರಾಗಿ ಚಾವಣಿಯಿದೆ. ಕೊಂಟಿಗುಂಡಿಯೂ ಗುಜ್ಜ ಮತ್ತು ದಪ್ಪ ಚೌಕಕಂಬಗಳ ಮೇಲೆ ನಿರ್ಮಿತವಾದ ದೇವಾಲಯ. ಈ ದೇವಾಲಯಗಳು ಕಲ್ಲಿನ ದೇವಾಲಯಗಳ ನಿರ್ಮಾಣದಲ್ಲಿ ಮೊದಲ ಪ್ರಯತ್ನಗಳು.

ಮುಂದಿನ ಹೆಜ್ಜೆ ಐಹೊಳೆಯ ದುರ್ಗದ ಗುಡಿ. ೬ನೆಯ ಶತಮಾನದ ಆರಂಭಕಾಲದಲ್ಲಿ ನಿರ್ಮಿಸಿರಬಹುದಾದ ಈ ಗುಡಿ ವಿಶಿಷ್ಟವಾದ ಶೈಲಿಯಲ್ಲಿದ್ದು, ಇಲ್ಲಿನ ಗುಡಿಗಳಲ್ಲೆಲ್ಲಾ ಸುಂದರವಾದುದಾಗಿದೆ. ಬೌದ್ಧರ ಚೈತ್ಯಾಲಯಗಳಂತೆ ಅರ್ಧವರ್ತುಲಾಕಾರವಾದ ಗರ್ಭಗುಡಿ; ಅದಕ್ಕೆ ಸೇರಿದಂತೆ ಆಯಾಕಾರದ ಮಂಟಪ; ಇವೆರಡಕ್ಕೂ ಹೊಂದಿಕೊಂಡಂತೆ ಪ್ರದಕ್ಷಿಣಾಪಥ, ಮುಂಭಾಗದಲ್ಲಿ ಮುಖಭದ್ರ. ಎತ್ತರವಾದ ಜಗತಿಯ ಮೇಲೆ

ನಿರ್ಮಿತವಾದ ಈ ಗುಡಿಯ ಕೈಸಾಲೆಗಳ ಚಾವಣಿ ಸ್ವಲ್ಪಮಟ್ಟಿಗೆ ಇಳಿಜಾರಾಗಿದ್ದು, ಗರ್ಭಗುಡಿಯ ಮೇಲೆ ಔತ್ತರೇಯ ಪದ್ಧತಿಯ ಗೋಪುರವನ್ನು ಹೊಂದಿದೆ. ಗುಹಾ ಶೈಲಿ, ಔತ್ತರೇಯ ನಾಗರ ಶೈಲಿ ಮತ್ತು ಬೌದ್ಧ ಚೈತ್ಯಶೈಲಿಗಳನ್ನು ಇಲ್ಲಿಯೇ ಇದ್ದ ಕಟ್ಟಡಗಳ ಶೈಲಿಯೊಂದಿಗೆ ಮೇಳವಿಸಿ ವಿನೂತನ ಶೈಲಿಯನ್ನು ಇಲ್ಲಿ ನಿರ್ಮಿಸಿದಂತೆ ಕಾಣುತ್ತದೆ.

ಬಾದಾಮಿಗೆ ಮೂರು ಮೈಲಿಗಳ ದೂರದಲ್ಲಿರುವ ಮಹಾಕೂಟೇಶ್ವರದ ಮಹಾ ಕೂಟೇಶ್ವರ ದೇವಾಲಯವನ್ನು ಬಹುಶಃ ಪುಲಿಕೇಶಿಯ ತಂದೆ ರಣರಾಗನು ಕಟ್ಟಿಸಿದನು. ಈ ಸಣ್ಣಗುಡಿಯ ಮೇಲೆ ಮೆಟ್ಟಿಲು ಮೆಟ್ಟಿಲಾಗಿ ಮೇಲಕ್ಕೆ ಹೋಗುತ್ತ, ಕೊನೆಯಲ್ಲಿ ಅಷ್ಟಕೋಣಾಕಾರದ ಶಿಖರದೊಡನೆ ಕೂಡಿದ ಗೋಪುರವಿದೆ. ಮಂಗಲೇಶನ ತಾಯಿ ದುರ್ಲಭದೇವಿ ಈ ದೇವಾಲಯಕ್ಕೆ ದತ್ತಿಬಿಟ್ಟಿದ್ದಳು. ಇದರ ನಂತರ ಹೇಳಬೇಕಾದ್ದು ಐಹೊಳೆಯಲ್ಲಿ ಗುಡ್ಡವೊಂದರ ಮೇಲಿರುವ ಮೇಗುಟಿಯನ್ನು. ಇದು ಇಮ್ಮಡಿ ಪುಲಕೇಶಿಯ ಕಾಲದ ಒಂದು ಜಿನಮಂದಿರ. ದ್ರಾವಿಡ ಶೈಲಿಯಲ್ಲಿ ಕಟ್ಟಿರುವ ಈ ಗುಡಿಯಲ್ಲಿಯೇ ರವಿಕೀರ್ತಿಯ ಪ್ರಸಿದ್ಧವಾದ ಶಾಸನವಿರುವುದು.

ಐಹೊಳೆಯಲ್ಲಿ ಎರಡೂ ಬಾದಾಮಿಯಲ್ಲಿ ನಾಲ್ಕು ಗುಹಾಂತರ್ದೇವಾಲಯಗಳಿವೆ. ಬಾದಾಮಿಯಲ್ಲಿ ಉನ್ನತವಾದ ಕೆಂಪು ಮರಳುಗಲ್ಲಿನ ಗುಡ್ಡದ ಮುಖವೊಂದರಲ್ಲಿ ಕೊರೆದಿರುವ ನಾಲ್ಕು ಗವಿಗಳಲ್ಲಿ ಒಂದು ಶೈವ, ಎರಡು ವೈಷ್ಣವ ಮತ್ತು ಕೊನೆಯದು ಜೈನ. ಇಮ್ಮಡಿ ಪುಲಕೇಶಿಯ ಮಕ್ಕಳಾದ ಕೀರ್ತಿವರ್ಮ ಮತ್ತು ಮಂಗಳೇಶರ ಕಾಲದಲ್ಲಿ ಕಂಡರಿಸಿದ ಈ ಗುಹೆಗಳ ವಿನ್ಯಾಸ ಒಂದೇ ಬಗೆಯದಾಗಿದ್ದು ಒಂದೊಂದರಲ್ಲಿಯೂ ಮುಂದೆ ಕಂಬದ ಸಾಲುಗಳಿಂದ ಕೂಡಿದ ಮೊಗಸಾಲೆ, ಹಜಾರ ಮತ್ತು ಒಂದು ಚಿಕ್ಕ ಗರ್ಭಗುಡಿಯಿದ್ದು ಇವುಗಳಲ್ಲಿ ಮಂಗಲೇಶನು ಕ್ರಿ.ಶ. ೫೭೮ರಲ್ಲಿ ಕೊರೆಸಿದ ಮೂರನೆಯದಾದ ವೈಷ್ಣವ ಗುಹೆ ದೊಡ್ಡದೂ ಅತ್ಯಂತ ಸುಂದರವಾದುದೂ ಆಗಿದೆ. ಇದರ ದಪ್ಪ ಕಂಬಗಳ ಮೇಲೆ ಅರಿಗೊಳವೆಯಾಕಾರದ ಅಲಂಕರಣವಿದೆ. ಈ ಗುಹೆಗಳಲ್ಲಿರುವ ಶಿಲ್ಪ ಶ್ರೇಷ್ಠದರ್ಜೆಯದು. ಒಂದೊಂದು ಮೊಗಸಾಲೆಯ ಎರಡು ಕಡೆಯೂ ಉನ್ನತವಾಗಿರುವ ಮೂರ್ತಿಗಳನ್ನು ಭವ್ಯವಾಗಿ ಬಿಡಿಸಿದೆ. ಇವುಗಳಲ್ಲಿ ೧೮ ಕೈಗಳುಳ್ಳ ನಟರಾಜ, ತ್ರಿಭಂಗಿಯಲ್ಲಿ ನಿಂತಿರುವ ಮಹಿಷಾಸುರಮರ್ದಿನಿ, ಅರ್ಧನಾರೀಶ್ವರ, ಭೂವರಾಹ, ತ್ರಿವಿಕ್ರಮ, ೧೧ ಅಡಿಗಳಿಗಿಂತ ಎತ್ತರವಾದ ನರಸಿಂಹ ಹರಿಹರರು, ಮೂರನೆಯ ಗುಹೆಯ ಸ್ತಂಭಗಳ ಮೇಲಿರುವ ಮನೋಹರವಾದ ಸಾಲಭಂಜಿಕೆಗಳು ಮತ್ತು ದಂಪತಿ ಮೂರ್ತಿಗಳು ಮೊದಲಾದುವು ಕರ್ಣಾಟಕದಲ್ಲಿ ಅತಿಸಮರ್ಥವಾಗಿ ಕಂಡರಿಸಿರುವ ಮೂರ್ತಿಶಿಲ್ಪಗಳಲ್ಲಿ ಕೆಲವು. ಮೂರನೆಯ ಗವಿಯ ಚಾವಣಿಯಲ್ಲಿಯೂ ಮೊಗಸಾಲೆಯ ಮುಂದಿನ ಲೋವೆಯ ಕೆಳಭಾಗದಲ್ಲಿಯೂ ಆ ಕಾಲದ ಕೆಲವು ಸುಂದರ ಭಿತ್ತಿಚಿತ್ರಗಳಿದ್ದುವು. ಇವು ಈಗ ಬಹುಮಟ್ಟಿಗೆ ಮಾಸಲಾಗಿದ್ದು, ಇವುಗಳಲ್ಲಿ ರಾಜನೊಬ್ಬನ ಒಡ್ಡೋಲಗ, ಅವನ ಬಳಿಯಲ್ಲಿಯೇ ಕುಳಿತ ಅರಸಿ, ಸುತ್ತಲೂ ಪರಿವಾರದವರು,

ವಾದ್ಯದವರು, ನರ್ತಕ ನರ್ತಕಿಯರು ಇರುವ ಒಂದು ಚಿತ್ರಸಂಯೋಜನೆ ಆಕರ್ಷಕವಾದ್ದಾಗಿದೆ. ಇವು ಆ ಕಾಲದ ಚಿತ್ರಶೈಲಿಯ ಪ್ರತೀಕವಾಗಿವೆ. ಚಾಲುಕ್ಯರು ಅಜಂತದ ಗುಹೆಗಳಲ್ಲಿ ಬೆಳೆದುಬಂದ ಚಿತ್ರಕಲೆಗೂ ತಕ್ಕಷ್ಟು ಪ್ರೋತ್ಸಾಹಕೊಟ್ಟದ್ದರೆಂಬುದು, ಅಲ್ಲಿ ಇಮ್ಮಡಿ ಪುಲಕೇಶಿಯು ತನ್ನ ಆಸ್ಥಾನದಲ್ಲಿ ಪರ್ಶಿಯನ್ ರಾಯಭಾರಿಯೊಬ್ಬನಿಗೆ ಸಂದರ್ಶನ ನೀಡುತ್ತಿರುವಂತೆ ರೇಖೆಗೊಂಡ ಚಿತ್ರವೊಂದರಿಂದ ವ್ಯಕ್ತವಾಗುತ್ತದೆ.

ಚಾಲುಕ್ಯರ ರಾಜ್ಯ ದೊಡ್ಡದಾದಂತೆಲ್ಲ ಅವರು ಹೊರಗಿನಿಂದ ಶಿಲ್ಪಶೈಲಿಯನ್ನು ಎರವಲು ತಂದರು. ಇವರನ್ನು ಹೆಚ್ಚಾಗಿ ಆಕರ್ಷಿಸಿದುದು ಪಲ್ಲವರ ದ್ರಾವಿಡ ಶೈಲಿ. ಕ್ರಿ.ಶ. ಸು. ೭೦೫ರಲ್ಲಿ, ಬಾದಾಮಿಯಲ್ಲಿ ದೊಡ್ಡದಾದ ಕಲ್ಲಿನ ಮೊರಡಿಯೊಂದರ ಮೇಲೆ ನಿರ್ಮಿಸಿದ ಮಾಲೆಗಿತ್ತಿ ಶಿವಾಲಯವು ದ್ರಾವಿಡ ಶೈಲಿಯಲ್ಲಿ ನಿರ್ಮಿಸಿದ ಸ್ಥೂಲ ದೇವಾಲಯಗಳ ಒಂದು ಉತ್ತಮ ಉದಾಹರಣೆ. ಮಾಮಲ್ಲಪುರದ ರಥಗಳನ್ನು ನೆನಪಿಗೆ ತರುವ ಈ ದೇವಾಲಯ ಗುಹಾಶಿಲ್ಪದ ಕುರುಹುಗಳನ್ನೂ ಉಳಿಸಿಕೊಂಡಿವೆ. ದಪ್ಪ ಏಕಶಿಲಾ ಸ್ತಂಭಗಳು, ದಪ್ಪ ಬೋದಿಗೆಗಳು ಹಾಗೂ ಕಿರುಗೋಡೆಗಳು ಮುಂತಾದುವು ಗುಹಾಶಿಲ್ಪದ ಸಂಪ್ರದಾಯಕ್ಕೆ ಸೇರಿದವು. ಮುಂದೆ ವಿಜಯಾದಿತ್ಯ ಇಮ್ಮಡಿ ವಿಕ್ರಮಾದಿತ್ಯರ ಕಾಲದಲ್ಲಿ ಚಾಲುಕ್ಯರು ಕಾಂಚಿಯವರೆಗೆ ನುಗ್ಗಿದ್ದಾಗ, ಕಾಂಚಿಯಲ್ಲಿಯ ರಾಜಸಿಂಹೇಶ್ವರ ದೇವಾಲಯದ ಸೌಂದರ್ಯಕ್ಕೆ ಮಾರುಹೋದರು. ಬಹುಶಃ ಆಗ ಅಲ್ಲಿಂದ ಹಲವು ರೂವಾರಿಗಳನ್ನು ತಮ್ಮ ರಾಜಧಾನಿಗೆ ಅವರು ಕರೆತಂದಿರಬೇಕು. ದ್ರಾವಿಡ ಶೈಲಿಯ ಹಲವಾರು ಕಟ್ಟಡಗಳು ಆಗ ನಿರ್ಮಾಣಗೊಂಡುವು. ಇದೇ ಕಾಲದಲ್ಲಿಯೇ ಔತ್ತರೇಯ ನಾಗರ ಶೈಲಿಯ ಕಟ್ಟಡಗಳನ್ನು ಇಲ್ಲಿ ಕಟ್ಟಿರುವುದು ಕಂಡುಬರುತ್ತದೆ. ಪಟ್ಟದಕಲ್ಲಿನಲ್ಲಿ ಈ ಎರಡು ಶೈಲಿಗಳ ದೇವಾಲಯಗಳನ್ನೂ ಜೊತೆಜೊತೆಯಾಗಿ ಕಟ್ಟಿರುವುದನ್ನು ನೋಡಬಹುದು. ಚಾಲುಕ್ಯ ಶಿಲ್ಪದ ಉಚ್ಛ್ರಾಯವನ್ನು ನಾವು ಕಾಣುವುದೂ ಅಲ್ಲಿಯೇ. ಹೆಚ್ಚು ಬೆಳವಣಿಗೆ ಹೊಂದಿದ ಪಾಪನಾಥ, ಜಂಬುಲಿಂಗ, ಕಾಡಸಿದ್ಧೇಶ್ವರ ಮತ್ತು ಕಾಶೀನಾಥ ದೇವಾಲಯಗಳು ಔತ್ತರೇಯ ರೀತಿಯಲ್ಲಿ ನೇರವಾಗಿ ಮೇಲೆದ್ದು, ಕೊನೆಯಲ್ಲಿ ಒಳಕ್ಕೆ ಬಾಗುವ, ಮೇಲೆ ಆಮಲಕವನ್ನು ಹೊಂದಿದ, ಶಿಖರಗಳನ್ನು ಹೊಂದಿದ್ದರೆ ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ ಮತ್ತು ಗಳಗನಾಥ ದೇವಾಲಯಗಳು ಅಂತಸ್ತುಗಳಾಗಿ ಮೇಲೇಳುವ ದ್ರಾವಿಡ ಶಿಖರಗಳನ್ನು ಹೊಂದಿವೆ. ಇಮ್ಮಡಿ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳನ್ನು ಕಟ್ಟಿಸಿದರು. ಪಾಪನಾಥ ದೇವಾಲಯ ಔತ್ತರೇಯ ರೀತಿಗೂ ವಿರೂಪಾಕ್ಷ ದೇವಾಲಯ ದ್ರಾವಿಡ ರೀತಿಗೂ ಉತ್ತಮ ಉದಾಹರಣೆಗಳು. ಸರ್ವಸಿದ್ಧಿ ಆಚಾರಿ, ರೇವಡಿ ಒವಜ್ಜ, ಚಂಗಮ್ಮ ಮೊದಲಾದ ರೂವಾರಿಗಳೇ ಈ ಎರಡು ದೇವಾಲಯಗಳಲ್ಲಿ ಕೆಲಸಮಾಡಿದ್ದರೂ ಪಾಪನಾಥದ ರಚನೆ ವಿರೂಪಾಕ್ಷದಷ್ಟು ನವುರಾಗಿಲ್ಲ. ವಿರೂಪಾಕ್ಷ ದೇವಾಲಯವನ್ನು ಕಟ್ಟಿದವರಲ್ಲಿ ಗುಂಡ, ದಾಮೋದರ,

ಪುಳ್ಳಪ್ಪ ಮೊದಲಾದವರೂ ಇದ್ದಾರೆ. ಈ ದೇವಾಲಯ ತನ್ನ ಒಟ್ಟು ರಚನೆಯಲ್ಲಿಯೂ ಹಲವು ವಿವರಗಳಲ್ಲಿಯೂ ಸುಂದರವಾದ ಕಲ್ಪನೆಯಿಂದ ಕೂಡಿದ್ದು, ಚೈತನ್ಯಪೂರ್ಣವಾಗಿರುವುದಾಗಿ ಪರ್ಸಿಬ್ರೌನ್ ಅಭಿಪ್ರಾಯಪಟ್ಟಿದ್ದಾನೆ. ವಿನ್ಯಾಸ ಮತ್ತು ರಚನೆಯಲ್ಲಿ ವಿರೂಪಾಕ್ಷ ದೇವಾಲಯವನ್ನೇ ಹೋಲುವ ಮತ್ತೊಂದು ದೇವಾಲಯ ಎಂದರೆ ತ್ರಿಲೋಕೇಶ್ವರ ಅಥವಾ ಮಲ್ಲಿಕಾರ್ಜುನ ದೇವಾಲಯ.

ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ ಇನ್ನೂ ಹಲವಾರು ದೇವಾಲಯಗಳಿದ್ದು, ಅವು ಆ ಕಾಲದ ವಿಭಿನ್ನ ವಾಸ್ತುಶೈಲಿಯನ್ನು ವ್ಯಕ್ತಗೊಳಿಸುವುದಲ್ಲದೆ ಚಾಲುಕ್ಯ ಶಿಲ್ಪಶೈಲಿಯ ಬೆಳವಣಿಗೆಯ ಕುರುಹನ್ನು ತೋರುತ್ತವೆ. ತಾವು ಆಳಿದ ೨೦೦ ವರ್ಷಗಳ ಕಾಲದಲ್ಲಿ ಬಾದಾಮಿಯ ಚಾಲುಕ್ಯರು ಉತ್ತರಕಾಲೀನ ವಾಸ್ತುಶೈಲಿಗೆ ಭದ್ರವಾದ ಬುನಾದಿಯನ್ನು ಹಾಕಿದರು.

## ರಾಷ್ಟ್ರಕೂಟರ ಕಾಲ

ಬಾದಾಮಿಯ ಚಾಲುಕ್ಯರ ಉತ್ತರಾಧಿಕಾರಿಗಳಾದ ರಾಷ್ಟ್ರಕೂಟರೂ ಶಿಲ್ಪಕಲೆಯನ್ನು ಉತ್ತಮವಾಗಿ ಬೆಳೆಸಿದರು. ಎಲ್ಲೋರ ಮತ್ತು ಎಲಿಫೆಂಟಾಗಳಲ್ಲಿ ಇವರ ಕಾಲದ ಕಲೆಯ ಪರಾಕಾಷ್ಠೆಯನ್ನು ಕಾಣಬಹುದು. ಇವು ಭಾರತದಲ್ಲಿಯೇ ಅತ್ಯುಚ್ಚ ಅಭಿವ್ಯಕ್ತಿ ಮತ್ತು ಸಿದ್ಧಿಗಳನ್ನು ಪಡೆದವೆಂದು ಗೋಸ್ವಾಮಿಯವರು ತಿಳಿಸಿದ್ದಾರೆ. ಇವರ ಕಾಲದಲ್ಲಿ, ಎಲ್ಲೋರದಲ್ಲಿ ಹಲವು ಗುಹೆಗಳು ನಿರ್ಮಾಣವಾದುವು. ಬೌದ್ಧ ಗುಹಾಶಿಲ್ಪ ಮಾದರಿಯನ್ನೇ ಇವರು ಅನುಕರಿಸಿದರೂ ಅದರಲ್ಲಿ ವೈದಿಕ ಮತಗಳಿಗನುಕೂಲವಾಗುವಂತೆ ಹಲವು ಮಾರ್ಪಾಡುಗಳನ್ನು ಮಾಡಿಕೊಂಡರು. ಅವುಗಳಲ್ಲಿ ಮುಖ್ಯವಾದುವು ರಾವಣನ ಗುಹೆ, ದಶಾವತಾರ, ಕೈಲಾಸ, ರಾಮೇಶ್ವರ ಮತ್ತು ದುಮಾರ್‌ಲೇನಾ. ಇವುಗಳಲ್ಲಿ ದಶಾವತಾರ ಗುಹೆ ಬೌದ್ಧ ಗುಹೆಗಳಂತಿದ್ದರೆ, ರಾಮೇಶ್ವರ ಮತ್ತು ರಾವಣನ ಗುಹೆಗಳು ಪ್ರದಕ್ಷಿಣಾಪಥವನ್ನು ಹೊಂದಿ ಆ ಶೈಲಿಯ ಬೆಳವಣಿಗೆಯನ್ನು ಸೂಚಿಸುತ್ತವೆ. ದುಮಾರ್‌ಲೇನಾ ಚಾಲುಕ್ಯರೀತಿಯ ದಪ್ಪ ಚಚ್ಚೌಕ ಕಂಬಗಳಿಂದ ಕೂಡಿ, ಕಂಬಗಳಿಲ್ಲದ ಬೌದ್ಧದೇವಾಲಯಗಳಿಗಿಂತ ಭಿನ್ನವಾಗಿದೆ; ಮಧ್ಯದಲ್ಲಿ ಗರ್ಭಗುಡಿಯಿದ್ದು, ಒಂದಕ್ಕಿಂತ ಹೆಚ್ಚು ಪ್ರವೇಶದ್ವಾರಗಳಿವೆ. ಇವುಗಳಲ್ಲಿ ಅರೆಗಂಬಗಳ ನಡುವೆ ಉಬ್ಬುಶಿಲ್ಪದಲ್ಲಿ ಬಿಡಿಸಿರುವ ಬೃಹನ್ಮೂರ್ತಿಗಳಿದ್ದು ನರಸಿಂಹ, ತ್ರಿವಿಕ್ರಮ, ವರಾಹ, ಅಂಧಕಾಸುರಮರ್ದನ, ಗಜಾರಿ, ಗಿರಿಜಾಕಲ್ಯಾಣ ಮೊದಲಾದ ವೈಷ್ಣವ, ಶೈವ ಕಥೆಗಳನ್ನು ಅವು ಬಿಂಬಿಸುತ್ತವೆ. ಗುಹಾಲಯದ ಮುಂಭಾಗದಲ್ಲಿ ದ್ವಾರಪಾಲಕರ ಮೂರ್ತಿಗಳನ್ನು ನಿಲ್ಲಿಸುವುದು ರಾಷ್ಟ್ರಕೂಟರ ಕಾಲದ ಒಂದು ವಿಶಿಷ್ಟ ಲಕ್ಷಣ. ರಾಷ್ಟ್ರಕೂಟರ ಅತ್ಯದ್ಭುತವಾದ ವಾಸ್ತುರಚನೆ ಎಂದರೆ ಎಲ್ಲೋರದ ಕೈಲಾಸದೇವಾಲಯ. ದೊಡ್ಡ ಕಲ್ಲಿನ ಮೊರಡಿಯೊಂದನ್ನು ಕತ್ತರಿಸಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಮಾದರಿಯಲ್ಲಿ, ಆದರೆ ಅದಕ್ಕಿಂತ ದೊಡ್ಡದಾಗಿ ಒಂದೇ ಬಂಡೆಯಲ್ಲಿ ಕಂಡರಿಸಿರುವ ದ್ರಾವಿಡ ಶೈಲಿಯ ಈ ದೇವಾಲಯ ಹಿಂದು

ದೇವಾಲಯಗಳಲ್ಲಿಯೇ ಅಮೋಘವಾದುದು. ಒಂದನೆಯ ಕೃಷ್ಣನ ಕಾಲದಲ್ಲಿ ನಿರ್ಮಿತವಾದ ಈ ದೇವಾಲಯವು ೨೫ ಅಡಿ ಎತ್ತರದ ಜಗತಿಯಮೇಲಿದ್ದು, ಆನೆ ಮತ್ತು ಸಿಂಹಗಳ ಸಾಲಿನಿಂದಲಂಕೃತವಾಗಿದೆ. ೧೦೦ ಅಡಿ ಅಗಲ, ೧೫೦ ಅಡಿ ಉದ್ದವಾಗಿರುವ ಈ ವಿಶಾಲ ದೇವಾಲಯ ೯೫ ಅಡಿಗಳ ಎತ್ತರವಿದೆ. ಗಜಾರಿಯ ರುದ್ರಭಯಂಕರಮೂರ್ತಿತ್ವ, ಮಹಿಷಮರ್ದಿನಿಯ ವೀರಕ್ರೋಧ ಮತ್ತು ನರಸಿಂಹನ ಭೀಷಣತೆಗಳನ್ನೂ ಕಲ್ಯಾಣ ಸುಂದರ ಮೊದಲಾದ ಮೂರ್ತಿಗಳ ಸೌಮ್ಯವನ್ನೂ ಹೊಮ್ಮಿಸಿರುವ ರಾಷ್ಟ್ರಕೂಟ ರೂವಾರಿಗಳ ಕೌಶಲ ಅನುಪಮ. ಎಲಿಫೆಂಟಾದ ದೊಡ್ಡ ಗುಹೆಯ ಅತ್ಯುಚ್ಚಮಟ್ಟದ ಬೃಹತ್ ಶಿಲ್ಪಗಳು ಉತ್ತಮ ಭಾವ ಪ್ರಕಟನೆ ಮತ್ತು ನೈಜತೆಗಳಿಂದ ಕೂಡಿದ ಸುಂದರ ಕಲಾಕೃತಿಗಳಾಗಿವೆ. ಅವುಗಳಲ್ಲಿ ಮುಖ್ಯವಾದುದು ಗುಹೆಯ ಹಿಂದಿನ ಗೋಡೆಯ ಮೇಲೆ ಕಂಡರಿಸಿರುವ, ೨೧ ಅಡಿ ಅಗಲ ೧೮ ಅಡಿ ಎತ್ತರ ಇರುವ, ಎದೆಯಿಂದ ಮೇಲಕ್ಕೆ ಮಾತ್ರ ಬಿಡಿಸಿರುವ ಮೂರು ಮುಖಗಳ ಮಹೇಶಮೂರ್ತಿ. ನಡುವೆ ಧೀರಗಂಭೀರ ಮುಖಮುದ್ರೆಯುಳ್ಳ ತತ್ಪುರುಷ, ಬಲಗಡೆ ರುದ್ರಭಯಂಕರನಾದ ಅಘೋರಮೂರ್ತಿ ಮತ್ತು ಎಡಗಡೆ ಸುಕುಮಾರನಾಗಿ ಕಾಣುವ ವಾಮದೇವ—ಹೀಗೆ ವಿವಿಧ ರಸಭಾವಗಳ ಶಿವರೂಪಗಳನ್ನು ಒಂದೇ ಕಲ್ಲಿನಲ್ಲಿ ಕಡೆದಿರುವ ಜಾಣ್ಮೆಯಿಂದ, ಅವರಲ್ಲಿನ ಪ್ರಮಾಣಬದ್ಧತೆಯಿಂದ, ಅಲಂಕರಣದ ಸೊಬಗಿನಿಂದ ಈ ಶಿಲ್ಪ ಲೋಕಪ್ರಸಿದ್ಧವಾಗಿದೆ.

ಕರ್ನಾಟಕದಲ್ಲಿ ರಾಷ್ಟ್ರಕೂಟರ ಕಾಲದ ವಾಸ್ತುಶಿಲ್ಪಗಳು ಹೆಚ್ಚು ಉಳಿದುಬಂದಿಲ್ಲ. ಅವರ ರಾಜಧಾನಿಯಾಗಿದ್ದ ಮಾನ್ಯಖೇಟದಲ್ಲಿ ಇರುವ ಜೈನ ಬಸದಿಯೊಂದು ಬಹುಶಃ ಅವರ ಕಾಲದ ಕಲೆಯ ಅವಶೇಷಗಳನ್ನು ಹೊಂದಿದೆ. ಸಿರವಾಳ ಗ್ರಾಮದಲ್ಲಿ ಇವರ ಕಾಲದ ಒಂದು ಸಣ್ಣ ಗುಡಿ ಗರ್ಭಗೃಹ ಮತ್ತು ಅರ್ಧಮಂಟಪಗಳನ್ನು ಮಾತ್ರ ಹೊಂದಿದ್ದು, ಮಂಟಪದಲ್ಲಿ ಪಲ್ಲವರೀತಿಯ ಸಿಂಹಸ್ತಂಭಗಳಿವೆ. ಇದೇ ಊರಿನಲ್ಲಿರುವ ಒಂದು ಕೊಳವ ಒಳಕಟ್ಟಡದಲ್ಲಿ ಕಂಡರಿಸಿರುವ ಒಂದು ಸಾಲು ರಾಮಾಯಣ, ಭಾರತ, ಪಂಚತಂತ್ರ ಮತ್ತು ಶಿವಲೀಲೆಗಳ ಉಬ್ಬುಶಿಲ್ಪಗಳು ಆಕರ್ಷಕವಾಗಿವೆ, ಭಾವಯುಕ್ತವಾಗಿವೆ. ಇವುಗಳೊಂದಿಗೆ ಮವಲಿಯಲ್ಲಿ ದೊರೆತ ಚೌಕ ಶಾಸನಕಂಬವೊಂದರ ಮೇಲಿನ ಶಿಲ್ಪ ಗಮನಿಸಬೇಕಾದ್ದು.

## ಕಲ್ಯಾಣ ಚಾಲುಕ್ಯರ ಕಾಲ

ರಾಷ್ಟ್ರಕೂಟರ ಆಡಳಿತವನ್ನು ಕೊನೆಗಾಣಿಸಿ ಮತ್ತೆ ಚಾಲುಕ್ಯವಂಶದವರು ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ರಾಜ್ಯಭಾರಮಾಡಲುಪಕ್ರಮಿಸಿದಾಗ, ಕರ್ನಾಟಕದ ವಾಸ್ತುಶಿಲ್ಪದಲ್ಲಿ ಹೊಸ ಮಜಲು ಆರಂಭವಾಯಿತು. ಅಲ್ಲಿಯವರೆಗೆ ಕಟ್ಟಡಗಳು ಹೆಚ್ಚು ಸರಳವಾಗಿ, ಸ್ಥೂಲವಾಗಿ ಉನ್ನತವಾಗಿರುತ್ತಿದ್ದುವು; ಅಲಂಕರಣ ಹೆಚ್ಚು ಇರುತ್ತಿರಲಿಲ್ಲ, ಅಲ್ಲಿನ ಮೂರ್ತಿಶಿಲ್ಪಗಳಲ್ಲಿ ಸರಳತೆಯಿದ್ದು, ಭಾವದ ಅಭಿವ್ಯಕ್ತಿಗೆ ಪ್ರಾಶಸ್ತ್ಯವಿರುತ್ತಿತ್ತು. ಜೊತೆಗೆ ಅವುಗಳ ಪ್ರಮಾಣವೂ ದೊಡ್ಡದಾಗಿರುತ್ತಿತ್ತು. ಅವರು ಉಪ

ಯೋಗಿಸುತ್ತಿದ್ದ ಮೂಲಸಾಮಗ್ರಿ ಗಟ್ಟಿಯಾದ ಗ್ರಾನೈಟ್ ಅಥವಾ ಕೆಂಪು ಮರಳುಶಿಲೆ.

ಎರಡನೆಯ ಚಾಲುಕ್ಯ ಮನೆತನವು ಮೊದಲು ಮಾನ್ಯಖೇಟದಿಂದಲೂ ಅನಂತರ ಕಲ್ಯಾಣದಿಂದಲೂ ಆಳಲಾರಂಭಿಸಿದ ಮೇಲೆ, ಕಲೆಗೆ ಮಹತ್ತರವಾದ ಪ್ರೋತ್ಸಾಹ ಸಿಕ್ಕಿತು. ಈ ಹೊತ್ತಿಗಾಗಲೇ ಕರ್ನಾಟಕದಲ್ಲಿ ಹೊಸ ಶೈಲಿ ರೂಪುಗೊಂಡು ಒಂದು ನೆಲೆಯನ್ನು ಮುಟ್ಟಿತ್ತು; ಎಂದರೆ ಚಾಲುಕ್ಯಶೈಲಿ ಪರಿಪೂರ್ಣಗೊಂಡಿತ್ತು. ಹಿಂದೆ ದ್ರಾವಿಡ ಮತ್ತು ನಾಗರ ಶೈಲಿಗಳು ಇಲ್ಲಿ ಬೆಳೆದು ಅವುಗಳ ವ್ಯತ್ಯಾಸವನ್ನು ಗುರುತಿಸಬಹುದಾಗಿತ್ತು; ಈ ಹೊತ್ತಿಗೆ ಅವುಗಳ ಹಿತಮಿತ ಸಂಯೋಜನೆ ನಡೆದು ಸುಂದರವಾದ ವೇಸರಶೈಲಿ ಹುಟ್ಟಿಕೊಂಡಿತ್ತು. ಈ ಶೈಲಿಯಲ್ಲಿ ದ್ರಾವಿಡ ರೀತಿಯ ಗೋಪುರರಚನೆಯ ಅಂತಸ್ತುಗಳನ್ನು ಉಳಿಸಿಕೊಂಡರೂ ಅವುಗಳ ಪ್ರಮಾಣ ಕಡಮೆಯಾಯಿತು; ಇದರೊಂದಿಗೆ ಉತ್ತರದ ಲಂಬನಿಲವೂ ಸೇರಿಕೊಂಡಿತು. ಜೊತೆಗೆ ಅಲಂಕರಣಗಳೂ ಹೆಚ್ಚಾದುವು. ಕೆಂಪು ಮರಳುಶಿಲೆಯ ಬದಲು ಹಸಿರು ಬೆರೆತ ಕಪ್ಪುಶಿಲೆಯನ್ನು ಉಪಯೋಗಿಸಲಾರಂಭಿಸಿದರು. ಇದು ಹೆಚ್ಚು ಮೃದುವಾಗಿದ್ದು, ಕೊರೆಯಲು ಸುಲಭವಾಗಿದ್ದುದರಿಂದ ಚಾಲುಕ್ಯ ಶಿಲ್ಪಿಗಳು ಹೆಚ್ಚು ಹೆಚ್ಚು ಹೊರ ಅಲಂಕಾರದೆಡೆ ಗಮನಕೊಡಲಾರಂಭಿಸಿದರು. ಈ ಮಿದುಕಲ್ಲಿನ ಬೃಹತ್ಪ್ರಮಾಣದ ಕಂಬ ತೊಲೆಗಳನ್ನುಪಯೋಗಿಸುವುದು ಸಾಧ್ಯವಲ್ಲದ್ದರಿಂದ ದೇವಾಲಯಗಳ ಪ್ರಮಾಣ ಕಿರಿದಾಗುತ್ತ ಹೋಯಿತು.

ಚಾಲುಕ್ಯರು ಆಳಿದ ೨೦೦ ವರ್ಷಗಳಲ್ಲಿ ಅವರ ಸಾಮ್ರಾಜ್ಯದ ಮೂಲೆ ಮೂಲೆಗಳಲ್ಲಿಯೂ ನೂರಾರು ದೇವಾಲಯಗಳು ನಿರ್ಮಾಣಗೊಂಡವು. ಇವುಗಳ ಆರಂಭದೆಸೆಯನ್ನು ಕುಕ್ಕನೂರಿನ ನವಲಿಂಗ ಮತ್ತು ಕಲ್ಲೇಶ್ವರ ದೇವಾಲಯಗಳಲ್ಲಿ ನೋಡಬಹುದು. ನವಲಿಂಗವು ಇನ್ನೂ ಹಳೆಯ ವಾಸ್ತುರೀತಿಯನ್ನೇ ಉಳಿಸಿಕೊಂಡ, ಕೆಂಪು ಮರಳುಶಿಲೆಯಿಂದ ನಿರ್ಮಿತವಾದ, ದೇವಾಲಯವಾದರೂ ಅದರ ಶಿಖರದ ತುದಿಯು ಬದಲಾವಣೆಯ ಸೂಚನೆಯನ್ನು ಕೊಡುತ್ತದೆ. ಕಲ್ಲೇಶ್ವರವೂ ಕೆಂಪು ಮರಳುಶಿಲೆಯಿಂದ ನಿರ್ಮಿತವಾದ್ದೇ. ಆದರೆ ಇದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ನಂದಿಮಂಟಪಗಳಿಂದ ಕೂಡಿದ, ಸಪ್ರಮಾಣವಾದ ಪೂರ್ಣ ರಚನೆ. ಹೊರಗೋಡೆಗಳು ಸರಳವಾಗಿದ್ದು, ಅರೆಗಂಬಗಳಿಂದಲಂಕೃತವಾಗಿವೆ. ಇವುಗಳ ಗೋಪುರಗಳಲ್ಲಿ ಬದಲಾವಣೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಇದರ ಮುಂದಿನ ಬೆಳೆವಣಿಗೆಯನ್ನು ಲಕ್ಕುಂಡಿಯ ಜೈನ ಬಸದಿಯಲ್ಲಿ ನೋಡಬಹುದು. ಇದು ಕಲ್ಲೇಶ್ವರ ದೇವಾಲಯದ ವಿನ್ಯಾಸದಲ್ಲಿ ರಚಿತವಾಗಿದ್ದರೂ ಹೆಚ್ಚು ಆಲಂಕಾರಿಕವಾಗಿದೆ. ಗೋಡೆಗಳ ಮೇಲೆ ಅರೆಗಂಬಗಳೂ ಅವುಗಳ ಮೇಲೆ ಅರೆಗೋಪುರಗಳೂ ಮೇಲೆ ಆಲಂಕಾರಿಕವಾಗಿ ಬಿಡಿಸಿರುವ ಸುರುಳಿಗಳೂ ಇದ್ದು, ಚಾಲುಕ್ಯ ಶೈಲಿಯ ಪೂರ್ಣ ಬೆಳೆವಣಿಗೆಯನ್ನು ಅಲ್ಲಿ ಕಾಣಬಹುದಾಗಿದೆ. ಕಲ್ಯಾಣ ಚಾಲುಕ್ಯರ ದೇವಾಲಯಗಳ ತಲವಿನ್ಯಾಸ ಚೌಕ ಅಥವ ದೀರ್ಘಚತುರಸ್ರಾಕಾರವಾಗಿಯೇ ಮುಂದುವರಿದರೂ ಗೋಡೆಗಳು ಸರಳವಾಗಿ ನೇರವಾಗಿಲ್ಲದೆ ಕೋಚುಕೋಚಾಗಿ ಉಬ್ಬಿರುತ್ತವೆ. ಒಂದೊಂದು ಕೋಚಿನ ಮೂಲೆಗೂ ಅರೆಗಂಬಗಳೂ ಅರೆಗಂಬಗಳ ನಡುವೆ ಕುಳ್ಳಾದ,

ಆದರೆ ಹೆಚ್ಚು ಉಬ್ಬಿನಂತ, ಹಲವು ಭಂಗಿಗಳ ಮೂರ್ತಿಶಿಲ್ಪಗಳೂ ಇರುತ್ತವೆ. ಇದರೊಂದಿಗೆ ಗೋಡೆಗಳ ಮೇಲೆ ಕಿರಿದಾಗಿ ಬಾಗಿದ್ದ ಲೋವೆಯ ಬದಲು ಇಳಿಜಾರಾಗಿ ದೊಡ್ಡದಾಗಿ ಚಾಚಿರುವ ಅಥವಾ ಎರಡು ಬಾಗುಗಳಲ್ಲಿ 'S' ಆಕಾರದಲ್ಲಿ ಬಳುಕಿರುವ ಅಗಲವಾದ ಲೋವೆಗಳನ್ನು ಉಪಯೋಗಿಸಲಾರಂಭವಾಯಿತು. ಇದು ಕೇವಲ ಅಲಂಕಾರಿಕವಲ್ಲದೆ ಕೆಳಗಿನ ಶಿಲ್ಪಾಲಂಕರಣಕ್ಕೆ ರಕ್ಷಣೆಯೂ ಆಯಿತು. ಬಾಗಿಲುವಾಡಗಳನ್ನು ವಿಸ್ತಾರವಾಗಿ ನವುರಾಗಿ ಹಲವು ಪಟ್ಟಿಕೆಗಳಿಂದ ಅಲಂಕರಿಸಿ ಶಿಲ್ಪ ವೈವಿಧ್ಯದಿಂದ ತುಂಬಿಸಿರುತ್ತಾರೆ. ಕಂಬಗಳು ತೆಳುವಾಗಿ, ಕೆಳಗೆ ಮೇಲೆ ಘನಾಕೃತಿಗಳನ್ನು ಹೊಂದಿ, ನಡುವೆ ಗುಂಡು ಅಥವಾ ಅಷ್ಟಮುಖಗಳ ಮೇಲೆ ಹಲವು ಆಲಂಕಾರಿಕ ರೂಪಗಳನ್ನೂ ಕಂಡರಿಸಿರುವುದುಂಟು. ಇವರ ರಾಜಧಾನಿ ಕಲ್ಯಾಣದಲ್ಲಿ ಇಂಥ ಅನೇಕ ದೇವಾಲಯಗಳಿದ್ದಿರಬೇಕು. ಆದರೆ ಈಗ ಎಲ್ಲವೂ ನಾಶವಾಗಿ ಆ ಊರಿನ ತುಂಬ ಭಗ್ನಶಿಲ್ಪಗಳೂ ಮೂರ್ತಿಗಳೂ ಹೇರಳವಾಗಿ ಚೆಲ್ಲಾಡಿವೆ. ಬಿದರೆ, ಗುಲ್ಬರ್ಗ, ಬಿಜಾಪುರ, ಧಾರವಾಡ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಊರೂರಿನಲ್ಲಿಯೂ ಇಂಥ ದೇವಾಲಯಗಳೋ ಅವುಗಳ ಅವಶೇಷಗಳೋ ತುಂಬಿವೆ. ಚೌಡದಾನಪುರದ ಮುಕ್ತೇಶ್ವರ, ಹಾವೇರಿಯ ಸಿದ್ಧೇಶ್ವರ, ಹರಳಹಳ್ಳಿಯ ಸೋಮೇಶ್ವರ, ನೀರ್ಗಳ್ಳಿಯ ಸಿದ್ಧರಾಮೇಶ್ವರ ಮುಂತಾದ ದೇವಾಲಯಗಳಲ್ಲಿ ದೊಡ್ಡದಾದ ಬಳುಕಿನ ಲೋವೆಗಳನ್ನು ನೋಡಬಹುದು. ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯ, ಕುರವತ್ತಿಯ ಮಲ್ಲಿಕಾರ್ಜುನ ದೇವಾಲಯ, ಇಟ್ಟಗಿಯ ಮಹದೇವ ಮಂದಿರ ಇವುಗಳು ಶ್ರೀಮಂತ ಸೌಂದರ್ಯದಿಂದ ಕೂಡಿದ ಶಿಲ್ಪಾಲಂಕರಣಗಳು ತುಂಬಿದ ಪರಿಪೂರ್ಣ ದೇವಾಲಯಗಳು. ಇಟ್ಟಗಿಯ ಮಹದೇವ ದೇವಾಲಯವು ಹಳೆಯಬೀಡನ್ನು ಬಿಟ್ಟರೆ ಕನ್ನಡನಾಡಿನಲ್ಲಿಯೇ ಅತ್ಯಂತ ಸುಂದರವಾದ ದೇವಾಲಯವೆಂದು ಕಸಿನ್ಸ್ ತಿಳಿಸಿದ್ದಾನೆ. ಜಲಸಂಗ್ವಿಯಲ್ಲಿರುವ ಶಿವಾಲಯದ ಗೋಡೆಗಳ ಮೇಲೆ ಇರುವ ಮೂರ್ತಿಗಳಲ್ಲಿ ಒಂದು ಸ್ತ್ರೀಮೂರ್ತಿ ಕೈಯಲ್ಲಿ ಓಲೆಯೊಂದನ್ನು ಹಿಡಿದು ಚಾಲುಕ್ಯ ವಿಕ್ರಮಾದಿತ್ಯನ ಗುಣಗಾನ ಮಾಡುವ ಶಾಸನ ಒಂದನ್ನು ಬರೆಯುತ್ತಿರುವ ಭಂಗಿ ಮೋಹಕವಾಗಿದೆ. ಹಾಗೆಯೇ ಕಾಲಗಿಯ ಕಾಳಮೇಶ್ವರ ದೇವಾಲಯದ ಗೋಡೆಗಳ ಮೇಲೆ ಅಲ್ಲಲ್ಲಿ ಹಲವು ಭಂಗಿಗಳಲ್ಲಿ ನಿಂತಿರುವ ಸ್ತ್ರೀಮೂರ್ತಿಗಳ ಭಾವಭಂಗಿಗಳನ್ನು ವರ್ಣಿಸುವ ಕಿರುಶಾಸನಗಳು ಅವುಗಳೊಂದೊಂದರ ಮೇಲೂ ಇವೆ. ನೀಲಕಂಠನ ಪ್ರಶಸ್ತಿಯನ್ನು ಬಗೆಬಗೆಯಾಗಿ ವರ್ಣಿಸುತ್ತ ಗುಣಗಾನ ಮಾಡುವುದನ್ನು ಆ ಶಾಸನಗಳು ತಿಳಿಸುತ್ತವೆ. ಚಿಂಚನ್ಸೂರು, ಯೆವೂರು, ಹರಸೂರು ಮುಂತಾದ ಕಡೆ ಇಂಥ ಸುಂದರ ದೇವಾಲಯಗಳ ಅವಶೇಷಗಳು ತುಂಬಿವೆ. ಸಿರವಾಳ, ಮುದೆನೂರು, ಕೆಂಬಾವಿ ಮೊದಲಾದ ಕಡೆ ಅಪರೂಪವಾದ ತಲವಿನ್ಯಾಸವುಳ್ಳ ದೇವಾಲಯಗಳು ಕೆಲವಿವೆ. ಮಧ್ಯೆ ಚತುರಸ್ರವಾದ ಗರ್ಭಗುಡಿ, ಅದರ ನಾಲ್ಕು ಕಡೆಗೂ ಅರ್ಧಮಂಟಪ, ಮಹಾಮಂಟಪ, ಮತ್ತೆ ಅರ್ಧಮಂಟಪ ಮತ್ತು ಗರ್ಭಗೃಹಗಳು ಇದ್ದು, ನಾಲ್ಕು ಬೇರೆ ದೇವಾಲಯಗಳು ಈ ಮಧ್ಯದ ದೇವಾಲಯಕ್ಕೆ ಕೂಡಿಕೊಂಡಂತಿರುವ ವಿನ್ಯಾಸ ವಿಶಿಷ್ಟವಾದ್ದು. ನಾಗಾವಿಯಲ್ಲಿ

ತ್ರೈಪುರುಷದೇವರ ದೇವಾಲಯವಿದ್ದು ಅದರ ಮಹಾಮಂಟಪ ಅರುವತ್ತು ಕಂಬಗಳಿರುವ ಒಂದು ದೊಡ್ಡ ಹಜಾರ. ಸಾಮಾನ್ಯವಾಗಿ ಚಾಲುಕ್ಯರ ದೇವಾಲಯಗಳಲ್ಲಿ ನಡುವೆ ದಪ್ಪ ಕಂಬಗಳಿದ್ದು, ಸುತ್ತ ತೆಳುವಾದ ಕಂಬಗಳಿರುತ್ತವೆ. ಇದರೊಂದಿಗೆ ಸುಕನಾಸಿ ಅಥವಾ ಅರ್ಧಮಂಟಪಕ್ಕೆ ಗೋಡೆ ಬಾಗಿಲುಗಳಿಲ್ಲದೆ, ಎರಡು ತೆಳುಗಂಬಗಳ ಮೇಲೆ ಸುಂದರವಾಗಿ ಕಂಡರಿಸಿರುವ ಮಕರತೋರಣಗಳಿರುತ್ತವೆ. ಸೇಡಂನಲ್ಲಿರುವ ಪಂಚಲಿಂಗೇಶ್ವರ ದೇವಾಲಯದಲ್ಲಿ ಇಂಥ ಮಕರ ತೋರಣವನ್ನು ನೋಡಬಹುದು. ಬಳ್ಳಿಗಾವಿಯ ತ್ರಿಪುರಾಂತಕ ದೇವಾಲಯದಲ್ಲಿ ನವುರಾದ ಶಿಲ್ಪ, ಮನೋಹರವಾದ ಮೂರ್ತಿಶಿಲ್ಪಗಳುಂಟು. ಇಲ್ಲಿ ಬಾಗಿಲೊಂದರ ಜಾಲಂಧ್ರವನ್ನು ನಾಗಬಂಧವೊಂದರ ಆಕಾರದಲ್ಲಿ ಬಿಡಿಸಿರುವುದು ಶಿಲ್ಪನೈಪುಣ್ಯವನ್ನು ಸೂಚಿಸುತ್ತದೆ. ಪಂಚತಂತ್ರದ ಕಥೆಗಳನ್ನು ಬಿಡಿಸಿರುವ ಇಲ್ಲಿನ ಕೆಲವು ಶಿಲ್ಪಗಳು ಆಕರ್ಷಕವಾಗಿವೆ. ಕುರವತ್ತಿಯಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಮದನಿಕೆಯ ಸುಂದರ ಮೂರ್ತಿಗಳೂ ಡಂಬಳದ ದೊಡ್ಡಬಸಪ್ಪನ ದೇವಾಲಯದ ನಕ್ಷತ್ರಾಕಾರದ ತಲವಿನ್ಯಾಸವೂ ಗದುಗಿನ ಸರಸ್ವತೀ ಗುಡಿಯಲ್ಲಿರುವ ಕತ್ತಲೆ ಪ್ರದಕ್ಷಿಣೆಯೂ ಈ ಶೈಲಿಯ ಬೇರೆ ದೇವಾಲಯಗಳಲ್ಲಿ ಕಂಡುಬರದ ವಿಶಿಷ್ಟ ಲಕ್ಷಣಗಳು.

## ಹೊಯ್ಸಳರ ಕಾಲ

ಕಲ್ಯಾಣ ಚಾಲುಕ್ಯರು ಕರ್ಣಾಟಕದ ವಿಶಿಷ್ಟ ವಾಸ್ತುಶೈಲಿಯನ್ನು ವ್ಯಾಪಕವಾಗಿ ಪ್ರಚುರಪಡಿಸಿದರೆ, ಅವರ ಸಾಮಂತರಾಗಿ ಆರಂಭಿಸಿ ಮುಂದೆ ದೊಡ್ಡ ರಾಜ್ಯವನ್ನು ಕಟ್ಟಿದ ಹೊಯ್ಸಳರು ಅದನ್ನು ಶ್ರೀಮಂತಗೊಳಿಸಿದರು. ಚಾಲುಕ್ಯ ಶೈಲಿಯನ್ನು ವಾಸ್ತುಶಿಲ್ಪಗಳಲ್ಲಿ ಅಳವಡಿಸಿಕೊಂಡ ಹೊಯ್ಸಳರು ಮುಂದೆ ಅದನ್ನು ವೈವಿಧ್ಯಮಯವಾಗಿ ಅಪೂರ್ವ ವಿನ್ಯಾಸಗಳೊಡನೆ ಬೆಳಸಿ ತಮ್ಮದೇ ಆದ ಶೈಲಿಯನ್ನಾಗಿ ಮಾರ್ಪಡಿಸಿದರು. ವಿಷ್ಣುವರ್ಧನನೂ ಅವನ ನಂತರ ಬಂದ ಹೊಯ್ಸಳ ಚಕ್ರವರ್ತಿಗಳೂ ಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟರು. ಇವರ ಕಾಲದಲ್ಲಿ ಶೈವ, ವೈಷ್ಣವ, ಜೈನ ಮತ್ತಿತರ ಮತಗಳ ದೇವಾಲಯಗಳು ನಿರ್ಮಾಣವಾಗಲು, ಬೆಳೆಯಲು ಸಮಾನವಾದ ಪ್ರೋತ್ಸಾಹ ದೊರೆಯಿತು. ಚಾಲುಕ್ಯರಂತೆ ಹೊಯ್ಸಳರೂ ಮೃದುವಾದ ಬಳಪದಕಲ್ಲನ್ನು ದೇವಾಲಯಗಳ ನಿರ್ಮಾಣಕ್ಕೆ ಅಳವಡಿಸಿಕೊಂಡರು. ಬಳಪದಕಲ್ಲು ದೊರೆಯದ ಮತ್ತು ಚೋಳರ ದ್ರಾವಿಡ ಶಿಲ್ಪ ಹೆಚ್ಚು ಪ್ರಬುದ್ಧಮಾನಕ್ಕೆ ಬಂದಿದ್ದ ಹೊಯ್ಸಳ ರಾಜ್ಯದ ಪೂರ್ವಭಾಗಗಳಲ್ಲಿ ಮಾತ್ರ ಇವರ ಕಾಲದ ಕೆಲವು ಕಗ್ಗಲ್ಲಿನ, ಇಟ್ಟಿಗೆಯ ಕಟ್ಟಡಗಳನ್ನು ಕಾಣಬಹುದು.

ಹೊಯ್ಸಳರು ಕಟ್ಟಿಸಿದ ದೇವಾಲಯಗಳಲ್ಲಿ ಸರಳವಾದ, ಆಯತಾಕಾರದ, ಅರೆಗಂಬಗಳಿಂದ ಕೂಡಿದ ಗೋಡೆಗಳನ್ನುಳ್ಳ ದೇವಾಲಯಗಳು ಅನೇಕವಿದ್ದರೂ ಇವರ ವಿಶಿಷ್ಟವೂ ಸಂಕೀರ್ಣವೂ ಆದ ವಿನ್ಯಾಸದ ಪ್ರೌಢಾವಸ್ಥೆಯನ್ನು ತೋರುವ ಪರಿಪೂರ್ಣ ದೇವಾಲಯಗಳು ಹೆಚ್ಚು ಗಮನಾರ್ಹವಾಗಿವೆ. ಈ ದೇವಾಲಯಗಳ ಮುಖ್ಯ ಲಕ್ಷಣವೆಂದರೆ ಅವುಗಳನ್ನು ಎತ್ತರವಾದ ಜಗತಿಯ ಮೇಲೆ ಕಟ್ಟಿರುವುದು. ಸಾಮಾನ್ಯವಾಗಿ

ಹೊಯ್ಸಳ ದೇವಾಲಯಗಳು ಹೆಚ್ಚು ಎತ್ತರವಿರುವುದಿಲ್ಲ. ಆದ್ದರಿಂದ ಈ ಜಗತಿಗಳು ಅವಕ್ಕೊಂದು ಎತ್ತರವನ್ನು ಒದಗಿಸುತ್ತವೆ. ಜಗತಿಗಳು ದೇವಾಲಯಗಳ ತಲವಿನ್ಯಾಸವನ್ನೇ ಅನುಸರಿಸಿದ್ದು ವಿಶಾಲವಾಗಿರುವುದರಿಂದ, ಅವು ಪ್ರದಕ್ಷಿಣಾಪಥವಾಗಿಯೂ ಉಪಯುಕ್ತವಾಗಿವೆ. ವೈವಿಧ್ಯಮಯವಾದ ಹೊಯ್ಸಳ ದೇವಾಲಯಗಳ ತಲವಿನ್ಯಾಸ ಹೆಚ್ಚು ಸಂಕೀರ್ಣವಾದ್ದು. ಕಚ್ಚುಕಚ್ಚಾಗಿ ಉಬ್ಬಿದ ಆಯಾಕಾರದ ಗೋಡೆಗಳಿಂದ ಕೂಡಿರಬಹುದು; ಅಷ್ಟಭದ್ರಾಕಾರದಲ್ಲಿರಬಹುದು, ಅಥವಾ ಅಷ್ಟಭದ್ರ ಮತ್ತು ಅಷ್ಟಕೋನ ನಕ್ಷತ್ರಗಳ ಸಂಕೀರ್ಣವಾಗಿರಬಹುದು; ಅಥವಾ ೧೬ ಮೂಲೆಗಳ ನಕ್ಷತ್ರಾಕಾರವಾಗಿರಬಹುದು. ಯಾವ ವಿನ್ಯಾಸವಲ್ಲಿಯೇ ಇರಲಿ ಜಗತಿಯು ಅದೇ ತಲವಿನ್ಯಾಸವನ್ನನುಸರಿಸಿರುತ್ತದೆ. ಹೀಗೆ ಗೋಡೆಗಳನ್ನು ಹಲವು ಮುಖಗಳಾಗಿ ಒಡೆಯುವುದರಿಂದ ರೂವಾರಿಗಳಿಗೆ ಕೆತ್ತನೆಯ ಕೆಲಸಕ್ಕೆ ಹೆಚ್ಚು ಅವಕಾಶ ದೊರೆಯಿತಲ್ಲದೆ ಶಿಲ್ಪಗಳ ಮೇಲೆ ನೆಳಲು ಬೆಳಕುಗಳ ಪ್ರಭಾವ ಬೀರಲನುಕೂಲವಾಗಿದೆ. ಹೊಯ್ಸಳ ದೇವಾಲಯಗಳು ಅಡಿಯಿಂದ ಮುಡಿಯವರೆಗೂ ಕುಸುರಿ ಶಿಲ್ಪದಿಂದ ತುಂಬಿರುವುದು ಇನ್ನೊಂದು ವೈಶಿಷ್ಟ್ಯ. ಜಗತಿಯ ಮೇಲಿನ ತಳಹದಿ ಹಲವಾರು ಅಡ್ಡಪಟ್ಟಿಕೆಗಳಾಗಿ ವಿಂಗಡಗೊಂಡು, ಒಂದೊಂದು ಪಟ್ಟಿಕೆಯಲ್ಲಿಯೂ ಆನೆಸಾಲು, ಕುದುರೆಸಾಲು, ಸಿಂಹಸಾಲು, ಸಾಲುಹಂಸ, ಬಳ್ಳಿಸುರುಳಿ, ರಾಮಾಯಣ ಭಾರತ ಭಾಗವತಗಳ ಸಾಲುಶಿಲ್ಪ ನವುರಾಗಿ ಕೆತ್ತನೆಗೊಂಡಿವೆ. ಮೇಲಿನ ಗೋಡೆಗಳ ಮೇಲೆ ಅರೆಗೋಪುರಗಳ ಕೆಳಗೋ ಬಳ್ಳಿವಿತಾನಗಳ ಕೆಳಗೋ ದೇವಾನುದೇವತೆಗಳ, ಅವರ ಪರಿವಾರವರ್ಗದ, ಮೂರ್ತಿಗಳ ವಿವಿಧ ಭಂಗಿಗಳ ಸಾಲು ಗೋಡೆಯನ್ನು ತುಂಬಿವೆ. ಮುಂಭಾಗವಲ್ಲಿ ಗಾಳಿ ಬೆಳಕುಗಳಿಗಾಗಿರುವ ಜಾಲಂಧ್ರಗಳೂ ಹಲವು ಬಗೆಯ ಶಿಲ್ಪಗಳಿಂದ ಕೂಡಿವೆ. ಸಾಮಾನ್ಯವಾಗಿ ಗರ್ಭಗೃಹದ ಮೂರು ಕಡೆಗಳಲ್ಲಿಯೂ ಊರೆಯನ್ನೊದಗಿಸುವ ಸಲುವಾಗಿ ಅಲಂಕಾರಿಕವಾದ ದೊಡ್ಡ ಮಂಟಪಗಳಿಂದ ಕೂಡಿರುವ ಗೂಡುಗಳಿರುತ್ತವೆ. ಎರಡು ಬಳುಕಿನ ದೊಡ್ಡ ಲೋವೆಗಳ ಮೇಲೂ ಕೀರ್ತಿಮುಖ ಮಣಿಹಾರಗಳ ಅಲಂಕರಣವಿರುತ್ತದೆ. ಲೋವೆಯ ಕೆಳಗೆ ಸುಂದರವಾಗಿ ಕಡೆದಿರುವ ಮದನಿಕೆಗಳಿರುವುದುಂಟು. ತಲವಿನ್ಯಾಸವನ್ನೇ ಅನುಸರಿಸಿ ಮೇಲೆದ್ದ ಶಿಖರಗಳು ಸರ್ವಾಲಂಕೃತವಾಗಿರುತ್ತವೆ.

ಸಾಮಾನ್ಯವಾಗಿ ಹೊಯ್ಸಳ ದೇವಾಲಯಗಳ ರಚನೆಯಲ್ಲಿ ಒಂದು ಗರ್ಭಗೃಹ, ಅದರ ಮುಂದೆ ಸುಕನಾಸಿ ಮತ್ತು ನವರಂಗಗಳು, ನವರಂಗದ ಮುಂದೆ ಒಂದಂಕಣದ ಮುಖಭದ್ರ—ಹೀಗೆ ಇರುವುದುಂಟು. ಇದೇ ರೀತಿಯ ಜೋಡಿ ದೇವಾಲಯಗಳನ್ನು ಒಂದರ ಪಕ್ಕ ಒಂದು ಕಟ್ಟುವುದು, ಇಂಥ ಎರಡು ದೇವಾಲಯಗಳನ್ನು ಒಂದೇ ಹಜಾರದಿಂದ ಕೂಡಿಸುವುದು ಉಂಟು. ನವರಂಗದ ಮೂರು ಕಡೆ ಮೂರು ಗರ್ಭಗೃಹಗಳಿದ್ದು, ನಾಲ್ಕನೆಯ ಕಡೆ ಮುಖಭದ್ರ ಪ್ರವೇಶದ್ವಾರಗಳಿರುವ ತ್ರಿಕೂಟಾಚಲಗಳು ಈ ಶೈಲಿಯಲ್ಲಿ ಕಂಡುಬರುವುದು ಸಾಮಾನ್ಯ. ನಾಲ್ಕು ಅಥವ ಐದು ಗರ್ಭಗೃಹಗಳ ಸಾಲಿದ್ದು

ಅವುಗಳನ್ನು ಒಂದೇ ಹಜಾರವು ಕೂಡಿಸುವ ಅಪರೂಪ ರೀತಿಯೂ ಉಂಟು.

ಅಲಂಕಾರಪಟ್ಟಿಕೆಗಳಿಂದ ಕೂಡಿರುವ ಬಾಗಿಲುವಾಡಗಳ ಮೇಲೆ ಸುಂದರವಾದ ಮೂರ್ತಿಗಳನ್ನು ಕಂಡರಿಸುವುದು, ನವರಂಗದಲ್ಲಿ ವಿಶಿಷ್ಟವಾದ ತಿರುಗಣೆಯಲ್ಲಿ ಕಂಡರಿಸಿದ ಕಂಬಗಳಿರುವುದು, ಭುವನೇಶ್ವರಿಗಳು ಆಳವಾಗಿದ್ದು ಒಂದೊಂದೂ ಸೂಕ್ಷ್ಮವಾದ ಶಿಲ್ಪದಿಂದ ತುಂಬಿರುವುದು ಇವೆಲ್ಲ ಹೊಯ್ಸಳ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಎಷ್ಟೋ ವೇಳೆ ಕಂಬಗಳ ಮೇಲೆ ಮದನಿಕೆಗಳಿರುವುದೂ ತೊಲೆಗಳ ಮೇಲೂ ಶಿಲ್ಪಸಾಲುಗಳನ್ನು ತುಂಬಿರುವುದೂ ಉಂಟು.

ಇಂತಹ ನೂರಾರು ದೇವಾಲಯಗಳು ಕರ್ನಾಟಕದ ದಕ್ಷಿಣಭಾಗದಲ್ಲಿ ಹರಡಿವೆ. ಕೆಲವಂತೂ ಶಿಲ್ಪರಾಶಿಯ ವಸ್ತುಸಂಗ್ರಹಶಾಲೆಗಳಂತಿವೆ. ಇವುಗಳಲ್ಲಿ ಅತ್ಯಂತ ಸುಂದರವೂ ಶ್ರೇಷ್ಠಶಿಲ್ಪದಿಂದ ಕೂಡಿದುದೂ ಎಂದರೆ ಬೇಲೂರಿನ ಚೆನ್ನಕೇಶವ ದೇವಾಲಯ. ವಿಷ್ಣುವರ್ಧನನು ಗಂಗರನ್ನು ಸೋಲಿಸಿ ಪಡೆದ ವಿಜಯದ ನೆನಪಿಗಾಗಿ ಕ್ರಿ.ಶ. ೧೧೧೭ರಲ್ಲಿ ಕಟ್ಟಿಸಿದ ವಿಜಯ ನಾರಾಯಣನ ದೇವಾಲಯವಿದು. ಒಂದೇ ಗರ್ಭಗುಡಿಯಿರುವ, ಮೇಲೆ ತಿಳಿಸಿರುವ ಸಕಲ ಲಕ್ಷಣಗಳನ್ನೂ ಹೊಂದಿರುವ, ಈ ದೇವಾಲಯದ ಮೇಲಿದ್ದ ಗೋಪುರ ಈಗ ಇಲ್ಲ. ಈ ದೇವಾಲಯದಲ್ಲಿನ ಮನೋಹರವಾದ ಶಿಲ್ಪಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದುವು, ಹೊರಗೋಡೆಯ ಮೇಲೆ ಲೋವೆಯ ಕೆಳಗೂ ನವರಂಗದ ಕಂಬಗಳ ಮೇಲೂ ಇರುವ ಸಾಲಭಂಜಿಕೆಗಳು. ಈ ಮೂರ್ತಿಗಳನ್ನು ಪ್ರಸಿದ್ಧರಾದ ದಾಸೋಜ, ಅವನ ಮಗ ಚಾವಣ, ಗದುಗಿನ ನಾಗೋಜ, ಲೊಕ್ಕಿಗುಂಡಿಯ ಚೌಂಡೋಜ ಮುಂತಾದ ರೂವಾರಿಗಳು ಕಂಡರಿಸಿದ್ದಾರೆ. ಅತ್ಯಂತ ನಾಜೂಕಾಗಿ ಬಿಡಿಸಿರುವ ಲತಾವಿತಾನದ ಕೆಳಗೆ ಹಲವು ಬಗೆಯ ಲಾಸ್ಯಭಂಗಿಗಳಲ್ಲಿ ನಿಂತಿರುವ ಈ ಸುಂದರ ಶಿಲಾಬಾಲಿಕೆಯರು ಹೊಯ್ಸಳ ಶಿಲ್ಪಕ್ಕೆ ಅತ್ಯುತ್ತಮ ಮಾದರಿ. ನವರಂಗದಲ್ಲಿರುವ ಕಂಬಗಳು ಹಲವು ವಿಧವಾಗಿರುವುವಲ್ಲದೆ, ಮೇಲಿನ ಭುವನೇಶ್ವರಿಗಳೂ ಅತ್ಯಂತ ಆಕರ್ಷಕವಾಗಿವೆ. ಅದರಲ್ಲಿಯೂ ನವರಂಗದ ಮಧ್ಯೆ ಇರುವ ದೊಡ್ಡ ಭುವನೇಶ್ವರಿಯು ಮೇಲಿನಿಂದ ಕೆಳಗಿನವರೆಗೂ ಅತಿ ಸುಂದರವಾಗಿ ಬಿಡಿಸಿರುವ ಶಿಲ್ಪ ಸೌಂದರ್ಯದ ಖನಿ.

ವಿಷ್ಣುವರ್ಧನನ ಕಾಲದಲ್ಲಿಯೇ ಆರಂಭಿಸಿದ್ದು, ನರಸಿಂಹನ ಕಾಲದಲ್ಲಿ ಕಟ್ಟಿ ಪೂರೈಸಿದ್ದಿರಬಹುದಾದ ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯವು ಹೊಯ್ಸಳ ದೇವಾಲಯಗಳಲ್ಲೇ ಅತ್ಯಂತ ದೊಡ್ಡದಾದ್ದು, ಭವ್ಯವೂ ಸುಂದರವೂ ಆದ್ದು. ಬೇಲೂರಿನ ದೇವಾಲಯದ ವಿನ್ಯಾಸವನ್ನೇ ಹೋಲುವ ಎರಡು ಗುಡಿಗಳ ನವರಂಗಗಳನ್ನೂ ಮೂರಂಕಣದ ಒಂದು ಹಜಾರ ಸೇರಿಸಿದೆ. ಎಲ್ಲಾ ಒಂದೇ ದೊಡ್ಡ ಸಭಾಮಂಟಪದಂತಾಗಿದೆ. ಮುಂದೆ ಎರಡು ನಂದಿಮಂಟಪಗಳಿವೆ. ಈ ದೇವಾಲಯದ ಹೊರಗೋಡೆಗಳಲ್ಲಿ ಇಡಿಕಿರಿದಂತೆ ತುಂಬಿರುವ ಮೂರ್ತಿಶಿಲ್ಪಗಳ ಬಾಹುಳ್ಯ ಆಶ್ಚರ್ಯಕರವಾದ್ದು. ಈ ಮೂರ್ತಿಶಿಲ್ಪಗಳು ಹೊಯ್ಸಳ ಶಿಲ್ಪಗಳಲ್ಲಿಯೇ ಅತಿ ಶ್ರೇಷ್ಠವಾದವು.

ಹಿಂದು ದೇವಾಲಯಗಳ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಹೊಯ್ಸಳೇಶ್ವರ ದೇವಾಲಯವನ್ನು ಮಾದರಿಯಾಗಿ ತೆಗೆದುಕೊಳ್ಳಬಹುದೆಂದು ತಿಳಿಸಿರುವ ಫರ್ಗೂಸನ್ ಅಥೆನ್ಸಿನ ಪಾರ್ಥಿನಾನ್ ಮಂದಿರದೊಂದಿಗೆ ಈ ದೇವಾಲಯವನ್ನು ಹೋಲಿಸುತ್ತ, ಇವೆರಡೂ ತೀರ ವಿರುದ್ಧವಾದ ರಚನೆಗಳಾದರೂ ತಮ್ಮ ತಮ್ಮ ರೀತಿಯಲ್ಲಿ ಅತ್ಯಂತ ಶ್ರೇಷ್ಠ ಕೃತಿಗಳು ಎಂದು ಉದ್ಗರಿಸಿದ್ದಾನೆ. ಹಳೇಬೀಡಿನಲ್ಲಿ ಹಲವಾರು ದೇವಾಲಯಗಳಿದ್ದು, ಬಹುಮಟ್ಟಿಗೆ ಅವು ನಾಶವಾಗಿವೆ. ಇಮ್ಮಡಿ ಬಲ್ಲಾಳನ ಕಾಲದಲ್ಲಿ ಕಟ್ಟಿದ ಕೇದಾರೇಶ್ವರ ದೇವಾಲಯ ಶ್ರೇಷ್ಠ ಕಲಾಕೃತಿ ಎಂದು ಪರಿಗಣಿತವಾಗಿತ್ತು. ಆದರೆ ದುರದೃಷ್ಟವಶದಿಂದ ಅದರ ಭಾಗಗಳು ಬಿದ್ದುಹೋಗಿದ್ದು, ಈಗ ಪುನರ್ನಿರ್ಮಿತವಾಗಿದ್ದರೂ ತನ್ನ ಮೂಲ ಸೌಂದರ್ಯವನ್ನು ಅದು ಕಳೆದುಕೊಂಡಿದೆ.

೧೩ನೆಯ ಶತಮಾನದ ಉತ್ತರಾರ್ಧದಲ್ಲಿ ನಿರ್ಮಿತವಾದ ಸೋಮನಾಥಪುರದ ಕೇಶವ ದೇವಾಲಯವನ್ನು ಶಿಲ್ಪಕಲೆಯಲ್ಲಿಯೇ ಒಂದು ಅನರ್ಘ್ಯರತ್ನ ಎಂದು ಫರ್ಗೂಸನ್ ಹೊಗಳಿದ್ದಾನೆ. ಒಂದೇ ನವರಂಗದ ಮೂರು ಕಡೆಯೂ ಮೂರು ನಕ್ಷತ್ರಾಕಾರ ವಿನ್ಯಾಸವುಳ್ಳ ಗರ್ಭಗೃಹಗಳಿದ್ದು, ಅವುಗಳ ಮೇಲೆ ಸುಂದರವಾದ ಮೂರು ಗೋಪುರಗಳಿದ್ದು, ಹೊರಗೋಡೆಗಳಲ್ಲಿ ಪಟ್ಟಿಕೆಗಳು, ಮೂರ್ತಿಗಳು, ಲತಾವಿತಾನಗಳು, ಬಗೆಬಗೆಯ ಅರೆಗೋಪುರಗಳೂ ನವರಂಗದ ಚಾವಣಿಯಲ್ಲಿನ ಸುಂದರ ಭುವನೇಶ್ವರಿಗಳೂ ಗರ್ಭಗುಡಿಗಳಲ್ಲಿನ ಅನುಪಮವಾದ ವೇಣುಗೋಪಾಲ ಮತ್ತು ಜನಾರ್ದನಮೂರ್ತಿಗಳೂ ದೇವಾಲಯವನ್ನು ಸುತ್ತುವರಿದ ಪ್ರಾಕಾರವೂ ಒಳಭಾಗದ ಸಾಲುಗುಡಿಗಳೂ ರಮ್ಯವೂ ಪ್ರಮಾಣಬದ್ಧವೂ ಆಗಿ ನಿರ್ಮಾಣಗೊಂಡಿವೆ. ಪರಿಪೂರ್ಣವಾಗಿ ಬೆಳೆದುಬಂದ ಹೊಯ್ಸಳ ವಾಸ್ತುವಿನ ಅತ್ಯುಚ್ಚ ಮಾದರಿ ಈ ದೇವಾಲಯ. ಬೇಲೂರು ಮತ್ತು ಸೋಮನಾಥಪುರದ ದೇವಾಲಯಗಳ ನಿರ್ಮಾಣಕಾಲಗಳ ನಡುವೆ ಹುಟ್ಟಿಕೊಂಡ ಅವೆಷ್ಟೋ ದೇವಾಲಯಗಳು ತಮ್ಮವೇ ಆದ ಹಲವು ವೈಶಿಷ್ಟ್ಯಗಳನ್ನು ಹೊಂದಿವೆ. ಸೋಮನಾಥಪುರದ ಕೇಶವ ದೇವಾಲಯವನ್ನೇ ಹೋಲುವ ಈಶ್ವರ ದೇವಾಲಯವೊಂದು ಹಿರೇನಲ್ಲೂರಿನಲ್ಲಿದೆ. ಮೂರು ಗರ್ಭಗುಡಿಗಳ ಮೇಲೂ ಮೂರು ಸುಂದರವಾದ ಗೋಪುರಗಳಿರುವ ಈ ತ್ರಿಕೂಟಾಚಲ ದೇವಾಲಯದಲ್ಲಿ ಲಿಂಗ, ಕೇಶವ ಮತ್ತು ಸೂರ್ಯರ ಮೂರ್ತಿಗಳಿದ್ದುವು. ಈಗ ಕೊನೆಯ ಎರಡು ಮೂರ್ತಿಗಳಿಲ್ಲ. ಗೋವಿಂದನಹಳ್ಳಿಯಲ್ಲಿ ಒಂದೇ ಸಾಲಿನಲ್ಲಿ ನಿಂತಿರುವ ಐದು ಗರ್ಭಗೃಹಗಳ ಮುಂದೆ ಉದ್ದವಾದ ಒಂದೇ ಹಜಾರವಿರುವ ವಿಶಿಷ್ಟವಾದ ಪಂಚಲಿಂಗೇಶ್ವರ ದೇವಾಲಯವಿದೆ. ಮರಲೆ ಮತ್ತು ಮರಸೆಗಳಲ್ಲಿ ಒಂದರ ಪಕ್ಕದಲ್ಲಿ ಒಂದಿರುವ ಜೋಡಿ ದೇವಾಲಯಗಳಿವೆ. ಕೋರಮಂಗಲದ ಭೂತೇಶ್ವರ ದೇವಾಲಯ ಅಮೃತಾಪುರದ ಅಮೃತೇಶ್ವರ ದೇವಾಲಯ, ಅರಸೀಕೆರೆಯ ಈಶ್ವರ ದೇವಾಲಯ, ಹಾರನಹಳ್ಳಿಯ ಸೋಮೇಶ್ವರ ದೇವಾಲಯ, ಬಸರಾಳಿನ ಮಲ್ಲಿಕಾರ್ಜುನ ದೇವಾಲಯ, ಜಿನನಾಥಪುರದ ಶಾಂತಿನಾಥ ಬಸದಿ, ಶ್ರವಣಬೆಳಗೊಳದ ಅಕ್ಕನ ಬಸದಿ ಇವು ಇತರ ಸುಂದರ ದೇವಾಲಯಗಳಲ್ಲಿ ಕೆಲವು ಮಾತ್ರ. ಇಂತಹ ಅದ್ಭುತವಾದ

ದೇವಾಲಯಗಳನ್ನು ರಚಿಸಿದ ನೂರಾರು ಶಿಲ್ಪಿಗಳ ಹೆಸರುಗಳು ಶಾಸನಗಳಲ್ಲಿವೆ. ಅವರಲ್ಲಿ ಮಲ್ಲಿತಮ್ಮ, ಮಸಣೋಜ, ಹೊನ್ನೋಜ, ಕೇದಾರೋಜ, ಕಾಲಿದಾಸಿ, ರಾಮೋಜ ಮುಂತಾದವರು ಕೆಲವರು. ಹೊಯ್ಸಳ ದೇವಾಲಯಗಳಲ್ಲಿ ಭದ್ರತೆಯ ದೃಷ್ಟಿ ಕಡಮೆ. ಅತಿಯಾದ ಅಲಂಕರಣ, ಕುಸುರಿಯ ಕೆಲಸದ ಪರಾಕಾಷ್ಠೆ ಇವನ್ನು ಇಲ್ಲಿ ಕಾಣ ಬಹುದು; ಆದರೆ ಈ ಮೂರ್ತಿಶಿಲ್ಪಗಳಲ್ಲಿ ಹಿಂದಿನವರ ಮೂರ್ತಿಗಳಲ್ಲಿದ್ದಂತಹ ಭಾವದ ಅಭಿವ್ಯಕ್ತಿ ಓಜಸ್ಸುಗಳನ್ನು ಕಾಣಲಾಗದು. ಒಂದು ರೀತಿಯಲ್ಲಿ ಹಿಂದಿನದು ಗಂಡು ಶೈಲಿ, ಇದು ಮೃದುವಾದ ಲಲಿತವಾದ ಹೆಣ್ಣು ಶೈಲಿ. ಹೊಯ್ಸಳ ರಾಜ್ಯದ ನಾಶ ದೊಂದಿಗೇ ಅವರ ವಾಸ್ತುಶೈಲಿಯೂ ನಿಂತುಹೋಗಿ, ಮುಂದಿನ ತಲೆಮಾರುಗಳಿಗೆ ಈ ಕಾಲದ ದೇವಾಲಯಗಳು ದೈವೀಪುರುಷರಿಂದ ನಿರ್ಮಾಣವಾಗಿರಬೇಕೆಂಬ ಭಾವನೆ ಬೆಳೆದು, ಅವುಗಳ ವಿಷಯದಲ್ಲಿ ಹಲವಾರು ದಂತಕಥೆಗಳು ಹುಟ್ಟಲವಕಾಶವಾಯಿತು.

## ವಿಜಯನಗರದ ಕಾಲ

೧೪ನೆಯ ಶತಮಾನದಲ್ಲಿ ಕರ್ನಾಟಕದ ಉತ್ತರಭಾಗವು ಮುಸ್ಲಿಮರ ಆಳ್ವಿಕೆಗೂ ದಕ್ಷಿಣಭಾಗವು ವಿಜಯನಗರದರಸರ ಆಳ್ವಿಕೆಗೂ ಒಳಗಾಗಿ ಈ ಎರಡು ಭಾಗಗಳಲ್ಲಿಯೂ ತೀರ ವಿಭಿನ್ನವಾದ ವಾಸ್ತುಶೈಲಿಗಳು ಬೆಳೆದುವು. ವಿಜಯನಗರದರಸರು ದ್ರಾವಿಡ ಶೈಲಿಯನ್ನು ಪುನರುಜ್ಜೀವನಗೊಳಿಸಿದರು. ಕಗ್ಗಲ್ಲಿನಲ್ಲಿ ಕಟ್ಟಿದ ಇವರ ಹಲವಾರು ದೇವಾಲಯಗಳು ಹಂಪೆ, ಲೇಪಾಕ್ಷಿ, ತಾಡಪತ್ರಿ, ಶೃಂಗೇರಿಗಳಲ್ಲಿವೆ. ಇವರು ಹೊಸ ದೇವಾಲಯಗಳನ್ನು ಕಟ್ಟಿಸುವುದಕ್ಕಿಂತ ಹೆಚ್ಚಾಗಿ ಪುರಾತನ ದೇವಾಲಯಗಳನ್ನು ಪುನರುಜ್ಜೀವನಗೊಳಿಸಿ, ಅವುಗಳನ್ನು ವಿಸ್ತರಿಸಿದರು. ತೀರ್ಥಮಂಟಪ, ಕಲ್ಯಾಣ ಮಂಟಪ, ಸಾವಿರಕಂಬದ ಮಂಟಪಗಳು, ಪ್ರವೇಶದ್ವಾರದ ಮಹಾಗೋಪುರಗಳು ಮೊದಲಾದುವು ಶ್ರೀರಂಗ, ಚಿದಂಬರ, ಕಾಂಚಿ ಮತ್ತು ಇತರ ಪ್ರಸಿದ್ಧವಾದ ಸ್ಥಳಗಳ ದೇವಾಲಯಗಳಲ್ಲಿ ಇವರಿಂದ ನಿರ್ಮಾಣವಾದುವು.

ವಿಜಯನಗರದ ಕಾಲದಲ್ಲಿ ಕಲೆಗೆ ಹೊಸ ತಿರುವು, ಹೊಸ ಉತ್ಸಾಹ ಮೂಡಿದವು. ದ್ರಾವಿಡರೀತಿಯ ದೇವಾಲಯಗಳು ಚಾಲುಕ್ಯ ಹೊಯ್ಸಳ ದೇವಾಲಯಗಳಂತೆ ಮೂರ್ತಿ ಶಿಲ್ಪಗಳಿಂದ ಅಲಂಕೃತಗೊಂಡವು. ಈ ಮೂರ್ತಿಗಳಲ್ಲಿ ಹೆಚ್ಚು ನಯನಾಜೂಕುಗಳಿಲ್ಲ ದಿದ್ದರೂ ಕೆಚ್ಚು ಕಸುವುಗಳೂ ಲವಲವಿಕೆಯೂ ಕಂಡುಬರುತ್ತವೆ. ಈ ಕಾಲದ ದೇವಾಲಯಗಳಲ್ಲಿನ ಕಂಬಗಳು ಸಂಕೀರ್ಣರೀತಿಯಲ್ಲಿ ವಿಕಾಸಗೊಂಡಿವೆ. ಸಾಲುಗಂಬ ಗಳಿಗೆ ಸೇರಿದಂತೆ ಕುದುರೆ ಯಾಳಿಗಳ ಬೃಹತ್ ಶಿಲ್ಪಗಳನ್ನು ಹಿಂಗಾಲಿನ ಮೇಲೆ ಚಿಮ್ಮಿ ನಿಂತಂತೆ ಬಿಡಿಸಿರುವುದು, ನಡುವಣ ದಪ್ಪಕಂಬದ ಸುತ್ತಲೂ ತೆಳುವಾದ ಕಿರು ಗಂಬಗಳನ್ನು ಜೋಡಿಸುವುದು, ದೊಡ್ಡದಾದ ಬಾಗುಲೋವೆಗೆ ಕಲ್ಲಿನ ಬಳೆಗಳನ್ನು ತೂಗುಬಿಡುವುದು—ಇವುಗಳ ವೈಶಿಷ್ಟ್ಯ. ಅನೇಕ ಕಂಬಗಳಮೇಲೆ ನಿಂತ ವಿಶಾಲ ಹಜಾರಗಳು ಮಂಟಪಗಳಂತೆ ತೆರೆದಿದ್ದು, ಗಾಳಿ ಬೆಳಕು ಧಾರಾಳವಾಗಿ ಒಳವುಗು

ವಂತಿರುತ್ತವೆ. ಹಂಪೆಯಲ್ಲಿ ಇಂತಹ ಅನೇಕ ದೇವಾಲಯಗಳ ಅವಶೇಷಗಳನ್ನು ನೋಡಬಹುದು. ಅವುಗಳಲ್ಲಿ ಪ್ರಾಚೀನವಾದುದು ವಿರೂಪಾಕ್ಷ ದೇವಾಲಯ. ಇದರ ಪ್ರಕಾರದಲ್ಲಿರುವ ಭುವನೇಶ್ವರೀ ದೇವಾಲಯದಲ್ಲಿ ಚಾಲುಕ್ಯ ಶೈಲಿಯ ಕಂಬಗಳೂ ಬಾಗಿಲುವಾಡಗಳೂ ಉಳಿದುಬಂದಿವೆ. ವಿಜಯನಗರದರಸರ ಕುಲದೈವವಾದ ವಿರೂಪಾಕ್ಷನ ದೇವಾಲಯವನ್ನು ಒಂದನೆಯ ಹರಿಹರನ ಕಾಲದಲ್ಲಿಯೇ ವಿಸ್ತರಿಸಿದ್ದು, ಕಾಲಕಾಲಕ್ಕೆ ಅದಕ್ಕೆ ಬೇರೆ ಬೇರೆ ಭಾಗಗಳನ್ನು ಜೋಡಿಸಲಾಗಿದೆ. ಕ್ರಿ.ಶ. ೧೫೦೯–೧೦ರಲ್ಲಿ ಕೃಷ್ಣದೇವರಾಯನು ತನ್ನ ಕಿರೀಟಧಾರಣಾಮಹೋತ್ಸವದ ಅಂಗವಾಗಿ ಕಟ್ಟಿಸಿದ ಭವ್ಯವಾದ ರಂಗಮಂಟಪ ವಿಶಾಲವಾದುದಾಗಿದ್ದು, ಚಾವಣಿಯಲ್ಲಿಯೂ ತೊಲೆಗಳ ಮೇಲೂ ಗಿರಿಜಾಕಲ್ಯಾಣ ಮೊದಲಾದ ದೃಶ್ಯಗಳ ಸುಂದರ ಭಿತ್ತಿಚಿತ್ರಗಳಿದ್ದುವು. ಇವುಗಳಿಗೆ ನಂತರದ ಕಾಲದಲ್ಲಿ ಪುನಃ ಬಣ್ಣಹಾಕಿರುವುದರಿಂದ, ಅವುಗಳ ಮೂಲಸ್ವರೂಪದ ಸ್ಪಷ್ಟ ಅರಿವು ಸಾಧ್ಯವಾಗದು. ಈ ದೇವಾಲಯದ ಪ್ರಾಕಾರದ ಮಹಾದ್ವಾರದ ಮೇಲೆ ಭವ್ಯವಾದ ಬೃಹದ್ಗೋಪುರವಿದೆ. ಇದು ಕರ್ಣಾಟಕದ ದೊಡ್ಡ ಗೋಪುರಗಳಲ್ಲೊಂದು.

ಕೃಷ್ಣದೇವರಾಯ ಮತ್ತು ಅಚ್ಯುತರಾಯರ ಕಾಲಗಳಲ್ಲಿ ವಿಜಯನಗರ ಸುಖಸಮೃದ್ಧಿಗಳಿಂದ ತುಂಬಿತ್ತು. ಅಲ್ಲಿ ಈಗ ಉಳಿದುಬಂದಿರುವ ಪ್ರಸಿದ್ಧವಾದ ವಿಜಯವಿಟ್ಠಲಸ್ವಾಮಿ ದೇವಾಲಯ, ಕೃಷ್ಣರಾಯನ ಗುಡಿ, ಅಚ್ಯುತರಾಯನ ಗುಡಿ, ಹಜಾರರಾಮಸ್ವಾಮಿ ದೇವಾಲಯ ಮೊದಲಾದುವು ಅದಕ್ಕೆ ಸಾಕ್ಷಿ. ವಿಜಯ ವಿಟ್ಠಲಸ್ವಾಮಿ ದೇವಾಲಯ ಕಲಾತ್ಮಕವಾದ್ದು. ಇದರ ಫಲಪೂಜಾ ಮತ್ತು ಕಲ್ಯಾಣ ಮಂಟಪಗಳಲ್ಲಿ ಕಂಡುಬರುವ ಸಂಕೀರ್ಣಸ್ತಂಭಗಳ ಸೂಕ್ಷ್ಮವಾದ ಕೆತ್ತನೆ ವಿಜಯನಗರ ಶೈಲಿಯ ವೈಶಿಷ್ಟ್ಯ. ಸಾಲುಗಂಬಗಳಲ್ಲಿ ಬಿಡಿಸಿರುವ ಪ್ರಾಣಿ ಪಕ್ಷಿಗಳು, ಬಳ್ಳಿಸುರುಳಿಗಳು, ದೇವಾನುದೇವತೆಗಳ ತೆಳುವುಬ್ಬು ಮೂರ್ತಿಗಳು, ಕಂಬಗಳಿಗೆ ಹೊಂದಿಕೊಂಡು ಹಿಂಗಾಲುಗಳ ಮೇಲೆ ಚಿಮ್ಮಿ ನಿಂತಿರುವ ಯಾಳಿಕುದುರೆಗಳ ಸಾಲು, ಕಂಬಗಳ ಘನಾಕೃತಿ ಮುಖಗಳ ಮೇಲೆ ಉಬ್ಬಿಸಿ ಬಿಡಿಸಿರುವ ದಶಾವತಾರಮೂರ್ತಿಗಳು, ನೃತ್ಯಭಂಗಿಗಳು ಮುಂತಾದವು ದೇವಾಲಯದ ಸೌಂದರ್ಯವನ್ನು ಶ್ರೀಮಂತಗೊಳಿಸಿವೆ. ಈ ದೇವಾಲಯದ ಮುಂದೆ ಒಂದೇ ಕಲ್ಲಿನಲ್ಲಿ ಕಂಡರಿಸಿ ನಿಲ್ಲಿಸಿರುವ ರಥದಮೇಲೂ ಇದೇ ಬಗೆಯ ಶಿಲ್ಪ ತುಂಬಿದ್ದು ಸುಂದರವಾಗಿದೆ. ಕೃಷ್ಣಸ್ವಾಮಿ ದೇವಾಲಯ ಮತ್ತು ಅಚ್ಯುತರಾಯ ದೇವಾಲಯಗಳು ಒಂದೇ ರೀತಿಯಲ್ಲಿ ಕಟ್ಟಿರುವ ದ್ರಾವಿಡರೀತಿಯ ದೊಡ್ಡ ಗುಡಿಗಳು. ಇಲ್ಲಿ ದೀರ್ಘಚತುರಸ್ರಾಕಾರದ ತಲವಿನ್ಯಾಸವಿದೆ. ಇವುಗಳಲ್ಲಿಯೂ ಕಲ್ಯಾಣ ಮಂಟಪಗಳು, ಸಂಕೀರ್ಣ ಸ್ತಂಭಗಳು, ಪೌರಾಣಿಕ ಕಥೆಗಳನ್ನು ಚಿತ್ರಿಸುವ ಶಿಲ್ಪಗಳು ತುಂಬಿವೆ. ಇವುಗಳ ಮುಖ್ಯ ದ್ವಾರಗಳ ದ್ವಾರಬಂಧಗಳು ಸುಂದರವಾದ ಗಂಗಾಯಮುನೆಯರ ಮೂರ್ತಿಗಳು, ಬಳ್ಳಿಸುರುಳಿಗಳು ಮತ್ತು ಇತರ ಶಿಲ್ಪಗಳಿಂದ ಕೂಡಿ ಅತ್ಯಂತ ಆಕರ್ಷಕವಾಗಿವೆ. ಕೃಷ್ಣದೇವರಾಯನ ದಿಗ್ವಿಜಯದ ನೆನಪಿಗಾಗಿ ನಿರ್ಮಾಣಗೊಂಡ ಹಜಾರರಾಮಸ್ವಾಮಿ ದೇವಾಲಯ ಅರಮನೆಯ ಆವರಣದಲ್ಲಿದ್ದು, ಮೇಲೆ ಹೇಳಿರುವ

ದೇವಾಲಯಗಳಿಗಿಂತ ನೋಡಲು ಚಿಕ್ಕದಾಗಿದ್ದರೂ ಹೊರಗೋಡೆಯ ತುಂಬ ರಾಮಾಯಣ ಭಾಗವತಗಳ ಶಿಲ್ಪಸಾಲುಗಳು ತುಂಬಿ ಆಕರ್ಷಕವಾಗಿದೆ. ಈ ದೇವಾಲಯದಲ್ಲಿ ಬಳಪದಕಲ್ಲಿನ ಕಂಬಗಳನ್ನುಪಯೋಗಿಸಿರುವುದೊಂದು ವಿಶೇಷ.

ವಿಜಯದಶಮಿಯ ದಿನ ತನ್ನ ಸೈನ್ಯವನ್ನು ವೀಕ್ಷಿಸುವುದಕ್ಕಾಗಿ ಕೃಷ್ಣದೇವರಾಯನ ಒಡ್ಡೋಲಗಕ್ಕಾಗಿ ನಿರ್ಮಿಸಿದ್ದ ಉನ್ನತವಾದ ಮಾನವಮಿ ದಿಬ್ಬ ಹಂಪೆಯಲ್ಲಿನ ಅಪರೂಪವಾದ ವಾಸ್ತುಕೃತಿ. ಇದರ ಮುಖಗಳ ಮೇಲೆ ಸಾಲುಸಾಲಾಗಿ ಉಬ್ಬು ಚಿತ್ರಗಳಲ್ಲಿ ಕಂಡರಿಸಿರುವ ಬಗೆಬಗೆಯ ನೃತ್ಯಭಂಗಿಗಳು, ಬೇಟೆಯ ದೃಶ್ಯಗಳು, ಆನೆ ಕುದುರೆಗಳ ಮೆರವಣಿಗೆಗಳು, ಹಲವು ಬಗೆಯ ಪ್ರಾಣಿ ಪಕ್ಷಿಗಳು ತುಂಬಿಕೊಂಡಿವೆ. ಇಲ್ಲಿನ ಕೋಲಾಟ, ವಾದ್ಯಮೇಳ, ರಂಗಣಗುಣಿತಗಳಲ್ಲಿ ಚಲನೆಯಿದೆ, ಸತ್ತ್ವವಿದೆ. ವಿಜಯನಗರ ಶಿಲ್ಪದ ಶ್ರೇಷ್ಠಮಾದರಿಗಳಿವು. ಹೀಗೆಯೇ ಹಂಪೆಯಲ್ಲಿರುವ ಅಖಂಡ ಶಿಲೆಯ ಬೃಹನ್ಮೂರ್ತಿಗಳಾದ ಕಡಲೆಕಾಳು ಗಣಪತಿ, ಸಾಸಿವೆಕಾಳು ಗಣಪತಿ, ನರಸಿಂಹ ಮತ್ತು ಲಿಂಗಗಳು ವಿಜಯನಗರದರಸರ ವೈಭವ ಸಂಕೇತಗಳು.

ಅಚ್ಯುತರಾಯನ ಕಾಲದಲ್ಲಿ ವೀರಣ್ಣನೆಂಬವನು ಕಟ್ಟಿಸಿದ ಲೇಪಾಕ್ಷಿಯ ವೀರಭದ್ರ ದೇವಾಲಯ ಮತ್ತು ತಾಡಪತ್ರಿಯಲ್ಲಿ ಚಿಂತಲರಾಯನು ಕಟ್ಟಿಸಿದ ಶಿವಾಲಯ ಇವು ವಿಜಯನಗರ ಕಾಲದ ಶಿಲ್ಪ ಮತ್ತು ಚಿತ್ರಕಲೆಗಳಿಗೆ ಪ್ರಸಿದ್ಧವಾಗಿವೆ.

ಶೃಂಗೇರಿಯಲ್ಲಿ ಅಪರೂಪ ಶೈಲಿಯಲ್ಲಿ ಕಟ್ಟಿರುವ ವಿದ್ಯಾಶಂಕರ ದೇವಾಲಯ ವಿಜಯನಗರಕಾಲದ ಒಂದು ಸುಂದರ ದೇವಾಲಯ. ೧೪ನೆಯ ಶತಮಾನಕ್ಕೆ ಸೇರಿದ ಈ ದೇವಾಲಯದಲ್ಲಿ ದ್ರಾವಿಡ, ಹೊಯ್ಸಳ ಮತ್ತು ಇತರ ಶೈಲಿಗಳ ಸಮ್ಮಿಳನವನ್ನು ಕಾಣಬಹುದು. ಎತ್ತರವಾದ ಕಿರುಜಗತಿಯ ಮೇಲೆ ನಿರ್ಮಿತವಾದ ಈ ಕಗ್ಗಲ್ಲಿನ ದೇವಾಲಯದ ಹೊರಗೋಡೆಗಳ ಮೇಲೆ ಸ್ವಾರಸ್ಯವಾದ ಮೂರ್ತಿಶಿಲ್ಪಗಳ ಅಲಂಕರಣವಿದೆ. ದೇವಾಲಯದ ಹಿಂಭಾಗ ಮುಂಭಾಗಗಳೆರಡೂ ಅರ್ಧವೃತ್ತಾಕಾರದಲ್ಲಿದ್ದು, ಗೋಪುರವೂ ವೃತ್ತಾಕಾರವಾಗಿ ಮೆಟ್ಟಿಲು ಮೆಟ್ಟಿಲಾಗಿ ಮೇಲೆದ್ದಿದೆ.

## ಬಹಮನಿ ಸುಲ್ತಾನರ ಕಾಲ

ಕೃಷ್ಣಾನದಿಯ ಉತ್ತರಕ್ಕೆ ಸ್ವತಂತ್ರವಾದ ಬಹಮನಿ ರಾಜ್ಯ ಸ್ಥಾಪನೆಯಾದ ಮೇಲೆ, ಕರ್ನಾಟಕದ ಈ ಭಾಗದಲ್ಲಿ ವಾಸ್ತುರೀತಿಯ ಸಂಪೂರ್ಣ ಬದಲಾವಣೆಯಾಯಿತು. ಹಿಂದು ಧಾರ್ಮಿಕ ಶೈಲಿ ನಿಂತುಹೋಗಿ ಇಸ್ಲಾಂ ಧರ್ಮದಿಂದ ಪ್ರಚೋದಿತವಾದ ಹಿಂದು-ಮುಸ್ಲಿಂ ಶೈಲಿ ವ್ಯಾಪಕವಾಗಿ ಹರಡಿತು. ಮುಖ್ಯವಾಗಿ ಗುಲ್ಬರ್ಗ, ಬಿದರೆ ಬಿಜಾಪುರಗಳಲ್ಲಿ ಈ ಶೈಲಿಯ ಮಹತ್ತರವಾದ ಬೆಳವಣಿಗೆಯನ್ನು ನೋಡಬಹುದು. ಬಹಮನಿ ಅರಸರಿಗೆ ಗುಲ್ಬರ್ಗ ಮೊದಲ ರಾಜಧಾನಿ. ಆದ್ದರಿಂದ ಅವರ ಮೊದಲ ಕಟ್ಟಡಗಳು ಇಲ್ಲಿವೆ. ಫಿರೋಸ್ ಷಾ ಬಹಮನಿಯ ಕಾಲದಲ್ಲಿ ಕ್ರಿ.ಶ. ೧೩೬೭ರಲ್ಲಿ ಗುಲ್ಬರ್ಗದ ಕೋಟೆಯೊಳಗೆ ಇರಾನಿನಿಂದ ಬಂದ ರಫಿ ಎಂಬ ಶಿಲ್ಪಿ

ನಿರ್ಮಿಸಿದ ದೊಡ್ಡ ಮಸೀದಿಯು ಸ್ಪೇನಿನ ಕಾರ್ಡೋವದ ಪ್ರಸಿದ್ಧ ಮಸೀದಿಯ ಮಾದರಿಯಲ್ಲಿದ್ದು, ವಿಶಾಲವಾದ ಕಟ್ಟಡವು ಪೂರ್ಣವಾಗಿ ಗುಮ್ಮಟಗಳಿಂದ ಕೂಡಿದ ಛಾವಣಿಯಿಂದಾಚ್ಛಾದಿತವಾಗಿದೆ. ಸ್ಥಳೀಯ ವಾಸ್ತುಕಲೆಯ ಮೇಲಿನ ಪಾರಸೀ ವಾಸ್ತುರೀತಿಯ ಪ್ರಭಾವವನ್ನು ಇದರಲ್ಲಿ ನೋಡಬಹುದು. ಬಹಮನಿ ಸುಲ್ತಾನರ ಆರಂಭಿಕ ವಾಸ್ತುಶಿಲ್ಪಗಳಲ್ಲಿ ತೊಘಲಕ್ ವಾಸ್ತುಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಅಲ್ಲಾಉದ್ದೀನ್ ಹಸನ್ ಬಹಮನಿಯ ಮತ್ತು ಅವನ ಮಗ ಒಂದನೆಯ ಮುಹಮದ್‌ಷಾನ ಸಮಾಧಿ ಕಟ್ಟಡಗಳಲ್ಲಿ ಈ ಶೈಲಿಯನ್ನು ಗುರುತಿಸಬಹುದು. ೪' ಎತ್ತರದ ಜಗತಿಯ ಮೇಲೆ ೪೦' ಚೌಕದ ಈ ಕಟ್ಟಡದ ಗೋಡೆಗಳು ಮೇಲೆ ಹೋದಂತೆ ಒಳಬಾಗುವಂತಿದ್ದು, ಗುಮ್ಮಟ ತಗ್ಗಾಗಿದೆ. ಆದರೆ ಹೆಚ್ಚು ಕಾಲ ಈ ಶೈಲಿ ಉಳಿಯಲಿಲ್ಲ. ಬಹಮನಿ ಅರಸರು ಉತ್ತರ ಭಾರತದ ಶಿಲ್ಪಿಗಳಿಗಿಂತ ಪರ್ಷಿಯಾ ಮುಂತಾದ ದೇಶಗಳಿಂದ ಶಿಲ್ಪಿಗಳನ್ನು ಕರಸಿದುದರಿಂದ ಪರ್ಷಿಯನ್ ಶೈಲಿಯ ಪ್ರಭಾವ ಮುಂದೆ ಬೆಳೆದು, ಅದರೊಂದಿಗೆ ಸ್ಥಳೀಯ ಹಿಂದು ಶೈಲಿಯೂ ಕ್ರಮೇಣ ಹೆಚ್ಚು ಹೆಚ್ಚು ವ್ಯಾಪಕವಾಗಿ ಮಿಲನವಾಗಿ ನೂತನ ಬಹಮನಿ ಶೈಲಿಯೊಂದು ಬೆಳೆದು ಬಂದಿತು.

ಗುಲ್ಬರ್ಗದಿಂದ ಬಹಮನಿ ಅರಸರು ಬಿದರೆಗೆ ರಾಜಧಾನಿಯನ್ನು ಬದಲಾಯಿಸಿದ ಮೇಲೆ ಅಲ್ಲಿ ಅನೇಕ ಭವ್ಯವಾದ ಕಟ್ಟಡಗಳು ನಿರ್ಮಾಣವಾದುವು. ಅವುಗಳಲ್ಲಿ ಅಹಮದ್‌ಷಾ ವಲಿಯು ಕಟ್ಟಿಸಿದ ಅರಮನೆ ಉನ್ನತವಾದ ಜಗತಿ, ಎತ್ತರವಾದ ಕಮಾನುಗಳು, ನಡುವೆ ವಿಸ್ತಾರವಾದ ಹಜಾರ, ಹಿಂದೆ ಸುಲ್ತಾನನ ವಾಸದ ಕೊಠಡಿ, ಅದರ ಮೇಲೆ ಎತ್ತರವಾದ ಭವ್ಯ ಗುಮ್ಮಟವಿದ್ದು, ಸಭಾಂಗಣದ ಗೋಡೆಗಳಿಗೆ ಬಗೆಬಗೆಯ ಬಣ್ಣಗಳ, ಆಕಾರಗಳ ಸೂಡು ಚಿತ್ರಬಿಲ್ಲೆಗಳನ್ನು ಜೋಡಿಸಿದ್ದು ತನ್ನ ಸೌಂದರ್ಯಕ್ಕೆ ಹೆಸರು ಪಡೆದಿತ್ತು. ಇದರಂತೆ ಅಲ್ಲಾಉದ್ದೀನನ ಗೋರಿ ಮತ್ತು ಹಜರತ್ ಖಲೀಲುಲ್ಲಾನ ಗೋರಿಗಳು ಬಹಮನಿ ಸುಲ್ತಾನರ ವಾಸ್ತುಶಿಲ್ಪದ ಸುಂದರವಾದ ಉದಾಹರಣೆಗಳು. ಇಲ್ಲಿಯ ಮನೋಹರವಾದ ರೀತಿಯ ಸೂಡುಚಿತ್ರಬಿಲ್ಲೆಗಳೂ ಕೊರೆದು ಬಿಡಿಸಿದ ಸುಂದರ ಪಟ್ಟಿಕೆಗಳೂ ಅಳತೆಯಂತು ನಿರ್ಮಿಸಿರುವ ಕಮಾನುಗಳೂ ಬಹಮನಿ ಸುಲ್ತಾನರ ಉನ್ನತ ಮಟ್ಟದ ಕಲಾಭಿಮಾನಕ್ಕೆ ಉದಾಹರಣೆಗಳು. ಪರ್ಷಿಯನ್ ರೀತಿಯನ್ನನುಸರಿಸಿರುವುದಕ್ಕೆ ಪ್ರಸಿದ್ಧವಾದ ಮುಹಮದ್ ಗವಾನನ ಮದರಸಾ ಒಂದು ಉತ್ತಮ ಉದಾಹರಣೆ. ಈ ಅಪರೂಪದ ಕಟ್ಟಡ ಪರ್ಷಿಯಾ ದೇಶದ ಕಾಲೇಜಿನ ಕಟ್ಟಡದ ಮಾದರಿಯನ್ನನುಸರಿಸಿ ಕಟ್ಟಿದ್ದಾಗಿದೆ. ನಡುವೆ ಬಯಲು ಅಂಗಳ, ಸುತ್ತಲೂ ಮೂರು ಅಂತಸ್ತುಗಳಲ್ಲಿ ತರಗತಿಯ ಕೋಣೆಗಳು, ಪ್ರಾರ್ಥನಾಮಂದಿರ, ಪುಸ್ತಕ ಭಂಡಾರ, ಪ್ರಾಧ್ಯಾಪಕರ ಕೋಣೆಗಳು, ವಿದ್ಯಾರ್ಥಿನಿಲಯಗಳು ಇವುಗಳಿದ್ದ, ಮುಂದೆ ಎರಡು ಕಡೆಯೂ ಉನ್ನತವಾದ ಮಿನಾರುಗಳಿದ್ದ ಈ ಮದರಸದ ಕೆಲಭಾಗ ಈಗ ಬಿದ್ದುಹೋಗಿದೆ. ಬಹಮನಿ ಕಟ್ಟಡಗಳಲ್ಲಿ ಸ್ಥೂಲವಾದ ರಚನೆ, ವಿವಿಧ ರೀತಿಯ ಕಮಾನುಗಳು, ಗೋಲದ ಮುಕ್ಕಾಲು ಭಾಗವನ್ನಿಟ್ಟಿರುವಂತಿರುವ ಗುಮ್ಮಟಗಳು, ಬಣ್ಣಬಣ್ಣದ ಚಿತ್ರಕೆಲಸಗಳು ಮತ್ತು ಹಿಂದು

ರೀತಿಯ ಅಲಂಕರಣಗಳು—ಇವನ್ನು ಕಾಣಬಹುದು.

ಬಹಮನಿ ಸುಲ್ತಾನರ ನಂತರ ಆಳಿದ ಬರೀದ್ ಷಹೀ ಅರಸರು ಕಟ್ಟಿಸಿದ ಕಟ್ಟಡಗಳಲ್ಲಿ ಹಲವು ಬದಲಾವಣೆಗಳನ್ನು ಗಮನಿಸಬಹುದು. ಅಲಿ ಬರೀದಿ ಕಟ್ಟಿಸಿದ ಬಣ್ಣಬಣ್ಣದ ಬಿಲ್ಲೆಗಳಿಂದಲಂಕೃತವಾಗಿದ್ದ ರಂಗೀನ್ ಮಹಲ್ ಅರಮನೆಯಲ್ಲಿ ಸುಂದರವಾಗಿಯೂ ಸೂಕ್ಷ್ಮವಾಗಿಯೂ ಕೆತ್ತಿರುವ ಮರದ ಕಂಬಗಳ ಮತ್ತು ಮುತ್ತಿನ ಚಿಪ್ಪಿನ ಕೆಲಸ ತುಂಬ ನವುರಾಗಿದೆ. ನಾಲ್ಕು ಕಡೆಯೂ ತೆರೆದ ಕಮಾನುಗಳಿಂದ ಕೂಡಿದ ಮಂಟಪದಂತಿರುವ ಅವನ ಗೋರಿಯಲ್ಲಿ ಹಿಂದು ಶೈಲಿಯ ಅನುಕರಣೆ ಹೆಚ್ಚಾಗಿದೆ. ಇವರ ಕಟ್ಟಡಗಳಲ್ಲಿ ಬಹಮನಿ ಸುಲ್ತಾನರ ಕಟ್ಟಡಗಳಲ್ಲಿರುವ ದಡೂತಿತನದ ಭಾವನೆ ಬರುವುದಿಲ್ಲ, ವಿಸ್ತಾರವಾಗಲಿ ಭವ್ಯತೆಯಾಗಲಿ ಇಲ್ಲ. ಅಲಂಕರಣ ಹೆಚ್ಚಾಗಿದ್ದು, ಭದ್ರತೆಯ ಅಭಾವವಿದೆ.

ಬಹಮನಿ ಸುಲ್ತಾನರ ಬಲ ಕುಗ್ಗುತ್ತಿದ್ದಂತೆಯೇ ಬಿಜಾಪುರದ ಅದಿಲ್‌ಷಾಹಿ ಮನೆತನವು ಪ್ರಬಲವಾಗಿ, ಕಡೆಗೆ ಕರ್ನಾಟಕದ ಉತ್ತರ ಭಾಗವನ್ನೆಲ್ಲ ಅದು ಆಕ್ರಮಿಸಿತು. ಇವರ ಕಾಲದಲ್ಲಿ ಬಿಜಾಪುರದಲ್ಲಿ ಅನೇಕ ಮಹತ್ತರವಾದ ಕಟ್ಟಡಗಳು ನಿರ್ಮಾಣವಾದುವು. ಇವುಗಳಲ್ಲಿ ಜಮಿ ಮಸೀದಿ ಒಂದು ವಿಶಿಷ್ಟವಾದ ಕಟ್ಟಡ. ಮೇಲುಗಡೆ ದೊಡ್ಡ ಗುಮ್ಮಟವಿರುವ ಇದರ ಹಜಾರಗಳು ತುಂಬ ಸೊಗಸಾಗಿವೆ. ಮಧ್ಯದ ಅಂಕಣದಲ್ಲಿ ಚಿತ್ರಾಲಂಕರಣವಿದ್ದು, ಉಳಿದಂತೆ ಗೋಡೆಗಳು ನುಣುಪಾಗಿ ಹೊಳೆಯುವಂತಿವೆ. ಇಲ್ಲಿನ ಕಟ್ಟಡಗಳಲ್ಲೆಲ್ಲ ಅತ್ಯಂತ ಸುಂದರವಾದುದು ಇಬ್ರಾಹಿಂರೋಸ. ಎರಡನೇ ಇಬ್ರಾಹಿಮನು ತನ್ನ ರಾಣಿ ತಾಜ್‌ಸುಲ್ತಾನಳಿಗಾಗಿ ಇಲ್ಲಿ ಒಂದು ಗೋರಿಯನ್ನೂ ಅದರ ಎದುರಿಗೆ ಒಂದು ಮಸೀದಿಯನ್ನೂ ಕಟ್ಟಿಸಿದನು. ಆದರೆ ಅವನೇ ಮೊದಲು ಮೃತನಾದುದರಿಂದ ಅದು ಅವನ ಗೋರಿಯಾಯಿತು. ಈ ಕಟ್ಟಡದ ಅಲಂಕರಣ ಅತ್ಯುತ್ತಮವಾದುದೆಂದು ಕಸಿನ್ಸ್ ತಿಳಿಸಿದ್ದಾನೆ. ಇನ್ನು ಇಬ್ರಾಹಿಮನ ಮಗ ಮಹಮ್ಮದನು ಕಟ್ಟಿಸಿದ ಗೋಲಗುಮ್ಮಟ ಅತಿ ದೊಡ್ಡ ಹಜಾರದಿಂದ, ಉನ್ನತವೂ ವಿಸ್ತಾರವೂ ಆದ ಗುಮ್ಮಟದಿಂದ, ಎಲ್ಲಕ್ಕಿಂತ ಹೆಚ್ಚಾಗಿ ಪಿಸುಗುಟ್ಟಿದರೂ ಪ್ರತಿಸ್ಪಂದಿಸುವ ಆಶ್ಚರ್ಯಕರವಾದ ಒಳಕೈಸಾಲೆಯಿಂದ, ಪ್ರಪಂಚದಲ್ಲಿಯೇ ಒಂದು ಅದ್ಭುತ ಕೌಶಲವೆನಿಸಿದೆ. ಗೋಲಗುಂಬಸ್ ಇಬ್ರಾಹಿಂರೋಸಕ್ಕೆ ಪ್ರತಿಯಾಗಿ ನಿಲ್ಲುತ್ತದೆ. "ಒಂದು ಕಲ್ಪನೆಯ ಬೃಹತ್ ಪೌರುಷರೂಪವಾದರೆ, ಇನ್ನೊಂದು ಸುಕೋಮಲವಾದ ಹೆಣ್ತನದ ಪ್ರತಿಬಿಂಬ" ಎಂದು ಕಸಿನ್ಸ್ ಇವುಗಳನ್ನು ಹೊಗಳಿದ್ದಾನೆ. ಇವಲ್ಲದೆ ಬಿಜಾಪುರದಲ್ಲಿ ಅರಮನೆಗಳು, ಮಸೀದಿಗಳು, ಗೋರಿಗಳು, ಕೋಟೆಕೊತ್ತಲಗಳು, ಬುರುಜುಗಳು ನೂರಾರು ಸಂಖ್ಯೆಯಲ್ಲಿ ತುಂಬಿಹೋಗಿದ್ದು, ಆ ಕಾಲದ ವಾಸ್ತುಶೈಲಿಗಳ ವಿವಿಧ ಹಂತಗಳಿಗೆ ಮತ್ತು ಬಿಜಾಪುರ ಸುಲ್ತಾನರ ಅಭಿರುಚಿಗೆ ಸಾಕ್ಷಿಯಾಗಿ ನಿಂತಿವೆ. ಬಿಜಾಪುರದಲ್ಲಿ ಮಾತ್ರವಲ್ಲದೆ ಕಡೆಚೂರಿನಲ್ಲಿ, ದೋರನಹಳ್ಳಿಯಲ್ಲಿ, ಮತ್ತಿತರ ಕಡೆಗಳಲ್ಲಿ ಇವರ ಹಲವಾರು ಕಟ್ಟಡಗಳನ್ನು ಕಾಣಬಹುದು.

ಈ ಭಾಗಗಳಲ್ಲಿ ಆರಂಭವಾಗಿ ಬೆಳೆದು ಬಂದ ಮುಸ್ಲಿಂ ಶೈಲಿಯ ಕಟ್ಟಡಗಳಲ್ಲಿ ಮುಖ್ಯವಾಗಿ ಹಿಂದು ಶೈಲಿಯಲ್ಲಿರುವಂತೆ ಕಂಬಗಳು ಮತ್ತು ತೊಲೆಗಳನ್ನು ಉಪಯೋಗಿಸದೆ ವಿಶಾಲವಾದ ಹಜಾರಗಳಿಗೆ, ಕಮಾನುಗಳಿಗೆ ಪ್ರಾಮುಖ್ಯ ಕೊಟ್ಟಿರುವುದನ್ನು ಕಾಣಬಹುದು. ದೂರದ ಪರ್ಷಿಯನ್ ಮತ್ತು ಟರ್ಕಿ ಶೈಲಿಗಳೊಂದಿಗೆ ಸ್ಥಳೀಯ ಹಿಂದು ಅಲಂಕರಣ ಪದ್ಧತಿಯೂ ಸೇರಿಕೊಂಡು ದಖನ್ನಿನ ವಿನೂತನ ಮುಸ್ಲಿಂ ಶೈಲಿ ಹೊಮ್ಮಿತು.

ಬಿಜಾಪುರದ ಸುಲ್ತಾನರನ್ನು ಮೊಗಲರು ಸೋಲಿಸಿದ ಮೇಲೆ ವೈಭವದ ಕಟ್ಟಡಗಳ ನಿರ್ಮಾಣ ಕೊನೆಗೊಂಡಿತು. ಇಲ್ಲಿ ಅಧಿಕಾರ ನಡಸಿದ ಮೊಗಲ್ ಸರದಾರರು ಕೆಲವು ಕಟ್ಟಡಗಳನ್ನು ಕಟ್ಟಿಸಿದರೂ ಅವು ಕಲೆಯ ದೃಷ್ಟಿಯಿಂದ ಯಾವ ಪ್ರಾಮುಖ್ಯವನ್ನೂ ಪಡೆದಿಲ್ಲ. ಮೊಗಲಾಯರ ಕಾಲದ ಕಟ್ಟಡಗಳಲ್ಲಿ ಸಿರಾದಲ್ಲಿರುವ ಜುಮ್ಮಾಮಸೀದಿ, ಮಲ್ಲಿಕ್‌ರಿಹಾನ್ ದರ್ಗಾಗಳನ್ನು ಹೆಸರಿಸಬಹುದು. ಇದರೊಂದಿಗೆ ದಕ್ಷಿಣ ಕರ್ನಾಟಕದಲ್ಲಿ, ಹೈದರ್ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯಲ್ಲಿ ಶ್ರೀರಂಗಪಟ್ಟಣ, ಬೆಂಗಳೂರು, ಚಿತ್ರದುರ್ಗ, ನಗರ ಮೊದಲಾದ ಕಡೆ ಅವರು ಕಟ್ಟಿಸಿದ ಮುಸ್ಲಿಂ ಶೈಲಿಯ ಕಟ್ಟಡಗಳು ಗಮನಾರ್ಹವಾಗಿವೆ. ಮುಖ್ಯವಾಗಿ ಶ್ರೀರಂಗಪಟ್ಟಣದಲ್ಲಿರುವ ದರ್ಯಾದೌಲತ್ ಅರಮನೆ ಪರ್ಷಿಯನ್ ಅರಮನೆಗಳ ಮಾದರಿಯನ್ನನುಸರಿಸಿ ಕಟ್ಟಿರುವ ಕಟ್ಟಡ. ಎತ್ತರವಾದ ಜಗತಿಯ ಮೇಲೆ ದಪ್ಪ ಅಲಂಕೃತ ಮರದ ಕಂಬಗಳಿಂದ ಕೂಡಿದ ದೊಡ್ಡ ಸೆಜ್ಜೆಯಿದ್ದು ಅದರ ಇಕ್ಕೆಲಗಳಲ್ಲಿಯೂ ಕೋಣೆಗಳಿವೆ. ಇಲ್ಲಿಯ ವೈಶಿಷ್ಟ್ಯವೆಂದರೆ ಗೋಡೆ ಚಾವಣಿಗಳ ಮೇಲೆಲ್ಲ ಚಿತ್ರಗಳು ತುಂಬಿರುವುದು. ಅವುಗಳಲ್ಲಿ ಯುದ್ಧಚಿತ್ರಗಳೂ ಟಿಪ್ಪುವಿನ ಕಾಲದಲ್ಲಿ ಭಾರತದಲ್ಲಿದ್ದ ನಾನಾ ರಾಜರುಗಳ ವ್ಯಕ್ತಿಚಿತ್ರಣಗಳೂ ಚಿನ್ನದ ರೇಕುಗಳಿಂದ ನಿರ್ಮಿಸಿರುವ ಬಳ್ಳಿಗಿಡಗಳ ಚಿತ್ರಗಳೂ ಆಕರ್ಷಕವಾಗಿವೆ. ಇಲ್ಲಿನ ಮತ್ತೊಂದು ಗಂಭೀರವಾದ ಕಟ್ಟಡ ಗುಂಬಸ್. ಹೈದರನಿಗಾಗಿ ಕಟ್ಟಿಸಿದ ಈ ಗೋರಿಗೆ ಕರಿಯ ಶಿಲೆಯ ಕಂಬಗಳೂ ಬಾಗಿಲುವಾಡಗಳೂ ಇದ್ದು, ಉನ್ನತವಾದ ಗುಮ್ಮಟವಿದೆ. ಬೆಂಗಳೂರಿನಲ್ಲಿರುವ ಟಿಪ್ಪುವಿನ ಅರಮನೆಯೂ ತೆರೆದ ಸೆಜ್ಜೆಯಿಂದ ಕೂಡಿದ ಆ ಕಾಲದ ಒಂದು ಸುಂದರ ಕಟ್ಟಡ.

## ಕೆಳದಿ ಮೈಸೂರರಸರ ಕಾಲ

ವಿಜಯನಗರದ ಪತನವಾದ ಮೇಲೆ ಹಿಂದು ಶೈಲಿಯ ವಾಸ್ತುಶಿಲ್ಪ ರಚನೆ ಸ್ವಲ್ಪ ಮಟ್ಟಿಗೆ ಕುಂಠಿತವಾಯಿತಾದರೂ ಹಲವು ಪಾಳೆಯಪಟ್ಟುಗಳು ತಮ್ಮ ತಮ್ಮ ಪರಿಮಿತಿಯಲ್ಲಿ ಕಲೆಗೆ ಪ್ರೋತ್ಸಾಹಕೊಟ್ಟವು. ಅವುಗಳ ಒಡೆಯರಲ್ಲಿ ಮುಖ್ಯರಾದವರು ಕೆಳದಿಯ ನಾಯಕರು. ವಿಜಯನಗರ ಶೈಲಿಯಿಂದ ಸ್ಫೂರ್ತಿ ಪಡೆದರೂ ಇವರು ತಮ್ಮ ವಿಶಿಷ್ಟ ಶೈಲಿಯನ್ನು ರೂಪಿಸಿಕೊಂಡರು. ಗಟ್ಟಿಕಲ್ಲಿನಲ್ಲಿ ನಿರ್ಮಿಸಿದ ಇವರ ದೇವಾಲಯಗಳಲ್ಲಿ ದ್ರಾವಿಡ ಹೊಯ್ಸಳ ಶೈಲಿಗಳೆರಡೂ ಹೊಂದಿಕೊಂಡಿವೆ. ಮುಸ್ಲಿಂಶೈಲಿಯ ಪ್ರಭಾವವನ್ನೂ

ನೋಡಬಹುದು. ಕ್ರಿ.ಶ. ಸು. ೧೫೭೦ರಲ್ಲಿ ಕಟ್ಟಿರುವ ಇಕ್ಕೇರಿಯ ಅಘೋರೇಶ್ವರ ದೇವಾಲಯ ಇವರ ಶೈಲಿಯ ಅತ್ಯುತ್ತಮ ಮಾದರಿ. ಹೊಯ್ಸಳ ದೇವಾಲಯಗಳಂತೆ ಎತ್ತರವಾದ ಜಗತಿಯ ಮೇಲೆ ಈ ದೇವಾಲಯವನ್ನು ಕಟ್ಟಿದ್ದರೂ ಜಗತಿಯ ಅಗಲ ಕಿರಿದು. ಚತುರಸ್ರಾಕಾರದ ಗರ್ಭಗೃಹ, ಸುಕನಾಸಿ, ಮುಂದೆ ದೊಡ್ಡದಾದ ೨೫ ಅಂಕಣ ಗಳ ಮಂಟಪ ಇದ್ದು, ಗರ್ಭಗುಡಿಯ ಮೇಲಿನ ಕಲ್ಲಿನ ಗೋಪುರ, ನವರಂಗದ ಗುಂಡು ಕಂಬಗಳು, ಹೊರಗೋಡೆಯ ಮೇಲೆ ತೆಳುವಾಗಿ ಬಿಡಿಸಿರುವ ಮೂರ್ತಿಶಿಲ್ಪ, ತಳಹದಿಯ ಪಟ್ಟಿಕೆಗಳು ಇವೆಲ್ಲ ಹೊಯ್ಸಳ ಶಿಲ್ಪವನ್ನೂ ವಿಶಾಲವಾದ ನವರಂಗ, ಅನೇಕ ರೀತಿಯ ಕಂಬಗಳು, ಎರಡು ಸುಕನಾಸಿಗಳು, ಕತ್ತಲೆ ಪ್ರದಕ್ಷಿಣೆಗಳು ದ್ರಾವಿಡ ಶಿಲ್ಪವನ್ನೂ ನಂದಿಮಂಟಪದಲ್ಲಿಯೂ ಇತರೆಡೆಗಳಲ್ಲಿಯೂ ಇರುವ ಕಮಾನುಗಳು ಮುಸ್ಲಿಂ ರೀತಿ ಯನ್ನೂ ಅನುಕರಿಸಿವೆ. ಆದರೆ ಇಲ್ಲಿನ ಮೂರ್ತಿಶಿಲ್ಪಗಳು ಹೊಯ್ಸಳ ರೀತಿಯ ಅಸಮರ್ಪಕ ಅನುಕರಣೆಗಳು. ಕೆಳದಿಯ ರಾಮೇಶ್ವರ ದೇವಾಲಯವೂ ಇದೇ ಮಿಶ್ರ ಶೈಲಿಯದು. ಅದಕ್ಕೆ ಸೇರಿದಂತೆ ಇರುವ ವೀರಭದ್ರ ದೇವಾಲಯದ ಕೆತ್ತನೆ ಕೆಲಸ ಉತ್ತಮ ಮಟ್ಟದಲ್ಲಿದೆ. ಅದರಲ್ಲಿಯೂ ಅದರ ಒಳ ಚಾವಣಿಯಲ್ಲಿರುವ ಗಂಡಭೇರುಂಡ ಮೂರ್ತಿ ವಿವರಪೂರ್ಣವಾಗಿ ಕಂಡರಿಸಿರುವ ಒಂದು ಸುಂದರ ಶಿಲ್ಪ. ಕೆಳದಿಯ ನಾಯಕರ ಕಾಲದಲ್ಲಿ ಅವರ ರಾಜ್ಯದ ಹಲವೆಡೆ ಕಟ್ಟಿರುವ ಸಣ್ಣ ಸಣ್ಣ ಗುಡಿಗಳು ಅಲ್ಲಿನ ವಾಸ್ತುಶಿಲ್ಪದ ವೈಶಿಷ್ಟ್ಯ. ಇವುಗಳಲ್ಲಿ ಎತ್ತರ ತಳಹದಿಯ ಮೇಲೆ ಪುಟ್ಟ ಗರ್ಭ ಗುಡಿ ಸುಕನಾಸಿಗಳು ಮಾತ್ರವಿದ್ದು ಮುಂದೆ ನೆಲದಿಂದ ನೀಳವಾದ ಕಲ್ಲಿನ ಗೋಪುರ ಇರುವುದುಂಟು. ಅವುಗಳ ಗೋಡೆಗಳ ಮೇಲೆ ಮೂರ್ತಿಶಿಲ್ಪಗಳಿರುತ್ತವೆ. ತೀರ್ಥಹಳ್ಳಿ, ನಗರ, ಸಾಲಗೆರೆ, ಶೃಂಗೇರಿ ಮುಂತಾದೆಡೆಗಳಲ್ಲೆಲ್ಲಾ ಇಂತಹ ಕಿರು ದೇವಾಲಯಗಳು ಅನೇಕವಿದ್ದು, ಅವುಗಳಿಗೆಲ್ಲ ಜಂಬಿಟ್ಟಿಗೆಯ ನೀಲಕಂಠೇಶ್ವರ ದೇವಾಲಯ ಮಾದರಿ ಯಾಗಿದೆ. ಕ್ರಿ.ಶ. ೧೭೩೩ರಲ್ಲಿ ಕಾಳಯ್ಯನೆಂಬ ಶಿಲ್ಪಿ ಕಟ್ಟಿದ ಈ ಪುಟ್ಟ ಗುಡಿಯ ಒಳಗೂ ಹೊರಗೂ ಗೋಡೆಗಳ ಮೇಲೆ ರಾಮಾಯಣ ಭಾರತ ಭಾಗವತ ಕಥೆಗಳೂ ದ್ವಾರ ಪಾಲಕರು, ಅಷ್ಟದಿಕ್ಪಾಲಕರು, ವಿಷ್ಣುವಿನ ದಶಾವತಾರ, ಶಿವಲೀಲೆಗಳು ಮತ್ತು ಇತರ ಮೂರ್ತಿ ಶಿಲ್ಪಗಳೂ ರೂಪಿತವಾಗಿವೆ. ನಗರದ ನೀಲಕಂಠೇಶ್ವರ ದೇವಾಲಯ, ಹಂಪನೂರ ರಂಗನಾಥಸ್ವಾಮಿ ದೇವಾಲಯ ಮೇಳಿಗೆಯ ಜೈನಬಸದಿ ಇವು ಈ ಕಾಲದ ಇತರ ಕಟ್ಟಡಗಳು.

ಚಿತ್ರದುರ್ಗದ ಪಾಳೆಯಗಾರರು ಕಟ್ಟಿಸಿದ ಕಟ್ಟಡಗಳಲ್ಲಿ ಚಿತ್ರದುರ್ಗ ಬೆಟ್ಟದ ಸುತ್ತಲೂ ಒಂದರ ಮೇಲೊಂದರಂತೆ ಕಟ್ಟಿಸಿರುವ ಐದು ಭದ್ರವಾದ ಕೋಟೆಗಳು ಮುಖ್ಯ ವಾದವು. ನಯಗೊಳಿಸಿದ ದೊಡ್ಡ ದೊಡ್ಡ ಕಲ್ಲಿನ ತುಂಡುಗಳಿಂದ ನಿರ್ಮಿಸಿರುವ ಈ ಕೋಟೆಗಳೂ ಅವುಗಳ ದುರ್ಗಮದ್ವಾರಗಳೂ ಶತ್ರುಗಳಿಗೆ ಅಭೇದ್ಯವೆನಿಸಿದ್ದುವು. ಈ ಕೋಟೆಗಳಿಗೆ ಹೊಂದಿಕೊಂಡಂತೆ ಇರುವ ಎಣ್ಣೆಯ ಕೊಳ, ತುಪ್ಪದ ಕೊಳ ಎಂದು ಕರೆಯುವ ಬೃಹದಾಕಾರದ ಕೊರೆದು ಮಾಡಿರುವ ಕಲ್ಲಿನ ತೊಟ್ಟಿಗಳೂ ಮದ್ದನ್ನು

ಅರೆಯಲು ಉಪಯೋಗಿಸುತ್ತಿದ್ದ ದೊಡ್ಡದಾದ ಬೀಸುವಕಲ್ಲೂ ನಾಯಕರ ಕಾಲದ ಶಕ್ತಿ ಸಂಕೇತಗಳಾಗಿ ನಿಂತಿರುವ ಶಿಲ್ಪಗಳು. ಬೆಟ್ಟದ ಮೇಲೆ ಏಕನಾಥೇಶ್ವರ ದೇವಾಲಯದ ಮುಂದೆ ನಿಂತಿರುವ ೪೦ ಅಡಿಗೂ ಹೆಚ್ಚು ಎತ್ತರದ ಕಲ್ಲಿನ ಕಂಬ ಉಯ್ಯಾಲೆ ಕಂಬಗಳು, ಉಚ್ಚಂಗಮ್ಮನ ದೇವಾಲಯ ಇವರ ಕಾಲದ ಇತರ ಸಾಧನೆಗಳು. ನೀರ್ತಡಿಯಲ್ಲಿರುವ ರಂಗನಾಥಸ್ವಾಮಿ ದೇವಾಲಯವನ್ನು ಮದಕರಿನಾಯಕನು ಸಂಪೂರ್ಣವಾಗಿ ಪುನರ್ ನಿರ್ಮಾಣ ಮಾಡಿದನು. ಇದು ಹೊರಗೋಡೆಯ ಮೂರ್ತಿಶಿಲ್ಪಕ್ಕೂ ತೆಳುವಾದರೂ ಉನ್ನತವಾಗಿ ಮೇಲೆದ್ದಿರುವ ಗೋಪುರಕ್ಕೂ ಮತ್ತು ನವರಂಗದ ದಪ್ಪ ಕಂಬಗಳಿಗೂ ಅವುಗಳ ಮೇಲಿರುವ ಭಕ್ತವಿಗ್ರಹಗಳಿಗೂ ಪ್ರಸಿದ್ಧವಾಗಿದೆ. ಇದಕ್ಕಿಂತ ಮಿಗಿಲಾದುದು ರಾಮದುರ್ಗದಲ್ಲಿ ಕಗ್ಗಲ್ಲಿನ ಮೊರಡಿಯೊಂದನ್ನು ಕೊರೆದು ನಿರ್ಮಿಸಿರುವ ಗುಹಾಂತ ದೇವಾಲಯ. ಚತುರಸ್ರಾಕಾರದಲ್ಲಿ ಕೊರೆದು ಬಿಡಿಸಿರುವ ಗರ್ಭಗೃಹ ಮತ್ತು ಮಂಟಪಗಳಿರುವ ಈ ಗುಹಾಲಯದ ಕಂಬಗಳು ಮತ್ತು ಚಾವಣಿಗಳಲ್ಲಿಲ್ಲ ಸುಂದರವಾಗಿ ಬಿಡಿಸಿರುವ ಶಿಲ್ಪವೈಖರಿ ಆಶ್ಚರ್ಯವನ್ನುಂಟುಮಾಡುತ್ತದೆ.

ಎಲಹಂಕ ಮಾಗಡಿ ಬೆಂಗಳೂರುಗಳಲ್ಲಿ ಆಳಿದ ಕೆಂಪೇಗೌಡನ ವಂಶದ ಪ್ರಭುಗಳು ದ್ರಾವಿಡ ರೀತಿಯ ಹಲವಾರು ದೇವಾಲಯಗಳನ್ನು ಕಟ್ಟಿಸಿದರು. ಅವುಗಳಲ್ಲಿ ಅಲಸೂರಿನ ಸೋಮೇಶ್ವರ ದೇವಾಲಯದ ಗೋಪುರ ಉನ್ನತವಾಗಿದ್ದು ಭವ್ಯವಾಗಿದೆ. ಬೆಂಗಳೂರಿನ ಕೋಟೆ ವೆಂಕಟರಮಣಸ್ವಾಮಿ ದೇವಾಲಯವನ್ನು ಮೈಸೂರಿನ ಚಿಕ್ಕದೇವರಾಜ ಒಡೆಯರು ಕಟ್ಟಿಸಿದರೆಂದು ಪ್ರತೀತಿಯಿದ್ದರೂ ಅದು ಕೆಂಪೇಗೌಡನ ಕಾಲದ ಕಟ್ಟಡವಾಗಿರಬೇಕು. ಈ ದೇವಾಲಯದ ಮುಂದಿನ ಮುಖಮಂಟಪದ ಕಂಬಗಳು ವಿಜಯನಗರ ಶೈಲಿಯ ಸಂಕೀರ್ಣಸ್ತಂಭಗಳಂತಿದ್ದು, ಹೊರಗೋಡೆಯ ಮೇಲೆ ಮೂರ್ತಿಗಳ ಸಾಲುಗಳಿವೆ. ಗವಿಗಂಗಾಧರೇಶ್ವರನ ಗುಡಿಯ ಮುಂದೆ ನಿಂತಿರುವ ಬೃಹತ್ಪ್ರಮಾಣದ ಛತ್ರಿ, ತ್ರಿಶೂಲ, ಡಮರು ಮುಂತಾದುವು ಅವರ ಸಾಧನೆಗಳು.

ವಿಜಯನಗರದ ಅನಂತರ ಕಲೆಗೆ ವ್ಯಾಪಕವಾದ ಪ್ರೋತ್ಸಾಹವನ್ನಿತ್ತವರು ಮೈಸೂರ ಅರಸರು. ಇವರು ಕಟ್ಟಿಸಿರುವ ಅನೇಕ ದೇವಾಲಯಗಳಲ್ಲಿ, ಮಾಡಿಸಿದ ಮೂರ್ತಿಗಳಲ್ಲಿ, ವಿಜಯನಗರದ ಶೈಲಿಯಲ್ಲಿ ಕಂಡುಬರುವ ಶ್ರೀಮಂತ ಸೌಂದರ್ಯವನ್ನಾಗಲಿ ಭಾವಪೂರ್ಣತೆಯನ್ನಾಗಲಿ ನಿರೀಕ್ಷಿಸಲಾಗದಿದ್ದರೂ ಅವುಗಳಲ್ಲಿಯೂ ಕೆಲವು ವಿಶಿಷ್ಟ ಲಕ್ಷಣಗಳಿವೆ. ದ್ರಾವಿಡ ಶೈಲಿಯಲ್ಲಿ ಕಟ್ಟಿದ ಇವರ ಕಾಲದ ಕಟ್ಟಡಗಳಲ್ಲಿ ಶ್ರೀರಂಗಪಟ್ಟಣದಲ್ಲಿ ಕಂಠೀರವ ನರಸಿಂಹರಾಜ ಒಡೆಯರು ಕಟ್ಟಿಸಿದ ನರಸಿಂಹಸ್ವಾಮಿ ದೇವಾಲಯ, ಚಿಕ್ಕದೇವರಾಜ ಒಡೆಯರು ಗುಂಡ್ಲುಪೇಟೆಯಲ್ಲಿ ಕಟ್ಟಿಸಿದ ಪರವಾಸುದೇವಾಲಯ, ದೊಡ್ಡ ದೇವರಾಜ ಒಡೆಯರು ಕಟ್ಟಿಸಿದ ತ್ರಿಣೇಶ್ವರನ ಗುಡಿ ಹಾಗೂ ಮಾಡಿಸಿದ ಬೃಹನ್ನಂದಿ, ಮುಮ್ಮಡಿ ಕೃಷ್ಣರಾಜ ಒಡೆಯರು ಕಟ್ಟಿಸಿದ ಚಾಮರಾಜೇಶ್ವರ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯಗಳು, ಶ್ರೀಕಂಠೇಶ್ವರ ಚಾಮುಂಡೇಶ್ವರೀ ದೇವಾಲಯಗಳ ಮಹಾದ್ವಾರಗಳ ಗೋಪುರಗಳು ಮುಖ್ಯವಾದುವು. ಮೇಲುಕೋಟೆಯಲ್ಲಿ ರಾಜ

ಒಡೆಯುರ ನ್ನೊಮ್ಮಗ ಚಾಮರಾಜ ಒಡೆಯರು ಕಟ್ಟಿಸಿದ ಕಲ್ಯಾಣಿಯಲ್ಲಿರುವ ಅಷ್ಟಮುಖ ಮಂಟಪ ಈ ಕಾಲದ ವಾಸ್ತುರಚನೆಗಳಲ್ಲಿ ಶ್ರೇಷ್ಠವಾದುವುಗಳಲ್ಲೊಂದು.

ಇವುಗಳಲ್ಲಿ ಪರವಾಸುದೇವಾಲಯ ತಕ್ಕಷ್ಟು ದೊಡ್ಡದಾದ್ದು. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಅದರ ಎರಡು ಕಡೆಯೂ ಗೂಡುಗಳು, ನವರಂಗದ ಮುಂದೆ ದೊಡ್ಡದಾದ ಮುಖಮಂಟಪ ಇವು ಇದ್ದುವು. ಈಗ ಈ ಮುಖಮಂಟಪ ವಿಜಯ ನಾರಾಯಣಸ್ವಾಮಿ ದೇವಾಲಯದ ಮುಂದೆ ಪುನರ್ನಿರ್ಮಿತವಾಗಿದೆ. ಗರ್ಭಗುಡಿಯ ಸುತ್ತ ಪ್ರದಕ್ಷಿಣಾಪಥವಿದೆ. ಹೊರಗೋಡೆಯ ಮೇಲೆ ಅಲ್ಲಲ್ಲಿ ಒರಟು ಅರಗಂಬಗಳಿವೆ. ದೇವಾಲಯ ಕಿರುಜಗತಿಯೊಂದರ ಮೇಲೆ ನಿಂತಿದೆ. ಕಂಬಗಳ ಘನಾಕೃತಿಗಳ ಮೇಲೆ ದಶಾವತಾರಗಳು, ನಂದಿ, ಸಿಂಹ, ಗಣೇಶ, ಋಷಿಗಳು ಮುಂತಾದವರ ಉಬ್ಬುಶಿಲ್ಪದ ಮೂರ್ತಿಗಳಿವೆ. ಬಾಗಿಲುವಾಡಗಳು ಸುಂದರವಾಗಿವೆ. ಗರ್ಭಗುಡಿಯಲ್ಲಿರುವ ಪರವಾಸು ದೇವರ ಮೂರ್ತಿ ಒಡೆಯರ ಕಾಲದ ಮೂರ್ತಿ ಶಿಲ್ಪದ ಒಂದು ಒಳ್ಳೆಯ ಮಾದರಿ. ಅನಂತನ ಮೇಲೆ ಸುಖಾಸನದಲ್ಲಿ ಕುಳಿತ ಮೂರ್ತಿಗೆ ಚೂಪಾದ, ಆದರೆ ಚಪ್ಪಟೆಯಾದ ಮೂಗು, ಕೊಂಕು ತುಟಿಗಳಲ್ಲಿ ಕಾಣುವ ಕೃತಕ ನಗೆ, ದೊಡ್ಡವಾದ ಕಣ್ಣುಗಳು, ಸೆಟೆದು ಕುಳಿತಂತಿರುವ ಭಂಗಿ, ಮೂರ್ತಿಯ ಅಳತೆಗೆ ದೊಡ್ಡದಾದ ಕಿರೀಟಗಳಿದ್ದು ಒಡೆಯರ ಕಾಲದ ಮೂರ್ತಿಶಿಲ್ಪದಲ್ಲಿ ಸ್ವಾಭಾವಿಕತೆಗಿಂತಲೂ ಸಂಪ್ರದಾಯಶರಣತೆ ಕಂಡುಬರುವುದನ್ನು ಪ್ರಕಟಿಸುತ್ತವೆ. ಎಳಂದೂರಿನಲ್ಲಿರುವ ಗೌರೀಶ್ವರ ದೇವಾಲಯದ ಮಹಾದ್ವಾರ ತಾಡಪ್ರತಿಯ ದೇವಾಲಯವನ್ನು ನೆನಪಿಗೆ ತರುವ ಒಂದು ಸುಂದರ ಕಲಾಕೃತಿ.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೂರ್ತಿಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ನಂಜನಗೂಡಿನಲ್ಲಿರುವ ಅರುವತ್ತು ಮೂವರು ಪುರಾತನರ ಮೂರ್ತಿ ಗಳು, ಶಿವಲೀಲಾವಿಗ್ರಹಗಳು, ಚಾಮರಾಜೇಶ್ವರದ ಮೂರ್ತಿಗಳು, ಪ್ರಸನ್ನ ಕೃಷ್ಣ ಸ್ವಾಮಿ ದೇವಾಲಯದಲ್ಲಿರುವ ಆಳ್ವಾರರ ಮೂರ್ತಿಗಳು, ಇತರ ನೂರಾರು ಲೋಹ ಮೂರ್ತಿಗಳು ಅದಕ್ಕೆ ಸಾಕ್ಷಿ. ಇವರ ಕಾಲದಲ್ಲಿ ಚಿತ್ರಕಲೆಗೂ ಹೆಚ್ಚು ಪ್ರೋತ್ಸಾಹ ದೊರೆಯಿತು. ಹರದನಹಳ್ಳಿಯೂ ದಿವ್ಯಲಿಂಗೇಶ್ವರ ದೇವಾಲಯದ ಹಿಂದಿನ ಕಲ್ಲಿನ ಮಂಟಪದಲ್ಲಿರುವ ಗಿರಿಜಾಕಲ್ಯಾಣ ಕೃಷ್ಣಲೀಲೆಗಳ ಚಿತ್ರಗಳೂ, ಸೀಬಿಯಲ್ಲಿ ನರಸಿಂಹಸ್ವಾಮಿ ದೇವಾಲಯದ ಚಾವಣಿಯಲ್ಲಿರುವ ನರಸಿಂಹನ ಕಥೆಗೆ ಸಂಬಂಧಿಸಿದ ಹಲವು ಭಿತ್ತಿಚಿತ್ರಗಳೂ ಶ್ರವಣಬೆಳಗೊಳ ಮಠದಲ್ಲಿರುವ ಜೈನಸಂಪ್ರದಾಯದ ಕಥೆ ಗಳನ್ನು ನಿರೂಪಿಸುವ ಚಿತ್ರಗಳೂ ಜಗನ್ಮೋಹನ ಬಂಗಲೆಯಲ್ಲಿರುವ ಸುಂದರವಾದ ಚಿತ್ರ ಗಳೂ ಕೆಲವು ಮಾದರಿಗಳು. ಸಾಂಪ್ರದಾಯಿಕವಾದ ಕಟ್ಟುಪಾಡುಗಳಿಗೆ ಒಳಗಾಗಿ ಆಗ ಬಳಕೆಯಲ್ಲಿದ್ದ ಶಿಲ್ಪಶಾಸ್ತ್ರಕ್ಕನುಗುಣವಾಗಿ ಕಂಡರಿಸಿರುವ ಇವರ ಮೂರ್ತಿಶಿಲ್ಪಗಳಲ್ಲಿ ವಿಜಯನಗರದ ಜೀವಂತಕಲೆ ಕೃತಕತೆಯ ಹಾದಿ ತುಳಿದಿರುವುದನ್ನು ಸ್ಪಷ್ಟವಾಗಿ ಕಾಣಬಹುದು. ಆದರೂ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಮೈಸೂರು ಒಡೆಯರ

ಕಾಲಕ್ಕೆ ಸೇರಿದುವೆಂದು ಸುಲಭವಾಗಿ ಗುರುತಿಸಬಹುದಾದ ಶಿಲ್ಪ ಶೈಲಿ ಬೆಳೆಯಲು ಈ ರಾಜರು ಪ್ರೋತ್ಸಾಹ ಕೊಟ್ಟುದೂ ನಶಿಸುತ್ತಿದ್ದ ವಾಸ್ತುಶಿಲ್ಪ ಶೈಲಿಯನ್ನು ಉದ್ಧರಿಸಲು ಪ್ರಯತ್ನಪಟ್ಟುದೂ ಸ್ತುತ್ಯ.

## ಕರಾವಳಿಯ ವಾಸ್ತುಶೈಲಿ

ಕರ್ಣಾಟಕದ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ವಾಸ್ತುಶಿಲ್ಪ ಬೇರೆಯಾಗಿಯೇ ಬೆಳೆದುಬಂದಂತೆ ತೋರುತ್ತದೆ. ಅದರಲ್ಲಿಯೂ ಕೇರಳ ಮಲಬಾರುಗಳಲ್ಲಿ ಕಂಡುಬರುವ ವಾಸ್ತುಶೈಲಿಯನ್ನು ಮುಖ್ಯವಾಗಿ ಗುರುತಿಸಬಹುದು. ಈ ದೇವಾಲಯಗಳು ನೇಪಾಳದ ತರಾಯಿಗಳಂತೆ ಇರುವುದಾಗಿ ಕೆಲವರ ಅಭಿಪ್ರಾಯ. ಇಲ್ಲಿ ಗಟ್ಟಿ ಕಲ್ಲಿನ ದೇವಾಲಯಗಳು ಹಲವಿದ್ದರೂ ಜಂಬುಕಲ್ಲಿನ ಕಟ್ಟಡಗಳೇ ಹೆಚ್ಚು. ಆದ್ದರಿಂದ ಹೊರಗೋಡೆಯ ಮೇಲಿನ ಅಲಂಕರಣ ಹೆಚ್ಚು ಇರುವುದಿಲ್ಲ; ಮತ್ತು ಮಳೆಯಿಂದ ಕಟ್ಟಡಕ್ಕೆ ರಕ್ಷಣೆಯನ್ನೊದಗಿಸುವುದು ಇಲ್ಲಿ ಅನಿವಾರ್ಯವಾದುದರಿಂದ ಚಾವಣಿಗಳು ಇಳಿಜಾರಾಗಿರುತ್ತವೆ. ದೇವಾಲಯಗಳ ತಲವಿನ್ಯಾಸ ವೃತ್ತಾಕಾರವಾಗಿರುವುದುಂಟು. ಮೂಡುಬಳ್ಳಿ ಗ್ರಾಮದ ಮಹಾದೇವರ ದೇವಸ್ಥಾನದಲ್ಲಿರುವ ಸೂರ್ಯನ ಗುಡಿ ಇಂತಹ ವೃತ್ತಾಕಾರದ ದೇವಾಲಯಕ್ಕೆ ಒಳ್ಳೆಯ ಉದಾಹರಣೆ. ಇದಕ್ಕಿಂತ ಹೆಚ್ಚಾಗಿ ಬೌದ್ಧವಾಸ್ತುವನ್ನನುಕರಿಸುವ ಚೈತ್ಯಾಕಾರದ ದೇವಾಲಯಗಳು ಈ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇವುಗಳಲ್ಲಿ ಉದ್ಯಾವರದ ಚಂಬುಕಲ್ ದೇವಸ್ಥಾನ, ಉಡುಪಿಯ ಅನಂತೇಶ್ವರ ದೇವಸ್ಥಾನ, ಮೂಡಬಿದರೆಯ ದುರ್ಗಾದೇವಾಲಯ, ಬ್ರಹ್ಮಾವರದ ಮಹೇಶ್ವರ ದೇವಾಲಯ, ಕೋಟದ ಹಿರಿಯ ದೇವಾಲಯ, ಬಾರಕೂರಿನ ಮಾರ್ಕಂಡೇಶ್ವರ ದೇವಾಲಯ, ವಿಠಲದ ಪಂಚಲಿಂಗೇಶ್ವರ ದೇವಾಲಯ, ಪುತ್ತೂರಿನ ಮಹದೇವ ದೇವಾಲಯ ಮುಂತಾದುವು ಪ್ರಸಿದ್ಧವಾದುವು. ಈ ದೇವಾಲಯಗಳ ಹಿಂಭಾಗವು ಲಾಳದಾಕಾರದಲ್ಲಿರುತ್ತದೆ. ಇವುಗಳ ಮೇಲ್ಚಾವಣಿಗಳು ನೇಪಾಳದ ತರಾಯಿಗಳಂತೆ ಎರಡುಮೂರು ಅಂತಸ್ತುಗಳಿದ್ದು ಹೆಚ್ಚು ಇಳಿಜಾರಾಗಿವೆ, ಸಾಮಾನ್ಯವಾಗಿ ಇವುಗಳಿಗೆ ತಾಮ್ರದ ತಗಡನ್ನು ಹೊದಿಸಿರುತ್ತದೆ. ಕಲ್ಲಿನ ಕಟ್ಟಡಗಳಿಗೂ ಇಳಿಜಾರು ಚಾವಣಿಗಳನ್ನು ಕಲ್ಲಿನ ಚಪ್ಪಡಿಯಿಂದಲೇ ನಿರ್ಮಿಸಿರುವುದನ್ನು ಭಟ್ಕಳದಲ್ಲಿರುವ ಹಲವಾರು ದೇವಾಲಯಗಳಲ್ಲಿ ನೋಡಬಹುದು. ಈ ಭಾಗದ ಮೂರ್ತಿಶಿಲ್ಪಗಳಲ್ಲಿ ಕಾರ್ಕಳ ಮತ್ತು ವೇಣೂರುಗಳಲ್ಲಿರುವ ಗೊಮ್ಮಟೇಶ್ವರನ ಬೃಹನ್ ಮೂರ್ತಿಗಳು ಪ್ರಸಿದ್ಧವಾದವು. ೧೪ನೆಯ ಶತಮಾನದಿಂದೀಚೆಗೆ ಜೈನ ಸಂಪ್ರದಾಯದ ಬಸ್ತಿಗಳು ಹಲವಾರು ಇಲ್ಲಿ ನಿರ್ಮಾಣವಾದವು. ಅವುಗಳಲ್ಲಿ ಮೂಡಬಿದಿರೆಯ ತ್ರಿಭುವನ ಚೂಡಾಮಣಿ ಬಸದಿ ಅತ್ಯಂತ ದೊಡ್ಡದೂ ಸುಂದರವೂ ಆದುದು. ಕದ್ರಿಯ ಮಂಜುನಾಥೇಶ್ವರ ದೇವಾಲಯದಲ್ಲಿರುವ ೧೧ನೆಯ ಶತಮಾನದ ಲೋಕೇಶ್ವರನ ಪಂಚಲೋಹದ ಪುರುಷ ಪ್ರಮಾಣದ ಮೂರ್ತಿ ಕರ್ಣಾಟಕದಲ್ಲಿಯೇ ಅತ್ಯಂತ ಆಕರ್ಷಕ ಮೂರ್ತಿಗಳಲ್ಲೊಂದು.

ಕೊಲ್ಲೂರಿನ ಮೂಕಾಂಬಿಕಾ ದೇವಾಲಯದಲ್ಲಿರುವ ಬೃಹದಾಕಾರದ ದ್ವಾರಪಾಲಕರ ಲೋಹಮೂರ್ತಿಗಳು ಕೆಳದಿನಾಯಕರ ಕಾಲದ ಮೂರ್ತಿಶಿಲ್ಪ ನೈಪುಣ್ಯವನ್ನು ತೋರಿಸುತ್ತವೆ. ಕರಾವಳಿ ಪ್ರದೇಶಗಳಲ್ಲಿ ವಿಶಿಷ್ಟವಾದ ಇಂತಹ ವಾಸ್ತುಶೈಲಿ ಬೆಳೆದುಬಂದಿದ್ದರೂ ಚೋಳ, ಪಾಂಡ್ಯ, ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಶಿಲ್ಪಗಳ ಪ್ರಭಾವವನ್ನೂ ಅಲ್ಲಲ್ಲಿ ಗುರುತಿಸಬಹುದು.

## ಸಂಗೀತ ನೃತ್ಯಕಲೆಗಳು

ಸಂಗೀತ ಮತ್ತು ನೃತ್ಯಗಳು ಲಲಿತಕಲೆಗಳಲ್ಲಿ ಗಣ್ಯವಾದವು; ಸುಕುಮಾರವಾದವು ಹಾಗೂ ಆಕರ್ಷಕವಾದವು. ಅವುಗಳ ಅಭಿವ್ಯಕ್ತಿ ಮಾನವನ ಹುಟ್ಟುಗುಣ. ಆತನು ನಿತ್ಯಜೀವನದಲ್ಲಿ ಅನುಭವಿಸುವ ಸುಖಸಂತೃಪ್ತಿ, ಆನಂದ ಮುಂತಾದವುಗಳ ಪ್ರತೀಕ. ಜನಜೀವನದಲ್ಲಿ ಈ ಕಲೆಗಳು ಒಂದಲ್ಲ ಒಂದು ರೀತಿಯಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡು ಬೆಳೆದುಬಂದಿವೆ. ಸಾಮಾನ್ಯ ಜನತೆ ತಮ್ಮ ದಿನನಿತ್ಯದ ಕೆಲಸದಲ್ಲಿ ಒಕ್ಕುವಾಗ, ಕುಟ್ಟುವಾಗ, ಬೀಸುವಾಗ ಸಂತೋಷದಿಂದ ತಮ್ಮದೇ ಆದ ರೀತಿಯಲ್ಲಿ ಹಾಡಿ ನಲಿದು ಕುಣಿದು ಕೇಕೆಹಾಕುವುದು ಒಂದುಕಾಲದ ಸಾಮಾನ್ಯದೃಶ್ಯ. ಈ ಜಾನಪದ ಸಂಗೀತ ನೃತ್ಯಗಳು ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ, ಸ್ವತಂತ್ರವಾಗಿ ಬೆಳೆದು ಬಂದಂತೆ ಕರ್ನಾಟಕದಲ್ಲಿಯೂ ಪ್ರಾಚೀನಕಾಲದಿಂದ ಬೆಳೆದುಬಂದಿರುವ ಕಲೆಗಳು. ಪ್ರಾಚೀನ ಕಾವ್ಯರೂಪಗಳೆಂದು ಕನ್ನಡ ಲಾಕ್ಷಣಿಕರೂ ಇತರರೂ ವಿವರಿಸುವ ಬೆದಂಡೆ, ಪದ, ಮೆಲ್ವಾಡು, ಪಾಡುಗಬ್ಬ, ಒನಕೆವಾಡು, ಓವನಿಗೆ ಮುಂತಾದವುಗಳಲ್ಲಿ ಹಲವಕ್ಕೆ ಸ್ಪಷ್ಟವಾದ ಅರ್ಥ ಇಂದು ತಿಳಿಯದು. ಆ ಮಾದರಿಗಳು ಇಂದು ಲಭ್ಯವಿಲ್ಲ; ಅಲ್ಲಿ ಹಾಡಿನ ಅಂಶ ಹೇಗಿತ್ತು ಎಷ್ಟಿತ್ತು ತಿಳಿಯದು. ಶಿಲ್ಪ ಮತ್ತು ಚಿತ್ರಕಲೆಗಳಲ್ಲಿರುವಂತೆ ಒಂದು ನೆಲೆಯಾಗಿ ನಿಲ್ಲಬಲ್ಲ ಸಾಮಗ್ರಿ ಈ ಎರಡು ಕಲೆಗಳಿಗಿದ್ದಿರಲಿಲ್ಲ. ತಲೆತಲಾಂತರದಿಂದ ಜನಜೀವನದಲ್ಲಿ ಹರಿದುಕೊಂಡು ಬಂದು ಇಂದಿಗೂ ಹಲವು ರೂಪಗಳಲ್ಲಿ ಉಳಿದುಬಂದಿರುವ ಈ ಕಲೆಗಳಲ್ಲಿ ಪ್ರಾದೇಶಿಕ ವಿಭಿನ್ನತೆಗಳನ್ನು ಗುರುತಿಸಬಹುದು. ಬಯಲಾಟ, ಯಕ್ಷಗಾನ ಗೊಂಬೆಯಾಟಗಳಲ್ಲಿ ಹಾಡು ಕುಣಿತಗಳಿಗೇ ಪ್ರಾಮುಖ್ಯ. ಯಾವ ಪಾತ್ರವೇ ಆಗಲಿ ಒಂದಲ್ಲೊಂದು ಸಂದರ್ಭದಲ್ಲಿ ಕುಣಿಯಬೇಕು. ಇದಕ್ಕೆ ಹಿಮ್ಮೇಳವುಂಟು. ಆಯಾ ಪಾತ್ರಕ್ಕೆ ಒಪ್ಪುವ ಕುಣಿತ, ಮತ್ತು ಕುಣಿತದಿಂದಲೇ ಭಾವನೆಗಳನ್ನು ವ್ಯಕ್ತಗೊಳಿಸುವ ಕೌಶಲ ಇಲ್ಲಿ ಮುಖ್ಯ. ಸಂಗೀತದ ಸಾಮಗ್ರಿ ಧ್ವನಿ. ಆದ್ದರಿಂದ ಇದು ಆಯಾಕಾಲದಲ್ಲಿ ಬೆಳೆದುಬಂದ ರೀತಿಯನ್ನು ಗುರುತಿಸುವುದು ಈಗ ಅಶಕ್ಯ. ಆದರೂ ಈ ಕಲೆಗಳಿಗೊಂದು ನಿರ್ದಿಷ್ಟರೂಪವನ್ನು ಕೊಟ್ಟು, ಅದನ್ನು ಕೆಲವು ಕಟ್ಟುಪಾಡುಗಳಿಗೊಳಪಡಿಸಿ ಬೆಳಸಿಕೊಂಡು ಬಂದುದರ ಇತಿಹಾಸವನ್ನು ತಕ್ಕಷ್ಟು ಪ್ರಾಚೀನಕಾಲದಿಂದಲೇ ಗುರುತಿಸಬಹುದು. ಭರತನು ತನ್ನ ನಾಟ್ಯಶಾಸ್ತ್ರದಲ್ಲಿ ಈ

ಯಮುಳ ಕಲೆಗಳನ್ನು ವಿವರವಾಗಿ ವರ್ಣಿಸಿ ಅವುಗಳ ಶಾಸ್ತ್ರಕ್ಕೆ ಆದ್ಯಪ್ರವರ್ತಕನಾದ. ಭಾರತದಲ್ಲೆಲ್ಲ ಮೊದಲು ಒಂದೇ ರೀತಿಯಲ್ಲಿ ಈ ಸಂಗೀತಶಾಸ್ತ್ರವು ಬೆಳೆದುಬಂದರೂ ಅದರ ವೈವಿಧ್ಯಮಯವಾದ ಬೆಳವಣಿಗೆಗೆ ಕರ್ಣಾಟಕವೇ ಮೂಲವೆಂಬುದು ನಾಟ್ಯ ಶಾಸ್ತ್ರದ ನಂತರ ಬಂದ ಅನೇಕ ಸಂಗೀತಶಾಸ್ತ್ರಗ್ರಂಥಗಳಿಂದ ವ್ಯಕ್ತವಾಗುತ್ತದೆ. ದತ್ತಿಲ, ಕೋಹಲ, ಮತಂಗ ಮುಂತಾದವರು ದಕ್ಷಿಣಾಪಥದವರು ಎನ್ನುತ್ತಾರೆ. ರಾಗಸಂಗೀತದ ಆರಂಭದೆಶೆಯನ್ನು ವಿವರಿಸುವ 'ಬೃಹದ್ದೇಶಿ' ಎಂಬ ಕೃತಿ ಕನ್ನಡನಾಡಿನವನೆನ್ನಲಾದ ಮತಂಗನಿಂದ ರಚಿತವಾದುದೆಂದು ಪ್ರತೀತಿ.

ಸಂಗೀತ ಮತ್ತು ನೃತ್ಯಕಲೆಗಳಿಗೆ ಕರ್ಣಾಟಕದ ಎಲ್ಲ ರಾಜಮನೆತನಗಳೂ ವಿಶೇಷ ಪ್ರೋತ್ಸಾಹಕೊಟ್ಟಿರುವುದು ಆಯಾಕಾಲದಲ್ಲಿ ಹುಟ್ಟಿರುವ ಶಾಸ್ತ್ರಗ್ರಂಥಗಳಿಂದ, ಶಾಸನ ಗಳಿಂದ ಮತ್ತು ಸಾಹಿತ್ಯಗ್ರಂಥಗಳಿಂದ ವ್ಯಕ್ತವಾಗುತ್ತದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿರುವ ಬಾದಾಮಿಯ ಚಾಲುಕ್ಯರ ಕಾಲದ ಶಾಸನವೊಂದು ಅಚಲ ನೆಂಬವನ ನಾಟ್ಯಪ್ರವೀಣತೆಯನ್ನು ಬಹುವಾಗಿ ಸ್ತುತಿಸುತ್ತದೆ. ಈ ಅಚಲನು ದೇವಯ್ಯನ ಮಗನೆಂದೂ ಇವನ ಸಿಂಹನಾದಕ್ಕೆ ಮದಾಂಧಹಸ್ತಿಗಳಂತಿದ್ದ ಇತರ ನಟರ ಮದ ಉಡುಗಿಹೋಗುತ್ತಿತ್ತೆಂದೂ ಕುಟಿಲನಟರೆಂಬ ಪರ್ವತಗಳಿಗೆ ಈ ನಟನ ವಚನಗಳು ವಜ್ರಾಘಾತವೆಂದೂ ಭರತಾಗಮದಲ್ಲಿ ಇವನು ನಿಷ್ಣಾತನೆಂದೂ ಘೋಷಿಸು ತ್ತವೆ. ಅಲ್ಲಿನ ಶಾಸನಗಳು ಬಾದಾಮಿಯ ಚಾಲುಕ್ಯರ ಮತ್ತು ರಾಷ್ಟ್ರಕೂಟರ ಕಾಲ ದಲ್ಲಿಯೇ ಸಂಗೀತ, ಸಂಗೀತಗಾರರ ಮೇಳ, ನೃತ್ಯಭಂಗಿಗಳು, ಬಗೆಬಗೆಯ ವಾದ್ಯ ಗಳನ್ನು ನುಡಿಸುತ್ತಿರುವ ಶಿಲ್ಪಮಾದರಿಗಳು—ಇವನ್ನು ದೇವಾಲಯಗಳ ಗೋಡೆಗಳ ಮೇಲೆ ಕಾಣಬಹುದು.

ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯದ ಚಾವಣಿಯಲ್ಲಿರುವ ಶಿವನ ಸಂಧ್ಯಾ ತಾಂಡವ ಅಪೂರ್ವ ಭಂಗಿಯಲ್ಲಿರುವ ಒಂದು ಮೋಹಕ ನೃತ್ಯಶೈಲಿಯನ್ನು ಬಿಂಬಿಸು ತ್ತದೆ. ಅಲ್ಲಿರುವ ತ್ರಿಘಟಾವಾದ್ಯ ಗಮನಿಸಬೇಕಾದುದು. ಗಂಗರ ಕಾಲದ ನೃತ್ಯಗೀತ ವಾದ್ಯಗಳ ಉನ್ನತಮಟ್ಟವನ್ನು ಇದು ಪ್ರತಿಬಿಂಬಿಸುತ್ತದೆ. ಕಲ್ಯಾಣ ಚಾಲುಕ್ಯರು ಸ್ವತಃ ಸಂಗೀತದಲ್ಲಿ ಪರಿಜ್ಞಾನ ಹೊಂದಿದವರಾಗಿದ್ದುದಲ್ಲದೆ, ಶಾಸ್ತ್ರಗ್ರಂಥಗಳನ್ನೂ ರಚಿಸಿದ್ದಾರೆ. ಇಂತಹ ಗ್ರಂಥಗಳಲ್ಲಿ ಸಂಗೀತ ಭರತಶಾಸ್ತ್ರವಿಶಾರದನಾದ ೩ನೆಯ ಸೋಮೇಶ್ವರನು ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿ' ಒಂದು ಮುಖ್ಯಕೃತಿ. ಇವನ ಕಾಲದಿಂದ ದಾಕ್ಷಿಣಾತ್ಯ ಸಂಗೀತಪದ್ಧತಿಯು ಕರ್ಣಾಟ ವೆಂಬ ಹೆಸರನ್ನು ಪಡೆಯಿತೆಂದು ಹೇಳಲಾಗಿದೆ. ಸೋಮೇಶ್ವರನು ತನ್ನ ಆಸ್ಥಾನದ ನೃತ್ಯಕಲಾವಿದೆಗೆ ಕುಂಡಲಿ ಎಂಬ ನೃತ್ಯಶೈಲಿಯನ್ನು ಕಲಿಸಿದನೆಂದು ತಿಳಿದುಬರುತ್ತದೆ. ಇದರಲ್ಲಿ ಪ್ರಾದೇಶಿಕರಾಗಗಳು, ಲಕ್ಷಣಗಳು, ಸಂಗೀತವಾದ್ಯಗಳು ಮುಂತಾದುವನ್ನು ದೃಷ್ಟಾಂತಮೊಡನೆ ವಿವರಿಸಿದೆ. ೨ನೆಯ ಜಗದೇಕಮಲ್ಲನು ಅನೇಕ ರಚನಾರೂಪ ಗಳನ್ನು 'ಸಂಗೀತಚೂಡಾಮಣಿ' ಎಂಬ ಗ್ರಂಥದಲ್ಲಿ ವಿವರಿಸಿದ್ದಾನೆ. ಈ ಚಾಲುಕ್ಯ

ಚಕ್ರವರ್ತಿಗಳ ರಾಣಿಯರು ಸಂಗೀತದಲ್ಲಿ, ನೃತ್ಯದಲ್ಲಿ ಪ್ರಗಲ್ಭೆಯರಾಗಿದ್ದರೆಂದು ಶಾಸನಗಳು ಹೆಮ್ಮೆಯಿಂದ ಹೊಗಳುತ್ತವೆ. ಚಂದಲದೇವಿ ನೃತ್ಯವಿದ್ಯಾಧರಿಯಾಗಿದ್ದರೆ, ಪಿರಿಯ ಕೇತಲದೇವಿ ಅನೇಕ ದೇಶಭಾಷಾ ಸಂಗೀತ ವಿದ್ಯಾಧರಿಯಾಗಿದ್ದಳು. ಆ ಕಾಲದ ದೇವಾಲಯದ ಗೋಡೆಗಳು ಮನೋಹರವಾದ ನಾಟ್ಯಭಂಗಿಗಳಲ್ಲಿರುವ ಹಲವು ಮೂರ್ತಿಶಿಲ್ಪಗಳಿಂದ ತುಂಬಿವೆ. ಕಾಲಗಿಯ ಕಾಲಮೇಶ್ವರ ದೇವಾಲಯದ ಹೊರಗೋಡೆಯ ಮೇಲಿನ ನಾಟ್ಯಭಂಗಿಯ ಸ್ತ್ರೀಮೂರ್ತಿಗಳ ಅಭಿನಯವನ್ನು ವರ್ಣಿಸುವ ಸಣ್ಣಸಣ್ಣ ಶಾಸನಗಳೂ ಇವೆ. ಇವುಗಳಲ್ಲಿ ಒಂದು ಶಾಸನವು (ಸು. ೧೧ನೆಯ ಶ.) ಕೆಲವು ರಾಗಗಳ ಹೆಸರನ್ನು ತಿಳಿಸುವುದು ಗಮನಿಸತಕ್ಕದ್ದಾಗಿದೆ. ವೀಣೆಯನ್ನು ನುಡಿಸುತ್ತಿರುವ ಸ್ತ್ರೀಮೂರ್ತಿಯ ಮೇಲೆ "ಧರೆಯೊಳಗೆ ನೀಲಕಂಠನೆ ಸುಜನಂ ಧಾರ್ಮಿಕನೆಂದು ವರಳಿ ವಸಂತಂ ಗುಜರಿ ಸಿರಿರಾಗವೆ ವೀಣಾಕಾರ್ತಿ ಪಾಡುತ್ತುಮಿರ್ದಳ್" ಎಂದಿದೆ.

ರಾಜರೂ ಅವರನ್ನನುಸರಿಸಿ ಅವರ ಸಾಮಂತರೂ ಕಲೆಗೆ ಪ್ರೋತ್ಸಾಹಕೊಡುವುದರೊಂದಿಗೆ ತಾವೇ ಆ ಕಲೆಗಳಲ್ಲಿ ಪ್ರವೀಣರೂ ಆಗಿರುತ್ತಿದ್ದರು. 'ತತವಿತತವಾದ್ಯ ಘನ ಸಂಕೀರ್ಣರಾಗ ಸಮುದ್ಧರಣಸಂಗೀತಕನೂ ಅಭಿನವಭರತನೂ' ಆಗಿದ್ದ ಸಾಮಂತ ಸೋವಿದೇವನನ್ನು ಶಾಸನಗಳು ವರ್ಣಿಸುತ್ತವೆ. ಇದರೊಂದಿಗೆ ದೇವಾಲಯಗಳು ಈ ಕಲೆಗಳ ಪ್ರೋತ್ಸಾಹಕ್ಕೆ ಆಗರವಾಗಿದ್ದವು. ದೇವಾಲಯಗಳ ಮುಖ್ಯವಾದ ಅಂಗ ರಂಗ ಮಂಟಪ. ಅಲ್ಲಿ ರಾಣಿಯರೂ ಹಿರಿಯ ಕಲಾವಿದೆಯರೂ ದೇವರ ಮುಂದೆ ತಮ್ಮ ನಾಟ್ಯವಿದ್ಯೆಯನ್ನು ಪ್ರದರ್ಶಿಸುತ್ತಿದ್ದರು. ದೇವಾಲಯದಲ್ಲಿ ಪಾತ್ರದವರು ಇರುತ್ತಿದ್ದುದಕ್ಕೂ ಅವರ ಜೀವಿತಕ್ಕಾಗಿ ಭೂದಾನ ಮಾಡುತ್ತಿದ್ದುದಕ್ಕೂ ಶಾಸನಗಳಲ್ಲಿ ಹೇರಳವಾದ ಉದಾಹರಣೆಗಳಿವೆ.

ಚಾಲುಕ್ಯರ ಕಾಲದಲ್ಲಿ ಅವರಿಂದ ಪೋಷಿಸಲ್ಪಟ್ಟು ನಿರ್ದಿಷ್ಟವಾದ ಒಂದು ರೂಪ ತಳೆದು ಬೆಳವಣಿಗೆಹೊಂದಿದ ದಾಕ್ಷಿಣಾತ್ಯಸಂಗೀತ ಕರ್ಣಾಟಕಸಂಗೀತವಾಗಿ ಪ್ರಸಿದ್ಧಿ ಹೊಂದಿ ಔತ್ತರೇಯಸಂಗೀತದಿಂದ ಭಿನ್ನವಾಗಿ ಬೆಳೆಯತೊಡಗಿತು. ಈ ಸಂಗೀತಶಾಸ್ತ್ರಕ್ಕೆ ಒಂದು ನಿರ್ದಿಷ್ಟರೂಪ ಕೊಟ್ಟವನು, ಮುಂದೆ ಬಹುಕಾಲದವರೆಗೆ ಸಂಗೀತಶಾಸ್ತ್ರದಲ್ಲಿ ಅತಿಮುಖ್ಯ ಪ್ರಮಾಣಗ್ರಂಥವೆಂದು ಪರಿಗಣಿತವಾದ 'ಸಂಗೀತರತ್ನಾಕರ' ಎಂಬ ಗ್ರಂಥವನ್ನು ರಚಿಸಿದವನು ಎಂದರೆ ಸೇಉಣರ ರಾಜಧಾನಿ ದೇವಗಿರಿಯಲ್ಲಿ ಸಿಂಘಣನ ಆಸ್ಥಾನದಲ್ಲಿ ಕೋಶಾಧಿಕಾರಿಯಾಗಿದ್ದ ನಿಶ್ಶಂಕ ಶಾರ್ಙ್ಗದೇವ. ಈತನು ತನಗಿಂತ ಹಿಂದೆ ಇದ್ದ ಅನೇಕ ಸಂಗೀತಶಾಸ್ತ್ರಜ್ಞರನ್ನು ನೆನೆದಿದ್ದಾನೆ; ಅವರ ಗ್ರಂಥಗಳನ್ನೆಲ್ಲ ಪರಿಶೀಲಿಸಿ, ಸಾರಾಂಶಗಳನ್ನು ಕ್ರೋಡೀಕರಿಸಿ ತನ್ನ ಬೃಹದ್‌ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಆತನು ೨೬ ರಾಗಗಳನ್ನು ತಿಳಿಸಿರುವುದಲ್ಲದೆ, ಅವುಗಳನ್ನು ಹಾಡಲು ಅನುಸರಿಸಬೇಕಾದ ನಿಯಮಗಳನ್ನೂ ವಿವರಿಸಿದ್ದಾನೆ.

ಸೇಉಣರಂತೆ ಹೊಯ್ಸಳರೂ ಎಲ್ಲ ರೀತಿಯ ಕಲೆಗಳಿಗೂ ವಿಶೇಷ ಪ್ರೋತ್ಸಾಹವಿತ್ತರು. ಅವರು ನಿರ್ಮಿಸಿದ ದೇವಾಲಯಗಳಿಂದ, ಅವುಗಳ ಮೇಲಿನ ಶಿಲ್ಪಗಳಿಂದ

ಮತ್ತು ಆ ಕಾಲದ ಶಾಸನಗಳಿಂದ ಇದು ವ್ಯಕ್ತವಾಗುತ್ತದೆ. ಅವರ ದೇವಾಲಯಗಳ ಹೊರಗೋಡೆಯ ಮೇಲಿನ ಮೂರ್ತಿಗಳು, ಸಾಲಭಂಜಿಕೆಗಳು, ನೃತ್ಯಗೀತವಾದ್ಯಗಳ ಬಗೆಬಗೆಯ ರೀತಿಗಳನ್ನು ಪ್ರದರ್ಶಿಸುವ ವಸ್ತುಸಂಗ್ರಹಶಾಲೆಗಳಾಗಿವೆ. ನರ್ತನದಲ್ಲಿ ನಿರತವಾಗಿ ಹಲವು ಭಂಗಿಗಳಲ್ಲಿರುವ ಮೂರ್ತಿಗಳು, ಅವಕ್ಕೆ ತಕ್ಕ ಹಿಮ್ಮೇಳಗಳು, ಅಲ್ಲಿಯ ಬಗೆಬಗೆಯ ವಾದ್ಯಗಳು, ಆ ಕಾಲದ ನೃತ್ಯಗೀತವಾದ್ಯ ಪ್ರೌಢಿಮೆಗೆ ಸಾಕ್ಷ್ಯಗಳಾಗಿವೆ. ವಿಷ್ಣುವರ್ಧನನು ಕಲೆಗಳಿಗೆ ಪ್ರೋತ್ಸಾಹಕೊಟ್ಟುದಲ್ಲದೆ, ತಾನೇ 'ಸಂಗೀತ ಪ್ರಸಂಗಭಂಗಿಸಂಗತಚತುರಭರತನೂ' ಆಗಿದ್ದನು. ಅವನ ರಾಣಿ ಶಾಂತಲೆಯ ಕಲಾ ಪ್ರೌಢಿಮೆಯನ್ನು ಶಾಸನಗಳು ಬಗೆಬಗೆಯಾಗಿ ಕೈವಾರಿಸಿವೆ. ಅವಳು "ಸಕಲಕಲಾಗ ಮಾನೂನೆ," "ಗೀತವಾದ್ಯನೃತ್ಯಸೂತ್ರಧಾರೆ," "ವಿಚಿತ್ರನರ್ತನಪ್ರವರ್ತನಪಾತ್ರಶಿಖಾ ಮಣಿ," "ಸಂಗೀತಸಂಗತಸರಸ್ವತಿ," "ಸಂಗೀತವಿದ್ಯಾಸರಸ್ವತಿ" ಎನ್ನಿಸಿದ್ದ ಕಲಾಸಂಪನ್ನೆ. ಒಂದನೆಯ ನರಸಿಂಹನಂತೂ ಕವಿ ಗಮಕಿ ವಾದಿ ವಾಗ್ಮಿ ವಾಗ್ಗೇಯಕ ನಟ ನರ್ತಕ ಗಾಯಕ ವಾದಕ ಪರಿವಾರ ಪರಿಪೋಷಣವಾಗಿದ್ದನು. ಇಮ್ಮಡಿ ಬಲ್ಲಾಳನ ರಾಣಿ ಬಮ್ಮಲದೇವಿಯು ಶಾಂತಲೆಯಂತೆ ತಾನೂ ಗೀತವಾದ್ಯನೃತ್ಯಸೂತ್ರಧಾರೆಯಾಗಿದ್ದಳು. ಬೇಲೂರಿನ ಚೆನ್ನಕೇಶವ ದೇವಾಲಯದ ಭವ್ಯವಾದ ರಂಗಮಂಟಪದಲ್ಲಿ ಶಾಂತಲದೇವಿ ನರ್ತಿಸಿದಳೆಂದೂ ಆ ನರ್ತನದ ಹಲವು ಭಂಗಿಳನ್ನು ದಾಸೋಜ, ಚಾವಣ ಮೊದಲಾದ ರೂವಾರಿಗಳು ತಾವು ಕಂಡರಿಸಿರುವ ಸುಂದರ ಸಾಲಭಂಜಿಕೆಗಳಲ್ಲಿ ಸೆರೆಹಿಡಿದಿದ್ದಾರೆಂದೂ ಪ್ರತೀತಿಯಿದೆ.

ಕರ್ಣಾಟಕದವನಾದ ಗೋಪಾಲನಾಯಕನು ಸೇಉಣರು ಮುಸ್ಲಿಂದಾಳಿಗೆ ಸಿಕ್ಕು ನಾಶವಾದಮೇಲೆ ಉತ್ತರಭಾರತಕ್ಕೆ ಹೋಗಿ ಅಲ್ಲಾಉದ್ದೀನ್ ಖಿಲ್ಜಿಯ ಆಸ್ಥಾನದಲ್ಲಿ ಪ್ರಸಿದ್ಧ ಗಾಯಕನಾದನು. ಇವನು ಗೀತ ಠಾಯ ಆಲಾಪ ಪ್ರಬಂಧಗಳಲ್ಲಿ ನಿಷ್ಣಾತನಾಗಿದ್ದು, ಔತ್ತರೇಯಸಂಗೀತದ ದಿಗ್ಗಜವೆನಿಸಿದ್ದ. ೩೬ ರಾಗಗಳನ್ನುಳ್ಳ ಒಂದು ಕೃತಿಯನ್ನು ಇವನು ರಚಿಸಿದ್ದುದಾಗಿ ತಿಳಿದುಬರುತ್ತದೆ. ಹೀಗೆ ದಾಕ್ಷಿಣಾತ್ಯ ಸಂಗೀತದ ಬೆಳೆವಣಿಗೆಗೆ ಮಾತ್ರವಲ್ಲದೆ ಔತ್ತರೇಯಸಂಗೀತಕ್ಕೆ ಕೂಡ ಕನ್ನಡಿಗರು ಸಾಕಷ್ಟು ಕಾಣಿಕೆ ಸಲ್ಲಿಸಿದರು.

ವಿಜಯನಗರದ ಆಳ್ವಿಕೆ ಕರ್ಣಾಟಕ ಸಂಸ್ಕೃತಿಯ ಅತ್ಯುಚ್ಛ್ರಾಯದ ಕಾಲ. ಎಲ್ಲ ಕಲೆಗಳಿಗೂ ವಿಜಯನಗರದ ಅರಸರು ಅಮಿತ ಪ್ರೋತ್ಸಾಹ ನೀಡಿದರು. ಇವರ ಕಾಲದಲ್ಲಿ ವಾಸ್ತುಶಿಲ್ಪ ಚಿತ್ರಕಲೆಗಳಂತೆ ನೃತ್ಯ ಸಂಗೀತಗಳಿಗೂ ಹೆಚ್ಚಿನ ಪ್ರೋತ್ಸಾಹ ದೊರೆತು, ಅವು ಹಲವು ಬಗೆಗಳಲ್ಲಿ ಅಭಿವೃದ್ಧಿಹೊಂದಿದುವು. 'ಕರ್ಣಾಟಕ ಸಂಗೀತ' ಎಂಬ ಹೆಸರು ಚಾಲುಕ್ಯ ಸೋಮೇಶ್ವರನ ಕಾಲದಲ್ಲಿಯೇ ದಾಕ್ಷಿಣಾತ್ಯ ಪದ್ಧತಿಗೆ ಬಂದಿತೆಂದು ಹೇಳಲಾಗಿದ್ದರೂ ಅದು ಪ್ರಚಲಿತವಾದ್ದು ವಿಜಯನಗರದ ಕಾಲದಲ್ಲಿಯೇ. ಈ ಕಾಲದಲ್ಲಿ ಲಕ್ಷ್ಯ ವಿಭಾಗಗಳು ಬಹುವಾಗಿ ಅಭಿವೃದ್ಧಿ ಹೊಂದಿದುವು. ವಿದ್ಯಾರಣ್ಯರು 'ಸಂಗೀತಸಾರ' ಎಂಬ ಲಕ್ಷಣಗ್ರಂಥವನ್ನು ರಚಿಸಿದುದಾಗಿ ತಿಳಿದುಬರುತ್ತದೆ.

ಆದರೆ ಇದು ಉಪಲಬ್ಧವಿಲ್ಲ. ಇವರೇ ಮೊದಲು ರಾಗಗಳನ್ನು ಮೇಳಪದ್ಧತಿಗೆ ಅನುಗುಣವಾಗಿ ವಿಭಜಿಸಿದವರೆಂದೂ ಕರ್ಣಾಟಕ ಮತ್ತು ಹಿಂದುಸ್ಥಾನಿ ಸಂಗೀತಗಳ ವಿಭೇದಗಳನ್ನು ಸ್ಪಷ್ಟಪಡಿಸಿದವರೆಂದೂ ಹೇಳಲಾಗಿದೆ. ಮುಂದೆ ಗೋವಿಂದ ದೀಕ್ಷಿತನು ತಾನು ಬರೆದ 'ಸಂಗೀತಸುಧಾ' ಗ್ರಂಥದಲ್ಲಿ ವಿದ್ಯಾರಣ್ಯರ 'ಸಂಗೀತಸಾರ'ದ ಪದ್ಧತಿಯನ್ನೇ ಅನುಸರಿಸಿರುವುದಾಗಿ ಹೇಳಿಕೊಂಡಿದ್ದು, ೧೫ ಮೇಳಗಳಿಂದ ಕೂಡಿದ ಅವರ ಮೇಳಪದ್ಧತಿಯೇ ಬಹು ಪ್ರಾಚೀನವೆಂದೂ ತಿಳಿಸಿದ್ದಾನೆ.

ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿದ್ದ, 'ಅಭಿನವ ಭರತಾಚಾರ್ಯ' 'ರಾಯವಾಗ್ಗೇಯಕಾರ' ಮುಂತಾದ ಬಿರುದುಗಳನ್ನು ಹೊಂದಿದ್ದ, ಕಲ್ಲಪ್ಪ ದೇಶಿಕ ಅಥವಾ ಕಲ್ಲಿನಾಥನು ಶಾರ್ಙ್ಗದೇವನ 'ಸಂಗೀತ ರತ್ನಾಕರ'ಕ್ಕೆ 'ಕಲಾನಿಧಿ' ಎಂಬ ವಿದ್ವತ್ಪೂರ್ಣವಾದ ವ್ಯಾಖ್ಯಾನವನ್ನು ರಚಿಸಿದನು. ವ್ಯಾಖ್ಯಾನವಾದರೂ ಇದು ಸಂಗೀತಶಾಸ್ತ್ರದ ವಿಕಾಸಕ್ಕೆ ಮುಂದೆ ಮಾರ್ಗದರ್ಶಕವಾಯಿತು; ಮುಂದಿನ ಲಕ್ಷಣಕಾರರ ಮೇಲೂ ತನ್ನ ಪ್ರಭಾವಬೀರಿತು. ಅಲ್ಲದೆ 'ಕಲ್ಲಿನಾಥ ಮತ'ವೆಂಬ ಒಂದು ವಿಶಿಷ್ಟಸಂಪ್ರದಾಯವೇ ಪ್ರಚಲಿತವಾಯಿತು. 'ಗಾಂಧರ್ವಗುಣಗಂಭೀರ'ನಾಗಿದ್ದ ಪ್ರೌಢರಾಯನಿಂದ ಈತನಿಗೆ ಅಪಾರಪ್ರೋತ್ಸಾಹ ದೊರೆಯಿತೆಂದು ತಿಳಿಯುವುದು. ವಿಜಯನಗರದ ಅರಸರ ಆಳ್ವಿಕೆಯಲ್ಲಿ ರಚಿತವಾದ ಇತರ ಲಕ್ಷಣಗ್ರಂಥಗಳೆಂದರೆ ದೇವಣಭಟ್ಟನ 'ಸಂಗೀತ ಮುಕ್ತಾವಳಿ', ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಲಕ್ಷ್ಮಣಭಟ್ಟ ಅಥವಾ ಲಕ್ಷ್ಮೀಧರನು ರಚಿಸಿದ 'ಸಂಗೀತಸೂರ್ಯೋದಯ', ಗೋಪೇಂದ್ರ ತಿಪ್ಪ ಭೂಪಾಲನ 'ತಾಳದೀಪಿಕೆ,' ಕಾಮದೇವಿಯು ಬರೆದ ಸಂಗೀತ ಮತ್ತು ನಾಟ್ಯಗಳನ್ನು ವಿವರಿಸುವ 'ಸಂಗೀತಯುಗದರ್ಪಣ' ಮತ್ತು 'ಸಂಗೀತವಿದ್ಯಾವಿನೋದ,' ರಾಮರಾಯನ ಆಸ್ಥಾನದಲ್ಲಿದ್ದ ರಾಮಾಮಾತ್ಯನ 'ಸ್ವರಮೇಳ ಕಲಾನಿಧಿ' ಮುಂತಾದುವು. ಕನ್ನಡನಾಡಿನಿಂದ ತಂಜಾವೂರಿಗೆ ಹೋಗಿ ಅಲ್ಲಿ ರಘುನಾಥ ಭೂಪಾಲನ ಮಂತ್ರಿಯಾಗಿದ್ದ ಗೋವಿಂದ ದೀಕ್ಷಿತನ ಕೃತಿ 'ಸಂಗೀತ ಸುಧಾ' ಮತ್ತು ಅವನ ಮಗ ವೆಂಕಟಮಖಿಯ 'ಚತುರ್ದಂಡಿ ಪ್ರಕಾಶಿಕ' ಮೇಲಿನ ಗ್ರಂಥಗಳ ಹಾಗೆಯೇ ಸಂಗೀತಶಾಸ್ತ್ರದಲ್ಲಿ ಮೈಲಿಗಲ್ಲುಗಳೆನಿಸಿವೆ.

ಕೃಷ್ಣದೇವರಾಯನು ಕಟ್ಟಿಸಿದ್ದ ಅರಮನೆಯಲ್ಲಿ ನೃತ್ಯಸಭಾಗೃಹವೊಂದಿದ್ದುದನ್ನು ಪೋರ್ಚುಗೀಸ್ ಪ್ರವಾಸಿ ಪೇಯಾಸನು ವರ್ಣಿಸಿದ್ದಾನೆ. ವಿಸ್ತಾರವಾದ ಆ ಸಭಾಗೃಹದಲ್ಲಿ ಅಂತಃಪುರಸ್ತ್ರೀಯರು ನೃತ್ಯವನ್ನು ಅಭ್ಯಾಸಮಾಡುತ್ತಿದ್ದರೆಂದೂ ಅದರ ಕಂಬಗಳ ಹಾಗೂ ಗೋಡೆಗಳ ಮೇಲೆಲ್ಲಾ ಬಗೆಬಗೆಯ ಬಣ್ಣಗಳಿಂದ ಚಿತ್ರಿಸಲಾಗಿದ್ದ ನಾಟ್ಯಭಂಗಿಗಳಿದ್ದುವೆಂದೂ ಅವು ಒಂದೊಂದೂ ನಾಟ್ಯದ ಅಂತ್ಯಸ್ಥಿತಿಯನ್ನು ಸೂಚಿಸುವಂತಿದ್ದು ನಾಟ್ಯ ಕಲಿಯುವವರಿಗೆ ಮುಕ್ತಾಯದ ರೂಪದಲ್ಲಿ ಹೇಗೆ ನಿಲ್ಲಬೇಕೆಂಬುವದರ ಕಲ್ಪನೆಯನ್ನು ಮಾಡಿಕೊಡುತ್ತಿದ್ದುವೆಂದೂ ನರ್ತಕಿಯರು ತಮ್ಮ ದೇಹಸೌಷ್ಠವವನ್ನು ಕಾಪಾಡಿಕೊಳ್ಳಲು ವ್ಯಾಯಾಮ ಕೈಕಾಲು ಸಡಿಲಿಸಿಕೊಳ್ಳುವ ಬಗೆಯನ್ನು ಕೂಡ ಮತ್ತೊಂದೆಡೆ ತೋರಿಸಿಕೊಡಲಾಗುತ್ತಿತ್ತೆಂದೂ ಪೇಯಾಸ್ ತಿಳಿಸಿದ್ದಾನೆ. ಅಲ್ಲಲ್ಲಿ

ದೇವಾಲಯಗಳ ಗೋಡೆ ಗೋಪುರಗಳ ಮೇಲಿರುವ ನೃತ್ಯಭಂಗಿಗಳು ಆಗಿನ ಕಾಲದ ನಾಟ್ಯವಿದ್ಯೆಯ ತಜ್ಞತೆಯನ್ನು ಸೂಚಿಸುತ್ತವೆ. ಚಿದಂಬರದ ಗೋಪುರದ ಮೇಲೆ ವಿಜಯನಗರದ ಕಾಲದ ಇಂಥ ನೂರೆಂಟು ನೃತ್ಯಭಂಗಿಗಳನ್ನು ನೋಡಬಹುದು.

ವಿಜಯನಗರದ ಕಾಲದಲ್ಲಿ ದೇವದಾಸಿ ಪದ್ಧತಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿತ್ತು. ದೇವದಾಸಿಯರೂ ವೇಶ್ಯೆಯರೂ ನೃತ್ಯಗೀತಗಳಲ್ಲಿ ಪ್ರಾವೀಣ್ಯವನ್ನು ಪಡೆಯುತ್ತಿದ್ದರು. ರಾಜರಂತೆ ಅವರ ಸಾಮಂತರು, ಅಧಿಕಾರಿಗಳು, ಇತರ ಪ್ರತಿಷ್ಠಿತ ಜನರು ಇವರಿಗೆ ಹೇರಳವಾಗಿ ಪ್ರೋತ್ಸಾಹಕೊಟ್ಟಿದ್ದರಿಂದ ಈ ಕಲೆಗಳು ಅವರಲ್ಲಿ ಮನೆಮಾಡಿಕೊಂಡವು. ಆ ಕಾಲದ ಕಾವ್ಯಗಳಲ್ಲಿ ಇಂಥ ವೇಶ್ಯಾವಾಟಗಳ ವರ್ಣನೆಗಳು ಅಲ್ಲಲ್ಲಿ ಕಂಡುಬರುತ್ತವೆ. ಇವುಗಳೊಂದಿಗೆ ಜಾನಪದನೃತ್ಯ ಜಾನಪದಮೇಳಗಳ ಅಭಿವೃದ್ಧಿಯೂ ಸಾಕಷ್ಟು ಆಗಿರಬೇಕು. ಮಹಾನವಮಿ ದಿಬ್ಬ, ಹಜಾರ ರಾಮಸ್ವಾಮಿ ದೇವಾಲಯ ಮೊದಲಾದವುಗಳ ಮೇಲಿನ ಕೋಲಾಟದ, ಯಕ್ಷಗಾನಮೇಳದ ಶಿಲ್ಪ ಸಾಲುಗಳು ಅವಕ್ಕೆ ಸಾಕ್ಷಿ ನುಡಿಯುತ್ತಿವೆ.

ವಿಜಯನಗರದ ಅರಸರ ಆಸ್ಥಾನಗಳಲ್ಲಿ ಪ್ರೌಢಾವಸ್ಥೆಯನ್ನು ಪಡೆದ ಸಂಗೀತ ಆಸ್ಥಾನಗಳ ಹೊರಗೂ ಭಕ್ತಿಪಂಥದ ಸಾಧುಸಂತರ ಮೂಲಕ ಹೊಸದಿಕ್ಕುಗಳನ್ನು ಹಿಡಿದು ಬೆಳೆಯಿತು. ಅವರು ಅಸಂಖ್ಯಾತ ಕೃತಿಗಳನ್ನು ರಚಿಸಿ, ಸಂಗೀತ ಕಲೆಗೆ ಒಂದು ಜೀವಂತ ಸ್ವರೂಪವನ್ನು ಕೊಟ್ಟರು. ಇವರಲ್ಲಿ ಪುರಂದರದಾಸರು ಮುಖ್ಯರು. ಈಗ ಪ್ರಚಾರದಲ್ಲಿರುವ ಸಂಗೀತಶೈಲಿಗೆ ಇವರು ಆದ್ಯಪ್ರವರ್ತಕರಾಗಿ 'ಕರ್ಣಾಟಕಸಂಗೀತ ಪಿತಾಮಹ'ರೆನಿಸಿಕೊಂಡರು. ಹರಿದಾಸಸಾಹಿತ್ಯದ ಬೆಳವಣಿಗೆ ಸಂಗೀತಪ್ರಪಂಚದಲ್ಲಿ ಒಂದು ಮಹತ್ಸಾಧನೆ. ಭಕ್ತಿಮಾರ್ಗ ಜನಪ್ರಿಯಗೊಳ್ಳಲು ಸಂಗೀತ ಅನುಕೂಲ ಮಾಧ್ಯಮವಾಯಿತು. ನರಹರಿತೀರ್ಥರು 'ರಘುಪತಿ' ಎಂಬ ಅಂಕಿತದಲ್ಲಿ ಕನ್ನಡ ಹಾಡುಗಳನ್ನು ರಚಿಸಿದರು. ನಂತರ ಶ್ರೀಪಾದರಾಯರಿಂದ, ಇವರ ಶಿಷ್ಯರಾದ ವ್ಯಾಸರಾಯ ಸ್ವಾಮಿಗಳ ನೇತೃತ್ವದಲ್ಲಿ ಹಲವರು ಹರಿದಾಸರಿಂದ ವಿಪುಲವಾಗಿ ಕೃತಿರಚನೆಗಳಾದುವು. ಅವರಲ್ಲಿ ಪುರಂದರದಾಸರು, ಕನಕದಾಸರು, ವಾದಿರಾಜರು ಪ್ರಮುಖರು. ಮುಂದೆ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಮೊದಲಾದ ನೂರಾರು ಹರಿದಾಸರಿಂದ ದಾಸಸಾಹಿತ್ಯದ ಕೃಷಿ ನಡೆಯಿತು. ಪುರಂದರದಾಸರೇ ಲಕ್ಷಾವಧಿ ಕೀರ್ತನೆಗಳನ್ನು ರಚಿಸಿದ್ದರೆನ್ನಲಾಗಿದೆ. ಅನೇಕ ಜನಪದ ಮಟ್ಟುಗಳಿಗೆ ಶಾಸ್ತ್ರೀಯವಾದ ಸಂಗೀತ ರಾಗಗಳ ಸ್ವರೂಪಕೊಟ್ಟುದೂ ಸಾಮಾನ್ಯ ಜನತೆಗೆ ಸುಲಭವಾಗಿ ಗ್ರಹಿಸಬಲ್ಲಂತೆ ಸಾಹಿತ್ಯವಿದ್ದುದೂ ಮತ್ತು ಭಕ್ತಿಮಾರ್ಗದ ಮೂಲಕ ಭಗವದಾರಾಧನೆಯೆಂಬ ಸಂದೇಶಕ್ಕೆ ವಾಹಕವಾದ್ದೂ ಕೀರ್ತನೆಗಳು ಜನಪ್ರಿಯವಾಗಲು ಕಾರಣವಾದುವು.

ಒಂದು ಕಡೆ ಹರಿದಾಸಸಾಹಿತ್ಯ ಸಂಗೀತದ ಜನಪ್ರಿಯತೆಗೆ ಕಾರಣವಾದರೆ ಮತ್ತೊಂದು ಕಡೆ ಶಿವಶರಣರು ವಚನಗಳನ್ನೂ ಹಾಡುಗಳನ್ನೂ ರಚಿಸಿ ಶಿವಭಕ್ತಿಯನ್ನು ಸಾರುವಲ್ಲಿ ತಾವೂ ವಿಶಿಷ್ಟ ಸಂಗೀತಕ್ಕೆ ಪ್ರಾಮುಖ್ಯ ಕೊಟ್ಟರು. ಬಸವಣ್ಣನವರ ವಚನ

ನ್ರೊಂದರಲ್ಲಿ "ಎನ್ನ ಕಾಯವ ದಂಡಿಗೆಯ ಮಾಡಯ್ಯ....ಬತ್ತೀಸ ರಾಗವ ಹಾಡಯ್ಯಾ ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ"—ಎನ್ನುತ್ತಾರೆ. ೩೨ ರಾಗಗಳು ಅವರ ಕಾಲಕ್ಕೆ ಪ್ರಸಿದ್ಧವಾಗಿದ್ದುವೆಂದು ಇದರಿಂದ ತಿಳಿಯಬಹುದಲ್ಲದೆ, ವಚನಗಳನ್ನು ಕೂಡ ಹಾಡುವ ಪದ್ಧತಿಯಿದ್ದಿರಬೇಕು ಎಂದು ತಿಳಿಯಲು ಅವಕಾಶವಾಗುತ್ತದೆ. ಗುರು ಬಸವ, ಕರಸ್ಥಳದ ನಾಗಿದೇವ ಮೊದಲಾದ ವಿರಕ್ತರು ಪಲ್ಲವಿ ಸಹಿತವಾದ ಸಂಗೀತ ಕೃತಿಗಳನ್ನು ರಚಿಸಿದ್ದಾರೆ. ಇವರ ಸಂಗೀತ ಕೃತಿಗಳಲ್ಲಿ ವಿಚಾರ ಪ್ರಧಾನವಾದ ಕೃತಿಗಳು ಹೆಚ್ಚು. ಸಂಗೀತ ಪ್ರಪಂಚಕ್ಕೆ ಹೆಚ್ಚಿನ ಕೊಡುಗೆಯನ್ನು ಕೊಟ್ಟ ಶಿವಶರಣರಲ್ಲಿ ನಿಜಗುಣ ಶಿವಯೋಗಿ ಪ್ರಮುಖ. ಈತನ 'ವಿವೇಕಚಿಂತಾಮಣಿ'ಯಲ್ಲಿ ಸಂಗೀತಕಲೆಯನ್ನು ಕುರಿತ ಒಂದು ಭಾಗವಿದೆ. ಶ್ರುತಿ, ಸ್ವರ, ಅಲಂಕಾರ, ರಾಗ ಮತ್ತು ವಾದ್ಯಗಳನ್ನು ಇವನು ವಿವರಿಸಿದ್ದಾನೆ. ತ್ರಿಪದಿ ಸಾಂಗತ್ಯ ಮುಂತಾದ ಹಾಡುಗಳಲ್ಲಿ ಷಟ್ಸ್ಥಲಗಳನ್ನು ವಿವರಿಸಿರುವುದಲ್ಲದೆ, ರಾಗ ತಾಳಗಳಿಂದ ಕೂಡಿದ ಸಂಗೀತ ಕೃತಿಗಳನ್ನು 'ಕೈವಲ್ಯ ಪದ್ಧತಿಯ ಹಾಡುಗಳು' ಎಂಬ ಹೆಸರಿನಲ್ಲಿ ಈತನು ರಚಿಸಿದ್ದಾನೆ.

ಮೊಗಲರ ಪ್ರಾಬಲ್ಯ ದಕ್ಷಿಣದ ಮೇಲೆ ಹರಡಿದಂದಿನಿಂದ, ಸಂಗೀತ ಕಲಾ ಪೋಷಕ ರಾದ ಕೆಲವು ಮೊಗಲ ದೊರೆಗಳು ಕೂಡ ದಕ್ಷಿಣದಿಂದ ಸಂಗೀತಶಾಸ್ತ್ರಜ್ಞರನ್ನು ಉತ್ತರ ದೇಶಕ್ಕೆ ಕರಸಿಕೊಂಡಂತೆ ತಿಳಿಯುತ್ತದೆ. ಹೀಗೆ ಉತ್ತರಕ್ಕೆ ಹೋಗಿದ್ದವರಲ್ಲಿ ಪುಂಡ ರೀಕ ವಿಠಲ ಕೂಡ ಒಬ್ಬ. ಇವನು ತನ್ನನ್ನು ಕರ್ಣಾಟಕದವನೆಂದು ಹೇಳಿಕೊಂಡಿ ದ್ದಾನೆ. 'ನರ್ತನನಿರ್ಣಯ,' 'ರಾಗಮಾಲಾ', 'ರಾಗಮಂಜರಿ' ಮುಂತಾದುವು ಈತನ ಗ್ರಂಥಗಳು.

ವಿಜಯನಗರದ ಕಾಲದ ಕಡೆಯ ದಿನಗಳಲ್ಲಿದ್ದ ರತ್ನಾಕರವರ್ಣಿಯ 'ಭರತೇಶ ವೈಭವ'ದಲ್ಲಿ ಸಂಗೀತ ಮತ್ತು ನೃತ್ಯಗಳ ವಿಷಯವಾಗಿ ಅಲ್ಲಲ್ಲಿ ತಿಳಿಸುವ ಚಿತ್ರವತ್ತಾದ ವರ್ಣನೆಗಳು ಸ್ವಾರಸ್ಯಕರವೂ ಕುತೂಹಲಕರವೂ ಆಗಿವೆ. ಭರತನ ಆಸ್ಥಾನದ ಸಂಗೀತ ಮೇಳಗಳನ್ನು ವಿವರಿಸುತ್ತ ನಾನಾರಾಗಭೇದಗಳನ್ನೂ ಗಾಯನವಿಧಾನಗಳನ್ನೂ ಗಾಯಕದೋಷಗಳನ್ನೂ ತಿಳಿಸಿರುತ್ತಾನೆ. ಧ್ವನಿ, ಲಯ, ಮೇಳ, ಜತಿ, ಜಾತಿ, ಕಟ್ಟಣೆ, ಗಮಕ, ಆಲಾಪಗಳನ್ನು ಹೆಸರಿಸಿ ವಿವರಿಸಿರುವುದಲ್ಲದೆ ವೀಣೆ, ಚೆಂಗು, ಉಪಾಂಗ, ರಂಜೆಯ, ಚಿನುಚಿಂಪೆ, ತುಡುಮು, ದಂಡಿಗೆ, ಸ್ವರಮಂಡಲ, ಕಿನ್ನರಿ ಮುಂತಾದ ಹಲವು ವಾದ್ಯಗಳನ್ನೂ ಹೆಸರಿಸಿದ್ದಾನೆ. ದಿಕ್ಕನ್ನಿಕಾನಾಟ್ಯ, ಹಂಸಮಂಡಳಿ, ಜಲಕನ್ನಿಕಾ ನಾಟ್ಯ ಮುಂತಾದ ಹಲವು ನಾಟ್ಯಗಳನ್ನು ಹೆಸರಿಸಿದ್ದಾನೆ.

ಮೈಸೂರರಸರೂ ಸಂಗೀತ ನೃತ್ಯಗಳ ಅಭಿವೃದ್ಧಿಗೆ ತಮ್ಮ ಅಪಾರವಾದ ಕೊಡುಗೆ ಯನ್ನಿತ್ತಿದ್ದಾರೆ. ಅವರಲ್ಲಿ ಪ್ರಮುಖನಾದವನು ಚಿಕ್ಕದೇವರಾಜ ಒಡೆಯ. ಸಾಹಿತ್ಯ ದಂತೆ ಸಂಗೀತದಲ್ಲಿಯೂ ಈತ ನಿಷ್ಣಾತನಾಗಿದ್ದ. ಜಯದೇವನ 'ಗೀತಗೋವಿಂದ'ದಂತೆ ಚಿಕ್ಕದೇವರಾಜನೂ 'ಗೀತಗೋಪಾಲ' ಎಂಬ ಸುಂದರ ಸಂಗೀತ ಕೃತಿಯನ್ನು ರಚಿಸಿ ದ್ದಾನೆ. ಮುಂದೆಯೂ ಮೈಸೂರಿನ ಒಡೆಯರ ಆಸ್ಥಾನದಲ್ಲಿ ಪ್ರಸಿದ್ಧರಾದ ಸಂಗೀತ

ವಿದ್ವಾಂಸರಿದ್ದು ಕರ್ಣಾಟಕಸಂಗೀತದ ಹಿರಿಮೆಯನ್ನು ತಾವು ಹುಟ್ಟಿದ ನಾಡಿನಲ್ಲಿ ಮತ್ತು ಹೊರನಾಡಿನಲ್ಲಿ ಎತ್ತಿಹಿಡಿದ್ದಾರೆ.

ವಿಜಯನಗರದ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನಾಟ್ಯಕಲೆ ಮುಂದೆ ಹಲವು ಕಾಲ ಪ್ರಾಯಃ ಭೋಗಸಾಧನವಾಗಿ ವೇಶ್ಯಾವಾಟಿಕೆಗಳಲ್ಲಿ ಬೆಳೆದುದರಿಂದಲೋ ಏನೋ ಕುಲೀನ ಮನೆತನಗಳವರು ಅದನ್ನು ಕಲಿಯಲು ಹಿಂಜರಿದರು. ಆದರೆ ೧೯ನೆಯ ಶತಮಾನದಿಂದೀಚೆಗೆ ಆ ಕಲೆಯ ಹಿರಿಮೆಯನ್ನೆತ್ತಿ ಹಿಡಿದು, ಸಾಧನೆಮಾಡಿ ಅದನ್ನು ಅಭಿವೃದ್ಧಿಗೊಳಿಸಿ, ಅದರಲ್ಲಿ ವಿಶಿಷ್ಟವಾದ ಮೈಸೂರುಶೈಲಿಯೊಂದನ್ನು ಹಲವು ನೃತ್ಯ ಕಲಾವಿದರು ರೂಪುಗೊಳಿಸಿದ್ದನ್ನು ನೆನೆಯಬೇಕು.

ಶಾಸನ, ವಾಸ್ತುಶಿಲ್ಪ ಲಕ್ಷಣಗ್ರಂಥಗಳಲ್ಲಿ ಕನ್ನಡನಾಡಿನ ನೃತ್ಯ ಸಂಗೀತಗಳ ಹಿರಿಮೆಗರಿಮೆಗಳ ಅನೇಕ ಉಲ್ಲೇಖಗಳಿದ್ದು, ಅವುಗಳಲ್ಲಿ ಕೆಲವನ್ನು ಮೇಲೆ ಉದಾಹರಿಸಿದೆ. ಸಾಹಿತ್ಯಗ್ರಂಥಗಳಲ್ಲಿಯೂ ಹೇರಳವಾಗಿ ಈ ಸಂಬಂಧದ ಉಲ್ಲೇಖಗಳು ದೊರೆಯುತ್ತವೆ. ಪಂಪ, ರನ್ನ, ಅಗ್ಗಳ, ನೇಮಿಚಂದ್ರ, ಜನ್ನ, ರತ್ನಾಕರ, ಚಂದ್ರಕವಿ, ಮೊದಲಾದ ಪ್ರಾಚೀನಕವಿಗಳಲ್ಲಿ ಬೆರಗುಗೊಳಿಸುವ ಮಟ್ಟಿಗೆ ಸಂಗೀತ ಮತ್ತು ನೃತ್ಯ ಕಲೆಗಳ ಪಾರಿಭಾಷಿಕ ಉಲ್ಲೇಖಗಳು ತುಂಬಿವೆ. ಇವುಗಳಲ್ಲಿ ಹೆಚ್ಚಿನವುಗಳ ಅರ್ಥ ಆಶಯಗಳು ಇಂದು ನಮಗೆ ಸ್ಫುಟವಾಗದಿದ್ದರೂ, ಅವುಗಳ ಅನ್ಯಾದೃಶವಾದ ದೇಶೀಯ ಮೌಲ್ಯ ಕನ್ನಡ ಜನದ ಸಾಂಸ್ಕೃತಿಕ ಸಂಪನ್ನತೆಯ ಪ್ರತೀಕವಾಗಿರುವುದು ಹೆಮ್ಮೆಯ ವಿಷಯ. ಆಯಾ ಕವಿಗಳ ಕಲಾಭಿಜ್ಞತೆ, ಆ ಕವಿಗಳು ಬಾಳಿದ ಕಾಲ ಪರಿಸರಗಳ ಕಲಾವೈಭವ, ಪರಂಪರೆಯು ಪೋಷಿಸಿಕೊಂಡು ಬಂದ ಭೇದಪ್ರಭೇದಗಳ ಕಲಾಸಂಪದ ಇವೆಲ್ಲವನ್ನೂ ಕನ್ನಡದ ಸಾಹಿತ್ಯಗ್ರಂಥಗಳೊಳಗಿನ ಸಂಗೀತ ಮತ್ತು ನೃತ್ಯಕಲೆಗಳ ಉಲ್ಲೇಖಗಳು ಮನೋಜ್ಞವಾಗಿ ಮನವರಿಕೆ ಮಾಡಿಕೊಡುತ್ತವೆ.

## ಅಡಿಟಿಪ್ಪಣಿಗಳು

1 'ಕಾವ್ಯಾವಲೋಕನ', ಪ. ೩೧೩.
2 'ಪಂಪಭಾರತ', ೨–೩೪ ವ.
3 *MAR.*, 1942, p. 145.
4 *EC.*, VI, Mg. 36.
5 A. S. Altekar, *Rashtrakutas and Their Times*, p. 152.
6 *EI.*, IX, pp. 24–45.
7 V. V. Mirashi, *Indological Studies*, Vol. IV.
8 *EC.*, IV, Ng. 3.
9 ಅದೇ, VII, Sh. 4. ಗಂಗವಂಶದ ದಡಿಗ ಮಾಧವನಿಗೆ ಸಿಂಹಣಂದ್ಯಾಚಾರ್ಯರು ಮಾಡಿದ ಉಪದೇಶ (ಶಾಸನದ ಕಾಲ ಕ್ರಿ.ಶ. ೧೧೨೨).

ನುಡಿದುದನಾರೊಳಂ ನುಡಿದು ತಪ್ಪಿದೊಡಂ ಜಿನಶಾಸನಕ್ಕೊಡಂ
ಬಡದವನನ್ಯನಾರಿಗೆರೆದಟ್ಟಿದವಂ ಮಧುಮಾಂಸಸೇವೆಗೆ

ಬುದ್ಧಡಮಕುಲೀನರಪ್ಪವರ ಕೊಳ್ಕೊಡೆಯಾದಡಮುತ್ತಿರ್ಗರ್ಥಮಂ
ಕುಡದೊಡಮಾಹವಾಂಗಣದೊಳೋಡಿದಡಂ ಕಿಡುಗುಂ ಕುಲಕ್ರಮಂ

10 ಅದೇ, XII, Gb. 61.
11 'ಪಂಪಭಾರತ', ೨-೯೭ ವ.
12 *SII.*, IX, pt. I, No. 17 and 41.
13 *EI.*, VIII, No. 2, pp. 60-65.
14 'ಆದಿಪುರಾಣ', ೧-೮೧ ವ.
15 *EI.*, XII, p. 274.
16 *EI.*, XV, p. 87.
17 *YIC.*, p. 108.
18 IA., XIX, p. 149,
19 *EC.*, VII, Sk. 263.
20 *EI.*, XXVIII, p. 33.
21 (i) *Indian Archeaology*, 1968-69.
(ii) Madhava N. Katti, More Light on Early Chalukyan History, *Srikanthika*, p. 113.
(iii) JKU., (Soc.Sc.), p. 177.
22 *EI.*, XII ; ಐವೂರ ಶಾಸನ, ಕ್ರಿ.ಶ. ೧೨೭೭.
23 *EI.*, Vol. XV, p. 78.
24 ಡಾ. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೪೮.
25 *EC.*, VII, Sk. 118.
26 *BKI.*, I, i-97.
27 *EC.*, VII, Sk. 118.
28 *EC.*, VIII, Sb. 175.
29 *BKI.*, I, ii—152.
30 'ಆದಿಪುರಾಣ', ೮-೬೩ ವ.
31 ಕದಂಬರ ದಾವಣಗೇರಿ ತಾಮ್ರಶಾಸನ :

ಯೇ ಸೇತೂನಭಿರಕ್ಷಂತಿ ಭಗ್ನಾನ್ ಸಂಸ್ಥಾಪಯನ್ತಿ ಚ ।
ದ್ವಿಗುಣಂ ಪೂರ್ವಕರ್ತೃಭ್ಯಃ ತತ್ಫಲಂ ಸಮುದಾಹೃತಮ್ ॥ IA., VI, p. 32.

32 *MAR.*, 1930, *EC.*, VII Sk. 176.
33 'ವಚನಧರ್ಮಸಾರ' (೨ನೆಯ ಮುದ್ರಣ), ವ. ೧೮೫, ಪು. ೮೮.
34 ಕಕಜ., ೧೯೬೧, ಭಾಗ ೧, ಪು. ೨೯-೩೦.
35 *EC.*, III, NJ. 192.
36 *EC.*, V, Hn. 34.
37 *EC.*, XI, Dg. 66.
38 'ಪಂಪಭಾರತ', ೧-೫೮.
39 *EC.*, II,
40 *SII.*, IV, No. 267.
41 *Ibid.*
42 *KI.*, I, p. 53.

43 ಸಂ. ಎಲ್. ಬಸವರಾಜು, 'ಅಲ್ಲಮನ ವಚನ ಚಂದ್ರಿಕೆ', ವ. ೮೧೨.
44 *MAR.*, 1927, p. 53.
45 *KI.*, I, p. 53 ; ಹೂಲಿಯ ಶಿವಗೇರಿಯ ದಾಸಿರಾಜನು ಅಗಸ್ತ್ಯೇಶ್ವರ ದೇವರಿಗೆ ನಾಗಬಾವಿ, ಅಗ್ಗಿಷ್ಟಿಗೆಯ ಆರೈಕೆಗಳ ಜೊತೆಗೆ ಧರ್ಮದ ಏತವನ್ನೂ ದತ್ತಿಕೊಟ್ಟ ವಿಷಯವನ್ನು ನೋಡಿ.
46 *EC.*, V, Cn. 251.
47 ೧೨.೨೪. "ಕೆಯ್ಮಂತೆ ಕೆಯ್ಯುೞುಮೆಯಂತೆ (ಕೆಯ್ಬೊಳ್) ಪದಂಬಡೆವಂತೆ ಬಿತ್ತಣದಂತೆ ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ ಕೊಯ್ಲಾದಂತೆ ಸೂಡಿನಂತೆ ಕಳಕ್ಕೆವರ್ಪಂತೆ ಒಕ್ಕಣದಂತೆ ರಾಶಿಯಂತೆ..." ಈ ವಿವರಗಳಲ್ಲಿ ಅಂದಿನಿಂದ ಇಂದಿಗೂ ಭೇದ ಬಹಳ ಇಲ್ಲ; ಪ್ರಾದೇಶಿಕ ಶಬ್ದ ಭೇದಗಳಿರಬಹುದು.
48 ಫ. ಗು. ಹಳಕಟ್ಟಿ, 'ದೇವರ ದಾಸಿಮಯ್ಯನ ವಚನಗಳು', ವ. ೧೪೭, ಪು. ೯೨.
49 'ಗದಾಯುದ್ಧ', ೧-೧೬, 'ಅಲ್ಲಮನ ವಚನಚಂದ್ರಿಕೆ', ೪೦೮ ; 'ಧರ್ಮಾಮೃತ' ; *EC.*, V, Bl. 236.
50 *EC.*, VII, Sk. 112.
51 *EC.*, X, Kl. 110 ; VI Kd. 49.
52 ಹೋಲಿಸಿ : 'ವಚನ ಧರ್ಮಸಾರ', ೧೫೯, ಪು. ೨೫೧.
53 *EC.*, VII, Hl. 1.
54 ಸಂ. ಟಿ. ಎಸ್. ವೆಂಕಣ್ಣಯ್ಯ, 'ಬಸವರಾಜದೇವರ ರಗಳೆ', ಪು. ೮೭.
55 'ಆದಿಪುರಾಣ', ೨-೬೧, 'ಪಂಪಭಾರತ', ೧೨-೩, 'ಗದಾಯುದ್ಧ' ೨-೧೩.
56 'ವಚನ ಧರ್ಮಸಾರ', ಸಂ. ೪೨೧.
57 ಅದೇ, ವ. ೨೯.
58 ಸಂ. ಶಿ. ಶಿ. ಬಸವನಾಳ, 'ಬಸವಣ್ಣನವರ ವಚನಗಳು', ವ. ೮೬೦, ಪು. ೨೩೦.
59 ಫ. ಗು. ಹಳಕಟ್ಟಿ, 'ದೇವರ ದಾಸಿಮಯ್ಯನ ವಚನಗಳು', ವ. ೧೯, ಪು. ೩೧.
60 *EC.*, IV, Hn. 137.
61 *India as known to Pāṇini*, p. 245.
62 ಅದೇ, ಪು. ೨೨೩.
63 'ಅಕ್ಕಮಹಾದೇವಿಯ ವಚನಗಳು', 'ಕಾವ್ಯಸಂಚಯ', ಪು. ೩೪, ೧೯೯.
64 'ಶಾಸನ ಸಾಹಿತ್ಯ ಸಂಚಯ' ಸಂ. ೬೯, ಪು. ೧೦೪; SII., IX, i, 249.
65 'ವಚನ ಧರ್ಮಸಾರ', ಪು. ೨೨೮, ವ. ೧೦; 'ಬಸವಣ್ಣನವರ ವಚನಗಳು', ವ.೩೧; ಪು. ೯; 'ಅಲ್ಲಮನ ವಚನಚಂದ್ರಿಕೆ', ೧೦೩, ಪು. ೨೫ ; 'ಸಮಯ ಪರೀಕ್ಷೆ', ಪು. ೩೩೬, ೧೫-೨೯.
66 *BKI.*, I, ii, 200.
67 *Gold Mining Industry in India*, p. 25.
68 *India as known to Paṇini*, p. 231.
69 *EC.*, V, Bl. 166.
70 "ಯೇ ಕೇಚನ್ ಖನಿದ್ರವ್ಯ ಹಸ್ತಿವನಾದೀನಾಂ ಕರ್ಮಾಂತಾಃ ತೇಷುನಿಯುಕ್ತಃ ॥" ಸಿಂಘೀ ಜೈನ ಗ್ರಂಥಮಾಲೆಯ 'ಸಟಿಪ್ಪಣಕ ಕೌಟಲೀಯ ಅರ್ಥಶಾಸ್ತ್ರ', ಪು. ೨೧.
71 *Hindu Revenue System*, p. 111.
72 *EC.*, VII, Sk. 118.
73 *EC.*, VII, Sk. 118.
74 *EI.*, XIII, p. 301.

75 IA., XIV, p., 15.
76 ಅದೇ., ಪು. ೧೪.
77 ಎತ್ತು, ಕುದುರೆ, ಕತ್ತೆಗಳ ಮೇಲೆ ವಸ್ತುಗಳನ್ನು ಹೇರಿಕೊಂಡು ಬರುವ ಒಂದು ವಿಶೇಷ ಪದ್ಧತಿ. ಇನ್ನೂ ಈ ಶಬ್ದ ಗುಲ್ಬರ್ಗ ಜಿಲ್ಲೆಯಲ್ಲಿ ಬಳಕೆಯಲ್ಲಿದೆ.
78 *India as known to Pāṇini*, p. 236–37.
79 'ಪಂಪಭಾರತ', ೩_೧೫.
80 'ವಚನ ಧರ್ಮಸಾರ', ಸಂ. ೩೪೭.
81 *India as known to Pāṇini*, p. 238, 248.
82 *Ibid.*, p. 251.
83 'ವಚನ ಧರ್ಮಸಾರ', ವ. ೯೬.
84 *EC.*, Vol. IV, Ng. 14.
85 (a) *EI.*, Vol. XII ; (b) P. B. Desai, *Jainism in South India and Some Jaina Epigraphs* No. 1 ; (c) *EC.*, XII, SI. 40.
86 'ಪಂಪಭಾರತ', ೧೨–೧೭೫ ;
87 'ಸಮಯ ಪರೀಕ್ಷೆ', ೫–೪೭
88 *India as known to Paṇini*, p. 416.
89 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಪು. ೧೯೧.
90 'ಯಶಸ್ತಿಲಕ ಚಂಪೂ', ೩–೧೭೨.
91 *SII.*, Vol. IX, i. 76. 91(a) 'ಸಟಿಪ್ಪಣಿಕಂ ಕೌಟಲೀಯಮರ್ಥಶಾಸ್ತ್ರಮ್', ಪು. ೨೫.
92 *BKI.*, Vol. I, i. 36. 92(a) ಅದೇ., ಪು. ೯.
93 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಪು. ೧೯೨.
94 ತೀ. ನಂ. ಶ್ರೀಕಂಠಯ್ಯ, 'ಭಾರತೀಯ ಕಾವ್ಯ ಮೀಮಾಂಸೆ', ಪು. ೨೩೧.
95 Dr. A. S. Altekar, *Rashtrakutas and Their Times*, p. 289.
96 *EC.*, Vol. VII, Sk. 176.
97 ibid., No. 236.
98 Dr. S.R. Rao, Recent Discoveries in Aihole and Pattadakal, *Srikanthika*, p. 27.
99 *EC.*, VII, Sk. 176.
100 'ಶಾಸನ ಸಾಹಿತ್ಯಸಂಚಯ', ಪು. ೧೦೬.
101 *EC.*, XI, Dg. 90.
102 *EC.*, XII, 1077 A.D.
103 *BKI.*, I, No. 85.
104 'ವಚನ ಧರ್ಮಸಾರ', ವ. ೯೭.
105 *EI.*, IV, No. 6 ; 'ಶಾಸನ ಸಾಹಿತ್ಯ ಸಂಚಯ', ಪು. ೪೧-೪೩ ; MAR., 1931, p. 62–64.
106 'ಶಾಸನ ಸಾಹಿತ್ಯ ಸಂಚಯ', ಪು. ೭೧.
107 *Karnataka Through the Ages*, p. 279.
108 *Inscriptions from Nanded District*, p. 29–30.
109 ಅದೇ., ಸಂ. ೨೭, ಪು. ೪೧.
110 'ಜೈಮಿನಿ ಭಾರತ', ೨೯_೧೭_೨೨.

111 *SII.*, Vol. XX, 4, 5, 6, 7.
112 ಸಂಜಾನ್ ಶಾಸನ, ಗುಣಭದ್ರರ ‘ಉತ್ತರ ಪುರಾಣ’, ಕ್ಯಾಂಬೆ ತಾಮ್ರಪಟ್ಟ, ‘ಪಂಪ ಭಾರತ’—ಮುಂತಾದವುಗಳಲ್ಲಿಯ ಉಲ್ಲೇಖವನ್ನು ಗಮನಿಸಬಹುದು.
113 A. S. Altekar, op. cit. p. 247.
114 Dr. S. Srikaṇṭha Sāstri, *Sources of Karnataka History*, Vol. I, p. 40–46.
115–6 ‘ಕವಿರಾಜಮಾರ್ಗ’, ೨–೨೮.
117 ಅದೇ., ೧–೩೮, ೩೯ ; ೧–೯೬ ; ೨–೩೩.
118 ಅದೇ., ೧–೮೨.
119 ಸಂ. ಎಸ್. ಜಿ. ನರಸಿಂಹಾಚಾರ್, ‘ಆದಿಪುರಾಣ’ ೨–೯ ಪ.
120 ಡಾ. ರಂ. ಶ್ರೀ. ಮುಗಳಿ, ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೧, ಪು. ೧೮೧.
121 *EC.*, V, p. 99.
122 *Mediaeval Jainism*, p. 2.
123 P. B. Desai, *Jainism in South India and Some Jaina Epigraphs*, p. 1–2.
124 ನಾ. ಭಾ. ಶಾಸ್ತ್ರಿ, ಕೊಪಣ-ಕೊಪ್ಪಳ, ‘ಪ್ರಬಂಧಮಾಲೆ’, ಪು. ೧೮೯–೨೧೪.
125 ‘ಅಜಿತಪುರಾಣ’, ೧೨–೬.
126 ‘ಶಾಸನ ಪದ್ಯಮಂಜರಿ’, ಪ. ೧೪೪೩.
127 ಆರ್. ಎಸ್. ಪಂಚಮುಖಿ, ‘ಕರ್ನಾಟಕ ಇತಿಹಾಸ’, ಪು. ೧೩೩.
128 ‘ವಡ್ಡಾರಾಧನೆ’, ೧೯೭೦, ಪು. ೯೨–೯೩.
129 Dr. S. Srikantha Sastri, *Sources of Karnataka History*, I, p. 104.
130 *EC.*, II, 1973, No. 360.
131 *IA.*, VI, p. 24, 34.
132 ನಾಥೂರಾಮ್ ಪ್ರೇಮೀ, ‘ಜೈನ್ ಸಾಹಿತ್ಯ ಔರ್ ಇತಿಹಾಸ್’, ಪು. ೧೯೭, ಅ.ಟಿ. ೪.
133 *EC.*, II, 1973, No. 156.
134 *EC.*, IV, No. 25–28.
135 *IA.*, VI, p. 28 ; EC., II. 1973, No. 150.
136 Gudnapur Inscription of Kadamba Ravivarma, *Srikaṇṭhikā*, 1973, p. 71.
137 *EC.*, VIII, Nr. 36 ; (a) *EC.*, VIII, Nr 35 ; *EC.*, XII, Ck. 18.
138 *Jaina Community : A Social Survey*, pp. 334-45 ; YIC, p. 332, f.n. 1.
139 ‘ಶಾಸನ ಸಾಹಿತ್ಯ ಸಂಚಯ’, ಪು. ೩೧.
140 *EC.*, II, 1973, No. 81, 163.
141 *Annual Report on Kannada Research in Bombay Province*, 1939–40, p. 90.
142 EC., IV, Yd. No. 25.
143 P. B. Desai. op. cit.
144 ಡಾ. ಎಂ. ಚಿದಾನಂದಮೂರ್ತಿ, ‘ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ’, ೧೯೬೬ ಪು. ೧೦೨.
145 SII. XV, No. 56.
146 EC., II, 1973, No. 475.
147 ಸಂ. ಎ. ವೆಂಕಟರಾವ್, ಎಚ್. ಶೇಷ ಅಯ್ಯಂಗಾರ್, ‘ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ’, ಭೂಮಿಕಾಂಡ, ಪ. ೧೮೯. ಪು. ೫೭.
148 ಕಕಚ., ೧, ೧೯೬೧, ಪು. ೧೭೨.

149 ಡಾ. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೦೯.
150 A. L. Basham, *The Wonder that was India*, p. 297.
151 ಶರಣಸಾಹಿತ್ಯ, ೧೯–೨, ಪು. ೭೨.
152 'ಕರ್ಣಾಟಕದ ಅರಸುಮನೆತನಗಳು', ಪು. ೩.
153 ಶರಣ ಸಾಹಿತ್ಯ, ೧೯–೨, ಪು. ೭೨.
154 EC., X, Mb. 157.
155 EC., XVI, Tn. 78.
156 EI., XXIII, p. 75.
157 Karmarkar, *The Cultural History of Karnataka*, p. 175.
158 EI., XIII, p. 329.
159 YIC., p. 249.
160 BKI., I, 99.
161 IA., VIII, p. 212.
162 ಶರಣ ಸಾಹಿತ್ಯ, ೧೯–೨, ಪು. ೭೩.
163 IA., X, p. 185.
164 MAR., 1933, p. 78.
165–7 ಡಾ. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೧೭ ; ೧೨೩ ; ೧೨೦–೨೨.
168 ಮಹಾಭಾರತದ ಶಾಂತಿಪರ್ವದಲ್ಲಿ ನಾರಾಯಣೀಯ ಭಾಗ.
169 SII., IX. Pt. I, No. 163.
170 Dr A. Goswami, The Art of Rashtrakutas, plate No 3; A.M. Annigeri, A Guide to the Pattadakal Temples, pp. 22, 30.
171 'ಕರ್ಣಾಟಕದ ಅರಸುಮನೆತನಗಳು', ಪು. ೪೭.
172 A. M. Annigeri, op. cit. p. 2.
173 Ibid., p. 48.
174 EC., XII, Si. 28.
175 ಕಪಟರಾಳ್ ಕೃಷ್ಣರಾವ್, 'ಕರ್ಣಾಟಕ ಲಾಕುಳ ಶೈವರ ಇತಿಹಾಸ,' ೧೯೫೫, ಪು. ೧೧೦.
176 SII., XX. No. 69.
177 EI, XII, ಐಪೂರು ಶಾಸನಗಳು, ಬಿ. ; ಜಿ.
178 SII., IX, Pt. I., No. 251.
179 Ibid., No. 119.
180 EC., VII, Sk. 102 ; *A Twelfth Century University in Mysore*, p. 28.
181 SII., XV, No. 56.
182 ವೀರಶೈವದ ಹುಟ್ಟು ಬೆಳೆವಣಿಗೆ, 'ಬಸವನಾಳ ಸ್ಮಾರಕ ಸಂಪುಟ', ಧಾರವಾಡ, ೧೯೫೬, ಪು. ೪೬೩.
183 JBBRAS., XIV, p. 26.
184–7 'ಸಮಯ ಪರೀಕ್ಷೆ', ೧೪–೫೦ ; ೮–೧೧೭ ; ೧–೫೮ ; ೪ ೧೨೫.
188 BKI., I, No. 37 ; EC., IV, Gu. 79.
189 Dr. N. Venkataramanayya, 'V(L)emulavada Chalukyas, Appendix.
190 'ಬಸವನಾಳ ಸ್ಮಾರಕ ಸಂಪುಟ', ಪು. ೪೩೭.
191 ಡಾ. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೬೦.
192 SII., XV, No. 56.

193 'ವಚನ ಧರ್ಮಸಾರ,' ೧೯೪೬, ಪು. ೨೦೧.
194 MAR., 1933, No. 48, pp. 47–52.
195 ಪ್ರ.ಕ., ೨೦-೩, ೧೯೩೬.
196 MAR., 1936, No. 1.
197 MAR., 1929, p. 262–63.
198 BKI., I, Pt. I, No. 52.
199 R. D. Ranade, *Pathway to God in Kannada Literature*, p. 182.
200 EI., VI, p. 263.
201 K.A.N. Sastri, *Development of Religion in South India*, p. 70.
202 *Karnataka Through The Ages*, p. 993.
203 K.A.N. Sastri, op. cit, p. 70.
204 R. S. Mugali, *The Heritage of Karnataka*, p. 116.
205 *Karnataka Through the Ages*, p. 725.

ಅಧ್ಯಾಯ ಏಳು

# ಕನ್ನಡ ಮತ್ತು ಇತರ ದ್ರಾವಿಡ ಭಾಷಾ ಸಾಹಿತ್ಯಗಳು: ಸಂಬಂಧ, ಪ್ರಭಾವ

## ಪೀಠಿಕೆ

ದಕ್ಷಿಣ ಭಾರತದಲ್ಲಿರುವ ಭಾಷೆಗಳಲ್ಲಿ ತಮಿಳು, ಕನ್ನಡ, ತೆಲುಗು ಮತ್ತು ಮಲಯಾಳ ಗಳು ಮುಖ್ಯವಾದುವು. ಭಾಷಿಕವಾಗಿ ಒಂದೇ ವರ್ಗಕ್ಕೆ ಸೇರಿರುವ ಈ ನಾಲ್ಕು ಸಾಹಿತ್ಯಿಕ ಭಾಷೆಗಳಲ್ಲಿ ಅನೇಕ ಸಾಮ್ಯಗಳು ಕಂಡುಬರುತ್ತವೆ. ತೆಲುಗು, ಕನ್ನಡ ಮತ್ತು ಮಲಯಾಳಗಳ ಮೇಲೆ ಸಂಸ್ಕೃತ ಭಾಷೆಯ ಪ್ರಭಾವ ಹೆಚ್ಚಾಗಿದೆ. ಆದರೆ ಕ್ರಿಸ್ತ ಪೂರ್ವದಲ್ಲೇ ತಮಿಳು ದೇಶದಲ್ಲಿ ಅಗಸ್ತ್ಯ ಮುಂತಾದ ಆರ್ಯಋಷಿಗಳು ವೈದಿಕ ಮತ ವ್ಯಾಪ್ತಿಗಾಗಿ ದುಡಿದರೂ ಬೌದ್ಧ, ಜೈನ ಪ್ರಸಾರಕರು ಪ್ರಾಕೃತ ಸಂಪರ್ಕವನ್ನು ಬೆಳಸಿದ ರಾದರೂ ರಾಜಕೀಯವಾಗಿ ತಮಿಳು ದೇಶ ಆರ್ಯಜನರ ಪ್ರಭಾವಕ್ಕೆ ಒಳಗಾಗಲಿಲ್ಲ. ಕ್ರಿ.ಶ.ದ ಆರಂಭಕಾಲದಲ್ಲೇ ಸ್ಥಳೀಯ ರಾಜರು ತಮಿಳು ಭಾಷೆಯಲ್ಲಿ ಕಾವ್ಯರಚನೆಗೆ ಪ್ರೋತ್ಸಾಹವನ್ನು ಕೊಟ್ಟರು. ಈ ಕಾರಣಗಳಿಂದಾಗಿ ತಮಿಳು ಅಷ್ಟಾಗಿ ಸಂಸ್ಕೃತ ಪ್ರಾಕೃತಗಳ ಪ್ರಭಾವಕ್ಕೆ ಒಳಗಾಗಲಿಲ್ಲವೆಂದು ಕೆಲವರು ಹೇಳುತ್ತಾರೆ.

ಸಾಹಿತ್ಯಿಕವಾಗಿ ಹೇಳುವುದಾದರೆ ಸಂಸ್ಕೃತದ ರಾಮಾಯಣ ಭಾರತಗಳು, ಪುರಾಣ ಗಳು ದಕ್ಷಿಣ ಭಾರತದ ಎಲ್ಲಾ ಭಾಷೆಗಳ ಮೇಲೂ ಪ್ರಭಾವವನ್ನು ಬೀರಿವೆ. ತೆಲುಗು ಕನ್ನಡಗಳು ಈ ಪ್ರಭಾವಕ್ಕೆ ಹೆಚ್ಚು ಒಳಗಾಗಿವೆ. ಈ ಎರಡು ಭಾಷೆಗಳಲ್ಲಿರುವ ಗ್ರಂಥ ಗಳಲ್ಲಿ ಬಹುಪಾಲು ಸಂಸ್ಕೃತದ ಅನುವಾದಗಳು, ಅನುಕರಣೆಗಳು. ಆದರೆ ತಮಿಳಿನಲ್ಲಿ ಸ್ವತಂತ್ರ ಸಾಹಿತ್ಯ ಹೆಚ್ಚಾಗಿದೆ. ತಮಿಳಿನ ನಾಯನ್ಮಾರರ ಮತ್ತು ಆಳ್ವಾರರ ಜೀವನ, ಅವರಿಗೆ ಸಂಬಂಧಿಸಿದ ಸಾಹಿತ್ಯ ಕನ್ನಡ ತೆಲುಗು ಸಾಹಿತ್ಯಗಳ ಮೇಲೆ ತಮ್ಮ ಪ್ರಭಾವ ವನ್ನು ಬೀರಿವೆ. ಬಹಳ ಕಾಲದವರೆಗೂ ಮಲಯಾಳ ತಮಿಳಿನ ಪ್ರಭಾವಕ್ಕೆ ಒಳ ಗಾಗಿದ್ದು ಬಳಿಕ ಅದು ಸಂಸ್ಕೃತ ಪ್ರಭಾವಕ್ಕೆ ತಿರುಗಿತು.

ಛಂದೋವ್ಯಾಕರಣಗಳ ವಿಷಯದಲ್ಲಿ ನೋಡುವುದಾದರೆ ದಕ್ಷಿಣ ದೇಶದ ಭಾಷೆಗಳು ಸಾಕಷ್ಟು ಸಾಮ್ಯವನ್ನು ತೋರಿಸುತ್ತಿವೆ. ತಮಿಳಿನಲ್ಲಿರುವ 'ತೊಲ್‌ಕಾಪ್ಪಿಯಂ' ಸಂಸ್ಕೃತ ಭಾಷಾ ಸಂಪ್ರದಾಯಗಳನ್ನನುಸರಿಸಿ ಬರೆದ ಗ್ರಂಥವಾದರೂ ವಸ್ತುತಃ

ದ್ರಾವಿಡ ಲಕ್ಷಣಗಳನ್ನು ಚೆನ್ನಾಗಿ ವ್ಯಕ್ತೀಕರಿಸುವ ರಚನೆ. ಈ ದ್ರಾವಿಡ ಲಕ್ಷಣಗಳು ಕನ್ನಡ, ತೆಲುಗು ಮತ್ತು ಮಲಯಾಳಗಳಿಗೂ ಸಮಾನವಾದಂತಹ ಅಂಶಗಳೇ ಆಗಿವೆ. ಛಂದಸ್ಸಿನ ವಿಷಯದಲ್ಲಿ ನೋಡುವುದಾದರೆ, ಖ್ಯಾತಕರ್ಣಾಟಕಾದಿ ವರ್ಣವೃತ್ತಗಳ ಬಳಕೆ ಮುಂತಾದ ಸಂಸ್ಕೃತ ಸಂಪ್ರದಾಯಗಳು ಕನ್ನಡ ತೆಲುಗುಗಳಲ್ಲಿ ಹೆಚ್ಚಾಗಿ ಪ್ರವೇಶಿಸಿರುತ್ತವೆ. ಆದರೆ ದೇಶೀಯ ಛಂದಸ್ಸು ಬೇರೆಯಾಗಿದ್ದು, ದಕ್ಷಿಣ ಭಾರತದ ಭಾಷೆಗಳ ವೈಶಿಷ್ಟ್ಯವನ್ನೂ ಬಾಂಧವ್ಯವನ್ನೂ ಅದು ತೋರಿಸುತ್ತದೆ. ಕನ್ನಡದಲ್ಲಿರುವ ಪ್ರಾಸ, ತೆಲುಗಿನಲ್ಲಿರುವ ವಡಿ ಮತ್ತು ಪ್ರಾಸ, ತಮಿಳಿನಲ್ಲಿ 'ತೊಡೈ' ಎಂದಿರುವ ಅಕ್ಷರಮೈತ್ರಿ ಭಾಷಾಬಾಂಧವ್ಯವನ್ನು ಸೂಚಿಸುತ್ತವೆ. ಶಿಷ್ಟ ಸಾಹಿತ್ಯಕ್ಕಿಂತ ದೇಶೀಯ ಸಾಹಿತ್ಯದ ಛಂದಸ್ಸಿನ ವಿಚಾರದಲ್ಲಿ ಈ ನಾಲ್ಕು ಭಾಷೆಗಳೂ ಅತ್ಯಂತ ನಿಕಟಸಂಬಂಧವನ್ನು ಹೊಂದಿರುತ್ತವೆ. ಹೀಗೆ ದಕ್ಷಿಣ ಭಾರತದ ನಾಲ್ಕು ಮುಖ್ಯ ಭಾಷೆಗಳಾದ ತಮಿಳು, ಕನ್ನಡ, ತೆಲುಗು ಮತ್ತು ಮಲಯಾಳ ಭಾಷಾ ಸಾಹಿತ್ಯವನ್ನು ಪರಿಶೀಲಿಸಿದಾಗ ಅಲ್ಲಿ ಅನೇಕ ಸಾಮ್ಯ ವೈಷಮ್ಯಗಳು ಇರುವ ಸಾಧ್ಯತೆಯನ್ನು ಮನಗಾಣಬಹುದು.

ಪ್ರಸ್ತುತ ವಿವೇಚನೆಯಲ್ಲಿ ದಕ್ಷಿಣ ಭಾರತದ ಸಾಹಿತ್ಯಿಕ ಭಾಷೆಗಳಾದ ತಮಿಳು, ಕನ್ನಡ, ತೆಲುಗು ಮತ್ತು ಮಲಯಾಳ ಸಾಹಿತ್ಯಗಳಲ್ಲಿ ಕಂಡುಬರುವ ಪರಸ್ಪರ ಪ್ರಭಾವಗಳನ್ನು ಪರಿಶೀಲಿಸಲಾಗುತ್ತದೆ. ಸ್ಥೂಲವಾಗಿ ನೋಡುವುದಾದರೆ ಸಾಹಿತ್ಯಿಕವಾಗಿ ತಮಿಳು ಮಲಯಾಳಗಳು ಒಂದು ವರ್ಗಕ್ಕೂ ತೆಲುಗು ಕನ್ನಡಗಳು ಒಂದು ವರ್ಗಕ್ಕೂ ಸೇರುತ್ತವೆ. ಸಂಸ್ಕೃತ ಸಾಹಿತ್ಯದ ಪ್ರಭಾವದ ದೃಷ್ಟಿಯಿಂದ ನೋಡಿದಾಗ ತಮಿಳು ಪ್ರತ್ಯೇಕವಾಗಿಯೂ ಉಳಿದ ಮೂರು ಭಾಷೆಗಳು ಒಂದು ವರ್ಗವಾಗಿಯೂ ಕಾಣುತ್ತವೆ. ತಮಿಳಿನಲ್ಲಿ ಸೃಜನಾತ್ಮಕ ಸಾಹಿತ್ಯ ಹೆಚ್ಚಾಗಿದೆ. ಮುಖ್ಯವಾಗಿ ಈ ವಿವೇಚನೆಯಲ್ಲಿ ಕನ್ನಡ ಸಾಹಿತ್ಯಕ್ಕೂ ದಕ್ಷಿಣ ಭಾರತದ ಸಾಹಿತ್ಯಿಕ ಭಾಷೆಗಳಾದ ತಮಿಳು, ತೆಲುಗು ಮತ್ತು ಮಲಯಾಳ ಸಾಹಿತ್ಯಗಳಿಗೂ ಇರುವ ಸಂಬಂಧ ಬಾಂಧವ್ಯಗಳನ್ನು ಕಾಲಾನುಕ್ರಮವಾಗಿ ಪರಿಶೀಲಿಸಲಾಗುತ್ತದೆ. ಈಗ ಈ ಸಂಬಂಧವಾದ ವಿವರ ಪರಿಶೀಲನೆಗೆ ತೊಡಗೋಣ.

## ಆದಿಕಾಲದಿಂದ ೧೨ನೆಯ ಶತಮಾನ

ಕನ್ನಡ ಮತ್ತು ತಮಿಳು ಭಾಷೆಗಳ ಭಾಷಾಬಾಂಧವ್ಯವನ್ನು ಕುರಿತು ಹೇಳುತ್ತ ಕನ್ನಡ ನವೋದಯದ ಪುನರುಜ್ಜೀವಕರಲ್ಲಿ ಅಗ್ರಗಣ್ಯರಾದ ಬಿ. ಎಂ. ಶ್ರೀಕಂಠಯ್ಯನವರು ಹೀಗೆ ಹೇಳಿರುವರು: "ಪೂರ್ವದ ಹಳಗನ್ನಡಕ್ಕೆ ಹಿಂದೆ ಕರ್ನಾಟಕ-ತಮಿಳು ಪ್ರದೇಶಗಳಲ್ಲಿ ಹರಡಿದ್ದ ಒಂದೇ ಕನ್ನಡ-ತಮಿಳು ನುಡಿಯಿಂದ ಅಕ್ಕತಂಗಿಯರಾಗಿ ಕನ್ನಡವೂ ತಮಿಳೂ ಹುಟ್ಟಲಿಲ್ಲ; ತಮಿಳಿಂದಲೇ ಕನ್ನಡ ಹುಟ್ಟಿತು, ಆಮೇಲೆ ಮಲೆಯಾಳದಂತೆ; ಅದರಿಂದಲೇ ಪೂ. ಹ. ಗ. ತಮಿಳ ಹತ್ತಿರಕ್ಕೆ ಬಂದು, ಕಡೆಗೆ ತಮಿಳಿನಲ್ಲಿ ಸೇರಿಹೋಗುತ್ತದೆ ಎಂದು ಹೇಳೋಣವೇ? ಇದು ನಿಜವಾದರೆ, ಒಪ್ಪಲೇಬೇಕು.

ಆದರೆ ನಿಜವಾಗಿ ಕಾಣುವುದಿಲ್ಲ. ಮೊದಲು ತೆಲುಗು ಬೇರೆಯಾಗಿ, ತಮಿಳು–ಕನ್ನಡ ಒಂದಾಗಿದ್ದು, ಆಮೇಲೆ ಎರಡಾಗಿ ಒಡೆದುವೆಂಬುದಕ್ಕೆ ಕುರುಹುಗಳು ಸ್ಪಷ್ಟವಾಗಿವೆ.[1]

ಮೇಲಿನ 'ಶ್ರೀ' ಅವರ ಅಭಿಪ್ರಾಯವನ್ನೇ ಕೊಂಚ ಮಾರ್ಪಡಿಸಿ ಕನ್ನಡ ಭಾಷೆಯ ಉಗಮವನ್ನು ಹೀಗೆಂದು ಹೇಳಬಹುದು : ಮೊದಲು ಮೂಲದ್ರಾವಿಡ ಭಾಷೆಯೊಂದಿತ್ತು. ದಾಕ್ಷಿಣಾತ್ಯ ಭಾಷೆಗಳಲ್ಲಿ ತೆಲುಗು ಆ ಮೂಲದ್ರಾವಿಡದಿಂದ ಮೊದಲು ಬೇರೆಯಾಗಿರ ಬೇಕು. ಆಗ ತಮಿಳು ಕನ್ನಡ ಒಂದಾಗಿದ್ದುವು ಎಂದು ಹೇಳುವುದಕ್ಕಿಂತ ಮೂಲ ದ್ರಾವಿಡ ಭಾಷೆ ಹಾಗೇ ಉಳಿದಿದ್ದು, ಅನಂತರದಲ್ಲಿ, ಎಂದರೆ ತೆಲುಗು ಬೇರ್ಪಟ್ಟಮೇಲೆ ತಮಿಳು, ಕನ್ನಡಗಳು ಸಹ ಅಲ್ಲಿಂದ ಬೇರೆಯಾಗಿ ಸ್ವತಂತ್ರ ಭಾಷೆಗಳಾಗಿ ಪರಿಣಮಿಸಿದು ವೆಂದು ಹೇಳಬಹುದು. ಹೀಗೆ ತೆಲುಗು, ಕನ್ನಡ ಮತ್ತು ತಮಿಳು ಭಾಷೆಗಳು ಸೋದರ ಸಂಬಂಧವುಳ್ಳವಾಗಿವೆ. ಅವಕ್ಕೆ ಜನ್ಯಜನಕ ಸಂಬಂಧವಿಲ್ಲ ಎಂದು ಹೇಳಬಹುದೆಂದು ತೋರುತ್ತದೆ.

ಮೂಲದ್ರಾವಿಡ ಭಾಷೆಯ ರೂಪಗಳು ತಮಿಳು, ಕನ್ನಡಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಗಳನ್ನು ಮಾತ್ರ ಪಡೆದುಕೊಂಡು ಸಮಾನವಾಗಿ ಉಳಿದಿರುವುದು ಬಹುಮಟ್ಟಿಗೆ ಸಾಧ್ಯ. ಪೂರ್ವದ ಹಳಗನ್ನಡ ರೂಪಗಳಿಗೂ ತಮಿಳಿನಲ್ಲಿರುವ ರೂಪಗಳಿಗೂ ಅನೇಕ ಸಾಮ್ಯ ಗಳು ಕಂಡುಬರುತ್ತವೆ.[2] ಹಳೆಯ ತಮಿಳಿಂದ ಹಳೆಯ ಕನ್ನಡಕ್ಕೆ ಭಾಷಾಂತರ ಮಾಡು ವುದೂ ಅತ್ಯಂತ ಸುಲಭ ಎಂದು 'ಶ್ರೀ' ಅವರು ಹೀಗೆ ನಿದರ್ಶನವಿತ್ತು ತೋರಿಸಿದ್ದಾರೆ:

ಕುೞಲಿನಿದಿಯಾೞಿನಿದೆನ್ಬ ತಮ್ಮಕ್ಕಳ್
ಮೞಲೈಚ್ಚೊಲ್ ಕೇಳಾದವರ್ ॥

ಎಂಬುದು 'ಕುಱಳ್' ನುಡಿ. ಅದರ ಹಳಗನ್ನಡ ರೂಪ :

ಕೊೞಲಿನಿದು ವೀಣೆಯಿನಿದೆನ್ಬರ್ ತಮ್ಮ ಮಕ್ಕಳ
ತೊದಲ್ ಚೊಲ್ ಕೇಳದವರ್ ॥

ಭಾಷಿಕವಾಗಿ ಹೀಗೆ ನಿಕಟವಾಗಿದ್ದ ತಮಿಳು ಕನ್ನಡಗಳು ಸಾಹಿತ್ಯಿಕವಾಗಿಯೂ ಪರಸ್ಪರ ಸಂಬಂಧ ಪ್ರಭಾವಗಳನ್ನು ಹೊಂದಿರುವುದನ್ನು ಆಯಾ ಸಾಹಿತ್ಯದ ಕಾಲಾನು ಕ್ರಮ ಇತಿಹಾಸದಿಂದ ತಿಳಿಯಬಹುದು. ೧೦ನೆಯ ಶತಮಾನಕ್ಕೆ ಮುಂಚೆ ಕನ್ನಡ ತಮಿಳು ಭಾಷಾ ಸಾಹಿತ್ಯಗಳ ಸಂಬಂಧವನ್ನು ನಿರೂಪಿಸಲು ಹೆಚ್ಚು ಆಧಾರಗಳಿಲ್ಲ. ಈ ಕಾಲವನ್ನು ಶಾಸನ ಯುಗವೆಂದು ಕೆಲವರೂ ಪಂಪಪೂರ್ವ ಯುಗವೆಂದು ಕೆಲವರೂ ಕರೆಯುವರು. ಕನ್ನಡ ಶಾಸನಗಳಲ್ಲಿ ತೀರ ಹಳೆಯದಾದ ಹಲ್ಮಿಡಿ ಶಾಸನದಲ್ಲಿ ಕೆಲವೇ ಕನ್ನಡ ಪದಗಳು ಮಾತ್ರ ಇದ್ದು, ಉಳಿದುವೆಲ್ಲಾ ಸಂಸ್ಕೃತ ಪದಗಳಾಗಿವೆ. ನಾಡುಳ್, ಅಪ್ಪೋರ್, ಇರ್ಪ್ಪರಾ, ಪೆತ್ತ, ಬಾಳ್ಗೞ್ಚು, ಕೊಟ್ಟಾರ್, ಕುಱುಂ ಬಿಡಿವಿಟ್ಟಾರ್, ಅಱಿವೋನ್ಗೆ ಮುಂತಾದ ಪದಗಳು ತಮಿಳನ್ನು ಹೋಲುತ್ತವೆ. ಹಲ್ಮಿಡಿ ಶಾಸನದ ಮೇಲಿನ ಕನ್ನಡ ಪದಗಳನ್ನು ಹೋಲುವ ಪದಗಳಿರುವ ಪೂರ್ವದ ಹಳಗನ್ನಡದ ಅನೇಕ ಶಾಸನಗಳು ಕನ್ನಡ ತಮಿಳುಗಳ ಬಾಂಧವ್ಯವನ್ನು ತೋರಿಸುತ್ತಿವೆ. "ಅಱಿಮೆನೆಂದು

ಪಾದೇಶಂ ಕೊಡುವ್ರೋರುಂ ಪಞ್ಚಮಹಾಪಾತಕ ಸಂಯುಕ್ತರಪ್ಪಾರ್", "ಒಕ್ಕಲುಳ್ ಮಕ್ಕಳ್ ಪುಟ್ಟಿಲ್ಕ", "ಸಿದ್ಧ ಸಮಯುಂ ತಪ್ಪಾದೆ ನೋನ್ತಿನ್ಬಿನಿನ್ ಮುನಿವರನ್ ದೇವಲೋಕಕ್ಕೆ ಸಂದಾನ್" ಮುಂತಾದುವು ಪ್ರಾಚೀನ ಶಾಸನಗಳಲ್ಲಿರುವ ರೂಪಗಳು. ಒಕ್ಕಲುಳ್, ಸಂದಾನ್, ವಿಟ್ಟಾರ್, ಇಲ್ಲಿ, ತಪ್ಪಾದೆ ಮುಂತಾದ ರೂಪಗಳು ಹಳಗನ್ನಡ ಸಾಹಿತ್ಯದಲ್ಲಿ ವಿರಳವಾಗಿವೆ. ಆದರೆ ಪೂರ್ವದ ಹಳಗನ್ನಡದಲ್ಲಿ ಇವು ಸಾಮಾನ್ಯ. ತಾಯ್, ಪೆಣ್, ಕಣ್, ಕಾಲ್, ಎಟ್ಟು, ಪಣಂ, ನಾನ್, ನೀನ್, ಕುಡು, ನೇರ್, ಏಟ್, ಪತ್ತು, ಇನ್, ಉಳ್ ಮುಂತಾದ ನಾಮವಾಚಕ, ಕ್ರಿಯಾವಾಚಕ, ಪ್ರತ್ಯಯಾದಿ ಭಾಷಾ ಭಾಗಗಳು ತಮಿಳಿಗೂ ಕನ್ನಡಕ್ಕೂ ಸಮಾನವೇ ಆಗಿವೆ. ಒಟ್ಟಿನಲ್ಲಿ ಪೂರ್ವ ಹಳಗನ್ನಡ ಸ್ವರೂಪವನ್ನು ಪರಿಶೀಲಿಸಿದರೆ "ಆ ಕಾಲದ ಸಂಸ್ಕೃತ ಪ್ರಾಕೃತ ತದ್ಭವ ಪದಗಳನ್ನೂ ಅವುಗಳ ಸಂಸ್ಕೃತ ಧ್ವನಿಗಳನ್ನೂ ಉಳಿದರೆ ಅಚ್ಚ ಕನ್ನಡಕ್ಕೂ ತಮಿಳಿಗೂ ಏಕರೂಪ ಕಾಣುತ್ತದೆ, ಅಥವಾ ನಿಸ್ಸಂದೇಹವಾದ ಹೋಲಿಕೆ ಕಾಣುತ್ತದೆ."[೩]

ಕನ್ನಡದ ತೀರ ಹಳೆಯ ಶಾಸನವಾದ ಹಲ್ಮಿಡಿ ಶಾಸನದ ಕಾಲಕ್ಕೆ ತಮಿಳಿನಲ್ಲಿ ಸಮೃದ್ಧವಾದ ಸಾಹಿತ್ಯ ಬೆಳೆದಿತ್ತು. ಆದರೆ ತಮಿಳಿನಲ್ಲಿ ಶಾಸನಗಳು ಕ್ರಿ. ಶ. ೪–೫ ಶತಮಾನಗಳಿಗೆ ಮುಂಚೆ ದೊರೆಯದಿರುವುದು ಆಶ್ಚರ್ಯದ ಸಂಗತಿ. ಸಾಹಿತ್ಯದ ಪ್ರಾಚೀನತೆ ಅಲ್ಲಿ ಕ್ರಿ.ಶ. ೧ನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ ಎಂದು ತಮಿಳು ವಿದ್ವಾಂಸರ ಅಭಿಪ್ರಾಯವಾಗಿದೆ. ಆರ್ಯ ಸಂಸ್ಕೃತಿಯನ್ನು ದಕ್ಷಿಣಾಪಥಕ್ಕೆ ಪ್ರಥಮವಾಗಿ ಪರಿಚಯಮಾಡಿಕೊಟ್ಟವನು ಅಗಸ್ತ್ಯನೆಂದು ಹೇಳಲಾಗುತ್ತದೆ. ಈತನೇ ತಮಿಳಿನ ಮೊತ್ತಮೊದಲನೆಯ ವ್ಯಾಕರಣಕಾರನೆಂಬ ಭಾವನೆಯಿದೆ. 'ಅಕತ್ತಿಯಮ್' ಎಂಬ ವ್ಯಾಕರಣ ಇಂದು ಲಭ್ಯವಾಗುತ್ತಿಲ್ಲ. ಅದರಲ್ಲಿ ೧೨,೦೦೦ ಸೂತ್ರಗಳಿದ್ದುವೆಂದು ಊಹಿಸಲಾಗಿದೆ. 'ಯಾಪ್ಪರುಂಗಲಮ್' ಮುಂತಾದ ಲಕ್ಷಣ ಗ್ರಂಥಗಳಲ್ಲಿ ಅಗಸ್ತ್ಯನ ವ್ಯಾಕರಣದಿಂದ ಕೆಲವು ಸೂತ್ರಗಳು ಉದಾಹರಿಸಲ್ಪಟ್ಟಿವೆ. ಅಗಸ್ತ್ಯರಿಗೆ ೧೨ ಜನ ಶಿಷ್ಯರಿದ್ದರೆಂದೂ ಅವರಲ್ಲಿ ತೊಲ್‌ಕಾಪ್ಪಿಯರು ಒಬ್ಬರೆಂದೂ 'ಪುರಪ್ಪೊರುಳ್ ವೆಣ್ಬಾಮಾಲೈ' ಉಪೋದ್ಘಾತದಲ್ಲಿದೆ.

ಈಗ ಲಭಿಸಿರುವ ಗ್ರಂಥಗಳಲ್ಲಿ ತೊಲ್‌ಕಾಪ್ಪಿಯರ್ ರಚಿಸಿದ 'ತೊಲ್‌ಕಾಪ್ಪಿಯಮ್' (ಸು. ೫ನೆಯ ಶತಮಾನ) ತಮಿಳಿನ ಅತ್ಯಂತ ಪ್ರಾಚೀನ ಗ್ರಂಥ. ಈ ಗ್ರಂಥದ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವವಿದೆ. ಆದರೂ ದ್ರಾವಿಡ ಭಾಷಾ ಸಾಹಿತ್ಯಗಳ ವಿಶಿಷ್ಟ ಲಕ್ಷಣಗಳನ್ನೂ ಇದು ಹೆಸರಿಸಿದೆ. 'ತೊಲ್‌ಕಾಪ್ಪಿಯಮ್' ಹುಟ್ಟುವುದಕ್ಕೆ ಮುಂಚೆ ತಮಿಳಿನ ಸಾಹಿತ್ಯ ಹಾಡುಗಳ ರೂಪದಲ್ಲಿದೆ. 'ಸಂಘಸಾಹಿತ್ಯ' ಎಂದು ಕರೆಯಲಾಗಿರುವ ಪ್ರಾಚೀನ ತಮಿಳು ಸಾಹಿತ್ಯ ಅನೇಕ ಲೇಖಕರಿಂದ ರಚಿತವಾದ ಕವನಗಳಿಂದ ಕೂಡಿರುತ್ತದೆ. ಸಂಘಸಾಹಿತ್ಯದ ಇತಿಹಾಸವನ್ನು ಸರಿಯಾಗಿ ನಿರ್ಣಯಿಸಲು ಆಧಾರಗಳು ಸಾಲದಿದ್ದರೂ ಅದು ಕನ್ನಡದಲ್ಲಿ ಲಭಿಸಿರುವ ಸಾಹಿತ್ಯಕ್ಕಿಂತ ಮುಂಚಿತವಾಗಿಯೇ ಬೆಳೆದಿತ್ತು ಎಂಬುದು ಮಾತ್ರ ನಿಜ. ೪–೫ನೆಯ ಶತಮಾನಗಳಲ್ಲಿ ಪ್ರಾಚೀನ ತಮಿಳು ಗೀತೆಗಳನ್ನು

ಸಂಗ್ರಹಿಸಿ ಅವುಗಳನ್ನು ಕ್ರಮಬದ್ಧವಾದ ಸಂಕಲನ ಗ್ರಂಥಗಳಾಗಿ ವಿಂಗಡಿಸುವ ಕಾರ್ಯ ನಡೆಯಿತು.

ವಸ್ತು ದೃಷ್ಟಿಯಿಂದ ಸಂಘ ಕಾವ್ಯವನ್ನು ಅಹಮ್ (ಪ್ರೇಮಗೀತೆ) ಮತ್ತು ಪುರಮ್ (ವೀರಗೀತೆ) ಎಂದು ವಿಂಗಡಿಸಿರುವರು. ಲಘುಗೀತೆಗಳನ್ನು 'ಎಟ್ಟುತ್ತೊಹೈ' ಎಂಬ ಹೆಸರಿನಿಂದಲೂ ನಿಡುಗವನಗಳನ್ನು 'ಪತ್ತುಪ್ಪಾಟ್ಟು' ಎಂಬ ಹೆಸರಿನಿಂದಲೂ ಕರೆಯುವರು. ಎಟ್ಟುತ್ತೊಹೈಯಲ್ಲಿ ಎಂಟು ವಿಭಾಗಗಳಿವೆ. ಈ ಗೀತೆಗಳು ಹೆಚ್ಚಾಗಿ 'ಅಗವಲ್' ಎಂಬ ಛಂದಸ್ಸಿನಲ್ಲಿ ಕರೆಯಲಾಗಿವೆ. ಇದು ಶುದ್ಧ ದೇಶೀಯ ಛಂದಸ್ಸಾಗಿದೆ. ಎಟ್ಟುತ್ತೊಹೈ ಮತ್ತು ಪತ್ತುಪ್ಪಾಟ್ಟುಗಳಲ್ಲಿ ಸು. ೨೪೦೦ ಗೀತೆಗಳಿರುತ್ತವೆ.

'ಎಟ್ಟುತ್ತೊಹೈ'ಯಲ್ಲೇ ಒಂದಾದ ಪುಱನಾನೂಱಿನ ೨೦೧ ಮತ್ತು ೨೦೨ನೆಯ ಕವಿತೆಗಳು ಕನ್ನಡದ ಹೊಯ್ಸಳರ ಯುಗದ ಮೇಲೆ ಬೆಳಕು ಬೀರುತ್ತಿವೆ. ಈ ಪುಱನಾನೂಱೆಂಬ ಗ್ರಂಥ ಸು. ಕ್ರಿ. ಶ. ೨–೩ನೆಯ ಶತಮಾನಗಳಿಗೆ ಸೇರಿದ್ದೆಂದು ಹೇಳಲಾಗಿದೆ. ಆದರೆ ಹೊಯ್ಸಳರ ಕಾಲ ಕ್ರಿ.ಶ. ೯ರಿಂದ ೧೪ನೆಯ ಶತಮಾನ. ಆದ್ದರಿಂದ ಇಲ್ಲಿ ಕೆಲವು ಸಂಶಯಗಳು ಮೂಡುತ್ತವೆ. ಕಪಿಲರು ಹಾಡಿದ ಒಂದು ಗೀತೆಯಲ್ಲಿ 'ಪುಲಿಕಡಿಮಾಲ್' ಎಂಬ ಹೆಸರು ಬರುತ್ತದೆ. 'ಪುಲಿಕಡಿಮಾಲ್' ಎಂದರೆ ಹುಲಿಯನ್ನು ಕಡಿದ ವೀರ. ಈ ರಾಜನು ತುವರೈ ಎಂಬ ಊರನ್ನು ಆಳುವವನೆಂದೂ ಇದೆ. ತುವರೈ ಎಂದರೆ ದ್ವಾರಸಮುದ್ರ. 'ಪುಲಿಕಡಿಮಾಲ್' ಎಂಬ ಮಾತು, ಸಳನು ಹುಲಿಯನ್ನು ಹೊಯ್ದು ಹೊಯ್ಸಳ ಎಂಬ ಹೆಸರನ್ನು ಪಡೆದ ಕಥೆಯನ್ನು ನೆನಪಿಗೆ ತರುತ್ತದೆಂಬುದು 'ಶ್ರೀ' ಅವರ ಅಭಿಪ್ರಾಯ[1]. ಆದರೆ ಐತಿಹಾಸಿಕ ಸತ್ಯ ಇದನ್ನು ಒಪ್ಪುವುದಿಲ್ಲ. ಹೊಯ್ಸಳರು ತಮಿಳು ಜಿಲ್ಲೆಗಳನ್ನು ಗೆದ್ದು ಕಣ್ಣಾನೂರನ್ನು ರಾಜಧಾನಿಯಾಗಿ ಮಾಡಿಕೊಂಡದ್ದು ೧೩ನೆಯ ಶತಮಾನದಲ್ಲಿ. ಆದ್ದರಿಂದ ಪುಱನಾನೂಱಿಲ್ಲಿ ಬರುವ ಪ್ರಸಂಗ ಪ್ರಕ್ಷಿಪ್ತವೆಂದು ಹೇಳುವುದು ಸೂಕ್ತ.

ಸಂಘಸಾಹಿತ್ಯದ ಕಾಲದಲ್ಲಿ ಕನ್ನಡ ಸಾಹಿತ್ಯದ ಸ್ಥಿತಿಗತಿಗಳು ಹೇಗಿದ್ದುವು ಎಂಬ ವಿಷಯವನ್ನು ನಿರ್ಧರಿಸಲು ತಕ್ಕ ಆಧಾರಗಳಿಲ್ಲ. ಕೆಲವರು ಕನ್ನಡದಲ್ಲಿ ಮೊದಲು ಸಾಹಿತ್ಯನಿರ್ಮಾಣ ಮಾಡಿದವರು ಬೌದ್ಧರೆಂದೂ ಕ್ರಿ. ಶ. ೧–೨ನೆಯ ಶತಮಾನಗಳ ಪೂರ್ವದಲ್ಲಿ ಕನ್ನಡ ಸಾಹಿತ್ಯ ಬೆಳೆದಿತ್ತೆಂದೂ ಊಹಿಸುತ್ತಾರೆ. ಆದರೆ ಅದನ್ನು ಸಾಧಿಸಲು ಯಾವ ರಚನೆಯೂ ನಮಗೆ ಸಿಕ್ಕಿಲ್ಲ.

ಸಂಘಕಾಲದ ಗೀತೆಯ ಸಂಕಲನಗಳಾದಮೇಲೆ ಧರ್ಮಕ್ಕೆ ಸಂಬಂಧಿಸಿದ 'ಪತಿನೆಣ್ ಕೀೞ್ಕಣಕ್ಕು' ಎಂಬ ಸಂಕಲನ ಸಿಕ್ಕುತ್ತದೆ. ಇದರಲ್ಲಿ ೧೧ ನೀತಿ ಕಾವ್ಯಗಳೂ ೭ ಭಾವಗೀತೆಗಳೂ ಇರುತ್ತವೆ. ಇದರಲ್ಲಿರುವ ಮುಖ್ಯ ಗ್ರಂಥಭಾಗವೆಂದರೆ 'ಕುಱಳ್.' ಇದನ್ನು ಬರೆದವರು ತಿರುವಳ್ಳುವರ್. ಇದರಲ್ಲಿ ೧೩೩೦ ಪುಟ್ಟ ಗೀತೆಗಳಿವೆ. ಇದೊಂದು ದ್ವಿಪದಿ ಛಂದಸ್ಸಿನ ಗ್ರಂಥ. ಈ ಛಂದಸ್ಸನ್ನು ಅವರು 'ವೆಣ್ಬಾ' ಎಂದು ಕರೆದಿದ್ದಾರೆ. ಇದು ಕನ್ನಡದ ದೇಸಿ ಛಂದಸ್ಸಿನ 'ಏಳೆ' ಎಂಬ ಮಟ್ಟನ್ನು ಹೋಲುತ್ತದೆ. ತಿರುವಳ್ಳು

ವರಿನ ಕಾಲ ಕ್ರಿ.ಶ. ಸು. ೬೦೦. 'ತಿರುಕ್ಕುಱಳ್' ಕನ್ನಡವೂ ಸೇರಿದಂತೆ ಪ್ರಪಂಚದ ಅನೇಕ ಭಾಷೆಗಳಿಗೆ ಅನುವಾದಿತವಾಗಿದೆ.[5]

ಸಂಘಕಾಲದ ತಮಿಳು ಪಂಚಮಹಾಕಾವ್ಯಗಳಲ್ಲಿ ಒಂದಾಗಿ ಗಣ್ಯವಾಗಿರುವ ಇಳಂಗೋ ಅಡಿಗಳ್ ರಚಿತ 'ಶಿಲಪ್ಪದಿಕಾರಂ' ಕೃತಿಯಲ್ಲಿ ನೀಲಗಿರಿಯ ಕನ್ನಡಿತಿಯರ ಕುಣಿತದ ಹಾಡನ್ನು ಕುರಿತ ಪ್ರಸ್ತಾಪವಿರುತ್ತದೆ. ಈ ಉಲ್ಲೇಖದಿಂದ 'ಶಿಲಪ್ಪದಿಕಾರ'ದ ಕಾಲದಲ್ಲಿ ಕನ್ನಡ ಜನಪದ ಸಾಹಿತ್ಯ ಚೆನ್ನಾಗಿ ಬೆಳೆದಿತ್ತೆಂದು ಕನ್ನಡ ವಿದ್ವಾಂಸರು ಕೆಲವರು ಊಹಿಸುತ್ತಿರುವರು. ಸುಮಾರು ಇದೇ ಕಾಲದಲ್ಲಿ, ಎಂದರೆ ೬-೭ ಶತಮಾನ ಗಳಲ್ಲಿ, ಪೆಂದೇವನಾರ್ ಎಂಬವನು ತಮಿಳಿನಲ್ಲಿ ವೆಣ್ಬಾ ಛಂದಸ್ಸಿನ ಭಾರತವನ್ನು ಬರೆದಿರುವುದು ಗಮನಾರ್ಹ ಸಂಗತಿ. ಅದು ಯಾವ ತರಹೆಯದು ಎಂಬುದನ್ನು ನಿರೂ ಪಿಸಲು ಆ ಗ್ರಂಥ ಈಗ ಪೂರ್ತಿಯಾಗಿ ಸಿಕ್ಕುತ್ತಿಲ್ಲ. ಆದರೂ ಕನ್ನಡದಲ್ಲಿ 'ಪಂಪಭಾರತ' ಹುಟ್ಟುವುದಕ್ಕೆ ಮುಂಚಿತವಾಗಿಯೇ ತಮಿಳಿನಲ್ಲಿ ಭಾರತ ಇತ್ತೆಂಬುದನ್ನು ಗಮನಿಸ ಬೇಕು. 'ಪಂಪ ಭಾರತ'ದ ಮೇಲೆ ಅದರ ಪ್ರಭಾವ ಉಂಟೇ ಎಂಬುವನ್ನು ತಿಳಿಯಲು ತಮಿಳು ಭಾರತ ಅಲಭ್ಯವಾಗಿರುವುದರಿಂದ ಹೇಳಲಾಗದು.

ತಮಿಳಿನಲ್ಲಿ ಪಂಚಮಹಾಕಾವ್ಯಗಳಿರುವಂತೆಯೇ ಐದು ಕಿರುಕಾವ್ಯಗಳೂ ಇದ್ದು ಇವುಗಳಲ್ಲಿ ಕ್ರಿ.ಶ. ಸು. ೧೧ನೆಯ ಶತಮಾನದ್ದೆಂದು ಊಹಿಸಲಾದ 'ಯಶೋದರ ಕಾವಿಯಂ' "ಕಥೆಯ ಓಟ ಹೆಚ್ಚುಕಡಮೆ ವಾದಿರಾಜನ ಸಂಸ್ಕೃತ ಯಶೋಧರ ಚರಿತೆಯನ್ನೇ ಅನುಸರಿಸಿ ಜನ್ನನ ಯಶೋಧರ ಚರಿತೆಯನ್ನು ಹೋಲುತ್ತದೆ" ಎಂಬ ಒಂದು ಅಭಿಪ್ರಾಯ ವ್ಯಕ್ತವಾಗಿದೆ.[6] ವತ್ಸರಾಜನ 'ಉದಯನ ಚರಿತೆ'ಯನ್ನು ಆಧರಿಸಿದ 'ಉದಯಣನ್ ಕತೈ' ಈಚೆಗೆ ಕನ್ನಡಕ್ಕೆ ಎಲ್. ಗುಂಡಪ್ಪನವರಿಂದ ಸರಳಾ ನುವಾದಗೊಂಡಿದೆ.

ಏಳನೆಯ ಶತಮಾನದಿಂದ ಭಕ್ತಿಪಂಥದ ತಮಿಳು ಸಾಹಿತ್ಯದ ಸುಮಾರು ಎರಡು ಶತಮಾನಗಳ ಕಾಲ ಸಮೃದ್ಧವಾಗಿ ಬೆಳೆಯಿತು. ಪಾಂಡ್ಯರಾಜರ ಆಳ್ವಿಕೆಯಲ್ಲಿದ್ದ ಈ ಕಾಲದಲ್ಲಿ ಶೈವ, ವೈಷ್ಣವ ಭಕ್ತರು ಬೌದ್ಧ ಜೈನ ಪ್ರಭಾವವನ್ನು ಮೂಲೆಗೊತ್ತಿದರು. ನಾಯನ್ಮಾರರು ಶೈವ ಪಂಥಕ್ಕೂ ಆಳ್ವಾರರು ವೈಷ್ಣವ ಪಂಥಕ್ಕೂ ಸೇರಿದವರು. ಶೈವ ಗೀತೆಗಳಿಗೆ 'ತೇವಾರಮ್' ಎಂದೂ, ವೈಷ್ಣವ ಗೀತೆಗಳಿಗೆ 'ದಿವ್ಯಪ್ರಬಂಧ'ಗಳೆಂದೂ ಹೆಸರು ನಾಯನ್ಮಾರರ, ಆಳ್ವಾರರ ಪ್ರಭಾವ ಇಡೀ ದಕ್ಷಿಣ ದೇಶದಲ್ಲಿ ಹರಡಿದೆ. ನಂಬಿ ಆಂಡಾರ್ ನಂಬಿ ಮತ್ತು ನಾದಮುನಿ ಎಂಬವರು ನಂತರದ ಕಾಲದಲ್ಲಿ ಶೈವ ಮತ್ತು ವೈಷ್ಣವ ಭಕ್ತಿ ಗೀತೆಗಳನ್ನು ಸಂಗ್ರಹಿಸಿ ಸಂಕಲನ ಮಾಡಿರುತ್ತಾರೆ. ಶೈವಗೀತೆಗಳು ತಿರುಮುಱೈ ಎಂಬ ಹೆಸರಿನ ೧೧ ಗ್ರಂಥಗಳಾಗಿವೆ. ಅಪ್ಪರ್, ಜ್ಞಾನಸಂಬಂದರ್, ಸುಂದರರ್, ಮಾಣಿಕ್ಯ ವಾಚಕರ್ ಮುಂತಾದವರು ಇವುಗಳ ಲೇಖಕರಾಗಿದ್ದಾರೆ. ೧೨ ಜನ ಆಳ್ವಾರರು ಬರೆದ ೪೦೦೦ ಗೀತೆಗಳಿಗೆ 'ದಿವ್ಯಪ್ರಬಂಧಮ್' ಎಂಬ ಹೆಸರಿಟ್ಟು ನಾದಮುನಿ ಸಂಕಲಿಸಿರು ತ್ತಾನೆ. ಈ ಶೈವ ವೈಷ್ಣವ ಗೀತೆಗಳ ಪ್ರಭಾವ ಕನ್ನಡ, ತೆಲುಗು ಮತ್ತು ಮಲಯಾಳ

ಸಾಹಿತ್ಯಗಳ ಮೇಲೆ ಇರುತ್ತದೆ. ಇದನ್ನು ಮುಂದಿನ ಘಟ್ಟದಲ್ಲಿ ವಿಶದವಾಗಿ ಗಮನಿಸಬಹುದು.

ಕನ್ನಡದಲ್ಲಿ ಹರಿಹರ ಮುಂತಾದವರು ತಮಿಳಿನ ಶೈವ ಸಾಹಿತ್ಯವನ್ನು ತಮ್ಮ ಗ್ರಂಥಗಳಲ್ಲಿ ಚೆನ್ನಾಗಿ ಉಪಯೋಗಿಸಿಕೊಂಡಿರುತ್ತಾರೆ. ನಾಯನ್ಮಾರರ ಮತ್ತು ಆಳ್ವಾರರ ಕಾಲ ಆದಮೇಲೆ ೯ನೆಯ ಶತಮಾನ ಮತ್ತು ೧೦ನೆಯ ಶತಮಾನಗಳಲ್ಲಿ ತಮಿಳು ಸಾಹಿತ್ಯ ಅಷ್ಟಾಗಿ ಬೆಳೆದಿಲ್ಲ. ತಮಿಳಿನಲ್ಲಿ ಸಾಹಿತ್ಯ ಈ ಮಟ್ಟದಲ್ಲಿ ಇರುವಾಗ ಕನ್ನಡ ನಾಡಿನಲ್ಲಿ ಉಚ್ಚಮಟ್ಟದ ಸಾಹಿತ್ಯ ಬೆಳೆಯುತ್ತಿತ್ತು.

ತಮಿಳಿನಲ್ಲಿ ಬೌದ್ಧ ಜೈನ ಸಾಹಿತ್ಯ, ಆಮೇಲೆ ಶೈವ ವೈಷ್ಣವ ಸಾಹಿತ್ಯಗಳು ಬೆಳೆಯುತ್ತಿದ್ದ ಕಾಲ ಕನ್ನಡದ ಅಜ್ಞಾತ ಯುಗ. ಕವಿರಾಜಮಾರ್ಗಪೂರ್ವದಲ್ಲಿ ಸಾಹಿತ್ಯದ ಸ್ಥಿತಿಗತಿಗಳ ವಿವೇಚನೆ ಬಹಳ ಮಟ್ಟಿಗೆ ಸಾಧ್ಯವಾಗದಿದ್ದರೂ ಆ ಕಾಲದಲ್ಲಿ ದೇಸಿ ಛಂದಸ್ಸಿನ ಅನೇಕ ಪ್ರಕಾರಗಳು ಇರುವುದು ಸ್ಪಷ್ಟವಾಗಿದೆ. 'ಕವಿರಾಜಮಾರ್ಗ'ದ ಕಾಲಕ್ಕೆ ಮತ್ತು ಆಚೀಚೆಯ ಅವಧಿಯಲ್ಲಿ ಹೇರಳವಾಗಿ ದೊರೆಯುವ ಕನ್ನಡ ಶಾಸನಗಳಲ್ಲಿ ಸಂಸ್ಕೃತ ಪ್ರಾಕೃತ ಪ್ರಭಾವದ ವೃತ್ತ ಕಂದಗಳಲ್ಲದೆ ತ್ರಿಪದಿ, ಅಕ್ಕರ ಮುಂತಾದ ದೇಶ್ಯ ಛಂದಸ್ಸುಗಳ ಬಳಕೆಯೂ ಅಷ್ಟಿಷ್ಟು ಕಾಣುತ್ತದೆ. ಈ ದೇಶ್ಯ ಛಂದಸ್ಸುಗಳ ಗುಣಲಕ್ಷಣಗಳು ದ್ರಾವಿಡಭಾಷೆಗಳ ದೇಶೀಯ ಪದ್ಯಜಾತಿಗಳಿಗೂ ಸಮಾನವಾದವೆಂಬುದು ವಿದಿತವಾದ ವಿಷಯ. ಪ್ರಸ್ತುತ ತಮಿಳಿಗೆ ಸಂಬಂಧಿಸಿದಂತೆ ಹೇಳಬಹುದಾದರೆ ಈ ಸಾಮ್ಯವನ್ನು ಗಣರಚನೆ ಮತ್ತು ಪದ್ಯಜಾತಿಗಳೆರಡರಲ್ಲೂ ಗಮನಿಸಬಹುದಾಗಿದೆ. ಪುರಾತನ ತಮಿಳು ಛಂದಸ್ಸಿನಲ್ಲಿ ಕನ್ನಡ ಛಂದಸ್ಸಿನ ಹೆಜ್ಜೆಯನ್ನು ಗುರುತಿಸಿದ ಬಿ. ಎಂ. ಶ್ರೀಕಂಠಯ್ಯನವರು ತಮಿಳಿನ 'ಅಶೈ' (ಅಂಶ)ಗಳಿಂದಾದ ಈರಶೈ, ಮೂವಶೈ, ಮತ್ತು ನಾಲಶೈಗಳೆಂಬ ಗಣಗಳ ಕಟ್ಟು ಕನ್ನಡದ ಬ್ರಹ್ಮ ವಿಷ್ಣು ಮತ್ತು ರುದ್ರ ಗಣಗಳೊಡನೆ ಹೇಗೆ ಹೋಲುತ್ತವೆಂಬುದನ್ನು ಗಮನಿಸಿದರು. ದ್ರಾವಿಡ ಗಣದ ಆದಿ ಸ್ವರೂಪವನ್ನು ಕಂಡುಹಿಡಿಯಲು ದಾರಿಯನ್ನೂ ತೋರಿಸಿಕೊಟ್ಟರು. ಅಲ್ಲದೆ ಪ್ರಸಿದ್ಧವಾದ ಪುರಾತನ ತಮಿಳು ವೃತ್ತಗಳನ್ನು ಕನ್ನಡ ಗಣಗಳಿಂದ ಅಳೆದು ತೋರಿಸಿ, ತಮಿಳಿನ ಕುಱಳ್ ವೆಣ್ಬಾ ಛಂದಸ್ಸುಗಳು ಕನ್ನಡದ ಏಳೆ, ತ್ರಿಪದಿಗಳೊಡನೆ ಹೇಗೆ ಹೋಲುತ್ತವೆಂಬುದನ್ನು ತಾವು 'ಕನ್ನಡ ಕೈಪಿಡಿ'ಗೆ ಬರೆದ 'ಕನ್ನಡ ಛಂದಸ್ಸಿನ ಚರಿತ್ರೆ'ಯಲ್ಲಿ ತೋರಿಸಿರುತ್ತಾರೆ. ಹೀಗೆಯೇ ಸಾಂಗತ್ಯ, ಸರಳ ರಗಳೆ, ಉತ್ಸಾಹ ರಗಳೆಗಳನ್ನು ತಮಿಳು ಸಾಹಿತ್ಯದಿಂದ ಎತ್ತಿತೋರಿಸಿ "ಈ ಉದಾಹರಣೆಗಳಿಂದ ಹಳಗನ್ನಡಕ್ಕೂ ತಮಿಳಿಗೂ ಇರುವ ಹತ್ತಿರದ ಸಂಬಂಧವನ್ನೂ ಸಂಘದ ತಮಿಳಿನ ಶುದ್ಧ ಶೈಲಿಯನ್ನೂ, ಕನ್ನಡ ಛಂದಸ್ಸಿನ ವಿಮರ್ಶೆಯಲ್ಲಿ ಮತ್ತು ವೃದ್ಧಿಯಲ್ಲಿ ತಮಿಳಿನ ಬೆಳಕು ಬೀಳಬೇಕೆನ್ನುವುದನ್ನೂ ಕಾಣಬಹುದು"— ಎಂದು ತಮ್ಮ ಆಶಯವನ್ನು ಕ್ರೋಡೀಕರಿಸಿದ್ದಾರೆ. ಬಿ.ಎಂ.ಶ್ರೀ. ಅವರ ಸೂಚನೆಯಿಂದ ತಮಿಳು ಕನ್ನಡ ಛಂದಸ್ಸುಗಳ ವ್ಯಾಪಕವಾದ ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ತಮಿಳಿನಲ್ಲಿ ಕನ್ನಡದ ಪದ್ಯಮಯ ಶಾಸನಗಳು ಬರುವುದಕ್ಕೆ ಮುಂಚಿತವಾಗಿಯೇ ದೇಸೀಯ ಛಂದಸ್ಸಿನಲ್ಲಿ ಅನೇಕ ಗೀತೆಗಳು, ಕಾವ್ಯಗಳು ಬರೆಯಲ್ಪಟ್ಟಿವೆ. ತ್ರಿಪದಿ ಅಗವಲ್ಪಾ ಛಂದಸ್ಸನ್ನು ತಕ್ಕಮಟ್ಟಿಗೆ ಹೋಲುತ್ತದೆಂದು ಹೇಳಬಹುದು. ಅದರಲ್ಲಿ ಒಂದೊಂದು ಪಾದಕ್ಕೆ ನಾಲ್ಕು 'ಶೀರ್'ಗಳಿರುತ್ತವೆ. ತ್ರಿಪದಿಯಂತೆ ನಾಲ್ಕು ಗಣಗಳು ಇರುವ ಇಂತಹ ಪದ್ಯಗಳಿಗೆ ತಮಿಳಿನಲ್ಲಿ 'ನಿಲೈ ಮಂಡಿಲ ಆಶಿರಿಯಪ್ಪಾ' ಎಂದು ಹೆಸರು. ಕನ್ನಡದಲ್ಲಿರುವ ಅಂಶಗಣಗಳನ್ನು ಹೋಲುವ ಗಣಗಳೇ ತಮಿಳಿನಲ್ಲೂ ಇವೆ. ದ್ರಾವಿಡ ಭಾಷೆಗಳಿಗೆ ಮೂಲ ದ್ರಾವಿಡ ಭಾಷೆಯೊಂದಿತ್ತೆಂದು ಊಹಿಸುವಂತೆಯೇ ಮೂಲ ದ್ರಾವಿಡ ಛಂದಸ್ಸು ಒಂದಿತ್ತೆಂದು ಊಹಿಸಬಹುದು. ಬಾದಾಮಿ ಶಾಸನದಲ್ಲೇ ಕಾಣಸಿಗುತ್ತಿರುವ ತ್ರಿಪದಿಗಳು ಮೂಲ ದ್ರಾವಿಡ ಛಂದಸ್ಸಿನ ಪರಿಣಾಮವಾಗಿ ಬಂದು ವೆಂದು ಊಹಿಸುವ ಸಾಧ್ಯತೆಯಿದೆ.

ಕವಿರಾಜಮಾರ್ಗಕಾರ ಉಲ್ಲೇಖಿಸಿರುವ ದುರ್ವಿನೀತನು ಗುಣಾಢ್ಯನ 'ಬೃಹತ್ಕಥೆ'ಯ ಸಂಸ್ಕೃತ ಅನುವಾದವನ್ನು ಬರೆದಿರುವನೆಂದು ಕೆಲವರು ಊಹಿಸುತ್ತಿರುವರು. ತಮಿಳಿನಲ್ಲಿ 'ಬೃಹತ್ಕಥೆ' ಎಂಬ ಅರ್ಥ ಬರುವ 'ಪೆರುಂಕತೈ' ಎಂಬ ಕೃತಿಯಿದೆ. ದುರ್ವಿನೀತನ ಸಂಸ್ಕೃತ 'ಬೃಹತ್ಕಥೆ' ತಮಿಳಿನ 'ಪೆರುಂಕತೈ'ಗೆ ಮೂಲವೆಂದು ಕೆಲವರು ಊಹಿಸುತ್ತಿರುವರು. ಇದು ನಿಜವಾದರೆ ಕನ್ನಡದವರು ಒಂದು ತಮಿಳ ಕೃತಿಗೆ ಮೂಲವಾದ ಕೃತಿಯನ್ನು ಬರೆಯುವುದಕ್ಕೆ ಇದು ನಾಂದಿ ಎನ್ನಬಹುದು. ತಮಿಳಿನ 'ಐಂಚಿಱುಕಾಪ್ಪಿಯಮ್'ಗಳಲ್ಲಿ ಒಂದಾದ 'ಉದಯಣನ್ ಕತೈ' ಸಹ ಈ ದುರ್ವಿನೀತನ 'ಬೃಹತ್ಕಥೆ'ಯನ್ನೇ ಅನುಸರಿಸಿರಬಹುದು. ಏಕೆಂದರೆ "ಒಂದು ಕಡೆ ಬಹುಕಾಲದ ಅಯಿಂದೆಯೇ ಗುಣಾಢ್ಯನ ಕೃತಿ ಕಳೆದುಹೋಗಿ, ಇನ್ನೊಂದು ಕಡೆ ಕ್ಷೇಮೇಂದ್ರ, ಸೋಮದೇವ, ಬುಧ ಸ್ವಾಮಿಗಳ ಕೃತಿ ಇನ್ನೂ ಹುಟ್ಟಿರದ ಸಂದರ್ಭದಲ್ಲಿ ರಚಿಸಲ್ಪಟ್ಟಿತು"—ಎನ್ನುವುದು ಈ ಊಹೆಗೆ ಮೂಲ.[7]

ಹತ್ತನೆಯ ಶತಮಾನಕ್ಕೆ ಮುಂಚೆ ಇನ್ನೊಂದು ತಮಿಳ ಕೃತಿಗೂ ಆಧಾರ ಗ್ರಂಥವೆಂದು ಊಹಿಸಬಹುದಾದ ಕನ್ನಡದ ಲಕ್ಷಣ ಗ್ರಂಥವೆಂದರೆ 'ಗುಣಗಾಂಕಿಯಂ' 'ಯಾಪ್ಪರುಂಗಲಮ್' ಎಂಬ ತಮಿಳು ಛಂದೋಗ್ರಂಥಕ್ಕೆ ಗುಣಸಾಗರನೆಂಬವನು ವ್ಯಾಖ್ಯಾನ ಬರೆದಿದ್ದಾನೆ. ಅವನು ಸುಮಾರು ೧೦–೧೧ನೆಯ ಶತಮಾನದವನು. ಆ ವ್ಯಾಖ್ಯಾನದಲ್ಲಿ "ಗುಣಗಾಂಕಿಯಮೆನ್ನುಂ ಕಡುನಾಡಗಚ್ಚಂದಮೇಂ ಪೋಲ್ ಮಹರಡೂ ಮುನ್ನಿಲೈಯುಡತ್ತಾಯ್ ಅವೈಯುಡಕ್ಕ ಮುಡೈತ್ತಾಯ್" ಎಂದಿದ್ದು, ಕನ್ನಡದಲ್ಲಿ 'ಗುಣಗಾಂಕಿಯಂ' ಎಂಬ ಕನ್ನಡ ಛಂದೋಗ್ರಂಥವನ್ನು ಕುರಿತ ಉಲ್ಲೇಖ ಆಗಿದೆ ಇದು.

'ವಡ್ಡಾರಾಧನೆ'ಯ ಕೇಳ್ಪಿ (ತ. ಕೇಳ್ವಿ), ಒಡೆಯ (ತ. ಉಡೈಯ) ಇಂತಹ ಪದಗಳು ಒಳಗೊಂಡು ತಮಿಳು, ಕನ್ನಡ ಭಾಷೆಗಳ ಬಾಂಧವ್ಯವನ್ನು ತೋರಿಸುತ್ತದೆ ಎಂದು ಕೆಲವರು ವಿದ್ವಾಂಸರ ಅಭಿಪ್ರಾಯ.[8] ಉದಾ : ಗೆ—

"ತಾಯ್ತಂದೆವಿರ ಕೇಳ್ವಿಯಂ ಗೆಯ್ವದೆ," "ಸಮ್ಯಕ್ತ್ವಮನೊಡೆಯನಾಗಿ," "ಅಣುವ್ರತಂ ಮೊದಲಾಗೊಡೆಯು," "ಮೋದಾಳಿಯೊಳ್ ಮಱಿವಾಱುತ್ತಿರ್ಕುಂ," "ಸಮಣರ ಧರ್ಮಮಂ ನಮಗೆ ಕೊಳಲಾಗ"

ಪಂಪ ತೆಲುಗು ಕನ್ನಡ ಗಡಿನಾಡಿನವನು. ಅವನ ಭಾರತದಲ್ಲಿ 'ಸೆಱಪು' ಎಂಬ ಪದ 'ಉತ್ಸವ' ಎಂಬ ಅರ್ಥದಲ್ಲಿ ಬಳಕೆಯಾಗಿದೆ. ತಮಿಳಿನಲ್ಲಿ 'ಶಿಱಪ್ಪು' ಎಂದರೆ ಮಹಿಮೆ ಉತ್ಸವ ಎಂದರ್ಥ. ಇದನ್ನು ಈ ಅರ್ಥದಲ್ಲಿ ಬೇರೆ ಯಾರೂ ಬಳಸಲಿಲ್ಲ ಎಂಬುದು ಗಮನಾರ್ಹ. "ವಾದಗ್ರಸ್ತವಾದ ಅವನ ಒಂದು ಪದ್ಯಕ್ಕೆ ಅರ್ಥಮಾಡುವಲ್ಲಿ ತಮಿಳು ಸಾಹಿತ್ಯದ ಬೆಳಕಿನಿಂದ ಸಹಾಯವಾಗಿದೆ. 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಎಂಬಲ್ಲಿ ಆಡಿದವರು ಕರ್ಣ ಭಾನುಮತಿಯರೆಂದೂ, ಹಾರವನ್ನು ಕಿತ್ತವನು ಕರ್ಣನೆಂದೂ ನಿರ್ವಿಕಾರವಾಗಿ ನೋಡುತ್ತಿದ್ದವನು ದುರ್ಯೋಧನನೆಂದೂ ತಮಿಳು ಭಾರತದಲ್ಲಿ ಅದೇ ಘಟ್ಟದಲ್ಲಿ ಬರುವ ಒಂದು ಪದ್ಯದಿಂದ ಸ್ಪಷ್ಟವಾಗುತ್ತದೆ"—ಎಂದು ಎಲ್. ಗುಂಡಪ್ಪನವರು ಹೇಳಿರುವರು.[9] ಈಗ ಬಹಳಷ್ಟು ನಷ್ಟವಾಗಿರುವ ಹಿಂದಿನ ತಮಿಳು ಭಾರತವನ್ನು ಪಂಪ ನೋಡಿರಲೂಬಹುದು, ಅಥವಾ ಪಂಪ ಭಾರತದ ಪ್ರಭಾವ ವಿಲ್ಲಿಪುತ್ತೂರಿನ ಭಾರತದ ಮೇಲೆ ಆಗಿರಬಹುದು, ಅಥವಾ ಎರಡಕ್ಕೂ ಒಂದೇ ಸಮಾನ ಮೂಲವಿರಬಹುದು.[10]

ಪಂಪಪೂರ್ವಕಾಲದಲ್ಲೇ ಇದ್ದಿತೆಂದು ಹೇಳಲಾಗುವ ರಾಮಾಯಣಕ್ಕೂ ತಮಿಳಿನ ಕಂಬ ರಾಮಾಯಣಕ್ಕೂ ಇರಬಹುದಾದ ಸಂಬಂಧ ಊಹಾತೀತವಾಗಿದೆ. ಕಂಬ ರಾಮಾಯಣದಲ್ಲಿ ಕಂಬರು ಮೂಲತಃ ವಾಲ್ಮೀಕಿಯನ್ನು ಅನುಸರಿಸಿದರೂ ಅನೇಕ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ಕಂಬ ರಾಮಾಯಣ ಕನ್ನಡಕ್ಕಿಂತ ತೆಲುಗು ರಾಮಾಯಣಗಳ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದೆ. ಪಂಪನ ತರುವಾಯ ರತ್ನತ್ರಯರಲ್ಲಿ ಒಬ್ಬನಾದ ಪೊನ್ನ ಬರೆದ 'ಭುವನೈಕ ರಾಮಾಭ್ಯದಯ' ಲಭಿಸದಿರುವುದರಿಂದ ಕಂಬ ರಾಮಾಯಣಕ್ಕೂ ಅದಕ್ಕೂ ಇರುವ ಹೋಲಿಕೆಗಳನ್ನು ತಿಳಿಯುವಹಾಗಿಲ್ಲ. ಪೊನ್ನನ ಶಾಂತಿಪುರಾಣದಲ್ಲಿ ಮೋರ್ (=ಮಜ್ಜಿಗೆ) ಮುಂತಾದ ಕೆಲವೇ ತಮಿಳು ಪ್ರಯೋಗಗಳು ಇವೆ.

ಪಂಪನಿಗೆ ಮುಂಚಿನ ಕಾಲದಲ್ಲೇ ತಮಿಳು ನಾಡಿನಲ್ಲಿ ನಾಯನ್ಮಾರರು ಒಂದು ಶೈವ ಕ್ರಾಂತಿಯನ್ನೇ ಎಬ್ಬಿಸಿದರು. ಚೋಳರ ಆಶ್ರಯದಲ್ಲಿ ೧೦ನೆಯ ಶತಮಾನದಿಂದ ತಮಿಳಿನಲ್ಲಿ ಶ್ರೇಷ್ಠಗ್ರಂಥಗಳ ರಚನೆಯಾಗತೊಡಗಿತ್ತು. ಕನ್ನಡನಾಡಿನಲ್ಲೂ ಜೈನ ಮತಕ್ಕೆ ತಮಿಳುನಾಡಿನ ಚೋಳರಿಂದ ಧಕ್ಕೆ ಉಂಟಾಯಿತು. ೧೧ನೆಯ ಶತಮಾನದ ವರೆಗೂ ರಾಷ್ಟ್ರಕೂಟರೂ ಗಂಗರೂ ಜೈನಧರ್ಮಕ್ಕೆ ಪೋಷಕರಾಗಿದ್ದು ಆ ಶತಮಾನದ ಕೊನೆಯ ವೇಳೆಗೆ ತಮಿಳುನಾಡಿನ ಶೈವವು ಕನ್ನಡನಾಡಿನಲ್ಲೂ ಹರಡಿ ಬರತೊಡಗಿತು. "೧೦ನೆಯ ಶತಮಾನವೆಂದರೆ ಶೈವ, ವೈಷ್ಣವ ಧರ್ಮಗಳ ಪ್ರಸಾರವು ಹೆಚ್ಚಾಗಿ ಜೈನ ಧರ್ಮವು ಕುಂದಿದ ಕಾಲ" ಎಂದು ಆರ್. ಎಸ್. ಪಂಚಮುಖಿ ಅವರು ಅಭಿಪ್ರಾಯ

ಪಟ್ಟಿದ್ದಾರೆ.[11] ಆದರೆ ೧೦ನೆಯ ಶತಮಾನದಲ್ಲಿ ಶೈವ, ವೈಷ್ಣವ ಧರ್ಮಗಳ ಪ್ರಸಾರ ಪ್ರಾರಂಭವಾದರೂ ರಾಜರ ಆಶ್ರಯದಲ್ಲಿ ಜೈನ ಧರ್ಮಕ್ಕೂ ಪುರಸ್ಕಾರ ಲಭಿಸಿದೆ. "೧೧ನೆಯ ಶತಕದಿಂದ ಮಾತ್ರ ಜೈನ ಧರ್ಮಕ್ಕೆ ಶೈವರಾದ ಚೋಳರಿಂದ ರಾಜಕೀಯ ಆಘಾತಗಳೂ ವೈದಿಕ ಹಾಗೂ ಅವೈದಿಕ ಭಕ್ತಿಸಂಘಗಳಿಂದ ಧಾರ್ಮಿಕ ಒತ್ತಡಗಳೂ ಹೆಚ್ಚುತ್ತ ಸಾಗಿದುವು....ಜೈನಮತೀಯರೇ ಆದ ಗಂಗರಾಜರ ಅವನತಿ ಜೈನಮತಕ್ಕೆ ಬಲವಾದ ಪೆಟ್ಟಾಯಿತು. ಚೋಳರ ನಾಡಿನಿಂದ ಕನ್ನಡನಾಡಿಗೆ ಬಂದ ರಾಮಾನುಜ ಮತದ ಭಕ್ತಿ ಪ್ರವಾಹವು ಜೈನ ಪ್ರಸಾರಕ್ಕೆ ತಡೆಯನ್ನೊಡ್ಡಿತು[12]. ಈ ವಿಧದಲ್ಲಿ ತಮಿಳುನಾಡಿನಿಂದ ಶೈವ ವೈಷ್ಣವಗಳು ಕರ್ನಾಟಕವನ್ನು ಪ್ರವೇಶಿಸಿ, ನಂತರ ಇಲ್ಲಿಯವರ ಸ್ವೋಪಜ್ಞತೆಯೂ ಸೇರಿ ಭಕ್ತಿಪ್ರಧಾನವಾದ ಅಪಾರ ಸಾಹಿತ್ಯದ ಸೃಷ್ಟಿಗೆ ನೆರವಾದುವು.

## ೧೨ ರಿಂದ ೧೪ನೆಯ ಶತಮಾನ

ಕನ್ನಡದ ಮೇಲೆ ತಮಿಳು ತೋರಿದ ಪ್ರಭಾವಕ್ಕೆ ಅತ್ಯುತ್ತಮ ಉದಾಹರಣೆ ಎಂದರೆ ಈ ಕಾಲವೇ. ಈ ಯುಗದಲ್ಲಿ ಕನ್ನಡ ಸಾಹಿತ್ಯವನ್ನು ಬೆಳಗಿಸಿದ ವೀರಶೈವ ಕವಿಗಳ ಮೇಲೆ ತಮಿಳು ಶೈವ ಸಾಹಿತ್ಯದ, ನಾಯನ್ಮಾರರ ಪ್ರಭಾವ ಮಿಗಿಲಾಗಿದೆ. ಕ್ರಿ.ಶ. ೧೨-೧೪ ಶತಮಾನಗಳ ನಡುವಣ ಕಾಲ ಕನ್ನಡನಾಡು ರಾಜಕೀಯವಾಗಿ ಜನಜೀವನದಲ್ಲಿ ಏಳುಬೀಳುಗಳನ್ನು ಅನುಭವಿಸುತ್ತಿತ್ತು. ವೈದಿಕ ಮತಗಳ ಡಾಂಭಿಕತೆ, ವ್ಯತ್ಯಾಸಗಳು, ಅಂಧ ವಿಶ್ವಾಸಗಳು ಪ್ರತಿಭಟನೆಗೆ ಈಡಾಗುವ ಕಾಲ ಬಂದಿತು. "ನವೀನ ಸಾಹಸ ಬುದ್ಧಿಯಿಂದ ಸಮಾಜಕ್ಕೆ ದಾರಿ ತೋರಿ ಕೆಡುಕನ್ನು ತಿದ್ದುವ ಮಹಾವ್ಯಕ್ತಿಗಳ ಉದಯಕ್ಕೆ ಇದು ಯೋಗ್ಯ ಸಮಯವಾಯಿತು. ಬಸವೇಶ್ವರ, ಪ್ರಭುದೇವ, ಸಿದ್ಧರಾಮರಂಥ ಶಿವಶರಣರನ್ನು 'ಕಲ್ಯಾಣ' ಪಥಕ್ಕೆ ಕರೆಯುವ ಕಹಳೆಯನ್ನು ಈ ಕಾಲ ಊದಿದಂತಾಯಿತು. ನಾಡಿನಲ್ಲಿ ಆಗ ಅನೇಕ ಶೈವ ಪಂಥಗಳಿದ್ದುವು ಕರ್ನಾಟಕದಲ್ಲಿ ವೈದಿಕವಾದ ಆರಾಧ್ಯಶೈವವಿತ್ತು, ಆಗಮನಿಷ್ಠವಾದ ಪಾಶುಪತವಿತ್ತು. ಕಾಶ್ಮೀರ, ತಮಿಳು, ತೆಲುಗು ನಾಡುಗಳಲ್ಲಿಯೂ ಶೈವ ಪ್ರಭೇದಗಳಿದ್ದುವು. ಶಿವಶರಣರು ಅವುಗಳ ಸಾರವನ್ನು ಸ್ವೀಕರಿಸಿ ವೀರಶೈವ ಎಂಬುದಾಗಿ ಮೆಲ್ಲನೆ ಹರಡುತ್ತಿದ್ದ ಸ್ವತಂತ್ರ ಮಾರ್ಗವನ್ನು ಸಾಮಾಜಿಕ ಧಾರ್ಮಿಕಕ್ರಾಂತಿಗೆ ತಳಹದಿಯನ್ನಾಗಿ ಮಾಡಿಕೊಂಡರು."[13] ಹೀಗೆ ತಮಿಳುನಾಡಿನ ಶೈವವೂ ಬಸವೇಶ್ವರನ ಧಾರ್ಮಿಕ ಕ್ರಾಂತಿಗೆ ನೆರವಾಯಿತು. ವಚನ, ರಗಳೆ, ಷಟ್ಪದಿ ಈ ಕಾಲದ ಕವಿಗಳ ಅಭಿವ್ಯಕ್ತಿಯ ಪ್ರಕಾರಗಳು. ಇದು ಮಾರ್ಗದಿಂದ ದೇಸಿಗೆ ಸಂಕ್ರಮಣಹೊಂದಿದ ಯುಗ. ಭಕ್ತಿರಸಕ್ಕೆ ಈ ಕಾಲದಲ್ಲಿ ಪ್ರಥಮಸ್ಥಾನ ದೊರಕಿತು.

೧೨-೧೩ ಈ ಶತಮಾನಗಳ ಹೊಯ್ಸಳರು ತಮಿಳುನಾಡಿನೊಡನೆ ಸಂಬಂಧ ಹೊಂದಿದ್ದರು. ೧೩ನೆಯ ಶತಮಾನದಲ್ಲಿ ತಮಿಳು ಜಿಲ್ಲೆಗಳನ್ನು ಇವರು ಗೆದ್ದು ಕಣ್ಣಾನೂರನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರು. "ಶ್ರೀರಾಮಾನುಜಾಚಾರ್ಯರ

ಧಾರ್ಮಿಕಸಂಬಂಧದ ಜೊತೆಗೆ, ತಮಿಳು ರಾಜನುರ್ನೆತನವೊಡನೆ ಮಾಡಿಕೊಂಡ ರಕ್ತ ಸಂಬಂಧದ ಜೊತೆಗೆ, ಅಲ್ಲಿನ ಅಶಾಂತಿಯನ್ನು ಅಡಗಿಸಿ, 'ಚೋಳಪತ್ರಿಷ್ಠಾಪನಾಚಾರ್ಯ' ಎಂಬ ಬಿರುದು ಸಂಪಾದಿಸಿದ ರಾಜಕೀಯ ಸಂಬಂಧವೂ ಸೇರಿತ್ತು." ಈ ಎಲ್ಲಾ ಸಂಬಂಧ ಬಾಂಧವ್ಯಗಳ ಪ್ರಭಾವ ಸಾಹಿತ್ಯದ ಮೇಲೂ ಇತ್ತು. ಶಿವಶರಣರು ಬರೆದಿರುವ ಸಹಸ್ರಾರು ವಚನಗಳಿಗೆ ನಾಯನ್ಮಾರರಿಂದ ಸ್ಫೂರ್ತಿ ದೊರಕಿದೆ. ವಚನ ಸಾಹಿತ್ಯ ಪ್ರಕಾರ ತಮಿಳು ಶೈವ ಸಂಪ್ರದಾಯದ ಶಿವಭಕ್ತರ 'ತೇವಾರಂ' ಎಂಬ ಭಕ್ತಿಗೀತೆಗಳಿಂದ ಹುಟ್ಟಿತೆಂಬ ಅಭಿಪ್ರಾಯವೂ ಕನ್ನಡನಾಡಿನ ವಿದ್ವಾಂಸರಲ್ಲಿದೆ. ಬಸವಣ್ಣನವರ ಸಾಮೂಹಿಕ ಕ್ರಾಂತಿ ಸ್ವೋಪಜ್ಞವಾದರೂ ಧಾರ್ಮಿಕ ಕ್ರಾಂತಿಯ ತಳಹದಿ ತಮಿಳು ನಾಡಿನ ಶೈವದಲ್ಲೇ ಕಂಡುಬರುತ್ತದೆ. ಶೈವ ಕವಿಗಳಲ್ಲಿ ತಮಿಳುನಾಡಿನ ಶೈವ ಸಿದ್ಧಾಂತ ವನ್ನೂ ಶಿವಶರಣರ ಚರಿತ್ರೆಗಳನ್ನೂ ಬಹುಮಟ್ಟಿಗೆ ಉಪಯೋಗಿಸಿಕೊಂಡವರೆಂದರೆ ಹರಿಹರದೇವ. ಆ ಕಾಲ ಭಕ್ತಿಪಂಥದ ಪುನರುಜ್ಜೀವನ ಕಾಲ. ತಮಿಳುನಾಡಿನಲ್ಲೂ ಕ್ರಿ.ಶ. ೧೧ರಿಂದ ೧೩ನೆಯ ಶತಮಾನದವರೆಗೆ ನಾಯನ್ಮಾರರು ಮುಂತಾದ ಭಕ್ತರ ಗೀತೆ ಗಳನ್ನು ಸಂಗ್ರಹಿಸುವುದು ಮುಂತಾದ ಕಾರ್ಯಗಳು ನಡೆದುವು. ತಮಿಳುನಾಡಿನ ಶಿವ ಶರಣರಿಗೆ 'ಅರುವತ್ತುಮೂವರು ಪುರಾತನರು' ಎಂದು ಹೆಸರು. ಬಸವಣ್ಣನವರು ಸಹ ಅವರನ್ನು ಸ್ಮರಿಸಿರುತ್ತಾರೆ. ಈ ಪುರಾತನರಲ್ಲಿ ಅಪ್ಪರ್, ಸುಂದರರ್ ಮತ್ತು ತಿರುಜ್ಞಾನ ಸಂಬಂದರ್ ಎಂಬವರು ಸಮಯಾಚಾರ್ಯರು. ಇವರಲ್ಲಿ ಸುಂದರಮೂರ್ತಿಗಳು ಪ್ರಸಿದ್ಧ ಶಿವಭಕ್ತರನ್ನು ಕುರಿತ 'ತಿರುತ್ತೊಂಡತ್ತೊಗೈ' ಎಂಬ ಭಕ್ತಿಮಾಲೆಯನ್ನು ಹಾಡಿದರು. ಇದಲ್ಲದೆ ನಂಬಿಯಾಂಡಾರ್‌ನಂಬಿ ಮುಂತಾದವರೂ ಶಿವಭಕ್ತರನ್ನು ಕುರಿತು ಗ್ರಂಥಗಳನ್ನು ಬರೆದಿದ್ದಾರೆ. ಶೇಕ್ಕಿಳಾರ್ ರಚಿಸಿದ 'ಪೆರಿಯಪುರಾಣಂ' ಅರುವತ್ತು ಮೂವರ ದಿವ್ಯ ಚಾರಿತ್ರ್ಯವನ್ನು ಕೀರ್ತಿಸುವ ಗ್ರಂಥ. ಹರಿಹರನ ರಗಳೆಗಳಲ್ಲಿ, ಈ ಮೇಲಿನ ಗ್ರಂಥಗಳಲ್ಲಿ ನಿರೂಪಿತವಾದ ತಮಿಳು ಪುರಾತನ ಭಕ್ತರ ಕಥೆಗಳು ವರ್ಣಿತವಾಗಿವೆ ಎಂದು ಶ್ರೀ ಡಿ.ಎಲ್ ನರಸಿಂಹಾಚಾರ್ ಮುಂತಾದವರು ಹೇಳಿರುವರು. ಈ ಅವತರಣಿಕೆಯನ್ನು ನೋಡಿ : "ಈ ಶಿವಶರಣರ ಕಥೆಗಳು ಹರಿಹರನಿಗೆ ಹೇಗೆ ಗೊತ್ತಾದುವು ಎಂಬುದನ್ನು ಹೇಳುವುದು ಕಷ್ಟ. ಅವನಿಗಿಂತ ಹಿಂದೆ ಯಾವ ಕನ್ನಡ ಕವಿಯೂ ಈ ಕಥೆಗಳನ್ನು ಬರೆದಿದ್ದಂತೆ ತಿಳಿಯ ಬಂದಿಲ್ಲ; ತೆಲುಗು ಕವಿಗಳು ಬರೆದಿದ್ದಂತೆ ಕಂಡುಬಂದಿಲ್ಲ. ಹರಿಹರನ ಕಾಲದಿಂದ ಈಚೆಗೆ ಹುಟ್ಟಿದ ಕನ್ನಡ ತೆಲುಗು ಗ್ರಂಥಗಳಲ್ಲಿ ಮಾತ್ರ ಈ ಶಿವಭಕ್ತರ ವೃತ್ತಾಂತ ಹೇಳಿದೆ. ಆದ್ದ ರಿಂದ ಹರಿಹರನ ಕಥಾವಸ್ತುಗಳನ್ನು ಸಂಸ್ಕೃತದಿಂದಲೋ ತಮಿಳಿನಿಂದಲೋ ಎತ್ತಿಕೊಂಡಿರ ಬಹುದೆಂಬ ಆಲೋಚನೆ ಹೊಳೆಯುತ್ತದೆ. ಸಂಸ್ಕೃತದಲ್ಲಿರುವ ಸ್ಕಾಂದ ಪುರಾಣದಲ್ಲಿ ಈ ಶಿವಭಕ್ತರ ಮಾಹಾತ್ಮ್ಯ ವರ್ಣಿತವಾಗಿದೆ. 'ಶಿವರಹಸ್ಯ'ವೆಂಬ ಗ್ರಂಥದಲ್ಲಿಯೂ ಈ ಕಥೆ ಗಳಿವೆಯಂತೆ. ಇವುಗಳನ್ನೇನಾದರೂ ಹರಿಹರ ನೋಡಿದ್ದನೆ? ಈ ಗ್ರಂಥಗಳಲ್ಲಿ ಬರುವ ಶಿವ ಶರಣರ ಹೆಸರುಗಳು ಬೇರೆ ಭಾಷೆಯ ಹೆಸರುಗಳ ಸಂಸ್ಕೃತ ಭಾಷಾಂತರದಂತೆ ಕಾಣುತ್ತವೆ. ಉದಾಹರಣೆಗಾಗಿ, ಐಹಿಕರಿಪು ಅಥವಾ ಸ್ವಭಾವರಿಪು ಎಂಬ ಹೆಸರನ್ನು ನೋಡಬಹುದು;

ಇದು ತಮಿಳಿನ ಇಹಃಪಗೆಯಹಾಂಡ ಎಂಬ ಹೆಸರಿನ ತರ್ಜುಮೆ ಎಂದು ತೋರುತ್ತದೆ. ಇಲಾನಂದ ಕುಟಿಮಾರ ಎಂಬ ಹೆಸರೂ ಇಳೈಯಹಾಂಡ ಗುಡಿಮಾರ ಎಂಬುದರ ರೂಪಾಂತರ. ಹರಿಹರನು ಈ ಸಂಸ್ಕೃತದ ಹೆಸರುಗಳನ್ನು ಉಪಯೋಗಿಸದೆ ಇರುವುದರಿಂದ ಅವನ್ನು ಮೇಲೆ ಹೇಳಿದ ಸಂಸ್ಕೃತ ಆಕರಗಳಿಂದ ಕಥೆಗಳನ್ನು ಎತ್ತಿಕೊಂಡಿಲ್ಲವೆಂದು ಹೇಳಬಹುದು. ಕೊನೆಗೆ ಉಳಿಯುವುದು ತಮಿಳಿನ ಗ್ರಂಥಗಳು. ಹರಿಹರ ಇವುಗಳಿಂದ ಕಥೆಗಳನ್ನೂ ಆರಿಸಿಕೊಂಡಿರಬೇಕು. ಅರುವತ್ತುಮೂವರು ಶಿವಭಕ್ತರ ಕಥೆಗಳನ್ನು 'ಪೆರಿಯಪುರಾಣಂ' ಎಂಬ ಹೆಸರುಳ್ಳ ತಮಿಳು ಕಾವ್ಯದಲ್ಲಿ ಹೇಳಿದೆ. ಇದು ಹರಿಹರನಿಗಿಂತ ಪ್ರಾಚೀನವಾದ ಗ್ರಂಥ. ಎರಡನೆಯ ಕುಲೋತ್ತುಂಗನೆಂಬ ಚೋಳರಾಜನ ಕಾಲದಲ್ಲಿ (೧೧೩೩–೧೧೫೫) ಶೆಕ್ಕಿಳಾರ್ ಎಂಬ ಕವಿಯಿಂದ ಈ ಕಾವ್ಯ ರಚಿತವಾಯಿತು. ಹರಿಹರನು ಕೊಡುವ ಶಿವಶರಣ ಪುರಾತನರ ಹೆಸರುಗಳು 'ಪೆರಿಯ ಪುರಾಣ'ದ ಹೆಸರುಗಳನ್ನು ಹೋಲುತ್ತವೆ. ಅವನು ಈ ಕಾವ್ಯವನ್ನು ಓದಿರಬೇಕು, ಅಥವಾ ಓದಿಸಿಕೊಂಡಿರಬೇಕು. ಅವನಿಗೆ ಸ್ವಲ್ಪ ಮಟ್ಟಿಗಾದರೂ ತಮಿಳು ಭಾಷೆಯ ಪರಿಚಯವಿದ್ದಂತೆ ಕಾಣುತ್ತದೆ. ಅವನ ರಗಳೆಗಳಲ್ಲಿ ಬರುವ ಕುಸವ (=ಕುಂಬಾರ), ಅಂಬಲಂ (=ಸಭೆ), ತಿರುಪಾಡು (ಸ್ತೋತ್ರ), ನಾಯನಾರ್ (= ಭಕ್ತ) ಮುಂತಾದ ಪದಗಳು ತಮಿಳಿನವು. ಹರಿಹರನಿಗಿಂತ ಹಿಂದಿನ ಯಾವ ಕನ್ನಡ ಕವಿಗಳೂ ಇಂತಹ ಪದಗಳನ್ನು ಉಪಯೋಗಿಸಿರುವಂತೆ ತಿಳಿದಿಲ್ಲ. ಇವು ಅವನಿಗೆ ತಮಿಳಿನಿಂದ ಬಂದಿರಬೇಕು. ಈ ಕಾರಣಗಳಿಂದ ಅವನು ತಮಿಳು ಸಾಹಿತ್ಯದಿಂದ, ಬಹುಶಃ 'ಪೆರಿಯ ಪುರಾಣದಿಂದ ಈ ಕಥೆಗಳನ್ನು ಆರಿಸಿಕೊಂಡಿರುವನೆಂದು ಹೇಳಬಹುದು. ಕಥೆಗಳಲ್ಲಿ ಹರಿಹರ ಕೆಲವು ಮಾರ್ಪಾಡುಗಳನ್ನು ಮಾಡಿದ್ದಾನೆ ; ತನಗೆ ಬೇಡವಾದ ಭಾಗಗಳನ್ನು ಬಿಟ್ಟಿದ್ದಾನೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಅಭ್ಯಾಸ ಕನ್ನಡಿಗರಲ್ಲಿ ನಡೆಯಬೇಕಾಗಿದೆ, ನಡೆದಿದ್ದರೆ ಬೆಳಕಿಗೆ ಬರಬೇಕಾಗಿದೆ."[14]

ಹರಿಹರದೇವನ ಮೇಲೆ ತಮಿಳಿನಿಂದಾದ ಪ್ರಭಾವವನ್ನು ಕುರಿತು ಶ್ರೀ ಎಲ್. ಗುಂಡಪ್ಪ ಮುಂತಾದವರು ವಿವೇಚಿಸಿರುತ್ತಾರೆ. ಅವರ ಪ್ರಕಾರ ಹರಿಹರ 'ಪೆರಿಯ ಪುರಾಣ'ದಲ್ಲೇ ಇರುವ ಅನೇಕ ಕಥೆಗಳನ್ನು ರಗಳೆಗಳಲ್ಲಿ ಪುನಸ್ಸೃಷ್ಟಿಮಾಡಿ ಒಂದು ಹೊಸ ಪ್ರಪಂಚವನ್ನೇ ಸೃಷ್ಟಿಸಿದ್ದಾನೆ. ಪುರಾಣಾಂಶಗಳು ಹೆಚ್ಚಾಗಿರುವ ತಮಿಳು ಗ್ರಂಥದ ಕಥೆಗಳನ್ನು ಉತ್ತಮ ಕಾವ್ಯಗಳಂತೆ ಮಾರ್ಪಡಿಸಿರುತ್ತಾನೆ ಹರಿಹರ. "ಪ್ರತಿಯೊಂದು ಕಥೆಯಲ್ಲೂ ಹೋಲಿಕೆ ವ್ಯತ್ಯಾಸಗಳಿವೆ. ಕಲ್ಪನಾ ವಿಲಾಸವಿದೆ ; ಭಕ್ತಿಯ ಸಾರ್ಥಕತೆಯಿದೆ ; ಶಿವಕಾರುಣ್ಯದ ಪ್ರಸಾದವಿದೆ "[15] ತಮಿಳಿನ ಅಗವಲ್ ಛಂದಸ್ಸು ಕೆಲಮಟ್ಟಿಗೆ ರಗಳೆಯನ್ನು ಹೋಲುತ್ತದೆ. ಶಿಲಪ್ಪದಿಕಾರಂ, ಮಣಿಮೇಕಲೈ ಮುಂತಾದ ಕಾವ್ಯಗಳಲ್ಲಿ ಇದೇ ಛಂದಸ್ಸು ಬಳಕೆಯಾಗಿದೆ. ಹರಿಹರ ಕವಿಯ ರಗಳೆ ಛಂದಸ್ಸಿಗೆ ತಮಿಳಿನ ಆ ಮಹಾಕಾವ್ಯಗಳ ಛಂದಸ್ಸು ಸ್ಫೂರ್ತಿ ಕೊಟ್ಟಿತೇನೋ ! ತಮಿಳು ಪುರಾತನರ ಚರಿತ್ರೆಗಳನ್ನು ಬರೆದಿರುವ ಸಂದರ್ಭದಲ್ಲಿ 'ಬೀದಿವಿಡಂಗ ಪೆರುಮಾಳೆ, ಸೌಂದರ ಪೆರುಮಾಳೆ, ಎಲೆ ಅಪ್ಪರೇ, ಪಿಚ್ಚ ಬ್ರಾಹ್ಮಣಾ' ಮೊದಲಾದ ತಮಿಳು ವಾಸನೆಯ ಪದಗಳನ್ನೂ

ಹರಿಹರದೇವ ಪ್ರಯೋಗಿಸಿರುತ್ತಾನೆ.[16]

ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವ ಪುರಾಣ'ದ ಮೇಲೆ ನಾಯನ್ಮಾರರು ಬೀರಿದ ಪ್ರಭಾವ ಸಾಕಷ್ಟಿದೆ. ಆ ಕಾವ್ಯದಲ್ಲಿ ಅವನು ಅರುವತ್ತು ಮೂವರು ಪುರಾತನರಿಗೆ ಸಂಬಂಧಿಸಿದ ಕಥೆಗಳನ್ನೂ ಹೇಳಿರುತ್ತಾನೆ. 'ಪೆರಿಯ ಪುರಾಣ'ಕ್ಕೆ ಈ ವಿಷಯದಲ್ಲಿ ಅವನು ಋಣಿಯಾಗಿದ್ದಾನೆ. ತೆಲುಗಿನ 'ಬಸವ ಪುರಾಣ'ವನ್ನೇ ಭೀಮಕವಿ ಕನ್ನಡಕ್ಕೆ ಅನುವಾದ ಮಾಡಿರುತ್ತಾನೆ. ಆಂಡಯ್ಯನು ಕಬ್ಬಿಗರ ಕಾವವನ್ನು ಬರೆಯಲು ತಮಿಳಿನ 'ಶೆಂದಮಿಳ್' ಕಾವ್ಯಗಳು ಪ್ರೇರಕವಾಗಿದ್ದರೂ ಇರಬಹುದು.

## ೧೫ರಿಂದ ೧೯ನೆಯ ಶತಮಾನ

ಈ ಕಾಲವನ್ನು ಕೆಲವರು ಕುಮಾರವ್ಯಾಸ ಯುಗ ಮತ್ತು ಚಿಕದೇವರಾಯನ ಯುಗವೆಂದು ಕರೆದಿದ್ದಾರೆ. ಈ ಕಾಲದಲ್ಲಿ ತಮಿಳು ಕನ್ನಡಗಳಲ್ಲಿ ಅನೇಕ ವಿಧವಾದ ಬಾಂಧವ್ಯಗಳು ಬೆಳೆದಿವೆ. ಕುಮಾರವ್ಯಾಸನ ಕಾಲ ಸಮ್ಮಿಶ್ರ ಯುಗ. ಇದು ದೇಸಿ ಪ್ರಚುರವಾದ ಕಾಲ. ಕೆಲವರು ಇದನ್ನು ಬ್ರಾಹ್ಮಣಯುಗವೆಂದೂ ಕರೆಯುವುದುಂಟು. ರಾಮಾನುಜಾಚಾರ್ಯರ ಪ್ರಭಾವ ಈ ಕಾಲದವರೆಗೂ ಹರಡಿದೆ. ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ ಬರೆದಿರುವ ದಾಸರ ಪದಗಳು ಅನೇಕವಿವೆ. ಷಟ್ಪದಿ, ಸಾಂಗತ್ಯ, ತ್ರಿಪದಿ ಹಾಗೂ ಕೀರ್ತನೆಗಳ ಜೊತೆಗೆ ಈ ಯುಗದ ಎಡಡನೆಯ ಭಾಗದಲ್ಲಿ ಚಂಪೂ ಪ್ರಕಾರವೂ ಪುನಃ ತಲೆಯೆತ್ತಿದೆ.

ಈ ಕಾಲದ ಗ್ರಂಥಕಾರರಲ್ಲಿ ಒಬ್ಬನಾದ ಚಾಮರಸನ (ಸು. ೧೪೩೦) ಪ್ರಭುಲಿಂಗಲೀಲೆ' ಇತರ ಅನೇಕ ಭಾಷೆಗಳೊಂದಿಗೆ ತಮಿಳಿಗೂ ಅನುವಾದವಾಗಿದೆ. ೧೭ನೆಯ ಶತಮಾನದ ಶಿವಪ್ರಕಾಶಸ್ವಾಮಿ 'ಪ್ರಭುಲಿಂಗಲೀಲೆ'ಯನ್ನೂ ನಿಜಗುಣ ಶಿವಯೋಗಿಯ 'ವಿವೇಕ ಚಿಂತಾಮಣಿ'ಯಲ್ಲಿಯ ವೇದಾಂತ ಪರಿಚ್ಛೇದವನ್ನೂ ತಮಿಳಿಗೆ ಭಾಷಾಂತರ ಮಾಡಿರುತ್ತಾನೆ. ಸುಮಾರು ೧೫೦೦ರಲ್ಲಿದ್ದ ಕನ್ನಡ ಕವಿಯಾದ ನಿಜಗುಣ ಶಿವಯೋಗಿ 'ಅರವತ್ತು ಮೂವರ ತ್ರಿಪದಿ'ಯನ್ನೂ ಬರೆದಿದ್ದಾರೆ. ಇದಕ್ಕೆ 'ಪುರಾತನರ ತ್ರಿವಿಧಿ' ಎಂದೂ ಹೆಸರಿದೆ. ಶಿವಭಕ್ತರಾದ ತಮಿಳುನಾಡಿನ ಅರುವತ್ತು ಮೂವರ ಸ್ತುತಿ ಈ ಗ್ರಂಥದಲ್ಲಿದೆ. ಇನ್ನೊಬ್ಬ ವೀರಶೈವ ಕವಿಯಾದ ಸುರಂಗಕವಿಯೂ 'ತ್ರಿಷಷ್ಟಿ ಪುರಾತನರ ಚರಿತ್ರೆ'ಯನ್ನು ಬರೆದಿದ್ದಾನೆ. ಗುಬ್ಬಿಯ ಮಲ್ಲಣಾರ್ಯನ (ಕ್ರಿ.ಶ. ೧೫೧೩) 'ಭಾವಚಿಂತಾರತ್ನ'ಕ್ಕೆ ತಮಿಳು ಗ್ರಂಥವೇ ಆಧಾರವೆಂದು ತಿಳಿದು ಬಂದಿದೆ. ದ್ರಾವಿಡ ಭಾಷೆಯಿಂದ ಇದನ್ನು ಕನ್ನಡಿಸಿದಂತೆ ಈ ಕವಿಯ ಹೇಳಿಕೆ (೧–೨೧).

ಚಿಕ್ಕದೇವರಾಯನ ಕಾಲ ವಿಶಿಷ್ಟಾದ್ವೈತ ಸಂಘದ ಸಾಹಿತ್ಯ ರಾಶಿಯುಳ್ಳ ತಮಿಳು ಭಾಷೆಯ ಪ್ರಭಾವಕ್ಕೆ ಸಾಕಷ್ಟು ಒಳಗಾಗಿದ್ದು, ಆ ಕಾಲದ ಅನೇಕ ಗ್ರಂಥಗಳಲ್ಲಿ ಗೋಚರವಾಗುತ್ತದೆ. 'ಗೀತ ಗೋಪಾಲ' ಮುಂತಾದ ಗ್ರಂಥಗಳಲ್ಲಿ ಪುಟಪುಟಗಳಲ್ಲೂ ಕಾಣುವ 'ಅಚ್ಚಗನ್ನಡ ಹೊಸಕಳೆ'ಗೆ ತಮಿಳು ಗೀತೆಗಳ ಶೆಂದಮಿಳಿನ ಪ್ರಭಾವವೂ

ಕೆಲಮಟ್ಟಿಗೆ ಕಾರಣವಾಗಿರಬಹುದು. ಚಿಕ್ಕುಪಾಧ್ಯಾಯ, ಸಿಂಗರಾರ್ಯ, ತಿರುಮಲಾರ್ಯ, ಸಂಚಿಯ ಹೊನ್ನಮ್ಮ ಮುಂತಾದವರ ಗ್ರಂಥಗಳಲ್ಲೆಲ್ಲಾ ಕನ್ನಡ ನುಡಿಯ ಸೊಬಗು ಕಂಡು ಬರುತ್ತದೆ. "ಸಂಸ್ಕೃತ ವಿದ್ವಾಂಸರಾದ ಅವರ ಬರವಣಿಗೆಯಲ್ಲಿ ಅಷ್ಟು ಮಟ್ಟಿಗೆ ಅಚ್ಚಗನ್ನಡ ಮೂಡಿ ಬಂದಿರುವುದಕ್ಕೆ ಅವರು ತಮಿಳು ಬಲ್ಲವರಾಗಿದ್ದುದು ಮುಖ್ಯ ಕಾರಣವೆಂದು ಹೇಳಬಹುದು"[17] ಎಂಬ ಅಭಿಪ್ರಾಯವನ್ನು ಒಪ್ಪಬಹುದೆಂದು ತೋರುತ್ತದೆ. ಇವರಲ್ಲಿ ಕೆಲವರು ತಮಿಳು ಶ್ರೀವೈಷ್ಣವರೇ ಆದುದರಿಂದ ಅವರಿಗೆ ತಮಿಳು ಭಾಷೆಯ ಚೆನ್ನಾದ ಪರಿಚಯವಿದ್ದಿರಬೇಕು. ಕಂಚಿ ವರದರಾಜಸ್ವಾಮಿಯ ಭಕ್ತನಾದ ಚಿಕ್ಕುಪಾಧ್ಯಾಯನ ಗ್ರಂಥಗಳಲ್ಲಿ 'ತಿರುವಾಯ್‌ಮೊಳಿ' ಟೀಕೆಯೂ ಒಂದು. ಆ ಹೆಸರಿನ ಪ್ರಸಿದ್ಧ ತಮಿಳು ಗ್ರಂಥಕ್ಕೆ, ಎಂದರೆ ನಮ್ಮಾಳ್ವರೆಂಬ ಶಠಕೋಪಯೋಗಿ ರಚಿತವಾದ ದ್ರಾವಿಡ ಪ್ರಬಂಧಕ್ಕೆ ವ್ಯಾಖ್ಯಾನವಾಗಿದೆ. ಇವನ ಗ್ರಂಥಗಳಲ್ಲಿ ಬಹುಪಾಲು ವೈಷ್ಣವ ಗ್ರಂಥಗಳು. ಆಳ್ವಾರರ, ರಾಮಾನುಜಾಚಾರ್ಯರ ಪ್ರಭಾವ ಅವುಗಳ ಮೇಲೆ ಬಹಳಷ್ಟು ಇದೆ. ಅನೇಕ ಕೃತಿಗಳಲ್ಲಿ ರಾಮಾನುಜರ ಸ್ತುತಿ ಇದೆ. 'ದಿವ್ಯಸೂರಿ ಚರಿತೆ' ಎಂಬ ಚಂಪೂ ಗ್ರಂಥದಲ್ಲಿ ವಿಷ್ಣುಭಕ್ತರಾದ ಹನ್ನೆರಡು ಜನ ಆಳ್ವಾರರ ಚರಿತ್ರೆ ಇದೆ. ಒಟ್ಟಿನಲ್ಲಿ ಚಿಕ್ಕುಪಾಧ್ಯಾಯನ ಮೇಲೆ ತಮಿಳು ಸಾಹಿತ್ಯ, ತಮಿಳು ಧರ್ಮಗಳು ಅಪಾರ ಪ್ರಭಾವ ಬೀರಿವೆ.

## ಆಧುನಿಕ ಕಾಲ

"ಸ್ಥೂಲವಾಗಿ ೧೯ನೆಯ ಶತಮಾನದ ಮೂರನೆಯ ದಶಕದಲ್ಲಿ ನಸುಕಾಗಿ ಮಧ್ಯದಷ್ಟರ ಹೊತ್ತಿಗೆ ಬೆಳಕಾಗಿ ಹೊಸಗನ್ನಡ ಸಾಹಿತ್ಯವು ಉದಯವಾಯಿತೆಂದು ಹೇಳಬಹುದು. ಆದರೆ ಬೆಳ್ಳಂಬೆಳಕಾದದ್ದು ಇಪ್ಪತ್ತನೆಯ ಶತಮಾನದಲ್ಲಿಯೇ ಎನ್ನಬೇಕು. ಅದರಲ್ಲಿಯೂ ನವನಿರ್ಮಿತಿಯ ಸೂರ್ಯನು ತಲೆಯೆತ್ತಿದ್ದು ಇಪ್ಪತ್ತನೆಯ ಶತಮಾನದ ಇಪ್ಪತ್ತರಿಂದ ಮುಂದೆ ಮಾತ್ರ."[18] ವಿಶೇಷವಾಗಿ ಹೊಸಗನ್ನಡದ ಅರುಣೋದಯ ಕಾಲದಲ್ಲಿ ಕ್ರೈಸ್ತ ಮಿಶನರಿಗಳು ಕನ್ನಡ ನುಡಿಗೆ ಸೇವೆಯನ್ನು ಸಲ್ಲಿಸಿದರು. ತಮಿಳಿನಲ್ಲೂ ಇಂಗ್ಲಿಷರು ಮಾಡಿದ ಸಾಹಿತ್ಯ ವ್ಯಾಸಂಗ ಮಿಗಿಲಾದುದು.

ಹೊಸಗನ್ನಡ ಯುಗದ ಮೊದಲನೆಯ ಹಂತದಲ್ಲಿ ಅನೇಕ ತಮಿಳು ಗ್ರಂಥಗಳ ಅನುವಾದಗಳು ಕನ್ನಡದಲ್ಲಿ ಪ್ರಕಟವಾಗಿವೆ. ಕ್ರೈಸ್ತ ಮಿಶನರಿಗಳು ಧಾರ್ಮಿಕ ಗ್ರಂಥಗಳನ್ನು ತಮಿಳಿನಿಂದ ಕನ್ನಡಕ್ಕೆ ಭಾಷಾಂತರ ಮಾಡಿರುತ್ತಾರೆ. ಅಂತಹವುಗಳಲ್ಲಿ ಜಾನ್ ರೀಡ್ ಎಂಬವರ 'ದೇವವಾಕ್ಯೋದಾಹರಣ ಸಂಗ್ರಹ', ಕೆ. ವಿ. ಜೋಸಿಯಾ ಅವರ 'ಹೊಸ ಒಡಂಬಡಿಕೆ' ಮತ್ತು 'ಉಭಯ ಮಾರ್ಗ ಸಂಬಂಧ' ಮುಂತಾದುವನ್ನು ಹೆಸರಿಸಬಹುದು. ಇ. ಎಲ್. ಚಾರ್ಬಾ ಎಂಬವನು ಅನೇಕ ತಮಿಳು ಧಾರ್ಮಿಕ ಗ್ರಂಥಗಳನ್ನು ಕ್ರೈಸ್ತಧರ್ಮದ ಪ್ರಚಾರಕ್ಕಾಗಿ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. 'ಅಜ್ಞಾತವಾಸ ಅಥವಾ ಇಗ್ನಾಸಿಯವರ ಧ್ಯಾನಗಳು', 'ದಿವ್ಯಮಾತೃಕೆಯು',

‘ದ್ವೈವ ಪರೀಕ್ಷೆಯು’ (೧೮೬೨), ‘ಪೂರ್ವಿಕ ಮತದ ವ್ಯಾಖ್ಯಾನವು’, ‘ಪ್ರೊತೆಸ್ತಾಂತ ಯೆಂಬ ಪತಿತರ ಮಾರ್ಗವು’ ಎಂಬುವು ಇವನ ಗ್ರಂಥಗಳು.

ಇಂಗ್ಲಿಷರಲ್ಲದೆ ಹೊಸಗನ್ನಡ ಯುಗದ ಮೊದಲ ಭಾಗದಲ್ಲಿ ಕೆಲವರು ದೇಶೀಯ ಪಂಡಿತರು ಕೂಡ ತಮಿಳಿನಿಂದ ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವರಲ್ಲಿ ಆರ್. ನರಸಿಂಹಾಚಾರ್ಯರು ಹೆಸರಿಸತಕ್ಕವರು. ಕರ್ಣಾಟಕಕ್ಕೆ ಸಂಬಂಧಿಸಿದ ತಮಿಳು ಶಾಸನಗಳನ್ನು ಇವರು ಕನ್ನಡಿಸಿದ್ದಾರೆ. ಇವರು ಕನ್ನಡದಲ್ಲೂ ತಮಿಳಿನಲ್ಲೂ ಸಮಾನವಾಗಿ ಪಾಂಡಿತ್ಯವಿದ್ದ ಮಹನೀಯರು. ಬೆಶ್ಚಿಯು ತಮಿಳಿನಲ್ಲಿ ಬರೆದಿದ್ದ ‘ಪರಮಾರ್ಥ ಗುರುವಿನ ಕಥೆ’ಯನ್ನು ನರಸಿಂಹಾಚಾರ್ಯರು ‘ನಗೆಗಡಲು’ ಎಂಬ ಹೆಸರಿನಿಂದ ಕನ್ನಡದಲ್ಲಿ ಹೇಳಿದ್ದಾರೆ. “ನರಸಿಂಹಾಚಾರ್‍ಯರ ಕಾವ್ಯರಚನೆಯ ‘ನೀತಿವಾಕ್ಯ ಮಂಜರಿ’ಯು ಎರಡು ಸಂಪುಟಗಳಲ್ಲಿ ಮೈವೆತ್ತು ಬಂದಿದೆ. ಕ್ರಿ.ಶ. ೧೮೮೬–೧೯೧೧ ಈ ಅವಧಿಯ, ಬಿಡುವಿನ ವೇಳೆಯಲ್ಲಿ ರಚಿತವಾದ ಪದ್ಯಗಳವು. ‘ತಮಿಳಿನಲ್ಲಿ ಇರುವಷ್ಟು ನೀತಿ ಗ್ರಂಥಗಳು ಇನ್ನಾವ ಭಾಷೆಯಲ್ಲಿಯೂ ಇಲ್ಲ. ಇವುಗಳಲ್ಲಿ ಕೆಲವನ್ನು ಭಾಷಾಂತರ ಮಾಡಿದರೆ ಕನ್ನಡಿಗರಿಗೆ ಉಪಯೋಗ ಬೀಳಬಹುದು’ ಎಂಬ ಆಶಯ ಅವರದು. ಆ ಕಾರಣ ಅವ್ವೈಯಾರರಿಂದ ಹಿಡಿದು ತಿರುವಳ್ಳುವರ್ ವರೆಗಿನ ಅಂಥ ಪದ್ಯಗಳನ್ನು ಅನುವಾದಿಸಿದ್ದಾರೆ.”[19] ಇವು ಹೊಸಗನ್ನಡ ಗದ್ಯರೂಪದಲ್ಲೂ ಹಳಗನ್ನಡ ಕಂದರೂಪದಲ್ಲೂ ಇವೆ. ನರಹರಿಜಯರಾಯಾಚಾರ್ಯ ಎಂಬವರು ೧೯೦೫ರಲ್ಲಿ ‘ಕರ್ಣಾಟಕ ಪಾಕಶಾಸ್ತ್ರ’ವನ್ನು ಬರೆದಿದ್ದಾರೆ. ಇದು ತಮಿಳು ಮತ್ತು ತೆಲುಗುಗಳಿಗೆ ಅನುವಾದವಾಗಿದೆ. ಮಂಡ್ಯಂ ಶ್ರೀನಿವಾಸ ಅಯ್ಯಂಗಾರ್ ೧೯೧೫ರಲ್ಲಿ ತಮಿಳಿನಿಂದ ‘ನಿತ್ಯಾನುಸಂಧಾನ ಟೀಕೆ’ಯನ್ನು ಕನ್ನಡಕ್ಕೆ ತಂದಿದ್ದಾರೆ.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಪುನಃ ತಮಿಳಿನ ಪ್ರಭಾವ ಕಾಣಿಸಿಕೊಂಡಿತು. ದಿವಂಗತ ‘ಶ್ರೀ’ ಅವರು ಈ ನವಚೇತನದ ಆತ್ಮಸ್ವರೂಪವಾಗಿದ್ದರು. ಅವರು ಪ್ರಾರಂಭಿಸಿದ ‘ಸಿರಿಗನ್ನಡಂ ಗೆಲ್ಗೆ’ ಎಂಬ ಘೋಷಣೆಗೆ ಸ್ಫೂರ್ತಿ ‘ಶೆಂದಮಿಳ್’ ಎಂದು ಹೇಳುವರು. ‘ಕನ್‌ನಡದ ಬಾವುಟ’ ಎಂಬ ಹೆಸರಿನಲ್ಲಿ ಅವರು ಬರೆದ— ‘ಏರಿಸಿ, ಹಾರಿಸಿ, ಕನ್‌ನಡದ ಬಾವುಟ ...’ ಮುಂತಾದ ವಾಕ್ಯಗಳಲ್ಲಿರುವ ಹೊಸ ಪ್ರಯೋಗ ತಮಿಳಿನ ಲಿಪಿಯಿಂದ ಸ್ಫೂರ್ತಿಪಡೆದುದೇ ಆಗಿದೆ. “ಅವರು ಮೈಸೂರು ಮಹಾರಾಜಾ ಕಾಲೇಜಿನ ತಮ್ಮ ವಿದ್ಯಾರ್ಥಿಗಳಿಗೆ ‘ಅಗನಾನೂಱು’ ‘ಪುಱನಾನೂಱು’ ‘ತಿರುವಾಚಗಂ’ ಮೊದಲಾದ ತಮಿಳು ಗ್ರಂಥಗಳನ್ನೂ ಹರಿಹರನ ರಗಳೆಗಳನ್ನೂ ಓದಿ ಹೇಳಿ, ಕನ್ನಡದಲ್ಲಿ ಬರೆಯ ಬಯಸುವವರು ಅನುಸರಿಸಬೇಕಾದ ಮಾದರಿಯನ್ನು ವಿವರಿಸಿ ತೋರಿಸುತ್ತಿದ್ದುದೂ “ಕನ್ನಡ ಭಾಷೆಯನ್ನೂ ಅದರ ಪ್ರಾಚೀನ ಸಾಹಿತ್ಯವನ್ನೂ ಸರಿಯಾಗಿ ಅರ್ಥಮಾಡಿಕೊಳ್ಳುವುದಕ್ಕೂ ಹಲವಾರು ಕನ್ನಡ ಶಬ್ದಗಳ ರೂಪ ನಿರ್ಧಾರಕ್ಕೂ ತಮಿಳಿನ ಪರಿಚಯ ಅತ್ಯಾವಶ್ಯಕವೆಂದು ಅವರು ಒತ್ತಿ ಒತ್ತಿ ಹೇಳುತ್ತಿದ್ದುದೂ”[20] ಕನ್ನಡ ತಮಿಳು ಭಾಷಾಸಾಹಿತ್ಯಗಳ ಅಭ್ಯಾಸದ ಅಗತ್ಯವನ್ನು ಅಂದಿನ ತರುಣ

ವಿದ್ವಾಂಸರಿಗೆ ಮನವರಿಕೆ ಮಾಡಿತೆಂದು ಹೇಳಬಹುದು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ವಿವಿಧ ರಾಜ್ಯಗಳ ನಡುವೆ ಸಂಬಂಧಗಳೂ ಬೆಳೆದು ಸಾಹಿತ್ಯಿಕವಾಗಿಯೂ ಒಬ್ಬರನ್ನೊಬ್ಬರು ತಿಳಿಯುವ ಆಸಕ್ತಿ ಹೆಚ್ಚುತ್ತಿದೆ. ಮುಖ್ಯವಾಗಿ ಭಾಷಾವಿಜ್ಞಾನ ದಿನದಿನಕ್ಕೂ ಅಭಿವೃದ್ಧಿಯಾಗುತ್ತಿದ್ದಂತೆ ದ್ರಾವಿಡ ಭಾಷೆಗಳ ತುಲನಾತ್ಮಕ ಅಧ್ಯಯನಕ್ಕೆ ಹೆಚ್ಚು ಅವಕಾಶಗಳೂ ದೊರಕಿವೆ, ಆಸಕ್ತಿಯೂ ಹೆಚ್ಚಿದೆ. ಈ ದಾರಿಯಲ್ಲಿ ಬಿಷಪ್ ಕಾಲ್ಡ್‌ವೆಲ್ ಅವರು ತೋರಿಸಿದ ಮಾರ್ಗ ತುಂಬ ಪ್ರಯೋಜನಕಾರಿಯಾಗಿದೆ. ಪ್ರಾಚೀನ ಹಳಗನ್ನಡ ಮತ್ತು ತಮಿಳುಗಳಿಗಿರುವ ನಿಕಟ ಸಂಪರ್ಕದ ಆಳವಾದ ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ಇತ್ತೀಚಿನ ಕಾಲದಲ್ಲಿ ದಕ್ಷಿಣ ಭಾರತೀಯ ಪುಸ್ತಕ ಸಂಸ್ಥೆ, ಸಾಹಿತ್ಯ ಅಕಾಡಮಿ, ನ್ಯಾಷನಲ್ ಬುಕ್‌ಟ್ರಸ್ಟ್ ಆಫ್ ಇಂಡಿಯಾ ಮುಂತಾದ ಸಂಸ್ಥೆಗಳು ಒಂದು ಭಾಷೆಯ ಸಾಹಿತ್ಯ ಸಂಸ್ಕೃತಿಗಳನ್ನು ಇನ್ನೊಂದು ಭಾಷೆಯವರಿಗೆ ಪರಿಚಯ ಮಾಡುವ ಕೆಲಸವನ್ನು ಕೈಕೊಂಡಿದ್ದಾರೆ. ಇದರ ಫಲವಾಗಿ ತಮಿಳಿನಿಂದ ಕನ್ನಡಕ್ಕೆ, ಕನ್ನಡದಿಂದ ತಮಿಳಿಗೆ ಕೆಲವು ಗ್ರಂಥಗಳು ಅನುವಾದವಾಗಿವೆ. ಮುಗಳಿ ಅವರ ಕನ್ನಡ ಸಾಹಿತ್ಯದ ಇತಿಹಾಸವನ್ನು ತಮಿಳಿಗೆ ಅನುವಾದ ಮಾಡಲಾಗಿದೆ. ತಮಿಳಿನ ಸಣ್ಣ ಕತೆಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಲಾಗಿದೆ. ಸುಬ್ರಹ್ಮಣ್ಯ ಭಾರತಿ ಅವರ ಕವನ ಸಂಗ್ರಹವೂ ಕನ್ನಡವಲ್ಲಿ ಪ್ರಕಟವಾಗಿದೆ. ಬಿಡಿಬಿಡಿಯಾಗಿ ಅನೇಕ ಸಣ್ಣಕತೆಗಳು ಎರಡು ಭಾಷೆಗಳಿಗೂ ಅನುವಾದವಾಗಿವೆ. ಆದರೆ ಈ ಎರಡೂ ಭಾಷೆಗಳ ಸಾಹಿತ್ಯಗಳ ಬೃಹತ್ಪರಿಮಾಣವನ್ನು ನೋಡಿದಾಗ ನಡೆದ ಕಾರ್ಯ ಬಹಳ ಕಡಮೆ ಎನಿಸುತ್ತದೆ. ಇನ್ನೂ ಈ ಕ್ಷೇತ್ರದಲ್ಲಿ ಹೆಚ್ಚಿನ ಕೆಲಸ ನಡೆಯಬೇಕಾಗಿದೆ.

## ಕನ್ನಡ-ಮಲಯಾಳ

ಕನ್ನಡ ಮಲಯಾಳಗಳ ನಂಟು ಕನ್ನಡ-ತಮಿಳು ಭಾಷೆಗಳಷ್ಟು ಹಳೆಯದೂ ಅಲ್ಲ, ದೃಢವಾದುದೂ ಅಲ್ಲ. ಕನ್ನಡ ಭಾಷಾ ಸಾಹಿತ್ಯಗಳಿಗಿಂತ ಮಲಯಾಳ ಭಾಷಾ ಸಾಹಿತ್ಯಗಳು ಅರ್ವಾಚೀನವಾದವೆಂಬುದೂ ಇದಕ್ಕೆ ಒಂದು ಕಾರಣ. ಸಂಸ್ಕೃತ ಪ್ರಭಾವದ ದೃಷ್ಟಿಯಿಂದ ಮಲಯಾಳ ಭಾಷೆ ಕನ್ನಡ ತೆಲುಗುಗಳನ್ನು ಹೋಲುತ್ತಿದ್ದರೂ ಮೂಲಭೂತವಾಗಿ ಅದರ ಲಿಪಿ ಮತ್ತು ಭಾಷೆಗಳು ತಮಿಳಿಗೆ ಹತ್ತಿರವಾದುವು. ಇತ್ತೀಚಿನ ಕಾಲದಲ್ಲಿ ಅಷ್ಟೇ ಮಲಯಾಳ ಕನ್ನಡಗಳ ನಡುವೆ ಬಾಂಧವ್ಯ ಬೆಳೆಯುತ್ತಿದೆ; ಕೊಳುಕೊಡೆಗಳು ನಡೆಯುತ್ತಿವೆ.

ಮಲಯಾಳ ಕೇರಳ ನಾಡಿನ ಪ್ರಮುಖ ಭಾಷೆ. ಮಲಬಾರ್, ಕೊಚ್ಚಿ ಮತ್ತು ತಿರುವಾಂಕೂರುಗಳನ್ನೊಳಗೊಂಡ ಪ್ರದೇಶ ಕೇರಳ. ಚೇರದೇಶವನ್ನೂ ಚೇರರಾಜರನ್ನೂ ಕುರಿತ ಉಲ್ಲೇಖಗಳು ರಾಮಾಯಣ ಕಾಲದಿಂದಲೂ ಸಂಸ್ಕೃತ, ತಮಿಳು,

ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಅನೇಕವಾಗಿವೆ.

ಕೊವುನ್ನಿ ನೆಡುಂಗುಡಿ ಎಂಬವನು ತನ್ನ 'ಕೇರಳ ಕೌಮುದಿ' ಎಂಬ ವ್ಯಾಕರಣದಲ್ಲಿ ಮಲಯಾಳ ಸಂಸ್ಕೃತಜನ್ಯವೆಂದು ಅಭಿಪ್ರಾಯಪಟ್ಟಿರುವನು. ಆದರೆ ಆಧುನಿಕ ಭಾಷಾ ವಿಜ್ಞಾನಗಳ ಪರಿಶೀಲನೆಯಿಂದ ಅದು ದ್ರಾವಿಡಜನ್ಯವೆಂಬುದು ಈಗ ಸ್ಪಷ್ಟ. ಕಾಲ್ಡ್ವೆಲ್ ಪ್ರಕಾರ ಮಲಯಾಳ ತಮಿಳಿನಿಂದ ಹುಟ್ಟಿದ ಭಾಷೆ. ಆದರೆ ಈಗ ಕನ್ನಡ ತೆಲುಗುಗಳಂತೆಯೇ ಮಲಯಾಳವೂ ತಮಿಳಿಗೆ ಒಂದು ಸೋದರ ಭಾಷೆ, ಪ್ರತ್ಯೇಕವಾದೊಂದು ದ್ರಾವಿಡ ಭಾಷೆ ಎಂಬ ಅಭಿಪ್ರಾಯ ದೃಢವಾಗಿದೆ. ಪ್ರಾಯಶಃ ಜನಪದ ಸಾಹಿತ್ಯದ ರೂಪದಲ್ಲಿ ಮೊದಲು ಇದ್ದಿರಬಹುದಾದ ಈ ಭಾಷೆಯ ಗ್ರಾಂಥಿಕ ಸಾಹಿತ್ಯ ಚರಿತ್ರೆ ಸು. ೧೪ನೆಯ ಶತಮಾನದಿಂದೀಚೆಗೆ ಆರಂಭಗೊಳ್ಳುತ್ತದೆ.

ಈ ಸಾಹಿತ್ಯದ ನವೋದಯದ ಯುಗಗಳಲ್ಲಿ ತಮಿಳಿನ ಪ್ರಭಾವ ಇದರ ಮೇಲೆ ಅತ್ಯಂತ ಪರಿಣಾಮಕಾರಿಯಾಗಿತ್ತು. ೧೫ನೆಯ ಶತಮಾನದವರೆಗೂ ಆ ಪ್ರಭಾವ ಬೆಳೆದುಕೊಂಡು ಬಂದಿದೆ. 'ಆದಿಕಾಲದ ತಮಿಳು ಸಂಘ'ದಲ್ಲಿ ಹುಟ್ಟಿದ ಮಲಯಾಳ ಗ್ರಂಥಗಳಲ್ಲಿ 'ರಾಮಚರಿತಮ್' ಒಂದು. ಇದರಲ್ಲಿ ಯುದ್ಧಕಾಂಡದ ಕಥೆ ಮಾತ್ರವಿದೆ. ಈ ಗ್ರಂಥ 'ಪಾಟ್ಟು ಸಾಹಿತ್ಯ'ಕ್ಕೆ ಸೇರಿದ್ದು. ಪಾಟ್ಟು ಸಾಹಿತ್ಯ 'ಎತುಕ' ಮತ್ತು 'ಮೋನ' ಎಂಬ ಪ್ರಾಸಗಳಿಂದ ಕೂಡಿದ ಛಂದಸ್ಸಿನಲ್ಲಿ ರಚಿತವಾದ್ದು. 'ಎತುಕ' ಎಂದರೆ ದ್ವಿತೀಯಾಕ್ಷರ ಪ್ರಾಸ, ಮೋನ ಆದ್ಯಕ್ಷರ ಪ್ರಾಸ. ದ್ರಾವಿಡ ಛಂದಸ್ಸಿನ ಮೂಲಸತ್ತ್ವವಾದ ಪ್ರಾಸವನ್ನು ಉಳಿಸಿಕೊಂಡು ಬಂದಿರುವ ಮಲಯಾಳ ಸಾಹಿತ್ಯ ಈ ವಿಷಯದಲ್ಲಿ ಕನ್ನಡವನ್ನು ಹೋಲುತ್ತದೆ. ಈ ಕಾರಣದಿಂದ ಛಂದಸ್ಸಿನ ವಿಷಯದಲ್ಲಿ ಕನ್ನಡದೊಂದಿಗೆ ಮಲಯಾಳದ ಸಾದೃಶ್ಯ ಸು. ೧೨ನೆಯ ಶತಮಾನದಷ್ಟು ಪ್ರಾಚೀನವಾಗಿದೆ.

'ರಾಮಚರಿತಮ್' ೧೨ನೆಯ ಶತಮಾನದ ಕೊನೆಯ ಕಾಲದ್ದೆಂದು ಹೇಳಲಾಗಿದೆ. ವಾಲ್ಮೀಕಿ ರಾಮಾಯಣವನ್ನೇ ಬಹುಮಟ್ಟಿಗೆ ಹೋಲುವ ಈ ಗ್ರಂಥದ ಕಾಲ, ಕರ್ತೃತ್ವಗಳ ಬಗೆಗೆ ಅನೇಕ ಭಿನ್ನಾಭಿಪ್ರಾಯಗಳಿವೆ. ಚಂಪೂಯುಗವೆಂದೆನಿಸಿಕೊಂಡ ೧೦-೧೨ ಶತಮಾನಗಳ ಕಾಲದಲ್ಲಿ, ಕನ್ನಡದಲ್ಲಿ ಹೊರಬಂದಿರುವ ಅನುಪಲಬ್ಧ ಕೃತಿ ಪೊನ್ನನ 'ಭುವನೈಕರಾಮಾಭ್ಯುದಯ'ವನ್ನು ಹೊರತುಪಡಿಸಿದರೆ, ನಾಗಚಂದ್ರನ 'ರಾಮಚಂದ್ರ ಚರಿತೆ ಪುರಾಣ' 'ಪಾಟ್ಟು ಸಾಹಿತ್ಯ'ಕ್ಕೆ ಸೇರಿದ 'ರಾಮಚರಿತಮ್' ಮೇಲೆ ಪ್ರಭಾವ ಬೀರಿರುವುದಕ್ಕೆ ಯಾವ ಆಧಾರವೂ ಇಲ್ಲ.

'ಪಾಟ್ಟು ಸಾಹಿತ್ಯ'ದ ಕಾಲದಲ್ಲೇ, ಎಂದರೆ ೧೨ನೆಯ ಶತಮಾನದಿಂದ ೧೫ನೆಯ ಶತಮಾನದ ಅವಧಿಯಲ್ಲಿ ಕಣ್ಣಶನ ಕೃತಿಗಳು ಮಲಯಾಳ ಸಾಹಿತ್ಯದಲ್ಲಿ ಹುಟ್ಟಿವೆ. ತಿರುವಲ್ಲಾ ಜಿಲ್ಲೆಯಲ್ಲಿ ನಿರಣಂ ಎಂಬ ಸ್ಥಳದಲ್ಲಿ ಕಣ್ಣಶನ್ ಎಂಬ ಕವಿಯ ಕುಟುಂಬದವರಾದ ಮಾಧವಪ್ಪಣಿಕ್ಕರ್ ಶಂಕರಪ್ಪಣಿಕ್ಕರ್ ಮತ್ತು ರಾಮಪ್ಪಣಿಕ್ಕರ್ ರಾಮಾಯಣ, ಭಾರತ, ಭಾಗವತ, ಶಿವರಾತ್ರಿ ಮಾಹಾತ್ಮ್ಯಗಳನ್ನು ಬರೆದರು. ಇವೆಲ್ಲಾ ಸಂಸ್ಕೃತ ಗ್ರಂಥ

ಗಳನ್ನು ಅನುಸರಿಸಿದ ರಚನೆಗಳಾಗಿದ್ದು, ಅದಕ್ಕೆ ಮುಂಚೆಯೇ ಕನ್ನಡದಲ್ಲಿ ರಾಮಾಯಣ ಭಾರತಗಳು ಇದ್ದರೂ ಅವುಗಳ ಪ್ರಭಾವಕ್ಕೆ ಒಳಗಾಗಿರುವಂತೆ ತೋರುವುದಿಲ್ಲ.

ಮಲಯಾಳ ಭಾಷೆಯ ಒಂದು ವೈಶಿಷ್ಟ್ಯ ಅವರ ಮಣಿಪ್ರವಾಳ ಸಾಹಿತ್ಯ, ಸಂಸ್ಕೃತ ಮತ್ತು ಮಲಯಾಳ ಶಬ್ದಗಳು ಹಾಸುಹೊಕ್ಕಾಗಿ ಸೇರಿಕೊಂಡು ಈ ಶೈಲಿ ರೂಪಗೊಂಡಿವೆ. ಸಂಸ್ಕೃತ ಪದಗಳು ಹಾಗೂ ವಾಕ್ಯಾಂಶಗಳು, ಮಲಯಾಳ ಶಬ್ದಗಳ ಸಂಸ್ಕೃತೀಕರಣ, ಸಂಸ್ಕೃತದಂತೆ ವಿಶೇಷಣ ವಿಶೇಷ್ಯಗಳ ಹೊಂದಾಣಿಕೆ ಇತ್ಯಾದಿಗಳು ಈ ಶೈಲಿಯ ವೈಶಿಷ್ಟ್ಯಗಳು.[21] ಮಣಿಪ್ರವಾಳ ಶೈಲಿಯಲ್ಲಿ ಬರೆದ ಚಂಪೂ ಕಾವ್ಯಗಳು ಕೆಲವು ದೊರಕಿವೆ. ೧೫ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೂ ರಚಿತವಾದ ಈ ಚಂಪೂ ಕಾವ್ಯಗಳ ಉಗಮಕ್ಕೆ ಕನ್ನಡ ಚಂಪೂಕಾವ್ಯಗಳು ಎಷ್ಟರಮಟ್ಟಿಗೆ ಪ್ರೇರಕವಾದುವು ಎಂಬುದು ಪರಿಶೀಲನಾರ್ಹ ವಿಷಯ. ಏಕೆಂದರೆ ಸಂಸ್ಕೃತ ಚಂಪೂ ಗ್ರಂಥಗಳಿಗೆ ಕನ್ನಡ ತೆಲುಗು ಚಂಪೂ ಗ್ರಂಥಗಳಿಗಿರುವಷ್ಟು ಮಹತ್ತ್ವವಿಲ್ಲ. ಚಂಪೂವಿನ ಮೂಲವನ್ನು ಕನ್ನಡದಲ್ಲೇ ಕಾಣಬಹುದೆಂದು ಕೆಲವರು ಕನ್ನಡ ವಿದ್ವಾಂಸರ ಅಭಿಪ್ರಾಯವಾಗಿದೆ. ಸೋದರ ದ್ರಾವಿಡ ಭಾಷೆಗಳಾದ ಕನ್ನಡ ತೆಲುಗುಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಬಳಸಲಾದ ಚಂಪೂಪ್ರಕಾರದ ಪ್ರಭಾವದಿಂದ ಮಲಯಾಳದಲ್ಲಿ ಚಂಪೂ ಸಾಹಿತ್ಯ ಉಗಮಗೊಂಡಿರುವುದು ಸಾಧ್ಯ. ಆದರೆ ಇದು ವಿಚಾರ ಯೋಗ್ಯವಾದ ಒಂದು ಊಹೆ ಮಾತ್ರ.

ಎೞುತ್ತಚ್ಚನ್ (೧೬ನೆಯ ಶತಮಾನ) ಮಲಯಾಳದ ಚಿರಸ್ಮರಣೀಯ ಕವಿ. 'ಕಿಳಿಪಾಟ್ಟು' ಎಂಬ ಪ್ರಕಾರವನ್ನು ಬಳಸಿಕೊಂಡು ಈತ ಬರೆದ ಗ್ರಂಥಗಳಲ್ಲಿ ರಾಮಾಯಣ, ಭಾರತಗಳಿವೆ. ಆವನು ಪಂಪಭಾರತವನ್ನು ನೋಡಿರುವ ಆಧಾರಗಳೇನೂ ಸಿಕ್ಕದಿದ್ದರೂ ಪಂಪನ ಕೃತಿಯಂತೆಯೇ ಅವನ ಕೃತಿಯೂ 'ಹಿತಮಿತ ಮೃದು' ವಚನಗಳಿಗೆ ಹೆಸರು ಪಡೆದಿದೆ ಎಂಬುದು ನೆನೆಯತಕ್ಕದ್ದು. ಕನ್ನಡದಲ್ಲಿಯೂ ಜನಪದ ಸಾಹಿತ್ಯದಲ್ಲಿ ಗಿಳಿ ಹಾಡುಗಳು ಇರಬಹುದೆಂದು ತೋರುತ್ತದೆ. ಆದರೆ ಮಲಯಾಳದ 'ಕಿಳಿಪ್ಪಾಟ್ಟು' ಮತ್ತು ಕನ್ನಡದ 'ಗಿಳಿ ಹಾಡು'ಗಳಿಗಿರುವ ಸಾಮ್ಯ ಶೋಧನೆಯಿಂದ ಸ್ಪಷ್ಟವಾಗಬೇಕು.

ಹದಿನೇಳನೆಯ ಶತಮಾನದ ವೇಳೆಗೆ 'ಕಥಕ್ಕಳಿ' ಎಂಬ ವಿಶೇಷ ಪ್ರಕಾರ ಬಳಕೆಗೆ ಬಂದು ಈಗ ಅದಕ್ಕೆ ವಿಶೇಷ ಖ್ಯಾತಿ ಲಭಿಸಿದೆ. ಕನ್ನಡದ ಯಕ್ಷಗಾನಕ್ಕೆ ಈ ಕಥಕ್ಕಳಿಯೇ ಮೂಲವೆಂಬ ಒಂದು ವಾದವಿದೆ. ಇದನ್ನು ಕುರಿತು ದೀರ್ಘವಾಗಿ ಚರ್ಚಿಸಿದ ಡಾ. ಶಿವರಾಮ ಕಾರಂತರು ಈ ವಾದವನ್ನು ಅಲ್ಲಗಳೆದು ಯಕ್ಷಗಾನ ಪ್ರತ್ಯೇಕ ಅಸ್ತಿತ್ವವುಳ್ಳದ್ದೆಂದು ಅಭಿಪ್ರಾಯಪಟ್ಟಿರುವರು. ಕೇರಳದ ಎರಡು ಮುಖ್ಯ ನೃತ್ಯಸಂಪ್ರದಾಯಗಳಾದ ಕಥಕ್ಕಳಿ ಮತ್ತು ರಾಮನಾಟಮ್‌ಗಳಿಗೂ ಯಕ್ಷಗಾನಕ್ಕೂ ಜನ್ಯಜನಕ ಸಂಬಂಧವಿಲ್ಲ ಎಂದು ಹೇಳುತ್ತಾ ಡಾ. ಕಾರಂತರು "ಕಥಕ್ಕಳಿ, ರಾಮನಾಟಮ್ ಪದ್ಧತಿಗಳಲ್ಲಿನ ನೃತ್ಯ, ಭರತನಾಟ್ಯ ಪದ್ಧತಿಯಂತಿರುವ ನೃತ್ಯ. ಅದೊಂದು ನೃತ್ಯ

ಭಾಷೆ. ಆದರಿಂದ ಯಕ್ಷಗಾನ ಬಯಲಾಟ ಏನನ್ನೂ ತೆಗೆದುಕೊಂಡೇ ಇಲ್ಲ—ಎಂಬುದು ಅದರ ಕುಣಿತದ ರೀತಿ ಬಲ್ಲವರಿಗೆ ತಿಳಿಯುತ್ತದೆ. ಕೇರಳದ ಕಥಕ್ಕಳಿಯ ಮುಖವರ್ಣಿಕೆಯ ಪದ್ಧತಿಯಂತೆ ಸಾತ್ವಿಕ, ರಾಜಸಿಕ, ತಾಮಸಿಕಗಳೆಂಬ ತ್ರಿಗುಣಗಳ ಕಲ್ಪನೆಯಿಂದ ಬಣ್ಣ ಬರೆಯುವ ಪದ್ಧತಿ ನಮ್ಮದಲ್ಲ. ಅಲ್ಲಿನ ಸಂಗೀತಕ್ಕೂ, ನಮ್ಮ ಹಾಡುಗಾರಿಕೆಗೂ ಯಾವುದೇ ಸಂಬಂಧವಿರುವಂತೆ ಕಾಣಿಸದು. ನಾವೂ ಅವರೂ ಕೆಲವು ಸಮಾನ ವಾದ್ಯಗಳನ್ನು ಬಳಸುತ್ತಿರುವುದು ನಿಜ. ಚಂಡೆ ಉಭಯತರಗೂ ದೊರೆತಿರುವ ಚರ್ಮವಾದ್ಯ. ಮೃದಂಗ, ತಾಳಗಳು ಯಾವತ್ತು ಭರತಖಂಡದಲ್ಲೇ ಪ್ರಚಾರದಲ್ಲಿರುವ ವಾದ್ಯಗಳು" ಎಂದು ಬರೆದಿರುವರು.[22]

ಕನ್ನಡ-ಮಲಯಾಳಗಳ ಬಾಂಧವ್ಯ ಈ ದೇಶಕ್ಕೆ ಇಂಗ್ಲಿಷರ ಆಗಮನವಾದ ಮೇಲೆ ೧೯ನೆಯ ಶತಮಾನದಿಂದ ಸ್ವಲ್ಪಮಟ್ಟಿಗೆ ಬೆಳೆದಿದೆ. ಕ್ರೈಸ್ತ ಮಿಶನರಿಗಳು ಕೆಲವು ಗ್ರಂಥಗಳನ್ನು ಮಲಯಾಳದಿಂದ ಕನ್ನಡಕ್ಕೆ ತಂದಿದ್ದಾರೆ. ಅಂತಹವುಗಳಲ್ಲಿ ಹೆಸರಿಸತಕ್ಕ ಒಂದು ರಚನೆ 'ಸುಕುಮಾರಿ' ಎಂಬ ಕಾದಂಬರಿ. ತಲಚೇರಿಯಲ್ಲಿ ಶಿಕ್ಷಕನಾಗಿದ್ದ ಜೋಸೆಫ್ ಮುಳಿಯಲ್‌ನ ಈ ಕೃತಿಯನ್ನು ಬಾಸೆಲ್ ಮಿಶನ್ನಿನ ಎಚ್. ರಾಬರ್ಟ್ಸ್ ಕನ್ನಡಕ್ಕೆ ಅನುವಾದ ಮಾಡಿ ಮಂಗಳೂರಿನ ತನ್ನ ಮುದ್ರಣ ಶಾಲೆಯಲ್ಲಿ ಮುದ್ರಿಸಿದನು (೧೮೯೯). "ಈ ಕಾಲದಲ್ಲಿ ಇಂಗ್ಲಿಷ್ ಕಲಿತವರಿಗೆ ನೋವೆಲ್ಸ್ ಎಂಬ ಕಾದಂಬರಿಗಳನ್ನು ಓದುವ ಅಭಿರುಚಿ ಶಾನೆ ಹತ್ತಿಯದೆ. ಅವುಗಳನ್ನು ಓದಿ ರುಚಿಸಬಲ್ಲವರು ಮಲೆಯಾಳದಲ್ಲಿಯೂ ಕನ್ನಡದಲ್ಲಿಯೂ ಇಂಥಾ ಪುಸ್ತಕಗಳನ್ನು ತರ್ಜುಮೆ ಮಾಡಲಿಕ್ಕೂ ರಚಿಸಲಿಕ್ಕೂ ಶುರು ಮಾಡಿದ್ದಾರೆ. ಯಾವ ಭಾಷೆಯಲ್ಲಾಗಲಿ ಕಾದಂಬರಿಗಳು ಓದುವವರೆಲ್ಲರ, ಮುಖ್ಯತಾ ಯೌವನ ಪ್ರಾಯದವರ ಮನಸ್ಸನ್ನು ಕೆಡಿಸುವ ವಿಷ ಬೆರಸಿದ್ದಾಗಿರುತ್ತದೆ. ಇದನ್ನು ತಡೆಯುವ ಉದ್ದೇಶದಿಂದ ಈ 'ಸುಕುಮಾರಿ' ಎಂಬ ಪುಸ್ತಕವನ್ನು ರಚಿಸಿದ್ದಾರೆ"—ಎಂದು ಅನುವಾದಕನು ಹೇಳಿಕೊಂಡಿದ್ದಾನೆ.[23] ಈ ಕಾದಂಬರಿಯ ಕಥೆ ಉತ್ತರ ಮಲಬಾರದಲ್ಲಿ ನಡೆದದ್ದು. ಕಾದಂಬರಿಕಾರನ ಸಾತ್ತ್ವಿಕ ಮನೋಭಾವ ಇದರಲ್ಲಿ ಮೂಡಿಬಂದಿದೆ. "ಈ ಕೃತಿಯಲ್ಲಿ ಮತಾಂತರದ ವಿಷಯ ಬಂದಿದ್ದರೂ ಆ ನಿಮಿತ್ತದಿಂದ ಹಿಂದೂ ಧರ್ಮದ ತೆಗಳಿಕೆ ಇಲ್ಲ. ಸಹಿಷ್ಣುಭಾವದಿಂದ ಮತ್ತು ಅಪರೋಕ್ಷವಾದ ರೀತಿಯಲ್ಲಿ ಕ್ರೈಸ್ತಧರ್ಮದ ವಿಚಾರಗಳನ್ನು ಎತ್ತಿಹಿಡಿಯಲಾಗಿದೆ.[24]

ಕನ್ನಡಕ್ಕೆ ಮಿಗಿಲಾದ ಸೇವೆ ಸಲ್ಲಿಸಿದ ರೆ. ಎಫ್. ಕಿಟ್ಟೆಲ್ ಅವರು ೧೮೭೫ರಲ್ಲಿ Bible Doctrine of Reconcilation ಎಂಬುದನ್ನು ಕುರಿತು ಮಲಯಾಳದಲ್ಲಿ ಬರೆದಿದ್ದಾರೆ.[25] ಮಲಯಾಳಿ ವಿಷವೈದ್ಯವನ್ನು ಕುರಿತ 'ತೂವನ್ನಿಲಾವ' ಎಂಬ ಕೃತಿಯನ್ನು ಗಣೇಶ ಶಾಂತಯ್ಯ ಕಾಶೀಜೈಲಕರನು ಕನ್ನಡಕ್ಕೆ ಅನುವಾದ ಮಾಡಿರುತ್ತಾನೆ (೧೮೯೫).

ಇತ್ತೀಚೆಗೆ ಮಲಯಾಳದಿಂದ ಕನ್ನಡಕ್ಕೆ, ಕನ್ನಡದಿಂದ ಮಲಯಾಳಕ್ಕೆ ಕೆಲವು ಕೃತಿಗಳು ಅನುವಾದವಾಗುತ್ತಿವೆ. ನ್ಯಾಷನಲ್ ಬುಕ್ ಟ್ರಸ್ಟ್, ಸಾಹಿತ್ಯ ಅಕಾಡೆಮಿ

ಮುಂತಾದ ಸಂಸ್ಥೆಗಳು ಈ ಕಾರ್ಯಕ್ರಮವನ್ನು ಕೈಕೊಂಡಿವೆ. ಮಲಯಾಳದಿಂದ ಕಥೆಗಳು ಹಲವು ಕನ್ನಡಕ್ಕೆ ಬಂದಿವೆ. ಕನ್ನಡದಿಂದ ಕೆಲವು ಅಲ್ಲಿಗೆ ಹೋಗಿವೆ. ಒಟ್ಟಿನಲ್ಲಿ ಅನುವಾದ ಕ್ಷೇತ್ರದಲ್ಲಿ ಹೆಸರಿಸುವಂತಹ ಕೆಲಸ ಇನ್ನೂ ನಡೆದಿಲ್ಲವೆಂದೇ ಹೇಳಬೇಕು.

## ಕನ್ನಡ-ತೆಲುಗು

ಕನ್ನಡ ಮತ್ತು ತೆಲುಗು—ಈ ಎರಡು ಭಾಷೆಗಳಿಗಿರುವಷ್ಟು ಸಾಹಿತ್ಯಿಕ ಬಾಂಧವ್ಯ ಪ್ರಾಯಶಃ ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಿಗಿಲ್ಲ. ಆ ಎರಡು ಭಾಷೆಗಳ ಬಾಂಧವ್ಯ ಸಾತವಾಹನ, ಚಾಲುಕ್ಯ, ಚೋಳ, ಕಾಕತೀಯ, ವಿಜಯನಗರ ಮತ್ತು ಒಡೆಯರ ಕಾಲಗಳಲ್ಲಿ ನಿರಂತರವಾಗಿ ನಡೆದುಬಂದಿದೆ. ಈ ಎರಡು ಭಾಷೆಗಳೂ ದ್ರಾವಿಡ ವರ್ಗದ ಸೋದರ ಭಾಷೆಗಳು; ಅವನ್ನು ಮಾತಾಡುವವರು ಒಂದೇ ಜನಾಂಗಕ್ಕೆ ಸೇರಿದವರು. ಭೌಗೋಳಿಕವಾಗಿ ಕೂಡ ಕನ್ನಡಿಗರೂ ತೆಲುಗರೂ ಅಕ್ಕಪಕ್ಕದವರು. ಅವುಗಳ ಲಿಪಿಗೆ ಒಂದೇ ಮೂಲ. ಅವುಗಳ ವ್ಯಾಕರಣ ಮತ್ತು ಛಂದಸ್ಸಂಪ್ರದಾಯಗಳು ಬಹುಮಟ್ಟಿಗೆ ಒಂದೇ. ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಷಯಗಳಲ್ಲೂ ಆ ಜನರ ನಡುವೆ ಹೆಚ್ಚು ಸಂಪರ್ಕವಿದೆ. ಈ ಹಲವು ಕಾರಣಗಳಿಂದ ಭಾಷೆ ಸಾಹಿತ್ಯಗಳಲ್ಲಿ ಮೊದಲಿನಿಂದ ಕನ್ನಡ ತೆಲುಗುಗಳಿಗೆ ಹೆಚ್ಚಿನ ನಂಟು ಕಂಡುಬರುವುದು ಸಹಜವೇ ಆಗಿದೆ.

### ಆದಿಕಾಲದಿಂದ ೧೦ನೆಯ ಶತಮಾನ

"ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂಬುದಾಗಿ 'ಕವಿರಾಜಮಾರ್ಗ'ದಲ್ಲಿ ಕನ್ನಡ ನಾಡಿಗೆ ಸೀಮಾ ನಿರ್ದೇಶನ ಮಾಡಿದ್ದರೂ ಈಗ ಗೋದಾವರಿ ಹರಿಯುವುದು ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಲ್ಲಿ. ವೇಮುಲವಾಡ ಚಾಲುಕ್ಯರ ಯುದ್ಧಮಲ ವಿನಯಾದಿತ್ಯನ ಮಗ ೧ನೆಯ ಅರಿಕೇಸರಿ ರಾಷ್ಟ್ರಕೂಟ ರಾಜ ಧ್ರುವ ಧಾರಾವರ್ಷ ನಿರುಪಮದೇವನ ಪರವಾಗಿ ಕಾಪಾಡಿ ಗೆದ್ದಿದ್ದ ತ್ರಿಕಳಿಂಗ ಒಳಕೊಂಡ ವೆಂಗಿವಿಷಯ ('ಪಂಪಭಾರತ' ೧-೨೦) ಈಗ ಪೂರ್ತಿಯಾಗಿ ಆಂಧ್ರಕ್ಕೆ ಸೇರಿದೆ. ಕ್ರಿ.ಶ. ೮೫೦ರಲ್ಲಿ ರಚಿತವಾದ ಕಡಪ ಜಿಲ್ಲೆಯ ದಾನವುಲಪಾಡು ಶಾಸನವಲ್ಲಿ ಉಲ್ಲೇಖಗೊಂಡ ವಿಜಯದಂಡನಾಥನೇ 'ಕವಿರಾಜಮಾರ್ಗ'ದಲ್ಲಿ ಉಲ್ಲೇಖಗೊಂಡಿರುವ ಪೂರ್ವಕವಿಗಳಲ್ಲೊಬ್ಬನಾದ ಶ್ರೀವಿಜಯನಿರಬಹುದೆಂಬ ಅಭಿಪ್ರಾಯ ವ್ಯಕ್ತಪಟ್ಟಿದೆಯಾದರೂ ಅದು ಎಷ್ಟರಮಟ್ಟಿಗೆ ಸರಿ ಎಂಬುದು ಶೋಧಿತವಾಗಬೇಕಾಗಿದೆ.

'ಯಾಪ್ಪರುಂಗಲಮ್' ಎಂಬ ತಮಿಳು ಗ್ರಂಥದ ವ್ಯಾಖ್ಯಾನದಲ್ಲಿ 'ಗುಣಗಾಂಕಿಯಂ' ಎಂಬ ಕನ್ನಡ ಛಂದೋಗ್ರಂಥ ಹೆಸರಿಸಲ್ಪಟ್ಟಿದೆ. ಇದರ ಕಾಲ ಸರಿಯಾಗಿ ತಿಳಿಯದು. ಒಂದು ಅಭಿಪ್ರಾಯದ ಪ್ರಕಾರ ಈ ಕನ್ನಡ ಛಂದೋಗ್ರಂಥ ಪೂರ್ವ ಚಾಲುಕ್ಯ ರಾಜ

ಗುಣಗ ವಿಜಯಾದಿತ್ಯನಿಗೆ ಅಂಕಿತವಾದ್ದು. ಆ ದೊರೆ ತೆಲುಗು ದೇಶವನ್ನು ಕ್ರಿ.ಶ. ೮೪೮–೮೯೨ರ ವರೆಗೆ ಆಳಿದನು. ಅವನ ಕಾಲದಲ್ಲಿ ಕೊರೆದ ಒಂದು ಸಂಸ್ಕೃತ ಶಾಸನದಲ್ಲಿ ಅವನನ್ನು ಚಂಪಕಮಾಲೆ ಎಂಬ ವೃತ್ತದಲ್ಲಿ ಪ್ರಶಂಸಿಸಲಾಗಿದೆ. ಚಂಪಕಮಾಲೆ ಆ ಕಾಲದಲ್ಲಿ ತೆಲುಗಿನಲ್ಲಿ ಬಳಕೆಯಲ್ಲಿ ಇದ್ದುದಕ್ಕೆ ಆಧಾರಗಳಿಲ್ಲ. ಇದು ಕನ್ನಡ ಭಾಷೆ ಸಾಹಿತ್ಯಗಳ ಸಂಬಂಧದ ಫಲವಿರಬಹುದು.

ಪಂಪಪೂರ್ವಕಾಲದಲ್ಲಿ ತೆಲುಗು ಸಾಹಿತ್ಯ ಶಾಸನರೂಪದಲ್ಲಿ ಮಾತ್ರ ಲಭಿಸುತ್ತದೆ. ಮೂಲದ್ರಾವಿಡದಿಂದ ಕ್ರಿಸ್ತಪೂರ್ವದಲ್ಲೇ ಕವಲೊಡೆದು ಸ್ವತಂತ್ರವಾಗಿ ಬೆಳೆಯಲು ಆರಂಭಿಸಿದ ತೆಲುಗು ಭಾಷೆಯಲ್ಲಿ ಸಾಹಿತ್ಯ ನಿರ್ದಿಷ್ಟವಾಗಿ ಯಾವ ಕಾಲದಿಂದ ಪ್ರಾರಂಭವಾಯಿತೆಂದು ಹೇಳಲು ಸಾಧ್ಯವಿಲ್ಲ. ಇದುವರೆಗೆ ದೊರೆತ ತೆಲುಗು ಶಾಸನಗಳಲ್ಲಿ ತೀರ ಹಳೆಯದು ಧನಂಜಯನ ಕಲಮಳ್ಳ ಶಾಸನ. ಇದು ಕ್ರಿ.ಶ. ೬ನೆಯ ಶತಮಾನದ ಉತ್ತರಭಾಗಕ್ಕೆ ಸೇರಿದ್ದು. ೬ನೆಯ ಶತಮಾನದಿಂದೀಚೆಗೆ ಅನೇಕ ತೆಲುಗು ಗದ್ಯಮಯ ಶಾಸನಗಳು ಸಿಕ್ಕುತ್ತವೆ. ತೆಲುಗಿನಲ್ಲಿ ಪರಿಪೂರ್ಣವಾದ ಪದ್ಯಶಾಸನ ಗುಣಗ ವಿಜಯಾದಿತ್ಯನ ಕಾಲದ ಪಂಡರಂಗನ ಅದ್ದಂಕಿ ಶಾಸನ (ಕ್ರಿ.ಶ. ೮೪೮). ಇದರಲ್ಲಿ ತರುವೋಜ ಎಂಬ ಅಚ್ಚ ತೆಲುಗು ಪದ್ಯವಿದೆ. ಈ ಪದ್ಯ ಅಂಶಗಣಗಳಿಂದ ಓಡುವ ದೇಶ್ಯಪದ್ಯ. ಈ ವೇಳೆಗೆ ಕನ್ನಡ ಶಾಸನ ಸಾಹಿತ್ಯದಲ್ಲೂ ತ್ರಿಪದಿಯಂತಹ ದೇಸಿ ಛಂದಸ್ಸಿನ ಪದ್ಯಜಾತಿ ಬೆಳಕು ಕಂಡಿದ್ದುದನ್ನಿಲ್ಲಿ ನೆನೆಯಬಹುದು.

'ಗುಣಗಾಂಕಿಯಂ' ಎಂಬ ಕನ್ನಡ ಛಂದೋಗ್ರಂಥವನ್ನು ಕುರಿತ ಉಲ್ಲೇಖವಿರುವ 'ಯಾಪ್ಪರುಂಗಲಕ್ಕಾರಿಕೈ'ಯಲ್ಲೇ 'ವಾಂಚಿಯಾರ್ ಸೆಯ್‌ದ ವಡಗುಚ್ಚಂದವುಮ್' ಎಂಬ ಉಲ್ಲೇಖವಿದ್ದು ವಾಂಛಯ್ಯ ಎಂಬವನು ಒಂದು ಛಂದೋಗ್ರಂಥವನ್ನು ಬರೆದಿದ್ದಾನೆಂಬುದನ್ನು ಅದು ಸೂಚಿಸುತ್ತದೆ. ನನ್ನಯ್ಯನಿಗೆ ಪೂರ್ವದಲ್ಲೇ (೧೧ನೆಯ ಶತಮಾನ ಹಿಂದೆ) ತೆಲುಗು ಛಂದೋಗ್ರಂಥವೊಂದು ಇದ್ದಂತೆ ಇದರಿಂದ ತಿಳಿಯುವುದರಿಂದ ಸಾಕಷ್ಟು ಸಾಹಿತ್ಯವೂ ಆಗ ಇದ್ದಿರಬೇಕೆಂದು ಊಹಿಸಬಹುದು. ತೆಲುಗಿನ ಆದಿಕವಿ ನನ್ನಯ್ಯನ ಆಂಧ್ರ ಮಹಾಭಾರತ ಹುಟ್ಟುವುದಕ್ಕೆ ಮುಂಚಿತವಾಗಿಯೇ ಕನ್ನಡದಲ್ಲಿ ಭಾರತ ಕಥೆ 'ಪಂಪಭಾರತ' ಮತ್ತು 'ಗದಾಯುದ್ಧ'ಗಳಲ್ಲಿ ನಿರೂಪಿಸಲ್ಪಟ್ಟಿತ್ತು. ಪಂಪ ಮಹಾಕವಿಯ ಕಾಲ ಕನ್ನಡ–ತೆಲುಗು ಬಾಂಧವ್ಯದ ನಿರೂಪಣೆಯಲ್ಲಿ ಮಹೋತ್ಕೃಷ್ಟ ಕಾಲ. ರಾಜಕೀಯವಾದ ವಿದ್ಯಮಾನಗಳಿಂದ ಎರಡು ಭಾಷೆಗಳ ಬಾಂಧವ್ಯಕ್ಕೆ ಗಟ್ಟಿಯಾದ ಬುನಾದಿ ಪಂಪನ ಕಾಲದಲ್ಲೇ ಏರ್ಪಟ್ಟಿದೆ. ಭೌಗೋಳಿಕವಾಗಿ ಪರಸ್ಪರ ಸಂಪರ್ಕವನ್ನು ಹೊಂದಿದ್ದ ತೆಲುಗು ಕನ್ನಡ ಪ್ರದೇಶಗಳು ಪಂಪನ ಕಾಲದಲ್ಲಿ ರಾಜಕೀಯವಾಗಿಯೂ ಹೆಚ್ಚು ಸನ್ನಿಹಿತವಾದುವೆಂದು ಹೇಳಲು ಆಧಾರಗಳಿವೆ.

## ೧೦ರಿಂದ ೧೨ನೆಯ ಶತಮಾನ

ಈಗ ಆಂಧ್ರಕ್ಕೆ ಸೇರಿರುವ, ಹಿಂದೆ ಕನ್ನಡನಾಡಿನ ಗಡಿಯಲ್ಲಿದ್ದ ಪ್ರದೇಶದವನು

ಪಂಪಕವಿ. ಪಂಪನ ಕಾಲವಲ್ಲಿ ಚಾಲುಕ್ಯ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಕನ್ನಡಿಗರು
ಮತ್ತು ತೆಲುಗರು ಒಂದಾಗಿದ್ದರು. ಪೂರ್ವ ಚಾಲುಕ್ಯರು ತೆಲುಗನ್ನೂ ಪಶ್ಚಿಮ ಚಾಲು
ಕ್ಯರು ಕನ್ನಡವನ್ನೂ ಪೋಷಿಸಿದರು. ಇಬ್ಬರ ರಾಜ್ಯಗಳಲ್ಲೂ ಈ ಎರಡು ಭಾಷೆಗಳವರೂ
ಅನ್ಯೋನ್ಯ ಸಂಪರ್ಕವನ್ನು ಇಟ್ಟುಕೊಂಡಿದ್ದರು. "ಕನ್ನಡ ಭಾಷೆ, ಸಾಹಿತ್ಯಗಳ ಚಟು
ವಟಿಕೆಗೆ ಕೇಂದ್ರಬಿಂದುವಾಗಿದ್ದುದು ವೇಂಗಿಮಂಡಲ. ಪಂಪ ಮಹಾಕವಿ ಓದಿ ಆಡಿ
ನೋಡಿ ನಲಿದ, ಓದಿ ಆಳಿ ಬಾಳಿದ ಪ್ರದೇಶಗಳ ಅರೆಪಾಲು ಇಂದಿನ ಆಂಧ್ರ ಪ್ರದೇಶಕ್ಕೆ
ಸೇರಿವೆ. ಆತನ ಆಶ್ರಯದಾತ ಇಮ್ಮಡಿ ಅರಿಕೇಸರಿ ಆಳಿದ ಸಾಮ್ರಾಜ್ಯದ ಮುಕ್ಕಾಲು
ಪಾಲಿಗಿಂತಲೂ ಹೆಚ್ಚು ಆಂಧ್ರವಲ್ಲಿದೆ."[೨೬] ಈಚೆಗೆ ಆಂಧ್ರದಲ್ಲಿ ದೊರೆತ ಜಿನವಲ್ಲಭನ
ಗಂಗಾಧರಂ ಶಾಸನ ಪಂಪನ ಮನೆತನದ ಮೇಲೆ ಮಾತ್ರ ಅಲ್ಲದೆ ಅಂದಿನ ಕನ್ನಡ
ತೆಲುಗು ಭಾಷೆಗಳ ಬಾಂಧವ್ಯದ ಮೇಲೂ ಬೆಳಕು ಬೀರುತ್ತದೆ.

ಪದ್ಮಕವಿ ಎಂಬವನು ತೆಲುಗಿನಲ್ಲಿ ಬರೆದ 'ಜಿನೇಂದ್ರ ಪುರಾಣ' ಎಂಬ ಕೃತಿ ಪಂಪನ
ಗುರುವಾದ ಜಿನೇಂದ್ರಮುನಿಯ ಚರಿತೆಯೆಂದೂ ಪದ್ಮಕವಿ ಎಂಬುದು ಪಂಪನ ಹೆಸರೇ
ಎಂದೂ ತೆಲುಗು ದೇಶದಲ್ಲಿ ಜೈನಸಾಹಿತ್ಯಕ್ಕೆ ಆಶ್ರಯವಿಲ್ಲದೆ ಪಂಪನು ಕನ್ನಡ ರಾಜನ
ಆಸ್ಥಾನಕ್ಕೆ ಹೋಗಿ 'ಆದಿಪುರಾಣ' 'ಪಂಪಭಾರತ'ಗಳನ್ನು ರಚಿಸಿದನೆಂದೂ ತೆಲುಗು
ವಿದ್ವಾಂಸರು ಕೆಲವರು ಊಹಿಸುತ್ತಾರೆ. ಪಂಪ ಪದ್ಮಕವಿಗಳ ಸಮೀಕರಣಕ್ಕೆ ಆಧಾರ
ವಿಲ್ಲ.

ಪಂಪ-ನನ್ನಯರು ಇಬ್ಬರೂ ಸಂಸ್ಕೃತ ಮಹಾಭಾರತವನ್ನೇ ಆಧಾರವಾಗಿಟ್ಟುಕೊಂಡು
ತಮ್ಮ ಭಾರತಗಳನ್ನು ರಚಿಸಿದರು. ಪಂಪ ಕನ್ನಡದ 'ಆದಿಕವಿ'ಯಾದರೆ, ನನ್ನಯ
ತೆಲುಗಿನ 'ಆದಿಕವಿ.' ಪಂಪ "ವ್ಯಾಸಮುನೀಂದ್ರರುಂದ್ರವಚನಾಮೃತವಾರ್ಧಿ" ಯನ್ನೀ
ಜುವ ಸಂಕಲ್ಪ ಮಾಡಿದರೆ, ನನ್ನಯ "ಕೃಷ್ಣದ್ವೈಪಾಯನ ಮುನಿ ವೃಷಭಾಭಿಹಿತ
ಮಹಾಭಾರತ ಬದ್ಧನಿರೂಪಿತಾರ್ಥ"ವನ್ನು ತೆಲುಗಿನಲ್ಲಿ ನಿರೂಪಿಸುವ ಕೆಲಸವನ್ನು
ಕೈಕೊಂಡನು. ಪಂಪ ನನ್ನಯರೂ ಅವರ ಆಶ್ರಯದಾತರೂ ದೇಶಭಾಷಾಭಿಮಾನಿಗಳು.
"ರಾಜರಾಜನಂತು 'ಬಹುಭಾಷೆಗಳಲ್ಲಿ ಬಹುವಿಧಗಳಾದ' ಭಾರತಗಳನ್ನು ಕೇಳಿದವನು.
ಸ್ವಯಂ ನನ್ನಯನೇ ವ್ಯಾಸಕೃತಿಯನ್ನು ಆತನಿಗೆ ವಿಸ್ತಾರವಾಗಿ ಓದಿ ಹೇಳಬಲ್ಲ
ನಾಗಿದ್ದನು! ಆದರೂ ಆ ದೊರೆಗೆ ಅವನ್ನು ತೆಲುಗಿನಲ್ಲಿ ಹೇಳಿಸಬೇಕೆಂಬ ಸಂಕ
ಮೂಡಿದುದು ಅವನ ದೇಶಭಾಷೆಯ ಪ್ರೇಮದ ಅತಿಶಯದಿಂದಲೇ ಇರಬೇಕು."
ತೆಲುಗು ಕವಿ ನನ್ನೆಚೋಡನೂ ತನ್ನ 'ಕುಮಾರಸಂಭವ'ದಲ್ಲಿ "ಹಿಂದೆ ಮಾರ್ಗಕವಿ
ಲೋಕದಲ್ಲಿರಲು ಆಂಧ್ರದಲ್ಲಿ ಚಾಲುಕ್ಯರು ದೇಸಿಕವಿತ್ವವನ್ನು ನಿಲ್ಲಿಸಿದರು" ಎಂ
ಹೇಳಿರುವುದನ್ನಿಲ್ಲಿ ನೆನೆಯಬಹುದು.

ನನ್ನಯನ ಭಾರತ ರಚನೆಯಲ್ಲಿ ಅವನಿಗೆ ನಾರಾಯಣಭಟ್ಟನೆಂಬವನು ನೆರವಾ
ನೆಂದು ಆತನ ಈ ಕೆಳಗಿನ ಪದ್ಯದಿಂದ ತಿಳಿಯಬರುತ್ತದೆ.

ಪಾಂಪಿಕ ಪಾಕಶಾಸನಿಕಿ ಭಾರತಘೋರರಣಂಬುನಂದು ನಾ
ರಾಯಣುಂಡಟ್ಟು ದಾನುನು ಧರಾಮರವಂಶವಿಭೂಷಣುಂಡು ನಾ
ರಾಯಣಭಟ್ಟು ವಾಙ್ಮಯಧುರಂಧರುಡುಂದನ ಕಿಷ್ಟುಡುನ್ ಸಹಾ
ಧ್ಯಾಯುಡುನೈನ ವಾಡಭಿಮತಂಬುಗ ದೋಡಯಿ ನಿರ್ವಹಿಂಪಗನ್ ॥

ನರಸಿಗೆ ನಾರಾಯಣನಂತೆ ವಾಙ್ಮಯಧುರಂಧರನೂ ಪ್ರೀತಿಪಾತ್ರನೂ ಆದ ಸಹಾ
ಧ್ಯಾಯಿ ನಾರಾಯಣಭಟ್ಟನು ಸಹಾಯ ಮಾಡಲು ನಾನು ಭಾರತವನ್ನು ರಚಿಸಿದ್ದೇನೆ.)

ನಾರಾಯಣಭಟ್ಟ ಕನ್ನಡವೂ ಸೇರಿ ಅನೇಕ ಭಾಷೆಗಳಲ್ಲಿ ಪಂಡಿತನಾಗಿದ್ದನೆಂದು
ನಂದಂಪೂಡಿ ಶಾಸನದಿಂದ ತಿಳಿದುಬರುತ್ತಿದೆ.

ಯಃ ಸಂಸ್ಕೃತ ಕರ್ಣಾಟ ಪ್ರಾಕೃತ ಪೈಶಾಚಿಕಾಂಧ್ರಭಾಷಾಸು
ಕವಿರಾಜಶೇಖರ ಇತಿ ಪ್ರಥಿತಸ್ಸುಕವಿತ್ವವಿಭವೇನ....

ಹೀಗೆ ಇವನು ಅನೇಕ ಭಾಷೆಗಳಲ್ಲಿ ಪಂಡಿತನಾದುದರಿಂದ ಅನೇಕ ಭಾರತದ ಅನು
ವಾದಗಳನ್ನು ನನ್ನಯನಿಗೆ ಓದಿ ಹೇಳಿರಲೂ ಬಹುದು. ಅದರಲ್ಲಿ ಪಂಪನ ಭಾರತವೂ ಸೇರಿರ
ಬಹುದು. ಅವನು ಕನ್ನಡ ಕವಿಯೆಂದೂ ವೈದಿಕನಾಗಿದ್ದ ಆತನಿಗೆ ಜೈನಧರ್ಮ ಹಿಡಿಸದೆ
ರಾಜರಾಜ ನರೇಂದ್ರನ ಆಸ್ಥಾನಕ್ಕೆ ಬಂದಿರಬೇಕೆಂದೂ ಕೆಲವರ ಊಹಿಸುತ್ತಾರೆ.[28]

ನನ್ನಯನ ಮೇಲೆ ಕೆಲಮಟ್ಟಿಗೆ ಪಂಪನ ಪ್ರಭಾವವಿರುವಂತೆ ತೋರುತ್ತದೆ.
ನನ್ನಯ ತನ್ನ ಕೃತಿಯ ಆರಂಭದಲ್ಲಿ ಕೊಟ್ಟಿರುವ ಪದ್ಯಾನುಕ್ರಮಣಿಕೆಗೂ 'ಪಂಪ
ಭಾರತ'ದ ಕಡೆಯಲ್ಲಿ ಬಂದಿರುವ ಉಪಾಖ್ಯಾನಗಳ ಪಟ್ಟಿಗೂ ವಿಶೇಷವಾದ ಹೋಲಿಕೆ
ಇದೆ" ಎಂಬುದು ಪಂಪ-ನನ್ನಯರ ತುಲನಾತ್ಮಕ ಪರಿಶೀಲನೆಯ ಒಂದು ಸೂಚನೆ.[29]
ನನ್ನಯನ ವರ್ಣನೆಗಳಿಗೂ ಪಂಪನ ವರ್ಣನೆಗಳಿಗೂ ಇಬ್ಬರೂ ಬಳಸಿದ ಛಂದಸ್ಸುಗಳ
ವ್ಯಾಪ್ತಿಗೂ ಬಹಳಷ್ಟು ಹೋಲಿಕೆ ಕಂಡುಬರುತ್ತದೆ. 'ಖ್ಯಾತ ಕರ್ಣಾಟಕ'ಗಳಲ್ಲಿ
ಚಂಪಕಮಾಲೆ ಮತ್ತು ಉತ್ಪಲಮಾಲೆಗಳು ಕನ್ನಡ ತೆಲುಗು ಕಾವ್ಯಗಳಲ್ಲಿ ಹೆಚ್ಚು
ಕಡಮೆ ಒಂದೇ ಪರಿಮಿತಿಯಲ್ಲಿ ಬಳಸಲ್ಪಟ್ಟಿವೆ. ಹಾಗೆಯೇ ಕಂದಪದ್ಯ ಕೂಡ. ಕನ್ನಡ
ದಲ್ಲಿರುವ ಮಲ್ಲಿಕಾಮಾಲೆ, ತರಳ, ಪೃಥ್ವಿ, ಮಾಲಿನಿ, ದ್ರುತವಿಲಂಬಿತ, ಉತ್ಸಾಹ,
ಅಕ್ಕರ ಇಂಥ ಪದ್ಯಜಾತಿಗಳು ತೆಲುಗಿನಲ್ಲಿ ಕೂಡ ಒಂದೇ ಪ್ರಮಾಣ ಪ್ರಾಚುರ್ಯಗಳಲ್ಲಿವೆ.

ಪದ್ಮಕವಿಯೇ ಪಂಪಕವಿಯೆಂದೂ ಅವನ ಮಾತೃಭಾಷೆ ತೆಲುಗೆಂದೂ ಒಂದು
ಅಭಿಪ್ರಾಯವಿರುವಂತೆ, ನನ್ನಯ ಕನ್ನಡದವನೆಂಬ ವಾದವೂ ಇದೆ. 'ನನ್ನಿ' ಎಂದರೆ
ಸತ್ಯ, ಪ್ರೀತಿ, ಅನುಬಂಧ ಮುಂತಾದ ಅರ್ಥಗಳು ಕನ್ನಡದಲ್ಲಿವೆ; ನನ್ನಯ ಶಬ್ದದ
ಮೂಲ ನನ್ನಿ ಇರಬಹುದು; ಆದ್ದರಿಂದ ಪಂಪ ತೆಲುಗಿನವನೂ ನನ್ನಯ ಕನ್ನಡದವನೂ
ಆಗಿರಬಹುದೆಂದು ಈ ವಾದದ ಮುಖ್ಯಾಂಶ.[30]

ಪಂಪನಿಗೆ ಸಮಕಾಲೀನನಾದ ಪೊನ್ನನೂ ವೆಂಗಿದೇಶದವನೆಂಬುದು ತಿಳಿದಿದೆ. ಈತ
ಕಮ್ಮನಾಡಿಗೆ ಸೇರಿದ ಪುಂಗನೂರಿನವನು. ಆಂಧ್ರದ ಚಿತ್ತೂರು ಜಿಲ್ಲೆಯಲ್ಲಿರುವ ಪುಂಗ
ನೂರು ಪೊನ್ನನ ಊರೆಂದು ಕೆಲವರ ಅಭಿಪ್ರಾಯವಾಗಿದೆ. ಪೊನ್ನನಿಗೆ 'ಸರ್ವದೇವ'

ನೆಂಬುದು ಬಿರುದು; ತೆಲುಗಿನಲ್ಲಿ ಸರ್ವದೇವನೆಂಬವನು 'ಆದಿಪುರಾಣ'ವನ್ನು ಬರೆದಿದ್ದಾನೆ; ಆದ್ದರಿಂದ ಕನ್ನಡದ ಪೊನ್ನ ಕವಿಯೇ ತೆಲುಗಿನಲ್ಲಿ 'ಆದಿಪುರಾಣ'ವನ್ನು ಬರೆದಿರಬಹುದೇ ಎಂಬುದೊಂದು ಊಹೆ. ಆದರೆ ಪೊನ್ನಕವಿ ತನ್ನ ಬಿರುದ ನಾಮವನ್ನು ಬಳಸಿ ತೆಲುಗಿನಲ್ಲಿ ಏಕೆ ಕಾವ್ಯವನ್ನು ಬರೆಯಬೇಕೆಂಬ ಸಂಶಯ ಮೂಡುತ್ತದೆ.

ಗಜಾಂಕುಶನೆಂಬ ಇನ್ನೊಬ್ಬ ಕವಿಯ ವಿಚಾರವೂ ಅನುಮಾನಾಸ್ಪದವಾಗಿಯೇ ಉಳಿದಿದೆ. ಮಡಿಕಿ ಸಿಂಗನ ಎಂಬವನು (ಕ್ರಿ.ಶ. ೧೪೦೦) ತನ್ನ 'ಸಕಲ ನೀತಿ ಸಮ್ಮತಮು' ಎಂಬ ತೆಲುಗು ಗ್ರಂಥದಲ್ಲಿ ಗಜಾಂಕುಶನೆಂಬ ಕವಿಯನ್ನು ಕುರಿತು ಹೇಳಿರುತ್ತಾನೆ. ಕನ್ನಡದಲ್ಲಿ ಶ್ರೀಧರಾಚಾರ್ಯ, ನಯಸೇನ, ಮಲ್ಲಿಕಾರ್ಜುನ ಮುಂತಾದವರ ಪೂರ್ವಕವಿ ಸ್ತವದಲ್ಲಿ ಹೇಳುವ, ಕ್ರಿ.ಶ. ೧೦೦೦ದಲ್ಲಿದ್ದವನೆಂದು ಕವಿಚರಿತೆಕಾರರು ಊಹಿಸುವ ಕನ್ನಡ ಕವಿ ಗಜಾಂಕುಶನೇ ಆತನಾಗಿರಬಹುದೇ ಎಂಬುದು ವಿಚಾರಣೀಯವಾಗಿದೆ.

ಪಂಪನ ಕಾಲ ಚಂಪೂಯುಗವೆಂದು ಹೆಸರನ್ನು ಗಳಿಸಿದೆ. ತೆಲುಗಿನಲ್ಲೂ ನನ್ನಯನಿಂದ ಮುಂದಕ್ಕೆ ಹೆಚ್ಚು ಚಂಪೂಗ್ರಂಥಗಳೇ ಹೊರಬಂದಿರುವುದನ್ನು ಗಮನಿಸಿದರೆ, ಇದು ಕನ್ನಡದ ಪ್ರಭಾವ ಎಂದು ಹೇಳಲು ಆಸ್ಪದವಿದೆ. ಸಂಸ್ಕೃತದಲ್ಲಿ ಇಷ್ಟು ಹಿಂದೆ ತೆಲುಗು ಕನ್ನಡಗಳಲ್ಲಿರುವಷ್ಟು ಚಂಪೂಗ್ರಂಥಗಳು ಹುಟ್ಟಲಿಲ್ಲ. ಪಂಪನ ಕಾಲದಲ್ಲಿ ಹೊರಬಂದ ಅನೇಕ ಕನ್ನಡ ಗ್ರಂಥಗಳಿಗೆ ಹೋಲಿಸಬಹುದಾದ ತೆಲುಗು ಗ್ರಂಥಗಳು ಆ ಕಾಲದಲ್ಲೋ ಅಥವಾ ನಂತರದಲ್ಲೋ ಹುಟ್ಟಿಬಂದಿವೆ. ಪೊನ್ನನು 'ಭುವನೈಕ ರಾಮಾಭ್ಯುದಯ'ವನ್ನೂ ನಾಗಚಂದ್ರನು 'ಪಂಪ ರಾಮಾಯಣ'ವನ್ನೂ ಬರೆದ ಸ್ವಲ್ಪಕಾಲದ ತರುವಾಯದಲ್ಲೇ ತೆಲುಗಿನಲ್ಲಿ 'ಭಾಸ್ಕರ ರಾಮಾಯಣ' ಮತ್ತು 'ರಂಗನಾಥ ರಾಮಾಯಣ' ರಚಿತವಾದವು. ನಾಗವರ್ಮ 'ಕರ್ಣಾಟಕ ಕಾದಂಬರಿ' ಬರೆದಿರುವಂತೆ ಕೇತನನೆಂಬ ೧೩ನೆಯ ಶತಮಾನದ ತೆಲುಗು ಕವಿ ತಾನೂ 'ಕಾದಂಬರಿ'ಯನ್ನು ಬರೆದಂತೆ ತಿಳಿಯುವುದು. ಆದರೆ ಈಗ ಅದು ಅಲಭ್ಯ. ಕೆಲವು ಪದ್ಯಗಳು ಮಾತ್ರ ಲಕ್ಷಣಗ್ರಂಥಗಳಲ್ಲಿ ಉದಾಹೃತವಾಗಿವೆ. ನಾಗವರ್ಮನದೇ ಆದ 'ಛಂದೋಂಬುಧಿ' ಭೀಮಕವಿಯ 'ಕವಿಜನಾಶ್ರಯಮು' ಎಂಬ ಗ್ರಂಥದ ಮೇಲೆ ಪ್ರಭಾವ ಬೀರಿದೆ ಎಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ದುರ್ಗಸಿಂಹನ 'ಪಂಚತಂತ್ರ'ದಂತೆಯೇ ತೆಲುಗಿನಲ್ಲೂ ೧೩ನೆಯ ಶತಮಾನದಲ್ಲಿ ಒಂದು ಪಂಚತಂತ್ರ ಹುಟ್ಟಿಕೊಂಡಿದೆ. ಆದರೆ ಇಲ್ಲಿಯೂ ಕೆಲವು ಪದ್ಯಗಳು ಮಾತ್ರ ದೊರೆತಿವೆ. ಎರಡನೆಯ ನಾಗವರ್ಮನ 'ಕರ್ಣಾಟಕ ಭಾಷಾಭೂಷಣ'ವನ್ನು ಕೇತನ ಎಂಬವನ 'ಆಂಧ್ರ ಭಾಷಾಭೂಷಣ' ಎಂಬ ತೆಲುಗು ವ್ಯಾಕರಣ ಹೋಲುತ್ತದೆ. ಹೀಗೆ ಸು. ೧೦ರಿಂದ ೧೩ನೆಯ ಶತಮಾನದ ಅವಧಿಯಲ್ಲಿ ಹೊರಬಂದ ಅನೇಕ ಕನ್ನಡ ಗ್ರಂಥಗಳು ತೆಲುಗು ಸಾಹಿತ್ಯ ಕೃತಿಗಳ ಮೇಲೆ ಅಷ್ಟಿಷ್ಟು ಪ್ರಭಾವ ಬೀರಿವೆ ಎಂಬುದಕ್ಕೆ ಆಧಾರಗಳಿವೆ.

## ೧೨ರಿಂದ ೧೫ನೆಯ ಶತಮಾನ

ಕನ್ನಡದಲ್ಲಿ ಕ್ರಿ.ಶ. ೧೨ನೆಯ ಶತಮಾನ ವಚನ ಸಾಹಿತ್ಯದ ಯುಗವಾಗಿ ಪ್ರವರ್ತಿಸಿತು. ತೆಲುಗಿನಲ್ಲಿಯೂ ಇದಕ್ಕೆ ಸಂವಾದಿಯಾಗಿ 'ಶಿವಕವಿ ಯುಗ'ವೆಂಬ ಹೆಸರಿನಲ್ಲಿ ಕ್ರಿ.ಶ. ೧೧೦೦ರಿಂದ ೧೨೫೦ರ ವರೆಗಿನ ಕಾಲವನ್ನು ಕರೆಯಲಾಗುತ್ತದೆ. ಕನ್ನಡದಲ್ಲಿ ಈ ಅವಧಿ ಮಾರ್ಗದಿಂದ ದೇಸಿಗೆ ಸಾಹಿತ್ಯವನ್ನು ತಿರುಗಿಸುವಲ್ಲಿ ಯಶಸ್ವಿಯಾದಂತೆಯೇ ತೆಲುಗಿನ ಶಿವಕವಿ ಯುಗವೂ ದೇಸಿ ಸಾಹಿತ್ಯಕ್ಕೆ ಮಾನ್ಯತೆ ನೀಡಿದೆ.

ಕನ್ನಡ ತೆಲುಗು ಶೈವ ಕವಿಗಳ ಬಾಂಧವ್ಯ ಬಹಳ ಹಿಂದಿನದು. ಎರಡೂ ಭಾಷೆಗಳವರು ಶ್ರೀಪತಿಪಂಡಿತ, ಶಿವಲೆಂಕ ಮಂಚಣ್ಣ, ಮಲ್ಲಿಕಾರ್ಜುನಪಂಡಿತ ಎಂಬ ಮೂವರನ್ನು ಪಂಡಿತತ್ರಯರೆಂದು ಕರೆಯುತ್ತಾರೆ. ಇವರಲ್ಲಿ ಶ್ರೀಪತಿಪಂಡಿತ ಬೆಜವಾಡದವನೆಂದೂ ಮಲ್ಲೇಶ್ವರ ಸ್ವಾಮಿಯ ದೇವಸ್ಥಾನದಲ್ಲಿ ಅವನು ತನ್ನ ಸೆರಗಿನಲ್ಲಿ ಕೆಂಡ ಕಟ್ಟಿದ ಮಹಿಮೆ ತೋರಿದನೆಂದೂ ಉಲ್ಲೇಖಗಳಿವೆ. ಬೆಜವಾಡ ಯುದ್ಧಮಲ್ಲನ ತೆಲುಗು ಭಾಷೆಯ ಶಾಸನ (ಕ್ರಿ.ಶ. ೯೫೦) ಮಲ್ಲೇಶ್ವರ ದೇವಸ್ಥಾನದಲ್ಲಿವೆ. ಅದು ವೀರಶೈವ ಆಚಾರಗಳಲ್ಲಿ ಕೆಲವನ್ನು ಹೆಸರಿಸುವುದೇ ಅಲ್ಲದೆ ಕನ್ನಡ, ತೆಲುಗು ಭಾಷೆಗಳಿಗೆ ಸಮಾನವಾದ ಅಕ್ಕರ ಎಂಬ ದೇಶ್ಯ ಛಂದಸ್ಸಿನ ವೃತ್ತವನ್ನು ಒಳಕೊಂಡಿದೆ. ಈ ಶಾಸನವನ್ನು ಬರೆದವನು ಶ್ರೀಪತಿಪಂಡಿತನೇ ಎಂದು ಕೆಲವರ ಅಭಿಪ್ರಾಯ. ಮಲ್ಲಿಕಾರ್ಜುನ ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥ ಮುಂತಾದವರೆಲ್ಲರೂ ಇವನನ್ನು ಹೆಸರಿಸಿರುವುದರಿಂದ ಈತ ೧೨ಯ ಶತಮಾನಕ್ಕೆ ಹಿಂದಿನವನೆಂದು ಹೇಳಬಹುದು. ಎರಡನೆಯವನಾದ ಶಿವಲೆಂಕಮಂಚಣ್ಣನ ಕಾಲ ದೇಶ ವಿಚಾರ ಅಜ್ಞಾತವಾಗಿಯೇ ಉಳಿದಿವೆ. 'ಶಿವಲೆಂಕ' ಎಂಬ ಗೃಹನಾಮವನ್ನು ಧರಿಸಿದವರು ಇಂದಿಗೂ ತೆಲುಗು ದೇಶದಲ್ಲಿದ್ದಾರೆ. ಮಲ್ಲಿಕಾರ್ಜುನ ಪಂಡಿತ ತೆಲುಗಿನಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಹೆಚ್ಚು ಕಡಮೆ ಇವನು ಬಸವಣ್ಣನ ಕಾಲದವನು. ಕಲ್ಯಾಣದಲ್ಲಿ ಬಸವಣ್ಣ ವೀರಶೈವವನ್ನು ಪ್ರಚಾರ ಮಾಡುತ್ತಿದ್ದಾಗ, ಮಲ್ಲಿಕಾರ್ಜುನ ಪಂಡಿತ ತೆಲುಗು ದೇಶದಲ್ಲಿ ಸವೈದಿಕ ಆರಾಧ್ಯ ಸಂಪ್ರದಾಯವನ್ನು ಹರಡತೊಡಗಿದ. ಮಲ್ಲಿಕಾರ್ಜುನನು ಬಸವಣ್ಣನವರನ್ನು ನೋಡಬೇಕೆಂದು ಹೊರಟು ಮಧ್ಯಮಾರ್ಗದಲ್ಲಿ ಬಸವಣ್ಣನವರು ಶಿವಸಾಯುಜ್ಯ ಹೊಂದಿದರೆಂದು ತಿಳಿದನೆಂಬುದಾಗಿ ಪಾಲ್ಕುರಿಕೆ ಸೋಮನಾಥ 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿ ಬರೆದಿರುವನು. ಅವನು ಕನ್ನಡದಲ್ಲೂ ಪಂಡಿತನೆಂದು ತೆಲುಗಿನ 'ಪಂಡಿತಾರಾಧ್ಯ ಚರಿತ್ರ' ಮುಂತಾದ ಗ್ರಂಥಗಳಿಂದ ತಿಳಿದುಬರುತ್ತದೆ. ಕನ್ನಡದಲ್ಲಿ ಮಲ್ಲಿಕಾರ್ಜುನನು 'ಶಿವಸಹಸ್ರನಾಮ' ಎಂಬ ಕೃತಿಯನ್ನು ಬರೆದಿದ್ದಾನೆಂದು ಕವಿಚರಿತೆಕಾರರು ಬರೆದಿರುವರು. ಶಿವಲೆಂಕ ಮಂಚಣ್ಣ ಮತ್ತು ಮಲ್ಲಿಕಾರ್ಜುನರು ಬರೆದ ಕೆಲವು ಕನ್ನಡ ವಚನಗಳೂ ಇರುವಂತೆ ಕಂಡುಬರುತ್ತದೆ.[31] ತೆಲುಗಿನಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಬರೆದ 'ಶಿವತತ್ತ್ವ ಸಾರಮು' ದೊರೆತಿದ್ದು, ಕನ್ನಡದಲ್ಲಿ ದೊರೆತಿರುವ ಒಂದು ಅಸಮಗ್ರ ಪ್ರತಿ 'ಶಿವತತ್ತ್ವ ಸಾರ'ವೆಂಬುದು ಕೂಡ ಆತನದೇ ಎಂದು ಒಬ್ಬ ತೆಲುಗು ವಿದ್ವಾಂಸರು ಅಭಿಪ್ರಾಯಪಟ್ಟಿ

ದ್ದಾರೆ. ಅಲ್ಲದೆ ತೆಲುಗಿನ ಅನೇಕ ಪದ್ಯಗಳಿಗೆ ಅವು ಅನುವಾದಗಳಾಗಿವೆಯೆಂದು ತೋರಿಸಿದ್ದಾರೆ:

ಉದಾ: ತೆಲುಗು: ಒಂಡೇಮಿ ಮಲ್ಲಿಕಾರ್ಜುನ
ಪಂಡಿತುಡನ ನುಂಡುಕಂಟೆ ಪ್ರಮಥುಲಲೋ ನೆ
ನ್ನಂಡೊಕೊ ನೀ ಯಾಜ್ಞೋನ್ನತಿ
ನುಂಡಗ ಗಾಂತುನನಿ ಕೋರುಚುಂಡುದು ರುದ್ರಾ ॥

ಕನ್ನಡ: ಧರೆಯೊಳಗೆ ಮಲ್ಲಿಕಾರ್ಜುನ
ವರ ಪಂಡಿತನೆನಿಸುತಿಹುದಱಿಂ ನಿನ್ನಾಜ್ಞಾ
ಭರಮುಳಿಯಲ್ ಪ್ರಮಥರೊಳಾ
ನಿರದಿಂದೀಕ್ಷಿಸುವೆ ನಿಮ್ಮ ಬಯಸುವೆನೀಶಾ ॥

ಪಂಡಿತಾರಾಧ್ಯನೇ ತೆಲುಗಿನಲ್ಲಿ 'ಶ್ರೀಗಿರಿ ಮಲ್ಲಿಕಾರ್ಜುನ ಶತಕ'ವನ್ನೂ ಬರೆದಿದ್ದಾನೆ. ಆದರೆ ಅದರಲ್ಲಿ ಒಂದು ಪದ್ಯ ಮಾತ್ರ ದೊರೆತಿದೆ. ಕನ್ನಡದಲ್ಲೂ 'ಶಿವಪರ್ವತ ಮಲ್ಲಿಕಾರ್ಜುನಾ' ಎಂಬ ನಾಮಾಂಕಿತವಿರುವ ಒಂದು ಶತಕವಿದೆ. ಅದರ ಕರ್ತೃವಿನ ಹೆಸರಾಗಲಿ, ಅದು ತೆಲುಗು ಗ್ರಂಥದ ಅನುವಾದವೋ ಎಂಬ ವಿಷಯವಾಗಲಿ ತಿಳಿಯದು.

ಇದೇ ಕಾಲಕ್ಕೆ (೧೨ನೆಯ ಶತಮಾನ) ಸೇರಿದ ಪಾವುಲೂರಿ ಮಲ್ಲನ ಎಂಬವನು ಒಂದು ಗಣಿತ ಗ್ರಂಥವನ್ನು ಬರೆದಿದ್ದಾನೆ. ಅವನು ಕ್ರಿ.ಶ. ೧೧೨೦ ಕಾಲದವನಾದ ರಾಜಾದಿತ್ಯನ ಗಣಿತ ಗ್ರಂಥವನ್ನು ನೋಡಿರುವ ಸಾಧ್ಯತೆ ಇದೆ.

ದೇಸಿ ಮಾರ್ಗ ಎಂಬ ಪ್ರಸಕ್ತಿಯನ್ನು ತೆಲುಗಿಗೆ ಮೊದಲ ಬಾರಿಗೆ ತಂದ ಭೀಮಯ್ಯ ಪಂಡನೆಂಬ (ಕ್ರಿ.ಶ. ೧೧೪೫) ಶಾಸನಕವಿಯ ಚೇಬ್ರೋಲು ಶಾಸನದ ಒಂದು ಪದ್ಯಕ್ಕೆ ರನ್ನನ ಪದ್ಯ ಆಧಾರವಾಗಿದೆ ಎಂದೊಂದು ಸೂಚನೆಯಿದೆ:[32]

ತಲಪು ಸದರ್ಥ ಭಾವಮುನ ದಗ್ಗತಸೂಕ್ತುಲಗೂಡ ವರ್ಣನಲ್
ಗೊಲುಸುಗೊನಂಗ ಪ್ರಾವಡುಲು ಗೋರಿನ ಭಂಗಿಕವಚ್ಚಿ ಮುಟ್ಟ ಗೋ
ಮುಲಗತಿ ದೇಸಿ ಮಾರ್ಗಮುಲು ಮಟ್ಟುಪಡಂಗಟನಂಬುಲೊಪ್ಪ ನಾ
ಮ್ಯಲಕ್ರಿಯ ಜೆಪ್ಪನೇರ್ಚೆ ನೃಪಧೂರ್ಜಟಿ ಭೀಮಯ ಪಂಡ ಡಿಮ್ಮಹಿನ್ ॥

ಎಂಬ ತೆಲುಗಿನ ಪದ್ಯದ ಮೂಲವೆನ್ನಲಾದ ಕನ್ನಡ ಪದ್ಯ ಹೀಗಿದೆ:

ನೆಗೞ್ದ ರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ
ಬಗೆಗೊಳಲಿಂತು ಪೇೞ್ದುದು ಮಹೀಭುಜಸಾರ್ಥಕಮಲ್ಲದಂತೆ ಕೆ
ಮ್ಮಗೆ ಕೊಳಲಾಟಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಱನೋ
ಪಗೆವನೊ ಮೊಮ್ಮನೋ ಮಗನ ದಾಯಿಗನೋ ಬುಧಸೇವ್ಯನಂದನಾ॥ (ಗದಾ. ೧–೪೬)

ಈ ಎರಡು ಪದ್ಯಗಳನ್ನೂ ಹೋಲಿಸಿ ನೋಡಿದರೆ ಕನ್ನಡ ಪದ್ಯವನ್ನು ಭೀಮಯ ಪಂಡನು ನೋಡಿರಲು ಸಾಧ್ಯತೆಯಿದೆ ಎಂದು ಹೇಳಬಹುದೇ ಹೊರತು ಕನ್ನಡ ಪದ್ಯವೇ ತೆಲುಗು ಪದ್ಯಕ್ಕೆ ಆಧಾರವೆಂದು ಹೇಳುವಂತಿಲ್ಲ.

'ಕುಮಾರ ಸಂಭವ'ವನ್ನು ಬರೆದ ನನ್ನೆಚೋಡನ (ಸು. ೧೨ನೆಯ ಶತಮಾನ) ಮೇಲೆ ಕನ್ನಡದ ಪ್ರಭಾವ ಗಮನಾರ್ಹವಾಗಿದೆ ಎಂದು ವಿದ್ವಾಂಸರು ಕೆಲವರು ತೋರಿಸುವ ಯತ್ನ ಮಾಡಿದ್ದಾರೆ. ಕನ್ನಡದಲ್ಲಿ ಪ್ರಚುರವಾಗಿರುವ ವಸ್ತುಕ, ವರ್ಣಕ, ಜಾಣ್ಣುಡಿ, ಮಾರ್ಗ, ದೇಸಿ ಮುಂತಾದ ಪದಗಳನ್ನು ಈತನ ತೆಲುಗು ಕೃತಿಯಲ್ಲಿ ಕಾಣಬಹುದಾಗಿದೆ. ಈತನ ಚಂಪೂಗ್ರಂಥವಾದ 'ಕುಮಾರ ಸಂಭವ'ದಲ್ಲಿ ಕ್ರಮವಾಗಿ ಬೇರೆ ಬೇರೆ ದೇವತೆಗಳನ್ನು ಸ್ತುತಿಸುವುದು, ಕಾವ್ಯದಲ್ಲಿ ತನ್ನ ಗುರುವಾದ ಮಲ್ಲಿಕಾರ್ಜುನನಿಗೂ ಮತ್ತು ಕಾವ್ಯನಾಯಕನಾದ ಶಿವನಿಗೂ ಅಭೇದವನ್ನು ಕಲ್ಪಿಸುವುದು, ಕುಕವಿನಿಂದೆ, ಸುಕವಿಸ್ತುತಿ ಮುಂತಾದ ಅನೇಕ ರಚನಾ ಸಂಪ್ರದಾಯಗಳನ್ನು ನನ್ನೆಚೋಡ ಕನ್ನಡದಿಂದ ತೆಗೆದುಕೊಂಡಿರುವುದಲ್ಲದೆ ಅನೇಕ ಕನ್ನಡ ಪದಗಳನ್ನೂ ಇರುವಂತೆಯೇ ಪ್ರಯೋಗಿಸಿದ್ದಾನೆ ಎಂದು ಆ ವಿದ್ವಾಂಸರು ಗುರುತಿಸಿದ್ದಾರೆ.

ಪಾಲ್ಕುರಿಕೆ ಸೋಮನಾಥ ತೆಲುಗರು ಮತ್ತು ಕನ್ನಡಿಗರಿಗೆ ಸಮಾನವಾಗಿ ಪರಿಚಿತನಾದ ಕವಿ. ದೇಸಿ ಛಂದಸ್ಸಾದ ದ್ವಿಪದಿಯಲ್ಲಿ ಈತ ಎರಡು ಬೃಹತ್ಕಾವ್ಯಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಒಂದಾದ 'ಬಸವ ಪುರಾಣ'ವನ್ನು ಭೀಮಕವಿ ಕನ್ನಡಕ್ಕೆ ತಂದಿದ್ದಾನೆ. ಇನ್ನೊಂದು ಕೃತಿಯಾದ 'ಪಂಡಿತಾರಾಧ್ಯ ಚರಿತ್ರ'ವನ್ನು ನೀಲಕಂಠಾಚಾರ್ಯನು (ಸು. ೧೪೮೫) ಸಮಗ್ರವಾಗಿಯೂ ಅಲ್ಲಿಯ 'ಗುರುಭಕ್ತಿಯಾಂಡಾರು' ಚರಿತ್ರೆಯನ್ನು ಪ್ರತ್ಯೇಕವಾಗಿ ಆಯ್ದು ಪ್ರಾಸಭೂಷಣ ಪೆಮ್ಮಿಸೆಟ್ಟಿ (ಕ್ರಿ.ಶ. ೧೬೫೦) ಎಂಬವನು 'ಗುರುಭಕ್ತಾಂಡಾರಿ ಚರಿತ'ವೆಂಬ ಹೆಸರಿಂದಲೂ ವಾರ್ಧಕ ಷಟ್ಪದಿಯ ರೂಪದಲ್ಲಿ ಕನ್ನಡಿಸಿದ್ದಾರೆ. ಕನ್ನಡ ಕವಿಗಳಾದ ಸೋಮರಾಜ, ಪದ್ಮಣಾಂಕ ಮುಂತಾದವರಿಂದ ಸ್ತುತ್ಯನಾದ ಸೋಮನಾಥನು ಕನ್ನಡದಲ್ಲಿ 'ಸದ್ಗುರು ರಗಳೆ', 'ಶೀಲ ಸಂಪಾದನೆ', 'ಸಹಸ್ರಗಣನಾಮ' ಮುಂತಾದುವನ್ನು ರಚಿಸಿ, ತೆಲುಗಿನಲ್ಲಿ 'ಅನುಭವಸಾರಮು', 'ಚತುರ್ವೇದಸಾರಮು', 'ಬಸವ ಪುರಾಣಮು', 'ಪಂಡಿತಾರಾಧ್ಯ ಚರಿತ್ರ' ಮುಂತಾದುವನ್ನು ರಚಿಸಿ ನಿಜವಾದ ಅರ್ಥದಲ್ಲಿ ತೆಲುಗು-ಕನ್ನಡ ಭಾಷಾಬಾಂಧವ್ಯದ ಉತ್ಕೃಷ್ಟ ಉದಾಹರಣೆಯಾಗಿದ್ದಾನೆ. ಸಂಸ್ಕೃತದಲ್ಲಿಯೂ ಈತನ ಕೆಲವು ರಚನೆಗಳುಂಟು.

ತೆಲುಗು ಕನ್ನಡಗಳಲ್ಲಿ ಹೆಸರಾದ ಇನ್ನೊಬ್ಬ ಕವಿ ಚಕ್ರಪಾಣಿ ರಂಗನಾಥ. ಪಾಲ್ಕುರಿಕೆ ಸೋಮನಾಥನಿಂದ ಸೋತು ವೀರಶೈವವನ್ನು ಸ್ವೀಕಾರ ಮಾಡಿದನೆಂದು ಐತಿಹ್ಯಗಳಿವೆ. ಈತನ 'ನಯನ ರಗಡ' ಮುಂತಾದ ಕೃತಿಗಳು ತೆಲುಗಿನಲ್ಲಿವೆ. ಕನ್ನಡದ 'ಪಾಲ್ಕುರಿಕೆ ಸೋಮೇಶ್ವರ ಪುರಾಣ' ಮತ್ತು 'ಗುರುರಾಜ ಚಾರಿತ್ರ'ಗಳಲ್ಲಿ ಈತನ ಕಥೆ ಬಂದಿದೆ.

ಕನ್ನಡದ ಪ್ರಸಿದ್ಧ ವೀರಶೈವ ಕವಿ ರಾಘವಾಂಕನ ಬಗ್ಗೆ ಬರೆಯುತ್ತ ಡಾ. ರಂ. ಶ್ರೀ. ಮುಗಳಿ ಅವರು "ತೆಲುಗಿನಲ್ಲಿ ಬರೆದ ಒಂದು ನಳಚರಿತ್ರೆಯ ಕರ್ತೃ ರಾಘವಾಂಕನೆಂದಿದೆ. ಆದರೆ ತೆಲುಗಿನಲ್ಲಿ ರಾಘವಾಂಕನು ಅಷ್ಟು ಸಮರ್ಥನಾಗಿದ್ದನೆಂದು ತಿಳಿಯಲು ಆಧಾರಗಳಿಲ್ಲ. 'ಉಭಯಕವಿ ಕಮಲರವಿ' ಎಂಬ ಅವನ ಬಿರುದು ಕನ್ನಡ ಸಂಸ್ಕೃತ

ಗಳಲ್ಲಿಯ ಪ್ರಾವೀಣ್ಯವನ್ನು ಸೂಚಿಸುತ್ತಿರಬೇಕು"[33]—ಎಂಬುದಾಗಿ ಬರೆದಿದ್ದಾರೆ. ಆದರೆ ತೆಲುಗಿನಲ್ಲಿ ರಾಘವಾಂಕನೆಂಬವನು ಬರೆದ ನಳಚರಿತ್ರೆ ಯಾವುದೂ ಕಂಡುಬಂದಿಲ್ಲ. ಆದರೆ ಕನ್ನಡ ಕವಿ ರಾಘವಾಂಕನ 'ಹರಿಶ್ಚಂದ್ರ ಚಾರಿತ್ರ' ತೆಲುಗಿನ ಅನೇಕ ಹರಿಶ್ಚಂದ್ರ ಕಥೆಗಳಿಗೆ ಸ್ಫೂರ್ತಿಯನ್ನು ನೀಡಿರುವ ಸಾಧ್ಯತೆಯಿದೆ. ಗೌರವ, ಚಂದ್ರಮೌಳಿ ಕವಿ, ದೇವರಾಜ ಭಟ್ಟ, ವೀರಶರಭ ಕವಿ ಮುಂತಾದ ಅನೇಕರು ಹರಿಶ್ಚಂದ್ರ ಕಥೆಗಳನ್ನು ತೆಲುಗಿನಲ್ಲಿ ಬರೆದಿದ್ದಾರೆ. ಇವರಲ್ಲಿ ಗೌರನ ನಕ್ಷತ್ರಕನ ಪಾತ್ರಸೃಷ್ಟಿಯಲ್ಲಿ ರಾಘವಾಂಕ ನಿಂದ ಸ್ಫೂರ್ತಿ ಪಡೆದಿರುವನೆಂದು ತಿಳಿಯಲಾಗಿದೆ.

ಕನ್ನಡದಲ್ಲಿ ಕೆರೆಯ ಪದ್ಮರಸನು ಬರೆದಿರುವ 'ದೀಕ್ಷಾಬೋಧೆ'ಯನ್ನು ಪಿಡುಪರ್ತಿ ಬಸವಕವಿ 'ವೀರಶೈವ ದೀಕ್ಷಾಬೋಧ' ಎಂಬ ಹೆಸರಿನಿಂದ ದ್ವಿಪದಿ ಛಂದಸ್ಸಿನಲ್ಲಿ ತೆಲುಗಿಗೆ ಭಾಷಾಂತರ ಮಾಡಿದ್ದಾನೆ. ಕುಮಾರ ಪದ್ಮರಸನ ಕನ್ನಡ 'ಸಾನಂದ ಚರಿತ್ರೆ'ಗೆ ತೆಲುಗಿನ ಭದ್ರಕವಿ ಲಿಂಗಕವಿಯ 'ಸಾನಂದ ಚರಿತ್ರಮು' ಸದೃಶವಾದುದು. ಇದೇ ವಸ್ತುವನ್ನು ಕುರಿತದ್ದು ಕೋಟ ಶಿವರಾಮಯ್ಯನ (ಕ್ರಿ.ಶ. ೧೬ನೆಯ ಶ.) 'ಸಾನಂದೋಪಾ ಖ್ಯಾನಮು.'

ಹೀಗೆಯೇ ಸಾದೃಶ್ಯ ತೋರುವ ಇನ್ನೊಂದು ಸನ್ನಿವೇಶ ಎಂದರೆ ರುದ್ರಭಟ್ಟನ (ಸು. ೧೧೮೦) 'ಜಗನ್ನಾಥ ವಿಜಯ'ದಲ್ಲಿ ಬರುವ ಪಾರಿಜಾತಾಪಹರಣ ವೃತ್ತಾಂತ ಮತ್ತು ತೆಲುಗು ಕವಿ ನಂದಿ ತಿಮ್ಮನನ 'ಪಾರಿಜಾತಾಪಹರಣಮು'. ಕನ್ನಡದ ಜಗನ್ನಾಥ ವಿಜಯ ಮತ್ತು ತೆಲುಗು ಪಾರಿಜಾತಾಪಹರಣಗಳ ತುಲನಾತ್ಮಕ ಅಧ್ಯಯನದಿಂದ ಇದು ವಿಶದಪಟ್ಟಿದೆ.

ಸು. ೧೧೫೦ರಿಂದ ೧೪೦೦ರ ವರೆಗೆ ಇರುವ ಕನ್ನಡದ ವಚನಕಾರರ ಮತ್ತು ಆ ಪ್ರಭಾವ ವ್ಯಾಪ್ತಿಯ ಕಾಲ ತೆಲುಗಿನಲ್ಲಿ ಮೂರು ಯುಗಗಳಲ್ಲಿ ಹರಡಿದೆ: ಕ್ರಿ.ಶ. ೧೧೦೦–೧೨೫೦ ಮಧ್ಯೆ ಶಿವಕವಿಯುಗ, ಕ್ರಿ.ಶ. ೧೨೫೦–೧೩೫೦ ತಿಕ್ಕನಯುಗ, ಕ್ರಿ.ಶ. ೧೩೫೦–೧೫೦೦ ಶ್ರೀನಾಥ ಯುಗ. ಶ್ರೀನಾಥ ಯುಗವನ್ನು ಕುಮಾರ ವ್ಯಾಸ ಕವಿಯ ಪ್ರಭಾವದ ಸಮಕಾಲೀನ ಸಾಹಿತ್ಯಯುಗವೆಂದು ಗಣಿಸಿದರೂ ತಿಕ್ಕನ ಯುಗ ಬಸವ ಪ್ರಭಾವ ವ್ಯಾಪ್ತಿಯ ಕಾಲದಲ್ಲೇ ಬರುತ್ತದೆ. ಒಂದು ಕಡೆ ಶೈವ, ಇನ್ನೊಂದು ಕಡೆ ವೈಷ್ಣವ ಧರ್ಮಪಂಥಗಳವರು ತೀವ್ರಸ್ಪರ್ಧೆಯಲ್ಲಿ ತೊಡಗಿರುವ ಕಾಲದಲ್ಲಿ ಹರಿಹರಾದ್ವೈತವನ್ನು ತೆಲುಗು ಪ್ರಜೆಗಳಿಗೆ ಬೋಧಿಸಿದ ತಾತ್ತ್ವಿಕ ಕವಿ ತಿಕ್ಕನ. ವ್ಯಾಸಭಾರತದ ವಿರಾಟಪರ್ವದಿಂದ ಹಿಡಿದು ಹದಿನೈದು ಪರ್ವಗಳನ್ನು ತೆಲುಗು ಭಾಷೆಯಲ್ಲಿ ನಿರೂಪಿಸಿ ಅದನ್ನು ಹರಿಹರದೇವರಿಗೆ ಅಂಕಿತಮಾಡಿದ್ದಾನೆ. ತಿಕ್ಕನನ ಭಾರತವನ್ನು ಅನುಸರಿಸಿ ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ತಿಮ್ಮಣ್ಣ ಅನುಗ್ರಹ ವಾಗಿದ್ದ 'ಕುಮಾರವ್ಯಾಸ ಭಾರತ'ವನ್ನು ಪೂರ್ಣಮಾಡಿದ್ದನೆಂದು ತಿಳಿಯುತ್ತದೆ. ಕುಮಾರವ್ಯಾಸ ಭಾರತದ ಮೇಲೆ ತಿಕ್ಕನನ ಪ್ರಭಾವವಿದೆಯೆಂದು ಬಲ್ಲವರ ಮಾತು.

ರಾವಿಪಾಟಿ ತ್ರಿಪುರಾಂತಕನೆಂಬವನು ಬರೆದ ತೆಲುಗು 'ಮದನ ವಿಜಯಮು' ಎಂಬ

ಎಂಟು ಆಶ್ವಾಸಗಳ ಕಾಮಶಾಸ್ತ್ರ ವಿಷಯಕ ಗ್ರಂಥದಲ್ಲಿ ಚಂಪ್ರರಾಜನ 'ಮದನ ತಿಲಕ'ವೆಂಬ ಕಾಮಶಾಸ್ತ್ರ ಗ್ರಂಥದ ಅನುಸರಣೆಯಿದೆ ಎಂದು ಶ್ರೀ ಎನ್. ವೆಂಕಟರಾವು ಅವರು ಭಾವಿಸಿ ಕೆಳಗಿನ ಪದ್ಯಗಳನ್ನು ಉದಾಹರಿಸಿದ್ದಾರೆ.[೨೬]

ತೆಲುಗು : ಸತಿ ಗುಣವತಿ ಯಗುನೇನಿಯು
ಪತಿಕದಿ ರತ್ನಂಬ ಪ್ರಾಣಬಂಧುವ ಯನ್ಮೃತಂ
ಬತಿವಯ ದುರ್ಗುಣಿ ಯಗುನೇ
ಬತಿ ಕೆಡಪನಿ ಚಿಚ್ಚು ಕಾಲುಪಕ ಯದಿ ಕಾಲ್ಚುನ್॥

ಕನ್ನಡ : ಸತಿ ಗುಣವತಿ ದೊರೆಕೊಂಡೊಡೆ
ಪತಿಗಾ ಸ್ತ್ರೀ ರತ್ನಮೆಂಬ ಪೆಸರಂ ಪಡೆಗುಂ
ಸತಿ ದುರ್ಗುಣೆ ದೊರೆಕೊಂಡೊಡೆ
ಪತಿಗಾ ಸ್ತ್ರೀ ವ್ಯಾಧಿಯೆಂಬ ಪೆಸರಂ ಪಡೆಗುಂ॥ (೮.೩)

ಈ ಸಾದೃಶ್ಯಗಳ ಗಾಢವಾದ ಪರಿಶೀಲನೆ ಆಗುವುದು ಅಗತ್ಯ.

ಇನ್ನು ಚೌಂಡರಸನ (ಸು.೧೩೦೦) 'ಅಭಿನವ ದಶಕುಮಾರ ಚರಿತೆ' ಕೇತನನ 'ದಶಕುಮಾರ ಚರಿತೆ' ಎರಡೂ ದಂಡಿಯ 'ದಶಕುಮಾರ ಚರಿತೆ'ಯ ಅನುವಾದಗಳೇ, ಎರಡೂ ಚಂಪೂ ಕಾವ್ಯಗಳೇ. ದಂಡಿಯ ಮೂಲಗ್ರಂಥ ಗದ್ಯದಲ್ಲಿದೆ ಎಂಬುದನ್ನು ಇಲ್ಲಿ ನೆನೆಯಬಹುದು. ಚೌಂಡರಸನು ಉತ್ತರಕಾಲೀನನಾದುದರಿಂದ ಅವನ ಗ್ರಂಥಕ್ಕೆ ತೆಲುಗು ಗ್ರಂಥದ ಪ್ರೇರಣೆ ಇದ್ದಿರಬಹುದು. ಕೇತನನ (೧೩ನೆಯ ಶತಮಾನದ ಪೂರ್ವಭಾಗ) 'ಆಂಧ್ರ ಭಾಷಾಭೂಷಣಮು' ಇಮ್ಮಡಿ ನಾಗವರ್ಮನ 'ಕರ್ಣಾಟಕ ಭಾಷಾಭೂಷಣ'ವನ್ನು ಅನುಸರಿಸಿ ಬರೆದ ತೆಲುಗು ಲಕ್ಷಣ ಗ್ರಂಥವೆಂದು ಪೂರ್ವೋಕ್ತ ಎನ್. ವೆಂಕಟರಾವು ಅವರೇ ಸೂಚಿಸಿದ್ದಾರೆ. ರಟ್ಟಕವಿಯ (ಸು. ೧೩೦೦) ವೃಷ್ಟಿಶಾಸ್ತ್ರವಾದ 'ರಟ್ಟಮತ'ವನ್ನು ಅಯ್ಯಲ ಭಾಸ್ಕರಕವುಲು ಎಂಬ ೧೬ನೆಯ ಶತಮಾನದ ಕವಿದ್ವಯರು ತೆಲುಗಿಗೆ ಅನುವಾದ ಮಾಡಿದ್ದಾರೆ.

ವಿಜಯನಗರದ ಸಂಗಮ ರಾಜರು ಕನ್ನಡಕ್ಕೆ ಪ್ರೋತ್ಸಾಹವನ್ನು ಕೊಟ್ಟಂತೆ ತೆಲುಗು ಕವಿಗಳಿಗೂ ಕೊಟ್ಟಿರುತ್ತಾರೆ. ೧ನೆಯ ಬುಕ್ಕರಾಯ 'ಉತ್ತರ ಹರಿವಂಶ'ವನ್ನು ತೆಲುಗಿನಲ್ಲಿ ಬರೆದ ನಾಚನ ಸೋಮನನಿಗೆ ಒಂದು ಅಗ್ರಹಾರವನ್ನಿತ್ತನು. ಅದೇ ಕಾಲದಲ್ಲಿದ್ದ ಭೀಮಕವಿ ತೆಲುಗು 'ಬಸವ ಪುರಾಣ'ವನ್ನು ಕನ್ನಡಕ್ಕೆ ಪರಿವರ್ತನೆ ಮಾಡಿದನು. ಕನ್ನಡ ತೆಲುಗುಗಳಲ್ಲಿ ಆತನಿಗಿದ್ದ ಸಮದಂಡಿಯಾದ ಪ್ರಭುತ್ವವನ್ನಿದು ಸೂಚಿಸುತ್ತದೆ.

## ೧೫ರಿಂದ ೧೮ನೆಯ ಶತಮಾನ

ಕ್ರಿ.ಶ. ೧೩೫೦ರಿಂದ ಕ್ರಿ.ಶ. ೧೫೦೦ರ ವರೆಗೆ ತೆಲುಗು ಸಾಹಿತ್ಯವನ್ನು ಶ್ರೀನಾಥ ಯುಗ ಎಂದು ಕರೆಯುವರು. ಪಾಲ್ಕುರಿಕೆ ಸೋಮನಾಥನ ತರುವಾಯ ಕನ್ನಡನಾಡಿ

ನೊಡನೆ ಹೆಚ್ಚು ಸಂಪರ್ಕವಿದ್ದ ಕವಿ ಎಂದರೆ ತೆಲುಗು ಭಾಷೆಯ 'ಕವಿ ಸಾರ್ವಭೌಮು' ನಾದ ಶ್ರೀನಾಥ. ವಿಜಯನಗರದ ೨ನೆಯ ಹರಿಹರನ ಕಾಲದಲ್ಲಿ ರತ್ನಭಾಂಡಾರಿ ತಿಪ್ಪರಸನ ಮಗ ವಿನುಕೊಂಡ ವಲ್ಲಭಾಮಾತ್ಯನು ಬರೆದ 'ಕ್ರೀಡಾಭಿರಾಮಮು' ಎಂಬ 'ವೀಥೀನಾಟಕ'ದಲ್ಲಿ ಶ್ರೀನಾಥನ ಕೈವಾಡವೂ ಇರುನಂತೆ ತೋರುತ್ತದೆ. ಹೀಗೆಯೇ ೧ನೆಯ ದೇವರಾಯನ ಅಮಾತ್ಯನಾದ ಸಿದ್ದಣ ಮಂತ್ರಿಯ ಆಶ್ರಯದಲ್ಲಿ ಜಕ್ಕನನು 'ವಿಕ್ರಮಾರ್ಕಚರಿತ್ರ'ವನ್ನು ಬರೆದನು.

ವಿಜಯನಗರದ ಪ್ರೌಢದೇವರಾಯನಿಂದ ಕನಕಾಭಿಷೇಕವನ್ನು ಪಡೆದ ಶ್ರೀನಾಥ ತೆಲುಗಿನಲ್ಲಿ 'ಶೃಂಗಾರನೈಷಧಮು' 'ಕಾಶೀಖಂಡಮು', 'ಭೀಮಖಂಡಮು,' ಹರವಿಲಾಸಮು', 'ಪಂಡಿತಾರಾಧ್ಯ ಚರಿತ್ರ' ಮುಂತಾದ ಗ್ರಂಥಗಳನ್ನು ಬರೆದಿದ್ದಾನೆ. ಇವನ ಗ್ರಂಥಗಳಲ್ಲಿ ಅನುವಾದ, ಸ್ಥಲ ಮಾಹಾತ್ಮ್ಯ, ಜೀವನ ಚರಿತ್ರೆ, ವೀರಗಾಥೆ—ಹೀಗೆ ವೈವಿಧ್ಯವಿದೆ. ದೇವರಾಯನ ಸಭೆಯಲ್ಲಿ ಮಹಾಪಂಡಿತನಾದ ಗೌಡ ಡಿಂಡಿಮಭಟ್ಟನಿದ್ದನು. ಅವನನ್ನು ವಾದದಲ್ಲಿ ಗೆದ್ದು ಪ್ರಶಸ್ತಿ ಸಂಕೇತವಾದ ಕಂಚಿನ ಢಕ್ಕೆಯನ್ನು ಶ್ರೀನಾಥ ಒಡೆದುಹಾಕಿದನು. ಅಣ್ಣಾಜಿ ಎಂಬ ಕನ್ನಡ ಕವಿ ತನ್ನ 'ಸೌಂದರ ವಿಳಾಸ'ದಲ್ಲಿ ಪಾಲ್ಕುರಿಕೆ ಸೋಮಾರಾಧ್ಯನನ್ನು ಸ್ತುತಿಸಿದ್ದಲ್ಲದೆ, "ಕ್ಷೋಣಿಯೊಳು ಕವಿರಾಜಮುಕುಟ ಮಣಿ ಶ್ರೀನಾಥ"ನೆಂದು ಕಾವ್ಯಾರಂಭದಲ್ಲಿ ಸ್ತುತಿಸಿರುವುದು ಗಮನಾರ್ಹವಾಗಿದೆ. ಪ್ರೌಢದೇವರಾಯನ ಕಾಲದಲ್ಲಿ ಇನ್ನೂ ಅನೇಕ ಕನ್ನಡ ತೆಲುಗು ಕವಿಗಳು ಕೃತಿ ರಚನೆ ಮಾಡಿ ಆ ಭಾಷೆಗಳ ಮಧುರ ಬಾಂಧವ್ಯದ ರಸಸೇತುಗಳಾಗಿದ್ದಾರೆ.

ಕನ್ನಡ ಭಾರತವನ್ನು ಬರೆದ ಕುಮಾರವ್ಯಾಸ ತಿಕ್ಕನಾಮಾತ್ಯನ ತೆಲುಗು ಭಾರತವನ್ನು ಅಲ್ಲಲ್ಲಿ ನೋಡಿರುವ ಸಾಧ್ಯತೆಯಿದೆ ಎಂದು ಶ್ರೀ ಎನ್. ವೆಂಕಟರಾವ್ ಅವರು ಬರೆದಿರುತ್ತಾರೆ.[೩೫] ಪಿಡುಪರ್ತಿ ಸೋಮನಾಥನು ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ದ್ವಿಪದಿ ರೂಪದಲ್ಲಿ ಚಂಪೂ ಪದ್ಧತಿಯಲ್ಲಿ ತೆಲುಗಿಗೆ ಅನುವಾದ ಮಾಡಿರುವುದು ಪ್ರಸ್ತುತವಾದ ವಿಷಯ. ವೀರಶೈವನಲ್ಲದಿದ್ದರೂ 'ಪ್ರಭುಲಿಂಗಲೀಲೆ'ಯ ವೇದಾಂತ ತತ್ತ್ವಕ್ಕೆ ಮಾರು ಹೋದ ಕೊಚ್ಚೆರ್ಲಕೋಟ ರಾಮಕವಿ, ನಡಕುದುಟಿ ರಾಮನ್ನ ಎಂಬವರೂ ಅದೇ ವಸ್ತುವನ್ನಾಧರಿಸಿ ಬರೆದಿದ್ದಾರೆ.

ಮುನ್ನಡೆದರೆ ವಿಜಯನಗರದವರೇ ಆದ ಸಾಳ್ವರ ಕಾಲದಲ್ಲಿ ಪಿಲ್ಲಲಮಜ್ರಿ ಪಿನವೀರನೆಂಬವನು ತೆಲುಗು 'ಜೈಮಿನಿ ಭಾರತ'ವನ್ನು ಸಾಳ್ವ ೧ನೆಯ ನರಸಿಂಹನಿಗೆ ಅಂಕಿತ ಮಾಡಿರುವುದನ್ನು ಗಮನಿಸಬಹುದು. ಲಕ್ಷ್ಮೀಶನ ಕಾಲ ನಿಶ್ಚಯವಾದರೆ ಯಾರು ಯಾರನ್ನು ನೋಡಿರುವ ಸಾಧ್ಯತೆಯಿದೆಯೆಂದು ತಿಳಿಯುವುದು.

ತುಳುವರ ಕಾಲ ತೆಲುಗು ಸಾಹಿತ್ಯದ ಸ್ವರ್ಣಯುಗ. ಕರ್ಣಾಟಕಾಂಧ್ರ ಸಾಹಿತ್ಯ ರಮಾರಮಣನಾದ ಶ್ರೀಕೃಷ್ಣದೇವರಾಯನ ಕಾಲಕ್ಕೆ ತೆಲುಗು ಸಾಹಿತ್ಯ ಪರಮೋಚ್ಚ ಸ್ಥಿತಿಗೆ ತಲುಪಿತು. ಕೃಷ್ಣದೇವರಾಯನ ಆಂಧ್ರಾಭಿಮಾನ ಅವನನ್ನು 'ಆಂಧ್ರಭೋಜ' ನೆಂಬ ಬಿರುದಿಗೆ ಅರ್ಹನನ್ನಾಗಿ ಮಾಡಿದ್ದರೂ ಆತ ತೆಲುಗು ಭಾಷೆಯಲ್ಲಿ ಸ್ವತಃ ಕವಿ

ಯಾಗಿದ್ದರೂ ಕನ್ನಡ ಕವಿಗಳಿಗೂ ಆತ ಪೋಷಕನಾಗಿದ್ದುದು ಸುವಿದಿತವಾದ ವಿಷಯ.

ಶ್ರೀಕೃಷ್ಣರಾಯನ ಆಸ್ಥಾನದಲ್ಲಿದ್ದವರಲ್ಲಿ 'ಆಂಧ್ರಕವಿತಾ ಪಿತಾಮಹ'ನೆನಿಸಿದ ಅಲ್ಲಸಾನಿ ಪೆದ್ದನ 'ಮನುಚರಿತ್ರ'ದ ಕರ್ತೃ. ಇವನು ಕನ್ನಡ ಬಲ್ಲವನೆಂಬುದು ಸ್ವಾರಸ್ಯ ಕರ ಸನ್ನಿವೇಶದಿಂದ ತಿಳಿಯುತ್ತದೆ. ಕೃಷ್ಣದೇವರಾಯ ಕಾವ್ಯರಚನೆ ಮಾಡುವಂತೆ ಕೇಳಿ ದಾಗ ಪೆದ್ದನ ಈ ಕೆಳಗಿನ ಪದ್ಯವನ್ನು ಹೇಳಿದನಂತೆ:

ನಿರುಪಹತಿಸ್ಥಲಂಬು ರಮಣೀಪ್ರಿಯದೂತಿಕ ತೆಚ್ಚಿಯಿಚ್ಚು ಕ
ಪ್ಪುರವಿಡೆ ಮಾತ್ಮಕಿಂಪಯಿನ ಭೋಜನ ಮುಯ್ಯೆಲಮಂಚ ಮೊಪ್ಪುತ
ಪ್ಪರಯು ರಸಜ್ಞು ಲೂಹ ತೆಲಿಯಂಗಲ ಲೇಖಕಪಾಠಕೋತ್ತಮುಲ್
ದೊರಕಿನಗಾನಿ ಯೂರಕ ಕೃತುಲ್ ರಚಿಯಿಂಪುಮಟನ್ನ ಶಕ್ಯಮೇ ॥

ಮೇಲಿನ ಪದ್ಯಕ್ಕೆ ಸಂವಾದಿಯಾದುದು ಮಲ್ಲಿಕಾರ್ಜುನ ಕವಿಯ 'ಸೂಕ್ತಿ ಸುಧಾರ್ಣವ' ದಲ್ಲಿರುವ ಪೀಠಿಕಾ ಪ್ರಕರಣದ ಪದ್ಯ:

ನಿರುಪಹತಿಸ್ಥಲಂ ಮೃದುತರಾಸನಮೊಳ್ಪೆಣಿಸಿಂಪುಪಂಬುಲಂ
ನೆರಪಿದ ಪುಸ್ತಕಪ್ರತತಿ ಲೇಖಕವಾಚಕಸಂಗ್ರಹಂ ನಿರಂ
ತರಗೃಹನಿಶ್ಚಿತಸ್ಥಿತಿ ವಿಚಾರಕಸಂಗತಿ ಸತ್ಕಳತ್ರಸಾ
ದರತೆಯನುಳ್ಳ ಸತ್ಕವಿಯುಮೀಸುವೊಡಾಗದೆ ಕಾವ್ಯವಾರ್ಧಿಯಂ ॥ ೧-೭೦

ಈ ಪದ್ಯವೂ ಪೆದ್ದನನ ಪೂರ್ವೋಕ್ತಪದ್ಯವೂ ಸದೃಶವಾದವು. 'ಸೂಕ್ತಿ ಸುಧಾರ್ಣ ವ'ದ ಪದ್ಯ ಯಾವ ಕಾವ್ಯದ್ದೋ ತಿಳಿಯದು. ಪೆದ್ದನ ನೇರವಾಗಿ ಈ ಸಂಕಲನದಿಂದ ಪದ್ಯವನ್ನೆತ್ತಿ ಅನುವಾದಿಸಿದನೇ, ಅದು ದೊರೆಯುತ್ತಿದ್ದ ಮೂಲದಿಂದಲೇ ಎತ್ತಿ ಅನು ವಾದಿಸಿದನೇ, ಅಥವಾ ಸಂಸ್ಕೃತ ಭಾಷೆಯಲ್ಲಿರಬಹುದಾದ ಸಮಾನ ಮೂಲವೊಂದ ರಿಂದ ಇಬ್ಬರೂ ತಮತಮಗೆ ತೋರಿದಂತೆ ಅನುವಾದಮಾಡಿರಬಹುದೇ ಎಂಬುದು ನಿಶ್ಚಯವಾಗದ ಸಂಗತಿ. ಆದರೆ ಈ ಪದ್ಯದ ಕನ್ನಡ, ತೆಲುಗು ರೂಪಗಳ ಸಾದೃಶ್ಯ ಮಾತ್ರ ಕುತೂಹಲಕರವಾದ್ದು.

'ಪಾರಿಜಾತಾಪಹರಣ'ವೆಂಬ ಕಾವ್ಯವನ್ನು ರಚಿಸಿದ, 'ಅಷ್ಟದಿಗ್ಗಜ'ಗಳಲ್ಲಿ ಒಬ್ಬನಾದ ನಂದಿತಿಮ್ಮನ ರುದ್ರಭಟ್ಟನ 'ಜಗನ್ನಾಥ ವಿಜಯ'ಕ್ಕೆ ಋಣಿಯಾಗಿರುವುದನ್ನು ಹಿಂದೆಯೇ ಪ್ರಸ್ತಾಪಿಸಿದೆ.

ತಿಮ್ಮಣ್ಣನೆಂಬ ಕನ್ನಡ ಕವಿಯೂ ಅಷ್ಟದಿಗ್ಗಜಗಳಲ್ಲಿ ಒಬ್ಬನಾಗಿದ್ದಿರಬಹುದು. ಇವನ ಕೃತಿ 'ಕೃಷ್ಣರಾಜ ಭಾರತ', ಭಾಮಿನೀ ಷಟ್ಪದಿಯಲ್ಲಿ ರಚಿತವಾದ್ದು, ತಿಕ್ಕನಾ ಮಾತ್ಯನ ತೆಲುಗು ಭಾರತಕ್ಕೆ ಬಹುಪಾಲು ಋಣಿಯಾಗಿದೆ. ಕೆಲವು ಭಾಗಗಳು ತೆಲುಗು ಭಾರತದ ಅನುವಾದಗಳೇ ಆಗಿವೆ ಎಂಬುದನ್ನು ಕರ್ಣಾಟಕ ಕವಿಚರಿತೆಕಾರರು ಹಿಂದೆಯೇ ಗಮನಿಸಿದ್ದಾರೆ.

ಆರವೀಡು ಮನೆತನದವರು ಸಹ ತೆಲುಗು ಕವಿಗಳಿಗೆ ಉದಾರವಾದ ಆಶ್ರಯ ವಿತ್ತರು. 'ರಾಮರಾಜ ಭೂಷಣ'ನೆಂಬ ಬಿರುದುಳ್ಳ ಭಟ್ಟುಮೂರ್ತಿ 'ವಸುಚರಿತ್ರ' ಎಂಬ

ತನ್ನ ಗ್ರಂಥವನ್ನು ಅರಸನಾದ ತಿರುಮಲರಾಯನಿಗೆ ಅರ್ಪಿಸಿದ್ದಾನೆ. ಆಶ್ರಯಪಡೆದ, ಕೃತಿಗಳನ್ನು ತಮ್ಮ ಆಶ್ರಿತರಿಗೆ ಅಂಕಿತಮಾಡಿದ, ಪ್ರೋತ್ಸಾಹದಿಂದ ಕೃತಿ ರಚನೆಗೆ ತೊಡಗಿದ ಇನ್ನೂ ಹಲವು ಕವಿಗಳು ಈ ಕಾಲಕ್ಕೆ ಸೇರಿದವರು. ಕುಮಾರ ಧೂರ್ಜಟಿ, ಮಲ್ಲನ್ನ ಮುಂತಾದವರನ್ನು ಇಲ್ಲಿ ನೆನೆಯಬಹುದು.

ಕ್ರಿ.ಶ. ಸು. ೧೫೬೦ರಲ್ಲಿದ್ದ ಸಿದ್ಧರಾಮನೆಂಬ ವೀರಶೈವಕವಿ ತೆಲುಗಿನಲ್ಲಿ 'ಪ್ರಭುದೇವರ ವಾಕ್ಯಮು' ಎಂಬ ಒಂದು ಶೈವವೇದಾಂತ ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ 'ಪಿಂಡಚಕ್ರ ನಿರ್ಣಯ'ವೆಂದೂ ಹೆಸರಿದೆ. ಅಲ್ಲಮನ ತತ್ತ್ವೋಪದೇಶವನ್ನು ಈ ಗ್ರಂಥದಲ್ಲಿ ನಿರೂಪಿಸಿದೆ. ಈತನೇ ಬಸವಕಾಲದ ವಚನಕಾರನಾದ ಸಿದ್ಧರಾಮನ ಹೆಸರಿನಲ್ಲಿ ಒಂದು ಶತಕವನ್ನು ಬರೆದಿದ್ದಾನೆ. ಪ್ರತಿಯೊಂದು ಪದ್ಯದ ಕೊನೆಯಲ್ಲಿಯೂ 'ಚಿತ್ಕಳಾಧಾಮ ಶ್ರೀಗುರು ಸಿದ್ಧರಾಮ' ಎಂದಿರುತ್ತದೆ.

ಮೈಸೂರರಸ ಚಿಕ್ಕದೇವರಾಯನ ಕಾಲಕ್ಕೆ ಬರುವ ಮುಂಚೆ ಹೆಸರಿಸಬೇಕಾದ ಇನ್ನೊಬ್ಬ ಕವಿ ಎಂದರೆ ಬೆಂಗಳೂರು ನಿರ್ಮಾಪಕ ಹಿರಿಯ ಕೆಂಪೇಗೌಡ. ಕ್ರಿ.ಶ. ೧೫೧೩ರಿಂದ ೧೫೬೯ರ ವರೆಗೂ ಶಿವನಸಮುದ್ರ ಪ್ರಾಂತ್ಯವನ್ನು ಆಳಿದ ಕೆಂಪೇಗೌಡ ತೆಲುಗಿನಲ್ಲಿ ಮೊದಲನೆಯ ಯಕ್ಷಗಾನವಾದ 'ಗಂಗಾ ಗೌರೀ ವಿಲಾಸ'ದ ಕರ್ತೃವಾಗಿ ಖ್ಯಾತನಾಗಿದ್ದಾನೆ. ಇದು ಅಲಸೂರಿನ ಸೋಮೇಶ್ವರನಿಗೆ ಅಂಕಿತವಾಗಿದೆ.

ಇದೇ ಸಮಯದಲ್ಲಿ ವೇಮನ ಮತ್ತು ಸರ್ವಜ್ಞರ ಬಗೆಗೆ ಎರಡು ಮಾತು ಹೇಳಬೇಕು. ವೇಮನನನ್ನು ಎಲ್ಲ ವಿಧದಿಂದಲೂ ಹೋಲುವವನು ಸರ್ವಜ್ಞ. ಇಬ್ಬರ ಕಾಲವೂ ಅನಿಶ್ಚಿತ. ಇಬ್ಬರೂ ಸ್ವಶಕ್ತಿಯಲ್ಲಿ ನಂಬಿಕೆಯಿದ್ದವರು. ಇಬ್ಬರೂ ಸಹಜ ಕವಿತಾಶಕ್ತಿ ಸಂಪನ್ನರು. 'ಸರ್ವಜ್ಞವೇಮನ ಸಂವಾದ'ವೆಂಬ ಅಜ್ಞಾತ ಕಾಲ ಕರ್ತೃಕವಾದ ಪುಸ್ತಕದಲ್ಲಿ ಇಬ್ಬರೂ ಒಬ್ಬರೊಡನೆ ಒಬ್ಬರು ಮಾತಾಡಿದ ಹಾಗಿರುವ ಪದ್ಯಗಳು ಕೆಲವಿವೆ. ಉದಾಹರಣೆಗೆ:

ಕಲ್ಲುಪ್ಪು ಕರ್ಪುರವು ಸೊಲ್ಲೆರಡು ಧಾತೊಂದು
ಬಲ್ಲನೊಳ್ಳಿದನು ರೂಪೊಂದು ಗುಣದೊಳಗೆ
ಎಲ್ಲ ಅಂತರವು ಸರ್ವಜ್ಞ॥

ಉಪ್ಪು ಕಪ್ಪುರಂಬು ನೊಕ್ಕ ಪೋಲಿಕನುಂಡು
ಚೂಡ ಚೂಡ ರುಚುಲ ಜಾಡ ವೇರು
ಪುರುಷುಲಂದು ಪುಣ್ಯಪುರುಷುಲು ವೇರಯಾ
ವಿಶ್ವದಾಭಿರಾಮ ವಿನುರ ವೇಮ॥

ಇಂಥ ನಿಕಟಸಾಮ್ಯದ ಪದ್ಯಗಳು ಇನ್ನೂ ಇವೆ. ಯಾರನ್ನು ಯಾರು ಅನುಸರಿಸಿದರೋ ತಿಳಿಯದು. ವೇಮನನಿಗೆ ಕನ್ನಡ ಜನರ ಸಹವಾಸವಿತ್ತೆಂದು ಹೇಳಲು ಗ್ರಾಂಥಿಕ ಆಧಾರಗಳಿಲ್ಲ; ಆದರೆ ಸರ್ವಜ್ಞನ ವಚನಗಳಲ್ಲಿ ಅಲ್ಲಲ್ಲಿ ಬಂದಿರುವ ತೆಲುಗು ಜನರ ಪ್ರಸ್ತಾಪ ಆತ ತೆಲುಗುದೇಶದಲ್ಲಿ ಕೂಡ ತಿರುಗಾಡಿದನೆಂದು ಊಹಿಸಲು ಅವಕಾಶ

ಕೊಡುತ್ತದೆ. ಕನ್ನಡನಾಡಿನಲ್ಲಿ ತೆಲುಗರಿರುವಷ್ಟು ತೆಲುಗು ನಾಡಿನಲ್ಲಿ ಕನ್ನಡಿಗರಿಲ್ಲ. ಆದುದರಿಂದಲೇ ಪ್ರಾಯಶಃ ವೇಮನನ ಪದ್ಯಗಳಿಗೆ ಕರ್ಣಾಟಕದಲ್ಲಿರುವಷ್ಟು ಪ್ರಚಾರ ಆಂಧ್ರದಲ್ಲಿ ಸರ್ವಜ್ಞನ ಪದಗಳಿಗಿಲ್ಲ. "ಈ ಕಾರಣದಿಂದ ವೇಮನನ ಗಾಳಿಯೇ ಸರ್ವಜ್ಞನ ಮೇಲೆ ಬೀಸಿರಬೇಕು ಎನ್ನಬಹುದು. ಆದರೆ ಮುಂದುವರಿದು ಈ ಮಾತನ್ನು ನಿರ್ಧರಿಸುವುದು ಸಾಹಸವಾದೀತು. ಅಲ್ಲದೆ ಇವರಿಬ್ಬರೂ ಯಾರಿಗೆ ಯಾರಾದರೂ ಗುರುವಾಗಬಲ್ಲ ಸಾಮರ್ಥ್ಯವಂತರು ಎಂಬುದರಲ್ಲಿ ಏನೂ ಸಂದೇಹವಿಲ್ಲ".[36] ಕುಮಾರವ್ಯಾಸ ಕವಿಯ ಪ್ರಭಾವ ವ್ಯಾಪ್ತಿಯ ಕಾಲದಲ್ಲಿ ಕನ್ನಡ ತೆಲುಗು ಸಾಹಿತ್ಯಗಳ ಬಾಂಧವ್ಯ ಹೆಚ್ಚು ನಿಕಟವರ್ತಿಯಾಗಿದೆ ಎನ್ನಲು ಈ ಸಾಕ್ಷ್ಯಗಳು ಪ್ರಾಯಶಃ ಸಾಕಾಗುತ್ತವೆ.

ಮೈಸೂರರಸು ಚಿಕ್ಕದೇವರಾಯನ ಕಾಲದಲ್ಲಿ ಕನ್ನಡಸಾಹಿತ್ಯದ ಜೊತೆಗೂಡಿ ತೆಲುಗು ಸಾಹಿತ್ಯ ಮೈಸೂರು ರಾಜ್ಯದಲ್ಲೂ ತಕ್ಕಮಟ್ಟಿಗೆ ಬೆಳೆದಿದೆ. ವಿಜಯನಗರ ಸಾಮ್ರಾಜ್ಯದ ಪತನಾನಂತರ ತೆಲುಗು ಸಾಹಿತ್ಯ ತಂಜಾವೂರು, ಮಧುರೆ, ಮೈಸೂರು ಪ್ರದೇಶಗಳಲ್ಲಿ ಆಶ್ರಯವನ್ನು ಪಡೆಯಿತು. ಚಿಕದೇವರಾಯನನ್ನು ಕೀರ್ತಿಸುವ ಕೆಲವು ಅಜ್ಞಾತಕರ್ತೃಕ ತೆಲುಗು ಗ್ರಂಥಗಳು ಸಿಕ್ಕಿವೆ: 'ಚಿಕದೇವರಾಯ ವಿಲಾಸ'ವೆಂಬ ಒಂದು ತೆಲುಗು ಯಕ್ಷಗಾನವೇ ಇದೆ. ಹೀಗೆಯೇ ಕಂಠೀರವ ನರಸರಾಜನ (ಮೂಕರಸು) ಹೆಸರಿನಲ್ಲಿ ಕೂಡ ತೆಲುಗು ಕೃತಿಗಳಿವೆ. ಈತನು ಸಂಸ್ಕೃತ, ಪ್ರಾಕೃತ, ಕರ್ಣಾಟ, ಆಂಧ್ರ ಮತ್ತು ದ್ರಾವಿಡ ಭಾಷೆಗಳಲ್ಲಿ ಪಂಡಿತನಾಗಿದ್ದನಂತೆ. ಲಭ್ಯವಾದ ಈತನ ಕೃತಿಗಳಲ್ಲಿ 'ಕೊಜಿನಂಜಿಕಟ್ಲೆ', 'ಪಂಚಾಯುಧಕಟ್ಲೆ', 'ಲಕ್ಷ್ಮೀವಿಲಾಸಮು', 'ವಸಂತೋತ್ಸವ ವಿಲಾಸಮು' ಮುಂತಾದ ೧೪ ತೆಲುಗು ಭಾಷೆಯ ಕೃತಿಗಳಾಗಿವೆ. ಈ ಕೃತಿಗಳಲ್ಲಿ ಗದ್ಯದ ಜೊತೆಗೆ ದ್ವಿಪದಿ, ಸೀಸ, ಮತ್ತೇಭ, ದರುವು, ತ್ರಿಪುಟ ಮುಂತಾದ ಛಂದೋರಚನೆಗಳಿವೆ. ತೆಲುಗಿನಲ್ಲೇ ಬರೆದ ಸಾಂಗತ್ಯವೂ ಇದೆ. ಅಲ್ಲಲ್ಲಿ ಪ್ರಾಕೃತ, ಕನ್ನಡಗಳ ಮಿಶ್ರಣವಿದೆ.

ಚಿಕ್ಕದೇವರಾಯನ ದಂಡನಾಥನಾದ ಕಳಲೆ ವೀರರಾಜನೂ ಆತನ ಪುತ್ರನಾದ ಕಳಲೆ ನಂಜರಾಜನೂ (ಕ್ರಿ.ಶ. ೧೭೩೯–೫೯) ಸಂಸ್ಕೃತಾಂಧ್ರ ಕರ್ಣಾಟಾದಿ ಭಾಷೆಗಳಲ್ಲಿ ಸಮಾನ ಪ್ರಾವೀಣ್ಯವಿದ್ದ ಕವಿಗಳು. ಆಲೂರಿ ನರಸಿಂಹ ಕವಿಯ 'ನಂಜರಾಜ ಯಶೋಭೂಷಣ'ವೆಂಬ ಸಂಸ್ಕೃತ ಭಾಷೆಯ ಅಲಂಕಾರ ಗ್ರಂಥ ಕಳಲೆ ನಂಜರಾಜನಿಗೆ ಅಂಕಿತವಾದ್ದು. ನಂಜರಾಜನ ತೆಲುಗು ಕೃತಿಗಳಲ್ಲಿ 'ಹಾಲಾಸ್ಯಮಾಹಾತ್ಮ್ಯಮು', 'ಕಾಶೀ ಮಹಿಮಾರ್ಥ ದರ್ಪಣಮು' ಮೊದಲಾದುವಿವೆ. ಕನ್ನಡದಲ್ಲೂ ಈತ 'ಹಾಲಾಸ್ಯ ಮಹಾತ್ಮೆ', 'ಗರಳಪುರೀ ಮಹಿಮಾದರ್ಶನ' ಮೊದಲಾದ ಮಾಹಾತ್ಮ್ಯ ಗ್ರಂಥಗಳನ್ನು ರಚಿಸಿದ್ದಾನೆ. ಈಚೆಗೆ ಮುಮ್ಮಡಿ ಕೃಷ್ಣರಾಜನ ಕಾಲದಲ್ಲೂ ಕೆಲವರು ತೆಲುಗು ಕವಿಗಳು ಇದ್ದು ಕಾವ್ಯವನ್ನು ಬರೆದರು. ಮುಮ್ಮಡಿ ಕೃಷ್ಣರಾಜನ ಆಸ್ಥಾನ ಕವಿಯಾದ ಕುಂದಲಕುರ್ಕಿ ಚಂದ್ರಕವಿ 'ಕೃಷ್ಣಭೂಪಾಲೀಯಮು' ಎಂಬ ಅಲಂಕಾರ ಗ್ರಂಥವನ್ನು ಬರೆದಿರುತ್ತಾನೆ.

## ಆಧುನಿಕ ಕಾಲ

ಪಾಶ್ಚಾತ್ಯರು ನಮ್ಮ ದೇಶದಲ್ಲಿ ಕಾಲಿಟ್ಟ ನಂತರ ದೇಶಭಾಷೆಗಳ ಪರಸ್ಪರ ಸಂಪರ್ಕ ಗಾಢವಾಯಿತು. ದಿನವಹಿ ಬೆಳೆಯುತ್ತಿರುವ ನಾಗರಿಕತೆ ಕೂಡ ಭಾಷೆಗಳ ನಡುವೆ ಸಂಬಂಧ ಬಾಂಧವ್ಯಗಳನ್ನು ಬೆಸೆಯಲು ನೆರವಾಯಿತು. ಹೀಗಾಗಿ ನವೀನ ಯುಗದಲ್ಲಿ ಕನ್ನಡ ತೆಲುಗುಗಳ ಸಂಪರ್ಕ ಇನ್ನೂ ಹತ್ತಿರವಾಯಿತು. ಭಾರತೀಯ ಜೀವನವನ್ನು ಪ್ರೇರಿಸಿದ ರಾಷ್ಟ್ರೀಯ ಚಳವಳಿ, ದೇಶೀಯ ಭಾಷೆಗಳ ಮೇಲೆ ಪ್ರಭಾವ ಬೀರಿದ ಇಂಗ್ಲಿಷ್ ಭಾಷೆ ಸಾಹಿತ್ಯಗಳು, ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಇವೆಲ್ಲಾ ಒಂದು ಹೊಸ ಯುಗವನ್ನು ನಿರ್ಮಿಸಿವೆ. ಆಧುನಿಕ ಸಾಹಿತ್ಯದ ಅರುಣೋದಯ ಕಾಲದಲ್ಲಿ ಮುಖ್ಯವಾಗಿ ಹೊರಬಂದ ಗ್ರಂಥಗಳು ಕ್ರಿಸ್ತ ಮಿಶನರಿಗಳಿಂದ ಅನುವಾದ ಮಾಡಲಾಗಿರುವ ಧಾರ್ಮಿಕ ಗ್ರಂಥಗಳು. ಕೆಲವು ತೆಲುಗಿನಿಂದ, ಕೆಲವು ತಮಿಳಿನಿಂದ ಕನ್ನಡಕ್ಕೆ ಕ್ರೈಸ್ತ ಧಾರ್ಮಿಕ ಗ್ರಂಥಗಳು ಅನುವಾದವಾಗಿವೆ. ಕಾಲ್ಡ್‌ವೆಲ್ ಮಹಾಶಯನ 'ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ' ದ್ರಾವಿಡ ಭಾಷೆಗಳ ಪರಸ್ಪರ ಸಂಬಂಧವನ್ನು ನಿರೂಪಿಸುವ ಮಹತ್ತ್ವದ ಕೃತಿಯಾಗಿದ್ದು, ದ್ರಾವಿಡ ಭಾಷೆಗಳಿಗೆ ೧೯ನೆಯ ಶತಮಾನದ ಮಹತ್ತರ ಕೊಡುಗೆಯಾಗಿದೆ.

೧೯ನೆಯ ಶತಮಾನದ ಪ್ರಥಮ ಭಾಗದಲ್ಲಿ ಅನೇಕ ತೆಲುಗು ಕನ್ನಡ ಗ್ರಂಥಗಳು ಪರಸ್ಪರ ಬಾಂಧವ್ಯಕ್ಕೆ ಒಳಗಾಗಿವೆ; ಪರಸ್ಪರ ಅನುವಾದಗಳನ್ನು ಪಡೆದಿವೆ. ಹಾಸನ ಜಿಲ್ಲೆಯ ಅರಕಲಗೂಡು ಕೃಷ್ಣಪ್ಪನವರು ತೆಲುಗಿನಲ್ಲಿ ವೇದಾಂತ ಧರ್ಮಬೋಧಕವಾದ ಎರಡು ಗ್ರಂಥಗಳನ್ನು ಬರೆದುದು ಗಮನಾರ್ಹ. ಇದು ಕನ್ನಡ ದೇಶದಲ್ಲಿ ತೆಲುಗು ಆಳವಾಗಿಯೂ ಆತ್ಮೀಯವಾಗಿಯೂ ಹಬ್ಬಿದುದಕ್ಕೆ ಸಂಕೇತ.

೧೯ನೆಯ ಶತಮಾನದಿಂದ ಈಚೆಗೆ ಗಮನಿಸಲಾದ ಕನ್ನಡ-ತೆಲುಗು ಸಾಹಿತ್ಯಗಳ ಸಂಬಂಧಗಳನ್ನು ಕೆಲವು ಶೀರ್ಷಿಕೆಗಳ ಕೆಳಗೆ ಸ್ಥೂಲವಾಗಿ ವಿವೇಚಿಸಬಹುದು. ಆಧುನಿಕ ಸಾಹಿತ್ಯದ ವೈವಿಧ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ವಿಭಾಗ ಮಾಡಲಾಗಿದೆ :

ಕಾವ್ಯ : ಈ ಕ್ಷೇತ್ರದಲ್ಲಿ ನಡೆದಿರುವ ಕೆಲಸ ಬಹಳ ಕಡಮೆ. ತೆಲುಗಿನ ಪ್ರಸಿದ್ಧ ಕವಿಗಳಾದ ಗುರಜಾಡ ಅಪ್ಪಾರಾವು, ಶ್ರೀಶ್ರೀ, ಕೃಷ್ಣಶಾಸ್ತ್ರಿ ಮುಂತಾದವರ ಕವಿತೆಗಳು ಕನ್ನಡಕ್ಕೆ ಇನ್ನೂ ಬಂದಿಲ್ಲ. ೧೯ನೆಯ ಶತಮಾನದಲ್ಲಿದ್ದ ಉಲಚನಾಡು ವೆಂಕಟರಮಣ ಕವಿ ಕನ್ನಡದಲ್ಲಿ 'ಗಯೋಪಾಖ್ಯಾನ'ವನ್ನೂ ತೆಲುಗಿನಲ್ಲಿ 'ವಾಸಿಷ್ಠ ರಾಮಾಯಣಮು' ಎಂಬುದನ್ನೂ ಬರೆದಿದ್ದಾರೆ. ತೆಲುಗಿನಲ್ಲೇ ಅವರ ಸ್ವತಂತ್ರ ಗದ್ಯಗ್ರಂಥ 'ಅಧ್ಯಾತ್ಮ ರಾಮಾಯಣ'. ಸಾಧುಪಲ್ಲಿ ಚಂದ್ರಶೇಖರ ಶಾಸ್ತ್ರಿ (ಕ್ರಿ.ಶ. ೧೮೫೦) ಕನ್ನಡದಲ್ಲಿ ಸ್ವತಂತ್ರವಾಗಿ 'ದ್ರೌಪದೀ ವಸ್ತ್ರಾಪಹರಣ', 'ಮಂದಾರವಲ್ಲೀ ಪರಿಣಯ'ಗಳನ್ನೂ ಪೆದ್ದನನ ತೆಲುಗು 'ಮನುಚರಿತ್ರ'ದ ಕನ್ನಡಾನುವಾದವನ್ನೂ ಕೊಟ್ಟಿದ್ದಾರೆ. ಮಾಲೂರಿನ ಶ್ರೀನಿವಾಸಯ್ಯಂಗಾರ್ ತೆಲುಗಿನ ಜನಪ್ರಿಯ ಕಾವ್ಯವಾದ ಬಮ್ಮೆರ ಪೋತನಾಮಾತ್ಯನ ಭಾಗವತದ ಕೆಲವು ಕಥಾಂಶಗಳನ್ನು ವಿಸ್ತರಿಸಿ 'ರುಕ್ಮಿಣೀ

ಪರಿಣಯು'ವೆಂಬ ಚಂಪೂಕಾವ್ಯವನ್ನು ಕನ್ನಡದಲ್ಲಿ ಬರೆದಿರುವರು.[37]

೨೦ನೆಯ ಶತಮಾನದಲ್ಲಿ ವೇಮನ ಸರ್ವಜ್ಞರ ವಚನಗಳ ಪರಸ್ಪರ ಅನುವಾದಗಳು, ಸಂಶೋಧನೆಗಳು ನಡೆದಿವೆ. ದಿ. ಕಲುಗೋಡು ಅಶ್ವತ್ಥರಾವು ಅವರು ವೇಮನ ಪದ್ಯಗಳ ಕನ್ನಡ ಅನುವಾದವನ್ನೂ ಡಿ. ವಿ. ಗುಂಡಪ್ಪನವರ 'ಮಂಕುತಿಮ್ಮನ ಕಗ್ಗ'ದ ತೆಲುಗು ಅನುವಾದವನ್ನೂ ಮಾಡಿದ್ದಾರೆ. ಬಸವಣ್ಣನವರ ವಚನಗಳ ಕೆಲವು ತೆಲುಗು ಅನುವಾದ ಗಳು ಆಗಿದ್ದು, ಈ ಬಗೆಯ ವ್ಯಾಪಕ ಪ್ರಮಾಣದ ಭಾಷಾಬಾಂಧವ್ಯ ಸಂಶೋಧನೆಗಳು ಸಾಗುತ್ತಿವೆ. ಕನ್ನಡ ಭಾಷೆಯ ನವೋದಯ ಯುಗದ ಹಿರಿಯ ಮತ್ತು ಕಿರಿಯ ಕವಿಗಳಲ್ಲಿ ಕೆಲವರ ರಚನೆಗಳು ತೆಲುಗಿಗೆ ಅನುವಾದವಾಗಿ ಪತ್ರಿಕೆಗಳಲ್ಲಿ ಪ್ರಚಾರ ಗೊಳ್ಳುತ್ತಿವೆ. ಆದರೆ ಇದು ಸಾಕಷ್ಟು ಪ್ರಮಾಣದಲ್ಲಿ ಆಗುತ್ತಿರುವಂತೆ ತೋರುವುದಿಲ್ಲ.

ಕಾದಂಬರಿ : ತೆಲುಗಿನಲ್ಲೂ ಕನ್ನಡದಲ್ಲೂ ಅತ್ಯಂತ ಜನಪ್ರಿಯ ಸಾಹಿತ್ಯಪ್ರಕಾರ ವೆಂದರೆ ಕಾದಂಬರಿಯೇ. ತೆಲುಗಿನಲ್ಲಿ ದಿ. ವೆಂಕಟಪಾರ್ವತೀಶಕವುಲು ಎಂಬುವರು ತಾವು ವಂಗ ಕಾದಂಬರಿಗಳನ್ನು ಬರೆಯುವಾಗ ಹೆಚ್ಚಾಗಿ ಬಿ. ವೆಂಕಟಾಚಾರ್ಯರು ನಡೆದ ದಾರಿಯಲ್ಲೇ ನಡೆದು, ಅವರ ಕನ್ನಡ ಕಾದಂಬರಿಗಳನ್ನೇ ಆಧಾರವಾಗಿಟ್ಟುಕೊಂಡರೆಂದು ತೋರುತ್ತದೆ. ತೆಲುಗು ಆಧುನಿಕ ಸಾಹಿತ್ಯದ ಆದ್ಯಪ್ರವರ್ತಕರಾದ ವೀರೇಶಲಿಂಗಂ ಪಂತುಲು ಅವರ ಗ್ರಂಥಗಳು ಬಹುಸಂಖ್ಯಾತವಾಗಿ ಕನ್ನಡಕ್ಕೆ ಅನುವಾದವಾಗಿದ್ದು, ಅವುಗಳಲ್ಲಿ ಅವರ ಕಾದಂಬರಿಗಳೂ ಸೇರಿವೆ. ಪಂತುಲು ಅವರ 'ಸತ್ಯವತೀ ಚರಿತ್ರೆ' ವನ್ನು ಅನಂತನಾರಾಯಣಶಾಸ್ತ್ರಿ ಅವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. 'ವಿವೇಕ ಚಂದ್ರಿಕೆ'ಯನ್ನು ಬೆಳ್ಳಾವೆ ಸೋಮನಾಥಯ್ಯ, 'ಸತ್ಯರಾಜ ಪೂರ್ವದೇಶ ಯಾತ್ರೆ'ಯನ್ನು ಬೆನಗಲ್ ರಾಮರಾವ್ ಅನುವಾದಿಸಿದ್ದಾರೆ. ರೆಂಟಾಲ ವೆಂಕಟಸುಬ್ಬ ರಾವ್ ಅವರು ಬರೆದ 'ಕೇಸರಿ ವಿಲಾಸ'ವೆಂಬ ಕನ್ನಡ ಕಾದಂಬರಿ (೧೮೬೫) ತೆಲುಗಿ ನಲ್ಲೂ ಬರೆಯಲ್ಪಟ್ಟಿದೆ. ಕೆಲವರ ಅಭಿಪ್ರಾಯದಲ್ಲಿ ಈ ಕಾದಂಬರಿಯೇ ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿ. ಇದು ತೆಲುಗು, ಕನ್ನಡ ಭಾಷೆಗಳಲ್ಲಿ ಏಕ ಕಾಲಕ್ಕೆ ಪ್ರಕಟವಾಯಿತು. ಇವರ 'ಆನಂದದೀಪಿಕೆ' ಎಂಬ ಇನ್ನೊಂದು ಕಾದಂಬರಿಯೂ ತೆಲುಗಿನಿಂದ ಕನ್ನಡಕ್ಕೆ ಅನುವಾದವಾಗಿದೆ. ದಿ. ತ್ರಿವೇಣಿ ಅವರ ಕನ್ನಡ ಕಾದಂಬರಿಗಳ ಅನುವಾದಗಳನ್ನು ಒಳಕೊಂಡಂತೆ ಕೆ. ವಿ. ಅಯ್ಯರ್, ಶ್ರೀರಂಗ, ವೀರಕೇಸರಿ ಸೀತಾರಾಮ ಶಾಸ್ತ್ರಿ ಮೊದಲಾದವರ ಹತ್ತಾರು ಕಾದಂಬರಿಗಳೂ ತೆಲುಗಿಗೆ ಅನುವಾದಗೊಂಡಿವೆ. ಹೊಸ ದೃಷ್ಟಿಯ, ಹೊಸ ಪೀಳಿಗೆಯ ಲೇಖಕರ ಖ್ಯಾತ ಕನ್ನಡ ಕಾದಂಬರಿಗಳೂ ಹೀಗೆಯೇ ತೆಲುಗಿಗೆ ಅನುವಾದಗೊಳ್ಳುತ್ತಿವೆ, ಪ್ರಕಟವಾಗುತ್ತಿವೆ. ಆ ಸಾಹಿತ್ಯಪ್ರಕಾರ ಎರಡು ಭಾಷೆಯ ಜನರನ್ನೂ ಅವರ ಜನಜೀವನಗಳ ನಿಕಟ ಪರಿಚಯವನ್ನು ಪರಸ್ಪರವಾಗಿ ಮಾಡಿಸುವಲ್ಲಿ ಯಶಸ್ವಿಯಾಗುವ ಸೂಚನೆಗಳನ್ನು ತೋರುತ್ತಿದೆ.

ಹಾಗೆಯೇ ತೆಲುಗಿನ ವಿಶ್ವನಾಥ ಸತ್ಯನಾರಾಯಣ, ರಾ. ವಿಶ್ವನಾಥಶಾಸ್ತ್ರಿ, ನೋರಿ ನರಸಿಂಹಶಾಸ್ತ್ರಿ, ಚಲಂ, ಅಡವಿ ಬಾಪಿರಾಜು ಮುಂತಾದ ತೆಲುಗು ಕಾದಂಬರಿ

1960



ಗಾರರ, ಕಥೆಗಾರರ ರಚನೆಗಳು ಕನ್ನಡಕ್ಕೆ ಅನುವಾದವಾಗಿ ಪತ್ರಿಕೆಗಳ, ಪುಸ್ತಕಗಳ ಮೂಲಕ ಜನಪ್ರಿಯವಾಗಿವೆ.

ನಾಟಕ: ಧಾರವಾಡ ನಾಟಕ ಕಂಪೆನಿಯು ತೆಲುಗು ಸ್ವತಂತ್ರ ನಾಟಕಗಳ ಉಗಮಕ್ಕೆ ಕಾರಣವಾಯಿತೆಂದು ಹೇಳಿದರೆ ಪ್ರಾಯಶಃ ತಪ್ಪಾಗುವುದಿಲ್ಲ. ಬಳ್ಳಾರಿಯ ಧರ್ಮವರಂ ಕೃಷ್ಣಮಾಚಾರ್ಯರು ಮತ್ತು ಕೋಲಾಚಲಂ ಶ್ರೀನಿವಾಸರಾವು ಅವರೂ ಕನ್ನಡ ಮತ್ತು ತೆಲುಗು ರಂಗಭೂಮಿಗಳಿಗೆ ಚಿರಪರಿಚಿತರಾದವರು. ಕೃಷ್ಣಮಾಚಾರ್ಯರು 'ಚಿತ್ರನಳೀಯ'ವನ್ನು ಮೊದಲು ಕನ್ನಡದಲ್ಲಿ ಬರೆದು ಆಮೇಲೆ ತೆಲುಗಿಗೆ ಅನುವಾದ ಮಾಡಿದರಂತೆ. ಕೈಲಾಸಂ, ಪುಟ್ಟಸ್ವಾಮಯ್ಯ ಮುಂತಾದವರ ನಾಟಕಗಳು ತೆಲುಗಿನವರಿಗೂ ಪರಿಚಿತ. ನಟನಕಲಾಕೋವಿದ ಬಳ್ಳಾರಿ ಟಿ. ರಾಘವ ಅವರು ಇಬ್ಬರಿಗೂ ಬೇಕಾದ ನಟಶ್ರೇಷ್ಠ. ಗುಬ್ಬಿ ವೀರಣ್ಣನವರ 'ಸದಾರಮೆ' ಅಭಿನಯವಾದಾಗ ತೆಲುಗು ಜನರನ್ನೂ ಆಕರ್ಷಿಸಿತು.

ತೆಲುಗಿನಿಂದ ಕನ್ನಡಕ್ಕೆ ನಾಟಕಗಳು ಕೆ. ವೀರೇಶಲಿಂಗಂ ಪಂತುಲು ಅವರ ಕಾಲದಿಂದಲೇ ಬರತೊಡಗಿವೆ. ತುಮಕೂರು ಜಿಲ್ಲೆಯ ಬೆಳ್ಳಾವೆ ಸೋಮನಾಥಯ್ಯ ಅವರು ಷೇಕ್ಸ್‌ಪಿಯರಿನ ಎರಡು ನಾಟಕಗಳನ್ನು ಕನ್ನಡಕ್ಕೆ ತಂದಿದ್ದಾರೆ. ಈ ಎರಡು ನಾಟಕಗಳಿಗೂ ಮೂಲ ಕಂದುಕೂರಿ ವೀರೇಶಲಿಂಗಂ ಅವರ ತೆಲುಗು ನಾಟಕಗಳೇ ಆಗಿವೆ. ಅವು Taming of the Shrew ಅನ್ನು ಅವಲಂಬಿಸಿ ಬರೆದ 'ಗಯ್ಯಾಳಿಯನ್ನು ಸಾಧುಮಾಡುವಿಕೆ' ಮತ್ತು All's well that ends well ಅನ್ನು ಆಧರಿಸಿ ಬರೆದ 'ಸತೀಮಣಿವಿಜಯ' ಎಂಬ ನಾಟಕಗಳು. ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಕಂದುಕೂರಿ ವೀರೇಶಲಿಂಗಂ ಅವರ ಕೆಲವು ನಾಟಕಗಳನ್ನು ಕನ್ನಡಕ್ಕೆ ತಂದಿದ್ದಾರೆ. 'ಕಲಹಪ್ರಿಯಾ ಪ್ರಹಸನ', 'ಮಹಾರಣ್ಯ ಪುರಾಧಿಪತ್ಯ' ಮತ್ತು 'ವ್ಯವಹಾರ ಧರ್ಮಬೋಧಿನಿ' ಇವು ಕಂದುಕೂರಿ ಅವರ ತೆಲುಗು ನಾಟಕಗಳ ಕನ್ನಡ ಅನುವಾದಗಳಾಗಿವೆ. ಆದಿಪೂಡಿ ಸೋಮನಾಥರಾವ್ ಎಂಬವರು ಬರೆದ 'ರಾಜಾರಾಮ ಮೋಹನರಾವ್' ಎಂಬ ನಾಟಕವನ್ನು ಎ. ಕೇಶವಯ್ಯ ಎಂಬವರು ಕನ್ನಡಕ್ಕೆ ತಂದಿದ್ದಾರೆ. ತೆಲುಗಿನ ಅತಿ ಮಹತ್ತ್ವದ ಸಾಮಾಜಿಕ ನಾಟಕವಾದ ಗುರಜಾಡ ಅಪ್ಪಾರಾವು ಅವರ 'ಕನ್ಯಾಶುಲ್ಕಂ' ನಾಟಕ ಡಾ. ಸಿ. ಆರ್. ರೆಡ್ಡಿ ಅವರ ಮುನ್ನುಡಿಯೊಡನೆ ಕನ್ನಡಕ್ಕೆ ತರ್ಜುಮೆಯಾಗಿದೆ. ಹೀಗೆಯೇ ಬಿಡಿಬಿಡಿಯಾಗಿ ಅನೇಕ ಏಕಾಂಕಗಳೂ ತೆಲುಗಿನಿಂದ ಕನ್ನಡಕ್ಕೆ ಬಂದಿವೆ; ಸಂಕಲಿತ ನಾಟಕಗಳ ಅನುವಾದವೂ ಆಗಿದೆ.

ಆಧುನಿಕ ಕಾಲದಲ್ಲಿ ತೆಲುಗು–ಕನ್ನಡಗಳಲ್ಲಿ ಸಮಾನವಾಗಿ ಕೃತಿರಚನೆ ಮಾಡುವುದರ ಮೂಲಕ ಇಬ್ಬರ ಬಾಂಧವ್ಯವನ್ನೂ ಬೆಳಸಿದ ಪ್ರಮುಖರಲ್ಲಿ ಒಬ್ಬರು ರಾಳ್ಳಪಲ್ಲಿ ಅನಂತಕೃಷ್ಣಶರ್ಮರು. ಇವರೂ ಇವರ ಶಿಷ್ಯರೂ ಸಮಕಾಲೀನವೂ ಪ್ರಾಚೀನ ಸಾಹಿತ್ಯ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ಶ್ರಮಿಸಿ ಪರಸ್ಪರರ ಅರಿವನ್ನು ಬೆಳಸಿದರು. ತೆಲುಗು ಮಾತೃಭಾಷೆಯಾಗಿರುವ ದಿ. ಬೆಳ್ಳಾವೆ ವೆಂಕಟನಾರಾಯಣಪ್ಪ, ದಿ. ಟಿ. ಎಸ್.

ವೆಂಕಣ್ಣಯ್ಯ ಮುಂತಾದವರು ಕನ್ನಡ ಭಾಷಾಸಾಹಿತ್ಯಸಾಧನೆಗಳಿಗಾಗಿ ವಿಶೇಷ ದುಡಿದಿದ್ದಾರೆ.

ಬಿಡಿಬಿಡಿಯಾಗಿ ದಕ್ಷಿಣ ಭಾರತ ಸಾಹಿತ್ಯಗಳ ಪರಸ್ಪರ ವಿನಿಮಯ ನಡೆಯುತ್ತಿದ್ದರೂ ಸಾಕಷ್ಟು ಕೆಲಸ ಆಗಿಲ್ಲವೆಂದೇ ಹೇಳಬೇಕು. ವ್ಯಕ್ತಿಗಳೊಂದಿಗೆ ಸಂಸ್ಥೆಗಳು ಇಂತಹ ಕಾರ್ಯದಲ್ಲಿ ತೊಡಗಿದರೆ ಪ್ರಯೋಜನವಾಗುತ್ತದೆ. ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್‌ಟ್ರಸ್ಟ್, ದಕ್ಷಿಣ ಭಾರತ ಪುಸ್ತಕ ಸಂಸ್ಥೆ ಮುಂತಾದವರು ಕೆಲವು ಗ್ರಂಥಗಳ ಅನುವಾದಗಳನ್ನು ಪ್ರಕಟಿಸಿ ಈ ಹಾದಿಯಲ್ಲಿ ತೊಡಗಿದ್ದಾರೆ.

## ಅಡಿಟಿಪ್ಪಣಿಗಳು

1-4 ಬಿ. ಎಂ. ಶ್ರೀಕಂಠಯ್ಯ, 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', ೧೯೬೨, ಪು. ೧೬೮ ; ೧೬೯ ; ೧೬೬ ; ೩೦೩.

5 ಕುಱಳನ್ನು ಕನ್ನಡಕ್ಕೆ ತರುವ ಪ್ರಯತ್ನ ೧೯ನೆಯ ಶತಮಾನದ ಕೊನೆಯಲ್ಲಿ ಆರಂಭವಾಯಿತು. ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ ಅವರು 'ನೀತಿಮಂಜರಿ' ಎಂಬ ತಮ್ಮ ಒಂದು ಕೃತಿಯ ಪೀಠಿಕೆಯಲ್ಲಿ ೧೮೯೮ರಲ್ಲಿ, "ನೀತಿ ಮಂಜರಿಯ ದ್ವಿತೀಯ ಭಾಗದಲ್ಲಿ ತಿರುವಳ್ಳುವರಿಂದ ರಚಿತವಾದ ಕುಱಳೆಂಬ ಪ್ರಸಿದ್ಧವಾದ ನೀತಿ ಗ್ರಂಥದ ಕೆಲವು ಭಾಗಗಳನ್ನು ಕನ್ನಡಕ್ಕೆ ಪದ್ಯರೂಪವಾಗಿ ಪರಿವರ್ತನೆ ಮಾಡಬೇಕೆಂದಿದ್ದೇನೆ" ಎಂಬುದಾಗಿ ತಮ್ಮ ಸಂಕಲ್ಪವನ್ನು ಸೂಚಿಸಿದ್ದರು. ಕೆಲವು ವರ್ಷಗಳ ಬಳಿಕ ೧೯೧೧ರಲ್ಲಿ, 'ಕುಱಳ್' ಕೃತಿಯ ಅಯ್ದು ೩೮ ಅಧಿಕಾರಗಳನ್ನು ಅನುವಾದಮಾಡಿ 'ನೀತಿಮಂಜರಿ'ಯ ದ್ವಿತೀಯ ಭಾಗವನ್ನು ಪ್ರಕಟಿಸಿದರು ; ಈ ಅನುವಾದ ಹಳಗನ್ನಡ ಭಾಷೆಯಲ್ಲಿದ್ದು ಕಂದ ಪದ್ಯಗಳಲ್ಲಿದೆ. ಪೀಠಿಕೆಯಲ್ಲಿ ಕವಿವಿಚಾರ 'ಕುಱಳ್' ಪದ್ಯಗಳ ಪ್ರಾಶಸ್ತ್ಯ ಮುಂತಾದುವಿರುತ್ತವೆ. ೧೯೨೮ರಲ್ಲಿ ಈ ಅನುವಾದ ಪುನರ್ಮುದ್ರಿತವಾಗಿದೆ. ಬಳಿಕ ಬಿ. ಎಂ. ಶ್ರೀಕಂಠಯ್ಯನವರು ಕೆಲವು ಭಾಗಗಳನ್ನು ಕನ್ನಡಿಸಿ 'ತಮಿಳ್‌ಕಟ್ಟು' ಎಂಬ ಸಂಕಲನದಲ್ಲಿ ಪ್ರಕಟಿಸಬೇಕೆಂದಿದ್ದರು. ದುರದೃಷ್ಟವಶದಿಂದ ಸಂಕಲನ ಗೆದ್ದಲು ಪಾಲಾಗಿ ಹಾಳಾಯಿತೆಂದು ತಿಳಿಯುತ್ತದೆ. ಈಚೆಗೆ (೧೯೬೦) ಎಲ್. ಗುಂಡಪ್ಪನವರು ಅದರ 'ಅಱತ್ತುಪ್ಪಾಲ್' (ಧರ್ಮಭಾಗ) ಭಾಗವನ್ನು ಪೂರ್ತಿಯಾಗಿ ತಮಿಳು ಮೂಲ ಹಳಗನ್ನಡ ಮತ್ತು ಹೊಸಗನ್ನಡ ಅನುವಾದ ವಿವರಣೆಗಳೊಂದಿಗೆ ಪ್ರಕಟಿಸಿದ್ದಾರೆ.

6 ತ. ವೆಂ. ರಾಘವಾಚಾರ್, 'ಯಶೋಧರ ಚರಿತೆ', ೧೯೪೯, ಪೀಠಿಕೆ, ಪು. ೬೩.

7 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ೧೯೭೩, ಪು. ೮೩.

8–9 ಎಲ್. ಗುಂಡಪ್ಪ, ಕನ್ನಡಕ್ಕೆ ತಮಿಳಿನ ಎರವಲು ಮತ್ತು ಪ್ರಭಾವ, ಪ್ರಕೆ., ೪೦–೪.

10 ತ. ವೆಂ. ರಾಘವಾಚಾರ್, 'ನಂದಾನೆನಪು', ೧೯೭೩. ಪು. ೬೮–೬೯.

11 'ಅರಿಕೇಸರಿಯೂ ಪಂಪನ ಯುಗವೂ', ಕಸಾಪ., ೫೧.೨, ಪು. ೨೦೫.

12-3 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೮೪ ; ೧೪೮.

14 ಡಿ. ಎಲ್. ನರಸಿಂಹಾಚಾರ್, 'ಹಂಪೆಯ ಹರಿಹರ' ೧೮೪೮, ಪು. ೩೨–೩೪.

15 'ಹರಿಹರದೇವ', ೧೯೭೪, ಪು. ೧೪೭.

16–7 ಎಲ್. ಗುಂಡಪ್ಪ, ಕನ್ನಡಕ್ಕೆ ತಮಿಳಿನ ಎರವಲು ಮತ್ತು ಪ್ರಭಾವ, ಪ್ರಕೆ., ೪೦–೪, ಪು. ೯೯.

18 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯದ ಇತಿಹಾಸ', ೧೯೬೩, ಪು. ೧೮೭.
19 ಡಾ. ಶ್ರೀನಿವಾಸ ಹಾವನೂರ, 'ಹೊಸಗನ್ನಡದ ಅರುಣೋದಯ' ಪು
20 ಎಲ್. ಗುಂಡಪ್ಪ, ಪೂರ್ವೋಕ್ತ, ಪು. ೧೦೦.
21 'ಮಲಯಾಳ ಭಾಷೆ ಮತ್ತು ಸಾಹಿತ್ಯ', ೧೯೭೩, ಪು. ೩೧.
22 'ಯಕ್ಷಗಾನ ಬಯಲಾಟ', ೧೯೬೩, ಪು. ೪೯.
23–5 ಡಾ. ಶ್ರೀನಿವಾಸ ಹಾವನೂರ, ಪೂರ್ವೋಕ್ತ, ಪು. ೫೪೦ ; ೫೪೦ ; ೧೨೦.
26–7 'ಕರ್ನಾಟಕಾಂಧ್ರ ಸಾಹಿತ್ಯ ಬಾಂಧವ್ಯ', ೧೯೭೩, ಪು. ೬ ; ೨೪.
28 'ಸಾರಸ್ವತವ್ಯಾಸಮುಲು', ಸಂ. ೩, ಪು. ೨೭೨.
29 'ಕರ್ನಾಟಕಾಂಧ್ರ ಸಾಹಿತ್ಯ ಬಾಂಧವ್ಯ', ೧೯೭೩, ಪು. ೩೧.
30 'ಪಂಪ: ಒಂದು ಅಧ್ಯಯನ', ೧೯೭೪, ಪು. ೮೪-೮೫.
31 ಕರ್ಣಾಟಕ ಕವಿಚರಿತೆ, ಭಾಗ ೧, ಪು. ೨೩೯-೪೨.
32 ಎನ್. ವೆಂಕಟರಾವು, 'ಆಂಧ್ರ ಕರ್ಣಾಟ ಸಾರಸ್ವತಮುಲು—ಪರಸ್ಪರಪ್ರಭಾವಮು', ೧೯೬೨, ಪು. ೮೩.
33 'ಕನ್ನಡ ಸಾಹಿತ್ಯ ಚರಿತ್ರೆ', ೧೯೬೮, ಪು. ೧೮೧.
34–5 ಎನ್. ವೆಂಕಟರಾವು, ಪೂರ್ವೋಕ್ತ, ಪು. ೧೧೬ ; ೧೨೨.
36 ರಾ. ಅನಂತಕೃಷ್ಣ ಶರ್ಮ, 'ಸಾಹಿತ್ಯ ಮತ್ತು ಜೀವನಕಲೆ', ೧೯೫೮, ಪು. ೧೧೩.
37 ಡಾ. ಶ್ರೀನಿವಾಸ ಹಾವನೂರ ಪೂರ್ವೋಕ್ತ, ೧೯೭೪, ಪು. ೨೧೬.

ಅಧ್ಯಾಯ ಎಂಟು

# ಕನ್ನಡ ಮತ್ತು ಸಂಸ್ಕೃತ ಪ್ರಾಕೃತಾದಿ ಭಾಷಾಸಾಹಿತ್ಯಗಳು: ಸಂಬಂಧ, ಪ್ರಭಾವ

## ಕನ್ನಡ-ಸಂಸ್ಕೃತ

ಭಾರತೀಯ ಸಾಹಿತ್ಯ ಭರತಖಂಡದ ವಿವಿಧ ದೇಶೀಯ ಸಾಹಿತ್ಯಗಳ ರೂಪದಲ್ಲಿ ಬಹುಕಾಲದಿಂದ ಬೆಳೆದುಕೊಂಡು ಬಂದಿರುವ ಒಂದು ಚೈತನ್ಯಶಕ್ತಿ. ಅದರ ಸಾಮಾನ್ಯ ಲಕ್ಷಣಗಳೂ ಧ್ಯೇಯಾದರ್ಶಗಳೂ ಎಲ್ಲ ದೇಶೀಯ ಸಾಹಿತ್ಯಗಳಲ್ಲಿಯೂ ಕಾಲದಿಂದ ಕಾಲಕ್ಕೆ ಸಮಾನವಾಗಿ ಮೈದೋರುತ್ತ ಬಂದು ಜನಸಮುದಾಯದ ಶ್ರೇಯಸ್ಸು ಸಾಧಿತವಾಗುತ್ತಿದೆ; ಭಾರತೀಯ ಸಂಸ್ಕೃತಿಯೆಂಬುದು ರೂಪಗೊಳ್ಳಲು ಅದರ ಕಾಣಿಕೆಯೂ ಸಂದಾಯವಾಗಿದೆ. ಭಾರತದ ಹಲವು ದೇಶಿಯ ಸಾಹಿತ್ಯಗಳಲ್ಲಿ ಒಂದಾಗಿರುವ ಕನ್ನಡ ಸಾಹಿತ್ಯ ನಡೆದುಕೊಂಡು ಬಂದ ದಾರಿಯನ್ನು ಗುರುತಿಸುವುದಕ್ಕೆ ಹೊರಟರೆ, ಅದು ಸ್ವಶಕ್ತಿಯಿಂದ ಬೆಳೆಯುವ ಸತ್ತ್ವವುಳ್ಳದ್ದಾಗಿಯೂ ಅದರೊಡನೆ ಬೇರೆ ಬೇರೆ ಭಾಷೆಗಳ ಹಾಗೂ ಸಾಹಿತ್ಯಗಳ ಸಂಘಟನೆಯೊದಗಿ ಪರಸ್ಪರವಾಗಿ ಕೊಡುವುದೂ ಕೊಳ್ಳುವುದೂ ನಿರಂತರವಾಗಿ ನಡೆದಿರುವಂತೆಯೂ ತೋರುತ್ತದೆ. ಕನ್ನಡನಾಡಿಗೆ ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಾಲದಿಂದ ಕಾಲಕ್ಕೆ ಒದಗಿ ಬಂದ ವಿವಿಧ ರೀತಿಯ ಸಂಪರ್ಕ ಸಂಬಂಧಗಳೇ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಈ ಸಂಪರ್ಕ ಸಂಬಂಧಗಳ ವ್ಯಾಪಕತೆ ಮತ್ತು ತೀವ್ರತೆಗಳನ್ನನುಸರಿಸಿ ಭಾಷೆ ಸಾಹಿತ್ಯಗಳ ಮೇಲೆ ಅವುಗಳ ಪ್ರಭಾವ ಪರಿಣಾಮಗಳನ್ನು ನಾವು ಕಾಣುತ್ತೇವೆ. ದ್ರಾವಿಡೇತರ ಭಾಷೆಗಳಲ್ಲಿ ಸಂಸ್ಕೃತ ಪ್ರಾಕೃತ ಮರಾಠಿ ಮೊದಲಾದವು ಕನ್ನಡದ ಮೇಲೆ ಪ್ರಭಾವ ಬೀರಿರುವಂತೆಯೇ ಕನ್ನಡವೂ ಅಲ್ಪಸ್ವಲ್ಪವಾದರೂ ಆ ಭಾಷೆಗಳ ಮೇಲೆ ಪ್ರಭಾವ ಬೀರಿರುವುದಕ್ಕೆ ಸಾಕ್ಷ್ಯಗಳು ದೊರೆಯುತ್ತವೆ.

ಸಂಸ್ಕೃತ ಭಾಷೆಯಂತೂ ಭಾರತೀಯ ದೇಶಭಾಷೆಗಳಿಗೆ ಉದ್ದಾಮವಾದ ಶಬ್ದಶಕ್ತಿಯನ್ನೂ ಸಾಹಿತ್ಯಶಕ್ತಿಯನ್ನೂ ಪರಿಣಾಮಕಾರಿಯಾಗಿ ನೀಡಿರುವ ಸತ್ತ್ವಸಂಪನ್ನವಾದ ಭಾಷೆ. ಭರತಖಂಡದ ಧರ್ಮ ಮತ್ತು ಸಂಸ್ಕೃತಿಗಳ ಸಾರಸರ್ವಸ್ವವೆಲ್ಲ ಸಂಸ್ಕೃತ

ವಾಙ್ಮಯದಲ್ಲಿ ತುಂಬಿ ತುಳುಕುತ್ತಿದೆ. ಅದು ಶ್ರುತಿಸ್ಮೃತಿಗಳು ಪುರಾಣಾಗಮಗಳು ಇತಿಹಾಸಗಳು ಶಾಸ್ತ್ರಗಳು ಕಾವ್ಯಗಳು—ಈ ಮುಂತಾಗಿ ಹಲವು ಮುಖವಾಗಿ ಬೆಳೆದು ನಿಂತಿರುವ ಒಂದು ಅಕ್ಷಯನಿಧಿ. ಈ ಶ್ರುತಿಸ್ಮೃತ್ಯಾದಿಗಳು ಪ್ರತಿಪಾದಿಸುವ ತತ್ತ್ವವೋ ನೀತಿಯೋ ಧರ್ಮವೋ ಕರ್ಮವೋ ಜೀವಹಿತಸಾಧಕವಾದ ದೃಷ್ಟಿಯಿಂದ ಪ್ರೇರಿತವಾದುದು. ಅವುಗಳ ಪ್ರಯೋಜನವನ್ನು ಭಾರತೀಯ ದೇಶಭಾಷಾ ಕವಿಗಳು ಅವರವರ ಸಾಮರ್ಥ್ಯಕ್ಕೆ ಎಟುಕುವಷ್ಟು ಮಟ್ಟಿಗೆ, ಉಚಿತಕ್ಕೆ ತಕ್ಕಷ್ಟು ಮಟ್ಟಿಗೆ ಬಳಸಿಕೊಂಡಿದ್ದಾರೆ, ಬಳಸಿಕೊಳ್ಳುತ್ತಿದ್ದಾರೆ.

ಈ ಅವತರಣಿಕೆಯನ್ನು ನೋಡಬಹುದು: "....ಹಿಂದಿನ ಕಾಲದಲ್ಲಿ ಮಹನೀಯರಾದವರು ದೇಶಭಾಷೆಯ ಮೂಲಕ ಜನರನ್ನು ಬದುಕಿಸಬೇಕೆಂದು ಯೋಚನೆಮಾಡಿ ಕನ್ನಡವನ್ನು ಪುಷ್ಟಿಗೊಳಿಸುವುದಕ್ಕೆ ಕನ್ನಡದ ಜ್ಞಾನಭಂಡಾರವನ್ನು ಹೆಚ್ಚಿಸುವುದಕ್ಕೆ ಸಂಸ್ಕೃತವನ್ನು ಮರೆಹೊಕ್ಕರು. ಅದರ ಮೂಲಕ ಕನ್ನಡ ನಾನಾ ಮುಖವಾಗಿ ಪುಷ್ಟಿ ಹೊಂದಿತು. ಅವರಿಗೆ ಸಂಸ್ಕೃತದ ಮೇಲಿದ್ದ ಮಮತೆಯಲ್ಲಿ ಕನ್ನಡದ ಶಕ್ತಿಗೆ ಮೀರಿ ಅದು ಹೊರಲಾರದಷ್ಟು ಹೊರೆ ಅಲ್ಲಿಂದ ಬಂದಿದ್ದರೂ ಬಂದಿರಬಹುದು—ಬಂದಿದೆ;....ಒಂದು ಕಾಲದಲ್ಲಿ ಕನ್ನಡ ಭಾಷೆ ಸಂಸ್ಕೃತದ ಮೂಲಕ ಹೊಸ ಚೈತನ್ಯ ಪಡೆಯಿತು....ಆ ಭಂಡಾರದಲ್ಲಿ ತುಂಬಿರತಕ್ಕ ವಸ್ತುಗಳಲ್ಲಿ ತಮ್ಮ ಜನರಿಗೆ ಅಗತ್ಯವಾಗಿ ಕೊಡಬೇಕಾದಂಥವನ್ನು, ಕೊಡಬಹುದಾದಂಥವನ್ನು, ಒಟ್ಟಿನಲ್ಲಿ ಜನರನ್ನು ಮೇಲಕ್ಕೆ ಎತ್ತುವುದಕ್ಕೆ ಯಾವ ವಿಷಯಗಳನ್ನು ತಿಳಿಸಬೇಕೋ ತಿಳಿಸಬಹುದೋ ಅವನ್ನೆಲ್ಲಾ ಅಲ್ಲಿಂದ ತೆಗೆದುಕೊಂಡು ನಮ್ಮ ಹಿರಿಯರು ದೇಶಭಾಷೆಯಾದ ಕನ್ನಡದ ಮೂಲಕ ಜನರಿಗೆ ಕೊಟ್ಟರು."[1]

ಹೀಗೆ ಕನ್ನಡ ಸಾಹಿತ್ಯ ಸುಮಾರು ೧೫೦೦ ವರ್ಷಗಳಿಂದಲೂ ಸಂಸ್ಕೃತ ಭಾಷೆಯಲ್ಲಿ ನಿಕ್ಷಿಪ್ತವಾಗಿರುವ ಸಾಹಿತ್ಯಸತ್ತ್ವವನ್ನು ಹೀರಿಕೊಂಡು ಬೆಳೆಯುತ್ತ ಬಂದಿದೆ, ಬೆಳಗುತ್ತ ಬಂದಿದೆ. ಕನ್ನಡ ಭಾಷೆ ಸಾಹಿತ್ಯಗಳ ಮೇಲೆ ಸಂಸ್ಕೃತ ಭಾಷಾ ಸಾಹಿತ್ಯಗಳು ಉಂಟುಮಾಡಿರುವ ಪ್ರಭಾವವೂ ನೀಡಿರುವ ಪುಷ್ಟಿಯೂ ಅತ್ಯಂತ ಗಮನಾರ್ಹವಾದ್ದಾಗಿದೆ. "ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ಬಿಡುವುದಕ್ಕಿಲ್ಲ. ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ; ಇದರಲ್ಲೇ ನಮ್ಮ ಪುಸ್ತಕ ಭಂಡಾರವೆಲ್ಲಾ ಅಡಗಿದೆ. ಇದನ್ನು ತಿಳಿದ ಹೊರತು ಹಿಂದಿದ್ದ ಸ್ಥಿತಿಯಾಗಲಿ ಈಗಿನ ಸ್ಥಿತಿಗೆ ಕಾರಣವಾಗಲಿ, ಮುಂದೆ ತಿದ್ದಬೇಕಾದ ರೀತಿಯಾಗಲಿ ತಿಳಿಯುವುದಿಲ್ಲ"—ಎಂಬ ಹೇಳಿಕೆಯನ್ನು[2] ಈ ಸಂದರ್ಭದಲ್ಲಿ ನೆನೆಯಬಹುದು. ಪ್ರಾಕೃತಾದಿ ಭಾಷೆಗಳು ಕಾಲದಿಂದ ಕಾಲಕ್ಕೆ ಬೀರುತ್ತಬಂದಿರುವ ಪ್ರಭಾವವೂ ನೀಡುತ್ತ ಬಂದಿರುವ ಒದವು ಒತ್ತಾಸೆಗಳೂ ಪ್ರಾಯಃ ಇಷ್ಟುಮಟ್ಟಿಗೆ ವ್ಯಾಪಕವಾದುವಲ್ಲ, ಗಾಢವಾದುವಲ್ಲ.

ಕನ್ನಡವು ದ್ರಾವಿಡ ಭಾಷಾವರ್ಗಕ್ಕೆ ಸೇರಿರುವ ಭಾಷೆಯಾಗಿಯೂ, ಬಹಳ ಹಿಂದೆಯೇ, ಗ್ರಂಥಸ್ಥರೂಪವನ್ನು ಪಡೆಯುವ ಕಾಲಕ್ಕೆ ಮುಂಚೆಯೇ, ಸಂಸ್ಕೃತ ಭಾಷೆಯ ಪ್ರಬಲವಾದ ಸಂಸರ್ಗಕ್ಕೆ ಒಳಗಾದಂತೆ ಕಂಡುಬರುತ್ತದೆ. ಈಗ ದೊರೆಯುತ್ತಿರುವ ಕನ್ನಡ

ಸಾಹಿತ್ಯದ ಪ್ರಾಚೀನತೆಯ ಕುರುಹುಗಳಲ್ಲೆಲ್ಲ ಸಂಸ್ಕೃತದ ಪದ್ಧತಿ ವೈಲಕ್ಷಣ್ಯಗಳು ಕಾಣುತ್ತವೆ. ಕನ್ನಡನಾಡಿನ ಜನಜೀವನದ ಮೇಲೆ ಎಷ್ಟೋ ಹಿಂದೆಯೇ ಆರ್ಯ ಜನರ ಜೀವನವಿಧಾನ ಧರ್ಮ ಸಾಹಿತ್ಯ ಸಂಸ್ಕೃತಿ ಮೊದಲಾದವುಗಳ ಒತ್ತಡವುಂಟಾದುದು ಇದಕ್ಕೆ ಮುಖ್ಯ ಕಾರಣವೆನ್ನಬಹುದು.

ಈ ಅವತರಣಿಕೆಯನ್ನು ನೋಡಬಹುದು: "ಕನ್ನಡ ಭಾಷೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಬಲ್ಲ ವಿಷಯವಾಗಿದೆ. ಆರ್ಯರು ದಕ್ಷಿಣಕ್ಕೆ ಬಂದು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು. ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ದವನ್ನು ಹೊಂದಿಸಿಕೊಟ್ಟು ಭಾಷೆಯನ್ನು ಪುಷ್ಟಿಮಾಡಿದರು ; ಬರಹವನ್ನು ಕಲಿಸಿಕೊಟ್ಟರು; ಕಾವ್ಯಸ್ವರೂಪವನ್ನು ತೋರಿಸಿಕೊಟ್ಟರು; ಆ ಕಾವ್ಯಕ್ಕೆ ಬೇಕಾದ ವೃತ್ತಗಳನ್ನೂ ಅಲಂಕಾರ ವ್ಯಾಕರಣಗಳನ್ನೂ ಪುರಾಣ ಇತಿಹಾಸಗಳನ್ನೂ ಒದಗಿಸಿಕೊಟ್ಟರು. ಈ ರೀತಿ ಉಳದ ಹೊಲದಲ್ಲಿ ಬೆಳೆಮಾಡಿ ನಾಡೆಲ್ಲ ಜೀವಕಳೆಯಿಂದ ತುಂಬಿ ತುಳುಕಾಡುವಂತೆ ಮಾಡಿಟ್ಟರು. ತಮ್ಮ ಸಂಸ್ಕೃತ ಭಾಷೆಯ ಮತ್ತು ಕಾವ್ಯದ ಬಲದಿಂದ ದ್ರಾವಿಡ ಜನರಿಗೆ ಲಾಭವನ್ನು ಕಾಣಿಸಿದರೇ ಹೊರತು ನಷ್ಟವೇನೂ ತರಲಿಲ್ಲ; ಅವರ ಭಾಷೆ ಪುಷ್ಟಿಯಾಯಿತು. ಅವರ ಜ್ಞಾನ ವೃದ್ಧಿಯಾಯಿತು, ಅವರ ಮತ ಶ್ರೇಷ್ಠವಾಯಿತು."[3]

ಕನ್ನಡ ಭಾಷೆ ಸಾಹಿತ್ಯಗಳು ರೂಪತಳೆದು ಬೆಳೆಯುವ ಸ್ಥಿತಿಯಲ್ಲಿದ್ದಾಗ, ಮೇಲೆ ಹೇಳಿದಂತಹ ಒತ್ತಡಗಳಿಗೆ ಅವಕಾಶವಾದ್ದು, ಮುಂದೆ ಕನ್ನಡವು ಆರ್ಯಸಂಸ್ಕೃತಿಯ ಸಾರವನ್ನೂ ಸಂಸ್ಕೃತಭಾಷೆಯ ವೈಲಕ್ಷಣ್ಯಗಳನ್ನೂ ಅರಗಿಸಿಕೊಂಡು ತನ್ನದನ್ನಾಗಿ ಮಾಡಿಕೊಳ್ಳುವಂತಾಯಿತು. ಈ ಪರಿಸ್ಥಿತಿ ಒಂದು ಹದಕ್ಕೆ ಬಂದು ನಿಲ್ಲಬೇಕಾದರೆ, ಕೆಲವು ಶತಮಾನಗಳ ಪ್ರಯೋಗಪರೀಕ್ಷೆಗಳೂ ತಪ್ಪುತಡೆಗಳೂ ಬಿಡುವುದೂ ಹೊಡುವುದೂ ಒಂದೇ ಸಮನೆ ನಡೆದಿರಬೇಕೆಂದು ತೋರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತ ಶಬ್ದಗಳು ತತ್ಸಮ ಅಥವಾ ಸಮಸಂಸ್ಕೃತ ಎಂಬ ಹೆಸರಿನಲ್ಲಿ ಬಳಕೆಯಾಗುತ್ತಿವೆ, ಇಲ್ಲವೆ ಸ್ವಲ್ಪ ಹೆಚ್ಚು ಕಡಮೆ ವಿಕಾರವನ್ನು ಹೊಂದಿ ತದ್ಭವಗಳೆಂಬ ಹೆಸರಿನಲ್ಲಿ ಬಳಕೆಯಾಗುತ್ತಿವೆ. ಆ ಭಾಷೆಗಳಲ್ಲಿ ಇವೇ ವಿಶೇಷವಾಗಿರತಕ್ಕವು, ಮುಖ್ಯವಾದವು, ಗ್ರಾಂಥಿಕ ಭಾಷೆಗೆ ಬೇಕಾದವು; ದೇಶ್ಯಶಬ್ದಗಳು ಅಲ್ಪವಾದವು, ಆದ್ದರಿಂದ ಅಪ್ರಧಾನವಾದವು—ಹೀಗೆಂಬುದಾಗಿ ತಿಳಿದು, ಇತರ ಪ್ರಾಕೃತ ಭಾಷೆಗಳಿಗೆ ಹೇಗೋ ಹಾಗೆಯೇ ಕನ್ನಡ ಮೊದಲಾದವುಗಳಿಗೆ ಕೂಡ ಸಂಸ್ಕೃತವೇ ಮಾತೃಪ್ರಾಯವಾದುದು ಎಂಬ ಎಣಿಕೆ ಒಂದು ಕಾಲಕ್ಕಿದ್ದಿತು.[4] ಆದರೆ ಆಧುನಿಕರಾದ ಭಾಷಾಶಾಸ್ತ್ರಜ್ಞರು ಈ ಎಣಿಕೆಯನ್ನು ಸಕಾರಣವಾಗಿ ಅಲ್ಲಗಳೆದು, ದ್ರಾವಿಡಭಾಷೆಗಳಲ್ಲಿಯ ವಿಶಿಷ್ಟ ರೀತಿಯ ಶಬ್ದರಚನೆಯನ್ನೂ ದೇಶ್ಯಶಬ್ದಗಳ ಪ್ರಾಮುಖ್ಯವನ್ನೂ ಅನ್ಯಭಾಷಾಶಬ್ದಗಳ ಸ್ಥಾನ ಸಂಬಂಧಾದಿಗಳನ್ನೂ ವಿಶದಪಡಿಸಿ ಅವುಗಳು ಆರ್ಯ ಭಾಷೆಗಳಿಂದ ಪ್ರತ್ಯೇಕವಾದ ವರ್ಗಕ್ಕೆ ಸೇರಿದವೆಂದು ಸ್ಥಾಪಿಸಿದರು.

ಪ್ರಸ್ತುತ ನಾವು ಕನ್ನಡದ ಪದಕೋಶ ಮತ್ತು ಶಬ್ದರಚನೆ ಎರಡರಲ್ಲಿಯೂ ಸಂಸ್ಕೃತದ ಪ್ರಭಾವ ಎಷ್ಟರಮಟ್ಟಿಗೆ ತೋರುತ್ತದೆ ಎಂಬುದನ್ನು ಗಮನಿಸಬಹುದು. ಕನ್ನಡ ಪದ ಕೋಶದಲ್ಲಿ ತತ್ಸಮ ತದ್ಭವಗಳು ಸಂಸ್ಕೃತ ಪ್ರಾಕೃತಜನ್ಯಗಳಾಗಿ ಹೇರಳವಾಗಿ ಸೇರಿ ಕೊಂಡಿವೆ. "ಇಂದು ಕನ್ನಡ ಪದಕೋಶದಲ್ಲಿ ಕಾಣುತ್ತಿರುವ ಶಬ್ದಸಂಪತ್ತು ಬಲು ಮಟ್ಟಿಗೆ ಪ್ರಸಿದ್ಧರಾದ ಪೂರ್ವಕವಿಗಳ ಪ್ರಾರಂಭಿಕ ಯತ್ನಗಳ ಫಲವೆನ್ನಬಹುದು. ಭಾಷಾಶಾಸ್ತ್ರಜ್ಞರು ಸಂಸ್ಕೃತವೆಂತಲೋ ಪ್ರಾಕೃತವೆಂತಲೋ ಮೂಲವನ್ನು ಗುರುತಿಸುವ ಎಷ್ಟೋ ಶಬ್ದಗಳು ಇಂದು ಅನಕ್ಷರಸ್ಥನ ವ್ಯವಹಾರದಲ್ಲಿ ಕೂಡ ಅಚ್ಚಕನ್ನಡ ಶಬ್ದಗಳಾಗಿ ರೂಢಿಯಲ್ಲಿರುತ್ತವೆ. ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಎದ್ದು ತೋರುವುದು ಕನ್ನಡ ಪದಕೋಶದಲ್ಲಿಯ ಈ ಸಂಸ್ಕೃತ ಪದಭಂಡಾರದಲ್ಲಿಯೇ ಎನ್ನಬಹುದು."[5] ಸಂಸ್ಕೃತದ ಪದಕೋಶದ ಶಬ್ದಸಮೂಹವು ಧಾರಾಳವಾಗಿ ಕನ್ನಡದ ಪದಕೋಶವನ್ನು ಹೊಕ್ಕು ರೂಢಿಯ ದೇಶ್ಯ ಶಬ್ದಗಳನ್ನೇ ಹಿಂದಟ್ಟುವ ಮಟ್ಟಿಗೆ ಮೇಲುಗೈ ಪಡೆದಾಗ, ಕನ್ನಡ ವನ್ನೇ ಮರಸುವಂತೆ ಸಂಸ್ಕೃತದ ವಾಗ್ವಿಜೃಂಭಣೆ ಕಿವಿಯಲ್ಲಿ ಹಿತವೋ ಅಹಿತವೋ ಮೊರೆಯತೊಡಗಿದಾಗ, ಕವಿಗಳೂ ಲಾಕ್ಷಣಿಕರೂ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ ಕನ್ನಡ ಭಾಷೆಗಳ ನೆಲೆ ಬೆಲೆಗಳು ಹದ ಹೊಂದಿಕೆಗಳು ಇವನ್ನು ಕುರಿತು ವಿಚಾರ ಮಾಡು ವಂತಾಯಿತು.

ಸಂಸ್ಕೃತ ಕನ್ನಡಗಳ ಹೊಂದಿಕೆ ಹೇಗಿರಬೇಕು, ಪದಗಳ ಮಿಶ್ರಣದ ಹದ ಯಾವುದು ಈ ವಿಷಯಗಳಲ್ಲಿ ಕವಿರಾಜಮಾರ್ಗಕಾರನ ಕಾಲದಿಂದ ಲಾಕ್ಷಣಿಕರೂ ಕವಿಗಳೂ ಉಪಯುಕ್ತವಾದ ಸೂಚನೆಗಳನ್ನೂ ವಿವರಣೆಗಳನ್ನೂ ಕೊಟ್ಟಿರುತ್ತಾರೆ. 'ಕವಿರಾಜ ಮಾರ್ಗ'ದ (ಸು. ೮೫೦) ಪ್ರಥಮ ಪರಿಚ್ಛೇದದ ಹನ್ನೊಂದು ಪದ್ಯಗಳಲ್ಲಿ (೫೧–೬೧) ಕನ್ನಡ ಕಾವ್ಯಗಳನ್ನು ರಚಿಸುವಾಗ ಸಂಸ್ಕೃತ ಪದಗಳನ್ನು ಕನ್ನಡ ಪದಗಳೊಡನೆ ಹೇಗೆ ಪ್ರಯೋಗಮಾಡಬಹುದೆಂಬುದನ್ನೂ ಹೇಗೆ ಮಾಡಕೂಡದೆಂಬುದನ್ನೂ ವಿವರಿಸಿದೆ. ಕನ್ನಡ ಸಂಸ್ಕೃತ ಪದಗಳನ್ನು ಬೆರಸಿ ಸಮಾಸಮಾಡುವಾಗ ವಿರಸವಾಗಿ ತೋರದಂತೆ ಕೆಲವು ಸಂಗತಿಗಳನ್ನು ಗಮನಿಸಬೇಕೆಂದು ಇಲ್ಲಿ ಲಾಕ್ಷಣಿಕನ ಆಶಯ. ಸಾರಾಂಶ ಹೀಗೆ : ಕನ್ನಡ ಪದಗಳನ್ನು ಸಮಸಂಸ್ಕೃತ ಪದಗಳೊಂದಿಗೆ ಹೊಂದಿಕೆಯಾಗುವಂತೆ ಬೆರಸಿ ಬಳಸ ಬಹುದು. ಇದು ಶಾಸ್ತ್ರಜ್ಞರಿಗೆ ಸಮ್ಮತವಾದ್ದು. ಆ ಹೊಂದಿಕೆಗೆ ಅನುವಾಗುವ ಸಮ ಸಂಸ್ಕೃತ ಪದಗಳು ಎಂದರೆ ಕನ್ನಡ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಲು ಯೋಗ್ಯವೆನಿಸುವ ಮಟ್ಟಿಗೆ ಮಾರ್ಪಟ್ಟ ಸಂಸ್ಕೃತದ ನಾಮ ಪ್ರಕೃತಿಗಳೆಂದರ್ಥ (ಉದಾ. ಬಾಲಾ > ಬಾಲೆ; ಗೌರೀ > ಗೌರಿ ಇ). ಇಲ್ಲಿ ಕನ್ನಡ ಪದಗಳೊಡನೆ ವ್ಯಸ್ತ ಪದಗಳಾಗಿ ಎಂದರೆ ಬಿಡಿಯಾಗಿ ಸಂಸ್ಕೃತ ಪದಗಳು ಬಳಕೆಯಾಗುವುದರ ಔಚಿತ್ಯ ವಿವಕ್ಷಿತವಾಗಿದೆಯೆಂದು ತೋರುತ್ತದೆ. ಸಂಸ್ಕೃತದ ಅವ್ಯಯಗಳನ್ನು ಸ್ವತಂತ್ರವಾಗಿ ಕನ್ನಡ ಪದಗಳೊಂದಿಗೆ ಸೇರಿಸಿದರೆ ಹಿತ ವಾಗಿರುವುದಿಲ್ಲ; ಆ ಅವ್ಯಯಗಳು ಸಂಸ್ಕೃತೋಕ್ತ ಕ್ರಮದಲ್ಲಿ ಎಂದರೆ ಅಲ್ಲಿಯ ಸಂಧಿ ಲಕ್ಷಣಗಳಿಗೆ ಅನುಸಾರವಾಗಿ ಸಮಸಂಸ್ಕೃತ ಪದಗಳೊಡನೆ ಸೇರಿ ಸಮಾಸ ಪದಗಳಾದಾಗ

ಮಾತ್ರ ಕನ್ನಡ ಪದಗಳೊಡನೆ ಬಳಕೆಗೆ ಬರಲು ಹಿತವಾಗಿ ಹೊಂದಿಕೊಳ್ಳುತ್ತವೆ. ಅಂತಹ ಹೊಂದಿಕೆ "ಅತಿಶಯ ಮೃದಂಗ ಸಂಗೀತಕಾದಿ ಮಧುರರವಂಬೋಲ್" ಮುದವನ್ನುಂಟುಮಾಡುವುದೆಂದು ಲಾಕ್ಷಣಿಕನ ಅಭಿಪ್ರಾಯ. ಆದರೆ ಆತನ ದೃಷ್ಟಿಯಲ್ಲಿ ಸಂಸ್ಕೃತ ಕನ್ನಡ ಪದಗಳ ಸಮಾಸ "ಮುಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್" ವಿರಸವನ್ನುಂಟುಮಾಡುತ್ತವೆ. ಅಚ್ಚಕನ್ನಡ ಪದವನ್ನು, ಸಮಸಂಸ್ಕೃತವೇ ಆದರೂ ಸಂಸ್ಕೃತ ಪದದೊಡನೆ ಸೇರಿಸಿ ಸಮಾಸ ಮಾಡಬಾರದು (ಉದಾ: ಅರಸುಕುಮಾರನ್); ಎರಡೂ ಕನ್ನಡ ಪದಗಳಾಗಿರಲಿ, ಇಲ್ಲವೆ ಸಂಸ್ಕೃತ ಪದಗಳಾಗಿರಲಿ— ಎಂಬುದು ಸರಿಯಾದ ಕ್ರಮ. ಇಂತಹ ಸಂಯೋಜನ ಕವಿರಾಜಮಾರ್ಗಕಾರನ ದೃಷ್ಟಿಯಲ್ಲಿ "ಕನಕರಚನೆಯೊಳ್ ಮಣಿನಿಕರಂ ಒಂದಿದವೋಲ್ ಸುಂದರಮಕ್ಕುಂ."

ಮುಂದೆ ನಾಗವರ್ಮ ಮೊದಲಾದ ಕನ್ನಡ ವೈಯಾಕರಣರೂ ಈ ವಿಷಯದಲ್ಲಿ ತಮ್ಮ ಅಭಿರುಚಿ ಆಶಯಗಳೇನೆಂಬುದನ್ನು ತಿಳಿಸಿದ್ದಾರೆ. ಅವರಲ್ಲಿ ಮೊದಲಿಗನಾದ ನಾಗವರ್ಮ (ಸು. ೧೧೪೫) ಸಂಸ್ಕೃತ ಶಬ್ದಗಳನ್ನು ಕನ್ನಡಕ್ಕೆ ಲಿಂಗಗಳನ್ನಾಗಿ ಮಾಡಿಕೊಳ್ಳುವ ವಿಧಿ ವಿಧಾನಗಳನ್ನು ಕೊಂಚಮಟ್ಟಿಗೆ ವಿವರಿಸಿದ್ದಾನೆ. ಆದರೆ ಸ್ವಾರಸ್ಯಕರ ಸಂಗತಿಯೆಂದರೆ, ಈತ ಕನ್ನಡ ಮತ್ತು ಸಮಸಂಸ್ಕೃತ ಪದಗಳ ಸಮಾಸವನ್ನು ನಿರ್ದುಷ್ಟವೆಂದು ಒಪ್ಪಿರುವುದು (ಭಾಷಾಭೂಷಣ ೧೩೨ ; ಶಬ್ದಸ್ಮೃತಿ ೬೩). ಆತ ಕೊಡುವ ಉದಾಹರಣೆಗಳು ಬಹುಮಟ್ಟಿಗೆ ಪೂರ್ವಕವಿಗಳು ಎಂದೋ ಅಂಥ ಸಮಾಸಗಳನ್ನು ಮಾಡಿ ಶುದ್ಧವೆಂಬಂತೆ ಅಂಗೀಕಾರಮಾಡಿರತಕ್ಕವು ಎನ್ನುವುದರಿಂದಾಗಿ, ಆ ಬಗೆಯ ಸಮಾಸಗಳನ್ನು ಎಲ್ಲ ಸಂದರ್ಭಗಳಲ್ಲಿಯೂ ಒಪ್ಪಲಾಗದು, ಅಂಥವು ಕವಿಗಳಿಗೂ ಲಾಕ್ಷಣಿಕರಿಗೂ ಸಮ್ಮತವಲ್ಲ–ಎಂದೇ ತಿಳಿದರೆ ತಪ್ಪಾಗದು. ಈಚೆಯ ಲಾಕ್ಷಣಿಕ ಕೇಶಿರಾಜನಾದರೋ (ಸು. ೧೨೬೦) ನಾಗವರ್ಮನು ನಿರ್ದುಷ್ಟ ಸಮಾಸವೆಂದು ತಿಳಿದು ಕೊಟ್ಟಿರುವ ಉದಾಹರಣೆಗಳನ್ನು "ಆದ್ಯರಿಂದೆ ಸಂದುವಸಜಱಿದಿರ್ಪುದು," "ಆದಿಮಾರ್ಗದಿನೆಂತಕ್ಕೆ ಕೆಲವಂ ಸಂದುವಸಜಱಿದಿರ್ಪುದು," "ಮಾರ್ಗದೊಳುಳ್ಳುದರ್ಕೆ" ಎಂದು ಮುಂತಾಗಿ ಮಾತ್ರ ಅಂಗೀಕಾರಮಾಡಿದ್ದಾನೆ. ನಾಗವರ್ಮನು ಪ್ರಾಯಃ ಸಂಸ್ಕೃತಕ್ಕೆ ಸಂಸ್ಕೃತ, ತದ್ಭವಕ್ಕೆ ತದ್ಭವ ಹೀಗೆ ಆಗದೆ ಸಂಸ್ಕೃತಕ್ಕೆ ತದ್ಭವ, ತದ್ಭವಕ್ಕೆ ಸಂಸ್ಕೃತ ಹೀಗೆ ಆಗುವ ಸಮಾಸವನ್ನು ನಿಷೇಧಿಸಿದರೆ, ಕೇಶಿರಾಜನು ಅವನ್ನು ಸಮ್ಮತಿಸುವುದರ ಜೊತೆಗೆ ಕವಿರಾಜಮಾರ್ಗಕಾರನನ್ನು ಅನುಸರಿಸಿ 'ಅರಸುಕುಮಾರನ್' ಎಂಬ ರೀತಿಯ ಕನ್ನಡ ಸಮಸಂಸ್ಕೃತಗಳ ಸಮಾಸವನ್ನು ತಾನೂ ನಿಷೇಧಿಸಿದ್ದಾನೆ. ಅದು ಆತನ ಪ್ರಕಾರ ವಿರುದ್ಧ ಸಮಾಸ ಅಥವಾ ಅರಿಸಮಾಸ. ಅಲ್ಲದೆ ಈತ ತದ್ಭವಕ್ಕೆ ತದ್ಭವ, ತದ್ಭವವನ್ನು ಹೊಂದದ ಸಂಸ್ಕೃತಕ್ಕೆ ತದ್ಭವ, ತದ್ಭವಕ್ಕೆ ತದ್ಭವವನ್ನು ಹೊಂದದ ಸಂಸ್ಕೃತ—ಇಂಥ ಸಮಾಸಗಳ ಸಾಧುತ್ವವನ್ನೂ ಒಪ್ಪಿದ್ದಾನೆ. ಇವುಗಳಲ್ಲಿ ಮೊದಲನೆಯದನ್ನು ಅಸಂದಿಗ್ಧವಾಗಿ, ಉಳಿದ ಎರಡನ್ನು ಕ್ವಚಿತ್ಪಕ್ಷದಿಂದ ಒಪ್ಪಿದೆ ಎಂಬುದನ್ನು ಗಮನಿಸಿದರೆ, ಕನ್ನಡ ಸಂಸ್ಕೃತ ಪದಗಳು ಇರುವಂತೆಯೇ ಸಮಾಸವಾಗುವುದು ಪ್ರತಿಹಿತವಾಗದೆಂಬ ತಥ್ಯ ಹೊಳೆಯುತ್ತದೆ.

ಇದಿಷ್ಟು ಸಂಸ್ಕೃತ ಕನ್ನಡ ಪದಗಳ ಸಮಾಸ ವಿಚಾರವಾದರೆ, ಕೃತಿಗಳಲ್ಲಿ ಸಂಸ್ಕೃತ ಪದ ಪ್ರಾಚುರ್ಯದ ಔಚಿತ್ಯವಿಚಾರ ಇನ್ನೊಂದು ಸಂಗತಿಯಾಗಿದೆ. 'ಕವಿರಾಜಮಾರ್ಗ'ದಲ್ಲಿಯೇ ಕನ್ನಡದ ಮಾತುಗಳೊಡನೆ ಸಂಸ್ಕೃತದ ಮಾತುಗಳು ಹಿತಮಿತವಾಗಿ ಹೊಂದಿಕೊಂಡು ಬರುವಂತೆ ಮಾತುಗಾರಿಕೆಯಿರಬೇಕೆಂದು ಸ್ಪಷ್ಟವಾಗಿ ಉಕ್ತವಾಗಿದೆ. ಆ ಉಕ್ತಿ ಅಂಥ ಮಾದರಿಯನ್ನು ತೋರಿಸುವ ಉದಾಹರಣೆಯೂ ಆಗಬಹುದು :

ಸುಡಿಗಳೊಡಂಬಡೆಲ್ ಬಗೆದವೋಲ್ ಬಗೆಯಂ ಮಿಗಲೀಯದೊಂದೆ ನಾ
ಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
ಗುಡಿವಿಡುವಂತೆ ನೀಳ್ದು ನಿರೆ ಪೇೞ್ವುದು ನೀತಿನಿರಂತರಕ್ರಮಂ ॥ (೧–೧೪೯)

ನಯಸೇನನು 'ಧರ್ಮಾಮೃತ'ದಲ್ಲಿ (ಕ್ರಿ.ಶ. ೧೧೧೨)—

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸಕ್ಕೃತಿಯನೆಂದು ಕನ್ನಡವಂ ಚಿಂ
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥ (೧-೪೧)

ಎಂದರೆ, ಕನ್ನಡದಲ್ಲಿಯೇ ಕೃತಿರಚನೆಮಾಡುವುದಾಗಿ ಸಂಕಲ್ಪಿಸಿದ ಕವಿ, ರಚನೆಗೆ ತೊಡಗಿದಾಗ ಕನ್ನಡದ ಬಳಕೆಯಲ್ಲಿ ಸರಿಯಾಗಿ ಕೈಯೋಡದೆ ತೊಡಕಿನ ಸಂಸ್ಕೃತವನ್ನು ಪ್ರಯೋಗಿಸುವುದು ಸರಿಯೇ ?—ಎಂಬುದಾಗಿ ಪ್ರಶ್ನಿಸಿದ್ದಾನೆ. ಅಲ್ಲದೆ ಮುಂದುವರಿದು,

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ಧಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥ (೧-೪೩)

ಎಂದರೆ, ಸಂಸ್ಕೃತದ ಮೇಲೆ ವ್ಯಾಮೋಹವಿರುವ ಕನ್ನಡದ ಕವಿಗಳು, ಬೇಕಾದರೆ ಕೃತಿಯನ್ನು ಪೂರ್ತಿಯಾಗಿ ಸಂಸ್ಕೃತದಲ್ಲಿಯೇ ರಚಿಸಲಿ ; ಅಚ್ಚಕನ್ನಡದಲ್ಲಿ ಬರೆಯಹೊರಟು ಸಂಸ್ಕೃತವನ್ನು ಗಿಡಿಯಬಹುದೇ ?—ಎಂಬುದಾಗಿ ಆಕ್ಷೇಪಿಸಿದ್ದಾನೆ. "ವ್ಯವಹಾರದಲ್ಲಿರುವ ಸಂಸ್ಕೃತ ಶಬ್ದಗಳನ್ನು ಉಪಯೋಗಿಸುತ್ತ, ಕೋಶಸಹಾಯವಿಲ್ಲದೆ ಅರ್ಥವಾಗದ ಉದ್ಗ್ರಂಥಮಾತ್ರದೃಷ್ಟವಾದ ಕ್ಲಿಷ್ಟ ಶಬ್ದಗಳನ್ನು ತ್ಯಜಿಸಿ, ಸಂಸ್ಕೃತ ಕಾವ್ಯಸರಣಿಯನ್ನು ಬಿಟ್ಟು ಕನ್ನಡ ನುಡಿಯ ಮಾರ್ಗವನ್ನೇ ಅನುಸರಿಸಿ ಬರೆಯಬೇಕೆಂಬುದು ಇವನ ಆಶಯವಾಗಿ ಕಾಣುತ್ತದೆ"—ಎಂಬುವದನ್ನು[6] ಇಲ್ಲಿ ಗಮನಿಸಬೇಕು. ನಾಗವರ್ಮ ಕೇಶಿರಾಜರು ತಮ್ಮ ವ್ಯಾಕರಣ ಗ್ರಂಥಗಳನ್ನು ಹಳಗನ್ನಡದಲ್ಲಿ ಬರೆಯಹೊರಟಾಗ ಅದರೊಡನೆ ಹಿತವಲ್ಲದ ಸಂಸ್ಕೃತಕ್ಕೆ ಪ್ರಾಮುಖ್ಯ ಕೊಡುವುದು ವಿವೇಕವಲ್ಲವೆಂಬ ಪರೋಕ್ಷ ಸೂಚನೆಯನ್ನು—

ಪಱಿಗನ್ನಡದೆ ಪುದುಂಗೊಳೆ
ಕೊಱಿಸಕ್ಕದಮಂ ತಗುಳ್ಚಿ ಜಾಣ್ಕೆಡೆ ಮುತ್ತುಂ
ಮೆಱಿಸುಂಗೋದಂತಿರೆ ಪೇ
ಲ್ವೞಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ ॥

ಎಂಬ (ಶಬ್ದಸ್ಮೃತಿ ಸೂ. ೧೧, ಶಬ್ದಮಣಿದರ್ಪಣ ಸೂ. ೭೫) ಲಕ್ಷ್ಯಪದ್ಯದ ಮೂಲಕ ನೀಡಿದ್ದಾರೆ.

ಸಂಸ್ಕೃತದಲ್ಲಿ ಎಷ್ಟು ಅಭಿಮಾನವಿದ್ದರೂ ಪಾಂಡಿತ್ಯವಿದ್ದರೂ ಕನ್ನಡದ ಅಭಿಮಾನವನ್ನೇ ಕನ್ನಡ ಕವಿಗಳೂ ಲಾಕ್ಷಣಿಕರೂ ಎತ್ತಿ ಹಿಡಿದಿದ್ದಾರೆಂಬುದು ಇಂತಹ ಉಕ್ತಿಗಳಿಂದ ತಿಳಿಯುತ್ತದೆ. ಅಜ್ಞಾತಕರ್ತೃಕವಾದ ಒಂದು ಚಾಟೂಕ್ತಿಯಲ್ಲಿ (ಸು. ೧೫೦೦) "ಕ್ಷಿತಿಯೊಳ್ ಕರ್ಣಾಟಂ ಸಂಸ್ಕೃತಕಧಿಕಮ್" ಎಂದು ಘೋಷಿಸಿದ್ದರೆ, ಇನ್ನೊಬ್ಬ ಈಚಿನ ಕವಿ "ಲಲಿತನಹ ಕನ್ನಡದ ನುಡಿಯಲಿ। ತಿಳಿದು ತನ್ನೊಳು ತನ್ನ ಮೋಕ್ಷವ। ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ?" ಎಂಬುದಾಗಿ ಪ್ರಶ್ನಿಸಿದ್ದಾನೆ.

"ಪೂರ್ವಕಾಲದ ಕನ್ನಡ ಕವಿಗಳು ತಮ್ಮ ಗ್ರಂಥಗಳಲ್ಲಿ ಆವಶ್ಯಕವಾದ ಕಡೆಯಲ್ಲಿ ಸಂಸ್ಕೃತ ಪದಗಳನ್ನು ಮಿತವಾಗಿ ಉಪಯೋಗಿಸುತ್ತಿದ್ದಂತೆ ಕಾಣುತ್ತದೆ. ಕಾಲಕ್ರಮದಲ್ಲಿ ಕೆಲವರು ಕವಿಗಳು ಸಂಸ್ಕೃತಪದಗಳನ್ನು ಅವಶ್ಯವಲ್ಲದ ಸಂದರ್ಭದಲ್ಲಿಯೂ ವಿಶೇಷವಾಗಿ ಪ್ರಯೋಗಿಸಿದುದರಿಂದ ಅಂಥ ಪ್ರಯೋಗಗಳು ಆಕ್ಷೇಪಣೆಗೆ ಗುರಿಯಾದಂತೆ ಕಾಣುತ್ತದೆ."—ಎಂಬ ಹೇಳಿಕೆ[7] ದೇಶೀಶೈಲಿಯು ಮಾರ್ಗಶೈಲಿಗೆ ಕಾಲಕ್ರಮದಲ್ಲಿ ಎಡೆ ಮಾಡಿದುದನ್ನು ಸೂಚಿಸುತ್ತದೆ. ಸಂಸ್ಕೃತಶಬ್ದಗಳ ಮತ್ತು ಆ ಭಾಷೆಗೆ ಸಹಜವಾದ ಉಕ್ತಿವೈಚಿತ್ರ್ಯಗಳ ಬಳಕೆ ಕನ್ನಡಸಾಹಿತ್ಯದ ಮೊದಮೊದಲ ದೆಸೆಯಲ್ಲಿಯೇ ತಕ್ಕ ಹದದಲ್ಲಿ ರೂಢಿಗೆ ಬರಲಿಲ್ಲವೆಂಬುದು ಆ ಕಾಲದ ಕೃತಿಗಳ ಪರಿಶೀಲನದಿಂದ ಗೊತ್ತಾಗುತ್ತದೆ. ಕ್ಲಿಷ್ಟವಾದ ಸಂಸ್ಕೃತ ಶಬ್ದಗಳನ್ನು ಬಳಸುತ್ತಹೋದುದು, ಅರ್ಥಕ್ಕೆ ತೊಡರಿಕೊಳ್ಳುವ ಉದ್ದುದ್ದನೆಯ ಸಂಸ್ಕೃತ ಸಮಾಸಗಳನ್ನು ಹೆಣೆಯುತ್ತಹೋದುದು, ಭಾವಕ್ಕಿಂತ ಶಬ್ದಾಡಂಬರಕ್ಕೆ ಲಕ್ಷ್ಯ ಸಲ್ಲುತ್ತ ಬಂದುದು ಅರ್ಥವಿಶದತೆಗೆ ಅಡ್ಡಿ ತರುವಂತಾಯಿತು.

ಈ ಅವತರಣಿಕೆಯನ್ನು ನೋಡಿ : "ಎಲ್ಲೋ ಸಂಸ್ಕೃತದಲ್ಲಿ ಬರೆಯುವುದಕ್ಕೆ ಹೊರಟು, ಮರೆತು ಕನ್ನಡ ಪ್ರತ್ಯಯಗಳನ್ನು ಹತ್ತಿಸಿದ ಹಾಗೆ ಕಾಣುತ್ತದೆ. ಪುಟ್ಟವಾಗಿಯೂ ಇಂಪಾಗಿಯೂ ತಿರುಳುಳ್ಳವಾಗಿಯೂ ಇರುವ ಕನ್ನಡ ಮಾತುಗಳನ್ನು ಮೂಲೆಗೆ ತಳ್ಳಿ ಎರಡು ಮೂರು ಪಾದ ಉದ್ದವಾದ ಸಂಸ್ಕೃತಸಮಾಸಗಳ ಆಡಂಬರದಿಂದ ಅನ್ಯಾಯವಾಗಿ ಭಾಷೆಯನ್ನು ಹಿಂಸುಮಾಡಿದರಲ್ಲ! ಸಂಸ್ಕೃತದ ಆರ್ಭಟವಿಲ್ಲದೆ ಕನ್ನಡದಲ್ಲಿ ಗ್ರಂಥವನ್ನೇ ಬರೆಯುವುದಕ್ಕೆ ಆಗುವುದಿಲ್ಲ ಎಂದು ಬಾಯಿ ಬಡಿಯುವರಲ್ಲ!"[8]

ಮತೀಯ ಪ್ರಕ್ರಿಯೆ ಮತ್ತು ಗಹನವಾದ ತಾತ್ತ್ವಿಕ ನಿರೂಪಣೆಗಳಿಗೆ, ರಾಜನ ಮತ್ತು ರಾಜಾಸ್ಥಾನದ ಪಂಡಿತವರ್ಗದ ರಂಜನೆಗೆ ಪ್ರಾಮುಖ್ಯಕೊಡುವುದು ಅವಶ್ಯವೆಂದು ಕಂಡಾಗ ಸಂಸ್ಕೃತವು ಮೇಲುಗೈಯಾಗುತ್ತಿದ್ದಿತು. ಅಲ್ಲದೆ ಕೆಲವು ಪ್ರಾಚೀನ

ಕನ್ನಡ ಕವಿಗಳು ಉಭಯಭಾಷಾ ಕವಿಗಳಾಗಿದ್ದುದರಿಂದ ಸಂಸ್ಕೃತದ ಬಳಕೆಯಲ್ಲಿ ಅವರಿಗೆ ಅಭಿಮಾನವೂ ಆವೇಶವೂ ಸಹಜವಾಗಿಯೇ ಇದ್ದು ಬಳಕೆಯ ಹದ ಮಿತಿಯನ್ನು ದಾಟುತ್ತಿರುವುದು ಸಾಧ್ಯ. ಇದು ಯತ್ನಪೂರ್ವಕವೂ ಹೌದು, ಅಯತ್ನಪೂರ್ವಕವೂ ಹೌದು. ಈಚಿನ ಕೆಲವು ಕವಿಗಳು ದೇಸಿ ಛಂದಸ್ಸಿನಲ್ಲಿ ಕೃತಿರಚನೆ ಮಾಡಲು ತೊಡಗಿದಾಗ, ಸಂಸ್ಕೃತ ಕನ್ನಡ ಮಿಶ್ರಣದ ಹದ ಹಿತವಾಗಿ ಮಿತವಾಗಿರಬೇಕೆಂಬುದನ್ನು ಮನಗಂಡಿದ್ದಾರೆ. ಅದನ್ನು ವ್ಯಕ್ತವಾಗಿ ಹೇಳಿಯೂ ಇದ್ದಾರೆ. "ಸಂಸ್ಕೃತಕ್ಕೂ ಕನ್ನಡಕ್ಕೂ ಒಂದು ತೆರದ ವಾದ ಹೀಗೆ ಬಂದ ಕಾಲದಲ್ಲಿ ದೇಶಿಯೂ ಮಾರ್ಗವೂ ಕಲೆತು ಒಂದು ಮಧ್ಯಸ್ಥಿಕೆಗೆ ಬಂದುವು. ಸಂಸ್ಕೃತದ ಸಾರವನ್ನು ಕನ್ನಡ ಹೀರಿತು, ಆದರೆ ತಾನು ಮಾತ್ರ ಜಗ್ಗಲಿಲ್ಲ"—ಎಂಬ ಮಾತು ದಿಟ.[9] ಇನೆಯ ಮಂಗರಸ ಕವಿ (೧೫೦೮) ತನ್ನ ಗ್ರಂಥಗಳಲ್ಲಿ ಒಂದು ಕಡೆ "....ಪಾಲೊಳಗಯಿದಾರೆಯ ಸಕ್ಕರೆಯಂ। ಓತೊಡವೆರಸುವ ತೆಜದಿಂ ನವರಸ ರೀತಿವಡೆದ ಸಕ್ಕದದೊಳು ಕನ್ನಡವಾತಂ ಸಮಜಿಂ ಬೆರಸಿ ಜಯನೃಪ ಚಾರಿತ್ರಮನೋತುಸಿರ್ದೆಂ (೧-೨೩)" ಎಂದೂ ಇನ್ನೊಂದು ಕಡೆ "ಸಂದ ಸಕ್ಕದಗನ್ನಡವನೆರಡನೊಡವೆರಸಿ। ಮಂದೇತರಾಮೋದದಿಂದ ಮೃದುಪಾಕಮಪ್ಪಂದದಿಂ ವಿರಚಿಸಿದೆ"(೧೨-೪೫) ಎಂದೂ ಹೇಳಿದ್ದಾನೆ. ಪ್ರಭುಗನೆಂಬೊಬ್ಬ ಕವಿ (ಸು. ೧೫೭೦)ತನ್ನ ಒಂದು ಚಂಪೂ ಕೃತಿ 'ಸಕ್ಕದಗನ್ನಡಂಗಳಿಕ್ಕೆ....' ಎಂಬುದಾಗಿ ಹೇಳಿಕೊಂಡಿದ್ದಾನೆ. ನಂಜುಂಡ ಕವಿ (ಸು. ೧೫೨೫) 'ಕನ್ನಡ ಸಂಸ್ಕೃತವೆಂಬವಜಖೂಳ್ ತೊಡಕೆಳ್ಳನಿತಿಲ್ಲದೆ ನಾಂ ಪೇೞ್ದೆನು' ಎಂದಿರುವಲ್ಲಿಯೂ ಈಯೆರಡು ಭಾಷೆಗಳ ಹಿತಮಿತವಾದ ಮಿಶ್ರಣವೇ ಉದ್ದೇಶಿತವಾಗಿರುವಂತೆ ತೋರುತ್ತದೆ. "ಸಂಸ್ಕೃತ ಮಾತುಗಳನ್ನು ಇದ್ದಂತೆಯೇ ಬಳಸಿಕೊಳ್ಳಲು ಕನ್ನಡಿಗರು ಅಳುಕಲಿಲ್ಲ, ಶಾಸ್ತ್ರಪರಿಭಾಷೆಗೆಲ್ಲ ಸಂಸ್ಕೃತವನ್ನು ಉಪಯೋಗಿಸಿಕೊಂಡಿದ್ದಾರೆ. ಇದು ಕುಂದೆಂದು ಹೇಳಲಾಗುವುದಿಲ್ಲ. ಹದವರಿತು ಸಂಸ್ಕೃತವನ್ನು ಬಳಸಿಕೊಂಡಿದ್ದರಿಂದ ಕನ್ನಡ ಪುಷ್ಟಿಗೊಂಡು ಬೆಳೆಯಿತು" ಎಂಬ ಮಾತು ನಿಜ. ಸಂಸ್ಕೃತ ಪದಕೋಶವು ಕನ್ನಡ ಪದಕೋಶದ ಮೇಲೆ ಮಾಡಿರುವ ಪ್ರಭಾವ ಪರಿಣಾಮಗಳು ಅತ್ಯಂತ ಗಾಢವಾದುದು ಹಾಗೂ ವ್ಯಾಪಕವಾದುದು. ಗಹನವಾದ ತಾತ್ತ್ವಿಕಚಿಂತನೆಯಿಂದ ಹಿಡಿದು ಸಾಮಾನ್ಯವಾದ ಲೌಕಿಕವ್ಯವಹಾರದವರೆಗೆ ಸಂಸ್ಕೃತಶಬ್ದಗಳು ತುಂಬಿಕೊಂಡಿವೆ.

ಸಂಸ್ಕೃತ ಶಬ್ದಗಳು ಅಲ್ಪ ಮತ್ತು ಅಧಿಕ ಪರಿವರ್ತನೆಗಳೊಡನೆ ಕನ್ನಡ ಪದಕೋಶವನ್ನು ಸೇರಿಕೊಂಡಿವೆಯಷ್ಟೆ. ಅಧಿಕ ಪರಿವರ್ತನೆಯ ತದ್ಭವಗಳು ಬಲುಮಟ್ಟಿಗೆ ಪ್ರಾಕೃತದ ಮೂಲಕವಾಗಿಯೇ ಬಂದಿವೆಯೆಂದು ಹೇಳಬಹುದು. ಇದನ್ನು ಗಮನಿಸಿ ರಾ. ನರಸಿಂಹಾಚಾರ್ ಅವರು ಪ್ರಾಕೃತಭವ ಮತ್ತು ಪ್ರಾಕೃತಸಮ ಎಂಬ ಎರಡು ವಿಭಾಗಗಳನ್ನು ಸೂಚಿಸಿ ಅವಕ್ಕೆ ನಿದರ್ಶನಗಳನ್ನು ಕೊಟ್ಟಿದ್ದಾರೆ :[10] ದಂಷ್ಟ್ರಾ–ದಾಢಾ –ದಾಡೆ, ಶ್ರೀಃ–ಸಿರೀ–ಸಿರಿ, ವೃತ್ತಂ—ವಟ್ಟಂ–ಬಟ್ಟ, ನಿರ್ಝರಃ—ಓಜ್ಝರೋ–ಒಜ್ಜರಂ ಇತ್ಯಾದಿಗಳಲ್ಲಿ ಕೊನೆಯ ರೂಪಗಳು ಪ್ರಾಕೃತಭವಗಳು. ಸ್ನೇಹ–ನೇಹ–ನೇಹ, ಪ್ರತಿ–ಪಡಿ–ಪಡಿ, ಸ್ಥಾನಂ–ಠಾಣಂ–ಠಾಣಂ, ಕಾರ್ಯ–ಕಜ್ಜ–ಕಜ್ಜ ಇತ್ಯಾದಿ

ಗಳಲ್ಲಿ ಕೊನೆಯ ರೂಪಗಳು ಪ್ರಾಕೃತಸಮಗಳು. ಹಿಗೆಯೇ ಅಚ್ಚುಕಟ್ಟು, ಅಂಬಿಲ, ಗಾವುದ, ಪಕ್ಕಾ ಮೊದಲಾದ ಸಂಸ್ಕೃತಜನ್ಯ ತದ್ಭವಗಳು ಪಾಲೀ ನಿಘಂಟುಗಳಲ್ಲಿ ಕನ್ನಡಕ್ಕೂ ಪಾಲಿಗೂ ಸಮಾನವಾಗಿ ಕಂಡುಬರುತ್ತವೆ. ಕೇಶಿರಾಜನು “ಕನ್ನಡದೊಳ್ ಸ್ವಭಾವದಿಂ ಮಹಾಪ್ರಾಣಂಗಳೊಳವು” ಎಂಬುದಾಗಿ ಹೇಳಿ ಕೊಟ್ಟಿರುವ ಪದಗಳೂ ಅಪಭ್ರಂಶ ಪ್ರಕರಣದ ಕೆಲವು ಪದಗಳೂ ಪ್ರಾಕೃತಮೂಲವಾದ ತದ್ಭವಗಳೆಂದೇ ತೋರುತ್ತವೆ. ಜೈನ ಕವಿಗಳು ಕ್ರಿಸ್ತಶಕದ ಆರಂಭದಲ್ಲಿ ತಮ್ಮ ಧಾರ್ಮಿಕ ತತ್ತ್ವಗಳನ್ನು ಕನ್ನಡದಲ್ಲಿ ವಿಶದಪಡಿಸಲು ಯತ್ನಿಸಿದಾಗ, ಸಂಸ್ಕೃತ ಶಬ್ದಗಳ ಬಳಕೆ ಅಪೇಕ್ಷಣೀಯವಾಗಿ “ಪ್ರಾಕೃತ ವ್ಯಾಕರಣಾನುಸಾರವಾಗಿ ಸಂಸ್ಕೃತ ಶಬ್ದಗಳನ್ನು ವಿಕಾರಗೊಳಿಸಿ ಕನ್ನಡ ಭಾಷೆಗೆ ಹೊಂದಿಕೊಳ್ಳುವಂತೆ ಮಾರ್ಪಾಟುಮಾಡಿಕೊಂಡರು.” ಹೀಗೆ ಕನ್ನಡ ಪದಕೋಶವು ವೃದ್ಧಿಯಾಗಲು ಪ್ರಾಕೃತ ಭಾಷೆ ಸಹಾಯಕವಾಯಿತೆಂದು ಹೇಳಬಹುದು. ಪ್ರಾಕೃತ ಸಾಹಿತ್ಯದಿಂದ ಕನ್ನಡ ಸಾಹಿತ್ಯಕ್ಕೆ ಹಾಗೂ ಇದರಿಂದ ಅದಕ್ಕೆ ದೊರೆತಿರುವ ಒದವು ಒತ್ತಾಸೆಗಳನ್ನು ಮುಂದೆ ಗಮನಿಸಲಾಗುವುದು.

ಕನ್ನಡ ಸಾಹಿತ್ಯ ರಚನೆ ಈಗ ತಿಳಿದಿರುವ ಮಟ್ಟಿಗೆ ಜೈನಕವಿಗಳಿಂದ ಆರಂಭವಾಯಿತು. ಆರಂಭಕಾಲದ ಜೈನಕವಿಗಳು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಸರಿಸಮವಾದ ಪಾಂಡಿತ್ಯವನ್ನು ಬೆಳಸಿಕೊಂಡಿದ್ದರು, ಪಾಂಡಿತ್ಯದಲ್ಲಿ ಅಭಿಮಾನವುಳ್ಳವರಾಗಿದ್ದರು. ಇವರೂ ಈಚಿನ ಹಲವರು ಕವಿಗಳೂ ಉಭಯ ಕವಿಚಕ್ರವರ್ತಿ, ಉಭಯಕವಿ, ಉಭಯ ಕವಿತಾವಿಲಾಸ, ಸಂಸ್ಕೃತ ಕರ್ಣಾಟಕ ಕವಿತಾವಿಶಾರದ, ಚತುರ್ವಿಧ ಪಂಡಿತ, ಚತುರ್ಭಾಷಾ ಕವಿಚಕ್ರವರ್ತಿ, ಚತುರ್ವಿಧ ಪಾಂಡಿತ್ಯಮಂಡಿತ, ಷಡ್ಭಾಷಾ ಕವಿಚಕ್ರವರ್ತಿ, ಅಷ್ಟಭಾಷಾಕವಿವರ—ಎಂದು ಮುಂತಾಗಿ ತಮ್ಮನ್ನು ಕರೆದುಕೊಂಡಿರುವುದು ಅವರ ಬಹುಭಾಷಾಜ್ಞಾನವನ್ನು ತೋರಿಸುತ್ತದೆ. ಈ ಕವಿಗಳಲ್ಲಿ ಹಲವರು ತಮ್ಮ ಅಗಾಧವೂ ಬಹುಮುಖವೂ ಆದ ವಿದ್ಯಾಪರಿಣತಿಯನ್ನು ಹೇಳಿರುವ ರೀತಿಯಲ್ಲಿಯೂ ಸಂಸ್ಕೃತಪ್ರಾಕೃತಾದಿ ಸಾಹಿತ್ಯಗಳ ಅಭ್ಯಾಸ ಅನುಸರಣೆ ಪ್ರಯೋಜನಗಳೇ ವ್ಯಕ್ತಪಟ್ಟಿವೆ. ಆ ಸಾಹಿತ್ಯಗಳಲ್ಲಿಯ ಕಾವ್ಯಶಾಸ್ತ್ರಗಳನ್ನೂ ವೃತ್ತಿವ್ಯಾಖ್ಯಾನಗಳನ್ನೂ ಸಿದ್ಧಾಂತಾದಿ ಗ್ರಂಥಗಳನ್ನೂ ಮೂಲದಲ್ಲಿಯೇ ಚೆನ್ನಾಗಿ ಅವರು ಅಭ್ಯಾಸಮಾಡಿರುತ್ತಿದ್ದರು. ಅವರ ಅಭ್ಯಾಸ ಯಾವುದಾದರೊಂದು ಕಾವ್ಯ, ಒಂದು ಶಾಸ್ತ್ರ ಇವನ್ನು ಒಳಕೊಂಡಿರದೆ ಪ್ರಸಿದ್ಧರಾದವರಲ್ಲಿ ಹಲವರ ಕಾವ್ಯನಾಟಕಗಳನ್ನೂ ಲೋಕೋಪಯೋಗಿಯೂ ಆತ್ಮೋನ್ನತಿಸಾಧಕವೂ ಆದ ವಿವಿಧ ಶಾಸ್ತ್ರಪ್ರಕಾರಗಳನ್ನೂ ಕಲೆಗಳನ್ನೂ ಒಳಕೊಂಡಿರುತ್ತಿದ್ದಿತು. ಇವನ್ನು ಅವರು ಹೃದ್ಗತವಾಗಿ ಬಲ್ಲಂತಹ ಗುರುಗಳಲ್ಲಿ, ಯತಿಶ್ರೇಷ್ಠರಲ್ಲಿ ಕ್ರಮಾಗತವಾಗಿ ಶ್ರದ್ಧೆಯಿಂದ ಅಭ್ಯಾಸಮಾಡುತ್ತಿದ್ದರು. ಅನೇಕ ವೇಳೆ ಗ್ರಂಥಕರ್ತೃಗಳ ಜನ್ಮದಾತೃಗಳೋ ಸಮೀಪಸಂಬಂಧಿಗಳೋ ಆಯಾ ಗ್ರಂಥಕರ್ತೃವಿನ ಪಾಂಡಿತ್ಯಸಂವರ್ಧನೆಗೆ, ಸಾಹಿತ್ಯರಚನೆಗೆ ತಕ್ಕ ರೀತಿಯಲ್ಲಿ ಪ್ರಭಾವ ಪರಿಸರಗಳನ್ನು ಕಲ್ಪಿಸುತ್ತಿದ್ದರು. ಅಂದಿನ ಜೀವನ ವಿಧಾನದಲ್ಲಿ ಮತ್ತು ವಿದ್ಯಾಭ್ಯಾಸ

ದಲ್ಲಿ ಸಂಸ್ಕೃತ ಪ್ರಾಕೃತಾದಿ ಭಾಷಾಸಾಹಿತ್ಯಗಳ—ಮುಖ್ಯವಾಗಿ ಸಂಸ್ಕೃತ ಭಾಷಾ ಸಾಹಿತ್ಯದ—ಅಭ್ಯಾಸವು ಅಪರಿಹಾರ್ಯವಾದುದಾಗಿತ್ತು. ತತ್ಫಲವಾಗಿ, ಕನ್ನಡ ಕವಿಗಳು ಪರಿಪೂರ್ಣವೂ ಬಹುಮುಖವೂ ಆದ ವ್ಯಾಸಂಗದಿಂದ ತಮ್ಮ ಪಾಂಡಿತ್ಯವನ್ನು ಬಲಪಡಿಸಿಕೊಂಡು, ಉಜ್ವಲವಾದ ಪ್ರತಿಭೆಯ ಉನ್ಮೇಷದಿಂದ ಒಂದೋ ಎರಡೋ ಸಾರ್ಥಕವಾದ ಕೃತಿಗಳನ್ನು ರಚಿಸಿ ವಿಖ್ಯಾತರಾಗುತ್ತಿದ್ದರು.

ಇಂತಹ ಹಿನ್ನೆಲೆಯಲ್ಲಿ, ಕನ್ನಡ ಸಾಹಿತ್ಯದ ಭಾಷಾಶೈಲಿಯ ಮೇಲೆ ಸಂಸ್ಕೃತ ಪ್ರಾಕೃತಾದಿ ಸಾಹಿತ್ಯಗಳ ಭಾಷಾಶೈಲಿಯನ್ನು ತಿಳಿಯುವುದು ಸುಲಭ. ಈಯೆರಡು ಅವತರಣಿಕೆಗಳನ್ನು ಗಮನಿಸಬಹುದು:

"ಸಂಸ್ಕೃತ ಸಾಹಿತ್ಯವೂ ಅದರ ಪದ್ಧತಿಯೂ ಪ್ರಾಬಲ್ಯಕ್ಕೆ ಬರುವುದಕ್ಕೆ ಮುಂಚೆ ಶುದ್ಧ ಕನ್ನಡ ಸಂಪ್ರದಾಯದಲ್ಲಿ ಕನ್ನಡ ಸಾಹಿತ್ಯವು ಹುಟ್ಟಿ ಬೆಳೆದುಬಂದಿದ್ದಿತೇ?—ಇದು ತಿಳಿಯುವುದು ಕಷ್ಟ. ಅಂತು ಈಗ ಇರುವ ಹಳಗನ್ನಡದ ಗ್ರಂಥಗಳು, ಅದರಲ್ಲಿಯೂ ಪ್ರೌಢವಾದ ಪ್ರಾಚೀನ ಕಾವ್ಯಗಳು, ಸಂಸ್ಕೃತ ಮಾರ್ಗವನ್ನು ಅನುಸರಿಸಿಯೇ ಬರೆದವುಗಳು. ಆಲಂಕಾರಿಕರು ಕಾವ್ಯದಲ್ಲಿ ರಸ ಧ್ವನಿ ಮುಂತಾದ ಯಾವ ಅಂಶಕ್ಕೇ ಪ್ರಾಧಾನ್ಯವನ್ನು ಹೇಳುತ್ತಿರಲಿ, ನೃಪತುಂಗನ ಕಾಲಕ್ಕೆ ಹಿಂದೆಯೇ ಸಂಸ್ಕೃತ ಕವಿಗಳು ಚಮತ್ಕಾರಪ್ರಿಯರಾಗಿ ಬಾಣನ ಕಾವ್ಯಗಳಿಗೆ ಅಗ್ರಸ್ಥಾನವನ್ನು ಕೊಟ್ಟು 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂದು ಹೇಳುತ್ತಿದ್ದರು. ಕನ್ನಡಿಗರೂ ಇವರ ಮಾರ್ಗವನ್ನೇ ಅನುಸರಿಸಿ ಪಂಡಿತರಂಜಕವಾದ ಘನವಾದ ಚಂಪೂಕಾವ್ಯಗಳನ್ನು ಬರೆದರು. ಸಂಸ್ಕೃತ ಸಾಹಿತ್ಯದಲ್ಲಿ ನಾಟಕಕ್ಕೆ ಮೊದಲಿನಿಂದಲೂ ಪ್ರಾಧಾನ್ಯಬಂದಿದ್ದರೂ ಅದರ ಸುಪ್ರಸಿದ್ಧ ನಾಟಕಗಳೆಲ್ಲವೂ ಈ ಕಾಲಕ್ಕೆ ಹಿಂದೆಯೇ ಬರೆಯಲ್ಪಟ್ಟಿದ್ದುವು. ಆಗ ನಾಟಕವಲ್ಲಿ ಜನರಿಗೆ ವಿಶೇಷ ಅಭಿರುಚಿ ಇದ್ದಂತೆ ತೋರುವುದಿಲ್ಲ. ಇದ್ದದ್ದೆಲ್ಲಾ ಮಹಾಕಾವ್ಯ. ಇದರಿಂದಲೇ ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದವರೆಗೆ ಕಂಡುಬರುವುದು ಮುಖ್ಯವಾಗಿ ಮಹಾಕಾವ್ಯವೇ...."[11]

"ಕನ್ನಡದಲ್ಲಿ ಗ್ರಂಥರಚನೆಯಾಗುವ ಹೊತ್ತಿಗೆ ಸಂಸ್ಕೃತವು ಸಮಗ್ರ ಭರತಖಂಡದ ಸಂಸ್ಕೃತಿಯ ಭಾಷೆಯಾಗಿ ಏರ್ಪಟ್ಟು ವಿಶೇಷವಾದ ಪ್ರಾಬಲ್ಯವನ್ನು ಪಡೆದಿತ್ತು. ಸಂಸ್ಕೃತ ಸಾಹಿತ್ಯವೇ ಕನ್ನಡ ಸಾಹಿತ್ಯ ರಚನೆಗೆ ಪ್ರೇರಕವೂ ಪೋಷಕವೂ ಆಗಿತ್ತೆಂದು ಹೇಳಬಹುದು. ಕಾವ್ಯಕ್ಕೆ ತಕ್ಕ ವಿಷಯವಾವುದು, ಅದನ್ನು ಕಾವ್ಯದಲ್ಲಿ ಯಾವ ರೀತಿಯಲ್ಲಿ ನಿರೂಪಿಸಬೇಕು ಎಂಬುದನ್ನು ಕನ್ನಡ ಕವಿಗಳು ಸಂಸ್ಕೃತ ಕವಿಗಳಿಂದ ಕಲಿತರು. ಕೆಲವರು ಸಂಸ್ಕೃತ ಪ್ರಾಕೃತ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು, ಮತ್ತೆ ಕೆಲವರು ಕಾವ್ಯವಸ್ತುವನ್ನು ಸಂಸ್ಕೃತದಿಂದ ಸಂಗ್ರಹಿಸಿ ಹೊಸ ಕಾವ್ಯಗಳನ್ನು ರಚಿಸಿದರು. ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಸಾಹಿತ್ಯ ಸಾಮಗ್ರಿಯ ಭಂಡಾರವಾದದ್ದು ಮಾತ್ರವಲ್ಲದೆ ಕನ್ನಡ ಕವಿಗಳಿಗೆ ಕನ್ನಡಿಯೂ ಕೈದೀವಿಗೆಯೂ ಆಯಿತು.

ಸಂಸ್ಕೃತ ಸಾಹಿತ್ಯಕ್ಷೇತ್ರವು ವಿಸ್ತಾರವಾದದ್ದು. ಅದರಲ್ಲಿ ಯಾವ ಭಾಗವನ್ನು ಕನ್ನಡ ಕವಿಗಳು ಮಾದರಿಯಾಗಿಟ್ಟುಕೊಂಡರೆಂಬುದು ನಾವು ತಿಳಿದುಕೊಳ್ಳಬೇಕಾದ ಸಂಗತಿ. ಸಾಹಿತ್ಯಾಭಿರುಚಿಯು ಕಾಲಕಾಲಕ್ಕೂ ಮಾರ್ಪಡುತ್ತದೆ. ಕನ್ನಡದಲ್ಲಿ ಸಾಹಿತ್ಯ ರಚನೆಯಾಗುವ ಕಾಲಕ್ಕೆ ಸಂಸ್ಕೃತದಲ್ಲಿ ಯಾವ ಅಭಿರುಚಿಯು ಬಳಕೆಯಲ್ಲಿತ್ತೋ ಆ ಅಭಿರುಚಿಯೇ ಕನ್ನಡ ಸಾಹಿತ್ಯದ ಸ್ವರೂಪವನ್ನೂ ನಿರ್ಧರಿಸುವುದು ಸ್ವಾಭಾವಿಕ. ಕನ್ನಡ ಸಾಹಿತ್ಯ ರಚನೆಯ ಆರಂಭಕಾಲವನ್ನು ಸುಮಾರು ಆರನೆಯ ಅಥವಾ ಏಳನೆಯ ಶತಮಾನವೆಂದು ಇಟ್ಟುಕೊಳ್ಳಬಹುದು. ಅಷ್ಟು ಹೊತ್ತಿಗೆ ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಸ ವಾಲ್ಮೀಕಿಗಳ, ಭಾಸ ಕಾಳಿದಾಸರ ಕಾಲವಾಗಿ ಹೋಗಿ ಬಾಣ ಮಾಘರ ಕಾಲ ಸನ್ನಿಹಿತವಾಗಿತ್ತು. ಎಂದರೆ, ಕಾವ್ಯದಲ್ಲಿ ಧರ್ಮ ನೀತಿಗಳಿಗೂ, ಭಾವ ರಸಗಳಿಗೂ ಪ್ರಾಶಸ್ತ್ಯವನ್ನು ಕೊಡುವ ಸಂಪ್ರದಾಯವು, ಅಭಿರುಚಿಯು, ಹಿಂದೆ ಬಿದ್ದು ಅರ್ಥಚಮತ್ಕಾರ ಉಕ್ತಿವೈಚಿತ್ರ್ಯಗಳಿಗೆ, ಪ್ರೌಢಿಮೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವ ಸಂಪ್ರದಾಯವು ರೂಢಿಗೆ ಬಂದಿತ್ತು. ಒಟ್ಟಿನಲ್ಲಿ ಕನ್ನಡ ಕವಿಗಳು ಈ ಸಂಪ್ರದಾಯವನ್ನು ಅನುಸರಿಸಿದರು. ಆದಕಾರಣವೇ ಕನ್ನಡ ಕಾವ್ಯಗಳಲ್ಲಿ, ಮುಖ್ಯವಾಗಿ ಚಂಪೂಕಾವ್ಯಗಳಲ್ಲಿ ಕಥೆಗಿಂತಲೂ ವರ್ಣನೆಗೂ—ಅನೇಕ ವೇಳೆ ಅಪ್ರಸಕ್ತವಾದ ವರ್ಣನೆಗೂ–ರಸಭಾವಗಳಿಗಿಂತಲೂ ಶಬ್ದಾರ್ಥಾಲಂಕಾರಗಳಿಗೂ ಸ್ವಾನುಭವಕ್ಕಿಂತಲೂ ಕವಿಸಮಯಕ್ಕೂ ಹೆಚ್ಚು ಪುರಸ್ಕಾರವು ದೊರೆತಿವೆ. ಕನ್ನಡದಲ್ಲಿ ಈ ರೀತಿಯ ಕಾವ್ಯ ರಚನೆಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟ ಸಂಸ್ಕೃತಕವಿಗಳಲ್ಲಿ ಬಾಣನು ಮುಖ್ಯನಾದವನೆಂದು ಹೇಳಬಹುದು."[12]

ಈ ಅವತರಣಿಕೆಗಳಿಂದ ಆರಂಭಕಾಲದ ಕನ್ನಡ ಭಾಷಾಶೈಲಿಯ ರೂಪಣದಲ್ಲಿ ಸಂಸ್ಕೃತ ಭಾಷಾಶೈಲಿಯ ಯಾವ ಮಾದರಿಗಳು ಕೆಲಸಮಾಡಿವೆಯೆಂಬುದು ತಕ್ಕ ಮಟ್ಟಿಗೆ ತಿಳಿಯುತ್ತದೆ. ಸಂಸ್ಕೃತದಲ್ಲಿ ರಾಮಾಯಣ ಭಾರತಗಳಂತಹ ಪ್ರಾಚೀನ ಮಹಾಕಾವ್ಯಗಳು ವಸ್ತುವಿನ ದೃಷ್ಟಿಯಿಂದ ಕನ್ನಡದ ಪೂರ್ವಕವಿಗಳಿಗೆ ಪ್ರಿಯವಾಯಿತಾದರೂ ಅವುಗಳ ಸರಳ ಸಹಜವಾದ ಭಾಷಾಶೈಲಿಗಳನ್ನು ಅವರು ಅನುಕರಿಸಲಿಲ್ಲ. ಅವರು ಪ್ರಾಯಃ ಸ್ವತಂತ್ರವಾಗಿ ರೂಪಿಸಿದ, ಅಥವಾ ವಿಶೇಷವಾಗಿ ರೂಢಿಸಿದ ಚಂಪೂವಿಧಾನವೇ ಸಂಸ್ಕೃತ ಗದ್ಯ, ಪದ್ಯ ಮತ್ತು ನಾಟಕ ಕೃತಿಗಳ ಚೌಕಟ್ಟಿಗಿಂತ ಬೇರೆಯಾಗಿ ನಿಂತು ಹೊಸ ಬಗೆಯ ಶೈಲಿಗೆ ವಾಹಕವಾಯಿತು. ಆರಂಭಕಾಲೀನ ಜೈನಕವಿಗಳು ಸಂಸ್ಕೃತದ ಮಹಾಕವಿಗಳ ಶೈಲಿಯ ಗುಣವಿಶೇಷವನ್ನು ತಮ್ಮ ಕೃತಿಯಲ್ಲಿ ಒಟ್ಟಿಗೆ ತರುವ ಪ್ರಯತ್ನಮಾಡಿ ತಕ್ಕಮಟ್ಟಿಗೆ ಯಶಸ್ವಿಗಳಾದಂತೆ ಮುಂದಿನವರು ಆಗಲಿಲ್ಲ. ಪ್ರತಿಭೆ ಪಾಂಡಿತ್ಯಗಳು ಕುಂಠಿತವಾದಂತೆ ಈಚಿನ ಕವಿಗಳು ಶೈಲಿಯಲ್ಲಿ ವೈಚಿತ್ರ್ಯಗಳನ್ನು ತರುವುದರ ಪ್ರತಿಯಾಗಿ ವೈಪರೀತ್ಯಗಳಿಗೆ ಎಡೆಮಾಡಿದ ಹಾಗೆ ತೋರುತ್ತದೆ. ಗತಾನುಗತಿಕತೆಯಿಂದಾಗಿ, ಅರ್ಥಗಾಂಭೀರ್ಯವೂ ಸಹಜಾನುಭವದ ಅಭಿವ್ಯಕ್ತಿಯೂ ಉಚಿತ ರೀತಿಯಲ್ಲಿ ಹೊಮ್ಮಬರದೆ ಶೈಲಿ ಹೆಚ್ಚು ಹೆಚ್ಚು ಅನುಕರಣ

ಶೀಲವಾಯಿತು, ಪಾಂಡಿತ್ಯದ ಉಬ್ಬರದಿಂದ ಪದಗಳ ಆಡಂಬರವು ಕಾಲಿಟ್ಟಿತು. ಕವಿಗಳ ಕಾವ್ಯದೃಷ್ಟಿಯಲ್ಲಿಯೂ ಸಹೃದಯರ ಅಭಿರುಚಿಯಲ್ಲಿಯೂ ಹೊಸತನ ಬೆಳೆಯುದಿದ್ದಾಗ ಕವಿಕರ್ಮ ಹಳೆಯ ಜಾಡಿನಲ್ಲಿ ತೆವಳುವಂತಾಯಿತು. ಕಥಾಭಾಗಕ್ಕಿಂತ ಸಾಂಪ್ರದಾಯಿಕ ವರ್ಣನೆಗಳಿಗೆ, ಅರ್ಥಾಲಂಕಾರಗಳಿಗಿಂತ ಶಬ್ದಾಲಂಕಾರಗಳ ಚಮತ್ಕಾರಕ್ಕೆ, ಸಂಸ್ಕೃತ–ಕನ್ನಡಗಳ ಹಿತಮಿತವಾದ ಮಿಶ್ರಣಕ್ಕಿಂತ ಸಂಸ್ಕೃತದ ಪ್ರೌಢಿಮೆ ವಾಗ್ಮಿತೆಗಳ ಮೆರೆತಕ್ಕೆ, ಸ್ವೋಪಜ್ಞತೆಗಿಂತ ಪರಾನುಕರಣಕ್ಕೆ ದೊರೆತ ಪ್ರಾಮುಖ್ಯದಿಂದ ಶೈಲಿ ಕೃತಕವಾಯಿತು, ಶಿಥಿಲವಾಯಿತು, ಪೆಡಸಾಯಿತು. ಚಂಪುವಿನ ಪದ್ಯಶೈಲಿಯಲ್ಲಿ ಕಾಳಿದಾಸ ಭಾರವಿ ಮೊದಲಾದವರ, ಅದರ ಗದ್ಯಶೈಲಿಯಲ್ಲಿ ಬಾಣನ 'ಕಾದಂಬರಿ' 'ಹರ್ಷಚರಿತ' ಮೊದಲಾದವುಗಳ ಶೈಲಿಯ ಛಾಯೆ ವಿಶೇಷವಾಗಿ ದಟ್ಟೈಸಿತು. ಸಂಸ್ಕೃತ ವೃತ್ತಗಳ ಥಾಟಿ ಘೋಷಗಳನ್ನು ಪಾಲಿಸುವುದಕ್ಕೆ ಕನ್ನಡ ವೃತ್ತಗಳಲ್ಲಿಯೂ ಸಂಸ್ಕೃತ ಶಬ್ದಗಳ ದೀರ್ಘಸಮಾಸಗಳನ್ನು ಹೆಣೆದರು. ಕೆಲವೊಮ್ಮೆ ಮಾತು ಕನ್ನಡದ್ದಾದರೂ ಥಾಟಿ ಸಂಸ್ಕೃತದ್ದಾಗಿರುತ್ತಿತ್ತು.

ಜೈನಕವಿಗಳು ಅನುಸರಿಸಿದ ಸಂಸ್ಕೃತ ಪ್ರಾಕೃತ ಪುರಾಣಗಳು, ಮಹಾಪುರಾಣ ಹರಿವಂಶಪುರಾಣಾದಿಗಳು ಪುರಾಣಲಕ್ಷಣಗಳಿಗೆ ಅನುಗುಣವಾಗಿ, ಸಂಸ್ಕೃತದ ವೈದಿಕ ಕಾವ್ಯಪುರಾಣಗಳ ಹಾಗೆಯೇ ರಚಿತವಾಗಿರುವ ಸರಳ ವಸ್ತುಕಥನದ ವಿವಿಧವಿಷಯ ಗರ್ಭೀಕೃತವಾದ ವಿಸ್ತೃತರಚನೆಗಳು. ಸರಳತೆ ಸ್ವಾಭಾವಿಕತೆಗಳು ಎದ್ದುಕಾಣವ ಈ ಕೃತಿಗಳಲ್ಲಿ ಸಾಹಿತ್ಯಿಕ ಗುಣಲಕ್ಷಣಗಳು ಗೌಣವಾದವು. ಆ ಪುರಾಣಗಳ ವಸ್ತುವನ್ನು ಆಶ್ರಯಿಸಿ ಸಂಗ್ರಹಿಸಿರೂಪಣೆಗೆ ತೊಡಗಿದ ಕನ್ನಡದ ಪುರಾಣಗಳು ಕಾವ್ಯಶೋಭಾವಹವಾದ ಸಾಹಿತ್ಯಿಕ ಗುಣಲಕ್ಷಣಗಳಿಗೆ ಪ್ರಾಧಾನ್ಯವಿತ್ತು ರಚಿತವಾದ ಪುರಾಣಕಾವ್ಯಗಳೂ ಕಾವ್ಯಗಳೂ ಆದವು. ಚಂಪುವಿನ ಚೌಕಟ್ಟನ್ನು ಅಲಂಕರಿಸುವುದರಲ್ಲಿಯೇ ಲಕ್ಷ್ಯ ಹೆಚ್ಚಿದಂತೆ ಗ್ರಂಥಗಳು ಗಾತ್ರದಲ್ಲಿ ಉಬ್ಬಿದವು, ಗುಣದಲ್ಲಿ ತಗ್ಗಿದವು. ಇದಕ್ಕೆ ಅಪವಾದಗಳೂ ಇಲ್ಲದೆ ಇಲ್ಲ. ಚಂಪೂಶೈಲಿಯು ಕನ್ನಡದಲ್ಲಿ ಹೊಸದಾಗಿ ರೂಢಿಗೆ ಬಂದ ಕಾಲದಲ್ಲಿ ಅದನ್ನು ನಿರ್ವಹಿಸಿದ ಕನ್ನಡ ಕವಿಗಳು ಪ್ರತಿಭಾಸಂಪನ್ನರಾಗಿದ್ದರು, ಪಂಡಿತಶ್ರೇಷ್ಠರಾಗಿದ್ದರು. ಮಹಾಕವಿಗಳ ಹಾಗೂ ಆಚಾರ್ಯರ ಕೃತಿಸಾರವನ್ನು ಸಂಗ್ರಹಿಸುವುದರಲ್ಲಿ ಸಮರ್ಥರಾಗಿದ್ದಂತೆಯೇ ಔಚಿತ್ಯಜ್ಞಾನವಿದ್ದವರೂ ಆಗಿದ್ದರು. ಕಾವ್ಯಧರ್ಮವನ್ನೂ ಧರ್ಮವನ್ನೂ ಬಹುಮಟ್ಟಿಗೆ ಸಮತೂಕದಲ್ಲಿ ತಮ್ಮ ಕೃತಿಗಳಲ್ಲಿ ಪ್ರಕಟಿಸಿ ಯಶಸ್ವಿಯಾದರು. ಧರ್ಮವಿಚಾರವೂ ಸಿದ್ಧಾಂತ ವಿಷಯಗಳೂ ಬಂದಾಗ ಸಂಸ್ಕೃತ ಅನಿವಾರ್ಯವೆಂಬಂತೆ ಮೇಲುಗೈಯಾಗುತ್ತಿದ್ದರೂ ಉಳಿದ ಸಂದರ್ಭಗಳಲ್ಲಿ ಸಂಸ್ಕೃತ ಕನ್ನಡಗಳು ಹಿತಮಿತವಾಗಿ ಮೇಳವಿಸುತ್ತಿದ್ದವು. ಪ್ರೌಢಸಂಸ್ಕೃತದ ಬಿಗಿಯನ್ನು ಕೊಂಚಮಟ್ಟಿಗೆ ದುರ್ಗಸಿಂಹ ನಯಸೇನ ಬಂಧುವರ್ಮ ಮೊದಲಾದ ಕವಿಗಳು ತಗ್ಗಿಸುವುದರಲ್ಲಿ ಶಕ್ತರಾದರು. ಅನಂತರದ ಚಂಪೂಕವಿಗಳಲ್ಲಿ ಒಂದಿಬ್ಬರು ಹೊರತಾಗಿ ಉಳಿದವರು ಸುಲಭಸಂಸ್ಕೃತವನ್ನು ಬಳಸಿ ನಿರೂಪಣೆಯನ್ನು ಹೆಚ್ಚು ಸರಳಗೊಳಿಸಿದಂತೆ

ತೋರುತ್ತದೆ. ಅವರ ಕೃತಿಗಳಲ್ಲಿ ದೇಶೀಕಾವ್ಯಗಳ ಲಕ್ಷಣಗಳೂ ತೋರುತ್ತವೆ.

೧೨ನೆಯ ಶತಮಾನದಲ್ಲಿ ವೀರಶೈವಧರ್ಮದ ಉಜ್ಜೀವನದೊಡನೆ ಕನ್ನಡ ಭಾಷಾ ಸಾಹಿತ್ಯಗಳಲ್ಲಿಯೂ ಒಂದು ತೆರನ ಉಜ್ಜೀವನವುಂಟಾಯಿತು. ಶಿವಶರಣರ ವಚನ ಸಾಹಿತ್ಯವು ಹಿತಮಿತವಾದ ರೀತಿಯಲ್ಲಿ ಸಂಸ್ಕೃತ ಕನ್ನಡ ಮಿಶ್ರಣದ ಸ್ವಾಭಾವಿಕ ಶೈಲಿಯನ್ನು ಕನ್ನಡಕ್ಕೆ ಕೊಟ್ಟಿತು. ಅನಂತರದ ವೀರಶೈವ ಕವಿಗಳು ಸಂಪ್ರದಾಯ ಬದ್ಧವಾದ ಸಂಸ್ಕೃತಭೂಯಿಷ್ಠವಾದ ಚಂಪೂಶೈಲಿ ಸಹಜಾನುಭವದ ಅಭಿವ್ಯಕ್ತಿಗೆ ಹೊಂದಿಕೊಳ್ಳದೆಂದೂ ಆ ಶೈಲಿಯಲ್ಲಿ ಬರೆಯುವುದು ಜನರಿಗೆ ಅಷ್ಟು ಹಿಡಿಸಲಾರದೆಂದೂ ಪ್ರಾಯಃ ವಿಚಾರಮಾಡಿ ರೂಢಿಯ ಜನಭಾಷೆಗೆ ಮನ್ನಣೆಯಿತ್ತರೆಂದು ಹೇಳಬಹುದು. ಸಂಸ್ಕೃತ ಕಾವ್ಯಮಾರ್ಗವನ್ನಿಟ್ಟುಕೊಳ್ಳದ ಹಾಡುಗಬ್ಬಗಳು ಹುಟ್ಟಿಕೊಂಡು ವರ್ಣಕ ಗಳೆನಿಸಿದವು. ದೇಶೀಯ ಛಂದೋರೂಪಗಳಲ್ಲಿ ಯಾವುದೇ ಆಶಯವೂ ವಸ್ತುವೂ ಸತ್ತ್ವಶಾಲಿಯಾಗಿಯೂ ಹೃದಯಸ್ಪರ್ಶಿಯಾಗಿಯೂ ಪ್ರಕಟವಾಗುವಂತಾಯಿತು. ಶ್ಲೇಷೆ ವಿರೋಧಾಭಾಸ ಕವಿಸಮಯಗಳು ಹಿಂಜರಿದು ನಾಣ್ಣುಡಿಗಳೂ ಬಳಕೆಯ ನುಡಿಗಟ್ಟುಗಳೂ ಮುಂದಾದವು. ಸಂಸ್ಕೃತದ ಮಾತುಗಾರಿಕೆ ಎಷ್ಟೋ ಮಟ್ಟಿಗೆ ತಗ್ಗಿ ಕನ್ನಡದ ಮಾತುಗಾರಿಕೆ ಮೇಲಾಗಿ ಮೆರೆಯಿತು. ಆದರೆ ಉತ್ತರಕಾಲೀನ ದೇಶೀಕಾವ್ಯ ಗಳಲ್ಲಿ ಕೂಡ ಬರುಬರುತ್ತ ಮಾರ್ಗೀಶೈಲಿಯ ರಚನೆಗಳಲ್ಲಿ ಕಂಡಂತೆಯೇ ಒಂದು ಬಗೆಯ ಶೈಥಿಲ್ಯ, ಅಲಂಕಾರಪ್ರಿಯತೆಯ ಮೂಲಕ ಕೃತಕತೆ ಆಡಂಬರಗಳು ತಲೆದೋರಿದುದಕ್ಕೆ ನಿದರ್ಶನಗಳಿವೆ.

ಈಗ ಛಂದಸ್ಸಿನ ದೃಷ್ಟಿಯಿಂದ ಕೆಲವು ಸಂಗತಿಗಳನ್ನು ಗಮನಿಸಬಹುದು. ಮೊದಲು ಈಯೆರಡು ಅವತರಣಿಕೆಗಳನ್ನು ನೋಡಬಹುದು :

"ಕನ್ನಡ ಕವಿಗಳೆಲ್ಲಾ ಆದಿಯಲ್ಲಿ ಸಂಸ್ಕೃತದಲ್ಲಿ ಪಾಂಡಿತ್ಯವುಳ್ಳವರಾಗಿಯೂ, ಸಂಸ್ಕೃತದಲ್ಲಿರುವ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳು, ಮಹಾ ಕಾವ್ಯಗಳು, ನಾಟಕಗಳು ಇವುಗಳ ಪ್ರಭಾವಕ್ಕೆ ಒಳಪಟ್ಟು ತಮ್ಮ ಚಂಪೂಕಾವ್ಯ ಗಳನ್ನು ರಚಿಸಿದವರಾಗಿಯೂ ಇರುವುದರಿಂದ, ಸಂಸ್ಕೃತ ಶೈಲಿ ಹೇಗೊ ಹಾಗೆ ಸಂಸ್ಕೃತ ಛಂದಸ್ಸನ್ನೂ ತಮ್ಮ ಕಾವ್ಯಗಳಲ್ಲಿ ಬಹುಮುಖ್ಯವಾಗಿ ಉಪಯೋಗಿಸಿರುತ್ತಾರೆ. ಕನ್ನಡಕ್ಕೆ ಆದಿಯೆನಿಸಿದ ಪಂಪನ ಆದಿಪುರಾಣ, ವಿಕ್ರಮಾರ್ಜುನವಿಜಯ ಈ ಎರಡು ಗ್ರಂಥಗಳಲ್ಲಿಯೂ ಸಂಸ್ಕೃತ-ಛಂದಸ್ಸಿಗೆ ಪ್ರಾಧಾನ್ಯವೇ ಹೊರತು ಕನ್ನಡ ಛಂದಸ್ಸಿಗಲ್ಲ. ಶಾಸನಗಳಲ್ಲಿಯೂ ಹೀಗೆಯೇ. ಈಚೆಯ ಚಂಪೂಕರ್ತರೆಲ್ಲರೂ ಇದೇ ಪದ್ಧತಿಯನ್ನನು ಸರಿಸಿರುತ್ತಾರೆ."[13]

"....೧೦ನೆಯ ಶತಮಾನದವರೆಗಿನ ಕಾವ್ಯಶಾಸನಗಳನ್ನು ನೋಡಿದರೂ ಇದೇ ಭಾವನೆ ಹುಟ್ಟುತ್ತದೆ—ಏನೆಂದರೆ ಸಂಸ್ಕೃತ ಛಂದಸ್ಸೇ ಕನ್ನಡದಲ್ಲಿ ಪ್ರಧಾನವೆಂದೂ, ಕನ್ನಡ ಛಂದಸ್ಸು ಅತಿವಿರಳವೆಂದೂ, ಕಡೆಗೆ ಅದು ಉಂಟೋ ಇಲ್ಲವೋ, ಇದ್ದರೂ ಅಷ್ಟು ಮಹತ್ತಿನದಲ್ಲವೆಂದೂ ಬುದ್ಧಿಗೆ ಭಾಸವಾಗುತ್ತದೆ."[14]

ಆರಂಭಕಾಲೀನ ಕನ್ನಡ ಸಾಹಿತ್ಯದಲ್ಲಿ, ಮುಖ್ಯವಾಗಿ ಚಂಪೂ ಪದ್ಧತಿಯಲ್ಲಿ, ಸಂಸ್ಕೃತ ಛಂದಸ್ಸಿನ ಪ್ರಭಾವವೆಂತಹುದು ಎಂಬುದು ಈ ಮೇಲಿನ ಅವತರಣಿಕೆಗಳಿಂದ ತಿಳಿಯುತ್ತದೆ. 'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವ ಸ್ಪಷ್ಟವಾದ ವಿವರಣೆಗಳಿಂದ ಚಂಪೂವಿಗೆ ಮೊದಲಿನ ಚತ್ತಾಣ ಮತ್ತು ಬೆದಂಡೆಗಳೆಂಬ ಕಾವ್ಯಪ್ರಕಾರಗಳಲ್ಲಿಯೂ ಸಂಸ್ಕೃತ ಛಂದಸ್ಸಿನ ಪ್ರಭಾವ ಗೋಚರಿಸುತ್ತದೆ. ಶಾಸನಸಾಹಿತ್ಯದಲ್ಲಿಯೂ ಅಷ್ಟೇ. ಭಾಷೆ ಶೈಲಿಗಳ ವಿಷಯದಲ್ಲಿ ಹೇಗೋ ಹಾಗೆ ಛಂದಸ್ಸಿನ ವಿಷಯದಲ್ಲಿಯೂ ಕನ್ನಡಕ್ಕೆ ಸಂಸ್ಕೃತದ ಸಂಸರ್ಗ ಗಾಢವೂ ವ್ಯಾಪಕವೂ ಆದದ್ದಾಗಿದೆ. ಚಂಪುವಿನ ಚೌಕಟ್ಟು ಮುಖ್ಯವಾಗಿ ಕಂದ ಪದ್ಯಗಳಿಂದಲೂ ಖ್ಯಾತಕರ್ಣಾಟಕಗಳೆಂಬ ಆರು ವರ್ಣವೃತ್ತಗಳಿಂದಲೂ ಆಗಿರುವುದು ವಿದಿತವಾಗಿಯೇ ಇವೆ. ಕಂದವು ಸಂಸ್ಕೃತದ ಮಾತ್ರಾವೃತ್ತಜಾತಿಯ ಆರ್ಯೆ ಆರ್ಯಾಗೀತಿಗಳ ವರ್ಗಕ್ಕೆ ಸೇರಿದ್ದಾಗಿದೆ. ಇದು ಬಹು ಚೆನ್ನಾಗಿ ಕನ್ನಡ ಭಾಷೆಗೆ ಒಗ್ಗಿಹೋಗಿ, ಬಹಳ ಹಿಂದಿನಿಂದಲೂ ಕನ್ನಡ ಕವಿಗಳ ಮೆಚ್ಚಿನ ಪದ್ಯಜಾತಿಯಾಗಿದೆ. ಖ್ಯಾತಕರ್ಣಾಟಕಗಳಲ್ಲಿ ಮೂರು ಸಂಸ್ಕೃತದಲ್ಲಿ ಪ್ರಸಿದ್ಧವಾದವು, ಇನ್ನು ಮೂರು ಅವುಗಳಿಂದ ಕಲ್ಪಿಸಿಕೊಂಡವು. ಇವಲ್ಲದೆ ಕನ್ನಡ ಕವಿಗಳು ತಮ್ಮ ಚಂಪೂ ಕೃತಿಗಳಲ್ಲಿ ವೈವಿಧ್ಯಕ್ಕಾಗಿಯೋ ಪ್ರಾತಿನಿಧ್ಯಕ್ಕಾಗಿಯೋ ಸಂಸ್ಕೃತದ ವರ್ಣವೃತ್ತಗಳಲ್ಲಿ ಇನ್ನೂ ಕೆಲವನ್ನು ತಪ್ಪದೆ ಬಳಸುತ್ತಿದ್ದುದು ರೂಢಿ. ಸಂಸ್ಕೃತದ ಸಮಚತುಷ್ಪದಿಗಳೇ ಅಲ್ಲದೆ ಅಪೂರ್ವವಾಗಿ ಅರ್ಧಸಮ, ವಿಷಮಚತುಷ್ಪದಿ ದಂಡಕಗಳನ್ನು ಬಳಸಿರುವುದೂ ಉಂಟು. ಕನ್ನಡದಲ್ಲಿ ಕೃತಿರಚನೆ ಮಾಡಿರುವ ಹಲವರು ಶಾಸ್ತ್ರಕವಿಗಳಂತೂ ಬಗೆಬಗೆಯ ವರ್ಣವೃತ್ತಗಳನ್ನು ತಮ್ಮ ಶಾಸ್ತ್ರಗ್ರಂಥಗಳಲ್ಲಿ ಬಳಸಿ ತಮಗೆ ಸಂಸ್ಕೃತ ಭಾಷೆಯಲ್ಲಿದ್ದ ವ್ಯಾಮೋಹವನ್ನೂ ಪಾಂಡಿತ್ಯವನ್ನೂ ತೋರಿಸಿಕೊಂಡಿದ್ದಾರೆ. ಕೆಲವರು ಹೊಸದಾಗಿಯೇ ಕೆಲವು ವರ್ಣವೃತ್ತಗಳನ್ನು ಕಲ್ಪಿಸಿ ಬಳಸಿದ್ದಾರೆ. ಕನ್ನಡ ಚಂಪೂ ಕಾವ್ಯಗಳಲ್ಲಿಯೂ ವೃತ್ತಕಂದಗಳಲ್ಲಿರುವ ಶಾಸ್ತ್ರಗ್ರಂಥಗಳಲ್ಲಿಯೂ ಸಂಸ್ಕೃತ ಛಂದಸ್ಸಿಗೇ ವಿಶೇಷವಾಗಿ ಮಾನ್ಯತೆ ಸಂದಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಆರಂಭಕಾಲದ ಜೈನ ಕವಿಗಳ ಪ್ರಾಕೃತ ಭಾಷಾಪರಿಚಯ ಮತ್ತು ಪಾಂಡಿತ್ಯಗಳಿಂದಾಗಿ ಪ್ರಾಕೃತ ಛಂದಸ್ಸಿನ ಪ್ರಭಾವ ಕನ್ನಡದಲ್ಲಿ ಕಂಡುಬಂದಿರುವುದು ಸಹಜವೇ ಆಗಿದೆ. ಪಂಪ ಪೊನ್ನ ಮೊದಲಾದ ಕವಿಗಳು ಪ್ರಯೋಗಿಸಿರುವ ರಗಳೆಗಳ ಒಂದು ಬಗೆ ಅಪಭ್ರಂಶ ಛಂದಸ್ಸಿನ 'ಪದ್ಧತಿ' ಎಂಬ ಪದ್ಯಜಾತಿಯ ಕಡವಕಗಳಿಂದ ಪ್ರಭಾವಿತವಾದುದು ಎನ್ನುವುದು ವಿದಿತವಾಗಿರುವ ಸಂಗತಿ. ಹಾಗೆಯೇ 'ಕಂದ'ವೆಂಬ ಹೆಸರು ಆ ಪದ್ಯ ಜಾತಿಗೆ ಪ್ರಾಕೃತದ 'ಖಂಧಅ' (=ಸ್ಕಂಧಕ) ಎಂಬುದರಿಂದ ಬಂದಿರಬೇಕೆಂದು ತೋರುತ್ತದೆ.

ವಚನ ಸಾಹಿತ್ಯದ ಸೃಷ್ಟಿ ದೇಸಿ ಛಂದಸ್ಸಿಗೆ ಒಳ್ಳೆಯ ಕಾಲವನ್ನು ತಂದಿತು ಎಂಬುದು ಹರಿಹರ, ರಾಘವಾಂಕ ಮೊದಲಾದ ವೀರಶೈವ ಕವಿಗಳ ಕೃತಿರಚನೆಯಿಂದ ತಿಳಿಯಬಹುದಾಗಿದೆ. ಚಂಪೂ ಕಾವ್ಯಗಳಲ್ಲಿ ವೈವಿಧ್ಯಕ್ಕೋ ಪ್ರಾತಿನಿಧ್ಯಕ್ಕೊ ಅಲ್ಲೊಂದು ಇಲ್ಲೊಂದರಂತೆ ಬಳಕೆಯಾಗುತ್ತಿದ್ದ ದೇಸಿ ಛಂದಸ್ಸಿನ ಪದ್ಯಪ್ರಕಾ

ಗಳಲ್ಲಿ ಇಡೀ ಕಾವ್ಯವೇ ರಚಿತವಾಗುವ ಕಾಲ ಬಂದಿತು. ಈ ಪದ್ಯಪ್ರಕಾರಗಳ ಮೇಲೆ ಪ್ರಾಯಃ ಸಂಸ್ಕೃತ ಪ್ರಾಕೃತ ಮಾತ್ರಾವೃತ್ತಗಳ ಪ್ರಭಾವವೂ ಅಷ್ಟಿಷ್ಟು ಕೆಲಸಮಾಡಿ ಅವಕ್ಕೆ ಹೊಸ ರೂಪರೇಷೆಗಳು ಕಾಣಿಸಿಕೊಂಡವು. ದೇಶೀಕಾವ್ಯಗಳನ್ನು ರಚಿಸಿದ ಹಲವರು ಕವಿಗಳು ಸಂಸ್ಕೃತ ಕನ್ನಡಗಳ ಸರಿಬೆರಕೆಗೆ ಎಡೆಯಿತ್ತರು. ಚಂಪೂ ಶೈಲಿಯ ಖ್ಯಾತಕರ್ಣಾಟಕಾದಿಗಳಲ್ಲಿ ಬರುಬರುತ್ತ ಅಸಹಜವಾಗುತ್ತಿದ್ದ ಸಿದ್ಧಶೈಲಿಯ ಉಕ್ತಿವೈಚಿತ್ರ್ಯಗಳೂ ಗಂಭೀರನಾದದ ಸಂಸ್ಕೃತಪದಪ್ರಾಚುರ್ಯವೂ ಈ ಬಗೆಯ ಕೃತಿಗಳಲ್ಲಿ ಕೈಬಿಟ್ಟುಹೋದವು. ಈಚಿನ ಒಂದಿಬ್ಬರು ಕವಿಗಳು ಹೊರತು ಉಳಿದವರಲ್ಲಿ ಭಾಷೆ ಶೈಲಿ ಮತ್ತು ಛಂದಸ್ಸುಗಳು ಹೆಚ್ಚಿನಮಟ್ಟಿಗೆ ಕನ್ನಡತನವನ್ನೇ ತೋರಿದವು. ಸಂಸ್ಕೃತ ಕಾವ್ಯಶಾಸ್ತ್ರಗಳಲ್ಲಿ ಪರಿಣತರಾದ ಹಾಗೂ ಪೂರ್ವಕವಿಗಳ ಮಾರ್ಗಾನುಸರಣೆಗೆ ಒಲಿದ ಕೆಲವು ವೀರಶೈವ ಮತ್ತು ಬ್ರಾಹ್ಮಣ ಕವಿಗಳು ಚಂಪುವನ್ನು ಉಜ್ಜೀವಿಸಿದಾಗ ಅದರಲ್ಲಿ ಸಂಸ್ಕೃತ ಛಂದಸ್ಸು ಎಂದಿನಂತೆ ಮತ್ತೆ ತಲೆಯೆತ್ತಿದರೂ ಸಾಮಾನ್ಯವಾಗಿ ದೇಶೀಯವಾದ ಷಟ್ಪದಿ ಸಾಂಗತ್ಯಗಳೇ ಕನ್ನಡ ಕವಿಗಳ ಬಳಕೆಯ ಛಂದಸ್ಸಾಯಿತು.

ಭಾಷೆ, ಶೈಲಿ, ಛಂದಸ್ಸು ಮೊದಲಾದವುಗಳ ಬಗೆಗೆ ವಿವೇಚಿಸಿದಂತೆಯೇ ವಸ್ತುವಿನ ಬಗೆಗೂ ಸ್ವಲ್ಪ ವಿವೇಚಿಸಬಹುದು. ಕನ್ನಡವನ್ನೊಳಕೊಂಡು ಭರತಖಂಡದ ದೇಶೀ ಸಾಹಿತ್ಯಗಳಿಗೆಲ್ಲ ಬಲುಮಟ್ಟಿಗೆ ಸಂಸ್ಕೃತಸಾಹಿತ್ಯವೂ ಕೆಲಮಟ್ಟಿಗೆ ಪ್ರಾಕೃತ ಸಾಹಿತ್ಯವೂ ಅಕ್ಷಯಭಾಂಡಾಗಾರವಾಗಿ ಪರಿಣಮಿಸಿದೆ. ಸಂಸ್ಕೃತ ಸಾಹಿತ್ಯದಲ್ಲಿ ರಾಮಾಯಣ ಭಾರತಗಳು, ಭಾಗವತಾದಿ ಪುರಾಣಗಳು, ಆಗಮಗಳು, ಕಾವ್ಯಗಳು ಮೊದಲಾದವು ಕನ್ನಡ ಸಾಹಿತ್ಯಕ್ಕೆ ಬಹಳ ಕಾಲದಿಂದ ಆಕರಸ್ಥಾನದಲ್ಲಿರತಕ್ಕವು, ಕನ್ನಡ ಸಾಹಿತ್ಯದ ರೂಪರೇಷೆಗಳನ್ನು ರೂಪಿಸಿರತಕ್ಕವು, ಅದಕ್ಕೆ ಪ್ರೇರಕವೂ ಪೋಷಕವೂ ಆಗಿರತಕ್ಕವು. ಪ್ರಾಕೃತಸಾಹಿತ್ಯದ ಜೈನಪುರಾಣಗಳಿಗೂ ಸಿದ್ಧಾಂತಾದಿ ಗ್ರಂಥಗಳಿಗೂ ಈ ಮಾತು ಸ್ವಲ್ಪಮಟ್ಟಿಗೆ ಒಪ್ಪುತ್ತದೆ. ಹೀಗೆ ಸಂಸ್ಕೃತ ಪ್ರಾಕೃತ ಸಾಹಿತ್ಯದ ಮೂಲಕ ಪ್ರಕಟವಾಗಿದ್ದ ಪುರಾತನವೂ ಶ್ರೇಷ್ಠವೂ ಆಗಿದ್ದ ಭಾರತೀಯ ಸಂಸ್ಕೃತಿಸಾರವನ್ನು ಆ ಭಾಷಾ ಸಾಹಿತ್ಯಗಳಲ್ಲಿ ಪರಿಣತರಾಗಿದ್ದ ನಮ್ಮ ಪ್ರಾಚೀನ ಕವಿಗಳು ಸಮರ್ಥರೀತಿಯಿಂದ ಕನ್ನಡದಲ್ಲಿ ವ್ಯಕ್ತಗೊಳಿಸಿದರು. ಕನ್ನಡನಾಡಿನಲ್ಲಿ ವಿಸ್ತಾರವಾದ ಕಾಲಾವಧಿಯಲ್ಲಿ ಆ ಭಾಷಾಸಾಹಿತ್ಯಗಳಲ್ಲಿ ಪ್ರಮುಖವಾದವುಗಳ ಪರಂಪರೆ ಕವಿಯಿಂದ ಕವಿಗೆ ಹಬ್ಬಿಕೊಂಡು ಹೋಗಿರುವುದಕ್ಕೆ ಸಾಕ್ಷ್ಯಗಳಿವೆ. ಭಾರತೀಯ ಸಂಸ್ಕೃತಿಯಲ್ಲಿಯೂ ಭಾರತೀಯರ ಬಹುಮುಖವಾದ ವಿದ್ಯೆಯಲ್ಲಿಯೂ ಭಾರತೀಯ ಧರ್ಮಗಳಲ್ಲಿ ತಾವು ಗ್ರಹಿಸಿದುದನ್ನು ನಿಷ್ಠೆಯಿಂದ ಅನುಷ್ಠಾನ ಮಾಡುವುದರಲ್ಲಿಯೂ ಕನ್ನಡಜನರು ಎಂದಿನಿಂದಲೂ ಆಸಕ್ತಿಯನ್ನು ತೋರಿಸುತ್ತಾ ಬಂದಿದ್ದಾರೆ. ತಾವು ಅಭ್ಯಾಸಮಾಡಿದ, ತಮಗೆ ಮಹತ್ತ್ವಪೂರಿತವಾದವೆಂದು ಕಂಡ ಮೂಲಗ್ರಂಥಗಳನ್ನು ಪರಿಚಯಮಾಡಲು ಕನ್ನಡ ಕವಿಗಳೂ ವಿದ್ವಾಂಸರೂ ಸಾರಸಂಗ್ರಹ, ಅನು

ವಾದ, ರೂಪಾಂತರ, ವೃತ್ತಿವ್ಯಾಖ್ಯಾನ ಮೊದಲಾದ ಕ್ರಮಗಳನ್ನು ಅನುಸರಿಸಿದರು. ಮೊದಲು 'ವಸ್ತುಕ' ಕವಿತಾಪದ್ಧತಿಯಲ್ಲಿಯೂ ಅನಂತರದಲ್ಲಿ 'ವರ್ಣಕ' ಕವಿತಾ ಪದ್ಧತಿಯಲ್ಲಿಯೂ ಇದನ್ನು ಸಾಧಿಸಿದರು. ಕಾಲಕಾಲಕ್ಕೆ ಜನರ ಆಸಕ್ತಿ ಅಭಿರುಚಿಗಳಿಗೆ ಅನುಗುಣವಾಗಿ, ಬಹು ವಿಸ್ತಾರವಾದ ಪುರಾಣೇತಿಹಾಸಕಾವ್ಯಾದಿ ಪ್ರಪಂಚದಲ್ಲಿ ದಾನ ಗುಣ, ಸತ್ಯನಿಷ್ಠೆ, ಶೌರ್ಯಸ್ಥೈರ್ಯ, ಧರ್ಮಶ್ರದ್ಧೆ, ದೈವಭಕ್ತಿ, ಕಠೋರವ್ರತಾಚರಣೆ, ಪ್ರೀತಿವಾತ್ಸಲ್ಯ—ಈ ಮೊದಲಾದವನ್ನು ಉತ್ಕಟವಾಗಿ ಎತ್ತಿತೋರುವ ಸ್ವಾರಸ್ಯಮಯ ಕಥಾಸಂದರ್ಭಗಳನ್ನು ಎತ್ತಿಕೊಂಡು ಈಚೆಗೆ ಹಲವರು ಕಾವ್ಯ ನಾಟಕಾದಿಗಳನ್ನು ರಚಿಸಿದರು. ಉನ್ನತವೂ ಉದಾತ್ತವೂ ಆದ ಧ್ಯೇಯಾದರ್ಶಗಳನ್ನಿಟ್ಟುಕೊಂಡು ಮಹತ್ತ್ವಪೂರಿತವಾದ ಕಾರ್ಯಗಳನ್ನು ಕೈಕೊಂಡ ಸ್ತ್ರೀಪುರುಷರ ಜೀವನಘಟನೆಗಳು ಸಾಮಾನ್ಯವಾಗಿ ಇಂತಹ ಕೃತಿಗಳಲ್ಲಿ ನಿರೂಪಿತವಾಗಿರುತ್ತಿದ್ದವು. ಇಂತಹ ರಚನೆಗಳಲ್ಲಿ ಪಂಡಿತಪಾಮರರಿಬ್ಬರ ಅಪೇಕ್ಷೆ ಯಾವುದರ ಕಡೆಗಿದೆಯೆಂಬುದನ್ನು ಅರಿತು ಹೆಚ್ಚು ಜನಪ್ರಿಯವಾಗತಕ್ಕ ಪೌರಾಣಿಕ ಕಥೆಗಳ ಆಯ್ಕೆಯೂ ಬೇರೆ ಬೇರೆ ದೃಷ್ಟಿಯ ಬಿಡಿ ಬಿಡಿಯಾದ ಹೊಸ ರಚನೆಗಳೂ ಮೇಲಿಂದ ಮೇಲೆ ಬಂದಿವೆ. ಮೂಲದ ಕಥೆಯಲ್ಲಿ ಜನಶ್ರುತಿಯ ಪೌರಾಣಿಕ ಅಂಶಗಳು ಬೆರೆತಿರುವಂತೆಯೇ ತತ್ಕಾಲೀನ ಜನಾಭಿರುಚಿಯ ಸಾಮಾಜಿಕ ಅಂಶಗಳೂ ಬೆರೆತು ಒಟ್ಟಿನಲ್ಲಿ ಕಥಾಸ್ವರೂಪ ಹಳತು ಹೊಸತರ ಸಂಗಮ ದಂತೆ ಇರುತ್ತದೆ. ಮೂಲದ ಪದ್ಯಗಳನ್ನೂ ಪದ್ಯಭಾಗಗಳನ್ನೂ ಭಾವಾರ್ಥಗಳನ್ನೂ ಯಥಾವತ್ತಾಗಿ ಅನುಸರಿಸಿರುವುದು, ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಸ್ವೀಕರಿಸಿರುವುದು, ಸ್ವಪ್ರತಿಭೆಯ ಪ್ರಕಾಶದಿಂದ ಉತ್ತಮಪಡಿಸಿರುವುದು, ವಿಸ್ತರಿಸಿರುವುದು, ಸಂಗ್ರಹಿಸಿರು ವುದು, ನೀರಸಗೊಳಿಸಿರುವುದು—ಇವನ್ನೆಲ್ಲ ಕನ್ನಡದ ಮೂಲಾನುವಾದಗಳಲ್ಲಿ ಕಾಣ ಬಹುದಾಗಿದೆ. ಇವು ಹೇಗಿದ್ದರೂ ಓದುವ ಜನ ಓದಿದ್ದನ್ನು ಕೇಳಿದ್ದನ್ನು ನೋಡಿದ್ದನ್ನು ಮತ್ತೆ ಮತ್ತೆ ಓದುವುದರಲ್ಲಿ ಕೇಳುವುದರಲ್ಲಿ ನೋಡುವುದರಲ್ಲಿ ಬೇಸರಪಡದೆ, ತಮ್ಮ ಜೀವನಸಂಸ್ಕಾರಕ್ಕೂ ಆತ್ಮೋನ್ನತಿಗೂ ಸಂತೋಷಾನುಭವಕ್ಕೂ ಸಾಧಕವೆಂಬುದಾಗಿ ತಿಳಿದಿದ್ದರಿಂದ, ಪ್ರಸಿದ್ಧವಾದ ಸಂಸ್ಕೃತ ಪ್ರಾಕೃತಮೂಲದ ಮಹಾಕಾವ್ಯಗಳೂ ಪುರಾಣ ಗಳೂ ಸಮಗ್ರವಾಗಿಯೂ ಉಪಖ್ಯಾನ ರೂಪವಾಗಿಯೂ ಕನ್ನಡದಲ್ಲಿ ಅನುವಾದವಾಗು ತ್ತಲೋ ಸ್ವತಂತ್ರ ರಚನೆಗೆ ಪ್ರೇರಕವಾಗುತ್ತಲೋ ಮರಳಿ ಮರಳಿ ಮೊಗದೋರಿವೆ. ೧೮– ೧೯ನೆಯ ಶತಮಾನದವು ಆಧುನಿಕ ಕಾಲದಲ್ಲಿಯೂ ಕೆಲವೊಮ್ಮೆ ಶುದ್ಧ ಸಾಮಾಜಿಕ ರೀತಿಯ ಮತ್ತು ಚಾರಿತ್ರಿಕ ರೀತಿಯ ಕಥೆಗಳು ಕೃತಿರೂಪವಾಗಿ ಬಂದಿದ್ದರೂ ಆರ್ಷ ಮಹಾಕಾವ್ಯಗಳ ಮತ್ತು ಪುರಾಣಪ್ರಪಂಚದ ಕಥಾಸಂದರ್ಭಗಳೇ ಹೆಚ್ಚು ವ್ಯಾಪಕವಾಗಿ ರುವಂತೆ ತೋರುತ್ತದೆ. ಈ ಪ್ರವೃತ್ತಿ ಈಗಲೂ ಜೀವಂತವಿದೆ.

ಶಾಸ್ತ್ರಕವಿತ್ವದ ವಿಷಯದಲ್ಲಿಯೂ ಸಂಸ್ಕೃತ ಪ್ರಾಕೃತ ಭಾಷೆಗಳ ಪ್ರಭಾವವೇ ಕನ್ನಡ ದಲ್ಲಿ ದಟ್ಟವಾಗಿ ತೋರುತ್ತದೆ. ಕನ್ನಡ ಕವಿಗಳಿಗೆ ಶಾಸ್ತ್ರಕವಿತ್ವದಲ್ಲಿದ್ದ ಆಸಕ್ತಿ ವ್ಯುತ್ಪತ್ತಿ ಗಳಿಗೆ ಆ ಭಾಷೆಗಳಲ್ಲಿಯ ಶಾಸ್ತ್ರಕವಿತ್ವದ ಅಭ್ಯಾಸವೇ ಕಾರಣವೆಂದು ಹೇಳಬಹುದು.

ವಿವಿಧ ಶಾಸ್ತ್ರಗಳ ಜ್ಞಾನವನ್ನು ಕನ್ನಡವನ್ನು ಮಾತ್ರ ಬಲ್ಲವರ ತಿಳಿವಳಿಕೆಗಾಗಿ ತಿಳಿಯಪಡಿಸಲು ಮೂಲಗ್ರಂಥಗಳ ಸರಳವಾದ ಅನುವಾದ, ಸಂಗ್ರಹ, ಸಂಕಲನಗಳ ಮೂಲಕ ಕನ್ನಡದ ಶಾಸ್ತ್ರಕವಿಗಳು ಪ್ರಯತ್ನ ಮಾಡಿದ್ದಾರೆ. ಈ ಸಂಗತಿಯನ್ನು ಅವರು ವ್ಯಕ್ತವಾಗಿಯೇ ಕೆಲವೊಮ್ಮೆ ಹೇಳಿಕೊಂಡಿರುವುದುಂಟು. ವೃತ್ತಿವ್ಯಾಖ್ಯಾನಗಳ ಹಾಗೂ ಸಿದ್ಧಾಂತಾದಿ ಗ್ರಂಥಗಳ ರಚನೆಯಲ್ಲಿಯೂ ಬಲುಮಟ್ಟಿಗೆ ಇದೇ ರೀತಿಯ ಉದ್ದೇಶವಿರುವುದು ಕಾಣುತ್ತದೆ.

ಸಂಸ್ಕೃತಭಾಷೆ ತನ್ನ ಶಬ್ದಭಂಡಾರವನ್ನು ಕನ್ನಡಕ್ಕೆ ಸೂರೆಗೊಟ್ಟಿದೆ. ದಿನನಿತ್ಯದ ಬಳಕೆಯ ಮಾತುಗಳಿಂದ ಹಿಡಿದು ಅಮೂರ್ತಭಾವಗಳನ್ನು ವಿವರಿಸುವ ತತ್ತ್ವ, ಧರ್ಮ, ವಿಜ್ಞಾನ ಮುಂತಾದ ವಿಭಾಗಗಳಲ್ಲಿ ಬಳಸುವ ಮಾತುಗಳವರೆಗೆ ಅದರ ವ್ಯಾಪ್ತಿಯಿದೆ. ಕನ್ನಡ ನುಡಿಯೊಡನೆ ಸಂಸ್ಕೃತದ ನುಡಿ ನುಡಿಕಾರಗಳು ಅಭೇದಭಾವದಿಂದ ಸೇರಿಹೋಗಿವೆ. ಮುಂದಿನ ಘಟ್ಟದಲ್ಲಿ ಬರೆಹದ ರೀತಿ, ಅಲಂಕಾರವೈಚಿತ್ರ್ಯ, ಛಂದಸ್ಸಿನ ವೈಖರಿ ಮೊದಲಾದ ಕವಿಕಾರ್ಯದ ವಿಧಿವಿಧಾನಗಳಲ್ಲಿ ಆ ಪ್ರಭಾವ ದಟ್ಟವಾಗಿ ಬೆಳೆಯುತ್ತ ಹೋಗಿದೆ ; ಹಲವು ಏರಿಳಿತಗಳನ್ನು ಅನುಭವಿಸಿಯೂ ಆ ಪ್ರಭಾವ ಪ್ರವೃತ್ತಿಗಳು ಇನ್ನೂ ಜೀವಂತವಾಗಿವೆ. ನಮ್ಮ ಭಾಷೆಯ ಕವಿಗಳ ಚಿಂತನ ವಿಧಾನದಲ್ಲಿಯೇ ಅವು ಶಾಶ್ವತವಾಗಿ ಬೆರೆತುಹೋಗಿವೆ. ಇಲ್ಲಿ ಪ್ರಾಚೀನ ಅರ್ವಾಚೀನ ಎಂಬ ಕಾಲಭೇದವಿಲ್ಲ, ಲಿಂಗಭೇದ ವರ್ಗಭೇದಗಳೂ ಇಲ್ಲ. ಇಷ್ಟಾಗಿ ಕನ್ನಡತನ ವೈಯಕ್ತಿಕತೆಯನ್ನು ಉಳಿಸಿ ಬೆಳಸಿಯೂ ಇದೆ, ಸ್ವತಂತ್ರವಾದ ಕಾಂತಿ ವರ್ಚಸ್ಸುಗಳನ್ನು ಕಾಲದಿಂದ ಕಾಲಕ್ಕೆ ತೋರುತ್ತಲೂ ಇದೆ. ಮಾರ್ಗ ದೇಸಿಗಳೆಂಬ ಪ್ರಸ್ಥಾನಗಳೇ ಅದರ ಫಲವಾಗಿ ಹುಟ್ಟಿವೆ. ಬಲಿಷ್ಠವಾದ ಭಾಷೆಯಾಗಿ ಸಂಸ್ಕೃತ ಕನ್ನಡವನ್ನು ತುಳಿದಿಕ್ಕಿ ಅದನ್ನು ಕುಬ್ಜವೂ ವಿಕೃತವೂ ಮಾಡಿಲ್ಲ; ತನ್ನ ಜೀವಸಾರವಾದ ವಾಣಿಯನ್ನೂ ವೈವಿಧ್ಯಮಯವೂ ಸಂಪದ್ಭರಿತವೂ ಆದ ವಾಙ್ಮಯರಾಶಿಯನ್ನೂ ನಿರಂತರವಾಗಿ ಧಾರೆಯೆರೆದು ಧೀರೋನ್ನತವೂ ಸುಂದರವೂ ಆಗಿ ಮಾಡಿದೆ. ಕನ್ನಡವಾದರೂ ಉಪಜೀವಕವಾಗಿ ಬಾಳುವ ದೌರ್ಬಲ್ಯವನ್ನು ತೋರದೆ, ಸಂಸ್ಕೃತದಿಂದ ಬೇಕಾದನಿತು ತುಷ್ಟಿಪುಷ್ಟಿಗಳನ್ನು ಪಡೆದು ಕನ್ನಡ ಜನರ ಜ್ಞಾನಸಂಪತ್ತನ್ನೂ ಭಾವಸಂಪತ್ತನ್ನೂ ಅಧಿಕಾಧಿಕವಾಗಿ ಬೆಳಸಿದೆ.

ಈಗ ಪ್ರಾಚೀನಕಾಲದಿಂದ ವಿಸ್ತಾರವಾಗಿ ಬೆಳೆದುಕೊಂಡು ಬಂದಿರುವ ಕನ್ನಡ ಸಾಹಿತ್ಯವನ್ನು ಕೆಲವು ವರ್ಗಗಳನ್ನಾಗಿ ವಿಭಜಿಸಿ, ಆಯಾ ವರ್ಗದ ಗ್ರಂಥರಾಶಿಯಮೇಲೆ ಸಂಸ್ಕೃತ ಮತ್ತು ಕೆಲಮಟ್ಟಿಗೆ ಪ್ರಾಕೃತ ಭಾಷಾಸಾಹಿತ್ಯಗಳ ಪ್ರಭಾವ ಸಂಬಂಧಗಳು ಎಷ್ಟರಮಟ್ಟಿಗೆ ಕಂಡುಬರುತ್ತವೆ ಎಂಬುದನ್ನು ಸ್ವಲ್ಪ ಪರಿಶೀಲಿಸೋಣ.

## ರಾಮಾಯಣಗಳು ಮತ್ತು ರಾಮಾಯಣ ಕಥಾಭಾಗಗಳು

ವಾಲ್ಮೀಕಿ ರಾಮಾಯಣವು ಭರತಖಂಡದ ಸಂಸ್ಕೃತಿಯನ್ನೂ ಸಾಹಿತ್ಯವನ್ನೂ ಬಹುಕಾಲದಿಂದ ಪೋಷಿಸುತ್ತ ಬಂದಿರುವ ಸಂಗತಿ ಸುವಿದಿತವಾಗಿದೆ. ಅದನ್ನು ಆಶ್ರಯಿಸಿ

ಕಾಲಕಾಲಕ್ಕೆ ಸಂಸ್ಕೃತಪ್ರಾಕೃತಗಳಲ್ಲಿಯೂ ಇತರ ದೇಶಭಾಷೆಗಳಲ್ಲಿಯೂ ಬಗೆಬಗೆಯ ರಾಮಾಯಣಗಳು ಬಹುಸಂಖ್ಯೆಯಲ್ಲಿ ರಚಿತವಾಗುತ್ತ ಬಂದಿವೆ. ಆಯಾ ಭಾಷೆಗಳ ಸಾಹಿತ್ಯೋದಯ ಕಾಲದಿಂದ ಅವುಗಳ ರಚನೆ ನಿರಂತರವಾಗಿ ನಡೆಯುತ್ತ, ಮುಂದು ಮುಂದಿನ ಸಾಹಿತ್ಯಸೃಷ್ಟಿಯಲ್ಲಿ ಅವುಗಳ ಪ್ರೇರಣೆ ಅನುಕರಣೆಗಳು ಎಡೆಬಿಡದೆ ಪ್ರಕಟ ವಾಗುತ್ತ, ಸಂಸ್ಕೃತಿಯ ಸಂವರ್ಧನೆಯೂ ಭಾಷಾಸಾಹಿತ್ಯಗಳ ಪೋಷಣೆಯೂ ಜತೆ ಜತೆಗೆ ಸಾಧಿತವಾಗಿವೆ. ವಾಲ್ಮೀಕಿ ರಾಮಾಯಣವು ಭರತಖಂಡದ ಆದಿಕಾವ್ಯವೆನಿಸಿದೆ. ಶತಕೋಟಿ ಪ್ರಮಿತವಾದ ರಘುನಾಥ ಚರಿತಗಳಲ್ಲಿ ಒಂದೇ ಒಂದು ಅಕ್ಷರವೂ ಮಹಾ ಪಾತಕವನ್ನು ಪರಿಹರಿಸಲು ಸಮರ್ಥವಾದುದು—ಎಂಬುದು ಭಾರತೀಯರ ದೃಢ ವಿಶ್ವಾಸವಾಗಿದೆ.[15]

ರಾಮಾಯಣವು ಭರತಖಂಡದ ಆದಿಕಾವ್ಯ; ಅದರ ಕರ್ತೃ ವಾಲ್ಮೀಕಿ ಆದಿಕವಿ. ಈ ಮಹಾಕಾವ್ಯ ಕ್ರಿ.ಪೂ. ೫೦೦ಕ್ಕೆ ಹಿಂದೆ ರಚಿತವಾಗಿರಬೇಕೆಂದು ಸಾಮಾನ್ಯವಾಗಿ ತಿಳಿಯಲಾಗಿದೆ. ೨೪ ಸಾವಿರ ಸಂಖ್ಯೆಯ ಶ್ಲೋಕಗಳನ್ನುಳ್ಳ ೭ ಕಾಂಡಗಳು ಈ ಮಹಾ ಕಾವ್ಯದ ಗ್ರಂಥಪ್ರಮಾಣವೆಂದು ಸಾಂಪ್ರದಾಯಿಕರು ತಿಳಿಯುತ್ತಾರೆ. ಗ್ರಂಥದ ರಚನಾ ಕಾಲ ಗ್ರಂಥಸ್ವರೂಪ ಮೊದಲಾದ ವಿಷಯಗಳಲ್ಲಿ ಅಭಿಪ್ರಾಯಭೇದಗಳಿವೆ. ಇದು ಹೇಗಿದ್ದರೂ ಗ್ರಂಥದ ಮಹತ್ತ್ವದ ವಿಷಯದಲ್ಲಿ ಅದು ಸರ್ವಾದರಣೀಯವೇ ಆಗಿದೆ.

ರಾಮಾಯಣದ ಮಹತ್ತ್ವದ ಮೂಲ ಯಾವುದು? ಭಾರತೀಯರಿಗೆ ಅದು ವಿಶೇಷ ವಾಗಿ ಪೂಜ್ಯವೂ ಪ್ರಿಯವೂ ಆಗಿರುವುದು ಏತಕ್ಕೆ? "ಸಂಸಾರದ ಕಥೆಗೆ ಅತ್ಯಂತ ಮಹತ್ತ್ವವನ್ನು ಕೊಟ್ಟಿರುವುದೇ ರಾಮಾಯಣದಲ್ಲಿರುವ ಮುಖ್ಯ ವಿಶೇಷತೆ. ತಂದೆ ಮಕ್ಕಳು, ಅಣ್ಣತಮ್ಮಂದಿರು, ಗಂಡಹೆಂಡಿರು ಇವರಿಗಿರುವ ಧರ್ಮದ ಬಂಧನಕ್ಕೂ ಪ್ರೇಮಮೂಲವಾದ ಸಂಬಂಧಕ್ಕೂ ರಾಮಾಯಣವು ಎಷ್ಟು ಮಹತ್ತ್ವವನ್ನು ಕೊಟ್ಟಿರುವುದೆಂದರೆ—ಸಂಸಾರದ ಚರಿತ್ರೆಯು ಅತಿಸಹಜವಾಗಿ ಮಹಾಕಾವ್ಯಕ್ಕೆ ಉಪಯುಕ್ತವಾಗಿದೆ. ದೇಶಜಯ, ಶತ್ರುವಿನಾಶ, ಪ್ರಬಲವಾದ ಎರಡು ಶತ್ರುಪಕ್ಷಗಳ ಪ್ರಚಂಡವಾದ ಹೋರಾಟ—ಈ ಸಮಸ್ತ ವ್ಯಾಪಾರವೂ ಸಾಧಾರಣವಾಗಿ ಮಹಾಕಾವ್ಯಗಳಲ್ಲಿ ಆಂದೋ ಲನವನ್ನೂ ಉದ್ದೀಪನದ ಸಂಚಾರವನ್ನೂ ಉಂಟುಮಾಡುತ್ತದೆ. ಆದರೆ ರಾಮಾಯಣದ ಮಹಿಮೆಯು ರಾಮರಾವಣರ ಯುದ್ಧವನ್ನು ಆಶ್ರಯಿಸಿಲ್ಲ; ಆ ಯುದ್ಧದ ಸಂಗತಿಯು ರಾಮಸೀತೆಯರ ದಾಂಪತ್ಯಪ್ರೀತಿಯನ್ನು ಉಜ್ಜ್ವಲಮಾಡಿ ತೋರಿಸತಕ್ಕ ಉಪಲಕ್ಷ್ಯ ಮಾತ್ರವಾಗಿದೆ. ತಂದೆಯಲ್ಲಿ ಮಗನಿಗಿರುವ ವಿಧೇಯತೆ, ಅಣ್ಣನಿಗಾಗಿ ತಮ್ಮನ ಸ್ವಾರ್ಥ ತ್ಯಾಗ, ಗಂಡಹೆಂಡಿರಿಗೆ ಒಬ್ಬರಿಗೊಬ್ಬರಲ್ಲಿರುವ ನಿಷ್ಠೆ, ಮತ್ತು ಪ್ರಜೆಗಳ ವಿಷಯದಲ್ಲಿ ರಾಜನ ಕರ್ತವ್ಯ ಇವುಗಳು ಎಷ್ಟು ದೂರ ಹೋಗಬಲ್ಲುವೆಂಬುದನ್ನು ರಾಮಾಯಣವು ತೋರಿಸಿರುತ್ತದೆ. ವ್ಯಕ್ತಿವಿಶೇಷದ, ಮುಖ್ಯವಾಗಿ ಸಂಸಾರದ, ಸಂಬಂಧಗಳು ಈ ರೀತಿ ಯಾಗಿ ವರ್ಣನೀಯ ವಿಷಯಗಳೆಂದು ಮತ್ತಾವ ದೇಶದ ಮಹಾಕಾವ್ಯದಲ್ಲಿಯೂ ಪರಿಗಣಿತವಾಗಿಲ್ಲ."[16]

"ಈ ಕಾವ್ಯದಿಂದ ನಮಗೆ ಆಗುವುದು ಕವಿಯ ಪರಿಚಯವು ಮಾತ್ರವಲ್ಲ; ಸಮಗ್ರ ಭರತಖಂಡದ ಪರಿಚಯವೂ ಆಗುತ್ತದೆ. ಗೃಹಕ್ಕೂ ಗೃಹಧರ್ಮಕ್ಕೂ ಭರತಖಂಡವು ಎಷ್ಟರಮಟ್ಟಿನ ಪ್ರಾಶಸ್ತ್ಯವನ್ನು ಕೊಟ್ಟಿದೆ ಎಂಬುದನ್ನು ಈ ಕಾವ್ಯದಿಂದ ತಿಳಿಯ ಬಹುದು.

ಈ ರಾಮಾಯಣ ಕಥೆಯಿಂದ ಭರತಖಂಡದ ಆಬಾಲವೃದ್ಧವನಿತೆಯರೂ ಆಪಾಮರ ಸಾಧಾರಣರೂ ಶಿಕ್ಷಾಲಾಭವನ್ನು ಪಡೆಯುತ್ತಿರುವುದು ಮಾತ್ರವೇ ಅಲ್ಲ, ಆನಂದಾನು ಭವವನ್ನೂ ಮಾಡುತ್ತಿದ್ದಾರೆ; ಅದನ್ನು ಶಿರಸಾ ಧರಿಸಿರುವುದು ಮಾತ್ರವೇ ಅಲ್ಲ, ತಮ್ಮ ಹೃದಯದಲ್ಲಿಯೂ ಅದಕ್ಕೆ ಸ್ಥಾನವನ್ನು ಕೊಟ್ಟಿದ್ದಾರೆ; ಅದು ಅವರ ಧರ್ಮ ಶಾಸ್ತ್ರವಾಗಿರುವುದು ಮಾತ್ರವೇ ಅಲ್ಲ, ಅವರ ಕಾವ್ಯವೂ ಆಗಿದೆ."[17]

"ಭರತಖಂಡವು ತನಗೆ ಅಪೇಕ್ಷಣೀಯವಾದುದನ್ನು ರಾಮಾಯಣದಲ್ಲಿ ಪಡೆದಿರು ತ್ತದೆ....ವಾಲ್ಮೀಕಿಯ ರಾಮಚರಿತ ಕಥೆಯನ್ನು ಪಾಠಕರು ಒಬ್ಬ ಕವಿಯ ಕಾವ್ಯವೆಂದು ತಿಳಿಯಬಾರದು, ಅದನ್ನು ಸಮಗ್ರ ಭರತಖಂಡದ್ದೆಂದು ತಿಳಿದುಕೊಳ್ಳಬೇಕು....ಭರತ ಖಂಡವು ಕೇಳಬೇಕೆಂದು ಇಷ್ಟಪಟ್ಟದ್ದು ಐತಿಹಾಸಿಕ ಗೌರವದ ಕಥೆಯನ್ನಲ್ಲ, ಪೂರ್ಣ ಮಾನವನ ಆದರ್ಶವನ್ನು. ಅದನ್ನು ಭರತಖಂಡವು ಇಂದಿನವರೆಗೂ ಅವಿಶ್ರಾಂತವಾದ ಆನಂದದಿಂದ ಕೇಳುತ್ತಾ ಬಂದಿದೆ. ಈ ಕಾವ್ಯವು ಅತಿಶಯೋಕ್ತಿಯೆಂದಾಗಲಿ ಇದೊಂದು ಕಾವ್ಯಕಥೆ ಮಾತ್ರವೆಂದಾಗಲಿ ನಾವು ಹೇಳಿಲ್ಲ. ಭಾರತೀಯರಿಗೆ ರಾಮಲಕ್ಷ್ಮಣ ಸೀತೆ ಯರು ಎಷ್ಟು ಸತ್ಯವೋ ಮನೆಯ ಜನಗಳೂ ಕೂಡ ಅಷ್ಟು ಸತ್ಯವಲ್ಲ."[18]

"ವಾಲ್ಮೀಕಿಯ ಕೃತಿ ಹುಟ್ಟಿದಂದು 'ಕವಿಕೃತಿ'ಯಾಗಿತ್ತು; ಇಂದು ಪ್ರಕೃತಿ ಯಾಗಿದೆ. ಭಾರತೀಯರ ಬಾಳುವೆಯ ಲೋಕದಲ್ಲಿ ಪರ್ವತ, ಅರಣ್ಯ, ಸಮುದ್ರ, ಆಕಾಶಗಳಿರುವಂತೆ ರಾಮಾಯಣವೂ 'ಇದೆ.' ಬಹುಶಃ ಅವುಗಳಿಗಿಂತಲೂ ಸುಸ್ಥಿರ ವಾಗಿ, ಸಮಧಿಕವಾಗಿ, ಸತ್ಯತರವಾಗಿ, ಬಾಹ್ಯಾಭ್ಯಂತರಗಳನ್ನೂ ಲೋಕಾಲೋಕ ಗಳನ್ನೂ ಆಕ್ರಮಿಸಿ, ವ್ಯಾಪಿಸಿ, ಸೃಷ್ಟಿಯ ವಿಕಾಸರೂಪವಾದ ಪರಿಣಾಮಪಥದಲ್ಲಿ ಒಂದು ಪರಿವರ್ತನಾಸಮರ್ಥವಾದ ಸಾರಥಿಶಕ್ತಿಯಾಗಿದೆ. ಪ್ರಕೃತಿಯ ಪರ್ವತಾರಣ್ಯ ಗಳನ್ನು ಯಥಾಶಕ್ತಿಯಾಗಿ ಉಪಯೋಗಿಸಿಕೊಳ್ಳುವಂತೆ ರಾಮಾಯಣವನ್ನೂ ಉಪ ಯೋಗಿಸಿಕೊಳ್ಳಬಹುದು. ಆ ಪರ್ವತದ ಬಂಡೆಗಳಲ್ಲಿ ಸಾಮರ್ಥ್ಯವಿರುವವರು ಯಾರು ಬೇಕಾದರೂ ತಮ್ಮ ತಮ್ಮ ಪ್ರತಿಭೆಯ ಕಲ್ಪನಾಕೃತಿಗಳನ್ನು ಕಾಣಬಹುದು, ಶಿಲ್ಪಕೃತಿ ಗಳನ್ನು ಕಡೆಯಬಹುದು. ಆ ಅರಣ್ಯದ ಅಂಶದಿಂದ ತಮ್ಮ ತಮ್ಮ ದರ್ಶನಕ್ಕೆ ಅನು ರೂಪವಾಗಿ ಎಂಥ ನಂದನೋದ್ಯಾನಗಳನ್ನು ಬೇಕಾದರೂ ರಚಿಸಿಕೊಳ್ಳಬಹುದು. ವಾಲ್ಮೀಕಿಯ ದಿವ್ಯಕೃತಿ ಪ್ರಕೃತಿಯ ಮೂಲಭೂತ ವಸ್ತುಗಳಂತೆ, ಶಕ್ತಿಗಳಂತೆ, ಅಪೌರುಷೇಯವಾಗಿ ಹೋಗಿದೆ. ಆದ್ದರಿಂದಲೇ ಅದು ವೇದಪಟ್ಟಕ್ಕೂ ಏರಿದೆ."[19]

ಈ ಅವತರಣಿಕೆಗಳು ಭರತಖಂಡದ ಜನಜೀವನದ ಮೇಲೆ ವಾಲ್ಮೀಕಿ ರಾಮಾ ಯಣದ ಪ್ರಭಾವವು ಎಷ್ಟು ಗಾಢವಾದುದು ಎಂಬುದನ್ನು ಎತ್ತಿ ಹೇಳತಕ್ಕವಾಗಿವೆ.

ಮತಪರವಾದ ವಿವಿಧ ದೃಷ್ಟಿಕೋನಗಳಿಗೆ ಅನುಸಾರವಾಗಿ ವಾಲ್ಮೀಕಿ ರಾಮಾಯಣದ ಕಥೆಯಲ್ಲಿ, ನಿರೂಪಣೆಯಲ್ಲಿ ಹಲವು ಬಗೆಯ ಸಂಪ್ರದಾಯಗಳು ಹುಟ್ಟಿಕೊಂಡಿವೆ. ಒಂದೊಂದು ಸಂಪ್ರದಾಯದಲ್ಲಿಯೂ ಕವಲುಗಳೊಡೆದು ಮುಂದೆ ಅವೇ ಪ್ರಬಲಿಸಿರುವುದೂ ಉಂಟು. ಅದನ್ನಾಶ್ರಯಿಸಿದ ಉಪಾಖ್ಯಾನರೂಪವಾದ ರಾಮಕಥೆಗಳು ಕೂಡ ಎಷ್ಟೋ ಇವೆ. ಸಂಸ್ಕೃತಸಾಹಿತ್ಯದಲ್ಲಿಯೇ ಭಾಸ ಕಾಳಿದಾಸ ಭವಭೂತಿ ಮೊದಲಾದವರು ರಾಮಾಯಣದ ಕಥೆಯನ್ನು ನಾಟಕಗಳಾಗಿಯೂ ಕಾವ್ಯಗಳಾಗಿಯೂ ಹೇಳಿರುವುದು ಕಾಣುತ್ತದೆ. ಇವುಗಳ ತಿರುಳೂ ಸೊಗಸೂ ಕನ್ನಡ ಸಾಹಿತ್ಯದ ಶ್ರೇಷ್ಠ ಕವಿಗಳ ರಾಮಕಥಾ ಸಾಹಿತ್ಯದ ರಚನೆಯಲ್ಲಿ ಮಾತ್ರವೇ ಅಲ್ಲದೆ ಸಮಗ್ರಸಾಹಿತ್ಯದ ಉತ್ಕೃಷ್ಟವಾದ ಭಾಗಗಳಲ್ಲಿ ಕೂಡ ಪ್ರತಿಫಲಿಸಿರುವುದಕ್ಕೆ ನಿದರ್ಶನಗಳಿವೆ.

ಕನ್ನಡ ಸಾಹಿತ್ಯದಲ್ಲಿ ಜೈನ ಮತ್ತು ವೈದಿಕ ರಾಮಾಯಣಗಳು ತಕ್ಕಮಟ್ಟಿನ ಸಂಖ್ಯೆಯಲ್ಲಿ ರಚಿತವಾಗಿವೆ. ಸಂಖ್ಯಾದೃಷ್ಟಿಯಿಂದ ಜೈನ ರಾಮಾಯಣಗಳು ಕಡಮೆಯಾಗಿಯೂ ವೈದಿಕ ರಾಮಾಯಣಗಳು ಅಧಿಕವಾಗಿಯೂ ಇವೆ. ಕನ್ನಡನಾಡಿನಲ್ಲಿ ಜೈನಧರ್ಮವು ಕ್ಷೀಣಿಸಿದಂತೆ ರಾಮಕಥೆಗಳ ಕೃತಿರಚನೆಯ ಉತ್ಸಾಹವೂ ಕವಿಗಳಲ್ಲಿ ಕುಗ್ಗಿರಬೇಕು. ವಾಲ್ಮೀಕಿ ರಾಮಾಯಣವೂ ಇತರ ಪುರಾಣಗಳೂ ವೈಷ್ಣವ ಭಕ್ತಿಯು ಜ್ವಲಿಸಿದ ಕಾಲದಲ್ಲಿ ಹಿಂದುಧರ್ಮದ ಅನುಯಾಯಿಗಳಲ್ಲಿ ಪೂಜ್ಯವೂ ಪ್ರಿಯವೂ ಆಗಿ ಪರಿಣಮಿಸಿದಂತೆ ಜೈನಧರ್ಮ ಸಾಹಿತ್ಯಗಳ ವಿಷಯದಲ್ಲಿ ವಿಮಲಸೂರಿ ರವಿಷೇಣಾದ್ಯರ ಪ್ರಭಾವವು ಗಾಢವಾಗಿ ಮೈದೋರಲಿಲ್ಲ. ಜೈನ ರಾಮಾಯಣಗಳ ವಸ್ತುವಿನ್ಯಾಸ ನಿರೂಪಣವಿಧಾನಗಳು ಮೂಲ ರಾಮಾಯಣದ ವಸ್ತುವಿನ್ಯಾಸ ನಿರೂಪಣವಿಧಾನಗಳಿಗಿಂತ ವಿಭಿನ್ನವೂ ವಿಲಕ್ಷಣವೂ ಆದ ರೀತಿಯಲ್ಲಿರುವುದು ಕಾರಣವಾಗಿ ಸಾರ್ವತ್ರಿಕ ಮಾನ್ಯತೆಯ ದೃಷ್ಟಿಗೆ ಅವು ಎರವಾದಂತೆ ತೋರುತ್ತದೆ. ಇದು ಹೇಗಿದ್ದರೂ ಕನ್ನಡ ಸಾಹಿತ್ಯದಲ್ಲಿ ಮೊದಲು ಮೈದೋರಿದ್ದು ಜೈನ ರಾಮಾಯಣಗಳು. ನಾಗಚಂದ್ರನ (ಸು. ೧೧೪೦) 'ಪಂಪರಾಮಾಯಣ'ವೇ ಅಗ್ರಗಣ್ಯವಾದುದು, ಶ್ರೇಷ್ಠವಾದುದು. ಈಚಿನ ಜೈನರಾಮಾಯಣಗಳಿಗೆ ಅದೇ ಮಾದರಿ, ಪ್ರಾಯಃ ಮಾತೃಸ್ಥಾನ. ವಿಮಲಸೂರಿ ರವಿಷೇಣರ ಜೈನರಾಮಾಯಣ ಕಥಾಸಂಪ್ರದಾಯ ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ' ('ಪಂಪರಾಮಾಯಣ')ದ ಮೂಲಕ ಅನುಸ್ಯೂತವಾಗಿ ಹರಿದುಕೊಂಡು ಬಂದಿದೆಯೆಂದು ಹೇಳಬಹುದು. ನಾಗಚಂದ್ರನು ಮೊದಲುಗೊಂಡು ಜೈನರಾಮಾಯಣ ಕವಿಗಳ ಹೇಳಿಕೆಗಳನ್ನು ಪರಿಶೀಲಿಸಿ ಅವರ ಕೃತಿಗಳನ್ನು ವಿಮರ್ಶಿಸಿದರೆ, ಆ ಕವಿಗಳು ವಿಶೇಷವಾಗಿ ಸಂಸ್ಕೃತದ, ಸ್ವಲ್ಪಮಟ್ಟಿಗೆ ಪ್ರಾಕೃತದ, ಜೈನರಾಮಾಯಣಗಳಿಗೆ ಋಣಿಗಳಾಗಿರುವುದು ಕಂಡುಬರುತ್ತದೆ. ದೇವಚಂದ್ರನು 'ರಾಮಕಥಾವತಾರ'ದಲ್ಲಿ ಜೈನ ಸಂಪ್ರದಾಯದ ರಾಮಕಥೆಯ ಸಂಪ್ರದಾಯವನ್ನು ಕುರಿತು ಹೇಳಿರುವುದರ ಸಾರವಿದು: "ಈ ರಾಮಕಥೆಯನ್ನು ಮೊದಲು ಆದಿದೇವನ ಸಮವಸರಣದಲ್ಲಿ ಆದಿಚಕ್ರಿಯಾದ ಭರತೇಶ್ವರನಿಗೆ ಪುರುಪರಮೇಶ್ವರನು ನಿರೂಪಿಸಿದನು. ಅದು ಪರಂಪರಾಗತವಾಗಿ ಪಶ್ಚಿಮ

ತೀರ್ಥಂಕರನಾದ ಶ್ರೀ ವರ್ಧಮಾನ ಮಹಾವೀರನವರೆಗೆ ಬಂದಿತು. ಆತನು ಅದನ್ನು ಶ್ರೇಣಿಕ ಮಹಾಮಂಡಲೇಶ್ವರನಿಗೆ ತಿಳಿಸಿದನು. ಮುಂದೆ ಅದು ಅನುಕ್ರಮವಾಗಿ ಗುರು ಪರಂಪರೆಯಿಂದ ವ್ಯಕ್ತವಾಗುತ್ತ ಬಂದು, ಕೂಚಿಭಟ್ಟಾರಕ, ನಂದಿಮುನಿ, ಕವಿಪರ ಮೇಷ್ಠಿ, ರವಿಷೇಣ, ವೀರಸೇನ, ಸಿದ್ಧಸೇನ, ಪದ್ಮನಂದಿ, ಗುಣಭದ್ರ, ಸಕಲಕೀರ್ತಿ ಮುಂತಾದವರ ಮೂಲಕವಾಗಿ ಮುಂದುವರಿಯಿತು. ಅದನ್ನು ಚಾವುಂಡರಾಯ, ನಾಗಚಂದ್ರ, ಮಾಘಣಂದಿ ಸಿದ್ಧಾಂತಿ, ಕುಮುದೇಂದು, ನಯಸೇನ—ಇವರು ಹೇಳಿ ದರು."[20] ಈ ಹೇಳಿಕೆಯ ವಿವರಗಳಿಗೆ ನಾವು ಹೋಗಬೇಕಾಗಿಲ್ಲ. ಪರಿಶೀಲಿಸಿದರೆ ಕನ್ನಡ ಜೈನಕವಿಗಳು ಪ್ರಾಕೃತ ಸಂಸ್ಕೃತ ರಾಮಾಯಣಗಳ ಆದಿಕವಿಗಳಾದ ವಿಮಲ ಸೂರಿ ರವಿಷೇಣರಿಗೆ ಹೆಚ್ಚು ಆದ್ಯತೆ ಕೊಟ್ಟಿರುವಂತೆ ತೋರುತ್ತದೆ. ಆದರೆ ಜೈನ ರಾಮಾಯಣ ಕರ್ತೃಗಳು ಜೈನಭಾರತ ಕರ್ತೃಗಳಂತೆಯೇ ಯಾವುದಾದರೊಂದು ಆಕರವನ್ನು ಹಿಡಿದು ಅನುವಾದವನ್ನೋ ಸಂಗ್ರಹವನ್ನೋ ಮಾಡಿರದೆ, ನಾನಾ ಆಕರ ಗಳಿಂದೆತ್ತಿದ ಬೇರೆ ಬೇರೆ ಸಂಪ್ರದಾಯಗಳ ಹಾಗೂ ಕಥೆಗಳ ಸಮ್ಮಿಶ್ರಕಥಾಮಂಜರಿ ಯಾಗಿ ತಮ್ಮ ಕೃತಿಗಳನ್ನು ರಚಿಸಿರುವುದೇ ಸಾಮಾನ್ಯ. ಇದಕ್ಕೆ ಕೆಲಮಟ್ಟಿಗೆ ಕವಿಗಳ ಅಭಿರುಚಿಯ ವೈಚಿತ್ರ್ಯವೂ ವಿವಿಧ ಮೂಲಗಳ ಉತ್ತಮಾಂಶಗಳ ಸ್ವೀಕಾರದಿಂದ ಸ್ವರಚನೆಯನ್ನು ಉತ್ತಮಗೊಳಿಸುವ ಕಾಂಕ್ಷೆಯೂ ಜನರಲ್ಲಿ ಪ್ರಚಲಿತವಾಗಿರುತ್ತಿದ್ದ ಬಗೆಬಗೆಯ ರಾಮಕಥೆಗಳ ರೂಢಿಯೂ ಸ್ವಲ್ಪಮಟ್ಟಿಗೆ ಕಾರಣವಾಗಿರಬಹುದೆಂದು ತಿಳಿಯಬಹುದು.

ಇನ್ನು ವೈದಿಕ ಸಂಪ್ರದಾಯದ ರಾಮಾಯಣಗಳು ಸು. ೧೫ನೆಯ ಶತಮಾನದಿಂದ ಮುಂದಕ್ಕೆ ರಚಿತವಾಗತೊಡಗಿದಂತೆ ಸಾಮಾನ್ಯವಾಗಿ ಭಾವಿಸಬಹುದು. ಇವುಗಳಲ್ಲಿ ಹೆಚ್ಚಿನ ಕೃತಿಗಳ ಕಾಲವಿಷಯದಲ್ಲಿ ಸಂದಿಗ್ಧತೆ ಪೌರ್ವಾಪರ್ಯ ವಿಚಾರಗಳ ತೊಡಕು ವಿಶೇಷವಾಗಿದೆ. ಅಂತೂ ಈ ಸಂಪ್ರದಾಯದ ರಾಮಾಯಣಗಳು ೧೬–೧೭ನೆಯ ಶತಮಾನಗಳಿಂದಷ್ಟೇ ಗಮನಾರ್ಹವಾದ ಪ್ರಮಾಣದಲ್ಲಿ ರಚನೆಯಾಗತೊಡಗಿತೆಂದು ಹೇಳಬಹುದು. ಕುಮಾರ ವಾಲ್ಮೀಕಿಯ (ಸು. ೧೫೦೦) 'ತೊರವೆ ರಾಮಾಯಣ'ವು ಕಾಲ ಹಾಗೂ ಗುಣದ ದೃಷ್ಟಿಯಿಂದ ಮೊದಲಲ್ಲಿ ಗಣಿಸತಕ್ಕದ್ದಾಗಿದೆ. ಆದರೆ ಜೈನ ರಾಮಾಯಣಗಳಲ್ಲಿ 'ಪಂಪರಾಮಾಯಣ'ದ ಪ್ರಭಾವ ಕಾಣುವಮಟ್ಟಿಗೆ ವೈದಿಕ ರಾಮಾಯಣಗಳಲ್ಲಿ 'ತೊರವೆ ರಾಮಾಯಣ'ದ ಪ್ರಭಾವ ವ್ಯಾಪಕವಾಗಿದೆಯೆಂದು ಹೇಳುವುದಕ್ಕಾಗದು. ಏಕೆಂದರೆ ಕುಮಾರವಾಲ್ಮೀಕಿಯ ರಾಮಾಯಣವನ್ನೊಳಕೊಂಡು ಎಲ್ಲ ಪ್ರಮುಖ ವೈದಿಕ ಕನ್ನಡ ರಾಮಾಯಣಗಳಿಗೂ ಸಂಸ್ಕೃತದ ವಾಲ್ಮೀಕಿ ರಾಮಾ ಯಣವೇ ಬಲುಮಟ್ಟಿಗೆ ಆಕರದ ಸ್ಥಾನದಲ್ಲಿದೆ. ಅಲ್ಲದೆ ಪೌರಾಣಿಕತೆಯ ಅಂಶ ಹೆಚ್ಚಾ ಗಿರುವ ಆನಂದರಾಮಾಯಣ ಅದ್ಭುತರಾಮಾಯಣ ಮೊದಲಾದವುಗಳ ಪ್ರಭಾವವೂ ಕನ್ನಡ ರಾಮಾಯಣಗಳ ಮೇಲೆ ವಿಶೇಷವಾಗಿ ಕಂಡುಬರುತ್ತದೆ. ಅನೇಕ ವೇಳೆ 'ವಿಷ್ಣು ಪುರಾಣ', 'ಪದ್ಮಪುರಾಣ' ಮೊದಲಾದ ಪುರಾಣೋಕ್ತ ರಾಮಕಥೆಗಳು ಕನ್ನಡ ರಾಮಾ

ಯಣಗಳಿಗೆ ವಸ್ತುವನ್ನೊದಗಿಸಿವೆ. ಆದುದರಿಂದ ಉತ್ತರಕಾಂಡದ ಕಥಾನುವಾದ ಗಳಂತಹ ಗ್ರಂಥಗಳು, ವಾಲ್ಮೀಕಿ ರಾಮಾಯಣದ ಟೀಕೆ ವ್ಯಾಖ್ಯಾನಗಳು ಈ ಕೆಲವನ್ನು ಬಿಟ್ಟರೆ ಹೆಚ್ಚಿನಮಟ್ಟಿಗೆ ಯಥಾವತ್ತಾಗಿ ಮೂಲರಾಮಾಯಣವನ್ನು ಅನುವಾದಿಸುವುದ ಕ್ಕಾಗಲಿ ಸಂಗ್ರಹಿಸುವುದಕ್ಕಾಗಲಿ ಕನ್ನಡ ಕವಿಗಳು ಹೋಗಿಲ್ಲ. ಕನ್ನಡ ಜೈನರಾಮಾಯಣ ಗಳ ವಿಚಾರದಲ್ಲಿ ಜೈನಕವಿಗಳು ಅನುಸರಿಸಿದ ಮಾರ್ಗವನ್ನೇ ವೈದಿಕ ರಾಮಾಯಣಗಳ ವಿಚಾರದಲ್ಲಿ ಬ್ರಾಹ್ಮಣ ಕವಿಗಳು ಮತ್ತು ಇತರ ಕವಿಗಳು ಅನುಸರಿಸಿದರೆಂದು ಹೇಳ ಬಹುದು. ಎಂದರೆ ಏಕೈಕ ಆಕರವನ್ನು ಹಿಡಿಯದೆ, ವಿಭಿನ್ನ ಆಕರಗಳ ಕಥೆಗಳನ್ನೂ ಪದ್ಧತಿ ಗಳನ್ನೂ ಅನುಸರಿಸಿದರು. ಕೆಲವರು ಕವಿಗಳು ಈ ಸಂಗತಿಯನ್ನು ಪ್ರತ್ಯಕ್ಷವಾಗಿಯೇ ಸೂಚಿ ಸಿದ್ದಾರೆ. ವಾಲ್ಮೀಕಿ ರಾಮಾಯಣವೇ ಮುಂದೆ ಕಾಲಕಾಲಕ್ಕೆ ಸಂಸ್ಕೃತಸಾಹಿತ್ಯದಲ್ಲಿ ಜನಪ್ರಿಯವಾಗುತ್ತ ಬಂದಂತೆ ನಾನಾವಿಧವಾದ ಮತಶ್ರದ್ಧೆಗಳು ಅಭಿರುಚಿಗಳು ಪ್ರಭಾವ ಗಳು ಇವಕ್ಕೆ ಸಿಕ್ಕು ವಿವಿಧ ಸಂಪ್ರದಾಯದ ಕಥೆಗಳಾಗಿ ಕವಲೊಡೆಯಿತಷ್ಟೆ. ಅಂತಹ ರಾಮಕಥೆಗಳ ವಸ್ತು, ಪಾತ್ರ, ಸನ್ನಿವೇಶ, ನೀತಿ ಮೊದಲಾದವುಗಳು ಸಹಜವಾಗಿ ಜನ ಜೀವನದಲ್ಲಿಯೂ ಸಾಹಿತ್ಯದಲ್ಲಿಯೂ ಪ್ರಭಾವಕಾರಿಯಾದವು. ಕವಿಗಳು ತಮ್ಮ ತಮ್ಮ ಅಭಿರುಚಿ ಮತಶ್ರದ್ಧೆ ಮೊದಲಾದವುಗಳಿಂದ ಪ್ರೇರಿತರಾಗಿ ಸಮಗ್ರವಾಗಿಯೂ ಸಂಕ್ಷೇಪ ವಾಗಿಯೂ ಪೂರ್ಣವಾಗಿಯೂ ಆಖ್ಯಾನೋಪಾಖ್ಯಾನಗಳ ರೂಪವಾಗಿಯೂ ಕೃತಿರಚನೆ ಮಾಡಿದರು. ಪ್ರಾಯಃ ವಾಲ್ಮೀಕಿ ರಾಮಾಯಣಕ್ಕಿಂತ ಈ ಕವಲು ಸಂಪ್ರದಾಯದ ರಾಮಾಯಣಗಳೇ ವಿಶೇಷವಾಗಿ ಕನ್ನಡ ಕವಿಗಳ ಮನಸೆಳೆದಂತೆ ತೋರುತ್ತದೆ; ಸಂಪೂರ್ಣ ರಾಮಾಯಣದ ರಚನೆಗಿಂತ ಅದರ ಬಿಡಿಬಿಡಿಯಾದ ಕಥಾಭಾಗಗಳ ರಚನೆಯೇ ಅವರಿಗೆ ಹೆಚ್ಚು ಹಿಡಿಸಿದಂತೆ ಸುಲಭವೆನಿಸಿದಂತೆ ತೋರುತ್ತದೆ. ಅಂತೂ ರಾಮಾಯಣದ ಕಥೆ ಪ್ರತಿ ಭಾವಂತ ಕವಿಗಳ ಕೈಯಲ್ಲಿ ಶ್ರೇಷ್ಠ ರೀತಿಯಿಂದ ನಿರೂಪಿತವಾಗಲಿಲ್ಲವೆಂಬುದು ನಿಶ್ಚಯ.

ಕನ್ನಡ ಕವಿಗಳು ಸಂಸ್ಕೃತದಲ್ಲಿರುವ ರಾಮಕಥಾಸಾಹಿತ್ಯವನ್ನು ಬಳಸಿಕೊಂಡಿರುವ ರೀತಿಯನ್ನು ಹೀಗೆ ಸಂಗ್ರಹಿಸಬಹುದು : (೧) ವಾಲ್ಮೀಕಿ ರಾಮಾಯಣವನ್ನೂ ಆನಂದ ರಾಮಾಯಣ ಅದ್ಭುತರಾಮಾಯಣ ಮೊದಲಾದ ಬೇರೆ ಬೇರೆ ರಾಮಾಯಣಗಳನ್ನೂ ಅನುವಾದಿಸಿಯೂ ಸಂಗ್ರಹಿಸಿಯೂ ಇದ್ದಾರೆ. ಅನುವಾದಗಳು ಶಬ್ದಶಃ ಅನುವಾದ ಗಳಾಗಿರದೆ ವಸ್ತುವಿನ್ಯಾಸವನ್ನು ಹತ್ತಿರದಿಂದ ಅನುಸರಿಸಿರುವ ಸಾಮಾನ್ಯರೀತಿಯ ಅನುವಾದಗಳು. ಕವಿಯ ಸ್ವತಂತ್ರವಾದ ಸೇರ್ಪಡೆಗಳೂ ಮಾರ್ಪಾಡುಗಳೂ ಕಂಡು ಬರುತ್ತವೆ. (೨) ಕವಲು ಸಂಪ್ರದಾಯಗಳ ರಾಮಾಯಣಗಳೂ ಪುರಾಣೋಕ್ತ ರಾಮ ಕಥೆಗಳೂ ಕವಿಗಳ ಮೆಚ್ಚಿಕೆಯನ್ನು ವಿಶೇಷವಾಗಿ ಗಳಿಸಿವೆ. ಅಲ್ಲಿಯ ವಸ್ತುವೈಚಿತ್ರ್ಯ ಪೌರಾಣಿಕತೆ ಮತಾಂಶಗಳಿಗೆ ಅವರು ಮನಸೋತಿದ್ದಾರೆ. (೩) ಕಥಾನಿರೂಪಣೆಯಲ್ಲಿ ಏಕೈಕ ಆಕರವನ್ನು ಅವಲಂಬಿಸುವುದಕ್ಕಿಂತ ವಿಭಿನ್ನ ಕಥಾಮೂಲಗಳನ್ನು ಆಶ್ರಯಿಸಿ ಸಮ್ಮಿಶ್ರರೂಪದ ಕಥೆಯನ್ನು ಹೆಣೆದಿದ್ದಾರೆ. (೪) ಮೂಲ ಮತ್ತು ಇತರ ರಾಮಾಯಣ ಗಳಿಗೆ ಅವುಗಳ ಭಾಗಗಳಿಗೆ ಟೀಕೆ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ತಾತ್ತ್ವಿಕದೃಷ್ಟಿ

ಯಿಂದ ರಾಮಕಥೆಯನ್ನು ನಿರೂಪಿಸಲು ಯತ್ನಿಸಿದ್ದಾರೆ. (೫) ರಾಮಾಯಣದ ಉಪಾಖ್ಯಾನಗಳನ್ನು ಕಾವ್ಯನಾಟಕಾದಿಗಳ ರೂಪದಲ್ಲಿ ಬರೆದಿದ್ದಾರೆ. (೬) ರಾಮಾಯಣ ಕಥಾಸಂಬಂಧಿಯಾದ ಕಾವ್ಯಗಳನ್ನೂ ನಾಟಕಗಳನ್ನೂ ಪರಿವರ್ತಿಸಿದ್ದಾರೆ. (೭) ಕೃತಿಗಳು ಸಾಮಾನ್ಯವಾಗಿ ಸಾಂಗತ್ಯ, ಷಟ್ಪದಿ, ಅಥವಾ ಗದ್ಯರೂಪದಲ್ಲಿರುವುದು ಕಾಣುತ್ತದೆ.

## ಭಾರತಗಳು ಮತ್ತು ಭಾರತ ಕಥಾಭಾಗಗಳು

ಸಂಸ್ಕೃತ ಮಹಾಭಾರತವು ಭಾರತೀಯ ಸಾಹಿತ್ಯದ ಗಿರಿವ್ರಜಗಳಲ್ಲಿ ಹಿಮಾಚಲ. ಹಲವಾರು ಆಖ್ಯಾನೋಪಾಖ್ಯಾನಗಳ ತರಂಗಿಣಿಗಳನ್ನು ಒಳಕೊಂಡು ಚಿರಂತನವಾಗಿರುವ ಮಹಾಸಾಗರ. ಭಾರತೀಯ ಸಂಸ್ಕೃತಿಯ ವಿಶ್ವರೂಪದರ್ಶನವನ್ನು ಮಾಡಿಸುವ ಗ್ರಂಥರಾಜ. ಅದು ಭಾರತೀಯ ಸಂಸ್ಕೃತಿಗೆ ಪೋಷಕವಾದ ವೇದೋಪನಿಷತ್ತುಗಳು ಪುರಾಣಗಳು ದರ್ಶನಗಳು ನಾನಾ ಶಾಸ್ತ್ರಗಳು ಮುಂತಾದವುಗಳ ಸಾರಸರ್ವಸ್ವವಾದ ಇತಿಹಾಸಕಾವ್ಯ. ಪಂಚಮವೇದವೆಂದೇ ಅದರ ಖ್ಯಾತಿ. ವೇದಾರ್ಥದ ವಿವರಣೆಯೇ ಮಹಾಭಾರತದ ಕಥೆಯ ಉದ್ದೇಶವೆಂಬುದು ಭಾಗವತದ "ಭಾರತ ವ್ಯಪದೇಶೇನ ಆಮ್ನಾಯಾರ್ಥಶ್ಚ ದರ್ಶಿತಃ" ಎಂಬ ಉಕ್ತಿಯಿಂದ ತಿಳಿಯುತ್ತದೆ. "ಯದಿಹಾಸ್ತಿ ತದನ್ಯತ್ರ ಯನ್ನೇಽಹಾಸ್ತಿ ನ ತತ್ ಕ್ವಚಿತ್" ಎಂಬ ರೂಢಿಯ ಮಾತಿನಲ್ಲಿ ಅದರ ವ್ಯಾಪ್ತಿ ವೈಶಾಲ್ಯಗಳ ಸೂಚನೆಯಿದೆ. 'ಭಾರತದಲ್ಲಿ ಏನಿದೆಯೋ ಅದೇ ಅನ್ಯತ್ರವೂ ಇವೆ; ಯಾವುದು ಇದರಲ್ಲಿ ಇಲ್ಲವೋ ಅದು ಇನ್ನೆಲ್ಲೂ ಇಲ್ಲ'—ಎಂಬ ಈ ಮಾತಿನಲ್ಲಿ ಸಮಗ್ರ ಭರತಖಂಡದ ಸಂಸ್ಕೃತಿಗೆ ಭಾರತವು ಕನ್ನಡಿ ಹಿಡಿದಿದೆಯೆಂದೂ ಸಮಗ್ರ ಮಾನವ ಕೋಟಿಯೂ ಜೀವನಾದರ್ಶವನ್ನೂ ಪುರುಷಾರ್ಥಗಳ ಸಾಧನೆಯನ್ನೂ ಇಲ್ಲಿಯೇ ಕಂಡುಕೊಳ್ಳಬಹುದೆಂದೂ ಅಭಿಪ್ರಾಯವಾಗುತ್ತದೆ. ಅದರಿಂದಲೇ ಭಾರತವು ಭಾರತೀಯರ ಧರ್ಮಶಾಸ್ತ್ರವೂ ಆಗಿದೆ. "ಪುರಾತನಾರ್ಯರ ಸಂಸ್ಕೃತಿ ಮಹಾಭಾರತದಲ್ಲಿ ವ್ಯಕ್ತವಾಗುವಂತೆ ಮತ್ತಾವ ಗ್ರಂಥದಿಂದಲೂ ಆಗುವುದಿಲ್ಲ. ಆದ್ದರಿಂದ ಮಾನವ ಸಂಸ್ಕೃತಿಯ ಸ್ವರೂಪವನ್ನೂ ಚರಿತ್ರೆಯನ್ನೂ ಅರಿಯಬೇಕೆನ್ನುವವರಿಗೆ ಅದು ಅಮೂಲ್ಯ ಮಾತೃಕೆಯಾಗಿದೆ."[21]

ಈ ಅವತರಣಿಕೆಯನ್ನೂ ನೋಡಿ : "ಮಹಾಭಾರತ ರೂಪೈಕ್ಯವುಳ್ಳ ಏಕ ಕೃತಿಗಿಂತ ಸಮಗ್ರ ಸಾಹಿತ್ಯವೊಂದನ್ನು ಪ್ರತಿನಿಧಿಸುತ್ತದೆ; ಅದು ಭರತಖಂಡದ ಲೌಕಿಕ ಹಾಗೂ ಧಾರ್ಮಿಕ ಪರಂಪರೆಯ ನಿಜವಾದ ಭಂಡಾರವಾಗಿದೆ ; ಅದರಂತೆ ಜನತೆಯ ಆತ್ಮದ ಅಂತರಾಳವನ್ನು ತೋರಿಸಿಕೊಡುವ ಕೃತಿ ಮತ್ತೊಂದಿಲ್ಲವೆ ಇಲ್ಲ. ಸ್ತ್ರೀತ್ವಕ್ಕಾದ ಅಪಮಾನಗಳ ಸೇಡು ತೀರಿಸಿಕೊಳ್ಳುವುದಕ್ಕಾಗಿ ಮತ್ತು ಭರತನ ಆಸ್ತಿಯನ್ನು ವಿಸ್ತರಿಸಿ ಭರತಖಂಡದ ಪೂರ್ವಪಶ್ಚಿಮ ದಕ್ಷಿಣೋತ್ತರಗಳನ್ನು ಒಂದು ಸಾಮ್ರಾಜ್ಯವನ್ನಾಗಿ ಒಗ್ಗೂಡಿಸಿದ ವಂಶವೊಂದರ ನ್ಯಾಯಬದ್ಧ ಹಕ್ಕುಗಳ ರಕ್ಷಣೆಗಾಗಿ ನಡೆದ ಸಮರವೊಂದರಲ್ಲಿ ವ್ಯಕ್ತವಾದ ಪೌರುಷ ಕೃತ್ಯಗಳಿಗೆ ಸ್ಮಾರಕವಾಗಿರುವ 'ಜಯಗೀತೆ'ಯದು. ದ್ರಷ್ಟಾರರ ಮತ್ತು ಋಷಿ

ಗಳ, ಸುಂದರ ಕನ್ಯೆಯರ ಮತ್ತು ಕರ್ತವ್ಯನಿಷ್ಠ ಸತಿಯರ, ವೀರಯೋಧರ ಮತ್ತು ರಾಜರ್ಷಿಗಳ ವಿವಿಧ ಕಥೆಗಳನ್ನೊಳಗೊಂಡ 'ಪುರಾಣಸಂಹಿತೆ' (ಪ್ರಾಚೀನ ಕಥೆಗಳ ಸಂಗ್ರಹ) ವದು. ಅದು ರಣರಂಗದ ಮಹೋಗ್ರತೆ, ವನ್ಯಾಶ್ರಮದ ಪ್ರಶಾಂತತೆ, ತೆರೆಯಿಂದ ನರ್ತಿಸುತ್ತ ನೊರೆಯಿಂದ ನಗುವ ಸಾಗರದ ಭವ್ಯತೆ, ನಿಜವಾದ ಕ್ಷತ್ರಿಯವಂಶಸಂಜಾತೆಯೊಬ್ಬಳ ನ್ಯಾಯವಾದ ರೋಷ, ಮೃತವೀರರ ವೃದ್ಧಮಾತೆಯ ರೋದನ—ಎಲ್ಲವನ್ನೂ ಅನನುಕರಣೀಯ ಭಾಷೆಯಲ್ಲಿ ವರ್ಣಿಸುವ ಅದ್ಭುತ ಕಾವ್ಯವೂ ಹೌದು. ಅದು ಶಾಸನ, ನೀತಿಗಳ ಮತ್ತು ಸಾಮಾಜಿಕ, ರಾಜಕೀಯ ತತ್ತ್ವಶಾಸ್ತ್ರದ ಪ್ರಮಾಣಭೂತ ಗ್ರಂಥವಾಗಿದ್ದು, ತ್ರಿವರ್ಗವೆನಿಸಿಕೊಂಡ ಧರ್ಮ ಅರ್ಥ ಕಾಮಗಳ ಸಾಧನೆಗಾಗಿ ನಿಯಮಗಳನ್ನು ವಿಧಿಸುತ್ತದೆ ಮತ್ತು ಭರತಖಂಡದ ಅತ್ಯುನ್ನತ ಧಾರ್ಮಿಕ ದರ್ಶನವನ್ನು ಪ್ರತಿಪಾದಿಸುತ್ತದೆ...."೨೨

ಹೀಗೆ ಭಾರತೀಯ ಜನಾಂಗದ ಜೀವಿತ ಮತ್ತು ಸ್ವಭಾವಗಳ ಚಿತ್ರವಾದ ಭಾರತವು ಅದರ ಮೂಲಸ್ವರೂಪದಲ್ಲಿ ವ್ಯಾಸಮುನಿಪ್ರಣೀತವಾಗಿ ಬಹು ಪ್ರಾಚೀನಕಾಲದಿಂದ ನಮ್ಮ ಜನಜೀವನದ ಸಾಹಿತ್ಯ ಸಂಸ್ಕೃತಿಗಳನ್ನು ಪೋಷಿಸುತ್ತಲೂ ರೂಪಿಸುತ್ತಲೂ ಬಂದಿದೆ. ಕಥೆ ಉಪಕಥೆಗಳ ನೆಲೆ, ನೀತಿ ಧರ್ಮಗಳ ಸೆಲೆ ಎಂಬುವಂದವಾಗಿ, ಸಕಲ ಮಾನವೀಯ ಮೌಲ್ಯಗಳ ಸಾರ, ಆರ್ಯಸಂಸ್ಕೃತಿಯ ತಿರುಳು ಎಂಬುವಂದವಾಗಿ, ವಿವಿಧಾನುಭವಗಳ, ಶಕ್ತಿಗಳ ಹಾಗೂ ವ್ಯಕ್ತಿಗಳ ರಂಗಸ್ಥಲ ಎಂಬುವಂದವಾಗಿ ಕವಿಗಳಿಗೆ ಮೆಚ್ಚಿನ ಮಹಾಗ್ರಂಥವಾಗಿದೆ.

ಮಹಾಭಾರತವು ಧರ್ಮಾಧರ್ಮಗಳ ಸದಸತ್ತುಗಳ ನಡುವೆ ನಡೆದ ಸಂಘರ್ಷವನ್ನೂ ಅದರಲ್ಲಿ ಅಧರ್ಮವು ನಾಶವಾಗಿ ಧರ್ಮವು ವಿಜಯಗಳಿಸಿದುದನ್ನೂ ಪಾಂಡವ ಕೌರವರ ಜ್ಞಾತಿಕಲಹದ ಚರಿತ್ರೆಯನ್ನು ನಿರೂಪಿಸುವುದರ ಮೂಲಕ ಪ್ರತಿಪಾದಿಸಿದೆಯೆಂದು ತಿಳಿಯುತ್ತದೆ. "ಶಂತನುವಿನ ಮಗ ಭೀಷ್ಮ; ಅವನ ತಮ್ಮನ ಮಕ್ಕಳು ಧೃತರಾಷ್ಟ್ರ ಮತ್ತು ಪಾಂಡು; ಅವರ ಮಕ್ಕಳು ಕೌರವರು ಮತ್ತು ಪಾಂಡವರು. ಅವರಲ್ಲಿ ಜಗಳ ಉಂಟಾಗಿ ಪಾಂಡವರು ರಾಜ್ಯ ಕಳೆದುಕೊಂಡು ಕೊನೆಗೆ ಯುದ್ಧದಲ್ಲಿ 'ಜಯ' ಪಡೆದದ್ದೇ ಮಹಾಭಾರತದ ಮೂಲವಸ್ತು." ಈ ವಸ್ತುವಿನ ಕಥನ ಬಹುವಿಸ್ತಾರವಾಗಿ, ಮೂಲಕರ್ತೃ ವ್ಯಾಸರಿಂದ ಮುಂದಕ್ಕೆ ವೈಶಂಪಾಯನ ಸೂತಪೌರಾಣಿಕಾದ್ಯರ ಕೈಯಲ್ಲಿ ಬೆಳೆದಂತೆ ಕಂಡುಬರುತ್ತದೆ. ಕ್ರಿ.ಪೂ. ೪೦೦ರಿಂದ ಕ್ರಿ.ಶ. ೪೦೦ರವರೆಗೆ ಎಂಬುದಾಗಿ ಇದರ ರಚನೆ ವಿಸ್ತರಣೆಗಳ ಕಾಲವನ್ನು ಸಾಮಾನ್ಯವಾಗಿ ತಿಳಿಯಲಾಗಿದೆ. ವೈದಿಕಯುಗ ಮುಗಿದ ಮೇಲೆ ಪೌರಾಣಿಕಯುಗ ಹುಟ್ಟುವುದಕ್ಕೆ ಮುಂಚೆ ಮಹಾಭಾರತವು ರಚಿತವಾಯಿತು. ಆದ್ದರಿಂದ ಅದರಲ್ಲಿ ಯಜ್ಞಯಾಗಾದಿಗಳ ಪ್ರಸ್ತಾಪ ತತ್ತ್ವಸಮಾಲೋಚನೆಗಳೊಂದಿಗೆ ಸಮಾನ ಪ್ರಾಶಸ್ತ್ಯಪಡೆದ ಶಿವವಿಷ್ಣುಗಳ ಪ್ರಸ್ತಾಪವೂ ಬಂದಿದೆ. ಈ ದೃಷ್ಟಿಯಿಂದ ಭಾರತವು ಶೈವರಿಗೂ ವೈಷ್ಣವರಿಗೂ ಸಮಾನವಾಗಿ ಪೂಜ್ಯವೂ ಪ್ರಿಯವೂ ಆಗಿದೆ.

ಮಹಾಭಾರತದ ಪ್ರಮುಖ ಆಖ್ಯಾನವಾದ ಕೌರವ ಪಾಂಡವರ ಚರಿತ್ರೆಯೊಡನೆ

ನಾನಾ ಉಪಾಖ್ಯಾನಗಳನ್ನು ಒಳಕೊಂಡಿರುವುದು ಗಮನಿಸತಕ್ಕದ್ದಾಗಿದೆ. ಮೂಲಕ್ಕೆ ಸಂಬಂಧಿಸಿದ ಹಾಗೂ ಈ ಉಪಾಖ್ಯಾನಗಳಿಗೆ ಸಂಬಂಧಿಸಿದ ಸ್ವಾರಸ್ಯವಾದ ಕಥೋಪಕಥೆಗಳನ್ನಾಶ್ರಿಸಿಕೊಂಡು ಸಂಸ್ಕೃತ ಸಾಹಿತ್ಯದ ಕೆಲವು ಶ್ರೇಷ್ಠ ಕವಿಗಳು—ಭಾಸ, ಕಾಳಿದಾಸ, ಭಾರವಿ, ಭಟ್ಟನಾರಾಯಣ, ಶ್ರೀಹರ್ಷ, ಮಾಘ ಮೊದಲಾದವರು—ಪ್ರಸಿದ್ಧವಾಗಿರುವ ಕಾವ್ಯಗಳನ್ನೂ ನಾಟಕಗಳನ್ನೂ ರಚಿಸಿದ್ದಾರೆ. ಇವು ಮುಖ್ಯವಾಗಿ ಆದಿಪರ್ವ, ಸಭಾಪರ್ವ ವನಪರ್ವ ಮತ್ತು ಗದಾಸೌಪ್ತಿಕಪರ್ವಗಳಿಗೆ ಸಂಬಂಧಿಸಿದ್ದಾಗಿವೆ.

ಕನ್ನಡ ಸಾಹಿತ್ಯದಲ್ಲಿಯೂ ಸಂಸ್ಕೃತದ ಈ ಮಹಾಗ್ರಂಥದ ಪ್ರಭಾವ ವಿಶೇಷವಾಗಿ ಕಂಡುಬರುತ್ತದೆ. ಶ್ರೇಷ್ಠವಾದ ಕಾವ್ಯಗಳೂ ನಾಟಕಗಳೂ ಅಧಿಕ ಸಂಖ್ಯೆಯಲ್ಲಿ ರಚಿತವಾಗಿವೆ. ಪಂಪಕವಿ ಬರೆದಿರುವ 'ವಿಕ್ರಮಾರ್ಜುನವಿಜಯ'ವೇ (ಕ್ರಿ.ಶ. ೯೪೧) ಕನ್ನಡ ಸಾಹಿತ್ಯದ ಆದಿಕಾವ್ಯವಾಗಿ ಗಣ್ಯವಾಗಿದೆ. ಪಂಪ ಮತ್ತು ಕುಮಾರವ್ಯಾಸರ (ಸು.೧೪೩೦). ಭಾರತಗಳು ಸಮಗ್ರ ಕನ್ನಡ ಕಾವ್ಯ ಸಾಹಿತ್ಯದಲ್ಲಿ ಅತ್ಯುನ್ನತ ಮಟ್ಟದಲ್ಲಿರುವ ಮಹಾಕಾವ್ಯಗಳೆನ್ನಿಸಿವೆ. ಜನಪ್ರಿಯತೆಯ ದೃಷ್ಟಿಯಿಂದ ಲಕ್ಷ್ಮೀಶ ಕವಿಯ (ಸು. ೧೭೦೦) ಜೈಮಿನಿಭಾರತವೂ ಗಣ್ಯತೆಯನ್ನು ಪಡೆದ ಕೃತಿಯಾಗಿದೆ. ಆಖ್ಯಾನ ಭಾಗ, ಉಪಾಖ್ಯಾನಗಳನ್ನು ಆರಿಸಿಕೊಂಡು ಬರೆದ ಸಾಹಿತ್ಯದಲ್ಲಿ ರನ್ನ (ಕ್ರಿ.ಶ. ೯೯೩), ಚೌಂಡರಸ (ಸು. ೧೩೦೦), ಷಡಕ್ಷರಿ (ಕ್ರಿ.ಶ. ೧೬೫೫), ಮೊದಲಾದವರ ಕೃತಿಗಳು ಪ್ರಸಿದ್ಧವಾಗಿವೆ. ಮಹಾಭಾರತದ ಕಥೋಪಕಥೆಗಳು ಮಹಾಪೂರದಂತೆ ಕನ್ನಡಸಾಹಿತ್ಯದ ಸಾವಿರ ವರ್ಷ ಮಹಾಪಾತ್ರವನ್ನು ತುಂಬಿ ಹರಿದು ಕನ್ನಡಿಗರ ಸಂಸ್ಕೃತಿಯನ್ನು ಸಾರವತ್ತಾಗಿಮಾಡಿವೆ.

ಕನ್ನಡಸಾಹಿತ್ಯದಲ್ಲಿ ವೈದಿಕ ಸಂಪ್ರದಾಯದ ಭಾರತಗಳೂ ಭಾರತ ಕಥಾಭಾಗಗಳೂ ವಿಪುಲವಾಗಿ ರಚಿತವಾಗಿವೆಯೆಂಬುದು ಮೇಲಿನ ಪರಿಶೀಲನೆಯಿಂದ ನಮಗೆ ತಿಳಿಯುತ್ತದೆ. ಜೈನಸಂಪ್ರದಾಯದ ಭಾರತಗಳು ಹರಿವಂಶಗಳಲ್ಲಿಯೂ ನೇಮಿಚರಿತ್ರೆಗಳಲ್ಲಿಯೂ ಅಂತರ್ಗತವಾಗತಕ್ಕವು. ಅವುಗಳನ್ನು ಜೈನಪುರಾಣಗಳ ಶ್ರೇಣಿಯಲ್ಲಿ ಗಮನಿಸಬೇಕಾಗುತ್ತದೆ. ಗುಣವರ್ಮ (ಸು. ೯೦೦) ಚಾವುಂಡರಾಯ (ಕ್ರಿ.ಶ. ೯೭೮). ಕರ್ಣಪಾರ್ಯ (ಸು. ೧೧೪೦), ನೇಮಿಚಂದ್ರ (ಸು. ೧೧೭೦), ಬಂಧುವರ್ಮ (ಸು. ೧೨೦೦), ಮಹಾಬಲ (ಕ್ರಿ.ಶ. ೧೨೫೪), ಸಾಳ್ವ (ಸು. ೧೫೫೦), ಮಂಗರಸ (ಕ್ರಿ.ಶ. ೧೫೦೮), ಬ್ರಹ್ಮಣಾಂಕ (ಸು. ೧೮೦೦)—ಇವರ ನೇಮಿಚರಿತ್ರೆಗಳಲ್ಲಿ ಜೈನಭಾರತದ ಕಥೆ ತಕ್ಕಷ್ಟು ವಿಸ್ತಾರವಾಗಿಯೇ ಬರುತ್ತದೆ. ಸಾಳ್ವ ಮತ್ತು ಬ್ರಹ್ಮಣಾಂಕರ ಕೃತಿಗಳು ಸಾಳ್ವಭಾರತ ಜಿನಭಾರತಗಳೆಂಬುದಾಗಿಯೇ ಪ್ರಸಿದ್ಧವಾಗಿರುವುದನ್ನು ಇಲ್ಲಿ ನೆನೆಯಬಹುದು. ಇವುಗಳಲ್ಲಿ ಕೆಲವಕ್ಕೆ ಒಂದೋ ಹಲವೋ ಸಂಸ್ಕೃತ ಪ್ರಾಕೃತ ಮೂಲಗ್ರಂಥಗಳುಂಟು.

ಕನ್ನಡದಲ್ಲಿ ಈಗ ತಿಳಿದಿರುವಂತೆ ವ್ಯಾಸಭಾರತ ಕಥೆಯನ್ನು ಕಾವ್ಯರೂಪವಾಗಿ ಕಟ್ಟುವ ಹವಣಿಕೆಯನ್ನು ಮೊದಲಬಾರಿಗೆ ಹೂಡಿದ ಕವಿಯೆಂದರೆ ಪಂಪಮಹಾಕವಿ. ಈತನು 'ವಿಕ್ರಮಾರ್ಜುನವಿಜಯ'ದ ಮೂಲಕ ವೈದಿಕಭಾರತ ಕಥಾರಚನೆಗೆ ಮಂಗಳಾಚರಣೆ

ಯನ್ನು ಮಾಡಿದನು. ಆದರೆ ಭಾರತಕಥಾವಾಹಿನಿ ನೆರೆಯುಕ್ಕಿ ಹರಿದದ್ದು 'ಕುಮಾರವ್ಯಾಸ ಭಾರತ' ಬಂದಮೇಲೆಯೇ ಎನ್ನಬಹುದು. ಪಂಪನ ಭಾರತವು ಒಟ್ಟಿನಲ್ಲಿ ವ್ಯಾಸರ ಭಾರತದ ಸಂಗ್ರಹಿತರೂಪ. ಪಂಪನು ಮೂಲಭಾರತವನ್ನು ಬಳಸಿಕೊಂಡಿರುವ ರೀತಿ ಆತನ ಪ್ರತಿಭೆ, ಪಾಂಡಿತ್ಯ, ಧೈರ್ಯ, ಕೌಶಲ ಮೊದಲಾದ ಗುಣವಿಶೇಷಗಳಿಗೆ ಕನ್ನಡಿ ಹಿಡಿಯುತ್ತವೆ; ಹಾಗೆಯೇ ಆತನ ಇತಿಮಿತಿಗಳು, ದೌರ್ಬಲ್ಯ, ಪೂರ್ವಗ್ರಹಿಕೆ ಇವನ್ನೂ ಪ್ರತಿಬಿಂಬಿಸುತ್ತವೆ; ಆತನು ನಂಬಿದ ಮತಶ್ರದ್ಧೆಯ, ಬಾಳಿದ ಆವರಣದ, ಗಳಿಸಿದ ರಾಜಾಶ್ರಯದ ಪ್ರಭಾವವನ್ನೂ ಸಾರುತ್ತದೆ. ಪಂಪನು ಮೂಲಭಾರತವನ್ನು ಮುಖ್ಯವಾಗಿ ಅವಲಂಬಿಸಿ, ಜತೆಗೆ ಭಾರತ ಕಥಾಸಂಬಂಧಿಯಾದ ಹಾಗೂ ಇತರ ಸಂಸ್ಕೃತ ಕಾವ್ಯ ನಾಟಕಗಳ ಉತ್ತಮಾಂಶಗಳನ್ನು ಸ್ವೀಕರಿಸಿ, ತನ್ನ ಭಾರತವನ್ನು ಅಪೂರ್ವರೀತಿಯಲ್ಲಿ ಕಟ್ಟಿರುತ್ತಾನೆ. ಆತನ ಪಾಂಡಿತ್ಯದ ಎತ್ತರ ಬಿತ್ತರಗಳನ್ನು ಆತನು ವಿವಿಧ ಮೂಲಗಳಿಂದ ಆಯ್ದ ಉತ್ತಮಾಂಶಗಳನ್ನು ಉಚಿತರೀತಿಯಲ್ಲಿ ಸಂಯೋಜಿಸಿರುವ ಕೌಶಲದಲ್ಲಿ ಕಾಣಬಹುದಾಗಿದೆ. ಆತನ ಈ ಕ್ರಮವನ್ನು ರನ್ನ ಕರ್ಣಪಾರ್ಯ ಮೊದಲಾದ ಈಚಿನ ಕವಿಗಳು ಮೆಚ್ಚಿಕೊಂಡು ಅನುಸರಿಸಿದ್ದಾರೆ. ಪಂಪನ ತರುವಾಯದಲ್ಲಿ ಕುಮಾರವ್ಯಾಸ, ಚಾಯಣ (ಸು. ೧೫೫೦), ಲಕ್ಷ್ಮಕವಿ (ಕ್ರಿ.ಶ. ೧೭೨೩), ಪರಮದೇವ (ಕ್ರಿ.ಶ. ೧೭೭೭)—ಇವರು ಬಲುಮಟ್ಟಿಗೆ ಸಮಗ್ರಭಾರತದ ರಚನೆಗೆ ಕೈಯಿಟ್ಟವರು. ಇವರ ಭಾರತಗಳಲ್ಲಿ ಮಿಗಿಲಾದ ಕಾವ್ಯಗುಣದಿಂದ ಪ್ರಸಿದ್ಧವಾಗಿರುವುದು ಕುಮಾರ ವ್ಯಾಸನ ಭಾರತವೊಂದೇ: ಪ್ರಾಯಃ ಈಯೆಲ್ಲ ಕವಿಗಳೂ ವ್ಯಾಸವಿರಚಿತವಾದ ಭಾರತ ವನ್ನೇ ಆಕರವನ್ನಾಗಿ ಆಶ್ರಯಿಸಿದರು. ಆದರೆ ಅದನ್ನು ಏಕೈಕ ಆಕರವನ್ನಾಗಿ ಗ್ರಹಿಸಿ ನಿಷ್ಠೆ ಯಿಂದ ಅನುವಾದಿಸಲೆಂದು ಹೊರಟಹಾಗೆ ತೋರುವುದಿಲ್ಲ. ಪೂರ್ವಪ್ರಸಿದ್ಧ ಕೃತಿಗಳ ಉತ್ತಮಾಂಶಗಳನ್ನು ಸ್ವೀಕರಿಸಿ, ತತ್ಕಾಲೀನ ಜನರೂಢಿಯ ಭಾರತ ಆಖ್ಯಾನೋ ಪಾಖ್ಯಾನಗಳನ್ನು ಪುರಸ್ಕರಿಸಿ ತಮ್ಮ ಭಾರತರಚನೆಗಳನ್ನು ಹೆಚ್ಚು ಜನಪ್ರಿಯವಾಗಿಯೂ ರೋಚಕವಾಗಿಯೂ ಮಾಡಿದರೆಂದು ಹೇಳಬಹುದು. ಭಾರತದಲ್ಲಿಯೂ ರಾಮಾಯಣದಲ್ಲಿ ಯಂತೆಯೇ ಪಾಠ ಮತ್ತು ಸಂಪ್ರದಾಯಭೇದಗಳು ಇರುವುದನ್ನು ಇಲ್ಲಿ ನೆನೆಯಬಹುದು.

ಸಮಗ್ರಭಾರತಗಳ ರಚನೆಗಿಂತ ಅದರ ಬೇರೆ ಬೇರೆ ಕಥಾಭಾಗಗಳ ಕೃತಿರಚನೆಯೇ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಕಾಣುತ್ತದೆ. ಮೂಲಭಾರತ ಕಥೆಯ ವಿಸ್ತಾರವು ರಚಿಸುವ ಕವಿಗೂ ಓದುವ ಸಹೃದಯನಿಗೂ ಪ್ರಯಾಸಕರವೆಂಬುದರಲ್ಲಿ ಸಂಶಯವಿಲ್ಲ. ಆದಕಾರಣ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಆಕರ್ಷಕವಾದ ಕಥಾಭಾಗಗಳನ್ನು ಬಿಡಿಬಿಡಿಯಾಗಿ ಎತ್ತಿಕೊಂಡು, ಅವುಗಳಲ್ಲಿ ಒಂದೊಂದಕ್ಕೂ ವಿಶೇಷ ಪ್ರಾಮುಖ್ಯವಿತ್ತು ಶ್ರದ್ಧಾಸಕ್ತಿಗಳಿಂದ ಕವಿಗಳು ಕಾವ್ಯಗಳನ್ನೂ ನಾಟಕಗಳನ್ನೂ ಬಹಳ ಹಿಂದಿನಿಂದಲೂ ರಚಿಸುತ್ತ ಬಂದಿದ್ದಾರೆ. ಸಂಸ್ಕೃತದಲ್ಲಿ ಭಾಸನ 'ಪಂಚರಾತ್ರ' 'ಊರುಭಂಗ' ಮೊದಲಾದ ನಾಟಕಗಳು, ಕಾಳಿದಾಸನ 'ಶಾಕುಂತಲ', ಮಾಘನ 'ಶಿಶುಪಾಲವಧ', ಭಾರವಿಯ 'ಕಿರಾತಾರ್ಜುನೀಯ', ಭಟ್ಟನಾರಾಯಣನ 'ವೇಣೀಸಂಹಾರ'—ಈ ಮೊದಲಾದವು

ಪ್ರಸಿದ್ಧವಾಗಿವೆ. ಕನ್ನಡ ಕವಿಗಳು ಇವುಗಳನ್ನು ಯಥೋಚಿತವಾಗಿ ತಮ್ಮ ಕೃತಿಗಳಲ್ಲಿ ಅನುಸರಿಸುವುದರ ಮೂಲಕವಾಗಿಯೂ ನೇರವಾಗಿ ಅವನ್ನು ಅನುವಾದಿಸುವುದರ ಅಥವಾ ಅವುಗಳ ಪ್ರೇರಣೆಯಿಂದ ಸ್ವತಂತ್ರ ಕೃತಿಗಳನ್ನು ಬರೆಯುವುದರ ಮೂಲಕವಾಗಿಯೂ ಮಹಾಭಾರತ ಕಥಾವಸ್ತುವಿಗೆ ತಮ್ಮ ಮನ್ನಣೆಯನ್ನು ಸಲ್ಲಿಸಿದ್ದಾರೆ. ಉಪಾಖ್ಯಾನಗಳ ಕಥಾಸ್ವಾರಸ್ಯ, ಅವುಗಳಲ್ಲಿಯ ದೈವಿಕತೆಯ ಸ್ಥಾನ ಮತ್ತು ಮಾನವೀಯ ಮೌಲ್ಯಗಳ ಪ್ರಾಶಸ್ತ್ಯ, ಅವು ಬೋಧಿಸುವ ನೀತಿ ಮತ್ತು ಸಾಧಿಸುವ ಪರಿಣಾಮಗಳು ನಮ್ಮ ಜನರನ್ನು ಎಂದಿನಿಂದಲೂ ಆಕರ್ಷಿಸುತ್ತ ಬಂದಿವೆ, ಅವರ ಸಂಸ್ಕೃತಿಯನ್ನು ಪೋಷಿಸುತ್ತ ಬಂದಿವೆ. ನಾನಾ ವರ್ಗಗಳ ಜನರು ತಂತಮ್ಮ ಅಭಿರುಚಿ ಅಪೇಕ್ಷೆಗಳಿಗೆ ಅನುಗುಣವಾಗಿ ಅವನ್ನು ಆದರಿಸುತ್ತ ಬಂದಿದ್ದಾರೆ. ಲಘುಕಾವ್ಯಗಳಿಗಿಂತ ನಾಟಕಗಳೇ ಮಹಾಭಾರತವನ್ನು ಹೆಚ್ಚು ಜನಸಮ್ಮುಖಗೊಳಿಸಿವೆಯೆನ್ನಬಹುದು. ನಾಟಕಗಳ ವಿಷಯದಲ್ಲಿಯಂತೂ ಉಪಾಖ್ಯಾನಗಳ ಆಯ್ಕೆ ಅಪೇಕ್ಷಣೀಯವೂ ಹೌದು, ಅವಶ್ಯಕವೂ ಹೌದು.

ರನ್ನಕವಿಯ 'ಸಾಹಸಭೀಮವಿಜಯ'ದಿಂದ, ಕೃತಿರಚನೆಗೆ ಭಾರತದ ಉಪಾಖ್ಯಾನಗಳ ಆಯ್ಕೆಯ ಪದ್ಧತಿ ಮೊದಲಿಟ್ಟಿತೆಂದು ತೋರುತ್ತದೆ. ಅಲ್ಲಿಂದೀಚೆಗೆ ಅಂತಹ ಪ್ರಸಿದ್ಧವಾದ ಉಪಾಖ್ಯಾನಗಳ ಮೇಲೆ ಹಲವು ಲಘುಕಾವ್ಯಗಳೂ ನಾಟಕಗಳೂ ಯಕ್ಷಗಾನಗಳೂ ಹುಟ್ಟಿಕೊಂಡವು. ಆದರೆ ಸಂಖ್ಯೆಯ ದೃಷ್ಟಿಯಿಂದ ಇಂತಹ ರಚನೆಗಳು ಎದ್ದು ಕಾಣುವುದು ೧೬–೧೭ನೆಯ ಶತಮಾನದಿಂದ ಮುಂದಿನ ಅವಧಿಯಲ್ಲಿಯೇ. ನಳೋಪಾಖ್ಯಾನ, ಶಕುಂತಲೋಪಾಖ್ಯಾನ, ಹರಿಶ್ಚಂದ್ರೋಪಾಖ್ಯಾನ, ಇಂದ್ರಕೀಲ ಪ್ರಸಂಗ, ಗಯಚರಿತ್ರೆ, ಚಂದ್ರಹಾಸನ ಕಥೆ, ದ್ರೌಪದೀಸ್ವಯಂವರ, ವಿರಾಟಪರ್ವ, ಐರಾವತ, ಕುಶಲವರ ಕಾಳಗ—ಈ ಮೊದಲಾದವು ಜನಪ್ರಿಯತೆಯನ್ನು ಗಳಿಸಿಕೊಂಡಿರುವ ಭಾರತದ ಕಥಾಭಾಗಗಳಾಗಿವೆ. ಇವುಗಳಲ್ಲಿ ಹಲವಕ್ಕೆ ವ್ಯಾಸಭಾರತವಾಗಲಿ ಅಥವಾ ಭಾರತಕಥಾಸಂಬಂಧಿಯಾದ ಇತರ ಸಂಸ್ಕೃತ ಕಾವ್ಯನಾಟಕಗಳಾಗಲಿ ನೇರವಾಗಿ ಆಕರಗಳಾಗಿವೆಯೆಂದು ಹೇಳುವುದಕ್ಕಾಗದು. ಅನೇಕ ವೇಳೆ ಇವಕ್ಕೆ ಕನ್ನಡದ ಪ್ರಭಾವಶಾಲಿ ಕವಿಗಳಾದ ಕುಮಾರವ್ಯಾಸ ಲಕ್ಷ್ಮೀಶರ ಭಾರತಗಳೇ ಆಕರಗಳಾಗಿರುವುದುಂಟು, ಪ್ರಮುಖವಾಗಿ ಪ್ರೇರಣೆ ನೀಡಿರುವುದುಂಟು. ಷಡಕ್ಷರಿಯ 'ಶಬರಶಂಕರವಿಲಾಸ' ಕುಮಾರವ್ಯಾಸಭಾರತದ ಪ್ರಭಾವವನ್ನು ಬಲುಮಟ್ಟಿಗೆ ಪ್ರಕಟಿಸುತ್ತದೆ. ಕೋನಯ್ಯನ (ಸು. ೧೭೫೦) 'ಕೃಷ್ಣಾರ್ಜುನಸಂಗರ', ಹೆಳವನಕಟ್ಟೆಗಿರಿಯಮ್ಮನ (ಸು. ೧೭೫೦) 'ಚಂದ್ರಹಾಸನ ಕಥೆ' ಮತ್ತು ಇತರ ಕವಿಗಳ ಕುಶಲವರ ಕಾಳಗ, ಸುಧನ್ವಚರಿತ್ರೆ, ಬಭ್ರುವಾಹನ ಕಾಳಗ, ನೀಲಧ್ವಜನ ಕಾಳಗ, ಯಾಗಚರಿತ್ರೆ—ಈ ಮೊದಲಾದವು ಜೈಮಿನಿಭಾರತವನ್ನು ಮೂಲವನ್ನಾಗಿ ಆಶ್ರಯಿಸಿದವೆಂದು ತೋರುತ್ತದೆ.

ಭಾರತವು ಹೇಗೆ ಕನ್ನಡನಾಡಿನಲ್ಲಿ ಅದರ ಜನಜೀವನ ಮತ್ತು ಸಾಹಿತ್ಯ ಸಂಸ್ಕೃತಿಗಳ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರಿದೆಯೆಂಬುದು ಇದರಿಂದ ನಮಗೆ ತಿಳಿಯುತ್ತದೆ. ಅದರ ಪ್ರಭಾವದ ಪರಿಧಿ ಕಾಲದಿಂದ ಕಾಲಕ್ಕೆ ವಿಸ್ತಾರಗೊಂಡಿದೆ. ಮೂಲಭಾರತ ಒಂದು

ತೇಜಃಪುಂಜವಾದ ಪ್ರಕಾಶಕೇಂದ್ರ. ಅದರ ಬಹುಸಂಖ್ಯೆಯ ತೇಜಸ್ವೀ ಉಪಾಖ್ಯಾನ ಬಿಂದುಗಳು ವಿಭಿನ್ನ ಸಂಸ್ಕಾರಗಳ, ವಿವಿಧ ಅಭಿರುಚಿಗಳ ಜನಸ್ತೋಮಕ್ಕೆ ಅಮೃತದ ಬಿಂದುಗಳಾಗಿ ಅದರ ಅತ್ಯೋನ್ನತಿಯನ್ನು ಸಾಧಿಸಿವೆ. ರಾಮಾಯಣದ ಹಿರಿಮೆಯನ್ನು ಕೊಂಡಾಡುವಾಗ ರವೀಂದ್ರನಾಥ ಠಾಕೂರರು ಆಡಿರುವ ಮಾತುಗಳೆಲ್ಲ ಬಲುಮಟ್ಟಿಗೆ ಭಾರತಕ್ಕೂ ಅನ್ವಯಿಸುತ್ತವೆ.

ಭಾರತದ ವಸ್ತುವೈವಿಧ್ಯ ಆಕರ್ಷಣೀಯವಾದುದು, ಆಶ್ಚರ್ಯಕರವಾದುದು. ಕನ್ನಡ ಸಾಹಿತ್ಯದಲ್ಲಿ ರಾಮಾಯಣಕಥೆಯನ್ನಾಧರಿಸಿದ ಕೃತಿಗಳಿಗಿಂತ ಭಾರತಕಥೆಯನ್ನಾಧರಿಸಿದ ಕೃತಿಗಳೇ ಹೆಚ್ಚೆಂದು ತೋರುತ್ತದೆ. ಮೈಸೂರರಸರೂ ಅವರ ಆಸ್ಥಾನದ ಮತ್ತು ಆ ಕಾಲದ ಕವಿಗಳೂ ಭಾರತ ಕಥಾಸಾಹಿತ್ಯಕ್ಕೆ ಹೆಚ್ಚಿನ ಕಾಣಿಕೆ ಸಲ್ಲಿಸಿದ್ದಾರೆ. ದಕ್ಷಿಣ ಕನ್ನಡಜಿಲ್ಲೆಯ ಕವಿಗಳು ಯಕ್ಷಗಾನಗಳ ಮೂಲಕ ಭಾರತದ ಸಂಸ್ಕೃತಿಯನ್ನು ಜನಸಮುದಾಯದಲ್ಲಿ ಹರಡಿದ್ದಾರೆ. ಕಾವ್ಯಗಳೂ ನಾಟಕಗಳೂ ಮಾತ್ರವಲ್ಲದೆ ಮೂಲ ಗ್ರಂಥವು ಜನಸಾಮಾನ್ಯಕ್ಕೆ ಸುಲಭವಾಗಿ ಅರ್ಥವಾಗಲೆಂಬ ದೃಷ್ಟಿಯಿಂದ ಗದ್ಯದಲ್ಲಿ ಅದರ ಅನುವಾದಗಳೂ ಟೀಕೆ ವ್ಯಾಖ್ಯಾನಗಳು ಕೂಡ ಕಾಣಿಸಿಕೊಂಡಿವೆ.

ಕನ್ನಡ ಕವಿಗಳು ಮೂಲ ಭಾರತವನ್ನು ಬಳಸಿಕೊಂಡಿರುವ ರೀತಿಯನ್ನು ಹೀಗೆ ಸಂಗ್ರಹಿಸಬಹುದು: (೧) ಕನ್ನಡ ಕವಿಗಳು ಎಂದೂ ವ್ಯಾಸಭಾರತವನ್ನು ಏಕೈಕ ಆಕರವಾಗಿಟ್ಟುಕೊಳ್ಳಲಿಲ್ಲ; ಸಂಪೂರ್ಣವಾಗಿ ಅನುವಾದಿಸಲೆಂದು ಹೊರಡಲಿಲ್ಲ; ಅದನ್ನಾಧರಿಸಿದ ಇತರ ಸಂಸ್ಕೃತ ಕಾವ್ಯನಾಟಕಗಳ ಉತ್ತಮಾಂಶಗಳನ್ನೂ ಜನರೂಢಿಯ ಭಾರತ ಕಥಾಂಶಗಳನ್ನೂ ಔಚಿತ್ಯವರಿತು ತಮ್ಮ ಕೃತಿಗಳಲ್ಲಿ ಸಂಯೋಜಿಸುವುದರ ಮೂಲಕ ಮಿಶ್ರಕಥಾಮಾರ್ಗವನ್ನು ಹಿಡಿದರು. ಪಂಪನ್ನರಂತೂ 'ರಾಜಕೀಯಧ್ವನಿ' ಕೂಡಿದ ಹೊಸಬಗೆಯ ಭಾರತಗಳನ್ನೇ ಬರೆದರು. ಮೂಲವನ್ನು ಅನುಸರಿಸುವುದರಲ್ಲಿ ಎಲ್ಲ ಮೌಲಿಕ ಕೃತಿಗಳಲ್ಲಿಯೂ ಮೂಲದ ಸಂದರ್ಭ ಪಾತ್ರ ಮೊದಲಾದವುಗಳಲ್ಲಿ ಸಂಕೋಚ ವಿಸ್ತಾರಗಳೂ ಲೋಪಾದೇಶಗಳೂ ತಲೆದೋರಿವೆ. (೨) ಸ್ಥೂಲವಾಗಿ ಸಂಗ್ರಹವಾಗಿ ವ್ಯಾಸಭಾರತದ ಗದ್ಯಾನುವಾದಗಳೂ ವ್ಯಾಖ್ಯಾನಗಳೂ ಕಥಾಭಾಗಗಳ ಕಾವ್ಯನಾಟಕಗಳೂ ರಚನೆಯಾದವು. (೩) ಭಾರತ ಕಥಾಸಂಬಂಧಿಯಾದ ಸಂಸ್ಕೃತ ಕಾವ್ಯನಾಟಕಗಳ ಪರಿವರ್ತನಗಳೂ ಟೀಕೆವ್ಯಾಖ್ಯಾನಗಳೂ ಬಂದವು. (೪) ಹಲವು ಕನ್ನಡ ಕೃತಿಗಳಿಗೆ ಕನ್ನಡ ಭಾರತಗಳೇ ಪ್ರೇರಕವಾದವು, ಆಕರಗಳಾದವು. (೫) ಮೊದಲಿನ ಭಾರತಕೃತಿಗಳು ಚಂಪೂ ಮಾರ್ಗದಲ್ಲಿಯೂ ಅನಂತರದವು ವಿಶೇಷವಾಗಿ ಷಟ್ಪದಿ, ಸಾಂಗತ್ಯ, ಗದ್ಯ ಮತ್ತು ನಾಟಕರೂಪಗಳಲ್ಲಿಯೂ ರಚಿತವಾದವು.

## ಜೈನಪುರಾಣಗಳು ಮತ್ತು ಪುರಾಣಕಥೆಗಳು

ಕನ್ನಡ ಜೈನಕವಿಗಳಲ್ಲಿ ಪುರಾಣಕರ್ತೃಗಳಿದ್ದಾರೆ, ಪುರಾಣಕಥಾಕಾರರಿದ್ದಾರೆ. ಪುರಾಣಗಳು ಬಲುಮಟ್ಟಿಗೆ ತೀರ್ಥಂಕರರ ಚರಿತೆಗಳು; ಪುರಾಣಕಥೆಗಳು ಬೇರೆ ಬೇ

ರ್ಥಂಕರ ಪುರಾಣಗಳಿಂದಲೂ ಕಥಾಕೋಶ(ಕಥಾಕಾವ್ಯ)ಗಳಿಂದಲೂ ಆಯ್ದವು.
ರ್ಥಂಕರ ಪುರಾಣಗಳು ಜೈನ ತ್ರಿಷಷ್ಟಿಶಲಾಕಾಪುರುಷವ್ಯೂಹದ ೨೪ ಜಿನ ತೀರ್ಥಂಕರರ
ತೆಯನ್ನು ಸಮಗ್ರವಾಗಿಯೂ ಬಿಡಿಬಿಡಿಯಾಗಿಯೂ ವಿವರಿಸಿವೆ. ಸಮಗ್ರವಾಗಿ
ರಿಸುವ ಗ್ರಂಥ ಕನ್ನಡದಲ್ಲಿ ಪ್ರಸಿದ್ಧವಾಗಿರುವುದು ಒಂದೇ. ಅದು 'ಚಾವುಂಡರಾಯ
ರಾಣ' (೯೭೮). ಒಟ್ಟಿನಲ್ಲಿ ಇದು ಜಿನಸೇನ-ಗುಣಭದ್ರರ ಮಹಾಪುರಾಣದ ಅನು
ದ. ಬಿಡಿಯಾದ ಜಿನಪುರಾಣಗಳು ಹಲವಾರಿವೆ. ವೃಷಭದೇವ, ಅಜಿತನಾಥ, ಚಂದ್ರ
ಭ, ಪುಷ್ಪದಂತ, ಅನಂತ, ಧರ್ಮನಾಥ, ಶಾಂತಿನಾಥ, ಮಲ್ಲಿನಾಥ, ನೇಮಿನಾಥ,
ರ್ಶ್ವನಾಥ, ವರ್ಧಮಾನ—ಈ ಹನ್ನೊಂದು ಮಂದಿ ತೀರ್ಥಂಕರರ ಚರಿತ್ರೆಗಳು ಕನ್ನಡ
ಪ್ರಸಿದ್ಧವಾಗಿವೆ. ಚಂದ್ರಪ್ರಭನ ಚರಿತೆಯನ್ನು ಶ್ರೀವಿಜಯ (ಸು. ೮೫೦ ?),
ಳ (೧೧೮೯), ದೊಡ್ಡಯ್ಯ (ಸು. ೧೫೫೦) ಇವರು ಬರೆದಿದ್ದಾರೆ. ವೀರನಂದಿಯ
ಸ್ಕೃತ 'ಚಂದ್ರಪ್ರಭಚರಿತೆ' ಕನ್ನಡ ಚಂದ್ರಪ್ರಭಚರಿತೆಗಳ ಮೂಲವೆಂದು ಸಾಮಾನ್ಯ
ಗಿ ತಿಳಿಯಲಾಗಿದೆ. ಮಧುರ (ಸು. ೧೩೮೫) ಮತ್ತು ಬಾಹುಬಲಿಪಂಡಿತರು (ಕ್ರಿ.ಶ.
೫೨) ಒಂದೊಂದು ಧರ್ಮನಾಥ ಪುರಾಣ ಬರೆದಿದ್ದಾರೆ. ಪೊನ್ನ (ಸು. ೯೫೦)
ಲಭವ (ಸು. ೧೨೩೫)ರು ಒಂದೊಂದು ಶಾಂತಿಪುರಾಣ ಬರೆದಿದ್ದಾರೆ. ನೇಮಿನಾಥನ
ಬಂಧವಾದ ಚರಿತ್ರೆಗಳು ಭಾರತ ಭಾಗವತಗಳ ಕಥೆಗಳನ್ನೂ ಒಳಕೊಂಡಿರುತ್ತವೆ
ಂಬುದರಿಂದ ಕನ್ನಡ ಸಾಹಿತ್ಯದಲ್ಲಿ ಕವಿಗಳಿಗೂ ಸಹೃದಯರಿಗೂ ಹೆಚ್ಚು ಮೆಚ್ಚಾಗಿರು
ತೆ ತೋರುತ್ತದೆ. ಕರ್ಣಪಾರ್ಯ, ನೇಮಿಚಂದ್ರ, ಮಹಾಬಲ, ಸಾಳ್ವ, ಮಂಗರಸ
ರು ನೇಮಿನಾಥ ಚರಿತ್ರ ಕರ್ತೃಗಳಾಗಿದ್ದಾರೆ. ಗುಣವರ್ಮನ 'ಹರಿವಂಶ', ಬಂಧು
ರ್ಮನ 'ಹರಿವಂಶಾಭ್ಯುದಯ', ಬ್ರಹ್ಮಣಾಂಕನ 'ಜಿನಭಾರತ'—ಇವೂ ಒಟ್ಟಿನಲ್ಲಿ
ಮಿಚರಿತ್ರೆಗಳೇ ಆಗಿವೆ. ಕನ್ನಡದ ಈಯೆಲ್ಲ ನೇಮಿಚರಿತ್ರೆಗಳೂ ಬಲುಮಟ್ಟಿಗೆ ದಿಗಂಬರ
ಪ್ರದಾಯಕ್ಕೆ ಸೇರಿದವು, ಪುನ್ನಾಟ ಸಂಘದ ಜಿನಸೇನಾಚಾರ್ಯರ 'ಹರಿವಂಶ ಪುರಾಣ'
ರ್ಗದಲ್ಲಿ ರಚಿತವಾದವು. ಈ ಜಿನಸೇನರ 'ಹರಿವಂಶ ಪುರಾಣ', ಗುಣಭದ್ರರ
ತ್ತರ ಪುರಾಣ'—ಈ ಮೊದಲಾದ ಕಥಾಮೂಲಗಳನ್ನು ಅನುಸರಿಸಿ, ವಿಭಿನ್ನ ಮೂಲ
ಉತ್ತಮಾಂಶಗಳನ್ನು ಸಂಯೋಜಿಸಿ, ಅಲ್ಲಲ್ಲಿ ಸ್ವತಂತ್ರವಾಗಿ ಸಣ್ಣಪುಟ್ಟ ಕಥಾ
ನ್ಯಾಸಗಳನ್ನೂ ಸ್ಥಾನಾಂತರಗಳನ್ನೂ ಸಂಘಟಿಸಿ, ಅವು ರಚಿತವಾಗಿವೆಯೆಂದು ಹೇಳ
ಹುದು. ಉಳಿದ ತೀರ್ಥಂಕರರ ಪುರಾಣಗಳು ಒಂದೊಂದು ಮಾತ್ರ ಕನ್ನಡದಲ್ಲಿ ಕಂಡು
ರುತ್ತವೆ. ಇವುಗಳಲ್ಲಿ ಹೆಚ್ಚಿನವಕ್ಕೆ ಜಿನಸೇನ-ಗುಣಭದ್ರರ ಸಂಸ್ಕೃತ 'ಮಹಾಪುರಾಣ'
ಮೂಲವಾಗಿರುವಂತೆ ತೋರುತ್ತದೆ.

ಕನ್ನಡ ತೀರ್ಥಂಕರ ಪುರಾಣಗಳು ವಸ್ತುವಿನ ಮಟ್ಟಿಗೆ ಕವಿಗಳ ಸ್ವತಂತ್ರ ನಿರ್ಮಿತಿ
ಆಗಿರದೆ, ಪೂರ್ವಪರಂಪರೆಯ ಪುರಾಣಗ್ರಂಥಗಳನ್ನು ಅನುಸರಿಸಿದವು ಎಂಬುದರಲ್ಲಿ
ದೇಹವಿಲ್ಲ. ಈ ಪರಂಪರೆ ಸಂಸ್ಕೃತ ಪ್ರಾಕೃತ ಅಪಭ್ರಂಶಗಳಲ್ಲಿ ಬಂದಿರುವ ಜೈನ
ತ್ಯವನ್ನೂ ಕನ್ನಡ ಜೈನಕವಿಗಳ ಮೊದಮೊದಲಿನ ಸಾಹಿತ್ಯವನ್ನೂ ಕುರಿತದ್ದಾ

ಗಿವೆ. ಸಂಸ್ಕೃತಾದಿ ಭಾಷೆಗಳಲ್ಲಿ ಶ್ಲೋಕಗಳಲ್ಲಿಯೂ ಗಲಿತಕ ಸ್ಕಂಧಕ ಕಡವಕ
ಗಳಲ್ಲಿಯೂ ಇರುವ ನಿರೂಪಣೆ ಕನ್ನಡದಲ್ಲಿ ಚಂಪೂರೂಪದಲ್ಲಿದೆ; ಒಂದೆರಡು ಕ
ಸಾಂಗತ್ಯ ಷಟ್ಪದಿ ಗದ್ಯರೂಪದಲ್ಲಿವೆ. ಸಂಸ್ಕೃತ ಪ್ರಾಕೃತಗಳಲ್ಲಿ ಕಂಡುಬರುವಂತೆ
ಕನ್ನಡದಲ್ಲಿಯೂ ಈಚಿನ ಪುರಾಣಗಳು ಏಕೈಕ ಕಥಾಮೂಲವನ್ನು ಅನುಸರಿಸಿರುವೆ, ಬೇ
ಬೇರೆ ಕಥಾಮೂಲಗಳನ್ನು ಅನುಸರಿಸಿರುವುದು ಕಾಣುತ್ತದೆ. ಹೀಗೆ ವಿವಿಧ ಕಥಾಮೂ
ಗಳಿಂದ ವಿಷಯಗಳನ್ನು ಯಥೋಚಿತವಾಗಿ ಸಂಗ್ರಹಿಸಿ, ಜಾಣ್ಮೆಯಿಂದ ಸಂಯೋಜಿ
ಸ್ವತಂತ್ರವಾದ ರೀತಿಯಲ್ಲಿ ಒಂದು ಸಮ್ಮಿಶ್ರ ಕಥಾಸೃಷ್ಟಿಯನ್ನು ಕನ್ನಡ ಕವಿಗಳು ಮಾಡಿ
ದ್ದುದು ಸಾಮಾನ್ಯವಾಗಿ ಗೋಚರಿಸುತ್ತದೆ. ಹೀಗೆ ಮಾಡುವಾಗ ಒಂದು ಅಥವಾ ಒ
ಕ್ಕಿಂತ ಹೆಚ್ಚಾದ ಕಥಾಮೂಲಗಳನ್ನು ಒಮ್ಮೆ ನಿಕಟವಾಗಿ ಒಮ್ಮೆ ವಿರಳವಾಗಿ ಅನುವ
ಹಿರುವುದುಂಟು. ಒಮ್ಮೆ ಕಥಾಸಂಗತಿಗಳನ್ನು ಸಂಕ್ಷೇಪಿಸಿರುವುದುಂಟು, ಒಮ್ಮೆ ವಿಸ್ತರಿ
ವುದುಂಟು. ಮೂಲದ ಸಂಗತಿಗಳನ್ನು ಸಣ್ಣಪುಟ್ಟ ಸಾಮಾನ್ಯ ಕಥಾಂಶಗಳಿಂದ ಬೆಳ
ವುದುಂಟು, ವರ್ಣನೆಗಳ ಚಾತುರ್ಯದಿಂದ ಅತ್ಯಲ್ಪ ಪ್ರಮಾಣದ ಕಥೆಯನ್ನು ದೊ
ಕಥೆಯಾಗಿ ಎಳೆದಿರುವುದುಂಟು. ಕಥಾಸಂದರ್ಭಗಳನ್ನೂ ಸಂಗತಿಗಳನ್ನೂ ಲೋಪಿಸಿ
ವುದು, ಸ್ಥಾನಾಂತರಗೊಳಿಸುವುದು, ಒಂದಕ್ಕೊಂದು ಬೆಸೆಯುವುದು—ಇವೆಲ್ಲ
ಸ್ವಾತಂತ್ರ್ಯಮೂಲವಾದವು. ಮೂಲದ ಕಥೆಯನ್ನು ಸಂಕ್ಷೇಪಿಸಿರುವುದು ವಿರಳ, ವಿ
ಸಿರುವುದೇ ವಿಶೇಷ. ಮೂಲದಲ್ಲಿ ಪುರಾಣಮಾತ್ರವಾಗಿರುವುದು ಅದರ ಕನ್ನಡರೂಪ
ಪುರಾಣಕಾವ್ಯವಾಗಿದೆ, ಸಾಂಪ್ರದಾಯಿಕ ಮಹಾಕಾವ್ಯವಾಗಿದೆ. ಮತಪ್ರಕ್ರಿ
ಧರ್ಮೋಪದೇಶ, ವಿವಿಧ ಶಾಸ್ತ್ರವಿಷಯಗಳು—ಇವು ಕೆಲವು ಮೂಲಗ್ರಂಥಗ
ಸಾಮಾನ್ಯವಾಗಿ ವಿಶೇಷವಾಗಿ ಪ್ರಾಶಸ್ತ್ಯ ಪಡೆದಿರುತ್ತವೆ. ಕನ್ನಡದ ಕೃತಿಗಳಲ್ಲಿ
ಸಂಬಂಧವಾದ ವಿವರಗಳು ಬಲುಮಟ್ಟಿಗೆ ಸಂಕ್ಷೇಪಿಸಲ್ಪಟ್ಟಿರುತ್ತವೆ ಇಲ್ಲವೆ ಲುಪ್ತವಾ
ತ್ತವೆ. ಇದರಿಂದ ಕನ್ನಡರೂಪವು ಹೆಚ್ಚು ಸ್ಫುಟತೆಯುವೂ ಸ್ವಾರಸ್ಯವೂ ಆಗಿ
ಣಮಿಸಿದೆ. ಒಟ್ಟಿನಲ್ಲಿ ಕನ್ನಡ ಪುರಾಣಗಳಲ್ಲಿ ಕಥೆಯ ಮುಖ್ಯಸ್ರೋತ ಬಲುಮ
ಗಮನಕ್ಕೆ ಬರುವಂತಿದ್ದು, ಅವರಲ್ಲಿ ರಸವರ್ಣನಾದಿಗಳ ಪರಿಪೋಷಣೆಯಿಂದ ಕಾ
ಮೆರುಗು ಬಂದಿರುತ್ತದೆ. ಇದಕ್ಕೆ ಅಪವಾದಗಳೂ ಇಲ್ಲದಿಲ್ಲ.

ಜೈನ ಪುರಾಣಕಥೆಗಳ ಸಂಬಂಧದಲ್ಲಿ ಒಂದೆರಡು ಸಂಗತಿಗಳನ್ನು ನೋಡಬಹು
ಇವು ಸಾಮಾನ್ಯವಾಗಿ ಉಪಸರ್ಗ ಪರೀಷಹಗಳನ್ನು ಗೆದ್ದ ಯತಿಗಳ, ಅಣುವ್ರತ
ಪ್ರೇಕ್ಷಾದಿ ಶ್ರೇಷ್ಠತತ್ತ್ವಗಳನ್ನು ಅನುಷ್ಠಿಸಿದವರ ಚರಿತ್ರೆಗಳನ್ನು ವಿಶದವಾಗಿಯೂ
ವಾಗಿಯೂ ತಿಳಿಸುವುವು. ಇವು ಜಿನಪುರಾಣಗಳಿಗಿಂತ ಸಂಕ್ಷೇಪವಾಗಿದ್ದು, ಏಕಮು
ಗಿದ್ದು ಕಥೆಗಳೆಂಬ ಕಾರಣದಿಂದ ಸ್ವಾರಸ್ಯಕರವಾಗಿಯೂ ಇರುತ್ತವೆ. ಸುಕುಮಾರಸ್
ಯಶೋಧರ, ಜ್ಞಾನಚಂದ್ರ, ಧನಕುಮಾರ, ಸನತ್ಕುಮಾರ, ವಜ್ರಕುಮಾರ,
ಕುಮಾರ, ಜೀವಂಧರ, ಜಯನೃಪ, ಪ್ರಭಂಜನ, ಶ್ರೀಪಾಲ, ಭರತೇಶ್ವರ, ವಿ
ಕುಮಾರಿ, ವರಾಂಗನೃಪ, ರತ್ನಶೇಖರ—ಈ ಮೊದಲಾದವರ ಕಥೆಗಳನ್ನು, ಅವ

ಷ್ಠೆ, ಸಾಧನೆ, ತಪಶ್ಚರ್ಯೆ, ಮಾಹಾತ್ಮ್ಯೆ, ವ್ರತ ಇವೆಲ್ಲ ಪರಿಸ್ಫುಟವಾಗುವಂತೆ ಈ ನ ಗ್ರಂಥಗಳಲ್ಲಿ ನಿರೂಪಿಸಿದೆ. ಇವು ಕೂಡ ಸಾಮಾನ್ಯವಾಗಿ ಪೂರ್ವಪರಂಪರೆಯ ತ ಪ್ರಾಕೃತಾದಿ ಭಾಷೆಗಳ ಕೃತಿಗಳನ್ನು ಸಾಮಾನ್ಯವಾಗಿ ಅವಲಂಬಿಸಿ ರಚಿತವಾಗಿವೆ. ನ ಪುರಾಣಕಥೆಗಳು ಕೆಲವೊಮ್ಮೆ ಕನ್ನಡ ಮೂಲಗಳನ್ನೇ ಅನುಸರಿಸಿರುವುದೂ ಉಂಟು. ರ್ವಪ್ರಾಯವೂ ಉತ್ಕೃಷ್ಟವೂ ಆಗಿರುವ ಜೈನಧರ್ಮದ ತತ್ತ್ವಗಳಲ್ಲಿ ಒಂದೊಂದು ಶೇಷವನ್ನು ಬದುಕಿನಲ್ಲಿ ಸಾಧಿಸಿ ಸಿದ್ಧಿ ಪಡೆದವರ ಕಥೆಗಳನ್ನು ಇಲ್ಲಿ ನಾವು ಕಾಣು . ಇವುಗಳಲ್ಲಿ ಶಾಂತಿನಾಥನ (ಕ್ರಿ.ಶ. ೧೦೬೮) 'ಸುಕುಮಾರ ಚರಿತೆ', ಜನ್ನನ .೧೨೦೯) 'ಯಶೋಧರ ಚರಿತೆ' ಇವು ಕ್ರಮವಾಗಿ ಚಂಪೂ ಮತ್ತು ಕಂದ ಕಾವ್ಯ ವೆ, ಉಳಿದವು ಸಾಂಗತ್ಯರೂಪವಾಗಿಯೋ ಷಟ್ಪದಿರೂಪವಾಗಿಯೋ ಇವೆ. ಈ ಕಥೆ ನಾಯಕರು ತೀರ್ಥಂಕರ ಪುರಾಣಗಳ ಮಹಾಪುರುಷರಂತಿರದೆ, ಜನಸಾಮಾನ್ಯರ ದರ್ಶಗಳಿಗೆ ನಿಲುಕುವಂತೆ ಆಪ್ತರೂ ಆತ್ಮೀಯರೂ ಆಗಿ ತೋರುತ್ತಾರೆ.

ನ ಪುರಾಣಕಥೆಗಳ ಇನ್ನೊಂದು ವರ್ಗವೆಂದರೆ ಕಥಾಕೋಶಗಳೆಂತಿರುವ ಕೆಲವು ಳು. ಇಂತಹ ಕಥಾಸಂಗ್ರಹಗಳು ಕನ್ನಡ ಜೈನಸಾಹಿತ್ಯದಲ್ಲಿ ವಿಶೇಷವಾಗಿಲ್ಲ. ಶಿವ ಟ್ಯಾಚಾರ್ಯ (ಸು. ೯೨೦), ನಯಸೇನ (ಕ್ರಿ.ಶ. ೧೧೧೨), ಬಂಧುವರ್ಮ, ನಾಗ (ಕ್ರಿ.ಶ. ೧೩೩೧), ವೃತ್ತವಿಲಾಸ (ಸು. ೧೩೬೦)—ಇವರು ಇಂತಹ ಕೃತಿಗಳನ್ನು ಖ್ಯಾತರಾಗಿದ್ದಾರೆ. ಇವು ಒಂದು ರೀತಿಯಲ್ಲಿ ಉಳಿದೆರಡು ಬಗೆಯ ಕೃತಿಗಳಿಗಿಂತ ರಿಗೆ ಹೆಚ್ಚು ಪ್ರಿಯವಾದವು. ಅವುಗಳ ಸ್ವಾರಸ್ಯಕ್ಕೆ ನಿರೂಪಣೆಯಲ್ಲಿನ ಸಂಕ್ಷಿಪ್ತತೆ ಶಗಳು ಎಷ್ಟುಮಟ್ಟಿಗೆ ಕಾರಣವೋ ಅಷ್ಟೇ ಮಟ್ಟಿಗೆ ಅವುಗಳ ವಸ್ತುವಿನ್ಯಾಸ ದೃಷ್ಟಿಗಳ ಸರಳತೆ ಸಹಜತೆಗಳೂ ಕಾರಣವಾಗಿವೆ. ಸಂಸ್ಕೃತ ಪ್ರಾಕೃತ ಭಾಷೆ ಜೈನಕಥಾಕೋಶಗಳು ಜನಪ್ರಿಯವಾಗಿವೆ. ಅವುಗಳಿಂದ ಶಿವಕೋಟಿ ನಯಸೇನಾದಿ ಯಂಬ ಪ್ರಯೋಜನವನ್ನು ಪಡೆದಿದ್ದಾರೆ. ನಾಗರಾಜ ಮತ್ತು ವೃತ್ತವಿಲಾಸರ ಗ್ರಂಥ ಕ್ರಮವಾಗಿ ರಾಮಚಂದ್ರ ಮುಮುಕ್ಷು ಮತ್ತು ಅಮಿತಗತಿಗಳ ಗ್ರಂಥಗಳು ಆಕರ ವೆ.

## ಶೈವ ಮತ್ತು ವೀರಶೈವ ಪುರಾಣಗಳು, ಪುರಾಣಕಥೆಗಳು

ನ್ನಡದಲ್ಲಿ ಶೈವ ಮತ್ತು ವೀರಶೈವ ಪುರಾಣಗಳು, ಪುರಾಣಕಥೆಗಳು ವಿಶೇಷವಾಗಿ ಯ ಶತಮಾನದಿಂದೀಚೆಗೆ ರಚಿತವಾಗತೊಡಗಿದವು ಎಂದು ತೋರುತ್ತದೆ. ಹರಿಹರ ವಾಂಕರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇಂತಹ ರಚನೆಗಳಿಗೆ ಪ್ರೇರಕ ು. ಸ್ವತಂತ್ರ ಗ್ರಂಥಗಳ ರಚನೆಗಳಿಗಿಂತ ಆಧಾರಿತ ಮತ್ತು ಅನುವಾದಿತ ಗ್ರಂಥ ಚ್ಚಾಗಿ ರಚನೆಯಾಗಿವೆಯೆನ್ನಬಹುದು. ಟೀಕೆ ವ್ಯಾಖ್ಯಾನಗಳ ಹೆಸರಿನಲ್ಲಿ ಮೂಲದ ಣಕಥೆಗಳು ಕನ್ನಡರೂಪದಲ್ಲಿ ಕಾಣಿಸಿಕೊಂಡವೆಂದು ಹೇಳಬಹುದು. ಇಂತಹ ರ್ಮಿಕ ಸಾಹಿತ್ಯದ ರಚನೆಯನ್ನು ಕನ್ನಡ ಕವಿಗಳು ಆತ್ಮಕಲ್ಯಾಣ ಸಾಧಕವೆಂಬ

ದಾಗಿಯೂ ಧರ್ಮಪ್ರಸಾರದ ವಾಹಕವೆಂಬುದಾಗಿಯೂ ಸಮಾಜಕ್ಕೆ ತಮ್ಮ ಆವಶ್ಯ ಕರ್ತವ್ಯವೆಂಬುದಾಗಿಯೂ ತಿಳಿದರು. ಇವುಗಳಲ್ಲಿ ನಿರೂಪಿತವಾಗಿರುವ ಶಿವನ ಲೀಲೆಗಳು, ಶಿವಭಕ್ತರ ಚರಿತ್ರೆಗಳು ಜನಜೀವನದಲ್ಲಿ ದೈವಭಕ್ತಿ ಧರ್ಮಶ್ರದ್ಧೆಗಳನ್ನು ಉಜ್ಜೀವಿಸಿದ್ದು ಕಾರಣವಾಗಿ, ಅವು ಕನ್ನಡ ಕವಿಪರಂಪರೆಗೆ ತುಂಬ ಅಚ್ಚುಮೆಚ್ಚಾದವು.

ಅಷ್ಟಾದಶ ಪುರಾಣಗಳಲ್ಲಿ ಶಿವ, ಭವಿಷ್ಯ, ಮಾರ್ಕಂಡೇಯ, ಲಿಂಗ, ವಾರಾಹ, ಸ್ಕಾಂದ, ಮತ್ಸ್ಯ, ಕೂರ್ಮ, ವಾಮನ, ಬ್ರಹ್ಮಾಂಡ—ಇವು ಶಿವಮಹಿಮೆಗೆ ಪ್ರಾಶಸ್ತ್ಯ ವಿತ್ತಿರುವ ಶೈವಪುರಾಣಗಳೆಂದು ಖ್ಯಾತವಾಗಿವೆ. ಇವುಗಳಲ್ಲಿ ಮಾತ್ರವಲ್ಲದೆ ಇತರ ಕೆಲವು ಉಪಪುರಾಣಗಳಲ್ಲಿಯೂ ಶಿವಪರವಾದ ಕಥೆಗಳು ಬರುವುದುಂಟು. ಕನ್ನಡ ಕವಿಗಳು ಈ ಮಹಾಪುರಾಣಗಳಿಂದಲೂ ಉಪಪುರಾಣಗಳಿಂದಲೂ ತಮಗೆ ಇಷ್ಟವಾದ ಕಥಾಭಾಗ ಗಳನ್ನೂ ವ್ಯಕ್ತಿಚರಿತ್ರೆಗಳನ್ನೂ ಆಯ್ದುಕೊಂಡು ಕೃತಿರಚನೆ ಮಾಡಿದ್ದಾರೆ. ಕೆಲವೊಮ್ಮೆ ವೈಷ್ಣವ ಮತ್ತು ಇತರ ಪುರಾಣಗಳಲ್ಲಿಯೂ ಪ್ರಾಸ್ತಾವಿಕವಾಗಿ ಬರುವ ಶಿವಮಹಿಮಾ ಪರವಾದ ವೃತ್ತಾಂತಗಳನ್ನು ಆಯ್ದುಕೊಂಡಿರುವುದುಂಟು.

ಶೈವಪುರಾಣಗಳಲ್ಲಿ ಸ್ಕಾಂದಪುರಾಣದ ಕಥಾಸಂದರ್ಭಗಳಿಗೆ ಹೆಚ್ಚಿನ ಆದ್ಯತೆ ಸಂದಿದೆ. ಮೂಲದ ಕಥಾಭಾಗಗಳ ಅನುವಾದಗಳೂ ಟೀಕೆ ವ್ಯಾಖ್ಯಾನಗಳೂ ವಿಶೇಷವಾಗಿ ರಚಿತ ವಾಗಿವೆ. ಹಾಲಾಸ್ಯ ಮಾಹಾತ್ಮ್ಯೆ, ಭದ್ರಗಿರಿ ಮಾಹಾತ್ಮ್ಯೆ, ಸೇತು ಮಾಹಾತ್ಮ್ಯೆ, ದೇವಾಂಗ ಋಷಿಯ ಚರಿತೆ, ಸಾನಂದ ಗಣೇಶನ ಚರಿತೆ, ಧರ್ಮಗುಪ್ತ ಚರಿತೆ, ವಿಘ್ನೇಶ್ವರ ವ್ರತಕಲ್ಪ, ಶನಿತ್ರಯೋದಶೀಕಲ್ಪ, ಶಿವಧರ್ಮೋತ್ತರ—ಈ ಮೊದಲಾದ ಕಥಾಸಂದರ್ಭ ಗಳು ಸ್ಕಾಂದಪುರಾಣಕ್ಕೆ ಸೇರಿದವು. ಇವುಗಳಲ್ಲಿ ಹಾಲಾಸ್ಯ ಮಾಹಾತ್ಮ್ಯೆ, ಸಾನಂದ ಚರಿತ್ರೆ, ಷಣ್ಮುಖವೃತ್ತಾಂತ—ಈ ಮೊದಲಾದ ಕಥಾಸಂದರ್ಭಗಳನ್ನು ಕುರಿತು ಒಬ್ಬನಿ ಗಿಂತ ಹೆಚ್ಚು ಕವಿಗಳು ಕೃತಿಗಳನ್ನು ಬರೆದಿದ್ದಾರೆ, ಟೀಕೆಗಳನ್ನು ರಚಿಸಿದ್ದಾರೆ, ಅನುವಾದ ಗಳನ್ನು ಮಾಡಿದ್ದಾರೆ.

ಸಂಸ್ಕೃತಭಾಷೆಯ ಪುರಾಣಗಳಲ್ಲಿಯೂ ಕಾವ್ಯನಾಟಕಗಳಲ್ಲಿಯೂ ನಿರೂಪಿತವಾಗಿರುವ ಯಾವುದಾದರೊಂದು ಶೈವಪರವಾದ ಕಥಾವಸ್ತುವನ್ನು ಎತ್ತಿಕೊಂಡು ಅವುಗಳಲ್ಲಿಯ ಉತ್ತಮಾಂಶಗಳನ್ನು ಯಥೋಚಿತವಾಗಿ ಸಂಯೋಜಿಸಿ ಕಥೆಯನ್ನು ಸ್ವತಂತ್ರ ರೀತಿಯಲ್ಲಿ ಕಾವ್ಯವಾಗಿ ಮಾಡಿರುವುದು ಕೂಡ ಕನ್ನಡ ಸಾಹಿತ್ಯದಲ್ಲಿ ಕಾಣುತ್ತದೆ. ಹರಿಹರನ (ಸು. ೧೨೦೦) 'ಗಿರಿಜಾ ಕಲ್ಯಾಣ', ರಾಘವಾಂಕನ (ಸು. ೧೨೦೦) 'ಹರಿಶ್ಚಂದ್ರ ಚಾರಿತ್ರ' ಇವು ಇಂತಹ ಕೃತಿಗಳು. ಸಮ್ಮಿಶ್ರ ರೀತಿಯ ಇಂತಹ ಕೃತಿಗಳ ರಚನೆ ಜೈನಪುರಾಣಗಳಲ್ಲಿ ಕೂಡ ಸಾಮಾನ್ಯವಾಗಿ ಕಂಡುಬಂದಿದೆಯೆಂಬುದನ್ನು ಹಿಂದಿನ ಸಮೀಕ್ಷೆಯಲ್ಲಿ ಗಮನಿಸಿದೆ. ಕನ್ನಡ ಕಾವ್ಯಗಳನ್ನೂ ಜನಶ್ರುತಿಯ ಪೌರಾಣಿಕ ಕಥಾಂಶಗಳನ್ನೂ ಆಧಾರವಾಗಿಟ್ಟು ಕೊಂಡು ಕಾವ್ಯನಾಟಕಗಳನ್ನು ಕಟ್ಟಿರುವ ಕಡೆಗಳಲ್ಲಿ ಪರೋಕ್ಷವಾಗಿ ಸಂಸ್ಕೃತ ಪುರಾಣ ಗಳು ತಮ್ಮ ಪ್ರಭಾವಮುದ್ರೆಯನ್ನು ಅಂಕಿಸಿವೆಯೆಂದು ಹೇಳಬಹುದು. ರಾಘವಾಂಕನ 'ಹರಿಶ್ಚಂದ್ರ ಚಾರಿತ್ರ' ಓದುವ ಗಿರಿಯ (ಸು. ೧೫೨೫) ಬೊಂಬೆಯ ಲಕ್ಕ (ಕ್ರಿ.ಶ. ೧೫೩೪

ಮೊದಲಾದವರ ಹರಿಶ್ಚಂದ್ರ ಕೃತಿಗಳ ರಚನೆಗೆ ಪ್ರೇರಕವಾಗಿರುವುದನ್ನು ಇಲ್ಲಿ ನೆನೆಯಬಹುದು. ಮಹಾಭಾರತದ ಇಂದ್ರಕೀಲ ಪ್ರಸಂಗವನ್ನು ವಸ್ತುವಾಗಿ ಆಯ್ದುಕೊಂಡು, ಕುಮಾರವ್ಯಾಸಭಾರತದ ಆ ಕಥಾಭಾಗದಿಂದ ಪ್ರಭಾವಿತನಾಗಿ ಷಡಕ್ಷರಿ ಶಿವಮಹಿಮೆಗೆ ಮಹತ್ತ್ವವನ್ನು ಕೊಟ್ಟು 'ಶಬರಶಂಕರವಿಲಾಸ'ವನ್ನು ಬರೆದಿರುವುದು ಇಲ್ಲಿ ನೆನೆಯತಕ್ಕದ್ದಾಗಿದೆ. ಶಿವಪುರಾಣಗಳಿಂದ ಉದ್ಧೃತವಾದ ಕಥಾವೃತ್ತಾಂತಗಳು ಯಕ್ಷಗಾನಗಳ ಹಾಗೂ ನಾಟಕಗಳ ರೂಪದಲ್ಲಿ ೧೯ನೆಯ ಶತಮಾನದಲ್ಲಿ ಜನಪ್ರಿಯವಾದ್ದು ಕಂಡುಬರುತ್ತದೆ.

ವೀರಶೈವರಾದ ಕನ್ನಡ ಕವಿಗಳಲ್ಲಿ ಕೆಲವರು ಸಂಸ್ಕೃತದಲ್ಲಿ ಕೂಡ ಶೈವಪುರಾಣ ಸಂಬಂಧವಾದ ಮತ್ತು ಇತರ ವಿಧವಾದ ಕೃತಿಗಳನ್ನು ರಚಿಸಿ ಸಂಸ್ಕೃತ ಸಾಹಿತ್ಯಕ್ಕೆ ನೇರವಾಗಿಯೇ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಕೆರೆಯ ಪದ್ಮರಸನ (ಸು. ೧೧೯೫) ...ಸಾನಂದ ಚರಿತೆ', ಪಾಲ್ಕುರಿಕೆ ಸೋಮನಾಥನ (ಸು. ೧೧೯೫) 'ಬಸವರಾಜೀಯ', ಷಡಕ್ಷರಿಯ (ಕ್ರಿ.ಶ. ೧೬೫೫) 'ಕವಿಕರ್ಣರಸಾಯನ', ಮುಮ್ಮಡಿ ತಮ್ಮನ (ಸು. ೧೬೬೫) ...ಕೌಮುದೀ ವ್ಯಾಖ್ಯಾನ', 'ರಸಿಕ ಮನೋರಂಜನ'—ಈ ಮೊದಲಾದವುಗಳನ್ನಿಲ್ಲಿ ಹೆಸರಿಸಬಹುದು. ಕನ್ನಡ ಕವಿಗಳಿಗೆ ಸಂಸ್ಕೃತ ಭಾಷಾಸಾಹಿತ್ಯಗಳಲ್ಲಿದ್ದ ಪರಿಶ್ರಮ ಪಾಂಡಿತ್ಯಗಳನ್ನು ಇವು ನಿರ್ದೇಶಿಸುತ್ತವೆ.

ಶೈವಪುರಾಣಗಳಲ್ಲಿ ವರ್ಣಿತವಾಗಿರುವ ಶಿವನ ಪಂಚವಿಂಶತಿಲೀಲೆಗಳು ಮೊದಲಾದವನ್ನು 'ಚೆನ್ನಬಸವಪುರಾಣ', 'ಗುರುರಾಜ ಚಾರಿತ್ರ' ಈ ಮೊದಲಾದ ಗ್ರಂಥಗಳಲ್ಲಿ ವರ್ಣಿಸಿದೆ. 'ಚತುರಾಚಾರ್ಯಪುರಾಣ'ದಂತಹ ಕೃತಿಗಳಲ್ಲಿ ಸಂಸ್ಕೃತ ಭಾಷೆಯಲ್ಲಿಯ ಶ್ರುತಿ ಸ್ಮೃತಿಗಳ ಪುರಾಣಾಗಮಗಳ ವಿಷಯಗಳು ಸಂಗ್ರಹಿಸಲ್ಪಟ್ಟಿವೆ.

## ವೈಷ್ಣವ ಮತ್ತು ಇತರ ಪುರಾಣಗಳು, ಪುರಾಣಕಥೆಗಳು

ಕನ್ನಡ ಸಾಹಿತ್ಯದ ಸಾರಸರ್ವಸ್ವವೆಲ್ಲ ವಿಶೇಷವಾಗಿ ಸಂಸ್ಕೃತ ಪುರಾಣೇತಿಹಾಸಗಳಿಂದ ಕಾವ್ಯನಾಟಕಗಳಿಂದ ಪ್ರಭಾವಿತವಾದುದೆಂದು ತೋರುತ್ತದೆ. ಅವುಗಳನ್ನು ಅಳವಡಿಸಿಕೊಂಡಿರುವ ರೀತಿಯಲ್ಲಿ ಕನ್ನಡ ಕವಿಗಳ ಹೊಸತನವಿದೆ; ಅವರ ಪ್ರತಿಭೆ ಪಾಂಡಿತ್ಯಗಳು ಸಾರ್ಥಕವಾಗಿ ಕೆಲಸಮಾಡಿವೆ. ಮೊದಲು ಸಂಸ್ಕೃತ ಪ್ರಾಕೃತ ಜೈನಪುರಾಣಗಳ ಪ್ರಭಾವವೂ ಅದರ ತರುವಾಯದಲ್ಲಿ ಶೈವಪುರಾಣಗಳ ಪ್ರಭಾವವೂ ಮೂರನೆಯ ಘಟ್ಟದಲ್ಲಿ ವೈಷ್ಣವ ಮತ್ತು ಇತರ ಪುರಾಣಗಳ ಪ್ರಭಾವವೂ ಕನ್ನಡ ಸಾಹಿತ್ಯದ ಮೇಲೆ ...ಗಿದೆ. ವೈಷ್ಣವಪುರಾಣಗಳು ಮತ್ತು ವೈಷ್ಣವ ಕಥಾಂಶಗಳಿರುವ ಇತರ ಪುರಾಣಗಳು ಉಳಿದವುಗಳಿಗಿಂತ ಹೆಚ್ಚು ವ್ಯಾಪಕವಾದ ಪ್ರಭಾವವನ್ನು ಬೀರಿರುವಂತೆ ತೋರುತ್ತದೆ. ...ದರೆ ಇದರಿಂದ ಕನ್ನಡ ಸಾಹಿತ್ಯಕ್ಕೆ ಉಂಟಾಗಿರುವ ಪುಷ್ಟಿ ಪ್ರಯೋಜನಗಳು ಅಷ್ಟು ಮಹತ್ತರವಾದುದೇನಲ್ಲ. ಅಂತೂ ಸಾಹಿತ್ಯದ ವ್ಯಾಪ್ತಿವೈವಿಧ್ಯಗಳು ಬೆಳೆದಿರುವುದು ...ಷ್ಟಯ.

ಕನ್ನಡನಾಡಿನಲ್ಲಿ ಶ್ರೀ ರಾಮಾನುಜರು ಪ್ರಾಯಃ ಪ್ರಸಾರಮಾಡಿದ ಶ್ರೀವೈಷ್ಣವಧರ್ಮ ಹೊಯ್ಸಳ ದೊರೆಗಳ ಪ್ರೋತ್ಸಾಹದಿಂದ ಮುಂದೆ ಬೆಳೆಯುತ್ತ ಬಂದಿತು. ಹೊಯ್ಸಳ ವೀರಬಲ್ಲಾಳನ (೧೧೭೩–೧೨೭೦) ಕಾಲದಲ್ಲಿದ್ದ ರುದ್ರಭಟ್ಟನು (ಸು. ೧೧೮೦) ಪ್ರಾಚೀನವೂ ಪ್ರಸಿದ್ಧವೂ ಕಾವ್ಯಗುಣಸಂಪನ್ನವೂ ಆದ 'ವಿಷ್ಣುಪುರಾಣ'ದ ವಸ್ತುವನ್ನಾಶ್ರಯಿಸಿ 'ಜಗನ್ನಾಥ ವಿಜಯ'ದ ಮೂಲಕವಾಗಿ ಕನ್ನಡದಲ್ಲಿ ಮೊದಲನೆಯ ವೈಷ್ಣವ ಭಕ್ತಿಕಾವ್ಯವನ್ನು, ಕೃಷ್ಣಕಥೆಯನ್ನು, ರಚಿಸಿ ಕನ್ನಡದಲ್ಲಿ ಅಂತಹ ಸಾಹಿತ್ಯರಚನೆಗೆ ಅಂಕುರಾರ್ಪಣೆ ಮಾಡಿದನು. ಅಲ್ಲಿಂದೀಚೆಗೆ ಬ್ರಾಹ್ಮಣ ಕವಿಗಳು ಭಾಗವತ ಕಥಾ ಸಾಹಿತ್ಯಕ್ಕೆ ಮನಸ್ಸು ಕೊಟ್ಟರು. ನೇಮಿಚಂದ್ರನ 'ನೇಮಿನಾಥಪುರಾಣ'ದಲ್ಲಿಯೇ ಜೈನ ಸಂಪ್ರದಾಯದ ಕೃಷ್ಣಕಥೆಯ ಎಡೆಯೆಡೆಯಲ್ಲಿ ಭಾಗವತ ಸಂಪ್ರದಾಯದ ಕೃಷ್ಣಕಥೆಯ ಅಂಶಗಳು ಸ್ಪಷ್ಟವಾಗಿ ಗೋಚರಿಸುತ್ತಿರುವುದು ನೋಡಿದರೆ ಅಂದು ಹೊಯ್ಸಳ ರಾಜ್ಯದಲ್ಲಿ ರಾಜಾಸ್ಥಾನದಲ್ಲಿ ವೈಷ್ಣವಧರ್ಮ ಉನ್ನತಸ್ಥಿತಿಯಲ್ಲಿದ್ದಿತೆಂದು ಗೋಚರವಾಗುವುದು. ಹೊಯ್ಸಳ ವೀರಬಲ್ಲಾಳನಲ್ಲಿಯೇ ಅಮಾತ್ಯನಾಗಿದ್ದ ಪೋಲಾಳ್ವ ದಂಡನಾಥನು (ಕ್ರಿ.ಶ. ೧೨೨೪) 'ಹರಿಚಾರಿತ್ರ'ವೆಂಬ ಷಟ್ಪದೀ ಕಾವ್ಯವನ್ನು ರಚಿಸಿದ್ದನೆಂಬುದು ತಿಳಿದ ವಿಷಯವಾಗಿದೆ. 'ಬಾಣಾಸುರ ವಿಜಯ'ವನ್ನು ರಚಿಸಿದ ಚೌಂಡರಸನು (ಸು. ೧೩೦೦) ರುದ್ರಭಟ್ಟನನ್ನು ಪೂರ್ವಕವಿಸ್ತವಾವಸರದಲ್ಲಿ ಸ್ಮರಿಸಿದ್ದಾನೆ. ಈಯಿಬ್ಬರಿಗೂ ಕೃತಿರಚನೆಗೆ ರುದ್ರಭಟ್ಟನ 'ಜಗನ್ನಾಥ ವಿಜಯ'ವು ಸ್ಫೂರ್ತಿನೀಡಿರಬಹುದು.

೧೫ನೆಯ ಶತಮಾನದಲ್ಲಿ ಹರಿದಾಸರ ಭಕ್ತಿಸಾಧನೆ ಕೀರ್ತನೆಗಳ ಮೂಲಕವಾಗಿ ಹೊಮ್ಮಿ ಕನ್ನಡ ಜನಜೀವನದಲ್ಲಿ ಭಾಗವತಧರ್ಮವೂ ಕೃಷ್ಣಭಕ್ತಿಯೂ ಹಬ್ಬತೊಡಗಿತು. ಅವುಗಳ ಚಿಂತನೆ ರಚನೆಗಳಲ್ಲಿ ಸಂಸ್ಕೃತದ ವೈಷ್ಣವಧರ್ಮಸಾಹಿತ್ಯದ ಪ್ರಬಲವಾದ ಪ್ರಭಾವವಿರಬೇಕು. ೧೩–೧೪ನೆಯ ಶತಮಾನದಲ್ಲಿ ತಡೆದಂತಿದ್ದ ವೈಷ್ಣವ ಸಾಹಿತ್ಯ ೧೫ರಿಂದ ಮುಂದೆ ನೆರೆಯುಕ್ಕಿ ಹರಿದಂತೆ ರಚನೆಯಾಗತೊಡಗಿತು. ೧೪ರಲ್ಲಿ ಅಥವಾ ೧೫ನೇ ಶತಮಾನದ ಆದಿಭಾಗದಲ್ಲಿದ್ದ ಕುಮಾರವ್ಯಾಸನನ್ನು ಕನ್ನಡ ಸಾಹಿತ್ಯದಲ್ಲಿ ಭಾಗವತ ಸಂಪ್ರದಾಯದ ಕಾವ್ಯರಚನೆಗೆ ಮೊದಲಿಗನೆಂದು ತಿಳಿಯಬಹುದು. ಆತನ ಭಾರತ ಕೃಷ್ಣಕಥೆಯೇ ಆಗಿ ಪರಿಣಮಿಸಿದೆ. ಆತನ ಪ್ರಭಾವ ಈಚಿನ ಪ್ರಸಿದ್ಧ ಭಾಗವತ ಕವಿಗಳ ಮೇಲೆ ನಿಚ್ಚಟವಾಗಿ ಗೋಚರಿಸುತ್ತದೆ. ೧೬ನೆಯ ಶತಮಾನದಲ್ಲಿ ವಿಜಯನಗರದ ಅರಸರು, ಅವರಲ್ಲಿಯೂ ಕೃಷ್ಣದೇವರಾಯ (ಕ್ರಿ.ಶ. ೧೫೦೯–೨೯)ನಂತಹವರು, ವೈದಿಕ ಧರ್ಮವನ್ನೂ ವೈಷ್ಣವ ಸಾಹಿತ್ಯವನ್ನೂ ಚೆನ್ನಾಗಿ ಪೋಷಿಸಿದರು. ಕೆಲವರು ಪ್ರಸಿದ್ಧ ರಾಮಾಯಣ ಭಾರತ ಭಾಗವತ ಕರ್ತೃಗಳು ಈ ಕಾಲದಲ್ಲಿ ಆಗಿಹೋಗಿದ್ದಾರೆ. ಕನ್ನಡ ಭಾಗವತ ಹುಟ್ಟಿದ್ದು ಈ ಕಾಲದಲ್ಲಿಯೇ. ಚೌಂಡರಸನ 'ಬಾಣಾಸುರ ವಿಜಯ'ದ ಹೊರತು ಕನ್ನಡ ಭಾಗವತ ರಚಿತವಾಗುವವರೆಗೆ ಭಾಗವತದ ಕಥೆ ಕನ್ನಡದಲ್ಲಿ ಬಂದಿರಲಿಲ್ಲ. ಈ ಕೃತಿಯ ತರುವಾಯದಲ್ಲಿ ಅದರ ಕೆಲವು ಸ್ವಾರಸ್ಯವಾದ ಕಥೆಗಳು ಸಂಸ್ಕೃತ ಮೂಲದಿಂದಲೂ ಕನ್ನಡ ಅನುವಾದದಿಂದಲೂ ಕನ್ನಡ ಸಾಹಿತ್ಯರಾಶಿಗೆ ಸೇರಿದವು. ಆ

ಕಥೆಗಳು ತಮ್ಮ ಬಗೆಬಗೆಯ ಗುಣವಿಶೇಷಗಳಿಂದಾಗಿ ಜನಗಳಿಗೆ ಮೆಚ್ಚಾಗತೊಡಗಿದಂತೆ ಒಬ್ಬರಿಗಿಂತ ಹೆಚ್ಚು ಕವಿಗಳು ಅವುಗಳನ್ನು ಕಾವ್ಯಗಳಾಗಿಯೂ ನಾಟಕಗಳಾಗಿಯೂ ಬರೆದರು, ಅವುಗಳಿಗೆ ಟೀಕೆಗಳನ್ನೂ ವ್ಯಾಖ್ಯಾನಗಳನ್ನೂ ಮಾಡಿದರು.

ಹೊಯ್ಸಳ ರಾಜರೂ ವಿಜಯನಗರದ ರಾಜರೂ ವೈಷ್ಣವ ಸಾಹಿತ್ಯ ಪೋಷಕರಾದಂತೆ ಮೈಸೂರು ಅರಸರೂ ೧೭ನೆಯ ಶತಮಾನದಿಂದ ವೈಷ್ಣವ ಸಾಹಿತ್ಯವನ್ನು ವಿಶೇಷವಾಗಿ ಪೋಷಿಸಿದರು. ಮೈಸೂರರಸರಲ್ಲಿ ರಾಜ ಒಡೆಯರು ಶ್ರೀವೈಷ್ಣವ ಮತವನ್ನವಲಂಬಿಸಿ ಆದಕ್ಕೆ ತಮ್ಮ ಆಸ್ಥಾನದಲ್ಲಿ ಪ್ರೋತ್ಸಾಹವನ್ನಿತ್ತರು. ಕಂಠೀರವ ನರಸರಾಜರು (ಕ್ರಿ.ಶ. ೧೬೩೮-೫೯) ಶ್ರೀವೈಷ್ಣವ ಭಾಗವತರಿಗೆ ಉಪಕಾರಿಗಳಾಗಿದ್ದು ಸ್ವತಃ ಒಳ್ಳೆಯ ಭಗವದ್ಭಕ್ತರಾಗಿದ್ದರು. ಇವರ ಕಾಲದಲ್ಲಿ ವೈಷ್ಣವ ಸಾಹಿತ್ಯಕ್ಕೆ ದೊರೆತ ಪ್ರೋತ್ಸಾಹ ಪ್ರಚೋದನೆಗಳು ಮುಂದೆ ಚಿಕ್ಕದೇವರಾಜರ (ಕ್ರಿ.ಶ. ೧೬೭೨-೧೭೦೪) ಕಾಲದಲ್ಲಿ ಒಳ್ಳೆಯ ಫಲ ಕೊಟ್ಟಿತು. ಈ ಅರಸನು ವಿಷ್ಣುಭಕ್ತನೂ ಶ್ರೀವೈಷ್ಣವಮತಾಸಕ್ತನೂ ಆಗಿದ್ದನು. ಈತನ ಕಾಲದಲ್ಲಿ ಕಾಣಿಸಿಕೊಂಡ ಸಾಹಿತ್ಯದ ಸುಗ್ಗಿ ವೈಷ್ಣವಕವಿಗಳ ಒಂದು ದೊಡ್ಡ ಪೀಳಿಗೆಯನ್ನೇ ಕನ್ನಡಕ್ಕೆ ಕೊಟ್ಟಿತು. ಸ್ವತಃ ಚಿಕ್ಕದೇವರಾಜ ಮೊದಲುಗೊಂಡು ತಿರುಮಲಾರ್ಯ (ಕ್ರಿ.ಶ. ೧೬೪೫-೧೭೦೬), ಚಿಕ್ಕುಪಾಧ್ಯಾಯ (ಕ್ರಿ.ಶ. ೧೬೭೨), ತಿಮ್ಮಕವಿ (ಕ್ರಿ.ಶ. ೧೬೭೭), ಸಿಂಗರಾರ್ಯ (ಸು. ೧೬೮೦) ಮೊದಲಾದವರು ವೈಷ್ಣವ ಪುರಾಣ ಸಾಹಿತ್ಯದ ಸಂವರ್ಧನೆಗೆ ಉಜ್ವಲವಾಗಿ ಶ್ರಮಿಸಿದರು. ಆ ಕಾಲದ ಸಾಹಿತ್ಯದ ವ್ಯಾಪ್ತಿಯನ್ನು ಗಮನಿಸಿದರೆ ಅಂದಿನ ಜನಜೀವನದಲ್ಲಿ ಅದು ದೈವಭಕ್ತಿ ಧರ್ಮಶ್ರದ್ಧೆಗಳನ್ನು ಚೆನ್ನಾಗಿ ಹರಡುವುದರಲ್ಲಿ ಯಶಸ್ವಿಯಾಗಿರಬೇಕೆಂದು ಭಾವಿಸಬಹುದು. ದೊಡ್ಡ ಕೃಷ್ಣರಾಜ(ಕ್ರಿ.ಶ. ೧೭೧೩-೩೧), ಇಮ್ಮಡಿ ಕೃಷ್ಣರಾಜ(ಕ್ರಿ.ಶ. ೧೭೩೪-೬೬) ಮತ್ತು ಮುಮ್ಮಡಿ ಕೃಷ್ಣರಾಜರ (ಕ್ರಿ.ಶ. ೧೭೯೯-೧೮೬೮) ಕಾಲದಲ್ಲಿಯೂ ಪೌರಾಣಿಕ ಕಥಾ ಸಾಹಿತ್ಯ ಚೆನ್ನಾಗಿ ವೃದ್ಧಿಗೊಂಡಿತೆಂದು ಹೇಳಬಹುದು.

ಅಷ್ಟಾದಶ ಮಹಾಪುರಾಣಗಳಲ್ಲಿ ವಿಷ್ಣು, ಭಾಗವತ, ನಾರದ ಮತ್ತು ಗರುಡ—ಈ ನಾಲ್ಕು ಪುರಾಣಗಳು ವೈಷ್ಣವಗಳು. ದೇವೀಪರವಾದ ದೇವೀಭಾಗವತದಲ್ಲಿಯೂ ಹರಿವಂಶದಲ್ಲಿಯೂ ಮತ್ಸ್ಯ ಮೊದಲಾದ ಒಂದೆರಡು ಶೈವಪುರಾಣಗಳಲ್ಲಿಯೂ ವಿಷ್ಣು ಮಾಹಾತ್ಮ್ಯವಿರುವುದು. ಹಾಗೆಯೇ ಸನತ್ಕುಮಾರ ನಾರಸಿಂಹ ನಾರದೀಯ ಮುಂತಾದ ಕೆಲವು ಉಪಪುರಾಣಗಳಲ್ಲಿಯೂ ವೈಷ್ಣವ ಕಥಾಭಾಗಗಳುಂಟು. ಕನ್ನಡ ಕವಿಗಳು ವಿಶೇಷವಾಗಿ ವಿಷ್ಣುಪುರಾಣ ಭಾಗವತ ಪುರಾಣಗಳಿಗೆ ಪ್ರಾಶಸ್ತ್ಯಕೊಟ್ಟಿದ್ದಾರೆ. ಅವುಗಳ ಗದ್ಯ ಪದ್ಯಾತ್ಮಕವಾದ ಅನುವಾದಗಳೂ ಸಂಗ್ರಹಗಳೂ ವ್ಯಾಖ್ಯಾನಗಳೂ ರಚಿತವಾಗಿವೆ. ವಿಷ್ಣು ಮತ್ತು ಕೃಷ್ಣಲೀಲಾ ಪ್ರಸಂಗಗಳೂ ಭಕ್ತಶ್ರೇಷ್ಠರ ಕಥೆಗಳೂ ಉದ್ಧೃತವಾಗಿವೆ. ಮಹಾಪುರಾಣಗಳಲ್ಲಿ ವೈಷ್ಣವೇತರಗಳಾದ ಪದ್ಮ, ಭವಿಷ್ಯ, ಅಗ್ನಿ, ವಾರಾಹ, ಮತ್ಸ್ಯ, ಬ್ರಹ್ಮಾಂಡ—ಈ ಪುರಾಣಗಳಿಂದಲೂ ಉಪಪುರಾಣಗಳಲ್ಲಿ ನಾರಸಿಂಹ, ನಾರದೀಯ ಈ ಒಂದೆರಡು ಪುರಾಣಗಳಿಂದಲೂ ಕಥಾಸಂದರ್ಭಗಳೂ ಮಾಹಾತ್ಮ್ಯಗಳೂ ಉದ್ಧೃತ

ವಾಗಿವೆ. ಹೀಗೆ ಕಥೆಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ ಅವುಗಳಲ್ಲಿ ನಾನಾ ಬಗೆಯ ವ್ಯತ್ಯಾಸಗಳಿಂದ ರೂಪಾಂತರಗಳು ತಲೆದೋರಿರುವುದು ಸಹಜ. ಜನಶ್ರುತಿಯ ಅನುಭವ ಅಭಿರುಚಿಗಳ ಅಂಶಗಳು ಬೆರೆತಿರುವುದು ಸಹಜ.

ಈ ವಿಭಾಗದ ಪೌರಾಣಿಕ ಕಥಾಸಾಹಿತ್ಯವನ್ನು ಹೀಗೆ ವಿಂಗಡಿಸಬಹುದು : (೧) ಮೂಲ ಪುರಾಣಗಳ ಸಮಗ್ರ ಮತ್ತು ಸಂಗ್ರಹ ಅನುವಾದಗಳು, ಟೀಕೆ ವ್ಯಾಖ್ಯಾನಗಳು. (೨) ಕೃಷ್ಣಕಥೆಗಳು (೩) ವಿಜಯ ಪರಿಣಯಾದಿ ಕಥಾಪ್ರಸಂಗಗಳು (೪) ಭಕ್ತಶ್ರೇಷ್ಠರ ಕಥೆಗಳು (೫) ಕ್ಷೇತ್ರ ಮತ್ತು ತೀರ್ಥ ಮಾಹಾತ್ಮ್ಯಗಳು.

ವಿಷ್ಣುಪುರಾಣ, ಭಾಗವತ, ಹರಿವಂಶ, ದೇವೀಭಾಗವತ ಮೊದಲಾದವು ಮೊದಲನೆಯ ಗುಂಪಿಗೆ ಸೇರುತ್ತವೆ. ಮೈಸೂರರಸರ ಕಾಲದಲ್ಲಿ ಹೆಚ್ಚಾಗಿ ಈ ಕೆಲಸ ನಡೆಯಿತು. ವಿಷ್ಣುಪುರಾಣ ಭಾಗವತಾದಿಗಳಿಂದ ಉದ್ಧೃತವಾದವು ಎರಡನೆಯ ಗುಂಪಿನ ಕೃತಿಗಳು. ಕೃಷ್ಣನ ಲೀಲೆಗಳಿಗೆ ಮಹಿಮೆಗಳಿಗೆ ಸಂಬಂಧಿಸಿದ ಈ ಕೃತಿಗಳು ಆತನಿಗೆ ನೇರವಾಗಿಯೂ ಆತನ ಪತ್ನಿಯರ ಮತ್ತು ಭಕ್ತರ ಕಥೆಗಳೊಡನೆ ಹಾಸುಹೊಕ್ಕಾಗಿಯೂ ಸಂಬಂಧಿಸಿರುತ್ತವೆ. ಮೂರನೆಯ ಗುಂಪಿನವು ಕೆಲವೊಮ್ಮೆ ಕೃಷ್ಣಕಥೆಗಳೊಡನೆ, ಇನ್ನು ಕೆಲವೊಮ್ಮೆ ವಿಷ್ಣುಕಥೆ ಮತ್ತು ಇತರ ಕಥೆಗಳೊಡನೆ ಹೊಂದಿಕೊಂಡು ಬರುತ್ತವೆ. ಈ ಎರಡು ಗುಂಪಿನ ಕೃತಿಗಳೇ ಕನ್ನಡದಲ್ಲಿ ವೈಷ್ಣವ ಸಾಹಿತ್ಯವನ್ನು ಹೆಚ್ಚಾಗಿ ಬೆಳಸಿರತಕ್ಕವು. ಕೃಷ್ಣಕಥೆಯ ಸಾಹಿತ್ಯ ರುದ್ರಭಟ್ಟ (ಸು. ೧೧೮೦), ಕನಕದಾಸ (ಸು. ೧೫೫೦), ಕೃಷ್ಣಕವಿ (ಸು. ೧೭೦೦) ಮೊದಲಾದವರಿಂದ ಬೆಳೆದಿದೆ. ವಿಜಯ ಪರಿಣಯಾದಿ ಕಥಾಪ್ರಸಂಗಗಳು ಸಾಮಾನ್ಯವಾಗಿ ಚಿಕ್ಕ ಪ್ರಮಾಣದಲ್ಲಿರುವುದರಿಂದ ಹೆಚ್ಚು ಜನಪ್ರಿಯವಾದವಾಗಿವೆ. ವಿಷ್ಣು ಕೃಷ್ಣ ಮೊದಲಾದವರು ಅಸುರರೊಡನೆ ಕಾದಾಡಿದ ವಿಜಯ ಪ್ರಸಂಗಗಳು ಮತ್ತು ಅವರ ವಿವಾಹ ಪ್ರಸಂಗಗಳು ಇಲ್ಲಿ ವರ್ಣಿತವಾಗಿರುತ್ತವೆ. ಚೌಂಡರಸ, ಶೃಂಗಾರಮ್ಮ (ಸು. ೧೬೮೫), ಚೆಲುವಾಂಬೆ (ಸು. ೧೭೨೫) ಮುಮ್ಮಡಿ ಕೃಷ್ಣರಾಜರೂ ೧೯ನೆಯ ಶತಮಾನದ ಉತ್ತರಾರ್ಧದ ನಾಟಕಕಾರರೂ ವಿಶೇಷವಾಗಿ ಈ ಸಾಹಿತ್ಯವನ್ನು ಬೆಳಸಿದವರು. ನಾಲ್ಕನೆಯ ಗುಂಪಿನವಾದ ಭಕ್ತಶ್ರೇಷ್ಠರ ಕಥೆಗಳನ್ನು ವೈಷ್ಣವ ಮತ್ತು ಇತರ ಪುರಾಣಗಳಿಂದ ಆರಿಸಿಕೊಂಡಿರುವುದು ಕಾಣುತ್ತದೆ. ಇವುಗಳಲ್ಲಿ ಹಲವರ ಕಥೆಗಳು ಒಂದಕ್ಕಿಂತ ಹೆಚ್ಚು ಬಾರಿ ಕೃತಿರೂಪದಲ್ಲಿ ಬಂದಿವೆ. ಇವು ಜನರ ದೈವಭಕ್ತಿ, ಧರ್ಮಶ್ರದ್ಧೆ ನೀತಿಪ್ರವಣತೆಗಳನ್ನು ಎತ್ತಿತೋರಿಸುತ್ತವೆ. ಅಕ್ರೂರ, ಪ್ರಹ್ಲಾದ, ರುಕ್ಮಾಂಗದ, ಸುದಾಮ, ಕುಚೇಲ, ಧ್ರುವ, ಅಜಾಮಿಳ, ಅಂಬರೀಷ, ಇಂದ್ರದ್ಯುಮ್ನ—ಈ ಮೊದಲಾದವರ ಕಥೆಗಳು ಇಲ್ಲಿ ಬಂದಿರುತ್ತವೆ. ಇವುಗಳಲ್ಲಿ ಅಕ್ರೂರ ಪ್ರಹ್ಲಾದ ಸುದಾಮ ಕುಚೇಲ ಅಂಬರೀಷ ಅಜಾಮಿಳ ಇಂದ್ರದ್ಯುಮ್ನ ಇವರ ಕಥೆಗಳಿಗೆ ಮುಖ್ಯವಾದ ಆಕರ ಭಾಗವತ. ರುಕ್ಮಾಂಗದನ ಕಥೆ ನಾರದೀಯ ಪುರಾಣೋಕ್ತವಾದುದು. ಧ್ರುವನ ಕಥೆ ವಿಷ್ಣುಪುರಾಣ ಭಾಗವತಾದಿಗಳಲ್ಲಿ ಬರುತ್ತದೆ. ಇನ್ನು ಕೊನೆಯ ಐದನೆಯ ಗುಂಪಿನ ಕೃತಿಗಳು ಕ್ಷೇತ್ರ ಮತ್ತು ತೀರ್ಥಮಾಹಾತ್ಮ್ಯಗಳನ್ನು ಕುರಿತವು. ಮೈಸೂರರಸರ ಕಾಲ

ದಲ್ಲಿ, ಅದರಲ್ಲಿಯೂ ಚಿಕ್ಕದೇವರಾಜರ ಕಾಲದಲ್ಲಿ, ಅಹಮಹಮಿಕೆಯಿಂದ ರಚಿತವಾದವು ಇವು. ಈ ಶ್ರೇಣಿಯ ಮೊದಲ ಕೃತಿ ಪ್ರಾಯಃ ರಂಗಾಚಾರ್ಯನೆಂಬ (ಸು. ೧೫೭೦) ಕವಿಯ ಬ್ರಹ್ಮಾಂಡ ಪುರಾಣಾಂತರ್ಗತ 'ಶ್ರೀರಂಗಮಾಹಾತ್ಮ್ಯ' ಇರಬೇಕೆಂದು ತೋರುತ್ತದೆ. ಅದೇ ಪುರಾಣದೊಳಗಿನವು ಹಸ್ತಿಗಿರಿ, ವೆಂಕಟಗಿರಿ ಮತ್ತು ಪಶ್ಚಿಮರಂಗ ಮಾಹಾತ್ಮ್ಯಗಳು. 'ಕಮಲಾಚಲ ಮಾಹಾತ್ಮ್ಯ'ವು ಭವಿಷ್ಯೋತ್ತರ ಪುರಾಣಕ್ಕೆ ಸೇರಿದ್ದು; 'ಯದುಗಿರಿ ಮಾಹಾತ್ಮ್ಯ'ವು ನಾರದೀಯ ಪುರಾಣಕ್ಕೂ 'ತುಲಾಕಾವೇರಿ ಮಾಹಾತ್ಮ್ಯ'ವು ಆಗ್ನೇಯ ಪುರಾಣಕ್ಕೂ ಸೇರಿದವಾಗಿವೆ.

## ಕಾಲ್ಪನಿಕ ಕಥಾಕಾವ್ಯಗಳು

ರಾಮಾಯಣ ಭಾರತಗಳಿಂದಲೂ ವಿವಿಧ ಪುರಾಣಗಳಿಂದಲೂ ಪ್ರಯೋಜನವನ್ನು ಪಡೆದು ಕನ್ನಡ ಸಾಹಿತ್ಯದ ಸಂಪತ್ತನ್ನು ಬೆಳಸಿದ ಕವಿಗಳು ಕಾಲ್ಪನಿಕ ಕಥಾಕೋಶಗಳಂತಿರುವ 'ಬೃಹತ್ಕಥೆ' 'ಬೃಹತ್ಕಥಾಮಂಜರಿ' ಮುಂತಾದವುಗಳಿಂದಲೂ ಅವನ್ನು ಮಾತೃಕೆಯಾಗಿಟ್ಟುಕೊಂಡ ಸಂಸ್ಕೃತ ಗದ್ಯಕಾವ್ಯಗಳಿಂದಲೂ ನಾಟಕಗಳಿಂದಲೂ ಸಾಕಷ್ಟು ಪ್ರಯೋಜನವನ್ನು ಪಡೆದು ಕನ್ನಡದ ಸಾಹಿತ್ಯ ಹೊಸದೊಂದು ದಿಕ್ಕಿನಲ್ಲಿ ಹಬ್ಬಿ ಬೆಳೆಯುವ ಹಾಗೆ ಕೂಡ ಮಾಡಿದ್ದಾರೆ. ಇಂತಹ ಕಾಲ್ಪನಿಕ ಕಥಾಕಾವ್ಯಗಳು ಸಂಖ್ಯೆಯಲ್ಲಿ ಕೆಲವೇ ಆದರೂ ಅವನ್ನು ರಚಿಸಿರುವ ಕವಿಗಳ ಪ್ರತಿಭೆ ಪಾಂಡಿತ್ಯಗಳ ಬಲದಿಂದಾಗಿ, ಒಂದೆರಡಾದರೂ ಉತ್ತಮ ಸಾಹಿತ್ಯದ ಶ್ರೇಣಿಯಲ್ಲಿ ನಿಲ್ಲತಕ್ಕವಾಗಿವೆ. ಪ್ರಾಯಃ ಗುಣವರ್ಮ (ಸು. ೯೦೦) 'ಶೂದ್ರಕ'ವೆಂಬ ತನ್ನ ಕೃತಿಯ ಮೂಲಕ ಹುಟ್ಟುಹಾಕಿದ ಸಂಪ್ರದಾಯವನ್ನು ನಾಗವರ್ಮ (ಸು. ೯೯೦), ನೇಮಿಚಂದ್ರ (ಸು. ೧೧೭೦), ದೇವಕವಿ (ಸು. ೧೨೦೦), ಚೌಂಡರಸ (ಸು. ೧೩೦೦), ಯಾದವ (ಸು. ೧೮೦೦) ಮುಂತಾದವರು ಮುಂದುವರಿಸಿದರು. ರಾಮಾಯಣ ಭಾರತಗಳಂತೆ, ಭಾಗವತಾದಿ ಪುರಾಣಗಳಂತೆ ಗುಣಾಢ್ಯನ ಪೈಶಾಚೀಭಾಷೆಯ 'ಬೃಹತ್ಕಥೆ'ಯೂ ಕನ್ನಡ ಸಾಹಿತ್ಯದ ಪ್ರಣಯರಮ್ಯ, ನೈತಿಕ ಮತ್ತು ಮನೋರಂಜಕ ಕಥೆಗಳ ರಚನೆಯನ್ನು ಪರೋಕ್ಷವಾಗಿಯಾದರೂ ಪ್ರೇರಿಸಿದ ಒಂದು ಅಕ್ಷಯ ಭಾಂಡಾಗಾರವಾಗಿದೆ. ಹೀಗೆಯೇ ಜೈನ ಮಹಾರಾಷ್ಟ್ರೀ ಮತ್ತು ಅಪಭ್ರಂಶ ಭಾಷೆಗಳಲ್ಲಿ ರಚಿತವಾಗಿರುವ ಕಥಾ ಸಾಹಿತ್ಯವೂ ಟೀಕೆ ವ್ಯಾಖ್ಯಾನಗಳೂ ಕನ್ನಡದಲ್ಲಿ ಕಾಲ್ಪನಿಕ ಕಥಾಸಾಹಿತ್ಯ ಬೆಳೆಯಲು ಪ್ರಚೋದನೆ ನೀಡಿರುವಂತೆ ತೋರುತ್ತದೆ. ಇಂಥ ಪ್ರಯತ್ನಗಳಲ್ಲಿ ಪ್ರಾಕೃತ ಸಾಹಿತ್ಯದ ಪ್ರಭಾವ ಕೆಲವೊಮ್ಮೆ ನೇರವಾಗಿ, ಇನ್ನು ಕೆಲವೊಮ್ಮೆ ಸಂಸ್ಕೃತದ ಮೂಲಕ ಬಳಸಿಕೊಂಡು ಕನ್ನಡದ ಮೇಲೆ ಆಗಿದೆ. ಈ ತೆರನ ಸಾಹಿತ್ಯ ಸಾಮಾನ್ಯವಾಗಿ ಯಾವುದೇ ನಿರ್ದಿಷ್ಟ ಮತಧರ್ಮದ ಕಟ್ಟುಕಟ್ಟಳೆಗಳಿಗೆ ಒಳಗಾಗದೆ ಸರ್ವಜನಾದರಣೀಯವಾದ್ದು ಗಮನಾರ್ಹವಾಗಿದೆ. ಕಥೆಯನ್ನು ನಿಮಿತ್ತಮಾಡಿಕೊಂಡು, ತಮಗೆ ಇಷ್ಟವಾದ ರಸ ವರ್ಣನೆ ಪಾತ್ರಸಂಕಲ್ಪನೆಗಳಲ್ಲಿ ತಮ್ಮ ಪ್ರತಿಭೆ ಪಾಂಡಿತ್ಯಗಳ ಜಾಲವನ್ನು ಬೀಸಿ

ರುವ ಕವಿಗಳು ಕೆಲವೊಮ್ಮೆ ಅಪ್ರಯತ್ನವಾಗಿ ತತ್ಕಾಲೀನ ಸಾಮಾಜಿಕ ಸಾಂಸ್ಕೃತಿಕ ಸಂಗತಿಗಳ ಮಿಂಚಿನೆಳೆಗಳನ್ನು ನೆಯ್ದಿರುವುದರಿಂದ ನಮ್ಮ ಮೆಚ್ಚುಗೆಯನ್ನು ಗಳಿಸುತ್ತಾರೆ. ಹೆಚ್ಚಿನ ಮಟ್ಟಿಗೆ ಕ್ಷೇಮೇಂದ್ರ, ಸುಬಂಧು, ಬಾಣ ಇವರಿಗೆ ನಮ್ಮ ಕವಿಗಳು ಋಣಿಗಳಾಗಿದ್ದಾರೆ. ಅವರ ಕಥಾವಸ್ತು ಕಥನರೀತಿಗಳನ್ನು ಅನುಕರಣ ಮಾಡಿದ್ದಾರೆ. ಅನುಕರಣ ಮಾಡಿಯೂ ವಸ್ತುವಿನ್ಯಾಸ, ವರ್ಣನೆ ಕಲ್ಪನೆಗಳಲ್ಲಿ ಸ್ವೋಪಜ್ಞತೆಯನ್ನು ಮೆರೆದಿದ್ದಾರೆ. ಸಂಸ್ಕೃತದ ಆ ಬಗೆಯ ನಾಟಕಗಳ ರುಚಿವಿಶೇಷವನ್ನು ಪ್ರತಿಬಿಂಬಿಸಿರುವುದು ಕೂಡ ಅಲ್ಲಲ್ಲಿ ಕಾಣುತ್ತದೆ.

ಸುಮಾರು ೧೬ನೆಯ ಶತಮಾನದಿಂದ ಈಚೆಗೆ ಕೆಲವು ಲಘುಪ್ರಮಾಣದ ಕಾಲ್ಪನಿಕ ಕಥಾಕಾವ್ಯಗಳು ರಚಿತವಾಗಿವೆ. ಇವುಗಳ ಆಕರ ಸರಿಯಾಗಿ ತಿಳಿದಿಲ್ಲ. ಇವುಗಳಲ್ಲಿ ಪೌರಾಣಿಕತೆ ಜನಶ್ರುತಿತ್ವದ ಜತೆಗೆ ಸ್ವತಂತ್ರ ಕಲ್ಪಕತೆಯೂ ಸೇರಿರುತ್ತದೆ. ಮುಮ್ಮಡಿ ಕೃಷ್ಣರಾಜರ ಸಾಹಿತ್ಯಯುಗದಲ್ಲಿ ರಚಿತವಾದ 'ಕಲಾವತೀ ಪರಿಣಯ', 'ಸೌಗಂಧಿಕಾ ಪರಿಣಯ' ಮತ್ತು 'ವತ್ಸರಾಜನ ಕಥೆ' ಇಂಥವುಗಳಲ್ಲಿ ಇದನ್ನು ಗಮನಿಸಬಹುದು.

## ಟೀಕೆ ವ್ಯಾಖ್ಯಾನಗಳು

ಕನ್ನಡ ಸಾಹಿತ್ಯದಲ್ಲಿ ಟೀಕೆ ವ್ಯಾಖ್ಯಾನಗಳ ಗ್ರಂಥಸಮುದಾಯವು ಗಮನಾರ್ಹವಾದ ಪ್ರಮಾಣದಲ್ಲಿಯೇ ಇರುವುದು ಕಂಡುಬಂದಿದೆ. ಈ ಗ್ರಂಥಸಮುದಾಯವನ್ನು ಸಂಸ್ಕೃತ ಪ್ರಾಕೃತ ಭಾಷಾಗ್ರಂಥಗಳಿಗೆ ರಚಿತವಾದ ಟೀಕೆ ವ್ಯಾಖ್ಯಾನಗಳು ಮತ್ತು ಕನ್ನಡ ಭಾಷೆಯ ಪ್ರಾಚೀನ ಗ್ರಂಥಗಳಿಗೆ ಈಚಿನ ಕಾಲದಲ್ಲಿ ರಚಿತವಾದ ಟೀಕೆ ವ್ಯಾಖ್ಯಾನಗಳು ಎಂದು ಎರಡಾಗಿ ವಿಭಜಿಸಬಹುದು ಪ್ರಸ್ತುತ ಸಮೀಕ್ಷೆ ಮೊದಲನೆಯ ಗುಂಪಿಗೆ ಸೀಮಿತವಾಗಿದೆ. ಇದರಿಂದ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಆ ಭಾಷಾಸಾಹಿತ್ಯಗಳು ಬೀರಿರುವ ಪ್ರಭಾವ, ನೀಡಿರುವ ಪುಷ್ಟಿ ಎಷ್ಟು ಎಂಬುದು ನಮಗೆ ಗೊತ್ತಾಗುತ್ತದೆ.

ಕನ್ನಡ ಸಾಹಿತ್ಯದೊಡನೆ ಸಂಸ್ಕೃತ ಪ್ರಾಕೃತ ಭಾಷಾಸಾಹಿತ್ಯಗಳ ಸಂಪರ್ಕವಾದ ಕಾಲದಿಂದ ಈಚೆಗೆ ಕನ್ನಡದಲ್ಲಿ ಟೀಕೆ ವ್ಯಾಖ್ಯಾನಗಳ ರಚನೆ ನಡೆದುಕೊಂಡು ಬಂದಿರುವಂತೆ ತೋರುತ್ತದೆ. ತುಂಬಲೂರಾಚಾರ್ಯ (ಸು. ೬೫೦) ಕೃತವಾದ 'ಚೂಡಾಮಣಿ' ವ್ಯಾಖ್ಯೆಯೂ ಶ್ಯಾಮಕುಂಡಾಚಾರ್ಯ (ಸು. ೬೫೦) ಕೃತವಾದ ಪ್ರಾಕೃತ ಜೈನಾಗಮ ಗ್ರಂಥಗಳ 'ಪದ್ಧತಿ'ಟೀಕೆಯೂ ಬಹು ಪ್ರಾಚೀನವಾದವು. ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಪರಿಶ್ರಮ ಪಡೆದಿರುತ್ತಿದ್ದ ಜೈನಾಚಾರ್ಯರು ಕನ್ನಡ ಭಾಷೆ ಸಾಹಿತ್ಯಗಳ ವಿಷಯದಲ್ಲಿಯೂ ವಿಶೇಷವಾಗಿ ಪರಿಶ್ರಮ ಪಡೆದವರಾಗಿದ್ದರೆಂದೂ ಆಸಕ್ತಿಯುಳ್ಳವರಾಗಿದ್ದರೆಂದೂ ತಿಳಿಯಲು ಈಗ ತಿಳಿದಿರುವ ಆಧಾರಗಳೆ ಸಾಕಾಗುತ್ತವೆ. ಅಂತೂ ಶಾಸ್ತ್ರ ಸಿದ್ಧಾಂತ ವ್ಯಾಖ್ಯಾನಾದಿ ಗ್ರಂಥಗಳ ರಚನೆಗೆ ಅನುವಾಗುವಂತೆ ಕನ್ನಡಭಾಷೆ ಕ್ರಿ.ಶ. ೬-೭ನೆಯ ಶತಮಾನಗಳಷ್ಟು ಹಿಂದೆಯೇ ಸತ್ತ್ವಶಾಲಿಯಾಗಿ ಬೆಳೆದಿತ್ತೆಂದು ಭಾವಿಸಬಹುದು.

ಪ್ರಾಯಃ ಸಾಹಿತ್ಯೋದಯ ಕಾಲದಿಂದ ಆಧುನಿಕ ಕಾಲದವರೆಗೆ ಜೈನರೂ ಸು. ೧೪ನೆಯ ಶತಮಾನದಿಂದ ವೀರಶೈವರೂ ೧೫-೧೬ನೆಯ ಶತಮಾನಗಳಿಂದ ಬ್ರಾಹ್ಮಣರೂ ಇತರರೂ ಅವರವರ ಮತಶ್ರದ್ಧೆಗೆ ಆಸಕ್ತಿಗೆ ಒಪ್ಪುವ ಸಂಸ್ಕೃತದ ಪುರಾಣೇತಿಹಾಸ ಸಿದ್ಧಾಂತಾದಿ ಗ್ರಂಥಗಳಿಗೆ ವೃತ್ತಿವ್ಯಾಖ್ಯಾನಗಳನ್ನು ರಚಿಸುತ್ತ ಬಂದಿದ್ದಾರೆ. ಪ್ರಾಕೃತ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಪ್ರಾಯಃ ಜೈನಪಂಡಿತರು ಮಾತ್ರ ಹಿಂದೆ ರಚಿಸಿದರು. ಜೈನಧರ್ಮದ ಪ್ರಮಾಣಗ್ರಂಥಗಳು ಪ್ರಾಕೃತ ಭಾಷೆಗಳಲ್ಲಿದ್ದುದೇ ಇದಕ್ಕೆ ಕಾರಣವೆನ್ನಬಹುದು.

ವ್ಯಾಖ್ಯಾನಕರ್ತೃಗಳು ಸಂಸ್ಕೃತ ಕನ್ನಡ ಭಾಷೆಗಳಲ್ಲಿ ವಿದ್ವಾಂಸರೂ ಶಾಸ್ತ್ರಜ್ಞರೂ ಆಗಿರುತ್ತಿದ್ದರು. ಸಾಮಾನ್ಯವಾಗಿ ಪ್ರಾಚೀನರು ಯತಿಗಳೋ ಮಠಾಧಿಪತಿಗಳೋ ಆದ ಗಣ್ಯರೇ ಆಗಿದ್ದರು. ಅವರ ಬಹುಶ್ರುತತೆಯನ್ನು ಅವರೇ ಹೇಳಿಕೊಂಡಿರುವುದುಂಟು. ಅನ್ಯತ್ರ ಸ್ತುತಿಸಿರುವುದೂ ಉಂಟು. 'ತತ್ತ್ವಾರ್ಥ ಸೂತ್ರ'ದ ವೃತ್ತಿಕಾರ ದಿವಾಕರಣಂದಿಯನ್ನು (ಸು. ೧೦೬೨) ಶಾಸನದಲ್ಲಿ 'ಉಭಯಸಿದ್ಧಾಂತರತ್ನಾಕರ' ಎಂದು ಕರೆದಿದೆ. 'ಪ್ರತಿಷ್ಠಾಕಲ್ಪ'ದ ಟಿಪ್ಪಣ ಕರ್ತೃ ವಾದಿಕುಮುದಚಂದ್ರನು (ಸು. ೧೧೦೦) ತನ್ನನ್ನು 'ಚತುರ್ವಿಧಪಾಂಡಿತ್ಯ ಚಕ್ರವರ್ತಿ' ಎಂದೂ ಶುಭಚಂದ್ರನೆಂಬ (ಸು. ೧೨೦೦) ಇನ್ನೊಬ್ಬ ವ್ಯಾಖ್ಯಾಕಾರನು ತನ್ನನ್ನು 'ಷಡ್ಭಾಷಾ ಕವಿಚಕ್ರವರ್ತಿ' ಎಂದೂ ವಿಶೇಷಿಸಿಕೊಂಡಿದ್ದಾರೆ. ಮಾಘಣಂದಿ (ಸು. ೧೨೫೩) ತನ್ನನ್ನು 'ಚತುರನುಯೋಗ ಕುಶಲ'ನೆಂದೂ 'ಸಿದ್ಧಾಂತವರ್ಧನ ಸುಧಾಕರ'ನೆಂದೂ ಕರೆದುಕೊಂಡಿದ್ದಾನೆ. ಗುರುಸಂಜನೆಂಬ (ಸು. ೧೫೦೦) ವೀರಶೈವ ಟೀಕಾಕಾರನು 'ಸ್ಮೃತಿಪುರಾಣ ಶಾಸ್ತ್ರಾರ್ಥದರ್ಶನ ನಿರಂಜನಸಿದ್ಧ'—ಎಂದು ತನ್ನನ್ನು ಕರೆದುಕೊಂಡಿದ್ದಾನೆ. ಬಸವಾರಾಧ್ಯನೆಂಬವನು (ಸು. ೧೭೦೦) 'ಶ್ರೀಮದ್ವೇದವೇದಾಂತಾಗಮ ಪುರಾಣ ಸ್ಮೃತೀತಿಹಾಸ ಪ್ರತಿಪಾದಿತ ಶ್ರೀ ವೀರಶೈವಮಾರ್ಗಸ್ಥಾಪನಾಚಾರ್ಯ'—ಎಂದು ಹೇಳಿಕೊಂಡಿದ್ದಾನೆ. ಬ್ರಾಹ್ಮಣ ವ್ಯಾಖ್ಯಾನಕಾರರಲ್ಲಿ ಅಮರಕೋಶದ ಟೀಕಾಕರ್ತೃ ಕವಿ ವಿಟ್ಠಲನನ್ನು (ಸು. ೧೬೦೦) ಅಮರಸಿಂಹನ ಮತ್ತು ಸರಸ್ವತಿಯ ಅವರಾವತಾರವೆಂದು ಸ್ತುತಿಸಿದೆ. ಚಿಕ್ಕದೇವರಾಜನು 'ಸಾಹಿತ್ಯವಿದ್ಯಾನಿಕಷಪ್ರಸ್ತರಂ' ಎಂಬುದಾಗಿಯೂ ಆತನ ಆಶ್ರಯದ ಕವಿಶ್ರೇಷ್ಠ ಚಿಕುಪಾಧ್ಯಾಯನು 'ಅಧೀತಸಕಲವೇದಶಾಸ್ತ್ರ ಪುರಾಣ ಮುಖ್ಯ ನಾನಾವಿಧ ವಿದ್ಯನು'—ಎಂಬುದಾಗಿಯೂ ಕೀರ್ತಿತರು. ಮುಮ್ಮಡಿ ಕೃಷ್ಣರಾಜನು 'ಉಭಯ ಕವಿತಾಲಕ್ಷಣ ವಿಚಕ್ಷಣ' ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ. ಇವನ್ನು ಗಮನಿಸಿದರೆ ಈಯೆಲ್ಲ ವ್ಯಾಖ್ಯಾನಕಾರರೂ ಭಾಷೆಸಾಹಿತ್ಯಗಳಲ್ಲಿಯೂ ಸಿದ್ಧಾಂತವಿಷಯಗಳಲ್ಲಿಯೂ ತಜ್ಞರಾಗಿದ್ದರೆಂದು ತಿಳಿಯುವುದು.

ವ್ಯಾಖ್ಯಾನಕ್ಷೇತ್ರದಲ್ಲಿ ಪ್ರಾಯಃ ಮೊದಲ ಬೇಸಾಯಗಾರರಾದ ಜೈನ ಪಂಡಿತಕವಿಗಳು ಆಗಮಗಳು ಸಿದ್ಧಾಂತಗ್ರಂಥಗಳು ತಾತ್ತ್ವಿಕಗ್ರಂಥಗಳು ಆಚರಣಗ್ರಂಥಗಳು ವ್ಯಕ್ತಿಚರಿತ್ರೆಗಳು ನಿಘಂಟು—ಇವುಗಳಿಗೆ ಟೀಕೆವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇವೆಲ್ಲ

ಬಲುಮಟ್ಟಿಗೆ ಗದ್ಯರೂಪದಲ್ಲಿವೆ. ಸಂಸ್ಕೃತದಲ್ಲಿಯೋ ಪ್ರಾಕೃತದಲ್ಲಿಯೋ ಇರುವ ಮೂಲಗ್ರಂಥಗಳ ಸೂತ್ರಗಳಿಗೆ, ಸೂತ್ರಪ್ರಾಯವಾದ ವಾಕ್ಯಗಳಿಗೆ ಅರ್ಥವಿವರಣೆಯನ್ನು ಇಲ್ಲಿ ಮಾಡಿರುತ್ತದೆ. ವಿರಳವಾಗಿ ಅಭಿಪ್ರಾಯವಿಶದತೆಗೆ ಕನ್ನಡ ಜೈನಪುರಾಣಗಳಿಂದ ಆಧಾರಗಳನ್ನು ಕೊಟ್ಟಿರುವುದು ಕಾಣುತ್ತದೆ. ಸಂಸ್ಕೃತದ ಶಾಸ್ತ್ರಗ್ರಂಥಗಳಿಗೆ ಸರಿಸಮ ನಾದ ಶಾಸ್ತ್ರಮರ್ಯಾದೆಯನ್ನು ಕನ್ನಡದ ಮಹಾಕವಿಗಳ ಪುರಾಣಗ್ರಂಥಗಳಿಗೂ ಕೊಟ್ಟಿರುವುದು ಮೆಚ್ಚತಕ್ಕದ್ದಾಗಿದೆ. ಸುಮಾರು ೧೫ನೆಯ ಶತಮಾನದಲ್ಲಿ ವಚನ ಸಾಹಿತ್ಯದ ವಿಷಯದಲ್ಲಿಯೂ ಅಂದಿನ ವೀರಶೈವ ವಿದ್ವಾಂಸರೂ ಟೀಕಾಕರ್ತೃಗಳೂ ಹೀಗೆಯೇ ಗೌರವದ ಸ್ಥಾನವನ್ನು ಕೊಟ್ಟದ್ದು ಕಂಡುಬರುತ್ತದೆ.

ಜೈನಧರ್ಮದ ತಿಳಿವಳಿಕೆಯನ್ನು ಜನಸಾಮಾನ್ಯರಲ್ಲಿ ದೇಶೀಯಭಾಷೆಯ ಮೂಲಕವೇ ಪ್ರಸಾರಮಾಡುವುದು ಅಗತ್ಯವೆಂದು ಅರಿತುಕೊಂಡ ಜೈನಾಚಾರ್ಯರೂ ಕವಿಗಳೂ ಸ್ವತಂತ್ರ ಕೃತಿರಚನೆಯ ಜತೆಗೆ ಹೀಗೆ ವ್ಯಾಖ್ಯಾನರಚನೆಯನ್ನೂ ಕೈಕೊಂಡದ್ದು ಸಹಜವಾಗಿಯೇ ಇದೆ. ಅವರು ಈ ಆಶಯವನ್ನು ತಮ್ಮ ಗ್ರಂಥಗಳಲ್ಲಿಯೇ ಕೆಲವೊಮ್ಮೆ ಸ್ಪಷ್ಟವಾಗಿ ತಿಳಿಸಿರುವುದುಂಟು. ದಿವಾಕರಣಂದಿ 'ತತ್ತ್ವಾರ್ಥಸೂತ್ರವೃತ್ತಿ'ಯನ್ನು ಬರೆದ ಉದ್ದೇಶವು ನಗರದ ೫೭ನೆಯ ಶಾಸನದಲ್ಲಿ ಹೀಗೆ ಉಲ್ಲೇಖವಾಗಿದೆ: "ಜಡರುಂ ಬಾಳಕರುಂ ಬುಧಪ್ರಕರಮುಂ ತತ್ತ್ವಾರ್ಥಮಂ ಕಲ್ತು ಘಂ। ಕಿಡೆ ಸಮ್ಯಕ್ತ್ವಮನೈದಿ ಸಪ್ತ ಪರಮಸ್ಥಾನಾಪ್ತಿಯಂ ನಿಶ್ಚಯಂ। ಪಡೆಯಲ್ ಮಾಡಿದರ್...."; ಮಾಘಣಂದಿಯ 'ಪದಾರ್ಥಸಾರ ಟೀಕೆ'ಯನ್ನು "ಕರ್ಣಾಟ ದೇಶದ ಜನಂಗಳಜೀವಂತಾಗಿ ಜಡಮತಿಗಳಂ ಕುಱಿತು ವ್ಯಕ್ತಾರ್ಥಮಾಗಿ" ಬರೆದ ಹಾಗೆ ಹೇಳಿಕೊಂಡಿದ್ದಾನೆ. ಇಂತಹ ವ್ಯಾಖ್ಯಾನ ಗಳು ಕರ್ತೃವಿನ ಸ್ವಪ್ರೇರಣೆಯಂತೆ ರಚಿತವಾಗುವುದು ಕೆಲವೊಮ್ಮೆಯಾದರೆ, ಇನ್ನು ಕೆಲವೊಮ್ಮೆ ಶಿಷ್ಯರ ಪ್ರತಿಬೋಧನಾರ್ಥವಾಗಿಯೂ ಅನ್ಯಪ್ರೇರಣೆಯಂತೆಯೂ ರಚಿತ ವಾಗಿರುತ್ತವೆ. ಬಾಲಚಂದ್ರನ (ಸು. ೧೧೭೦) 'ತತ್ತ್ವರತ್ನ ಪ್ರದೀಪಿಕೆ' "ಕುಮುದ ಚಂದ್ರಭಟ್ಟಾರಕ ಪ್ರತಿಬೋಧನಾರ್ಥ"ವಾಗಿ ಸಿದ್ಧವಾಯಿತು. ಪ್ರಭಾಚಂದ್ರನು (ಸು. ೧೩೦೦) ಮಲಧಾರಿ ಲಲಿತಕೀರ್ತಿಯ ಶಿಷ್ಯ ಕಲ್ಯಾಣಕೀರ್ತಿಗೋಸ್ಕರ 'ಚಾರಿತ್ರ ಸಾರ'ದ ಟೀಕೆಯನ್ನು ಬರೆದನು. ಕೇಶವವರ್ಣಿ (ಕ್ರಿ.ಶ. ೧೩೫೯) 'ಗೊಮ್ಮಟ ಸಾರ'ದ ಕರ್ಣಾಟಕ ವೃತ್ತಿಯನ್ನು ಧರ್ಮಭೂಷಣ ಭಟ್ಟಾರಕನ ಆಜ್ಞೆಯಂತೆ ರಚಿಸಿದನು.

ವೀರಶೈವ ವ್ಯಾಖ್ಯಾನಗಳು ಸ್ತೋತ್ರಗಳು, ವೇದ-ವೇದಭಾಷ್ಯಗಳು, ಆಗಮಗಳು, ಪುರಾಣಾಗಮಾದಿಗಳ ಸೂಕ್ತಿಗಳು, ತಾತ್ತ್ವಿಕ ಮತ್ತು ಸಿದ್ಧಾಂತ ಗ್ರಂಥಗಳು, ಕಾವ್ಯಗಳು, ವ್ಯಾಕರಣ—ಈ ಮೊದಲಾದವುಗಳನ್ನು ಆಶ್ರಯಿಸಿ ಹುಟ್ಟಿವೆ. ವೀರಶೈವ ಮತದ ಪ್ರಭಾವವನ್ನೂ ಪ್ರಸಾರವನ್ನೂ ಬೆಳಸುವುದು, ಸಿದ್ಧಾಂತಗ್ರಂಥಗಳನ್ನು ಜನ ಸಾಮಾನ್ಯರಿಗೆ ಸುಬೋಧವನ್ನಾಗಿ ಮಾಡುವುದು—ಇವೇ ಈ ವ್ಯಾಖ್ಯಾನಕಾರರ ಉದ್ದೇಶವಾಗಿರುವಂತೆ ತೋರುತ್ತದೆ. ಇಲ್ಲಿಯೂ ರಚನೆಗೆ ಹೇತುವಾಗಿ ಪ್ರೇರಣೆ ಪ್ರತಿಬೋಧನೆಗಳುಂಟು. ಗುರುನಂಜನು ತಾನು ಯಜುರ್ವೇದ ಭಾಷ್ಯದ ಟೀಕೆಯನ್ನು

ಸತಾವರ ಶಾಂತಯೋಗಿಯ ಇಷ್ಟಾನುಸಾರವಾಗಿ ಬರೆದಂತೆ ಹೇಳಿಕೊಂಡಿದ್ದಾನೆ. ಸೋಸಲೆ ರೇವಣಾಚಾರ್ಯನು (ಸು. ೧೬೭೩) ಬರೆದ 'ಮಹಿಮ್ನಸ್ತವಟೀಕೆ' ಅರಸನೊಬ್ಬನ ಸಂತೋಷಾರ್ಥವಾಗಿ ಸೋಮಶೇಖರಯೋಗಿ ಮಾಡಿಸಿದ್ದೆಂದು ತಿಳಿಯುವುದು.

ಬ್ರಾಹ್ಮಣ ಮತ್ತು ಇತರ ವ್ಯಾಖ್ಯಾನಕಾರರ ವಿಷಯಗಳ ವ್ಯಾಪ್ತಿ ವಿಸ್ತಾರವಾದುದು. ರಾಮಾಯಣ ಭಾರತ ಭಾಗವತಗಳು, ಪುರಾಣಗಳು–ಪುರಾಣ ಭಾಗಗಳು, ಆಧ್ಯಾತ್ಮ ಮತ್ತು ಸಿದ್ಧಾಂತಗ್ರಂಥಗಳು, ನೀತಿಗ್ರಂಥಗಳು, ತಾತ್ಪರ್ಯಗ್ರಂಥಗಳು, ಕ್ಷೇತ್ರಮಾಹಾತ್ಮ್ಯಗಳು, ಗೀತಸಾಹಿತ್ಯ, ನಾಟಕಗಳು, ಗಣಿತಾದಿ ಶಾಸ್ತ್ರಗಳು—ಈ ಮೊದಲಾದವುಗಳಿಗೆ ಟೀಕೆವ್ಯಾಖ್ಯಾನಗಳು ಬಂದಿವೆ. ಕಾಲಕ್ರಮದಲ್ಲಿ ಸಂಸ್ಕೃತಭಾಷಾಭ್ಯಾಸವು ಜನಸಾಮಾನ್ಯರಲ್ಲಿ ಕಡಮೆಯಾಗುತ್ತಹೋದುದು, ಸ್ವತಂತ್ರ ಕೃತಿರಚನೆ ಉತ್ತಮ ಫಲಗಳನ್ನು ಕೊಡದೆಹೋದುದು, ಕೃತಿವಸ್ತುಗಳು ಚರ್ವಿತಚರ್ವಣವಾಗುತ್ತ ಹೋದುದು, ಮೈಸೂರರಸರ ಕಾಲದಲ್ಲಿ ವ್ಯಾಖ್ಯಾನಗ್ರಂಥಗಳು ಜನಸಾಮಾನ್ಯರ ಪ್ರಯೋಜನಾರ್ಥವಾಗಿ ಅಹಮಹಮಿಕೆಯಿಂದ ರಚಿತವಾದುದು—ಹೀಗೆ ನಾನಾ ಕಾರಣಗಳು ಈ ವೈವಿಧ್ಯ ಮತ್ತು ವಿಸ್ತಾರಕ್ಕೆ ಕಾರಣವಾಗಿರಬಹುದು. 'ವಕ್ಷ್ಯಾಮಿ ಮಂದಬೋಧಾರ್ಥಂ', 'ಲೋಕೋಪಕಾರಾರ್ಥವಾಗಿ' ಎನ್ನುವ ಮಾತುಗಳು ಈ ತೆರನ ಸಾಹಿತ್ಯರಚನೆಗೆ ಉಂಟಾದ ಪ್ರೇರಣೆಯನ್ನು ಸ್ವಲ್ಪಮಟ್ಟಿಗೆ ಹೇಳುತ್ತವೆ.

## ಲಕ್ಷಣಗ್ರಂಥಗಳು

ಕನ್ನಡ ಸಾಹಿತ್ಯದಲ್ಲಿಯ ಲಕ್ಷಣ ಗ್ರಂಥಗಳನ್ನು ಅಲಂಕಾರ ಗ್ರಂಥಗಳು, ಛಂದೋ ಗ್ರಂಥಗಳು, ವ್ಯಾಕರಣ ಗ್ರಂಥಗಳು ಮತ್ತು ನಿಘಂಟುಗಳು—ಎಂದು ನಾಲ್ಕಾಗಿ ವಿಂಗಡಿಸಬಹುದು. ಕನ್ನಡ ಭಾಷೆಯಲ್ಲಿ ಈಗ ತಿಳಿದಿರುವಂತೆ ೯ನೆಯ ಶತಮಾನದಿಂದಲೂ ಲಕ್ಷಣಗ್ರಂಥಗಳ ರಚನೆ ಅವಿರತವಾಗಿ ಸಾಗುತ್ತ ಬಂದಿದೆ. ಕಾವ್ಯ ಮತ್ತು ಶಾಸ್ತ್ರಗಳ ರಚನೆಯೊಡನೆ ಅವುಗಳ ರಚನಾರಹಸ್ಯವನ್ನು ತಿಳಿಸಿ, ಸೌಕರ್ಯವನ್ನೂ ಸ್ವಾರಸ್ಯವನ್ನೂ ಹೆಚ್ಚಿಸುವ ಲಕ್ಷಣಗ್ರಂಥಗಳ ರಚನೆಯೂ ನಡೆಯತಕ್ಕದ್ದು ಸಹಜವಾಗಿಯೇ ಇದೆ. ಕವಿಕರ್ಮಕ್ಕೆ ಉಪಯುಕ್ತವಾದ ಮಾರ್ಗದರ್ಶನವನ್ನು ಮಾಡಿಸುವ ಇಂತಹ ಲಕ್ಷಣಗ್ರಂಥಗಳ ಸಹಾಯವಿಲ್ಲದೆ ಕವಿಗಳ ಕೃತಿರಚನೆ ಸಮರ್ಪಕವಾಗುವುದಿಲ್ಲವೆಂಬುದನ್ನು ಪ್ರಾಚೀನ ಪಂಡಿತಕವಿಗಳು ಚೆನ್ನಾಗಿ ಮನಗಂಡಿದ್ದರು. ಅದಕ್ಕಾಗಿ ಅವರು ಆಯಾ ಲಕ್ಷಣಶಾಸ್ತ್ರದ ವಿಷಯದಲ್ಲಿ ಗಾಢವಾದ ಅಭ್ಯಾಸವನ್ನು ಮೊದಲು ನಡಸಿ, ಅದರಲ್ಲಿ ವಿಶೇಷವಾದ ವ್ಯುತ್ಪತ್ತಿಯನ್ನು ಸಂಪಾದಿಸಿಕೊಂಡು ಗ್ರಂಥರಚನೆಗೆ ತೊಡಗಿದರು. ಅಭ್ಯಾಸಕ್ಕೆ ಆಕರವಾಗಿರುವ ಸಾಧನಸಂಪತ್ತಿ ವ್ಯಾಪಕವೂ ಸಮರ್ಥವೂ ಆದ ರೀತಿಯಲ್ಲಿ ನಿರ್ಮಾಣವಾಗಿದ್ದುದು ಸಂಸ್ಕೃತ ಸಾಹಿತ್ಯದಲ್ಲಿಯೇ ಎಂಬುವದರಿಂದ, ಕನ್ನಡದ ಲಾಕ್ಷಣಿಕರು ಸಹಜವಾಗಿ ಅಲ್ಲಿ ನಿರ್ಮಾಣವಾಗಿದ್ದ ವಿಪುಲವೂ ವೈವಿಧ್ಯಪೂರ್ಣವೂ ಆದ ಗ್ರಂಥರಾಶಿಯನ್ನೇ ಆಶ್ರಯಿಸಿದರು. ಕನ್ನಡ ಭಾಷೆಯ ಸ್ವಭಾವಾತ್ಮಕ

ಸಾಹಿತ್ಯವೂ ಶಾಸ್ತ್ರಸಾಹಿತ್ಯವೂ ಸಂಸ್ಕೃತ ಸಾಹಿತ್ಯದ ಸಂಪ್ರದಾಯವನ್ನೇ ಹಿಡಿದು ನಡೆಯುತ್ತ ಬಂದಿದ್ದುದರಿಂದ ಕನ್ನಡ ಸಾಹಿತ್ಯದ ಆವಶ್ಯಕತೆಗೆ ಇದು ಅನುಗುಣವಾಗಿಯೇ ಇದ್ದಿತು.

ಕನ್ನಡದಲ್ಲಿಯ ಲಕ್ಷಣಗ್ರಂಥಗಳು ವಿಶೇಷವಾಗಿ ಸಂಸ್ಕೃತದಲ್ಲಿಯ ಲಕ್ಷಣಗ್ರಂಥಗಳ ವಿಷಯವಿವರಗಳನ್ನೂ ರಚನಾವಿಧಾನವನ್ನೂ ಅನುಸರಿಸಿವೆಯೆಂಬುದು ಸುವಿದಿತವಾದ ಸಂಗತಿಯಾಗಿದೆ. ಭಾಷೆ ಪಂಭಾಷೆಗಳಲ್ಲಿ, ಲಕ್ಷಣವಿವೇಚನೆಯಲ್ಲಿ ಸಂಸ್ಕೃತದ ಪ್ರಭಾವ ನಿಚ್ಚಟವಾಗಿ ಕಂಡುಬರುತ್ತದೆ. ಒಳಹೊಕ್ಕು ನೋಡಿದರೆ ಕನ್ನಡದ ಲಕ್ಷಣಗ್ರಂಥಗಳು ಬಹ್ವಂಶಗಳಲ್ಲಿ ಸಂಸ್ಕೃತ ಲಕ್ಷಣಗ್ರಂಥಗಳ ಉಪಜೀವ್ಯಗಳಾಗಿ ಗೋಚರಿಸುವಂತೆ ತೋರುತ್ತದೆ. ಕನ್ನಡ ಲಾಕ್ಷಣಿಕರ ಸ್ವತಂತ್ರವಿಚಾರದ ಫಲವಾಗಿ, ಸಾಹಿತ್ಯದ ಬೆಳೆವಣಿಗೆಯಲ್ಲಿ ಕಾಲಕಾಲಕ್ಕೆ ತಲೆದೋರಿದ ವೈವಿಧ್ಯ ಮತ್ತು ವ್ಯತ್ಯಾಸಗಳ ಫಲವಾಗಿ ಕೆಲಮಟ್ಟಿಗಾದರೂ ಹೊಸ ವಿಚಾರಗಳು ಕಾಣಿಸಿಕೊಂಡಿರುವುದು ಸಾಧ್ಯ. ಅಂತಹ ವಿಚಾರಗಳು ಅಲ್ಪವಾದರೂ ಬೆಲೆಯುಳ್ಳವಾಗಿವೆಯೆಂಬುದು ನಿಶ್ಚಯ.

ಕನ್ನಡದ ಲಕ್ಷಣಗ್ರಂಥಗಳು ಸಂಸ್ಕೃತದ ಪ್ರಭಾವವನ್ನೂ ಪ್ರಾಬಲ್ಯವನ್ನೂ ಎಷ್ಟರಮಟ್ಟಿಗೆ ಪ್ರಕಟಿಸಿವೆ, ಪ್ರಭಾವಲಯದಲ್ಲಿ ಎಷ್ಟರಮಟ್ಟಿಗೆ ಪ್ರವರ್ಧಮಾನಕ್ಕೆ ಬಂದಿವೆ—ಎಂಬುದನ್ನು ಈಯೆರಡು ಅವತರಣಿಕೆಗಳಿಂದ ಕೆಲಮಟ್ಟಿಗೆ ತಿಳಿಯಬಹುದಾಗಿದೆ :

"ಕನ್ನಡ ಲಕ್ಷಣಗ್ರಂಥಗಳಲ್ಲಿ ಉಕ್ತವಾಗಿರುವ ವಿಷಯಗಳ ಎಲ್ಲ ಮೂಲರೇಖೆಗಳೂ ಬಲುಮಟ್ಟಿಗೆ ಎಲ್ಲ ವಿವರಗಳೂ ಸಂಸ್ಕೃತದಿಂದಲೇ ಬಂದವು. ಅಲ್ಲಿ ಕಾಲದಿಂದ ಕಾಲಕ್ಕೆ ತತ್ತ್ವದಲ್ಲೂ ವಿಚಾರದಲ್ಲೂ ಪ್ರತಿಪಾದನೆಯಲ್ಲೂ ಉಂಟಾದ ಪರಿವರ್ತನೆಗಳ ಛಾಯೆ ಒಮ್ಮೆ ಸ್ಫುಟವಾಗಿ ಒಮ್ಮೆ ಅಸ್ಫುಟವಾಗಿ ಕನ್ನಡ ಗ್ರಂಥಗಳಲ್ಲೂ ಸುಳಿಯುತ್ತದೆ. "ಕನ್ನಡದಿ ಪೇಳ್ದುವೆಲ್ಲವು ಮುನ್ನವೆ ಸಕ್ಕದದಲಿರ್ದುದದರಿಂ ಪೆರತೇಂ। ಇನ್ನೊರೆವರಾರುಮದನೇ। ಚೆನ್ನಾಗಿಯೆ ನೋಡೆ ಕನ್ನಡವು ಕನ್ನಡಿಯೇ॥" ಎಂದು ಚಾವಲಿ ರಾಮಸ್ವಾಮಿಶಾಸ್ತ್ರಿಗಳು (೧೮೮೫) ಛಂದಸ್ಸಿನ ವಿಷಯದಲ್ಲಿ ಹೇಳಿರುವುದು, ಅಲ್ಲಿಗಿಂತ ಚೆನ್ನಾಗಿ ಅಲಂಕಾರಶಾಸ್ತ್ರ ವಿಷಯಕ್ಕೆ ಒಪ್ಪುತ್ತದೆ. ಬೆಟ್ಟಕ್ಕೆ ನಿಲುವುಗನ್ನಡಿ ಹಿಡಿದು ತೋರಿಸುವ ಕೆಲಸವನ್ನು ನಮ್ಮವರು ಮಾಡಿದ್ದಾರೆಂದು ಹೇಳಬಹುದು ಸಂಸ್ಕೃತದ ಗ್ರಂಥವಿಸ್ತಾರವನ್ನೂ ವಿಷಯವೈವಿಧ್ಯವನ್ನೂ ನಿರೂಪಣವೈಖರಿಯನ್ನೂ ನೋಡಿದರೆ, ಕನ್ನಡದ ಸಾಧನೆ ಅಲ್ಪವೆನಿಸುವುದು ಸಹಜ. ಆದರೆ ಹೀಗಾಗಲು ಕಾರಣವಿಲ್ಲದಿಲ್ಲ. ನಮ್ಮ ದೇಶದಲ್ಲಿ ಹಿಂದೆ ಎಲ್ಲ ಶಾಸ್ತ್ರಗಳಿಗೂ ಸಂಸ್ಕೃತವೇ ನೆಲೆವೀಡಾಗಿದ್ದ ಕಾರಣ, ಎಲ್ಲ ವಿದ್ವಾಂಸರೂ ಸಂಸ್ಕೃತವನ್ನು ಅರಿತಿರಲೇಬೇಕಾಗಿದ್ದ ಕಾರಣ, ಲಕ್ಷಣಗ್ರಂಥಗಳನ್ನು ಕನ್ನಡದಲ್ಲಿ ಓದಿಕೊಂಡು ವಿಷಯಗ್ರಹಣಮಾಡಬೇಕಾದ ಆವಶ್ಯಕತೆ ವಿದ್ಯಾವಂತರಿಗೆ ಸಾಮಾನ್ಯವಾಗಿ ಇರುತ್ತಿರಲಿಲ್ಲ. ಆದ್ದರಿಂದ ಈ ಬಗೆಯ ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಹುಟ್ಟುವುದು ವಿರಳವಾಯಿತು, ಬಲುಮಟ್ಟಿಗೆ ಅನಪೇಕ್ಷಿತವೂ ಆಯಿತು. ಹೀಗೆ ಉತ್ತೇಜನವೇ ಇಲ್ಲದಿದ್ದರೂ, ಕೆಲವು ಮಂದಿ ಕನ್ನಡ ವಿದ್ವಾಂಸರಿಗಾದರೂ ಸ್ವಭಾಷೆಯ ಈ ಅರಕೆಯನ್ನು

ಪೂರ್ಣಮಾಡಬೇಕೆಂದು ತೀವ್ರಾಸಕ್ತಿ ಹುಟ್ಟಿ, ಕೆಲವು ಒಳ್ಳೆಯ ಲಕ್ಷಣಗ್ರಂಥಗಳು ಕಾಲಕಾಲಕ್ಕೆ ತಲೆದೋರಿದ್ದು ಸಮಾಧಾನದ ವಿಷಯ. ಅರ್ವಾಚೀನವಾದ ಒಂದು ಚಿಕ್ಕ ಪುಸ್ತಕವನ್ನು ಬಿಟ್ಟರೆ, ನಾಟಕ ಲಕ್ಷಣವನ್ನು ಯಾರೊಬ್ಬರೂ ಹೇಳಿಯೇ ಇಲ್ಲ ವೆಂಬುದು ನಿಜ; ಧ್ವನಿಸ್ವರೂಪವನ್ನೂ ರಸಸ್ವರೂಪವನ್ನೂ ತಳಮುಟ್ಟಿ ನಿರೂಪಿಸುವ ಪ್ರಥಮಶ್ರೇಣಿಯ ಗ್ರಂಥಗಳು ಇಲ್ಲವೆಂಬುದು ನಿಜ. ಅದರೂ ಮಿತನಿರೀಕ್ಷೆಯಿಂದ ನಾವು ಹೊರಟರೆ, ಭಾರತೀಯ ಕಾವ್ಯಮೀಮಾಂಸೆಯ ತಕ್ಕಮಟ್ಟಿನ ಪರಿಚಯವನ್ನು ಕನ್ನಡದ ಲಕ್ಷಣಗ್ರಂಥಗಳಿಂದ ಕ್ಲೇಶವಿಲ್ಲದೆ ಪಡೆಯಬಹುದು".[23]

"....ಮೇಲಿನ ಸ್ಥೂಲವಾದ ಅವಲೋಕನದಿಂದಲೇ ಕನ್ನಡ ಕಾವ್ಯಮೀಮಾಂಸೆ ಸಂಸ್ಕೃತದ ಛಾಯಾನುವರ್ತಿಯಾಗಿಯೇ ನಡೆದ ಅಂಶ ವೇದ್ಯವಾಗುತ್ತದೆ. ಕನ್ನಡದಲ್ಲಿ ಸ್ವತಂತ್ರ ನಾಟಕಗಳ ರಚನೆಯೇ ಬೆಳೆಯದೆಹೋದುದರಿಂದಲೋ ಏನೋ ಲಕ್ಷಣಕಾರರಾ ದರೂ ನಾಟಕ ಲಕ್ಷಣವನ್ನು ಪ್ರತಿಪಾದಿಸುವ ಪ್ರಯತ್ನಕ್ಕೇ ಹೋಗಲಿಲ್ಲ. ಹಾಗೆಯೇ ಗದ್ಯ ರಚನೆಗಳು ವಿರಳವಾಗಿದ್ದುದರಿಂದಲೇ ಗದ್ಯಬಂಧಗಳ ವಿವೇಚನೆಗೆ ಕೈಹಾಕಲಿಲ್ಲ. ಸಂಸ್ಕೃತ ಲಕ್ಷಣಕಾರರಲ್ಲಿ ಪ್ರಸಿದ್ಧವಾಗಿದ್ದ ರಸ, ರೀತಿ, ಅಲಂಕಾರ ಪ್ರಕ್ರಿಯೆಗಳ ಪರಿಚಯವನ್ನು ಕನ್ನಡದ ಲಕ್ಷ್ಯಗಳ ಮೂಲಕ ಮಾಡಿಕೊಡುವುದಷ್ಟೇ ಕನ್ನಡ ಲಕ್ಷಣಕಾರರ ಉದ್ದೇಶವಾಗಿ ದ್ದಂತೆ ಕಾಣುತ್ತದೆ. ಆದರೆ ದೋಷವಿವೇಚನೆಯಲ್ಲಿ ಮತ್ತು ಯತಿಪ್ರಾಸಗಳ ವಿವರಣೆ ಯಲ್ಲಿ ಕವಿರಾಜಮಾರ್ಗಕಾರನೇ ಮೊದಲಾದ ಕನ್ನಡ ಲಾಕ್ಷಣಿಕರು ಸಂಸ್ಕೃತದಲ್ಲಿಲ್ಲದ ಹೊಸ ಅಂಶಗಳನ್ನೂ ಪ್ರಸ್ತಾಪಿಸಿದ್ದಾರೆ. ಧ್ವನಿಸಿದ್ಧಾಂತದ ತಾತ್ತ್ವಿಕವಿಮರ್ಶೆ ಕನ್ನಡಿಗರಿಗೆ ಹೆಚ್ಚು ಪ್ರಿಯವಾದಂತೆ ಕಾಣುವುದಿಲ್ಲ. ಆದರೂ ಕನ್ನಡ ಲಕ್ಷಣಗ್ರಂಥ ಗಳನ್ನೆಲ್ಲ ಕೂಲಂಕಷವಾಗಿ ಓದಿಕೊಂಡವರಿಗೆ ಸಂಸ್ಕೃತದ ಕಾವ್ಯತತ್ತ್ವಗಳ ಬಹು ಭಾಗ ತಮ್ಮ ತಾಯ್ನುಡಿಯಲ್ಲಿಯೇ ದೊರೆಯುವುದೆಂದು ಹೇಳಬಹುದಾಗಿದೆ. ಆದರೆ ಕನ್ನಡ ಲಕ್ಷಣಗ್ರಂಥಗಳ ಪೂರ್ಣಪರಿಜ್ಞಾನಕ್ಕೆ ಸಂಸ್ಕೃತ ಗ್ರಂಥಗಳೂ ಅಗತ್ಯವೆಂದು ಹೇಳದೆ ಇರಲಾರೆವು."[24]

೯ನೆಯ ಶತಮಾನದ ಕವಿರಾಜಮಾರ್ಗಕಾರನಿಂದ ಹಿಡಿದು ೧೯ನೆಯ ಶತಮಾನದ ಚಾಮಲಿ ರಾಮಸ್ವಾಮಿಶಾಸ್ತ್ರಿಗಳವರೆಗೆ ಕನ್ನಡದಲ್ಲಿ ಹಲವು ಅಲಂಕಾರಶಾಸ್ತ್ರಗಳು ಬಂದಿವೆ. ಇವೆಲ್ಲ ಒಂದೇ ವಿಧವಾದ ರಚನೆಯ ಅನುಕೃತಿಗಳಲ್ಲ. ಗ್ರಂಥಸ್ವರೂಪವೂ ಪ್ರಮಾಣವೂ ಭಿನ್ನಭಿನ್ನವಾದವು. ಒಬ್ಬೊಬ್ಬ ಆಲಂಕಾರಿಕನ ದೃಷ್ಟಿಯಲ್ಲಿಯೂ ಸಾಮರ್ಥ್ಯದಲ್ಲಿಯೂ ವ್ಯತ್ಯಾಸವೂ ತಾರತಮ್ಯವೂ ಕಂಡುಬರುತ್ತವೆ. ಪ್ರಾಚೀನರು ಹೆಚ್ಚಿನಮಟ್ಟಿಗೆ ಶಾಸ್ತ್ರವ್ಯುತ್ಪತ್ತಿಯುಳ್ಳ ದೊಡ್ಡ ಪಂಡಿತರು. ಕನ್ನಡ ಸಂಸ್ಕೃತ ಭಾಷಾ ಸಾಹಿತ್ಯಗಳಲ್ಲಿ ಸಮುದಂಡಿಯಾದ ಪ್ರಭುತ್ವ ಪ್ರಾಮಾಣ್ಯಗಳನ್ನುಳ್ಳವರು. ಅವರ ಕೃತಿಗಳು ಹೆಚ್ಚು ಪ್ರಾಮಾಣಿಕವಾದವು, ಪ್ರಾಮುಖ್ಯವಿತರ್ಕವು. ಪೂರ್ವಾಚಾರ್ಯ ರಾದ ಭಾಮಹ, ದಂಡಿ, ರುದ್ರಟ, ಅಮರಚಂದ್ರ, ವಾಮನ, ಉದ್ಭಟ, ರಾಜಶೇಖರ, ಅಮೃತಾನಂದಿ, ರುದ್ರಭಟ್ಟ, ವಿದ್ಯಾನಾಥ, ಹೇಮಚಂದ್ರ, ಮಮ್ಮಟ, ಅಪ್ಪಯ್ಯದೀಕ್ಷಿತ,

ಸಿಂಗಭೂಪಾಲ, ಭಾನುದತ್ತ, ಜಯದೇವ—ಮೊದಲಾದವರಲ್ಲಿ ಒಬ್ಬರಿಬ್ಬರ ಅಥವಾ ಹಲವರ ಅಲಂಕಾರ ಗ್ರಂಥಗಳ ಪರಿಚಯ ಕನ್ನಡ ಲಾಕ್ಷಣಿಕರಿಗಿದ್ದಿತು. ಅಲ್ಲದೆ ಈಗ ಕರ್ತೃತ್ವ ತಿಳಿಯದ ಇನ್ನೂ ಕೆಲವು ಗ್ರಂಥಗಳನ್ನು ಅವರು ಬಲ್ಲವರಾಗಿದ್ದರು, ಬಳಸಿಕೊಂಡವರಾಗಿದ್ದರು. ಅವರು ಸಂಸ್ಕೃತ ಅಲಂಕಾರಗ್ರಂಥಗಳಿಂದ ವಿಷಯಸಂಗ್ರಹ ಮಾಡಿರುವ ರೀತಿಯಲ್ಲಿ ಅವರ ಕೌಶಲವೂ ಔಚಿತ್ಯಪರಿಜ್ಞಾನವೂ ಸ್ವಾತಂತ್ರ್ಯ ಮತ್ತು ಸ್ವೋಪಜ್ಞತೆಗಳೂ ಚೆನ್ನಾಗಿ ಕಂಡುಬರುತ್ತವೆ. ಮೂಲಾನುಸರಣೆಯಲ್ಲಿ ವೈಚಿತ್ರ್ಯಗಳಿವೆ. ಅದು ಪದಶಃ ಭಾಷಾಂತರವಾಗಿರಬಹುದು; ಅಲ್ಪ ವ್ಯತ್ಯಾಸಪೂರ್ವಕವಾದ ರೂಪಾಂತರವಾಗಿರಬಹುದು. ಮೂಲದ ಯಾವುದಾದರೂ ಭಾಗವನ್ನೋ ವಿಚಾರವನ್ನೋ ಗ್ರಹಣಮಾಡಿಯೂ ಸ್ವಕೀಯವೆನ್ನುವಂತೆ ಸ್ವತಂತ್ರವಾಗಿ ನಿರೂಪಿಸಿದ್ದಿರಬಹುದು. ಮೂಲದ ಲಕ್ಷಣಭಾಗದಲ್ಲಿ ಸಂಕ್ಷೇಪವೋ ವಿಸ್ತಾರವೋ ಆಗಿರಬಹುದು; ಲೋಪಾಗಮಗಳೋ ವ್ಯತ್ಯಾಸವೈಪರೀತ್ಯಗಳೋ ಸಂಘಟಿಸಿರಬಹುದು. ಮೂಲವನ್ನಿಟ್ಟುಕೊಂಡು ವೃತ್ತಿವ್ಯಾಖ್ಯಾನಗಳನ್ನು ರಚಿಸಿರಬಹುದು. ಒಟ್ಟಿನಲ್ಲಿ ಮೂಲದ ಆಶಯ ಸಾಮಾನ್ಯವಾಗಿ ವಿಸಂಗತಗೊಳ್ಳದೆ ಆಭಾಸಕ್ಕೆಡೆಗೊಡದೆ ಬಂದಿರುವುದನ್ನು ಕಾಣುತ್ತೇವೆ.

ಕನ್ನಡ ಅಲಂಕಾರಿಕರಲ್ಲಿ ಅವರವರ ಗ್ರಂಥದ ವ್ಯಾಪ್ತಿ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಲಕ್ಷಣನಿರೂಪಣದಲ್ಲಿಯೂ ಲಕ್ಷ್ಯಸ್ವೀಕರಣದಲ್ಲಿಯೂ ದೃಷ್ಟಿಭೇದ ರುಚಿಭೇದಗಳು ಕಂಡುಬಂದಿವೆ. ಕವಿರಾಜಮಾರ್ಗಕಾರನು ದಂಡಿಯನ್ನು ವಿಶೇಷವಾಗಿ ಅನುಸರಿಸಿದ್ದಾನೆ. ನಾಗವರ್ಮ ಸಾಳ್ವ ಕವಿಗಳು ದಂಡಿಭಾಮಹರನ್ನೊಳಗೊಂಡು ಇನ್ನೂ ಕೆಲವರ ಅಭಿಪ್ರಾಯಗಳನ್ನು ಸಂಗ್ರಹಿಸಿದ್ದಾರೆ. ಉದಯಾದಿತ್ಯನೂ (ಸು. ೧೧೫೦) ಕವಿರಾಜಮಾರ್ಗಕಾರನಂತೆಯೇ ದಂಡಿಯನ್ನೇ ಬಲುಮಟ್ಟಿಗೆ ಅನುಸರಿಸಿದ್ದಾನೆ. ಮಾಧವನಂತೂ (ಸು. ೧೫೦೦) ದಂಡಿಯ 'ಕಾವ್ಯಾದರ್ಶ'ವನ್ನೇ ಭಾಷಾಂತರಿಸಿದ್ದಾನೆ. ತಿಮ್ಮಕವಿ (ಸು. ೧೬೦೦) 'ಅಮೃತಾನಂದೀಯ' 'ಸಿಂಗಭೂಪಾಲೀಯ'ಗಳಿಂದ ವಿಶೇಷವಾಗಿ ಉಪಕೃತನಾಗಿದ್ದಾನೆ. ತಿರುಮಲಾರ್ಯನು ವಿಶೇಷವಾಗಿ ಮಮ್ಮಟ, ವಾಮನ, ವಿದ್ಯಾನಾಥ, ಅಪ್ಪಯ್ಯದೀಕ್ಷಿತ(ಜಯದೇವ)ರಿಗೆ ಒಲಿದಿದ್ದಾನೆ.ಜಾಯೇಂದ್ರನು (ಕ್ರಿ.ಶ. ೧೭೩೪ ಅಪ್ಪಯ್ಯದೀಕ್ಷಿತ(ಜಯದೇವ?) ಮತ್ತು ಭಾನುದತ್ತರ ಗ್ರಂಥಗಳಾದ 'ಕುವಲಯಾನಂದ' (ಚಂದ್ರಾಲೋಕ?) ಮತ್ತು 'ರಸಮಂಜರಿ'ಗಳನ್ನು ಅನುವಾದಿಸಿದ್ದಾನೆ. ಅಳಿಯ ಲಿಂಗರಾಜನು (ಕ್ರಿ.ಶ. ೧೮೨೩–೭೪) ಜಯದೇವನಿಗೆ ಋಣಿ. ಅಂತೂ ಪ್ರಾಚೀನರಲ್ಲಿ ದಂಡಿಯ 'ಕಾವ್ಯಾದರ್ಶ'ವೂ ಅರ್ವಾಚೀನರಲ್ಲಿ ಅಪ್ಪಯದೀಕ್ಷಿತ ಮತ್ತು ಜಯದೇವರ 'ಕುವಲಯಾನಂದ' ಮತ್ತು 'ಚಂದ್ರಾಲೋಕ'ಗಳೂ ಕನ್ನಡ ಅಲಂಕಾರಿಕ ಮೇಲೆ ಬಹಳ ಮಟ್ಟಿಗೆ ಪ್ರಭಾವವನ್ನು ಬೀರಿರುವ ಅಲಂಕಾರಗ್ರಂಥಗಳಾಗಿವೆಯೆಂದು ತಿಳಿಯುತ್ತದೆ. ಕನ್ನಡ ಸಂಸ್ಕೃತ ಭಾಷೆಗಳ ಸಾಹಿತ್ಯಕೃತಿಗಳಿಂದಲೂ ಕ್ವಚಿತ್ತಾಗಿ ಪ್ರಾಕೃತ ಸಾಹಿತ್ಯದಿಂದಲೂ ಕನ್ನಡ ಅಲಂಕಾರಿಕರು ಲಕ್ಷ್ಯಗಳನ್ನೆತ್ತಿಕೊಂಡಿದ್ದಾರೆ. ಸಾದೃಶ್ಯವಿರುವ ಪದ್ಯಗಳು ಯಥಾನುವಾದಗಳೋ ಸಾರಾನುವಾದಗಳೋ ಆಗಿರುತ್ತವೆ. ವಾಲ್ಮೀಕಿ,

ವ್ಯಾಸ, ಕಾಳಿದಾಸ, ಭಾರವಿ, ಭವಭೂತಿ, ಭಟ್ಟಿ, ಮಾಘ, ಭರ್ತೃಹರಿ, ಶ್ರೀಪಾಲ, ಹೇಮಚಂದ್ರ–ಮೊದಲಾದವರನ್ನು ಇಲ್ಲಿ ಸ್ಮರಿಸಬಹುದು. ಕನ್ನಡ ಅಲಂಕಾರಗ್ರಂಥಗಳಲ್ಲಿ ಧ್ವನಿತತ್ತ್ವಕ್ಕಿಂತ ರಸತತ್ತ್ವವೂ ರಸತತ್ತ್ವಕ್ಕಿಂತ ಅಲಂಕಾರಗಳ ಪ್ರತಿಪಾದನೆಯೂ ವಿಶೇಷವಾಗಿ ಪ್ರಾಮುಖ್ಯಪಡೆದಿರುವಂತೆ ತೋರುತ್ತದೆ. ಪ್ರಮುಖರಾದವರಲ್ಲಿ ನೃಪತುಂಗ, ನಾಗವರ್ಮ, ಕವಿಕಾಮ (ಸು. ೧೨೦೦) ಮತ್ತು ಸಾಳ್ವ—ಇವರು ಅಲ್ಪ ವಾದರೂ ಬೆಲೆಯುಳ್ಳ ಸ್ವತಂತ್ರ ವಿಚಾರಾಂಶಗಳಿಂದ ಭಾರತೀಯ ಕಾವ್ಯಮೀಮಾಂಸೆಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಕನ್ನಡದಲ್ಲಿ ಪ್ರಾಚೀನ ಛಂದೋಗ್ರಂಥಗಳ ಸಂಖ್ಯೆ ತೀರ ವಿರಳವಾದುದು. ೧ನೆಯ ನಾಗವರ್ಮ, ೨ನೆಯ ನಾಗವರ್ಮ, ಈಶ್ವರಕವಿ (ಸು. ೧೫೦೦), ಗುಣಚಂದ್ರ (ಸು. ೧೬೫೦), ಶಾಲ್ಯದ ಕೃಷ್ಣರಾಜ (ಕ್ರಿ.ಶ. ೧೭೪೮), ನಂದಿ ಛಂದಸ್ಸಿನ ಕರ್ತೃ (ಸು. ೧೯ನೆಯ ಶತಮಾನ)—ಇವರನ್ನು ಪ್ರಾಚೀನರೆನ್ನಬಹುದು. ಇವರಲ್ಲಿ ೧ನೆಯ ನಾಗವರ್ಮನ 'ಛಂದೋಂಬುಧಿ'ಯೇ ಪ್ರಸಿದ್ಧವೂ ಪ್ರಾಮಾಣಿಕವೂ ಆದ ಕೃತಿ. 'ಛಂದೋಂಬುಧಿ'ಯನ್ನು ಒಳಕೊಂಡು ಇತರ ಎಲ್ಲ ಕನ್ನಡ ಛಂದೋಗ್ರಂಥಗಳೂ ಸಂಸ್ಕೃತ ಛಂದಶ್ಶಾಸ್ತ್ರಗಳ ಶಾಸ್ತ್ರಪದ್ಧತಿಯನ್ನೂ ಪರಿಭಾಷೆಯನ್ನೂ ಬಲುಮಟ್ಟಿಗೆ ಪೂರ್ತಿಯಾಗಿ ಅನುಸರಿಸಿದೆ. ಗ್ರಂಥಶರೀರದಲ್ಲಿ ಕನ್ನಡಛಂದಸ್ಸಿನ ಸಂಗತಿಗಳಿಗಿಂತ ಸಂಸ್ಕೃತ ಛಂದಸ್ಸಿನ ಸಂಗತಿಗಳಿಗೇ ಹೆಚ್ಚಿನ ಪ್ರಾಮುಖ್ಯ ಸಂದಿದೆ. ಕನ್ನಡ ಕಾವ್ಯಪದ್ಧತಿಯಲ್ಲಿ ಸಂಸ್ಕೃತದ ವಿವಿಧ ವೃತ್ತಜಾತಿಗಳೇ ವಿಶೇಷವಾಗಿ ಬಳಕೆಯಾಗಿರುವುದರಿಂದ ಅವುಗಳ ಲಕ್ಷಣವಿವೇಚನೆಗೆ ಕನ್ನಡ ಛಂದೋಗ್ರಂಥಗಳಲ್ಲಿ ಉಚಿತವಾದ ಅವಕಾಶವಿರಬೇಕಾದುದು ಸಹಜವೇ ಆಗಿದೆ.

ಕನ್ನಡ ಛಂದಸ್ಸಿನ ವಿಷಯದಲ್ಲಿ ಸಂಸ್ಕೃತದ ಪ್ರಭಾವ ನಿಚ್ಚಟವಾಗಿ ಗೋಚರಿಸುವಂತೆ ಪ್ರಾಕೃತ ಅಪಭ್ರಂಶ ಭಾಷೆಗಳ ಪ್ರಭಾವ ಗೋಚರಿಸುವುದಿಲ್ಲ. ರಗಳೆ ಮೊದಲಾದ ಛಂದಸ್ಸಿನಲ್ಲಿ ಅವುಗಳ ಪ್ರಭಾವವುಂಟು. ನಾಗವರ್ಮ ಗುಣಚಂದ್ರರ ಕೃತಿಗಳಲ್ಲಿ ಆ ಪ್ರಭಾವದ ಕುರುಹುಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ನಾಗವರ್ಮನು "ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚಿಕಂ ಎಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುವೆಲ್ಲಂ ದ್ರಮಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ಸರ್ವವಿಷಯ ಭಾಷಾ ಜಾತಿಗಳಕ್ಕುಂ"—ಎಂಬುದಾಗಿ ಸಂಜ್ಞಾಪ್ರಕರಣದಲ್ಲಿ ಹೇಳಿರುವ ಮಾತನ್ನು ಇಲ್ಲಿ ನೆನೆಯಬಹುದು.

ಕನ್ನಡ ಲಕ್ಷಣಗ್ರಂಥಗಳ ಸಮುದಾಯದಲ್ಲಿ ಪ್ರಾಚೀನ ಕನ್ನಡ ವ್ಯಾಕರಣಗಳೇ ಅಲ್ಪಸಂಖ್ಯಾತವಾದವು. ೨ನೆಯ ನಾಗವರ್ಮ (ಸು. ೧೧೪೫) ಕೇಶಿರಾಜ (ಸು. ೧೨೬೦) ಮತ್ತು ಭಟ್ಟಾಕಳಂಕ (ಕ್ರಿ.ಶ. ೧೬೦೪) ಇವರೇ ಗಣ್ಯ ವೈಯಾಕರಣರು. ಈ ವರ್ಗದ ಗ್ರಂಥಗಳಲ್ಲಿಯೂ ವಿಷಯನ್ಯಾಸ ಮತ್ತು ನಿರೂಪಣ ಪದ್ಧತಿಗಳು ಸಂಸ್ಕೃತದಲ್ಲಿಯ ಮಾದರಿಗಳನ್ನೇ ಬಲುಮಟ್ಟಿಗೆ ಅನುಸರಿಸಿವೆ. ಅಲ್ಲದೆ ಸಂಸ್ಕೃತ

ಭಾಷೆಗೆ ಸಹಜವಾದ ವ್ಯಾಕರಣಾಂಶಗಳೂ ವ್ಯಾಕರಣ ಪ್ರಕ್ರಿಯೆಗಳೂ ಕನ್ನಡ ವ್ಯಾಕರಣಗಳೊಳಗೆ ಸೇರಿರುವುದೂ ಉಂಟು. ಸಂಸ್ಕೃತ ವ್ಯಾಕರಣ ಪರಿಭಾಷೆಯೇ ಇಲ್ಲಿಯ ಪರಿಭಾಷೆಯಾಗಿದೆ. ಪೂರ್ವೋಕ್ತರಾದ ವೈಯಾಕರಣರು ಜೈನರಾದುದರಿಂದ ಅವರು ಕನ್ನಡ ವ್ಯಾಕರಣಗಳ ರಚನೆಗೆ ಸಂಸ್ಕೃತದಲ್ಲಿ ಪಾಣಿನ್ಯಾದಿಗಳನ್ನು ನೋಡಿಕೊಂಡಿರುವಂತೆಯೇ ಪೂಜ್ಯಪಾದ ಶರ್ವವರ್ಮ ಮೊದಲಾದವರು ಬರೆದಿರುವ ಜೈನೇಂದ್ರ, ಕಾತಂತ್ರ ಮೊದಲಾದ ಜೈನವ್ಯಾಕರಣಗಳನ್ನೂ ನೋಡಿಕೊಂಡಿರುವುದು ಸಂಭವನೀಯವಾಗಿದೆ. ಪಾಣಿನೀಯ ವ್ಯಾಕರಣದ ಸೂತ್ರಪದ್ಧತಿ ಮತ್ತು ವೃತ್ತಿವ್ಯಾಖ್ಯಾನಗಳ ಸಂಪ್ರದಾಯವನ್ನು ಅನುಸರಿಸಿ 'ಭಾಷಾಭೂಷಣ' ಮತ್ತು 'ಶಬ್ದಾನುಶಾಸನ'ಗಳು ರಚಿತವಾಗಿವೆ. ಕನ್ನಡ ಭಾಷೆಯ ಸ್ವರೂಪವನ್ನು ಸಂಸ್ಕೃತ ಭಾಷೆಯಲ್ಲಿ ನಿರೂಪಿಸಿರುವ ಮೂಲಕವಾಗಿ, ಕನ್ನಡ ಭಾಷೆಯ ಸತ್ತ್ವಸಾಮರ್ಥ್ಯಗಳನ್ನು ಲೋಕಪ್ರಕಟಮಾಡುವ ಹಾಗೂ ಅದಕ್ಕೆ ಭಾರತೀಯ ಸಾಹಿತ್ಯದಲ್ಲಿ ಗಣ್ಯವಾದ ಸ್ಥಾನವನ್ನೂ ವ್ಯಾಪ್ತಿಯನ್ನೂ ಉಂಟುಮಾಡುವ ಉದ್ದೇಶವು, ಆ ವ್ಯಾಕರಣಗಳ ಕರ್ತೃಗಳಿಗೆ ಇದ್ದಂತೆ ತೋರುತ್ತದೆ. ಭಟ್ಟಾಕಳಂಕನ 'ಶಬ್ದಾನುಶಾಸನ'ವೆಂಬ ವ್ಯಾಕರಣವೂ ಅದರ ವ್ಯಾಖ್ಯಾನವಿಧಾನವೂ ಸಂಸ್ಕೃತ ವ್ಯಾಕರಣದ ಅಭ್ಯಾಸಿಗಳಿಗೆ ಕೂಡ ಪ್ರಯೋಜನಕಾರಿಯಾಗಿದೆಯೆನ್ನಬಹುದು. ಅನಂತರದ ಕನ್ನಡ ವ್ಯಾಕರಣಗಳ ಮೇಲೆ ಸ್ಪಷ್ಟವೂ ವ್ಯಾಪಕವೂ ಆದ ರೀತಿಯಲ್ಲಿ ಸಂಸ್ಕೃತ ವ್ಯಾಕರಣಗಳ ಪ್ರಭಾವವಾಗಿರುವಂತೆ ತೋರುವುದಿಲ್ಲ.

ಈಗ ನಿಘಂಟುಗಳ ಬಗ್ಗೆ : ಕನ್ನಡದಲ್ಲಿ ಹಿಂದೆ ಬಹುಸಂಖ್ಯೆಯಲ್ಲಿ ನಿಘಂಟುಗಳು ರಚಿತವಾಗಿವೆ. ಇವುಗಳಲ್ಲಿ ಒಂದೆರಡರ ಹೊರತು ಉಳಿದವು ಬಲುಮಟ್ಟಿಗೆ ಮಿತವ್ಯಾಪ್ತಿಯನ್ನುಳ್ಳವು, ಆದ್ದರಿಂದ ಗಾತ್ರದಲ್ಲಿ ಕಿರಿದಾದವು. ಒಟ್ಟಿನಲ್ಲಿ ಕನ್ನಡದ ಅಪಾರ ಶಬ್ದಭಂಡಾರದಲ್ಲಿ ಸ್ವಲ್ಪವನ್ನಷ್ಟೇ ಈ ನಿಘಂಟುಗಳು ಒಳಕೊಂಡಿರುವುದು ಕಾಣುತ್ತದೆ.

ಪ್ರಾಚೀನ ಕನ್ನಡ ನಿಘಂಟುಗಳನ್ನು ೬ ಬಗೆಯಾಗಿ ವಿಂಗಡಿಸಬಹುದು : ಕನ್ನಡ–ಕನ್ನಡ ನಿಘಂಟುಗಳು, ಸಂಸ್ಕೃತ–ಕನ್ನಡ ನಿಘಂಟುಗಳು, ಕನ್ನಡ–ಸಂಸ್ಕೃತ ನಿಘಂಟುಗಳು, ವಿಶಿಷ್ಟ ವಿಷಯಗಳ ನಿಘಂಟುಗಳು, ನಾನಾರ್ಥ ನಿಘಂಟುಗಳು ಮತ್ತು ನಿಘಂಟು ವ್ಯಾಖ್ಯಾನಗಳು.

ಕನ್ನಡ ಪಂಡಿತರಿಗೆ ನಿಘಂಟುರಚನೆಯ ಅಭ್ಯಾಸವೂ ಪದ್ಧತಿಯೂ ಸಂಸ್ಕೃತದಿಂದಲೇ ಬಂದದ್ದು ಎನ್ನಬಹುದು. ಸಂಸ್ಕೃತ ನಿಘಂಟುಕಾರರಲ್ಲಿ ವರರುಚಿ, ಭಾಗುರಿ, ಶಾಶ್ವತ, ಅಮರಸಿಂಹ, ಗೋಪಾಲಕ, ಧನಂಜಯ, ಹಲಾಯುಧ–ಮೊದಲಾದವರ ಗ್ರಂಥಗಳ ಪರಿಚಯ ಕನ್ನಡ ನಿಘಂಟುಕಾರರಿಗೆ ಇದ್ದಿತೆಂಬುದಕ್ಕೆ ಸ್ಪಷ್ಟವಾದ ನಿದರ್ಶನಗಳು ದೊರೆಯುತ್ತವೆ. ಈ ಸಂಸ್ಕೃತ ನಿಘಂಟುಗಳು ನೀಡಿದ ಪ್ರೇರಣೆಯಂತೆ, ಅವುಗಳ ಪದ್ಧತಿಗೆ ತಕ್ಕಂತೆ ಕನ್ನಡ ನಿಘಂಟುಗಳು ಬರೆಯಲ್ಪಟ್ಟಿವೆ. ಸಂಸ್ಕೃತದಲ್ಲಿ ಸಾಮಾನ್ಯವಾಗಿ ಶ್ಲೋಕರೂಪವಾಗಿ ನಿರೂಪಣೆಯಿದ್ದರೆ ಕನ್ನಡದಲ್ಲಿ ಕಂದಪದ್ಯದಲ್ಲಿ ನಿರೂಪಣೆಯಿರುತ್ತದೆ.

ಪೂರ್ವಪ್ರಸಿದ್ಧವಾದ ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಿದ್ದು, ರೂಢಿಯಲ್ಲಿ ಕಾರ

ಣಾಂತರಗಳಿಂದ ಮರೆಯಾಗುತ್ತ ಬಂದು, ತತ್ಕಾಲಕ್ಕೆ ಕ್ಲಿಷ್ಟವಾಗಿ ತೋರುವ ಕನ್ನಡ ಶಬ್ದಗಳಿಗೆ ಪ್ರಚಲಿತವೂ ಸುಲಭವೂ ಆದ ಕನ್ನಡ ಶಬ್ದಗಳನ್ನು ಪರ್ಯಾಯವಾಗಿ ಕೊಟ್ಟು ಅರ್ಥೈಸಿರುವುದು ಕನ್ನಡ-ಕನ್ನಡ ನಿಘಂಟುಗಳಲ್ಲಿ ಕಂಡುಬರುತ್ತದೆ. ದೇಶ್ಯ ಶಬ್ದಗಳು ಬಳಕೆಯಲ್ಲಿ ಮರೆಯಾಗಿ ಸಂಸ್ಕೃತ ಶಬ್ದಗಳು ಅವುಗಳ ಸ್ಥಾನವನ್ನು ಹಿಡಿಯುತ್ತ ಬಂದಂತೆ ಪೂರ್ವಕಾವ್ಯಾಭ್ಯಾಸದ ಸೌಕರ್ಯಕ್ಕಾಗಿಯಾದರೂ ಆ ದೇಶ್ಯಶಬ್ದಗಳ ಅರ್ಥಗಳನ್ನು ನೆನಪಿಸುವುದು, ನಿರ್ಧರಿಸುವುದು ಆವಶ್ಯಕವಾಯಿತು. 'ರನ್ನ ಕಂದ', 'ಕಬ್ಬಿಗರ ಕೈಪಿಡಿ', 'ಶಬ್ದಸಾರ' ಮೊದಲಾದ ಕನ್ನಡ-ಕನ್ನಡ ನಿಘಂಟುಗಳು ಹುಟ್ಟಿಕೊಂಡದ್ದು ಹೀಗೆ. ಕನ್ನಡ ಕಾವ್ಯೋಪಯೋಗಿಯಾದ ಸಂಸ್ಕೃತ ಶಬ್ದಗಳಿಗೆ ಕನ್ನಡ ಶಬ್ದಗಳಲ್ಲಿ ಅರ್ಥಗಳನ್ನು ಹೇಳಿರುವುದು ಸಂಸ್ಕೃತ-ಕನ್ನಡ ನಿಘಂಟುಗಳಲ್ಲಿ ಕಾಣುತ್ತದೆ. ೨ನೆಯ ನಾಗವರ್ಮನ 'ಅಭಿಧಾನ ವಸ್ತುಕೋಶ', ಮಂಗರಾಜನ (ಕ್ರಿ.ಶ. ೧೩೯೮) 'ಅಭಿನವಾಭಿಧಾನ' ಇಂತಹ ನಿಘಂಟುಗಳು. ಸಂಸ್ಕೃತ ಶಬ್ದಗಳಿಗೆ ತತ್ಸಮ-ತದ್ಭವಗಳನ್ನು ಸೂಚಿಸಿರುವುದು ಚತುರಾಸ್ಯ ಬೊಮ್ಮರಸ (ಸು. ೧೪೫೦) ಲಿಂಗಮಂತ್ರಿ (ಸು. ೧೫೩೦) ಮೊದಲಾದವರ ನಿಘಂಟುಗಳಲ್ಲಿ ಕಾಣುತ್ತದೆ. 'ಶಬ್ದಮಣಿದರ್ಪಣ'ದ ಧಾತುಪಾಠ ಕನ್ನಡ-ಸಂಸ್ಕೃತ ನಿಘಂಟುವಿಗೆ ಮಾದರಿ. 'ಓಷಧಿಕೋಶ' 'ಧನ್ವಂತರೀಯ ನಿಘಂಟು,' 'ಸಂಖ್ಯಾರತ್ನಮಾಲೆ' ಮುಂತಾದುವು ವಿಶಿಷ್ಟ ವಿಷಯಗಳ ನಿಘಂಟುಗಳು. ದೇವೋತ್ತಮನ (ಸು. ೧೬೦೦)'ನಾನಾರ್ಥರತ್ನಾಕರ,' ಚೆನ್ನಕವಿಯ (ಸು. ೧೬೦೦) 'ನಾನಾರ್ಥಕಂದ' ಮೊದಲಾದವು ನಾನಾರ್ಥ ನಿಘಂಟುಗಳು. ಇವೆಲ್ಲ ಸಂಸ್ಕೃತ ನಿಘಂಟುಗಳ ಪ್ರಭಾವವನ್ನೂ ಪದ್ಧತಿಯನ್ನೂ ಪ್ರತಿಬಿಂಬಿಸತಕ್ಕವಾಗಿವೆ.

ಕೆಲವು ಸಂಸ್ಕೃತ ನಿಘಂಟುಗಳ ಕನ್ನಡ ವ್ಯಾಖ್ಯಾನಗಳು ರಚಿತವಾಗಿದ್ದು, ಇವುಗಳಲ್ಲಿ 'ಅಮರಕೋಶಕ್ಕೆ' ಹೆಚ್ಚಿನ ಆದ್ಯತೆ ಸಂದಿದೆ. ಕನ್ನಡದಲ್ಲಿ ಸುಮಾರು ೫-೬ ಟೀಕೆಗಳು ಈ ಕೋಶಕ್ಕೆ ಇರುವಂತೆ ತೋರುತ್ತದೆ. ಭಟ್ಟ ಹಲಾಯುಧನ ಸಂಸ್ಕೃತ 'ಅಭಿಧಾನ ರತ್ನಮಾಲೆ'ಗೆ ನಾಗವರ್ಮನೆಂಬವನ ವ್ಯಾಖ್ಯಾನವಿದೆ. ಸಂಸ್ಕೃತ ನಿಘಂಟುಗಳ ನೇರವಾದ ಅಭ್ಯಾಸವೂ ಕನ್ನಡನಾಡಿನಲ್ಲಿ ನಡೆಯುತ್ತಿದ್ದಿತೆಂಬುದಕ್ಕೆ ಈ ವ್ಯಾಖ್ಯಾನರಚನೆ ನಿದರ್ಶಕವಾಗಿದೆ.

## ಶಾಸ್ತ್ರಗ್ರಂಥಗಳು

ಮನುಷ್ಯನ ವ್ಯಾವಹಾರಿಕ ಜೀವನವು ಸುಖಶಾಂತಿಗಳಿಂದ ಕೂಡಿರಲೆಂಬ ದೃಷ್ಟಿಯಿಂದ ಶಾಸ್ತ್ರಕಾರರು ಜ್ಯೋತಿಷ ವೈದ್ಯ ಮೊದಲಾದ ಶಾಸ್ತ್ರಗ್ರಂಥಗಳನ್ನು ಬರೆದು ಜನಹಿತ ಸಾಧನೆಗೆ ಶ್ರಮಿಸಿದ್ದಾರೆ. ಸಂಸ್ಕೃತಭಾಷೆಯ ಸಾಹಿತ್ಯದಲ್ಲಿ ಇಂತಹ ಶಾಸ್ತ್ರಗ್ರಂಥಗಳು ಪ್ರಸಿದ್ಧರಾದ ಆಚಾರ್ಯರಿಂದ ಸ್ವತಂತ್ರವಾದ ಪ್ರಯೋಗ ಪರೀಕ್ಷೆಗಳ ಫಲವಾಗಿ ರಚಿಸಲ್ಪಟ್ಟು ಪ್ರಮಾಣಗ್ರಂಥಗಳಾಗಿಯೂ ಆಕರಗ್ರಂಥಗಳಾಗಿಯೂ ಪರಿಣಮಿಸಿವೆ. ಅವುಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳ ಮೇಲೆ ಕಾಲಕಾಲಕ್ಕೆ ಹೊಸ ಹೊಸ ಪ್ರಯೋಗ

ಪರೀಕ್ಷೆಗಳು ನಡೆದು ಅವುಗಳಲ್ಲಿ ಒಂದಕ್ಕಿಂತ ಹೆಚ್ಚು ಸಂಪ್ರದಾಯಗಳೂ ಕವಲು ಸಂಪ್ರದಾಯಗಳೂ ಶಾಖೆಗಳೂ ಉಪಶಾಖೆಗಳೂ ಕಾಣಿಸಿಕೊಂಡಿವೆ. ಲೋಕಜೀವನದ ನೆಮ್ಮದಿಗೆ ಅವುಗಳ ಉಪಯುಕ್ತತೆ ಕಾಲಕಾಲಕ್ಕೆ ಹೆಚ್ಚುತ್ತಹೋಗಿದೆಯಲ್ಲದೆ ಎಂದೂ ತಗ್ಗಿದಂತೆ ತೋರುವುದಿಲ್ಲ.

ಭರತಖಂಡದ ಹಲವು ದೇಶಭಾಷೆಗಳಿಗೆ ಶಾಸ್ತ್ರವಿಷಯಗಳಲ್ಲಿ ಸಂಸ್ಕೃತಭಾಷೆಯ ಶಾಸ್ತ್ರಸಾಹಿತ್ಯವೇ ಮಾತೃಸ್ವರೂಪವಾಗಿದೆಯೆಂದು ಹೇಳಬಹುದು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿಯೂ ಜೀವನೋಪಯುಕ್ತವಾದ ಶಾಸ್ತ್ರಸಾಹಿತ್ಯವು ತಕ್ಕಮಟ್ಟಿಗೆ ವೈವಿಧ್ಯಯುತವಾಗಿ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಸಾಹಿತ್ಯೋದಯ ಕಾಲದಿಂದಲೂ ಇವುಗಳ ರಚನೆಯಾಗುತ್ತ ಬಂದಿದೆ. ಒಮ್ಮೆ ಒಂದು ಶತಮಾನದಲ್ಲಿ ಹೆಚ್ಚಾಗಿ, ಇನ್ನೊಂದರಲ್ಲಿ ಕಡಿಮೆಯಾಗಿ, ಇವುಗಳ ನಿರ್ಮಾಣ ಸಾಗಿರುವಂತೆ ಕಂಡರೂ ಎಂದೂ ಅದು ಸ್ಥಗಿತವಾಗಿಲ್ಲ. ಅವುಗಳ ಲೋಕೋಪಕಾರಕವಾದ ಪ್ರಯೋಜನವನ್ನು ನಮ್ಮ ಕವಿಗಳು ಚೆನ್ನಾಗಿ ಮನಗಂಡಿದ್ದರು. ಮೂಲಗ್ರಂಥಗಳನ್ನು ಶ್ರದ್ಧೆಯಿಂದ ಅಭ್ಯಾಸಮಾಡಿ ಅವುಗಳ ಅಭಿಪ್ರಾಯಸಾರವನ್ನು ಕನ್ನಡಕ್ಕೆ ತಂದುಕೊಳ್ಳಲು ವಿಶೇಷವಾಗಿ ಶ್ರಮಪಟ್ಟರು. ಕೆಲವೊಮ್ಮೆ ಶಾಸ್ತ್ರಗಳ ಮಹತ್ವವನ್ನು ಕಾವ್ಯಪ್ರಯೋಜನಕ್ಕಿಂತ ಹೆಚ್ಚು ಎಂಬುದಾಗಿ ವ್ಯಕ್ತವಾಗಿಯೇ ಕೊಂಡಾಡಿ ಜನಹಿತಕ್ಕೆ ಅಗತ್ಯವಾದುದನ್ನು ಮಾಡುವ ಸಂಕಲ್ಪಮಾಡಿ ಗ್ರಂಥರಚನೆಗೆ ತೊಡಗಿರುವುದು ಕೂಡ ಕಂಡುಬರುತ್ತದೆ.

ಕನ್ನಡದಲ್ಲಿ ಶಾಸ್ತ್ರಸಾಹಿತ್ಯ ಸಂಖ್ಯೆ ಮತ್ತು ವಿವಿಧತೆಯ ದೃಷ್ಟಿಯಿಂದ ಕಡಮೆಯೆಂದೇ ಹೇಳಬೇಕು. ಜನಹಿತಕ್ಕೆ ಅತ್ಯುಪಯುಕ್ತವೆಂದು ತೋರಿದ ವೈದ್ಯ ಜ್ಯೋತಿಷ ಈ ಒಂದೆರಡು ಭಾಗಗಳಲ್ಲಿ ಮಾತ್ರವೇ ಹೆಚ್ಚು ಗ್ರಂಥಗಳು ಬಂದಿವೆ. ಉಳಿದ ಭಾಗಗಳಲ್ಲಿ ಪ್ರಾತಿನಿಧಿಕವಾಗಿ ಒಂದೋ ಎರಡೋ ಮಾತ್ರವೇ ಎನ್ನಬಹುದು. ಈಗ ತಿಳಿದಿರುವಂತೆ ವೈದ್ಯ, ಜ್ಯೋತಿಷ, ಶಕುನ, ಗಣಿತ, ಗಜಶಾಸ್ತ್ರ, ಅಶ್ವಶಾಸ್ತ್ರ, ರತ್ನಶಾಸ್ತ್ರ, ಕಾಮಶಾಸ್ತ್ರ, ಸೂಪಶಾಸ್ತ್ರ, ಸಂಗೀತಶಾಸ್ತ್ರ, ಸ್ವರಶಾಸ್ತ್ರ, ಬಾಣಗಾಂಕೆ—ಇವುಗಳಿಗೆ ಸಂಬಂಧಪಟ್ಟ ಕೆಲವು ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಕಂಡುಬರುತ್ತವೆ. ಬೇರೆ ಬೇರೆ ಶಾಸ್ತ್ರವಿಷಯಗಳನ್ನು ಒಂದೇ ಕಡೆ ಸಂಕಲನಮಾಡಿರುವ ಗ್ರಂಥಗಳು ಒಂದೋ ಎರಡೋ ಉಂಟು. ಪ್ರಾಯಃ ಎರಡನೆಯ ಚಾವುಂಡರಾಯ ಕೃತವಾದ (ಸು. ೧೦೨೫) 'ಲೋಕೋಪಕಾರ'ವೊಂದೇ ಈ ರೀತಿಯದೆಂದು ತೋರುತ್ತದೆ. ವೈದ್ಯದಲ್ಲಿ ಸಾಮಾನ್ಯ ವೈದ್ಯ, ಗೋವೈದ್ಯ, ಅಶ್ವವೈದ್ಯ, ಹಸ್ತಿವೈದ್ಯ, ಸ್ತ್ರೀವೈದ್ಯ, ವಿಷವೈದ್ಯ, ಬಾಲಗ್ರಹಚಿಕಿತ್ಸೆ ಇವು ಉಪಶಾಖೆಗಳು. ಜ್ಯೋತಿಷದಲ್ಲಿ ಜಾತಕವಿಚಾರ, ವೃಷ್ಟಿಶಾಸ್ತ್ರ, ಪಂಚಾಂಗ ವಿವರಣೆ ಇವೂ ಪ್ರಾಯಃ ಧನಶಿಲ್ಪಿ ಜಲಶಿಲ್ಪಿ ಗ್ರಂಥಗಳೂ ಸೇರುತ್ತವೆ. ಶಕುನದಲ್ಲಿ ನರಪಿಂಗಲಿ, ಸಾಮುದ್ರಿಕ, ನಿಮಿತ್ತಗಳು, ಸ್ವಪ್ನಫಲಗಳು, ಮರಣಸೂಚನೆ–ಇತ್ಯಾದಿಗಳನ್ನು ಕುರಿತ ಕೃತಿಗಳಿವೆ. ಗಣಿತಶಾಸ್ತ್ರದಲ್ಲಿ ಮುಖ್ಯವಾಗಿ ಸಾಮಾನ್ಯ ಗಣಿತ, ಕ್ಷೇತ್ರಗಣಿತ, ವ್ಯವಹಾರಗಣಿತ–ಎಂಬ ವಿಭಾಗಗಳಲ್ಲಿ ಗ್ರಂಥಗಳು ಬಂದಿವೆ. ಗಜಶಾಸ್ತ್ರ ಮೊದಲಾದವು

ಗಳಲ್ಲಿ ಅಂತಹ ಉಪಶಾಖೆಗಳೇನೂ ಕನ್ನಡದಲ್ಲಿ ತೋರುವುದಿಲ್ಲ.

ಕನ್ನಡದಲ್ಲಿ ವೈದ್ಯಗ್ರಂಥಗಳ ರಚನೆಯೇ ಹೆಚ್ಚು. ಇದಕ್ಕೆ ಆ ಶಾಸ್ತ್ರದ ಪ್ರಯೋಜನವೇ ಕಾರಣ. ಕೀರ್ತಿವರ್ಮನ (ಸು. ೧೦೬೦-೮೦) 'ಗೋವೈದ್ಯ' ಈವರೆಗೆ ತಿಳಿದಿರುವ ಮಟ್ಟಿಗೆ ಕನ್ನಡದಲ್ಲಿ ಮೊದಲನೆಯ ವೈದ್ಯಗ್ರಂಥ. ಅಲ್ಲಿಂದೀಚೆಗೆ ಜಗದ್ದಳ ಸೋಮನಾಥ (ಸು. ೧೧೭೫), ದೇವೇಂದ್ರಮುನಿ (ಸು. ೧೨೦೦), ೧ನೆಯ ಮಂಗರಸ (ಸು. ೧೩೬೦), ಶ್ರೀಧರದೇವ (ಸು. ೧೫೦೦), ಸಾಳ್ವ (ಸು. ೧೫೫೦), ಚೆನ್ನರಾಜ (ನಾರಸಿಂಹಶಾಸ್ತ್ರಿ) (ಸು. ೧೫೭೦), ವೀರಭದ್ರ (ಸು. ೧೬೦೦), ಚಿಕುಪಾಧ್ಯಾಯ (ಕ್ರಿ.ಶ. ೧೬೭೨), ನಂಜನಾಥ ಭೂಪಾಲ (ಸು. ೧೭೦೦), ಶಾಲ್ಯದಕೃಷ್ಣರಾಜ (ಕ್ರಿ.ಶ. ೧೭೪೮), ಬ್ರಹ್ಮ (ಸು. ೧೭೫೦), ತಿಮ್ಮರಾಜೇಗೌಡ (ಸು. ೧೭೫೦),–ಇವರು ಸಂಕಲಿತ, ಅನುವಾದಿತ ಹಾಗೂ ವ್ಯಾಖ್ಯಾನಿತ ವೈದ್ಯ ಗ್ರಂಥಗಳನ್ನು ಬರೆದಿದ್ದಾರೆ. ಈ ಕನ್ನಡದ ವೈದ್ಯಗ್ರಂಥಕರ್ತೃಗಳು ಚರಕ, ಸುಶ್ರುತ, ವಾಗ್ಭಟ, ಶಾರ್ಙ್ಗಧರ, ಸಿದ್ಧಸಾರ, ಧನ್ವಂತರಿ—ಈ ಮೊದಲಾದವರು ಸಂಸ್ಕೃತದಲ್ಲಿ ಬರೆದಿರುವ ಉದ್ದಾಮ ವೈದ್ಯಗ್ರಂಥಗಳನ್ನು ಅಭ್ಯಾಸಮಾಡಿದ್ದರಿಂದೂ ತಮ್ಮ ಗ್ರಂಥಗಳಲ್ಲಿ ಅವನ್ನು ಯಥೋಚಿತವಾಗಿ ಬಳಸಿಕೊಂಡರೆಂದೂ ತಕ್ಕ ಸಾಕ್ಷ್ಯಗಳಿಂದ ಸಿದ್ಧಪಡುತ್ತದೆ. ಜಗದ್ದಳ ಸೋಮನಾಥನು ಪೂಜ್ಯಪಾದಕೃತವಾದ 'ಕಲ್ಯಾಣಕಾರಕ'ವೆಂಬ ವೈದ್ಯಗ್ರಂಥವನ್ನು ಭಾಷಾಂತರಿಸಿದ್ದು, ಸಾಮಾನ್ಯ ವೈದ್ಯವನ್ನು ಕುರಿತ ಗ್ರಂಥವೊಂದು ಕನ್ನಡದಲ್ಲಿ ಮೊದಲಬಾರಿಗೆ ದೊರೆತಂತಾಯಿತು. ದೇವೇಂದ್ರ ಮುನಿಯದು ಬಾಲಗ್ರಹ ಚಿಕಿತ್ಸೆ. ಮಂಗರಸನ ಗ್ರಂಥ ವಿಷವೈದ್ಯವನ್ನು ಕುರಿತ ವಿಸ್ತಾರವಾದ ಗ್ರಂಥ. ಶ್ರೀಧರದೇವನ ಗ್ರಂಥದಲ್ಲಿ ಚಿಕಿತ್ಸೆಯೂ ಮಂತ್ರಗಳೂ ಸೇರಿವೆ. ಬಾಚರಸನದು (ಸು. ೧೫೦೦) ಅಶ್ವವೈದ್ಯ. ವೀರಭದ್ರನದು ಗಜವೈದ್ಯ. ತಿಮ್ಮರಾಜಗೌಡನದು ಸ್ತ್ರೀವೈದ್ಯ. ಉಳಿದ ಕೆಲವು ಗ್ರಂಥಗಳಲ್ಲಿ ಒಂದೆರಡು ಟೀಕೆಯ ಗ್ರಂಥಗಳು, ಮಿಕ್ಕವೆಲ್ಲ ಸಾರಸಂಗ್ರಹಗಳು.

ರಾಜಾದಿತ್ಯ (ಸು. ೧೧೯೦), ಭಾಸ್ಕರ (ಸು. ೧೬೫೦), ತಿಮ್ಮರಸ (ಸು. ೧೭೦೦), ವೈದ್ಯವಲ್ಲಭ (ಸು. ೧೭೦೦), ಬಾಲವೈದ್ಯದ ಚೆಲುವ (ಸು. ೧೭೧೫)—ಇವರು ಕನ್ನಡದ ಗಣಿತಶಾಸ್ತ್ರಕಾರರು. ರಾಜಾದಿತ್ಯನೊಬ್ಬನೇ ಆರು ಗ್ರಂಥಗಳನ್ನು ಬರೆದಿದ್ದಾನೆ. ಈತನೇ ಕನ್ನಡದಲ್ಲಿ ಮೊದಲನೆಯ ಗಣಿತಶಾಸ್ತ್ರಕಾರ. ಗಣಿತದ ವಿವಿಧ ಶಾಖೆಗಳನ್ನು ಚೆನ್ನಾಗಿ ತಿಳಿದವನಾಗಿ ತನ್ನ ಗ್ರಂಥಗಳ ಮೂಲಕ ಪ್ರತ್ಯೇಕವಾಗಿ ಅವನ್ನು ನಿರೂಪಿಸಿದ್ದಾನೆ. ತಿಮ್ಮರಸನು ಪ್ರಾಚೀನ ಜೈನಾಚಾರ್ಯನಾದ ಮಹಾವೀರಾಚಾರ್ಯನ ಸಂಸ್ಕೃತ 'ಗಣಿತಸಾರಸಂಗ್ರಹ'ಕ್ಕೆ ಟೀಕೆಯನ್ನು ಬರೆದಿರುವ ಒಂದು ನಿದರ್ಶನವನ್ನು ಬಿಟ್ಟರೆ, ಉಳಿದವು ಬಹುಮಟ್ಟಿಗೆ ಪೂರ್ವಾಚಾರ್ಯರ ಪದ್ಧತಿಯಂತೆ, ಪರಿಭಾಷೆಯಂತೆ ಪ್ರತಿಪಾದಿಸಿರುವ ಸಾರಸಂಗ್ರಹಗಳಾಗಿರಬಹುದೆಂದು ತೋರುತ್ತದೆ. ಅಂತೂ ಕನ್ನಡದ ಗಣಿತಶಾಸ್ತ್ರಕಾರರು ಮಹಾವೀರಾಚಾರ್ಯ, ಭಾಸ್ಕರಾಚಾರ್ಯ, ಪದ್ಮನಾಭ, ನಾಗರಾಜ—ಈ ಮೊದಲಾದ ಸಂಸ್ಕೃತ ಗಣಿತಶಾಸ್ತ್ರಜ್ಞರ ಗಣಿತ ಗ್ರಂಥಗಳನ್ನು ಅಭ್ಯಾಸ

ಮಾಡಿದವರೂ ಯಥೋಚಿತವಾಗಿ ಅನುಸರಿಸಿದವರೂ ಆಗಿದ್ದಾರೆ ಎಂಬುದಕ್ಕೆ ಆಧಾರಗಳು ದೊರೆಯುತ್ತವೆ.

ಶ್ರೀಧರಾಚಾರ್ಯನ (ಕ್ರಿ.ಶ. ೧೦೪೯) 'ಜಾತಕತಿಲಕ' ಕನ್ನಡದ ಮೊದಲನೆಯ ಜ್ಯೋತಿಷಗ್ರಂಥ. ಈತನ ಅನಂತರದಲ್ಲಿ ಜಟ್ಟಕವಿ (ಸು. ೧೩೦೦) ಮೊದಲಾದವರು ಕೆಲವು ಗ್ರಂಥಗಳನ್ನು ಬರೆದಿದ್ದಾರೆ. ಜಟ್ಟಕವಿ ವೃಷ್ಟಿಶಾಸ್ತ್ರವನ್ನು ಕುರಿತು ಪ್ರತ್ಯೇಕವಾಗಿಯೇ ಬರೆದಿದ್ದಾನೆ. ಇವೆಲ್ಲ ಒಟ್ಟಿನಲ್ಲಿ ಸಂಕಲಿತ ಗ್ರಂಥಗಳೇ ಆಗಿರುವುವೆಂದು ತೋರುತ್ತದೆ. ಶುಭಚಂದ್ರ (ಸು. ೧೫೦೦), ಲಕ್ಷ್ಮಣಾಂಕ (ಸು. ೧೫೦೦), ಚಾಕರಾಜ (ಸು. ೧೫೦೦), ದೇವ (ಸು. ೧೬೫೫)–ಮೊದಲಾದವರು ಸಾಮುದ್ರಿಕ ಹಾಗೂ ಶಕುನಶಾಸ್ತ್ರದ ಕೃತಿಗಳನ್ನು ರಚಿಸಿದ್ದಾರೆ. ಆರ್ಯಭಟ, ವಸಿಷ್ಠ, ಗಾರ್ಗ್ಯ, ವಸಂತರಾಜ, ಲಾಕುಳನಾಥ ಮೊದಲಾದ ಪೂರ್ವಾಚಾರ್ಯರ ಪ್ರಭಾವವೂ ಅನುಸರಣೆಯೂ ಈ ಶ್ರೇಣಿಯ ಕರ್ತೃಗಳ ವಿಷಯದಲ್ಲಿ ಕಾಣುವಂತೆ ತೋರುತ್ತದೆ.

ಅಭಿನವಚಂದ್ರ (ಸು. ೧೪೦೦)ನಿಂದ ಆರಂಭವಾಗಿ ಬಾಚರಸ (ಸು. ೧೫೦೦), ರಾಮಚಂದ್ರ (ಸು. ೧೬೫೫), ಪದ್ಮಣಪಂಡಿತ (ಕ್ರಿ.ಶ. ೧೬೭೭)—ಇವರ ಕೈಯಲ್ಲಿ ಅಶ್ವಶಾಸ್ತ್ರದ ರಚನೆ ಮುನ್ನಡೆದಿದೆ. ರಾಮಚಂದ್ರನು ಶಾಲಿಹೋತ್ರನ ಸಂಸ್ಕೃತ ಅಶ್ವಶಾಸ್ತ್ರವನ್ನು ಭಾಷಾಂತರಿಸಿದ್ದಾನೆ. ಉಳಿದವು ಬಲುಮಟ್ಟಿಗೆ ಸಾರಸಂಗ್ರಹಗಳು. ಸಿಂಹದತ್ತ, ದಿನಕರತನಯ, ರೇವಂತ, ಶಾಲಿಹೋತ್ರ—ಈ ಮೊದಲಾದ ಪೂರ್ವಾಚಾರ್ಯರ ಕೃತಿಗಳನ್ನು ಇವರು ಯಥೋಚಿತವಾಗಿ ಬಳಸಿರಬೇಕೆಂದು ತೋರುತ್ತದೆ.

ಕನ್ನಡದಲ್ಲಿ ಮೊದಲನೆಯ ಕಾಮಶಾಸ್ತ್ರವು ಚಂದ್ರರಾಜನಿಂದ (ಸು. ೧೦೩೦) ರಚಿತವಾಯಿತು. ಬಳಿಕ ಕಲ್ಲರಸ (ಸು. ೧೪೫೦) ಮೊದಲಾದ ಒಬ್ಬರಿಬ್ಬರು ಆ ವಿಷಯದ ಮೇಲೆ ಬರೆದರು. ಶ್ವೇತಕೇತು, ಜತ್ತಕ, ವಾತ್ಸ್ಯಾಯನ, ಪಾಂಚಾಳ, ಕಕ್ಕೋಕ, ಕೂಚಿಮಾರ, ಶಶಭದ್ರ—ಮೊದಲಾದವರ ಗ್ರಂಥಗಳನ್ನು ಓದಿಕೊಂಡವರಾಗಿದ್ದು ಅವರ ಅಭಿಪ್ರಾಯಗಳನ್ನು ಅನುವಾದಿಸಿಯೋ ಸಾರಾಂಶವನ್ನು ಸಂಗ್ರಹಿಸಿಯೋ ತಮ್ಮ ಗ್ರಂಥಗಳನ್ನು ಇವರು ರಚಿಸಿರಬೇಕೆಂಬುದಕ್ಕೆ ನೇರವಾಗಿ ಕೆಲಮಟ್ಟಿಗೆ ಪ್ರಮಾಣಗಳು ದೊರೆಯುತ್ತವೆ. ಪೂರ್ವಶಾಸ್ತ್ರಕಾರರ ಹೆಸರುಗಳು ಹೆಚ್ಚಾಗಿ ತಿಳಿದುಬಂದಿರುವುದು ಕಾಮಶಾಸ್ತ್ರ ಒಂದರ ವಿಷಯದಲ್ಲೇ ಎಂದು ತೋರುತ್ತದೆ.

ಇನ್ನು ಕನ್ನಡದಲ್ಲಿ ಸಂಗೀತಶಾಸ್ತ್ರ ರತ್ನಶಾಸ್ತ್ರ ಇಂತಹವುಗಳಿಗೆ ಸಂಬಂಧಿಸಿದ ಕೃತಿಗಳು ಒಂದೋ ಎರಡೋ ಎನ್ನುವ ಮಟ್ಟಿಗೆ ಅಲ್ಪಸಂಖ್ಯಾಕವಾಗಿ ಗೋಚರಿಸುತ್ತವೆ. ಇವಕ್ಕೂ ಮೂಲವಾಗಿರುವ ಸಂಸ್ಕೃತ ಗ್ರಂಥಗಳು ಇರುವುದು ಸಾಧ್ಯ.

ಪ್ರಮುಖ ಶಾಸ್ತ್ರವಿಷಯಗಳಲ್ಲಿ ಹಲವು ಸಂಪ್ರದಾಯಗಳೂ ಶಾಖೆಗಳೂ ಇದ್ದು, ಅವುಗಳ ವ್ಯಾಪ್ತಿ ವೈವಿಧ್ಯಗಳು ಸಂಸ್ಕೃತ ವಾಙ್ಮಯದಲ್ಲಿ ಬೆರಗುಗೊಳಿಸುವ ಮಟ್ಟಿಗೆ ಕಂಡುಬಂದಿವೆ. ಅವುಗಳ ಅಲ್ಪಾಂಶವನ್ನಷ್ಟೇ ನಾವು ಕನ್ನಡದಲ್ಲಿ ಕಾಣುತ್ತೇವೆ. ಶಾಸ್ತ್ರವಿಷಯಗಳೆಲ್ಲವೂ ಸಂಸ್ಕೃತ ಅಥವಾ ಪ್ರಾಕೃತಮೂಲವನ್ನು ಅನುಸರಿಸಿಯೇ ನಿರೂಪಿತ

ವಾಗಿವೆಯೆಂದೂ ಸ್ವಂತವಾದ ಸಂಗತಿಗಳು ಎಷ್ಟುಮಾತ್ರವೂ ಇಲ್ಲವೆಂದೂ ಹೇಳುವುದ ಕ್ಕಾಗದು. ವೈದ್ಯ ಜ್ಯೋತಿಷ ಗಣಿತ—ಈ ಮೊದಲಾದ ಯಾವುದೇ ಶಾಸ್ತ್ರವಿಷಯ ದಲ್ಲಿಯಾಗಲಿ ಸ್ವಾನುಭವಸಿದ್ಧವಾದ, ರೂಢಿಯಿಂದ ಬಂದ ಸಂಗತಿಗಳು ಕೂಡ ತಕ್ಕ ಪ್ರಮಾಣದಲ್ಲಿಯೇ ಸೇರಿರುವುದು ಸಾಧ್ಯ. ಶಾಸ್ತ್ರವಿಷಯಗಳ ನಿರೂಪಣ ವಿಧಾನದಲ್ಲಿ ಸಂಸ್ಕೃತದ ಶಾಸ್ತ್ರಪರಿಭಾಷೆಯ ಜತೆಜತೆಗೆ ದೇಶೀಯವಾದುದೂ ಕಾಣುತ್ತದೆ. ಮೂಲಾನುಸರಣೆಯ ರೀತಿಯಲ್ಲಿ ಕನ್ನಡ ಕವಿಗಳು ಸ್ವತಂತ್ರವಾದ ವಿಚಾರಶಕ್ತಿಯನ್ನು ಪ್ರಕಟಿಸಿದ್ದಾರೆ. ಅನೇಕ ಪೂರ್ವಾಚಾರ್ಯರ ಪ್ರಸಿದ್ಧವಾದ ಗ್ರಂಥಗಳನ್ನು ಗಾಢವಾಗಿ ಅಭ್ಯಾಸಮಾಡಿ, ಅವರ ಅಭಿಪ್ರಾಯಗಳನ್ನು ಪರಂಪರಾಗತವಾಗಿಯೂ ಅನುಭವಸಿದ್ಧ ವಾಗಿಯೂ ಬಂದ ತಿಳಿವಳಿಕೆಯೊಡನೆ ತೂಗಿನೋಡಿ, ತತ್ಕಾಲೀನವಾದ ಆವಶ್ಯಕತೆ ಪ್ರಯೋಜನಾದಿಗಳಿಗೆ ಅನುಗುಣವಾಗಿ ಆ ಗ್ರಂಥಗಳನ್ನು ಉಪಯೋಗಿಸಿಕೊಂಡಿದ್ದಾರೆ. ಒಂದೇ ಆಕರವನ್ನು ಅವಲಂಬಿಸದೆ ಹಲವನ್ನು ಆಶ್ರಯಿಸಿ ಅವುಗಳಿಂದ ಬೇರೆ ಬೇರೆ ಯಾಗಿ ತಮಗೊಪ್ಪಿದ ವಿಷಯಗಳನ್ನು ಆಯ್ದುಕೊಂಡು ಉಚಿತಕ್ಕೆ ತಕ್ಕಂತೆ ತಕ್ಕೆಡೆ ಗಳಲ್ಲಿ ಸ್ವತಂತ್ರವಾದ ರೀತಿಯಲ್ಲಿ ನಿವೇದಿಸಿರುವುದು ಕಾಣುತ್ತದೆ. ಇಂತಹ ಶಾಸ್ತ್ರ ಗ್ರಂಥಗಳೇ ಕನ್ನಡ ಸಾಹಿತ್ಯದಲ್ಲಿ ಹೆಚ್ಚಾಗಿವೆಯೆಂಬುದು ಹಿಂದಿನ ಸಮೀಕ್ಷೆಯಿಂದ ನಮಗೆ ತಿಳಿದಿದೆ. ಈ ರೀತಿ ಮಾಡಿರುವುದಕ್ಕೆ ಕಾರಣವಿರಬಹುದು. ಯಾವುದೊಂದೇ ಶಾಸ್ತ್ರಗ್ರಂಥದ ಅನುಸರಣೆ ಅಥವಾ ಅನುವಾದವು ಪ್ರಸ್ತುತ ಸ್ಥಿತಿಗತಿಗಳ ದೃಷ್ಟಿಯಿಂದ ಎಷ್ಟರಮಟ್ಟಿಗೆ ಉಪಯುಕ್ತವಾಗಬಹುದು ಎಂಬುದನ್ನು ಇದು ಅವಲಂಬಿಸಿರುವಂತೆ ತೋರುತ್ತದೆ. ನಿರ್ದಿಷ್ಟಮೂಲದ ಶಾಸ್ತ್ರವಿಷಯಗಳು ಪೂರ್ತಿಯಾಗಿ ಗ್ರಾಹ್ಯವಾಗಲು, ಸಾಮಗ್ರಿಗಳ ಅಭಾವ, ವಿಷಯಕ್ಲೇಶ, ಅಸಮರ್ಪಕತೆ, ಕಾಲೋಚಿತವಲ್ಲದಿರುವಿಕೆ—ಈ ಮೊದಲಾದ ಕಾರಣಗಳಿರಬಹುದು. ಆದುದರಿಂದ ಕನ್ನಡದಲ್ಲಿ ಅನುವಾದಿತ ಶಾಸ್ತ್ರ ಗ್ರಂಥಗಳಿಗಿಂತ ಅಧಿಕವಾಗಿ ಆಧಾರಿತ ಮತ್ತು ಸಂಕಲಿತ ಶಾಸ್ತ್ರಗ್ರಂಥಗಳೇ ರಚಿತವಾಗಿರು ವುದು ಕಂಡುಬರುತ್ತದೆ. ಆದರೆ ನಿರ್ದಿಷ್ಟವಾದ ಗ್ರಂಥಮೂಲದ ಭಾಷಾಂತರವೋ ವ್ಯಾಖ್ಯಾನವೋ ಕೂಡ ವಿರಳವಾಗಿ ಆಗಿರುವುದುಂಟು. ಇಂಥವನ್ನು ಆಯಾ ಗ್ರಂಥದ ಮಹತ್ತ್ವವನ್ನೂ ಪ್ರಯೋಜನವನ್ನೂ ಬಲ್ಲವರು ಮಾಡಿದ್ದಾರೆ.

## ಸ್ತೋತ್ರ ಸಾಹಿತ್ಯ

ಕನ್ನಡದ ಸ್ತೋತ್ರಸಾಹಿತ್ಯವನ್ನು ಅಕ್ಷರಮಾಲೆಗಳು ಅಷ್ಟಕಗಳು ಸ್ತುತಿಗಳು ಮತ್ತು ಶತಕಗಳು—ಎಂಬ ನಾಲ್ಕು ವರ್ಗಗಳಲ್ಲಿ ವಿಭಜಿಸಬಹುದು. ಇವುಗಳ ರಚನೆಗೆ ಕನ್ನಡ ಕವಿಗಳನ್ನು ಪ್ರೇರಿಸಿದ್ದು, ವಿವಿಧ ಮಾದರಿಗಳನ್ನು ಒದಗಿಸಿದ್ದು ಸಂಸ್ಕೃತದಲ್ಲಿಯ ಸ್ತೋತ್ರಸಾಹಿತ್ಯವೇ ಎಂದು ತೋರುತ್ತದೆ. ಸಂಸ್ಕೃತದಲ್ಲಿ ಪ್ರಾಚೀನಕಾಲದಿಂದಲೂ ಪ್ರಸಿದ್ಧರಾದವರು ಮೇಲಿನ ನಾಲ್ಕು ವರ್ಗಗಳಲ್ಲಿಯೂ ವಿಪುಲವಾಗಿ ಕೃತಿರಚನೆ ಮಾಡಿ

ದ್ದಾರೆ. ವಸ್ತುವಿನ ಆಯ್ಕೆ, ರಚನೆಯ ಪದ್ಧತಿ—ಇವುಗಳಲ್ಲಿ ಕನ್ನಡ ಕವಿಗಳಿಗೆ ಇಂತಹ ರಚನೆಗಳೇ ಆದರ್ಶ.

ಕನ್ನಡದಲ್ಲಿ ಜೈನಾದ್ಯರಾದ ಎಲ್ಲ ಮತದ ಕವಿಗಳೂ ಅಕ್ಷರಮಾಲೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಈವರೆಗೆ ಸುಮಾರು ಹತ್ತು ಹೆಸರುಗಳು ತಿಳಿದುಬಂದಿವೆ. ಈ ಅಕ್ಷರಮಾಲೆಗಳು ಜಿನ, ಶಿವ ಮತ್ತು ವಿಷ್ಣುಪರವಾದ ಭಕ್ತಿಗೀತೆಗಳಾಗಿವೆ. ವಿರಳವಾಗಿ ಪುರಾಣೇತಿಹಾಸಗಳ ಕಥೆಯೂ ವಿಷಯವಾಗಿದೆ. ಕವಿ ತನ್ನ ಇಷ್ಟದೇವತೆಯನ್ನು ಭಕ್ತಿ ಪೂರ್ವಕವಾಗಿ ಸ್ತುತಿಸಿರುವುದರ ಜತೆಗೆ ಪದ್ಯರಚನೆಯ ಚಮತ್ಕಾರವನ್ನೂ ಏಕಕಾಲದಲ್ಲಿಯೇ ಪ್ರಕಟಿಸಿರುವುದು ಇಲ್ಲಿಯ ವಿಶೇಷ. ಪ್ರತಿಪದ್ಯದ ಆರಂಭವೂ ವರ್ಣಮಾಲೆಯ ಅಕ್ಷರಗಳ ಅನುಕ್ರಮವನ್ನು ಅನುಸರಿಸಿ ಆಗಿರುತ್ತದೆ. ಆದ್ದರಿಂದ ಭಕ್ತಿಪ್ರಕಾಶನದಲ್ಲಿ ಉತ್ಕಟತೆ ಸಹಜತೆಗಳು ಸಾಧ್ಯವಾಗುವುದು ದುರ್ಲಭವೇ ಎನ್ನಬಹುದು. ಕೆಲವು ಕಡೆಗಳಂತೂ ಸಂಸ್ಕೃತ ಸ್ತೋತ್ರಗಳಲ್ಲಿ ಕಾಣುವಂತೆ 'ಅಂತಾದಿ ಕ್ರಮ'ವನ್ನು ಅನುಸರಿಸಿ ಪದ್ಯಾರಂಭವಾಗಬೇಕಾದ ನಿಯಮವನ್ನು ಪಾಲಿಸಿರುವುದು ಕೂಡ ಕಾಣುತ್ತದೆ. ಪೊನ್ನ ಮತ್ತು ಪಾಂಶಕವಿಗಳ ಅಕ್ಷರಮಾಲೆಗಳು ಹೀಗೆ ರಚಿತವಾಗಿರತಕ್ಕವು. ವಿರಳವಾಗಿ ಇಷ್ಟದೇವತೆಯ ಅಂಕಿತ ಹಾಕಿರುವ ಅಕ್ಷರಮಾಲೆಯೂ ಉಂಟು. ಅಜ್ಞಾತಕರ್ತೃಕವಾದೊಂದು 'ಅಕ್ಷರಮಾಲಿಕೆ'ಯಲ್ಲಿ (ಸು. ೧೭೦೦) ಇದನ್ನು ಗಮನಿಸಬಹುದು.

ಕನ್ನಡದಲ್ಲಿಯ ಅಷ್ಟಕಗಳು ಸಂಸ್ಕೃತದಲ್ಲಿಯ ಅಷ್ಟಕಗಳಂತೆಯೇ ದೈವಸ್ತುತಿರೂಪವಾದವು. ಅದೇ ಜಾಡಿನಲ್ಲಿ ವಸ್ತು ಮತ್ತು ಶೈಲಿಗಳಿರತಕ್ಕವು. ಈವರೆಗೆ ಸುಮಾರು ೨೫ಕ್ಕೆ ಮೇಲ್ಪಟ್ಟು ಅಷ್ಟಕಗಳು ಹಿಂದೆ ಬಂದಿರುವುದು ಕಾಣುತ್ತದೆ. ಅಷ್ಟಕವೆಂದು ಹೆಸರು ಹೇಳದಿರುವ ಕೆಲವು ಸ್ತುತಿಗಳೂ ಅಷ್ಟಕಗಳೇ ಆಗಿರುವುದುಂಟು. ಇವೂ ಜಿನ, ಶಿವ ಮತ್ತು ವಿಷ್ಣುಪರವಾದ ಭಕ್ತಿಗೀತೆಗಳೇ. ಅನ್ಯದೇವತಾಸ್ತುತಿಗಳೂ ಶಾಸ್ತ್ರ ಹಾಗೂ ತತ್ತ್ವಗಳನ್ನು ಕುರಿತ ರಚನೆಗಳೂ ಅಷ್ಟಕದಲ್ಲಿರುವುದುಂಟು. ಇವುಗಳಲ್ಲಿ ಸಾಮಾನ್ಯವಾಗಿ ೮ ಅಥವಾ ೯ ಪದ್ಯಗಳಿದ್ದು ಆ ಪದ್ಯಗಳು ಸಾಮಾನ್ಯವಾಗಿ ವೃತ್ತಗಳೋ ಕಂದಗಳೋ ಆಗಿರುತ್ತವೆ. ವೃತ್ತಗಳೇ ಆಗಿದ್ದರೆ, ಕವಿಗೆ ವಿಶೇಷವಾಗಿ ಪ್ರಿಯವೆನ್ನಿಸಿದ ಯಾವುದಾದರೊಂದು ಜಾತಿಯ ವೃತ್ತ ಪೂರ್ತಿಯಾಗಿ ಬಳಕೆಯಾಗಿರುತ್ತದೆ. ಅಕ್ಷರಮಾಲೆಗಳಿಗಿಂತ ಉತ್ತಮವಾದ ರೀತಿಯಲ್ಲಿ ಕವಿಯ ಭಕ್ತ್ಯಾರ್ದ್ರವಾದ ಮನೋಧರ್ಮ ಇಲ್ಲಿ ಪ್ರತಿಬಿಂಬಿತವಾಗಿರುತ್ತದೆ.

ಮೇಲಿನೆರಡು ಬಗೆಯ ರಚನೆಗಳಲ್ಲಿ ಕಾಣುವುದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಪದ್ಯಗಳನ್ನು ಕೆಲವು ಸ್ತೋತ್ರಗಳಲ್ಲಿ, ತಾರಾವಳಿಗಳಲ್ಲಿ ಕಾಣುತ್ತೇವೆ. ಕೆಲವೊಮ್ಮೆ ಅಷ್ಟಕಗಳಲ್ಲಿರುವುದಕ್ಕಿಂತ ಕಡಮೆ ಪದ್ಯಗಳಿರುವುದುಂಟು. 'ಪಂಚರತ್ನ' ಮೊದಲಾದವು ಇಂತಹ ಸ್ತುತಿಗಳು. ಕೆಲವೊಮ್ಮೆ ಶತಕಗಳಲ್ಲಿರುವುದಕ್ಕಿಂತ ಹೆಚ್ಚಾಗಿಯೂ ಪದ್ಯಗಳಿರುವುದುಂಟು. ಪದ್ಯಸಂಖ್ಯೆ ೨೭, ೩೫ ಹೀಗಿರಬಹುದು. ನಕ್ಷತ್ರಗಳ ಸಂಖ್ಯೆಯನ್ನು ಅನುಸರಿಸಿ ೨೭ ಪದ್ಯಗಳಿರುವ ಸ್ತುತಿಗಳನ್ನು ಬರೆಯುವುದು ಕವಿಗಳಿಗೆ

ಹೆಚ್ಚು ಪ್ರಿಯವಾಗಿದ್ದಂತೆ ತೋರುತ್ತದೆ. ಇವುಗಳ ಛಂದಸ್ಸು ಸಾಮಾನ್ಯವಾಗಿ ವೃತ್ತವೋ ಕಂದವೋ ಆಗಿರುತ್ತದೆ. ಷಟ್ಪದಿ ಸಾಂಗತ್ಯ ಮೊದಲಾದ ಬೇರೆ ಛಂದಸ್ಸುಗಳಲ್ಲಿಯೂ ಇರುವುದುಂಟು. ಕೆಲವು ಸ್ತುತಿಗಳು ಅವುಗಳ ಛಂದೋರೂಪಗಳ ಸೂಚಕವಾಗಿ ತ್ರಿಪದಿ, ಸಾಂಗತ್ಯ, ರಗಳೆ, ಪದ ಇತ್ಯಾದಿ ಶಬ್ದಗಳೊಡನೆ ಕೂಡಿಕೊಂಡು ಬಂದಿರುತ್ತವೆ. ಕೆಲವು ಸ್ತುತಿಗಳಲ್ಲಿ, ಪದ್ಯಾಂತದಲ್ಲಿ ಕವಿಗೆ ಇಷ್ಟವಾದ ಅಂಕಿತವಿರುವುದು. ಜೈನಾದ್ಯರಾದ ಎಲ್ಲ ವರ್ಗಗಳ ಕವಿಗಳೂ ಸ್ತುತಿಗಳನ್ನು ಬರೆದಿದ್ದಾರೆ. ಈ ಸ್ತುತಿಗಳು ಎಂದಿನಂತೆ ಜಿನ, ಶಿವ, ಮತ್ತು ವಿಷ್ಣುಪರವಾದವಾಗಿರುವುದೇ ಅಲ್ಲದೆ, ಬೇರೆ ಬೇರೆ ದೇವತೆಗಳ ಸ್ತುತಿರೂಪವಾದವೂ ತಾತ್ತ್ವಿಕ ಮತ್ತು ಅನ್ಯವಿಷಯಗಳನ್ನು ಕುರಿತವೂ ಆಗಿರುವುದು ಕಾಣುತ್ತದೆ. ಉಳಿದೆರಡು ರೀತಿಯ ಸ್ತೋತ್ರ ಪ್ರಕಾರಗಳಿಗಿಂತ ಈ 'ಸ್ತುತಿ'ಗಳಲ್ಲಿ ಕವಿಯ ಇಷ್ಟದೇವತೆಯ ಭಕ್ತಿಪ್ರಕಾಶನಕ್ಕೆ ಹೆಚ್ಚು ಅವಕಾಶವಿದ್ದು, ಕವಿತೆಯ ಚಮತ್ಕಾರವೂ ಅಲ್ಲಲ್ಲಿ ಎದ್ದುಕಾಣುತ್ತದೆ.

ಕನ್ನಡದ ಸ್ತೋತ್ರಸಾಹಿತ್ಯದಲ್ಲಿ ಶತಕಕ್ಕೆ ಅಗ್ರಸ್ಥಾನವಿದೆ. ಅದರ ವ್ಯಾಪ್ತಿ ವಿಚಾರ ಸಾಹಿತ್ಯವನ್ನೂ ಆವರಿಸಿರುವುದು ಕಾಣುತ್ತದೆ. ಉಳಿದ ಸ್ತೋತ್ರ ಪ್ರಕಾರಗಳಿಗಿಂತ ಇದರ ಸಂಖ್ಯೆಯೇ ಹೆಚ್ಚು. ಕನ್ನಡದಲ್ಲಿ ನಾನೂರಕ್ಕಿಂತಲೂ ಹೆಚ್ಚು ಶತಕಗಳಿವೆಯೆಂಬುದಾಗಿ ಕೆಲವರು ಎಣಿಸಿದ್ದಾರೆ. ಈ ಪ್ರಕಾರದ ಕವಿಜನಪ್ರಿಯತೆಯೂ ಜನಪ್ರಿಯತೆಯೂ ಎಷ್ಟೆಂಬುದು ಇದರಿಂದ ತಿಳಿಯುತ್ತದೆ. ಜೈನ, ವೀರಶೈವ ಮತ್ತು ಬ್ರಾಹ್ಮಣ ಕವಿಗಳೆಲ್ಲ ಶತಕಗಳನ್ನು ಬರೆದಿದ್ದಾರೆ. ಜೈನಕವಿಗಳಿಗಿಂತ ಉಳಿದ ಕವಿಗಳ ರಚನೆಯೇ ಹೆಚ್ಚು. ಈ ಮೂರು ವರ್ಗದವರಲ್ಲದೆ ರಾಜವಂಶಿಕರು ಮತ್ತು ಇತರರು ಕೂಡ ಶತಕಗಳನ್ನು ಬರೆದಿದ್ದಾರೆ. ಬ್ರಾಹ್ಮಣ ಮತ್ತು ವೀರಶೈವ ಕವಿಗಳು ಕನ್ನಡದಲ್ಲಿ ಶತಕರಚನೆಗೆ ಪ್ರವರ್ತಕರಾದರೆಂದೂ ಅವರು ಹಾಕಿದ ಮೇಲ್ಪಂಕ್ತಿಯಲ್ಲಿ ಜೈನ ಕವಿಗಳು ಈಚೆಗೆ ಶತಕಗಳನ್ನು ಬರೆಯತೊಡಗಿದರೆಂದೂ ಹೇಳಬಹುದು.

ಕನ್ನಡ ಶತಕಗಳ ಸಾಮಾನ್ಯ ಸ್ವರೂಪವನ್ನು ಈಗ ಗಮನಿಸಬಹುದು. ಶತಕಗಳು ಎಂದರೆ ನೂರು ಪದ್ಯಗಳಿರತಕ್ಕ ಕೃತಿ ಎಂದರ್ಥ. ಸಾಮಾನ್ಯವಾಗಿ ೧೦೧ ಪದ್ಯಗಳಿರುವುದೇ ಪದ್ಧತಿ. ೧೦೦ ಅಥವಾ ೧೦೧ ಪದ್ಯಗಳಿಗಿಂತ ಒಂದು ಮಿತಪ್ರಮಾಣದಲ್ಲಿ ಹೆಚ್ಚು ಪದ್ಯಗಳಿರುವುದೂ ಉಂಟು. ಆಗಲೂ ಅಂತಹ ಕೃತಿಗಳು ಶತಕಗಳ ಸಾಮಾನ್ಯ ಗುಣ ಲಕ್ಷಣಗಳಿಂದಾಗಿ ಶತಕಗಳಲ್ಲೇ ಗಣ್ಯವಾಗುತ್ತವೆ. ಕೆಲವೊಮ್ಮೆ ಇದೇ ಕಾರಣಕ್ಕಾಗಿ ೧೦೦ಕ್ಕೆ ಸ್ವಲ್ಪ ಕಡಮೆಯಾಗಿ ಪದ್ಯಸಂಖ್ಯೆಯಿರುವ ಕೃತಿಗಳನ್ನೂ ಶತಕಗಳೆಂದು ಹೇಳಬಹುದಾಗಿ ತೋರುತ್ತದೆ. ಕನ್ನಡ ಶತಕಗಳು ವಿವಿಧ ಛಂದಸ್ಸುಗಳಲ್ಲಿ ರಚಿತವಾಗಿವೆ. ವೃತ್ತ ಕಂದಗಳಲ್ಲಿರುವುದೇ ಸಾಮಾನ್ಯವಾದರೂ ಷಟ್ಪದಿ ಸಾಂಗತ್ಯ ಮೊದಲಾದ ಬೇರೆ ಬೇರೆ ಛಂದಸ್ಸುಗಳಲ್ಲಿರುವುದು ಕೂಡ ಉಂಟು. ವೃತ್ತಗಳಲ್ಲಿದ್ದಾಗ, ಖ್ಯಾತಕರ್ಣಾಟಕ ವೃತ್ತಗಳಲ್ಲಿ ಯಾವುದಾದರೊಂದು ಸಮಗ್ರವಾಗಿಯೋ ಅಥವಾ ಬೇರೆಬೇರೆಯಾದವು ಸಮ್ಮಿಶ್ರವಾಗಿಯೋ ಬಳಕೆಯಾಗಿರುತ್ತವೆ. ಒಟ್ಟಿನಲ್ಲಿ ಅಭಿವ್ಯಕ್ತವಾಗಿರುವ ಭಕ್ತಿ

ಅಥವಾ ವಿಚಾರದ ಅವ್ಯವಚ್ಛಿನ್ನವಾದ ಗತಿಗೆ ಅಡ್ಡಿಯೇನೂ ಬರುವುದಿಲ್ಲ. ಹಿತಮಿತವಾದ ಕವಿತೆಯ ಚಮತ್ಕಾರವೂ ಶಬ್ದಾರ್ಥಾಲಂಕಾರಗಳ ವಿನ್ಯಾಸವೂ ಶತಕದ ಕಾವ್ಯತ್ವಕ್ಕೆ ಶೋಭಾಕರವಾಗಿರುತ್ತವೆ. ಕೃತಿಯ ಪ್ರಮಾಣಮಿತಿ ಅದನ್ನು ಓದುಗಂಗೆ ಆತ್ಮೀಯವನ್ನಾಗಿ ಮಾಡಲು ಸಹಾಯಕವಾಗುವಂತೆಯೇ ಅಡಕವಾಗಿ ಬರುವ ನಿರ್ದಿಷ್ಟ ವಸ್ತುವಿನ ಐಕ್ಯ ಕೃತಿಯ ಒಟ್ಟಂದವನ್ನು ಹೆಚ್ಚಿಸಲು ಪೋಷಕವಾಗಿರುತ್ತದೆ.

ಕನ್ನಡ ಶತಕಗಳ ವಸ್ತುವೈವಿಧ್ಯ ವಿಶಾಲವಾದುದು. ಅದು ಶತಕಕರ್ತೃವಿನ ಇಷ್ಟ ದೈವದ ಭಕ್ತಿಯನ್ನು ಪ್ರಕಾಶಪಡಿಸುವ ಒಂದು ಉತ್ತಮವಾದ ವಾಹಕವಾಗಿರುವುದೇ ಅಲ್ಲದೆ, ವೇದಾಂತ, ವೈರಾಗ್ಯ, ನೀತಿ, ತತ್ತ್ವ ಮೊದಲಾದವನ್ನು ಕುರಿತು ಕವಿ ಹರಿಯ ಬಿಡುವ ಸ್ವವಿಚಾರಲಹರಿಯ ಪ್ರಣಾಲಿಕೆಯೂ ಆಗಿರುತ್ತದೆ. ಭಕ್ತಿ ಜ್ಞಾನ ವೈರಾಗ್ಯಗಳೂ ನೀತಿನಿರೂಪಣೆಯೂ ಒಂದಕ್ಕೊಂದು ಪೂರಕವಾಗಿ ಬರುವುದೇ ಸಾಮಾನ್ಯ, ಒಂದ ಕ್ಕೊಂದು ಹೆಣೆದುಕೊಂಡು ಬರುವುದೇ ಸಾಮಾನ್ಯ. ಇವೇ ಶತಕರಚನೆಯ ಮುಖ್ಯ ಧ್ಯೇಯವೂ ಮೂಲಸ್ರೋತವೂ ಆಗಿರತಕ್ಕವು. ಸಂಕೀರ್ಣವಿಷಯಗಳು ಕೆಲವೊಮ್ಮೆ ಶತಕಗಳ ವಸ್ತುವಾಗಬಹುದು. ಶೃಂಗಾರ, ಮರಣ ಲಕ್ಷಣ, ಕಥೆ, ಭಾಷಾಸ್ವರೂಪ ಮೊದಲಾದವುಗಳನ್ನು ಒಳಕೊಂಡು ಕನ್ನಡದಲ್ಲಿ ಶತಕಗಳು ಹುಟ್ಟಿರುವುದನ್ನು ಇಲ್ಲಿ ನೆನೆಯಬಹುದು.

ಶತಕಗಳನ್ನು ಕುರಿತ ಈ ಅವತರಣಿಕೆಯನ್ನು ಇಲ್ಲಿ ನೋಡಬಹುದು: "ಶತಕಗಳು ಆಕಾರದಲ್ಲಿ ಕಿರಿಯವಾದರೂ ಪುರುಷಾರ್ಥ ಪ್ರತಿಪಾದನೆಯನ್ನು ಮಾಡುವುವು. ಸತ್ಯ, ನೀತಿ, ಭಕ್ತಿ, ವೈರಾಗ್ಯಗಳನ್ನು ಸಾರುವುವು. ಅನುಭವದ ಘಟ್ಟಿಗಳಂತಿದ್ದು ವ್ಯವಹಾರಜ್ಞಾನವನ್ನು ವ್ಯಕ್ತಪಡಿಸುವುವು. ಕೆಲವು ವೇಳೆ ಪ್ರಭುಸಮ್ಮಿತದಂತೆ ಹೇಳಬೇಕಾದ ಧರ್ಮವನ್ನು ರಸವತ್ತಾಗಿಯೂ ರಮಣೀಯವಾಗಿಯೂ ಕಾಂತಾಸಮ್ಮಿತದಂತೆ ಶತಕಗಳು ಹೇಳುವುವು." ಈ ಅವತರಣಿಕೆಯನ್ನೂ ನೋಡಿ: "ಭಕ್ತಿ ಜ್ಞಾನ ವೈರಾಗ್ಯಬೋಧಕಗಳಾದ ಶತಕಗಳು ಭಾಷಾಭೂಷಣಗಳಾಗಿ ಪೂಜಾರ್ಹಗಳು, ಪಠನಾರ್ಹಗಳು, ಸ್ಮರಣಾರ್ಹಗಳು, ಮನನಾರ್ಹಗಳು....ಹೆಚ್ಚಾಗಿ ನಿತ್ಯಸತ್ಯವನ್ನು ಸಾರುವುದರಿಂದ ದೈವಪರವಾಗಿ ಮೋಕ್ಷಕಾರಣಗಳು....ಅನೇಕ ಶತಕಗಳಲ್ಲಿ ಜ್ಞಾನಿಗಳ ಅನುಭವದೊಂದಿಗೆ ಪುರಾಣ ಪುರುಷರ ಜೀವನ ಆದರ್ಶಗಳು ಹಾಸುಹೊಕ್ಕುಗಳಾಗಿ ಬಂದಿರುವುದರಿಂದ ಅವುಗಳಿಗೆ ಒಂದು ಪ್ರಮಾಣದ ಯೋಗ್ಯತೆ ಬಂದಿರುತ್ತದೆ."[೨೬]

ಉತ್ತಮ ಶತಕಗಳಲ್ಲಿ ಕವಿ ಸಹೃದಯರ ಹೃದಯಸಂವಾದ ಸಫಲವಾಗಿ ಕೈಗೂಡಿರುತ್ತದೆ. ಭಾವೋತ್ಕರ್ಷವೂ ವಿಚಾರೋನ್ಮೀಲನವೂ ಪದ್ಯದಿಂದ ಪದ್ಯಕ್ಕೆ ಉಕ್ಕಂದವಾಗಿ ಏರುತ್ತ ಹೋಗುತ್ತದೆ. ಅವು ನಿರ್ಮಲಭಕ್ತಿಗೆ ಅಚ್ಛೋದಸರಸ್ಸು, ಲೋಕನೀತಿಯ ಅರಿವಿಗೆ ರನ್ನಗನ್ನಡಿ.

## ಸಿದ್ಧಾಂತಾದಿ ಗ್ರಂಥಗಳು

ಕನ್ನಡ ಸಾಹಿತ್ಯದಲ್ಲಿ ಕಾವ್ಯಗಳ ರಚನೆಯಂತೆಯೇ ಶಾಸ್ತ್ರಗಳ ರಚನೆಯೂ

ಸಿದ್ಧಾಂತಾದಿ ಗ್ರಂಥಗಳ ರಚನೆಯೂ ಪ್ರಾಚೀನ ಇತಿಹಾಸವನ್ನುಳ್ಳದ್ದಾಗಿವೆ. ಸಂಸ್ಕೃತ ಪ್ರಾಕೃತಾದಿ ಭಾಷೆಗಳೊಡನೆ ಕನ್ನಡವೂ ಗಣ್ಯತೆಯನ್ನು ಪಡೆದ ಭಾಷೆಯಾಗಿದ್ದು, ಆಯೆರಡು ಭಾಷೆಗಳಲ್ಲಿ ಹೇಗೋ ಹಾಗೆಯೇ ಈ ಭಾಷೆಯುಲ್ಲಿಯೂ ಹಿಂದಿನಿಂದ ಸಮ ಸಮವಾಗಿ ಸಿದ್ಧಾಂತಾದಿ ಗ್ರಂಥಗಳು ವಿಪುಲವಾಗಿ ರಚಿತವಾಗಿರುವುದು ಕಂಡುಬರುತ್ತದೆ. ಜೈನಾಚಾರ್ಯರಾದ ತುಂಬಲೂರಾಚಾರ್ಯ ಮತ್ತು ಶ್ಯಾಮಕುಂದಾಚಾರ್ಯ ಇವರು ಕನ್ನಡಸಾಹಿತ್ಯಕ್ಕೆ ಈಗ ತಿಳಿದಿರುವಂತೆ ಆದ್ಯ ಸಿದ್ಧಾಂತಗ್ರಂಥಕಾರರು. ಇವರು ಪ್ರಾಕೃತ ಸಂಸ್ಕೃತಗಳಲ್ಲಿಯೂ ಕನ್ನಡದಲ್ಲಿಯೂ ಏಕರೀತಿಯಾಗಿ ಪಾಂಡಿತ್ಯವನ್ನು ಪಡೆದಿದ್ದರೆಂದು ತಿಳಿಯುವುದು. ಅಲ್ಲಿಂದೀಚೆಗೆ ಜೈನಕವಿಗಳಲ್ಲಿಯೂ ಆಚಾರ್ಯರಲ್ಲಿಯೂ ಪ್ರಸಿದ್ಧ ರೆನಿಸಿದ ಬ್ರಹ್ಮಶಿವ (ಸು. ೧೧೯೦), ಮಾಘಣಂದಿ (ಸು. ೧೨೫೩) ಮೊದಲಾದವರು ಬಗೆಬಗೆಯ ಸಿದ್ಧಾಂತಗ್ರಂಥಗಳನ್ನು ಬರೆದಿದ್ದಾರೆ. ಇವರಲ್ಲಿ ಹಲವರು ಸಂಸ್ಕೃತ ಪ್ರಾಕೃತ ಗಳನ್ನು ಬಲ್ಲವರೆಂದೇ ತೋರುತ್ತದೆ. ಇವರ ಕೃತಿಗಳು ಜೈನಸಿದ್ಧಾಂತದ ಪ್ರಮುಖ ಹಾಗೂ ಸಾಮಾನ್ಯ ತತ್ತ್ವಗಳಾದ ರತ್ನತ್ರಯಗಳು, ದ್ವಾದಶಾನುಪ್ರೇಕ್ಷೆಗಳು, ಅಷ್ಟಾಂಗ ಗಳು, ಅಣುವ್ರತಗಳು, ಲೋಕಸ್ವರೂಪ ಮೊದಲಾದವನ್ನು ಕುರಿತಿವೆ. ಇವುಗಳಲ್ಲಿ ಕೆಲವು, ನಿರ್ದಿಷ್ಟ ಸಂಸ್ಕೃತ ಪ್ರಾಕೃತ ಗ್ರಂಥಮೂಲವನ್ನು ಅನುಸರಿಸಿ ಬರೆದ ಟೀಕೆಗಳು, ಅನುವಾದಗಳು ಅಥವಾ ಅನುಸರಣೆಗಳು. ಇನ್ನು ಕೆಲವು ವಿವಿಧ ಮೂಲಗಳಿಂದ ಉಚಿತ ವಾದಷ್ಟನ್ನು ಮಾತ್ರ ಸಂಗ್ರಹಿಸಿ ನಿರೂಪಿಸಿರುವ ಸಂಕಲನಗಳು, ಸಾರಸಂಗ್ರಹಗಳು. ಇಂತಹ ಕೃತಿಗಳ ಉದ್ದೇಶ ಮುಖ್ಯವಾಗಿ ಜೈನಮತದ ಸಾರಭೂತವಾದ ತತ್ತ್ವಗಳನ್ನು ಧರ್ಮದಲ್ಲಿ ಶ್ರದ್ಧಾನ್ವಿತರಾದ ಸಾಮಾನ್ಯರಿಗೆ ಅಭ್ಯಾಸ ಅನುಷ್ಠಾನಾದಿಗಳಿಗೆಂದು ತಿಳಿಸಿ ಕೊಡುವುದೇ ಆಗಿದೆ. ವಸ್ತು ಮಾತ್ರವೇ ಅಲ್ಲದೆ, ಈ ಗುರಿಯೂ ಅದನ್ನು ಸಾಧಿಸಿರುವ ರೀತಿಯೂ ಸಂಸ್ಕೃತ ಪ್ರಾಕೃತ ಮೂಲದ ಸಿದ್ಧಾಂತ ಸಾಹಿತ್ಯದಿಂದ ಪ್ರೇರಿತವಾದವೆಂದೇ ಹೇಳಬಹುದು.

ವೀರಶೈವ ಕವಿಗಳು ಜೈನಕವಿಗಳಿಗಿಂತ ಅಧಿಕವಾಗಿ ಸಿದ್ಧಾಂತ ಮತ್ತು ತಾತ್ತ್ವಿಕ ಗ್ರಂಥಗಳ ರಚನೆಗೆ ತೊಡಗಿದಂತೆ ತೋರುತ್ತದೆ. ವಚನಸಾಹಿತ್ಯದ ಬಹುಭಾಗವು ಸಿದ್ಧಾಂತ ಮತ್ತು ತಾತ್ತ್ವಿಕ ವಿಷಯಗಳಿಂದ ತುಂಬಿಕೊಂಡಿದ್ದು, ಅವುಗಳ ಪ್ರತಿ ಪಾದನ ವಿಧಾನವೂ ಪರಿಭಾಷೆಯೂ ಸಂಸ್ಕೃತ ವಾಙ್ಮಯದ ವೇದೋಪನಿಷತ್ತುಗಳ ಪುರಾಣಾಗಮಾದಿಗಳ ವಿಶೇಷ ಪ್ರಭಾವವನ್ನು ಪ್ರತಿಬಿಂಬಿಸುತ್ತವೆ. ವಚನಕವಿಗಳಲ್ಲಿ ಪ್ರಮುಖರೂ ಇತರ ಹಲವರೂ ಸಂಸ್ಕೃತದ ಪ್ರಮಾಣ ಗ್ರಂಥಗಳ ಹಾಗೂ ಅಧ್ಯಾತ್ಮ ಗ್ರಂಥಗಳ ಪರಿಚಯವನ್ನು ಪಡೆದಿದ್ದರೆಂಬುದಕ್ಕೆ ಸಾಕ್ಷ್ಯಗಳು ದೊರೆಯುತ್ತವೆ. ವಚನ ಗಳಲ್ಲಿಯೂ ವಚನೇತರ ವೀರಶೈವಸಾಹಿತ್ಯದಲ್ಲಿಯೂ ಶ್ರುತಿಸ್ಮೃತ್ಯಾದಿಗಳ ಸಾರಾನು ವಾದವನ್ನು ಮಾಡಿಕೊಡುವುದರ ಜತೆಗೆ ಎಡೆಯೆಡೆಯಲ್ಲಿ ಅವುಗಳ ಸೂಕ್ತಿಗಳನ್ನು ಪ್ರಮಾಣಗಳಾಗಿ ಉದ್ಧರಿಸಿರುವುದುಂಟು, ಟೀಕೆಗಳನ್ನು ಬರೆದಿರುವುದುಂಟು. ಭಾರತೀಯ ಸಂಸ್ಕೃತಿ, ಮತಧರ್ಮ ಮತ್ತು ವಿಶಿಷ್ಟ ಆಚರಣೆಗಳು ಶ್ರುತಿಸ್ಮೃತ್ಯಾದಿಗಳ ಅವಲಂಬನ

ದಿಂದಲೇ ಆರ್ಷೇಯ ಕಾಲದಿಂದ ಬೆಳೆದು ಬಂದಿರುವುದರಿಂದ ವಚನಸಾಹಿತ್ಯವೂ ಅವುಗಳ ಪ್ರೇರಣೆಗೆ ಒಳಗಾಗಿರುವುದು ಸಹಜವೇ ಆಗಿದೆ. ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವ, ಸಿದ್ಧರಾಮ ಈ ಮೊದಲಾದವರ ವಚನಗಳಲ್ಲಿಯೂ ವಚನೇತರ ರೀತಿಯ ರಚನೆಗಳಾದ ಮಂತ್ರಗೋಪ್ಯ ಕರಣಹಸಿಗೆ ಮೊದಲಾದವುಗಳಲ್ಲಿಯೂ 'ಲಿಂಗಲೀಲಾವಿಲಾಸ ಚಾರಿತ್ರ', 'ಗಣಭಾಷಿತ ರತ್ನಮಾಲೆ', 'ಶೂನ್ಯಸಂಪಾದನೆ'—ಮುಂತಾದ ವಿಶಿಷ್ಟ ರೀತಿಯ ವಚನಗಳಸಂಕಲನಗಳಲ್ಲಿಯೂ ಇದನ್ನು ನಾವು ಗಮನಿಸಬಹುದಾಗಿದೆ. ನಿಜಗುಣ ಶಿವಯೋಗಿಯಂತಹ (ಸು. ೧೫೦೦) ವೀರಶೈವ ವೇದಾಂತಿಗಳು ಸಂಸ್ಕೃತ ಭಾಷೆಯ ಶಾಸ್ತ್ರ ಮತ್ತು ವೇದಾಂತ ವಿಷಯಗಳಲ್ಲಿ ಆಗಾಧವಾದ ವ್ಯುತ್ಪತ್ತಿಯನ್ನು ಗಳಿಸಿದ್ದರು. ಕೆಲವು ವೀರಶೈವ ಕವಿಗಳು ಕಾಮಿಕಾಗಮ ಕಾರಣಾಗಮ ಮೊದಲಾದ ಶೈವಾಗಮಗಳ ವಿಷಯಗಳನ್ನು ಅನುವಾದಿಸಿಯೋ ಸಂಗ್ರಹಿಸಿಯೋ ವ್ಯಾಖ್ಯಾನಿಸಿಯೋ ಇದ್ದರೆ ಇನ್ನು ಕೆಲವರು ಸ್ವತಂತ್ರವಾಗಿಯೇ ಸಂಸ್ಕೃತದಲ್ಲಿ ಸಿದ್ಧಾಂತ ಗ್ರಂಥಗಳನ್ನು ರಚಿಸಿದ್ದಾರೆ. ಕೆಲವರು ತಮ್ಮ ಕೃತಿಗಳನ್ನೇ ವೇದ ವೇದಾಂತಾದಿಗಳ ಸಾರಸಂಗ್ರಹವೆಂದು ಉಗ್ಗಡಿಸಿದ್ದಾರೆ.

ಬ್ರಾಹ್ಮಣ ಮತ್ತು ಇತರ ಕೆಲವು ಕವಿಗಳ ಸಿದ್ಧಾಂತಾದಿ ಗ್ರಂಥಗಳು ಕಾಲಮಾನದ ದೃಷ್ಟಿಯಿಂದ ೧೫ನೆಯ ಶತಮಾನದಿಂದ ಈಚೆಗೆ ಮಾತ್ರವೇ ಕಾಣುತ್ತದೆ. ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಸಿದ್ಧಾಂತದ ಮೇಲೆ ಗ್ರಂಥಗಳನ್ನು ಇವರು ಬರೆದಿದ್ದಾರೆ. ಪರಂಜ್ಯೋತಿಯತಿ (ಸು. ೧೪೫೦), ಮಹಲಿಂಗರಂಗ (ಸು. ೧೬೭೫), ಚಿದಾನಂದ (ಸು. ೧೭೫೦) ಮೊದಲಾದವರು ಅದ್ವೈತ ವಿಷಯಕವಾಗಿಯೂ ಚಿಕ್ಕದೇವರಾಜ, ಚಿಕ್ಕುಪಾಧ್ಯಾಯ, ದೊಡ್ಡ ತಿಮ್ಮದಾಸ (ಸು. ೧೭೦೦) ಮೊದಲಾದವರು ವಿಶಿಷ್ಟಾದ್ವೈತ ವಿಷಯಕವಾಗಿಯೂ ಜಗನ್ನಾಥದಾಸ (ಸು. ೧೭೭೫), ಆರ್ಯಾಚಾರ್ಯ (ಸು. ೧೮೫೦) ಮೊದಲಾದವರು ದ್ವೈತಸಿದ್ಧಾಂತ ವಿಷಯಕವಾಗಿಯೂ ಕೃತಿರಚನೆ ಮಾಡಿದ್ದಾರೆ. ಒಟ್ಟಿನಲ್ಲಿ ಅದ್ವೈತದ ಮೇಲಿನ ಗ್ರಂಥಗಳೇ ಹೆಚ್ಚಾಗಿವೆ. ಇವುಗಳಲ್ಲಿ ಒಂದೆರಡು ಅನುವಾದಿತ ಗ್ರಂಥಗಳ ಹೊರತಾಗಿ ಉಳಿದವು ಬಲುಮಟ್ಟಿಗೆ ವಿವಿಧ ಪ್ರಮಾಣಗ್ರಂಥಗಳ ಸಾರಾರ್ಥ ಸಂಗ್ರಹಗಳು, ಚಿಕ್ಕ ಪ್ರಮಾಣದವು. ಇವೆಲ್ಲ ಸಂಸ್ಕೃತ ಭಾಷೆಯ ಪರಿಚಯವಿಲ್ಲದವರ ಸಹಾಯಕ್ಕಾಗಿ ಸುಲಭವಾಗಿ ಕನ್ನಡದಲ್ಲಿ ರಚಿತವಾಗಿರುವ ವೇದಾಂತ ಗ್ರಂಥಗಳು. ಕೆಲವರು ಕವಿಗಳಂತೂ ಈ ಉದ್ದೇಶವನ್ನು ವ್ಯಕ್ತವಾಗಿಯೇ ತಮ್ಮ ಗ್ರಂಥಗಳಲ್ಲಿ ಸಾರಿದ್ದಾರೆ. ಮೂಲದಲ್ಲಿ ವಿಸ್ತಾರವೂ ಜಟಿಲವೂ ಆದ ಸೈದ್ಧಾಂತಿಕ ವಿಷಯಗಳನ್ನು ಸಂಕ್ಷೇಪಿಸಿಯೂ ಸರಳಗೊಳಿಸಿಯೂ ಕನ್ನಡದಲ್ಲಿ ನಿರೂಪಿಸುವ ಪ್ರಯತ್ನದಲ್ಲಿ ಅವರು ಬಲುಮಟ್ಟಿಗೆ ಯಶಸ್ವಿಗಳಾಗಿದ್ದಾರೆ. ತತ್ತ್ವಗಳನ್ನು ಹಾಡಿನ ರೂಪದಲ್ಲಿ ಕಟ್ಟಿ ಜನಪ್ರಿಯಗೊಳಿಸುವ ಯತ್ನವೂ ನಡೆದಿದೆ. 'ಭಗವದ್ಗೀತೆ,' 'ಗೀತಗೋವಿಂದ'—ಇಂತಹ ಪ್ರಸಿದ್ಧ ಸಂಸ್ಕೃತ ಸಾಹಿತ್ಯದ ಕೃತಿಗಳನ್ನು ಅನುವಾದಿಸುವ ಮತ್ತು ವ್ಯಾಖ್ಯಾನಿಸುವ ಉತ್ಸಾಹವೂ ಕಂಡುಬಂದಿದೆ. ಭಗವದ್ಗೀತೆಯಲ್ಲಿ ಒಂದು ಶಂಕರ ಭಾಷ್ಯಾನುಸಾರವಾಗಿಯೂ ಇನ್ನೊಂದು ಮಧ್ವ ಭಾಷ್ಯಾನುಸಾರವಾಗಿಯೂ ಇರುವ ಕನ್ನಡ ರೂಪಗಳು

ದೊರೆಯುತ್ತವೆ. ವಿರಾಮಭೇದದಿಂದ ಉಭಯಭಾಷಾ ರೂಪವಾಗಿರುವಂತೆ ರಚಿತವಾಗಿರುವ ಶ್ರೀನಿವಾಸ ಕವಿಯ (ಸು. ೧೮೧೨) 'ಕೃಷ್ಣನೃಪ ಜಯೋತ್ಕರ್ಷ' ಸಂಸ್ಕೃತ ಭಾಷಾಪಾಂಡಿತ್ಯ ನಿದರ್ಶಕವಾದ ಒಂದು ವಿಶಿಷ್ಟ ಕೃತಿ.

## ಸಂಸ್ಕೃತ ಸಾಹಿತ್ಯ : ಕನ್ನಡಿಗರ ಕಾಣಿಕೆ, ಪ್ರಭಾವ

ಸಂಸ್ಕೃತಾದಿ ಅನ್ಯಭಾಷಾಸಾಹಿತ್ಯಗಳ ಪ್ರಭಾವ ಕನ್ನಡದ ಮೇಲೆ ಆಗಿರುವಷ್ಟು ಪ್ರಬಲವಾಗಿ ಕನ್ನಡದ ಪ್ರಭಾವ ಅನ್ಯಭಾಷಾಸಾಹಿತ್ಯಗಳ ಮೇಲೆ ಆಗಿರುವಂತೆ ತೋರುವುದಿಲ್ಲ. ಪ್ರಸ್ತುತ, ಕನ್ನಡ ಕವಿಗಳು ಸಂಸ್ಕೃತ ಸಾಹಿತ್ಯಕ್ಕೆ ಸಲ್ಲಿಸಿರುವ ಕಾಣಿಕೆಯನ್ನೂ ಆ ಸಾಹಿತ್ಯದ ಮೇಲೆ ಉಂಟಾಗಿರುವ ಕನ್ನಡ ಸಾಹಿತ್ಯದ ಪ್ರಭಾವವನ್ನೂ ಈಗ ಸ್ವಲ್ಪ ಮಟ್ಟಿಗೆ ಗಮನಿಸಬಹುದು. ದ್ರಾವಿಡ ಭಾಷೆಗಳ ಮೇಲೆ ಸಂಸ್ಕೃತ ಭಾಷೆಯ ಪ್ರಭಾವವಾಗಿರುವಂತೆಯೇ, ಪದಕೋಶ ಮತ್ತು ಶಬ್ದರಚನೆಗಳ ದೃಷ್ಟಿಯಿಂದ ಸಂಸ್ಕೃತ ಭಾಷೆಯ ಮೇಲೆಯೂ ದ್ರಾವಿಡಭಾಷೆಗಳ ಪ್ರಭಾವವಾಗಿದೆಯೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ವಿಶಿಷ್ಟವಾಗಿ ಕನ್ನಡದಿಂದ ಎರವಲಾಗಿ ಹೋದ ಶಬ್ದಗಳಾವುವು, ವ್ಯಾಕರಣಾಂಶಗಳ ಪ್ರಭಾವ ಯಾವುದು—ಇವನ್ನು ನಿರ್ಧರಿಸುವುದಕ್ಕೆ ತಕ್ಕ ಪ್ರಮಾಣಗಳಿಲ್ಲ. ಪ್ರಾಚೀನ ಕನ್ನಡ ಕವಿಗಳು ಬಲುಮಟ್ಟಿಗೆ ಸಂಸ್ಕೃತ ಕನ್ನಡ ಎರಡು ಭಾಷೆಗಳಲ್ಲಿಯೂ ಸಮದಂಡಿಯಾಗಿ ಪಾಂಡಿತ್ಯವನ್ನು ಗಳಿಸಿದ್ದವರು; ಆಯೆರಡು ಭಾಷೆಗಳ ಸಾಹಿತ್ಯವನ್ನೂ ಚೆನ್ನಾಗಿ ಅಭ್ಯಾಸ ಮಾಡಿದ್ದು, ಎರಡರಲ್ಲಿಯೂ ಕೃತಿ ರಚನೆಯ ಸಾಮರ್ಥ್ಯವನ್ನು ಪಡೆದಿದ್ದವರು. ಉಭಯಕವಿ, ಉಭಯಕವಿತಾವಿಲಾಸ, ಉಭಯಭಾಷಾಕವಿಚಕ್ರವರ್ತಿ, ಸಂಸ್ಕೃತ ಕರ್ಣಾಟಕ ಕವಿತಾವಿಶಾರದ ಎಂದು ಮುಂತಾಗಿ ಬಿರುದಾಂಕಿತರಾದವರು. ಹೀಗಿದ್ದುದರಿಂದ ಅವರಲ್ಲಿ ಕೆಲವರು ಕನ್ನಡ ಸಾಹಿತ್ಯದ ಮೇಲಿನ ವಿಶೇಷ ಅಭಿಮಾನದಿಂದಲೂ ಕೆಲವು ವಿಶೇಷ ಕಾರಣಗಳಿಂದಲೂ ಕನ್ನಡದಲ್ಲಿಯೇ ಕೃತಿರಚನೆಮಾಡಿದರು; ಇನ್ನು ಕೆಲವರು ಸಂಸ್ಕೃತ ಭಾಷೆಯಲ್ಲಿಯೂ ಕೃತಿರಚನೆಮಾಡಿ ಆ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸುವುದಕ್ಕೆ ಸಹಾಯವಾದವರು. ದುರ್ವಿನೀತಾದಿಗಳ ಕಾಲದಿಂದ ಇದಕ್ಕೆ ನಮಗೆ ಸ್ಪಷ್ಟವಾದ ನಿದರ್ಶನಗಳು ಗೋಚರವಾಗುತ್ತವೆ.

ಪಶ್ಚಿಮಗಂಗರ ಅರಸನಾಗಿ ಪ್ರಸಿದ್ಧನಾಗಿರುವ ಕನ್ನಡರಾಜ ದುರ್ವಿನೀತನು(ಸು. ೬೦೦) ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ದೊಡ್ಡ ವಿದ್ವಾಂಸನಾಗಿದ್ದನೆಂಬ ವಿಷಯ ಶಾಸನಾಧಾರಗಳಿಂದಲೂ ಸಾಹಿತ್ಯಿಕ ಆಧಾರಗಳಿಂದಲೂ ತಿಳಿಯುತ್ತದೆ. ನೃಪತುಂಗನು ಕನ್ನಡ ಗದ್ಯ ಕವಿಗಳ ಸಾಲಿನಲ್ಲಿ ಕೀರ್ತಿಸಿರುವ ದುರ್ವಿನೀತನು ಈತನೇ ಆಗಿರಬಹುದೆಂಬುದು ಸಾಮಾನ್ಯ ಗ್ರಹಿಕೆ. ಈತನದೆಂದು ತಿಳಿಯುವ ಭಾರವಿಯ 'ಕಿರಾತಾರ್ಜುನೀಯ'ದ ೧೫ನೆಯ ಸರ್ಗದ ಟೀಕೆ, 'ವಡ್ಡಕಥಾ' ಮತ್ತು 'ಶಬ್ದಾವತಾರ' ಎಂಬ ಕೃತಿಗಳು ಸಂಸ್ಕೃತ ಭಾಷೆ

ಯಲ್ಲಿ ಬರೆದವೆಂದು ಹಲವರ ಅಭಿಪ್ರಾಯವಾಗಿದ್ದರೆ, ಅವು ಕನ್ನಡದಲ್ಲಿ ಬರೆದವೆಂದು ಕೆಲವರು ಭಾವಿಸುತ್ತಾರೆ. 'ವಡ್ಡಕಥೆ' ಬೃಹತ್ಕಥೆಯ ಸಂಸ್ಕೃತಾನುವಾದವೆಂದು ಗ್ರಹಿಸಿ, ಈಗ ತಿಳಿದಿರುವ ಬುಧಸ್ವಾಮಿ ಮೊದಲಾದವರ ಸಂಸ್ಕೃತಾನುವಾದಗಳ ಶ್ರೇಣಿಯಲ್ಲಿ ಸರ್ವಪ್ರಥಮವಾದ ಈ ಅನುವಾದ ಗ್ರಂಥವು ಇಂದು ಉಪಲಬ್ಧವಿಲ್ಲದಿರುವುದು ಸಂಸ್ಕೃತ ಸಾಹಿತ್ಯಕ್ಕೆ ಉಂಟಾಗಿರುವ ದೊಡ್ಡ ನಷ್ಟವೆಂಬುದಾಗಿ ಕೆಲವರು ತಿಳಿದಿದ್ದಾರೆ. ಕೃತಿ ಸ್ವರೂಪದಲ್ಲಿ ಹೀಗೆ ಭಿನ್ನಮತವಿದ್ದರೂ, ಕನ್ನಡ ನಾಡಿನ ಒಬ್ಬ ಅರಸು ಸಂಸ್ಕೃತ ಕನ್ನಡ ಸಾಹಿತ್ಯಗಳಿಗೆ ಸ್ವತಃ ಪೋಷಕನಾದ ವಿಷಯ ನೆನೆಯತಕ್ಕದ್ದಾಗಿದೆ. ಈ ದೊರೆಯ ಆಶ್ರಯದಲ್ಲಿಯೇ ಪ್ರಸಿದ್ಧನಾದ ಭಾರವಿ ಕವಿ ಕೆಲಕಾಲವಿದ್ದನೆಂಬ ಸಂಗತಿಯೂ ಇಲ್ಲಿ ಸ್ಮರಣಾರ್ಹವಾಗಿದೆ.

ತುಂಬಲೂರಾಚಾರ್ಯನು (ಸು. ೬೫೦) ಕನ್ನಡದಲ್ಲಿ 'ಚೂಡಾಮಣಿ' ವ್ಯಾಖ್ಯಾನವನ್ನು ಬರೆದಿರುವಂತೆಯೇ ಪ್ರಾಕೃತ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಸಿದ್ಧಾಂತ ಪ್ರಬಂಧಗಳನ್ನು ಮಾಡಿದಂತೆಯೂ ತಿಳಿಯುವುದು. ಅವಾವುವೂ ದೊರೆತಿಲ್ಲ. ಅದ ರಿಂದಾಗಿ ಪ್ರಾಕೃತ ಸಂಸ್ಕೃತ ಸಿದ್ಧಾಂತ ಸಾಹಿತ್ಯಕ್ಕೆ ಈ ಕವಿಯ ಕಾಣಿಕೆಯೇನೆಂಬುದು ತಿಳಿಯುವಂತಿಲ್ಲ. ಹಾಗೆಯೇ ಶ್ಯಾಮಕುಂದಾಚಾರ್ಯನು (ಸು. ೬೫೦) ಕೆಲವು ಜೈನಾಗಮ ಗ್ರಂಥಗಳ ಮುಖ್ಯ ಭಾಗಗಳಿಗೆ ಸಂಸ್ಕೃತ ಪ್ರಾಕೃತ ಮತ್ತು ಕನ್ನಡ ಭಾಷೆ ಗಳಲ್ಲಿ 'ಪದ್ಧತಿ'ಯೆಂಬ ಟೀಕೆ ರಚಿಸಿದಂತೆ ತಿಳಿದು ಬಂದಿದೆ. ಅವು ಕೂಡ ಲಭ್ಯವಾಗಿಲ್ಲ.

ಸಂಸ್ಕೃತ ಕನ್ನಡ ಭಾಷೆಗಳಲ್ಲಿ ರಚನಾಸಾಮರ್ಥ್ಯವಿದ್ದ ಕವಿಗಳಲ್ಲಿ ಅಸಗನ (ಕ್ರಿ.ಶ. ೮೫೩) ಹೆಸರು ಮುಖ್ಯವಾದುದು. ಈತನನ್ನು ಅನೇಕ ಕನ್ನಡ ಕವಿಗಳು ಸ್ತುತಿಸಿದ್ದಾರೆ. ಕನ್ನಡ ಕವಿಗಳು ಪೂರ್ವಕವಿಸ್ತವದಲ್ಲಿ ಸಾಮಾನ್ಯವಾಗಿ ಅನುಸರಿಸುವ ಪದ್ಧತಿ ಯಂತೆಯೂ ಇತರ ಕನ್ನಡ ಕವಿಗಳ ಗುಂಪಿನಲ್ಲಿಯೇ ಅಸಗನ ಹೆಸರೂ ಹೊಂದಿಬರು ವುದರಿಂದಲೂ ಈತನನ್ನು ಪ್ರಸಿದ್ಧ ಕನ್ನಡ ಕವಿಯೆಂದೇ ಗಣಿಸುವುದು ಸೂಕ್ತ. ಈ ಕವಿಯ 'ಕರ್ಣಾಟ ಕುಮಾರಸಂಭವ ಕಾವ್ಯ'ವೆಂಬ ಕನ್ನಡದ ಕೃತಿಯನ್ನು ಜಯ ಕೀರ್ತಿಯೆಂಬ ಸಂಸ್ಕೃತಲಾಕ್ಷಣಿಕನು ಹೆಸರಿಸಿದ್ದಾನೆ. ಸಂಸ್ಕೃತ ಭಾಷೆಯಲ್ಲಿ ಈತನು ಬರೆದಿರುವ 'ವರ್ಧಮಾನ ಪುರಾಣ' ಮತ್ತು 'ಶಾಂತಿ ಪುರಾಣ'ಗಳು ಉಪಲಬ್ಧವಾಗಿವೆ. ಈತನು ರಚಿಸಿದಂತೆ ತಿಳಿಯುವ ಇತರ ಗ್ರಂಥಗಳು ಯಾವ ಭಾಷೆಯಲ್ಲಿದ್ದವೆಂಬುದು ತಿಳಿಯದು. ಅಂತೂ ಸಂಸ್ಕೃತ ಭಾಷೆಯ ಜೈನಸಾಹಿತ್ಯಕ್ಕೆ ಅಸಗನ ಕಾಣಿಕೆ ಗಣ್ಯ ವಾದ್ದಾಗಿದೆ.

ಮಲ್ಲಿಕಾರ್ಜುನ ಕೇಶಿರಾಜಾದ್ಯರಿಂದ ಸ್ತುತವಾಗಿರುವ ಕನ್ನಡ ಕವಿ ಗುಣನಂದಿ (ಕ್ರಿ.ಶ. ಸು. ೯೦೦) ಪ್ರಾಯಃ ಪೂಜ್ಯಪಾದನ ಜೈನೇಂದ್ರ ವ್ಯಾಕರಣಕ್ಕೆ 'ಪ್ರಕ್ರಿಯಾ ವತಾರ'ವೆಂಬ ವ್ಯಾಖ್ಯಾನರೂಪವಾದ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾನೆ. ಪೂಜ್ಯ ಪಾದನ ವ್ಯಾಕರಣಕ್ಕೆ ಈ ವ್ಯಾಖ್ಯಾನವೇ ಸರ್ವಪ್ರಥಮವಾದುದಾಗಿರುವಂತೆ ತೋರು ತ್ತದೆ.

ಕನ್ನಡ ರತ್ನತ್ರಯರಲ್ಲಿ ಒಬ್ಬನಾದ ಪೊನ್ನನ 'ಗತಪ್ರತ್ಯಾಗತ'ವೆಂಬ ಕೃತಿ ಪ್ರಾಯಃ ಸಂಸ್ಕೃತ ಭಾಷೆಯಲ್ಲಿದ್ದಿರಬಹುದೆಂಬ ಊಹೆಯಿದೆ. ಚಾವುಂಡರಾಯನ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಸಂಸ್ಕೃತ ಜೈನ ಸಾಹಿತ್ಯದ ಪೂರ್ವಕವಿಗಳಲ್ಲಿ ಪ್ರಸಿದ್ಧನಾಗಿರುವ ಕವಿಪರಮೇಷ್ಠಿಯ ಸಂಸ್ಕೃತ 'ಮಹಾಪುರಾಣ'ದ ('ವಾಗರ್ಥಸಂಗ್ರಹ') ಕೆಲವು ಪದ್ಯಗಳನ್ನು ಉಳಿಸಿಕೊಟ್ಟಿರುವ ಏಕೈಕ ಗ್ರಂಥವಾಗಿದೆ; ಹಾಗೆಯೇ ಸಂಸ್ಕೃತದಲ್ಲಿರುವ ಜಟಾಸಿಂಹನಂದಿಯ 'ವರಾಂಗ ಚರಿತ'ದ ಕರ್ತೃತ್ವ ವಿಚಾರದಲ್ಲಿ ಹೊಸ ಬೆಳಕನ್ನು ಬೀರಿರುವ ಸಹಾಯಕ ಗ್ರಂಥವಾಗಿದೆ. 'ಚಾರಿತ್ರಸಾರ'ವೆಂಬ ಸಂಸ್ಕೃತ ಭಾಷೆಯ ಒಂದು ಸಿದ್ಧಾಂತ ಗ್ರಂಥ ಕೂಡ ಚಾವುಂಡರಾಯನ ಹೆಸರಿನಲ್ಲಿಯೇ ಪ್ರಸಿದ್ಧವಾಗಿರುವುದನ್ನು ಇಲ್ಲಿ ನೆನೆಯಬಹುದು. ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ ಚಾವುಂಡರಾಯನ ಗುರುವಾಗಿದ್ದು, ಆತನ ಪ್ರೇರಣೆಯಂತೆ 'ಗೊಮ್ಮಟಸಾರ' ಮತ್ತು 'ತ್ರಿಲೋಕಸಾರ'ಗಳೆಂಬ ಎರಡು ಸಿದ್ಧಾಂತ ಗ್ರಂಥಗಳನ್ನು ರಚಿಸಿದನು. ಆತನ ಪ್ರೇರಣೆಯಂತೆಯೇ ಇವುಗಳಿಗೆ ಕ್ರಮವಾಗಿ ಅಭಯಚಂದ್ರನೂ ಮಾಧವಚಂದ್ರತ್ರೈವಿದ್ಯದೇವನೂ ಟೀಕೆಗಳನ್ನು ಬರೆದರು.

ಶಾಂತಿನಾಥಕವಿಯ (೧೦೬೮) 'ಸುಕುಮಾರಚರಿತೆ'ಯನ್ನು ಮೂಲವಾಗಿಟ್ಟುಕೊಂಡು ರಾಮಚಂದ್ರ ಮುಮುಕ್ಷುವೆಂಬ (ಕ್ರಿ.ಶ. ೧೦೬೮ರಿಂದ ೧೩೩೧ರೊಳಗೆ) ಕವಿ ತನ್ನ 'ಪುಣ್ಯಾಸ್ರವ ಚಂಪೂ' ಎಂಬ ಸಂಸ್ಕೃತ ಕಾವ್ಯದ ಒಂದು ಭಾಗವಾದ ಸುಕುಮಾರ ಚರಿತೆಯನ್ನು ಬರೆದಿರುವಂತೆ ತೋರುತ್ತದೆ—ಎಂಬುದಾಗಿ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಕನ್ನಡ ಸಾಹಿತ್ಯದ ಪ್ರಭಾವ ಸಂಸ್ಕೃತ ಸಾಹಿತ್ಯದ ಮೇಲೆ ಕಂಡುಬಂದಿರುವುದಕ್ಕೆ ಇದು ಮೊದಲನೆಯ ಒಳ್ಳೆಯ ನಿದರ್ಶನವೆನ್ನಬಹುದು.

ಶ್ರವಣಬೆಳ್ಗೊಳದ ಜೈನಮಠದಲ್ಲಿ ಗುರುವಾಗಿದ್ದ ಪಂಡಿತಾಚಾರ್ಯನು (ಕ್ರಿ.ಶ. ಸು. ೧೪೦೦ರಿಂದ ೧೭೫೮) ಸಂಸ್ಕೃತದಲ್ಲಿ ಆದಿತೀರ್ಥಂಕರನ ಚರಿತೆಯನ್ನು 'ಗೀತವೀತರಾಗ' ಎಂಬ ಹೆಸರಿನಿಂದ ರಚಿಸಿದ್ದಾನೆ.

ಈಗ ವೀರಶೈವ ಕವಿಗಳು ಸಂಸ್ಕೃತ ಸಾಹಿತ್ಯಕ್ಕೆ ಸಲ್ಲಿಸಿರುವ ಕಾಣಿಕೆಯನ್ನೂ ಇತರ ಸಂಗತಿಗಳನ್ನೂ ನೋಡಬಹುದು. ವೀರಶೈವ ಕವಿಗಳಲ್ಲಿ ಪ್ರಸಿದ್ಧನಾದ ಹರಿಹರನು (ಕ್ರಿ.ಶ. ೧೨೦೦) ಶಿವಭಕ್ತರ ರಗಳೆಗಳ ಕರ್ತೃವಾಗಿ ಸಂಸ್ಕೃತ ಸಾಹಿತ್ಯದಲ್ಲಿ ಕೀರ್ತಿತನಾಗಿದ್ದಾನೆ. ನೀಲಕಂಠನಾಗನಾಥಾಚಾರ್ಯನು ಸಂಸ್ಕೃತದಲ್ಲಿ ರಚಿಸಿರುವ 'ವೀರಮಾಹೇಶ್ವರಾಚಾರ ಸಂಗ್ರಹ'ವೆಂಬ ಗ್ರಂಥದಲ್ಲಿ 'ದೇಶಭಾಷೆಯಲ್ಲಿ ಪುರಾತನರ ಚಾರಿತ್ರವನ್ನು ಕೃತಿಮಾಡಿದ ಹಂಪೆಯ ಹರೀಶ್ವರನಿಗೆ ನಮಿಸುತ್ತೇನೆ' ಎಂದಿದ್ದಾನೆ. ಕೆರೆಯ ಪದ್ಮರಸನು (೧೨೦೦) ಕನ್ನಡದಲ್ಲಿ ಬರೆದಿರುವಂತೆಯೇ ಸಂಸ್ಕೃತದಲ್ಲಿಯೂ 'ಸಾನಂದ ಚರಿತೆ'ಯನ್ನು ಬರೆದಿದ್ದಾನೆ. ಪಾಲ್ಕುರಿಕೆ ಸೋಮನಾಥನ ಕೃತಿಗಳಲ್ಲಿ 'ಅನ್ಯವಾದ ಕೋಲಾಹಲ,' 'ಬಸವರಾಜೀಯ' (ಸೋಮನಾಥಭಾಷ್ಯ) ಮತ್ತು 'ಬಸವಣ್ಣನ ಪಂಚಗದ್ಯ' ಸಂಸ್ಕೃತ ಭಾಷೆಯ ರಚನೆಗಳು. ವೀರಶೈವ ವ್ಯಾಖ್ಯಾನಕಾರರಲ್ಲಿ ಗುರುದೇವನೆಂಬವನು (ಸು. ೧೩೫೦) ಸಂಸ್ಕೃತದಲ್ಲಿ 'ವೀರಶೈವಾಚಾರ ಪ್ರದೀಪಿಕೆ'ಯೆಂಬ ಸ್ವತಂತ್ರ ಗ್ರಂಥವನ್ನು ಬರೆದಿದ್ದಾನೆ.

ಕನ್ನಡದಲ್ಲಿಯೂ ಕೃತಿ ರಚನೆಮಾಡಿದಂತೆ ತಿಳಿಯುವ ನೀಲಕಂಠ ಶಿವಾಚಾರ್ಯನು (ಸು. ೧೪೦೦) ಬ್ರಹ್ಮಸೂತ್ರಗಳಿಗೆ ಸಂಸ್ಕೃತದಲ್ಲಿಯೇ 'ಕ್ರಿಯಾಸಾರ'ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಚೆನ್ನಸದಾಶಿವಯೋಗಿಯ 'ಶಿವಯೋಗಪ್ರದೀಪಿಕೆ,' ಸಿಟ್ವೂರ ನಂಜಯ್ಯನ 'ವೀರಶೈವ ಚಿಂತಾಮಣಿ' ಮೊದಲಾದವು ಸ್ವತಂತ್ರವಾಗಿ ರಚಿಸಿದ ಸಂಸ್ಕೃತ ಗ್ರಂಥಗಳು, ವೇದಾಂತ ವಿಶಾರದನಾದ ನಿಜಗುಣಶಿವಯೋಗಿ (ಸು. ೧೫೦೦) ಸಂಸ್ಕೃತದಲ್ಲಿ 'ದರ್ಶನಸಾರ,' 'ತರ್ಕಚಿಂತಾಮಣಿ' ಎಂಬ ಕೃತಿಗಳನ್ನು ಬರೆದಿದ್ದಂತೆ ತಿಳಿಯುವುದಾದರೂ ಅವು ಇಂದು ದೊರೆಯುವುದಿಲ್ಲ. ಚಾಮರಸನ 'ಪ್ರಭುಲಿಂಗಲೀಲೆ' ಸಂಸ್ಕೃತಕ್ಕೆ ಪರಿವರ್ತಿತವಾಗಿದೆ. ಇದರ ಕರ್ತೃ ಪ್ರಾಯಃ ಪಿಡುಪರ್ತಿ ಸೋಮನಾಥ ಕವಿಯಿರಬೇಕೆಂದು ತಿಳಿಯಲಾಗಿದೆ. ಸಂಪಾದನೆಯ ಸಿದ್ಧವೀರಣಾಚಾರ್ಯನು (ಸು. ೧೬೦೦) ಸಂಸ್ಕೃತದಲ್ಲಿ 'ಅನಾದಿ ವೀರಶೈವಾಚಾರ ಸಂಗ್ರಹ'ವೆಂಬ ಕೃತಿಯನ್ನು ಬರೆದಿದ್ದಾನೆ. ಕನ್ನಡದ ಖ್ಯಾತ ಕವಿಗಳಲ್ಲಿ ಒಬ್ಬನಾದ ಷಡಕ್ಷರಿ (ಕ್ರಿ.ಶ. ೧೬೫೫) ಸಂಸ್ಕೃತದಲ್ಲಿ 'ಕವಿಕರ್ಣ ರಸಾಯನ'ವೆಂಬ ಮಹಾಕಾವ್ಯವನ್ನೂ 'ಶಿವಾಧಿಕ್ಯ ರತ್ನಾವಳಿ', 'ಭಕ್ತಾಧಿಕ್ಯ ರತ್ನಾವಳಿ' ಎಂಬೆರಡು ಮತಗ್ರಂಥಗಳನ್ನೂ 'ಶಿವಸ್ತವಮಂಜರಿ' 'ವೀರಭದ್ರೋದಾಹರಣ ಗದ್ಯ' 'ಬಸವಾಷ್ಟಕ' 'ನೀಲಾಂಬಿಕಾ ಸ್ತೋತ್ರ' ಮೊದಲಾದ ಸ್ತೋತ್ರಗಳನ್ನು ರಚಿಸಿದ್ದಾನೆ. ಕನ್ನಡದಲ್ಲಿ 'ಶಂಕರಸಂಹಿತೆ'ಯನ್ನು ಬರೆದಿರುವ ಮುಮ್ಮಡಿ ತಮ್ಮ (ಕ್ರಿ.ಶ. ೧೬೬೫) ಸಂಸ್ಕೃತದಲ್ಲಿ 'ಕೌಮುದೀ ವ್ಯಾಖ್ಯಾನ' 'ರಸಿಕ ಮನೋರಂಜನ' ಎಂಬ ಗ್ರಂಥಗಳನ್ನು ಕೂಡ ಬರೆದಿದ್ದಾನೆ. ನಿರ್ವಾಣ ಮಂತ್ರಿ (ಸು. ೧೭೭೫) ಎಂಬ ಕವಿ ನೀಲಕಂಠಶಿವಾಚಾರ್ಯನ 'ಕ್ರಿಯಾಸಾರ'ದ ಕೆಲವು ಭಾಗಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿರುವುದೇ ಅಲ್ಲದೆ, ನಿಜಗುಣಶಿವಯೋಗಿಯ 'ವಿವೇಕಚಿಂತಾಮಣಿ'ಯ ಸ್ವಲ್ಪ ಭಾಗವನ್ನು ಸಂಸ್ಕೃತಕ್ಕೆ ಪರಿವರ್ತಿಸಿಯೂ ಇದ್ದಾನೆ. ಇಕ್ಕೇರಿಯ ಅರಸು ಬಸವಪ್ಪನಾಯಕನು (ಸು. ೧೭೦೦) 'ಸೂಕ್ತಿಸುಧಾಕರ'ವೆಂಬ ವಸ್ತುಕಕಾವ್ಯವನ್ನು ಕನ್ನಡದಲ್ಲಿ ಬರೆದಿರುವಂತೆಯೇ ಸಂಸ್ಕೃತದಲ್ಲಿಯೂ ಬರೆದಿದ್ದಾನೆಂದು 'ಕೆಳದಿ ನೃಪವಿಜಯ'ದಲ್ಲಿ ಉಕ್ತವಾಗಿದೆ. ಕೆಳದಿ ಬಸವರಾಜನ (ಕ್ರಿ.ಶ. ೧೭೦೯) 'ಶಿವತತ್ತ್ವರತ್ನಾಕರ' 'ವಿವೇಕಚಿಂತಾಮಣಿ'ಯ ಹಾಗೆಯೇ ವಿಶ್ವಕೋಶ ರೀತಿಯಲ್ಲಿ ರಚಿತವಾಗಿರುವ ಒಂದು ಅದ್ಭುತ ಪರಿಶ್ರಮದ ಸಂಸ್ಕೃತ ಗ್ರಂಥವಾಗಿದೆ.

ಕನ್ನಡದಲ್ಲಿ ಕೃತಿರಚನೆಮಾಡಿರುವ ಬ್ರಾಹ್ಮಣ ಕವಿಗಳಲ್ಲಿ ಸಿದ್ಧಾಂತ ಮತ್ತು ಮತಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದವರು ಹೆಚ್ಚಾಗಿಲ್ಲವೆಂದು ತೋರುತ್ತದೆ. ಮಾಧ್ವಕವಿಗಳಲ್ಲಿ ಕೆಲವರು ಸಿದ್ಧಾಂತ ಗ್ರಂಥಗಳನ್ನು ಬರೆದಿದ್ದಾರೆ. 'ರಂಗವಿಠಲ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ಬರೆದಿರುವ ಶ್ರೀಪಾದರಾಯನು (ಸು. ೧೫೦೦) ಸಂಸ್ಕೃತದಲ್ಲಿ 'ವಾಗ್ವಜ್ರ' ಮೊದಲಾದ ಕೆಲವು ಪ್ರೌಢ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಶಿಷ್ಯನಾದ ವ್ಯಾಸರಾಯನು (ಸು.೧೫೩೫) ಸಂಸ್ಕೃತದಲ್ಲಿ 'ನ್ಯಾಯಾಮೃತ,' 'ತರ್ಕತಾಂಡವ,' 'ಚಂದ್ರಿಕೆ' ಮೊದಲಾದ ಪ್ರಸಿದ್ಧ ಗ್ರಂಥಗಳನ್ನು ಬರೆದಿದ್ದಾನೆ.

ಸಂಸ್ಕೃತದಲ್ಲಿ ಪರಂಪರೆಯಿಂದ ಪರಿಷ್ಕಾರವಾಗಿ ಬೆಳೆದುಕೊಂಡು ಬಂದಿರುವ ಶಾಸ್ತ್ರ

ಪ್ರಸ್ಥಾನವೇ ಎಲ್ಲ ದೇಶಭಾಷೆಗಳ ಶಾಸ್ತ್ರಕಾರರಿಗೂ ಮೂಲಾಧಾರವೆಂಬುದಾಗಿ ಸಾಮಾನ್ಯವಾಗಿ ತಿಳಿಯಬಹುದು. ಆದರೂ ಅವರು ಶಾಸ್ತ್ರಗಳ ಲಕ್ಷಣಗ್ರಂಥಗಳ ರಂಗಗಳಲ್ಲಿ ಅಲ್ಪವಾದರೂ ಬೆಲೆಯುಳ್ಳ ಕಾಣಿಕೆಯನ್ನು ಸಂಸ್ಕೃತ ಸಾಹಿತ್ಯಕ್ಕೆ ಸಲ್ಲಿಸಿರುವುದು ಕಂಡು ಬರುತ್ತದೆ. ಇಲ್ಲಿ ಮುಖ್ಯವಾಗಿ ಕನ್ನಡ ಲಾಕ್ಷಣಿಕರ ಅಲಂಕಾರ, ಛಂದಸ್ಸು ಮತ್ತು ವ್ಯಾಕರಣಗಳ ರಂಗಗಳಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಆಗಿರುವ ಪ್ರಯೋಜನವನ್ನು ಸ್ವಲ್ಪ ಮಟ್ಟಿಗೆ ನೋಡಬಹುದು. ಕವಿರಾಜಮಾರ್ಗಕಾರನು ದೋಷ ವಿವೇಚನೆಯ ಭಾಗದಲ್ಲಿ ಹೊಸತನವನ್ನು ತೋರಿದ್ದಾನೆ. ನಾಗವರ್ಮನು "ರೀತಿ ವಿನೂತವಸ್ತುಕೃತಿಗೊಪ್ಪುವ ಮೆಯ್ ರಸಭಾವವೃತ್ತಿನಿರ್ಣೀತಿಯೆ ಜೀವಂ...." ಎಂದು ಹೇಳಿರುವ ವಿವರಣೆಯನ್ನು ಗಮನಿಸಿ "ವಾಮನನು ರೀತಿ ಕಾವ್ಯದ ಆತ್ಮ ಎಂದು ಹೇಳಿದ್ದನ್ನು ನಾಗವರ್ಮನು ಅಂಗೀಕರಿಸದೆ, ಅದು ಕಾವ್ಯದ ಶರೀರ ಎಂದು ಹೇಳಿ ಅದಕ್ಕೆ ಸಮಂಜಸವಾದ ಸ್ಥಾನವನ್ನು ಕೊಟ್ಟದ್ದು ಭಾರತೀಯ ಕಾವ್ಯಮೀಮಾಂಸೆಗೇ ಅವನ ಕಾಣಿಕೆಯೆನ್ನಬಹುದು; ಅವನಿಗಿಂತ ಹಿಂದೆ ಸಂಸ್ಕೃತದಲ್ಲಿ ಕೂಡ ಯಾರೂ ಹೀಗೆ ಹೇಳಿಲ್ಲ"[26]—ಎಂಬುದಾಗಿ ಅಭಿಪ್ರಾಯಪಟ್ಟಿರುವುದು ಗಮನಾರ್ಹವಾಗಿದೆ. ಆದರೆ ಈ ವಿಚಾರದಲ್ಲಿ ಅಭಿಪ್ರಾಯ ಭೇದವೂ ಇಲ್ಲದೆ ಇಲ್ಲ.[27] ಹೀಗೆಯೇ ಕವಿಕಾಮನು (ಸು. ೧೨೦೦) 'ಶೃಂಗಾರ ರತ್ನಾಕರ'ದಲ್ಲಿ ವಾಗ್ವೃತ್ತಿ, ನೇಪಥ್ಯ, ಕ್ರಿಯಾ, ಸಂಕೀರ್ಣ ಮತ್ತು ವ್ಯಸ್ತ ಎಂಬ ಐದು ಬಗೆಗಳನ್ನು ಶೃಂಗಾರರಸದಲ್ಲಿಯೂ ಈ ಐದರಲ್ಲಿ ಮೊದಲ ಮೂರು ಬಗೆಗಳನ್ನು ಮಿಕ್ಕ ರಸಗಳಲ್ಲಿಯೂ ವಿಂಗಡಿಸಿ ಹೇಳಿರುವುದು ಗಮನಾರ್ಹವಾಗಿದೆ. ಈ ಬಗೆಯ ವಿಭಾಗ ಕಲ್ಪನೆಯು ಸಂಸ್ಕೃತ ಅಲಂಕಾರ ಗ್ರಂಥಗಳಲ್ಲಿರುವಂತೆ ತೋರುವುದಿಲ್ಲ. ಈ ಸಂಗತಿಗೆ ಕವಿಕಾಮನ ಅಭಿಪ್ರಾಯದ ಮೇಲಿನ ಟೀಕೆಯಾಗಿ ಸಾಳ್ವನು 'ರಸರತ್ನಾಕರ'ದಲ್ಲಿ ಹೇಳಿರುವ ವಿವರಣೆಯು ಪುಷ್ಟಿಯನ್ನು ಕೊಡುವುದಾಗಿದೆ. ಸಾಳ್ವನು ತನ್ನ ವಿವರಣೆಯ ಕೊನೆಗೆ "ಅಲ್ಲದೆ ಪಿಂತೆ ಪೇಟ್ದ ಆಚಾರ್ಯರಾರುಂ ಇಂತೆ ನಿರೂಪಿಸಿದುದಿಲ್ಲಂ" ಎಂದು ಹೇಳಿದ್ದಾನೆ.

ಕನ್ನಡ ಆಲಂಕಾರಿಕರಲ್ಲಿ ಒಬ್ಬನಾದ ಸಾಳ್ವನ (೧೫೫೦) 'ರಸರತ್ನಾಕರ'ದಿಂದ ರುದ್ರಭಟ್ಟನೆಂಬವನು 'ರಸಕಳಿಕೆ'ಯೆಂಬೊಂದು ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನೆಂಬ ವಿಷಯ ಮೊದಲ ಬಾರಿಗೆ ಗೊತ್ತಾಗುತ್ತದೆ. ಈ ಅಲಂಕಾರಗ್ರಂಥದ ಕರ್ತೃ 'ಜಗನ್ನಾಥ ವಿಜಯ'ದ ಕರ್ತೃವಾದ ಕನ್ನಡ ಕವಿ ರುದ್ರಭಟ್ಟನೇ ಎಂದು ಕೆಲವರು ತಿಳಿಯುತ್ತಾರೆ. 'ಅಲಂಕಾರರಸ ಸಂಗ್ರಹ'ದ ಕರ್ತೃವಾದ ತಿಮ್ಮನು (ಸು. ೧೬೦೦) ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕೃತಿರಚನೆ ಮಾಡಿದ್ದಂತೆ ತೋರುತ್ತದೆ.

ಸಂಸ್ಕೃತ ಲಕ್ಷಣಸಾಹಿತ್ಯಕ್ಕೆ ಅಲಂಕಾರ ಗ್ರಂಥಗಳಿಂದ ಆಗಿರುವ ಪ್ರಯೋಜನಕ್ಕಿಂತ ಛಂದಶ್ಶಾಸ್ತ್ರ ಗ್ರಂಥಗಳಿಂದ ಆಗಿರುವ ಪ್ರಯೋಜನವೇ ಹೆಚ್ಚು ಎಂದು ತೋರುತ್ತದೆ. ಕನ್ನಡ ಛಂದೋಗ್ರಂಥಗಳ ರಚನೆಗೆ ಪ್ರೇರಣೆ ದೊರೆತದ್ದು ಸಂಸ್ಕೃತ ಛಂದೋಗ್ರಂಥಗಳಿಂದಲೇ, ಅವುಗಳಿಗೆ ತಕ್ಕ ಮಾದರಿಗಳು ನಿರ್ಮಾಣವಾದ್ದು ಅಲ್ಲಿಯೇ ಎಂಬುದು ನಿಶ್ಚಯ. ಹೀಗಿದ್ದೂ ಕನ್ನಡ ಛಂದಶ್ಶಾಸ್ತ್ರಕಾರರು ತಕ್ಕಮಟ್ಟಿಗೆ ಹೊಸ ಪದ್ಧತಿ ಹೊಸ

ಪರಿಭಾಷೆಗಳನ್ನು ಅಲ್ಲಲ್ಲಿ ಕಲ್ಪಿಸಿರುವುದು ಕಾಣುತ್ತದೆ; ಹೊಸ ಸಂಗತಿಗಳನ್ನು ಹೇಳಿರುವುದು ಕಾಣುತ್ತದೆ. ಇವು ನಾಗವರ್ಮಾದ್ಯರ ಮೂಲಕವಾಗಿ ಸಂಸ್ಕೃತ ಛಂದಸ್ಸಿನ ಪ್ರಪಂಚಕ್ಕೆ ಪ್ರವೇಶಿಸಿರುವುದು ಕಂಡುಬರುತ್ತದೆ. ಹಾಗೆಯೇ ಛಂದೋರೂಪಗಳು ಕ್ವಚಿತ್ತಾಗಿ ಸಂಸ್ಕೃತ ಶಾಸನ ಮತ್ತು ಗ್ರಂಥಸಾಹಿತ್ಯವನ್ನು ಹೊಕ್ಕಿರುವುದು ಕೂಡ ಕಾಣುತ್ತದೆ. ನಾಗವರ್ಮನ 'ಛಂದೋಂಬುಧಿ'ಯಲ್ಲಿ ಸಮಚತುಷ್ಪದಿ ಮಾಲಾವೃತ್ತ ಅರ್ಧಸಮಚತುಷ್ಪದಿ ವಿಷಮಚತುಷ್ಪದಿ ದಂಡಕ ಮಾತ್ರಾವೃತ್ತ—ಈಯೆಲ್ಲ ಸಂಸ್ಕೃತ ಛಂದಸ್ಸಿನ ವರ್ಗಗಳಲ್ಲಿಯೂ ಹೊಸ ಪ್ರಭೇದಗಳೂ ಪದ್ಯಜಾತಿಗಳೂ ಕಾಣಲು ದೊರೆಯುತ್ತವೆ. ಇವು ಪೂರ್ವಪ್ರಸಿದ್ಧವಾದ ಸಂಸ್ಕೃತ ಛಂದೋಗ್ರಂಥಗಳಲ್ಲಿ ಪ್ರಾಯಃ ದೊರೆಯದಿರುವ ಕಾರಣ, ಸಂಸ್ಕೃತ ಛಂದಸ್ಸಿನ ವೃತ್ತಪ್ರಪಂಚದ ಪರಿಧಿಯನ್ನು ಕನ್ನಡ ಛಂದಶ್ಶಾಸ್ತ್ರಕಾರರು ಈ ಮೂಲಕವಾಗಿ ವಿಸ್ತರಿಸಿದ್ದಾರೆಂದು ಗ್ರಹಿಸಬಹುದಾಗಿದೆ. ಕನ್ನಡ ಕವಿಗಳು ಬಳಸಿಯೂ ಕನ್ನಡ ಛಂದಶ್ಶಾಸ್ತ್ರಕಾರರು ಲಕ್ಷಣಿಸಿಯೂ ಸಂಸ್ಕೃತಕ್ಕೆ ಅಪರಿಚಿತವಾದ ಎಷ್ಟೋ ವರ್ಣವೃತ್ತಗಳೂ ಕ್ವಚಿತ್ತಾಗಿ ಮಾತ್ರಾವೃತ್ತಗಳೂ ಇತರ ವೃತ್ತಗಳೂ ಕನ್ನಡ ಸಾಹಿತ್ಯದಲ್ಲಿ ಗೋಚರಿಸುತ್ತವೆ. ಇವು ವಿರಳವಾಗಿ ಸಂಸ್ಕೃತ ಸಾಹಿತ್ಯವನ್ನು ಕೂಡ ಪ್ರವೇಶಿಸಿರುವುದಕ್ಕೆ, ಮತ್ತೇಭ ವಿಕ್ರೀಡಿತ ಇಂತಹವು ನಿದರ್ಶಕವಾಗಿವೆ.

ಜಯಕೀರ್ತಿಯ (ಸು. ೧೦೫೦) 'ಛಂದೋನುಶಾಸನ'ವೆಂಬ ಸಂಸ್ಕೃತ ಛಂದೋಗ್ರಂಥದಲ್ಲಿ ನಾಗವರ್ಮನ ಕನ್ನಡ 'ಛಂದೋಂಬುಧಿ'ಯ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಗ್ರಂಥರಚನೆಯ ಪದ್ಧತಿಯಲ್ಲಿ, ಪ್ರಾಸವಿಟ್ಟ ಪದ್ಯರಚನೆಯಲ್ಲಿ, ಹೊಸ ವೃತ್ತಗಳ ಹೆಸರುಗಳಲ್ಲಿ ಮತ್ತು ಅವುಗಳ ಲಕ್ಷಣನಿರೂಪಣೆಯಲ್ಲಿ ಇದು ನಮ್ಮ ಗಮನಕ್ಕೆ ಬರುತ್ತದೆ. ಇಷ್ಟು ಮಾತ್ರವಲ್ಲವೆ, ಕನ್ನಡ ಛಂದಸ್ಸಿನ ವಿಶಿಷ್ಟ ವಿಷಯಗಳಿಗೆಂದು ತನ್ನ ಗ್ರಂಥದಲ್ಲಿ ಒಂದು ಅಧಿಕಾರವನ್ನೇ ಪೂರ್ತಿಯಾಗಿ ಮೀಸಲು ಮಾಡಿದ್ದಾನೆ. ಇತರತ್ರ ಕನ್ನಡ ಛಂದಸ್ಸಿನ ಸಾಮಾನ್ಯಾಂಶಗಳೂ 'ಛಂದೋಂಬುಧಿ'ಯೊಳಗಿನ ವೃತ್ತಗಳೂ ಗೋಚರಿಸುತ್ತವೆ. ಜಯಕೀರ್ತಿಯ ಗ್ರಂಥದಲ್ಲಿ ನಿರೂಪಿತವಾಗಿರುವ ಇಂತಹ ವಿಶಿಷ್ಟಾಂಶಗಳಲ್ಲಿ ಕೆಲವು ಈಚೆಗೆ ಹೇಮಚಂದ್ರನ 'ಛಂದೋನುಶಾಸನ'ವನ್ನು ಕೂಡ ಹೊಕ್ಕಿರುವಂತೆ ತೋರುತ್ತದೆ. ಹೀಗೆ ನಾಗವರ್ಮನ 'ಛಂದೋಂಬುಧಿ' ಸಂಸ್ಕೃತ ಛಂದಶ್ಶಾಸ್ತ್ರಕಾರನಾ ಜಯಕೀರ್ತಿಯ ಮೇಲೆ ಪ್ರತ್ಯಕ್ಷವಾಗಿಯೂ ಹೇಮಚಂದ್ರಾದಿಗಳ ಮೇಲೆ ಪರೋಕ್ಷವಾಗಿಯೂ ಪ್ರಭಾವ ಬೀರಿರುವಂತೆ ತೋರುತ್ತದೆ. ಇನ್ನು ೩ನೆಯ ಸೋಮೇಶ್ವರ 'ಮಾನಸೋಲ್ಲಾಸ' ಮತ್ತು ಶಾರ್ಙ್ಗದೇವನ 'ಸಂಗೀತರತ್ನಾಕರ' ಇವುಗಳಲ್ಲಿಯೂ ಕನ್ನ ಛಂದಸ್ಸಿನ ವಿಷಯಗಳು ಪ್ರಸ್ತಾಪಿತವಾಗಿವೆ. ಕನ್ನಡ ಭಾಷಾಸಾಹಿತ್ಯಗಳ ಜ್ಞಾನವಿಲ್ಲ ಕನ್ನಡೇತರರಿಗೆ ಕನ್ನಡ ಛಂದಸ್ಸಿನ ಕೆಲವಾದರೂ ಪ್ರಮುಖ ವಿಷಯಗಳನ್ನು ತಿಳಿಸಿಕೊಡುವುದರಲ್ಲಿ ಈ ಸಂಸ್ಕೃತ ಲಾಕ್ಷಣಿಕರಿಂದ ಆಗಿರುವ ಸಹಾಯ ಉಲ್ಲೇಖನೀಯವಾಗಿ ಸಂಸ್ಕೃತದ ಲಕ್ಷಣಗ್ರಂಥಗಳಲ್ಲಿ ಒಂದು ವೈಶಿಷ್ಟ್ಯವೂ ಮಹತ್ತ್ವವೂ ಅವರ ಗ್ರಂ

ಗಳಿಗೆ ಸಂದಂತಾಗಿದೆ. ಈ ಕೆಲವು ಸಂಸ್ಕೃತ ಲಕ್ಷಣಕಾರರು ಕನ್ನಡ ಭಾಷೆ ಸಾಹಿತ್ಯ ಗಳಲ್ಲಿ ಒಳ್ಳೆಯ ಪ್ರವೇಶವಿದ್ದವರೆಂದೇ ತೋರುತ್ತದೆ. ಅನೇಕ ವೇಳೆ ಅವರು ಕೊಟ್ಟಿರುವ ವಿವರಣೆಗಳಿಂದ ಕನ್ನಡ ಛಂದಸ್ಸಿನ ಕೆಲವು ಕ್ಲೇಶಗಳು ಸಡಿಲವಾಗುತ್ತವೆ, ಅದರ ಲಕ್ಷಣಾಂಶಗಳಿಗೆ ಪೂರಕವೂ ಪೋಷಕವೂ ಆದ ಹೊಸ ಅಂಶಗಳು ಕೂಡಿಕೊಳ್ಳುತ್ತವೆ. ಈ ದೃಷ್ಟಿಯಿಂದ ಉಭಯ ಭಾಷಾಸಾಹಿತ್ಯಗಳಿಗೂ ಪರಸ್ಪರವಾಗಿ ಪ್ರಯೋಜನ ವಾದಂತಾಗಿದೆ.

## ಕನ್ನಡ-ಪ್ರಾಕೃತ

ಕನ್ನಡ ಕವಿಗಳಿಗೆ ಪ್ರಾಕೃತ ಭಾಷಾಸಾಹಿತ್ಯಗಳಲ್ಲಿ ಪ್ರವೇಶವೂ ಪಾಂಡಿತ್ಯವೂ ಇದ್ದ ವೆಂಬುದಕ್ಕೆ, ಕನ್ನಡ ಸಾಹಿತ್ಯದ ಮೇಲೆ ಆ ಭಾಷೆ ಸಾಹಿತ್ಯಗಳ ಪ್ರಭಾವವಾಗಿರುವುದಕ್ಕೆ ಸ್ಪಷ್ಟವಾದ ನಿದರ್ಶನಗಳು ದೊರೆಯುತ್ತವೆ. ಇವುಗಳ ವಿಚಾರ ಈ ಮೊದಲಿನ ಸಮೀಕ್ಷೆ ಯಲ್ಲಿ ತಕ್ಕಮಟ್ಟಿಗೆ ಬಂದಿದೆ. ಹೀಗೆಯೇ ಪ್ರಾಕೃತಭಾಷಾಸಾಹಿತ್ಯಗಳ ಮೇಲೆ ಕೂಡ ಕನ್ನಡದ ಪ್ರಭಾವವಿದೆಯೇ ಎಂಬುದನ್ನು ಗುರುತಿಸುವುದು ಆವಶ್ಯಕವಾದರೂ ಈ ದಿಕ್ಕಿ ನಲ್ಲಿ ಅಷ್ಟಾಗಿ ಅಭ್ಯಾಸ ನಡೆದಿರುವಂತೆ ತೋರುವುದಿಲ್ಲ.

ಕನ್ನಡನಾಡಿನಲ್ಲಿ ಜೈನಧರ್ಮವು ಉನ್ನತಸ್ಥಿತಿಯಲ್ಲಿದ್ದಾಗ ಪ್ರಾಕೃತಸಾಹಿತ್ಯಕ್ಕೆ ಒಳ್ಳೆಯ ಪೋಷಣೆ ಅಲ್ಲಿ ದೊರೆಯಿತು. ಅಖಿಲಭಾರತ ಪ್ರಾಮುಖ್ಯದ ಪ್ರಾಕೃತಗ್ರಂಥ ಗಳ ರಚನೆ ನಡೆಯಿತು. ಕರ್ಣಾಟಕಕ್ಕೆ ಮೌರ್ಯ ಚಕ್ರವರ್ತಿ ಚಂದ್ರಗುಪ್ತನೊಡನೆ ಭದ್ರಬಾಹು ಶ್ರುತಕೇವಲಿಯು ಉತ್ತರಾಪಥದಿಂದ ಬಂದುದು ನಿಮಿತ್ತವಾಗಿ, ಜೈನ ಧರ್ಮವೂ ಪ್ರಾಕೃತಭಾಷೆಯೂ ಜತೆಯಲ್ಲಿಯೇ ಬರುವಂತಾಯಿತು. ಪ್ರಾಚೀನ ಕರ್ಣಾಟಕದ ಪ್ರಾಂತಭಾಗಗಳಲ್ಲಿ ಕ್ರಿ. ಪೂ. ೩-೬ನೆಯ ಶತಮಾನಗಳ ಅವಧಿಯಲ್ಲಿ ಅಶೋಕನ ಮತ್ತು ಶಾತವಾಹನರ ಕಾಲದ ಕೆಲವು ಪ್ರಾಕೃತಶಾಸನಗಳು ದೊರೆತಿವೆ. ಅಶೋಕನ ಶಾಸನಗಳನ್ನು ಓದಿ ಅರ್ಥಯಿಸುವ ಜನ ಕನ್ನಡನಾಡಿನಲ್ಲಿ ಕೆಲವರಾದರೂ ಇದ್ದಿರಬಹುದೆಂದು ತಿಳಿಯುವುದು ಸಂಭವನೀಯವೇ ಆಗಿದೆ. ಮೌರ್ಯ ಸಾತವಾಹನರ ಕಾಲದಲ್ಲಿ ಕನ್ನಡನಾಡಿನಲ್ಲಿ ಪ್ರಾಕೃತಭಾಷೆಯು ಕೆಲಮಟ್ಟಿಗೆ ವ್ಯವಹಾರದಲ್ಲಿದ್ದ ಭಾಷೆ ಯಾಗಿದ್ದು ಅದಕ್ಕೆ ತಕ್ಕ ಮನ್ನಣೆಯೂ ಇದ್ದಿರಬಹುದು. ಪ್ರಾಕೃತ ಪಕ್ಷಪಾತಿಗಳಾ ಗಿದ್ದ ಸಾತವಾಹನರ ಕಾಲದಲ್ಲಿಯೇ ಗುಣಾಢ್ಯನು (ಕ್ರಿ. ಶ. ೧ನೆಯ ಶತಮಾನ) 'ಬೃಹತ್ಕಥೆ'ಯನ್ನು ಪೈಶಾಚೀಪ್ರಾಕೃತದಲ್ಲಿಯೂ ಹಾಲನು (ಕ್ರಿ.ಶ. ೧ನೆಯ ಶತಮಾನ) 'ಗಾಥಾಸಪ್ತಶತಿ'ಯನ್ನು ಮಹಾರಾಷ್ಟ್ರೀ ಪ್ರಾಕೃತದಲ್ಲಿಯೂ ರಚಿಸಿದರೆಂದು ತಿಳಿಯು ವುದು. ಪ್ರಾಭೃತತ್ರಯಾದಿ ಗ್ರಂಥಗಳನ್ನು ರಚಿಸಿದ ಕುಂದಕುಂದಾಚಾರ್ಯ, 'ಭಗವತೀ ಆರಾಧನ'ದ ಶಿವಕೋಟ್ಯಾಚಾರ್ಯ (ಶಿವಾರ್ಯ), 'ಮೂಲಾಚಾರ'ವೆಂಬ ಶೌರಸೇನೀ ಪ್ರಾಕೃತಗ್ರಂಥದ ಕರ್ತೃ ವಟ್ಟಕೇರ, 'ಕರಕಂಡಚರಿಉ' ಎಂಬ ಅಪಭ್ರಂಶಗ್ರಂಥದ ಕರ್ತೃ

ಕನಕಾಮರಮುನಿ—ಈ ಮೊದಲಾದವರು ಪ್ರಾಚೀನ ಕರ್ಣಾಟಕದಲ್ಲಿದ್ದು ಕೃತಿರಚನೆ ಮಾಡಿದ ಪ್ರಾಕೃತಕವಿಗಳೆಂಬುದಾಗಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ.[೧೮] ಕುಂದ ಕುಂದಾಚಾರ್ಯ, ವಟ್ಟಕೇರ, ಶಿವಾರ್ಯ ಮೊದಲಾದ ಕೆಲವರು ಪ್ರತ್ಯಕ್ಷವಾಗಿ ಕನ್ನಡ ನಾಡಿಗೆ ಸೇರಿದ್ದವರೆಂಬುದು ವಿವಾದಾಸ್ಪದವಾಗಿದ್ದರೂ ಅವರ ಕೃತಿಗಳು ಕನ್ನಡನಾಡಿನ ಜೈನಸಮುದಾಯಕ್ಕೆ ಪೂಜ್ಯವೂ ಪ್ರಿಯವೂ ಆಗಿದ್ದವೆಂಬುದರಲ್ಲಿ ಸಂದೇಹವಿಲ್ಲ.

ಸರ್ವನಂದಿಯ 'ಲೋಕವಿಭಾಗ' ಮತ್ತು ಯತಿವೃಷಭನ 'ತಿಲೋಯಪಣ್ಣತ್ತಿ' ಬಲು ಮಟ್ಟಿಗೆ ಕನ್ನಡನಾಡಿನಲ್ಲಿಯೇ ರಚಿತವಾದವು. ಕುಂದಕುಂದ, ಸಮಂತಭದ್ರ ಮತ್ತು ಬಪ್ಪದೇವರ ಸಂಸ್ಕೃತ ಪ್ರಾಕೃತ ವ್ಯಾಖ್ಯಾನಗ್ರಂಥಗಳೂ ಇಲ್ಲಿಯೇ ಆದವು. ಕುಂದ ಕುಂದಾಚಾರ್ಯನ ಪ್ರಸಿದ್ಧ ಪ್ರಾಕೃತಗ್ರಂಥಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯೆಗಳನ್ನು ರಚಿಸಿ ರುವ ಬಾಲಚಂದ್ರ ಮತ್ತು ಪದ್ಮಪ್ರಭರು ಕರ್ಣಾಟಕದವರು. ಕರ್ಣಾಟಕವೇ ಮೂಲ ಸ್ಥಾನವಾಗಿದ್ದಂತೆ ತೋರುವ, ಯಾಪನೀಯಸಂಘಕ್ಕೆ ಸೇರಿದ್ದಂತೆ ತಿಳಿಯುವ ಅಪಭ್ರಂಶ ಕವಿ ಸ್ವಯಂಭುವಿಗೆ ಕರ್ನಾಟಕದೊಡನೆ ಸಂಬಂಧವಿತ್ತೆಂದು ತೋರುವುದು. ಆತನ ಬಂಧುಗಳ ಹೆಸರು ಇದನ್ನು ಎತ್ತಿತೋರಿಸುವಂತಿವೆ. 'ಸಿರಿಭೂವಲಯ'ದ ಕರ್ತೃ ಕುಮು ದೇಂದು (ಕ್ರಿ.ಶ. ೯ನೆಯ ಶತಮಾನ) ಕನ್ನಡನಾಡಿನ ಯಲವಳ್ಳಿಯೆಂಬ ಗ್ರಾಮದವನೆಂದು ಹೇಳಲಾಗಿದೆ. ಪ್ರಾಕೃತ ವೈಯಾಕರಣನಾದ ತ್ರಿವಿಕ್ರಮನು (ಕ್ರಿ. ಶ. ೧೨೩೬) ಕೂಡ ಕನ್ನಡನಾಡಿನವನು. ಈತನ ವ್ಯಾಕರಣವಾವದೋ ದಾಕ್ಷಿಣಾತ್ಯ ಸಂಪ್ರದಾಯದ ಪ್ರಾಕೃತವ್ಯಾಕರಣಗಳಲ್ಲಿ ಆದ್ಯಕೃತಿ. ವರರುಚಿಯ 'ಪ್ರಾಕೃತಪ್ರಕಾಶ'ದೊಡನೆ ಇಡೀ ದಕ್ಷಿಣದಲ್ಲಿ ಪ್ರಮಾಣಭೂತವಾದ ವ್ಯಾಕರಣವಾಗಿದೆ. ಅಪಭ್ರಂಶ ಭಾಷಾಕವಿ ಪುಷ್ಪ ದಂತನು (ಕ್ರಿ.ಶ. ೧೦ನೆಯ ಶತಮಾನ) ರಾಷ್ಟ್ರಕೂಟ ಚಕ್ರವರ್ತಿ ಮುಮ್ಮಡಿ ಕೃಷ್ಣನು ಆಳುತ್ತಿದ್ದ ಕರ್ಣಾಟಕದ ಮಾನ್ಯಖೇಟದಲ್ಲಿ ನಿಂತು ತನ್ನ 'ಮಹಾಪುರಾಣ'ವನ್ನು ಬರೆ ದನು. ಇವರಲ್ಲಿ ಹಲವು ಕನ್ನಡ ಶಬ್ದಗಳು ಬಳಕೆಯಾಗಿವೆಯೆಂದು ತಿಳಿಯುತ್ತದೆ.[೧೯]

ದಿಗಂಬರ ಜೈನಸಂಪ್ರದಾಯದ ಆಚಾರ್ಯರಾಗಿ ಪ್ರಸಿದ್ಧರಾಗಿರುವ ರಾಷ್ಟ್ರಕೂಟ ಚಕ್ರವರ್ತಿಗಳ ಆಳಿಕೆಯ ಕಾಲದಲ್ಲಿದ್ದ ವೀರಸೇನ, ಜಿನಸೇನ ಮತ್ತು ಗುಣಭದ್ರರೆಂಬ ಆಚಾರ್ಯರು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಕವಿಗಳೂ ವಿದ್ವಾಂಸರೂ ಆಗಿದ್ದವರು. ಸೇನಗಣದ ವೀರಸೇನ ಜಿನಸೇನಾಚಾರ್ಯರು (ಕ್ರಿ. ಶ. ೯ನೆಯ ಶತಮಾನ) ದಿಗಂಬರ ಮಹತ್ತ್ವಪೂರ್ಣ ಗ್ರಂಥವಾದ 'ಷಟ್ಖಂಡಾಗಮ'ಕ್ಕೆ 'ಧವಲಾ' (ಕ್ರಿ.ಶ. ೮೧೬) 'ಜಯ ಧವಲಾ' (ಕ್ರಿ.ಶ. ೮೩೭) ಮತ್ತು 'ಮಹಾಧವಲಾ' ಎಂಬ ಪ್ರಖ್ಯಾತವಾದ ಟೀಕೆಗಳನ್ನು ಬರೆದಿದ್ದಾರೆ. ಇದರ ಸ್ವಲ್ಪಭಾಗ ಸಂಸ್ಕೃತದಲ್ಲಿಯೂ ಸ್ವಲ್ಪಭಾಗ ಪ್ರಾಕೃತದಲ್ಲಿಯೂ ರಚಿತವಾಗಿದೆ. ಈ ಟೀಕೆಗಳ ಅಭ್ಯಾಸದ ಮೂಲಕ ಕರ್ಣಾಟಕ ದೇಶದ ಜೈನಯತಿ ಗಳಲ್ಲಿ ಪ್ರಾಕೃತಭಾಷೆ ರೂಢಿಯಲ್ಲಿತ್ತೆನ್ನಬಹುದು. ಎಷ್ಟೋ ಹಿಂದಿನಿಂದ ಜೈನಸೂತ್ರ ಗ್ರಂಥಗಳ ರಕ್ಷಣೆ ಮತ್ತು ಸಿದ್ಧಾಂತಗ್ರಂಥಗಳಿಗೆ ವ್ಯಾಖ್ಯಾನರಚನೆ ಕನ್ನಡನಾಡಿನಲ್ಲಿ ನಡೆದುಕೊಂಡು ಬಂದಿತೆನ್ನುವುದಕ್ಕೆ ಈ ಮಹಾಗ್ರಂಥಗಳೇ ಸಾಕ್ಷಿ. ೧೨ನೆಯ ಶತ

ವಷ್ಟು ಹಿಂದಿನದಾಗಿ ಹಳಗನ್ನಡ ಲಿಪಿಯಲ್ಲಿ ತಾಳೆಯೋಲೆಯ ಮೇಲೆ ಮಸಿಯಿಂದ ಬರೆಯಲ್ಪಟ್ಟಿರುವ ಈ ವ್ಯಾಖ್ಯಾನ ಗ್ರಂಥಗಳ ಹಸ್ತಪ್ರತಿಗಳು ಅನ್ಯತ್ರ ಅನುಪಲಬ್ಧ ವಾಗಿದ್ದಾಗ, ದಕ್ಷಿಣಕನ್ನಡ ಜಿಲ್ಲೆಯ ಮೂಡಬಿದರೆಯ ಸಿದ್ಧಾಂತಬಸದಿಯಲ್ಲಿ ಮಾತ್ರವೇ ಸುರಕ್ಷಿತವಾಗಿ ನಿಕ್ಷಿಪ್ತವಾಗಿದ್ದುದು ಕನ್ನಡಿಗರಿಗೆ ಹೆಮ್ಮೆಯ ಮಾತಾಗಿದೆ.[30] ಭಾರತೀಯ ಜೈನಸಾಹಿತ್ಯಕ್ಕೆ ಕರ್ಣಾಟಕದ ಸೇವೆ ಅಮೂಲ್ಯವಾದುದೆಂದು ಹೇಳಬಹುದಾಗಿದೆ. ದಕ್ಷಿಣದಲ್ಲಿಯ ಜೈನಗ್ರಂಥಕಾರರು ಪ್ರಾಕೃತಭಾಷೆಯನ್ನು ಮುಖ್ಯವಾಗಿ ಧಾರ್ಮಿಕ ಗ್ರಂಥಗಳಲ್ಲಿಯೇ ಬಳಸಿದ್ದಾರೆ. ಸೂತ್ರ, ಸ್ತುತಿ, ಕಾವ್ಯಗಳಲ್ಲಿ ಬೇಗನೆಯೇ ಸಂಸ್ಕೃತ ವನ್ನು ಅವರು ಸ್ವೀಕರಿಸಿದರು.

ಚಾವುಂಡರಾಯನ ಗುರು ದೇಶೀಯಗಣದ ನೇಮಿಚಂದ್ರಯತಿ (ಕ್ರಿ.ಶ. ೧೦ನೆಯ ಶತಮಾನ) 'ಗೊಮ್ಮಟಸಾರ', 'ತ್ರಿಲೋಕಸಾರ' ಮುಂತಾದ ಕೆಲವು ಪ್ರಾಕೃತಗ್ರಂಥಗಳನ್ನು ರಚಿಸಿ ಪ್ರಖ್ಯಾತನಾಗಿದ್ದಾನೆ. ಪ್ರಾಕೃತಸಾಹಿತ್ಯದಲ್ಲಿ ಈತನ ಗ್ರಂಥಗಳಿಗೆ ಮಹತ್ತ್ವದ ಸ್ಥಾನವಿದೆ. 'ಗೊಮ್ಮಟಸಾರ'ದ ಕರ್ಮಕಾಂಡದ ಕೆಲವು ಗಾಥೆಗಳು ಚಾವುಂಡರಾಯನ ಚರಿತ್ರೆಯ ವಿಚಾರವಾಗಿ ಕೆಲವು ಉಪಯುಕ್ತ ಸಂಗತಿಗಳನ್ನು ತಿಳಿಸುತ್ತವೆ. ಚಾವುಂಡ ರಾಯನ ಪ್ರತಿಬೋಧನಾರ್ಥವಾಗಿ ರಚಿತವಾದಂತೆ ತಿಳಿಯುವ 'ಗೊಮ್ಮಟಸಾರ'ಕ್ಕೆ ಚಾವುಂಡರಾಯ ಮತ್ತು ಕೇಶವವರ್ಣಿಗಳು ಕನ್ನಡದಲ್ಲಿ ಟೀಕೆಗಳನ್ನು ಬರೆದಿರುವುದನ್ನು ಇಲ್ಲಿ ನೆನೆಯಬಹುದು. ಉಪಲಬ್ಧ ಟೀಕೆಗಳಲ್ಲಿ ಕೇಶವವರ್ಣಿಯದೇ ಪ್ರಾಚೀನವಾದುದು. ಈ ಕನ್ನಡ ಟೀಕೆಯನ್ನು ಸಾಳುವ ಮಲ್ಲಿರಾಯನ (ಕ್ರಿ.ಶ. ೧೬ನೆಯ ಶತಮಾನ) ಸಮಕಾಲಿಕನಾದ ನೇಮಿಚಂದ್ರನೆಂಬೊಬ್ಬ ಕವಿ ಸಂಸ್ಕೃತಕ್ಕೆ ಪರಿವರ್ತಿಸಿದ್ದಾನೆ.[31] ಚಾವುಂಡರಾಯನ ಗುರು ನೇಮಿಚಂದ್ರಯತಿಗೂ ದೇವಸೇನನೆಂಬೊಬ್ಬ ಪ್ರಾಕೃತ ಕವಿಗೂ ಮಾತೃಭಾಷೆ ಕನ್ನಡವಾಗಿದ್ದಿತೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಕನ್ನಡನಾಡಿನವರಾಗಿ ಕನ್ನಡದಲ್ಲಿ ಕೃತಿರಚನೆ ಮಾಡಿದವರಾಗಿ ತಿಳಿದುಬಂದಿರುವ ತುಂಬಲೂರಾಚಾರ್ಯ ಮತ್ತು ಶ್ಯಾಮಕುಂದಾಚಾರ್ಯ (ಸು. ೬೫೦) ಇವರು ಪ್ರಾಕೃತ ದಲ್ಲಿ ಸಿದ್ಧಾಂತ ಗ್ರಂಥಗಳನ್ನು ಬರೆದಿದ್ದರೆಂದು ಕೂಡ ತಿಳಿಯುತ್ತದೆ. ಉಭಯಭಾಷಾಕವಿ ಅಸಗನನ್ನು (ಕ್ರಿ.ಶ. ೮೫೩) ಧವಲನೆಂಬ ಅಪಭ್ರಂಶ ಕವಿಯೊಬ್ಬನು ತನ್ನ 'ಹರಿವಂಶ ಪುರಾಣ'ದಲ್ಲಿ ಸ್ತುತಿಸಿರುವುದರಿಂದ ಅಸಗನು ಪ್ರಾಕೃತಕವಿಗಳಿಂದಲೂ ಗಣ್ಯನಾಗಿದ್ದನೆಂಬ ವಿಷಯ ವಿಶದವಾಗುತ್ತದೆ. ಆತನ ಕೆಲವು ಕೃತಿಗಳು ಪ್ರಾಕೃತಕವಿಗಳಿಗೆ ಆಕರಗಳಾ ಗಿಯೋ ಮಾದರಿಗಳಾಗಿಯೋ ಇದ್ದಿರಬಹುದು.

ಅಂತೂ ೧೦ನೆಯ ಶತಮಾನದಲ್ಲಿ ಮತ್ತು ಸ್ವಲ್ಪ ಈಚೆಗೆ ಕನ್ನಡನಾಡು ಪ್ರಾಕೃತ ಸಾಹಿತ್ಯಕ್ಕೆ ಮಹತ್ತ್ವಪೂರ್ಣವಾದ ಕಾಣಿಕೆಯನ್ನು ಸಲ್ಲಿಸಿದೆಯೆಂಬುದು ಮೇಲಿನ ಕೆಲವಂಶಗಳಿಂದಲೇ ಸ್ಪಷ್ಟವಾಗುತ್ತದೆ. ಈ ಸಂದರ್ಭದಲ್ಲಿ ಈ ಕೆಳಗಿನ ಅವತರಣಿಕೆ ಯನ್ನು ಗಮನಿಸಬಹುದು :

"ಕರ್ಣಾಟಕ ಮತ್ತು ಕನ್ನಡದ ದೃಷ್ಟಿಯಿಂದ ಮಹತ್ವಪೂರ್ಣವಾದ ಅತ್ಯಂತ

ಮಹತ್ತ್ವವುಳ್ಳ ಮತ್ತು ಕರ್ಮತತ್ತ್ವದ ವಿಶೇಷ ವಿಶ್ಲೇಷಣವನ್ನು ನಿರೂಪಿಸುವ ದೃಷ್ಟಿ ವಾದದ ಅವಶೇಷಗಳಾದ ಸತ್ಕರ್ಮ ಪ್ರಾಭೃತ ಮತ್ತು ಕಷಾಯ ಪ್ರಾಭೃತದ ಮೂಲ ಸೂತ್ರಗಳು ಕನ್ನಡನಾಡಿನಲ್ಲಿಯೇ ಪ್ರಾಚೀನ ಕನ್ನಡಲಿಪಿಯಲ್ಲಿಯೇ ಸುರಕ್ಷಿತವಾಗಿದ್ದದ್ದು ಹೆಮ್ಮೆಯ ಮಾತು. ಯತಿವೃಷಭ, ನೇಮಿಚಂದ್ರ ಮೊದಲಾದ ಪ್ರಾಕೃತಕವಿಗಳು ಕನ್ನಡ ನಾಡಿನಲ್ಲಿಯೇ ತಮ್ಮ ಗ್ರಂಥಗಳನ್ನು ಬರೆದರು. ವೀರಸೇನ ಮತ್ತು ಜಿನಸೇನ ಇವರಿಂದ ಬರೆಯಲ್ಪಟ್ಟ ಪ್ರಾಕೃತ ಸಂಸ್ಕೃತವಿಶಾಲವ್ಯಾಖ್ಯೆಗಳು ಇಂದಿಗೂ ಉಪಲಬ್ಧವಿವೆ. ಆಧಾರ ವಿಲ್ಲದೆ ದರಿದ್ರನಂತೆ ತಿರುಗುತ್ತ ಬಂದ ಪುಷ್ಪದಂತ ಮಹಾಕವಿಗೆ ಆಶ್ರಯವನ್ನು ಇತ್ತವರು ಕನ್ನಡರಾಜರೇ. ಮಾನ್ಯಖೇಟದಲ್ಲಿ ಭರತನ ಆಶ್ರಯದಲ್ಲಿ ಪುಷ್ಪದಂತನು ಅಪಭ್ರಂಶಭಾಷೆಯಲ್ಲಿ ತನ್ನ ಮೂರು ಉದ್ಗ್ರಂಥಗಳನ್ನು ಬರೆದನು. ಕನ್ನಡಭಾಷೆಯಲ್ಲಿ ಪ್ರಚಲಿತವಾದ ಮತ್ತು ಹೊಸವೆಂದೆನಿಸುವ ಆಂಡಯ್ಯನ ಭಾಷಾಪ್ರವೃತ್ತಿಯ ಮೂಲವು ಪ್ರಾಕೃತಭಾಷೆಗಳ ಒಲವಿನಲ್ಲಿಯೇ ಸರಿ. ಕೇಶಿರಾಜನ ಅಪಭ್ರಂಶ ಪ್ರಕರಣವನ್ನು ಓದಿದರೆ ಇದೇನೋ ಪ್ರಾಕೃತವ್ಯಾಕರಣದ ಪ್ರತಿಬಿಂಬವೆಂದೇ ಹೇಳಬಹುದು."[32]

ಇಂತಹ ಹಿನ್ನೆಲೆಯಲ್ಲಿ, ಕನ್ನಡನಾಡಿನಲ್ಲಿ ಪ್ರಾಕೃತಭಾಷೆ ಸಾಹಿತ್ಯಗಳಿಗೆ ದೊರೆತ ಸ್ಥಾನಮಾನಗಳಿಂದ, ಕನ್ನಡಿಗರಾದ ಪ್ರಾಕೃತಕವಿಗಳ ಪರಿಶ್ರಮದಿಂದ, ಪ್ರಾಕೃತ ಭಾಷೆಯ ಮರ್ಯಾದೆಗನುಸಾರವಾಗಿ ಕನ್ನಡ ಶಬ್ದಗಳು ಪ್ರಾಕೃತಭಾಷಾ ಸಾಹಿತ್ಯಗಳೊಳಗೆ ಕೆಲಮಟ್ಟಿಗೆ ಸೇರುವಂತಾಯಿತು. ಕೋಶಕಾರರು ಅವನ್ನು ದೇಶೀಶಬ್ದಗಳೆಂದು ನಿರ್ದೇಶಿಸಿದ್ದಾರೆ. ಕ್ರಿ. ಪೂ. ೧ನೆಯ ಶತಮಾನದ್ದೆಂದು ತಿಳಿಯುವ ಹಾಲನ 'ಗಾಥಾ ಸಪ್ತಶತಿ'ಯಲ್ಲಿ ಕಂಡುಬರುವ ಅತ್ತಾ, ತುಪ್ಪಾ, ಪೊಟ್ಟ, ಫಲಹಿ, ತೀರಇ—ಎಂಬ ಪ್ರಾಕೃತಶಬ್ದಗಳು ಅತ್ತೆ, ತುಪ್ಪ, ಪೊಟ್ಟೆ, ಪಟ್ಟಿ, ತೀರ್ ಎಂಬ ಕನ್ನಡ ಶಬ್ದಗಳ ಪ್ರತಿ ರೂಪಗಳೆಂದು ವಿದ್ವಾಂಸರು ಕಂಡುಹಿಡಿದಿದ್ದಾರೆ.[33] ಹೇಮಚಂದ್ರನ 'ದೇಶೀನಾಮ ಮಾಲೆ' ಮೊದಲಾದ ಕೋಶಗಳಲ್ಲಿ ಕಂಡುಬರುವ ಕೆಲವು ಕನ್ನಡ ಶಬ್ದಗಳನ್ನೂ ಹೀಗೆಯೇ ಗುರುತಿಸಲಾಗಿದೆ. ಒಂದು ಪಟ್ಟಿಯ ಪ್ರಕಾರ ಪ್ರಾಕೃತ ದೇಶೀಕೋಶಗಳಲ್ಲಿಯ ಅಕ್ಕಾ, ಉಡೂ, ಉಮ್ಮಲ್ಲೊ, ಉಲ್ಲೀ, ಊಲೋ, ಎತ್ತೊಪ್ಪಂ-ಇತ್ತೊಪ್ಪಂ, ಒಕ್ಕಿಅ, ಒಪ್ಪಾ, ಕಲೀ, ಕುಂಡಿಓ-ಕೊಂಡಿಓ, ಕುರುಡ, ಕೋಲ್ಲೋ-ಕುಲ್ಲ, ಖಡ್ಡಂ, ಚಿಕ್ಕ, ಣೇಸರೋ, ತುಪ್ಪೋ, ಪಾವೋ, ಪಾಲೊ, ಪುಲ್ಲೀ, ಪೊಚ್ಚಂ, ಮರುಲೋ, ಸೂಲಾ—ಈ ಶಬ್ದ ಗಳು ಕ್ರಮವಾಗಿ ಪ್ರಾಯಃ ಅಕ್ಕ, ಉಡು, ಉಮ್ಮಳ, ಒಲೆ, ಉರುಳ್, ಎಂತಪ್ಪ-ಇಂತಪ್ಪ, ಒಕ್ಕು, ಒಪ್ಪ, ಕಲಿ, ಗಾವುಂಡ-ಗೌಡ, ಕುರುಡ, ಕೊರಲ್, ಗಡ್ಡ, ಚಿಕ್ಕ, ನೇಸರ್, ತುಪ್ಪ, ಪಾವು, ಪಾಟ್, ಪುಲಿ, ಪೊಚ್ಚ, ಮರುಳ್, ಸೂಳೆ—ಈ ಕನ್ನಡ ಶಬ್ದಗಳ ಪ್ರಾಕೃತರೂಪಗಳೆಂದು ತಿಳಿಯುತ್ತದೆ.[34] ಇನ್ನೊಂದು ಪಟ್ಟಿಯ ಪ್ರಕಾರ (ಹೇಮಚಂದ್ರನ 'ದೇಶೀನಾಮಮಾಲೆ') ಕಂಡುಬರುವ ಆಲಂಬಂ (=ನಾಯಿಕೊಡೆ), ಇಗ್ಗೋ, ಉಂಡಲಂ (=ಗಂಭೀರಮ್), ಉಬುಕ್ಕಂ (=ಸಂಕಟಮ್) ಕಾಹಲ್ಲೀ, ಕುಣೆಳಿ (=ವೃತ್ತಿವಿವರಮ್=ಗುಳಿ), ತುಂಬಿಲ್ಲೀ—ಈ ಶಬ್ದಗಳು ಕ್ರಮವಾಗಿ ಪ್ರಾಯಃ

ಅಣಂಬೆ, ಎಗ್ಗ, ಹೊಂಡ, ಉಬ್ಬಸ, ಕಾವಲಿ, ಕುಣಿ-ಕುಬಿ, ತುಂಬಿಯ ಇಲ್—ಈ ಕನ್ನಡ ಶಬ್ದಗಳ ಪ್ರಾಕೃತ ರೂಪಗಳೆಂದು ಭಾವಿಸಲಾಗಿದೆ.[35] ಹೀಗೆಯೇ ಓಲಗ, ಕಾವರ, ಪೋಟ (ಪ್ರೊಟ್ಟಿ) ಶಬ್ದಗಳು[36] ಪ್ರಾಕೃತ ದೇಶೀಕೋಶಗಳಲ್ಲಿ ಸೇರಿಕೊಂಡಿರುವ ಶಬ್ದಗಳು ಕೆಲವೊಮ್ಮೆ ನೇರವಾಗಿ ಕನ್ನಡದಿಂದ ಹೋಗಿದ್ದಿರಬಹುದು, ಇಲ್ಲವೆ ಯಾವ ದ್ರಾವಿಡ ಭಾಷಾಮೂಲದಿಂದಾದರೂ ಹೋಗಿರಬಹುದು. ಎಷ್ಟೋ ಶಬ್ದಗಳು ಬೇರೆ ಬೇರೆ ದ್ರಾವಿಡಭಾಷಾ ಮೂಲಗಳಿಂದ ಪ್ರಾಕೃತಕ್ಕೆ ಹೋಗಿರಬಹುದಾದರೂ ಕನ್ನಡದಿಂದಲೇ ನೇರವಾಗಿ ಹೋಗಿರುವ ಸಾಧ್ಯತೆಯಂತೂ ಇದ್ದೇ ಇದೆ.

## ಕನ್ನಡ-ಮರಾಠಿ

ಕರ್ನಾಟಕ ಮಹಾರಾಷ್ಟ್ರಗಳು ಭೌಗೋಳಿಕವಾಗಿ ನೆರೆಹೊರೆಯ ರಾಜ್ಯಗಳು ; ಸಾಂಸ್ಕೃತಿಕವಾಗಿ ದ್ರಾವಿಡ ಮತ್ತು ಆರ್ಯ ಸಂಸ್ಕೃತಿಯ ಸಂಗಮ ಕ್ಷೇತ್ರ. ರಾಜಕೀಯವಾಗಿ ಸಾತವಾಹನ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಶಿಲಾಹಾರ, ಸೇಉಣ ರಾಜಮನೆತನಗಳು ಎರಡೂ ಪ್ರಾಂತಗಳನ್ನು ಒಟ್ಟಿಗೆ ಆಳಿವೆ. ಧಾರ್ಮಿಕವಾಗಿ ಕರ್ನಾಟಕದಲ್ಲಿ ಜೈನಧರ್ಮ ವೈದಿಕಧರ್ಮ ಮತ್ತು ವೀರಶೈವ ಧರ್ಮಗಳು ಮುಖ್ಯವಾಗಿದ್ದರೆ, ಮಹಾರಾಷ್ಟ್ರದಲ್ಲಿ ವೈದಿಕಧರ್ಮ ಶಾಂಕರ ಮತ್ತು ಭಾಗವತ ಸಂಪ್ರದಾಯಗಳಲ್ಲಿ ಪ್ರಚಲಿತವಾಗಿದೆ. ವೀರಶೈವಧರ್ಮ ಇಲ್ಲಿ ನಿಜಗುಣಶಿವಯೋಗಿ ಮತ್ತು ಕಾಡಸಿದ್ಧೇಶ್ವರರ ಪ್ರಭಾವಪರಂಪರೆಯಲ್ಲಿ ಬೆಳೆದುಬಂದಿದ್ದರೆ, ಪಂಢರಪುರದ ವಿಟ್ಠಲ ಸಂಪ್ರದಾಯ ಕರ್ನಾಟಕದಲ್ಲಿ ೧೩ನೆಯ ಶತಮಾನದ ಹೊತ್ತಿಗೇ ಪ್ರಚಲಿತವಿದ್ದಿತು. ಹೀಗೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಸಾಮರಸ್ಯ ಶತಮಾನಗಳಿಂದ ಕ್ರಮ ನಡೆದುಕೊಂಡು ಬಂದಿದೆ. ಅದರ ಒಂದು ಸಂಕ್ಷಿಪ್ತ ಅವಲೋಕನವನ್ನು ಮುಂದೆ ಗ ನಿಸಬಹುದು.

‘ಕವಿರಾಜಮಾರ್ಗ’ದ ಪ್ರಕಾರ ಕರ್ನಾಟಕ ಕಾವೇರಿಯಿಂದ ಗೋದಾವರಿಯವರೆಗೂ ವ್ಯಾಪಿಸಿದ್ದಿತು. ಎಂದರೆ ಇಂದಿನ ಮಹಾರಾಷ್ಟ್ರದ ಬಹುಭಾಗ ಕರ್ನಾಟಕದಲ್ಲಿ ಐಕ್ಯವಾಗಿದ್ದಿತು. ಇದೇ ಗಡಿರೇಖೆಯನ್ನು ‘ರಾಮನಾಥ ಚರಿತೆ’ ಬರೆದ ನಂಜುಂಡ ಕವಿ ಕೂಡ ಉಲ್ಲೇಖಿಸಿದ್ದಾನೆ. ಮಹಾನುಭಾವ ಗ್ರಂಥಕಾರರು ಮಹಾರಾಷ್ಟ್ರದ ಗಡಿಯನ್ನು ಹೀಗೆ ಹೇಳುತ್ತಾರೆ: “ಫಲಟಣ ಸಂಸ್ಥಾನದ ಸುತ್ತಲಿನ ಸೀಮೆ, ಮೇಲೆ ಬಾಲಘಾಟದವರೆಗೆ, ಮೈನಗಂಗಾ ಮತ್ತು ಗೋದಾವರಿ ಮಧ್ಯಪ್ರದೇಶ; ಮುಂದೆ ಮೇಘಕರ ಘಾಟದವರೆಗೆ, ವರಾಡ ಸಂಪೂರ್ಣ—ಇವೆಲ್ಲಾ ಕೂಡಿ ಮಹಾರಾಷ್ಟ್ರ.”[37]

ಮಹಾರಾಷ್ಟ್ರದಲ್ಲಿ ಇಂದಿಗೂ ಇರುವ ಕೆಲವು ಊರುಗಳ ಹೆಸರು ಕನ್ನಡ ಹೆಸರಿನ ರೂಪಾಂತರವಾಗಿವೆ ಎಂದು ಕೆಲವರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉದಾಹರಣೆಗೆ: ಖಾಂಡಿವ್ಲಿ (<ಖಂಡವಳ್ಳಿ), ಬೋರಿವ್ಲಿ, (<ಬೋರಿಹಳ್ಳಿ), ಲಾನೋಳಿ

ಲೋಣಾವ್ಲಾ (<ಲೋಣವಳ್ಳಿ), ಮಲವ್ಳಿ (<ಮಲವಹಳ್ಳಿ, ಮಲಪಹಳ್ಳಿ), ಪೂನಾ (<ಪುಣಕ), ಫಲಟನ್ (<ಪಳಿಯತಾಣ), ಮಿರಜ್ (<ಮಿರಿಂಜೆ), ಕುರಂದವಾಡ್ (<ಕುಡಲಡಾಮವಾಡ).[28] ಸಿದ್ಧರಾಮನ ಸೊನ್ನಲಪುರ, ಬಿಜ್ಜಳನ ಮಂಗಳವೇಡೆ, ಅಕ್ಕಲಕೋಟೆ ಮುಂತಾದ ಊರುಗಳು ಮಹಾರಾಷ್ಟ್ರದಲ್ಲಿಯೇ ಉಳಿದಿವೆ. ಕನ್ನಡ ಎನ್ನುವ ಹೆಸರಿನ ಒಂದು ತಾಲ್ಲೂಕು ಇಂದಿಗೂ ಗೋದಾವರಿಯ ಆಚೆಗಿದೆ.

ವಿಜಯನಗರದ ಪತನಾನಂತರ ಮುಹಮ್ಮದೀಯರ ದಕ್ಷಿಣ ಭಾರತ ದಾಳಿಯ ಜೊತೆ ಜೊತೆಯಲ್ಲಿಯೇ ಮಹಾರಾಷ್ಟ್ರಿಗರು ಇನ್ನೂ ದಕ್ಷಿಣವನ್ನು ಆಕ್ರಮಿಸತೊಡಗಿದರು. ಬೆಂಗಳೂರು ಜಹಗೀರಿಯಾಗಿ ದೊರೆತಮೇಲಂತೂ ಶಿವಾಜಿಯ ತಂದೆ ಶಹಾಜಿ ಕೋಲಾರ ಮತ್ತು ಬಳ್ಳಾಪುರಗಳಲ್ಲಿ ನಿಂತು ಪ್ರಬಲಿಸಿದನು. ಮರಾಠಿ ಭಾಷೆ, ಕಂದಾಯ ಪದ್ಧತಿ ಮತ್ತು ಲೆಕ್ಕಪತ್ರಗಳ ರೀತಿಯನ್ನು ಇಲ್ಲಿ ಅಳವಡಿಸಿದನು. ಕರ್ನಾಟಕದಲ್ಲಿ ಪುಟ್ಟ ಮಹಾರಾಷ್ಟ್ರವೊಂದನ್ನು ರಚಿಸಿದನು. ಕ್ರಿ.ಶ. ೧೬೪೦ರ ಸುಮಾರಿನಲ್ಲಿ ಶಿವಾಜಿ ಬೆಂಗಳೂರಿನಲ್ಲಿಯೇ ನೆಲಸಿದ್ದನು. ಇಂದಿಗೂ ಶಹಾಜಿಯ ಸಮಾಧಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯಲ್ಲಿದೆ ಎನ್ನಲಾಗಿದೆ. ಮೊಗಲ್ ಚಕ್ರವರ್ತಿ ಔರಂಗಜೇಬನ ಬೆದರಿಕೆಯನ್ನು ಅಲಕ್ಷಿಸಿ ಶಿವಾಜಿಯ ಮಗ ರಾಜಾರಾಮನಿಗೆ ಕೆಳದಿಯ ಚೆನ್ನಮ್ಮ ರಕ್ಷಣೆಯನ್ನು ಒದಗಿಸಿದಳು. ಮುಂದೆ ಪೇಶ್ವೆಗಳ ಆಡಳಿತ ಬಂದಮೇಲೆಯೂ ಕರ್ನಾಟಕದ ಮೇಲೆ ಮರಾಠಿಯ ಪ್ರಭಾವ ಗಾಢವಾಗಿಯೇ ಇದ್ದಿತು. ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ ಮೇಲೆ, ಕರ್ನಾಟಕದ ಹಲವು ಭಾಗಗಳನ್ನು ಆಡಳಿತದ ಅನುಕೂಲಕ್ಕಾಗಿ ಮಹಾರಾಷ್ಟ್ರದ ಕೇಂದ್ರವಾದ ಮುಂಬಯಿ ಪ್ರಾಂತಕ್ಕೆ ಸೇರಿಸಿದರು.

ಕರ್ನಾಟಕದಲ್ಲಿ ಮರಾಠಿ ಜನವೂ ಮಹಾರಾಷ್ಟ್ರದಲ್ಲಿ ಕನ್ನಡಿಗರೂ ರಾಜನೈತಿಕ ಸಾಮಾಜಿಕ ಸಾಂಸ್ಕೃತಿಕ ಹೀಗೆ ಒಂದಲ್ಲ ಒಂದು ಕಾರಣಕ್ಕಾಗಿ ನೆಲಸಿದ್ದಾರೆ. ಸಿಂಪಿಗವೃತ್ತಿಯನ್ನು ಜೀವನವನ್ನಾಗಿ ಮಾಡಿಕೊಂಡ ಮರಾಠಿ ಮನೆಮಾತಿನ ಜನ ಕರ್ನಾಟಕದ ಹಳ್ಳಿಹಳ್ಳಿಗಳಲ್ಲಿ ನೆಲಸಿದ್ದಾರೆ. ವ್ಯಾವಹಾರಿಕವಾಗಿ ಅವರು ಕನ್ನಡವನ್ನು ಹೊರಗೆ ಬಳಸುತ್ತಾರೆ. ಇಲ್ಲಿಯ ಮಾಧ್ವಪಂಥದ ಅನೇಕ ದೇಶಸ್ಥ ಮಾಧ್ವರು ಮರಾಠಿ ಮಾತೃಭಾಷೆಯವರು. ಹಾಗೆಯೇ ಮಹಾರಾಷ್ಟ್ರದಲ್ಲಿಯೂ ಕನ್ನಡಿಗರು ನೆಲಸಿದ್ದಾರೆ. ಅವರಲ್ಲಿ ಬಹುಪಾಲು ಜನರು ಜೈನರು ಮತ್ತು ವೀರಶೈವರು. ಮಹಾರಾಷ್ಟ್ರದಲ್ಲಿನ ಕನ್ನಡ ಶಾಸನಗಳನ್ನು 'ಕೊಲ್ಹಾಪುರ ಜಿಲ್ಲೆಯ ಶಾಸನಗಳು' ಮತ್ತು 'ನಾಂದೇಡ್ ಜಿಲ್ಲೆಯ ಶಾಸನಗಳು' ಎನ್ನುವ ಸಂಪುಟಗಳಲ್ಲಿ ಸಂಗ್ರಹಿಸಿ ಪ್ರಕಟಿಸಲಾಗಿದೆ. ಮಹಾರಾಷ್ಟ್ರದಲ್ಲಿ ಕನ್ನಡ ಸಾಹಿತ್ಯದ ಹಸ್ತಪ್ರತಿಗಳೂ ಕರ್ನಾಟಕದಲ್ಲಿ ಮರಾಠಿ ಸಾಹಿತ್ಯದ ಹಸ್ತಪ್ರತಿಗಳೂ ದೊರೆತಿವೆ. ಅವುಗಳಲ್ಲಿ ಒಂದು ಹಾತಕಣಗಿಲೆ (ಕೊಲ್ಹಾಪುರ ಜಿಲ್ಲೆ) ತಾಲ್ಲೂಕಿನ ಆಲತಗಿಯ ಪಾರ್ಶ್ವನಾಥ ತೀರ್ಥಂಕರ ಮಂದಿರದಲ್ಲಿ ಬರೆಯಲಾದ ಕನ್ನಡ 'ಪಂಪ ರಾಮಾಯಣ'ದ ಹಸ್ತಪ್ರತಿ. ಸಮಡೊಳ್ಳಿ (ಸಾತಾರಾ ಜಿಲ್ಲೆ)ಯಲ್ಲಿ ಉಪಾಧ್ಯಾಯರ ಜಿನ್ನಪ್ಪನ ಮಗ ಆದಪ್ಪನು ಬರೆದ 'ಪಂಚತಂತ್ರದ' ಹಸ್ತಪ್ರತಿ ದೊರೆತಿದೆ.[29] ಕನ್ನಡಿಗ

ರಾದ ಮಹೀಪತಿದಾಸರ ಸಾಹಿತ್ಯಕ್ಕೆ ಮೂಲ ಆಕರವಾಗಿರುವ ಹಸ್ತಪ್ರತಿ ಮರಾಠಿ ಲಿಪಿಯಲ್ಲಿ ಲಿಖಿತವಾಗಿದೆ.

ಗಡಿನಾಡಿನ ದ್ವಿಭಾಷಾ ಪ್ರದೇಶದಲ್ಲಿ ನೆಲಸಿದ ಜನರ ಭಾಷೆಗಳ ಮೇಲೆ ಆಯಾ ಭಾಷೆಗಳ ಪರಸ್ಪರ ಪ್ರಭಾವವಾಗುವುದು ಸಹಜ. ಅದರಂತೆ ಕರ್ನಾಟಕದ ಗಡಿಪ್ರಾಂತಗಳಲ್ಲಿ ಮರಾಠಿಯು ಸು. ೧೧ನೆಯ ಶತಕದಿಂದ ಆಡುಮಾತಾಗಿ ರೂಢಿಯಲ್ಲಿರುವಂತೆ ತೋರುವುದಾಗಿಯೂ ದೇವಗಿರಿಯ ಯಾದವರ ಆಳಿಕೆಯ ಕಾಲದಲ್ಲಿ ಮರಾಠಿ ಭಾಷೆ ಸಾಹಿತ್ಯಗಳು ಚೆನ್ನಾಗಿ ಅಭಿವೃದ್ಧಿಗೆ ಬಂದಾಗ ಮರಾಠಿಗೆ ಕನ್ನಡ ಭಾಷೆಯ ಸಂಬಂಧ ಸಂಪರ್ಕಗಳು ಏರ್ಪಟ್ಟಂತೆ ತೋರುವುದಾಗಿಯೂ ಅಭಿಪ್ರಾಯಪಡಲಾಗಿದೆ. ಇಂದಿಗೂ ಕೊಲ್ಹಾಪುರದ ಜನರು ಆಡುವ ಮಾತುಗಳಲ್ಲಿ ಹೆಂಟ್ಯಾ, ಕೊಯಿಂಡ್ಯಾ, ಅಳಸುಂದಾ, ಕಾಕವಿ ಮೊದಲಾದವು ಹೆಂಡೆ, ಕೊಂಡೆ, ಅಲಸಂದಿ, ಕಾಕಂಬಿ ಮೊದಲಾದ ಕನ್ನಡ ಪದಗಳ ಪ್ರತಿರೂಪಗಳಾಗಿವೆ. 'ತೋಮಲಾ ಗಾಟ ಪಡಲಾ' ಮೊದಲಾದವು ಕನ್ನಡ ಮೂಲದ ಪ್ರಯೋಗಗಳು. ಜೆಜೂರಿ ಖಂಡೋಬನ ಪೂಜಾವೇಳೆಯಲ್ಲಿ ಹೇಳುವ 'ಉಧೋ' ಶಬ್ದವೂ 'ಏಲ್ಕೋಟ್ ಮಲ್ಹಾರ್' (=ಏಳುಕೋಟಿ ಮಲ್ಲಾರಿ) ಎಂಬ ಮಾತೂ ಕನ್ನಡದವು. ಜೆಜೂರಿಯಲ್ಲಿಯ ಹೇಗಡೆ ಅಥವಾ ಹೇಗಪಾ ಕನ್ನಡ 'ಹೆಗ್ಗಡೆ'ಯೇ ಆಗಿದೆ. ಅಕ್ಕಾ, ಅತ್ಯಾ ಇತ್ಯಾದಿ ಸಂಬಂಧಸೂಚಕ ಶಬ್ದಗಳು ಕನ್ನಡದ ಅಕ್ಕ, ಅತ್ತೆ ಎಂಬವೇ ಆಗಿವೆ.[40]

ಶಂ. ಬಾ. ಜೋಶಿಯವರು ಸೂಚಿಸಿರುವ ಕೆಲವು ಪದಗಳು ಹೀಗಿವೆ: ಮುದಲ್-ಮುದಲ, ಮುದ್ದಲ; ಬಂಬಲ್-ಬಂಬಾಳು, ಬಂಭಾಳ; ಹಡಪ-ಹಡಪಾ, ಹಡಪು; ಕೋಡಗ-ಕೋಡಗಾ; ಅದಟ-ಅದಟ; ಅಗ್ಗಳ-ಆಗಳಾ, ಅಳಿಪು-ಆಳೀ; ಅಡ್ಡ ಮತ್ತು ಅದರ ಸಮಾಸಶಬ್ದಗಳಾದ ಅಡ್ಡದಾರಿ-ಅಡಮಾರ್ಗ; ಅಡಚಣೆ-ಅಡಚಣ; ಅಡ್ಡಣ-ಅಡಣ; ಅಡಣಿಗೆ-ಅಡಣಿ. ಇವೇ ಅಲ್ಲದೆ ಅವರ ಪ್ರಕಾರ ಶೈಶವಾವಸ್ಥೆಯ ಎಲ್ಲ ಶಬ್ದಗಳೂ ಬಹುಮಟ್ಟಿಗೆ ಕನ್ನಡವೇ ಆಗಿವೆ: ತಾಯಿ ಹಾಡುವುದು ಕನ್ನಡದ ಓ-ವಿ; ಮಗು ಧರಿಸುವುದು ಮನಗಟಿ (ಮಣಿಕಟ್ಟು), ಸಮಾರಂಭಕ್ಕಾಗಿ 'ಗಡಗನೀರ್', ಧರಿಸುವುದು ತೊಡರು (ತೋಡೆ), ಸ್ತ್ರೀಯರಿಗಿರಬೇಕಾದುದು ಬಾಸಿಂಗ್ ಬಳ್—ಇತ್ಯಾದಿ.[41]

ಕೃ. ಪಾ. ಕುಲಕರ್ಣಿಯವರು ಗುರುತಿಸಿರುವ ಇನ್ನಷ್ಟು ಶಬ್ದಗಳು ಹೀಗಿವೆ: ಗೋಂಧಳ್, ಕೋಡ, ಖಡ್ಡ, ಗಾಡೀ, ಗುಂಡಾ, ಗುಂಟ, ಜೀನ್, ಅಪ್ಪಾ, ಆಡ, ಆಟಪಣೆ, ಅಘಳ (ಅಗಲ), ಅಟ್ಟಲ (ಅಡಾಲು-ಅಟಾಳ), ಅಡಕಿತ್ತು, ಆಡಗು. ಅಡಣ, ಅಡಣೀ (ಅಡ್ಡಣಿಗೆ), ಆದಟಿ, ಆರಣೀ (ಆರು), ಆಮಳೀ ಜಾಮಳೀ (ಅವಳಿ ಜವಳಿ) ಆಟ್ಯಾಪಾಟ್ಯಾ (ಆಟಪಾಟ), ಊಖ, ಉಂಡಗಾ, ಉಪದವಣೆ (ಉಪ್ಪವಡಿಸು), ಉಪ್ಪಿಟ್ಟು, ಉಬೋಳಿ, ಏಲಚೀ, ಒಕಣೀ, ಖಚ್ಚುನ, ಚಾವಣೀ, ಕಪತಾ, ಕಡಬು ಇತ್ಯಾದಿ.[42]

ಮರಾಠಿಯಲ್ಲಿ ಕನ್ನಡ ಶಬ್ದಗಳು ಬೆರೆತಿರುವಂತೆಯೇ ಕನ್ನಡದಲ್ಲಿಯೂ ಮರಾಠಿ ಶಬ್ದಗಳು ಬೆರೆತಿವೆ. ಹಳಗನ್ನಡದ ಪ್ರಾಚೀನ ವ್ಯಾಕರಣವಾದ 'ಶಬ್ದಮಣಿದರ್ಪಣ'ದಲ್ಲಿ ಕೇಶಿರಾಜ ಕನ್ನಡದಲ್ಲಿ ಸಹಜವಾಗಿ ಮಹಾಪ್ರಾಣಾಕ್ಷರಗಳಿವೆಯೆಂದು ಹೇಳಿ ಕೊಟ್ಟಿರುವ ಮಹಾಪ್ರಾಣಘಟಿತವಾದ ಕೆಲವು ಶಬ್ದಗಳು ಮರಾಠಿಗೆ ತದ್ಭವಗೊಂಡು ಕನ್ನಡವನ್ನು ಹೊಕ್ಕಿರುವ ಸಂಸ್ಕೃತ ಶಬ್ದಗಳೇ ಆಗಿವೆ. ಗಡಿನಾಡಿನ ಕನ್ನಡಿಗರು ಮರಾಠಿ ಶಬ್ದಗಳನ್ನು ಬಳಸಿದರೂ ಅವುಗಳಿಗೆ ಕನ್ನಡ ಪ್ರತ್ಯಯಗಳನ್ನು ಸೇರಿಸುತ್ತಾರೆ. ಉದಾಹರಣೆಗೆ ನಾ ವಾಚಾಸತ್ಯಾನ—ನಾನು ಓದುತ್ತೇನೆ; ಅವಳ ಲಾಜಾಸ್ತಾಳ—ಅವಳು ನಾಚುತ್ತಾಳೆ; ಬೈಲನ ಸಿಂಗ ಮೋಡಸ್ತ-ಎತ್ತಿನ ಕೋಡು ಮುರಿಯಿತು; ಬೈಲಗಾಡಿ ಮ್ಯಾಲಿ ಖುಂಡಿಸಿದ್ರು ಎತ್ತಿನ ಗಾಡಿಯ ಮೇಲೆ ಕೂಡಿಸಿದರು. ಇಂಥ ವಾಕ್ಯಗಳನ್ನು ನೋಡಬಹುದು. ಹೀಗೆಯೇ ಗಂಡಾ ಹೆಂತಿ ಮಾಯೆಲೆ (ಪ್ರೀತಿಯಿಂದ) ಇದಾವ—ಗಂಡಹೆಂಡರು ಪ್ರೀತಿಯಿಂದ ಇದ್ದಾರೆ; ಥಾಬೆ (ಕೊಟ್ಟಿಗೆ)ದಾಗ ದನಾ ಕಟ್ಟು—ಕೊಟ್ಟಿಗೆಯಲ್ಲಿ ದನಗಳನ್ನು ಕಟ್ಟು; ವೈನಿ (ಅಣ್ಣನ ಹೆಂಡತಿ) ಬಂದಳು; ನಮ್ಮ ಅಬಚಿ (ಅಪ್ಪನ ಅಕ್ಕ ಅಥವಾ ತಂಗಿ) ಬಯಿಂದಾಳ—ನಮ್ಮ ಅಪ್ಪನ ಅಕ್ಕ ಬಂದಿದ್ದಾಳೆ; ಮನ್ಯಾಗ ಪಾವಣೇರು (ಆಪ್ತರು) ಬಯಿಂದಾರ—ಮನೆಯೊಳಗೆ ಆಪ್ತರು ಬಂದಿದ್ದಾರೆ; ಆಕಿಗಿ ಝಕಾಸ (ಸುಂದರ) ಸೀರಿ ತಂದಿನು—ಆಕೆಗೆ ಸುಂದರ ಸೀರೆಯನ್ನು ತಂದನು ಇತ್ಯಾದಿ ಅನೇಕ ಉದಾಹರಣೆಗಳಲ್ಲಿ ಮರಾಠಿ ಶಬ್ದಗಳು ಕನ್ನಡ ವಾಕ್ಯಗಳೊಳಗೆ ಸೇರಿಕೊಂಡಿವೆ.[43]

ಭಾಷೆ ಮತ್ತು ಸಾಹಿತ್ಯಗಳ ದೃಷ್ಟಿಯಿಂದ ಮರಾಠಿಗಿಂತ ಕನ್ನಡ ಪ್ರಾಚೀನವಾದ್ದು. ಪ್ರಾಕೃತದ 'ಮರಹಟ್ಟ' ಎನ್ನುವುದರ ರೂಪಾಂತರ 'ಮರಾಠ'. "ಈಗಿನ ಮಹಾರಾಷ್ಟ್ರ ಭಾಷೆಯು ಮಹಾರಾಷ್ಟ್ರೀ ಎಂಬ ಪ್ರಾಕೃತ ಭಾಷೆಯಿಂದ ಅಪಭ್ರಂಶ ರೂಪವನ್ನು ಹೊಂದಿ ಅದೇ ಕ್ರಮೇಣ ಮರಾಠೀ ಭಾಷೆಯಾಗಿದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಅಪಭ್ರಂಶ ಮಹಾರಾಷ್ಟ್ರೀ ಭಾಷೆಯ ಸ್ವರೂಪವೂ ಆ ಭಾಷೆಯಲ್ಲಿ ರಚಿತವಾದ ಗ್ರಂಥಗಳೂ ಇದುವರೆಗೆ ತಿಳಿದುಬಂದಿಲ್ಲ. ಈಗಿನ ಮರಾಠೀ ಭಾಷೆ ೧೧, ೧೨ನೆಯ ಶತಮಾನಗಳೊಳಗಾಗಿಯೇ ಒಂದು ರೂಪವನ್ನು ಹೊಂದಿ ಗ್ರಂಥರಚನೆ ನಡೆದಿರಬೇಕೆಂಬುದು ತಿಳಿದು ಬರುತ್ತದೆ."[44] ಈ ವೇಳೆಗೆ ಕನ್ನಡ ಸಾಹಿತ್ಯ ಜೈನಕವಿಗಳ ಚಂಪೂಕಾವ್ಯಗಳ ಮೂಲಕ ತನ್ನ ಸ್ವರ್ಣಯುಗವನ್ನು ಕಂಡಿತ್ತು.

ಶ್ರವಣಬೆಳಗೊಳದ ಬಾಹುಬಲಿಯ ಪಾದಗಳ ಬಳಿ ಎಡಭಾಗದ ಹುತ್ತದ ಮೇಲೆ ಕೆತ್ತಿರುವ "ಶ್ರೀ ಚಾವುಣ್ಡರಾಜೇಂ ಕರವಿಯಲೇಂ" ಎಂಬ ಮಾತು "ಶ್ರೀ ಚಾವುಣ್ಡರಾಜಂ ಮಾಡಿಸಿದಂ" ಎನ್ನುವ ಅರ್ಥದ್ದಾಗಿದೆ. ಆ ಶಾಸನಲೇಖವನ್ನು ೧೦ನೆಯ ಶತಮಾನದಲ್ಲಿ ಬರೆದಿರಬಹುದೆಂದು ನಂಬಿ ಮರಾಠಿ ಭಾಷೆಯ ಮೊದಲ ಶಾಸನವೆಂದು ಅದನ್ನು ಭಾವಿಸಲಾಗಿದ್ದಿತು. ಈಗ ೧೨ನೆಯ ಶತಮಾನದ್ದು ಎಂದು ಅಭಿಪ್ರಾಯಪಡಲಾಗಿದೆ. ಏಕೆಂದರೆ ಇದಕ್ಕೂ ೧೨ನೆಯ ಶತಮಾನದಲ್ಲಿ ಇದ್ದ ಹೊಯ್ಸಳ ವಿಷ್ಣುವರ್ಧನನ ಮಂತ್ರಿ ಗಂಗರಾಜನ ಕಾಲಕ್ಕೆ ಬರೆಯಲಾದ ಇನ್ನೊಂದು ವಾಕ್ಯ "ಗಂಗರಾಜೇ ಸುತ್ತಾಲೇ

ಕರವೀಲೇ" ಎಂಬುವಕ್ಕೂ ವಿಶೇಷ ವ್ಯತ್ಯಾಸವಿಲ್ಲ. ಇವೆರಡೂ ಒಂದೇ ಕಾಲದಲ್ಲಿ ಬರೆಯಲಾದುವೆಂದು ಲಿಪಿಶಾಸ್ತ್ರದ ಆಧಾರದ ಮೇಲೆ ಡಾ. ಅಳ್ತೇಕರ್ ಮತ್ತು ಪ್ರೊ. ಶಂ. ಗೊ. ತುಳಪುಳೆ ಅಭಿಪ್ರಾಯಪಟ್ಟಿದ್ದಾರೆ.[45] ಇವರ ಪ್ರಕಾರ ಅಕ್ಷಿ ಎಂಬಲ್ಲಿ ದೊರೆತ ಶಿಲಾಲೇಖವು ಮರಾಠಿ ಭಾಷೆಯ ಮೊದಲ ಬರೆಹ. ಇದನ್ನು ಕರಹಾಟದ (ಕರ್‍ಹಾಡ್) ಶಿಲಾಹಾರ ರಾಜ ಲಕ್ಷ್ಮಣನ ಕಾಲದಲ್ಲಿ ಬರೆಯಲಾಗಿದೆ. ಇದರ ಕಾಲ ೧೧ನೆಯ ಶತಮಾನದ ಮಧ್ಯ. ಒಟ್ಟಿನಲ್ಲಿ ಮರಾಠಿಯ ಹಳಮೆ ೧೦ನೆಯ ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲ.

ಸೈಗೊಟ್ಟ ಶಿವಮಾರನ 'ಗಜಾಷ್ಟಕ'ವು ಓವನಿಗೆಯೂ ಒನಕೆವಾಡೂ ಆಯಿತೆಂದು ತಿಳಿದುಬಂದಿದೆ. 'ಓವನಿಗೆ' ಎಂಬ ಶಬ್ದಕ್ಕೂ ಮರಾಠಿಯ 'ಓವಿ' ಶಬ್ದಕ್ಕೂ ಸಂಬಂಧವಿರಬಹುದೆಂದು ಭಾವಿಸಲಾಗಿದೆ. ಕನ್ನಡಿಗ ಚಾಲುಕ್ಯ ಸೋಮೇಶ್ವರನ 'ಅಭಿಲಷಿತಾರ್ಥ ಚಿಂತಾಮಣಿ'ಯಲ್ಲಿ ಮರಾಠಿ ಜನಪದ ಗೀತೆಗಳ ತುಣುಕುಗಳು ಅಲ್ಲಲ್ಲಿ ಉದಾಹರಣೆಗಳಾಗಿ ಬಂದಿವೆ ಎಂದು ಅಭಿಪ್ರಾಯಪಡಲಾಗಿದೆ. ಪಂಪನ 'ಆದಿಪುರಾಣ'ದಲ್ಲಿ 'ಮಹಾನಾಟಕ'ರೆಂಬುದಾಗಿ ಮಹಾರಾಷ್ಟ್ರದ ಸೈನಿಕರ ವಿವರಣೆ ದೊರೆಯುತ್ತದೆ. ಹೀಗೆ ಅಲ್ಲಲ್ಲಿ ಮರಾಠಿ ಸಾಹಿತ್ಯದ ಮತ್ತು ಮಹಾರಾಷ್ಟ್ರದ ಉಲ್ಲೇಖ ಪಂಪಪೂರ್ವ ಮತ್ತು ಪಂಪನ ಕಾಲದಲ್ಲಿ ದೊರೆಯುತ್ತದೆ. ಆದರೆ ಸಂಪನ್ನ ಸಮೃದ್ಧ ಸಾಹಿತ್ಯವನ್ನು ನಿರೀಕ್ಷಿಸುವಂತಿಲ್ಲ.

ಹೊಯ್ಸಳ ೨ನೆಯ ವೀರನರಸಿಂಹ (೧೨೨೩-೨೪)ನ ಕಾಲದ ದಾವಣಗೆರೆ ೨೫ನೆಯ ಶಾಸನದಲ್ಲಿ ಆ ಕಾಲಕ್ಕೆ ಸುಮಾರು ೩೨-೩೩ ವರ್ಷಗಳ ಹಿಂದೆ ಆಗಿಹೋದ ಸೊರಟೂರಿನ ಕಾಳಗದಲ್ಲಿ ಹೊಯ್ಸಳರ ಸೇನೆ ಸೇಉಣರ ದಂಡನ್ನು ಸೋಲಿಸಿತು ಎನ್ನುವಾಗ ಮರಾಠಿ ಪ್ರತ್ಯಯಗಳನ್ನುಳ್ಳ ಕನ್ನಡ ವೃತ್ತವೊಂದಿದೆ ಎಂದು ಮಂ. ಗೋವಿಂದ ಪೈ ಗುರುತಿಸಿದ್ದಾರೆ. ಅದು ಹೀಗಿದೆ :

> "ಜವರಾತೂ ಜಗದೇಕವೀರು ಮಝು ದೇವಾರೋಹಕೂ ಬಾಪು ಜಾ
> ದವನಾರಾಯಣು ನಾರಸಿಂಗು ಭಲ"[46]

ಮಹಾರಾಷ್ಟ್ರದಲ್ಲಿ ೧೩ನೆಯ ಶತಮಾನದಲ್ಲಿ ಪ್ರಬಲಿಸಿದ ಮಹಾನುಭಾವ ಪಂಥಕ್ಕೂ ಕರ್ಣಾಟಕದ ವೀರಶೈವ ಧರ್ಮಕ್ಕೂ ಅನೇಕ ಸಾಮ್ಯ ವೈಷಮ್ಯಗಳಿವೆ. ಸಾಮ್ಯದ ಭಾಗ ಹೀಗೆ: "ಎರಡರಲ್ಲಿಯೂ ವರ್ಣಭೇದವಿಲ್ಲ. ಸ್ತ್ರೀಯರಿಗೆ ಮಹತ್ತ್ವವಿದೆ. ಮಹಾನುಭಾವ ಪಂಥದಲ್ಲಿ ಎಷ್ಟೋ ಜನ ಸ್ತ್ರೀಯರು ಸಂನ್ಯಾಸಿನಿಯರಾಗಿದ್ದಾರೆ. ಲಿಂಗಾಯಿತ ಮತದಲ್ಲಿಯೂ ಎಷ್ಟೋ ಜನ ಸ್ತ್ರೀಯರು ವಿರಕ್ತರಾಗಿದ್ದಾರೆ. ಮಾಂಸಾನ್ನ ಮದ್ಯಪಾನಾದಿಗಳು ನಿಷೇಧಿಸಲ್ಪಟ್ಟಿವೆ. ಅಹಿಂಸಾ ನಿಯಮವನ್ನು ಎಲ್ಲರೂ ಪರಿಪಾಲಿಸಬೇಕು. ಜಂಗಮರು, ಸಂನ್ಯಾಸಿಗಳು ಭಿಕ್ಷಾವೃತ್ತಿಯಿಂದ ಜೀವಿಸಬೇಕು. ಎರಡು ಮತದವರೂ ತಾವಾಡುವ ಮಾತಿನಲ್ಲಿ ಮತಗ್ರಂಥಗಳನ್ನು ಬರೆದಿದ್ದಾರೆ." ವೈದೃಶ್ಯದ ಭಾಗ ಹೀಗೆ : "ವೀರಶೈವರು ವೇದಕ್ಕೆ ಪ್ರಾಧಾನ್ಯವನ್ನು ಹೇಳುವುದಿಲ್ಲ. ಮಹಾನುಭಾವ ಪಂಥದವರು ವೇದಗಳನ್ನು, ಉಪನಿಷತ್ತುಗಳನ್ನು ಒಪ್ಪುತ್ತಾರೆ. ವೀರಶೈವರು ಶಿವನೊಬ್ಬನನ್ನೇ ಪೂಜಿಸುವರು. ಮಹಾನುಭಾವ ಪಂಥದವರು ಕೃಷ್ಣನೊಬ್ಬನನ್ನೇ ಪೂಜಿಸುವರು. ವೀರಶೈವರು ರುದ್ರಾಕ್ಷ

ಮಾಲೆ, ವಿಭೂತಿಗಳನ್ನು ಧರಿಸುತ್ತಾರೆ. ಮಹಾನುಭಾವ ಪಂಥದವರು ತುಳಸೀಮಾಲೆ ಚಂದನಗಳನ್ನು ಧರಿಸುತ್ತಾರೆ."[47]

ಮಹಾನುಭಾವ ಪಂಥದ ಮೂಲಪುರುಷ ಚಕ್ರಧರನ ಜೀವನಕ್ಕೂ ಬಸವಣ್ಣನವರ ಜೀವನಕ್ಕೂ ಹಲವು ಹೋಲಿಕೆಗಳಿವೆ. ಬಸವಣ್ಣನ ಜೀವನ ಪವಾಡಮಯವಾಗಿರು ವಂತೆಯೇ ಚಕ್ರಧರನ ಜೀವನವೂ ಪವಾಡಮಯವಾಗಿದೆ. ಬಸವಣ್ಣನ ಉಪದೇಶವನ್ನು ವಚನ ಎನ್ನುವಂತೆಯೇ ಚಕ್ರಧರನ ಉಪದೇಶವನ್ನೂ ವಚನ ಎನ್ನುತ್ತಾರೆ. ಬಸವಣ್ಣ ಕನ್ನಡದಲ್ಲಿ ಉಪದೇಶ ಮಾಡಿದಂತೆ ಚಕ್ರಧರ ಮರಾಠಿಯಲ್ಲಿ ಉಪದೇಶ ಮಾಡಿದ್ದಾನೆ. ಬಸವಣ್ಣ ವಿಷಯಪುಷ್ಟಿಗೆ ದೃಷ್ಟಾಂತ ಉಪಮೆಗಳನ್ನು ಕೊಟ್ಟರೆ, ಚಕ್ರಧರ ಬರಿಯ ಸೂತ್ರಗಳನ್ನು ಹೇಳುತ್ತಾನೆ. ಬಸವಣ್ಣನ ವಚನಗಳಿಗೆ ಹೇಗೆಯೋ ಹಾಗೆಯೇ ಚಕ್ರಧರನ ಉಪದೇಶಗಳಿಗೂ ದೃಷ್ಟಾಂತಗಳ ಮೂಲಕವಾದ ಸೂತ್ರಾರ್ಥವಿವರಣೆಯಿದೆ.

ಚಕ್ರಧರನ ಶಿಷ್ಯ ಭಾಸ್ಕರಭಟ್ಟ ಬೋರಿಕರನ 'ಶಿಶುಪಾಲ ವಧ' ಮತ್ತು 'ಉದ್ಧವ ಗೀತೆ'ಯಲ್ಲಿ ಗುಡಿ, ಗುಂಡಿ, ಹಡಪ, ಗುಡಾರ, ತೋಮ, ಹೇವ, ಅರಲ, ಅಡಣ ಮುಂತಾದ ಶಬ್ದಗಳೂ ಶಬ್ದಗಳ ರೂಪಾಂತರಗಳೂ ಇವೆ. ಮಹದಾಂಬಾ ಎನ್ನುವ ಚಕ್ರಧರನ ಶಿಷ್ಯೆ ಶ್ರೀಕೃಷ್ಣನ ವಿವಾಹವಸ್ತುವನ್ನುಳ್ಳ 'ಧವಳೆ' ಎಂಬ ಹೆಸರಿನ ಹಾಡು ಗಳನ್ನು ರಚಿಸಿದ್ದಾಳೆ. ಕನ್ನಡದಲ್ಲಿ ವಿವಾಹ ಮುಂತಾದ ಶುಭ ಶೋಭನಗಳಲ್ಲಿ ಹಾಡುವ 'ಧವಳ' ಎಂಬ ಹಾಡುಗಳು ಕೆಲವಿರುವುದನ್ನು ಇಲ್ಲಿ ನೆನೆಯಬಹುದು. ಇವು ಗಳಿಗೆ ಇಲ್ಲಿ ಪ್ರಾಚೀನತೆಯೂ ಇರುವಂತೆ ತೋರುವುದರಿಂದ ಈ ಪದ್ಯಪ್ರಕಾರ ಸಾಮ್ಯ ಪರಿಶೀಲನಾರ್ಹ.

ಮಹಾನುಭಾವ ಪಂಥದ ಕವಿಗಳಲ್ಲಿ ದಾಮೋದರ ಪಂಡಿತ ಮತ್ತು ನರೇಂದ್ರ ಪಂಡಿತರು ಕ್ರಮವಾಗಿ 'ವತ್ಸಹರಣ' ಮತ್ತು 'ರುಕ್ಮಿಣೀ ಸ್ವಯಂವರ'ಗಳನ್ನು ಬರೆದಿದ್ದಾರೆ. ಇದೇ ಕಾಲಕ್ಕೆ ಸೇರಿದ್ದು ಕನ್ನಡದಲ್ಲಿ ರುದ್ರಭಟ್ಟ ಬರೆದ 'ಜಗನ್ನಾಥ ವಿಜಯ' ಎಂಬ ವೈಷ್ಣವಕಾವ್ಯ.

ಮಹಾನುಭಾವ ಪಂಥ ಮಹಾರಾಷ್ಟ್ರದಲ್ಲಿ ಪ್ರಬಲವಾಗಿದ್ದ ಕಾಲದಲ್ಲಿಯೇ ನಾಥ ಸಂಪ್ರದಾಯವೂ ಅಲ್ಲಿ ಪ್ರಬಲವಾಗಿದ್ದಿತು. ನಾಥಸಂಪ್ರದಾಯವನ್ನು ಮತ್ಸ್ಯೇಂದ್ರ ಮತ್ತು ಗೋರಕ್ಷರು ಶ್ರೀಶೈಲದಲ್ಲಿ ಸ್ಥಾಪಿಸಿದರು. ಮತ್ಸ್ಯೇಂದ್ರನು ಸ್ತ್ರೀರಾಜ್ಯದಲ್ಲಿ ನೆಲೆ ಸಿದ್ದುದಕ್ಕೆ ಸಮಾನವಾಗಿದೆ ಅಲ್ಲಮಪ್ರಭು ಮತ್ತು ಮಾಯಾದೇವಿಯರ ಪ್ರಸಂಗ. ಮತ್ಸ್ಯೇಂದ್ರನಿಗೆ ಮಾಯಾಮತ್ಸ್ಯೇಂದ್ರ ಎನ್ನುವ ಬಿರುದಿರುವಂತೆಯೇ ಅಲ್ಲಮಪ್ರಭು ವಿಗೆ ಮಾಯಾಕೋಲಾಹಲ ಎನ್ನುವ ಬಿರುದಿದೆ. 'ಪ್ರಭುಲಿಂಗಲೀಲೆ'ಯಲ್ಲಿ ಬರುವ ಗೋರಕ್ಷ ಅಲ್ಲಮರ ಸಂವಾದ ಗಮನಾರ್ಹವಾದುದು. ಶೂನ್ಯಸಂಪಾದನೆಯಲ್ಲಿ ದೊರೆ ಯುವ 'ಗೋರಕ್ಷ' ಅಂಕಿತದ ವಚನಗಳು ಅವನಿಗೆ ಕನ್ನಡ ಬರುತ್ತಿದ್ದಿರಬಹುದೆಂದು ಸೂಚಿಸುತ್ತದೆ. ಅಲ್ಲದೆ ಮರಾಠಿಯಲ್ಲಿ ಗೋರಕ್ಷನದೆನ್ನಲಾದ ಈ ಮಾತುಗಳು ದೊರೆಯು ತ್ತವೆ: "ನಿಜಲಿಂಗ ನ್ಯಾ ಹಾಳಿತಾ ಅವ್ಹಿ ತುಮ್ಹಿ ನಾಹಿ" (ನಿಜಲಿಂಗವ ನಿಟ್ಟಿಸಲಾಗಿ

ನಾವು ನೀವಿಲ್ಲ), "ನಿಜಲಿಂಗ ನ್ಯಾ ಹಾಳುನಿ ಸಂಸಾರದಿಲೆ ಪಾಣಿ" (ನಿಜಲಿಂಗವ ನಿಟ್ಟಿಸಿ ಸಂಸಾರಕ್ಕೆ ನೀರುಕೊಟ್ಟೆ).[48] ಹೀಗೆ ನಾಥ ಸಂಪ್ರದಾಯಕ್ಕೂ ವೀರಶೈವ ಧರ್ಮದ ಪ್ರಮುಖ ವ್ಯಕ್ತಿ ಅಲ್ಲಮಪ್ರಭುವಿಗೂ ಸಂಬಂಧವಿರುವುದನ್ನು ಗಮನಿಸಬಹುದು. ಇದೇ ಕಾಲದ ಚೆನ್ನಬಸವಣ್ಣನ 'ಕರಣಹಸುಗೆ'ಯನ್ನು ೧೭ನೆಯ ಶತಮಾನದ ಶಾಂತಲಿಂಗ ಶಿವಯೋಗಿ ಮರಾಠಿಗೆ ಅನುವಾದ ಮಾಡಿದ್ದಾನೆ.

ನಾಥ ಸಂಪ್ರದಾಯದ ಪ್ರಮುಖ ಕವಿ ಮುಕುಂದರಾಜ. ಇವನ ಸಮಕಾಲೀನ ಕನ್ನಡ ಕವಿ ಎಂದರೆ ನೇಮಿಚಂದ್ರ. ಇವರನ್ನು ಪರಸ್ಪರವಾಗಿ ಹೋಲಿಸಿದ ವಿಮರ್ಶಕರೊಬ್ಬರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ಇವರಿಬ್ಬರ ಧ್ಯೇಯವೂ ಇವರಿಬ್ಬರ ಕಾವ್ಯರಚನಾ ಕ್ರಮವೂ ಇವರಿಬ್ಬರ ಧರ್ಮವೂ ಪರಸ್ಪರ ಮೇಳವಾಗುವುದಿಲ್ಲ. ಇವರಿಬ್ಬರೂ ಉದ್ದಾಮ ಕವಿಗಳೆಂದು ಒಪ್ಪಬೇಕು ; ಆದರೂ ಕವಿತಾ ಧೋರಣೆಯಲ್ಲಿ ಇವರಿಬ್ಬರಿಗೆ ಸಂಬಂಧವೇ ಇಲ್ಲ. ಒಬ್ಬನು ಪ್ರವೃತ್ತಿಪರನು, ಇನ್ನೊಬ್ಬನು ನಿವೃತ್ತಿಪರನು....[49]

ಮುಕುಂದರಾಜನು 'ವಿವೇಕಸಿಂಧು' ಮೊದಲಾದ ತನ್ನ ಕೃತಿಗಳಲ್ಲಿ ಶಂಕರಾಚಾರ್ಯರ ಅದ್ವೈತ ವೇದಾಂತವನ್ನು ಉಪನಿಷತ್ತು ಮತ್ತು ಭಗವದ್ಗೀತೆಗಳ ಆಧಾರದಿಂದ ಸಮರ್ಥಿಸಿದ್ದಾನೆ. ತನ್ನ ಕೃತಿಗಳನ್ನು ನೃಸಿಂಹ ಬಲ್ಲಾಳನ ಮಗ ಜಯಂತಪಾಳನ ಅನುಮತಿಯಂತೆ ರಚಿಸಿದುದಾಗಿ ತಿಳಿಸುತ್ತಾನೆ. ಆದರೆ ಈ ನೃಸಿಂಹ ಬಲ್ಲಾಳ ಮತ್ತು ಹೊಯ್ಸಳ ನರಸಿಂಹ ಬಲ್ಲಾಳ ಬೇರೆಬೇರೆಯವರೆಂದು ಕೆಲವರ ಅಭಿಪ್ರಾಯ.

ಮುಕುಂದರಾಜನ 'ವಿವೇಕಸಿಂಧು'ವನ್ನು ೧೭ನೆಯ ಶತಮಾನದ ಮಹಲಿಂಗರಂಗನೆಂಬ ಕವಿ 'ಅನುಭವಾಮೃತ' ಎನ್ನುವ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾನೆ. ಕನ್ನಡ ಕವಿ ನಾಥಪಂಥದವನೆಂದೂ ಆತನ ಕನ್ನಡ ಪ್ರೇಮಕ್ಕೆ ಮುಕುಂದರಾಜನೇ ಪ್ರೇರಣೆಯೆಂದೂ ವಿದ್ವಾಂಸರ ಅಭಿಪ್ರಾಯಗಳು. ಮುಕುಂದರಾಜನ—

ಕಲ್ಪತರೂಚೀಃನಿಪಾಡೇಃ ॥ ಜರೀಃಫಳತೀಃ ಘುರಚಿಝೂಡೇಃ
ತರೀಃತಿಯೇಃ ಅವಡೀಃಚೇಃನಿಕೋಃಡೇಃ ॥ ನಲಾವಾವೀಕಾ ॥

ದೇಃಶಿಹೋಃ ಕಾ ಮರಾಠೀಃ ॥ ಪರಿಃ ಉಪನಿಷದಾಚೀಃಚರಾಹಟೀಃ
ತರೀಃಹಾ ಅರ್ಥೂ ಜೀಃವಾಚಿಯಾಗಾಂಠೀಃ ॥ ಕಾಸಬಾಂಧವಾ ॥

ವೇಃದಶಾಸ್ತ್ರಾಚಾ ಮಥಿತಾರ್ಥೂ ॥ ಮರಾಠಿಯಾಕೋಃಯು ಫಲಿತಾರ್ಥೂ
ತರೀಃ ಚತುರೀಃ ಪರಮಾರ್ಥೂ ॥ ಕಾನಷ್ಯಾವಾ ॥

ಎನ್ನುವುದಕ್ಕೆ ಸಂವಾದಿಯಾಗಿ—

ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ॥

ಕನ್ನಡದ ನುಡಿಯೆಂದುಪೇಕ್ಷಿಸ
ಲಿನ್ನು ಹಿರಿಯರಿಗಂಜಿ ನುಡಿವೆನು
ಕನ್ನಡಿಯೆ ದರ್ಪಣವಲ್ಲವೆ ಭೇದವೇನಿದಕೆ
ಮುನ್ನಲುಪನಿಷದರ್ಥವನು ಸಂ
ಪನ್ನಮತಿಗಳು ಪೇಳ್ದುದನೆ ನಾ
ಕನ್ನಡಿಸಿದೆನು ಕೊರತೆಯಿದ್ದೊಡೆ ಮನ್ನಿಸುವದೊಲಿದು ॥

ಎಂಬ ಛಾಯಾಸಮಾನವಗಳನ್ನು ‘ಅನುಭವಾಮೃತ’ದಲ್ಲಿ ಕಾಣಬಹುದು. ಅಲ್ಲದೆ “ಜೀವ ಶಬ್ದೇ ಕಾಯಬೋಲಜೇ?” “ಬ್ರಹ್ಮ ಹೇನಾಮ ವಿಜೇ ಕವಣಾಸೀಜೇ?” “ಪರಮಾತ್ಮಾ ತೋ ಕವಣ?” “ಸಗುಣ ಕಿ ನಿರ್ಗುಣ” “ಮಾಯಾತೇ ಕವಣಶಕ್ತಿ” “ತಿಯೇಸಿ ಕೈಸೀ ಸ್ವರೂಪ ಸ್ಥಿತೀ” “ಅವಿದ್ಯೇಚೀ ಕೈಸೀ ರೀತಿ?” “ಕಿಮಾಶ್ರಯತೇ?” “ಪ್ರಪಂಚ ಕವಣೆ ನಿರ್ಮಿಲಾ” “ಕಾಸಯಾಚಾ ಉಭಾರಲಾ” “ಜೀವಾಸೀ ಸಂಸಾರ ನಾಥಿಲಾ ಕಿಂ ನಿಮಿತ್ತಜೀ”—ಎಂಬ ಪ್ರಶ್ನೆಗಳೂ “ಜೀವ ಪರಮರ ಪರಿಯೆಂತೈ”, “ಬ್ರಹ್ಮವೆಂದೊಡ ದೆಂತಿಹುದು” ”ಎರಡು ತನುವೆಂತಾಯಿತೊಬ್ಬಗೆ” “ಪರಮಾತ್ಮಪದವನು ತಿಳುಹಲು ಬೇಕು”, “ಮಾಯೆಯು ಜೆಂದವಾವುದು”, “ಜೀವ ಜಗವಾವಿಂದಲಾಮುದದಾವ ಪರಿಯೆಂತು”, “ಸಂಸೃತಿಶರಧಿಯನು ನಾವೆಂತು ಕಳೆವೆವು” ಎಂಬ ಅನುಭವಾಮೃತದಲ್ಲಿಯ ಪ್ರಶ್ನೆಗಳೂ ಪ್ರಾಯಃ ಒಂದೇ ಆಗಿವೆ. ಇದರಂತೆ ಇವುಗಳ ಉತ್ತರರೂಪವಾಗಿ ನಿರ್ಮಿಸಿದ ವಿಷಯವಾದರೂ ಎರಡು ಗ್ರಂಥಗಳಲ್ಲಿ ಸಮಾನವಾಗಿದೆ.[50]

ಮರಾಠಿಯ ಶ್ರೇಷ್ಠಕೃತಿ ‘ಜ್ಞಾನೇಶ್ವರಿ’ಯನ್ನು ಬರೆದವನು ಜ್ಞಾನದೇವ. ಈತ ದೇವಗಿರಿಯ ರಾಮರಾಜದೇವನ ಸಮಕಾಲೀನ. ‘ಜ್ಞಾನೇಶ್ವರಿ’ಯ ಜೊತೆಗೆ ‘ಅಮೃತಾನುಭವ’, ‘ಸ್ವಾತ್ಮಾನುಭವ’ ಎಂಬ ಕೃತಿಗಳನ್ನು ಈತ ರಚಿಸಿದ್ದಾನೆ. ಅನೇಕ ಪದಗಳೂ ಅಭಂಗಗಳೂ ಅವನವಿವೆ. ‘ಜ್ಞಾನೇಶ್ವರಿ’ಯಲ್ಲಿ ಅಕ್ಕಸಾಲಿ, ಅಡತರ, ಅಂಟಿ (ಅಂಟು), ಆಗಲೇ (ಆಗಲು), ಆಡವಾರಾ (ಅಡ್ಡಬರು), ಆರ್ಡಿ (ಆರಡಿ), ಕೇಳವಣೆ, ತೂಕ, ಪೌಳಿ (ಪೌಳಿ), ಭಾಂಗಾರ, ಮದವಿ, ಮಾತು (ಶಬ್ದ), ಮಿರವಣೆ (ಮೆರೆವಣಿಗೆ), ಸೂಡ, ಹರಳು—ಹೀಗೆ ನೂರಾರು ಕನ್ನಡ ಶಬ್ದಗಳು ದೊರೆಯುತ್ತವೆ ಎಂಬುದು ಕುತೂಹಲಕರವಾಗಿದೆ. ಅಷ್ಟೇ ಅಲ್ಲದೆ ಜ್ಞಾನದೇವನಿಗೆ ಕನ್ನಡದ ಪರಿಚಯವಿದ್ದು ಕನ್ನಡದಲ್ಲಿಯೂ ಒಂದೆರಡು ಅಭಂಗಗಳನ್ನು ಆತ ರಚಿಸಿದ್ದಾನೆ. ‘ಜ್ಞಾನೇಶ್ವರಿ’ಯಲ್ಲಿ ಭಗವದ್ಗೀತೆಯ ಆಚಾರ್ಯೋಪಾಸನೆಯೆಂಬ ಮಾತಿನ ವಿವರಣೆಯನ್ನು ಮಾಡುವಾಗ ಗುರುಭಕ್ತಿಯ ರೀತಿಯನ್ನು ಜ್ಞಾನದೇವನು ಹೀಗೆ ವರ್ಣಿಸಿದ್ದಾನೆ:

ಪಡಿಗಾಮಿಾಚಿ ಹಡಪಾ ವಿಂ ಓಳಗೇನ ಮಿಾಚಿಲುಗಾಳು
ಘೇಯಿಾನ ಉಳಿಗ ಕರೀನ ಮಿಾ ಅಂಘೋಳಿಚೇ
ಹೋಯಿಾನ ಗುರೂ ಚಿ ಆಸನ...ಮಿಾ ಚಿ ಓಗರೀನ ಉಪಹಾರು
ಜೇ ವೇಳಿ ದೇವೋ ಆರೋಗಿತೀ ॥೧೩–೪೧೮_೪೨೩.[51]

ಕನ್ನಡದಲ್ಲಿ ಇದರ ಅರ್ಥ ಹೀಗಿದೆ: "ಗುರುದೇವನಿಗೆ ನಾನೇ ಪಾತ್ರೆ ಪಡಗವಾಗುವೆನು. ನಾನೇ ಹಡಪಿಗನಾಗಿ ಓಲಗಿಸುವೆನು. ನಾನೇ ತಂಬುಲ (ಉಗಳನ್ನು) ಧರಿಸುವೆನು. ಸ್ನಾನದ ಊಳಿಗ ಮಾಡುವೆನು. ಆರೋಗಿಸುವ ಕಾಲದಲ್ಲಿ ನಾನೇ ಓಗರಿಸುವೆನು." ಈ ಮೇಲಿನ ಮರಾಠಿ ಪದ್ಯದಲ್ಲಿ ಕೂಡ ಕನ್ನಡದ ಪಡಗ ಓಗರಿಸು ಉಗುಳು ಊಳಿಗ ಆರೋಗಣೆ ಓಗರ ಎಂಬ ಶಬ್ದಗಳ ಮರಾಠಿ ರೂಪಗಳನ್ನು ಕಾಣಬಹುದು.

ಆವನ ಅಭಂಗಗಳಲ್ಲಿ ಒಂದು ಈ ರೀತಿ ಇದೆ:

ಆ ಆ ನೀ ಕೇಳೆ ಚಿಕನ ಮಾತು ಕೋಳುಲಿ ಘನಿಗೆ ಮರುಳಾದೆನೆ ॥೧॥
ಚಲುವಾನೆ ಚಲುವಾನೆ ಫಂಡರಿರಾಯ ಚಲುವಾನೆ?
ಯಲ್ಲಿ ದೊರೆಕನ್ನೇ ಯಲ್ಲಿ ಬಾರನ್ನೆ ॥ ಧ್ರುಪದ ॥

ಪುಂಡಲೀಕನೆ ಭಕ್ತಿಗೆ ಬಂದಾ
ರಖುಮಾದೇವೀ ವರ ವಿಟ್ಠಲುನೇ ॥ ೨॥ [52]

(ಜ್ಞಾನದೇವ ಅಭಂಗ 'ಹೊಸಪ್ರತಿ', ನಂ. ೩೪೫)

ಇದೇ ಅಭಂಗವನ್ನು ಬೇರೊಂದು ಪಾಠಕ್ಕೆ ಅನುಗುಣವಾಗಿ ನಾ. ಶ್ರೀ ರಾಜಪುರೋಹಿತರು ಹೀಗೆ ಕೊಟ್ಟಿದ್ದಾರೆ—

ಅಕ್ಕಾ ನೀ ಕೇಳೇ ಚಿಕ್ಕನ ಮಾತು
ಕಾರಲೇದಾಸೀಗೆ ಮರುಳಾದನೇ ।
ಚಿಲುವಾನೆ ಚಿಲುವಾನೆ ಪಂಥರಿರಾಯಾ
ಚಿಲುವಾನೆ ಎಲ್ಲಿ ದೊರಕುವನೇ ॥

ಪುಂಡಲೀಕನ ಭಕ್ತಿಗೆ ಬಂದಾ
ರುಖಮಾದೇವೀ । ವರವಿಟ್ಠಲನೇ ॥[53]

ಹೀಗೆ ಮರಾಠಿಯಲ್ಲಿ ಕನ್ನಡ ಪದಗಳೂ ಪದ್ಯಗಳೂ ಜ್ಞಾನೇಶ್ವರಿಯ ಕಾಲಕ್ಕಾಗಲೇ ಸೇರಿದ್ದುವು. ಅದಕ್ಕೆ ಕಾರಣ ಬಹುಶಃ ಸ್ವತಂತ್ರವಾಗಿ ಈಚೆಗೆ ಬೆಳೆಯುತ್ತಿದ್ದ ಮರಾಠಿ ಭಾಷೆ ಆಹೊತ್ತಿಗಾಗಲೇ ಪ್ರಬುದ್ಧವಾಗಿದ್ದ ಕನ್ನಡದಿಂದ ಶಬ್ದಗಳನ್ನು ಸ್ವೀಕರಿಸಿದುದು. ಮಹಾನುಭಾವ ಪಂಥ ಮತ್ತು ನಾಥ ಸಂಪ್ರದಾಯಗಳಂತೆಯೇ ವಿಟ್ಠಲಭಕ್ತಿಯೂ ಮಹಾರಾಷ್ಟ್ರದ ಕೊಡುಗೆ. ಜ್ಞಾನದೇವನು "ಕಾನಡಾ ಹೋ ವಿಟ್ಠಲೂ ಕರ್ನಾಟಕೂ" ಎಂದು ಪಂಢರಿಪುರದ ವಿಟ್ಠಲನನ್ನು ಕರೆಯುತ್ತಾನೆ. ಆದರೆ ಅದರ ಅರ್ಥ 'ತಿಳಿಯಲು ಸುಲಭವಲ್ಲ' ಎಂದು ಅರ್ಥಮಾಡಬೇಕೆಂದು ಕೆಲವರು ಹೇಳುತ್ತಾರೆ. ಡಾ. ಭಂಡಾರ್ಕರ್ 'ವಿಠೋಬಾ' ಶಬ್ದದ ನಿಷ್ಪತ್ತಿಯನ್ನು ಕನ್ನಡದಿಂದ ಮಾಡುತ್ತಾರೆ. ಪಂಢರಪುರದ ವಿಟ್ಠಲಭಕ್ತಿ ಮತ್ತು ಸಂಪ್ರದಾಯ ೧೩ನೆಯ ಶತಮಾನಕ್ಕಾಗಲೇ ಕರ್ನಾಟಕದಲ್ಲಿ ನೆಲಸಿದ್ದಿತು. ಇದಕ್ಕೆ ನಿದರ್ಶನ ಚೌಂಡರಸ ತನ್ನ "ಅಭಿನವದಶಕುಮಾರಚರಿತೆ"ಯಲ್ಲಿ ವಿಟ್ಠಲಸ್ತುತಿಮಾಡಿರುವುದು. ಸಂಸ್ಕೃತಮೂಲದಲ್ಲಿಲ್ಲದ ಈ ಭಾಗವನ್ನು ಆತ ಸ್ವತಃ ಸೇರಿಸಿದ್ದಾನೆ. 'ಅಭಿನವದಶಕುಮಾರಚರಿತೆ'ಯ 'ವಿಟ್ಠಲಾಷ್ಟಕ' ಕನ್ನಡದಲ್ಲಿ ದೊರೆ

ಯುವ ವಿಟ್ಠಲಭಕ್ತಿಯ ಮೊದಲ ಸಾಹಿತ್ಯಕೃತಿ.

ವಿಟ್ಠಲಭಕ್ತಿಯ ತುಕಾರಾಮನಾದರೊ ಬಸವಣ್ಣನವರನ್ನು ತನ್ನ ಗುರುವೆಂದು ಭಾವಿಸಿದ್ದವನು. ತುಕಾರಾಮನ ಗೀತಗಳಲ್ಲಿಯ 'ಬಸವಂತ' ಶಬ್ದವು ಬಸವಣ್ಣನವರನ್ನು ಕುರಿತದ್ದೆಂಬುದಾಗಿ ಗ್ರಹಿಸಲಾಗಿದೆ. "ಕೊಳಲನೂದುವ ಚದುರನ್ಯಾರೆ ಪೇಳಮ್ಮಯ್ಯ" ಎನ್ನುವ ವ್ಯಾಸರಾಯರ ಪದವನ್ನು ನೆನಪಿಗೆ ತರುತ್ತದೆ. "ತ್ರಿಭಂಗೀ ದೇಹುಡೇ ಉಭೇ ವೃಂದಾವನೀ ವೇಣೂ ಚಕ್ರಪಾಣಿ ವಾಜವಿತ" ಎನ್ನುವ ನಾಮದೇವನ ಅಭಂಗ.

ಭಾಗವತ ಸಂಪ್ರದಾಯಕ್ಕೆ ಸೇರಿದ ಕುಮಾರವ್ಯಾಸ ಭಾರತದಲ್ಲಿ ಪೈಕ, ಪಾರುಖಾಣೆ ಮುಂತಾದ ಮರಾಠಿ ಶಬ್ದಗಳು ದೊರೆಯುತ್ತವೆ. ವೀರಪಣ, ಜಾಣಪಣ, ಶೌರ್ಯಪಣ, ಸಾಮರ್ಥ್ಯಪಣ, ವಿಸ್ತಾರಪಣ ಮುಂತಾದ ಮರಾಠಿಯ ಭಾವನಾಮ ಸೂಚಕ ಪ್ರತ್ಯಯಾಂತ ಪದಗಳೂ ಬಳಕೆಯಾಗಿವೆ. ಪರಭಾಷೆಯ ಪ್ರತ್ಯಯವೊಂದನ್ನು ಕನ್ನಡಕ್ಕೆ ಸೇರಿಸುವ ಪ್ರಯೋಗವೊಂದನ್ನು ಕುಮಾರವ್ಯಾಸ ಮಾಡಿದ್ದಾನೆ. ಇದು ಆತನ ಸ್ವಸ್ಥಳಕ್ಕೆ ನೆರೆಯಲ್ಲಿದ್ದ ಮರಾಠಿ ಭಾಷೆಯ ಗಾಢವಾದ ಪ್ರಭಾವವನ್ನು ತೋರಿಸುತ್ತದೆ. ಮರಾಠಿ ವಿಭಕ್ತಿರೂಪಗಳನ್ನುಳ್ಳ ಒಂದು ಷಟ್ಪದಿಯೂ ಅವನ ಭಾರತದಲ್ಲಿ ದೊರೆಯುತ್ತದೆ.

ರಾವುತೋ ಮರ್ಝು ಭಾವು ರಾವುತು
ದೇವು ರಾವುತು ಭಲರೆ ರಾವುತು
ರಾವುತೋ ನಿಶ್ಶಂಕ ರಾವುತು ರಾವುತೆಂದೆನುತ
ರಾವು ರಾವುತು ಪೂತು ರಾವುತು
ಭಾವು ರಾವುತು ರಾವುತೋ ಎಂ
ದೋವಿ ಹೊಯಿದಾಡಿದರು ರಣದಲಿ ಲಾಳ ರಾವುತರು ॥ (ಭೀಷ್ಮಪರ್ವ ೪-೬೮)

ಕನ್ನಡದ ಅತ್ಯಂತ ಸಮರ್ಥ ಕವಿಯಾದ ಈತನ ಭಾರತವನ್ನು ಮರಾಠಿಯಲ್ಲಿ ಇಬ್ಬರು ಅನುಸರಿಸಿದ್ದಾರೆ. ಇವರಲ್ಲಿ ಮುಕ್ತೇಶ್ವರನ ಕೃತಿ ಮುಖ್ಯವಾದುದು. 'ಕುಮಾರವ್ಯಾಸ ಭಾರತ'ದ "ಅರಸುಗಳಿಗಿದು ವೀರ...." (ಆದಿಪರ್ವ ೧-೧೯) ಪದ್ಯವನ್ನು ಹೋಲುವ ಮುಕ್ತೇಶ್ವರನ ಪದ್ಯಗಳು ಹೀಗಿವೆ:

ಮುಕ್ತೇಶ್ವರ ಕವೀ ಭಾರತ
ಟೀಕಾ ಪ್ರಾಂಜಳ ವ್ಯಕ್ತ
ಜೇವೀವೇದಾ ಚಾ ಮಥಿತಾರ್ಥ
ಶ್ರುತಿ ಪುರಾಣೀ ಬೋಲತೀ ॥೧॥

ಜೋ ರಾಜಾಯಾ ತೇ ವೀರರಸೂ
ವಿಪ್ರವರ್ಯಾ ತೇ ವೇದಸಾರಾಂಶು
ತತ್ತ್ವಾರ್ಥಬೋಧ ಪರಮಹಂಸು
ಯೋಗೇಶ್ವರೂ ಭಾವಿತೀ ॥೨॥

ಬುದ್ಧಿಯುಕ್ತೀಚಾ ಸಾಗರೂ
ಐಸೇ ಮಾನಿತೀ ಮಂತ್ರಿಚತುರೂ

ವಿಲಾಸಿಯಾ ತೇ ಶೃಂಗಾರೂ
ಸುರತಾನಂದ ವರ್ಧಕಾರೂ ॥೩॥

ವಿದ್ಯಾಪ್ರವೀಣಶಾಸ್ತ್ರಮಂಡಿತ
ಕೌತುಕೇ ಮಾನಿತೀ ಕರ್ಣಾಮೃತ
ದೋಷಾದೋಷೀ ಯಾಂಚೇ ಅರ್ಥ
ಪುರವೀ ಗಂಗೇ ಸಾರಿಖೇ ॥೪॥

ಪರ್ವತಾಮಾಜೀ ಕನಕಮೇರೂ
ತಡಾಗಾ ಮಾಜೀ ಕ್ಷೀರಸಾಗರೂ
ಮಹಾರಾಷ್ಟ್ರಾಸೀ ಕಾವ್ಯಗುರೂ
ಹಾ ಗೌರವೂಯೇ ಗ್ರಂಥೀ ॥೫॥[54]

ಇನ್ನೊಬ್ಬ ಭಾರತಕರ್ತೃ ಚಂದ್ರಾತ್ಮಜನೆಂಬ ಮರಾಠಿ ಕವಿ ಕೂಡ ಕುಮಾರವ್ಯಾಸನನ್ನು ಅನುಸರಿಸಿರುವುದು ಮಾತ್ರವಲ್ಲದೆ

ಮಜ ಸಂಸ್ಕೃತಿ ನಾಹೀ ಅಭ್ಯಾಸ
ಕರ್ನಾಟಕ ಕವಿ ಕುಮಾರವ್ಯಾಸ
ತ್ಯಾಚೇನೀ ಆಧಾರೇ ಗ್ರಂಥವಿಲಾಸ
ಪ್ರಾರಂಭಿಲಾಯಾ ಹೇತು

—ಎಂಬುದಾಗಿ ಸ್ಪಷ್ಟವಾಗಿ ತನ್ನ ಗ್ರಂಥಋಣವನ್ನು ಹೇಳಿದ್ದಾನೆ. ಹೀಗೆ ಷಟ್ಪದೀ ಕಾವ್ಯಗಳ ಮರಾಠಿ ಅನುವಾದ ಕಾರ್ಯ ಮುಂದುವರಿದು ಚಾಮರಸನ 'ಪ್ರಭುಲಿಂಗ ಲೀಲೆ'ಯನ್ನು ಬ್ರಹ್ಮದಾಸನೆಂಬ ೧೮ನೆಯ ಶತಮಾನದ ಕವಿ 'ವಿಶ್ವಂಭರಲೀಲ' ಎನ್ನುವ ಹೆಸರಿನಿಂದ ಪರಿವರ್ತಿಸಿದ್ದಾನೆ. ಕ್ರಿ.ಶ. ೧೫೮೧ರಲ್ಲಿ 'ಚಿತ್ರಭಾರತ'ವನ್ನು ಕನ್ನಡದಲ್ಲಿ ರಚಿಸಿದ ಗೋಪಕವಿ ಕೃತಿಯ ಅರ್ಧಭಾಗದಲ್ಲಿ ಭಾರತ ಕಥಾಂಶವನ್ನೂ ಉಳಿದರ್ಧದಲ್ಲಿ 'ವತ್ಸಲಾಹರಣ'ದ ಪ್ರಸಂಗವನ್ನೂ ನಿರೂಪಿಸಿದ್ದು, ಮರಾಠಿಯಲ್ಲಿ ಪ್ರಚಲಿತವಾಗಿದ್ದ ಕಥೆಯನ್ನು ಕನ್ನಡದಲ್ಲಿ ಬರೆದುದಾಗಿ ಹೇಳಿಕೊಂಡಿದ್ದಾನೆ. ಜಗನ್ನಾಥ ದಾಸರ 'ಹರಿಕಥಾಮೃತಸಾರ' (ಸು. ೧೭೭೫) ಮತ್ತು ಲಕ್ಷ್ಮೀಶನ 'ಜೈಮಿನಿಭಾರತ' (ಸು. ೧೫೫೦)ಶೇಷಗಿರಿರಾಯ (೧೮೬೮) ಮತ್ತು ಯಶವಂತ ಭಾಸ್ಕರ ಜಠಾರ (೧೯ನೆಯ ಶತಮಾನ) ರಿಂದ ಅನುವಾದಿತವಾಗಿವೆ. ಜೈಮಿನಿಭಾರತದ ಮಂಗಳಾಚರಣೆಯ ಪದ್ಯದ ಅನುವಾದವನ್ನು ಇಲ್ಲಿ ಉದ್ಧರಿಸಿಕೊಡಬಹುದು ಮೊದಲನೆಯದಾಗಿ ಶೇಷಗಿರಿ ರಾಯರ ಅನುವಾದ :

ಶ್ರೀಲಕ್ಷ್ಮೀವಧುಚ್ಯಾ ಸುಲೋಚನ ಚಕೋರಾಂ ನಿತ್ಯ ಸಂತೋಷವೀ
ಸಂತೀನ್ ಹೃತ್ಕುಮುದಾಂ ಪುರೇ ವಿಕಸನೀ ಭಾಗ್ಯಾಂಬುಧೀಂ ವಾಢವೀ
ಕಾರುಣ್ಯಾಮೃತಯುಕ್ತ ಮಂದಹಸಣೇ ಜ್ಯಾಣೇ ಪ್ರಕಾಶೀಕಲಾ
ಐಸಾ ಜೋ ಮುಖಚಂದ್ರಮಾ ಹರಿ ತುಝಾ ಆನಂದ ದೇವೋಮಲಾ ॥

ಕರ್ಣಾಟಜಾತ ಕವಿಚೈತ್ರವನಾಪಿ ಚೂತ
ಲಕ್ಷ್ಮೀಶ ನಾಂವ ಮಜ ಭಾರದವಾಜಗೋತ್ರ
ವಿದ್ವತ್ಸಭಾವಲಯ ತೋಷವಿಶ್ಯಾ ನಿಮಿತ್ತೇ
ಕೇಲೀಕೃತೀ ಸುಜನ ಸೇವುನಿ ಏಕಚಿತ್ತೇ[65]

ಯಶವಂತ ಭಾಸ್ಕರ ಜಠಾರ ಅವರ ಅನುವಾದ ಹೀಗಿದೆ :

ಶ್ರೀವಧೂಲೋಚನ ಚಕೋರಕ ಖುಲವಿತ
ಭಕಾವಲೀ ಹೃತ್ಕುಮುದಕೋರಕ ಫುಲವಿತ
ಜಗತೀ ವಲಯ ವಿಮಲ ಸೌಭಾಗ್ಯರತ್ನಾಕರಾ
ಆಣೀತ ಭರತಿ ಅತಿ

ತೇವಿ ಅವಿರತ ಸರಸಕರುಣಾಸುಧಾಕಲಾಂನೀ
ವಿಶದ ಮಧುಹಾಸ್ಯ ಕೌಮುದೀ
ಪಸರವಿತ ದೇವಪುರ ಲಕ್ಷ್ಮೀರಮಣ
ವದನಚಂದ್ರ ಆನಂದ ದೇವೋ ಅಮ್ಹಾಂಲಾ ॥

ಕನ್ನಡದ ಅನುಭಾವ ಕವಿಗಳಲ್ಲಿ ಒಬ್ಬನಾದ ನಿಜಗುಣ ಶಿವಯೋಗಿ ಮತ್ತು ಕಾಡ ಸಿದ್ಧೇಶ್ವರರ ಪ್ರಭಾವ ಮಹಾರಾಷ್ಟ್ರದಲ್ಲಿ ದಟ್ಟವಾಗಿ ಹರಡಿದೆ. ನಿಜಗುಣಶಿವಯೋಗಿ ಮತ್ತು ಶ್ರೇಷ್ಠ ಮರಾಠೀ ಸಂತ ರಾಮದಾಸನನ್ನು ಚಿತ್ರಮಾಲಿಕೆಯೊಂದರಲ್ಲಿ ಒಟ್ಟಿಗೆ ಚಿತ್ರಿಸಲಾಗಿದೆ. ನಿಜಗುಣಶಿವಯೋಗಿಯ 'ವಿವೇಕ ಚಿಂತಾಮಣಿ'ಯನ್ನು ಸಾತಾರಾ ಜಿಲ್ಲೆಯ ಸಿಂಗಣಾಪುರದ ಶಾಂತಲಿಂಗ ಶಿವಯೋಗಿಯು ಸು. ೧೬೦೦ರಲ್ಲಿ ಅನುವಾದಿಸಿದ್ದಾನೆ. "ತೆ ವಿವೇಕಚಿಂತಾಮಣಿ ಶಾಸ್ತ್ರ ಪ್ರಾಕೃತಭಾಷಾಸವಿಸ್ತಾರ್ ಸಾಂಗಿಜೇಲ್ ಮಹಿಣೆ ಶಾಂತೇಶ್ವರ ಜಗಸ್ವಹಿತ ನಿಮಿತ್ಯೇಂ" ಎಂದು ಆತ ಈ ಬಗ್ಗೆ ಹೇಳಿದ್ದಾನೆ.

ನಾಮದೇವನಾದ ಮೇಲೆ ಏಕನಾಥನವರೆಗೆ ಮರಾಠಿ ಸಾಹಿತ್ಯದಲ್ಲಿ ಶ್ರೇಷ್ಠ ಕವಿಗಳು ಬರಲಿಲ್ಲ. ಆದರೂ ಈ ಕಾಲದಲ್ಲಿ ದತ್ತ ಸಂಪ್ರದಾಯದ ನೃಸಿಂಹ ಸರಸ್ವತಿಯ ಶಿಷ್ಯ, ಕನ್ನಡಿಗ ಭಕ್ತ, ಕಡಗಂಚಿಯ ಸರಸ್ವತಿ ಗಂಗಾಧರನು ಬರೆದ ಮರಾಠಿ 'ಗುರುಚರಿತ್ರೆ'ಯ ಕೊನೆಗೆ ಕನ್ನಡದ ಆರತಿ ಪದ್ಯವಿದೆ. ಗುರುಚರಿತ್ರೆಯು ದತ್ತಾತ್ರೇಯನ ಭಕ್ತರಿಗೆ ಪೂಜ್ಯ ಗ್ರಂಥವಾಗಿ ಮಹಾನುಭಾವ ಮತ್ತು ವಾರ್ಕರಿ ಪಂಥಗಳ ಅನುಯಾಯಿಗಳಿಂದ ಸಮಾನವಾಗಿ ಗೌರವಿಸಲ್ಪಟ್ಟಿದೆ. ಈ ಕೃತಿಯ ಹಲವಾರು ಕನ್ನಡ ಅನುವಾದಗಳು ಹೊರಬಂದಿವೆ.

ಸು. ೧೬೦೦ರಲ್ಲಿ ಮಹಾರಾಷ್ಟ್ರದಲ್ಲಿ ಅನೇಕ ಸಂತರ ಕಾರ್ಯಚಟುವಟಿಕೆ ನಡೆದಿತ್ತು. ಅವರಲ್ಲಿ ಏಕನಾಥ, ದಾಸೋಪಂತ್, ಮುಕ್ತೇಶ್ವರ ಮತ್ತು ತುಕಾರಾಮರು ಮುಖ್ಯರಾದವರು. ಏಕನಾಥನು 'ಚತುಶ್ಲೋಕೀ ಭಾಗವತ' ಮುಂತಾದ ಕೃತಿಗಳನ್ನೂ 'ಭರುದ'ಗಳೆಂಬ ಗೀತಗಳನ್ನೂ ರಚಿಸಿದ್ದಾನೆ. ಇವನ ಮೇಲೆ ಪುರಂದರದಾಸರ ಪ್ರಭಾವ ಆಗಿರುವುದು ಸಾಧ್ಯ. ಉದಾಹರಣೆಗೆ "ಹ್ಯಾಗೆ ಇರಬೇಕು ಸಂಸಾರದಲ್ಲಿ ಹ್ಯಾಗೆ ಬರೆದಿದೆ ಪ್ರಾಚೀನದಲ್ಲಿ" ಎನ್ನುವ ಮಾತಿಗೆ ಸದೃಶವಾದ್ದು "ಐಸೆ ಅಸಾವೀ ಸಂಸಾರೀ ಜೋವರ

ಪ್ರಾಚೀ ವಾಚೀ ದೋರಿ" ಎನ್ನುವ ಮಾತು. ಏಕನಾಥನು ಮರಾಠಿಯಲ್ಲಿ 'ಮೈರಾವಣ ಕಾಳಗ'ವನ್ನು ಬರೆದ ಕಾಲಕ್ಕೇ ಕುಮಾರವಾಲ್ಮೀಕಿಯೂ 'ಮೈರಾವಣನ ಕಾಳಗ'ವನ್ನು ಬರೆದದ್ದು. ಏಕನಾಥನ ಸೋದರಿಯ ಮಗ ಮತ್ತು ಶಿಷ್ಯ ಮುಕ್ತೇಶ್ವರ ರಾಮಾಯಣ ಭಾರತಗಳ ಕರ್ತೃ, ಈ ಇಬ್ಬರ ಜೋಡಿ ಕನ್ನಡದ ಹರಿಹರ-ರಾಘವಾಂಕರ ಜೋಡಿಯನ್ನು ನೆನಪಿಗೆ ತರುತ್ತದೆ. ಏಕನಾಥನ ಅನಂತರ ದಾಸೋಪಂತ 'ಗೀತಾರ್ಣವ'ವನ್ನೊಳಕೊಂಡಂತೆ ೧೬ ವ್ಯಾಖ್ಯಾನಗಳನ್ನು ಭಗವದ್ಗೀತೆಗೆ ರಚಿಸಿದ್ದಾನೆ.

೧೬೧೫ರಲ್ಲಿ ಬಿಜಾಪುರದಲ್ಲಿ ಹುಟ್ಟಿದ ವಾಮನಪಂಡಿತನು ರಾಮದಾಸನ ಪ್ರೇರಣೆಯ ಪ್ರಕಾರ 'ಸಮಶ್ಲೋಕಿ ಗೀತಾ' ಎನ್ನುವ ಭಗವದ್ಗೀತೆಯ ನೇರ ಅನುವಾದದ ಜೊತೆಗೆ 'ಯಥಾರ್ಥದೀಪಿಕೆ' ಎನ್ನುವ ಗೀತಾ ವ್ಯಾಖ್ಯಾನವನ್ನು ರಚಿಸಿದ್ದಾನೆ.

ಮಹಾರಾಷ್ಟ್ರದ ಅತ್ಯಂತ ಉನ್ನತಿಯ ಕಾಲದಲ್ಲಿದ್ದ ಮೋರೋಪಂತ ಕೊಲ್ಹಾಪುರದ ಸಮೀಪದಲ್ಲಿರುವ ಘನ್ಹಾಲದಲ್ಲಿ ೧೭೨೯ರಲ್ಲಿ ಜನಿಸಿದನು. ಈತ ಭಾರತ ಕರ್ತೃ. "ಕವಿಯ ಶಕ್ತಿಸರ್ವಸ್ವವೂ ಇಲ್ಲಿ ಪ್ರದರ್ಶಿತವಾಗಿದೆ, ಆರ್ಯಾವೃತ್ತದಲ್ಲಿದೆ. ಆತನ ಪಾಂಡಿತ್ಯ, ಅನುಭವ ವೈವಿಧ್ಯ, ಮರಾಠಿ ಭಾಷೆಯಲ್ಲಿರುವ ಕೈಚಳಕ, ದೀರ್ಘವರ್ಣನೆಗಳ ವೈಖರಿ, ರಸಪ್ರತಿಪಾದನಾ ಶಕ್ತಿ, ಮೈಜುಮ್ಮೆನಿಸುವ ಕಥನರೀತಿ, ಶಕ್ತಿಯುತವಾದ ಸಂಭಾಷಣಾ ಕೌಶಲ್ಯ, ನಾಟಕೀಯತೆ ಮೊದಲಾದ ಮಹಾಕವಿಯ ಎಲ್ಲ ಗುಣಗಳೂ ಇಲ್ಲಿ ಸ್ಪಷ್ಟವಾಗಿ ಕಾಣುವುವು".[56] ಕುಮಾರವ್ಯಾಸ ಬದುಕಿದ ಕಾಲ ಮತ್ತು ಆತನ ಕಾವ್ಯಶಕ್ತಿಯನ್ನು ಈ ನಿರೂಪಣೆ ಸಹಜವಾಗಿಯೇ ನೆನಪಿಗೆ ತರುತ್ತದೆ.

ಸುಮಾರು ಇದೇ ಅವಧಿಯಲ್ಲಿ ಕರ್ನಾಟಕದ ಮೂಡಲಗಿ, ಗುರ್ಲಹೊಸೂರು ಮತ್ತು ಬಿಜಾಪುರಗಳಲ್ಲಿ ಮರಾಠಿ ಸಾಹಿತ್ಯ ಬೆಳೆದಿದೆ. ಗೋಕಾಕ ತಾಲ್ಲೂಕಿನ ಮೂಡಲಗಿಯಲ್ಲಿ ೧೬ನೆಯ ಶತಮಾನದಲ್ಲಿ ರಂಗಬೋಧಸ್ವಾಮಿಯೂ ೧೭ನೆಯ ಶತಮಾನದಲ್ಲಿ ಅಧ್ಯಾಯ ಬೋಧಸ್ವಾಮಿಯೂ ನೆಲಸಿದ್ದರು. ಮುಕುಂದರಾಜನ ಸಂಪ್ರದಾಯಕ್ಕೆ ಸೇರಿದ ಇವರು ಮರಾಠಿಯಲ್ಲಿ ಗ್ರಂಥರಚನೆ ಮಾಡಿರುವುದಲ್ಲದೆ ಕನ್ನಡದಲ್ಲಿಯೂ ಹಾಡುಗಳನ್ನು ಬರೆದಿದ್ದಾರೆ. ಗುರ್ಲಹೊಸೂರಿನಲ್ಲಿ ೧೮ನೆಯ ಶತಮಾನದಲ್ಲಿ ಚಿದಂಬರ ದೀಕ್ಷಿತರೆಂಬುವರು ನೆಲಸಿದ್ದರು. ಅವರನ್ನು ಸಮಕಾಲೀನ ಮರಾಠಾ ಸರದಾರರು ಗೌರವಿಸುತ್ತಿದ್ದರು. ಬಿಜಾಪುರದ ರುಕ್ಮಾಂಗದಸ್ವಾಮಿ ಮತ್ತು ಕಾಖಂಡಿ ಮಹೀಪತಿ ಸ್ವಾಮಿಗಳ ಜೀವನ ಚರಿತ್ರೆಯನ್ನು ೧೮ನೆಯ ಶತಮಾನದಲ್ಲಿ ರುಕ್ಮಜದಾಸನು ತನ್ನ 'ಗುರುಮಾಲಿಕಾ' ಕೃತಿಯಲ್ಲಿ ಸೇರಿಸಿದ್ದಾನೆ. ಮಹೀಪತಿದಾಸರ ಕೀರ್ತನೆಗಳ ಹಸ್ತಪ್ರತಿಯೊಂದು ಮರಾಠಿ ಭಾಷೆಯಲ್ಲಿಯೇ ಲಿಖಿತವಾಗಿದೆ. ಇದುವರೆಗೆ ಅಚ್ಚಾಗಿರುವ ಮಹೀಪತಿದಾಸರ ಕೃತಿಗಳಿಗೆ ಅದೇ ಆಧಾರ. ವಾಮನ ಪಂಡಿತನ ಶಿಷ್ಯ ಹರಿದೀಕ್ಷಿತ ನರಗುಂದದಲ್ಲಿ ನೆಲಸಿ ಸಾಹಿತ್ಯ ರಚಿಸಿದ್ದಾನೆ. ಹೀಗೆ ಕರ್ನಾಟಕ ಮಹಾರಾಷ್ಟ್ರ ಸಾಹಿತ್ಯರಚನೆಗೆ ಕೆಲಕಾಲ ಆಶ್ರಯಸ್ಥಾನವೂ ಸ್ಫೂರ್ತಿಕೇಂದ್ರವೂ ಆಗಿದ್ದುದು ತಿಳಿಯುತ್ತದೆ.[57]

ಮಹಾರಾಷ್ಟ್ರದ ರಾಜಕೀಯ ಪ್ರಾಬಲ್ಯ ಇಳಿಯುವ ಹೊತ್ತಿಗೆ ಕ್ರೈಸ್ತ ಮಿಶನರಿಗಳು ಭಾರತದಲ್ಲಿ ಪದಾರ್ಪಣಮಾಡಿದರು. ಮರಾಠರು ತೀರ ನಿರಾಶರಾಗಿದ್ದಾಗ, ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡಿದ್ದಾಗ ಅವರನ್ನು ಉದ್ದೀಪಿಸಿ ಮರಾಠಿಭಾಷೆಯ ಏಳ್ಗೆಗೆ ಪ್ರೋತ್ಸಾಹವನ್ನು ಕೊಟ್ಟವರು ಬ್ರಿಟಿಷರು. ಅದರ ಫಲವಾಗಿ ಬಾಲಶಾಸ್ತ್ರಿ ಜಾಂಭೇಕರ್ ಪಾಶ್ಚಾತ್ಯ ವಿದ್ಯೆಯ ಪರಿಚಯ ಮತ್ತು ಪ್ರಭಾವ ಪಡೆದು ೧೮೪೦ರ ಸುಮಾರಿನಲ್ಲಿ 'ದರ್ಪಣ್' ಮತ್ತು 'ದಿಗ್ದರ್ಶನ್' ಪತ್ರಿಕೆಗಳನ್ನು ಪ್ರಾರಂಭಿಸಿದರು. ಆ ಕಾಲದಲ್ಲಿನ ಪತ್ರಿಕಾ ಪ್ರಪಂಚವೆಂದರೆ ಮರಾಠೀ ಪತ್ರಿಕಾ ಪ್ರಪಂಚವೆಂದೇ ಹೇಳಬಹುದು. ಕನ್ನಡ ನಾಡಿನಲ್ಲಿ ಕನ್ನಡಿಗರಿಗಾಗಿ ಕನ್ನಡಿಗರೇ ನಡಸುತ್ತಿದ್ದ ಪತ್ರಿಕೆಗಳು ಕೂಡ ಮರಾಠಿಯ ವಾಗಿದ್ದುವು. ಧಾರವಾಡದಿಂದ ಹೊರಡುತ್ತಿದ್ದ ಭಾವಾ (೧೮೮೩), ಜ್ಞಾನಬೋಧಕ (೧೮೭೧), ಧಾರವಾಡ ವೃತ್ತ (೧೮೭೩), ಹುಬ್ಬಳ್ಳಿ ವೈಭವ, ಕರ್ನಾಟಕ ವಾರ್ತಿಕ, ಬೆಳಗಾಂವ ಸಮಾಚಾರ (೧೮೬೪), ಹಿತೇಚ್ಛು (೧೮೬೦)[೫೮] ಪತ್ರಿಕೆಗಳಲ್ಲಿ ಕೆಲವು ಮರಾಠಿ ಮತ್ತು ದ್ವಿಭಾಷಾಪತ್ರಿಕೆಗಳಾಗಿದ್ದುವು. ಆಗಿನ ಸಾರ್ವಜನಿಕ ಜೀವನವೆಲ್ಲ ಮರಾಠಿಮಯ ವಾಗಿದ್ದಿತು ಎನ್ನುವುದು ಈ ಅವತರಣಿಕೆಯಿಂದ ಸ್ಪಷ್ಟವಾಗುತ್ತದೆ:"೫೦ ವರ್ಷಗಳ ಹಿಂದೆ ಕರ್ಣಾಟಕದ ಸ್ಥಿತಿ ಹೀಗಿತ್ತು—ಬೆಳಗಾವಿಯಂತೂ ಮರಾಠಿಗರ ಬಾಯಿಯಲ್ಲಿ ಅಲ್ಲಿ ಮರಾಠಿ ಕನ್ನಡವಾದಗಳ ಬಿರುಗಾಳಿಗಳು ಮೇಲಿಂದ ಮೇಲೆ ಏಳುತ್ತಿದ್ದುವು. ಸ್ವತಃ ಕನ್ನಡಿಗರಲ್ಲಿಯೇ ಮರಾಠಿ ಮೋಹ. ಅದ ಕಾರಣ ಆಗ ಕನ್ನಡ ಕಟ್ಟಭಿಮಾನಿಗಳ ಸಂಖ್ಯೆ ಬಹಳ ಕಡಿಮೆ. ಉತ್ತರ ಕರ್ನಾಟಕದ ಮಧ್ಯಸ್ಥಳವಾದ ಧಾರವಾಡ ಜಿಲ್ಲೆಯಲ್ಲಿಯೂ ಮುಖ್ಯ ಮುಖ್ಯ ಪಟ್ಟಣಗಳಲ್ಲಿ ದೊಡ್ಡ ದೊಡ್ಡ ವಕೀಲರೆಂದರೆ ಮರಾಠಿಗರೇ.ಆ ಕಾಲ ದಲ್ಲಿ ವಕೀಲರೇ ಸಾರ್ವಜನಿಕ ಚಳವಳಿಗಾರರು. ಅದಕಾರಣ ಧಾರವಾಡದಲ್ಲಿ ಕೂಡ ಮರಾಠಿಯಲ್ಲಿಯೇ ಭಾಷಣಗಳು. ಕನ್ನಡದ ದುರ್ದೈವದಿಂದ ಇಲ್ಲಿಯ ಕನ್ನಡಿಗರಿಗೂ ಸೊಟ್ಟ ಪಟ್ಟ ಮರಾಠಿಯು ಬರುತಿತ್ತು."[೫೯] ತಿಲಕರ 'ಕೇಸರಿ' ಪತ್ರಿಕೆ ಉತ್ತರ ಕರ್ಣಾಟಕ ದಲ್ಲಿ ಬಹಳ ಪ್ರಭಾವ ಬೀರಿದ್ದಿತು. ಇಂತಹ ಪರಿಸ್ಥಿತಿಯಿಂದ ಉತ್ತರ ಕರ್ಣಾಟಕವನ್ನು ಬಿಡಿಸಿದವನು ಡಬ್ಲ್ಯೂ. ಎಚ್. ರೈಡ್ಸ್ ಮಹಾಶಯ. ಆತ ಉತ್ತರ ಕರ್ಣಾಟಕದ ಭಾಷೆ ಮರಾಠಿಯಲ್ಲವೆಂದೂ ಕನ್ನಡವೆಂದೂ ಮುಂಬಯಿ ಸರ್ಕಾರಕ್ಕೆ ಮನವಿಮಾಡಿಕೊಟ್ಟನು. ಆ ಪ್ರಯತ್ನದ ಫಲವಾಗಿ ಡೆಪ್ಯುಟಿ ಚನ್ನಬಸಪ್ಪ, ರಾ. ಹ. ದೇಶಪಾಂಡೆ, ಗಳಗನಾಥ, ಶಾಂತಕವಿ, ಮುದವೀಡು ಕೃಷ್ಣರಾಯ, ರಾಜಪುರೋಹಿತ ನಾರಾಯಣರಾಯ, ಆಲೂರು ವೆಂಕಟರಾಯ ಮುಂತಾದ ಮಹನೀಯರು ಉತ್ತರ ಕರ್ಣಾಟಕದಲ್ಲಿ ಕರ್ನಾಟ ಕತ್ವದ ವಿಕಾಸವನ್ನು ನಡಸಿದರು. ಈ ಸಂದರ್ಭದಲ್ಲಿ ಧಾರವಾಡದ ಟ್ರೇನಿಂಗ್ ಕಾಲೇಜು ಮತ್ತು ವಿದ್ಯಾವರ್ಧಕ ಸಂಘ ವಹಿಸಿದ ಪಾತ್ರ ದೊಡ್ಡದು.

ಇದರ ಪರಿಣಾಮವಾಗಿ ಕನ್ನಡದಲ್ಲಿ ಪಠ್ಯಪುಸ್ತಕ ಮತ್ತು ಕೃತಿರಚನೆ ನಡೆಯಿತು. ರಾ. ಹ. ದೇಶಪಾಂಡೆಯವರು ಛಲತೊಟ್ಟು ಕನ್ನಡದ ಏಳಿಗೆಗಾಗಿ ದುಡಿದರು. ಗಳಗ ನಾಥರ ಕೃತಿರಚನೆಗೆ ಪ್ರೇರಕರಾಗಿದ್ದರು. ಅನೇಕ ಪಠ್ಯಪುಸ್ತಕಗಳನ್ನು ಸ್ವತಂತ್ರ

ವಾಗಿ ರಚಿಸುವುದರ ಜೊತೆಗೆ 'ಬಾಯಿಲೆಕ್ಕದ ಮೊದಲನೆಯ ಪುಸ್ತಕ' (೧೮೯೬) ಮತ್ತು 'ಬೀಜಗಣಿತದ ಮೂಲತತ್ತ್ವಗಳು' (೧೮೯೭) ಇವನ್ನು ಅನುವಾದಿಸಿದರು. 'ವಿಧವಾ ವಪನ ಅನಾಚಾರ'ವನ್ನು ವೆಂಕಟರಂಗೋ ಕಟ್ಟಿ ಮರಾಠಿ ಮತ್ತು ಕನ್ನಡಗಳಲ್ಲಿ ರಚಿಸಿದ್ದಾರೆ. ಪಂಡಿತ ರಮಾಬಾಯಿಯ ಮರಾಠಿ 'ಸ್ತ್ರೀಧರ್ಮ ನೀತಿ' ಕನ್ನಡಕ್ಕೆ ಅನುವಾದವಾಯಿತು.

ಇದೇ ಸಮಯದಲ್ಲಿ ಉತ್ತರ ಕರ್ಣಾಟಕದಲ್ಲಿ ನಾಟಕ ಕಲೆ ಸ್ವತಂತ್ರವಾಗಿ ಬೆಳೆಯಿತು. ಕನ್ನಡ ಜಿಲ್ಲೆಗಳಿಂದ ನಾಟಕ ಕಂಪೆನಿಗಳು ಸಾಂಗಲಿಯವರೆಗೆ ಪ್ರಯಾಣ ಬೆಳಸಿದ್ದುವು. ಮರಾಠಿ ನಾಟಕಕಾರರಲ್ಲಿ ಪ್ರಸಿದ್ಧರಾದ ಕಿರ್ಲೋಸ್ಕರ್ ಮುಂತಾದವರು ಪೌರಾಣಿಕ ನಾಟಕಗಳನ್ನು ಅಭಿನಯಿಸುತ್ತಿದ್ದರು. ಕನ್ನಡದ 'ಶ್ರೀ ಕೃಷ್ಣ ಪಾರಿಜಾತ' ಕೃತಿ ಮುಂತಾದುವು ೧೯ನೆಯ ಶತಮಾನದ ಮರಾಠಿ ನಾಟಕ ಸಾಹಿತ್ಯದ ಮೇಲೆ ಪ್ರಭಾವ ಬೀರಿದವೆಂದು ತಿಳಿದುಬರುತ್ತದೆ.

ಕಿರ್ಲೋಸ್ಕರರ ಮರಾಠಿ 'ಶಾಕುಂತಲ ನಾಟಕ' ಹುಟ್ಟಿದ ಸರಿಸುಮಾರಿನಲ್ಲೇ ಉತ್ತರ ಕರ್ಣಾಟಕದಲ್ಲಿ ಚುರಮುರಿ ಶೇಷಗಿರಿರಾಯರ ಕನ್ನಡ 'ಶಾಕುಂತಲ' ದೇಸಿ ಸೊಬಗನ್ನು ತುಂಬಿಕೊಂಡು ರೂಪುಗೊಂಡಿತು. ಮೈಸೂರಿನಲ್ಲಿ ಬಸವಪ್ಪಶಾಸ್ತ್ರಿಗಳ 'ಶಾಕುಂತಲ ನಾಟಕ' ಸಿದ್ಧವಾಯಿತು. ಮಹಾರಾಷ್ಟ್ರದಿಂದ ಬಂದ ಪಾರಸಿಯವರ ಬಾಲೀವಾಲಾ ಕಂಪೆನಿ ಮೈಸೂರು ಅರಮನೆಯಲ್ಲಿ ನಾಟಕಗಳನ್ನು ಆಡಿತು. ಅದರ ಪ್ರಭಾವದಿಂದ ಮೈಸೂರಿನಲ್ಲಿ ವೃತ್ತಿರಂಗಭೂಮಿ ಬೆಳೆಯಿತು. ಬಾಲೀವಾಲಾ ಕಂಪನಿಯ ಅದ್ಭುತ ರಂಗವೈಭವ, ಸಂಗೀತ ಮತ್ತು ಅಭಿನಯ ಮೈಸೂರಿನ ಜನತೆಯನ್ನು ಬೆರಗುಗೊಳಿಸಿತು. ರಾಜಾಸ್ಥಾನದಲ್ಲಿದ್ದ ಮಂಡ್ಯಂ ರಂಗಾಚಾರ್ಯನು ಮರಾಠಿಯ 'ಬಾಣಾಸುರೋಪಾಖ್ಯಾನ'ವನ್ನೂ ಬಾಲಗಂಧರ್ವನು ಖಾಡಿಲ್ಕರರ ಮರಾಠಿ ನಾಟಕಗಳನ್ನೂ ಪ್ರದರ್ಶಿಸಿದರು. ಮೂಲ್ಕಿಯ ನಾರಾಯಣ ರಾಮಪ್ಪ ಕಾಮತ ತನ್ನ ನಾಟಕ ಕಂಪನಿಯಲ್ಲಿ ಕನ್ನಡ ಮರಾಠಿ ನಾಟಕಗಳೆರಡನ್ನೂ ಆಡಿಸಿದ. ಶಾಂತಕವಿಗಳ "ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೀರ್ತಿ" ಎನ್ನುವ ಷಟ್ಪದಿಯಲ್ಲಿ ಆ ಕಾಲದಲ್ಲಿ ಕರ್ಣಾಟಕದ ಜನತೆಯ ಮೇಲೆ ಮರಾಠಿ ನಾಟಕಗಳು ಬೀರಿದ ಪರಿಣಾಮದ ಅರಿವಾಗುತ್ತದೆ. ಜನತೆ ಮರಾಠಿ ನಾಟಕಗಳಿಗೆ ಕೊಡುತ್ತಿದ್ದ ಪ್ರೋತ್ಸಾಹವನ್ನು ಕಂಡು ಶಾಂತಕವಿಗಳು ಗದುಗಿನ ನಾಟ್ಯ ವಿಲಾಸಿಗಳ ಸಹಕಾರದಿಂದ 'ಉಷಾಹರಣ'ವೆಂಬ ನಾಟಕವನ್ನು ರಚಿಸಿ ಆಡಿಸಿದರು. ಪುಣೆಯ ಕಾಲೇಜಿನಲ್ಲಿ ಕಲಿತ ಕನ್ನಡಿಗ ವೆಂಕಟರಂಗೋ ಕಟ್ಟಿ 'ಸವಾಯಿ ಮಾಧವರಾಯಾಂಚೇ ನಾಟಕ' ಎನ್ನುವ ಸ್ವತಂತ್ರ ಮರಾಠಿ ಐತಿಹಾಸಿಕ ನಾಟಕವನ್ನು ಬರೆದಿದ್ದಾನೆ. ಇತ್ತೀಚೆಗೆ ಮುಕ್ತಾಬಾಯಿ ದೀಕ್ಷಿತ್ ಮುಂತಾದ ಹಲವರ ಮರಾಠಿ ನಾಟಕಗಳು ಕನ್ನಡಕ್ಕೆ ಅನುವಾದಗೊಂಡಿವೆ.

ಕೀರ್ತನಕಾರರು ಕೀರ್ತನೆಗಳನ್ನು ಮಾಡುವಾಗ ಮರಾಠಿ ಅಭಂಗಗಳನ್ನು ಕಟಾವ್ ಗಳನ್ನೂ ಹೇಳಿ ಅರ್ಥ ವಿವರಿಸುತ್ತಿದ್ದರು. ಇದರಿಂದ ಉಂಟಾಗುತ್ತಿದ್ದ ರಸಾನಂದವನ್ನು

ಕಂಡು ಶಾಂತಕವಿ "ಹರಿಕೀರ್ತನ" ಎನ್ನುವ ಕೃತಿಯನ್ನು ರಚಿಸಿದರು. ಅದು ರಚಿತವಾದ ಸಂದರ್ಭವನ್ನು ಅವರು ಹೀಗೆ ಹೇಳಿದ್ದಾರೆ : "....ಈ ದಿವ್ಯಮಾರ್ಗದ ವಿಷಯದಲ್ಲಿ ಸ್ವತಂತ್ರವಾದ ಗ್ರಂಥಗಳು ದುರ್ದೈವಿಗಳಾದ ನಮ್ಮ ಕನ್ನಡ ಭಾಷೆಯಲ್ಲಿ ಇಲ್ಲದಿರುವುದರಿಂದ ನಮ್ಮ ದೇಶದ ಹರಿದಾಸರು ಮೋರೋಪಂತರ ಮಹಾರಾಷ್ಟ್ರ ಆರ್ಯ, ಅಮೃತರಾಯರ ಮಹಾರಾಷ್ಟ್ರ ಕಟಾವ, ಕಬೀರದಾಸರ ಹಿಂದುಸ್ತಾನೀ ದೋಹರೇ ಮುಂತಾದವುಗಳನ್ನು ತೆಗೆದುಕೊಂಡು ಅವುಗಳ ಅರ್ಥವನ್ನು ಕನ್ನಡ ಮಾತಿನಿಂದ ಹೇಳುತ್ತ ಕೀರ್ತನೆ ಮಾಡುತ್ತಾರೆ. ಹೀಗೆ ಬತ್ತ ಮೊಸರು ಕಲಿಸಿದಂತೆ ಕೀರ್ತನೆಮಾಡುವುದರಿಂದ ಕನ್ನಡ ಭಾಷೆಯ ಗೌರವವು ಕಡಿಮೆ ಆಗುತ್ತದೆ. ಅದು ಆಗಬಾರದೆಂಬ ಅಭಿಮಾನದಿಂದ ಈ ಗ್ರಂಥವನ್ನು ರಚಿಸಿರುತ್ತೇವೆ."[60]

ಕನ್ನಡದಲ್ಲಿ ಕಾದಂಬರಿಗಳ ರಚನೆಗೆ ಮರಾಠಿ ಮತ್ತು ಬಂಗಾಳಿ ಕಾದಂಬರಿಗಳಿಂದ ಮಾರ್ಗದರ್ಶನ ದೊರೆಯಿತು. ಕನ್ನಡದಲ್ಲಿ ಲಕ್ಷ್ಮಣರಾವ ಗದಗಕರನ 'ಸೂರ್ಯಕಾಂತ' (೧೮೯೨) ಎನ್ನುವ ಕೃತಿ ಮೊದಲ ಕಾದಂಬರಿ ಎಂದು ಕೆಲವರ ಅಭಿಪ್ರಾಯ. ಇಲ್ಲಿ ಮೊದಲ ಬಾರಿಗೆ 'ಕಾದಂಬರಿ' ಎನ್ನುವ ಮಾತನ್ನು ಬಳಸಿದೆ. ಇದು ಬಹುಶಃ ಮರಾಠಿಯ ಪರಿಚಯದ ಪ್ರಭಾವವಿರಬಹುದು.[61] ಮುಂದೆ ಗಳಗನಾಥರು ಹರಿನಾರಾಯಣ ಆಪಟೆಯವರ ಮಹಾರಾಷ್ಟ್ರ ಮತ್ತು ರಾಜಾಸ್ಥಾನದ ಇತಿಹಾಸವನ್ನೊಳಗೊಂಡ ಕೃತಿಗಳನ್ನು ಆಧರಿಸಿ ಕೃತಿರಚನೆ ಮಾಡಿದರಲ್ಲದೆ ವಿಜಯನಗರ ಮತ್ತು ಮೈಸೂರು ಇತಿಹಾಸದ ವಸ್ತುವಿನ ಕೃತಿಗಳನ್ನು ರಚಿಸಿದ್ದಾರೆ. ಅವರ ಕಾದಂಬರಿಗಳನ್ನು ವಿಮರ್ಶಕರೊಬ್ಬರು ಹೀಗೆ ವಿಶ್ಲೇಷಿಸುತ್ತಾರೆ :

"ಸಾಹಿತ್ಯದ ದೃಷ್ಟಿಯಿಂದ ನೋಡಿದರೆ ಗಳಗನಾಥರು ಓದುಗರನ್ನು ಮೊದಲು ಮಹಾರಾಷ್ಟ್ರದ ಕಾದಂಬರಿಗಳ ಸವಿ ತೋರಿದಂತೆ ಮಾಡಿ ಕೇವಲ ಕನ್ನಡವೇ ಆದ ತಮ್ಮವೇ ಕಾದಂಬರಿಗಳೆಡೆಗೆ ಎಳೆದೊಯ್ದರು. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ಮೊದಲು ಮಹಾರಾಷ್ಟ್ರದ ಇತಿಹಾಸದ ಇತಿಗತವನ್ನು ತೋರಿಸಿ ಆಮೇಲೆ ಅದಕ್ಕೂ ಹೆಚ್ಚು ಉಜ್ವಲವಾದ ಕನ್ನಡಿಗರ ಕರ್ಮಕಥೆಯತ್ತ ಓದುಗರನ್ನು ಒಯ್ದರು. ಮೂರನೆಯದಾಗಿ ಮಹಾರಾಷ್ಟ್ರದ ಜೀವನದ ಪಡಿಯಚ್ಚಿನೊಂದಿಗೆ ಕನ್ನಡಿಗರ ಜೀವನದ ಚಿತ್ರದ ಪಡಿಯಚ್ಚನ್ನು ಒತ್ತಿತೋರಿಸಿದರು. ನಾಲ್ಕನೆಯದಾಗಿ ಮಹಾರಾಷ್ಟ್ರದ ದೇಶಭಕ್ತಿಯ ಕಲಮಿನಿಂದ ಕನ್ನಡಿಗರಲ್ಲಿ ಕರ್ನಾಟಕತ್ವದ ಫಲವನ್ನು ಮೂಡಿಸಿದರು. ಈ ನಾಲ್ಕು ಮಾತುಗಳು ಅವರ ಮೊದಮೊದಲಿನ ಭಾಷಾಂತರ ಗ್ರಂಥಗಳಾದ 'ಕಮಲನಯನೆ,' 'ಗಡಆಲಾಪಣ ಸಿಂಹಗೇಲಾ'ಗಳಿಂದ ಹೊರಟು ಮುಂದೆ ಅವರು 'ಕುಮುದಿನಿ' 'ಕನ್ನಡಿಗರ ಕರ್ಮಕಥೆ' 'ಮಾಧವಕರುಣಾವಿಲಾಸ'ಗಳನ್ನು ಬರೆಯುವವರೆಗೆ ತೋರಿಬರುವ ಕ್ರಮ ವಿಕಾಸದಲ್ಲಿ ಸ್ಪಷ್ಟವಾಗುತ್ತದೆ".[62] ಹೀಗೆ ಮರಾಠಿ ಕಾದಂಬರಿಗಳ ಪ್ರಭಾವ ಕನ್ನಡದಲ್ಲಿ ಸಾಕಷ್ಟು ಆಗಿದೆ.

ಹೀಗೆಯೇ ಕೆರೂರು ವಾಸುದೇವಾಚಾರ್ಯರು ಮರಾಠಿ ಕತೆಗಳನ್ನು ಆಧರಿಸಿ ತಮ್ಮ

ಕೆಲವು ಕತೆಗಳನ್ನು ಬರೆದಿದ್ದಾರೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ಯ, ಶಿವರಾಮಕಾರಂತ ಮತ್ತು ಅ.ನ.ಕೃಷ್ಣರಾಯರ ಕತೆಗಳು ಮರಾಠಿಗೆ ಅನುವಾದವಾಗಿವೆ. ಡಿ. ವಿ. ಗುಂಡಪ್ಪನವರು ಗೋಪಾಲಕೃಷ್ಣಗೋಖಲೆಯವರನ್ನು ಆದರ್ಶವಾಗಿಟ್ಟುಕೊಂಡು ಅವರ ಹೆಸರಿನಲ್ಲಿ ಒಂದು ಸಂಸ್ಥೆಯನ್ನು ನಡಸುತ್ತಿರುವುದಲ್ಲದೆ, ಗೋಪಾಲಕೃಷ್ಣಗೋಖಲೆಯವರ ಜೀವನ ಚರಿತ್ರೆಯನ್ನೂ ಬರೆದಿದ್ದಾರೆ. ಅಲ್ಲದೆ ವಿನೋಬಾ, ಸಾವರ್‌ಕರ್, ಸಾನೆ ಗುರೂಜಿ ಮೊದಲಾದವರ ಬರೆಹಗಳೂ ಈಗಾಗಲೇ ಕನ್ನಡಕ್ಕೆ ಬಂದಿವೆ. ಬೊಂಬಾಯಿ ಸರ್ಕಾರವು ೧೯೩೯ರಲ್ಲಿ ಕನ್ನಡ ಭಾಷೆ ಸಂಸ್ಕೃತಿ ಮತ್ತು ಇತಿಹಾಸ ಸಂಶೋಧನೆಗಳಿಗಾಗಿ ಕನ್ನಡ ಸಂಶೋಧನ ಸಂಸ್ಥೆಯನ್ನು ಪ್ರಾರಂಭಿಸಿತು ಎಂಬುದನ್ನಿಲ್ಲಿ ಸ್ಮರಿಸಬಹುದಾಗಿದೆ.

ಶತಮಾನಗಳಿಂದ ಬೆಳೆದುಬಂದ ಕನ್ನಡ–ಮರಾಠಿ ಸಾಹಿತ್ಯದ ಕೊಳುಕೊಡೆ ಇಂದು ಇನ್ನೂ ದಟ್ಟವಾಗಿದೆ. ಕನ್ನಡ–ಮರಾಠಿ ಕಾವ್ಯಪ್ರಪಂಚದಲ್ಲಿ ಪ್ರಸಿದ್ಧರಾದ ಬೇಂದ್ರೆಯವರ ಮಾತೃಭಾಷೆ ಮರಾಠಿ. ಮರಾಠಿ ಕಾವ್ಯ ಪ್ರಪಂಚದ ಉನ್ನತಿಗೆ ಕಾರಣರಾದ ಕೇಶವಸುತರು ಧಾರವಾಡದಲ್ಲಿ ಶಿಕ್ಷಕರಾಗಿದ್ದು ಹುಬ್ಬಳ್ಳಿಯಲ್ಲಿ ದಿವಂಗತರಾದರು. ಅವರ ಮರಾಠಿ ಕವನ ಒಂದನ್ನು ('ತುತಾರಿ') ಗೋವಿಂದಪೈ ಅನುವಾದಿಸಿದ್ದಾರೆ.

ಕೆ. ಜಿ. ಕುಂದಣಗಾರ, ಪಿ. ಬಿ. ದೇಸಾಯಿ, ಶಂ. ಬಾ. ಜೋಶಿ., ಆ. ನೇ. ಉಪಾಧ್ಯೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ, ಶ್ರೀರಂಗ ಮುಂತಾದ ಸಾಹಿತಿಗಳು ಈ ಉಭಯ ಸಂಸ್ಕೃತಿಗಳ ಹಾಗೂ ಭಾಷೆ ಸಾಹಿತ್ಯಗಳ ಬಾಂಧವ್ಯವನ್ನು ಹಲವು ವಿಧದಲ್ಲಿ ಪೋಷಿಸಿದ್ದಾರೆ; ಪರಸ್ಪರರ ಒಲವು ವಿಶ್ವಾಸಗಳನ್ನು ಗಳಿಸಿದ್ದಾರೆ. ಅವರ ದುಡಿಮೆಯ ಕ್ಷೇತ್ರ ಎರಡು ಪ್ರಾಂತಗಳನ್ನೂ ಒಲಿದಿದ್ದು ಇಬ್ಬರಿಗೂ ಪ್ರಯೋಜನವಾಗಿದೆ. ಹೀಗೆ ಕೃತಿರಚನೆ ಉಪನ್ಯಾಸಗಳನ್ನು ಎರಡು ಭಾಷೆಗಳಲ್ಲೂ ಸಮದಂಡಿ[illegible] ನಡಸಿರುವ ಈ ಮಹನೀಯರು ಭಾರತೀಯ ಸಂಸ್ಕೃತಿಯಾತ್ರೆಯ ಸಾರ್ಥವಾಹ ದಳದಲ್ಲಿ ನೇತಾರರಾಗಿ ಸಾಗಿದ್ದಾರೆ, ಸಾಗುತ್ತಿದ್ದಾರೆ.

## ಕನ್ನಡ–ಕೊಂಕಣಿ

ಕೊಂಕಣಿ ಭಾಷೆ ಕರ್ನಾಟಕಕ್ಕೆ ಹಿಂದಿನಿಂದ ಪರಿಚಿತವಾದ್ದು. ಉತ್ತರ ಭಾರತದಲ್ಲಿ ಹುಟ್ಟಿದ ಈ ಭಾಷೆ ಪಶ್ಚಿಮ ಕರಾವಳಿಯ ದಾರಿಯಾಗಿ ಇಳಿದು ಉತ್ತರ ಕನ್ನಡದ ಗಂಗಾವತಿ ನದಿಯವರೆಗೆ ಬಂತು. ಈ ಭಾಷೆಯಲ್ಲಿ ಅನೇಕ ಸುಧಾರಣೆಗಳನ್ನು ತಂದ ಸಾರಸ್ವತರು ಗೋವೆಗೆ ಬಂದು ನೆಲೆನಿಂತಾಗ ಅದು ಕದಂಬರ ಆಳ್ವಿಕೆಗೆ ಒಳಪಟ್ಟಿತ್ತು (ಕ್ರಿ.ಶ. ೮೦೦–೧೨೦೦). ರಾಜ್ಯಾಡಳಿತದ ಭಾಷೆ ಕನ್ನಡವಾಗಿದ್ದುದರಿಂದ ಕನ್ನಡಕ್ಕೂ ಕೊಂಕಣಿಗೂ ಸಂಬಂಧ ಏರ್ಪಟ್ಟಿತು. "ಈ (ಕದಂಬ) ರಾಜಮನೆತನದ ಕಾಲದಲ್ಲಿ ಗೋವೆಯ ಆಡಳಿತ ಭಾಷೆ ಕನ್ನಡವಾಗಿದ್ದುದರಿಂದ ಈ ಶೆಣ್ವೆ (ಸಾರಸ್ವತ ವರ್ತಕರು) ವ್ಯಾಪಾರಿ

ಗಳು ಹಾಗೂ ದಲಾಲರು ತಮ್ಮ ಅಂಗಡಿಯ ಲೆಕ್ಕಪತ್ರಗಳನ್ನು ಕೊಂಕಣಿ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿ ಬರೆದರು. ಕೊಂಕಣಿ ಭಾಷೆಯ ಇತಿಹಾಸದಲ್ಲೇ ಮೊದಲ ಬಾರಿ ಈ ಒಂದು ತೊಡಕನ್ನು ಶೆಣ್ವಿಗಳು ಜಾರಿಗೆ ತಂದರೆಂದು ಇಲ್ಲಿ ಹೇಳಬೇಕಾಗುತ್ತದೆ ಎಂಬ ಒಂದು ಅಭಿಪ್ರಾಯವಿದೆ."[63] ಹೀಗೆ ಆರಂಭವಾದ ಕನ್ನಡ–ಕೊಂಕಣಿ ಸಂಬಂಧವು ಕನಿಷ್ಠಪಕ್ಷ ಲಿಪಿಯ ಮಟ್ಟದಲ್ಲಾದರೂ ಪೋರ್ಚುಗೀಸರ, ಡಚ್ಚರ ಕಾಲದಲ್ಲಿ ಉಳಿದಿತ್ತು.

ಗೋವೆಯ ಕೊಂಕಣಿ ಜನರು ಭಾರಿ ಪ್ರಮಾಣದಲ್ಲಿ ಕರ್ನಾಟಕಕ್ಕೆ ವಲಸೆ ಬಂದ ಮೇಲೆ ಕನ್ನಡದ ಪ್ರಭಾವ ಕೊಂಕಣಿಯ ಮೇಲೆ ಇನ್ನಷ್ಟು ಹೆಚ್ಚಾಯಿತು. ಕೊಂಕಣಿ ಜನರು ಸ್ಥಳಾಂತರಗೊಂಡದ್ದನ್ನು ಹೀಗೆ ಗುರುತಿಸಿದೆ: ಕೊಂಕಣಿ ಜನರಾದ ಹಿಂದುಗಳು ಮತ್ತು ಕ್ರೈಸ್ತರು ಭಾರೀ ಪ್ರಮಾಣದಲ್ಲಿ ಕರ್ನಾಟಕಕ್ಕೆ ವಲಸೆ ಬಂದು ಗೋವೆಯಲ್ಲಿ ೧೫೬೦ರ ಇಂಕ್ವಿಜಿಷನ್ ನ್ಯಾಯಾಲಯಗಳನ್ನು ಸ್ಥಾಪಿಸಿದ ಅನಂತರ ಬಿದನೂರು ಮತ್ತು ಸೋದೆ ರಾಜ್ಯಗಳ ವಿವಿಧ ಭಾಗಗಳಲ್ಲಿ ಹಿಂದೂಜನರು ಭಾರಿ ಪ್ರಮಾಣದಲ್ಲಿ ಬಂದು ನೆಲೆನಿಂತರು. ಅನಂತರ 'ಕೊಂಕಣ ಮರಾಟ'ರೆಂದು ಕರೆಯಲ್ಪಟ್ಟ 'ಗಾಮಂಕರ'ರು ಬಹುಪಾಲು ಕಾರವಾರ ತಾಲ್ಲೂಕಿನಲ್ಲಿ ನೆಲಸಿದರು. ಇವರ ಜೊತೆಗೆ ಭಂಡಾರಿಗಳು, ಪಟ್ಟೆಗಳು, ಕುಮಾರ ಸಂಘದವರು, ಅಕ್ಕಸಾಲಿಗರು ಬಂದರು. ಕ್ರೈಸ್ತರು ಬಿದನೂರು, ದಕ್ಷಿಣ ಕನ್ನಡ ಮತ್ತು ಕನ್ನಡದ ಕುಮಟಾ, ಹೊನ್ನಾವರ ತಾಲ್ಲೂಕುಗಳಲ್ಲಿ ನೆಲೆನಿಂತರು.[64]

ಕರ್ನಾಟಕಕ್ಕೆ ಬಂದ ಮೇಲೆ ಶೆಣ್ವಿಗಳು ಕನ್ನಡ ಲಿಪಿಯನ್ನು ಉಪಯೋಗಿಸುವುದನ್ನು ಬಿಡಲಿಲ್ಲ. "ಈ ದೋಷವು ದಕ್ಷಿಣ ಮತ್ತು ಉತ್ತರ ಕನ್ನಡದಲ್ಲೂ ಕಂಡುಬಂತು. ಇದೆಲ್ಲವೂ ಕನ್ನಡವೆಂದು ಭಾವಿಸಿದ ಆಂಗ್ಲ ಆಡಳಿತಗಾರರು ಕನ್ನಡ ಜಿಲ್ಲೆಗಳಲ್ಲಿ ಕನ್ನಡವನ್ನೇ ಆಡಳಿತ ಭಾಷೆಯಾಗಿ ಮಾಡಿದರು. ಕನ್ನಡವನ್ನು ಶಾಲೆಗಳಲ್ಲಿ ಜಾರಿಗೆ ತರುವವರೆಗೆ ಶೆಣ್ವಿಗಳು ತಮ್ಮ ಈ ಪದ್ಧತಿಯನ್ನು ಮುಂದುವರಿಸಿದರು. ಆದರೆ ಕ್ರೈಸ್ತರು ಇಂದಿಗೂ ಇದೇ ಪದ್ಧತಿಯನ್ನು ಮುಂದುವರಿಸುತ್ತಾರೆ. ಅವರ ಎಲ್ಲಾ ಧಾರ್ಮಿಕ ಬರವಣಿಗೆಗಳೂ ಅವರ ಪತ್ರಿಕೆಗಳೂ ಕೊಂಕಣಿ ಭಾಷೆ ಮತ್ತು ಕನ್ನಡ ಲಿಪಿಯಲ್ಲಿವೆ."[65]

ಕೊಂಕಣಿ ಭಾಷೆಗೆ ಬೇಕಾದ ಲಿಪಿಯೆಂದು ಕನ್ನಡ ಲಿಪಿಯ ಅಚ್ಚಿನ ಮೊಳೆಗಳನ್ನು ಸಿದ್ಧಪಡಿಸಲು ಜೆಸುಯಿಟ್ಸ್ ಎಂಬ ಕ್ರೈಸ್ತ ಧಾರ್ಮಿಕ ಸಂಸ್ಥೆಯವರು ಮುಂದೆಬಂದರು. ಇವರ ಪ್ರಥಮ ಪ್ರಯತ್ನವು ಗುರಿಮುಟ್ಟಿದಂತೆ ಕಾಣುವುದಿಲ್ಲ. ಒಂದುವೇಳೆ ಗುರಿ ಮುಟ್ಟಿದ್ದರೆ ಭಾರತದ ಮುದ್ರಣದ ಇತಿಹಾಸದಲ್ಲಿ ಕನ್ನಡಕ್ಕೆ ಲಿಪಿಯ ಮಟ್ಟದಲ್ಲಾದರೂ ಪ್ರಪ್ರಥಮ ಸ್ಥಾನ ಸಲ್ಲುತ್ತಿತ್ತು.[66] ಮಂಗಳೂರಿನ ಕೊಡಿಯಾಲಬೈಲ ಮುದ್ರಣಾಲಯವು ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿ ಮುದ್ರಿಸತೊಡಗಿತು. ಕರ್ನಾಟಕದಲ್ಲಿ ಈ ಲಿಪಿಗಳನ್ನು ಮೊದಲಿಗೆ ರೂಢಿಸಿದವರು ಇವರೇ ಇದ್ದಿರಬೇಕು.[67]

ಕೊಂಕಣಿಯನ್ನು ಈಗಲೂ ದಕ್ಷಿಣ ಕನ್ನಡದಲ್ಲಿ ಕನ್ನಡ ಲಿಪಿಯಲ್ಲಿಯೇ ಬರೆಯುತ್ತಾರೆ. ಹೀಗೆ ಬರೆಯುವಾಗ ಅಲ್ಪಪ್ರಾಣ ಮಹಾಪ್ರಾಣಗಳು, ಹ್ರಸ್ವ ದೀರ್ಘಸ್ವರಗಳು ಎಷ್ಟೋ

ವೇಳೆ ಕನ್ನಡ ಲಿಪಿ ವ್ಯವಸ್ಥೆಯಲ್ಲಿ ಇದ್ದ ಹಾಗೆಯೇ ಇರುವುದುಂಟು. ಆಡುನುಡಿಯಲ್ಲಿರದ ಮಹಾಪ್ರಾಣಗಳು ಬರಹದಲ್ಲಿ ಬಂದ ಉದಾಹರಣೆಗಳಿವೆ. ಇದರ ಪರಿಣಾಮವಾಗಿ ಶಿಷ್ಟರೆಂದೆನ್ನಿಸಿಕೊಳ್ಳುವವರು ಬರಹದ ಉಚ್ಚಾರ ಕ್ರಮವನ್ನೇ ಪ್ರಮಾಣವಾಗಿ ಇಟ್ಟು ಕೊಂಡು ಆಡುನುಡಿಯ ರೀತಿಯನ್ನೇ ವ್ಯತ್ಯಾಸಗೊಳಿಸುತ್ತ ಇದ್ದಾರೆ. ಹೀಗೆ ವ್ಯತ್ಯಸ್ತ ವಾದ ಭಾಷೆಯು ಆಧುನಿಕರ ಪೈಕಿ ಕೆಲವರಲ್ಲಿ ರೂಢಿಗೆ ಬರುತ್ತ ಇದೆ.

ಮಂಗಳೂರಿನ ಕೊಂಕಣಿ ಜನರ ಮೇಲೆ, ಹೆಚ್ಚಾಗಿ ಕ್ರೈಸ್ತರ ಮೇಲೆ ಇಂಗ್ಲಿಷ್ ಪ್ರಭಾವ ದಟ್ಟವಾಗಿದ್ದಾಗ, ಈಗ್ಗೆ ಸುಮಾರು ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ, ಇಂಗ್ಲಿಷ್ ಹೆಸರುಗಳನ್ನು ಒಂದು ರೀತಿಯಲ್ಲಿ ಬರೆಯುತ್ತಿದ್ದರು. ಉದಾ : Johnson ಜೊನ್ಸನ್. ಈಗ ಕನ್ನಡದ ಪ್ರಭಾವ ಬೆಳೆದಂತೆ 'ಜಾನ್ಸನ್' ಎಂದು ಬರೆಯುವ ರೂಢಿ ಬಂದಿದೆ. ಕನ್ನಡದ ಪ್ರಭಾವವು ಕೊಂಕಣಿಯ ಲಿಪಿ ವ್ಯವಸ್ಥೆಯನ್ನು ಮಾರ್ಪಡಿಸಿದೆ ಎನ್ನುವುದಕ್ಕೆ ಇದೊಂದು ನಿದರ್ಶನ.

ಕನ್ನಡ–ಕೊಂಕಣಿ ಸಂಬಂಧವು ಲಿಪಿಯೊಂದಕ್ಕೆ ಸೀಮಿತವಾಗಿದೆ ಎಂದು ಭಾವಿಸು ವುದು ಸರಿಯಲ್ಲ. ವ್ಯಾಕರಣ ಪದಕೋಶಗಳ ಮೇಲಾದ ಪರಸ್ಪರ ಪ್ರಭಾವಗಳನ್ನು ಗುರುತಿಸುವ ಪ್ರಯತ್ನಗಳು ನಡೆದಿವೆ. ಕೊಂಕಣಿಯಲ್ಲಿ ಸೇರಿದ ಕನ್ನಡ ಪದಗಳು, ಗಾದೆ ಗಳು ಮತ್ತು ಲಾಲಿ ಹಾಡುಗಳು ಮುಂತಾದವನ್ನು ಸಂಗ್ರಹಿಸುವ ಪ್ರಯತ್ನ ಕೆಲ ಮಟ್ಟಿಗೆ ನಡೆದಿದೆ.

ಕೊಂಕಣಿ ಗಾದೆ ಒಗಟುಗಳ ಒಂದು ಸಂಗ್ರಹದಲ್ಲಿ ೧೩೬ ಕನ್ನಡ ಗಾದೆಗಳು ಇವೆ. ಇವುಗಳಲ್ಲಿ ಎಷ್ಟೋ ಗಾದೆಗಳು ಇಂದು ಕನ್ನಡದಲ್ಲಿ ಅಷ್ಟಾಗಿ ಪ್ರಚುರವಾಗಿರದೆ ಕೊಂಕಣಿ ಯಲ್ಲಿಯೇ ಇದ್ದಹಾಗೆ ಕಾಣುತ್ತದೆ. ಉದಾ : ಅಂಬಲಿ ಕುಡಿಯುವವನಿಗೆ ಮೀಶೆ ತಿಕ್ಕು ವವನೊಬ್ಬ ; ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ ; ಯಾವ ದೇವರ ಗುಡಿ ಯಾದರೇನು ನಿದ್ದೆ ಬಿದ್ದರೆ ಲೆಕ್ಕ ಇತ್ಯಾದಿ. ಬರಗಾಲಾಂಕ ಬುತ್ತಿ ಮೇಕಳ್ಳಿ ; ನೋಟಿಕ ನಾ ಮುಡಿಯಾಕ ನಾ : ಆಶಾ ಆಶಿಲ್ಯಾ ಸಾಧುಕ, ಮಿಶೋ ಆಶಿಲ್ಯಾ ಸನ್ಯಾಶಾಕ ನಂಬುನಯೇ—ಇತ್ಯಾದಿ ಕೊಂಕಣಿ ಗಾದೆಗಳಲ್ಲಿ ಕನ್ನಡ ಮಾತುಗಳು ಬೆರೆತಿರುವುದು ಸ್ಪಷ್ಟ. ಹೀಗೆಯೇ ಬಾವಲಿ, ಬಾವಲಕ್ಕಿ, ಮಣಗಟ್ಟು, ಬೇಗಡಿ, ಭಾಂಗಾರ್, ಬ್ರಹ್ಮ-ಗುಡಿ, ತಲವಾರ, ದುಡ್ಡು, ಹೂವ, ನತ್ತು, ಬಡ್ಡಿ, ಕೊಪ್ಪರು, ಗುಬಚೀ (ಗುಬ್ಬಚ್ಚಿ) ಬಾಗಿಲು, ಅಂಗಡಿ, ಕಬ್ಬು—ಈ ಮುಂತಾದ ಕನ್ನಡ ಮಾತುಗಳು ಕೊಂಕಣಿಯ ಪದ ಕೋಶವನ್ನು ಪ್ರವೇಶಿಸಿರುವುದು ಕಾಣುತ್ತದೆ.

ವ್ಯಾಕರಣದ ದೃಷ್ಟಿಯಿಂದ ಕನ್ನಡವು ಕೊಂಕಣಿಯ ಮೇಲೆ ಪ್ರಭಾವವನ್ನು ಬೀರಿದೆ. ಕನ್ನಡದ ಪದಗಳನ್ನು ಸ್ವೀಕರಿಸಿದಾಗ ಕೊಂಕಣಿಯು ಅಲ್ಲಿಯ ದೀರ್ಘ ಏ ಓ ಗಳನ್ನು ಹ್ರಸ್ವಗೊಳಿಸುತ್ತದೆ. ಕೊಂಕಣಿ ಶಬ್ದಗಳು ಮರಾಠಿಯಂತೆ ವ್ಯಂಜನಾಂತವಾಗಿರದೆ ಸ್ವರಾಂತವಾಗಿರುವುದು ಹೆಚ್ಚು. ಕೊಂಕಣಿ ಸಪ್ತಮೀ ವಿಭಕ್ತಿಯಾದ 'ಅಂತ'ವು 'ಉ' ಕಾರಾಂತವಾಗುತ್ತದೆ. ಉದಾ : ಘಾಸಾಂತು, ಘರಾಂತು. ಮರಾಠಿಯ ಕ್ರಿಯಾಪದ

ಗಳು ಓಕಾರಾಂತವಾಗಿದ್ದರೆ, ಕೊಂಕಣಿಯಲ್ಲಿ 'ಅ, ಅಂ'ಗಳು ಬರುತ್ತವೆ. ಉದಾ: ಧಾವತೊ (ಮರಾಠಿ)–ಧಾವತಾಂ (ಕೊಂಕಣಿ). ಇದು ಹಳಗನ್ನಡದಲ್ಲಿ ಪ್ರಾಚೀನ ಕ್ರಿಯಾರೂಪಗಳಲ್ಲಿ ಸೇರುವ ಒನ್, ಅನ್ ಆಖ್ಯಾತ ಪ್ರತ್ಯಯಗಳ ಪ್ರಭಾವದ ಫಲ ವಿರಬಹುದು. ಮರಾಠಿಯ ಚತುರ್ಥಿ ವಿಭಕ್ತಿಯ 'ಲಾ' ಪ್ರತ್ಯಯದ ಪ್ರತಿಯಾಗಿ, ಕೊಂಕಣಿಯಲ್ಲಿ 'ಕ' ಬರುತ್ತದೆ. ಇದು ಕನ್ನಡದ 'ಕೆ'ಗೆ ಸಮೀಪತರ. ಕೆಲವರು ಭಾವಿಸು ವಂತೆ ಹಿಂದಿ 'ಕೊ' ಪ್ರಭಾವವಿರುವುದು ಇಲ್ಲಿ. ಕೊಂಕಣಿಯ ವಾಕ್ಯಗಳ ಧ್ವನಿಯೂ ಇದನ್ನು ಸೂಚಿಸುತ್ತದೆ: ದಮಡಿ ಮಾಲಾಕ ದುಗಾಣೀ ದಲಾಲಿ ಇತ್ಯಾದಿ. ಪಂಚಮೀ ವಿಭಕ್ತಿಯಲ್ಲಿ ಮರಾಠಿ 'ಹೂನ್' ಪ್ರತ್ಯಯವು ಕೊಂಕಣಿಯಲ್ಲಿಲ್ಲ. 'ಥಾವುನ್' 'ಥಾವೂನ್' ಇವೆ. 'ಅಂತ್' ಮತ್ತು 'ಹೂನ್' ಇವುಗಳ ಸೇರಿಕೆಯನ್ನು ಕೆಲವರು ಇಲ್ಲಿ ಭಾವಿಸುತ್ತಾರೆ. ಕನ್ನಡ ಪಂಚಮಿಯ ಅತ್ತಣ ಇಲ್ಲಿ ಪ್ರತ್ಯಯದ ಮೂಲವಿರಬಹುದೆ?[69]

ಈ ವಿಚಾರದ ಮಂಡನೆಯಲ್ಲಿ ಕೊಂಕಣಿಯು ಮರಾಠಿಯಿಂದ ಕೆಲವೆಡೆ ಭಿನ್ನವಾಗಿದೆ ಯೆಂದೂ ಈ ಭಿನ್ನತೆಗಳಿಗೆ ಕನ್ನಡದ ಪ್ರಭಾವವೇ ಕಾರಣವೆಂದೂ ತರ್ಕಿಸಿದ ಹಾಗಿದೆ. ಕೊಂಕಣಿಯು ಮರಾಠಿಯಿಂದ ಬಂದಿದೆ. ಆದುದರಿಂದ, ಇದರಲ್ಲಿ ಭಿನ್ನತೆಗಳಿರಬಾರದು ಎಂಬುದು ಪೂರ್ವಪಕ್ಷ. ಆದರೆ ಕೊಂಕಣಿಯ ಉಗಮದ ಬಗೆಗಿನ ಈ ಹೇಳಿಕೆ ಇನ್ನೂ ವಾದಗ್ರಸ್ತವಾಗಿದೆ. ಕನ್ನಡ ಪ್ರಭಾವದ ಪರಿಣಾಮಗಳು ಎಂದು ಹೇಳಲಾದ ಮಾರ್ಪಾಟು ಗಳು ಕೂಡ. ಕೊಂಕಣಿಯ ಸ್ವಾಭಾವಿಕ ಲಕ್ಷಣಗಳೇ ಆಗಿದ್ದಿರುವುದು ಅಸಾಧ್ಯವೇ ಎಂದು ವಿಚಾರಮಾಡಬೇಕು. ಪ್ರಾಯಃ ಕೊಂಕಣಿಯ ಕೆಲವು ಪ್ರಭೇದಗಳ ಮೇಲೆ ಕನ್ನಡದ ಪ್ರಭಾವ ಹೆಚ್ಚಾಗಿ ಬಿದ್ದಿದೆ ಎಂದು ಪ್ರಾಯಃ ಹೇಳಬಹುದು. ಸ್ವರಾಂತ ಕೊಂಕಣಿ ಶಬ್ದಗಳು ಮಂಗಳೂರಿನ ಕ್ರೈಸ್ತೇತರ ಕೊಂಕಣಿಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಈ ಜನರಿಗೆ ಕನ್ನಡದೊಡನೆ ಸಂಪರ್ಕ ಹೆಚ್ಚಿತ್ತು. ಅಷ್ಟು ಸಂಪರ್ಕವಿರದ ಅವರ ಕ್ರೈಸ್ತ ಭಾಷಾಬಾಂಧವರ ಮಾತುಗಳು ವ್ಯಂಜನಾಂತವಾಗಿಯೇ ಉಳಿದಿವೆ ಎಂಬುದನ್ನೂ ಗಮನಿಸಬೇಕು. ಉದಾ: ದೇವ್, ದೀಸ್, ಮನಿಸ್ ಇತ್ಯಾದಿ.

ಹಿಂದೆ ಬಳಕೆಯಲ್ಲಿದ್ದ ಕೆಲವು ಕೊಂಕಣಿ ಪದಗಳು ತಮ್ಮ ಸ್ಥಾನವನ್ನು ಈಗ ಕನ್ನಡ ಪದಗಳಿಗೆ ಬಿಟ್ಟುಕೊಟ್ಟಿವೆ: ಬಾಗಿಲ್ (ಬಾಗಿಲು–ಕನ್ನಡ)–ದಾರ್ (ಕೊಂಕಣಿ), ಗುಡ್ಡೊ (ಗುಡ್ಡ–ಕ)–ದೊಂಗೊರ್ (ಕೊಂ), ಗಾದೊ (ಗದ್ದೆ–ಕ.), ಶೆತ್-(ಕೊಂ),ಶಾಯಿ (ಕಾಯಿ–ಕ.)–ತೀಂತ್ (ಕೊಂ), ಪಾತ (ಪಾತ–ಕ.)–ಲಿಸಾಂವ್ (ಕೊಂ.)–ತರ್ಕಾರಿ (ತರಕಾರಿ–ಕ)–ರಾಂದ್ವೊಯ್ (ಕೊಂ), ಮುಕ್ಕಾಲ್ (ಮುಕ್ಕಾಲು–ಕ)–ಡೆಕ್ಕಿ (ಕೊಂ). ಕೊಂಕಣಿ ಪದಗಳನ್ನು ಬಹಳ ಅಪೂರ್ವವಾಗಿ ಮಾತ್ರ ಕೇಳುತ್ತೇವೆ. ಹೀಗೆಯೇ ಕನ್ನಡದ ಮೇಲಾದ ಕೊಂಕಣಿಯ ಪ್ರಭಾವ ಸಿಗರೇಟ್ ಎಳೆ—ಸಿಗರೇಟ್ ವೋಢ್, ನಿದ್ದೆ ತೆಗಿ –ನೀದ್ ಕಾಡ್ (ಕೊಂ) ಮುಂತಾದ ನುಡಿಗಟ್ಟುಗಳಲ್ಲಿ ಹೊಳಹುತೋರಿದೆ.[70]

# ಕನ್ನಡ-ಬಂಗಾಳಿ

ಆಧುನಿಕ ಭಾರತೀಯ ಭಾಷೆಗಳಿಗೆ ಸಂಬಂಧಿಸಿದಂತೆ ಕೊಳ್ಕೊಡುಗೆಗಳು ಸತತವಾಗಿ ನಡೆದುಕೊಂಡು ಬಂದಿವೆ. ಈ ಶ್ರೇಣಿಯಲ್ಲಿ ಈಗ ಬಂಗಾಳಿ ಹಾಗೂ ಕನ್ನಡ ಭಾಷೆಗಳ ನಡುವಣ ಬಾಂಧವ್ಯಗಳನ್ನು ಗಮನಿಸೋಣ. ಭಾಷಾಶಾಸ್ತ್ರೀಯ ದೃಷ್ಟಿಯಿಂದ ಕನ್ನಡ ದ್ರಾವಿಡ ಪರಿವಾರಕ್ಕೆ ಸೇರಿದ ಭಾಷೆಯಾದರೆ, ಬಂಗಾಳಿ ಭಾರತೀಯ ಆರ್ಯಭಾಷಾ ಪರಿವಾರಕ್ಕೆ ಸೇರಿದ್ದಾಗಿದೆ. ಹಾಗಾಗಿ ಈ ಎರಡು ಭಾಷೆಗಳಲ್ಲಿಯೂ ವ್ಯಾಕರಣ ದೃಷ್ಟಿಯಿಂದ ಹಲವು ಭಾಷಿಕ ಭೇದಗಳು ಕಂಡುಬಂದರೂ ಶಬ್ದಕೋಶದ ದೃಷ್ಟಿಯಿಂದ ಸಮಾನವಾಗಿ ಸಂಸ್ಕೃತ ಶಬ್ದಭಂಡಾರವನ್ನು ಅವು ಬಳಸಿವೆ. ಆರ್ಯಭಾಷೆಯಾದ ಬಂಗಾಳಿಯದು ಈ ದೃಷ್ಟಿಯಿಂದ ಸಹಜವಾಗಿಯೇ ಕೊಂಚ ಮೇಲುಗೈ.

ವಂಗ ಅಥವಾ ಬಂಗಾಳದೇಶ ವೈದಿಕವಾಗಿ ಅಷ್ಟು ಖ್ಯಾತವಲ್ಲ. ಕಾಳಿಕಾಪುರಾಣವನ್ನು ಬಿಟ್ಟರೆ ಇತರ ಪುರಾಣ ಅಥವಾ ಉಪಪುರಾಣಗಳಲ್ಲಿ ಅದರ ಬಗ್ಗೆ ಉಲ್ಲೇಖವಿಲ್ಲ. ಯಾತ್ರೆಯ ಸಲುವಾಗಿ ಹೊರತು ಇತರ ಕಾರಣಗಳಿಗಾಗಿ ಬಂಗಾಳಕ್ಕೆ ಹೋದವರು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬ ಕಟ್ಟಳೆಯಿತ್ತೆಂದು ತೋರುತ್ತದೆ.[71] ಮಹಾಭಾರತ ಯುದ್ಧದಲ್ಲಿ ಬಂಗಾಳದ ಪಾತ್ರ ಏನೆಂಬುದು ತಿಳಿದುಬಂದಿಲ್ಲ. ಚೀನಾದೇಶದಿಂದ ಬಂದಿದ್ದ ಯಾತ್ರಿಕರ ಉಲ್ಲೇಖಗಳಲ್ಲಿ ಅಧ್ಯಯನಕ್ಕೆ ಕೊಂಚ ಸಾಮಗ್ರಿಯುಂಟು. ಬಂಗಾಳದ ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಸಹ ಹುಯೆನ್‌ತ್ಸಾಂಗ್ ವಿವರಿಸಿದ್ದಾನೆ. ಆ ಕಾಲದಲ್ಲಿ ಈ ಪ್ರದೇಶದಲ್ಲಿ ಬೌದ್ಧಧರ್ಮ ಪ್ರಬಲವಾಗಿದ್ದುದಾಗಿ ಆತನ ಬರಹದಿಂದ ತಿಳಿಯುತ್ತದೆ. ಬಹಳ ಮೊದಲಿಗೆ ರಾಢ್, ಗೌಡ್, ಬಾರೇಂದ್ರ ಮತ್ತು ವಂಗ—ಎಂದು ನಾಲ್ಕು ಭಾಗಗಳಾಗಿ ಇದ್ದ ಬಂಗಾಳ ಅರಸಾಳ್ವಿಕೆಗೆ ಒಳಪಟ್ಟದ್ದು, ಮುಸಲ್ಮಾನರ ಆಳ್ವಿಕೆಯ ಅನಂತರ ಕಾಮರೂಪದ ಕೆಲಭಾಗವನ್ನು ಆಕ್ರಮಿಸಿಕೊಂಡು 'ಬಂಗಾಳ' ಎನಿಸಿತು. ಕೆಲವು ಕಾಲ ಮಗಧರಾಜ್ಯದ ಗುಪ್ತರೂ ಕೆಲವು ಕಾಲ ಹರ್ಷವರ್ಧನನೂ ಇಲ್ಲಿ ರಾಜ್ಯವಾಳಿದ್ದರು. ಕಾಮರೂಪದ ಭಾಸ್ಕರವರ್ಮನ ಹಾಗೂ ಕಾಶ್ಮೀರದ ಜಯಪೀಡನ ಆಳ್ವಿಕೆಗಳು ಕೆಲ ಸಮಯ ನಡೆದಿತ್ತು. ಸುಮಾರು ಕ್ರಿ.ಶ. ೯ನೆಯ ಶತಮಾನದಲ್ಲಿ ಪಾಲವಂಶದ ಗೌಡೇಶ್ವರ ಅರಸರು ಖ್ಯಾತರಾಗಿ ಅಲ್ಲಿ ಆಳಿದರು. ಬಂಗಾಳಿ ಜನಪದ ಸಾಹಿತ್ಯದಲ್ಲಿ ಗೌಡೇಶ್ವರ ಮಹೀಪಾಲನನ್ನು ಕುರಿತ ಹಾಡುಗಳನ್ನು ಇಂದೂ ಕಾಣಬಹುದು. ಅನಂತರ ಎರಡು ಶತಮಾನಗಳ ಕಾಲ, ಈ ಪ್ರದೇಶ ಸೇನರಾಜರ ಆಳ್ವಿಕೆಯಲ್ಲಿತ್ತು. ಸೇನರ ಅನಂತರ ಖಿಲ್ಜಿಗಳು, ತುರ್ಕರು ಹಾಗೂ ಇಂಗ್ಲಿಷರು ಬಂಗಾಳದಲ್ಲಿ ಆಡಳಿತ ನಡಸಿದರು. ಇವರೆಲ್ಲರ ಪ್ರಭಾವ ಬಂಗಾಳಿ ಸಾಹಿತ್ಯದ ಮೇಲೆ ಕ್ರಮಾಗತವಾಗಿ ತನ್ನ ಅಂಕೆಯನ್ನೊತ್ತಿದೆ.

ಬಂಗಾಳಿ ಭಾಷೆ ಬಂಗಾಳದಲ್ಲಿ ಪ್ರಚುರವಾಗುವ ಮೊದಲು, ಅಲ್ಲಿಯ ಆದಿವಾಸಿಗಳು ಕೋಲ್ ಮತ್ತು ದ್ರಾವಿಡ ಭಾಷೆಗಳನ್ನಾಡುತ್ತಿದ್ದರೆನ್ನಲಾಗಿದೆ. ಆರ್ಯಭಾಷೆ

ಕವಲುಗೊಂಡು ಪಾಲಿ, ಪ್ರಾಕೃತ ಮತ್ತು ಅಪಭ್ರಂಶಗಳಾಗಿ ೧೦ನೆಯ ಶತಮಾನದ ಸುಮಾರಿಗೆ ಬಂಗಾಳಿ, ಮೈಥಿಲಿ, ಒರಿಯ ಮೊದಲಾದ ಆಧುನಿಕ ಭಾಷೆಗಳು ರೂಪ ತಳೆದವೆಂಬುದು ವಿದ್ವಾಂಸರ ಅಭಿಪ್ರಾಯ. ಬಂಗಾಳಿ ಶಬ್ದಭಂಡಾರದಲ್ಲಿ ಪ್ರಾಕೃತದಿಂದ ಅಪಭ್ರಂಶದ ಮೂಲಕವಾಗಿ ಬಂದ ಶಬ್ದಗಳ ಸಂಖ್ಯೆ ಅಧಿಕವಾಗಿದ್ದು, ಕೋಲ್ ಮತ್ತು ದ್ರಾವಿಡ ಭಾಷೆಗಳ ಶಬ್ದಗಳೂ ಕಂಡುಬರುವುದುಂಟು. ಹೀಗೆಯೇ ಅರಬ್ಬಿ ಮತ್ತು ಪಾರಸಿ ಶಬ್ದಗಳ ಪ್ರವೇಶ ಮುಸಲ್ಮಾನರ ಸಂಸರ್ಗದಿಂದಾಯಿತು. ಯೂರೋಪಿಯನ್ನರ ಆಗಮನದಿಂದಾಗಿ ಇಂಗ್ಲಿಷ್ ಶಬ್ದಗಳೂ ಸ್ವಲ್ಪ ಪ್ರಮಾಣದಲ್ಲಿ ಪೋರ್ಚುಗೀಸ್ ಶಬ್ದಗಳೂ ಫ್ರೆಂಚ್ ಮತ್ತು ಡಚ್ ಭಾಷೆಗಳ ಶಬ್ದಗಳೂ ಬಂಗಾಳಿ ಶಬ್ದಕೋಶವನ್ನು ಸೇರಿದವು.

ಒಂದು ದೃಷ್ಟಿಯಿಂದ, ಬಂಗಾಳಿ ಸಾಹಿತ್ಯದ ಪ್ರಭಾವ ಭಾರತದ ಎಲ್ಲ ಸಾಹಿತ್ಯಗಳ ಮೇಲೂ ತಕ್ಕಮಟ್ಟಿಗೆ ಬಿದ್ದಿದೆ. ಐರೋಪ್ಯ ಭಾಷಾಸಾಹಿತ್ಯಗಳಿಂದ ಅತ್ಯಂತ ತ್ವರಿತವಾಗಿ ಪ್ರಭಾವಿತಗೊಂಡ ಭಾರತೀಯ ಸಾಹಿತ್ಯಗಳಲ್ಲಿ ಬಂಗಾಳಿ ಸಾಹಿತ್ಯ ಮೊತ್ತ ಮೊದಲನೆಯದು. ಕಳೆದ ಒಂದು ಶತಮಾನದಲ್ಲಿ ಭಾರತೀಯ ಪ್ರತಿಭಾಲಕ್ಷ್ಮಿ ವಂಗ ದೇಶದಲ್ಲಿ ಅಭಿವ್ಯಕ್ತೆಯಾದಂತೆ ಬಹುರೂಪಿಣಿಯಾಗಿ ಮತ್ತಾವ ದೇಶಭಾಷಾ ಸೀಮೆಯಲ್ಲೂ ಆವಿರ್ಭೂತೆಯಾದಂತೆ ತೋರುವುದಿಲ್ಲ ಎಂದು ಕುವೆಂಪು ಅವರ ಅಭಿಪ್ರಾಯ.[72] ವಿಲಿಯಂ ಕೇರಿ ಬಂಗಾಳಿ ವ್ಯಾಕರಣವನ್ನೂ (೧೮೦೧) ಬಂಗಾಳಿ–ಇಂಗ್ಲಿಷ್ ನಿಘಂಟನ್ನೂ (೧೮೧೫) ಹೊರತಂದಮೇಲೆ ಇತರ ಭಾಷಾಸಾಹಿತ್ಯಗಳ ಮೇಲೆ ಬಂಗಾಳಿ ಪ್ರಭಾವ ಹೆಚ್ಚಾಗಲು ಸಾಧ್ಯವಾಯಿತು. ಪಾಶ್ಚಾತ್ಯ ಸಾಹಿತ್ಯ ಪ್ರಕಾರಗಳಾದ ಕಾದಂಬರಿ ಕವಿತೆಗಳೂ ಹೊಸ ಹೊಸ ರಚನಾಪದ್ಧತಿಗಳೂ ಮೊದಲಿಗೆ ಬಂಗಾಳಿಯಲ್ಲೇ ಮೈದಳೆದವು. ಕನ್ನಡ ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ "ಗತಶತಮಾನದ ನಡುವೆಯ ಹೊತ್ತಿಗೆ ಕನ್ನಡ ಸಾಹಿತ್ಯವಾಹಿನಿ ಮಡುಗಟ್ಟಿ ನಿಂತಿತ್ತು. ಸ್ವತಂತ್ರ ಕಾವ್ಯಗಳ ಕಾಲ ಗತಿಸಿ ಹಲವಾರು ವರ್ಷಗಳಾಗಿದ್ದವು. ದಿನಕರನ ಮುಳುಗಿನೊಡನೆ ಕತ್ತಲೆಯಲ್ಲಿ ಮುಳುಗಿಹೋದ ಪಕ್ಷಿಸಂಕುಲ ಮುಂಬೆಳಕಿನಲ್ಲಿ ರವಗೈವಂತೆ ಸಾಹಿತ್ಯಪಿಕವೂ ಸುಸಮಯವನ್ನು ನಿರೀಕ್ಷಿಸುತ್ತಿತ್ತು. ವಂಗ ಸಾಹಿತ್ಯದ ಚೆಲುವಾದ ಹೆಬ್ಬಾಗಿಲಿನ ಮೂಲಕ ಆಂಗ್ಲ ಸಾಹಿತ್ಯಸೂರ್ಯನ ದರ್ಶನವಾದ ಕೂಡಲೆ ಕನ್ನಡ ಕೋಗಿಲೆಗಳ ಮಧುರಾಲಾಪ ಆರಂಭವಾಯಿತು."[73] ಭಾರತದಲ್ಲಿ ರಾಷ್ಟ್ರೀಯ ಮತ್ತು ಆಧ್ಯಾತ್ಮಿಕ ಮನೋಭಾವ ಬೆಳೆಯಲು ಕಾರಣಭೂತರಾದ ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಬಂಕಿಮಚಂದ್ರ ಚಟರ್ಜಿ, ರವೀಂದ್ರನಾಥ ಠಾಕೂರ್ ಮೊದಲಾದವರ ಗಾಢ ಸಾತ್ತ್ವಿಕ ಪ್ರಭಾವ ಅಲ್ಲಿಯ ಯಾವ ಪ್ರಾದೇಶಿಕ ಸಾಹಿತ್ಯವನ್ನೂ ಆವರಿಸದೆ ಬಿಡಲಿಲ್ಲ. 'ವಂದೇ ಮಾತರಂ' ಮತ್ತು 'ಜನಗಣಮನ' ಗೀತೆಗಳು ರಾಷ್ಟ್ರಾಭಿಮಾನದ ಉಜ್ಜ್ವಲ ಜ್ಯೋತಿಯನ್ನು ಬೆಳಗಿಸಿದ್ದು ಯಾರೂ ಮರೆಯುವ ಹಾಗಿಲ್ಲ.

ರಾಜಕೀಯ: ಕನ್ನಡ ಜನಾಂಗ ಕ್ರಿಸ್ತಪೂರ್ವ ಕಾಲದಿಂದಲೂ ಚೆನ್ನಾಗಿ ಬೆಳೆದು

ಬಂದ ನಿದರ್ಶನಗಳಿದ್ದರೂ ಅವರಲ್ಲಿ ಸ್ವಂತಿಕೆ ಮೂಡಿಬಂದಿದ್ದು ಕದಂಬ ಅರಸರ ಆಳ್ವಿಕೆಯಲ್ಲಷ್ಟೆ. ಕದಂಬರ ಕಾಲದಲ್ಲಿ ಕರ್ಣಾಟಕ ಉತ್ತರ ಮತ್ತು ದಕ್ಷಿಣಭಾರತಗಳಲ್ಲಿ ಮಾನ್ಯತೆ ಪಡೆಯಿತು. ತಾಳಗುಂದ ಶಾಸನದಲ್ಲಿ ಕಂಡುಬರುವ ಒಂದು ಪದ್ಯದಿಂದ ಕದಂಬ ಕಾಕುತ್ಸ್ಥವರ್ಮ ಗುಪ್ತಸಾಮ್ರಾಜ್ಯದ ಅರಸರೊಡನೆ ವೈವಾಹಿಕ ಸಂಬಂಧವನ್ನು ಬೆಳಸಿದುದು ಕರ್ಣಾಟಕ ಉತ್ತರಭಾರತದ ವ್ಯವಹಾರ ರಂಗವನ್ನು ಪ್ರವೇಶಿಸಿದುದರ ಮೊದಲ ಸಂಕೇತವೆಂದು ಕಾಣಬರುತ್ತದೆ.

ಕದಂಬರು ಉತ್ತರಭಾರತದಲ್ಲಿ ನೆಟ್ಟ ಕರ್ಣಾಟಕ ಪ್ರಭಾವದ ಸಸಿ ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಬಲಿತು ಹೆಮ್ಮರವಾಯಿತು. ಈ ರಾಜವಂಶದ ವಿಖ್ಯಾತ ಚಕ್ರವರ್ತಿ ಇಮ್ಮಡಿ ಪುಲಿಕೇಶಿ ಲಾಟ (ದಕ್ಷಿಣ ಗುಜರಾತ್), ಗುರ್ಜಗ (ಗುಜರಾತ್), ಮಾಳವ ಮೊದಲಾದ ಪ್ರದೇಶಗಳನ್ನು ಪಾದಾಕ್ರಾಂತವನ್ನಾಗಿ ಮಾಡಿ ಚಕ್ರಾಧಿಪತಿ ಹರ್ಷವರ್ಧನನನ್ನು ಸೋಲಿಸಿದನೆಂದು ರವಿಕೀರ್ತಿಯ ಐಹೊಳೆ ಶಾಸನದಿಂದ (ಕ್ರಿ.ಶ. ೬೩೪) ತಿಳಿದುಬರುತ್ತದೆ.[74] ಅನಂತರದ ಕಾಲದಲ್ಲಿ ಇಮ್ಮಡಿ ಪುಲಿಕೇಶಿಯ ವಂಶಜರಾದ ವಿನಯಾದಿತ್ಯ ಮತ್ತು ವಿಜಯಾದಿತ್ಯರು ಉತ್ತರ ಭಾರತದ ಬೇರೊಬ್ಬ ಚಕ್ರವರ್ತಿಯನ್ನು ಪರಾಜಿತನನ್ನಾಗಿ ಮಾಡಿ ಆತನ ವಿಜಯಲಾಂಛನಗಳನ್ನು ಕಸಿದುಕೊಂಡರೆಂದು ವಿಜಯಾದಿತ್ಯನ ನೇರೂರು ತಾಮ್ರಶಾಸನದಲ್ಲಿ (ಕ್ರಿ. ಶ. ೭೦೦-೭೦೧) ಹೇಳಿದೆ.

ಬಂಗಾಳದೊಡನೆ ಕರ್ಣಾಟಕದ ಪ್ರತ್ಯಕ್ಷ ಸಂಬಂಧ ರಾಷ್ಟ್ರಕೂಟರ ಕಾಲದಲ್ಲಿ ಇನ್ನೂ ವಿಶೇಷವಾಗಿ ಪ್ರತಿಷ್ಠಿತಗೊಂಡಿತು. ರಾಷ್ಟ್ರಕೂಟವಂಶದ ಮೊದಲ ಅರಸನಾದ ದಂತಿದುರ್ಗ ವರ್ಹಾಡ, ಮಾಳವ, ಗುಜರಾತ್ ಮೊದಲಾದ ಪ್ರಾಂತಗಳ ಮೇಲೆ ತನ್ನ ಪ್ರಭಾವ ಬೀರಿ ಖ್ಯಾತನಾದನು. ಅನಂತರ ಇದೇ ವಂಶದ ನಾಲ್ಕನೆಯ ಅರಸ ಧಾರಾವರ್ಷ ಧ್ರುವ ಉತ್ತರಭಾರತದಲ್ಲಿ ಎಡೆಯಿಲ್ಲದಂತೆ ಜೈತ್ರಯಾತ್ರೆ ಕೈಗೊಂಡನು. ಈ ವೇಳೆಗಾಗಲೇ ಉತ್ತರ ಭಾರತದಲ್ಲಿ ಆಧಿಪತ್ಯವನ್ನು ಸ್ಥಾಪಿಸುವ ಸಲುವಾಗಿ ಸಶಕ್ತರಾದ ಇಬ್ಬರು ಅರಸರು—ಕನೌಜಿನಲ್ಲಿ ಆಳುತ್ತಿದ್ದ ಗುರ್ಜರ ಪ್ರತೀಹಾರವಂಶದ ವತ್ಸರಾಜ ಮತ್ತು ಗೌಡದೇಶದ ಅರಸನಾದ ಪಾಲವಂಶದ ಧರ್ಮಪಾಲ—ಪೈಪೋಟಿಯಿಂದ ಸ್ಪರ್ಧಿಸುತ್ತಿದ್ದರು. ವತ್ಸರಾಜ ಆಗಲೇ ಧರ್ಮಪಾಲನನ್ನು ಸೋಲಿಸಿ ಆತನ ರಾಜಲಾಂಛನವಾಗಿದ್ದ ಎರಡು ಬೆಳ್ಗೊಡೆಗಳನ್ನೂ ಕಸಿದುಕೊಂಡಿದ್ದನು. ವಿಜಿಗೀಷು ವತ್ಸರಾಜನನ್ನು ಧಾರಾವರ್ಷಧ್ರುವ ರಣರಂಗದಲ್ಲಿ ಎದುರಿಸಿದನು. ಗಂಗಾ-ಯಮುನಾತೀರಗಳ ನಡುನಾಡಿನಲ್ಲಿ ನಡೆದ ಈ ಕದನದಲ್ಲಿ ಕಾನ್ಯಕುಬ್ಜೇಶ್ವರ ಕನ್ನಡಿಗರ ಬಿಸಿ ಹೊಡೆತಗಳನ್ನು ತಡೆಯಲಾರದೆ ಕುಸಿದುಬಿದ್ದನು. ಈ ಸನ್ನಿವೇಶದ ವರ್ಣನೆಯನ್ನು ವಾಣಿ ದಿಂಡೋರಿ ಶಾಸನದಲ್ಲಿ ಕಾಣಬಹುದು. ವತ್ಸರಾಜ ಸೋತುಹೋದುದನ್ನು ಕಂಡು ಧರ್ಮಪಾಲ ಧೈರ್ಯಗೊಂಡು, ಚೇತರಿಸಿಕೊಂಡು ಗಂಗಾ-ಯಮುನೆಯರ ನಡುನಾಡಿನಲ್ಲಿ ನುಗ್ಗಿ ಬರುತ್ತಿದ್ದ ಧಾರಾವರ್ಷಧ್ರುವನನ್ನು ಎದುರಿಸಿದನು. ವತ್ಸರಾಜನನ್ನೇ ಸೋಲಿಸಿದವನಿಗೆ ಇದಾವ ಲೆಕ್ಕ! ಧ್ರುವರಾಜ ವಂಗಭೂಪತಿಯನ್ನು ಸದೆಬಡಿದು, ಆತನ ಅರಸೊತ್ತಿಗೆಯ

ಲಾಂಛನವಾದ ಬೆಳ್ಗೊಡೆಗಳನ್ನು ಕಸಿದುಕೊಂಡನು (ಕ್ರಿ.ಶ. ೭೯೦).[75]

ಧಾರಾವರ್ಷಧ್ರುವರಾಜನ ತರುವಾಯ ಪ್ರಭೂತವರ್ಷ ಮುಮ್ಮಡಿ ಗೋವಿಂದ ಶ್ರೀವಲ್ಲಭ ಕನ್ನಡನಾಡಿನ ಅರಸನಾದನು. ಈತನ ಕಾಲದಲ್ಲಿಯೂ ಕನ್ನಡಿಗರ ಕೀರ್ತಿ ಬಂಗಾಳದಲ್ಲಿ ಮಾತ್ರವಲ್ಲದೆ ಸಮಗ್ರ ಭಾರತವರ್ಷದಲ್ಲೆಲ್ಲ ಹರಡಿತು. ರಾಷ್ಟ್ರಕೂಟರ ದಂಡುಗಳು ಉತ್ತರಭಾರತದಿಂದ ಕೆಲಕಾಲ ಕಣ್ಮರೆಯಾಗಿದ್ದಾಗ ಗೌಡದೇಶದ ಪಾಲ ರಾಜರ ಹಾಗೂ ಕನೌಜಿನ ಗುರ್ಜರ–ಪ್ರತೀಹಾರ ರಾಜರ ನಡುವೆ ಉತ್ತರ ಭಾರತದ ಆಧಿಪತ್ಯಕ್ಕಾಗಿ ಸ್ಪರ್ಧೆ ನಡೆದಿತ್ತು. ವಂಗಾಧಿಪತಿ ಧರ್ಮಪಾಲ ಸಮಯಸಾಧಿಸಿ ಕನೌಜಿನ ಮೇಲೆ ದಾಳಿಮಾಡಿ ಅದನ್ನು ವಶಪಡಿಸಿಕೊಂಡನು. ಅಲ್ಲಿ ಚಕ್ರಾಯುಧನೆಂಬ ತನ್ನ ಪ್ರತಿನಿಧಿಯನ್ನು ಸ್ಥಾಪಿಸಿದನು. ಆದರೆ ವತ್ಸರಾಜನ ತರುವಾಯ ಗುರ್ಜರ–ಪ್ರತೀಹಾರ ಸಾಮ್ರಾಜ್ಯಕ್ಕೆ ವಾರಸುದಾರನಾದ ಎರಡನೆಯ ನಾಗಭಟ ಸಿಂಧುದೇಶದಲ್ಲಿ ನೆಲಸಿದ್ದ ಮಹಮ್ಮದೀಯರು, ವೆಂಗಿಯ ಚಾಲುಕ್ಯರು ಹಾಗೂ ಮಧ್ಯಪ್ರಾಂತದ ನಾಯಕರು ಮೊದಲಾದವರೊಡನೆ ಸ್ನೇಹಬೆಳಸಿ ಅವರ ಸಹಾಯದಿಂದ ಚಕ್ರಾಯುಧನ ಮೇಲೆ ದಂಡೆತ್ತಿಹೋಗಿ ಜಯಶೀಲನಾಗಿ ಶತ್ರುಬಣಕ್ಕೆ ಸೇರಿದ ಉತ್ತರ ಗುರ್ಜರ ಮತ್ತು ಮಾಳವದ ನಾಯಕರನ್ನು ಹತ್ತಿಕ್ಕುವಲ್ಲಿ ಸಮರ್ಥನಾದ. ಸುಮಾರು ಕ್ರಿ.ಶ. ೮೦೭ರ ಹೊತ್ತಿಗೆ ಪ್ರಭೂತವರ್ಷ ಗೋವಿಂದ ಶ್ರೀವಲ್ಲಭ ತನ್ನ ಸೈನ್ಯವನ್ನು ಎರಡು ಭಾಗಮಾಡಿ ಗುರ್ಜರ ಪ್ರತೀಹಾರರ ಮೇಲೆ ಮತ್ತು ಗಂಗಾ–ಯಮುನಾ ನಡುವಣ ಪ್ರದೇಶವನ್ನು ಪ್ರವೇಶಿಸಿ ಕನೌಜಿನ ಮೇಲೆ ದಾಳಿಮಾಡಿದನು. ಈ ಜೈತ್ರಯಾತ್ರೆ ಜಯಪ್ರದವಾಗಿ ನಾಗಭಟ ಕಂಗೆಟ್ಟು ಓಡಿಹೋದ, ಧರ್ಮಪಾಲ ಚಕ್ರಾಯುಧರು ರಾಷ್ಟ್ರಕೂಟ ದೊರೆಯ ಮರೆಹೊಕ್ಕರು. ಈ ಸಂದರ್ಭದಲ್ಲಿ ಕನ್ನಡದ ಕಲಿಗಳು ಹಿಮವತ್ ಪರ್ವತದ ಎಡೆಗಳಲ್ಲೆಲ್ಲ ಅಲೆದಾಡಿದರೆಂದು ಸಂಜಾನ್ ಶಾಸನ ಹೇಳುತ್ತದೆ.

ಗೋವಿಂದ ಶ್ರೀವಲ್ಲಭನ ಅನಂತರ ಸುಮಾರು ಒಂದು ಶತಮಾನ ಕಾಲ ಉತ್ತರ ಭಾರತದಲ್ಲಿ ಕನ್ನಡಿಗರ ಯಾವ ಪ್ರಭಾವವೂ ತೋರುವುದಿಲ್ಲ. ರಾಷ್ಟ್ರಕೂಟ ಅರಸ ಮುಮ್ಮಡಿ ಇಂದ್ರರಾಜನ ಆಳ್ವಿಕೆಯಲ್ಲಿ ಕನ್ನಡ ದೇಶದ ರಾಜಕೀಯ ಪ್ರಭಾವ ಪುನಃ ಉತ್ತರ ಭಾರತದಲ್ಲಿ ಕಾಣಿಸಿಕೊಂಡಿತು. ತನ್ನ ಪೂರ್ವಿಕರಂತೆ ಈತನೂ ಉತ್ತರ ಭಾರತದ ದಂಡಯಾತ್ರೆಯನ್ನು ಕೈಗೊಂಡು, ಮಿಂಚಿನಂತೆ ನಡುನಾಡಿನ ಅತಿರಥರನ್ನೆಲ್ಲ ಗೆಲ್ಲುತ್ತ ಉತ್ತರಾಭಿಮುಖವಾಗಿ ಸಾಗಿ ಕನೌಜ್ ನಗರವನ್ನು ವಶಪಡಿಸಿಕೊಂಡನು. ಗುರ್ಜರ-ಪ್ರತೀಹಾರರ ದೊರೆ ಕಾಲಿಗೆ ಬುದ್ಧಿಹೇಳಬೇಕಾಯಿತು. ರಾಷ್ಟ್ರಕೂಟರ ಅಂಕಿತದವರೆಂದು ಖ್ಯಾತರಾಗಿದ್ದ ವೆಂಗಿಯ ಚಾಲುಕ್ಯರ ಪಾತ್ರ ಈ ಕದನದಲ್ಲಿ ಮುಖ್ಯವಾಗಿತ್ತು. ಚಾಲುಕ್ಯ ವೇಮುಲವಾಡ ನರಸಿಂಹನ ಮಗನೇ ಕನ್ನಡದ ಆದಿಕವಿ ಪಂಪನ ಆಶ್ರಯದಾತನಾದ ಇಮ್ಮಡಿ ಅರಿಕೇಸರಿ. ರಾಷ್ಟ್ರಕೂಟರ ತರುವಾಯ ಕರ್ನಾಟಕದಲ್ಲಿ ಆಳುತ್ತಿದ್ದ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಕನ್ನಡಿಗರು ಉತ್ತರ ಭಾರತದೊಡನೆ ಹೊಂದಿದ್ದ ಸಂಬಂಧ ಇನ್ನೂ ಉತ್ತಮವಾಗಿತ್ತು. ಮೊದಲನೆಯ ಸೋಮೇಶ್ವರ, ಇಮ್ಮಡಿ

ಸೋಮೇಶ್ವರ, ೬ನೆಯ ವಿಕ್ರಮಾದಿತ್ಯನೇ ಮೊದಲಾದ ಅರಸರು ಉತ್ತರ ದಿಶೆಯಲ್ಲಿ ಜೈತ್ರಯಾತ್ರೆಮಾಡಿ ಬಂಗಾಳ, ಬಿಹಾರ, ನೇಪಾಳ, ಅಸ್ಸಾಂ ಮುಂತಾದ ಪ್ರದೇಶಗಳ ಮೇಲೆ ಕರ್ಣಾಟಕದ ಪ್ರಭಾವಮುದ್ರೆಯನ್ನು ಒತ್ತಿದರು.

ಕ್ರಿ.ಶ. ಸು. ೭೫೦–೧೦೫೦ರ ಅವಧಿಯಲ್ಲಿ ಬಂಗಾಳದಲ್ಲಿ ರಾಜ್ಯವಾಳಿದ ವಿಖ್ಯಾತ ಪಾಲರಾಜರ ಕಾಲದಲ್ಲಿ ಕರ್ಣಾಟಕರು ಮಗಧ ಪ್ರದೇಶದಲ್ಲಿ ನೆಲಸಿದ್ದರೆನ್ನಲಾಗಿದೆ. ರಾಷ್ಟ್ರಕೂಟರು ದಂಡಯಾತ್ರೆ ನಡಸಿದ ಸಮಯದಲ್ಲಿ ಈ ಕರ್ಣಾಟಕರು ಕರ್ಣಾಟಕದಿಂದ ಬಂದು ಮೊದಲಿಗೆ ಮಧ್ಯಭಾರತದಲ್ಲೂ ಅನಂತರ ಮಗಧ ದೇಶದಲ್ಲೂ ನೆಲಸಿರಬೇಕೆಂಬ ಅಭಿಪ್ರಾಯವೂ ಇದೆ. ಮಾಳವದೇಶದ ರಾಜನಾಗಿದ್ದ ಲಕ್ಷ್ಮದೇವನ ಪ್ರಶಸ್ತಿಯನ್ನು ಕುರಿತ ಶಿಲಾಶಾಸನವೊಂದರಲ್ಲಿ (ಕ್ರಿ.ಶ. ಸು. ೧೧೦೪–೦೫) ಈ ಅಭಿಪ್ರಾಯಕ್ಕೆ ಪೋಷಕವಾದ ಅಂಶ ಲಭ್ಯವಾಗುತ್ತದೆ. ಚೇದಿರಾಜ್ಯದ ಕರ್ಣರಾಜನನ್ನು ಕೂಡಿಕೊಂಡು ಕರ್ಣಾಟಕರು ಮಾಳವ ರಾಜ್ಯದಲ್ಲಿ ಕಡಲಿನಂತೆ ಕ್ಷೋಭೆಯನ್ನುಂಟುಮಾಡಿದರೆಂದು ಇಲ್ಲಿ ಬಣ್ಣಿಸಲಾಗಿದೆ. ಈ ರೀತಿಯಾಗಿ ಮಗಧದಲ್ಲಿ ನೆಲಸಿದ ಕರ್ಣಾಟಕರು ಕ್ರಮವಾಗಿ ಬಂಗಾಳದಲ್ಲಿಯೂ ವ್ಯಾಪಿಸಿದರೆನ್ನಲಾಗಿದೆ. ಸಾಮಾನ್ಯವಾಗಿ ಇವರು ಬಂಗಾಳದ ಅರಸರ ಸೈನ್ಯದ ಊಳಿಗದಲ್ಲಿದ್ದರು. ಈ ಬಗ್ಗೆ ೯ನೆಯ ಶತಮಾನದಿಂದ ೧೨ನೆಯ ಶತಮಾನದ ನಡುವಣ ಅವಧಿಯಲ್ಲಿ ಆಳಿದ ಬಂಗಾಳದ ಅರಸರ ಶಿಲಾಶಾಸನಗಳಲ್ಲಿ ಮಾಹಿತಿ ದೊರೆಯುತ್ತದೆ.

ಅಲ್ಲದೆ ಕರ್ಣಾಟಕ ರಾಷ್ಟ್ರಕೂಟ ರಾಜರ ಹಾಗೂ ಬಂಗಾಳದ ಪಾಲರಾಜರ ನಡುವೆ ವೈವಾಹಿಕ ಸಂಬಂಧಗಳೇರ್ಪಟ್ಟಿದ್ದವೆಂಬುದಕ್ಕೆ ದಾಖಲೆಗಳಿವೆ.[76] ಪಾಲರಾಜರ ತರುವಾಯ ಬಂಗಾಳದ ಗದ್ದುಗೆಯನ್ನೇರಿದ ಸೇನರಿಗೂ ಕರ್ಣಾಟಕದ ಚಾಲುಕ್ಯರಿಗೂ ಇದೇ ವಿಧವಾದ ನಂಟು ಬೆಳೆದು ಕರ್ಣಾಟಕ–ಬಂಗಾಳ ಬಾಂಧವ್ಯಕ್ಕೆ ಮೆರುಗು ಬಂದಿತೆಂಬುದು ಇಲ್ಲಿ ಗಮನಾರ್ಹ. ಅಲ್ಲದೆ ಬಂಗಾಳದಲ್ಲಿ ಆಳಿದ ಎರಡು ಅರಸುಮನೆತನಗಳು ತಮ್ಮನ್ನು ಹೆಮ್ಮೆಯಿಂದ ಕರ್ಣಾಟಕ ಕುಲದವರೆಂದು ಹೇಳಿಕೊಂಡಿವೆ. ಈ ಪೈಕಿ ಒಂದು ಮಿಥಿಲೆ (ಬಿಹಾರದ ಉತ್ತರಭಾಗ), ನೇಪಾಳಗಳಲ್ಲಿ ಆಳಿದ ನಾನ್ಯದೇವನ ವಂಶ ಹಾಗೂ ಇನ್ನೊಂದು ಬಂಗಾಳದಲ್ಲಿ ರಾಜ್ಯವಾಳಿದ ಪ್ರಸಿದ್ಧ ಸೇನವಂಶ. ನಾನ್ಯದೇವನಲ್ಲಿ ಕನ್ನಡಕಲಿಗಳ ಶೌರ್ಯಸಾಹಸಗಳು ಮನೆಮಾಡಿದ್ದವು. ಆತನಿಗೆ ಕರ್ಣಾಟಕ ಸಂಗೀತದ ಬಗ್ಗೆ ಅಪಾರ ಒಲವಿತ್ತು. ಈ ಬಗ್ಗೆ ಆತ ರಚಿಸಿದ. 'ಸರಸ್ವತೀಹೃದಯಾಲಂಕಾರಹಾರ' ಎಂಬ ಸಂಗೀತಶಾಸ್ತ್ರದ ಮೇಲಣ ಪ್ರೌಢಗ್ರಂಥ ಬೇಕಾದ ಪುರಾವೆ ಒದಗಿಸುತ್ತದೆ. ಶಾರ್ಙ್ಗದೇವನ 'ಸಂಗೀತ ರತ್ನಾಕರ' ಎಂಬ ಪ್ರಮಾಣಗ್ರಂಥದಲ್ಲಿ (ಸು. ೧೨೧೦–೪೭) "ರುದ್ರಟೋ ನಾನ್ಯಭೂಪಾಲೋ ಭೋಜಭೂವಲ್ಲಭಸ್ತಥಾ" ಎಂಬುದಾಗಿ ಈತನನ್ನು ಶ್ರದ್ಧೆಯಿಂದ ಸ್ಮರಿಸಿದೆ. ನಾನ್ಯದೇವನ ಸಂಗೀತ ಗ್ರಂಥದ ೧೧ನೆಯ ಅಧ್ಯಾಯದಲ್ಲಿ ದೇಸಿರಾಗಗಳ ವಿವೇಚನೆಯಿದ್ದು, ಆ ಪೈಕಿ ಬಹುಪಾಲು ಕರ್ಣಾಟಕ ಸಂಗೀತಕ್ಕೆ ಹತ್ತಿರವಾಗಿದೆಯೆನ್ನುವುದು ಹೆಮ್ಮೆಯ ವಿಷಯ. ಸ್ವತಃ ನಾನ್ಯದೇವ ತನ್ನನ್ನು 'ಕರ್ಣಾಟ

ಕುಲಭೂಷಣ' ಎಂದು ಕಂಠೋಕ್ತವಾಗಿ ಕರೆದುಕೊಂಡಿದ್ದಾನೆ. 'ನಾನ್ಯದೇವ' ಎಂಬ ಶಬ್ದ ಸಂಸ್ಕೃತ ಅಥವಾ ಪ್ರಾಕೃತ ಮೂಲದ್ದು ಎನ್ನುವುದಕ್ಕಿಂತ ಅದು ಕನ್ನಡದ 'ನ್ನಿನ' ಶಬ್ದಕ್ಕೆ ಸಮೀಪವಾಗಿದ್ದು 'ನನ್ನಿಯ ದೇವ' ಎಂಬುದೇ 'ನಾನ್ಯದೇವ' ಆಗಿರಬಹುದು ಎಂದು ಭಾವಿಸುವುದು ಪ್ರಾಯಶಃ ಹೆಚ್ಚು ಉಚಿತ.

ವಾಸ್ತವವಾಗಿ ಬಂಗಾಳದಲ್ಲಿ ಆಳಿದವರೆಂಬ ಅಗ್ಗಳಿಕೆ ಕರ್ನಾಟಕ ಸಂಭೂತರೆಂದೆ ನಿಸಿಕೊಂಡಿರುವ ಸೇನರಾಜರಿಗೆ ಸೇರಬೇಕು. ತಾವು ಕರ್ನಾಟರೆಂದು ಈ ವಂಶದ ಅರಸರು ತಮ್ಮ ಶಾಸನಗಳಲ್ಲಿ ಧಾರಾಳವಾಗಿ ಉಲ್ಲೇಖಿಸಿದ್ದಾರೆ. ಈ ವಂಶದ ಮೊದಲಿಗರು ಸ್ವಲ್ಪ ಹಿಂದೆ ಕರ್ನಾಟಕದಿಂದ ಹೊರಟು ಗಂಗಾತೀರದ ರಾಢ ಎಂಬಲ್ಲಿ ನೆಲಸಿದರು. ಸಾಮಂತ ಸೇನ ಸೇನರಾಜರಲ್ಲಿ ಪ್ರಮುಖ. "ಕರ್ನಾಟಕ್ಷತ್ರಿಯಾಣಾಮಜನಿ ಕುಲಶಿರೋಧಾಮ ಸಾಮಂತಸೇನಃ" ಎಂದು ಈತನ ಬಗ್ಗೆ ಹೇಳಲಾಗಿದೆ. ಮಧಾಯ್ ನಗರದಲ್ಲಿ ದೊರೆತ ತಾಮ್ರಶಾಸನದಲ್ಲಿ ಸಾಮಂತಸೇನನನ್ನು 'ಕರ್ನಾಟಕ್ಷತ್ರಿಯಮುಕುಟಮಣಿ' ಎಂದು ವರ್ಣಿಸಲಾಗಿದೆ. ಈ ರಾಜರು ಸುಮಾರು ಒಂದೂವರೆ ಶತಮಾನಗಳ ಕಾಲ ಬಂಗಾಳ ದಲ್ಲಿ ರಾಜ್ಯವಾಳಿದರು (ಕ್ರಿ.ಶ. ೧೦೫೦–೧೨೦೦). ಸಾಮಂತಸೇನನ ಮೊಮ್ಮ ವಿಜಯಸೇನ. ಈ ವಂಶದ ಕಡೆಯ ಅರಸನಾದ ಲಕ್ಷ್ಮಣಸೇನನ ಆಳ್ವಿಕೆಯಲ್ಲಿ ಮಹಮ್ಮದೀಯರ ದಾಳಿಯಿಂದಾಗಿ ಈ ವಂಶ ಅಳಿಯಬೇಕಾಯಿತು.

ಸಾಂಸ್ಕೃತಿಕ: ಒಂದು ಪ್ರದೇಶ ಮತ್ತೊಂದು ಪ್ರದೇಶದ ಮೇಲೆ ಬೀರುವ ಪರಸ್ಪ ರಾಜಕೀಯ ಸಂಬಂಧಗಳು ಮತ್ತು ಪ್ರಭಾವಗಳು ಇತಿಹಾಸದ ಕಾಲಗರ್ಭದಲ್ಲಿ ಕಣ್ಮ ಯಾಗಿ ಹೋಗಬಹುದು. ಆದರೆ ಪರಂಪರಾಗತವಾಗಿ ಅನುಸ್ಯೂತವಾಗಿ ಸಾಗುವ ಧಾರ್ಮಿ ಹಾಗೂ ಸಾಂಸ್ಕೃತಿಕ ಸಂಬಂಧಗಳ ಅಳಿಯದ ಮುದ್ರೆಯನ್ನು ಯಾವ ಕಾಲದಲ್ಲಿ ಬೇಕಾದರೂ ಕಾಣಬಹುದು. ೧೩ನೆಯ ಶತಮಾನದ ಪರಿಸರದಲ್ಲಿ ಭಾರತದ ರಾ ಕೀಯ ಪರಿಸ್ಥಿತಿ ಅಲ್ಲೋಲಕಲ್ಲೋಲವಾಗಿದ್ದು, ಜನತೆ ಒಂದು ರೀತಿಯ ಧಾರ್ಮಿ ಜಾಗೃತಿಯನ್ನು ಬಯಸುವ ಹಂತಕ್ಕೆ ಬಂದಿತ್ತು. ಆಗ ದ್ವೈತಮತ ಸಂಸ್ಥಾಪಕರಾ ಮಧ್ವಾಚಾರ್ಯರು ಉತ್ತರ ಭಾರತಾದ್ಯಂತ ಎರಡು ಬಾರಿ ಜ್ಞಾನಯಾತ್ರೆಯನ ಕೈಗೊಂಡಿದ್ದರು. ಅವರು ಬಂಗಾಳದಲ್ಲಿಯೂ ತಮ್ಮ ಧರ್ಮಪ್ರಭಾವವನ್ನು ಬೀ ರಿರುವುದಕ್ಕೆ ಸೂಚನೆಗಳಿವೆ. ಕಳಿಂಗದೇಶಕ್ಕೆ (ಈಗಿನ ಒರಿಸ್ಸ) ಹೋಗಿ ಅಲ್ಲಿ ಒಬ್ಬ ಪ್ರಮುಖ ಅಧಿಕಾರಿಯನ್ನು ಗೆದ್ದು ಶಿಷ್ಯನನ್ನಾಗಿ ಮಾಡಿಕೊಂಡರು. ಶಿಷ್ಯನೇ ಮುಂದೆ ನರಹರಿತೀರ್ಥನಾದನು. ಬಂಗಾಳದಲ್ಲಿ ಮಧ್ವಾಚಾರ್ಯರಿಗೆ ದೊ ಸತ್ಕಾರವನ್ನು ಕುರಿತ ವರ್ಣನೆಯನ್ನು 'ಸುಮಧ್ವವಿಜಯ'ದಲ್ಲಿ ಕಾಣಬಹುದ ಬಂಗಾಳ ಬಿಹಾರಗಳಲ್ಲಿ ಪ್ರಚಲಿತವಾದ ಚೈತನ್ಯಸಂಘದ ಮೇಲೆ ಮಧ್ವಾಚಾಯ ಸಿದ್ಧಾಂತದ ಪ್ರಭಾವ ಅಪಾರವಾಗಿದೆಯೆಂದು ಹೇಳಲಾಗಿದೆ. ಚೈತನ್ಯರಿಗೆ ದಿ ನೀಡಿದ ಯತಿವರ್ಯರು ಮಾಧ್ವಸಂಪ್ರದಾಯದವರು. ಕೆಲವು ಪೀಳಿಗೆಗಳಿಗೆ ಹಿ ಈ ಪರಂಪರೆ ಮಧ್ವಾಚಾರ್ಯರವರೆಗೆ ಹೋಗುತ್ತದೆ.

ತಮ್ಮ ಎರಡನೆಯ ಜ್ಞಾನಯಾತ್ರೆಯಲ್ಲಿ ಮಧ್ವಾಚಾರ್ಯರು ಕಾಶಿಯಲ್ಲಿ ತಂಗಿದ್ದು, ಅಲ್ಲಿನ ಅದ್ವೈತ ಸಂಘಗಳೊಡನೆ ವಾದಿಸಿದರೆಂದು ಪ್ರತೀತಿ. ಹಾಗೆಯೇ ಮಧ್ವಾಚಾರ್ಯರ ಅನಂತರ ಜಯತೀರ್ಥರ ಶಿಷ್ಯರಾದ ರಾಜೇಂದ್ರತೀರ್ಥರು ಉತ್ತರ ಭಾರತದಲ್ಲೆಲ್ಲ ಪ್ರವಾಸಮಾಡಿ ವೈಷ್ಣವಭಕ್ತಿಯ ಪ್ರಚಾರವನ್ನು ಮಾಡಿದುದಾಗಿ ಕಾಣಬರುತ್ತದೆ. ಅನಂತರ ವ್ಯಾಸರಾಯರು ಮಿಥಿಲೆಯಲ್ಲಿ ಪಕ್ಷಧರಮಿಶ್ರ ಎಂಬ ಮಹಾತರ್ಕ ವಿದ್ವಾಂಸನನ್ನು ಸೋಲಿಸಿ ಕಾಶಿ, ನವದ್ವೀಪ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ವೈಷ್ಣವಭಕ್ತಿಯ ಪ್ರಚಾರವನ್ನು ಮಾಡಿದರೆಂದು ಪ್ರತೀತಿ. ಹಾಗೆಯೇ ಉತ್ತರಭಾರತದಲ್ಲಿ ಸಂಚರಿಸಿದ ರಾಜೇಂದ್ರತೀರ್ಥರ ಶಿಷ್ಯರಾದ ಜಯಧ್ವಜತೀರ್ಥರಿಗೆ ವಿಷ್ಣುಪುರಿ ಎಂಬ ಶಿಷ್ಯೋತ್ತಮರು ದೊರೆತು ಅವರು 'ಭಕ್ತಿರತ್ನಾವಳಿ' ಎಂಬ ಗ್ರಂಥವನ್ನು ರಚಿಸಿ ಭಾಗವತಧರ್ಮವನ್ನು ಪ್ರಚುರಗೊಳಿಸಿದರು. ಸುಮಾರು ೧೫ನೆಯ ಶತಮಾನದ ವೇಳೆಗೆ ಮಧ್ವಾಚಾರ್ಯರಿಂದ ಪುರಸ್ಕೃತವಾಗಿದ್ದ ವೈಷ್ಣವ ಭಕ್ತಿಯೂ ಭಾಗವತ ಧರ್ಮವೂ ಬಂಗಾಳವೂ ಸೇರಿದಂತೆ ಉತ್ತರ ಭಾರತದಲ್ಲೆಲ್ಲ ಜನಪ್ರಿಯವಾಯಿತು. ೧೫ನೆಯ ಶತಮಾನದಲ್ಲಿ ಖ್ಯಾತರಾಗಿದ್ದ ಈಶ್ವರಪುರಿ, ಕೇಶವಭಾರತಿ, ನಿತ್ಯಾನಂದ ಹಾಗೂ ಅದ್ವೈತಾಚಾರ್ಯರೆಂಬುವರ ಪಾತ್ರ ಚೈತನ್ಯ ವೈಷ್ಣವಪಂಥದ ಪ್ರಚಾರದಲ್ಲಿ ಬಹುದೊಡ್ಡದು. ವಾಸ್ತವವಾಗಿ ಈಶ್ವರಪುರಿಯವರು ಕೃಷ್ಣಚೈತನ್ಯರಿಗೆ ವೈಷ್ಣವ ಧರ್ಮದ ದೀಕ್ಷೆಯಿತ್ತರು. ಕೇಶವಭಾರತಿಯವರು ಅವರಿಗೆ ಸಂನ್ಯಾಸಾಶ್ರಮ ದೀಕ್ಷೆಯಿತ್ತ ಅಧ್ಯಾತ್ಮಗುರುಗಳು. ಉಳಿದಿಬ್ಬರಾದ ನಿತ್ಯಾನಂದ ಮತ್ತು ಅದ್ವೈತಾಚಾರ್ಯರು ಚೈತನ್ಯರ ಆಪ್ತಮಿತ್ರರು. ಇವರು ಚೈತನ್ಯರ ಜನ್ಮಸ್ಥಾನ ನವದ್ವೀಪದ ನಿವಾಸಿಗಳೇ ಆಗಿದ್ದು ಚೈತನ್ಯರ ವೈಷ್ಣವಧರ್ಮಲತೆಯನ್ನು ನೀರೆರೆದು ಪೋಷಿಸಿದರು. ಕೃಷ್ಣಚೈತನ್ಯರ ಮತವನ್ನು ಬಂಗಾಳ, ಬಿಹಾರ ಮೊದಲಾದ ಪ್ರದೇಶಗಳಲ್ಲಿ ಹರಡಿದ ಕೀರ್ತಿ ಆರು ಜನ ಗೋಸ್ವಾಮಿಗಳಿಗೆ ಸೇರಬೇಕಾದುದು. ಇಲ್ಲಿ ನೆನೆಯಬೇಕಾದ ಒಂದು ವಿಷಯವೆಂದರೆ ಈ ಆರುಮಂದಿಯಲ್ಲಿ ಪ್ರಮುಖರಾದ ಮೂವರು—ರೂಪ ಗೋಸ್ವಾಮಿ, ಸನಾತನ ಗೋಸ್ವಾಮಿ ಮತ್ತು ಜೀವ ಗೋಸ್ವಾಮಿ—ಕರ್ನಾಟಕ ಕುಲಕ್ಕೆ ಸೇರಿದವರು. ಈ ಮೂವರೂ ತಮ್ಮ ಧರ್ಮಪ್ರತಿಪಾದನೆಯ ಅಂಗವಾಗಿ ಸಂಸ್ಕೃತದಲ್ಲಿ ಪ್ರೌಢಗ್ರಂಥಗಳನ್ನು ರಚಿಸಿದ್ದಾರೆ.

"ಭಾರತೀಯ ಭಾಷಾಸಾಹಿತ್ಯದಲ್ಲಿ ಸಂತಸಾಹಿತ್ಯದ ಪ್ರಭಾವ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿರುವುದನ್ನು ನಾವು ಪರಿಶೀಲಿಸಬಹುದು. ದಕ್ಷಿಣದ ತಮಿಳುನಾಡಿನ ಶರಣರು ಭಕ್ತಿಯ ಗಂಗೆ, ಅನುಭವದ ಯಮುನೆ, ಸಿದ್ಧಾಂತದ ಸರಸ್ವತಿ—ಈ ಮೂರರ ಸಂಗಮವನ್ನು ಔತ್ತರೇಯರಿಗೆ ಒದಗಿಸಿಕೊಟ್ಟು ಉಪಕಾರಮಾಡಿದ್ದಾರೆ. ಗಂಗೆ, ಯಮುನೆ, ಬ್ರಹ್ಮಪುತ್ರ ಮೊದಲಾದ ನದಿಗಳು ಉತ್ತರದಿಂದ ದಕ್ಷಿಣಕ್ಕೆ ಹರಿದು ಬರುವಂತೆ ಭಾರತೀಯ ವಾಙ್ಮಯ ಪ್ರಪಂಚದಲ್ಲಿ ಭಕ್ತಿಯ ಗಂಗೆ, ಅನುಭವದ ಯಮುನೆ, ಸಿದ್ಧಾಂತದ ಸರಸ್ವತಿ ದಕ್ಷಿಣದಿಂದ ಉತ್ತರಕ್ಕೆ ಹರಿದಿರುವುದು ಆಶ್ಚರ್ಯಕರವಾದ ಸಂಗತಿಯಾಗಿದೆ."[73]

ಪ್ರಾಗಿತಿಹಾಸ ಯುಗದಲ್ಲಿಯೂ ಬಂಗಾಳ ಕರ್ಣಾಟಕಗಳಲ್ಲಿ ಒಂದೇ ಬಗೆಯ ಉಪಕರಣಗಳು ದೊರೆತಿರುವುದು ಅಚ್ಚರಿಯ ಸಂಗತಿ.[79] ಯಾವ ಸಂದರ್ಭಸನ್ನಿವೇಶಗಳಲ್ಲಿ ನಾಗರಿಕತೆಯ ಬೆಳವಣಿಗೆ ಈ ಎರಡು ಪ್ರದೇಶಗಳ ನಡುವೆ ಸಂಬಂಧವನ್ನು ಬೆಸೆಯಿತೆಂದು ಹೇಳುವುದು ಕಷ್ಟ. ನಾಗರಿಕತೆಯ ಉಗಮಕಾಲದಿಂದಲೇ ಈ ಎರಡು ಪ್ರದೇಶಗಳ ನಡುವೆ ಸಂಬಂಧವೇರ್ಪಟ್ಟಿತ್ತೆನ್ನುವುದು ಇಲ್ಲಿ ಗಮನಿಸಬೇಕಾದ್ದು. ಈ ನಾಗರಿಕತೆಯ ವಿನಿಮಯ ಕೇವಲ ಭೂವ್ಯಾಪಾರದ ಮೂಲಕವಾಗಿಯೇ ಅಲ್ಲದೆ ಸಮುದ್ರ ಮೂಲಕವಾಗಿಯೂ ನಡೆದಿತ್ತು. ಬಂಗಾಳದ ಮಸ್ಲಿನ್ ಮತ್ತು ರೇಷ್ಮೆ ಬಟ್ಟೆಗಳ ಮಾರಾಟಸೇರಿದಂತೆ ವಾಣಿಜ್ಯಮಹಿವಾಟು ಮೌರ್ಯರ ಕಾಲದಿಂದ ಹಿಡಿದು ಮೊಗಲರ ಕಾಲದವರೆಗೂ ಎಡೆಬಿಡದೆ ನಡೆದಿತ್ತು. ಬಂಗಾಳದ ವರ್ತಕರು ಕೇವಲ ಕಳಿಂಗ ಮತ್ತು ತೆಲುಗು ಪ್ರದೇಶಗಳವರೆಗೆ ಮಾತ್ರವಲ್ಲದೆ ಸಿಂಹಳದ ಮೂಲಕ ಕರ್ಣಾಟಕ ಗುಜರಾತುಗಳವರೆಗೂ ಹೋಗಿಬರುತ್ತಿದ್ದರೆಂದು ಕವಿಗಳಾದ ಕಂಕಣ ಮುಕುಂದರಾಮರ ಕಾವ್ಯದಲ್ಲಿ ಕಂಡುಬರುತ್ತದೆ. ಬನ್ಸಿದಾಸ್ ಕವಿಯ ಕಾವ್ಯದಲ್ಲಿ ಬಂಗಾಳ ಇತರ ಎಲ್ಲ ರಾಜ್ಯಗಳಿಗಿಂತಲೂ ವಿಶೇಷವಾಗಿ ವಿಜಯನಗರದೊಂದಿಗೆ, ಎಂದರೆ ಕರ್ಣಾಟಕದೊಂದಿಗೆ ವ್ಯಾಪಾರಸಂಬಂಧವನ್ನು ಅಧಿಕವಾಗಿ ಹೊಂದಿತ್ತು ಎಂಬುದರ ವರ್ಣನೆಯಿದೆ. ಕರ್ಣಾಟಕದಲ್ಲಿ ಪ್ರಚಲಿತವಾಗಿದ್ದ ಸೌಂದರ್ಯಸಾಧನಗಳ ಬಗ್ಗೆ ಬಂಗಾಳಿ ಯುವತಿಯರು ವಿಶೇಷ ಆಸಕ್ತಿ ತಳೆದಿದ್ದರೆನ್ನಲಾಗಿದೆ. ಕರ್ಣಾಟಕ ಶೈಲಿಯ ಆಲಂಕಾರ ಅವರಿಗೆ ಪ್ರಿಯವಾಗಿದ್ದಿರಬೇಕು.

ಸೇನವಂಶದ ವಲ್ಲಾಳಸೇನ ದೊರೆ ಧಾರ್ಮಿಕ ಆಚಾರ ವ್ಯವಹಾರಗಳ ಮೇಲೆ 'ಆಚಾರಸಾಗರ', 'ಪ್ರತಿಷ್ಠಾಸಾಗರ' ಮತ್ತು 'ದಾನಸಾಗರ' ಎಂಬ ಮೂರು ಅಧಿಕೃತ ಗ್ರಂಥಗಳನ್ನು ರಚಿಸಿದನು. ಲಕ್ಷ್ಮಣಸೇನ ರಾಜನ ಆಸ್ಥಾನದಲ್ಲಿ ಹಲಾಯುಧ, ಸರನ್, ಗೋವರ್ಧನ್ ಕವಿಗಳೇ ಅಲ್ಲದೆ 'ಗೀತಗೋವಿಂದ'ದ ಕರ್ತೃ ಕವಿ ಜಯದೇವನೂ ಇದ್ದನು. ಈತನ ದಶಾವತಾರ ಸ್ತೋತ್ರದ ಪ್ರಭಾವವನ್ನು ಪುರಂದರದಾಸರ ಕೀರ್ತನೆಗಳಲ್ಲಿ ಕಾಣಬಹುದು. ರಾಧಾಕೃಷ್ಣರ ಅಗಲಿಕೆಗೆ ಸಂಬಂಧಿಸಿದ ಒಂದು ಪದ್ಯವನ್ನು ಜಯದೇವ ಕರ್ಣಾಟಕ ಛಂದಸ್ಸಿನಲ್ಲೂ ರಚಿಸಿರುವನೆಂಬುದು ಗಮನಾರ್ಹ. ಹಾಗೆಯೇ ಬಂಗಾಳಿ ವೈಷ್ಣವ ಸಾಹಿತ್ಯದ 'ಮಧುರ ರಸ'ದ ಛಾಯೆ ವಿಜಯನಗರದ ಸ್ವರ್ಣಯುಗ ಕಾಲದಲ್ಲಿನ ವೈಷ್ಣವ ರಚನೆಗಳಲ್ಲೂ ಕಾಣಬರುತ್ತದೆ. ಚೈತನ್ಯದೇವ ಹಾಗೂ ನಿತ್ಯಾನಂದ ಮಹಾಪ್ರಭುಗಳು ಶೃಂಗೇರಿಮಠ ಮತ್ತು ಉಡುಪಿಯವರೆಗೆ ಪ್ರವಾಸಬಂದಿದ್ದು ಕೆಲ ಕಾಲ ಮಠಾಧೀಶರೊಡನೆ ತಂಗಿದ್ದರೆಂಬುದಕ್ಕೆ ದಾಖಲೆಗಳಿವೆ. ಮಧ್ವಾಚಾರ್ಯರ ಪರಂಪರೆಯನ್ನು ಬಂಗಾಳದ ರಾಜೇಂದ್ರಮಠದಲ್ಲಿ ಪಾಲಿಸಿಕೊಂಡು ಬರುತ್ತಿದೆಯೆನ್ನಲಾಗಿದೆ.

ಬಂಗಾಳದ ರಾಜಕೀಯ ದಿಗಂತದಿಂದ ಸೇನ್‌ವಂಶ ಅದೃಶ್ಯವಾದರೂ ಕರ್ಣಾಟಕ ಕಾವ್ಯದುಂದುಭಿ ಬಂಗಾಳದ ಹೃದಯದಲ್ಲಿ ಮೊಳಗುತ್ತಲೇ ಇದ್ದಿತು. ಪೂರ್ವ ಬಂಗಾಳದ ಮೈಮೆನ್‌ಸಿಂಗ್ ಗ್ರಾಮಾಂತರ ಪ್ರದೇಶದ ಕವಿ ಕಂಕ ಕರ್ಣಾಟಕದ

ಖ್ಯಾತಿವೆತ್ತ ಆಸ್ಥಾನಕವಿ ಬಿಲ್ಹಣನ 'ಚೋರಪಂಚಾಶಿಕಾ' ಎಂಬುದರ ಆಧಾರದ ಮೇಲೆ ಪದ್ಯಗಳನ್ನು ರಚಿಸಿದ. ಹದಿನೆಂಟನೆಯ ಶತಮಾನದಲ್ಲಿ ಬಂಗಾಳದ ಪಂಡಿತ ರಾಮತಾರಕ ಭಗೀಶ್ ಎಂಬವರು 'ಚೋರಪಂಚಾಶಿಕಾ'ದ ಮೇಲೆ ವ್ಯಾಖ್ಯಾನ ರಚಿಸಿದರು. ಆ ಕಾಲದ ಖ್ಯಾತ ಬಂಗಾಳಿ ಕವಿಗಳಾಗಿದ್ದ ರಾಮಪ್ರಸಾದ್ ಮತ್ತು ಭರತಚಂದ್ರರು ಕ್ರಮವಾಗಿ ತಮ್ಮ 'ವಿದ್ಯಾಸುಂದರ' ಮತ್ತು 'ಆನಂದಮಂಗಳ'ದಲ್ಲಿ ಕರ್ನಾಟಕದ ಈ ಕಥೆಯನ್ನು ಅಚ್ಚಳಿಯದಂತೆ ಮಾಡಿದ್ದಾರೆ.

ಇದೇ ರೀತಿಯಲ್ಲಿ ಧಾರ್ಮಿಕ ಹಾಗೂ ದಾರ್ಶನಿಕ ಸಾಹಿತ್ಯಕ್ಷೇತ್ರಗಳಲ್ಲೂ ಕರ್ನಾಟಕ ಹಾಗೂ ಬಂಗಾಳಗಳ ನಡುವೆ ನಿಕಟ ಸಂಪರ್ಕ ಕಾಣುತ್ತದೆ. ಖ್ಯಾತ ವಿದ್ವಾಂಸರಾದ ಸಾಯಣಾಚಾರ್ಯರು ವೇದಗಳ ಮೇಲೆ ರಚಿಸಿರುವ ಭಾಷ್ಯ ಮತ್ತು ಅವರ ಸಹೋದರ ಮಾಧವಾಚಾರ್ಯರು ರಚಿಸಿರುವ 'ಸರ್ವದರ್ಶನ ಸಂಗ್ರಹ' ಮೊದಲಾದ ಕೃತಿಗಳು ಬಂಗಾಳದ ವೈಚಾರಿಕ, ಧಾರ್ಮಿಕ ಹಾಗೂ ದಾರ್ಶನಿಕ ಸಾಹಿತ್ಯಗಳ ಮೇಲೆ ಪ್ರಭಾವ ಬೀರಿವೆ ಎನ್ನಲಾಗಿದೆ. ಈ ಪ್ರಭಾವವನ್ನು ಈಶ್ವರಚಂದ್ರವಿದ್ಯಾಸಾಗರರ 'ಸರ್ವದರ್ಶನ ಸಂಗ್ರಹ'ದಲ್ಲೂ ಕಾಣಬಹುದು. ಇದಕ್ಕೆ ಪ್ರತಿಯಾಗಿ ಸಾಯಣರು ಹಿಂದಿನ ಬಂಗಾಳಿ ವಿದ್ವಾಂಸ ಗುಣವಿಷ್ಣುವಿನ 'ಛಾಂದೋಗ್ಯ ಮಂತ್ರಭಾಷ್ಯ'ದ ಮತ್ತು ಮಾಧವಾಚಾರ್ಯರು ಬಂಗಾಳದ ಅದ್ವೈತವಾದಿ ಗೌಡಪಾದ ವಾಚಸ್ಪತಿ ಮಿಶ್ರರ ಪ್ರಭಾವಕ್ಕೆ ಒಳಗಾಗಿದ್ದರೆಂದು ತಿಳಿವಳಿಕೆಯಿದೆ. ಈ ವಿದ್ವಾಂಸರ ನಡುವೆ ಏಳು ಶತಮಾನಗಳಷ್ಟು ಅಂತರವಿದೆ. ಹಾಗೆಯೇ ಅರ್ವಾಚೀನ ಕಾಲಕ್ಕೆ ಸಂಬಂಧಿಸಿದಂತೆ ವಿಶ್ವಕವಿ ರವೀಂದ್ರರ ಭಾವಗೀತೆಗಳೂ ರಾಮಕೃಷ್ಣ ವಿವೇಕಾನಂದರ ಆಧ್ಯಾತ್ಮ ಜೀವನದೃಷ್ಟಿಯೂ ಕನ್ನಡ ನಾಡು, ನುಡಿ ಮತ್ತು ಜನತೆಯ ಮೇಲೆ ತಮ್ಮ ಪ್ರಗಾಢವಾದ ಅಂಕಿತವನ್ನು ಮೂಡಿಸಿವೆ.

ಸಾಹಿತ್ಯಿಕ : ಬಂಗಾಳಿ ಸಾಹಿತ್ಯದ ವಿವಿಧ ಪ್ರಕಾರಗಳು ಭಾಷಾಂತರಗಳ ರೂಪದಲ್ಲಿ ಕನ್ನಡದಲ್ಲಿ ಮೂಡಿರುವುದೇ ವಿಶೇಷ. ಬಂಗಾಳದ ಸಂತರೂ ದಾರ್ಶನಿಕರೂ ಸಾಹಿತಿಗಳೂ ಆದ ಹಲವು ಮಹನೀಯರ ವಿವಿಧಮುಖವಾದ ಪ್ರಭಾವ ಕನ್ನಡದ ಅನೇಕ ಧೀಮಂತರಾದ ಸಾಹಿತಿಗಳ ಮೇಲೆ ಆಗಿರುವುದು ಸ್ಪಷ್ಟ. ಅದು ಕೇವಲ ಬೆಳಕಿನ ಪ್ರತಿಫಲನದಂತಾಗದೆ, ಸೊಡರಿನಿಂದ ಸೊಡರು ಬೆಳಗಿದಂತಾಗಿ ಪರಿಸರವನ್ನೆಲ್ಲ ಬೆಳಗಿದೆ. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹರ್ಷಿ ಅರವಿಂದರಂಥ ಪುಣ್ಯಪುರುಷರ ಸಾತ್ತ್ವಿಕ ಪ್ರಭಾವ ಕನ್ನಡದ ಹಿರಿಯ ಲೇಖಕರೆನಿಸಿದ ಮಾಸ್ತಿ, ಕುವೆಂಪು, ದ. ರಾ. ಬೇಂದ್ರೆ, ಗೋಕಾಕ, ಮಧುರಚೆನ್ನ ಮುಂತಾದವರ ವ್ಯಕ್ತಿತ್ವ ಮತ್ತು ಕೃತಿಗಳ ಮೇಲೆ ಎದ್ದು ಕಾಣುತ್ತದೆ. ರಾಮಕೃಷ್ಣ ವಿವೇಕಾನಂದ ಸಾಹಿತ್ಯವೇ ಕನ್ನಡದಲ್ಲಿ ದಟ್ಟವಾಗಿ ನಿರ್ಮಾಣಗೊಂಡಿದೆ. ಇದು ಸ್ವತಂತ್ರ ಹಾಗೂ ಅನುವಾದಿತ ಎಂಬ ಎರಡು ಮುಖಗಳಿಂದಲೂ ಸಮೃದ್ಧವಾದ್ದಾಗಿದೆ. ಈ ದಿಕ್ಕಿನಲ್ಲಿ ರಾಮಕೃಷ್ಣಾಶ್ರಮ ಸಲ್ಲಿಸುತ್ತಿರುವ ಕನ್ನಡ ನುಡಿಯ ಸೇವೆ ಉಲ್ಲೇಖನಾರ್ಹವಾದ್ದು. ಆಶ್ರಮದ ಪ್ರಯತ್ನಗಳ ಮೂಲಕವೇ ರಾಮಕೃಷ್ಣ ವಿವೇಕಾನಂದರು ಕನ್ನಡ ಜನತೆಗೆ ಪರಿಚಯವಾದ್ದು. ಕುವೆಂಪು ತಮ್ಮ ಅನೇಕ ರಚನೆಗಳಲ್ಲಿ

ಈ ಮಹಾಪುರುಷರನ್ನು ಭಕ್ತಿ ಕೃತಜ್ಞತೆಗಳಿಂದ ನೆನೆಯುವುದನ್ನು ನಾವು ಕಾಣಬಹುದು
ಹಾಗೆಯೇ ಅರವಿಂದರ ಪ್ರಭಾವ ಕೂಡ ಅವರ ಮೇಲೆ ಹಾಗೂ ಬೇಂದ್ರೆ, ಮಧುರಚೆನ್ನ
ಮುಂತಾದವರ ಮೇಲೆ ಆಗಿದೆ. ಚೇತನ ಮತ್ತು ಅಚೇತನ, ಸಮಾಜ ಮತ್ತು ವ್ಯಕ್ತಿ
ವಿಚಾರ ಮತ್ತು ಅಂತರ್ಬೋಧೆ—ಇವುಗಳ ವಿಚಾರಬದ್ಧ ಸಮನ್ವಯವನ್ನು ಅರವಿಂ
ದರ್ಶನ ಪ್ರಕಟಗೊಳಿಸುತ್ತದೆ. ಸಕಲವನ್ನೂ ಗಣನೆಗೆ ತೆಗೆದುಕೊಂಡು ತೂಗಿನೋಡು
ಒಂದು ಮೌಲ್ಯಸೋಪಾನದಲ್ಲಿ ಬುದ್ಧಿಶೀಲಿಕ ಪ್ರಾಮಾಣ್ಯ ಮತ್ತು ಅತೀಂದ್ರಿಯ ಬೋಧೆ
ಸೌಂದರ್ಯೋಪಾಸನೆ ಮತ್ತು ಸಮಾಜಸೇವೆ, ಕರ್ಮ ಮತ್ತು ಧ್ಯಾನ—ಇಂಥ ಪರಸ್ಪ
ವಿರುದ್ಧವಾಗಿ ಮೇಲುನೋಟಕ್ಕೆ ತೋರುವುದರಲ್ಲಿ ಸಾಮ್ಯ ಕಲ್ಪಿಸುತ್ತದೆಯಾದ್ದರಿಂದ
ಅದು ಉಪಾದೇಯ. ಮುಖ್ಯವಾಗಿ ಈ ಸಮನ್ವಯದ ಪೂರ್ಣದೃಷ್ಟಿ ಕನ್ನಡ ಲೇಖಕರನ
ಅರವಿಂದರೆಡೆಗೆ ಆಕರ್ಷಿಸಿದೆ; ಅರವಿಂದ ಸಾಹಿತ್ಯವೂ ತಕ್ಕಮಟ್ಟಿಗೆ ಪ್ರಕಟಗೊಂಡಿದೆ

ಗುರುದೇವ ರವೀಂದ್ರನಾಥ ಠಾಕೂರರ ಬಗ್ಗೆಯೂ ಕನ್ನಡನಾಡಿನಲ್ಲಿ ಈ ಒಲವುಂಟ
"ಭಾರತೀಯ ಕಾವ್ಯ ಅರಳಿ ಘಮಘಮಿಸುವ ಹೂವಾಗಿದ್ದು, ಅತ್ಯುನ್ನತಿಯ ಶಿಖರವನ
ಸ್ಪರ್ಶಿಸಿದ್ದು ಮೂರು ಸಲ; ಮೊತ್ತಮೊದಲು ಆದಿಕವಿ ವಾಲ್ಮೀಕಿಯ ತಪ್ರೋಸನ್ನಿ
ಯಲ್ಲಿ, ಎರಡನೆಯದಾಗಿ ಕವಿಕುಲಗುರು ಕಾಳಿದಾಸನ ಕಲಾಜಾಲದಲ್ಲಿ; ಆಮೇ
ಈಚೆಗೆ ಗುರುದೇವ ರವೀಂದ್ರನಾಥ ಠಾಕೂರರ ಕಾವ್ಯಸಿದ್ಧಿಯಲ್ಲಿ. ರವೀಂದ್ರನಾಥ
ಸರೋವರ ರೂಪದಲ್ಲಿದ್ದ ಬಂಗಾಳಿ ಸಾಹಿತ್ಯಕ್ಕೆ ಆಳವನ್ನೂ ವಿಸ್ತಾರವನ್ನೂ ದೊರಕಿ
ಕೊಟ್ಟರು" ಎಂದು ಕನ್ನಡ ಲೇಖಕರೊಬ್ಬರು ರವೀಂದ್ರರ ಪ್ರಾಮುಖ್ಯದ ಬಗ್ಗೆ
ಘನತೆಯ ಬಗ್ಗೆ ಕೊಂಡಾಡಿದ್ದಾರೆ.[೩೦] ೧೯೧೩ರಲ್ಲಿ ರವೀಂದ್ರರಿಗೆ ನೊಬೆಲ್ ಪಾ
ತೋಷಕ ದೊರೆತಂದಿನಿಂದ, ರವೀಂದ್ರರ ಪ್ರಭಾವ ಇತರ ಎಲ್ಲ ದೇಶಭಾಷೆಗಳ ಸಾಹಿ
ಗಳ ಮೇಲೆ ಬೀಳಲಾರಂಭಿಸಿತು. ಅವರ ಕೃತಿಗಳು ಬೇರೆ ಬೇರೆ ಭಾಷೆಗಳಿಗೆ ತ್ವರಿಯಾ
ಭಾಷಾಂತರಗೊಂಡವು. ರವೀಂದ್ರರ ಕವಿಹೃದಯದ ಅನುಭವ ಆಳವಾದ್ದು, ಆಧ್ಯಾತ್ಮಿ
ಅನುಭೂತಿ ಉನ್ನತಮಟ್ಟದ್ದು. ಅವರ ಕವಿತೆಯ ಮೋಡಿಗೆ ಕನ್ನಡ ಕವಿಗಳು ಮರು
ಗಿದ್ದರೆ ಆಶ್ಚರ್ಯವೇನಿಲ್ಲ. ರವೀಂದ್ರನಾಥ ಠಾಕೂರರ ಕಾದಂಬರಿಗಳು, ಸಣ್ಣಕಥೆಗಳ
ಕವಿತೆಗಳು, ನಾಟಕಗಳು, ಪ್ರಬಂಧಗಳು, ಬಾಲಸಾಹಿತ್ಯ ಮುಂತಾದವು ವಿಪುಲವಾ
ಅನುವಾದಗೊಂಡಿವೆ. ಮಾತ್ರವಲ್ಲದೆ ಅವರನ್ನು ಕುರಿತ ಬರೆವಣಿಗೆಯೂ ಬೇಕಾ
ದಷ್ಟಾಗಿದೆ. ಇವುಗಳಲ್ಲಿ ಹಲವರನ್ನು ಭಾರತೀಯ ಸಾಹಿತ್ಯ ಅಕಾಡೆಮಿಯೂ ಇತರ ಸಂ
ಗಳೂ ವ್ಯಕ್ತಿಗಳೂ ಹೊರತಂದಿದ್ದಾರೆ. ಮಾಸ್ತಿ, ಕುವೆಂಪು ಮೊದಲಾದವರು ರವೀಂದ್ರ
ವ್ಯಕ್ತಿತ್ವ ಸಾಹಿತ್ಯಗಳನ್ನು ಕುರಿತಂತೆ ತಮ್ಮ ಮೆಚ್ಚುಗೆಯನ್ನೂ ವಿಮರ್ಶೆಯನ್ನೂ ವ್ಯ
ಪಡಿಸಿದ್ದಾರೆ.

ಕನ್ನಡ ಕಾದಂಬರಿ ಪ್ರಪಂಚಕ್ಕೆ ಬಂಗಾಳಿಗಳ ಕೊಡುಗೆ ಮಿಗಿಲಾದ್ದು. ವಾಸ್ತ
ವಾಗಿ ಕನ್ನಡದಲ್ಲಿ ಕಾದಂಬರಿಗಳ ಆವಿರ್ಭಾವವಾದುದು ಬಂಗಾಳಿ ಕಾದಂಬರಿಕಾ
ಪ್ರಭಾವದಿಂದಲೇ. ಬಂಕಿಮಚಂದ್ರ, ಶರತ್‌ಚಂದ್ರ, ರಮೇಶಚಂದ್ರ ದತ್ತ, ವಿ

ಮಿತ್ರ, ಭವಾನಿ ಭಟ್ಟಾಚಾರ್ಯ ಮುಂತಾದ ಖ್ಯಾತ ಬಂಗಾಳಿ ಕಾದಂಬರಿಕಾರರ ಕೃತಿಗಳು ಕನ್ನಡಕ್ಕೆ ಬಂದಿವೆ. "ಆಧುನಿಕ ಕನ್ನಡ ಸಾಹಿತ್ಯವಾಹಿನಿಗೆ ವಂಗಭಾಷೆಯ ಕಾದಂಬರಿಗಳ ಕನ್ನಡ ರೂಪಾಂತರವೆ ತಲೆಕಾವೇರಿಯೆಂದು ಹೇಳಬಹುದು" ಎಂಬ ಅಭಿಪ್ರಾಯವಿದೆ. ಕನ್ನಡಿಗರಿಗೆ ಮೊದಲು ಇಂಗ್ಲಿಷ್ ಸಾಹಿತ್ಯದ ಪರಿಚಯವಾದದ್ದು ಬಂಗಾಳದ ವಂಗಸಾಹಿತ್ಯದ ಮೂಲಕ. ಈ ದೃಷ್ಟಿಯಿಂದ ಬಿಂ. ಶ್ರೀನಿವಾಸಲಿ ವೆಂಕಟಾಚಾರ್ಯರ ಐತಿಹಾಸಿಕ ಪ್ರಮುಖ್ಯ ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಉಲ್ಲೇಖನೀಯ. ಆಧುನಿಕ ಬಂಗಾಳಿ ಸಾಹಿತ್ಯದ ಆಚಾರ್ಯಪುರುಷನೆಂದೂ ಭಾರತವರ್ಷದ ವಾಲ್ಟರ್ ಸ್ಕಾಟ್ ಎಂದೂ ಖ್ಯಾತಿಪಡೆದಿರುವ ಬಂಕಿಮಚಂದ್ರರ 'ಆನಂದಮಠ', 'ದುರ್ಗೇಶ ನಂದಿನಿ', 'ವಿಷವೃಕ್ಷ', 'ಕೃಷ್ಣಕಾಂತನ ಉಯಿಲು' ಮುಂತಾದ ಅನೇಕ ಕಾದಂಬರಿಗಳನ್ನೇ ಅಲ್ಲದೆ ಇನ್ನೂ ಹಲವಾರು ಬಂಗಾಳಿ ಸಾಹಿತಿಗಳ ಕೃತಿಗಳನ್ನು ಕನ್ನಡಿಸಿ ಇವರು ಮಹದುಪಕಾರ ಮಾಡಿದ್ದಾರೆ.

ಬಂಕಿಮರನ್ನೇ ಅಲ್ಲದೆ ಬಿ. ವೆಂಕಟಾಚಾರ್ಯರು ಹರಪ್ರಸಾದಶಾಸ್ತ್ರಿಯವರ ಬಂಗಾಳಿ ಪ್ರಬಂಧವೊಂದನ್ನು 'ಭಾರತಮಹಿಳಾ' ಎಂಬ ಹೆಸರಿನಿಂದ ಭಾಷಾಂತರಿಸಿದ್ದಾರೆ. ಬಾಬೂ ಸತ್ಯೇಂದ್ರ ಕುಮಾರರ ರಚನೆಯೊಂದನ್ನವಲಂಬಿಸಿ 'ಸಾಧನಾ' ಎಂಬ ಸ್ವತಂತ್ರ ಪತ್ತೇದಾರಿ ಕಾದಂಬರಿಯನ್ನು ರಚಿಸಿದ್ದಾರೆ. 'ಉನ್ಮಾದಿನಿ' ಯೋಗೇಂದ್ರನಾಥ ಬಾಬೂರವರ ಸಾಮಾಜಿಕ ರಚನೆಯೊಂದರ ಭಾಷಾಂತರ. ಅಲ್ಲದೆ ಸತೀಶಚಂದ್ರ ಬಾಬುಗಳ 'ಹಿರಣ್ಮಯಿ'ಯನ್ನು ಹರಿಲಾಲ ವಂದ್ಯೋಪಾಧ್ಯಾಯರ 'ಅಮೃತಪುಲಿನ' ವನ್ನು ರಮೇಶಚಂದ್ರರ 'ವಂಗವಿಜೇತ'ವನ್ನು ಅವರು ಭಾಷಾಂತರಿಸಿಕೊಟ್ಟಿದ್ದಾರೆ. ಹಾಗೆಯೇ ಬಂಕಿಮರ ಕಾದಂಬರಿಗಳನ್ನು ಅನೇಕರು ಈಚೆಗೆ ಕೂಡ ಹೊಸ ಶೈಲಿಯಲ್ಲಿ ಭಾಷಾಂತರಿಸುತ್ತಲೇ ಬಂದಿದ್ದಾರೆ.

ಬಂಕಿಮರ ಅನಂತರ ಕನ್ನಡದಲ್ಲಿ ಅತ್ಯಂತ ಖ್ಯಾತಿ ಪಡೆದ ಕಾದಂಬರಿಕಾರರೆಂದರೆ ಶರತ್ ಚಂದ್ರ ಚಟ್ಟೋಪಾಧ್ಯಾಯ. ಇವರು ಸಣ್ಣಕಥೆ, ಕಾದಂಬರಿಗಳೂ ಸೇರಿ ಒಟ್ಟು ಐವತ್ತು ಹೆಚ್ಚು ಕೃತಿಗಳನ್ನು ರಚಿಸಿದರು. ಕುಲವಧು, ಅರಕ್ಷಿತಾ, ವಿಪ್ರದಾಸ, ವಿದ್ಯುಲ್ಲತಾ, ದೇವತಾ, ಸ್ವಾಮಿ, ಸುಮತಿ, ಅನುರಾಧಾ, ವೃಂದಾವನ, ರಾಜಲಕ್ಷ್ಮಿ, ವಿಜಯಾ, ದೇವದಾಸ, ಹೆಣ್ಣಿನ ಸ್ಥಾನಮಾನ, ಭಾರತಿ (ಅಧಿಕಾರ), ಶೇಷಪ್ರಶ್ನೆ, ಚರಿತ್ರಹೀನ, ಚಕ್ರ, ಷೋಡಶಿ, ಅರಗಿನ ಮನೆ, ಶ್ರೀಕಾಂತ, ವೈಕುಂಠನ ಮೃತ್ಯುಪತ್ರ, ಅಭ್ಯಾಜಿ, ಬಾಲ್ಯದ ಕನಸುಗಳು, ಬಂದುವಿನ ಮಗ, ಮಂದಿರ, ಚಿತ್ರ, ಏಕಾದಶ, ವೈರಾಗಿ, ಸ್ವಯಂಸಿದ್ಧ ಅನುರಾಗಿನಿ, ಪ್ರೇಮಪಥ, ಗರ್ವಭಂಗ, ಅನುಪಮೆಯ ಪ್ರೇಮ, ಮಂಗಳಸೂತ್ರ, ಬ್ರಾಹ್ಮಣಕನ್ಯೆ, ಮಹೇಶ, ಮಹಾಸತಿ, ಶುಭದಾ, ಕಾಶಿನಾಥ ಈ ಮುಂತಾದವು ಕನ್ನಡಕ್ಕೆ ಅನುವಾದಗೊಂಡು ಜನಪ್ರಿಯತೆ ಗಳಿಸಿವೆ.

ಇವೇ ಅಲ್ಲದೆ ರಮೇಶಚಂದ್ರ ದತ್ತ, ಭವಾನಿ ಭಟ್ಟಾಚಾರ್ಯ, ವಿಮಲಮಿತ್ರ, ದ್ವಿಜೇಂದ್ರಲಾಲ್ ರಾಯ್ ಇವರ ರಚನೆಗಳಲ್ಲಿ ಕೆಲವು ಕನ್ನಡದಲ್ಲಿ ಬಂದಿವೆ. ಬಂಗಾಳಿ

ಕೃತಿಗಳನ್ನು ಕನ್ನಡದಲ್ಲಿ ಭಾಷಾಂತರ ಮಾಡಿಸಿ ಪ್ರಕಟಗೊಳಿಸಿದ ಕೀರ್ತಿಯು ಹಿಂದೆ ಪಾಲು ಹುಬ್ಬಳ್ಳಿಯ ಸಾಹಿತ್ಯಭಂಡಾರ, ಮಿಂಚಿನಬಳ್ಳಿ ಪ್ರಕಾಶನಗಳಿಗೆ, ಮೈಸೂರಿನ ಕಾವ್ಯಾಲಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯವರಿಗೆ ಸಲ್ಲಬೇಕು.

ಈ ರೀತಿಯಾಗಿ ಕನ್ನಡ ಮತ್ತು ಬಂಗಾಳಿ ಸಾಹಿತ್ಯಗಳ ಸಂಬಂಧ ಬೆಳೆಯುತ್ತಲೇ ಬಂದಿದೆ. ಇದೇ ರೀತಿಯಲ್ಲಿ ಬಂಗಾಳಿ ಜನತೆಯ ಸೇವೆ ಕರ್ನಾಟಕಕ್ಕೂ ಇಲ್ಲಿಯ ಜನರ ಸೇವೆ ಬಂಗಾಳಕ್ಕೂ ದೊರೆಯುತ್ತಲೇ ಬಂದಿದೆ. ವಿಶ್ವಕವಿಯೆಂದು ಖ್ಯಾತಿವೆತ್ತಿರುವ ರವೀಂದ್ರನಾಥ ಠಾಕೂರರು ತಮ್ಮ ಬಾಲ್ಯದ ಕೆಲವು ದಿನಗಳನ್ನು ಕನ್ನಡ ನೆಲದ ಕಾರವಾರದಲ್ಲಿ ಕಳೆದದ್ದುಂಟು. ಸನಾತನ ಧರ್ಮವನ್ನು ವಿಶ್ವವ್ಯಾಪ್ತಿಗೊಳಿಸುವಂತೆ ಧರ್ಮಪ್ರಚಾರಕ್ಕಾಗಿ ಸ್ವಾಮಿ ವಿವೇಕಾನಂದರನ್ನು ಅಮೆರಿಕೆಗೆ ಕಳಿಸಿದವರು ಮೈಸೂರಿನ ದೊರೆ ಚಾಮರಾಜ ಒಡೆಯರ್ ಅವರು. ಬಂಗಾಳದ ಡಾ. ಬ್ರಜೇಂದ್ರನಾಥ ಶೀಲ್, ಸರ್ ಆಲ್ಬಿಯನ್ ಬ್ಯಾನರ್ಜಿ, ನ್ಯಾಯಮೂರ್ತಿ ದಾಸಗುಪ್ತ ಮುಂತಾದವರು ಕನ್ನಡ ಜನತೆಯ ಸೇವೆಸಲ್ಲಿಸಿ ಈ ಎರಡು ಭಾಷಾಪ್ರಾಂತಗಳ ನಡುವಣ ಬಾಂಧವ್ಯಕ್ಕೆ ಸ್ನೇಹಸೇತುಗಳಾಗಿದ್ದಾರೆ. ಅಲ್ಲದೆ ೩೫ನೆಯ ಬಂಗಾಳಿ ಸಾಹಿತ್ಯ ಸಮ್ಮೇಳನ ೧೯೫೯ರ ಡಿಸೆಂಬರಿನಲ್ಲಿ ಬೆಂಗಳೂರಿನಲ್ಲಿ ನಡೆದುದು ಈ ಮಧುರ ಬಾಂಧವ್ಯಕ್ಕೆ ಕುರುಹಾಗಿದೆ.[೮೧]

ಕೇವಲ ಸಾಹಿತ್ಯಿಕ ಕ್ಷೇತ್ರದಲ್ಲೇ ಅಲ್ಲದೆ ರಾಜಕೀಯ, ಪತ್ರಿಕೋದ್ಯಮ, ಚಲನ ಚಿತ್ರ ಮುಂತಾದ ಕ್ಷೇತ್ರಗಳಲ್ಲೂ ಕರ್ನಾಟಕ–ಬಂಗಾಳಗಳ ನಡುವೆ ಪರಸ್ಪರ ಕೊಳ್ಳುಕೊಡೆಗಳು ನಡೆದಿವೆ.

## ಕನ್ನಡ–ಹಿಂದಿ

ಕನ್ನಡ–ಹಿಂದೀ ಭಾಷೆಗಳ ನಡುವಣ ಸಂಬಂಧವನ್ನು ಹಲವು ರೀತಿಗಳಲ್ಲಿ ಪರಿಗಣಿ ಬಹುದು. ಕನ್ನಡ ದ್ರಾವಿಡ ಭಾಷೆಗಳಲ್ಲಿ ಒಂದು. ಇಂಡೋ–ಯೂರೋಪಿಯನ ಭಾಷಾವರ್ಗಕ್ಕೆ ಸೇರಿದ ಆಧುನಿಕ ಆರ್ಯಭಾಷೆಗಳ ಗುಂಪಿಗೆ ಸೇರಿದ್ದು ಹಿಂದಿ. ಅದ ಉಗಮ ಶೌರಸೇನೀ ಅಪಭ್ರಂಶದಿಂದ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ ಇದರಿಂದ ವ್ಯಾಕರಣದ ದೃಷ್ಟಿಯಿಂದ ಕನ್ನಡ ಹಿಂದಿಗಳ ನಡುವೆ ಸಾಕಷ್ಟು ವ್ಯತ್ಯಾ ಗಳಿವೆ ಎಂಬುದು ಸ್ಪಷ್ಟ. ಶಬ್ದಕೋಶದ ದೃಷ್ಟಿಯಿಂದ ಕನ್ನಡ ಹಿಂದೀ ಎರಡೂ ಸಂಸ್ಕೃ ಶಬ್ದಭಂಡಾರದಿಂದ ಉಪಕೃತವಾದವು. ಆರ್ಯಭಾಷೆಯಾದುದರಿಂದ ಹಿಂದಿಯಲ್ ಸಂಸ್ಕೃತ ಪದಗಳ ನೇರವಾದ ಬಳಕೆ ಸ್ವಲ್ಪ ಹೆಚ್ಚು ಎಂದು ಕಾಣಬರುತ್ತದೆ. ಇದ ಇಂಗ್ಲಿಷ್ ಮೊದಲಾದ ಪಾಶ್ಚಾತ್ಯ ಭಾಷೆಗಳಿಂದಲೂ ಶಬ್ದಸ್ವೀಕರಣ ಅಳವಡಿಕೆಗಳು ನ ದಿವೆ. ದ್ರಾವಿಡ ಮೂಲವಾಗಿರುವ ಶಬ್ದಗಳು ಕನ್ನಡದ ಹಾಗೂ ಉರ್ದು, ಪಾರಸಿ, ಅರ ಮುಂತಾದ ಭಾಷೆಗಳ ಶಬ್ದಗಳು ಹಿಂದಿಯ ಶಬ್ದಭಂಡಾರವನ್ನು ಬೆಳಸಿವೆ. ಈ ರೀತಿಯಾ ಈ ಎರಡು ಭಾಷೆಗಳಲ್ಲಿ ಸಮಾನತೆ ಪ್ರತ್ಯೇಕತೆಗಳು ಕೆಲಮಟ್ಟಿಗೆ ಕಂಡುಬರುತ್ತವೆ.

ಕನ್ನಡ ಮತ್ತು ಹಿಂದಿ ಎರಡು ಭಾಷೆಗಳೂ ಒಂದೇ ರೀತಿಯ ಸಂಸ್ಕೃತಿ, ನಾಗರಿಕತೆ ಜನಜೀವನಗಳನ್ನು ಹಂಚಿಕೊಂಡಿರುವುದರಿಂದ ಪೂರ್ವೋಕ್ತ ಸಂಕರಗಳು ಇವೆರಡು ಸಾಹಿತ್ಯಗಳ ನಡುವಣ ಸೌಹಾರ್ದಕ್ಕೆ ಹೆಚ್ಚು ಆಸರೆಯನ್ನಿತ್ತಿವೆ. ಭಾಷಾಮಾಧ್ಯಮ ಬೇರೆ; ಸಾಹಿತ್ಯದ ಮೆರುಗು, ಗುರಿ ಎಲ್ಲವೂ ಒಂದೇ.

ರಾಜಕೀಯ : ಭಾರತದ ಇತಿಹಾಸದಲ್ಲಿ ದಕ್ಷಿಣ ಭಾರತದ ಅರಸರು ಉತ್ತರ ಭಾರತದ ಅರಸರ ಮೇಲೆ, ಅಲ್ಲಿನವರು ಇಲ್ಲಿನವರ ಮೇಲೆ ದಂಡೆತ್ತಿಹೋದ ರಾಜಕೀಯ ವಿದ್ಯಮಾನಗಳು ಆಗಾಗ ಜರುಗಿವೆ. ಇವುಗಳ ವಿಷಮಪರಿಣಾಮಗಳು ಏನೇ ಇರಲಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಆಗಾಗ ಸೌಹಾರ್ದಗಳು ಏರ್ಪಾಡಾಗಿವೆ. ಕತ್ತಿ ಹಿಡಿದ ಕವಿಗಳನ್ನು ಈ ಕಾಲದಲ್ಲಿ ನಾವು ನೋಡಬಹುದು. ಕನ್ನಡ ಕವಿ ಪಂಪನನ್ನೂ ಹಿಂದೀ ಕವಿ ಚಂದ ಬರದಾಯಿಯನ್ನೂ ಉದಾಹರಿಸಬಹುದು. ಇಮ್ಮಡಿ ಅರಿಕೇಸರಿ ಹಾಗೂ ಪೃಥ್ವೀರಾಜನಂಥ ಅರಸರ ಆಶ್ರಯದಲ್ಲಿ ವೀರಸಾಹಿತ್ಯ ಅಭೂತಪೂರ್ವವಾಗಿ ಬೆಳೆದುಬಂತು. ಪಂಪಯುಗದ ವೀರಕವಿಗಳಲ್ಲಿ ಕಾಣಬರುವ ಶೌರ್ಯ ಪ್ರದರ್ಶನವನ್ನೇ ಹಿಂದಿಯ ವೀರಗಾಥಾ ಕಾಲದ ರಾಸೋ ಕಾವ್ಯಗಳಲ್ಲಿ ಕಾಣಬಹುದಾಗಿದೆ. ಇವು ಸಾಹಿತ್ಯರಚನೆಯ ಧ್ಯೇಯ ಧೋರಣೆಗಳು ಸಮಾನ ಪರಿಸರಗಳಲ್ಲಿ ಸಮಾನವಾಗಿರುತ್ತವೆ ಎಂಬುದರ ನಿದರ್ಶನಗಳೆನ್ನಲು ಅಡ್ಡಿಯಿಲ್ಲ.

ಕನ್ನಡ ಹಾಗೂ ಹಿಂದೀ ಪ್ರದೇಶಗಳ ರಾಜಕೀಯ ಸಂಬಂಧಗಳು ಶತಮಾನಗಳ ಹಿಂದಿನದು. ಕನ್ನಡನಾಡಿನ ಅನೇಕ ಭಾಗಗಳು ಮೌರ್ಯಚಕ್ರಾಧಿಪತ್ಯಕ್ಕೆ ಒಳಪಟ್ಟಿತ್ತೆಂಬುದು ಬ್ರಹ್ಮಗಿರಿ, ಜಟಿಂಗ ರಾಮೇಶ್ವರ ಮುಂತಾದೆಡೆಗಳಲ್ಲಿ ಸಿಕ್ಕಿರುವ ಅಶೋಕನ ಶಿಲಾಶಾಸನಗಳಿಂದ ವ್ಯಕ್ತವಾಗುತ್ತದೆ. ಉತ್ತರ ಭಾರತದಲ್ಲಿ ಒಮ್ಮೆ ಘೋರ ಕ್ಷಾಮ ತಲೆದೋರಿದಾಗ ಮೌರ್ಯವಂಶದ ಚಂದ್ರಗುಪ್ತ ತನ್ನ ಧರ್ಮಗುರು ಶ್ರುತಕೇವಲಿ ಭದ್ರಬಾಹುವಿನೊಡನೆ ಶ್ರವಣಬೆಳಗೊಳಕ್ಕೆ (ಕಟವಪ್ರ) ಬಂದು ನೆಲಸಿದನೆಂದು ಜೈನಧರ್ಮದ ಇತಿಹಾಸದಿಂದ ತಿಳಿದುಬರುತ್ತದೆ. ಈಗ ಹೇಗೋ ಹಿಂದೆಯೂ ಹಾಗೆಯೇ ಉತ್ತರ ಭಾರತದಲ್ಲಿ ಕಾಶಿ, ಗಯೆ ಮುಂತಾದವು ಪುಣ್ಯಕ್ಷೇತ್ರಗಳಾಗಿದ್ದಂತೆ ಜೈನರಿಗೆಲ್ಲ ಶ್ರವಣಬೆಳಗೊಳ ಪವಿತ್ರ ಕ್ಷೇತ್ರವಾಗಿದ್ದಿತು. ಕ್ರಿ.ಶ. ೪ನೆಯ ಶತಮಾನದಲ್ಲಿ ಕದಂಬ ಮಯೂರಶರ್ಮ ಸೇಂದ್ರಕ, ತ್ರಿಕೂಟ, ಆಭೀರ ಮುಂತಾದ ರಾಜ್ಯಗಳನ್ನು ಗೆದ್ದು ಅನೇಕ ವೈದಿಕ ಕುಟುಂಬಗಳು ಗಂಗಾಪ್ರಾಂತದಿಂದ ಕರ್ಣಾಟಕಕ್ಕೆ ಬಂದು ನೆಲಸುವಂತೆ ಮಾಡಿದನೆಂದು ತಿಳಿಯುವುದು. ಈ ಕದಂಬ ಕಾಕುತ್ಸ್ಥವರ್ಮನು ಗುಪ್ತವಂಶದ ಅರಸರೊಡನೆ ವೈವಾಹಿಕ ಸಂಬಂಧವನ್ನು ಬೆಳಸಿದ್ದನೆಂಬುದೂ ಈತನ ಮೊಮ್ಮಗ ಮೃಗೇಶವರ್ಮನ ಪಂಡತಿ ಪ್ರಭಾವತಿ ಗುಪ್ತವಂಶದವಳೆಂಬುದೂ ತಿಳಿದಿವೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಗಂಗರಾಜರ ಒಂದು ಶಾಖೆ ಕಳಿಂಗ ದೇಶದಲ್ಲಿಯೂ ೫ನೆಯ ಶತಮಾನದ ಉತ್ತರಾರ್ಧದಲ್ಲಿ ಇನ್ನೊಂದು ಶಾಖೆ ನೇಪಾಳದಲ್ಲಿಯೂ ಸ್ಥಾಪನೆಗೊಂಡವು. ಸಿಂಧುದೇಶದ ಅರಸರೊಡನೆಯೂ ಗಂಗರು ಸಂಬಂಧವನ್ನು ಬೆಳಸಿದ್ದರು.

ಗಂಗರಾಜ ದುರ್ವಿನೀತನ ಮಗ ಮುಷ್ಕರ ಸಿಂಧುದೇಶದ ಅರಸುಕುವರಿಯನ್ನು ವಿವಾಹ ವಾಗಿದ್ದನು. ಕ್ರಿ.ಶ. ೯೩೮–೫೩ರ ಅವಧಿಯಲ್ಲಿ ಬೂತುಗನು ಚಿತ್ರಕೂಟದ ಮೇಲೆ ದಂಡೆತ್ತಿಹೋಗಿ, ಅವರಿಂದ ಸಪ್ತಮಾಳವ ಪ್ರದೇಶವನ್ನು ಕಸಿದುಕೊಂಡು ಅದಕ್ಕೆ ಮಾಳ್ವಗಂಗ ಎಂದು ಹೆಸರಿಟ್ಟನು.[೪೨]

ಗಂಗರ ಅನಂತರ ಕರ್ನಾಟಕದಲ್ಲಿ ಪ್ರಾಬಲ್ಯಕ್ಕೆ ಬಂದ ಚಾಲುಕ್ಯರು ಕನ್ನಡನಾಡಿನ ವಿಜಯಪತಾಕೆಯನ್ನು ಉತ್ತರದಲ್ಲಿಯೂ ಮೆರೆಸಿದರು. ಇಮ್ಮಡಿ ಪುಲಿಕೇಶಿ ಉತ್ತರ ಭಾರತದ ಚಕ್ರವರ್ತಿ ಶ್ರೀಹರ್ಷನನ್ನು ಸೋಲಿಸಿದ. ಚಾಲುಕ್ಯ ವಿನಯಾದಿತ್ಯ ಉತ್ತರದ ಆದಿತ್ಯಸೇನನನ್ನು ಪರಾಭವಗೊಳಿಸಿ ಗಂಗಾ–ಯಮುನಾ ಪ್ರಾಂತವನ್ನು ವಶಪಡಿಸಿ ಕೊಂಡಿದ್ದ ಬಗ್ಗೆ ಐತಿಹಾಸಿಕ ದಾಖಲೆಗಳುಂಟು. ಕ್ರಿ.ಶ. ೮ರಿಂದ ೧೧ನೆಯ ಶತಮಾನದ ವರೆಗಿನ ಮುನ್ನೂರು ವರ್ಷಗಳ ಅವಧಿಯನ್ನು 'ರಾಷ್ಟ್ರಕೂಟ ಯುಗ' ಎಂದು ಕರೆಯುವ ಮಟ್ಟಿಗೆ ಮೇಲಾದುದ್ದು, ರಾಷ್ಟ್ರಕೂಟರ ರಾಜಕೀಯ ಔನ್ನತ್ಯ. ಉತ್ತರದಲ್ಲಿ ಮಾಹೀ ಮತ್ತು ನರ್ಮದಾ ನದಿಗಳ ಪರ್ಯಂತ ರಾಜ್ಯವನ್ನು ವಿಸ್ತರಿಸಿದ ಯಶಸ್ಸು ಎರಡನೆಯ ದಂತಿದುರ್ಗನಿಗೆ ಸೇರುತ್ತದೆ. ಗುರ್ಜರ ಅರಸರನ್ನು ಸೋಲಿಸಿದುದೇ ಅಲ್ಲದೆ ವಿಂಧ್ಯಾಚಲ ಪ್ರಾಂತದ ಅನೇಕ ರಾಜರನ್ನು ಸದೆಬಡಿದ ಕೀರ್ತಿ ಮೂರನೆಯ ಗೋವಿಂದನದು. ಮಾಳವ, ಕನ್ಯಾಕುಬ್ಜ ಮೊದಲಾದ ಪ್ರದೇಶಗಳು ಈತನ ಆಳ್ವಿಕೆಗೊಳಗಾದವು. ರಾಷ್ಟ್ರ ಕೂಟರ ಕಾಲದಲ್ಲಿ ಕರ್ನಾಟಕದ ಗಜಸೈನ್ಯ ಗಂಗಾನದಿಯಲ್ಲಿ ಮಿಂದು ಮಲಯಾಚಲ ದಲ್ಲಿ ವಿಶ್ರಾಂತಿ ಪಡೆಯುತಂತೆ. ಮೂರನೆಯ ಕೃಷ್ಣನ ಆಳ್ವಿಕೆಯ ಕಾಲದ ಹೊತ್ತಿಗಂತೂ ಭಾರತದ ಮುಕ್ಕಾಲುಪಾಲು ಭಾಗ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತು.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕೂಡ ಎಡೆಬಿಡದೆ ಕನ್ನಡ ವೀರರ ಜೈತ್ರಯಾತ್ರೆ ಉತ್ತರ ಭಾರತದ ಮೇಲೆ ನಡೆಯಿತು. ಧಾರಾನಗರಿಯ ಅರಸ ಭೋಜರಾಜನನ್ನು ಜಯಸಿಂಹ ಹಿಮ್ಮೆಟ್ಟಿಸಿದ. ಹಾಗೆಯೇ ಕಲಚುರಿ ವಂಶದ ಮೊದಲ ಅರಸರು ಕಾಲಂಜರ, ಡಾಹಳ ಅಥವಾ ಬುಂದೇಲ್‌ಖಂಡ ಮೊದಲಾದ ಮಂಡಳಗಳೊಡನೆ ಸಂಪರ್ಕವಿರಿಸಿ ಕೊಂಡಿದ್ದರು. ಹೊಯ್ಸಳ ಎಱೆಯಂಗ ಕ್ರಿ.ಶ. ೧೧೩೭ರಲ್ಲಿ ಮಾಳವದ ಮೇಲೆ ದಂಡೆತ್ತಿ ಹೋಗಿ ಧಾರಾನಗರವನ್ನು ಸುಟ್ಟನೆಂದು ಚರಿತ್ರೆ ತಿಳಿಸುತ್ತದೆ.

ಕನ್ನಡನಾಡಿನ ರಾಜವಂಶಗಳು ಉತ್ತರ ಭಾರತದ ಮೇಲೆ ಬೀರಿದ ಅಚ್ಚಳಿಯದ ರಾಜಕೀಯ ಪ್ರಭಾವದ ಅಂಗವಾಗಿ ಕನ್ನಡನಾಡಿನ ಶೌರ್ಯಸಾಹಸಗಳೂ ಕಲೆ ಸಂಸ್ಕೃತಿ ಗಳೂ ಅಲ್ಲಿ ತಮ್ಮ ಪ್ರಭಾವ ಬೀರಿವೆ. ಕರ್ನಾಟಕದ ರಾಷ್ಟ್ರಕೂಟರೇ ಕಾಲಾನುಕ್ರಮ ವಾಗಿ ರಾಜಾಸ್ಥಾನದ ರಾಠೋಡರಾದರೆಂದೂ ಚಾಲುಕ್ಯರೇ ಸೋಲಂಕಿಗಳಾದರೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ನೇಪಾಳದ ಸೈನ್ಯದಲ್ಲಿ ಕರ್ನಾಟಕದ ಯೋಧರಿದ್ದ ರೆನ್ನಲಾಗಿದೆ. ಪ್ರತೀಹಾರರೂ ಪರಮಾರರೂ ಕರ್ನಾಟಕದ ಮೂಲಕ್ಕೆ ಸೇರಿದ್ದರೆಂಬುದು ಕೆಲವರ ಮತ.

ಸಾಂಸ್ಕೃತಿಕ: ಈ ಎರಡು ಪ್ರದೇಶಗಳ ನಡುವೆ ಉಂಟಾಗಿದ್ದ ರಾಜಕೀಯ ಪ್ರಭಾವ

ದಿಂದಾಗಿ ರಾಜಮನೆತನಗಳಲ್ಲಿ ಅಂತರ್ಪ್ರಾಂತೀಯ ವಿವಾಹಗಳು ಜರುಗುತ್ತಿದ್ದಂತೆ ತೋರುತ್ತದೆ. ಜಾತಿಮತಭೇದವಿಲ್ಲದೆ ಅನೇಕ ಒಕ್ಕಲುಗಳು ಕರ್ಣಾಟಕದಿಂದ ಉತ್ತರಕ್ಕೂ ಉತ್ತರದಿಂದ ಕರ್ಣಾಟಕಕ್ಕೂ ವಲಸೆ ಬಂದು ನೆಲಸುತ್ತಿದ್ದವು ಎನ್ನಲಾಗಿದೆ. ಕದಂಬ ಮಯೂರಶರ್ಮನು ರೋಹಿಲಖಂಡದ ಅಹಿಚ್ಛತ್ರ ನಗರದಿಂದ ಬ್ರಾಹ್ಮಣ ಕುಟುಂಬಗಳನ್ನು ಕರೆತಂದು ತುಳುನಾಡಿನಲ್ಲಿ ನೆಲೆಯಾಗಿಸಿದ. ಇಂದು ಕರ್ಣಾಟಕದಲ್ಲಿ ಸ್ಥಾಯಿಯಾದ ಶಿವಳ್ಳಿ, ಹೈಗ, ಸಹವಾಸಿ, ವೀರಬಣಂಜು, ಸಾರಸ್ವತ ಮೊದಲಾದ ಬ್ರಾಹ್ಮಣ ಕುಲವೃತ್ತಗಳು ಅವರ ಔತ್ತರೇಯ ಮೂಲವನ್ನು ಸಿದ್ಧಪಡಿಸುವುವು. ಕಾಶ್ಮೀರದ ಕಾಳಾಮುಖ ಪಂಥದ ಅನೇಕ ಪಂಡಿತರು ಕನ್ನಡನಾಡಿನಲ್ಲಿ ತಳವೂರಿ ಸಮಾಜದ ಎಲ್ಲ ವರ್ಗದ ಗೌರವಕ್ಕೂ ಪಾತ್ರರಾಗಿದ್ದರು ಎಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಕರ್ಣಾಟಕಶ್ರೀ ಕಾಶ್ಮೀರವನ್ನು ಮುಟ್ಟಿತು. ಬಿಲ್ಹಣ, ವಿಜ್ಞಾನೇಶ್ವರ ಮುಂತಾದ ಸಂಸ್ಕೃತ ವಿದ್ವಾಂಸರು ಕನ್ನಡನಾಡಿನಲ್ಲಿ ಆಶ್ರಯವನ್ನು ಪಡೆದಿದ್ದರೆಂಬುದು ವಿದ್ವತ್ತಿನ ವಿನಿಮಯಕ್ಕೆ ನಿದರ್ಶನವಾಗಿದೆ. ೧೪ನೆಯ ಶತಮಾನದ್ದೆಂದು ಹೇಳಲಾಗಿರುವ ರಾಜಾಸ್ಥಾನದ ಒಂದು ಶಿಲಾಶಾಸನದಲ್ಲಿ ಹೆಸರಾದ ದೊರೆ ಹಮ್ಮೀರದೇವನ ಕೀರ್ತಿಯನ್ನು ಬಣ್ಣಿಸುತ್ತ ಅದು ಚಂದ್ರನಿಗಿಂತಲೂ ಶಿವನ ನಗೆಗಿಂತಲೂ ಬಿಳುಪಾದುದೆಂದು ಹೇಳಿ, ಕಾಂತಿಯಲ್ಲಿ ಕನ್ನಡನಾಡಿನ ಹೆಂಗಳೆಯರ ಶುಚಿಯಾದ ಹಲ್ಲುಗಳ ಹೊಳಪಿಗೆ ಸರಿಹೋಲುವುದೆಂದು ವರ್ಣಿಸಿದೆ.[83] ಅಂತಿಮ ಹಿಂದು ಸಾಮ್ರಾಟನಾಗಿದ್ದ ಪೃಥ್ವೀರಾಜ ಚೌಹಾಣನ ಆಸ್ಥಾನದಲ್ಲಿ 'ಕರ್ಣಾಟಕಿ' ಅಥವಾ 'ಕರ್ಣಾಟಿ' ಎಂಬ ಹೆಸರಿನ ನರ್ತಕಿಯಿದ್ದಳೆನ್ನಲಾಗಿದೆ. ಸಂಗೀತ ಕರ್ಣಾಟಕದಲ್ಲಿ ಹುಟ್ಟಿ ಅಯೋಧ್ಯೆಯಲ್ಲಿ ಬೆಳೆಯಿತೆಂಬ ಒಂದು ನಾಣ್ಣುಡಿಯೇ ಇದೆ. ಒಂದು ರೀತಿಯಲ್ಲಿ ಉತ್ತರ ಭಾರತದ ಸಂಗೀತಕ್ಕೆ ತಳಹದಿಯನ್ನು ಹಾಕಿದವನು ಕನ್ನಡನಾಡಿನ ಗೋಪಾಲನಾಯಕ. ಕನ್ನಡನಾಡಿನ ವೀಣಾವಾದನದ ವೈಖರಿಯನ್ನು ಕುರಿತು ಹೇಳುವಂಥ ಕಾವ್ಯವೊಂದು ರಾಜಾಸ್ಥಾನೀ ಭಾಷೆಯಲ್ಲಿ ದೊರೆತಿದೆ. ೧೬ನೆಯ ಶತಮಾನದ ನಾರಾಯಣದಾಸ ಎಂಬಾತ ಬರೆದ 'ಛಿತಾಯೀ ವಾರ್ತಾ' ಎಂಬ ಈ ಕಾವ್ಯದಲ್ಲಿ ಕನ್ನಡನಾಡಿನ ಹೊಯ್ಸಳ ರಾಜಕುಮಾರನೊಬ್ಬನು ನಾಯಕನಾಗಿರುವುದು ಕುತೂಹಲಕರ ಸಂಗತಿಯಾಗಿದೆ.[84]

ಅಪಭ್ರಂಶ 'ಮಹಾಪುರಾಣ'ದ ಕರ್ತೃ ಪುಷ್ಪದಂತಕವಿ ರಾಷ್ಟ್ರಕೂಟರ ಕೃಷ್ಣನ ಆಶ್ರಯದಲ್ಲಿದ್ದ. ರಾಷ್ಟ್ರಕೂಟರು ತಮ್ಮ ಕಾಲದಲ್ಲಿ ಅಪಭ್ರಂಶ ಸಾಹಿತ್ಯರಚನೆಗೆ ಸಾಕಷ್ಟು ಪ್ರೋತ್ಸಾಹವನ್ನಿತ್ತರು. 'ಮಹಾಪುರಾಣ'ದಲ್ಲಿಯೂ ಮಿಥಿಲೆಯ ಜ್ಯೋತಿರೀಶ್ವರನ (೧೪ನೆಯ ಶತಮಾನ) 'ವರ್ಣರತ್ನಾಕರ' ಎಂಬ ಕೃತಿಯಲ್ಲಿಯೂ ಕನ್ನಡ ಶಬ್ದಗಳು ದೊರೆಯುತ್ತವೆ ಎಂದು ಕೆಲವು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

ಧಾರ್ಮಿಕ : ಭಾರತದಲ್ಲಿ ಹಿಂದುಧರ್ಮದ ಸ್ವರೂಪವನ್ನು ನಿಷ್ಕೃಷ್ಟ ಶಾಸ್ತ್ರಗಳ ಆಧಾರ ಭೂಮಿಕೆಯ ಮೇಲೆ ಪ್ರತಿಷ್ಠಾಪಿಸಿದವರು ದಾಕ್ಷಿಣಾತ್ಯರು. ಹಿಂದು ಧಾರ್ಮಿಕ ಪಂಥಗಳ

ಆಧ್ವರ್ಯುಗಳಾದ ಶಂಕರ, ಮಧ್ವ ಹಾಗೂ ರಾಮಾನುಜರು ದಾಕ್ಷಿಣಾತ್ಯರಾಗಿದ್ದು, ಇವರ ಪ್ರಭಾವ ಉತ್ತರ ಭಾರತದ ಜನಜೀವನ ಹಾಗೂ ಧಾರ್ಮಿಕ ಸಂಪ್ರದಾಯಗಳ ಮೇಲೆ ಬಹಳವಾಗಿ ಬಿದ್ದಿದೆ.

ಉತ್ತರ ಭಾರತದಲ್ಲಿನ ಕಾಶಿ, ಮಥುರೆ, ಗಯೆ, ಬದರಿಕಾಶ್ರಮ ಮುಂತಾದುವು ಹಾಗೂ ದಕ್ಷಿಣ ಭಾರತದ ರಾಮೇಶ್ವರ, ಮಧುರೆ, ಕಂಚಿ ಮುಂತಾದುವು ಹಿಂದುಗಳಿಗೆ ಬಹಳ ಪವಿತ್ರವಾದುವದರಿಂದ ಭಕ್ತರೂ ಸಂತರೂ ಈ ತೀರ್ಥಗಳನ್ನು ಸಂದರ್ಶಿಸುತ್ತ ತಮ್ಮ ಭಕ್ತಿಸಾಹಿತ್ಯವನ್ನು ಪ್ರಚುರಪಡಿಸುತ್ತಿದ್ದರು. ಹೀಗೆಯೇ ಶ್ರವಣಬೆಳಗೊಳದಂಥ ಜೈನಕ್ಷೇತ್ರ ಕೂಡ ಉತ್ತರದಿಂದ ಜೈನಧರ್ಮಿಗಳನ್ನು ಆಕರ್ಷಿಸುತ್ತಿದ್ದಿತು. ಹೀಗಾಗಿ ಈ ತೀರ್ಥಕ್ಷೇತ್ರಗಳು ಈ ಎರಡೂ ಪ್ರದೇಶಗಳ ನಡುವೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಬಾಂಧವ್ಯದಲ್ಲಿ ಪ್ರಮುಖ ಪಾತ್ರ ವಹಿಸಿದವು. ಸು. ೮ನೆಯ ಶತಮಾನದಿಂದಲೇ ಉತ್ತರ ಭಾರತದಲ್ಲಿ 'ಚೌರಾಸೀ ಸಿದ್ಧರು' (೮೪ ಜನ ಸಿದ್ಧರು) ಎಂದು ಖ್ಯಾತರಾದ ಬೌದ್ಧಸಿದ್ಧರು ತಮ್ಮ 'ಬಾನಿ' (ವಾಣಿ)ಗಳಿಂದ ವಿಚಾರಕ್ರಾಂತಿಯನ್ನು ಉಂಟು ಮಾಡಿದರೆಂದು ಹಿಂದೀ ಸಾಹಿತ್ಯೇತಿಹಾಸದಿಂದ ತಿಳಿಯುತ್ತದೆ.[85] ಶಬರಪಾನಿಂದ ಪ್ರಾರಂಭವಾಗುವ ಈ ೮೪ ಜನ ಸಿದ್ಧರ ಪೈಕಿ ಕಣ್ಹಪಾ ನಮಗೆ ಮುಖ್ಯನಾದವನು. ೯ನೆಯ ಶತಮಾನದ ಪೂರ್ವಭಾಗದಲ್ಲಿದ್ದ (ಕ್ರಿ.ಶ. ಸು. ೮೪೦) ಈತ ಕನ್ನಡಿಗ ನೆಂದೂ ಕರ್ಣಾಟಕದಿಂದ ಬಿಹಾರ ಬಂಗಾಳಗಳಿಗೆ ಹೋದನೆಂದೂ ಮಹಾಪಂಡಿತ ರಾಹುಲ ಸಾಂಕೃತ್ಯಾಯನ್ ಅಭಿಪ್ರಾಯಪಟ್ಟಿದ್ದಾರೆ.[86] ಸತ್ಯನಿಷ್ಠುರವಾದ ಈತನ ವಾಣಿ ವೀರಶೈವ ಸಂತರ ವಚನಗಳನ್ನು ನೆನಪಿಗೆ ತರುತ್ತದೆ. ದಕ್ಷಿಣದ ಸುಪ್ರಸಿದ್ಧ ಯೋಗಕೇಂದ್ರವಾಗಿದ್ದ ಶ್ರೀಶೈಲದಲ್ಲಿ ಜನ್ಮತಾಳಿ ಉತ್ತರದಲ್ಲಿ ಮೈದುಂಬಿಕೊಂಡ ನಾಥ ಸಂಪ್ರದಾಯದ ಗೋರಖನಾಥ, ಮತ್ಸ್ಯೇಂದ್ರನಾಥ ಇವರ ಪ್ರಭಾವ ಕರ್ಣಾಟಕದ ಮೇಲೆ ಸಾಕಷ್ಟು ಬಿದ್ದಿದೆ. ಗೋರಖನಾಥ ಕನ್ನಡನೆಲದ ಕದರಿಗೆ ಬಂದು ತನ್ನ ಮತವನ್ನು ಸ್ಥಾಪಿಸಿದನೆಂದೂ ಅಲ್ಲಮಪ್ರಭು ಆತನನ್ನು ಭೇಟಿಮಾಡಿದನೆಂದೂ ಹೇಳುವ ಕೆಲವು ಉಲ್ಲೇಖಗಳಿವೆ.

ವೀರಶೈವ ಧರ್ಮದ ಪ್ರಭಾವವೂ ಉತ್ತರ ಭಾರತದ ಮೇಲೆ ಸಾಕಷ್ಟು ಬಿದ್ದಿದೆ. ಕನ್ನಡನಾಡಿನ ವೀರಶೈವ ಸಂತರ ವಿಚಾರಧಾರೆಯನ್ನು ಉತ್ತರ ಭಾರತಕ್ಕೆ ಹರಿಯಿಸಿದ ಕೀರ್ತಿ ಮಹಾರಾಷ್ಟ್ರದ ಸಂತರಿಗೆ ಸಲ್ಲಬೇಕಾಗಿದೆ.[87] ಪಂಢರಪುರಕ್ಕೆ ಸಮೀಪದಲ್ಲೇ ಬಿಜಾಪುರದಲ್ಲಿ ನಡೆದ ಬಸವಣ್ಣ ಮುಂತಾದವರ ವಿಚಾರಕ್ರಾಂತಿ, ಭಕ್ತಿಯ ಆಂದೋಳನ ಮಹಾರಾಷ್ಟ್ರದ ಸಂತರಿಗೆ ತಟ್ಟಿರಲು ಸಾಧ್ಯ. ವೀರಶೈವಧರ್ಮದ ಸಾರರೂಪವಾದ ಜ್ಞಾನ, ಭಕ್ತಿ, ದ್ವೈತಾದ್ವೈತ ಸಮನ್ವಯದ ಪ್ರಭಾವ ಮರಾಠಿ ಸಂತರ ಮೇಲೆ ಬಿದ್ದು ಆ ಮೂಲಕ ಉತ್ತರದಲ್ಲಿ ಮುಂದುವರಿದು ನಿರ್ಗುಣಭಕ್ತಿ ಎನಿಸಿಕೊಂಡಿದ್ದಕ್ಕೆ ಕೆಲವು ಆಧಾರಗಳಿವೆ. ಹಿಂದಿಯ ಜ್ಞಾನಾಶ್ರಯೀ ಶಾಖೆಯ ನಿರ್ಗುಣಧಾರೆಯ ಮೂಲಸೆಲೆ ಮಹಾರಾಷ್ಟ್ರ ಸಂತ ನಾಮದೇವನ ಪದಗಳಲ್ಲಿ ಹುದುಗಿವೆಯೆಂಬ

ಅಭಿಪ್ರಾಯವಿದೆ. ಉತ್ತರ ಭಾರತದ ಸಂತಶ್ರೇಷ್ಠ ಕಬೀರ ತನ್ನ ಹಿಂದಿನ ಸಂತರಾದ ಜಯದೇವ, ನಾಮದೇವ ಮೊದಲಾದವರಿಗೆ ತನ್ನ ಕೃತಜ್ಞತೆಯನ್ನರ್ಪಿಸಿದ್ದಾನೆ. ಕಬೀರನ ಕಾಲದಲ್ಲಿ (೧೬ನೆಯ ಶತಮಾನ) ಕೆಲವು ವೀರಶೈವರು ಕಾಶಿಯಲ್ಲಿದ್ದರೆಂಬುದಕ್ಕೆ ಕಬೀರನ ವಚನಗಳಲ್ಲೇ ಆಧಾರಗಳಿವೆ. ವೀರಶೈವಧರ್ಮದ ತತ್ತ್ವಗಳಿಗೂ ಉತ್ತರಭಾರತ ಸಂತರ ನಂಬುಗೆಗಳಿಗೂ ಸಾಮ್ಯವಿದೆ. ಇಬ್ಬರಿಗೂ ಜಾತಿಕುಲಗಳ ಬಗ್ಗೆ ಕಾಳಜಿಯಿಲ್ಲ, ಮುಂದಿನ ಜನ್ಮದಲ್ಲಿ ನಂಬುಗೆಯಿಲ್ಲ; ಇಹವನ್ನೇ ಸದಾಚಾರ ಸತ್ಸಂಗ ಸ್ವಾನುಭೂತಿಗಳಿಂದ ದಿವವಾಗಿ ಬದಲಾಯಿಸುವ ಕಳಕಳಿ ಇಬ್ಬರಲ್ಲೂ ಇದೆ. ಅಂಧಶ್ರದ್ಧೆಗಳ ವಿರುದ್ಧ ದಿಟ್ಟಮನೋಧರ್ಮವನ್ನು ಇಬ್ಬರೂ ತಳೆದಿದ್ದಾರೆ. ಪ್ರವೃತ್ತಿಗಳನ್ನು ದಮನ ಮಾಡದೆ, ಅವರೆ ಪ್ರವೃತ್ತಿಗಳಿಗೆ ವಶವಾಗದೆ ಇರುವ ಸಹಜ ಮಾರ್ಗವನ್ನೇ ಇಬ್ಬರೂ ಅನುಸರಿಸಿದ್ದಾರೆ. ಇಂಥ ಅಂಶಗಳು ನೇರವಾದ ಪ್ರಭಾವಗಳೇ ಇಲ್ಲವೆ ಕೇವಲ ವಿಚಾರಸಾಮ್ಯವೇ—ಎಂಬುದು ವಿಚಾರಣೀಯ.[೪೪] ಬಸವಣ್ಣನವರ ಸಮಕಾಲೀನನಾದ ಶೀಲವಂತಯ್ಯ ಎಂಬ ಶರಣ ಕಾಶಿಗೆ ತೆರಳಿ ಅಲ್ಲಿಯ ಅರಸ ಜಯಸಿಂಹನನ್ನು ಪವಾಡದಿಂದ ಮೆಚ್ಚಿಸಿ ಅವನಿಂದ ಶಿವಕೇಶವನಂದಕಾನನ ಎಂಬ ಭೂಮಿಯನ್ನು ಬಳುವಳಿಯಾಗಿ ಪಡೆದನೆಂದು 'ಕೆಳದಿ ನೃಪವಿಜಯ'ದಲ್ಲಿ ವರ್ಣನೆಯಿದೆ. ಶೀಲವಂತಯ್ಯ ಕಟ್ಟಿಸಿದನೆಂದು ಪ್ರತೀತಿಯಿರುವ ಜಂಗಮವಾಡಿ ಮಠ ಇಂದೂ ಕಾಶಿಯಲ್ಲಿದ್ದು ವೀರಶೈವ ಶರಣಪರಂಪರೆ ಇಂದೂ ಅಲ್ಲಿ ಕಾಣಬರುತ್ತದೆ. ಹಿಂದಿಯ ಖ್ಯಾತ ಸಂತಕವಿ ಕಬೀರನ ಮೇಲೆ ವೀರಶೈವ ಧರ್ಮದ ಪ್ರಭಾವವಾಗಿರುವಂತೆ ತೋರುತ್ತದೆ. ಆತನ ರಚನೆಗಳಲ್ಲಿ 'ಜಂಗಮ'ವೆಂಬ ಶಬ್ದ "ಮೈಲೀ ಜೋಗೀ ಜಂಗಮ ಸಹೇತಿ...." "ಅಠಾರಹ ಬ್ರಾಹ್ಮಣ್ ಅಠಾರಹ ಜಂಗಮಚೂವಿಸರೆ...." "ಇಕ್ ಜಂಗಮ ಇಕ್ ಜಟಾಧರ್ ಇಕ್ ಅಂಗ ವಿಭೂತಿಕಕ್ಕೈ ಅಪಾರ್...." ಎಂದು ಬಳಕೆಯಾಗಿದ್ದು ಇಲ್ಲೆಲ್ಲ ವೀರಶೈವ ವಚನಗಳಲ್ಲಿ ಬರುವ ಆ ಶಬ್ದದ ಅರ್ಥಚ್ಛಾಯೆಯನ್ನೇ ಕಾಣಬಹುದಾಗಿದೆ. ಮುಕ್ತಿಗಿಂತ ಸತ್ಸಂಗ ದೊಡ್ಡದು, ಸಂತ ಭಗವಂತನಿಗಿಂತ ದೊಡ್ಡವನು, ಸತ್ತಮೇಲೆ ದೊರೆಯುವ ಸ್ವರ್ಗ ಬರಿ ಬಯಲು ಎಂಬ ಈ ನಂಬುಗೆಗಳೂ ಕಾಯಕ, ದಾಸೋಹ ಮುಂತಾದ ಆಚರಣೆಗಳ ನಿಷ್ಠೆಯೂ ಕಬೀರನ ವ್ಯಕ್ತಿತ್ವದ ಮೇಲೆ ಬಿದ್ದಿರುವುದಾಗಿ ತೋರಿಬರುತ್ತದೆ. ಅನಂತರ ಬಂದ ಸಂತ ಸುಂದರದಾಸ ಮೊದಲಾದವರ ಮೇಲೂ ಈ ಪ್ರಭಾವವಿದೆ. ವಿಜಯ ಜಂಗಮ ಗುಂಡಕೇಶ್ವರ ಎಂಬ ವೀರಶೈವ ಸಂತರು ೧೬ನೆಯ ಶತಮಾನದ ಸುಮಾರಿನಲ್ಲಿ ಗ್ವಾಲಿಯರಿನ ಬಳಿ ನೆಲಸಿದ್ದು ಧರ್ಮ ಪ್ರಚಾರದಲ್ಲಿ ತೊಡಗಿದ್ದರೆಂದು ತಿಳಿದುಬರುತ್ತದೆ.

ಕನ್ನಡಿಗರ ಹರಿಹರ ಸಮನ್ವಿತ ದೈವಕಲ್ಪನೆಯ ಭಾವ ಬಂಗಾಳದ ಸೇನ ಮತ್ತು ಮಿಥಿಲೆಯ ನಾನ್ಯದೇವ ಇವರ ಪ್ರಭಾವದಿಂದಾಗಿ ಮಿಥಿಲೆಯಲ್ಲಿ ಅಸ್ತಿತ್ವಕ್ಕೆ ಬಂತು. ಹರಿಹರದೇವರ ವರ್ಣನೆಯನ್ನು ಸೇನರಾಜರು ಕಟ್ಟಿಸಿದ ಪ್ರದ್ಯುಮ್ನೇಶ್ವರ ದೇವಾಲಯದ ಶಾಸನ ಒಂದರಲ್ಲಿ ಕಾಣಬಹುದು. ವಿದ್ಯಾಪತಿ ಮತ್ತು ತುಳಸೀದಾಸರ ಮೇಲೂ ಈ ಹರಿಹರ ಸಾಮರಸ್ಯದ ಪ್ರಭಾವವುಂಟು. "ರುಚಿರ ಹರಿಶಂಕರೀ ನಾಮ ಮಂತ್ರಾವಲೀ

ದ್ವಂದ್ವ ದುಃಖದಾನಿ ಆನಂದದಾನೀ ವಿಷ್ಣು ಶಿವಲೋಕ ಸೋಪಾನ ಸಮಸರ್ಗದಾ ಸದತಿ ತುಲಸೀದಾಸ ವಿಶದದಾನಿ"—ಎಂಬುದು ತುಳಸೀದಾಸರ ಒಂದು ಸೂಕ್ತಿ.

ಹಾಗೆಯೇ ಶುದ್ಧಾದ್ವೈತ ವೇದಾಂತದ ಪ್ರವರ್ತಕರಾಗಿ ಕೃಷ್ಣಭಕ್ತಿಯ ಪಾವನ ಮಂದಾಕಿನಿಯನ್ನೇ ಹರಿಸಿದ ವಲ್ಲಭಾಚಾರ್ಯರು ಕನ್ನಡನಾಡಿನ ಬಳ್ಳಾರಿಯಲ್ಲಿ ಜನಿಸಿದವರು. ಹಿಂದೀ ಸಾಹಿತ್ಯದ ಭಕ್ತಿ ಕಾಲದಲ್ಲಿ ಕಂಡುಬರುವ 'ಅಷ್ಟಛಾಪ'ದ ಕಲ್ಪನೆಗೂ ಮಾಧ್ವಸಂಪ್ರದಾಯದ ಉಡುಪಿಯ ಅಷ್ಟಮಠಗಳ ಕಲ್ಪನೆಗೂ ಸಂಬಂಧವಿದೆಯೇ ನೋಡಬಹುದು. ಡಾ. ಹಜಾರೀಪ್ರಸಾದ್ ದ್ವಿವೇದಿಯವರ ಅಭಿಪ್ರಾಯದಂತೆ 'ಹಿತಹರಿವಂಶ' ಎಂಬ ಔತ್ತರೇಯ ಭಕ್ತರು ಸಂಸ್ಥಾಪಿಸಿದ ರಾಧಾವಲ್ಲಭೀಯ ಸಂಪ್ರದಾಯ ಮಧ್ವ ಸಂಪ್ರದಾಯದ ಒಂದು ಕೊಂಡಿಯಷ್ಟೆ. ಒಟ್ಟಿನಲ್ಲಿ ಆಯಾ ಸಿದ್ಧಾಂತಗಳಿಗನುಗುಣವಾದ ಶಂಕರರ ಏಕೇಶ್ವರವಾದ, ರಾಮಾನುಜರ ಪ್ರಪತ್ತಿವಾದ, ಬಸವೇಶ್ವರರ ಏಕೇಶ್ವರವಾದ ಹಾಗೂ ಮಧ್ವರ ಭಕ್ತಿವಾದ ಭಾರತೀಯ ದರ್ಶನಕ್ಕೆ ಕನ್ನಡನಾಡಿನ ಕೊಡುಗೆಯಾಗಿದೆ.

ಭಕ್ತಿ ಸಾಹಿತ್ಯದ ತಲಕಾವೇರಿ ಕರ್ನಾಟಕ. ಆದರೆ ಉತ್ತರ ಭಾರತದಲ್ಲಿ ದೊರೆಯುವಷ್ಟು ಭಕ್ತಿನಿರೂಪಣೆಯ ಪ್ರಭೇದಗಳು ಇಲ್ಲಿಯ ಸಾಹಿತ್ಯದಲ್ಲಿ ಕಾಣುವುದಿಲ್ಲವೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.[೩೨] ಹಿಂದೀ ಸಾಹಿತ್ಯದ ಸ್ವರ್ಣಯುಗವಾದ ಭಕ್ತಿ ಕಾಲದಲ್ಲಿ ಕಂಡುಬರುವ ಮುಖ್ಯ ಪ್ರಕಾರಗಳು ಇವು: ನಿರ್ಗುಣಭಕ್ತಿ ರಾಮಶಾಖೆ, ಸಗುಣಭಕ್ತಿ ರಾಮಶಾಖೆ, ಅಷ್ಟಛಾಪದಲ್ಲಿನ ಕೃಷ್ಣಭಕ್ತಿ ಶಾಖೆ, ರಾಧಾವಲ್ಲಭ ಸಂಪ್ರದಾಯದ ಕೃಷ್ಣಭಕ್ತಿ ಶಾಖೆ. ಹರಿದಾಸೀ ಸಂಪ್ರದಾಯದ ರಾಧಾಕೃಷ್ಣರ ಯುಗಳ ಭಕ್ತಿಶಾಖೆ ಮತ್ತು ಸೂಫೀಸಂತರ ಮಧುರಭಕ್ತಿ ಶಾಖೆ. ಕನ್ನಡ ನಾಡಿನ ಮುಖ್ಯ ಭಕ್ತಿಪದ್ಧತಿಗಳೆಂದರೆ, ಶಿವಶರಣರ ಷಟ್‌ಸ್ಥಲ ಭಕ್ತಿ ಮತ್ತು ಮಾಧ್ವಮತಾವಲಂಬಿಗಳಾದ ಹರಿದಾಸರ ಕೃಷ್ಣಭಕ್ತಿ. ಈ ಬಗ್ಗೆ ಡಾ. ಹಿರಣ್ಮಯ ಅವರ ಅಭಿಪ್ರಾಯಸಾರ ಹೀಗಿದೆ: ಕನ್ನಡದಲ್ಲಿ ವಾತ್ಸಲ್ಯ, ಸಖ್ಯ ಮತ್ತು ಮಧುರ ಭಾವಗಳು ವಿಶೇಷವಾಗಿ ವಿಕಾಸಗೊಳ್ಳಲಿಲ್ಲ. ಕನ್ನಡದ ಪ್ರಬಂಧ ಕಾವ್ಯಗಳಲ್ಲಿ ತುಳಸೀದಾಸರ 'ರಾಮಚರಿತ ಮಾನಸ'ದಲ್ಲಿ ಕಂಡುಬರುವಂತೆ ಕಾವ್ಯದ ಪರ್ಯಂತ ಭಕ್ತಿ ನಿರೂಪಣೆಯಾಗಿಲ್ಲ. ಹಿಂದಿಯಲ್ಲಿನ ಪ್ರೇಮಾಖ್ಯಾನಕ ಕಾವ್ಯಗಳಿಗೆ ಸಂವಾದಿಯಾಗಿ ಕನ್ನಡದಲ್ಲಿ ಪ್ರೇಮಾಖ್ಯಾನಕಗಳು ಬೆಳೆದುಬಂದಿಲ್ಲ. ರಾಧಾ ಹಾಗೂ ರಾಧಾಕೃಷ್ಣರ ಯುಗಳ ಉಪಾಸನೆ ಕನ್ನಡದಲ್ಲಿ ಕಾಣಬರುವುದಿಲ್ಲ. ನಿರ್ಗುಣ ರಾಮಭಕ್ತಿ ಶಾಖೆಯ ಪ್ರಚಾರ ಕನ್ನಡದಲ್ಲಾಗಲಿಲ್ಲ.

ಈ ಬಗ್ಗೆ ಅವರು ನೀಡುವ ಕಾರಣವೇನೆಂದರೆ ಹಿಂದಿಯಲ್ಲಿ ಸಾಹಿತ್ಯದ ಸ್ವರ್ಣಯುಗ ಹಾಗೂ ಭಕ್ತಿಯ ಸಮ್ಮೇಳನ ಒಟ್ಟಿಗೆ ಸಾಧ್ಯವಾಯಿತು. ಆದರೆ ಕನ್ನಡ ಸಾಹಿತ್ಯದಲ್ಲಿ ಭಕ್ತಿಯ ಭಾವನೆ ಪ್ರವೇಶವಾಗುವ ಹೊತ್ತಿಗಾಗಲೇ ಆ ಸಾಹಿತ್ಯದ ಸ್ವರ್ಣಯುಗ ಕಳೆದುಹೋಗಿತ್ತು. ಸುಮಾರು ೯ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಕನ್ನಡ ಸಾಹಿತ್ಯದ ಸ್ವರ್ಣಯುಗವೆಂದು ಒಪ್ಪಬಹುದಾದರೆ ಈ ಕಾಲದ ಸಾಹಿತ್ಯವೆಲ್ಲ ಜೈನ ಕವಿಗಳ ಪ್ರಾಬಲ್ಯಕ್ಕೆ ಒಳಗಾಗಿತ್ತು. ಈ ಕಾಲದಲ್ಲಿ ಹುಟ್ಟಿದ ರಾಮಾಯಣ ಭಾರತಾದಿ

ಗಳು ಜೈನಧರ್ಮದ ಪರಿವೇಶದಲ್ಲಿರುವುದರಿಂದ ಕಾಲದ ದೃಷ್ಟಿಯಿಂದ ಅತ್ಯುತ್ಕೃಷ್ಟವೆಂದೆನಿಸಿದರೂ ಭಕ್ತಿಯ ಬೆಳೆವಣಿಗೆಗೆ ಅವರ ಸಾಹಿತ್ಯ ಅಷ್ಟು ಪ್ರಯೋಜನಕರವಾಗಿ ಕಾಣಲಿಲ್ಲ. ಕನ್ನಡ ಸಾಹಿತ್ಯದಲ್ಲಿ ಷಟ್‌ಸ್ಥಲ ಭಕ್ತಿಸಿದ್ಧಾಂತದ ಅಭಿಪ್ರಾಯವನ್ನು ಹಾಕಿದವರು ಬಸವಣ್ಣನವರಾದರೂ ಅವರ ಪ್ರಭಾವ ಕನ್ನಡನಾಡಿನ ಜನಜೀವನದ ಮೇಲೆ ಎಣಿಸದಷ್ಟು ಗಾಢವಾಗಿ ಬೀಳಲಾಗಲಿಲ್ಲ. ಕಾರಣ ವೀರಶೈವ ಸಂಪ್ರದಾಯದ ನಿರಾಕಾರನಿರ್ಗುಣ ದೈವೋಪಾಸನೆ ಸಾಧಾರಣ ಜನತೆಯಲ್ಲಿ ಭಕ್ತಿ ಭಾವನೆಯನ್ನುಕ್ಕಿಸಲು ಸಾಧ್ಯವಾಗಲಿಲ್ಲ. ಅಲ್ಲದೆ ಬಸವಣ್ಣ, ಅಕ್ಕಮಹಾದೇವಿಯಂಥವರ ರಚನೆಗಳಲ್ಲಿ ಉಕ್ಕಿತೋರುವ ಭಕ್ತಿ ಭಾವನೆ ತದನಂತರದ ಶರಣ ಕವಿಗಳಲ್ಲಿ ಕಾಣಸಿಗದು.[90]

ಸಾಹಿತ್ಯಿಕ : ಸ್ವಾತಂತ್ರ್ಯ ಹೋರಾಟದ ಅಂಗವಾಗಿ ಭಾರತದ ಜನಜೀವನದಲ್ಲಿ ಬಲುಮಟ್ಟಿಗೆ ರಾಜಕೀಯವಾಗಿಯೂ ಸಾಮಾಜಿಕವಾಗಿಯೂ ಒಂದು ರೀತಿಯ ಕ್ರಾಂತಿ ತಲೆದೋರಿತು; ನವಜಾಗ್ರತಿ ಉಂಟಾಯಿತು. ಈ ಸಂದರ್ಭದಲ್ಲಿ ಹಿಂದುಧರ್ಮದ ಘನತೆಯನ್ನು ಎತ್ತಿ ಹಿಡಿದು ಕಾಪಾಡಲು ಅನೇಕ ಸಂಘಸಂಸ್ಥೆಗಳು ಹುಟ್ಟಿಕೊಂಡು ಭರದಿಂದ ಕಾರ್ಯೋನ್ಮುಖವಾದವು. ಈ ಪೈಕಿ ರಾಜಾರಾಮಮೋಹನರಾಯರ ಬ್ರಹ್ಮಸಮಾಜ, ದಯಾನಂದ ಸರಸ್ವತಿಯವರ ಆರ್ಯಸಮಾಜ, ಶ್ರೀರಾಮಕೃಷ್ಣಾಶ್ರಮ, ಥಿಯಾಸಫಿಕಲ್ ಸೊಸೈಟಿ—ಈ ಮುಂತಾದ ಕೆಲವು ಸಂಘಸಂಸ್ಥೆಗಳ ಕಾರ್ಯಕರ್ತರ ಪ್ರಭಾವ ಭಾರತೀಯ ಜನಜೀವನದ ಮೇಲೆ ವ್ಯಾಪಕವಾಗಿತ್ತು. ಒಂದು ರೀತಿಯಲ್ಲಿ ಭಾರತದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿ ಹಿಂದೀ ಚಳವಳಿಗೆ ಕೂಡ ಪ್ರೇರಣೆ ನೀಡಿದಂತೆ ಕಾಣುತ್ತದೆ.[91]

ಸ್ವಾತಂತ್ರ್ಯಕ್ಕೆ ಕೆಲಕಾಲ ಮೊದಲಿಗೆ ಹಾಗೂ ಸ್ವಾತಂತ್ರ್ಯದ ಅನಂತರ ಭಾರತದಲ್ಲೆಲ್ಲ ಗಾಂಧೀಜಿ ಹಾಗೂ ಅವರ ಬೆಂಬಲಿಗ ನಾಯಕರ ಸಹಕಾರದಿಂದಾಗಿ ರಚನಾತ್ಮಕ ಕಾರ್ಯಕ್ರಮದ ಅಂಗವಾಗಿ ಹಿಂದೀ ಭಾಷೆಯ ಪ್ರಚಾರ ಭರದಿಂದ ನಡೆಯತೊಡಗಿತು. ಹಿಂದಿ ಕಲಿಕೆ ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳ ಅಂಗವಾಗಿ ಪರಿಣಮಿಸಿ ರಾಷ್ಟ್ರೀಯ ಜಾಗ್ರತಿಯನ್ನು ಉಂಟುಮಾಡುವುದರಲ್ಲಿ ಸಾಕಷ್ಟು ಸಫಲವಾಯಿತು. ಖಾದೀ ಪ್ರಚಾರ, ಹಿಂದೀ ಪ್ರಚಾರ ಮುಂತಾದುವು ದೇಶಸೇವೆಯ, ದೇಶಭಕ್ತಿಯ ಅಂಗವಾಗಿ ಪರಿಣಮಿಸಿದವು. ಸ್ವಾತಂತ್ರ್ಯದ ಅನಂತರ ಹಿಂದೀ ಭಾಷೆಗೆ ಸರ್ಕಾರದಿಂದ ಅಧಿಕೃತ ಸ್ಥಾನಮಾನಗಳು ದೊರೆತು, ಜನಸಾಮಾನ್ಯರ ಭಾಷೆಯಾಗಿ, ವ್ಯಾವಹಾರಿಕ ಸಂಪರ್ಕ ಮಾಧ್ಯಮವಾಗಿ ಜನತೆಯನ್ನು ಅದು ಆಕರ್ಷಿಸಿತು. ಇಂಗ್ಲಿಷರ ವಿರುದ್ಧ ಸಿಡಿದೆದ್ದ ಭಾರತೀಯರಿಗೆ ಹಿಂದಿ ಒಂದು ವಿಧದಲ್ಲಿ ಸ್ವಾವಲಂಬನೆಯ ಮಂತ್ರವಾಗಿ ಪರಿಣಮಿಸಿತು. ವ್ಯಾಪಕವಾದ ಪ್ರಚಾರ ಚಳವಳಿಯಿಂದ ಹಿಂದಿ ಜನತೆಯ ಮಟ್ಟಕ್ಕೆ ತಾನೇ ಇಳಿದು ಬಂದು ಜನಪ್ರಿಯವಾಯಿತು.

ಕರ್ನಾಟಕದಲ್ಲಿಯೂ ಹಿಂದಿ ಪ್ರಚಾರ ವ್ಯಾಪಕವಾಗಿ ನಡೆದು ಹಿಂದೀ ಕನ್ನಡ ಬಾಂಧವ್ಯಕ್ಕೆ ಕೆಲಮಟ್ಟಿಗೆ ಬೆಸುಗೆ ಹಾಕಿತು. ಸರ್ಕಾರದ ವಿಶೇಷ ಪ್ರೋತ್ಸಾಹ

ಆಶ್ರಯಗಳಿಂದಾಗಿ ಒಮ್ಮೊಮ್ಮೆ ಪ್ರಾದೇಶಿಕ ಭಾಷೆಗಳ ಸ್ಥಾನವನ್ನೇ ಹಿಂದಿಕ್ಕಿ ಹಿಂದಿ ಎಲ್ಲಿ ಪ್ರಬಲಿಸುತ್ತದೆಯೋ ಎನ್ನುವ ಆತಂಕ ದೇಶಭಾಷೆಯ ಹಿತಚಿಂತಕರನ್ನು ಆಗಾಗ ಸಹಜವಾಗಿ ಬಾಧಿಸುವುದುಂಟು. ಆದರೆ ಶುದ್ಧ ಸಾಹಿತ್ಯಿಕ ದೃಷ್ಟಿಯಿಂದ ಈ ಭಾಷೆಗಳ ಪರಸ್ಪರ ಅರಿವು ಎಂದೂ ಸ್ವಾಭಾವಿಕವಾದ್ದೇ. ಪ್ರೇಮಚಂದ್, ಮೈಥಿಲೀ ಶರಣಗುಪ್ತ, ಸುಮಿತ್ರಾನಂದನ ಪಂತ್ ಇಂತಹ ಸಾಹಿತಿಗಳು ಕನ್ನಡಿಗರಿಗೆ ಈ ದೃಷ್ಟಿಯಿಂದ ಅಚ್ಚುಮೆಚ್ಚಿನವರಾಗಿದ್ದಾರೆ.

ಉತ್ತರ ಭಾರತದಲ್ಲಿ ವ್ಯಾಪ್ತಿ ಮತ್ತು ಪ್ರೋತ್ಸಾಹಗಳು ಸಾಕಷ್ಟು ದೊರೆಕೊಂಡುದರ ಫಲವಾಗಿ ಹಿಂದೀ ಸಾಹಿತ್ಯಕ್ಕೆ ಭಾರತದ ತತ್ಕಾಲೀನ ಸಂಸ್ಕೃತಿಯ ಎಲ್ಲ ಅಂಶಗಳೂ ಸೇರಿಕೊಂಡವು. ಸ್ವಾತಂತ್ರ್ಯ ಚಳವಳಿಯ ಎಲ್ಲ ಮುಖಗಳೂ, ಸಾಹಿತ್ಯದಲ್ಲಿ ಗೋಚರವಾಗತೊಡಗಿದವು. ಬಂಗಾಳಿ ಹಾಗೂ ಹಿಂದೀ ಸಾಹಿತ್ಯಗಳಲ್ಲಿನ ಎಲ್ಲ ಪ್ರವೃತ್ತಿಗಳೂ ಈಚೆಗೆ ಇತರ ಪ್ರಾದೇಶಿಕ ಭಾಷೆಗಳ ಸಾಹಿತ್ಯಗಳಲ್ಲೂ ಪ್ರತಿಫಲನಗೊಳ್ಳತೊಡಗಿದವು. ದೇಶಪ್ರೇಮ ಸಂಬಂಧವಾದ ಗೀತೆಗಳು ರಾಷ್ಟ್ರಾದ್ಯಂತ ಭಾಷಾಭೇದವಿಲ್ಲದೆ ಕೋಟ್ಯನುಕೋಟಿ ಕಂಠಗಳಿಂದ ಮೊಳಗಲಾರಂಭಿಸಿದವು. ಆ ಸಮಯದಲ್ಲಿ ರಾಷ್ಟ್ರಕ್ಕೆ ಕುತ್ತಾಗಿದ್ದ ಅನೇಕ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳು ಹಿಂದಿಯ ಕೆಲವು ಲೇಖಕರನ್ನು ತೀವ್ರಸಂವೇದಿಗಳನ್ನಾಗಿ ಮಾಡಿ, ಈ ಬಗ್ಗೆ ಒಂದು ರೀತಿಯ ಚಿಂತನಶೀಲ ಹಾಗೂ ಪ್ರಗತಿಪರ ಸಾಹಿತ್ಯದ ರಚನೆ ಪ್ರಾರಂಭವಾಯಿತು. ಪ್ರೇಮಚಂದನಂಥ ಲೇಖಕನ ಕೈಯಲ್ಲಿ ಹಿಂದೀ ಸಾಹಿತ್ಯ ರಾಷ್ಟ್ರವ್ಯಾಪ್ತಿಯನ್ನೇ ಪಡೆಯಿತು. ಕೇವಲ ಆದರ್ಶವನ್ನೆ ಎತ್ತಿಹಿಡಿಯುತ್ತಿದ್ದ ಸಾಹಿತ್ಯದಲ್ಲಿ ನೈಜತೆಯ ಉಸಿರನ್ನು ತುಂಬಿ ಸಾಹಿತ್ಯದಲ್ಲಿ ಮಣ್ಣಿನ ವಾಸನೆ ಮೂಡಿಸಿದವನು ಪ್ರೇಮಚಂದನೇ. ಸಾಮಾಜಿಕ ಕಾದಂಬರಿಗಳಲ್ಲಿ ಸಮಾಜ ಮತ್ತು ದೇಶಪ್ರೇಮ, ವಿಧವಾ ವಿವಾಹ, ಏರುಪೇರಾದ ಮದುವೆಗಳು, ವರದಕ್ಷಿಣೆ, ಬಡತನ ಶ್ರೀಮಂತಿಕೆಗಳ ವೈಪರೀತ್ಯ—ಇವೇ ಮೊದಲಾಗಿ ಪ್ರೇಮಚಂದ ಮುಟ್ಟದ ರಾಷ್ಟ್ರೀಯ ಸಮಸ್ಯೆಯೇ ಇಲ್ಲವಾಗಿ ಕನ್ನಡ ಜನತೆಯನ್ನು ಆತ ಆಕರ್ಷಿಸಿದುದು ಸಹಜವಾಗಿಯೇ ಇದೆ. ಇದರ ಫಲವಾಗಿಯೇ ಎನ್ನುವಂತೆ ಭಾರತದ ಪ್ರಾದೇಶಿಕ ಭಾಷೆಗಳಲ್ಲೆಲ್ಲ ಜೀವನದ ವಾಸ್ತವಿಕತೆಯನ್ನು ಪ್ರತಿಪಾದಿಸುವ ಸಾಹಿತ್ಯವನ್ನು ರಚಿಸುವ ಪ್ರವೃತ್ತಿ ಬೆಳೆಯತೊಡಗಿತು. ಗುರುನಾಥ ಜೋಶಿ ಮುಂತಾದವರು ಪ್ರೇಮಚಂದನ ಅನೇಕ ಕಾದಂಬರಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ಬಂಕಿಮ, ಶರಚ್ಚಂದ್ರರಂತೆ ಪ್ರೇಮಚಂದನೂ ಕನ್ನಡಿಗರಿಗೆ ಪ್ರಿಯನಾದವನು. ಪ್ರೇಮಚಂದನೇ ಅಲ್ಲದೆ ಇತರ ಅನೇಕ ಹಿಂದಿ ಸಾಹಿತಿಗಳು ತಮ್ಮ ಪ್ರಭಾವದಿಂದಾಗಿ ಭಾಷಾಂತರಗಳ ಮೂಲಕ ಕನ್ನಡ ಸಾಹಿತ್ಯವನ್ನಲಂಕರಿಸಿದ್ದಾರೆ. ಈ ಬೆಳವಣಿಗೆಯ ಕಾಲದ ಮತ್ತೊಂದು ಕೊಡುಗೆಯೆಂದರೆ ಬಾಬೂ ದೇವಕೀನಂದನ ಖತ್ರಿಯವರ ಸಾಹಸಮಯ, ರೋಮಾಂಚಕ ಹಾಗೂ ಪತ್ತೇದಾರಿ ಮಾದರಿಯ ಕಾದಂಬರಿಗಳು. ಖತ್ರಿಯವರ 'ಚಂದ್ರಕಾಂತ', 'ಚಂದ್ರಕಾಂತ ಸಂತತಿ' (೧೧ ಭಾಗಗಳು), 'ಕಾಜರ್ ಕೀ ಕೋಠರೀ', 'ನೌಲಖಾಹಾರ್'

'ಕುಸುಮಕುಮಾರಿ', 'ನರೇಂದ್ರ ಮೋಹಿನೀ', 'ವೀರೇಂದ್ರವೀರ' ಮುಂತಾದ ಕೃತಿಗಳನ್ನು ಪ್ರತಾಪ್ ಸುಧಾಕರ ಅವರು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟಿದ್ದಾರೆ. ಸುಧಾಕರ ಅವರ ಮಾತೃಭಾಷೆ ಹಿಂದಿಯೇ ಆಗಿದ್ದು ಬೆಂಗಳೂರಿನಲ್ಲಿದ್ದ ಅವರಿಗೆ ಕನ್ನಡದ ಜ್ಞಾನ ಸಾಕಷ್ಟಿದ್ದುದರಿಂದ ಅವರ ಭಾಷಾಂತರಗಳು ಕನ್ನಡಕ್ಕೆ ಉತ್ತಮ ಕೊಡುಗೆಗಳಾಗಿವೆ[23]. ಹಾಗೆಯೇ ಬಂಗಾಳಿಯಿಂದ ಕನ್ನಡಕ್ಕೆ ಬಂದ ಶರಚ್ಚಂದ್ರ, ಬಂಕಿಮಚಂದ್ರ, ಠಾಕೂರ್ ಮುಂತಾದವರ ಕೃತಿಗಳು ಬಹುಮಟ್ಟಿಗೆ ಹಿಂದಿಯ ಮೂಲಕವಾಗಿಯೇ ಕನ್ನಡಕ್ಕೆ ಬಂದಿವೆಯೆಂಬುದನ್ನು ಇಲ್ಲಿ ಮರೆಯುವಂತಿಲ್ಲ.

ಇದೇ ರೀತಿಯಲ್ಲಿ ಹಿಂದಿಯ ಭಕ್ತಿಸಾಹಿತ್ಯದ ಪ್ರವೃತ್ತಿಗಳ ಪ್ರಭಾವ ಕನ್ನಡದ ಮೇಲೆ ಬಿದ್ದಿದ್ದು, ತುಳಸೀದಾಸರ 'ರಾಮಚರಿತಮಾನಸ'ವನ್ನು ಕನ್ನಡದಲ್ಲಿ ತರಲು ದ. ಕೃ. ಭಾರದ್ವಾಜ್ ಮುಂತಾದವರು ಪ್ರಯತ್ನಪಟ್ಟಿದ್ದಾರೆ. ಕೇವಲ ಒಂದು ಧಾರ್ಮಿಕ ಗ್ರಂಥವಾಗಿಯೇ ಸೀಮಿತಗೊಳ್ಳದ ಈ ಮಹಾಕಾವ್ಯ ಅಂದಿನ ರಾಜಕೀಯ, ಸಾಮಾಜಿಕ, ಕೌಟುಂಬಿಕ ಸ್ಥಿತಿಗಳ ಕೈಗನ್ನಡಿಯಂತಿದ್ದು ಅತ್ಯುತ್ತಮ ಸಾಹಿತ್ಯಕ್ಕೆ ನಿದರ್ಶನವಾಗಿದೆ. ವೈ. ಶೇ. ಅನಂತಪದ್ಮನಾಭಾಚಾರ್ಯರು ಇದನ್ನು ಷಟ್ಪದಿಯಲ್ಲೂ ಶಂಭುಭಟ್ಟರು ಇದನ್ನು ಮೂಲದಲ್ಲಿರುವಂತೆ ದೋಹಾ, ಚೌಪಾಯಿಗನುಗುಣವಾದ ಛಂದಸ್ಸಿನಲ್ಲೂ ಭಾಷಾಂತರಿಸಲು ಪ್ರಯತ್ನಿಸಿದ್ದಾರೆ. ಈ ಭಾಷಾಂತರಗಳಲ್ಲಿ ಕೆಲವು ಕೊರತೆಗಳು ಕಂಡುಬಂದರೂ ಈ ದಿಶೆಯಲ್ಲಿ ಇವನ್ನು ಆರಂಭಿಕ ಪ್ರಯತ್ನಗಳೆಂದು ಹೆಸರಿಸಬಹುದಾಗಿದೆ.

ಹಿಂದಿಯ ಪ್ರಚಾರ ದಕ್ಷಿಣ ಭಾರತದಲ್ಲಿ, ಅದರಲ್ಲೂ ಕನ್ನಡನಾಡಿನಲ್ಲಿ ವಿಶೇಷವಾಗಿ ನಡೆದುದರ ಫಲವಾಗಿ ಅನೇಕ ಕೃತಿಗಳು ಕನ್ನಡದಿಂದ ಹಿಂದಿ ಭಾಷೆಗೆ ಅನುವಾದವಾಗಿವೆ. ಕನ್ನಡದ ಅನೇಕ ಲೇಖಕರೂ ಹಿಂದಿಯಲ್ಲಿ ಸ್ವತಂತ್ರ ಕೃತಿಗಳನ್ನು ರಚಿಸಿದ್ದಾರೆಂಬುದು ಸಂತಸದ ಸಂಗತಿ. ಕನ್ನಡ ಸಾಹಿತ್ಯ ಸಾರ್ವಜನೀನ ಸಾಹಿತ್ಯವಾಗಬೇಕಾದರೆ ಮೊದಲು ಅದರ ಎಲ್ಲ ಪ್ರಮುಖ ಕೃತಿಗಳೂ ಹಿಂದಿಗೆ, ಇತರ ಭಾಷೆಗಳಿಗೆ ಭಾಷಾಂತರವಾಗಬೇಕು. ವಿಶ್ವವಿದ್ಯಾನಿಲಯಗಳೂ ಪ್ರಚಾರ ಸಮಿತಿಗಳೂ ಈ ನಿಟ್ಟಿನಲ್ಲಿ ಪ್ರಗತಿಪರವಾಗಿವೆ. ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನೆಯ ಅಂಗವಾಗಿ ಹಿಂದೀ ಮತ್ತು ಕನ್ನಡ ಸಾಹಿತ್ಯಗಳ ವಿವಿಧ ಮುಖಗಳ ತೌಲನಿಕ ಅಧ್ಯಯನ ನಡೆಯುತ್ತಿದೆ. ಇವುಗಳಲ್ಲಿ ಕೆಲವಾಗಲೇ ಪ್ರಕಟವಾಗಿವೆ.

## ಕನ್ನಡ—ಉರ್ದು, ಪಾರಸಿ, ಅರಬ್ಬಿ

ಕನ್ನಡ ಮತ್ತು ಉರ್ದು ಭಾಷೆಗಳ ನಡುವಣ ಬಾಂಧವ್ಯ ಸಾಕಷ್ಟು ಹಳೆಯದು ಹಾಗೂ ಗಮನಾರ್ಹವಾದುದು. ಉರ್ದು ಸಹ ಬಂಗಾಳಿ, ಹಿಂದಿ ಮುಂತಾದ ಉತ್ತರ ಭಾರತದ ಭಾಷೆಗಳಂತೆ ಇಂಡೋ-ಯೂರೋಪಿಯನ್ ಭಾಷಾವರ್ಗಕ್ಕೆ ಸೇರಿದ ಒಂದು ಆಧುನಿಕ ಆರ್ಯಭಾಷೆ. ಈಗ್ಗೆ ಸುಮಾರು ೧೦ ಶತಮಾನಗಳಿಗೆ ಹಿಂದೆಯೇ ಇರಾನ್, ಅಫ್ಘಾನಿಸ್ಥಾನ ಮೊದಲಾದ ದೇಶಗಳಿಂದ ವಲಸೆ ಬಂದ ಮುಸ್ಲಿಂ ವರ್ತಕರ, ದಾಳಿ

ಕಾರರ ಮತ್ತು ಸೂಫೀ ಮತದ ಸಂತರ ಸಂಸರ್ಗದಿಂದ ಪ್ರಭಾವಗೊಂಡು ೧೨ನೆಯ ಶತಮಾನದ ಸುಮಾರಿನಲ್ಲಿ ಶೌರಸೇನೀ ಅಪಭ್ರಂಶದಿಂದ ಈ ಭಾಷೆ ರೂಪುಗೊಂಡಿತೆನ್ನುತ್ತಾರೆ. ಉತ್ತರ ಭಾರತದ ಭಾಷೆಗಳಿಗೆಲ್ಲ ಸಾಮಾನ್ಯವಾಗಿ ಬ್ರಾಹ್ಮೀ ಲಿಪಿಯಿಂದ ವಿಕಾಸಗೊಂಡ ದೇವನಾಗರೀ ಲಿಪಿಯನ್ನು ಬಳಸಿದರೆ, ಈ ಭಾಷೆಯನ್ನು ಬರೆಯಲು ಸೆಮಿಟಿಕ್ ಲಿಪಿಯ ಗುಂಪಿಗೆ ಸೇರಿದ ಅರಬ್ಬಿ-ಪಾರಸಿ ಲಿಪಿಯನ್ನು ಸ್ವಲ್ಪ ಬದಲಾವಣೆಗಳೊಡನೆ ಬಳಸಿಕೊಳ್ಳಲಾಗುತ್ತದೆ. ಬಲದಿಂದ ಎಡಕ್ಕೆ ಬರೆಯುವುದು ಈ ಲಿಪಿಯ ಪದ್ಧತಿ.

ಹಿಂದಿ, ಉರ್ದು, ಹಿಂದುಸ್ತಾನಿ—ಈ ಮೂರು ಶಬ್ದಗಳ ಬಗ್ಗೆ ಅನೇಕ ಅಭಿಪ್ರಾಯಗಳಿವೆ. ಇವು ಮೂರನ್ನೂ ಹೆಚ್ಚು ಕಡಿಮೆ ಒಂದೇ ಅರ್ಥದಲ್ಲಿ ಬಳಸಲಾಗಿರುವುದೂ ಉಂಟು. ಸಂಸ್ಕೃತದ 'ಸ' ಧ್ವನಿ ಪಾರಸಿಯಲ್ಲಿ 'ಹ' ಎಂದಾಗಿ, ಸಂಸ್ಕೃತದ 'ಸಿಂಧು' ಅಥವಾ 'ಸಿಂಧೀ' ಎಂಬ ಶಬ್ದದ ಪಾರಸಿ ರೂಪವೇ 'ಹಿಂದೀ' ಆಗುತ್ತದೆ. ಶಿಷ್ಟ ಹಿಂದೀ ಭಾಷೆಯಲ್ಲಿ ಸಂಸ್ಕೃತ ಶಬ್ದಗಳ ಬಳಕೆ ಹೆಚ್ಚು. ಹಲವು ವಿದ್ವಾಂಸರು ಉರ್ದುವನ್ನು ಹಿಂದಿಯ ಒಂದು ಉಪಭಾಷೆಯೆಂತಲೂ ಮತ್ತೆ ಕೆಲವರು ಹಿಂದೀ ಭಾಷೆಯ ಒಂದು ವಿಶಿಷ್ಟ ಶೈಲಿ ಎಂದೂ ಪರಿಗಣಿಸಿರುವುದುಂಟು.[93] ಆದರೆ ಉರ್ದು ಭಾಷೆಗೆ ತನ್ನದೇ ವೈಶಿಷ್ಟ್ಯವಿದೆ. ವ್ಯಾಕರಣದ ದೃಷ್ಟಿಯಿಂದ ಈ ಎರಡು ಭಾಷೆಗಳ ನಡುವೆ ಅಂಥ ವ್ಯತ್ಯಾಸಗಳಿಲ್ಲ; ಆದರೆ ಸಾಹಿತ್ಯಿಕ ವಾತಾವರಣ, ಶಬ್ದಭಂಡಾರ ಹಾಗೂ ಲಿಪಿಯ ದೃಷ್ಟಿಯಿಂದ ಇವೆರಡೂ ಬೇರೆಯೇ ಆದವು. ಭಾರತೀಯ ವಾತಾವರಣದಲ್ಲಿ ಬೆಳೆದುಬಂದಿದ್ದರೂ ಉರ್ದುವಿನ ಮೇಲೆ ಇರಾನ್ ಹಾಗೂ ಅರಬ್ ಸಂಸ್ಕೃತಿ, ನಾಗರಿಕತೆಗಳ ಪ್ರಭಾವ ಹೆಚ್ಚು. ಭಾಷೆಗೆ 'ಉರ್ದು' ಎಂಬ ಹೆಸರು ಬಂದುದು ಷಹಜಹಾನನ ಕಾಲದಲ್ಲಿ. ತುರ್ಕಿ ಭಾಷೆಯಲ್ಲಿ 'ಉರ್ದು' ಎಂದರೆ 'ಪೇಟೆ' ಎಂದರ್ಥ. ವಾಸ್ತವವಾಗಿ ಮೊದಲು ಉರ್ದು ಪೇಟೆಯ ಭಾಷೆಯೇ ಆಗಿತ್ತು. ಇಂದು ಸಹ ಆ ಭಾವನೆಯಿದೆ. ಹಿಂದುಸ್ತಾನಿ ಎಂದು ಈ ಭಾಷೆಗೆ ಹೆಸರನ್ನಿಟ್ಟವರು ಐರೋಪ್ಯರು. ಮೊದಲಿಗೆ 'ಹಿಂದುಸ್ತಾನಿ' 'ಉರ್ದು'ವಿಗೆ ಪರ್ಯಾಯಪದವಾಗಿದ್ದು, ಈಚೆಗೆ ಉರ್ದುವಿನ ಆಡುಮಾತಿನ ರೂಪಕ್ಕೆ 'ಹಿಂದುಸ್ತಾನಿ' ಎನ್ನಲಾಗುತ್ತಿದೆ.[94] ಹಿಂದುಸ್ತಾನಿಯಲ್ಲಿ ಪಾರಸಿ ಭಾಷೆಯ ಶಬ್ದಗಳ ಬಳಕೆ ಉರ್ದುವಿನಲ್ಲಿರುವಷ್ಟು ಇಲ್ಲವಾದರೂ ಪಾರಸಿ ಕಡೆಗೇ ಒಲವು ಹೆಚ್ಚು.

ಕ್ರಿ.ಶ. ಸು. ೬೩೬ರಲ್ಲಿ ಒಂದು ಪ್ರಬಲ ಸೈನಿಕ ಶಕ್ತಿಯಾಗಿ ಅರಬ್ಬರು ಭಾರತಕ್ಕೆ ನುಗ್ಗಿಬಂದ ಮೇಲೆ, ಚಾಲುಕ್ಯರ ಕಾಲದಲ್ಲಿಯೂ ಅದಕ್ಕಿಂತ ವಿಶೇಷವಾಗಿ ರಾಷ್ಟ್ರಕೂಟರ ಕಾಲದಲ್ಲಿಯೂ ಅವರೊಡನೆ ಕನ್ನಡನಾಡಿನ ಸಂಬಂಧ ಸಂಪರ್ಕಗಳೇರ್ಪಟ್ಟವು. ರಾಷ್ಟ್ರಕೂಟರ ಕಾಲದಲ್ಲಿ ಕನ್ನಡನಾಡಿನಲ್ಲಿ ನೆಲೆನಿಂತ ಅರಬ್ಬರು ಕನ್ನಡಿಗರೊಡನೆ ವ್ಯವಹರಿಸಲು ಆರಂಭಿಸಿದ್ದು ಈ ಎರಡರ ನಡುವಣ ಭಾಷಾ ಸಂಸ್ಕೃತಿಗಳ ವಿನಿಮಯಕ್ಕೆ ನಾಂದಿಯಾಯಿತೆಂದು ಪ್ರಾಯಶಃ ತೋರುತ್ತದೆ. ಕ್ರಿ.ಶ. ೧೦೨೭ರಲ್ಲಿ ಘಜ್ನಿ ಮಹಮದನ ಸೈನ್ಯ ಲಾಹೋರಿನಲ್ಲಿ ಕಾಲಿಟ್ಟಾಗ ಉರ್ದು ಭಾಷೆಗೆ ವಾಸ್ತವವಾಗಿ ಅಸ್ತಿಭಾರವಾಯಿತು. ಪಾರಸಿ ಹಾಗೂ ತುರ್ಕಿ ಭಾಷೆ ಮಾತನಾಡುತ್ತಿದ್ದ ಸೈನಿಕರು ತಮ್ಮ ವ್ಯವಹಾರಕ್ಕಾಗಿ

ಪ್ರಾದೇಶಿಕ ಭಾಷೆಯನ್ನೇ ಆಶ್ರಯಿಸಬೇಕಾಯಿತು. ಬೇಲಿ ಎಂಬ ಆಂಗ್ಲ ವಿದ್ವಾಂಸರು ಉರ್ದು ಭಾಷೆ ದೆಹಲಿಯಲ್ಲಿ ಉಪಯೋಗಿಸುತ್ತಿದ್ದ ಖಡೀಬೋಲಿಯ ಸಂಸರ್ಗದಿಂದ ಜನಿಸದೆ ಹಳೆಯ ಪಂಜಾಬಿ ಭಾಷೆಯಿಂದ ಹುಟ್ಟಿ ಲಾಹೋರಿನ ಮೂಲಕ ದೆಹಲಿಗೆ ಬಂದಿತೆಂದು ಹೇಳಿದ್ದಾರೆ.[95] ಈ ಸೈನ್ಯಭಾಷೆ ಒಂದು ರೀತಿಯಲ್ಲಿ ಅರಬ್ಬಿ, ಪಾರಸಿ ಮತ್ತು ತುರ್ಕಿ ಭಾಷೆಗಳ ಮಿಶ್ರವಾಗಿದ್ದು, ಇದರ ಶಬ್ದಕೋಶಕ್ಕೆ ಅನೇಕ ಪ್ರಾದೇಶಿಕ ಬಳಕೆಯ ಶಬ್ದಗಳು ಬಂದು ಸೇರಿದವು. ದೆಹಲಿ ಹಾಗೂ ಉತ್ತರ ಭಾರತದಲ್ಲಿ ಪಾರಸಿ ಭಾಷೆಯು ಆಡಳಿತ ಭಾಷೆ ಮತ್ತು ಸಾಹಿತ್ಯ ಭಾಷೆಯಾಗಿದ್ದಾಗ ಸು. ೪ ಶತಮಾನಗಳ ಕಾಲ ಉರ್ದು ಜನಗಳ ಆಡುಭಾಷೆಯಾಗಿತ್ತು. ವಾಸ್ತವವಾಗಿ ದಕ್ಷಿಣದಲ್ಲಿ, ಅದರಲ್ಲೂ ಕರ್ಣಾಟಕದಲ್ಲಿ, ಉರ್ದುವಿನ ಪ್ರವೇಶವಾದುದು ೧೩ನೆಯ ಶತಮಾನದ ಕಡೆಯ ದಶಕಗಳಲ್ಲಿ.

ಈ ಕಾಲದಲ್ಲಿ ಉತ್ತರ ಭಾರತದ ಸೂಫಿ ಧರ್ಮಾನುಯಾಯಿಗಳೂ ವ್ಯಾಪಾರಿಗಳೂ ಗುಜರಾತ್ ಮೂಲಕವಾಗಿ ಕರ್ಣಾಟಕದ ಉತ್ತರ ಭಾಗಕ್ಕೂ ದಖನ್ನಿನ ಸುತ್ತಮುತ್ತಲಿನ ಪ್ರದೇಶಗಳಿಗೂ ಬಂದರು. ಇವರೊಡನೆ ಉರ್ದು ಭಾಷೆಯೂ ಬಂತು. ದಕ್ಷಿಣದಲ್ಲಿ ಖಿಲ್ಜಿ ಮನೆತನದ ದಾಳಿಗಳು (೧೨೯೪–೧೩೧೧) ನಡೆಯುವ ವೇಳೆಗಾಗಲೇ, ಉರ್ದು ಸ್ವಲ್ಪಮಟ್ಟಿಗೆ ಅಲ್ಲಿ ನೆಲೆಯೂರಿತ್ತು. ಮಹಮದ್ ಬಿನ್ ತೊಘಲಕನು ದೆಹಲಿಯಿಂದ ದೌಲತಾಬಾದಿಗೆ ತನ್ನ ರಾಜಧಾನಿಯನ್ನು ಬದಲಾಯಿಸಲು ಯೋಚಿಸಿದುದರಿಂದ, ಉರ್ದು ಭಾಷೆಯನ್ನಾಡುತ್ತಿದ್ದ ಜನರ ಪ್ರವಾಹವೇ ದಕ್ಷಿಣಕ್ಕೆ ಹರಿಯುವಂತಾಯಿತು. ೧೩ನೆಯ ಶತಮಾನದಿಂದ ಈಚೆಗೆ ಕನ್ನಡ ನಾಡಿನ ಮೇಲೆ ಮಹಮ್ಮದೀಯರ ಆಕ್ರಮಣವೂ ಆಳ್ವಿಕೆಯೂ ಮೊದಲಾಗಿ ಕನ್ನಡಿಗರಿಗೂ ಮಹಮ್ಮದೀಯರಿಗೂ ನಿಕಟವಾದ ಸಂಪರ್ಕಗಳು ಏರ್ಪಟ್ಟವು. ಅದು ದಕ್ಷಿಣ ಭಾರತಕ್ಕೆ ವಿಷಮ ಸಮಯ. ಚಾಲುಕ್ಯರ ಅಧೀನದಲ್ಲಿ ಮಾಂಡಲಿಕರಾಗಿ ರಾಜ್ಯವಾಳುತ್ತಿದ್ದವರು ಈ ಕಾಲದಲ್ಲಿ ಸ್ವತಂತ್ರರಾಗಿ, ತಂತಮ್ಮೊಳಗೇ ಕಾದಾಡತೊಡಗಿದ ನಿಮಿತ್ತವಾಗಿ ಕನ್ನಡ ನಾಡಿನ ಒಗ್ಗಟ್ಟು ಒಡೆದು ಚೂರಾಯಿತು. ಸಮಯವನ್ನು ಕಾಯುತ್ತಿದ್ದ ಅಲ್ಲಾಉದ್ದೀನ್, ಮಲ್ಲಿಕ್ ಕಾಫರ್ ಮೊದಲಾದವರು ಉತ್ತರದಿಂದ ದಂಡೆತ್ತಿ ಬಂದು ದಕ್ಷಿಣದಲ್ಲಿ ನೆಲೆಗೊಂಡಿದ್ದ ಅರಸೊತ್ತಿಗೆಗಳನ್ನು ಧ್ವಂಸಮಾಡಿ ನಾಡನ್ನು ತಮ್ಮ ವಶವಾಗಿಸಿಕೊಂಡರು. ಅಂದು ಮೊದಲುಗೊಂಡು ಕನ್ನಡ ನಾಡು ನೇರವಾಗಿ ಮಹಮ್ಮದೀಯರ ವಶವಾಗಿ, ಇಸ್ಲಾಂ ಸಂಸ್ಕೃತಿ ಹಾಗೂ ಭಾಷೆಯ ಸಂಬಂಧ ಅಂದಿನಿಂದ ಹೆಚ್ಚಾಯಿತು. ಈ ಕದನಗಳಿಗೆ ಮೊದಲೇ ಮುಸಲ್ಮಾನ್ ವ್ಯಾಪಾರಿಗಳೂ ಮತಪ್ರಚಾರಕರೂ ಆಗಾಗ ಕನ್ನಡ ನೆಲದಲ್ಲಿ ಸುಳಿದಾಡುತ್ತಿದ್ದರೂ ಅವರ ಪ್ರಭಾವ ಕನ್ನಡದ ಮೇಲೆ ಅಷ್ಟೊಂದು ಹೆಚ್ಚಿರಲಿಲ್ಲ. ಆದರೆ ಅನಂತರ ಕಾಲದ ಸಂಪರ್ಕಗಳಿಂದ ಈ ಎರಡು ಭಾಷೆಗಳಲ್ಲಿ ಕೊಳ್ಕೊಡೆಗಳು ನಡೆಯತೊಡಗಿದವು. ಕ್ರಿ.ಶ. ೧೩೪೭ರಲ್ಲಿ ಬಹಮನಿ ಸುಲ್ತಾನರ ಆಳ್ವಿಕೆ ಗುಲ್ಬರ್ಗದಲ್ಲಿ ಸ್ಥಾಪನೆಗೊಂಡ ನಂತರ ಉರ್ದುವಿಗೆ ಭದ್ರವಾದ ಬುನಾದಿ ಬಿದ್ದು, ಅದು ಕರ್ಣಾಟಕದಲ್ಲಿ ಬೇರುಬಿಟ್ಟಿತು.

ಉರ್ದು ಭಾಷೆ ಉತ್ತರದಲ್ಲಿ ಹಾಗೂ ದಕ್ಷಿಣದಲ್ಲಿ ಬೇರೆ ಬೇರೆ ರೀತಿಯ ವೈಶಿಷ್ಟ್ಯಗಳನ್ನು ಪಡೆದುಕೊಂಡು ಬೆಳೆಯಿತು. ಕಳೆದ ಸುಮಾರು ೪ ಶತಮಾನಗಳಷ್ಟು ಅವಧಿಯಲ್ಲಿ (ಕ್ರಿ.ಶ. ೧೩೪೮–ಸು. ಕ್ರಿ.ಶ. ೧೭೦೦) ಉತ್ತರ ಕರ್ನಾಟಕದಲ್ಲಿ ಅದು ದೃಢವಾಗಿ ಬೆಳೆದು ಅಲ್ಲಿಯ ಹಾಗೂ ದಖನ್ನಿನ ಸುತ್ತಮುತ್ತಲ ಪ್ರದೇಶಗಳ ಶಿಷ್ಟಭಾಷೆಯಾಗಿ ಬೆಳೆದು ನಿಂತಿತು. ದಕ್ಷಿಣದ ಈ ಉರ್ದುವನ್ನು 'ದಖ್ನಿ' ಅಥವಾ 'ದಕ್ಖನಿ' ಎಂದು ಹೆಸರಿಸಿದ್ದಾರೆ. ದಕ್ಷಿಣದಲ್ಲಿ ಅಥವಾ ದಖನ್ನಿನಲ್ಲಿ ಬಳಸುವುದರಿಂದ ಆ ಹೆಸರು. ಉತ್ತರದ ಉರ್ದುವಿಗಿಂತ ದಖ್ನಿ ಭಾಷೆಯಲ್ಲಿ ಪಾರಸಿ ಶಬ್ದಗಳ ಸಂಖ್ಯೆ ಕಡಮೆ, ಪ್ರಾದೇಶಿಕ ಶಬ್ದಗಳ ಪ್ರಭಾವ ಹೆಚ್ಚು. ಸಾಹಿತ್ಯ ರಚನೆ ಉರ್ದುವಿಗಿಂತ ಮೊದಲು ದಖ್ನಿಯಲ್ಲಿಯೇ ಆದದ್ದು, ಉತ್ಕೃಷ್ಟವಾದ ದಖ್ನಿ ಸಾಹಿತ್ಯದ ಸೃಷ್ಟಿಯಾದ್ದು ಕರ್ನಾಟಕದಲ್ಲೇ.

ಕೆಲಕಾಲಾನಂತರ ಬಹಮನಿ ಮನೆತನ ಹಾಳಾಗಿ ಆ ರಾಜರ ಕೈಕೆಳಗಿನ ಮಾಂಡಲಿಕರು ಸ್ವತಂತ್ರರಾದರು. ಬಿಜಾಪುರ, ಬೀದರ್‌ಗಳು ಕನ್ನಡ ನಾಡಿನ ಎರಡು ಮುಖ್ಯ ರಾಜಧಾನಿಗಳಾದವು. ಕರ್ನಾಟಕದಲ್ಲಿ ಆಗ ಇದ್ದ ಹಿಂದುರಾಜ್ಯವೆಂದರೆ ವಿಜಯನಗರವೇ. ಮೂರು ವಿಭಾಗಗಳಾಗಿ ಒಡೆದ ಕರ್ನಾಟಕದ ಒಂದು ಭಾಗವನ್ನು ಒಬ್ಬ ಹಿಂದು ರಾಜನೂ ಮತ್ತೆರಡು ಭಾಗಗಳನ್ನು ಮಹಮ್ಮದೀಯ ಸುಲ್ತಾನರೂ ಆಳತೊಡಗಿದ್ದರು. ಉತ್ತರ ಕರ್ನಾಟಕದಲ್ಲಿ ಗುಲ್ಬರ್ಗ, ಬೀದರ್ ಮತ್ತು ಬಿಜಾಪುರಗಳಲ್ಲಿ ಸುಮಾರು ೧೦ ಶತಮಾನಗಳ ಪರ್ಯಂತ ವೈಭವದಿಂದ ಆಳಿದ ಬಹಮನಿ ಮತ್ತು ಆದಿಲ್‌ಷಾಹಿ ಸುಲ್ತಾನರು ದಖ್ನಿಯನ್ನೇ ತಮ್ಮ ದರ್ಬಾರಿನ ಭಾಷೆಯನ್ನಾಗಿ ಮಾಡಿಕೊಂಡು ಆಡಳಿತ ಕಾರ್ಯಗಳಿಗೆಲ್ಲ ಅದನ್ನೇ ಬಳಸಲಾರಂಭಿಸಿದರು. ಕೇವಲ ಆಡಳಿತ ಭಾಷೆಯಾಗಿಯೇ ಅಲ್ಲದೆ ಆಡುನುಡಿಯಾಗಿಯೂ ದಖನ್ನಿನಲ್ಲೆಲ್ಲ ಈ ಭಾಷೆ ಪ್ರಚಲಿತವಾಯಿತು. ಆದರೆ ಉತ್ತರದಲ್ಲಿ ಉರ್ದುವಿನ ಸ್ಥಿತಿ ಮುಂದೆಯೂ ಮೂರು ಶತಮಾನಗಳ ಕಾಲ ಆಡುಮಾತಾಗಿಯಷ್ಟೇ ಬಳಕೆಯಲ್ಲಿ ಉಳಿಯಿತು. 'ಅಫಕಿಸ್' ಎಂದರೆ ಪರದೇಶೀಯರಾದ ಪಾರಸಿ ಮತ್ತು ಅರಬ್ಬೀ ಭಾಷೆಗಳನ್ನಾಡುತ್ತಿದ್ದ ಇರಾನಿಗಳು, ಅಫ್ಘನರು ಮತ್ತು ಅರಬ್ಬರು ಮೊದಲಾದವರಿಂದ ಬೇರೆಯೆನಿಸಿದ ದಖನ್ನಿಗಳ ಮಾತೃಭಾಷೆಯಾಗಿ ದಖ್ನಿ ಸ್ವೀಕೃತವಾಯಿತು. ಇದನ್ನು ಹಳೆಯ ಉರ್ದು ಎಂದೂ ಕೆಲವು ವಿದ್ವಾಂಸರು ಪರಿಗಣಿಸಿದ್ದಾರೆ.[೨೬]

ಉತ್ತರ ಭಾರತದಲ್ಲಿ ಉರ್ದು ಸಾಹಿತ್ಯ ಅಸ್ತಿತ್ವಕ್ಕೆ ಬರುವುದಕ್ಕೆ ಮೂರು ಶತಮಾನಗಳಷ್ಟು ಮೊದಲೇ ದಖ್ನಿ ಸಾಹಿತ್ಯ ಆರಂಭವಾಗಿತ್ತು. ದಖ್ನಿಯ ಮೊದಲ ಕವಿ ವಲಿ ಕ್ರಿ.ಶ. ೧೭೦೦ರ ಸುಮಾರಿನಲ್ಲಿ ದೆಹಲಿಗೆ ಭೇಟಿ ನೀಡಿದ ಫಲಶ್ರುತಿಯಾಗಿ ಉತ್ತರದಲ್ಲಿ ಉರ್ದು ಸಾಹಿತ್ಯದ ಅಸ್ತಿಭಾರವಾಯಿತು ಎಂಬುದನ್ನಿಲ್ಲಿ ನೆನೆಯಬೇಕು. ಕ್ರಿ.ಶ. ೧೬೮೬ರಲ್ಲಿ ಔರಂಗಜೇಬ್ ದಕ್ಷಿಣವನ್ನು ಗೆದ್ದ ಕೂಡಲೇ ದಕ್ಷಿಣದಿಂದ ಉತ್ತರಕ್ಕೂ ಉತ್ತರದಿಂದ ದಕ್ಷಿಣಕ್ಕೂ ಸಾಹಿತಿಗಳು ಪ್ರವಾಸ ಮಾಡಲಾರಂಭಿಸಿದರು. ಸಾಕಷ್ಟು ವಿಕಾಸ

ಗೊಂಡಿದ್ದ ದಖ್ನಿ ಕಾವ್ಯ ಉತ್ತರದ ದೆಹಲಿಗೆ ತಲಪಿ, ಪಾರಸಿ ಭಾಷೆಯ ಹಿರಿಮೆಯನ್ನೇ ಎತ್ತಿಹಿಡಿಯುತ್ತಿದ್ದ ಆಸ್ಥಾನಕವಿಗಳ ಭ್ರಮೆಯನ್ನು ಹೋಗಲಾಡಿಸಿತು. ದೆಹಲಿಯಲ್ಲೂ ದಖ್ನಿ ಕಾವ್ಯರಚನೆ ಪ್ರಾರಂಭವಾಯಿತು. ಈ ವಿನಿಮಯದ ಪರಿಣಾಮವಾಗಿ ಉರ್ದು ಭಾಷೆ ದಕ್ಷಿಣಕ್ಕೆ ಬಂದು ಕಾಲಕ್ರಮೇಣ ತಾನೇ ದಖ್ನಿಯ ಸ್ಥಾನವನ್ನೂ ಆಕ್ರಮಿಸಿ ಬಿಟ್ಟಿತು.

ಕರ್ನಾಟಕದಲ್ಲಿ ಉರ್ದು ಹಾಗೂ ದಖ್ನಿಗೆ ಸಂಬಂಧಿಸಿದಂತೆ ಸು. ೬ ಶತಮಾನಗಳ ಕಾಲ ಸಾಹಿತ್ಯಿಕ ಚಟುವಟಿಕೆಗಳು ನಡೆದವು. ಇವುಗಳನ್ನು ಸ್ಥೂಲವಾಗಿ ನಾಲ್ಕು ಭಾಗ ಗಳಾಗಿ ವಿಂಗಡಿಸಬಹುದು.[೧೭] ಬಹಮನಿ ಸುಲ್ತಾನರ ಕಾಲ (೧೩೪೭–೧೫೨೫); ಮೊಗಲ ಸಮ್ರಾಟರ ಕಾಲ (೧೬೮೬–೧೭೫೦); ಹೈದರ್-ಟಿಪ್ಪುಸುಲ್ತಾನರ ಕಾಲ (೧೭೬೧–೧೭೯೯); ಮೈಸೂರು ಮಹಾರಾಜರುಗಳ ಕಾಲ (೧೭೯೯–೧೯೫೦).

ಗುಲ್ಬರ್ಗದ ಬಹಮನಿ ಸುಲ್ತಾನರೂ ಬಿಜಾಪುರದ ಆದಿಲ್‌ಷಾಹಿ ಸುಲ್ತಾನರೂ ತಾವು ಆಳಿದ ೪ ಶತಮಾನಗಳ ಕಾಲ ಸಾಹಿತ್ಯ ಕಲೆಗಳಿಗೆ ಬಹಳ ಪ್ರೋತ್ಸಾಹವನ್ನಿತ್ತರು. ಇವರಲ್ಲಿ ಅನೇಕರು ಸ್ವತಃ ಕವಿಗಳೂ ವಿದ್ವಾಂಸರೂ ಆಗಿದ್ದು ತಮ್ಮ ಆಸ್ಥಾನಗಳಲ್ಲಿ ದೂರದೂರದಿಂದ ಆಕರ್ಷಿತರಾಗಿ ಬಂದ ವಿದ್ವಾಂಸರಿಗೆಲ್ಲ ಮನ್ನಣೆಯನ್ನಿತ್ತಿದ್ದರು. ಇವರ ಆಸ್ಥಾನದ ಕವಿಗಳು, ಚರಿತ್ರಕಾರರು ಹಾಗೂ ಮಲಿಕುಷ್ ಷೋರಾಗಳು (ಸ್ಥಳೀಯ ಕವಿಗಳು) ತಮಗೆ ಆಶ್ರಯದಾತರಾದ ಸುಲ್ತಾನರ ಹೆಸರನ್ನು ತಮ್ಮ ರಚನೆಗಳ ಮೂಲಕ ಶಾಶ್ವತವನ್ನಾಗಿಸಿದ್ದಾರೆ. ಇವರ ಕಾಲದಲ್ಲಿಯೇ ದಖ್ನಿ ಆಡಳಿತ ಭಾಷೆಯಾಗಿ, ವ್ಯಾವಹಾರಿಕ ಭಾಷೆಯಾಗಿ, ಸಾಹಿತ್ಯ ಸೃಷ್ಟಿಯ ಮಾಧ್ಯಮವೂ ಆಯಿತು. ಬಹಮನಿ ಸುಲ್ತಾನ ಮೊದಲನೆ ಮಹಮುದ್ ಷಾ (೧೩೭೫) ಹೊರನಾಡಿನ ಶ್ರೇಷ್ಠಕವಿ ಶೀರಾಜ್ ಹಾಫೀಜನನ್ನು ತನ್ನ ಆಸ್ಥಾನಕ್ಕೆ ಬರುವಂತೆ ಆಹ್ವಾನಿಸಿದ್ದನು. ದಖ್ನಿ ಸಾಹಿತ್ಯ-ಸಂಸ್ಕೃತಿಗಳಿಗೆ ತಳಹದಿ ಹಾಕಿದವರ ಪೈಕಿ ಬಹಮನಿಯ ಫಿರೋಜ್‌ಷಹನದು (೧೪೩೬) ದೊಡ್ಡ ಹೆಸರು. ಈತನ ಆಳ್ವಿಕೆಗೆ ಸ್ವಲ್ಪ ಮುಂಚೆಯಷ್ಟೇ ಬಂದೇ ನವಾಜ್ ಗೇಸು ದರಾಜ್ ಎಂದು ಖ್ಯಾತನಾಗಿದ್ದ ಹಿರಿಯ ಸೂಫಿ ಸಂತ ಸೈಯದ್ ಮಹಮುದ್ ಹುಸೇನಿ ಗುಲ್ಬರ್ಗಕ್ಕೆ ಶಿಷ್ಯಸಮೇತನಾಗಿ ಆಗಮಿಸಿ ಕೊನೆಗಾಲದವರೆಗೂ ಅಲ್ಲಿಯೇ ಉಳಿದ. ಈತ ಅರೇಬಿಕ್ ಮತ್ತು ಪರ್ಶಿಯನ್‌ಗಳಲ್ಲಿ ವಿದ್ವಾಂಸನಾಗಿದ್ದನಲ್ಲದೆ ಸಂಸ್ಕೃತವನ್ನೂ ಚೆನ್ನಾಗಿ ತಿಳಿದಿದ್ದ. ದಖ್ನಿ ಮತ್ತು ಉರ್ದು ಸಾಹಿತ್ಯಗಳಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಕಾವ್ಯ ಹಾಗೂ ಗದ್ಯದ ರಚನೆಗಳನ್ನು ಈತ ಕರ್ನಾಟಕದಲ್ಲಿಯೇ ಮಾಡಿದನೆಂಬುದು ಹೆಮ್ಮೆಯ ವಿಷಯ. ಈತನ 'ಮೆರಾಜುಲ್ ಆಶಖೀನ್' ಬಹು ಪ್ರಸಿದ್ಧವಾದ ಕೃತಿ. ಇದೇ ಕಾಲದ ಮತ್ತೊಬ್ಬ ಶ್ರೇಷ್ಠ ಕವಿಯೆಂದರೆ 'ಮಸ್ನವಿ ಕದಮ್ ರಾವ್ ಪದಮ್' ರಚಿಸಿದ ನಿಜಾಮಿ ಎಂಬುವನು. ಖ್ಯಾತ ವಿದ್ವಾಂಸನಾಗಿದ್ದ ಇಬ್ರಾಹಿಂ ಆದಿಲ್‌ಷಾಹಿಯ 'ನವರಸ್' ಎಂಬ ಕಾವ್ಯವೂ ಮಹತ್ತ್ವಪೂರ್ಣವಾದುದು.

ಮೊಗಲರು ಬಿಜಾಪುರದ ಮೇಲೆ ಆಕ್ರಮಣ ನಡಸಿ ಅದನ್ನು ವಶಪಡಿಸಿಕೊಂಡಮೇಲೆ

(ಕ್ರಿ.ಶ. ೧೬೮೭-೮೬) ಕರ್ನಾಟಕವಲ್ಲಿ ದಖ್ನಿ ಸಾಹಿತ್ಯ ಅವನತಿ ಹೊಂದತೊಡಗಿತು. ಅನಂತರ ಚೇತರಿಸಿಕೊಳ್ಳಲು ಇಲ್ಲಿ ಆದಕ್ಕೆ ಸಾಧ್ಯವಾಗಲೇ ಇಲ್ಲ. ಮೊಗಲರ ಆಡಳಿತದ ಅಸ್ತವ್ಯಸ್ತತೆಯಿಂದಾಗಿ, ದಖ್ನಿ ಸಾಹಿತ್ಯ ಹೈದರಾಬಾದ್, ಔರಂಗಾಬಾದ್, ಸಿದ್ಧೋಟ್ ಮೊದಲಾದೆಡೆಗಳಲ್ಲಿ ಬೆಳೆಯತೊಡಗಿತು. ಕರ್ನಾಟಕದಲ್ಲಿ ಕ್ರಮೇಣ ದಖ್ನಿಯ ಸ್ಥಾನವನ್ನು ರಾಜಕೀಯವಾಗಿ, ಸಾಹಿತ್ಯಿಕವಾಗಿ ಉರ್ದು ಆಕ್ರಮಿಸತೊಡಗಿತು. ಈ ಅವಧಿಯಲ್ಲಿ ಹೊರಬಂದ ಸಾಹಿತ್ಯದ ಪ್ರಮಾಣ ಬಹಳ ಸ್ವಲ್ಪವೇ. ಗುಲ್ಬರ್ಗದ ಜಾಸಿ ಮಹಮ್ಮದ್ ಬಹರಿ ಎಂಬ ಸೂಫಿ ವಿದ್ವಾಂಸ 'ಮನ್‌ಲಗನ್' ಎಂಬ ಸೂಫಿ ಧರ್ಮವನ್ನು ಕುರಿತ ದೀರ್ಘ ಕಾವ್ಯವೊಂದನ್ನು ರಚಿಸಿದ್ದಾನೆ. ಹಳೆಯ ಮೈಸೂರು ಪ್ರದೇಶದಲ್ಲಿ ರಚಿತವಾದ ಅತ್ಯಂತ ಹಳೆಯ ದಖ್ನಿ ರಚನೆಗಳೆಂದರೆ ನೆಲಮಂಗಲದ ಷಹ ಸದ್ರುದ್ದೀನ್ ಎಂಬಾತನವು. ದಖ್ನಿ ಮತ್ತು ಉರ್ದು ಈ ಕಾಲದಲ್ಲಿ ದಕ್ಷಿಣ ಕರ್ನಾಟಕದಲ್ಲೂ ಪ್ರಚಲಿತವಾಗತೊಡಗಿದುದು ಒಂದು ಗಮನಾರ್ಹವಾದ ಅಂಶ. ಸದ್ರುದ್ದೀನನ ಕೃತಿಗಳ ಪೈಕಿ 'ಮಿರತುಲ್ ಅಸ್ರಾರ್' ಎಂಬುದು ಸಂಪಾದಿತವಾಗಿ ಪ್ರಕಟವಾಗಿದೆ.

ಹೈದರ್ ಆಲಿ ಮತ್ತು ಅವನ ಮಗ ಟಿಪ್ಪುಸುಲ್ತಾನನ ಕಾಲದಲ್ಲಿ ಅವರ ಗಮನ ವಿಶೇಷವಾಗಿ ರಾಜಕಾರಣ ಹಾಗೂ ಸೈನಿಕ ಕಾರ್ಯಾಚರಣೆಗಳೆಡೆಗೇ ಇದ್ದುದರಿಂದ, ಸಾಹಿತ್ಯ ಕಲೆಗಳ ಅಭಿವೃದ್ಧಿಯ ಕಡೆಗೆ ಅವರು ವಿಶೇಷ ಗಮನವೀಯಲಾಗಲಿಲ್ಲ. ಆದರೂ ಅವರ ಆಸ್ಥಾನದಲ್ಲಿ ಸಾಹಿತ್ಯದ ಬೆಳವಣಿಗೆಗೆ ಸಾಕಷ್ಟು ಪ್ರೋತ್ಸಾಹ ದೊರೆಯಿತು. ಕವಿಗಳೂ ಚರಿತ್ರಕಾರರೂ ಸಾಕಷ್ಟು ಸಂಖ್ಯೆಯಲ್ಲಿದ್ದ ಅವರ ಆಸ್ಥಾನದಲ್ಲಿ ಪರ್ಷಿಯನ್ ಹಾಗೂ ಕನ್ನಡಗಳು ವ್ಯವಹಾರ ಭಾಷೆಗಳಾಗಿದ್ದವು. ದಖ್ನಿ ಭಾಷೆ ಇವರ ಕಾಲದಲ್ಲಿ ಆಡುನುಡಿಯಾಗಿ ಮುಂದುವರಿಯಿತು. ಹೈದರ್ ಆಲಿ ಓದುಬರಹ ಬಲ್ಲವನಾಗದಿದ್ದರೂ ಆತನಿಗೆ ಅನೇಕ ಭಾಷೆಗಳ ಅರಿವು ಇತ್ತು ಎನ್ನಲಾಗಿದೆ. ಹೈದರನ ಹೊಗಳುಭಟ್ಟರು ಅವನನ್ನೂ ಅವನ ಸಾಹಸಗಳನ್ನೂ ಕನ್ನಡದಲ್ಲಿಯೇ ಹೊಗಳುತ್ತಿದ್ದರಂತೆ.[೯೮] ಟಿಪ್ಪುಸುಲ್ತಾನನಾದರೋ ವಿದ್ವಾಂಸನಾಗಿದ್ದುದರಿಂದ ದಖ್ನಿಯಲ್ಲಿ ಹಲವಾರು ಪತ್ರಗಳನ್ನೂ ಬರೆದಿದ್ದಾನೆ. ಟಿಪ್ಪುವಿನ ಕಾಲದಲ್ಲಿ ತರಫ್‌ದಾರರು ಕಂದಾಯದ ವಿವರಗಳನ್ನು ಕನ್ನಡದಲ್ಲಿ ಇಡುತ್ತಿದ್ದರು. ಕನ್ನಡ, ಮರಾಠಿ ಹಾಗೂ ಪಾರಸಿ ಭಾಷೆಗಳಲ್ಲಿ ಲೆಕ್ಕಪತ್ರಗಳ ಪ್ರತಿಯನ್ನು ತೆಗೆಯಲಾಗುತ್ತಿತ್ತು.[೯೯] ಟಿಪ್ಪುಸುಲ್ತಾನನ ನೇತೃತ್ವದಲ್ಲಿ ಕರ್ನಾಟಕದಲ್ಲಿ ಜಾಯ್ನುಲ್ ಅಬ್ದಿನ್ ಷೂಸ್ತ್ರಿ ಎಂಬಾತ 'ಫತ್‌ಮುಲ್ ಮುಜಾಹಿದೀನ್' ಎಂಬ ಕೃತಿಯನ್ನೂ ಆಸ್ಥಾನ ಕವಿಯೂ ವಿದ್ವಾಂಸನೂ ಆಗಿದ್ದ ಹುಸೇನ್ ಅಲಿ ಇಜ್ಜಾತ್ ಸಂಗೀತ ಶಾಸ್ತ್ರವನ್ನು ಕುರಿತ 'ಮುಫ್ರಿ ಹುಲ್ ಕುಲೀಬ್' ಎಂಬ ಕೃತಿಯನ್ನೂ ರಚಿಸಿದರು. ಸುಲ್ತಾನನಿಗೆ ಸಂಗೀತ ಕಲೆಯ ಬಗ್ಗೆಯೂ ಅಪಾರ ಜ್ಞಾನವಿತ್ತೆನ್ನಲಾಗಿದೆ. ಈ ಕಾಲದಲ್ಲಿ ದಖ್ನಿಯಲ್ಲಿಯೇ 'ಹೈದರ್ ನಾಮಾ' ಮತ್ತು 'ಬಹಾದುರ್ ನಾಮಾ' ಎಂಬ ಐತಿಹಾಸಿಕ ಗ್ರಂಥಗಳ ರಚನೆಯಾಯಿತು. ಈ ಕಾಲದ ಖ್ಯಾತ ಚರಿತ್ರಕಾರ ಕಿರ್ಮಾನಿ ದಖ್ನಿಯಲ್ಲಿ ಕಾವ್ಯರಚನೆಯನ್ನೂ ಮಾಡಿದ್ದ. ಮರಾಠರ ವಿರುದ್ಧ ಟಿಪ್ಪುಸುಲ್ತಾನ್

ತೋರಿಸಿದ ಸಾಹಸ ಪರಾಕ್ರಮಗಳನ್ನು ಬಣ್ಣಿಸುವ 'ಫತೇನಾಮ' ಎಂಬ ಕಾವ್ಯವೊಂದನ್ನು ತರಬ್ ಎಂಬ ಕವಿ ರಚಿಸಿದ್ದಾನೆ. ಈ ರೀತಿಯಾಗಿ ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಕರ್ನಾಟಕದ ನೆಲದಲ್ಲಿ ಉರ್ದು ಮತ್ತು ದಖ್ನಿ ಸಾಹಿತ್ಯಗಳು ಸಾಕಷ್ಟು ಪ್ರಗತಿ ಹೊಂದಿದವಲ್ಲದೆ, ಸುಸೂತ್ರ ಆಡಳಿತ ನಿರ್ವಹಣೆ ಮೊದಲಾದ ಕಾರಣಗಳಿಂದಾಗಿ ಕನ್ನಡ ಹಾಗೂ ಉರ್ದು ಭಾಷೆಗಳ ನಡುವಣ ಬಾಂಧವ್ಯ ಬಹಳ ಚೆನ್ನಾಗಿ ಬೆಸುಗೆಗೊಂಡಿತು. ಶ್ರೀರಂಗಪಟ್ಟಣದ ಪತನವಾಗಿ ಅದು ಕೊಳ್ಳೆಹೊಡೆಯಲ್ಪಟ್ಟಾಗ ಈ ಕಾಲದಲ್ಲಿ ರಚಿತವಾದ ಅನೇಕ ಉರ್ದು-ದಖ್ನಿ ಗ್ರಂಥಗಳು ನಾಶವಾಗಿಹೋದುದು ದುರ್ದೈವದ ಸಂಗತಿ.

ಮೈಸೂರು ಒಡೆಯರ ಕಾಲದಲ್ಲಿ ಕೂಡ ಉರ್ದು ಸಾಹಿತ್ಯಕ್ಕೆ ಉದಾರವಾದ ಪ್ರೋತ್ಸಾಹ ಸಿಕ್ಕಿತು. ಈ ಅರಸರ ಕಾಲದಲ್ಲಿ ಮೈಸೂರು, ಬೆಂಗಳೂರು ಮುಂತಾದೆಡೆಗಳಲ್ಲಿ ಉರ್ದು ಸಾಹಿತ್ಯ ಚಟುವಟಿಕೆಗಳು ಭರದಿಂದ ನಡೆಯುತ್ತಿದ್ದವು. ಸಿರಾ ನಿವಾಸಿಯಾಗಿದ್ದ ಷಾ ಮುಹಮ್ಮದ್ ಆರೀಫ್ ಬೃಹದಾದ ಕೃತಿಯೊಂದನ್ನು ರಚಿಸಿದ್ದಾನೆ. ಮೈಸೂರಿನ ಮೌಲಾನಾ ಮೀರ್ ಹಯಾತ್ (ಕ್ರಿ.ಶ. ೧೮೬೪) ಹಾಗೂ ಬೆಂಗಳೂರಿನ ಷಾ ಅಬ್ದುಲ್ ಹೈ (ಕ್ರಿ.ಶ. ೧೮೮೪) ಅವರ ಕೊಡುಗೆ ನೆನೆಯುವಂಥದು. ಷಾ ಅಬ್ದುಲ್ ಹೈ ಪ್ರವಾದಿ ಪೈಗಂಬರರನ್ನು ಕುರಿತು ಬರೆದ ಪ್ರಸಿದ್ಧ ಕೃತಿ 'ಫಿನಾನಸ್ ಸಿಯರ್' ಎಂಬುದನ್ನೇ ಅಲ್ಲದೆ ಉರ್ದುವಿನಲ್ಲಿ ನೂರಕ್ಕಿಂತ ಮಿಗಿಲಾಗಿ ಗದ್ಯ ಪದ್ಯ ಕೃತಿಗಳನ್ನು ರಚಿಸಿದ್ದಾನೆ. 'ಮಿಸ್ ಬಾಹುಲ್ ಹಯಾತ್' ಎಂಬುದು ಇಸ್ಲಾಂ ಧರ್ಮ, ರೀತಿನೀತಿಗಳನ್ನು ಕುರಿತ ೨೨ ಲೇಖನಗಳನ್ನೊಳಗೊಂಡ ಮೀರ್ ಹಯಾತ್‌ನ ಗ್ರಂಥ. ಮೈಸೂರಿನ ನಿವಾಸಿಯಾಗಿದ್ದ ಬಂಕೆ ನವಾಬ್ ನಾಸಿಮ್ (ಕ್ರಿ.ಶ. ೧೮೮೮) ತನ್ನ ಕಾಲದಲ್ಲಿನ ಖ್ಯಾತ ಕವಿಯಾಗಿದ್ದು, ಉತ್ತಮ ಭಾವಗೀತೆಗಳನ್ನು ಉರ್ದು ಸಾಹಿತ್ಯಕ್ಕೆ ಕೊಡುಗೆಯಾಗಿ ಕೊಟ್ಟಿದ್ದಾನೆ. ಮೈಸೂರು ಹಾಗೂ ಬೆಂಗಳೂರು ಉರ್ದು ಸಾಹಿತ್ಯದ ಮುಖ್ಯ ಕೇಂದ್ರಗಳಾಗಿದ್ದು, ಅನೇಕ ಗಣನೀಯ ಕವಿಗಳೂ ಲೇಖಕರೂ ಇಲ್ಲಿ ನೆಲಸಿದ್ದರು. ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರನ್ನು ಕುರಿತ ಮಹಮೂದ್ ಖಾನ್ ಹನ್ನೆರಡು ಶ್ರೇಷ್ಠ ಐತಿಹಾಸಿಕ ಗ್ರಂಥಗಳನ್ನು ರಚಿಸಿದ್ದಾನೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಕಾಲವಾದ ನಾಫಿಸ್ ಉತ್ತಮ ಕವಿಗಳಲ್ಲೊಬ್ಬರಾಗಿದ್ದರು. ಉರ್ದು ಮತ್ತು ಪರ್ಷಿಯನ್ ಸಾಹಿತ್ಯಗಳಿಗೆ ಅಮಿತವಾದ ಪ್ರೋತ್ಸಾಹವನ್ನಿತ್ತ ಅರಸರ ಪೈಕಿ ಹೆಸರಿಸಬೇಕಾದವರೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು. ಅವರ ಆಳ್ವಿಕೆಯ ಅವಧಿಯಲ್ಲಿ ರಾಜಾಜ್ಞೆಗಳನ್ನು ಉರ್ದುವಿನಲ್ಲಿಯೂ ಹೊರಡಿಸಲಾಗುತ್ತಿತ್ತು. ಅವರು ಕೆಲವು ಸಮಯ ಉರ್ದುವಿನಲ್ಲಿ ಭಾಷಣಗಳನ್ನೂ ಮಾಡುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಉರ್ದು ಮತ್ತು ಪರ್ಷಿಯನ್ ವಿಭಾಗವನ್ನು ಸ್ಥಾಪಿಸಿದ ಕೀರ್ತಿ ಅವರಿಗೆ ಸೇರಬೇಕಾದ್ದು. ವಿಶ್ವವಿದ್ಯಾನಿಲಯಕ್ಕೆ ಸೇರಿದ ಪ್ರಾಚ್ಯಸಂಶೋಧನಾಲಯದಲ್ಲಿ ಉರ್ದು, ದಖ್ನಿ, ಪರ್ಷಿಯನ್ ಭಾಷೆಗಳಲ್ಲಿರುವ ಅಮೂಲ್ಯ ಕೃತಿಗಳ ಸಂಗ್ರಹವನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲಿ ಉರ್ದು ಹಾಗೂ ಪರ್ಷಿಯನ್ ಭಾಷಾಸಾಹಿತ್ಯಗಳ ಅಧ್ಯಯನ ವ್ಯಾಪಕವಾಗಿ ನಡೆಯುತ್ತಿದೆಯಲ್ಲದೆ, ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಧಾರವಾಡ ಮುಂತಾದೆಡೆಗಳಿಂದ ಉರ್ದು ದೈನಿಕಗಳೂ ನಿಯತಕಾಲಿಕೆಗಳೂ ಹೊರಬರುತ್ತಿವೆ. ಬಹಮನಿ ಸುಲ್ತಾನರ ಕಾಲದಿಂದಲೂ ಕರ್ನಾಟಕದಲ್ಲಿ ಎಡೆಬಿಡದೆ 'ಮುಷೈರಾ'ಗಳೆಂಬ ಕವಿಗೋಷ್ಠಿಗಳು ಸಾಹಿತ್ಯ ಸಂಸ್ಕೃತಿಗಳ ಅಂಗವಾಗಿ ನಡೆದುಕೊಂಡು ಬರುತ್ತಿವೆ. ಈಚೆಗೆ ದಖ್ನಿ ಕೇವಲ ಆಡುಭಾಷೆಯಷ್ಟೆ ಆಗಿದ್ದು, ಸಾಹಿತ್ಯದ ಮಾಧ್ಯಮ ಉರ್ದು ಭಾಷೆಯೇ ಆಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲೂ ಉರ್ದು ಮತ್ತು ಪರ್ಷಿಯನ್ ವಿನಿಮಯಗಳನ್ನು ಕೆಲವೆಡೆಗಳಲ್ಲಿ ಕಾಣಬಹುದಾಗಿದೆ. ಕೇಶಿರಾಜನ 'ಶಬ್ದಮಣಿದರ್ಪಣ', ಭೀಮಕವಿಯ 'ಬಸವ ಪುರಾಣ', ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ', ವಿರೂಪಾಕ್ಷ ಪಂಡಿತನ 'ಚೆನ್ನಬಸವಪುರಾಣ', ಲಕ್ಷ್ಮೀಶನ 'ಜೈಮಿನಿ ಭಾರತ' ಮೊದಲಾದ ಗ್ರಂಥಗಳಲ್ಲಿ ಪರ್ಷಿಯನ್ ಹಾಗೂ ಉರ್ದು ಶಬ್ದಗಳನ್ನೂ ವಾಕ್ಯಗಳನ್ನೂ ಗುರುತಿಸಲಾಗಿದೆ. ಕೆಲವೆಡೆಗಳಲ್ಲಿ ಉರ್ದು ಶಬ್ದಗಳನ್ನು ಸಮಯೋಚಿತವಾಗಿ ಕನ್ನಡಕ್ಕೆ ಹೊಂದಿಸಿಕೊಳ್ಳಲಾಗಿದೆ.

ಈ ಕೆಳಗಿನ ಅವತರಣಿಕೆಯಲ್ಲಿ ಈವರೆಗಿನ ಪರಿಶೀಲನೆಯ ಸಾರಾಂಶವನ್ನು ಕಾಣಬಹುದು :

ರಾಷ್ಟ್ರಕೂಟ ಚಕ್ರವರ್ತಿ ಮೂರನೆಯ ಕೃಷ್ಣರಾಜನ ಕಾಲದಿಂದಲೂ (೯೩೯-೯೬೬) ಸಿಂಧು ಪ್ರಾಂತ್ಯದಲ್ಲಿ ನೆಲಸಿದ್ದ ಅರಬ್ಬರ ಸಂಪರ್ಕ ಕನ್ನಡಿಗರಿಗೆ ಉಂಟಾಗಿತ್ತು. ಈ ಕಾಲದಲ್ಲಿ ಅರಬ್ಬಿ ಭಾಷೆಯ ಶಬ್ದಗಳು ಕನ್ನಡಕ್ಕೆ ಕೆಲವು ಬಂದಿರಬಹುದೆಂದು ಹೇಳುವುದಕ್ಕೆ ಆಧಾರಗಳು ದೊರೆತಿಲ್ಲ. ಹೀಗೆಯೇ ಪಾರಸಿ ಭಾಷೆಯ ಸಂಪರ್ಕವೂ ಉಂಟಾಗಿತ್ತು. ಕನ್ನಡದಲ್ಲಿ ದೊರೆಯುವ ಫೌಜು, ತೇಜಿ ಮುಂತಾದ ಶಬ್ದಗಳು, ಅರಬ್ಬಿಯಿಂದ ಬಂದುವಾಗಿವೆ. ತ್ರಾಸು ಎಂಬ ಪಾರಸಿ ಶಬ್ದ ಹರಿಹರ ಕವಿಯ ಕಾವ್ಯಗಳಲ್ಲಿ (ಸು. ೧೨೦೦) ದೊರೆಯುತ್ತದೆ. ಬರುಬರುತ್ತ ಈ ಎರಡು ಭಾಷೆಗಳ ಪ್ರಭಾವ ಕನ್ನಡದ ಮೇಲೆ ಹೇರಳವಾಗಿ ಆಗತೊಡಗಿತು. ವಿಜಯನಗರದ ಕಾಲದಲ್ಲಿ ಆ ರಾಜ್ಯದ ಉತ್ತರದ ಎಲ್ಲೆಕಟ್ಟಿನಲ್ಲಿ ಬಹಮನೀ ಸುಲ್ತಾನರ ರಾಜ್ಯಗಳಿದ್ದುವು. ಆ ಪ್ರದೇಶಗಳ ಆಡುಭಾಷೆಯಾಗಿದ್ದ ಕನ್ನಡದ ಮೇಲೆ ಆ ಸುಲ್ತಾನರ ದಖನೀ ಉರ್ದು ಭಾಷೆಯ ಮೂಲಕ ಅಧಿಕ ಪ್ರಭಾವವುಂಟಾಯಿತು. ಸುಲ್ತಾನ ಎಂಬ ಶಬ್ದವೇ ವಿಜಯನಗರದ ರಾಜರ ಕನ್ನಡ ಶಾಸನಗಳಲ್ಲಿ ಸುರತ್ರಾಣ ಎಂಬ ರೂಪಾಂತರ ಹೊಂದಿರುವುದು ಕಾಣುತ್ತದೆ. ಈ ಕಾಲದ ತರುವಾಯ ಸಾವಿರಾರು ಶಬ್ದಗಳು ಅರಬ್ಬಿ ಪಾರ್ಸಿ ಉರ್ದು ಭಾಷೆಗಳಿಂದ ಕನ್ನಡಕ್ಕೆ ಎರವಲಾಗಿ ಬಂದಿವೆ. ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಇಂಥ ಶಬ್ದಗಳು ಕನ್ನಡಕ್ಕೆ ಪ್ರವಾಹವಾಗಿ ಹರಿದುಬಂದುವು. ಆಡಳಿತಕ್ಕೆ ಸಂಬಂಧಿಸಿದ ಶಬ್ದಗಳು, ಯುದ್ಧ, ಬೇಟೆ, ಮುಹಮ್ಮದೀಯ ಧಾರ್ಮಿಕ ಶಬ್ದಗಳು, ಸಂಗೀತ, ಸಾಹಿತ್ಯ, ಪರಿಮಳ ದ್ರವ್ಯಗಳು—

ಇವುಗಳಿಗೆ ಸೇರಿದ ಶಬ್ದಗಳೇ ಅಲ್ಲದೆ ಇನ್ನೂ ಹಲವು ತೆರನಾದ ಶಬ್ದಗಳು ಕನ್ನಡಕ್ಕೆ ಬಂದಿರುವುದು ಸ್ಪಷ್ಟವಾಗಿದೆ. ಸು. ೧೮೦೦ರಲ್ಲಿ ರಚಿತವಾದ 'ರಾಜೇಂದ್ರನಾಮೆ' ಎಂಬ ಚರಿತ್ರೆಯ ಗ್ರಂಥದಲ್ಲಿ ಒಂದು ಸಾವಿರ ಅರಬ್ಬಿ, ಪಾರಸಿ, ಉರ್ದು ಶಬ್ದಗಳು ಇವೆ; ಕೈಫಿಯತ್ತು, ಬಖೈರು ಎಂಬ ಗ್ರಂಥಗಳಲ್ಲಿಯೂ ಇಂಥ ಶಬ್ದಗಳು ಹೇರಳವಾಗಿ ಪ್ರಯೋಗವಾಗಿವೆ. ಕಬೂಲು, ಕೂಲಿ, ಕೊತ್ವಾಲ, ಚಾಕು, ಚಕಮುಕಿ, ತುಪಾಕಿ, ದರೋಗ, ಮುಚ್ಚಳಿಕೆ, ಮಷಾಲ್ಜಿ, ಖಜಾಂಚಿ, ತಪಾಸು, ಪಠಾನ, ಬಿಬ್ಬಿ—ಇದೇ ಮೊದಲಾದುವು ಉದಾಹರಣೆಗಳು. ಕನ್ನಡ ಹೀಗೆ ಈ ಭಾಷೆಗಳಿಂದ ಶಬ್ದಸ್ವೀಕರಣವನ್ನು ಮಾಡುವ ಕಾರ್ಯ ಈಗ ತಟಸ್ಥವಾಗಿದೆ."[100]

ಈ ರೀತಿಯಾಗಿ ಉರ್ದು, ಪರ್ಷಿಯನ್ ಹಾಗೂ ಕನ್ನಡ ಭಾಷೆಗಳ ನಡುವೆ ಕೊಳ್ಕೊಡೆಗಳು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ನಡೆದು ಬಂದಿವೆ. ಉರ್ದು ಭಾಷೆಯ ಪರಿಣಾಮ ಕನ್ನಡ ಭಾಷೆಯ ಮೇಲೆ, ಅದರಲ್ಲೂ ನಿತ್ಯ ವ್ಯವಹಾರದ ಹಾಗೂ ಕಚೇರಿ ಭಾಷೆಯ ಮೇಲೆ, ಶಾಶ್ವತವಾಗಿ ಆಗಿದೆ. ಅನೇಕ ಪಾರಸೀ ಮತ್ತು ಉರ್ದು ಶಬ್ದಗಳು ಕನ್ನಡದಲ್ಲಿ ಬೆರೆತುಹೋಗಿವೆ.[101] ಮುಸಲ್ಮಾನರ ಅನಂತರ ಆಳಿಕೆಗೆ ಬಂದ ಮೈಸೂರು ರಾಜರ ಕಾಲದಲ್ಲಿಯೂ ಐರೋಪ್ಯ ಕಮೀಷನರುಗಳ ಕಾಲದಲ್ಲಿಯೂ ಇವುಗಳನ್ನೇ ವಿಶೇಷವಾಗಿ ಬಳಸಲಾಗಿದೆ. ಆದರೆ ಇತ್ತೀಚಿನ ಶಿಷ್ಟ ಕನ್ನಡ ಹಾಗೂ ಕಚೇರಿ ಕನ್ನಡದಲ್ಲಿ ಸಂಸ್ಕೃತ ಶಬ್ದಗಳ ಬಳಕೆ ಹೆಚ್ಚಾಗುತ್ತಿದೆ.

(i) ಕನ್ನಡದಲ್ಲಿ ಸೇರಿರುವ ಪರ್ಷಿಯನ್ ಶಬ್ದಗಳ ಒಂದು ಪಟ್ಟಿ : ಜಮೀನ್, ದಸ್ತಾವೇಜು, ಬಂದೋಬಸ್ತ, ಮೇಜಾ, ರಸ್ತೆ, ಸರಬರಾಯಿ, ಸಿಪಾರಸ್, ಸಿಬ್ಬಂದಿ, ಸೀಪಾಯಿ, ಸುಮಾರು ಇತ್ಯಾದಿ.

(ii) ಅರಬ್ಬಿ ಶಬ್ದಗಳ ಒಂದು ಪಟ್ಟಿ : ಅನಾಮತ್ತು, ಅಲಾಕ್ಕು, ಆಸಾಮಿ, ಇಲಾಖಾ, ಕಾಯ್ದಾ, ಖಜಾನಾ, ಗಾಡಿಖಾನಾ, ಜಪ್ತಿ, ನಾಜೂಕು, ಮಾಮೂಲು, ವಸೂಲ್, ಸಾವಕಾರಿ ಇತ್ಯಾದಿ.[102]

(iii) ಉರ್ದು ಶಬ್ದಗಳ ಒಂದು ಪಟ್ಟಿ :

ಉದಾ : ಆಬಾದು, ಅಬ್ಕಾರಿ, ಅಹವಾಲು, ಅಜಮಾಯಿಷಿ, ಅಲಾಹಿದ, ಅಮಲ್ದಾರ್, ಅಮಾನತ್ತು, ಆಮದು, ಅಮಿಾನ್, ಅಮರಾಯಿ, ಅಂದಾಜು, ಅರ್ಜಿ, ಅಸಲು, ಅವಲ್, ಬಾಬು, ಬದಲಿ, ಬಡ್ತಿ, ಬಾಗಾಯ್ತು, ಬಕ್ಷಿ, ಬಂದಿಖಾನೆ, ಬುರಾವರ್ದು, ಬರ್ತರ್ಫ್, ಬಟವಾಡೆ, ಬೇಚಿರಾಖ್, ಬೇನಾಮಿ, ಬೇರೀಜ್, ಬೇವಾರಸು, ಕಾರಕೂನ, ಚಡಸಾಲು, ಚಲನ್, ದಫೇದಾರ, ದಫ್ತರು, ದಾಖಲೆ, ದಾಮಾಷಾ, ದಳ್ವಾಳಿ, ದರ್ಬಾರ್, ದರಖಾಸ್ತು, ದರ್ಯಾಫ್ತಿ, ದುರಸ್ತಿ, ಫೈಸಲ್, ಹಮ್‌ಸಾಯಾ, ಹೆಂಗಾಮಿ, ಲಿಲಾವು, ಹರಾಜ್, ಹಿಸ್ಸೆ, ಹುಕುಂ, ಹುಜೂರ್, ಸಾಹೇಬ, ಇನಾಂ, ಇಸಂ, ಇಸ್ತಿಹಾರ್, ಜಾಡಮಾಲಿ, ಜಡ್ತಿ, ಜಾಗೀರ್‌ದಾರ, ಜಮಾಬಂದಿ, ಜಮೀನು, ಜಮೀನ್ದಾರ, ಜರೂರ್, ಜವಾಬು, ಜವಾಬ್ದಾರಿ, ಜುಲ್ಮಾನೆ, ಕಚೇರಿ,

ಕೈಫಿಯತ್ತು, ಖಾನೇಸುಮಾರಿ, ಖರ್ಚು, ಖರಾಬ್, ಕರಾರು, ಕಸಬಾ, ಖಾಜಿ, ಖಾತೆ, ಖಾಯಂ, ಖೂನಿ, ಕೊತ್ವಾಲ, ಲಷ್ಕರ್, ಲವಾಜಮೆ, ಮಾಫಿ, ಮಹಜರು, ಮಾಲಿಕ, ಮಾಮೂಲು, ಮುಸಲತ್ತು, ಮುಫತ್ತು, ಮುಸಾಫಿರ್ ಖಾನೆ, ಮುಜರಾಯ್, ನಗದು, ನಮೂನೆ, ಲುಕ್ಸಾನು, ಫಿರ್ಯಾದು, ರಾಜೀನಾಮೆ, ರುಸುಂ, ಸನ್ನದು, ಸರಾಫ್, ಸಜಾ, ಶೀಲ್‌ದಾರ್, ಸುಪರ್ದು, ತಕರಾರು, ಟಪಾಲು, ತಪ್ಸೀಲು, ತಾರೀಖು, ಠಾಣೆ, ವಜಾ, ವಕಾಲತ್ತು, ವಸೂಲಿ ಇತ್ಯಾದಿ.

## ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷಿನ ಪ್ರಭಾವ

### ಪೀಠಿಕೆ

ಮಾನವನ ಬದುಕು ನಿಂತ ನೀರಲ್ಲ; ಅದು ಸದಾ ವಿಕಾಸಶೀಲವಾದುದು. ಬದುಕು ಬೆಳೆದಂತೆ, ಬದಲಿಸಿದಂತೆ, ಹೊಸತಾದಂತೆ ಅದರ ಅಭಿವ್ಯಕ್ತಿಯಾದ ಸಾಹಿತ್ಯವೂ ಅನಿವಾರ್ಯವಾಗಿ ಬೆಳೆಯುತ್ತದೆ, ಬದಲಾಗುತ್ತದೆ, ಹೊಸತನವನ್ನು ಅಳವಡಿಸಿಕೊಳ್ಳುತ್ತದೆ. ಹೀಗಾಗಿ ಯಾವುದೇ ಸಾಹಿತ್ಯದ ಚರಿತ್ರೆ ನಿರಂತರವಾದ ಕ್ರಾಂತಿ ಚಳುವಳಿಗಳ, ಪ್ರಯೋಗಗಳ ಕತೆಯೇ ಆಗಿರುತ್ತದೆ. ಕನ್ನಡ ಈ ಮಾತಿಗೆ ಅಪವಾದವಲ್ಲ. ಸಂಪ್ರದಾಯ–ನವ್ಯತೆಗಳ ಹೋರಾಟ, ಅಂತಿಮವಾಗಿ ನವ್ಯತೆಯ ವಿಜಯ ಇವು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಕಾಲಕಾಲಕ್ಕೆ ಕಂಡುಬರುವ ಪ್ರಕ್ರಿಯೆಗಳು. ಕನ್ನಡ ಸಾಹಿತ್ಯ ಉದ್ದಕ್ಕೂ ಪರಂಪರೆಯ ನೆಲೆಗಟ್ಟಿನ ಮೇಲೆ ನಿಂತೇ ಹೊಸತನವನ್ನು ಸ್ವಾಗತಿಸುತ್ತ, ಅರಗಿಸಿಕೊಳ್ಳುತ್ತ ಸಮನ್ವಯದ ಹಾದಿಯಲ್ಲಿ ಸಾಗಿಬಂದಿದೆ.

ಹಳಗನ್ನಡ ನಡುಗನ್ನಡ ಸಾಹಿತ್ಯಗಳಂತೆಯೆ ಹೊಸಗನ್ನಡ ಸಾಹಿತ್ಯ ಅಥವಾ ಆಧುನಿಕ ಕನ್ನಡ ಸಾಹಿತ್ಯ ಕೂಡ ಇಂಥ ಸಮನ್ವಯದ ಫಲವೇ ಆಗಿದೆ. ಒಂದು ಕಡೆ ಸುದೀರ್ಘವೂ ಶ್ರೀಮಂತವೂ ಆದ ಪರಂಪರೆ, ಇನ್ನೊಂದು ಕಡೆ ಪ್ರಬಲವೂ ಪ್ರಖರವೂ ಸಂಕೀರ್ಣವೂ ಆದ ಇಂಗ್ಲಿಷ್ ಸಾಹಿತ್ಯದ ಪ್ರಭಾವ—ಇವುಗಳ ದಾಂಪತ್ಯವೇ ಆಧುನಿಕ ಕನ್ನಡ ಸಾಹಿತ್ಯದ ಜನ್ಮಭೂಮಿ. ಕಾವ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿ. ಕೃ. ಗೋಕಾಕರು ಹೇಳಿರುವ ಈ ಮಾತು ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಅನ್ವಯಿಸುವಂಥದು: "ಆಧುನಿಕ ಕನ್ನಡ ಕಾವ್ಯ ಮಿಶ್ರವಿವಾಹದ ಸಂತತಿ. ಕನ್ನಡ ಚೇತನ ಅದರ ತಂದೆಯಾದರೂ ಆಂಗ್ಲಕಾವ್ಯ ಅದರ ತಾಯಿ." ಸಂಸ್ಕೃತ ಪ್ರಾಕೃತಗಳು ಹೇಗೆ ಪ್ರಾಚೀನ ಕನ್ನಡ ಸಾಹಿತ್ಯವನ್ನು ರೂಪಿಸುವಲ್ಲಿ, ಪೋಷಿಸುವಲ್ಲಿ ಪ್ರಭಾವ ಬೀರಿದುವೋ ಅಂತೆಯೇ ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸುವಲ್ಲಿ, ಪೋಷಿಸುವಲ್ಲಿ ಇಂಗ್ಲಿಷ್ ಸಾಹಿತ್ಯ ಪ್ರಭಾವ ಬೀರಿದೆ. ಸಂಸ್ಕೃತ ಪ್ರಾಕೃತಗಳ ಪ್ರಭಾವಕ್ಕಿಂತ ವ್ಯಾಪಕವೂ ಪ್ರಾಯಃ ಲಾಭದಾಯಕವೂ ಆದುದು ಇಂಗ್ಲಿಷಿನ ಪ್ರಭಾವ ಎನ್ನಬಹುದೇನೋ. ಪ್ರಭಾವ–ಸ್ವಭಾವಗಳ ಸಾಮರಸ್ಯವೆ ಕನ್ನಡ ಸಾಹಿತ್ಯ. ಹೊರಗಿನ

ಪ್ರೇರಣೆ, ಒಳಗಿನ ಒತ್ತಡ ಎರಡೂ ಹೊಸ ಸಾಹಿತ್ಯಕ್ಕೆ ಕಾರಣವಾದುವು.

"ಇಂಗ್ಲಿಷ್ ಸಾಹಿತ್ಯವು ಆಧುನಿಕ ಕನ್ನಡ ಸಾಹಿತ್ಯಕ್ಕೆ ಪ್ರಾಣದಾಯಕವಾಗಿದೆ" ಎಂಬ ಎ. ಆರ್. ಕೃಷ್ಣಶಾಸ್ತ್ರಿಗಳ ಮಾತು ಇಂಗ್ಲಿಷ್ ಸಾಹಿತ್ಯದ ಪ್ರಭಾವದ ಮಹತ್ತ್ವವನ್ನು ತಿಳಿಸಿಕೊಡುತ್ತದೆ. ಕನ್ನಡ ವಾಙ್ಮಯದಲ್ಲಿ ಇಂಗ್ಲಿಷಿನ ಪ್ರಭಾವ ಹಾಸುಹೊಕ್ಕಾಗಿದೆ; ಎಷ್ಟರಮಟ್ಟಿಗೆ ಎಂದರೆ, ಅದನ್ನು ಪ್ರತ್ಯೇಕಿಸಿ ಎತ್ತಿತೋರುವುದೇ ಕಠಿಣ. ಇಂದಿನ ಅನೇಕ ಸಾಹಿತ್ಯಪ್ರಕಾರಗಳು ನೇರವಾಗಿ ಇಂಗ್ಲಿಷಿನಿಂದ ಬಂದವು ಅಥವಾ ಅದರ ಸಂಪರ್ಕದಿಂದ ಸಿದ್ಧವಾದವು. ಪ್ರಭಾವದ ಜೊತೆಗೆ ಅನುಕರಣ ಅನುವಾದಗಳನ್ನೂ ಲೆಕ್ಕಿಸಿದರೆ ಇಂಗ್ಲಿಷ್ ಸಾಹಿತ್ಯಕ್ಕೆ ಕನ್ನಡದ ಋಣ ಮತ್ತೂ ಹೆಚ್ಚುತ್ತದೆ.

ಇನ್ನೊಂದು ಮುಖ್ಯವಾದ ಸಂಗತಿಯೇನೆಂದರೆ, ಇಂಗ್ಲಿಷ್ ಸಾಹಿತ್ಯದ ಮೂಲಕ ಕನ್ನಡಕ್ಕೆ ವಿಶ್ವಭಾರತಿಯ ಪರಿಚಯವಾಯಿತೆಂಬುದು. ಇಂಗ್ಲಿಷ್ ಸಾಹಿತ್ಯದ ಪ್ರಭಾವವೆಂದರೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೆಂದೇ ಅರ್ಥ. ಗ್ರೀಕ್, ಲ್ಯಾಟಿನ್, ಫ್ರೆಂಚ್, ಜರ್ಮನ್, ಇಟ್ಯಾಲಿಯನ್, ರಷ್ಯನ್ ಮುಂತಾದ ಸಾಹಿತ್ಯಗಳೆಲ್ಲ ಇಂಗ್ಲಿಷಿನ ಮೂಲಕ ಆಧುನಿಕ ಕನ್ನಡ ಸಾಹಿತ್ಯವನ್ನು ಪ್ರಭಾವಿಸಿವೆ, ಪೋಷಿಸಿವೆ. "The east is east, the west is west, and never the twain shall meet" ಎಂಬ ಮಾತು ಸಾಹಿತ್ಯದ ವಿಷಯದಲ್ಲಿ—ಅದರಲ್ಲೂ ಕನ್ನಡ ಸಾಹಿತ್ಯದ ವಿಷಯದಲ್ಲಿ—ಸತ್ಯವಲ್ಲ. ಪೂರ್ವ-ಪಶ್ಚಿಮಗಳ ಸಂಗಮವೇ ನಮ್ಮ ಹೊಸ ಸಾಹಿತ್ಯಕ್ಕೆ ಹೇತು ಮತ್ತು ಮೂಲ ಧಾತು.

ಆಧುನಿಕ ಕನ್ನಡ ಸಾಹಿತ್ಯವೆಂದರೆ ಮುಖ್ಯವಾಗಿ ಈ ೨೦ನೆಯ ಶತಮಾನದ ಸಾಹಿತ್ಯ. ಆದರೆ ಹತ್ತೊಂಬತ್ತನೆಯ ಶತಮಾನದಲ್ಲೇ ಇದರ ಪೀಠಿಕೆ ಸಿದ್ಧವಾಯಿತು. ಇಪ್ಪತ್ತನೆಯ ಶತಮಾನವನ್ನು ನವೋದಯಕಾಲವೆಂದು ಕರೆಯುವುದಾದರೆ, ಹತ್ತೊಂಬತ್ತನೆಯ ಶತಮಾನವನ್ನು ಅರುಣೋದಯಕಾಲ ಅಥವಾ ಸಂಧಿಕಾಲವೆಂದು ಕರೆಯಬೇಕಾಗುತ್ತದೆ. ಹೊಸ ಸಾಹಿತ್ಯದ ಬೀಜಗಳನ್ನು ಕಳೆದ ಶತಮಾನದಲ್ಲಿ ಬಿತ್ತಲಾಯಿತು; ಬೆಳೆ ಹುಲುಸಾಗಿ ಕೈಗೆ ಬಂದದ್ದು ಈ ಶತಮಾನದಲ್ಲಿ.

೧೯ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯವಾಹಿನಿ ಬಹುಮಟ್ಟಿಗೆ ಜಡವಾಗಿ ಮಡುಗಟ್ಟಿ ನಿಂತಿತ್ತು. ಪಾಶ್ಚಾತ್ಯ ಸಂಸರ್ಗದ ಹೊಸ ಪ್ರವಾಹ ಬಂದು ಸೇರಿದ ಮೇಲೆಯೇ ಅದು ಮತ್ತೆ ನವೀನವಾಗಿ ಜೀವಂತವಾಗಿ ಹರಿಯತೊಡಗಿದ್ದು. ಮೊದಲು ಪಾಶ್ಚಾತ್ಯ ಪ್ರಭಾವದಿಂದ ಜೀವನದೃಷ್ಟಿ ಪಲ್ಲಟಿಸಿತು; ಅದರ ಪರಿಣಾಮವಾಗಿ ಸಾಹಿತ್ಯವೂ ಪಲ್ಲವಿಸಿ ಪರಿವರ್ತನೆಗೀಡಾಯಿತು.

'ಶ್ರೀ'ಯವರು ಹೇಳಿದಂತೆ, "ಕನ್ನಡದಲ್ಲಿ ಪ್ರೌಢಕಾವ್ಯದ ರಚನೆ ಸು. ೧೭೦೦ರ ವೇಳೆಗೆ ಚಿಕ್ಕದೇವರಾಜ ಒಡೆಯರ ಆಳಿಕೆಯ ಕೊನೆಗೆ ನಿಂತುಹೋಗಿತ್ತು. ಅಲ್ಲಿಂದ ಮುಂದೆ ದೌರ್ಬಲ್ಯ, ಅಸಾರತೆ, ಅಸ್ವಾತಂತ್ರ್ಯ ಮೊದಲಾದವು ರಾಜಕೀಯ ಪ್ರಪಂಚದಲ್ಲಿ ಕಾಣಿಸಿಕೊಂಡಂತೆಯೇ ಸಾಹಿತ್ಯ ಪ್ರಪಂಚದಲ್ಲಿಯೂ ಕಾಣಿಸಿಕೊಂಡವು."

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಕರ್ಣಾಟಕವನ್ನು ಬ್ರಿಟಿಷರು ಆಡಳಿತ ದೃಷ್ಟಿಯಿಂದ ಹಲವಾರು ತುಂಡುಗಳನ್ನಾಗಿ ಕತ್ತರಿಸಿದ್ದರು; ನಾಡಿನ ಅರ್ಧಭಾಗ ಬ್ರಿಟಿಷರ ಆಳಿಕೆಯಲ್ಲೂ ಇನ್ನರ್ಧಭಾಗ ಸಂಸ್ಥಾನಿಕರ ಆಳಿಕೆಯಲ್ಲೂ ಉಳಿದಿತ್ತು. ಹೀಗೆ ಹರಿಹಂಚಾಗಿದ್ದುದರ ಪರಿಣಾಮವಾಗಿ ಕನ್ನಡ ಜನತೆ ಶೈಕ್ಷಣಿಕ ಮುಂತಾದ ರಂಗಗಳಲ್ಲಿ ಹಿಂದುಳಿಯಿತು. ಕರ್ಣಾಟಕದಲ್ಲಿ ಜಾಗ್ರತಿಯುಂಟಾದುದು ಇತರ ರಾಜ್ಯಗಳಲ್ಲಿ ಆದುದ ಕ್ಕಿಂತ ತಡವಾಗಿ.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರು ಬಗೆಬಗೆಯ ಪಾಶ್ಚಾತ್ಯ ನಾಗ ರಿಕ ಸೌಲಭ್ಯಗಳನ್ನು ಭರತಖಂಡಕ್ಕೆ ಒದಗಿಸತೊಡಗಿದರು. ೧೯ನೆಯ ಶತಮಾನದ ಭಾರತಕ್ಕೆ ಪಾಶ್ಚಾತ್ಯ ಸಂಪರ್ಕ ನಾಲ್ಕು ರೀತಿಯಲ್ಲಿ ಉಂಟಾಯಿತೆಂದು ಹೇಳಲಾಗಿದೆ: ಆಡಳಿತ, ವ್ಯವಹಾರ; ಮುದ್ರಣಯಂತ್ರ; ಕ್ರೈಸ್ತಮತಪ್ರಚಾರ; ಹೊಸ ಶಿಕ್ಷಣಪದ್ಧತಿ, ಹೊಸ ವಿಚಾರಸರಣಿ. ಪಾಶ್ಚಾತ್ಯ ನಾಗರಿಕತೆಯ ಪ್ರಭಾವದಿಂದ ಭಾರತೀಯರ ಜೀವನ ದೃಷ್ಟಿ ಹಾಗೂ ಮೌಲ್ಯಗಳು ಬದಲಾದುವು; ಪಾಶ್ಚಾತ್ಯರ ವೈಚಾರಿಕ ಪ್ರವೃತ್ತಿ, ವ್ಯಾವಹಾರಿಕ ಲೌಕಿಕ ಮನೋಧರ್ಮ ಭಾರತೀಯರಲ್ಲಿ ಹರಡತೊಡಗಿದುವು. ಬ್ರಿಟಿಷರು ಜಾರಿಗೆ ತಂದ ಹೊಸ ಶಿಕ್ಷಣ ಪದ್ಧತಿ ದೊಡ್ಡ ಕ್ರಾಂತಿಯನ್ನೇ ಉಂಟುಮಾಡಿತು; ಅದರಿಂದ ಭಾರತೀಯರ ಪಾಲಿಗೆ ನವದಿಗಂತಗಳು ತೆರೆದುಕೊಂಡವು; ಹೊಸದೊಂದು ಪ್ರಪಂಚದ ಪರಿಚಯವಾಯಿತು. ವಿಜ್ಞಾನ, ಇಂಗ್ಲಿಷ್ ಸಾಹಿತ್ಯ, ಪ್ರಪಂಚದ ಪರಿ ಜ್ಞಾನ ಅವರಿಗೆ ಹಿಂದಿಲ್ಲದ ಅನುಭವಗಳನ್ನೂ ಸಂವೇದನೆಗಳನ್ನೂ ತಂದುಕೊಟ್ಟುವು; ಬದುಕಿನ ರೀತಿನೀತಿಗಳನ್ನು ಮಾರ್ಪಡಿಸಿದುವು. ಇದುವರೆಗೆ ಮತಧರ್ಮದ ಆವರಣ ದಲ್ಲಿ ಬೆಳೆದುಬಂದಿದ್ದ ಭಾರತೀಯನ ಸಮಷ್ಟಿಪ್ರಜ್ಞೆ, ಲೌಕಿಕವಾದ ವ್ಯಷ್ಟಿಪ್ರಜ್ಞೆಯಾಗಿ ಸಂಕ್ರಮಣಗೊಂಡಿತು; ಸ್ವತಂತ್ರ ವಿಚಾರಶಕ್ತಿ ಅವನಲ್ಲಿ ಕುದುರತೊಡಗಿತು.

ಬ್ರಿಟಿಷರು ಭಾರತೀಯರಿಗೆ ಇಂಗ್ಲಿಷ್ ಶಿಕ್ಷಣ ಕೊಟ್ಟದ್ದು ಸ್ವಾರ್ಥಕ್ಕಾಗಿ. ಆದರೆ ಅದು ಭರತಖಂಡಕ್ಕೆ ಅವರು ಮಾಡಿದ ಮಹೋಪಕಾರವಾಯಿತು. ಭಾರತೀಯರಲ್ಲಿ ಸ್ವಾತಂತ್ರ್ಯ ಪ್ರೇಮ, ರಾಷ್ಟ್ರೀಯಭಾವನೆ, ಸ್ವಾಭಿಮಾನ, ಸ್ವತಂತ್ರ ವಿಚಾರಸರಣಿಗಳು ಬೆಳೆಯಲು ಇಂಗ್ಲಿಷ್ ಶಿಕ್ಷಣ ಕಾರಣವಾಯಿತು. ಅದರಿಂದ ಮುಂದೆ ರಾಷ್ಟ್ರೀಯತೆಯ ಪ್ರಚಂಡವಾದ ಅಲೆಗಳೆದ್ದು, ರಾಜಕೀಯವಾದ ಆಂದೋಲನಕ್ಕೆ ದಾರಿಯಾಯಿತು. ಪಾಶ್ಚಾತ್ಯಪ್ರಭಾವದ ಇನ್ನೊಂದು ಪರಿಣಾಮವೆಂದರೆ, ಮಧ್ಯಮವರ್ಗದ ಉದ್ಭವ ಮತ್ತು ಆ ವರ್ಗದವರು ಬೆಳೆಸಿಕೊಂಡ 'ಹಳೆಯದೆಲ್ಲ ಹೊನ್ನಲ್ಲ' ಎಂಬ ವಿಚಾರಶೀಲ ಮನೋವೃತ್ತಿ.

ಇಂಗ್ಲಿಷ್ ಶಿಕ್ಷಣವೆಂತೊ ಅಂತೆ ಕ್ರೈಸ್ತ ಮಿಶನರಿಗಳು ತಂದ ಮುದ್ರಣಯಂತ್ರವೂ ಒಂದು ಕ್ರಾಂತಿಸಾಧನವಾಯಿತು; ವಾಚಕವರ್ಗವನ್ನು ಸೃಜಿಸಿ, ಬರಹಗಾರರಿಗೆ ಸ್ಫೂರ್ತಿಯಾಯಿತು. ಹೊಸ ಸಾಹಿತ್ಯಕ್ಕೂ ಮುದ್ರಣ ಕಲೆಗೂ ಬಹು ನಿಕಟಸಂಬಂಧ ವಿದೆ. ಮಿಶನರಿಗಳು ಸ್ವಮತಪ್ರಚಾರಕ್ಕಾಗಿ ಶೈಕ್ಷಣಿಕ, ಸಾಹಿತ್ಯಕ ರಂಗಗಳಿಗೆ ಕಾಲಿ ಟ್ಟರು. ಅದರಿಂದ ಹೆಚ್ಚು ಲಾಭವಾದುದು ಭಾರತೀಯರಿಗೆ.

ಈ ಎಲ್ಲ ಸಂಕ್ರಾಂತಿ ಭರತಖಂಡದ ಇತರ ಭಾಗಗಳನ್ನು ಹೇಗೋ ಹಾಗೆಯೇ ಕರ್ಣಾಟಕವನ್ನೂ ವ್ಯಾಪಿಸಿ ಹೊಸ ಸಾಹಿತ್ಯಸೃಷ್ಟಿಗೆ ಪ್ರಚೋದಕವಾಯಿತು. ನಾಡು ನುಡಿಗಳ ಪ್ರೇಮ ಕನ್ನಡಿಗರಲ್ಲೂ ಜಾಗ್ರತವಾಯಿತು. ಇಂಗ್ಲಿಷ್ ಶಿಕ್ಷಣ ಪಡೆದ ಹೊಸ ಪೀಳಿಗೆಯ ಸಾಮಾನ್ಯ ಜನ ನವೀನ ಸಾಹಿತ್ಯದ ಹರಿಕಾರರಾದರು. ರೂಪ, ವಸ್ತು, ಭಾವ, ಭಾಷೆಗಳಲ್ಲಿ ಸಾಹಿತ್ಯ ಹೊಸತನವನ್ನು ತಾಳಿತು. ಬಿ. ವೆಂಕಟಾಚಾರ್ಯರು 'ದುರ್ಗೇಶ ನಂದಿನಿ'ಯ ಪೀಠಿಕೆಯಲ್ಲಿ ಹೇಳಿದ ಮಾತು ಸ್ವಲ್ಪಕಾಲದಲ್ಲೇ ಸತ್ಯವಾಯಿತು: "ನಮ್ಮಲ್ಲಿ ಇಂಗ್ಲಿಷ್ ಭಾಷಾಭಿಜ್ಞರಾದವರು ತಾವು ಓದುವ ವಿದ್ಯಾಲಯದ ಉಪಾಧಿಗಳನ್ನು ಸಂಪಾದಿಸಿಬಿಟ್ಟರೆ ಕೃತಕೃತ್ಯರಾದೆವೆಂದು ತಿಳಿದುಕೊಂಡು ತಟಸ್ಥರಾಗಿ ದೇಶಭಾಷೆಯ ಅಭಿವೃದ್ಧಿಯ ವಿಚಾರದಲ್ಲಿ ಸ್ವಲ್ಪವೂ ಲಕ್ಷ್ಯ ಕೊಡದೇ ಉದಾಸೀನರಾಗಿರುವುದೇ ಶೋಚನೀಯವಾದೀ ಸ್ಥಿತಿಗೆ ಕಾರಣವೆಂದು ತೋರುತ್ತದೆ. ಇದರಿಂದ ಇಂಗ್ಲಿಷ್ ಭಾಷೆಯಲ್ಲಿ ಕೃತವಿದ್ಯರಾಗಿರುವ ನಮ್ಮ ಅನೇಕ ಮಹಾಶಯರು ನಿಂದಿತರಾದೆವೆಂದು ತಿಳಿಯಕೂಡದು. ಅವರಿಂದಲೇ ದೇಶಕ್ಕೆ ಮಂಗಳವುಂಟಾಗಿ ಕಾರ್ಯಸಿದ್ಧಿಯಾಗಬೇಕಾಗಿರುವುದರಿಂದ ಅವರನ್ನು ನಾವೆಂದಿಗೂ ದೂಷಿಸಲಾರೆವು....ನಮ್ಮ ಸಂಸ್ಕೃತ ಪಂಡಿತರಿಂದೀ ಕಾರ್ಯಸಾಧನೆಯಾಗುವುದೆಂದು ನಿರೀಕ್ಷಿಸಕೂಡದು....ಅತ ಏವ ಇಂಗ್ಲಿಷಿನಲ್ಲಿ ಪಾರಂಗತರಾದ ಪಂಡಿತರಿಂದಲೇ ಈ ಕಾರ್ಯಸಿದ್ಧಿಯಾಗಬೇಕು."

ಈ ಸಂದರ್ಭದಲ್ಲಿ 'ಶ್ರೀ'ಯವರ ಮಾತುಗಳೂ ಗಮನಾರ್ಹ : "ಈಗ ೧೯ನೆಯ ಶತಮಾನದಲ್ಲಿ ಇಂಗ್ಲಿಷರ ಆಳಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ, ಐಹಿಕ ಸಾಧನ ಸಂಪತ್ತು, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ ಮತ್ತು ಮತ ಮುಂತಾದುವುಗಳಿಗೆ ಸಂಬಂಧಪಟ್ಟ ನವೀನಜ್ಞಾನದ ಸೆಳೆತಕ್ಕೆ ಮಿಕ್ಕ ದೇಶಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ದೇಶಾಭಿಮಾನವನ್ನೂ ಹೊಸ ರುಚಿಯನ್ನೂ ಕಲಿತು ಹೊಸ ರೀತಿಗಳಲ್ಲಿ ಕಾವ್ಯ ಸೃಷ್ಟಿಯನ್ನು ಅಭ್ಯಾಸ ಮಾಡುತ್ತಿದೆ. ಭಾಷಾಂತರಗಳೂ ಅನುಕರಣಗಳೂ ಸ್ವಂತ ಕವಿತೆಗಳೂ ಹೊಸ ಕಾವ್ಯರೂಪಗಳೂ ಹೊಸ ಛಂದಸ್ಸುಗಳೂ ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು ಲಕ್ಷ್ಯಕ್ಕೆ ತಾರದೆ ಸ್ವಾತಂತ್ರ್ಯಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿವೆ."

ಹೊಸ ಸಾಹಿತ್ಯದಲ್ಲಿ ಗದ್ಯಕ್ಕೆ ಪ್ರಾಚುರ್ಯ, ಪ್ರಾಶಸ್ತ್ಯಗಳು ಸಿಕ್ಕಿದ್ದು ಸಹಜ. ವಾಸ್ತವಿಕ, ಲೌಕಿಕ, ವ್ಯಾವಹಾರಿಕ ವಿಷಯಗಳನ್ನು ಅಭಿವ್ಯಕ್ತಿಸಲು ಗದ್ಯವೇ ಸಮುಚಿತವಾದ ವಾಹಕ. ಆದ್ದರಿಂದ ೧೯ನೆಯ ಶತಮಾನದಲ್ಲಿ ಪದ್ಯಕ್ಕಿಂತ ಗದ್ಯ ವೈವಿಧ್ಯಪೂರ್ಣವಾಗಿ ಕಾಣಿಸಿಕೊಳ್ಳುತ್ತದೆ.

ಲೇಖಕರು ರಾಜಾಶ್ರಯವಿಲ್ಲದೆ ಬದುಕಬಲ್ಲ, ಬರೆಯಬಲ್ಲ ಪರಿಸ್ಥಿತಿ ಕ್ರಮೇಣ ಬ್ರಿಟಿಷರ ಆಡಳಿತದ ಫಲವಾಗಿ ಉಂಟಾಯಿತೆಂಬುದನ್ನು ಗಮನಿಸಬೇಕು. ಇದರಿಂದ ಸಾಹಿತ್ಯ ತನ್ನೆಲ್ಲ ಹಿಂದಿನ ಸಂಕೋಲೆಗಳನ್ನು ಕಳಚಿಕೊಂಡು, ಮುಕ್ತರೀತಿಯಲ್ಲಿ ವೈವಿಧ್ಯ ಸಮನ್ವಿತವಾಗಿ ದಾಂಗುಡಿಯಿಡತೊಡಗಿತು.

## ಕ್ರೈಸ್ತ ಮಿಶನರಿಗಳ ಸೇವೆ

ಹೊಸಗನ್ನಡದ ಅರುಣೋದಯ ಕಾಲದಲ್ಲಿ ಮೂರು ಘಟ್ಟಗಳನ್ನು ಗುರುತಿಸಬಹುದು. ಸು. ೧೮೧೦ರಿಂದ ಸು. ೧೮೫೦ ನಸುಕಿನ ಕಾಲ. ಈ ಅವಧಿಯಲ್ಲಿ ಪಾಶ್ಚಾತ್ಯ ಶಿಕ್ಷಣಪದ್ಧತಿ ಇನ್ನೂ ನೆಲೆಗೊಂಡಿರಲಿಲ್ಲ. ಕ್ರೈಸ್ತ ಮಿಶನರಿಗಳು ಮಾತ್ರ ಗ್ರಂಥ ರಚನೆಯಲ್ಲಿ ತೊಡಗಿದ್ದರು. ದೇಶೀಯರು ಆ ಕಡೆ ಗಮನ ಹರಿಸಿರಲಿಲ್ಲ. ೧೮೫೧ ರಿಂದ ೧೮೮೦ರ ವರೆಗಿನ ಕಾಲವನ್ನು ಮುಂಬೆಳಗಿನ ಕಾಲವೆನ್ನಬಹುದು. ಈ ಅವಧಿಯಲ್ಲಿ ದೇಶೀಯರೂ ಗ್ರಂಥರಚನೆಯ ಕಡೆಗೆ ಮನಸ್ಸು ಕೊಟ್ಟು, ಅನುವಾದಕಾರ್ಯದಲ್ಲಿ ಮತ್ತು ಹಳೆಯ ಗ್ರಂಥಗಳ ಪರಿಷ್ಕರಣದಲ್ಲಿ ತೊಡಗಿದರು. ೧೮೮೧ರಿಂದ ೧೮೯೯ರ ವರೆಗಿನ ಕಾಲವನ್ನು ಹೊಂಬೆಳಗಿನ ಕಾಲ ಅಥವಾ ನವೋದಯ ಕಾಲವೆನ್ನಬಹುದು. ಈ ಅವಧಿಯಲ್ಲಿ ಮತ್ತು ಅನಂತರ ಅನುವಾದ ಕೃತಿಗಳ ಜೊತೆಗೆ ಸ್ವತಂತ್ರ ಕೃತಿಗಳೂ ಕಾಣಿಸಿಕೊಂಡುವು. ಇಂಗ್ಲಿಷ್ ಶಿಕ್ಷಣ ಕ್ರಮ ಎಲ್ಲೆಲ್ಲೂ ರೂಢವಾಗಿ, ನವೀನ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಿದ ಕಾಲಾವಧಿಯಿದು. ಈ ಶಿಕ್ಷಣದ ಫಲವಾಗಿ ಹೊಸ ಧೋರಣೆಯುಂಟಾಗಿ, ಸಮಾಜಸುಧಾರಣೆಯೇ ಮೊದಲಾದ ಸ್ವತಂತ್ರ ವಿಚಾರಗಳು ಸ್ಫುರಿಸಿ, ಅಭಿವ್ಯಕ್ತಿಗಾಗಿ ಹಾತೊರೆದುವು. ಇಂತಹ ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರಧಾರೆ, ಲೌಕಿಕ ದೃಷ್ಟಿ, ವಾಸ್ತವಿಕತೆಯ ಪ್ರಜ್ಞೆ ತಲೆದೋರಿದುವು.

ಹೊಸಗನ್ನಡ ಸಾಹಿತ್ಯಕ್ಕೆ ಹಾಗೂ ಕರ್ನಾಟಕದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ತಳಹದಿ ಹಾಕಿದವರು ಕ್ರೈಸ್ತ ಮಿಶನರಿಗಳು. ಮತಧರ್ಮಗಳೇ ಇತಿಹಾಸದುದ್ದಕ್ಕೂ ಕನ್ನಡ ಸಾಹಿತ್ಯಕ್ಕೆ ಪ್ರೇರಕ ಕಾರಕ ಶಕ್ತಿಗಳಾಗಿ ಕೆಲಸ ಮಾಡಿವೆಯೆಂಬುದನ್ನು ಲಕ್ಷಿಸಿದಾಗ, ಹೊಸಗನ್ನಡ ಸಾಹಿತ್ಯ ತನ್ನ ಆರಂಭಕಾಲದಲ್ಲಿ ಕ್ರೈಸ್ತಧರ್ಮದ ಸಂಸ್ಪರ್ಶವನ್ನು ಪಡೆದಿರುವುದು ಆಶ್ಚರ್ಯಕರವಾಗಿ ಕಾಣುವುದಿಲ್ಲ. ಆದರೆ ಕ್ರೈಸ್ತಧರ್ಮ ಹೊಸಗನ್ನಡ ಸಾಹಿತ್ಯದಲ್ಲಿ ಅಭಿನ್ನವಾಗಿ ಸೇರಿಕೊಂಡಿಲ್ಲ; ಅದರ ಪ್ರಭಾವ ಪರಿಮಿತವೂ ಪರೋಕ್ಷವೂ ಆದದ್ದು.

ಇತರ ಭಾಷಾಸಾಹಿತ್ಯಗಳಲ್ಲಿ ಆದಂತೆ ಕನ್ನಡದಲ್ಲಿಯೂ ಬ್ರಿಟಿಷ್ ಅಧಿಕಾರಿಗಳು, ಮಿಶನರಿಗಳು ಹೊಸ ಸಾಹಿತ್ಯಕ್ಕೆ ಮೂಲಪುರುಷರು ಎಂದರೆ ತಪ್ಪಲ್ಲ. ಈಗಿನ ಕನ್ನಡ ಲಿಪಿಯನ್ನು ರೂಪಿಸಿದವರೇ ಅವರು. ಅವರ ಸಾಹಿತ್ಯಕಾರ್ಯ ಭಾಷಾಭ್ಯಾಸದ ಸಾಧನಗಳ ಮೂಲಕ ಪ್ರಾರಂಭವಾಯಿತು. ಕನ್ನಡ ವ್ಯಾಕರಣ, ನಿಘಂಟು, ಛಂದಸ್ಸುಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಅವರು ಹೊರತಂದರು. ಈ ದಿಶೆಯಲ್ಲಿ ವಿಲಿಯಂ ಕೇರಿಯ ವ್ಯಾಕರಣ (೧೮೧೭) ಆದ್ಯಕೃತಿ. ಮಿಶನರಿಗಳು ಕ್ರೈಸ್ತ ಸಾಹಿತ್ಯವನ್ನು ಕನ್ನಡಕ್ಕೆ ತಂದುದು ಮುಖ್ಯವಾದ ಕಾರ್ಯ; "೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಇವೇ ಹೊಸಗನ್ನಡ ಮುಖ್ಯ ಬರಹಗಳು." ಪಠ್ಯಪುಸ್ತಕ ರಚನೆ, ಪ್ರಾಚೀನ ಕೃತಿಗಳ ಶಾಸ್ತ್ರೀಯ ಸಂಪಾದನೆ ಹಾಗೂ ಮುದ್ರಣಾಲಯ ಸ್ಥಾಪನೆ ಮಿಶನರಿಗಳ ಮತ್ತು ಬ್ರಿಟಿಷ್ ಅಧಿಕಾರಿಗಳ ಇತರ ಕಾರ್ಯಗಳು.

ವಿದೇಶೀಯರು ಹೀಗೆ ಕನ್ನಡ ಸಾಹಿತ್ಯ ಸೇವೆಯನ್ನು ಹಿಂದೆಯೇ ಪ್ರಾರಂಭಿಸಿದ್ದರೂ, ದೇಶೀಯರು ಆ ಬಗ್ಗೆ ಮೊದಮೊದಲು ನಿರ್ಲಿಪ್ತರಾಗಿದ್ದರು. ಇದಕ್ಕೆ ಮುಖ್ಯ ಕಾರಣ ವೇನೆಂದರೆ, ನಾಡು ಆಡಳಿತದೃಷ್ಟಿಯಿಂದ ವಿಭಜಿತವಾಗಿದ್ದು, ಶೈಕ್ಷಣಿಕವಾಗಿ ಹಿಂದೆ ಬಿದ್ದಿತ್ತು. ಅಲ್ಲದೆ, ಮೈಸೂರಿನಲ್ಲಿ ರಾಜಾಸ್ಥಾನದಲ್ಲಿದ್ದವರು ಹೊಸತನವನ್ನು ಅಷ್ಟಾಗಿ ಸ್ವಾಗತಿಸದೆ ಸಂಪ್ರದಾಯದ ಜಾಡಿನಲ್ಲೆ ಸಾಗಿದ್ದರು. ಕರ್ಣಾಟಕದ ಉಳಿದ ಭಾಗಗಳಲ್ಲೂ ನವೋದಯಕ್ಕೆ ಅವಕಾಶ ಸಿಗುವುದು ತಡವಾಯಿತು. ಆದ್ದರಿಂದ ಬಂಗಾಳಿ ಮರಾಠಿ ಮುಂತಾದ ಸಾಹಿತ್ಯಗಳಲ್ಲಿ ಬೇಗ ಕಾಣಿಸಿಕೊಂಡ ದೇಶಾಭಿಮಾನ, ಸಮಾಜ ಸುಧಾರಣೆಯ ಪ್ರವೃತ್ತಿ, ಪ್ರಗತಿಪರ ವಿಚಾರಧೋರಣೆಗಳು ಕನ್ನಡದಲ್ಲಿ ವಿಲಂಬಿತವಾಗಿ ಕಾಣಿಸಿಕೊಂಡುವು. ಏನಿದ್ದರೂ ೧೮೯೦ನೆಯ ದಶಕದಲ್ಲಿ ಸ್ವತಂತ್ರ ಕಾದಂಬರಿ ನಾಟಕಗಳು ಕನ್ನಡದಲ್ಲಿ ಹೊಮ್ಮಿದುವು. ೧೮೯೯ರಲ್ಲಿ ಪ್ರಥಮ ಸಾಮಾಜಿಕ ಕಾದಂಬರಿ ಹೊರಬಂತು; ೧೮೮೧ರಲ್ಲಿ ಚಾಮರಾಜ ಒಡೆಯರು ರಾಜ್ಯಭಾರ ವಹಿಸಿಕೊಂಡರು. ಈ ಎರಡು ವರ್ಷಗಳ ನಡುವಣ ಅವಧಿ ಹೊಸಗನ್ನಡದ ಇತಿಹಾಸದಲ್ಲಿ ಮಹತ್ವದ ಶಕವೆನ್ನಲಾಗಿದೆ. ಹೊಸತು ನಿಚ್ಚಳವಾಗಿ, ಉಜ್ವಲವಾಗಿ ಕಾಣಿಸಿಕೊಂಡ ಕಾಲವದು.

ಹೊಸಗನ್ನಡ ಗದ್ಯದಲ್ಲಿ ಬೈಬಲ್ಲನ್ನು ಅನುವಾದಿಸಿದ ಜಾನ್ ಹ್ಯಾಂಡ್ಸ್ ಕರ್ಣಾಟಕಕ್ಕೆ ಬಂದುದು ೧೮೧೨ರಲ್ಲಿ; ಆ ವರ್ಷವನ್ನು "ಪಾಶ್ಚಾತ್ಯ ಪ್ರಭಾವದ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯದ ಆರಂಭವರ್ಷ"ವೆನ್ನಬಹುದು.

ಲಿಯೊನಾರ್ಡೊ ಸಿನ್ನಾಮಿ ಎಂಬ ಮಿಶನರಿ ಹದಿನೇಳನೆಯ ಶತಮಾನದಲ್ಲೆ ಕರ್ಣಾಟಕಕ್ಕೆ ಬಂದಿದ್ದ; ಅವನೇ 'ಹೊಸಗನ್ನಡದ ಪ್ರಪ್ರಥಮ ಗ್ರಂಥಕರ್ತ' ಎನ್ನಲಾಗಿದೆ. ಆದರೆ ಆವನ ಕೃತಿಗಳು ದೊರೆತಿಲ್ಲ. ಜಾನ್ ಹ್ಯಾಂಡ್ಸ್ ೧೮೧೩ರಲ್ಲಿ ಮ್ಯಾಥ್ಯೂ ಮಾರ್ಕ್ ಲ್ಯೂಕರ ಸುವಾರ್ತೆಗಳನ್ನೂ ಪ್ರಶ್ನೋತ್ತರರೂಪವಾದ ಮತಗ್ರಂಥವೊಂದನ್ನೂ ಅನುವಾದಿಸಿದ; ಬೈಬಲ್ಲಿನ ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳನ್ನು ೧೮೨೦ರಲ್ಲಿ ಹೊರತಂದ. ಅನಂತರ ಹೊಸ ಒಡಂಬಡಿಕೆಯ ಮುಂದಿನ ಭಾಗವನ್ನೂ ಹಳೆಯ ಒಡಂಬಡಿಕೆಯ ಅನುವಾದವನ್ನೂ ಸಿದ್ಧಗೊಳಿಸಿದ. ಸಮಗ್ರ ಬೈಬಲ್ಲನ್ನು ಮೊದಲಬಾರಿಗೆ ಕನ್ನಡದಲ್ಲಿ ಹೊರತಂದವನು ಹ್ಯಾಂಡ್ಸ್. ಅವನಿಗಿಂತ ಮೊದಲೇ ವಿಲಿಯಂ ಕೇರಿ ೧೮೦೯ರಲ್ಲಿ ಬೈಬಲ್ಲನ್ನು ಕನ್ನಡಕ್ಕೆ ತಂದಿದ್ದ; ಆದರೆ ಅದರ ಹಸ್ತಪ್ರತಿ ೧೮೧೨ರಲ್ಲಿ ಸುಟ್ಟುಹೋಯಿತು; ಕೇರಿ ಮತ್ತೆ ಅದನ್ನು ಪ್ರತಿಮಾಡಿ ೧೮೨೩ರಲ್ಲಿ ಪ್ರಕಟಿಸಿದ. ಇದೇ ಹೊಸಗನ್ನಡದ ಮೊದಲ ಗದ್ಯ ಗ್ರಂಥವೆನ್ನಲಾಗಿದೆ. ಎ. ಬೌಥೆಲೊ ಬೈಬಲ್ಲಿನ ಸಂಕ್ಷಿಪ್ತರೂಪವನ್ನು ಕನ್ನಡದಲ್ಲಿ ಪ್ರಕಟಿಸಿದ. ರೀವ್ 'ಯೇಸುಕ್ರಿಸ್ತನ ಅವತಾರ' (೧೮೨೦) ಎಂಬ ಅನುವಾದವನ್ನೂ ಹಳೆಯ ಒಡಂಬಡಿಕೆಯ ಅನೇಕ ಪರ್ವಗಳನ್ನೂ ಕನ್ನಡದಲ್ಲಿ ಹೊರತಂದ. ಬೆನ್ಯನ್ 'Pilgrim's Progress' ಕೃತಿಯನ್ನು 'ದೇಶಾಂತ್ರಿಯ ಪಯಣ' ಎಂಬ ಹೆಸರಿನಲ್ಲಿ ಅನುವಾದಿಸಿದ. ಬಿ. ಎಚ್. ರೈಸ್ ತನ್ನ ಸಹೋದ್ಯೋಗಿ ಸಿವೆಲ್‌ನೊಡನೆ ಬೈಬಲ್ಲಿನ ನೂರು ಮುಖ್ಯಾಂಶಗಳನ್ನು ಟಿಪ್ಪಣಿಸಹಿತ

ಪ್ರಕಟಿಸಿದ (ವೇದಸಂಗ್ರಹ, ೧೮೪೪). ಸ್ಯಾಂಡರ್ಸನ್ 'Come to Jesus' ಎಂಬ ಕೃತಿಯನ್ನು (ಮೂಲ: ಸಿ. ಎನ್. ಹಾಲ್) ಅನುವಾದಿಸಿದ (೧೮೬೨). ಹೀಗೆಯೆ ಚಾರ್ಬೋನಾ ಎಂಬಾತನ ಅನುವಾದಗಳು ಇವು: 'ದೈವಪರೀಕ್ಷೆ' (೧೮೬೩), 'ಸತ್ಯವೇದ ಪರೀಕ್ಷೆ' (೧೮೫೭), 'ದಿವ್ಯಮಾತೃಕೆ' (೧೮೬೭), 'ಸುಕೃತಮಂತ್ರಗಳು' (೧೮೬೬) ಇತ್ಯಾದಿ. ಹೆನ್ರಿ ಹೇಗ್ ಜಿಗ್ಲರನೊಡನೆ ಹೊಸ ಒಡಂಬಡಿಕೆಯ ಲ್ಯೂಕ್ ಮತ್ತು ಮಾರ್ಕರ ಸುವಾರ್ತೆಗಳನ್ನು ಭಾಷಾಂತರಿಸಿದ. ಮೊಗ್ಲಿಂಗನ 'ಜಾತಿ (ಮತ) ವಿಚಾರಣೆ' (೧೮೪೫), 'ದೇವವಿಚಾರಣೆ' (೧೮೫೭) ಅನುವಾದಗಳಲ್ಲ, ಸ್ವತಂತ್ರ ಕೃತಿಗಳು "ಹೊಸಗನ್ನಡದ ಆದ್ಯಪ್ರಬಂಧ"ಗಳಿವು. 'Pilgrim's Progress'ದ ಅನುವಾದವಾದ 'ಯಾತ್ರಿಕನ ಸಂಚಾರ'ವನ್ನು ಮೊಗ್ಲಿಂಗ್ ವೈಗಲ್‌ನೊಡನೆ ೧೮೪೭ರಲ್ಲಿ ಹೊರತಂದ "ಸುದೀರ್ಘ ಕತೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಇದೇ ಮೊದಲನೆಯದು." ೧೮೩೮ರಲ್ಲಿ 'Little William' ಎಂಬ ಕ್ರೈಸ್ತಕಥನದ ಅನುವಾದ ಪ್ರಕಟವಾಗಿತ್ತು. ಪ್ರವಚನಕ್ಕೆ ಬೇಕಾದ ಕ್ರೈಸ್ತ ಗೀತೆಗಳನ್ನು ಅನುವಾದಿಸಿದ ಆರಂಭಕಾರರಲ್ಲೊಬ್ಬ ವೈಗಲ್. ಮೊಗ್ಲಿಂಗನೊಡನೆ ಹಾಕ್ ಅನೇಕ ಪ್ರಾರ್ಥನಾಗೀತೆಗಳನ್ನು ರಚಿಸಿದ. ಎಫ್. ಕಿಟ್ಟೆಲ್ 'ಕಥಾಮಾಲೆ' (೧೮೬೭) ಎಂಬ ಹೆಸರಿನಲ್ಲಿ ಬೈಬಲಿನ ಹೊಸ ಒಡಂಬಡಿಕೆಯನ್ನು ಕಥನರೂಪಕ್ಕೆ ತಿರುಗಿಸಿದ. ಇದರಲ್ಲಿ ಭಾಮಿನಿ, ವಾರ್ಧಕ ಮುಂತಾದ ಛಂದೋರೂಪಗಳನ್ನು ಬಳಸಲಾಗಿದೆ. ಬೇರಾವ ಮಿಷನರಿಯೂ ಇಷ್ಟೊಂದು ಕನ್ನಡ ಪದ್ಯಗಳನ್ನು ರಚಿಸಿಲ್ಲವಂತೆ. ಮಿಷನರಿಗಳು ಬರಿಯ ಮತೀಯ ಸಾಹಿತ್ಯವನ್ನೆ ರಚಿಸಲಿಲ್ಲ; ಮಹಾಪುರುಷರ ಜೀವನಚರಿತ್ರೆಗಳು ಮುಂತಾದ ಜೀವನೋಪಯೋಗಿ ಗ್ರಂಥಗಳನ್ನೂ ರಚಿಸಿದ್ದರು.

ಉಳಿದವರಿಗಿಂತ ಬಾಸೆಲ್ ಮಿಷನ್‌ಗೆ ಸೇರಿದ ಮಿಷನರಿಗಳು ಕನ್ನಡಕ್ಕಿತ್ತ ಕೊಡುಗೆ ಮಿಗಿಲಾದುದು. ಅವರು "ತಮ್ಮ ೬೦ ವರ್ಷಗಳ ಕಾಲಾವಧಿಯಲ್ಲಿ ಅನೇಕ ಹೊಸ ವಿಚಾರಗಳನ್ನೂ, ನವೀನ ರೂಪಗಳನ್ನೂ ಸಾಹಿತ್ಯರಂಗದಲ್ಲಿ ಪ್ರತಿಷ್ಠಾಪಿಸಿದ್ದಾರೆ; ಹೊಸಗನ್ನಡ ಚರಿತ್ರೆಯಲ್ಲಿ ಶಾಶ್ವತ ಸ್ಥಾನವನ್ನು ಪಡೆದಿದ್ದಾರೆ."

ಮ್ಯಾಕೆರಲ್, ಕಾಲ್ಡ್‌ವೆಲ್, ಬಿ. ಎಲ್. ರೈಸ್, ರೀಡ್ ಮುಂತಾದವರ ಸೇವೆಯೂ ಗಮನಾರ್ಹವಾದುದು. ಬಿ. ಎಲ್. ರೈಸ್ ಅವರು ಶಿಲಾಶಾಸನಗಳನ್ನು ಸಂಗ್ರಹಿಸಿ, ಸಂಪಾದಿಸಿ, ನಾಡುನುಡಿಗಳ ಅಭಿಮಾನಕ್ಕೆ ವಿಶೇಷ ಸಾಮಗ್ರಿಯೊದಗಿಸಿದರೆಂಬುದನ್ನು ನೆನೆಯಬೇಕು. ಕರ್ನಾಟಕ ಸಂಸ್ಕೃತಿಯ ಒಂದು ಭವ್ಯಚಿತ್ರವೇ ಶಾಸನಗಳಿಂದ ತೆರೆದುಕೊಂಡಿತು. ಒಟ್ಟಿನಲ್ಲಿ ಒಂದು ಕಡೆ ಪ್ರಾಚೀನ ನಿಕ್ಷೇಪದ ಅನಾವರಣ, ಇನ್ನೊಂದು ಕಡೆ ಹೊಸ ಸಾಹಿತ್ಯಕ್ಕೆ ಪ್ರೇರಣೆ—ಈ ಎರಡೂ ಪರಸ್ಪರ ಪೂರಕವಾದ ಕೆಲಸಗಳನ್ನು ವಿದೇಶೀಯರು ಮಾಡಿದರು.

## ಆರಂಭದ ಪ್ರಯತ್ನಗಳು

೧೯ನೆಯ ಶತಮಾನದ ಉತ್ತರಾರ್ಧದಲ್ಲಿ, ಪಾಶ್ಚಾತ್ಯಶಿಕ್ಷಣ ಪಡೆದ ಹೊಸ ತಲೆಮಾರೊಂದು ಸಾಹಿತ್ಯರಚನೆಯಲ್ಲಿ ತೊಡಗಿ ನವನಿರ್ಮಾಣವನ್ನು ಆರಂಭಿಸಿತು. ಮೊದಮೊದಲು ಇಂಗ್ಲಿಷ್ ಕೃತಿಗಳ ಅನುವಾದಗಳು, ಅನುಕರಣಗಳು ಮತ್ತು ರೂಪಾಂತರಗಳು, ಅನಂತರ ಸ್ವತಂತ್ರ ಕೃತಿಗಳು ಹೊರಬಂದುವು.

ಚಾಮರಾಜ ಒಡೆಯರು 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆ'ಯನ್ನು ಸ್ಥಾಪಿಸಿ ನಾಟಕಗಳ ಹುಟ್ಟಿಗೆ ಅನುವು ಮಾಡಿಕೊಟ್ಟಿದ್ದು ಒಂದು ಮಹತ್ವದ ಸಂಗತಿ. ಅದಕ್ಕಾಗಿ ಅವರಿಗೆ 'ಕರ್ಣಾಟಕ ನಾಟಕ ನಿರ್ಮಾಪಕ' ಎಂಬ ಬಿರುದು ಬಂದಿತ್ತಂತೆ. ಸಂಸ್ಕೃತದಿಂದ ಕೆಲವರು, ಇಂಗ್ಲಿಷಿನಿಂದ ಕೆಲವರು ನಾಟಕಗಳನ್ನು ಕನ್ನಡಿಸಿದರು. ಇಂಗ್ಲಿಷಿನಿಂದ ವಿಶೇಷವಾಗಿ ಷೇಕ್ಸ್‌ಪಿಯರನ ನಾಟಕಗಳನ್ನು ಭಾಷಾಂತರ ಅಥವಾ ರೂಪಾಂತರದ ಮೂಲಕ ತರಲಾಯಿತು. ಕನ್ನಡದಲ್ಲಿ ಐತಿಹಾಸಿಕ ನಾಟಕ ನಿರ್ಮಾಣಕ್ಕೆ ಅದೇ ಬುನಾದಿ. ಷೇಕ್ಸ್‌ಪಿಯರನನ್ನು ಕನ್ನಡಿಗರಿಗೆ ಮೊತ್ತಮೊದಲು ಪರಿಚಯಿಸಿದವರು ಚನ್ನಬಸಪ್ಪ ಎಂಬವರೆಂದು ಹೇಳಲಾಗಿದೆ. ಅವರು ೧೮೭೦ರಷ್ಟು ಹಿಂದೆಯೇ Comedy of Errors, Macbeth ನಾಟಕಗಳ ಕತೆಗಳನ್ನು ಪ್ರಕಟಿಸಿದ್ದರು.

ಈ ದಿಕ್ಕಿನಲ್ಲಿ ಎಂ. ಎಲ್. ಶ್ರೀಕಂಠೇಶಗೌಡರ ಹೆಸರು ಮುಖ್ಯವಾದುದು. ಅವರು 'ಮ್ಯಾಕ್ ಬೆತ್' ನಾಟಕವನ್ನು 'ಪ್ರತಾಪರುದ್ರದೇವ' (೧೮೯೫) ಎಂದೂ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನಾಟಕವನ್ನು 'ಪ್ರಮೀಳಾರ್ಜುನೀಯ' ಎಂದೂ ರೂಪಾಂತರಿಸಿದರು. ಅಲ್ಲದೆ, ಹೆನ್ರಿ ಫೀಲ್ಡಿಂಗನ A silican summer ('ಕನ್ಯಾವಿಶಂತು'), ಮೇರಿಯಾ ಎಜ್‌ವರ್ತ್‌ಳ Little Merchants ('ಚಿಕ್ಕ ಬಣಜಿಗರು') ಕೃತಿಗಳನ್ನು ಕನ್ನಡಿಸಿದರು. ಎ. ಆನಂದರಾಯರು Romeo and Julietನ್ನು 'ರಾಮವರ್ಮ ಲೀಲಾವತಿ' ಎಂದೂ Merchant of Veniceನ್ನು 'ಪಾಂಚಾಲೀ ಪರಿಣಯ'ವೆಂದೂ ರೂಪಾಂತರಿಸಿದರು. ಬಸವಪ್ಪಶಾಸ್ತ್ರಿಗಳಿಗೆ ಸ್ವತಃ ಇಂಗ್ಲಿಷ್ ಬರದಿದ್ದರೂ ಅನ್ಯರ ನೆರವಿನಿಂದ 'ಒಥೆಲೊ' ನಾಟಕವನ್ನು 'ಶೂರಸೇನಚರಿತೆ' ಎಂದು ಕನ್ನಡಕ್ಕೆ ತಂದರು. ಎಂ. ಎಸ್. ಪುಟ್ಟಣ್ಣನವರ 'ಹೇಮಚಂದ್ರ ರಾಜ ವಿಲಾಸ' 'King Lear' ನಾಟಕದ ಗದ್ಯರೂಪಾಂತರ. ಆರ್. ಅಣ್ಣಾಜಿರಾಯರಿಂದ ಷೇಕ್ಸ್‌ಪಿಯರನ Two Gentlemen of Verona, ಡಿಕನ್ಸನ Oliver Twist ಹಾಗೂ ಫೀಲ್ಡಿಂಗನ Tom Jones ಪರಿವರ್ತನೆಗೊಂಡುವು. ಚುರಮುರಿ ಶೇಷಗಿರಿರಾಯರು 'ಶಾಕುಂತಲ' ನಾಟಕವನ್ನು ಮೊದಲ ಬಾರಿಗೆ ೧೮೬೯ರಲ್ಲಿ ಅನುವಾದಿಸಿದರು; ಇದೇ ಹೊಸಗನ್ನಡದ ಪ್ರಥಮ ನಾಟಕ. ಹೆನ್ರಿ ಫೀಲ್ಡಿಂಗನ ಒಂದು ಕೃತಿಯನ್ನೂ ಅವರು ಕನ್ನಡಿಸಿದರು (ಸುಂದರ ನಾಟಕ). ಗುಂಡೋ ಕೃಷ್ಣ ಚುರಮುರಿಯವರು 'ಒಥೆಲೊ' ನಾಟಕವನ್ನು 'ರಾಘವೇಂದ್ರರಾವ ನಾಟಕ' (೧೮೮೫)ವಾಗಿ ಮಾರ್ಪಡಿಸಿದರು. ವೆಂಕಟಾದ್ರಿ ಶಾಮರಾಯರ 'ಕಮಲಾವತೀ ಪರಿಣಯ' As you like it ನಾಟಕದ ಪರಿವರ್ತನೆ.

ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ನಾಟಕವೆಂದರೆ ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿಯ 'ಇಗ್ಗಪ್ಪ ಹೆಗ್ಗಡೆಯ ವಿವಾಹಪ್ರಹಸನ' (೧೮೮೭). ಈ ಕೃತಿಯಲ್ಲಿ ಹವ್ಯಕಸಮಾಜದ ಕನ್ಯಾವಿಕ್ರಯ ಪದ್ಧತಿಯ ಮೇಲೆ ಗದಾಪ್ರಹಾರ ಮಾಡಲಾಗಿದೆ. ಅದೇ ವರ್ಷ ಹೊರಬಂದ ಶಿವರಾಮ ನಾರಣಪ್ಪ ಧಾರೇಶ್ವರರ 'ಕನ್ಯಾವಿಕ್ರಯ'ವೂ ಅದೇ ಗೋತ್ರಕ್ಕೆ ಸೇರುವ ನಾಟಕ.

ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ಮೊದಲ ಕಾದಂಬರಿಯೆಂದರೆ ಎಸ್. ವಿ. ಕೃಷ್ಣಸ್ವಾಮಿ ಅಯ್ಯಂಗಾರ್ ಭಾಷಾಂತರಿಸಿದ 'ರಾಬಿನ್‌ಸನ್ ಕ್ರೂಸೋ' ಕಾದಂಬರಿ (೧೮೫೭). ಬಾಪು ಸುಬ್ಬರಾಯರ 'ಸೌಭಾಗ್ಯ ಮುರಾದ' ಅಂಥದೇ ಮತ್ತೊಂದು ಕಾದಂಬರಿ. ಥಾಮಸ್ ಡೇಯ Sandford and Martinನ್ನು ಎಂ. ಎಸ್. ಪುಟ್ಟಣ್ಣನವರು 'ಸುಮತಿ ಹಾಗೂ ಮದನಕುಮಾರರ ಚರಿತ್ರೆ' ಎಂಬುದಾಗಿ ಕನ್ನಡಿಸಿದರು.

ಬಿ. ವೆಂಕಟಾಚಾರ್ಯರು ೧೮೭೬ರಲ್ಲಿ ಈಶ್ವರಚಂದ್ರ ವಿದ್ಯಾಸಾಗರರ 'ಭ್ರಾಂತಿವಿಲಾಸ'ವೆಂಬ ಬಂಗಾಳಿ ಕೃತಿಯನ್ನು—ಅದು Comedy of Errorsದ ಗದ್ಯರೂಪ—ಅನುವಾದಿಸಿದರು. ಅನಂತರ ಬಂಕಿಮಚಂದ್ರರ 'ದುರ್ಗೇಶ ನಂದಿನಿ'ಯ ಅನುವಾದ ೧೮೮೫ರಲ್ಲಿ ಹೊರಬಂತು. ರಮೇಶಚಂದ್ರದತ್ತ, ನಸಿಲಾಲ ವಂದ್ಯೋಪಾಧ್ಯಾಯ, ಸತ್ಯೇಂದ್ರ ಕುಮಾರ, ಸತೀಶಚಂದ್ರಬಾಬು—ಇವರ ಕೆಲವು ಕೃತಿಗಳನ್ನು ವೆಂಕಟಾಚಾರ್ಯರು ಭಾಷಾಂತರಿಸಿದ್ದರೂ, ಅವರ ಹೆಸರು ಪ್ರಸಿದ್ಧವಾಗಿರುವುದು ಮುಖ್ಯವಾಗಿ ಬಂಕಿಮ ಚಂದ್ರರ ಕಾದಂಬರಿಗಳ ಭಾಷಾಂತರದಿಂದ. ವೆಂಕಟಾಚಾರ್ಯರ ಮೇಲೆ ಪಾಶ್ಚಾತ್ಯ ಪ್ರಭಾವ ನೇರವಾಗಿಯಲ್ಲದಿದ್ದರೂ ಪರೋಕ್ಷವಾಗಿ ಆಗಿದೆ; ಏಕೆಂದರೆ ಬಂಕಿಮರ ಕಾದಂಬರಿಗಳು ಸ್ಕಾಟ್ ಮತ್ತು ಕಾಲಿನ್ಸ್‌ರಿಂದ ಪ್ರಭಾವಿತವಾದವು. ಕಾದಂಬರಿಯ ಪ್ರಕಾರ ಕನ್ನಡದಲ್ಲಿ ನೆಲೆಗೊಂಡದ್ದು ವೆಂಕಟಾಚಾರ್ಯರಿಂದ. ಅವರು 'ದುರ್ಗೇಶ ನಂದಿನಿ'ಯನ್ನು ಅನುವಾದಿಸಿದುದರ ಉದ್ದೇಶವೇನೆಂದರೆ, ''A novel in the sense it is understood in English is not familiar to the Kanarese speaking public''—ಈ ಕೊರತೆಯನ್ನು ನೀಗುವುದು. ಅವರ ಪ್ರಕಾರ ಕಾದಂಬರಿ (ನಾವೆಲು)ಗಳ ಕರ್ತವ್ಯವೇನೆಂದರೆ, "ಸಮಾಜದ ಹಾಗೂ ಸಮಾಜದ ಅಂಗಭೂತರಾದ ಮನುಷ್ಯರ ಚರಿತ್ರೆ, ನಡತೆಗಳಲ್ಲಿ ಕಂಡುಬರುವ....ದುರ್ನಡತೆ ಮುಂತಾದುವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಅವುಗಳಿಂದುಂಟಾಗುವ ವಿಪತ್ತುಗಳನ್ನು ತೋರ್ಪಡಿಸಿ, ಪ್ರತಿ ಒಬ್ಬನು ಸಮಾಜದಲ್ಲಿ ಸದ್ಭಾವದಿಂದ ನಡೆದುಕೊಳ್ಳುವುದನ್ನು ತೋರ್ಪಡಿಸತಕ್ಕುದಾಗಿದೆ." 'ಅರೇಬಿಯನ್ ನೈಟ್ಸ್' ಕತೆಗಳನ್ನು ಬಿ. ವೆಂಕಟಾಚಾರ್ಯರು 'ಯವನಯಾಮಿನೀ ವಿನೋದ'ವೆಂಬ ಹೆಸರಿನಲ್ಲಿ ಪರಿವರ್ತಿಸಿದರು.

ಒಂದು ಕಡೆ ವೆಂಕಟಾಚಾರ್ಯರು ಬಂಗಾಳಿಯಿಂದ ಕಾದಂಬರಿಗಳನ್ನು ಅನುವಾದಿಸಿದರೆ ಇನ್ನೊಂದು ಕಡೆ ಗಳಗನಾಥರು ಮರಾಠಿಯಿಂದ ಕಾದಂಬರಿಗಳನ್ನು ರೂಪಾಂತರಿಸಿ, ಕನ್ನಡ ಕಾದಂಬರೀ ಸೌಧಕ್ಕೆ ಅಡಿಗಲ್ಲು ಹಾಕಿದರು.

ಯಾದವ ಕವಿಯ 'ಕಲಾವತೀ ಪರಿಣಯು', ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾ ಪರಿಣಯ', ಕೆಂಪು ನಾರಾಯಣನ 'ಮುದ್ರಾಮಂಜೂಷ'ಗಳಲ್ಲೂ ಕಾದಂಬರಿಯ ಲಕ್ಷಣ ಗಳಿದ್ದರೂ, ಅವುಗಳನ್ನು ಆಧುನಿಕಾರ್ಥದಲ್ಲಿ ನಿಷ್ಕೃಷ್ಟವಾಗಿ ಕಾದಂಬರಿಗಳೆಂದು ಒಪ್ಪು ವುದು ಕಷ್ಟ. ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿ ಲಕ್ಷ್ಮಣ ಭೀಮರಾವ ಗದಗಕರ ನದು (೧೮೯೨) ಎನ್ನಲಾಗಿದೆ. ಅದರ ಕತೆ ಅರ್ಧ ಐತಿಹಾಸಿಕ, ಅರ್ಧ ಸಾಮಾಜಿಕ; 'ಕನ್ನಡದ ಹೊಸ ಕಾದಂಬರಿ' ಎಂದು ಅದನ್ನು ಕರೆದುಕೊಂಡಿದ್ದಾನೆ ಲೇಖಕ. ೧೮೯೮ ರಲ್ಲಿ ಗಳಗನಾಥರ 'ಪದ್ಮನಯನಾ' ಎಂಬ ಅದ್ಭುತರಮ್ಯ ಕಾದಂಬರಿಯೂ ೧೮೯೯ರಲ್ಲಿ ಗೂಳಪ್ಪ ಕೊಟ್ರಪ್ಪ ಅರಳಿಯವರ 'ಕನ್ನಡ ಶೌರ್ಯಸಾಗರ' ಎಂಬ ಕಾಲ್ಪನಿಕ ಕಾದಂಬ ರಿಯೂ ಪ್ರಕಟವಾದುವು. ಗುಬ್ಬಿ ಮುರಿಗಾರಾಧ್ಯನ 'ಶೃಂಗಾರಚಾತುರ್ಯೋಲ್ಲಾಸಿನಿ' ೧೮೯೬ರಲ್ಲಿ ಹೊರಬಂದ ಕಾದಂಬರಿ. ಸಂಪೂರ್ಣ ಸಾಮಾಜಿಕವಾದ ಸ್ವತಂತ್ರ ಕಾದಂಬರಿಗಳನ್ನು ರಚಿಸಿದವರಲ್ಲಿ ಆದ್ಯರು ಗುಳವಾಡಿ ವೆಂಕಟರಾಯ, ಗುಳವಾಡಿ ಅಣ್ಣಾಜಿರಾಯ, ಬೋಳಾರ ಬಾಬುರಾಯ ಮತ್ತು ಎಂ. ಎಸ್. ಪುಟ್ಟಣ್ಣನವರು. ಗುಳ ವಾಡಿ ವೆಂಕಟರಾಯರ 'ಇಂದಿರಾಬಾಯಿ ಇಲ್ಲವೆ ಸದ್ಧರ್ಮವಿಜಯ' (೧೮೯೯) ದಲ್ಲಿ ಪ್ರಗತಿಪರ ವಿಚಾರಗಳನ್ನೂ ವಾಸ್ತವಿಕಪ್ರಜ್ಞೆಯನ್ನೂ ನೋಡಬಹುದು. ಗುಳವಾಡಿ ಅಣ್ಣಾಜಿರಾಯರ 'ರೋಹಿಣಿ ಇಲ್ಲವೆ ಸಾರಸ್ವತಮಂಡಳ' (೧೯೦೬), ಬೋಳಾರ ಬಾಬು ರಾಯರ 'ವಾಗ್ದೇವಿ'—ಇವೂ 'ಇಂದಿರಾಬಾಯಿ'ಯ ಜಾಡಿನಲ್ಲೇ ನಡೆದ ಕಾದಂಬರಿಗಳು 'ಮಾಡಿದ್ದುಣ್ಣೋ ಮಹಾರಾಯ' ಎಂ. ಎಸ್. ಪುಟ್ಟಣ್ಣನವರ ಕಾದಂಬರಿ. ೧೯೧೬ರಲ್ಲಿ ಪ್ರಕಟವಾದ ಕೆರೂರರ 'ಯದುಮಹಾರಾಜ' ಮೊದಲ ಸ್ವತಂತ್ರ ಐತಿಹಾಸಿಕ ಕಾದಂಬರಿ.

ಇತರ ಕೆಲವು ಸ್ವತಂತ್ರ ಮತ್ತು ಅನುವಾದಿತ ಕೃತಿಗಳನ್ನಿಲ್ಲಿ ಹೆಸರಿಸಬಹುದು. ಎಂ. ಎ. ರಾಮಾನುಜಯ್ಯಂಗಾರ್ಯರ 'ಪ್ರಬಂಧಾವಳಿ' ವಿಶೇಷ ಉಲ್ಲೇಖನೀಯವಾದ್ದು. ಕನ್ನಡದ ಮೊದಲ ಪ್ರಬಂಧಕಾರರಲ್ಲಿ ಅವರೊಬ್ಬರು. ಎಂ. ಎಸ್. ಪುಟ್ಟಣ್ಣ, ಎಂ.ಬಿ. ಶ್ರೀನಿವಾಸಯ್ಯಂಗಾರ್, ಎಂ. ವೆಂಕಟಕೃಷ್ಣಯ್ಯ, ಎಂ. ಶಾಮರಾವ್, ಎಲ್. ಜಯ ರಾವ್, ಅಪ್ಪಣ್ಣಶೆಟ್ಟಿ, ಬಾಪು ಸುಬ್ಬರಾಯ ಮುಂತಾದವರೆಲ್ಲ ಹೊಸಗನ್ನಡವನ್ನು ಬೆಳೆಸಿದ ಹಿರಿಯರು. ಎಂ. ಶಾಮರಾಯರು 'ಮೈಸೂರು ದೇಶದ ಚರಿತ್ರೆ'ಯನ್ನು ಬರೆದಿದ್ದಾರೆ. ಬಾಪು ಸುಬ್ಬರಾಯರು 'ಚಂಡಮಾರುತ', 'ಸಿಂದಬಾದ ನಾವಿಕ'ಗಳ ಕರ್ತೃ. ಪುಟ್ಟಣ್ಣನವರಿಂದ 'ನೀತಿಚಿಂತಾಮಣಿ', 'ಹಿಂದೂದೇಶದ ಚರಿತ್ರೆ', 'ಕಾಂಪೂಷನ ಚರಿತ್ರೆ' ರಚಿತವಾಗಿವೆ. ವೆಂಕಟಕೃಷ್ಣಯ್ಯನವರ 'ಧನಾರ್ಜನೆ'ಯೊಂದು ಪ್ರಬಂಧ ಸಂಕಲನ. ಅವರ 'ಚೋರಗ್ರಹಣತಂತ್ರ' ಕನ್ನಡದ ಪ್ರಥಮ ಪತ್ತೇದಾರಿ ಕಾದಂಬರಿ. ಆರ್ಯಕೀರ್ತಿ, ಭೀಷ್ಮಚರಿತೆಗಳ ಚ. ವಾಸುದೇವಯ್ಯನವರನ್ನು 'ಹೊಸಗನ್ನಡದ ಗದ್ಯಶಿಲ್ಪಿ' ಎಂದು ಬಣ್ಣಿಸಲಾಗಿದೆ. ಆರ್. ರಘುನಾಥರಾಯರ 'ವ್ಯಾಕರಣೋಪನ್ಯಾಸ ಮಂಜರಿ' ಯಲ್ಲಿ ಸ್ವತಂತ್ರದೃಷ್ಟಿ ವ್ಯಕ್ತವಾಗಿದೆ. ಸಜೀಪ ರಾಮಕೃಷ್ಣಯ್ಯನವರು 'ವಿಕ್ಟೋರಿಯ ರಾಣಿಯ ಚರಿತ್ರೆ' ಬರೆದಿದ್ದಾರೆ. ಶಾಮರಾವ ವಿಟ್ಠಲ ಕೈಕಿಣಿಯವರ ಕೃತಿಗಳು

'ಸಮುದ್ರಪರ್ಯಟನ' ಮತ್ತು 'ವಿಧವಾ ವಿವಾಹ' .ಅವರ 'ಪಾರಾಶರೀಯ ಧರ್ಮಶಾಸ್ತ್ರ' ದಲ್ಲಿ ಸ್ವತಂತ್ರ ವಿಚಾರಲಹರಿಯಿದೆ. ರಾ.ಹ. ದೇಶಪಾಂಡೆಯವರ ಕೃತಿಗಳು 'ಮೊಗಲರ ಇತಿಹಾಸ' ಮತ್ತು 'ಚೈತನ್ಯ ಚರಿತ್ರೆ' (೧೮೯೧). ಎಸ್. ಜಿ. ನರಸಿಂಹಾಚಾರ್ಯರು 'ಅಲ್ಲಾವುದ್ದೀನ ಅದ್ಭುತದೀಪ', 'ಈಸೋಪನ ನೀತಿಕಥೆಗಳು', 'ಗಲಿವರನ ದೇಶಸಂಚಾರ' ಮುಂತಾದ ಅನುವಾದಗಳನ್ನು ಪ್ರಕಟಿಸಿದ್ದಾರೆ. ವೆಂಕಟರಂಗೋ ಕಟ್ಟಿಯವರು ಪೇಟರನ ಒಂದು ಕೃತಿಯನ್ನು 'ನರತನು' ಎಂಬುದಾಗಿ ಅನುವಾದಿಸಿದರಲ್ಲದೆ ಹಲವು ಪಠ್ಯಪುಸ್ತಕಗಳನ್ನೂ 'ವಿಧವೆಯರ ಇತಿಹಾಸ', 'ಆರು ಬೆರಳಿನ ಕುರುಹು' ಎಂಬ ಸಮಾಜಸುಧಾರಣಾತ್ಮಕ ಕೃತಿಗಳನ್ನೂ ರಚಿಸಿದರು. ತೂರಮರಿಯವರ ಬಾಣನ 'ಕಾದಂಬರಿ'ಯ ಅನುವಾದ ಹೊಸಗನ್ನಡ ಗದ್ಯಕ್ಷೇತ್ರದಲ್ಲಿ ಒಂದು ಮೈಲಿಗಲ್ಲು.

ಶಿಕ್ಷಣಕ್ಷೇತ್ರದಲ್ಲಿ ಡೆ. ಚನ್ನಬಸಪ್ಪ, ವೆಂಕಟರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತೂರಮರಿ—ಈ ತ್ರಿಮೂರ್ತಿಗಳು ಸಲ್ಲಿಸಿದ ಸೇವೆ, ಸಾಧಿಸಿದ ಕಾರ್ಯ ಮುಂದಿನ ಸಾಹಿತ್ಯ ವ್ಯವಸಾಯಕ್ಕೆ ಒತ್ತಾಸೆ ಕೊಟ್ಟಿತೆಂಬುದನ್ನು ಸ್ಮರಿಸಬೇಕು.

ಒಟ್ಟಿನಲ್ಲಿ, ಇಂದಿನ ಸಾಹಿತ್ಯದ ಹೆಗ್ಗುರುತುಗಳಾದ ವಾಸ್ತವಿಕತೆ, ಸಾಮಾಜಿಕ ಪ್ರಜ್ಞೆ, ಮಣ್ಣಿನ ವಾಸನೆಗಳು ಕಳೆದ ಶತಮಾನದ ಅಂತ್ಯದಲ್ಲಿ ಮೈದೋರಿದುವೆಂಬುದನ್ನು ಲಕ್ಷಿಸಬೇಕು. ಈ ಗುಣಗಳು ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಹಾಗೂ ಪಾಶ್ಚಾತ್ಯ ಸಾಹಿತ್ಯದ ಅನುಶೀಲನದಿಂದ ಬಂದು ನೆಲಸಿದವೆಂಬುದು ಸುಸ್ಪಷ್ಟ.

## ವಿವಿಧ ಸಾಹಿತ್ಯಪ್ರಕಾರಗಳು

"ಸ್ಥೂಲವಾಗಿ ೧೯ನೆಯ ಶತಮಾನದ ಮೂರನೆಯ ದಶಕದಲ್ಲಿ ನಸುಕಾಗಿ ಮಧ್ಯದಷ್ಟರ ಹೊತ್ತಿಗೆ ಬೆಳಕಾಗಿ ಹೊಸಗನ್ನಡ ಸಾಹಿತ್ಯವು ಉದಯವಾಯಿತೆಂದು ಹೇಳಬಹುದು. ಆದರೆ ಬೆಳ್ಳಂಬೆಳಕಾದದ್ದು ಇಪ್ಪತ್ತನೆಯ ಶತಮಾನದಲ್ಲಿಯೆ ಎನ್ನಬೇಕು. ಅದರಲ್ಲಿಯೂ ನವನಿರ್ಮಿತಿಯ ಸೂರ್ಯನು ತಲೆಯೆತ್ತಿದ್ದು ಇಪ್ಪತ್ತನೆಯ ಶತಮಾನದ ಇಪ್ಪತ್ತರಿಂದ ಮುಂದೆ ಮಾತ್ರ."

ಭಾವಗೀತೆ, ನಾಟಕ, ಕಾದಂಬರಿ, ಕತೆ, ವಿಮರ್ಶೆ, ಪ್ರಬಂಧ ಮುಂತಾದ ಪ್ರಕಾರಗಳೆಲ್ಲ ಕನ್ನಡದಲ್ಲಿ ಸುಪ್ರತಿಷ್ಠಿತವಾದುದು ಪ್ರಚಲಿತ ಶತಮಾನದಲ್ಲಿಯೇ ಎನ್ನಬಹುದು. ಈ ಪ್ರತಿಷ್ಠಾಪನಾಕಾರ್ಯದಲ್ಲಿ ಇಂಗ್ಲಿಷ್ ವಾಙ್ಮಯದ ಕೊಡುಗೆ ಅಪರಿಮಿತವಾದುದು.

೧೮೨೦ರಿಂದ ೧೯೨೦ರ ವರೆಗಿನ ಕಾಲವನ್ನು ಹೊಸಗನ್ನಡದ ಮೊದಲ ಹಂತವೆಂದಿಟ್ಟುಕೊಂಡರೆ, ೧೯೨೧ರಿಂದ ಮುಂದಿನ ಕಾಲವನ್ನು ಎರಡನೆಯ ಹಂತವೆಂದು ಭಾವಿಸಬಹುದು. ಈ ಎರಡನೆಯ ಹಂತ ದೇಶಾದ್ಯಂತ ಅಪೂರ್ವ ಜಾಗ್ರತಿಯನ್ನು ಕಂಡ ಕಾಲ. "೧೯೨೧ನೆಯ ವರ್ಷವು ಭಾರತದ ಮತ್ತು ಕರ್ನಾಟಕದ ಇತಿಹಾಸದಲ್ಲಿ ಮಹತ್ವಪೂರ್ಣವಾದ ವರ್ಷವಾಯಿತು. ಸ್ವದೇಶಾಭಿಮಾನ-ಸ್ವಭಾಷಾಭಿಮಾನಗಳ ಜೊತೆಗೆ ಸ್ವಾತಂತ್ರ್ಯಪ್ರೇಮ, ಸ್ವಾರ್ಥತ್ಯಾಗಗಳು ಅಂದಿನ ತರುಣರನ್ನು ಪ್ರೇರೇಪಿಸಿದುವು.

ಸ್ವಾತಂತ್ರ್ಯಗೀತಗಳು ಸ್ವತಂತ್ರ ಪ್ರತಿಭೆಯ ಪ್ರಕಾಶದಲ್ಲಿ ರಚಿತವಾದುವು. ಹೊಸತಾದ ಪ್ರೇರಣೆ, ವಿಷಯ, ಶೈಲಿ, ಛಂದಸ್ಸುಗಳ ಹವ್ಯಾಸವು ಹೆಚ್ಚಿತು. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಪರಕೀಯ ಸತ್ತೆಯೊಡನೆ ಅಸಹಕಾರ ಮಾಡಿದಂತೆ ಸ್ವಭಾಷೆಯ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕಾಗಿ ಲೇಖಕರು ಹಳೆಯ ಸಂಪ್ರದಾಯದ ಸತ್ತೆಯೊಡನೆ ಅಸಹಕಾರ ಹೂಡಿದರು....ಬ್ರಿಟಿಷ್ ಸತ್ತೆಯಿಂದ ಬಿಡುಗಡೆ ಹೊಂದಲು ಬ್ರಿಟಿಷರು ಕಲಿಸಿದ ಬಿಡುಗಡೆಯ ತತ್ತ್ವಜ್ಞಾನವೇ ಭಾರತೀಯರಿಗೆ ಪ್ರೇರಕಶಕ್ತಿಯಾಯಿತು. ಸಾಹಿತ್ಯಕ್ಷೇತ್ರದಲ್ಲಿ ಸಹ ಇಂಗ್ಲಿಷ್ ವಾಙ್ಮಯದ ನಿತಾಂತಪ್ರಭಾವವು ಭಾರತೀಯ ಸಾಹಿತ್ಯದ ಹೊಸ ಸ್ವರೂಪಕ್ಕೆ ಕಾರಣವಾಯಿತು. ಮೆಕಾಲೆ ಪ್ರಾರಂಭಮಾಡಿದ ವಿದ್ಯಾಭ್ಯಾಸ ಪದ್ಧತಿಯ ಮೂಲಕ ನಮ್ಮ ದೇಶದ ವಿದ್ಯಾವಂತರು ಷೇಕ್ಸ್‌ಪಿಯರ್ ಮತ್ತು ಮಿಲ್ಟನ್ ಇವರ ಮಹಾಕೃತಿಗಳಿಂದ ರೋಮಾಂಚಿತರಾದರು. ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್ ಮುಂತಾದ ಕವಿಗಳ ಭಾವಗೀತೆಗಳಲ್ಲಿ ತನ್ಮಯರಾದರು, ಮಿಲ್ ಮೋರ್ಲೆಯವರಂಥ ವಿಚಾರವಂತರ ವಿಚಾರ–ವಿವೇಕದಿಂದ ಪರಿಪುಷ್ಟರಾದರು, ಸ್ಕಾಟ್–ಡಿಕನ್ಸ್ ಅವರ ಕಾದಂಬರಿಗಳಿಂದ ಸ್ಫುರಣ ಹೊಂದಿದರು. ಅವರ ಮನೋಲೋಕವು ಇಂಗ್ಲಿಷ್ ಸಾಹಿತ್ಯದ ಚಿತ್ರಗಳಿಂದಲೂ ಪಾತ್ರಗಳಿಂದಲೂ ಕಿಕ್ಕಿರಿಯಿತು. ಕೆಲವು ಕಾಲದ ಮೇಲೆ ಇದಕ್ಕೆ ಪ್ರತಿಕ್ರಿಯೆಯಾಗಿ ಪ್ರಾಚೀನ ಭಾರತೀಯ ಸಂಸ್ಕೃತಿಯ ಪರಿಚಯಕ್ಕಾಗಿ ಮನಸ್ಸು ಹಾತೊರೆಯಿತು. ವೇದೋಪನಿಷತ್ತುಗಳ ವ್ಯಾಸಂಗದಿಂದ ಇನ್ನೊಂದು ಆಳವಾದ ದೃಷ್ಟಿ ತೆರೆಯಿತು. ಪೌರ್ವಾತ್ಯ–ಪಾಶ್ಚಿಮಾತ್ಯ ದೃಷ್ಟಿಗಳ ಸಮನ್ವಯದತ್ತ ಹಲವರ ಮನಸ್ಸು ಹೊರಳಿತು. ಸಮಗ್ರದೇಶದಲ್ಲಿ ಪ್ರಕಟವಾದ ನೂತನಶಕ್ತಿ ಕರ್ನಾಟಕದಲ್ಲಿಯೂ ಸಂಚರಿಸಿತು."

೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪಿತವಾದುದೂ ಹೊಸ ಸಾಹಿತ್ಯದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ನವೀನ ಸಾಹಿತ್ಯದ ಪ್ರಧಾನ ಅಧ್ವರ್ಯುವಾಗಿ ನಿಂತವರು ಬಿ. ಎಂ. ಶ್ರೀಕಂಠಯ್ಯನವರು; ಅವರಿಗೆ ಬೆಂಬಲವಾಗಿ ಕೆಲಸಮಾಡಿದವರು ತ. ಸು. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳು. ಒಬ್ಬರನ್ನು ಕನ್ನಡದ ಕಣ್ವರೆಂದೂ ಇನ್ನಿಬ್ಬರನ್ನು 'ನಮ್ಮ ಹೊಸ ಸಾಹಿತ್ಯದ ಅಶ್ವಿನೀ ದೇವತೆಗಳು' ಎಂದೂ ಬಣ್ಣಿಸಲಾಗಿದೆ. 'ಶ್ರೀ'ಯವರು 'ನೂತನ ಸಾಹಿತ್ಯದ ಚತುರ್ಮುಖ' ಎಂಬ ಅಭಿಧಾನಕ್ಕೂ ಪಾತ್ರರಾಗಿದ್ದಾರೆ. ಮೈಸೂರಿನ ಕಡೆ 'ಶ್ರೀ'ಯವರ ನಾಯಕತ್ವದಲ್ಲಿ 'ತಳಿರು ತಂಡ', ಮಂಗಳೂರು ಕಡೆ ಪಂಜೆಯವರ ನೇತೃತ್ವದಲ್ಲಿ 'ಮಿತ್ರಮಂಡಳಿ', ಧಾರವಾಡದ ಕಡೆ ಬೇಂದ್ರೆಯವರ ನಾಯಕತ್ವದಲ್ಲಿ 'ಗೆಳೆಯರ ಗುಂಪು' ತಲೆಯೆತ್ತಿದುವು. ಇವು ಕೈಕೊಂಡ ಸಾಹಿತ್ಯಾಂದೋಲನದಲ್ಲಿ ಭಾಗವಹಿಸಿದವರು ಬಹುಮಟ್ಟಿಗೆ ಸುಶಿಕ್ಷಿತರೇ.

೧೯೨೦ಕ್ಕಿಂತ ಹಿಂದಿನ ಸಾಹಿತ್ಯಸೃಷ್ಟಿಯೇನಿದ್ದರೂ ಸಿದ್ಧತೆ ಮಾತ್ರ. ಕ್ರಾಂತಿಕಾರಕವಾದ ಬದಲಾವಣೆಗಳಾಗಿ, ಹೊಸತು ರೂಪವಾದದ್ದು ೧೯೨೦ರ ತರುವಾಯವೇ. ಅನಂತರದ ಅವಧಿಯನ್ನು ಮತ್ತೆ ಸ್ವಾತಂತ್ರ್ಯಪೂರ್ವಕಾಲ, ಸ್ವಾತಂತ್ರ್ಯೋತ್ತರ ಕಾಲ ಎಂದು ವಿಂಗಡಿಸಬಹುದು. ಸ್ವಾತಂತ್ರ್ಯಾನಂತರದಲ್ಲಿ ಕೆಲವು ಹೊಸ ಪ್ರವೃತ್ತಿ

ಗಳು ಕಾಣಿಸಿಕೊಳ್ಳುತ್ತವೆ.

ಈಗ ಬೇರೆ ಬೇರೆ ಪ್ರಕಾರಗಳನ್ನು ಸ್ಥೂಲವಾಗಿ ಗಮನಿಸಬಹುದು:

ಕಾವ್ಯ: ೧೯೨೧ರಲ್ಲಿ ಹೊರಬಂದ 'ಶ್ರೀ'ಯವರ 'ಇಂಗ್ಲಿಷ್ ಗೀತಗಳು' ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಪ್ರಮುಖವಾದ ಮಜಲು. ಹೊಸಗನ್ನಡ ಕಾವ್ಯದ ಭಾಗ್ಯದ ಬಾಗಿಲನ್ನು ತೆರೆದ ಕೃತಿಯಿದು. ಆದರೆ 'ಶ್ರೀ'ಯವರಿಗಿಂತಲೂ ಹಿಂದೆಯೇ ಕೆಲಸ ಮಾಡಿದವರಿದ್ದರು ಎಂಬುದನ್ನು ಮರೆಯುವಂತಿಲ್ಲ.

ಹೊಸಗನ್ನಡ ಕವಿತೆಗೆ ಕಳೆದ ಶತಮಾನದಲ್ಲಿ ನಾಂದಿ ಹಾಡಿದವರು ಕ್ರೈಸ್ತ ಮಿಶನರಿಗಳು. ೧೮೪೫ರಲ್ಲಿ ಪ್ರಕಟವಾದ ಬಾಸೆಲ್ ಮಿಷನ್ನಿನ ಪದ್ಯಸಂಕಲನದಲ್ಲಿ ೬೮ ಕನ್ನಡ ಗೀತೆಗಳಿವೆ. ೧೮೪೭ರಲ್ಲಿ ಪ್ರಕಟವಾದ 'ಯಾತ್ರಿಕನ ಸಂಚಾರ'ದಲ್ಲಿ ವೈಗಲ್ ಅನುವಾದಿಸಿದ ಅನೇಕ ಪದ್ಯಗಳಿವೆ. ಕೆಲವು ಭಾಮಿನೀಷಟ್ಪದಿಯಲ್ಲಿದ್ದರೆ, ಕೆಲವು ಚೌಪದಿಯ ರೂಪದಲ್ಲಿವೆ. ಇದೊಂದು ಚೌಪದಿ:

ಸೇರಲುಬಹುದೋ ಇದರೊಳು ಕಾವಲ
ಗಾರನೆ ತೆರೆದೊಡೆ ನೀನೆನಗೆ
ಮೀರಿದ ಪಾಪಿಗೆ ನಿಶ್ಚಯವು ಸ್ತೋತ್ರವ
ಸಾರುತ ಪಾಡುವೆನುನ್ನತದಿ

ಇಲ್ಲಿ ಆದಿಪ್ರಾಸವನ್ನು ತೊರೆದಿಲ್ಲ. ಸುಮಾರು ಇದೇ ಕಾಲದಲ್ಲಿ ಬೆಳಕಿಗೆ ಬಂದ 'ಗೀತ ಪುಸ್ತಕಗಳು' ಎಂಬ ಮಿಶನರಿ ಕೃತಿಯಲ್ಲಿ ಇಂಗ್ಲಿಷ್, ಜರ್ಮನ್ ಗೀತಗಳ ಕನ್ನಡಾನುವಾದವಿದ್ದು, ಅವುಗಳಲ್ಲಿ ಕೆಲವೆಡೆ ಆದಿ ಅಂತ್ಯಪ್ರಾಸಗಳನ್ನೂ ಕೆಲವೆಡೆ ಅಂತ್ಯಪ್ರಾಸವನ್ನೂ ಕಾಣಬಹುದು. ಉದಾಹರಣೆಗೆ:

ಇಲ್ಲಿ ನಮ್ಮ ಸುಖ ಕಷ್ಟ
ಇಲ್ಲಿ ನಮ್ಮ ಲಾಭ ನಷ್ಟ
ನಮ್ಮ ಕ್ಷೇಮ ತಾಪವು
ನಮ್ಮ ನೀತಿ ಪಾಪವು
ಅಲ್ಲಿ ಪೀಡೆ, ಸಾವು, ಶಾಪ
ಅಂಧಕಾರ, ಸೂರ್ಯತಾಪ,
ಚಿಂತೆ, ದುಃಖ ಕಾಣವು
ಅಲ್ಲಿ ಸೌಖ್ಯ ತಾಣವು.

ಮಿಶನರಿಗಳ ಪ್ರಾರ್ಥನಾ ಪದ್ಯಗಳು ಹಳೆಯ ಛಾಟಿಯಿಂದ ಮುಕ್ತವಾಗಿವೆ. ಮೊಗ್ಲಿಂಗನ ಈ ಸ್ತೋತ್ರದಲ್ಲಿ ಮುಕ್ತಛಂದದ ಛಾಟಿಯಿದೆ:

ಸ್ತೋತ್ರವನುತ್ತಮ ದೇವರಿಗರ್ಪಿಸಬನ್ನಿ,
ಊರ್ಧ್ವದಿ ಕರ್ತಗೆ ಮಹಿಮೆಯಾಗಲಿ ಅನ್ನಿ
ಹರುಷದಿs
ದೂತರ ಸಂಘದಲೀ

ಸ್ತೋತ್ರ ಸುಗಂಧವ ತನ್ನಿ
ಭೂದಿವಗಳಾತನ ಸ್ವಾಶ್ರಿತ ರಾಜ್ಯ
ಯಾವನು ಭೂದಿವರಾಜನ ಸಂಗಡ ವ್ಯಾಜ್ಯ
ಮಾಡುವನು ?
ಆತನು ನುಡಿಯಲು
ಮರ್ತ್ಯರ ಗದ್ದಲ ತ್ಯಾಜ್ಯ.

ಆದ್ಯಂತ ಪ್ರಾಸಗಳನ್ನು ತೋರೆದುದಕ್ಕೆ ಇ. ಪಿ. ಕೆರಟ್‌ನ ಈ ಪದ್ಯ ನಿದರ್ಶನ :

ಅಪ್ಪಾ ತಂದೆ ವಂದನೆ
ಬಂದೆ ನಿನ್ನ ಪಾದಕೆ
ಬಡ ಬಾಲ ಪ್ರಾರ್ಥನೆ
ಕೇಳು ಸ್ವಾಮಿ ದೇವನೆ

ಕೆಲವು ಕಡೆ ಅಂತ್ಯಪ್ರಾಸ ಅನಿಯತವಾಗಿ ಬಂದಿರುವುದುಂಟು. ವಾಸ್ತವವಾಗಿ ಅಂತ್ಯ ಪ್ರಾಸ ಆಂಗ್ಲ ಕಾವ್ಯದ ವೈಶಿಷ್ಟ್ಯ; ಅದು ಹೊಸಗನ್ನಡ ಕವಿತೆಗೆ ಇಂಗ್ಲಿಷಿನಿಂದ ಬಂದು ಸೇರಿಕೊಂಡಿದೆ.

ಕ್ರೈಸ್ತಗೀತಗಳಲ್ಲಿ ಎರಡು ವರ್ಗಗಳನ್ನು ಕಾಣಬಹುದು : ಹಳೆಯ ಧಾಟಿಯಲ್ಲಿರ ತಕ್ಕವು ಮತ್ತು ಪಾಶ್ಚಾತ್ಯ ಗೀತಗಳ ಧಾಟಿಯಲ್ಲಿರತಕ್ಕವು. ಎರಡನೆಯ ವರ್ಗದಲ್ಲಿ ಹೊಸ ಛಂದಸ್ಸು ಕಾಣದೊರೆಯುತ್ತದೆ. ಮಿಶನರಿಗಳು ವಿರಳವಾಗಿ ಸ್ವತಂತ್ರ ಕವಿತೆ ಯನ್ನೂ ಬರೆದುದುಂಟು. ಎ. ಗ್ರೇಟರ್ ೧೮೬೯ರಲ್ಲಿ ಕೊಡಗನ್ನು ಕುರಿತು ಬರೆದ ಈ ಪದ್ಯವನ್ನು ಲಕ್ಷಿಸಬಹುದು :

ಕೊಡಗು ಸ್ವದೇಶವು
ಎಷ್ಟೋ ಚಂದವಾದುದು !
ಬೆಟ್ಟಬೆಟ್ಟ ತುದಿಯೇ
ಮಲೆನಾಡು ತೀರವೇ
ನೀಲಬಣ್ಣ ಕಡಲು
ಸುತ್ತುಮುತ್ತು ಕಾಣ್ಬುದು

ಹೀಗೆ ಕ್ರೈಸ್ತ ಮಿಶನರಿಗಳ ರಚನೆಗಳಲ್ಲಿ ಹೊಸಗನ್ನಡಕಾವ್ಯ ಪರಿಮಿತವಾಗಿ ಮೈದೋರಿತ್ತು. ಅದು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಮೊದಲೆರಡು ದಶಕಗಳಲ್ಲಿ ಹೆಚ್ಚಾಗಿ ಅನುವಾದರೂಪದಲ್ಲಿ ಮುಂದುವರಿಯಿತು. ಇಂಗ್ಲಿಷ್ ಕವಿತೆಗಳ ಭಾಷಾಂತರಕ್ಕೆ ಪಠ್ಯಪುಸ್ತಕಗಳೂ ನಿಮಿತ್ತ ವಾದುವು.

ಕನ್ನಡದಲ್ಲಿ ಆಧುನಿಕಕಾವ್ಯ ಸ್ವತಂತ್ರವಾಗಿ ತಲೆಯೆತ್ತಿದ್ದು ಈ ಶತಮಾನದ ಆರಂಭ ದಲ್ಲಿ; ಇಂಗ್ಲಿಷ್ ಕಾವ್ಯವಿತ್ತ ಸ್ಫೂರ್ತಿಯಿಂದ. ಹೊಸ ಕಾವ್ಯಕ್ಕೆ ಇಂಗ್ಲಿಷಿನಿಂದಾದ ಉಪಕಾರವೇನೆಂಬುದನ್ನು 'ಶ್ರೀ'ಯವರ ಈ ಮಾತುಗಳು ಸ್ಪಷ್ಟಪಡಿಸುತ್ತವೆ : "ಹೇಗೆ

ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ ಸಂಸ್ಕೃತದ ಪೋಷಣೆಯಲ್ಲೂ ಕಾವ್ಯಮಾಲಿಯನ್ನು ಬೆಳೆಸಿದೆವೋ ಹಾಗೇ ಈಗ ದೈವಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ ಇಂಗ್ಲಿಷಿನ ಪೋಷಣೆಯಲ್ಲೂ ಅದನ್ನು ಬೆಳೆಸಬೇಕು." ಇಂಗ್ಲಿಷ್ ಕಾವ್ಯ ಹೇಗೆ ತಾರಕವಾಯಿತೆಂಬುದನ್ನೂ ಅವರ ಈ ಮಾತುಗಳು ತಿಳಿಸುತ್ತವೆ: "ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಗೊಟ್ಟು ಎತ್ತಬೇಕು. ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು." ವಸ್ತು, ರೀತಿ, ಭಾವ, ವರ್ಣನೆ, ಶೈಲಿ, ರೂಪ—ಇವುಗಳಿಗೆ ಸಂಬಂಧಿಸಿದಂತೆ ಆರು ಬಗೆಯ ದೋಷಗಳು ಪರಿಹೃತವಾಗಬೇಕೆಂದು 'ಶ್ರೀ'ಯವರು ಆಶಿಸಿದ್ದರು. ಪ್ರವಾದಿಯಂತೆ ಅವರಾಡಿದ ಮಾತು ಸತ್ಯವಾಯಿತು; ಅವರ ಹಾರೈಕೆ ಫಲಿಸಿತು.

'ಶ್ರೀ'ಯವರು ಹೊಸಗನ್ನಡವನ್ನು ಉದ್ಘಾಟಿಸಿದ ಕ್ರಾಂತಿಪುರುಷರು; ಆದರೆ ಅವರಿಗಿಂತ ಹಿಂದೆಯೇ ಮುಂಬೆಳಗಿನ ಮೊದಲಿಗರಿದ್ದರು. ಮುಂದಿನ ಕೃಷಿಗೆ ಅವರು ನೆಲವನ್ನು ಹದಗೊಳಿಸಿದ್ದರು. ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲೇ ನವೋದಯದ ಮೊದಲ ಬೆಳಕು ಅಲ್ಲಲ್ಲಿ ಮೂಡಿತ್ತು.

ಮುಂಬೆಳಗಿನ ಕವಿಗಳೆಲ್ಲ ಬಹುಮಟ್ಟಿಗೆ ಹಳೆಯ ಛಂದೋರೂಪಗಳಲ್ಲಿ ಕಾವ್ಯ ರಚನೆ ಮಾಡಿದರೇ ಹೊರತು ಹೊಸ ಛಂದಸ್ಸನ್ನು ಸೃಷ್ಟಿಸಲಿಲ್ಲ. ಎಸ್. ಜಿ. ನರಸಿಂಹಾಚಾರ್, ಪಂಜೆ ಮಂಗೇಶರಾಯರು, ಗೋವಿಂದಪೈ, ಹಟ್ಟಂಗಡಿ ನಾರಾಯಣರಾಯರು, ಜಯರಾಯಾಚಾರ್ಯ, ಶಾಂತಕವಿ ಮೊದಲಾದವರು ಹೊಸ ಕವಿತೆಗೆ ಹಳೆಯ ಛಂದೋರೂಪಗಳನ್ನೇ ಬಳಸಿಕೊಂಡರು. ಸ್ವಂತ ರಚನೆಗಳಲ್ಲಾಗಲಿ ಅನುವಾದಗಳಲ್ಲಾಗಲಿ ಹೊಸತನ ಹೆಚ್ಚಾಗಿರಲಿಲ್ಲ. ಗೋವಿಂದ ಪೈಯವರು ಆದಿಪ್ರಾಸತ್ಯಾಗದ ನಿರ್ಧಾರ ಕೈಕೊಂಡದ್ದು ಒಂದು ಮಹತ್ತ್ವದ ಹೆಜ್ಜೆ.

ಇಂಗ್ಲಿಷಿನಿಂದ ಕನ್ನಡಕ್ಕೆ ಕವಿತೆಗಳನ್ನು ಭಾಷಾಂತರಿಸಿದವರಲ್ಲಿ ಮೊದಲಿಗರು ಹಟ್ಟಂಗಡಿ ನಾರಾಯಣರಾಯರು. ಅವರ 'ಆಂಗ್ಲಕವಿತಾಸಾರ' ಅನುವಾದಿತ ಕವನಗಳ ಸಂಕಲನ (ಅದರ ಪ್ರಕಟನೆಯ ವರ್ಷ ತಿಳಿಯದು). ಇಂಗ್ಲಿಷ್ ಕಾವ್ಯದ ಪ್ರೇರಣೆಯಿಂದ ಹೇಗೆ ಕನ್ನಡ ಕಾವ್ಯಕ್ಕೆ ನಾವೀನ್ಯವುಂಟಾಗುವುದೆಂಬುದನ್ನು ನಾರಾಯಣರಾಯರು 'ಕನ್ನಡ ಕವಿತೆಯ ಭವಿತವ್ಯ' ಎಂಬ ತಮ್ಮೊಂದು ಭಾಷಣದಲ್ಲಿ ಸೂಚಿಸಿದ್ದರು: "ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ....ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನಕೊಡುವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನೂ ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನೂ ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದೆಂದೂ ಹಳಗನ್ನಡ

ಕ್ಕಿಂತ ನಡುಗನ್ನಡವನ್ನೇ ಹೆಚ್ಚಾಗಿ ಪ್ರಯೋಗಿಸುವರೆಂದೂ” ಅವರ ನಿರೀಕ್ಷೆಯಾಗಿತ್ತು. ಅದು ಮುಂದೆ ನಿಜವಾಯಿತು: ಛಂದಸ್ಸು, ರೂಪ, ವಸ್ತು, ಶೈಲಿ, ಭಾಷೆಗಳಲ್ಲಿ ಕನ್ನಡ ಕಾವ್ಯ ಹೊಸತನವನ್ನು ತಳೆಯಿತು.

ಹ. ನಾರಾಯಣರ್ರಾಯರು ಸಾಂಪ್ರದಾಯಿಕ ಛಂದೋರೂಪಗಳನ್ನೇ ಅಲ್ಪಸ್ವಲ್ಪ ಬದಲಾವಣೆಯೊಡನೆ ಉಪಯೋಗಿಸಿದ್ದಾರೆ; ಆದಿಪ್ರಾಸವನ್ನು ಬಿಟ್ಟಿಲ್ಲ.

ಎಸ್. ಜಿ. ನರಸಿಂಹಾಚಾರ್ಯರು ಇಂಗ್ಲಿಷಿನಿಂದ ಕವನಗಳನ್ನು ಅನುವಾದಿಸಿದ್ದಲ್ಲದೆ ಪಠ್ಯಪುಸ್ತಕಗಳಿಗಾಗಿ ಸ್ವತಂತ್ರ ಕವಿತೆಗಳನ್ನೂ ರಚಿಸಿದರು. ಅವರ ಕವಿತೆಗಳ ವಸ್ತು ಭಾವಗಳು ಹೊಸವಾದರೂ ಛಂದೋರೂಪಗಳು ಮಾತ್ರ ಹಳೆಯುವೇ.

ಪಂಜೆಯುವರೂ ತಮ್ಮ ಅನುವಾದಗಳಲ್ಲಿ ಮತ್ತು ಸ್ವತಂತ್ರ ಕವನಗಳಲ್ಲಿ ಹಳೆಯ ಛಂದೋರೂಪಗಳನ್ನೆ ಅವಲಂಬಿಸಿದರು; ಆದಿಪ್ರಾಸವನ್ನು ಬಿಡಲಿಲ್ಲ. ಮೊತ್ತಮೊದಲು ಸ್ವತಂತ್ರ ಕವನ ರಚಿಸಿದವರು ಪ್ರಾಯಃ ಪಂಜೆಯುವರೇ. “ಇಂಗ್ಲಿಷ್ ಕವನಗಳ ವರ್ಚಸ್ಸು ಕನ್ನಡಕ್ಕೆ ಬರುವಂತೆ ಮಾಡಿದವರಲ್ಲಿ ಅವರು ಮೊದಲಿಗರು.” ಗೋವಿಂದ ಪೈಯುವರು ಪಂಜೆಯುವರಿಗಿಂತ ಮುಂದೆ ಹೋಗಿ ಕೆಲವು ಹೊಸ ರೂಪಗಳನ್ನು ಸೃಷ್ಟಿಸಿ ಕೊಂಡರು; ಮೊಟ್ಟಮೊದಲು ಸಾನೆಟ್ ಬರೆದವರು ಪೈಯುವರೇ.

ಇಂಗ್ಲಿಷಿನಿಂದ ಗ್ರಂಥಗಳನ್ನು ಕನ್ನಡಿಸುವುದು ಲಾಭದಾಯಕವೆಂದು ಶಾಂತ ಕವಿಗಳೂ ನಂಬಿದ್ದರು; ಅವರ ತತ್ಸಂಬಂಧವಾದ ಕಳಕಳಿ ಈ ನುಡಿಗಳಲ್ಲಿ ವ್ಯಕ್ತ ವಾಗಿದೆ :

ಎಲ್ಲಿರುವುದಭಿಮಾನ ಕನ್ನಡಿಗರೇ ಪೇಳಿ
ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ
ಗುರು ಪರಿಶ್ರಮದಿನಾಂಗ್ಲೇಯ ಭಾಷೆಯ ಕಲಿತು
ಧರಿಸಿ ಪದವಿಗಳನುಪಜೀವಿಸುವಿರೇ
ಹೊರತು ತದ್ಭಾಷೆಯುದ್ಗ್ರಂಥಗಳ ಕನ್ನಡದಿ
ಪರಿವರ್ತಿಸಂಗೊಳಿಸಲಿಲ್ಲವಲ್ಲಾ.

ಮುಂಬೆಳಗಿನ ಕವಿಗಳೆಲ್ಲ ಹಳೆಯ ಛಂದೋರೂಪಗಳಲ್ಲಿಯೇ ಹೊಸ ಕವಿತೆಯನ್ನು ಆವಿಷ್ಕರಿಸಿದರು. ವಸ್ತು ಭಾವ ಭಾಷೆಗಳಲ್ಲಿ ನವೀನತೆ ಕಾಣಿಸಿಕೊಂಡರೂ ಧಾಟಿ ಮಾತ್ರ ಹಳೆಯದೇ. ಹಿಂದಿನವರ ಈ ಎಲ್ಲ ಪ್ರಯತ್ನಗಳು ‘ಶ್ರೀ’ಯವರ ‘ಇಂಗ್ಲಿಷ್ ಗೀತ’ಗಳಿಗೆ ಸಮರ್ಥವಾದ ಮುನ್ನುಡಿಯಾದುದು ನಿಶ್ಚಿತ.

“ಕನ್ನಡ ಸಾಹಿತ್ಯದ ನವೋದಯದ ಸೂರ್ಯ” ಶ್ರೀಯವರು. ಪ್ರಸ್ಥಾನ ನಿರ್ಮಾಪಕ ಕೃತಿ ಎಂದು ಕರೆಯಬಹುದಾದ ಅವರ ‘ಇಂಗ್ಲಿಷ್ ಗೀತ’ಗಳಲ್ಲಿ ಹೊಸತನ ಸಮಗ್ರವಾಗಿ ಆವಿರ್ಭವಿಸಿತು. ವಸ್ತು, ಭಾವ, ಭಾಷೆ, ಛಂದಸ್ಸು ಎಲ್ಲದರಲ್ಲೂ ಈ ಹೊಸತನವನ್ನು ಸ್ಫುಟವಾಗಿ ಗುರುತಿಸಬಹುದು. ಬೇಂದ್ರೆಯವರು ಹೇಳುವಂತೆ, “ವಿಶ್ವವೈಶಾಲ್ಯದ ವಸ್ತು ವನ್ನು ಪಡೆದಿರುವ ‘ಇಂಗ್ಲಿಷ್‌ಗೀತಗಳು’ ತನ್ನ ಪ್ರಭಾವದಿಂದ ಕನ್ನಡ ಕಾವ್ಯವಸ್ತುವಿನ

ಆಯ್ಕೆಯಲ್ಲಿ, ನಿರೂಪಣೆಯ ರೀತಿಯಲ್ಲಿ, ಭಾವದಲ್ಲಿ, ಉಕ್ತಿಸೌಂದರ್ಯದಲ್ಲಿ ಕ್ರಾಂತಿಯನ್ನು ತಂದಿತು."

'ಇಂಗ್ಲಿಷ್ ಗೀತ'ಗಳ ನೂತನತೆಯಿರುವುದು ಮುಖ್ಯವಾಗಿ ಅವುಗಳ ಛಂದಸ್ಸಿನಲ್ಲಿ. 'ಶ್ರೀ'ಯವರು ಹಳೆಯ ಮಾತ್ರಾಗಣಗಳನ್ನೇ ಇಟ್ಟುಕೊಂಡು ಹೊಸ ಛಂದಃಪ್ರಕಾರಗಳನ್ನು ಮೊದಲಬಾರಿಗೆ ಕಲ್ಪಿಸಿದರು. ಮುಂದಿನ ಕವಿಗಳಿಗೆ ಇದು ಹೆದ್ದಾರಿಯಾಗಿ ಪರಿಣಮಿಸಿತು; ಕನ್ನಡದಲ್ಲಿ ಸ್ವತಂತ್ರ ಭಾವಗೀತೆಗಳ ಸುಗ್ಗಿಗೆ ಕಾರಣವಾಯಿತು. "ಇಂಗ್ಲಿಷಿನ ಸಂಪರ್ಕದಿಂದ ಕನ್ನಡ ಸಾಹಿತ್ಯವನ್ನು ಕಸಿಮಾಡಿ ಬೆಳಸುವುದು ಹೇಗೆ" ಎಂದು ಯೋಚಿಸಿದ್ದ 'ಶ್ರೀ'ಯವರು 'ಇಂಗ್ಲಿಷ್ ಗೀತ'ಗಳ ಮೂಲಕ ಹೊಸಗನ್ನಡ ಕಾವ್ಯಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟರು. ಇಂಗ್ಲಿಷ್‌ಕಾವ್ಯದಲ್ಲಿ ೧೯ನೆಯ ಶತಮಾನದ ಆರಂಭದಲ್ಲಿ ಎಂತಹ ನವೋದಯವುಂಟಾಯಿತೊ ಅಂತಹುದೇ ನವೋದಯವನ್ನು ತಮ್ಮ ಕೃತಿಯ ಮೂಲಕ ಕನ್ನಡ ಕಾವ್ಯದಲ್ಲಿ 'ಶ್ರೀ'ಯವರು ಉಂಟುಮಾಡಿದರು. ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್, ಕೋಲ್‌ರಿಜ್, ಬೈರನ್, ಬ್ರೌನಿಂಗ್, ಟೆನಿಸನ್, ಬರ್ನ್ಸ್ ಮುಂತಾದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕವಿತೆಗಳನ್ನು ಕನ್ನಡಿಸಿ, ಕನ್ನಡದಲ್ಲಿ ರೊಮ್ಯಾಂಟಿಕ್ ಕಾವ್ಯದ ಬೆಳೆಗೆ ಪ್ರೇರಕಶಕ್ತಿಯಾದರು. ಎನ್. ಎಸ್. ಸುಬ್ಬರಾಯರು ಹೇಳಿದಂತೆ, 'ಇಂಗ್ಲಿಷ್‌ಗೀತಗಳು' ಕನ್ನಡದ 'ಲಿರಿಕಲ್ ಬ್ಯಾಲಡ್ಸ್.'

"ಹೊಸಗನ್ನಡದಲ್ಲಿ ಇಂದು ಹೆಸರಾಗಿರುವ ಕವಿಗಳಲ್ಲಿ ಬಹುಮಂದಿ 'ಇಂಗ್ಲಿಷ್ ಗೀತ'ಗಳ ನೆರಳಲ್ಲಿ ಬೆಳೆದವರು." ೧೯೩೦ರ ವರೆಗೆ 'ಶ್ರೀ'ಯವರೂ ಅವರ ಮಿತ್ರರೂ ನಡೆಸಿದ ಸಾಧನೆಯಿಂದ ಕನ್ನಡದಲ್ಲಿ ಹೊಸ ಕಾವ್ಯ ಬೇರೂರಿ ನಿಂತಿತು.

ಜನಪದ ಗೀತೆಗಳಲ್ಲಿ ಆಸಕ್ತಿ ಹುಟ್ಟಿ, ಅವುಗಳ ಸತ್ವವನ್ನು ತಮ್ಮ ಕೃತಿಗಳಿಗೆ ಅಳವಡಿಸಿಕೊಳ್ಳಲು ಕವಿಗಳು ಪ್ರಯತ್ನಿಸುವುದು ಎಲ್ಲ ಸಾಹಿತ್ಯಗಳ ನವೋದಯದಲ್ಲೂ ಕಂಡುಬರುತ್ತದೆ. ಇಂಗ್ಲೆಂಡಿನಲ್ಲಿ ವರ್ಡ್ಸ್‌ವರ್ತ್, ಕೋಲ್‌ರಿಜ್ ಮುಂತಾದ ರೊಮ್ಯಾಂಟಿಕ್ ಕವಿಗಳಿಗೆ ಜನಪದಸಾಹಿತ್ಯ ಸ್ಫೂರ್ತಿಕೊಟ್ಟಿತು. ಪರ್ಸಿ ಎಂಬವನು ಜನಪದ ಕತೆಗಳನ್ನೂ ಗೀತೆಗಳನ್ನೂ ಸಂಗ್ರಹಿಸಿ ೧೭೬೫ರಲ್ಲಿ ಪ್ರಕಟಿಸಿದ; ರೊಮ್ಯಾಂಟಿಕ್ ಕಾವ್ಯ ಇದರಿಂದ ಪ್ರೇರಣೆ ಪಡೆಯಿತು. ಕನ್ನಡದಲ್ಲೂ ಇಂಥ ಪ್ರಕ್ರಿಯೆ ನಡೆದುದನ್ನು ನೋಡುತ್ತೇವೆ. ಉತ್ತರ ಕರ್ಣಾಟಕದಲ್ಲಿ ಗೆಳೆಯರ ಗುಂಪಿನವರು ಜನಪದ ಗೀತಗಳನ್ನು ಸಂಗ್ರಹಿಸಿ, ಜಾನಪದ ಧಾಟಿಗಳನ್ನು ತಮ್ಮ ಕವಿತೆಗಳಲ್ಲಿ ಬಳಸಿಕೊಂಡರು.

ಗೆಳೆಯರ ಗುಂಪಿಗೆ ಸೇರಿದ ಮಧುರಚೆನ್ನರ ಅನುಭಾವಸಾಹಿತ್ಯ ಎ. ಇ., ಏಟ್ಸ್ ಮುಂತಾದ ಆಂಗ್ಲ ಅನುಭಾವ ಕವಿಗಳ ವ್ಯಾಸಂಗದಿಂದ ಪ್ರಭಾವಗೊಂಡುದನ್ನೂ ಗಮನಿಸಬೇಕು.

ಆಶಯದಲ್ಲಿ, ಅಭಿವ್ಯಕ್ತಿಯಲ್ಲಿ ಸ್ವಾತಂತ್ರ್ಯ, ನಾವೀನ್ಯ, ವೈವಿಧ್ಯ ಹೊಸಗನ್ನಡ ಭಾವಗೀತೆಗಳ ಪ್ರಧಾನ ಲಕ್ಷಣಗಳು. ಪ್ರಾಚೀನ ಸಾಹಿತ್ಯದಲ್ಲೂ ಭಾವಗೀತೆಗಳಿವೆ; ಆದರೆ ಅವು ಅನುಭಾವ ಧರ್ಮಗಳಿಗೆ ಸೀಮಿತ. ಹೊಸ ಭಾವಗೀತೆಗಳಲ್ಲಿ ಆ ಪರಿಮಿತಿ

ಯಿಲ್ಲ. ಈ ಸ್ವಾತಂತ್ರ್ಯ, ವೈವಿಧ್ಯಗಳು ಬಂದುದು ನಿಸ್ಸಂದೇಹವಾಗಿ ಇಂಗ್ಲಿಷ್ ಕಾವ್ಯದಿಂದ; 'ಇಂಗ್ಲಿಷ್ ಗೀತ'ಗಳ ಮೂಲಕ.

ಕಾವ್ಯಕ್ಷೇತ್ರದಲ್ಲಿ ೧೯೨೦ರಿಂದ ೧೯೩೦ರ ವರೆಗಿನ ಕಾಲವನ್ನು ಪ್ರಾದುರ್ಭಾವ ಕಾಲವೆಂದೂ ಅನಂತರದ ಕಾಲವನ್ನು ಸಿದ್ಧಿಯ ಕಾಲವೆಂದೂ ಕರೆಯಲಾಗಿದೆ. ಪ್ರಾದುರ್ಭಾವ ಕಾಲದಲ್ಲಿ ದುಡಿದವರು ಮೈಸೂರಿನಲ್ಲಿ 'ಶ್ರೀ' ಮತ್ತು ಅವರ ಮಿತ್ರರು ಹಾಗೂ ಶಿಷ್ಯವರ್ಗ; ಮಂಗಳೂರು, ಧಾರವಾಡದ ಕಡೆಗಳಲ್ಲಿ ಗೋವಿಂದಪೈ, ಬೇಂದ್ರೆ ಮತ್ತು ಅವರ ಗೆಳೆಯರ ಗುಂಪಿನ ಕವಿಗಳು.

ಭಾವಗೀತೆಯ ಪ್ರಕಾರಗಳೆಲ್ಲ ಇಂಗ್ಲಿಷಿನಿಂದ ಕನ್ನಡಕ್ಕೆ ಬಂದುವು. ಜೊತೆಗೆ ಕಥನಕಾವ್ಯ, ತಾತ್ವಿಕ ಕಾವ್ಯ, ವಿಡಂಬನ ಕಾವ್ಯಗಳೂ ನೆಲೆಗೊಂಡುವು. ಸರಳರಗಳೆ, ಮುಕ್ತಛಂದಗಳಂತಹ ರೂಪಗಳೂ ಇಂಗ್ಲಿಷಿನ ಪ್ರಭಾವದಿಂದಲೆ ಸೃಜನೆಗೊಂಡುವು.

ಸಾನೆಟ್ ಭಾವಗೀತೆಯ ಮುಖ್ಯ ಪ್ರಕಾರಗಳಲ್ಲೊಂದು. ಮೂಲತಃ ಇದು ಇಟಲಿಯಲ್ಲಿ ಹುಟ್ಟಿ ಬೆಳೆದದ್ದು; ೧೬ನೆಯ ಶತಮಾನದಲ್ಲಿ ಇಂಗ್ಲಿಷಿಗೆ ಬಂದು, ಅಲ್ಲಿಂದ ಕನ್ನಡಕ್ಕೆ ಬಂದು, ಇಲ್ಲಿ ಒಗ್ಗಿಹೋಗಿದೆ. ಸಾನೆಟ್ಟಿನಲ್ಲಿ ಎರಡು ಬಗೆ: ಪೆಟ್ರಾರ್ಕನ್ ಸಾನೆಟ್ ಮತ್ತು ಷೇಕ್ಸ್‌ಪೀರಿಯನ್ ಸಾನೆಟ್. ಕನ್ನಡದಲ್ಲಿ ಈ ಎರಡೂ ಬಗೆಗಳು ಪ್ರಚುರವಾಗಿವೆ; ಬೇರೆ ರೀತಿಯ ಸಾನೆಟ್ಟುಗಳೂ ಉಂಟು.

ಕನ್ನಡ ಪ್ರಗಾಥಗಳು ಇಂಗ್ಲಿಷಿನ 'ಓಡ್'ಗಳಿಂದ ಸ್ಫೂರ್ತವಾದವು; ಕನ್ನಡಕ್ಕೆ ಈ ಪ್ರಕಾರವನ್ನು ತಂದವರು 'ಶ್ರೀ'ಯವರೇ.

"ಪಾಮರರ ಮನಸ್ಸಿಗೆ ಒಪ್ಪುವ ಕಥೆಗಳನ್ನು ಬರೆಯುವ ಕ್ರಾಂತಿಯು ಇಂಗ್ಲಿಷ್ ಕಥನ ಕವನಗಳ ಅಭ್ಯಾಸದಿಂದ, ಅಂತೆಯೇ ಕನ್ನಡಕ್ಕೆ ಕಥನ ಕವನಗಳನ್ನು ಕೊಡಬೇಕು ಎನ್ನುವ ಸ್ಫೂರ್ತಿಯಿಂದ ಬಂದಿತೆಂದು ಹೇಳಿದರೆ ತಪ್ಪಾಗಲಾರದು." ಉದಾಹರಣೆಗೆ, ಮಾಸ್ತಿಯವರ 'ನವರಾತ್ರಿ'ಯ ಕಥನ ಕವನಗಳು. ಅವಕ್ಕೆ ಮಾದರಿ ಛಾಸರನ 'ಕ್ಯಾಂಟರ್ಬರಿ ಕತೆಗಳು.' ಎಲ್. ಗುಂಡಪ್ಪನವರ 'ಸೋಹ್ರಾಬ್-ರುಸ್ತುಂ' (ಮೂಲ: ಆರ್ನಾಲ್ಡ್) ಪಾಶ್ಚಾತ್ಯರ ಮಹೋಪಮೆಗಳನ್ನು ಕನ್ನಡಕ್ಕೆ ಪರಿಚಯ ಮಾಡಿಕೊಟ್ಟಿತು. ಕುವೆಂಪು ಅವರ 'ಚಿತ್ರಾಂಗದಾ' ಹಾಗೂ 'ಶ್ರೀರಾಮಾಯಣದರ್ಶನ'ದಲ್ಲೂ ಮಹೋಪಮೆಗಳಿವೆ. ಇವು ಬಂದುದು ಪಾಶ್ಚಾತ್ಯ ಪ್ರಭಾವದಿಂದ.

ಸರಳರಗಳೆಗೆ ಮೂಲ ಕನ್ನಡದ ಲಲಿತರಗಳೆಯೆ ಆದರೂ ಅದು ರೂಪುಗೊಂಡುದು ಇಂಗ್ಲಿಷ್ ಕಾವ್ಯದ ಪ್ರಭಾವದಿಂದ; 'ಬ್ಲಾಂಕ್‌ವರ್ಸ್'ಗೆ ಸಂವಾದಿಯಾಗಿ ಲಲಿತರಗಳೆಯ ಆದ್ಯಂತ ಪ್ರಾಸಗಳನ್ನು ತೆಗೆದುಹಾಕಿ ಚರಣಗಳನ್ನು ತಡೆಯಿಲ್ಲದೆ ಹರಿಯಬಿಡುವುದರಿಂದ ಹುಟ್ಟುತ್ತದೆ ಸರಳರಗಳೆ. ೧೯೨೪ರಲ್ಲಿ ಇದು ರೂಪುಗೊಂಡಿತು; ಮಾಸ್ತಿಯವರು ಇದನ್ನು ಮೊದಲು ಬಳಸಿದರು. ಕಥನಕವನಗಳಲ್ಲಿ, ವರ್ಣನಾತ್ಮಕ ಕವಿತೆಯಲ್ಲಿ, ಪದ್ಯನಾಟಕಗಳಲ್ಲಿ ಯಶಸ್ವಿಯಾಗಿ ಬಳಕೆಗೊಂಡಿದೆ ಸರಳರಗಳೆ. ಮಹಾಛಂದಸ್ಸಿಗೆ ತಳಹದಿ ಈ ಸರಳರಗಳೆಯೆ; ಕುವೆಂಪು ಅವರ 'ಶ್ರೀರಾಮಾಯಣದರ್ಶನಂ'

ಮಹಾಛಂದಸ್ಸಿನಲ್ಲಿದೆ. "ಹೇಗೆ ಇಂಗ್ಲಿಷ್ ಬ್ಲಾಂಕ್‌ವರ್ಸಿನ ಪ್ರಯೋಗಗಳಿಂದ ಮಿಲ್ಟನ್ ಕವಿ ತನ್ನ ಮಹಾಕಾವ್ಯಕ್ಕೆ ಸರಿಯಾದ ಛಂದೋರೂಪವನ್ನು ಹೊಂದಿಸಿಕೊಂಡನೋ ಅದೇ ಬಗೆಯಲ್ಲಿಯೇ ಇಂಗ್ಲಿಷ್ ಬ್ಲಾಂಕ್‌ವರ್ಸಿನ ನೂತನ ಪ್ರಯೋಗಗಳಂತೆಯೇ ಸರಳರಗಳೆಯಲ್ಲಿಯೂ ಹೊಸ ಪ್ರಯೋಗಗಳನ್ನು ನಡೆಸಿ ಪುಟ್ಟಪ್ಪನವರು ತಮ್ಮ ಮಹಾಕಾವ್ಯಕ್ಕೆ ಸರಿಹೋಗುವ 'ಮಹಾಛಂದಸ್ಸ'ನ್ನು ರೂಪಿಸಿಕೊಂಡರು." ಮಿಲ್ಟನ್ನನ ಛಂದಸ್ಸನ್ನು 'grand style' ಎನ್ನಲಾಗಿದೆ; ಅದಕ್ಕೆ ಸಂವಾದಿಯಾಗಿ ತಮ್ಮ ಛಂದಸ್ಸನ್ನು ಕುವೆಂಪು 'ಮಹಾ ಛಂದಸ್ಸು' ಎಂದು ಕರೆದಿರಬಹುದು.

ಕುವೆಂಪು ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್ ಮುಂತಾದವರನ್ನು ಸ್ಮರಿಸಿದ್ದಾರೆ. ಇವರೆಲ್ಲರ ಪ್ರಭಾವ ಕುವೆಂಪು ಅವರ ಮೇಲಾಗಿದೆ; ಮುಖ್ಯವಾಗಿ ಮಿಲ್ಟನ್ನನಿಂದ ಅವರು ಪ್ರಭಾವಗೊಂಡಿದ್ದಾರೆ. ಕುವೆಂಪು ಅವರ ಶೈಲಿಗೂ ಮಿಲ್ಟನ್ನನ ಶೈಲಿಗೂ ಸಾದೃಶ್ಯವುಂಟು; ತಾಂತ್ರಿಕ ಸಿದ್ಧಿಯಲ್ಲೂ ಸಾಮ್ಯವಿದೆ. ಪಾಶ್ಚಾತ್ಯ ಮಹಾಕಾವ್ಯಗಳ ಗುಣಗಳನ್ನು 'ಶ್ರೀರಾಮಾಯಣದರ್ಶನ'ದಲ್ಲಿ ಗ್ರಹಿಸಿದ್ದಾರೆ ಕುವೆಂಪು. ಉದಾಹರಣೆಗೆ, ಪಾಶ್ಚಾತ್ಯ ಕಾವ್ಯಗಳಲ್ಲಿ ಹೇಗೊ ಹಾಗೆ ಅವರ ಮಹಾಕಾವ್ಯದಲ್ಲಿ ದೇವತಾಪ್ರಾರ್ಥನೆ ಅಲ್ಲಲ್ಲಿ ನಡುನಡುವೆ ಕಂಡುಬರುತ್ತದೆ. ಮಹೋಪಮೆಗಳನ್ನೂ ಪರಿಗಣಿಸಬಹುದು.

ರೊಮ್ಯಾಂಟಿಕ್ ಕಾವ್ಯಕ್ಕೆ ಪ್ರತಿಕ್ರಿಯೆಯಾಗಿ 'ಪ್ರಗತಿಶೀಲ' ಚಳುವಳಿಯೊಂದು ಕನ್ನಡದಲ್ಲಿ ೧೯೪೪ರ ಹೊತ್ತಿಗೆ ತಲೆಯೆತ್ತಿತು. ರೈತರ, ಕಾರ್ಮಿಕರ ಬಾಳನ್ನು ಚಿತ್ರಿಸುವ ಕವಿತೆ ಕತೆ ಕಾದಂಬರಿಗಳು ರಚಿತವಾದುವು. ಕಾರ್ಮಿಕರ, ದೀನದಲಿತರ ಉದ್ಧಾರ, ಬಂಡವಾಳಶಾಹಿಯ ನಿರೋಧ—ಇದು ಪ್ರಗತಿಶೀಲ ಲೇಖಕರ ಧೋರಣೆ. ಸಾಮಾಜಿಕ ಪ್ರಜ್ಞೆ, ವಾಸ್ತವಿಕತೆಗಳನ್ನು ಸಾಹಿತ್ಯದಲ್ಲಿ ಮೂಡಿಸುವಲ್ಲಿ ಪ್ರಗತಿಶೀಲ ಧೋರಣೆ ಸಾಕಷ್ಟು ಯಶಸ್ವಿಯಾದರೂ ಅದರ ಉದ್ದೇಶಗಳು ಸೀಮಿತವಾಗಿದ್ದುವು.

ನವ್ಯಕಾವ್ಯ: ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೆ—೧೯೫೦ರಿಂದ ಮುಂದಕ್ಕೆ—ಕನ್ನಡದಲ್ಲಿ ನವ್ಯಕಾವ್ಯದ ಉಗಮ, ಬೆಳವಣಿಗೆಗಳನ್ನು ಕಾಣುತ್ತೇವೆ. ವಿ. ಕೃ. ಗೋಕಾಕರು ೧೯೫೦ರಲ್ಲಿ 'ನವ್ಯ' ಎಂಬ ಮಾತನ್ನು ಮೊದಲು ಬಳಸಿದರು. ನವ್ಯತೆಯ ಪರಂಪರೆಯನ್ನು ಆರಂಭಿಸಿದವರು ಪೇಜಾವರ ಸದಾಶಿವರಾಯರು ಮತ್ತು ಗೋಕಾಕರು. ಮುಂದೆ ಅಡಿಗರು ಮುಂತಾದವರು ಅದನ್ನು ಬೆಳಸಿದರು. ದ್ವಿತೀಯ ಮಹಾಯುದ್ಧಾನಂತರದ ಪ್ರಮುಖ ಇಂಗ್ಲಿಷ್ ಕವಿಗಳಾದ ಟಿ. ಎಸ್. ಇಲಿಯಟ್, ಆಡೆನ್, ಡೇ ಲೂಯಿ, ಮೆಕ್ನೀಸ್, ಡೈಲಾನ್‌ಥಾಮಸ್ ಮುಂತಾದವರಿಂದ ಪ್ರಭಾವಿತವಾದುದು ಕನ್ನಡ ನವ್ಯಕಾವ್ಯ. ಅಮೆರಿಕನ್ ಕವಿ ಎಜ್ರಾಪೌಂಡನಿಗೂ ಅದು ಋಣಿ. ಅದರ ಪ್ರೇರಣೆ ಅರ್ಧ ದೇಶೀಯವಾದರೆ ಅರ್ಧ ವಿದೇಶೀಯವೆನ್ನಬಹುದು.

ವಸ್ತು, ಶೈಲಿ, ಜೀವನ ಮೌಲ್ಯಗಳು, ಸಾಹಿತ್ಯದ ಮೇಲೆ ಮನಶ್ಶಾಸ್ತ್ರ ಮತ್ತು ಲೈಂಗಿಕಶಾಸ್ತ್ರ ಬೀರಿದ ಪ್ರಭಾವಗಳು—ಈ ಎಲ್ಲ ದೃಷ್ಟಿಗಳಿಂದ ೧೯೫೦ರಿಂದೀಚಿನ

ಕಾವ್ಯಮಾರ್ಗ ನವ್ಯವಾಗಿದೆ. ನವ್ಯರ ಪಾಲಿಗೆ ರೊಮ್ಯಾಂಟಿಕ್ ಕಾವ್ಯ ಅಥವಾ ನವೋದಯ ಕಾವ್ಯ ತನ್ನ ಸಾಧ್ಯತೆಗಳನ್ನೆಲ್ಲ ಮುಗಿಸಿ ಬರಡಾಗಿತ್ತು; ಎಂತಲೇ ಅವರಿಗೆ ಹೊಸ ರೀತಿಯ ಕಾವ್ಯಕೃಷಿ ಅಗತ್ಯವಾಗಿ ತೋರಿತು.

ವಾಸ್ತವವಾಗಿ ಈ ಅಗತ್ಯ ಹೆಚ್ಚಾಗಿದ್ದುದು ಪಾಶ್ಚಾತ್ಯರಲ್ಲಿ. ಒಂದನೆಯ ಮತ್ತು ಎರಡನೆಯ ಮಹಾಯುದ್ಧಗಳು ಪಾಶ್ಚಾತ್ಯ ಸಮಾಜದಲ್ಲಿ ಮೂಲಭೂತ ಬದಲಾವಣೆಗಳನ್ನುಂಟುಮಾಡಿದ್ದುವು; ಜೊತೆಗೆ ವಿಜ್ಞಾನದ ಮತ್ತು ಔದ್ಯೋಗೀಕರಣದ ಪ್ರಗತಿಯಿಂದ ಜೀವನ ಮೌಲ್ಯಗಳಲ್ಲಿ ಏರುಪೇರುಂಟಾಗಿತ್ತು; ಬದುಕು ಅಶಾಂತಿ ತಳಮಳಗೊಂದಲಗಳಿಗೀಡಾಗಿ ಸಂಕೀರ್ಣವಾಗಿ ಪರಿಣಮಿಸಿತ್ತು. ಈ ಸಂಕೀರ್ಣತೆಯನ್ನು ಅಭಿವ್ಯಕ್ತಿಗೊಳಿಸುವುದಕ್ಕಾಗಿ ಪಾಶ್ಚಾತ್ಯ ಕವಿಗಳು ಹೊಸ ವಿಧಾನಗಳನ್ನು ರೂಪಿಸಿಕೊಂಡದ್ದು ಸಹಜ. ಅವರ ಸಮಕಾಲೀನ ಪ್ರಜ್ಞೆ ಹೊಸ ಭಾಷೆ, ಶೈಲಿ, ತಂತ್ರಗಳಿಗಾಗಿ ಒತ್ತಾಯಿಸಿತು.

ಭಾರತದಲ್ಲೂ ಸ್ವಾತಂತ್ರ್ಯಾನಂತರದಲ್ಲಿ ಇಂಥದೇ ವಾತಾವರಣ ತಕ್ಕಮಟ್ಟಿಗಾದರೂ ಉಂಟಾಯಿತೆಂದು ನವ್ಯರ ವಾದ. ಸ್ವಾತಂತ್ರ್ಯಪೂರ್ವಕಾಲ ಆದರ್ಶನಿಷ್ಠೆಯ ಕಾಲ; ಆಗ ಆದರ್ಶನಿಷ್ಠ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಪ್ರಭಾವಕ್ಕೆ ಕನ್ನಡ ಕವಿಗಳು ಎದೆದೆರೆದರು. ಆದರೆ ಸ್ವಾತಂತ್ರ್ಯ ಬಂದಮೇಲೆ ಆದರ್ಶಗಳೆಲ್ಲ ನಿರಸನಗೊಂಡು, ನಿರಾಶೆ, ಅಶಾಂತಿ, ಅಶ್ರದ್ಧೆ, ಶೂನ್ಯತೆಯ ಭಾವನೆ, ಪರಂಪರಾಗತ ಮೌಲ್ಯಗಳಲ್ಲಿ ಅಪನಂಬಿಕೆ, ಸಮಷ್ಟಿಪ್ರಜ್ಞೆಯ ಬದಲು ವ್ಯಷ್ಟಿಪ್ರಜ್ಞೆ ಮನೆಮಾಡಿದುವು; ಆರ್ಥಿಕ ಅಸಮಾನತೆ, ದಾರಿದ್ರ್ಯ, ನಿರುದ್ಯೋಗ ಮುಂತಾದುವು ವಿಕಾರವಾಗಿ ವಿಜೃಂಭಿಸಿದುವು. ಜನಜೀವನದ ಮೌಲ್ಯಗಳೆ ವ್ಯತ್ಯಸ್ತವಾದುವು. ಈ ಎಲ್ಲ ಬದಲಾವಣೆಗೆ ಅಭಿವ್ಯಕ್ತಿ ನೀಡಲು ಹೊಸ ಧಾಟಿಯ, ಹೊಸ ಭಾಷೆಯ ಕಾವ್ಯ ಅವಶ್ಯವಾಯಿತು.

ಪ್ರಗತಿಶೀಲ ಸಾಹಿತ್ಯ ಕಮ್ಯುನಿಸಂನಿಂದ ಪ್ರಭಾವಿತವಾಗಿದ್ದರೆ, ನವ್ಯಕಾವ್ಯಕ್ಕೆ ಯಾವ ಇಸಂನ ಸಂಬಂಧವೂ ಇಲ್ಲ; ಅದು ಬಹುಮಟ್ಟಿಗೆ ವ್ಯಕ್ತಿನಿಷ್ಠ. ಕವಿಯ ಅನುಭವದ ಸಂಕೀರ್ಣತೆಗೇ ಅದರಲ್ಲಿ ಪ್ರಾಧಾನ್ಯ. ಸುಪ್ತಚಿತ್ತದಿಂದೆದ್ದ ಸಂಕೇತ, ಪ್ರತಿಮೆಗಳ ಮೆರವಣಿಗೆಯೇ ಇರುತ್ತದೆ ನವ್ಯಕಾವ್ಯದಲ್ಲಿ. ಸುಪ್ತಚಿತ್ತದ ಜಟಿಲತೆಯ ಆವಿಷ್ಕಾರ, ಆಡುಮಾತಿನ ವಿನ್ಯಾಸ, ಮುಕ್ತಛಂದ ಅದರ ಲಕ್ಷಣಗಳು. ಅದರ ತಂತ್ರ, ಶೈಲಿ ಮುಂತಾದುವೆಲ್ಲ ಬಹುಮಟ್ಟಿಗೆ ಇಂಗ್ಲಿಷ್ ನವ್ಯಕಾವ್ಯದ ಅನುಕರಣವೆಂದರೂ ತಪ್ಪಲ್ಲ. ಗೋಕಾಕರ ಈ ಮಾತುಗಳನ್ನು ಗಮನಿಸಬಹುದು:

> "As for technique and imagery, the next remarkable influence during this decade (1946-56) is that of the English modernists . . . . T. S. Eliot and Dylon Thomas have led Indian poetry to strange technical and stylistic adventures. This has resulted in considerable freshness and novelty of expression, but also much obscurity."

ಒಟ್ಟಿನಲ್ಲಿ ಆಧುನಿಕ ಕನ್ನಡ ಕಾವ್ಯದ ಚರಿತ್ರೆಯನ್ನು ಹೀಗೆ ಸಂಗ್ರಹಿಸಬಹುದು :

"ಕನ್ನಡ ಕಾವ್ಯವಾಹಿನಿ ೧೮-೧೯ನೆಯ ಶತಮಾನಗಳಲ್ಲಿ ಬತ್ತಿಹೋಗಿ, ಸಣ್ಣ ತೊರೆಯಂತಾಗಿಹೋಗಿತ್ತು. ೧೯ನೆಯ ಶತಮಾನದ ಕೊನೆಯಲ್ಲಿ ಹೊಸ ಹೊಳೆಯೊಂದು ಬಂದು ಇದನ್ನು ಕೂಡಿಕೊಂಡಿತು. ಈ ಹೊಸ ಹೊಳೆಯೇ ಇಂಗ್ಲಿಷ್ ಕಾವ್ಯದ ಪ್ರಭಾವ. ಈ ಪ್ರಭಾವ ಬಂದು ಕೂಡಿದಾಗ, ಮೊದಮೊದಲು ಸಣ್ಣಸಣ್ಣದಾಗಿ ಅಲ್ಲಲ್ಲಿ ಬುದ್ಬುದವೆದ್ದಿತು. ಮುಂದೆ ಹರಿಯಲಾಗದೆ ದಾರಿಯಲ್ಲಿಯೇ ಇಂಗಿಹೋಗುತ್ತಿದ್ದ ತೊರೆಗೆ ಹೊಸ ನೀರು ಬಂದಿತು. ಈ ನೀರನ್ನು ಮೊದಮೊದಲು ನೆಲವೇ ಕುಡಿಯಿತು. ಅಲ್ಲೊಂದು ಕಡೆ, ಇಲ್ಲೊಂದು ಕಡೆ ತೇವವು ಮೇಲಿದ್ದು ಕಾಣಿಸಿಕೊಂಡಿತು. ನೆಲಕ್ಕೆ ನೀರು ಚೆನ್ನಾಗಿ ಇಳಿದಮೇಲೆ ೨೦ನೆಯ ಶತಮಾನದ ಆರಂಭದಲ್ಲಿ ಚಿಲುಮೆಗೊಂಡ ಈ ಹೊಸ ನೀರು ಬೆರೆತ ಹಳೆಯ ವಾಹಿನಿ ಮುಂದೆ ಹರಿಯಲಾರಂಭಿಸಿತು. ೧೯೨೦ರ ಅನಂತರ ಕವಿ ಮನಸ್ಸಿನ ನವಿಲು ಕೇಕೆಹಾಕಿ ಕುಣಿಯುವಂತೆ ರಸವರ್ಷ ಬಂತು, ಹೊಳೆ ತುಂಬಿಬಂತು; ೧೯೩೦ರ ವೇಳೆಗೆ ಪೂರ್ಣ ಪ್ರವಾಹದಿಂದ ಹರಿಯಲಾರಂಭಿಸಿತು....

೧೯ನೆಯ ಶತಮಾನದ ಕೊನೆಯಲ್ಲಿ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯ ಮತ್ತು ವಿಮರ್ಶನವಿಚಾರ ಇವುಗಳ ಪ್ರಭಾವ ಬಿದ್ದಂದಿನಿಂದ, ಹೊಸತನದ ಉದಯಕ್ಕೆ ಸಿದ್ಧವಾಯಿತು. ಮುಂಬೆಳಗಿನ ಕಾಲದಲ್ಲಿ ಎದ್ದ ಸಮಸ್ಯೆಗಳನ್ನೆಲ್ಲಾ ಪರಿಹರಿಸಿಕೊಂಡು ಹಲವಾರು ಕವಿಗಳು ನವೋದಯವನ್ನು ಸಾರುವ ಹರಿಕಾರರಾಗಿ ಬಂದರು. ೧೯೩೦ರ ಕಾಲಕ್ಕೆ ಈ ನವೋದಯ ಫಲಕೊಡುವ ಕಾಲ ಬಂದಿತು. ಅನಂತರದ ಸುಮಾರು ಮೂರು ದಶಕಗಳಲ್ಲಿ ಹೊಸಗನ್ನಡ ಕವಿತೆಯು, ಇಂಗ್ಲಿಷ್ ಕಾವ್ಯ ಪ್ರಭಾವವನ್ನು ಅರಗಿಸಿಕೊಂಡು, ಅಸಾಧಾರಣವಾದರೂ ಸಹಜವಾದ ಮುನ್ನಡೆಯನ್ನು ಸಾಧಿಸಿದೆ."

ನಾಟಕ: ಕನ್ನಡದಲ್ಲಿ ಮೊದಮೊದಲು ಬಂದ ನಾಟಕಗಳು ಅನುವಾದ ಅಥವಾ ರೂಪಾಂತರಗಳಾಗಿದ್ದುವು. ಸ್ವತಂತ್ರ ನಾಟಕಗಳು ಹುಟ್ಟಿದ್ದು ತಡವಾಗಿ. 'ಶ್ರೀ'ಯವರು 'ಇಂಗ್ಲಿಷ್ ಗೀತಗಳು' ಸಂಕಲನದಿಂದ ಹೊಸ ಕಾವ್ಯಕ್ಕೆ ಸ್ಫೂರ್ತಿಕೊಟ್ಟಂತೆ, ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು ನಾಟಕಗಳ ರಚನೆಯಿಂದ ಪದ್ಯನಾಟಕಗಳ ನಿರ್ಮಿತಿಗೆ ಅಡಿಪಾಯ ಹಾಕಿದರು. ಅವರ 'ಗದಾಯುದ್ಧ ನಾಟಕ' ಗ್ರೀಕ್ ರುದ್ರನಾಟಕದ ಸ್ವರೂಪವನ್ನು ಮೊದಲ ಬಾರಿಗೆ ಪರಿಚಯಿಸಿತು. ಷೇಕ್ಸ್‌ಪಿಯರನ ರುದ್ರನಾಟಕಗಳ ಪರಿಚಯ ಹಿಂದೆಯೇ ಆಗಿತ್ತು.

ಕನ್ನಡ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಿ ಹೊಸ ಯುಗವನ್ನೇ ಆರಂಭಿಸಿದ ಶ್ರೇಯಸ್ಸು ಕೈಲಾಸಂ ಹಾಗೂ ಶ್ರೀರಂಗರದು. ಇಬ್ಬರೂ ಪ್ರೌಢಶಿಕ್ಷಣಕ್ಕಾಗಿ ಪಶ್ಚಿಮಕ್ಕೆ ಹೋಗಿ ಅಲ್ಲಿ ಪ್ರವಾಸಮಾಡಿದ್ದರಿಂದ, ಪಾಶ್ಚಾತ್ಯ ರಂಗಭೂಮಿಯ ಪ್ರಭಾವ ಅವರ ಮೇಲುಂಟಾಯಿತು; ಹೊಸ ಜೀವನದ ದರ್ಶನವೂ ಲಭಿಸಿತು. ಅವರ

ಲಾಭವನ್ನು ಇಬ್ಬರೂ ಕನ್ನಡಕ್ಕೆ ತಮ್ಮ ನಾಟಕಗಳ ಮೂಲಕ ದೊರಕಿಸಿಕೊಟ್ಟರು. ಇಂಗ್ಲೆಂಡಿನಲ್ಲಿ ಇಬ್ಸನ್ನನ ನಾಟಕಗಳಿಂದ ಪ್ರೇರಿತರಾಗಿದ್ದ ಷಾ, ಗಾಲ್ಸ್‌ವರ್ದಿ ಮುಂತಾದವರು ಕೈಲಾಸಂ, ಶ್ರೀರಂಗರ ಮೇಲೆ ಪ್ರಭಾವ ಬೀರಿದರು. ಈ ಪ್ರಭಾವ ಕನ್ನಡ ನಾಟಕ ಸಾಹಿತ್ಯದಲ್ಲಿ ಹೊಸ ಹುಟ್ಟಿಗೆ ಹೇತುವಾಯಿತು. ಏಕಾಂಕ ನಾಟಕ, ಗೀತನಾಟಕ, ರೇಡಿಯೊ ನಾಟಕ ಮೊದಲಾದ ಪ್ರಕಾರಗಳೆಲ್ಲ ಪಾಶ್ಚಿಮಾತ್ಯ ಪ್ರಭಾವ ದಿಂದಲೇ ಕನ್ನಡದಲ್ಲಿ ನೆಲೆಗೊಂಡುವು.

ಈಚೆಗೆ ಅಸಂಗತ (ಅಬ್ಸರ್ಡ್) ನಾಟಕಗಳನ್ನು ಕನ್ನಡಸಾಹಿತ್ಯದಲ್ಲಿ ಕಾಣು ತ್ತಿದ್ದೇವೆ. ಇಂಗ್ಲಿಷ್ ನಾಟಕಕಾರರಾದ ಆಸ್ಬರ್ನ್, ಪಿಂಟರ್, ಅಯನೆಸ್ಕೊ ಮುಂತಾದ ವರು ಇವುಗಳ ಹಿಂದಿದ್ದಾರೆ. "ಅಬ್ಸರ್ಡ್ ನಾಟಕದಲ್ಲಿ ಮನುಷ್ಯನ ಬಾಳಿನ ನಿರರ್ಥ ಕತೆಯನ್ನು ಭಿಕಾರಿತನವನ್ನು ಅರಾಜಕತೆಯನ್ನು ನೇರವಾಗಿ ಅಭಿವ್ಯಕ್ತಿಸುತ್ತಾರೆ. ಪಾತ್ರಗಳಾಡುವ ಮಾತು, ಸೃಷ್ಟಿಸುವ ಸನ್ನಿವೇಶಗಳು ಮೇಲುನೋಟಕ್ಕೆ ಪರಸ್ಪರ ಹೊಂದಾಣಿಕೆ ಇಲ್ಲದಂತೆ ಕಂಡರೂ ಅವು ಬಾಳಿನ ದುರಂತವನ್ನು ನಿರ್ಭಯವಾದ ನಗೆ, ಅಸಂಗತ ವಿಷಾದ ಬೆರೆತ ಹಾಸ್ಯಗಳ ಮೂಲಕ ಗುರುತಿಸಿ ವೇದನೆಯನ್ನೂ ಜುಗುಪ್ಸೆ ಯನ್ನೂ ಕಲ್ಪಿಸುತ್ತವೆ." ಅಸಂಗತನಾಟಕ ಇನ್ನೂ ಪ್ರಾಯೋಗಿಕ ದಶೆಯಲ್ಲಿದೆ.

ಅಸ್ತಿತ್ವವಾದಿ ನಾಟಕಗಳನ್ನು ಬರೆದಿರುವ ಫ್ರೆಂಚ್ ನಾಟಕಕಾರ ಬೆಕೆಟ್, ಇಟಲಿಯ ನಾಟಕಕಾರ ಪಿರಾಂಡೆಲೊ ಮುಂತಾದವರ ಪ್ರಭಾವ ಇಂದಿನ ಕನ್ನಡ ನಾಟಕಗಳ ಮೇಲಿದೆ.

ಪ್ರಬಂಧ : ಲಲಿತ ಪ್ರಬಂಧ ಅಥವಾ ಆತ್ಮೀಯ ಪ್ರಬಂಧ ಕನ್ನಡಕ್ಕೆ ಸಂಪೂರ್ಣವಾಗಿ ಹೊಸದು; ಪಶ್ಚಿಮದ ಕೊಡುಗೆಯದು. ಭಾವಗೀತೆ, ಕತೆ ಮುಂತಾದುವುಗಳಿಗಿದ್ದಂತೆ ಇದಕ್ಕೆ ನಮ್ಮಲ್ಲಿ ಪೂರ್ವಪರಂಪರೆ ಇರಲಿಲ್ಲ.

ಪ್ರಬಂಧ ಪ್ರಕಾರದ ತೌರುಮನೆ ಫ್ರಾನ್ಸ್ ; ಮಾಂಟೇನ್ ಇದರ ಜನಕ. ಅವನನ್ನು ಅನುಸರಿಸಿದವರು ಇಂಗ್ಲಿಷ್ ಪ್ರಬಂಧಕಾರರು : ಬೇಕನ್, ಅಡಿಸನ್, ಸ್ಟೀಲ್, ಜಾನ್ಸನ್, ಗೋಲ್ಡ್‌ಸ್ಮಿತ್, ಲ್ಯಾಮ್, ಲ್ಯೂಕಾಸ್, ಚೆಸ್ಟರ್‌ಟನ್, ರಾಬರ್ಟ್ ಲಿಂಡ್, ಎ. ಜಿ. ಗಾರ್ಡಿನರ್ ಇತ್ಯಾದಿ. ಇವರೆಲ್ಲರ ಪ್ರಭಾವ ಕನ್ನಡ ಪ್ರಬಂಧಗಳ ಮೇಲಿದೆ. ಇವರ ಅನೇಕ ಪ್ರಬಂಧಗಳು ಕನ್ನಡಕ್ಕೆ ಅನುವಾದಗೊಂಡಿರುವುದೂ ಉಂಟು.

ಕತೆ-ಕಾದಂಬರಿ : ಇವೆರಡೂ ಪಶ್ಚಿಮದ ಸಂಸರ್ಗದಿಂದ ನಮ್ಮಲ್ಲಿ ರೂಪುಗೊಂಡ ಪ್ರಕಾರಗಳು. ಇವುಗಳ ಚರಿತ್ರೆಯಲ್ಲಿ ನವೋದಯ, ಪ್ರಗತಿಶೀಲ ಮತ್ತು ನವ್ಯ ಎಂದು ಮೂರು ಹಂತಗಳನ್ನು ಗುರುತಿಸಬಹುದು.

ನವೋದಯಕಾಲದ ಕತೆಗಾರರು ಮತ್ತು ಕಾದಂಬರಿಕಾರರು ಪರಂಪರಾಗತ ಮೌಲ್ಯ ಗಳನ್ನು ತಮ್ಮ ಕೃತಿಗಳಲ್ಲಿ ಅನ್ವೇಷಿಸಿದರು. ನವೋದಯ ಸಾಹಿತ್ಯಕ್ಕೆ ಪ್ರತಿಭಟನೆಯಾಗಿ ಪ್ರಗತಿಶೀಲ ಸಾಹಿತ್ಯ ಹುಟ್ಟಿಕೊಂಡಿತು. ೧೯೩೯ರ ಮಹಾಯುದ್ಧ ಕಾಲಕ್ಕೆ ಆರಂಭ ವಾಗಿ, ಮಾರ್ಕ್ಸ್‌ವಾದವನ್ನು ಆಧರಿಸಿದ ಪ್ರಗತಿಶೀಲ ಚಳುವಳಿ ರಷ್ಯನ್ ಸಾಹಿತ್ಯದಿಂದ

ಹಿಂದಿಯ ಮೂಲಕ ಕನ್ನಡಕ್ಕೆ ಅವತರಿಸಿತು. ಅದು ಮೊದಲು ಕಾಣಿಸಿಕೊಂಡದ್ದು ಸಣ್ಣಕತೆಗಳಲ್ಲಿ. ೧೯೩೬ರಿಂದ ೪೫ರವರೆಗೆ ನಡೆದ ರಾಜಕೀಯ ಕ್ರಾಂತಿಗಳು, ಪತ್ರಿಕೆಗಳಲ್ಲಿ ನಡೆಯುತ್ತಿದ್ದ ಪ್ರಗತಿಶೀಲತೆಯ ಪ್ರಚಾರ, ರಷ್ಯನ್ ಹಾಗೂ ಹಿಂದಿ ಕಥೆಗಳ ಅನುವಾದ—ಇವುಗಳ ಫಲಿತಾಂಶವೇ ಪ್ರಗತಿಶೀಲ ಪಂಥ.

ಈಗ ನಡೆಯುತ್ತಿರುವುದು ನವ್ಯಯುಗ. ನವೋದಯ ಹಾಗೂ ಪ್ರಗತಿಶೀಲ ಪಂಥದ ಕತೆ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆಗೆ ಮಹತ್ವವಿದ್ದರೆ ನವ್ಯಕತೆ ಕಾದಂಬರಿಗಳಲ್ಲಿ ವೈಯಕ್ತಿಕ ಸಮಸ್ಯೆಗಳಿಗೆ, ಅನುಭವಗಳಿಗೆ ಪ್ರಾಧಾನ್ಯ. ಹಿಂದಿನವರು ಭಾವುಕತೆಗೆ ಪ್ರಾಶಸ್ತ್ಯಕೊಟ್ಟರೆ ಈಗಿನವರು ವೈಚಾರಿಕತೆಗೆ ಪಟ್ಟ ಕಟ್ಟುತ್ತಾರೆ.

ಇಂದಿನ ಸಣ್ಣಕತೆ ಕವಿತೆಗೆ ಹತ್ತಿರವಾದುದು. ನವ್ಯಕಾವ್ಯ ಹಾಗೂ ನವ್ಯಕತೆ ಒಂದೇ ಪ್ರಜ್ಞೆಯ ಮೂಲದಿಂದ ಹೊರಟವೆಂದು ಹೇಳಲಾಗಿದೆ: ಅದನ್ನು ಒಂದು ಮಾತಿನಲ್ಲಿ 'ಅನಾಥಪ್ರಜ್ಞೆ' ಎಂದು ಕರೆಯಬಹುದು. ಇದು ಠಕ್ಕಮಟ್ಟಿಗೆ ಪಶ್ಚಿಮದ ಬಳುವಳಿಯೇ. ಪಶ್ಚಿಮದಿಂದ ಬಂದಿರುವ ಸಾಹಿತ್ಯಕ, ವೈಜ್ಞಾನಿಕ, ಸಾಮಾಜಿಕ, ಮನೋವೈಜ್ಞಾನಿಕ ವಿಚಾರಗಳೆಲ್ಲ ಇಂದಿನ ಲೇಖಕನ ಮೇಲೆ ಪ್ರಭಾವವೆಸಗಿವೆ. ಹೊಸ ಮೌಲ್ಯಗಳ ಶೋಧ ಅವನ ಗುರಿ. ಇಂದಿನ ಕತೆಗಾರ ಫ್ರಾಯ್ಡ್, ಯೂಂಗ್, ಆ್ಯಡ್ಲರ್ ಮೊದಲಾದ ಮನಶ್ಶಾಸ್ತ್ರಿಗಳ ಸಂಶೋಧನೆಯ ಫಲಗಳನ್ನು ಪಡೆದುಕೊಂಡು ಮಾನಸಿಕ ವಿಶ್ಲೇಷಣೆಯಲ್ಲಿ ತೊಡಗುತ್ತಾನೆ; ಅಂತರಂಗಸಂಬಂಧವಾದ ವಾಸ್ತವಿಕತೆಗೆ ಮಹತ್ವಕೊಡುತ್ತಾನೆ; ಅನುಭವದ ಸಂಕೀರ್ಣತೆಯನ್ನು ಹೊರಗೆಡಹುವ 'ಪ್ರಜ್ಞಾ ಪ್ರವಾಹ ತಂತ್ರ'ವನ್ನು ಬಳಸಿಕೊಳ್ಳುತ್ತಾನೆ. ಈ ತಂತ್ರ ವರ್ಜೀನಿಯ ವುಲ್ಫ್, ಜೇಮ್ಸ್‌ಜಾಯ್ಸ್ ಮುಂತಾದವರಿಂದ ಪ್ರಚುರವಾದುದು. ನವ್ಯಕಾವ್ಯದಲ್ಲಿ ಹೇಗೊ ಹಾಗೆ ನವ್ಯ ಕತೆಯಲ್ಲೂ ಪ್ರತಿಮೆ ಪ್ರತೀಕ ಸಂಕೇತಗಳು ತುಂಬಿರುತ್ತವೆ.

ಕನ್ನಡದಲ್ಲಿ ಈಗ ಹೊರಬರುತ್ತಿರುವ ಕತೆಕಾದಂಬರಿಗಳ ಮೇಲೆ ಪಾಶ್ಚಾತ್ಯ ಅಸ್ತಿತ್ವವಾದದ ಪ್ರಭಾವ ದಟ್ಟವಾಗಿದೆ. ಫ್ರೆಂಚ್ ಲೇಖಕ ಜೀನ್‌ಪಾಲ್ ಸಾರ್ತ್ರೆ ಅಸ್ತಿತ್ವವಾದದ ಮೂಲಪುರುಷ. ಅಂತೆಯೆ ಫ್ರೆಂಚ್ ಲೇಖಕ ಆಲ್ಬರ್ಟ್ ಕಾಮೂ, ಜರ್ಮನ್ ಲೇಖಕ ಕಾಫ್ಕಾ, ಐರಿಷ್ ಲೇಖಕ ಜೇಮ್ಸ್‌ಜಾಯ್ಸ್, ಜರ್ಮನ್ ಲೇಖಕ ಬ್ರೆಕ್ಟ್, ಸ್ವೀಡಿಷ್ ಲೇಖಕ ಸ್ಟ್ರಿಂಡ್‌ಬರ್ಗ್ ಮುಂತಾದವರ ಕೃತಿಗಳೆಲ್ಲ ಕನ್ನಡ ಕಥನಲೇಖಕರನ್ನು ಸೆಳೆದಿವೆ.

ವಿಮರ್ಶೆ: ಹೊಸಗನ್ನಡದ ಇತರ ಪ್ರಕಾರಗಳು ಹೇಗೊ ಹಾಗೆ ವಿಮರ್ಶೆಯೂ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಲೆ ರೂಪವಾದದ್ದು. ಬೇಂದ್ರೆಯವರು ಹೇಳುವಂತೆ, "ಇಂದಿನ ವಿಮರ್ಶೆಯ ಪ್ರಕಾರವು ಆಂಗ್ಲಸಾಹಿತ್ಯ ಸಂಸ್ಕಾರದಿಂದ ಬಂದುದು. ಇದರ ರೀತಿನೀತಿಗಳು, ರೂಪರೇಷೆಗಳು, ಸತ್ವಸಾರಗಳು ಬಹುತರವಾಗಿ ಹೊಸವು." ಮಾಸ್ತಿಯವರ ಈ ನುಡಿಗಳನ್ನೂ ನೋಡಬಹುದು: "ಹೊಸ ಸಾಹಿತ್ಯವನ್ನು ಕಲಿತಂತೆ ಹೊಸ ವಿಮರ್ಶೆಯನ್ನೂ ನಾವು ಇಂಗ್ಲಿಷಿನ ಮೂಲಕ ಕಲಿಯಬೇಕಾದದ್ದಿತ್ತು. ಅದು

'ಪ್ರಬುದ್ಧ ಕರ್ಣಾಟಕ'ದ ಮೂಲಕ ನಡೆಯಿತು."

ಆಂಗ್ಲ ವಿಮರ್ಶೆ ಕನ್ನಡವಿಮರ್ಶೆಯ ಮೇಲೆ ಮಾತ್ರವಲ್ಲದೆ ಸೃಷ್ಟಿಸಾಹಿತ್ಯದ ಮೇಲೂ ಪ್ರಭಾವ ಬೀರಿದೆ. "ಪಾಶ್ಚಾತ್ಯ ಕಾವ್ಯತತ್ತ್ವಗಳ ಅಭ್ಯಾಸವು, ಪ್ರಾಚೀನ ಗ್ರಂಥಗಳ ಸಂಶೋಧನೆ ಪರಿಷ್ಕಾರ ಮತ್ತು ವಿಮರ್ಶಾತ್ಮಕವಾಗಿ ಬೆಲೆಕಟ್ಟುವುದು, ಸಂಸ್ಕೃತಕಾವ್ಯ ಮೀಮಾಂಸೆಯ ವ್ಯವಸ್ಥಿತ ಅಭ್ಯಾಸ, ಕನ್ನಡಕ್ಕೆ ಆ ವಿಷಯಕವಾದ ಗ್ರಂಥಗಳನ್ನು ತರುವುದು ಇಂತಹವುಗಳಿಗೆ ಕಾರಣವಾಯಿತು."[16]

ಚಾರಿತ್ರಿಕವಾಗಿ ನೋಡಿದರೆ, ಕನ್ನಡದಲ್ಲಿ ವಿಮರ್ಶೆಗೆ ತಳಹದಿ ಹಾಕಿದವರು ವಿದೇಶೀಯರು—ಕ್ರೈಸ್ತ ಮಿಷನರಿಗಳು—ಎನ್ನಬಹುದು. ಕಳೆದ ಶತಮಾನದಲ್ಲಿಯೇ ಕಿಟ್ಟೆಲ್ ಕನ್ನಡಸಾಹಿತ್ಯದ ಸಂಕ್ಷಿಪ್ತ ಸಮೀಕ್ಷೆಯನ್ನು 'ಛಂದೋಂಬುಧಿ'ಯ ಪೀಠಿಕೆಯ ಭಾಗವಾಗಿ ಇಂಗ್ಲಿಷಿನಲ್ಲಿ ಪ್ರಕಟಿಸಿದರು. ಅನಂತರ, ಬೆನಗಲ್ ರಾಮರಾಯರ 'Renaissance in Modern Kannada' (1899) ಹೊಸಗನ್ನಡದ ಮೊದಲ ಸಮೀಕ್ಷೆ ಯೆನ್ನಲಾಗಿದೆ.

ಹೊಸಗನ್ನಡ ಸಾಹಿತ್ಯಕ್ಕೆ 'ಶ್ರೀ'ಯವರು ಆಚಾರ್ಯಪುರುಷರಾದಂತೆ ಆಧುನಿಕ ವಿಮರ್ಶೆಗೂ ಅವರೇ ಆದ್ಯರೆನ್ನಬೇಕು. 'ಕನ್ನಡ ಕೈಪಿಡಿ'ಯಲ್ಲಿ ಅವರು ಬರೆದಿರುವ ಕನ್ನಡ ಸಾಹಿತ್ಯಚರಿತ್ರೆ, ಹಾಗೂ ಇತರ ಬರಹಗಳು ಮುಂದಿನ ವಿಮರ್ಶೆಗೆ ಮಾದರಿ ಯಾದುವು, ಪ್ರಚೋದನೆಯಾದುವು.

'ಶ್ರೀ'ಯವರಿಗೆ ವರ್ಡ್ಸ್‌ವರ್ತ್‌ನ ಬಗ್ಗೆ ಬಹಳ ಒಲವಿತ್ತು ; ವರ್ಡ್ಸ್‌ವರ್ತ್‌ನ ಕಾವ್ಯ ಸಿದ್ಧಾಂತದಿಂದ ಪ್ರೇರಿತರಾಗಿ ಅವರು 'ಇಂಗ್ಲಿಷ್ ಗೀತ'ಗಳನ್ನು ಪ್ರಕಟಿಸಿದರು. ನವೋ ದಯ ಕಾಲದ ಕನ್ನಡ ಕವಿಗಳಿಗೂ ಆಂಗ್ಲ ರೊಮ್ಯಾಂಟಿಕ್ ಕವಿಗಳಿಗೂ ಸ್ಫೂರ್ತಿಯಲ್ಲಿ ಮತ್ತು ಕಾವ್ಯತತ್ತ್ವದಲ್ಲಿ ಸಾಮ್ಯವಿದೆ. "ನವೋದಯಕಾಲದಲ್ಲಿ ಸಾಹಿತ್ಯದ ಸಿದ್ಧಾಂತ ಗಳಿಗೆ ಒಂದು ರೂಪವನ್ನು ಕೊಡಲು ಪ್ರಯತ್ನಿಸಿದ ಮಾಸ್ತಿಯವರ 'ಸಾಹಿತ್ಯ' ಗ್ರಂಥ ವನ್ನು ನೋಡಿದರೆ ಸಾಮ್ಯ ಸ್ಪಷ್ಟವಾಗುತ್ತದೆ." ಈ ಕೃತಿಯ ಮೇಲೆ ವರ್ಡ್ಸ್‌ವರ್ತನ ವಿಚಾರಗಳ ಪ್ರಭಾವವುಂಟು.

ಡಿ.ವಿ.ಜಿ., ಕುವೆಂಪು ಮೊದಲಾದವರ ವಿಮರ್ಶೆಗಳಲ್ಲಿ ಶೆಲ್ಲಿ, ವರ್ಡ್ಸ್‌ವರ್ತ್, ಆರ್ನಾಲ್ಡ್, ಅರಿಸ್ಟಾಟಲ್ ಮೊದಲಾದವರ ವಿಚಾರಗಳು ಒಂದು ಕಡೆ, ಭಾರತೀಯ ಕಾವ್ಯತತ್ತ್ವಗಳು ಇನ್ನೊಂದು ಕಡೆ ಸಮ್ಮಿಲಿತವಾಗಿವೆ. ಎಸ್. ವಿ. ರಂಗಣ್ಣನವರ 'ಶೈಲಿ'ಯಲ್ಲಿ ಹರ್ಬರ್ಟ್ ರೀಡ್, ಮಿಡ್ಲ್‌ಟನ್ ಮರ್‍ರಿ, ಎಫ್. ಎಲ್. ಲ್ಯೂಕಾಸರ ಶೈಲಿ ಸಿದ್ಧಾಂತಗಳ ಅಳವಡಿಕೆಯಿದೆ. ಕುವೆಂಪು ಅವರ ಕಾವ್ಯಮೀಮಾಂಸೆಯ ಮೇಲೆ ಇಂಗ್ಲಿಷ್ ವಿಮರ್ಶಕರಾದ ಐ. ಎ. ರಿಚರ್ಡ್ಸ್, ಎ. ಸಿ. ಬ್ರಾಡ್ಲೆ ಮುಂತಾದವರು ಮಾತ್ರವಲ್ಲದೆ ಸ್ವೀಡಿಷ್ ಮನೋವಿಜ್ಞಾನಿ ಯೂಂಗ್ ಪ್ರಭಾವ ಬೀರಿದ್ದಾರೆ. ಕುವೆಂಪು ಅವರ ಭವ್ಯತಾಮೀಮಾಂಸೆ ಪಾಶ್ಚಾತ್ಯ ವಿಮರ್ಶೆಯಿಂದ ಪ್ರೇರಿತವಾದುದು.

ಕನ್ನಡದಲ್ಲಿ ನವ್ಯಕಾವ್ಯವನ್ನು ರೂಪಿಸುವಲ್ಲಿ ಇಂಗ್ಲಿಷ್ ನವ್ಯಕಾವ್ಯ ಮಾತ್ರವಲ್ಲದೆ

ಇಲಿಯಟ್ ಮುಂತಾದವರ ವಿಮರ್ಶನ ವಿಚಾರಗಳೂ ಮಹತ್ತರ ಪಾತ್ರ ವಹಿಸಿವೆ. ಇತ್ತೀಚಿನ ವಿಮರ್ಶೆ ಸಂಕೀರ್ಣವಾಗಿ ಪರಿಣಮಿಸಿದೆ. ಶುದ್ಧವಾಗಿ ಸಾಹಿತ್ಯಕವಾದ ವಿಮರ್ಶೆಯಂತೆಯೆ ಸಮಾಜವಿಜ್ಞಾನ, ಮನೋವಿಜ್ಞಾನ, ಅಸ್ತಿತ್ವವಾದ, ಮಾರ್ಕ್ಸ್ ವಾದಗಳನ್ನು ಆಧರಿಸಿದ ವಿಮರ್ಶೆಯೂ ಇಂದು ಕಂಡುಬರುತ್ತಿದೆ. ಪಾಶ್ಚಾತ್ಯ ವಿಮರ್ಶೆಯನ್ನು ಪರಿಚಯಿಸುವ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಬಂದಿವೆ.

"ಇದುವರೆಗೆ ಕನ್ನಡ ಸಾಹಿತ್ಯದಲ್ಲಿ ಮೂಡಿರುವ ಕಾವ್ಯಮೀಮಾಂಸೆ ಏನಿದ್ದರೂ ಅದೆಲ್ಲ ಸಂಸ್ಕೃತದ ಪಡಿ ನೆಳಲಂತಿದೆ....ನಮ್ಮ ಮುಂದಿನ ಕಾವ್ಯಮೀಮಾಂಸೆ ಮತ್ತು ಸಾಹಿತ್ಯವಿಮರ್ಶೆಗಳು ಪಾಶ್ಚಾತ್ಯ ಮತ್ತು ಭಾರತೀಯ ಕಾವ್ಯಮೀಮಾಂಸೆಗಳಿಂದ ಮಾತ್ರವಲ್ಲದೆ ತತ್ವಶಾಸ್ತ್ರ, ಯೋಗವಿಜ್ಞಾನ, ಸೌಂದರ್ಯಮೀಮಾಂಸೆ ಮತ್ತು ಮನಶ್ಶಾಸ್ತ್ರ ಇವುಗಳಿಂದಲೂ ಬೆಳಕು ಪಡೆದು ಧೀರವಾಗಿ ಸ್ವತಂತ್ರವಾಗಿ ಪೂರ್ಣದೃಷ್ಟಿಯ ಕಡೆಗೆ ಮುನ್ನಡೆಯಬೇಕಾಗುತ್ತದೆ" ಎಂದು ಕುವೆಂಪು ಅವರು ವ್ಯಕ್ತಪಡಿಸಿದ ನಿರೀಕ್ಷೆ ಈಗ ತಕ್ಕಮಟ್ಟಿಗೆ ಫಲಿಸುತ್ತಿದೆ.

ಕನ್ನಡದಲ್ಲಿ ಪ್ರವಾಸಸಾಹಿತ್ಯ, ಜೀವನಚರಿತ್ರೆ, ಆತ್ಮಕಥೆ, ಹಾಸ್ಯಲೇಖನ ಮುಂತಾದ ಪ್ರಕಾರಗಳೂ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಲೇ ಮೂಡಿದುವು.

* * *

ಒಟ್ಟಿನಲ್ಲಿ ಹೇಳುವುದಾದರೆ, ಈ ಹೊತ್ತು ಕನ್ನಡ ಸಾಹಿತ್ಯ ಏನಾಗಿದೆಯೊ ಅದಕ್ಕೆ ಪಾಶ್ಚಾತ್ಯಸಾಹಿತ್ಯ–ಅರ್ಥಾತ್ ಇಂಗ್ಲಿಷ್‌ಸಾಹಿತ್ಯ–ವಿಶೇಷವಾಗಿ ಕಾರಣ. ಇಂಗ್ಲಿಷಿನ ಪ್ರಭಾವವನ್ನು ಕನ್ನಡ ಅರಗಿಸಿಕೊಂಡು ರಕ್ತಗತಮಾಡಿಕೊಂಡಿದೆ. "ಮದದಿಂದ ಕಣ್ಣು ಮುಚ್ಚಿಕೊಳ್ಳದೆ, ಎಲ್ಲೆಲ್ಲಿ ದಿವ್ಯಜ್ಯೋತಿ ಪ್ರಕಾಶಿಸುವುದೋ ಅಲ್ಲೆಲ್ಲಾ ಶಿಷ್ಯರಾಗಿದ್ದು ಕೊನೆಗೆ ನಮಗೂ ಗುರುತ್ವ ಲಭಿಸುವುದು" ಎಂದೂ "ಎತ್ತಕಡೆಯಿಂದ ಶಿಕ್ಷೆಯನ್ನು ಪಡೆದರೂ, ಎತ್ತಕಡೆಯಿಂದ ಬೆಂಬಲವನ್ನು ಬಯಸಿದರೂ, ಜೇನುಹುಳು ಯಾವ ಹೂವಿನ ಮಕರಂದವನ್ನು ತಂದರೂ ಕೊನೆಗೆ ಎಲ್ಲಾ ತನ್ನ ಜೇನುತುಪ್ಪವನ್ನಾಗಿಯೇ ಹೇಗೆ ಮಾಡಿಕೊಳ್ಳುವುದೋ ಹಾಗೆ ಎಲ್ಲವೂ ಕನ್ನಡವೇ ಆಗಿಹೋದರೆ ಆಗ ಹೊರಗಿನದು ಎಲ್ಲಿ ಬಂತು?" ಎಂದೂ 'ಶ್ರೀ'ಯವರಾಡಿದ ಮಾತುಗಳು ಅಕ್ಷರಶಃ ದಿಟವಾಗಿ ಪರಿಣಮಿಸಿವೆ.

ಕಡೆಯದಾಗಿ, ಈ ಉಕ್ತಿಗಳನ್ನು ಗಮನಿಸಬಹುದು: "ನಮ್ಮ ದೇಶದ ಉಳಿದ ಭಾಷೆಗಳಂತೆ ಕನ್ನಡದಲ್ಲಿಯೂ ಹೊಸ ಸಾಹಿತ್ಯವು ಇಂಗ್ಲಿಷ್ ವಿದ್ಯಾಭ್ಯಾಸ–ವಿಚಾರಸರಣಿ ಇವುಗಳ ತೀವ್ರ ಪ್ರಭಾವದಿಂದ ತಲೆಯೆತ್ತಿತು. ಕಳೆದ ೪೦–೫೦ ವರ್ಷಗಳಲ್ಲಿ ಸಾಹಿತ್ಯದ ವಿಷಯ, ಆಶಯ, ರೂಪ, ಶೈಲಿಗಳಲ್ಲಿ ಈ ಪ್ರಭಾವವು ಸುಸ್ಪಷ್ಟವಾಗಿದೆ. ಜೊತೆಗೆ ಹೊಸ ಅಭಿವ್ಯಕ್ತಿಗಾಗಿ ಹಾತೊರೆಯುವ ಅಂತಃಪ್ರೇರಣೆ ಅವರಲ್ಲಿ ಇದ್ದಿತೆಂಬುದನ್ನು ನೆನೆಯಬೇಕು. ಅಲ್ಲದೆ, ಹಳೆಯದರಲ್ಲಿ ಹೊಸದನ್ನು ಹೊಂದುಗೂಡಿಸಿಕೊಂಡು ಹಿತಮಿತವಾದ ಹೊಸತನವನ್ನು ಸಾಧಿಸಬೇಕು ಎಂಬ ಸಮನ್ವಯ ದೃಷ್ಟಿಯೂ ಇದ್ದಿತು.

ಕನ್ನಡ ಸಂಸ್ಕೃತಿಯ ಉತ್ತಮಾಂಶದಲ್ಲಿ ಸಾವಿರಾರು ವರ್ಷಗಳಿಂದ ಈ ದೃಷ್ಟಿ ಬೆಳೆದು ಬಂದಿತ್ತು. ಹೊಸತನದ ಅತಿರೇಕಗಳಿಗೆ ಇದು ಬಹುಮಟ್ಟಿಗೆ ಕಡಿವಾಣಹಾಕಿತು. ಹೀಗೆ ಹೊರಗಿನ ಪ್ರಭಾವಗಳಿಗೆ ಒಳಗಿನ ಪ್ರೇರಣೆ ಮತ್ತು ಪರಂಪರೆಯಿಂದ ಬಂದ ಸಮನ್ವಯ ದೃಷ್ಟಿ ಇವು ಕೂಡಿಕೊಂಡು ಹೊಸಗನ್ನಡ ಸಾಹಿತ್ಯದ ಜನನಕ್ಕೆ ಕಾರಣ ವಾದುವು."[103]

## ಕನ್ನಡ-ಪೋರ್ಚುಗೀಸ್

೧೬ನೆಯ ಶತಮಾನದ ಆದಿಭಾಗದಲ್ಲಿ ಗೋವೆ ಪೋರ್ಚುಗೀಸರ ವಶಕ್ಕೆ ಬಂದಮೇಲೆ ಭಾರತೀಯ ಭಾಷೆಗಳ ಮೇಲೆ ಪೋರ್ಚುಗೀಸ್ ಭಾಷೆಯ ಪ್ರಭಾವ ಸಹಜವಾಗಿ ಆರಂಭ ವಾಯಿತು. ಧರ್ಮಪ್ರಚಾರಕರು, ವರ್ತಕರು ಮತ್ತು ಒಳನಾಡಿನ ರಾಜರ ಊಳಿಗ ದಲ್ಲಿದ್ದ ಪೋರ್ಚುಗೀಸ್ ಸೈನಿಕರು ಆ ಪ್ರಭಾವದ ವಾಹಕರಾದರು.

ಪೋರ್ಚುಗೀಸ್ ಕನ್ನಡ ಭಾಷೆಗಳ ಸಂಬಂಧದಲ್ಲಿ ಈ ಅವತರಣಿಕೆಯನ್ನು ಮೊದಲು ಗಮನಿಸಬಹುದು : "ಯೂರೋಪಿನ ಭಾಷೆಗಳಲ್ಲಿ ಒಂದಾದ ಪೋರ್ಚುಗೀಸ್ ಭಾಷೆಯ ಪ್ರಭಾವ ಕನ್ನಡದ ಮೇಲೆ ಹೇರಳವಾಗಿ ಆಗಿರುವುದು ಕಾಣುತ್ತದೆ. ವಾಸ್‌ಕೋಡಿ ಗಾಮನೆಂಬ ಪೋರ್ಚುಗೀಸ್ ನಾವಿಕನು ಕ್ರಿ.ಶ. ೧೪೯೮ರಲ್ಲಿ ಭರತಖಂಡದ ಪಶ್ಚಿಮ ಕರಾವಳಿಯಲ್ಲಿರುವ ಕೋಳಿಕೋಡ (calicut) ನಗರಕ್ಕೆ ಬಂದಿಳಿದನು. ಅವನು ಅಲ್ಲಿ ಒಂದು ಠಾಣ್ಯವನ್ನು ಸ್ಥಾಪಿಸಲು ಪ್ರಯತ್ನಪಟ್ಟು ನಿಷ್ಫಲನಾದನು. ಪೋರ್ಚುಗಲ್ ರಾಜನ ಪ್ರತಿನಿಧಿ ಅಲ್ಬುಕರ್ಕ್ ಎಂಬವನು ಮಹಮ್ಮದೀಯರ ವಶದಲ್ಲಿದ್ದ ಗೋವೆಯನ್ನು ಕ್ರಿ.ಶ. ೧೫೧೦ರಲ್ಲಿ ಗೆದ್ದು ಅಲ್ಲಿ ಪೋರ್ಚುಗೀಸ್ ಆಧಿಪತ್ಯವನ್ನು ಅದೇ ವರ್ಷ ಮಾರ್ಚಿ ೧ನೆಯ ತಾರೀಖಿನಂದು ಸ್ಥಾಪಿಸಿದನು. ಇಲ್ಲಿಂದ ಆರಂಭವಾಗುತ್ತದೆ, ಕನ್ನಡದ ಮೇಲೆ ಪೋರ್ಚುಗೀಸ್ ನುಡಿಯ ಪ್ರಭಾವ. ಆ ಭಾಷೆಯಲ್ಲಿನ ಅನೇಕ ಶಬ್ದಗಳು ಏಷ್ಯಾ ಖಂಡದ ಹಲವು ಭಾಷೆಗಳಿಗೆ ಎರವಲಾಗಿ ಹೋಗಿವೆ. ಇಂಥ ಶಬ್ದಗಳ ಒಂದು ಕೋಶವೇ ಇದೆ ; Portuguese Vocables in Asiatic Languages ಎಂದು ಅದರ ಹೆಸರು. ಅಲ್ಮಾರು, ಅನನಾಸು, ಆಸ್ಪತ್ರೆ, ಬೋಸಿ, ಬಟಾಟೆ, ಬಾತು, ಚಾ, ದಮಾಸು, ಗಡಂಗು, ಇಸ್ತ್ರಿ, ಜುಲಾಬು, ಕಂದೀಲು, ಕೋಸು, ಲಾಂದ್ರ, ಲಿಲಾವು, ಮೇಜು, ಪಾದ್ರಿ, ಪೀಪಾಯಿ, ರಪೀಸು, ತಂಬಾಕು, ಬಂದರು—ಇವೇ ಮುಂತಾದ ಹಲವು ಪೋರ್ಚುಗೀಸ್ ಶಬ್ದಗಳು ಕನ್ನಡಕ್ಕೆ ಬಂದಿವೆ. ಕ್ರಿ.ಶ. ೧೫೦೦ರಿಂದ ಈಚೆಗೆ ರಚಿತ ವಾದ ಕನ್ನಡ ಸಾಹಿತ್ಯ ಗ್ರಂಥಗಳಲ್ಲಿ ಇಂಥ ಶಬ್ದಗಳು ಪ್ರಯೋಗವಾಗಿವೆಯೋ ಇಲ್ಲವೋ ಎಂಬುದನ್ನು ನೋಡಬೇಕು. ಈಗಿನ ವ್ಯವಹಾರದ ಕನ್ನಡದಲ್ಲಿ ಈ ಶಬ್ದಗಳು ದಿನ ಬಳಕೆಯ ಶಬ್ದಗಳಾಗಿವೆ.

"ಪ್ರಪಂಚದ ನಾನಾ ದೇಶಗಳಿಂದ ಹಲವು ಹೊಸ ವಸ್ತುಗಳನ್ನೂ ಗಿಡಮರಬಳ್ಳಿ

ಗಳನ್ನೂ ಪೋರ್ಚುಗೀಸರು ಭರತಖಂಡಕ್ಕೆ ತಂದರು. ಪೇರ್ಲ ಮರ, ಪೇರ್ಲ ಹಣ್ಣು ಎಂದರೆ ಸೀಬೇಕಾಯಿ, ಇದು ಅಮೆರಿಕಾ ದೇಶದ ವನಸ್ಪತಿ. ಇದನ್ನು ಭರತಖಂಡಕ್ಕೆ ತಂದವರು ಪೋರ್ಚುಗೀಸರು. ಹೀಗೆಯೇ ಪಪ್ಪಾಯ (ಪರಂಗಿ ಹಣ್ಣು) ಎಂಬುದು ಕೂಡ ಅಮೆರಿಕಾ ನಿವಾಸಿಯಾಗಿದ್ದು ಈಗ ಕನ್ನಡ ನಾಡಿನಲ್ಲಿ ನೆಲಸಿದೆ. ಈ ಮಾತುಗಳು ಆಯಾ ದೇಶ ಭಾಷೆಗೆ ಸೇರಿದುವಾಗಿದ್ದು ಆ ವಸ್ತುಗಳ ಸಮೇತ ಪೋರ್ಚುಗೀಸರಿಂದ ಬೇರೆ ಬೇರೆ ನಾಡುಗಳಿಗೆ ವಲಸೆ ಬಂದಿರಬಹುದು....ನೆಲಗಡಲೆ ಮೂಲತಃ ಉತ್ತರ ಅಮೆರಿಕಾ, ಪಶ್ಚಿಮ ಆಫ್ರಿಕಗಳ ನಿವಾಸಿಯಾಗಿದ್ದು ಬಹುಶಃ ಪೋರ್ಚುಗೀಸರ ಕಾರ್ಯವಾಗಿ ಪ್ರಪಂಚದ ಇತರ ದೇಶಗಳಿಗೆ ಹರಡಿರಬಹುದು."[104]

೧೬ನೆಯ ಶತಮಾನದ ಮೇಲೆ ಸಂಘಟಿಸಿದ ಪೋರ್ಚುಗೀಸ್ ಕನ್ನಡಗಳ ಸಂಬಂಧವನ್ನು ಈ ಉಲ್ಲೇಖ ಕೆಲಮಟ್ಟಿಗೆ ಸೂಚಿಸುವುದಾಗಿದೆ. ಅನ್ಯದೇಶ್ಯ ಶಬ್ದಗಳೆಂದು ಕೊಡುವ ಒಂದು ಪಟ್ಟಿಯಲ್ಲಿ ಅಲಮಾರು, ಜನ್ನಲ್, ಪಾದ್ರಿ ಎಂಬವನ್ನೂ[105] ಇನ್ನೊಂದು ಪಟ್ಟಿಯಲ್ಲಿ ಜಂಗಾಲ್ (<gungada), ಮೇಜು (<Mesa), ಬಟಾಟೆ (<Batata), ತಂಬಾಕು (<Tabaco), ಪಪ್ಪಾಯಿ (<Carica Papaya), ಅನನಾಸು (<Ananas), ಶಾಲು (<chale = shawl), ಚಬುಕು (<chabueo), ಸಾಬೂನು/ಸಬ್ಬು (<Sabao = soap), ಟುವಾಲು ಟವೆಲು (<Toalha = towel) ಎಂಬವನ್ನೂ[106] ಮತ್ತೊಂದು ಪಟ್ಟಿಯಲ್ಲಿ ಕಂದೀಲು, ಚಾವಿ, ಜುಗಾರು, ಪರಾತ, ಪಿಂಗಾಣಿ, ಪೇರಲ, ಲಿಂಬೆ ಎಂಬವನ್ನೂ[107] ಪೋರ್ಚುಗೀಸ್ ಶಬ್ದಗಳೆಂಬುವಾಗಿ ವಿದ್ವಾಂಸರು ಈಗಾಗಲೇ ಪಟ್ಟಿಮಾಡಿಕೊಟ್ಟಿದ್ದಾರೆ.

ಈ ಹಿನ್ನೆಲೆಯಲ್ಲಿ, ಸಾಂಸ್ಕೃತಿಕ ವಿನಿಮಯ ದೃಷ್ಟಿಯಿಂದ ಈ ಅವತರಣಿಕೆಯನ್ನು ಈಗ ಗಮನಿಸಬಹುದಾಗಿದೆ: "ಅನ್ಯದೇಶ್ಯಗಳಲ್ಲಿ ಪೋರ್ಚುಗೀಸ್ ನುಡಿಯಿಂದಲೂ ಕೆಲವು ಮನೋಹರವಾದ ಪದಗಳು ಕನ್ನಡಕ್ಕೆ ಬಂದುದುಂಟು. ಅವುಗಳ ಪ್ರಯೋಗ ಕನ್ನಡದಲ್ಲಿ ಎಷ್ಟು ಸ್ವಾಭಾವಿಕವಾಗಿಬಿಟ್ಟಿದೆ ಎಂದರೆ, ಇಂದು ಅನೇಕರು ಅವುಗಳು ಕನ್ನಡ ಮೂಲದಿಂದ ಬಂದವುಗಳಲ್ಲವೆಂಬುದನ್ನು ನಂಬದಿರಬಹುದು. ಆದರೆ ಅವುಗಳ ಮೂಲವನ್ನು ಪೋರ್ಚುಗೀಸ್‌ನಲ್ಲಿ ಕಂಡಾಗ ವಿಸ್ಮಯವು ಮನದಟ್ಟಾದೀತು. ಮಾತ್ರವಲ್ಲ, ಅವುಗಳಲ್ಲಿ ಹೆಚ್ಚಿನವು ಸೂಚಿಸುವ ವಸ್ತುಗಳು ಮೊದಲು ನಮ್ಮ ನಾಡಿನವಲ್ಲ, ಪೋರ್ಚುಗೀಸರ ಆಗಮನದ ಮೇಲೆ ನಮ್ಮಲ್ಲಿಗೆ ಬಂದುವು ಎಂಬುದರ ಅರಿವೂ ಉಂಟಾಗುವುದು."[108]

ಪೋರ್ಚುಗೀಸ್ ಪದಗಳು ಕನ್ನಡಕ್ಕೆ ಬಂದ ಬಗೆಯಲ್ಲಿ ಒಂದು ಅಂಶವನ್ನು ಇಲ್ಲಿ ಗಮನಿಸಬೇಕು. ಕೊಂಕಣಿಯಲ್ಲಿರುವ ಪೋರ್ಚುಗೀಸ್ ಪದಗಳ ಸಂಖ್ಯೆ ದೊಡ್ಡದು. ಸ್ವಲ್ಪ ಕಾಲದ ಹಿಂದೆ ಸಾರ್ವತ್ರಿಕವಾಗಿ ಬಳಕೆಯಲ್ಲಿದ್ದು ಈಗ ಒಂದಿಷ್ಟು ಪರಿವರ್ತನೆಗೊಳ್ಳುತ್ತಿರುವ ಕ್ರೈಸ್ತ ಧಾರ್ಮಿಕ ಆಚಾರಗಳ ಬಹುಪಾಲು ಪರಿಭಾಷೆಯು ಪೋರ್ಚುಗೀಸ್ ಪದಗಳನ್ನು, ಯಥಾವತ್ತಾಗಿ ಇಲ್ಲವೆ ರೂಪಾಂತರಗೊಳಿಸಿ, ಒಳಗೊಂಡಿವೆ. ದಕ್ಷಿಣ ಕನ್ನಡದಲ್ಲಿ ಕೊಂಕಣಿ ಕ್ರೈಸ್ತರು ಮತ್ತು ಕನ್ನಡಿಗರು ಬೆರೆತು ವಾಸಮಾಡುವ

ಪ್ರದೇಶಗಳಲ್ಲಿ ಇಂಥ ಪೋರ್ಚುಗೀಸ್ ಪದಗಳು ಕನ್ನಡ ಆಡುನುಡಿಯಲ್ಲಿ ಬಳಕೆಯಾಗುತ್ತವೆ: "ಕುಮ್ಸಾರಿಗೆ ಹೋಗಿದ್ದಿರಾ ?" 'ಕುಮ್ಸಾರ್' ಎಂದರೆ ಪಾಪಗಳನ್ನು ನಿವೇದಿಸಿಕೊಳ್ಳುವುದು ಎಂದರ್ಥ. 'ಕೊಂಫಿಸಾಂವ್' ಎಂಬ ಪೋರ್ಚುಗೀಸ್ ಪದ ಇದಕ್ಕೆ ಮೂಲ. ಆದರೆ ಗ್ರಾಂಥಿಕ ಕನ್ನಡದಲ್ಲಿ ಈ ಬಗೆಯ ಪ್ರಯೋಗಗಳು ಇಲ್ಲವೆಂದೇ ಹೇಳಬಹುದು. ಕೊಂಕಣಿ ಮೂಲಕ ಕನ್ನಡವನ್ನು ಸೇರಿದ ಇಂಥ ಕೆಲವು ವಿರಳ ಪ್ರಯೋಗಗಳನ್ನು ಬಿಟ್ಟರೆ ಇತರ ಪೋರ್ಚುಗೀಸ್ ಪದಗಳು ಕೊಂಕಣಿಯ ಮೂಲಕ ಕನ್ನಡವನ್ನು ಸೇರಿದವು ಎನ್ನುವುದಕ್ಕೆ ಆಧಾರವಿಲ್ಲ ; ನೇರವಾಗಿ ಪ್ರವೇಶಿಸಿರುವುದೇ ಸಂಭವನೀಯ.

ಪೋರ್ಚುಗೀಸ್ ಭಾಷೆಯೊಳಗೆ ಸೇರಿಕೊಂಡ ಕೆಲವು ಕನ್ನಡ ಪದಗಳೂ ಉಂಟು. ಪೋರ್ಚುಗೀಸ್ ಪ್ರವಾಸಿ ಲೋಪ್ಸ್ (ಕ್ರಿ.ಶ. ೧೫೩೫) ಬರೆದಿಟ್ಟ 'ಕ್ರೊನಿಕಾ ದೆ ಬಿಸನಾಗ' (ವಿಜಯನಗರದ ಇತಿವೃತ್ತ) ಎಂಬ ಪೋರ್ಚುಗೀಸ್ ಗ್ರಂಥದಲ್ಲಿ ಬಟಗಡಲೆ, ಬಡಗ, ಕಾಲುದಾರಿ, ಕಾರೆಳ್ಳು ಇತ್ಯಾದಿಯಾದ ಕನ್ನಡ ಪದಗಳು ಕೆಲವು ನುಸುಳಿಕೊಂಡಿವೆ. ಈ ಬಗೆಯ ಶಬ್ದಗಳನ್ನು ಅಲ್ಪ ವ್ಯತ್ಯಾಸದೊಡನೆ ಹಳೆಯ ಪೋರ್ಚುಗೀಸ್ ಶಬ್ದಕೋಶಗಳಲ್ಲಿ ಕೂಡ ಕಾಣಬಹುದು.[109]

## ಕನ್ನಡ-ಇತರ ಪಾಶ್ಚಾತ್ಯ ಸಾಹಿತ್ಯಗಳು

ಇಂಗ್ಲಿಷ್ ಹೊರತಾದ ಪಾಶ್ಚಾತ್ಯ ಭಾಷೆಗಳ ಸಂಪರ್ಕ ಸಂಬಂಧಗಳೂ ಕನ್ನಡದೊಡನೆ ಏರ್ಪಟ್ಟಿವೆಯೆಂಬುದಕ್ಕೆ ಹೇರಳವಾಗಿ ಅಲ್ಲದಿದ್ದರೂ ಕೆಲಮಟ್ಟಿಗೆ ನಿದರ್ಶನಗಳು ನಮಗೆ ದೊರೆಯುತ್ತವೆ. ಹಾಗೆ ಸಂಬಂಧ ತೋರುವ ಭಾಷೆಗಳಲ್ಲಿ ಮುಖ್ಯವಾದ ಕೆಲವು ಎಂದರೆ ಗ್ರೀಕ್, ಫ್ರೆಂಚ್, ಜರ್ಮನ್ ಮತ್ತು ರಷ್ಯನ್ ಭಾಷೆಗಳು. ಇವುಗಳ ಸಂಪರ್ಕ ಮಾಧ್ಯಮ ಬಹುಮಟ್ಟಿಗೆ ಇಂಗ್ಲಿಷ್ ಎಂಬುದನ್ನು ಒಪ್ಪಿದರೂ ಬಹುಭಾಷೆಗಳಲ್ಲಿ ಆಸಕ್ತರೂ ತಜ್ಞರೂ ಆದ ಕೆಲವು ಕನ್ನಡ ವಿದ್ವಾಂಸರು ಸ್ವತಃ ಆಯಾ ಪಾಶ್ಚಾತ್ಯ ಭಾಷೆಯನ್ನು ಕಲಿತು ಅಲ್ಲಿಯ ಉತ್ಕೃಷ್ಟ ಸಾಹಿತ್ಯ ರಚನೆಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ಮುಖ್ಯವಾಗಿ ಕಥೆ ಕಾದಂಬರಿಗಳೂ ನಾಟಕಗಳೂ ಭಾಷಾಂತರ ಹಾಗೂ ರೂಪಾಂತರಗಳ ಮೂಲಕವಾಗಿ ಕನ್ನಡ ಸಾಹಿತ್ಯದ ಬೊಕ್ಕಸವನ್ನು ತುಂಬಿವೆ. ಬಹುಮಟ್ಟಿಗೆ ಸಮಾನ ಸಾಮಾಜಿಕ ಪರಿಸರಗಳ ಹಾಗೂ ಸಂವೇದನೆಗಳ ವಸ್ತುಚಿತ್ರಣ ಅವುಗಳಲ್ಲಿ ಬಂದಿರುವುದೇ ಕನ್ನಡ ಸಾಹಿತಿಗಳು ಅವನ್ನಾಯುವುದಕ್ಕೆ ಮುಖ್ಯಕಾರಣವಾದಂತೆ ತೋರುತ್ತದೆ. ಜತೆಗೆ ಉತ್ಕಟವಾದ ಮಾನವೀಯ ಮೌಲ್ಯಗಳ ಸಂಸ್ಪರ್ಶ ಹಾಗೂ ಪೌರಾಣಿಕ ಅದ್ಭುತಗಳ ಕಥನ ಇವೂ ಕೆಲವೊಮ್ಮೆ ಕೆಲಸಮಾಡಿರುವಂತೆ ತೋರುತ್ತದೆ.

ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಗೀತ ಸಾಹಿತ್ಯದ ಕೆಲವು ಉತ್ಕೃಷ್ಟ ಭಾಗಗಳನ್ನು ಕನ್ನಡಕ್ಕೆ ಅನುವಾದಿಸಿದುದರಿಂದ ಮಾತ್ರವೇ ತೃಪ್ತವಾಗದೆ

ಘನವಾದ ಕಾವ್ಯವಸ್ತುವಿರುವ, ದೈವ-ಮಾನವ ಸಂಬಂಧಗಳ ಮತ್ತು ಸಂಘರ್ಷಗಳ ಮಾರ್ಮಿಕ ಚಿತ್ರಣಗಳಿರುವ ಗ್ರೀಕ್ ಸಾಹಿತ್ಯದ ಕೆಲವು ರಚನೆಗಳನ್ನು ಕೂಡ ಕನ್ನಡಕ್ಕೆ ತರಲು ಅಪೇಕ್ಷಿಸಿದರು. ೧೯೨೬ರಲ್ಲಿ ಪ್ರಕಟವಾದ ಅವರ 'ಗದಾಯುದ್ಧ ನಾಟಕಂ' ಎಂಬ ನಾಟಕದಲ್ಲಿಯೇ ಅವರ ಗ್ರೀಕ್ ರುದ್ರನಾಟಕಗಳ ಅಭ್ಯಾಸ ಅಭಿಮಾನಗಳು ತಮ್ಮ ಪ್ರಭಾವ ಮುದ್ರೆಯನ್ನೊತ್ತಿರುವುದು ಕಂಡುಬರುತ್ತದೆ. ಪಾಪಕರ್ಮಿಗಳನ್ನು ಉಗ್ರಕನ್ನಿಕೆಯರು ಅಥವಾ ರೌದ್ರಿಯರು (Furies) ಕಾಡುವರೆಂಬ ಗ್ರೀಕ್ ಪೌರಾಣಿಕ ಕಲ್ಪನೆ 'ಗದಾಯುದ್ಧ ನಾಟಕ'ದಲ್ಲಿ ಬರುವ 'ಭೀಮನ ತಲೆಯ ಮೇಲಾಡುವ ಘೋರ ಮೂರ್ತಿಗಳಂ' ಎಂಬ ಮಾತಿನಲ್ಲಿ (ರಂಗ ೫) ಬೆರೆತುಕೊಂಡಿರುವುದು ಕಂಡುಬರುತ್ತದೆ.

'ಶ್ರೀ'ಯವರ ಸಾಹಿತ್ಯ ಶಕ್ತಿಯ ಪರಮೋಚ್ಚ ಸಿದ್ಧಿಯನ್ನು ಮನಗಾಣಿಸುವ 'ಅಶ್ವತ್ಥಾಮನ್' ಎಂಬ ರುದ್ರನಾಟಕ (೧೯೨೯) ಗ್ರೀಕ್ ಮಹಾನಾಟಕಕಾರ ಸಾಫೋಕ್ಲೀಸಿನ 'ಏಜಾಕ್ಸ್' ನಾಟಕ ಕಥೆಗೂ ಮಹಾಭಾರತದ ಸೌಪ್ತಿಕ ಪರ್ವದ ಅಶ್ವತ್ಥಾಮನ್ ವೃತ್ತಾಂತಕ್ಕೂ, ಮುಖ್ಯವಾಗಿ ನಾಯಕ ಪಾತ್ರಗಳಲ್ಲಿ ಸಾಮ್ಯವಿರುವುದನ್ನು ಸಂಭಾವಿಸಿ 'ಏಜಾಕ್ಸ್' ನಾಟಕದ ಚೌಕಟ್ಟಿನಲ್ಲಿ, ಅದೇ ಆವರಣದಲ್ಲಿ ರಚಿಸಿರುವ ಒಂದು ನಾಟಕ. ಎರಡೂ ಮೂಲಗಳಲ್ಲಿಯ ಉತ್ತಮಾಂಶಗಳನ್ನು ಒಳಕೊಂಡು, ಕೆಲವು ಮಾರ್ಪಾಡುಗಳನ್ನು ಪಡೆದುಕೊಂಡು, ಕಥೆ ಸಂನಿವೇಶ ಸಂವಿಧಾನರಚನೆ ಪಾತ್ರಸೃಷ್ಟಿ ಎಲ್ಲ ಹೊಸಪರಿಯ ಕಳೆಯಿಂದ ಸೊಗಸಿವೆ. ಈ ನಾಟಕದಲ್ಲಿ ಹಲವು ಕಡೆ ಗ್ರೀಕ್ ಮೂಲದ ಉಕ್ತಿಗಳ, ಭಾವಗಳ ಸರಳವಾದ ಹಾಗೂ ಸ್ವತಂತ್ರವಾದ ಅನುವಾದಗಳು ಕಂಡುಬರುತ್ತವೆ.

ಶ್ರೀಯವರ ಇನ್ನೊಂದು ರುದ್ರನಾಟಕ 'ಪಾರಸಿಕರು' (೧೯೩೫) ಇನ್ನೊಬ್ಬ ಗ್ರೀಕ್ ನಾಟಕಕಾರ ಈಸ್ಕಿಲಸ್ ಕವಿ ಬರೆದ 'ಪರ್ಷಿಯ' ಎಂಬ ನಾಟಕದ ನೇರ ಅನುವಾದ. ಇಲ್ಲಿಯ ಅನುವಾದ ಶಬ್ದಶಃ ರೀತಿಯದಲ್ಲ. ಭಾವಾನುವಾದ ರೀತಿಯದು. ಎಷ್ಟೋ ಕಡೆ ಭಾವಾನುವಾದದ ರೀತಿನೀತಿಗಳನ್ನು ಸಹ ಸ್ವಾತಂತ್ರ್ಯವಹಿಸಿ ಮೀರಿರುವುದುಂಟು, ಮೂಲದ ಭಾಗಗಳನ್ನು ಪ್ರಾಯಃ ಸಂಕ್ಷೇಪಿಸಿರುವುದುಂಟು.

ಈ ಎರಡು ರುದ್ರನಾಟಕಗಳೂ ಛಂದೋಬದ್ಧ ರಚನೆಗಳು. ಮೊದಲನೆಯದಂತೂ ಹೊಸ ಕವಿತೆಯ ನಾಡಿನಲ್ಲಿ ಹೆದ್ದಾರಿಯನ್ನು ತೆರೆದ ಕೃತಿಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಕನ್ನಡದಲ್ಲಿ ಪೌರಾಣಿಕ ಹಾಗೂ ಅನುವಾದಿತ ರುದ್ರನಾಟಕಗಳ ರಚನೆಗೆ ಮೇಲ್ಪಂಕ್ತಿಯನ್ನು ಹಾಕಿದವರು ಶ್ರೀಯವರು. ಅಲ್ಲದೆ ಡೈಯೊನಿಸಸ್ ಎಂಬ ಗ್ರೀಕ್ ದೇವತೆಗೆ ಹಲವು ರೀತಿಯಲ್ಲಿ ಸಾದೃಶ್ಯವುಳ್ಳ, ರುದ್ರಭೂಮಿಗೆ ಅಧಿನಾಯಕನಾದ, ಆದರೂ ಮಂಗಳದಾಯಕನಾಗಿ ಭವರೋಗಕ್ಕೆ ಭಿಷಜನಾದ, ನಾಟ್ಯನಾಟಕ ಪ್ರವರ್ತಕನಾದ ರುದ್ರನ ಹೆಸರಿನಿಂದ ತಮ್ಮ ನಾಟಕಗಳಿಗೆ ರುದ್ರನಾಟಕವೆಂದು ಹೆಸರು ಕೊಟ್ಟವರು ಕೂಡ ಅವರೇ. ಅವರು ಗ್ರೀಕ್ ನಾಟಕಗಳನ್ನು ಮೂಲದಲ್ಲಿಯೇ ತಕ್ಕಮಟ್ಟಿಗೆ ಓದಿಕೊಂಡು ಇಂಗ್ಲಿಷ್ ಭಾಷೆಯಲ್ಲಿರುವ ಗ್ರೀಕ್ ನಾಟಕಾನುವಾದಗಳನ್ನೂ ಗಮನಿಸಿ

ತಮ್ಮ ನಾಟಕಗಳನ್ನು ಸಿದ್ಧಪಡಿಸಿದರೆಂದು ತೋರುತ್ತದೆ.

ಬಿ. ಎಂ. ಶ್ರೀಕಂಠಯ್ಯನವರ ಪ್ರೇರಣೆ ಪ್ರೋತ್ಸಾಹಗಳಿಂದ ಅವರ ಶಿಷ್ಯರಲ್ಲಿ ಕೆಲವರು ಗ್ರೀಕ್ ಭಾಷೆಯನ್ನು ಕಲಿತು ಅಲ್ಲಿಯ ಇನ್ನೂ ಕೆಲವು ಕೃತಿಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಮಾಡಿದರು. ಇವರಲ್ಲಿ ಮುಖ್ಯರು ಕ. ವೆಂ. ರಾಘವಾಚಾರ್ಯರು. ಇವರು ಗ್ರೀಕ್ ಭಾಷಾತಜ್ಞರಾದ ಪಾಶ್ಚಾತ್ಯ ಪಂಡಿತರಿಂದಲೇ ಗ್ರೀಕ್ ಭಾಷಾ ಸಾಹಿತ್ಯಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಸಾಫೋಕ್ಲೀಸಿನ 'ಒಯ್ದಿಪೌಸ್ ದೊರೆ', 'ಒಯ್ದಿಪೌಸ್ ಕೊಲೊನೊಸ್ಸಿನಲ್ಲಿ', 'ಅಂತಿಗೊನೆ', 'ಎಲೆಕ್ತ್ರ' ಈ ಕೆಲವು ನಾಟಕಗಳನ್ನೂ ಈಸ್ಕಿಲಸ್ ಕವಿಯ 'ಅಗೆಮೆಮ್ನನ್' ಮತ್ತು ಅರಿಸ್ಟೊಫನೀಸ್‌ನ 'ಕಪ್ಪೆಗಳು' ಈ ನಾಟಕಗಳನ್ನೂ ಛಂದಸ್ಸಿನಲ್ಲಿಯೂ ಗದ್ಯದಲ್ಲಿಯೂ ಅನುವಾದಿಸಿದ್ದಾರೆ. ಅಲ್ಲದೆ ಪೆರಿಕ್ಲಿಸ್ ಮುಂತಾದವರ ಕೆಲವು ಕೃತಿಭಾಗಗಳನ್ನೂ ಅನುವಾದಿಸಿದ್ದಾರೆ. ಮೂಲದಿಂದಲೇ ನೇರವಾಗಿ ಆಗಿರುವ ಈ ಅನುವಾದಗಳಿಂದ ಕನ್ನಡದೊಡನೆ ಗ್ರೀಕ್ ಭಾಷಾಸಾಹಿತ್ಯಗಳ ಪ್ರತ್ಯಕ್ಷ ಸಂಬಂಧವನ್ನು ಬೆಸೆದಂತಾಗಿದೆ. ಈಚೆಗೆ ಇಂಗ್ಲಿಷ್ ಅನುವಾದಗಳನ್ನು ಮೂಲವಾಗಿಟ್ಟು ಕೊಂಡು ಇತರರು ಇನ್ನೂ ಕೆಲವು ಗ್ರೀಕ್ ನಾಟಕಗಳನ್ನು ಕನ್ನಡಿಸಿದ್ದಾರೆ.

ಫ್ರೆಂಚ್ ಸಾಹಿತ್ಯದಿಂದಲೂ ಹಲವಾರು ಕೃತಿಗಳು ಕನ್ನಡಕ್ಕೆ ಬಂದಿವೆ. ಇವುಗಳನ್ನು ಇಂಗ್ಲಿಷಿನ ಮೂಲಕ ಭಾಷಾಂತರಿಸಲಾಗಿದೆ. ಜಗತ್ತಿನ ಶ್ರೇಷ್ಠ ಕಾದಂಬರಿಕಾರರಲ್ಲಿ ಒಬ್ಬನಾದ ವಿಕ್ಟರ್ ಹ್ಯೂಗೋನ 'ಲೆ ಮಿಸರಬಲ್ಸ್' ಕಾದಂಬರಿಯನ್ನು ಎ. ಪಿ. ಸುಬ್ಬಯ್ಯ ಮತ್ತು ನಾ. ಕಸ್ತೂರಿ ಬೇರೆ ಬೇರೆಯಾಗಿ ಅನುವಾದಿಸಿದ್ದಾರೆ. ಎಸ್. ಜಿ. ಶಾಸ್ತ್ರಿಗಳ 'ಮಹಾಪುರುಷ' ಇದೇ ಕಾದಂಬರಿಯ ಸಂಗ್ರಹ ರೂಪ. ಅಲೆಕ್ಸಾಂಡರ್ ಡ್ಯೂಮಾನ 'ತ್ರೀ ಮಸ್ಕೆಟೀರ್ಸ್' ಕಾದಂಬರಿಯನ್ನು, ಮಾಧವ ಬಾಳಿಗ ಭಾಷಾಂತರಿಸಿದ್ದಾರೆ. ಈ ಕಾದಂಬರಿಯನ್ನೆ 'ರಾಜಾ ಮಲಯಸಿಂಹ' ಎಂಬ ಹೆಸರಿನಲ್ಲಿ ಶ್ರೀನಿವಾಸಚಾರ್ಯರು ಸಂಪೂರ್ಣವಾಗಿ ಭಾರತೀಕರಣಗೊಳಿಸಿ ಕನ್ನಡಿಸಿದ್ದಾರೆ. ಫ್ರೆಂಚ್ ಕತೆಗಾರ ಮೊಪಾಸಾನ ಕತೆಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಷೇಕ್ಸ್‌ಪಿಯರಿನಷ್ಟೇ ಖ್ಯಾತಿವೆತ್ತ ಜಗದ್ವಿಖ್ಯಾತ ಫ್ರೆಂಚ್ ನಾಟಕಕಾರ ಮೋಲಿಯೇರ್ ಕೆಲವು ನಾಟಕಗಳು ಕನ್ನಡದಲ್ಲಿ ಮೈದಳೆದಿವೆ. ಎ. ಎನ್. ಮೂರ್ತಿರಾಯರು ಆತನ 'ತಾರ್ತೂಫ್' ನಾಟಕದ ಆಧಾರದ ಮೇಲೆ ಈಗ್ಗೆ ನಾಲ್ಕೈದು ದಶಕಗಳ ಹಿಂದೆ ಬರೆದ 'ಆಷಾಢಭೂತಿ' ಎಂಬ ನಾಟಕವನ್ನು ರೂಪಿಸಿದರು. ಇನ್ನೊಂದು ಅನುವಾದ ಎಂದರೆ 'ಬೂರ್ಜ್ವಾ ಮಹನೀಯನಾದದ್ದು'. ಮೋಲಿಯರನ ಮನೋಧರ್ಮ ಕನ್ನಡಿಗರಿಗೆ ಎಷ್ಟು ಹತ್ತಿರವಾದದ್ದು ಎನ್ನುವುದು ಇದರಿಂದ ವಿದಿತವಾಗುತ್ತದೆ. ಅಲ್ಲದೆ ನಾ. ಕಸ್ತೂರಿಯವರ 'ಗಗ್ಗಯ್ಯನ ಗಡಿಬಿಡಿ' ಪರ್ವತವಾಣಿಯವರ 'ಹಣಹದ್ದು', 'ರೋಗಾಲಾಪನೆ' ಮೋಲಿಯೇರ್‌ನ ನಾಟಕದ ಕೆಲವು ಅಂಶಗಳನ್ನು ಕನ್ನಡಿಸುವ ಪ್ರಯತ್ನಗಳಾಗಿವೆ. ಈತನ ಇನ್ನೂ ಕೆಲವು ನಾಟಕಗಳ ಅನುವಾದಗಳನ್ನೂ ಅನುಸರಣೆಗಳನ್ನೂ ಎಂ. ರಾಮರಾವ್, ಪರ್ವತವಾಣಿ, ಟಿ. ಎಸ್. ಸುಬ್ಬರಾವ್ ಮುಂತಾದವರು ಮಾಡಿದ್ದಾರೆ.

ಇಂಗ್ಲಿಷ್ ಮೂಲದಿಂದ ಕನ್ನಡಕ್ಕೆ ಭಾಷಾಂತರಗೊಂಡಿರುವ ಪಾಶ್ಚಾತ್ಯ ಕೃತಿಗಳ ಪೈಕಿ ಜರ್ಮನ್ ಕೃತಿಗಳೂ ಸೇರಿದೆ. ಡಿ. ವಿ. ಗುಂಡಪ್ಪನವರು ಗ್ರಿಮ್ ಸೋದರರ 'ಬೆಕ್ಕೋಜಿಯ ಸಾಹಸಗಳು', 'ಭೇಕರಾಜ' ಮುಂತಾದ ಕತೆಗಳನ್ನೂ ಎಚ್. ಎಂ. ಶಂಕರನಾರಾಯಣ ರಾಯರು 'ಆರು ಹಂಸಗಳು', 'ಚಂದ್ರನನ್ನು ತಂದರು', ಮೊದಲಾದ ಕತೆಗಳನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಗಯಟೆಯ 'ಫೌಸ್ಟ್' ನಾಟಕದ ಮೊದಲ ಭಾಗ ಪು. ತಿ. ನರಸಿಂಹಾಚಾರ್ಯರಿಂದ ಕನ್ನಡಕ್ಕೆ ಅನುವಾದಿತವಾಗಿದೆ.

ರಾಷ್ಟ್ರಕವಿ ಗೋವಿಂದ ಪೈ ಅವರು ಜಪಾನೀ ಸಾಹಿತ್ಯದ ಎಂಟು 'ನೋ' ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟಿರುವುದಲ್ಲದೆ ಈ ವಿಶಿಷ್ಟ ನಾಟಕ ಪ್ರಕಾರದ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟಿದ್ದಾರೆ.

ಹೀಗೆಯೇ ನಾರ್ವೆ ದೇಶದ ಖ್ಯಾತ ನಾಟಕಕಾರ ಇಬ್ಬನ್ನಿನ 'ಹೀರೋಸ್ ಹೆಲ್ಗೊಲ್ಯಾಂಡ್' ನಾಟಕವನ್ನು 'ಆರ್ಯಕ' ಎಂಬ ಹೆಸರಿಂದ, 'ದಿ ಡಾಲ್ಸ್ ಹೌಸ್' ನಾಟಕವನ್ನು 'ಸೂತ್ರದ ಗೊಂಬೆ' ಎಂಬ ಹೆಸರಿಂದ ಎಸ್. ಜಿ. ಶಾಸ್ತ್ರಿಗಳು ಭಾಷಾಂತರಿಸಿದ್ದಾರೆ. ಇನ್ನೊಂದು ನಾಟಕ 'ಅನ್ ಎನಿಮಿ ಆಫ್ ದಿ ಪೀಪಲ್' 'ಜನತೆಯ ಶತ್ರು' ಎಂಬ ಹೆಸರಿನಲ್ಲಿ ಗೋಪಾಲಕೃಷ್ಣ ಅಡಿಗರಿಂದ ರೂಪಾಂತರಗೊಂಡಿದೆ. ಶ್ರೀರಂಗರು 'ಕಾಡುಕೋಳಿ' ಮತ್ತು 'ದೆವ್ವಗಳು' ಎಂಬ ನಾಟಕಗಳನ್ನು ಕನ್ನಡಿಸಿದ್ದಾರೆ.

ಪ್ರಥಮತಃ ೧೯೩೦–೪೦ರ ದಶಕಗಳಲ್ಲಿ ಪ್ರಗತಿಶೀಲ ಬರೆಹಗಾರರ ಚಳುವಳಿ ಕಲ್ಕತ್ತ ನಗರದಲ್ಲಿ ಆರಂಭವಾಯಿತು. ಕೆ.ಎ. ಅಬ್ಬಾಸ್, ಮಣಿಕ್ ಬ್ಯಾನರ್ಜಿ, ಜಾಫ್ರಿ, ಕೃಷ್ಣನ್‌ಚಂದರ್, ಮುಲ್ಕರಾಜ್ ಆನಂದ ಮೊದಲಾದವರು ಈ ಚಳುವಳಿಯ ನೇತಾರರು. ಸಾಮಾಜಿಕ ನ್ಯಾಯವಾದವನ್ನು ಸ್ಥಾಪಿಸುವುದೇ ಈ ಚಳುವಳಿಯ ಗುರಿಯಾಗಿತ್ತು. ಬ್ರಿಟಿಷರು ನಮ್ಮ ದೇಶದಿಂದ ಹೊರಡುವವರೆಗೂ ಅವರು ಕಮ್ಯುನಿಸ್ಟ್ ಪಂಥೀಯ ಚಳುವಳಿಗೆ ಬೆಂಬಲ ನೀಡಿರಲಿಲ್ಲ. ಸುಮಾರು ೧೯೪೦–೪೫ರ ಅವಧಿಯ ವೇಳೆಗೆ ರಷ್ಯನ್ ಕಮ್ಯುನಿಸ್ಟರ ಪ್ರಭಾವ ಭಾರತೀಯ ಲೇಖಕರ ಮೇಲೆ ಬೀಳತೊಡಗಿತು. ಪರ್ಯಾಯವಾಗಿ ತಮ್ಮ ಕೃತಿಗಳಲ್ಲಿ ಕಮ್ಯುನಿಸ್ಟ್ ವಿಚಾರಧಾರೆಯನ್ನು ತರತೊಡಗಿದರು. ಒಂದು ಕಡೆ ರಷ್ಯನ್ ಕಮ್ಯುನಿಸಂ, ಮತ್ತೊಂದು ಕಡೆ ಅಮೆರಿಕನ್ ವಾಮಪಂಥೀಯ ಪ್ರಭಾವ. ಅಮೆರಿಕನ್ ವಾಮ ಪಂಥೀಯರಲ್ಲಿ ಸಿಂಕ್ಲೇರ್ ಲೂಯಿ, ಹೊವಾರ್ಡ್ ಫಾಸ್ಟ್ ಮೊದಲಾದವರು ಮುಖ್ಯರು. ಹೀಗೆ ಭಾರತದೊಳಗೆ ನುಸುಳಿದ ಈ ಸುಂಟರಗಾಳಿ ಕ್ರಮೇಣ ದಕ್ಷಿಣದ ಕಡೆಗೆ ಬೀಸತೊಡಗಿ ಕನ್ನಡನಾಡಿನೊಳಕ್ಕೂ ನುಗ್ಗಿತು. ೧೯೪೦ರ ದಶಕದಲ್ಲಿ ಅ.ನ.ಕೃ. ತರಾಸು, ನಿರಂಜನ, ಕುಮಾರ ವೆಂಕಣ್ಣ, ಅರ್ಚಕ ವೆಂಕಟೇಶ, ಎಸ್. ಅನಂತನಾರಾಯಣ ಮೊದಲಾದವರು ಪ್ರಗತಿಶೀಲ ಸಾಹಿತ್ಯದ ನಿರ್ಮಾಪಕರಾದರು. ವಾಸ್ತವವಾಗಿ ಪ್ರಗತಿಶೀಲ ಸಾಹಿತ್ಯದ ಪ್ರತಿಷ್ಠಾಪನಾಚಾರ್ಯನೆಂದು ಹೆಸರುವಾಸಿಯಾದವನು ರಷ್ಯಾದ ಪ್ರಸಿದ್ಧ ಸಾಹಿತಿ ಮ್ಯಾಕ್ಸಿಂ ಗಾರ್ಕಿ. ಹೀಗೆ ರಷ್ಯನ್ ಸಾಹಿತ್ಯದ ಪ್ರಭಾವ ನಿಧಾನವಾಗಿಯಾದರೂ ಕನ್ನಡದ ಮೇಲೆ ಪರಿಣಾಮಕಾರಿಯಾಗಿ ಬೀಳಲಾರಂಭಿಸಿತು.

೧೯೩೦ರ ದಶಕದ ರಷ್ಯಾ ಹಿಂದೆಯೇ ಕನ್ನಡದಲ್ಲಿ ರಷ್ಯನ್ ಸಾಹಿತ್ಯದ ಬೇರುಗಳನ್ನು ಕಾಣಬಹುದಾಗಿದೆ. ಎಲ್ ಗುಂಡಪ್ಪನವರು ಲಿಯೋ ಟಾಲ್‌ಸ್ಟಾಯ್ ಅವರ ೨೦ ಕತೆಗಳನ್ನು ಕನ್ನಡಕ್ಕೆ ಇಂಗ್ಲಿಷ್ ಮೂಲದಿಂದ ಅನುವಾದಿಸಿದ್ದಾರೆ. ಮುಂದೆ ಅ.ನ.ಕೃ. ಅವರು ಪ್ರಗತಿಶೀಲ ಲೇಖಕರ ಸಂಘದ ಆಶ್ರಯದಲ್ಲಿ (೧೯೪೪) ಮ್ಯಾಕ್ಸಿಂಗಾರ್ಕಿಯನ್ನು ಕುರಿತಂತೆ ಸ್ಮಾರಕ ಗ್ರಂಥವನ್ನು ಪ್ರಕಟಿಸಿದರು. ಆ ಗ್ರಂಥದಲ್ಲಿ ಮ್ಯಾಕ್ಸಿಂ ಗಾರ್ಕಿಯ ಜೀವನ ಪ್ರತಿಭೆ, ಆತನ ಜೀವನದ ಮಹತ್ವಸಂಗತಿಗಳು ಇವೇ ಮೊದಲಾದ ವಿಷಯಗಳು ಅಡಕವಾಗಿವೆ. ಗಾರ್ಕಿಯ ಕತೆಗಳನ್ನು ಕೂಡ ಇಲ್ಲಿ ಅನುವಾದಿಸಿದೆ. ಎಸ್. ಅನಂತನಾರಾಯಣ ಅವರು 'ಅವನತಿ'ಯನ್ನೂ ಕೆ. ಜಿ. ರಾಮಚಂದ್ರರಾಯರು 'ಇಪ್ಪತ್ತಾರು ಗಂಡಸರು ಒಬ್ಬ ಹುಡುಗಿ' ಕತೆಯನ್ನೂ ನಾಡಿಗೇರ ಕೃಷ್ಣರಾಯರು 'ಒಂದು ಚಳಿ ರಾತ್ರಿ' ಎಂಬ ಕತೆಯನ್ನು ಅನುವಾದಿಸಿದ್ದಾರೆ. ಸೋಗಾಲರು 'ಒಮ್ಮೆ ಮಾನವರಾಗಿದ್ದ ಜೀವ ಜಂತುಗಳು' ಕತೆಯನ್ನು, ಜಿ.ಪಿ. ರಾಜರತ್ನಂ 'ಖಾನನೂ ಅವನ ಮಗನೂ' ಕತೆಯನ್ನೂ ತ.ರಾ.ಸು. ಚೆಕಾಫರ ಕಾಗದಗಳನ್ನೂ ಅನುವಾದಿಸಿದ್ದಾರೆ. ಮ್ಯಾಕ್ಸಿಂಗಾರ್ಕಿಯ ಟಾಲ್‌ಸ್ಟಾಯ್ ಅವರ ನೆನಪುಗಳ ಸಂಗ್ರಹವನ್ನು ತ.ರಾ.ಸು. ಅನುವಾದಿಸಿದ್ದಾರೆ. ಹೀಗೆಯೇ ಎಂ.ವಿ. ಸೀತಾರಾಮಯ್ಯ, ಎಸ್ ಅನಂತನಾರಾಯಣ, ಶಿ.ಮು. ದೇಸಾಯಿ ಗಣಪತಿಹೆಗ್ಗಡೆ ಅವರು ಕೆಲವು ರಚನೆಗಳೂ ರಷ್ಯನ್ ವಿಚಾರಧಾರೆಯ ಇಂಗ್ಲಿಷ್ ಮೂಲದಿಂದಲೇ ಬಂದಿದ್ದರೂ ಇಲ್ಲೆಲ್ಲ ಪ್ರಗತಿಶೀಲ ಪ್ರಭಾವ ಹೇರಳವಾಗಿದೆ. ಕಾರ್ಲ್ ಮಾರ್ಕ್ಸ್ ಹಾಗೂ ಲೆನಿನ್ ಪ್ರಭಾವ ಈ ವೇಳೆಗಾಗಲೇ ಕನ್ನಡ ಲೇಖಕರ ಮೇಲೆ ಮಾತಾಡತೊಡಗಿದ್ದುದು ಇದರಿಂದ ವ್ಯಕ್ತವಾಗುತ್ತದೆ. ಅನಂತರ ಕಮ್ಯುನಿಸಂ ಭಾರತದಲ್ಲಿ ಹರಡಿದ ಮೇಲೆ ಈ ಬಗೆಯ ಸಾಹಿತ್ಯ ಹೇರಳವಾಗಿ ಕನ್ನಡದಲ್ಲಿಯೂ ಬರತೊಡಗಿತು.

ಫ್ರೆಂಚ್, ಜರ್ಮನ್ ರಷ್ಯನ್‌ಗಳಲ್ಲದೆ ಇತರ ಪಾಶ್ಚಾತ್ಯ ಭಾಷೆಗಳ ಕತೆ ಕಾದಂಬರಿಗಳೂ ಕನ್ನಡಕ್ಕೆ ಅನುವಾದಗೊಂಡಿವೆ. ಇಟ್ಯಾಲಿಯನ್ ಪರ್ಷಿಯನ್, ಸ್ವೀಡಿಷ್, ಚೀನೀ, ಯಹೂದೀ ಮುಂತಾದ ಭಾಷೆಗಳ ಸಾಹಿತ್ಯಗಳನ್ನು ಕೂಡ ಕನ್ನಡಿಗರಿಗೆ ತಕ್ಕಮಟ್ಟಿಗೆ ಪರಿಚಯ ಮಾಡಿಕೊಡುವ ಪ್ರಯತ್ನಗಳು ನಡೆಯುತ್ತಿವೆ.

## ಅಡಿಟಿಪ್ಪಣಿಗಳು

1 ಬಿ. ಎಂ. ಶ್ರೀಕಂಠಯ್ಯ, 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', ಪು. ೧೧೩-೧೪.
2 ಅದೇ, ಪು. ೬೩.
3 ಅದೇ, ಪು. ೪೧-೪೨.
4 'ಕನ್ನಡ ಕೈಪಿಡಿ', ಸಂ. ೧, ೧೯೫೫, ಪು. ೩೦೩.
5 Dr. K. Krishnamoorthy, Kannada and Sanskrit, *Karnataka Darshana*, 1955, p. 207.
6 ಸಂ. ಆರ್. ಶಾಮಶಾಸ್ತ್ರಿ, 'ಧರ್ಮಾಮೃತ', ಭಾಗ ೨, ೧೯೨೬, ಉಪೋದ್ಘಾತ, ಪು. ೧೧.

7 ಆರ್. ನರಸಿಂಹಾಚಾರ್, ‘ಕರ್ಣಾಟಕ ಕವಿಚರಿತೆ’, ಸಂ. ೧, ೧೯೬೧, ಅವತರಣಿಕೆ, ಪು. ೯.
8 ಬಿ. ಎಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೪೫.
9 ಅದೇ, ಪು. ೧೧೬.
10 R. Narasimhachar, *HKL.*, pp. 116–17.
11 ‘ಕನ್ನಡ ಕೈಪಿಡಿ’, ಸಂ. ೧, ೧೯೫೫, ಪು. ೧೮೩.
12 ಸಂ. ಟಿ. ಎಸ್. ವೆಂಕಣ್ಣಯ್ಯ, ‘ಕರ್ಣಾಟಕ ಕಾದಂಬರೀ ಸಂಗ್ರಹ’, ೧೯೪೪, ಪೀಠಿಕೆ, ಪು. xvi–xvii.
13 ‘ಕನ್ನಡ ಕೈಪಿಡಿ’, ಸಂ. ೧, ೧೯೫೫, ಪು. ೧೦೫.
14 ಅದೇ, ಪು. ೧೧೬–೧೭.
15 ಆ ಸಂಬಂಧವಾದ ಶ್ಲೋಕ :

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಂ
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಂ ॥

16–8 ಅನು. ಟಿ. ಎಸ್. ವೆಂಕಣ್ಣಯ್ಯ, ‘ಪ್ರಾಚೀನ ಸಾಹಿತ್ಯ’, ೧೯೪೮, ಪು. ೫–೬ ; ೬–೭ ; ೮–೯.
19 ಕುವೆಂಪು, ಶ್ರೀರಾಮಾಯಣ ದಿವ್ಯಶಿಲ್ಪಿ, ಪ್ರಕ., ೩೨–೨, ೧೯೫೦, ಪು. ೭–೮.
20 ಆರ್. ನರಸಿಂಹಾಚಾರ್, ‘ಕರ್ಣಾಟಕ ಕವಿಚರಿತೆ’, ಸಂ. ೩, ೧೯೨೯, ಪು. ೧೫೦.
21 ಎ. ಆರ್. ಕೃಷ್ಣಶಾಸ್ತ್ರೀ, ‘ವಚನಭಾರತ’, ೧೯೬೬, ಪು. ೭೧.
22 ಹೇಮಚಂದ್ರರಾಯ್ ಚೌಧುರಿ, ಮಹಾಭಾರತ : ಅದರ ಸಂಸ್ಕೃತಿಯ ಕೆಲವು ಮುಖಗಳು, ‘ಯುಗಯಾತ್ರೀ ಭಾರತೀಯ ಸಂಸ್ಕೃತಿ’, ಸಂ. ೨, ೧೯೭೧, ಪು. ೫೨.
23 ತೀ. ನಂ. ಶ್ರೀಕಂಠಯ್ಯ, ‘ಭಾರತೀಯ ಕಾವ್ಯಮೀಮಾಂಸೆ’, ೧೯೫೩, ಪು. ೪೭೫–೭೬.
24 ಕೆ. ಕೃಷ್ಣಮೂರ್ತಿ, ‘ಕನ್ನಡದಲ್ಲಿ ಕಾವ್ಯತತ್ತ್ವ’, ೧೯೬೪, ಪು. ೭೧.
25 ಎಂ. ಮರಿಯಪ್ಪಭಟ್ಟ, ‘ಕನ್ನಡ ಸಂಸ್ಕೃತಿ’ ೧೯೬೭, ಪು. ೧೯೪.
26 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೪೪೯.
27 ಕೆ. ಕೃಷ್ಣಮೂರ್ತಿ, ಪೂರ್ವೋಕ್ತ, ಪು. ೪೭.
28 ಆರ್. ಎಸ್. ಪಂಚಮುಖಿ, ಪ್ರಾಕೃತ ಸಾಹಿತ್ಯ, ‘ಕರ್ನಾಟಕದ ಇತಿಹಾಸ’, ೧೪೩–೬೧.
29–31 *Karnataka Through the Ages*, p. 478 ; 476 ; 478.
32 ಡಾ. ಎ. ಎನ್. ಉಪಾಧ್ಯೆ, ‘ಪಾಲಿ ಮತ್ತು ಪ್ರಾಕೃತ’, ಪು. ೨–೩.
33 ಎಂ. ಗೋವಿಂದ ಪೈ, ಕನ್ನಡ ಸಾಹಿತ್ಯ ಹಾಗೂ ಭಾಷೆಯ ಹಳಮೆ, ‘ಉಪಾಯನ’, ಪು. ೧೦೩.
34 ಆ. ನೇ. ಉಪಾಧ್ಯೆ, ‘ದೇಶೀ ಕೋಶಗಳಲ್ಲಿನ ಕನ್ನಡ ಶಬ್ದಗಳು’, ಪು. ೪–೧೧.
35 ಎಂ. ಮರಿಯಪ್ಪಭಟ್ಟ, ಪ್ರಾಕೃತದಲ್ಲಿ ಬಹಳ ಪ್ರಸಿದ್ಧವಾಗಿರುವ ಕೆಲವು ದೇಶೀ ಶಬ್ದಗಳು ಮತ್ತು ಅವುಗಳ ಮೂಲ, ‘ಕನ್ನಡ ಸಂಸ್ಕೃತಿ’, ಪು. ೩೦೮–೧೩.
36 R. Narasimhachar, *HKL.*, p. 117.
37 ದ. ರಾ. ಬೇಂದ್ರೆ, ‘ಸಾಹಿತ್ಯದ ವಿರಾಟ್‌ಸ್ವರೂಪ’, ಪು. ೮೬೮.
38 ಬಿ. ಎ. ಸಾಲೆತೊರೆ, ‘ಕನ್ನಡ ನಾಡಿನ ಚರಿತ್ರೆ’, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೦–೧೧.

39 'ಸುವರ್ಣಸಂಚಯ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೩೧೮-೩೩.
40 ರಾ. ಯ. ಧಾರವಾಡಕರ, 'ಕನ್ನಡ ಭಾಷಾಶಾಸ್ತ್ರ', ೧೯೫೦, ಪು. ೧೫೬.
41 ಮರಾಠಿಯಲ್ಲಿ ಹುದುಗಿರುವ ಕೆಲವು ಕನ್ನಡದ ಅವಶೇಷಗಳು, ೨೨-೪, ಪು. ೧೧೪-೧೭ ; ೨೩-೪ ; ಪು. ೧೩೩-೪೦.
42 ಪ್ರ. ಗೋ. ಕುಲಕರಣಿ, 'ಕನ್ನಡ ಭಾಷೆಯ ಚರಿತ್ರೆ', ಬೆಳಗಾವಿ, ೧೯೬೭, ಪು. ೪೯೯.
43 ನೋಡಿ : ಅ.ಟಿ. ೩೯.
44 ಡಿ. ಕೆ. ಭೀಮಸೇನರಾವ್, 'ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ', ಹೈದರಾಬಾದು, ೧೯೪೨, ಪು. ೮೩.
45 ಸೀತಾರಾಮ್ ಎಸ್. ಜಾಗೀರ್‌ದಾರ್, 'ಕನ್ನಡ ಸಾಹಿತ್ಯದ ಬೆಳವಣಿಗೆ ಹಾಗೂ ರಾಷ್ಟ್ರಕೂಟ ಅರಸರ ಮನೆತನ', ಧಾರವಾಡ, ೧೯೭೨, ಪು. ೯-೧೦.
46 'ಕುಮಾರವ್ಯಾಸ ಪ್ರಶಸ್ತಿ', ಪು. ೮-೯.
47 ಡಿ. ಕೆ. ಭೀಮಸೇನರಾವ್, ಪೂರ್ವೋಕ್ತ, ಪು. ೭೯-೮೦.
48 ಡಾ. ದ. ರಾ. ಬೇಂದ್ರೆ, ಪೂರ್ವೋಕ್ತ, ಪು. ೪೯೮.
49-50 ಡಿ. ಕೆ. ಭೀಮಸೇನರಾವ್, ಪೂರ್ವೋಕ್ತ, ಪು. ೪೬ ; ೯೨.
51 ಪ್ರಕ., ೨೩-೪, ಪು. ೧೩೬.
52 ಡಿ. ಕೆ. ಭೀಮಸೇನರಾವ್, ಪೂರ್ವೋಕ್ತ, ಪು. ೯೯.
53 ಪ್ರ. ಗೋ. ಕುಲಕರಣಿ, ಪೂರ್ವೋಕ್ತ, ಪು. ೪೯೮.
54 ಡಾ. ಸದಾನಂದ ನಾಯಕ, 'ವೈದಿಕ ಪುರಾಣಗಳು', ಪು. ೫೧-೫೨.
55 ಡಾ. ಶ್ರೀನಿವಾಸ ಹಾವನೂರ, 'ಹೊಸಗನ್ನಡದ ಅರುಣೋದಯ'. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪, ಪು. ೩೦೮.
56 ಎಸ್. ಅನಂತರಂಗಾಚಾರ್, 'ಸಾಹಿತ್ಯಭಾರತಿ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೦, ಪು. ೬೫೨.
57 *Karnataka Through the Ages*, 1968, pp. 1003-05.
58 ಡಾ. ಶ್ರೀನಿವಾಸ ಹಾವನೂರ, ಪೂರ್ವೋಕ್ತ, ಪು. ೩೧೧.
59 ಆಲೂರ ವೆಂಕಟರಾಯ, 'ಕರ್ನಾಟಕತ್ವದ ವಿಕಾಸ', ಪು. ೧೦೫.
60-1 ಡಾ. ಶ್ರೀನಿವಾಸ ಹಾವನೂರ, ಪೂರ್ವೋಕ್ತ, ಪು. ೩೧೧ ; ೫೪೪.
62 'ಗಳಗನಾಥ', ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ೧೯೪೬, ಪು. ೫೩ ೫೪.
63-5 ಎಸ್. ಡಿ. ಸಿಲ್ವ, ಕರ್ನಾಟಕದಲ್ಲಿ ಕೊಂಕಣಿ ಭಾಷೆ, 'ಕರ್ನಾಟಕದ ಪರಂಪರೆ', ಸಂ. ೨, ಪು. ೬೧೭ ; ೬೧೮ ; ೬೧೯.
66-7 ಡಾ. ಶ್ರೀನಿವಾಸ ಹಾವನೂರ, ಪೂರ್ವೋಕ್ತ, ಪು. ೩೪ ; ೪೩.
68 S. S. Talamakki, *Konkani Proverbs, Riddles*, Bombay, 1933.
69 ರಾ. ಯ. ಧಾರವಾಡಕರ, 'ಕನ್ನಡ ಭಾಷಾಶಾಸ್ತ್ರ', ೧೯೬೨, ಪು. ೨೧೨-೨೦.
70 ಎಂ. ಮರಿಯಪ್ಪಭಟ್ಟ, 'ಕನ್ನಡ ಸಂಸ್ಕೃತಿ', ೧೯೬೭, ಪು. ೨೯೮-೯೯.
71 ಶಂಕರಾನಂದ ಸರಸ್ವತಿ, 'ವಂಗ ಸಾಹಿತ್ಯ ಚರಿತ್ರೆ', ಪು. ೨.
72 ಕುವೆಂಪು, 'ವಿಭೂತಿ ಪೂಜೆ', ಪು. ೯೨.
73 ದೇಜಗೌ, 'ಸಾಹಿತಿಗಳ ಸಂಗದಲ್ಲಿ', ಪು. ೧.
74 IA., VIII, p. 237.

75 EI., XVIII, p. 244.
76 IHQ., VII, p. 449 ; XII, p. 634.
77 ಕಸಾಪ., ಮಾರ್ಚ್ ೧೯೪೫, ಪು. ೫೫–೬೧.
78 ಕನ್ನಡ ನುಡಿ, ಜನವರಿ ೧೯೬೦, ಪು. ೩೯.
79 ಅದೇ, ೨೫ನೆಯ ಬಂಗಾಳಿ ಅಧಿವೇಶನದ ಅಧ್ಯಕ್ಷಭಾಷಣ, ಪು. ೧೪.
80 ಡಾ. ಹಾ. ಮಾ. ನಾಯಕ, 'ರವೀಂದ್ರನಾಥ ಠಾಕೂರ್', ಪು. ೧.
81 ೨೫ನೆಯ ಬಂಗಾಳಿ ಅಧಿವೇಶನದ ವರದಿ, ಕನ್ನಡ ನುಡಿ, ಜನವರಿ ೧೯೬೦, ಪು. ೧೨.
82 ಡಾ. ಮ. ಸು. ಕೃಷ್ಣಮೂರ್ತಿ, ಹಿಂದೀ-ಕನ್ನಡ ಬಾಂಧವ್ಯ, 'ಕನ್ನಡ ನುಡಿ', ಆಗಸ್ಟ್ ೧೯೬೭, ಪು. ೩೯.
83 EI., II, p. 413.
84 Dr. M. S. Krishnamurthy, A Hoysala Prince in a Hindi Romance, *Srikanthika*, pp. 211–18.
85 ರಾಮಚಂದ್ರ ಶುಕ್ಲ, 'ಹಿಂದೀ ಸಾಹಿತ್ಯ ಕಾ ಇತಿಹಾಸ್', ಪು. ೮-೯.
86 ರಾಹುಲ ಸಾಂಕೃತ್ಯಾಯನ್, 'ಹಿಂದೀ ಕಾವ್ಯಧಾರಾ', ಪು. ೩೫.
87 ಡಾ. ವಿನಯಮೋಹನ ಶರ್ಮಾ, 'ಹಿಂದೀ ಕೋ ಮರಾಠೀ ಸಂತೋಂ ಕೀ ದೇನ್', ಪೀಠಿಕೆ.
88 ಡಾ. ಮ. ಸು. ಕೃಷ್ಣಮೂರ್ತಿ, ಉತ್ತರೀಯ ಸಂತರ ಮೇಲೆ ವೀರಶೈವ ಪ್ರಭಾವ, 'ದಾಸೋಹ' ೧೯೬೭, ಪು. ೨೯೧.
89-90 ಡಾ. ಹಿರಣ್ಮಯ, 'ಹಿಂದೀ ಔರ್ ಕನ್ನಡಮೇ ಭಕ್ತಿ ಆಂದೋಲನ್ ಕಾ ತುಲನಾತ್ಮಕ್ ಅಧ್ಯಯನ್', ಪು. ೨೫೦ ; ೨೫೨.
91 ಡಾ. ಪಿ. ಜಯರಾಮನ್, 'ಮಹಾಕವಿ ಸುಬ್ರಹ್ಮಣ್ಯಭಾರತೀ ಏವಂ ಮಹಾಕವಿ ಸೂರ್ಯಕಾಂತ ತ್ರಿಪಾಠಿ 'ನಿರಾಲಾ' ಕೇ ಕಾವ್ಯೋಂ ಕಾ ತುಲನಾತ್ಮಕ್ ಅಧ್ಯಯನ್', ಪು. ೩೪.
92 ಪ್ರಧಾನ್ ಗುರುದತ್ತ, ಅನುವಾದ : ಹಿಂದೀ ಸಾಹಿತ್ಯ, ಪ್ರಕ., ಚಿನ್ನದ ಸಂಚಿಕೆ (ಸಾಹಿತ್ಯ) (ಅಪ್ರಕಟಿತ).
93–5 ಧೀರೇಂದ್ರವರ್ಮಾ, 'ಹಿಂದೀ ಭಾಷಾ ಕಾ ಇತಿಹಾಸ್', ೧೯೬೧, ಪು. ೬೦ ; ೬೩ ; ೬೧.
96 Mohamood Husine, Dakkni and Urdu in Karnataka, *Karnataka Through the Ages*, pp. 991–1000.
97 'ಕರ್ಣಾಟಕದ ಪರಂಪರೆ' ಪು. ೬೦೦.
98 B. L. Rice, *Mysore*, I, p. 396.
99 C. Hayavadana Rao, *Mysore Gezetteer*, IV, p. 22.
100 ಡಿ. ಎಲ್. ನರಸಿಂಹಾಚಾರ್, 'ಪೀಠಿಕೆಗಳು ಲೇಖನಗಳು', ಪು. ೮೩೦.
101 ಡಿ. ಕೆ. ಭೀಮಸೇನರಾವ್, ಕನ್ನಡದಲ್ಲಿ ಫಾರಸಿ ಉರ್ದು ಶಬ್ದಗಳು, ಕಸಾಪ., ೩೩, ೧೩೩.
102 R. Narasimhachar, *HKL.*, 1934, pp. 119–20.
103 ಈ ಲೇಖನದ ಸಿದ್ಧತೆಯಲ್ಲಿ ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡದ ಅರುಣೋದಯ', ಎಸ್. ಅನಂತನಾರಾಯಣ ಅವರ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ', ರಂ.ಶ್ರೀ. ಮುಗಳಿ ಅವರ 'ಕನ್ನಡ ಸಾಹಿತ್ಯದ ಇತಿಹಾಸ', ಮತ್ತು 'ಕನ್ನಡ ವಿಶ್ವಕೋಶ' ಸಂಪುಟ ೨ — ಈ ಗ್ರಂಥಗಳನ್ನು ವಿಶೇಷವಾಗಿ ಬಳಸಿದೆ. ಹೆಚ್ಚಿನ ವಿಮರ್ಶೆ ವಿವೇಚನೆಗಳಿಗೆ ಓದುಗರು ಆ ಗ್ರಂಥಗಳನ್ನೇ ನೋಡಬಹುದು.

104 ಡಿ.ಎಲ್. ನರಸಿಂಹಾಚಾರ್, ಕನ್ನಡದಲ್ಲಿ ಶಬ್ದರಚನೆ, : 'ಪೀಠಿಕೆಗಳು ಲೇಖನಗಳು' ೧೯೭೧, ಪು. ೮೨೧–೨೨

105 R. Narasimhachar, *History of Kannada Language*, 1934, p. 119.

106 ಎಂ. ಮರಿಯಪ್ಪಭಟ್ಟ, ಕನ್ನಡ ನುಡಿಯಲ್ಲಿ ಬಳಕೆಗೆ ಬಂದಿರುವ ಕೆಲವು ಪೋರ್ತುಗೀಸ್ ಶಬ್ದಗಳು, 'ಕನ್ನಡ ಸಂಸ್ಕೃತಿ', ಪು. ೩೦೫–೩೭.

107 ಶ್ರೀನಿವಾಸ ಹಾವನೂರ, 'ಹೊಸಗನ್ನಡದ ಅರುಣೋದಯ, ಪು. ೩೨೩.

108 ಎಂ. ಮರಿಯಪ್ಪಭಟ್ಟ, 'ಪೂರ್ವೋಕ್ತ,' ಪು. ೩೦೫.

109 ಶ್ರೀನಿವಾಸ ಹಾವನೂರ, 'ಪೂರ್ವೋಕ್ತ' ಪು. ೩೨೩.

---

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಬೋಧನ ಸಂಶೋಧನ ವಿಭಾಗಗಳ ಸದಸ್ಯರಿಂದ, ಅಗತ್ಯವೆನಿಸಿದಾಗ ವಿಶ್ವವಿದ್ಯಾನಿಲಯದ ಇತರ ವಿಭಾಗಗಳ ಸದಸ್ಯರಿಂದ, ಬರೆಸಿದ ಲೇಖನಗಳಿಂದ ಪ್ರಕೃತ ಸಾಹಿತ್ಯಚರಿತ್ರೆ ಸಿದ್ಧಗೊಳ್ಳುತ್ತಿದೆ.

ಇದುವರೆಗೆ ಗಮನಿಸಲಾಗಿರುವ ಪ್ರತಿಯೊಬ್ಬ ಕವಿಯ ಕಾಲ ದೇಶ ಜೀವನ ಸಾಧನೆ ಮೊದಲಾದ ವಿಷಯಗಳನ್ನು ಚರ್ಚಿಸುವುದು; ಸಮಯೋಚಿತ ಉದ್ಧರಣಗಳೊಡನೆ ಪ್ರತಿಯೊಂದು ಕೃತಿಯನ್ನೂ ಪರಿಚಯ ಮಾಡಿಕೊಡುವುದು; ಕವಿಕೃತಿಗಳ ವಿಷಯದಲ್ಲಿ ಇದುವರೆಗೆ ನಡೆದಿರುವ ಚರ್ಚೆ ಎಲ್ಲವನ್ನೂ ಇರಬಹುದಾದ ಹೊಸ ಸಂಶೋಧನೆಗಳೊಡನೆ ಸಂಕ್ಷಿಪ್ತವಾಗಿ ನಿರೂಪಿಸುವುದು; ಸಾಧ್ಯವಾದ ಮಟ್ಟಿಗೂ ವಿಮರ್ಶಾತ್ಮವಾಗಿ ಕೃತಿಗಳ ಮೌಲ್ಯವನ್ನು ನಿರ್ಧರಿಸುವುದು—ಈ ಸಾಹಿತ್ಯ ಚರಿತ್ರೆಯ ಮುಖ್ಯ ಉದ್ದೇಶ. ಈ ಉದ್ದೇಶವನ್ನು ಈಡೇರಿಸುವಾಗ ಅತ್ಯುತ್ತಮ ಇತಿಹಾಸಕಾರನ, ಲೇಖಕನ, ವಿಮರ್ಶಕನ ಆದರ್ಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡಲಾಗುವುದು.

# ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

## (ಹತ್ತು ಸಂಪುಟಗಳಲ್ಲಿ)

ಸಂಪುಟ ೧ : ಹಿನ್ನೆಲೆ

ಸಂಪುಟ ೨ : ಆದಿಕಾಲದಿಂದ ಕ್ರಿ. ಶ. ಸು. ೮೫೦

ಸಂಪುಟ ೩ : ಕ್ರಿ. ಶ. ಸು. ೮೫೦ ರಿಂದ ಸು. ೧೧೫೦

ಸಂಪುಟ ೪ : ಕ್ರಿ. ಶ. ಸು. ೧೧೫೦ ರಿಂದ ಸು. ೧೩೫೦

ಸಂಪುಟ ೫ : ಕ್ರಿ. ಶ. ಸು. ೧೩೫೦ ರಿಂದ ಸು. ೧೬೫೦

ಸಂಪುಟ ೬ : ಕ್ರಿ. ಶ. ಸು. ೧೬೫೦ ರಿಂದ ಸು. ೧೮೫೦

ಸಂಪುಟ ೭–೮ : ಕ್ರಿ. ಶ. ಸು. ೧೮೫೦ ರಿಂದ ಸು. ೧೯೭೦

ಸಂಪುಟ ೯ : ಕೆಲವು ವಿಶೇಷ ರೂಪಗಳು, ವಿಷಯಗಳು

ಸಂಪುಟ ೧೦ : ಅನುಬಂಧಗಳು

ಮೈಸೂರು ವಿಶ್ವವಿದ್ಯಾನಿಲಯ : ಮೈಸೂರು